

# ಋಗ್ವೇದಸಂಹಿತಾ

ಭಾಗ—೧

ಪ್ರಥಮಾಷ್ಟಕ ಪ್ರಥಮಾಧ್ಯಾಯ

ಪ್ರಥಮಮಂಡಲ. ೧–೧೯ ಸೂಕ್ತಗಳು

ಸಾಯಣಭಾಷ್ಯ ಮತ್ತು ಕರ್ಣಾಟಕ

ಭಾಷಾರ್ಥಾನುವಾದವಿವರಣೆಸಹಿತ

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೧

# RIG-VEDA

ಸಾಯಣಭಾಷ್ಯಸಮೇತಾ

# ಋಗ್ವೇದ ಸಂಹಿತಾ.

(ಕರ್ನಾಟಕ ಭಾಷಾರ್ಥಾನುವಾದವಿವರಣೆಗಳೊಡನೆ)

ಭಾಗ—೧

## ಪ್ರಥಮಾಷ್ಟಕ ಪ್ರಥಮಾಧ್ಯಾಯ

ಪ್ರಥಮ ಮಂಡಲದ ಸೂಕ್ತಗಳು ೧-೧೯

*Translated with Exhaustive Critical Notes*

*by*

**Asthana Mahavidwan**

**H. P. VENKATA RAO,**

***Editor.***

*Printed at*

**Sri Chamundeswari Electric Press,**

CLOCK TOWER SQUARE,

MYSORE.

*1949*

Published by the gracious permission of

His Highness

Sri Jayachamarajendra Wadiyar Bahadur,

G.C.B., G.C.S.I., Maharaja of Mysore.



ಯದುವಂಶಪಯಃಪಾರಾಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ ಮೈಸೂರು ದೇಶವನ್ನಾಳುವ
ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ

**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರು,**

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನವಿದ್ವನ್ಮಂಡಲಿ

ಅಧ್ಯಕ್ಷರು:

ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ

**ಶಿಲ್ಪಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು.**

---

Translator & Editor :

1. ಆಸ್ಥಾನ ಮಹಾವಿದ್ವಾನ್ H. P. ವೆಂಕಟರಾವ್,

---

ಸಹಾಯಕವಿದ್ವನ್ಮಂಡಲಿ

2. ಆಸ್ಥಾನವಿದ್ವಾನ್. ಬ್ರ॥ ಶ್ರೀ॥ ಲಕ್ಷ್ಮಣಾಚಾರ್ಯರು, ವ್ಯಾಕರಣ ವಿದ್ವಾನ್.
3. ಆಸ್ಥಾನವಿದ್ವಾನ್. ಬ್ರ॥ ಶ್ರೀ॥ H. ಗಂಗಾಧರಶಾಸ್ತ್ರಿಗಳು, ಜ್ಯೌತಿಷವಿದ್ವಾನ್ ಮತ್ತು ಕರ್ಣಾಟಕಭಾಷಾಪಂಡಿತರು.
4. ಬ್ರ॥ ಶ್ರೀ॥ N. ಶ್ರೀನಿವಾಸಶಾಸ್ತ್ರಿಗಳು, ಋಗ್ವೇದಘನಪಾಠಿಗಳು.
5. ಬ್ರ॥ ಶ್ರೀ॥ ಹಿಟ್ಟಿವಳ್ಳಿ ಬಿಳಿಗಿರಿ ರಂಗಾಜೋಯಿಸರು, ಶ್ರೌತವಿದ್ವಾನ್
6. ಬ್ರ॥ ಶ್ರೀ॥ ಹಿಟ್ಟಿವಳ್ಳಿ ದೇವರಭಟ್ಟರು, ಮೀಮಾಂಸಾದರ್ಶನಪಂಡಿತರು.
7. ಬ್ರ॥ ಶ್ರೀ॥ G. N. ಚಕ್ರವರ್ತಿ ಅಯ್ಯಂಗಾರ್, M.A.,
   Professor of Sanskrit, St. Philomina's College, Mysore.
8. ಬ್ರ॥ ಶ್ರೀ॥ M. S. ವೆಂಕಟರಮಣಾಚಾರ್, M.A., B.T. ಸಾಹಿತ್ಯವಿದ್ವಾನ್.
9. ಬ್ರ॥ ಶ್ರೀ॥ ರಂಗನಾಥನ್, ಸಾಹಿತ್ಯವಿದ್ವಾನ್, ಅರಮನೆ ಸರಸ್ವತೀಭಂಡಾರ.
10. ಬ್ರ॥ ಶ್ರೀ॥ ಪುತ್ತೂರು ಕೃಷ್ಣಮಾಚಾರ್, ಸಾಹಿತ್ಯವಿದ್ವಾನ್
    Govt. Oriental Research Institute, Mysore

---



ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ

**ಶಿಲ್ಪಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು**

**ವೇದವಿಮರ್ಶನ ವಿದ್ವನ್ಮಂಡಲಿಯ ಅಧ್ಯಕ್ಷರು**

# ಪೀಠಿಕೆ

ಸಾಯಣಭಾಷ್ಯಯುತವೂ ಮತ್ತು ಕರ್ಣಾಟಕಭಾಷಾನುವಾದಸಹಿತವೂ ಆದ ಋಗ್ವೇದದ ಮೊದಲ ನೆಯ ಭಾಗವು ಮುಗಿದು ಸುಮಾರು ಎರಡು ವರ್ಷಗಳಾಯಿತು. ಈಗ ಎರಡನೆಯ ಭಾಗವು ಸಿದ್ಧವಾಗಿರುವುದು. ಮುದ್ರಣಸೌಲಭ್ಯವು ಸಾಕಾದಷ್ಟು ದೊರೆಯಲಿಲ್ಲವಾದ್ದರಿಂದಲೂ ಇತರ ಕೆಲವು ಅನಿವಾರ್ಯಗಳಿಂದಲೂ ಇಷ್ಟು ಸಾವಕಾಶವಾಗಲು ಕಾರಣವಾಯಿತು. ಈ ಎರಡು ಭಾಗಗಳಿಂದ ಋಗ್ವೇದಸಂಹಿತೆಯ ೬೪ ಅಧ್ಯಾಯಗಳಲ್ಲಿ ಕೇವಲ ೧ ಅಧ್ಯಾಯ ಮಾತ್ರ ಮುಗಿದಿರುವುದು. ಉಳಿದ ೬೩ ಅಧ್ಯಾಯಗಳನ್ನು ಆದಷ್ಟು ಜಾಗ್ರತೆ ಮುಗಿಸ ಬೇಕೆಂಬ ಅಭಿಲಾಷೆ ಇದೆ. ಈಶ್ವರಾನುಗ್ರಹವಿದ್ದಲ್ಲಿ ಇನ್ನು ೩-೪ ವರ್ಷಗಳಲ್ಲಿ ಮುಗಿಯಬಹುದೆಂಬ ನಿರೀಕ್ಷಣೆ ಇದೆ. ಗ್ರಾಹಕರ ಅನುಕೂಲಕ್ಕಾಗಿ ಪ್ರತಿಯೊಂದು ಅಧ್ಯಾಯವನ್ನೂ ಸುಮಾರು ೫೦೦ ಪೇಜಿನ ಒಂದೊಂದು ಭಾಗವನ್ನಾಗಿ ಮುದ್ರಿಸಬೇಕೆಂಬ ಆಲೋಚನೆ ಇರುವುದು. ಇದರಿಂದ ಪ್ರತಿಯೊಂದು ಭಾಗದ ಕ್ರಯವೂ ಸುಮಾರು ಅರ್ಧದಷ್ಟು ಕಮ್ಮಿಯಾಗುವುದಲ್ಲದೆ ಮುಂದಿನ ಭಾಗಗಳೂ ಬೇಗಬೇಗ ವಾಚಕರ ಹಸ್ತಗತ ವಾಗುವವು.

ನಾವು ಹಿಂದೆಯೇ ತಿಳಿಸಿದಂತೆ ಅರ್ಥಾನುವಾದವು ಸಾಯಣಭಾಷ್ಯವನ್ನನುಸರಿಸಿದ್ದರೂ ಇತರ ಪ್ರಾಚೀನ ಭಾಷ್ಯಕಾರರ ಮತ್ತು ಪಾಶ್ಚಾತ್ಯಪಂಡಿತರ ಅಭಿಪ್ರಾಯವನ್ನೂ ವಿಮರ್ಶೆಯನ್ನೂ ಸಂದರ್ಭಾನುಸಾರ ವಾಗಿ ಅಲ್ಲಲ್ಲಿ ಸೇರಿಸಿರುವೆವು. ಇಷ್ಟು ವಿಸ್ತಾರವಾಗಿ ಋಗ್ವೇದದ ಅರ್ಥಾನುವಾದ ವಿಮರ್ಶೆಗಳನ್ನು ಬರೆಯಲು ಇದುವರೆಗೆ ಯಾರೂ, ಯಾವ ಭಾಷೆಯಲ್ಲಿಯೂ ಪ್ರಯತ್ನಪಟ್ಟಿಲ್ಲ. ಕೆಲವರು ಸೂಕ್ಷ್ಮವಾಗಿ ಅರ್ಥಾನುವಾದ ವನ್ನು ಹಿಂದಿ, ಮರಾಠಿ ಮುಂತಾದ ಭಾಷೆಗಳಲ್ಲಿ ಬರೆಯಲುಪಕ್ರಮಿಸಿ ಕಾರಣಾಂತರಗಳಿಂದ ಒಂದು ಅಧ್ಯಾಯ ವನ್ನೂ ಸಹ ಪೂರ್ತಿಗೊಳಿಸಲು ಸಾಧ್ಯವಾಗದೆ ನಿಂತುಹೋಗಿರುವುದು ಬಹು ವಿಷಾದಕರವು. ಇಂತಹ ಮಹೋ ದ್ಯಮವನ್ನು ಎಷ್ಟೇ ಕಷ್ಟಬಂದರೂ ಧೈರ್ಯಗೆಡದೆ ಸಮಾಪ್ತಿಗೊಳಿಸಬೇಕೆಂದು ಅನೇಕ ವಿದ್ವಜ್ಜನರೂ, ಹಿತೈಷಿ ಗಳೂ ಅಭಿನಂದನಪೂರ್ವಕವಾಗಿ ಪತ್ರವನ್ನು ಬರೆದಿರುವುದೂ ಈ ಗ್ರಂಥಪ್ರಕಟನೆಯಲ್ಲಿ ಅನೇಕ ಮಹನೀಯರು ತೋರಿಸುತ್ತಿರುವ ಆದರಾಸಕ್ತಿಗಳೂ ನಮಗೆ ವಿಶೇಷವಾಗಿ ಪ್ರೋತ್ಸಾಹಕರವಾಗಿರುವುದು.

ಈ ಗ್ರಂಥದ ವಿಷಯನಿರೂಪಣೆಯ ವಿಷಯವಾಗಿ ಒಂದೆರಡು ಮಾತುಗಳನ್ನು ಹೇಳುವುದು ಅಪ್ರಕೃತ ವೆನಿಸಲಾರದು. ಸಾಧಾರಣ ಜನರು ಎಂದರೆ ಸಂಸ್ಕೃತಭಾಷೆಯನ್ನು ತಿಳಿಯದ ಜನರು ಋಕ್ಕುಗಳ ಭಾವಾರ್ಥ ವನ್ನು ಮಾತ್ರ ಓದುವುದರಿಂದ ಮುಖ್ಯಾಭಿಪ್ರಾಯವನ್ನು ತಿಳಿದುಕೊಳ್ಳಬಹುದು. ಸ್ವಲ್ಪಮಟ್ಟಿಗೆ ಸಂಸ್ಕೃತ ಜ್ಞಾನವಿರುವವರು ಪ್ರತಿಪದಾರ್ಥವನ್ನೂ ಇಂಗ್ಲಿಷ್ ಭಾಷಾಂತರವನ್ನು ಓದಬಹುದು. ವಿಮರ್ಶಾತ್ಮಕದೃಷ್ಟಿ ಯಿಂದ ವೇದವನ್ನು ಅಭ್ಯಸಿಸಲಿಚ್ಛಿಸುವವರು, ವಿಶೇಷವಿಷಯಗಳನ್ನೂ, ವ್ಯಾಕರಣ ಭಾಗವನ್ನೂ ಸಹ ಓದಿದಲ್ಲಿ ಸಂಬಂಧಪಟ್ಟ ವಿಷಯವೆಲ್ಲವೂ ಮನದಟ್ಟಾಗುವುದು. ವ್ಯಾಕರಣಭಾಗವು ಹೆಚ್ಚಾಗಿರುವುದೆಂದು ಕೆಲವರ ಅಭಿ ಪ್ರಾಯವು. ಆದರೆ ಸಾಯಣಭಾಷ್ಯದಲ್ಲಿರುವ ವ್ಯಾಕರಣಭಾಗವನ್ನು ಮಾತ್ರ ಕನ್ನಡದಲ್ಲಿ ಅನುವಾದ ಮಾಡಿರು ವೆವು. ವೇದಾರ್ಥವಿಚಾರದಲ್ಲಿ ವ್ಯಾಕರಣವು ಬಹುಮುಖ್ಯವಾದುದರಿಂದ ಪ್ರಾರಂಭದಲ್ಲಿ ಸ್ವಲ್ಪ ವಿಸ್ತಾರವಾಗಿ ಬರೆದಿದ್ದರೂ ಮುಂದಿನ ಭಾಗಗಳಲ್ಲಿ ಕ್ರಮೇಣ ಕಮ್ಮಿಯಾಗುವುದು. ಸಮಯೋಚಿತವಾಗಿ ಅಲ್ಲಲ್ಲಿ ಬರುವ ಉಪಾಖ್ಯಾನಗಳನ್ನೂ, ಪೂರ್ವೇತಿಹಾಸಗಳನ್ನೂ, ಇತರ ವೇದಗಳ ಮತ್ತು ಪುರಾಣಾದಿಗ್ರಂಥಗಳ ಸಹಾಯದಿಂದ ವಿಶದವಾಗಿ ವಿವರಿಸಲಾಗಿರುವುದು

ವೇದಾರ್ಥವಿಮರ್ಶೆಯು ಅತಿಗಹನವಾದುದೆಂಬ ವಿಷಯವನ್ನು ಸಮಸ್ತರೂ ಒಪ್ಪುವರು. ಈ ಕಾರಣ ದಿಂದಲೇ ಸಾಧಾರಣಜನರೂ, ಸಂಸ್ಕೃತಭಾಷೆಯನ್ನು ಬಲ್ಲ ಪಂಡಿತರೂ ಸಹ ವೇದಾರ್ಥವಿಚಾರವನ್ನು ಚರ್ಚಿ ಸಲು ಹಿಂಜರಿಯುವರು. ಆದರೂ ಪ್ರಾಚೀನ ಮತ್ತು ಆಧುನಿಕ ಪಂಡಿತರಲ್ಲಿ ಪ್ರಸಿದ್ಧರಾದವರು ವೇದಾರ್ಥ ವಿಚಾರದಲ್ಲಿ ಪ್ರಯತ್ನಮಾಡದೆ ಇಲ್ಲ. ಇದಕ್ಕೆ ಹಲವು ಕಾರಣಗಳುಂಟು. ವೇದಗಳು—ಅದರಲ್ಲಿಯೂ ಋಗ್ವೇದ ಸಂಹಿತೆಯು—ಅತಿ ಪ್ರಾಚೀನವಾದುದರಿಂದ ಅದರಲ್ಲಿ ಉಪಯೋಗಿಸಿರುವ ಶಬ್ದಗಳೂ ಭಾಷಾಶೈಲಿಯೂ, ಕೆಲವು ಸಂದರ್ಭಗಳಲ್ಲಿ ನಿರೂಪಿತವಾದ ವಿಷಯಗಳೂ ಈ ಕಾಲದಲ್ಲಿ ಬಳಕೆಯಲ್ಲಿರುವುದಿಲ್ಲ. ಸುಮಾರು ೩೦೦೦ ಸಾವಿರ ವರ್ಷಗಳ ಹಿಂದೆಯೇ ವೇದದಲ್ಲಿರುವ ಶಬ್ದಗಳು ರೂಢಿಯಲ್ಲಿರಲಿಲ್ಲವಾದುದರಿಂದ ಆ ಶಬ್ದಾರ್ಥಗಳ ವಿವರಣೆಯ ನ್ನೊಳಗೊಂಡ ನಿರುಕ್ತವೆಂಬ ಮಹಾಗ್ರಂಥವನ್ನು ಯಾಸ್ಕಮಹರ್ಷಿಗಳು ಆ ಕಾಲದಲ್ಲಿಯೇ ರಚಿಸಿದರು. ಅಲ್ಲಿಂದೀಚೆಗೆ ವೇದಭಾಷ್ಯವನ್ನು ಬರೆಯಲುದ್ಯುಕ್ತರಾದ ಅನೇಕ ಪ್ರಾಚೀನ ಪಂಡಿತರು ನಿರುಕ್ತವನ್ನೇ ಆಧಾರ ವಾಗಿಟ್ಟುಕೊಂಡು ತಮ್ಮ ತಮ್ಮ ಭಾಷ್ಯಗಳನ್ನು ಬರೆದಿರುವರು. ವೇದದ ಶಬ್ದಗಳಲ್ಲಿ ಬಹುಭಾಗವು ಈಗಿನ ಸಂಸ್ಕೃತದಲ್ಲಿ ರೂಢಿಯಲ್ಲಿರುವುದಿಲ್ಲ ಆದುದರಿಂದ ವ್ಯಾಕರಣಾನುಸಾರವಾಗಿ ಶಬ್ದಗಳಿಗೆ ರೂಪನಿಷ್ಪತ್ತಿಯನ್ನು ಮಾಡಿ ಅರ್ಥವನ್ನು ಹೊಂದಿಸಬೇಕಾಗಿರುವುದು. ಆದರೆ ಈ ವಿಧವಾದ (ಎಂದರೆ ರೂಪನಿಷ್ಪತ್ತಿಯಿಂದ ಏರ್ಪ ಡುವ) ಅರ್ಥವಿವರಣೆಯು ಪೂರ್ವಕಾಲದ ಋಷಿಗಳ ಅಭಿಪ್ರಾಯಕ್ಕನುಸಾರವಾಗಿರುವುದೇ ಎಂಬುದು ಸಂದೇಹಾ ಸ್ಪದವಾಗಿರುವುದು. ಈ ವಿಷಯದಲ್ಲಿ ಅನೇಕ ವಾದವಿವಾದಗಳೂ, ವಿಮರ್ಶೆಗಳೂ, ಚರ್ಚೆಗಳೂ ನಡೆದರೂ ಇದುವರೆಗೆ ಯಾವುದೂ ಸ್ಥಿರಪಟ್ಟಿಲ್ಲ. ಸ್ಥಿರಪಡುವ ಸಂಭವವೂ ಇಲ್ಲ. ಆದರೆ ವೇದಗಳಿಗೆ ಋಗ್ವೇದವು ತಳಹದಿ ಯಾಗಿರುವಂತೆ ವೇದಭಾಷ್ಯಗಳಿಗೆ ಯಾಸ್ಕಮಹರ್ಷಿಗಳ ನಿರುಕ್ತವು ಮೂಲವಾಗಿರುವುದೆಂಬ ವಿಷಯದಲ್ಲಿ ಸಂದೇ ಹಕ್ಕಾಸ್ಪದವಿಲ್ಲ.

ಅತಿ ಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ, ಸರ್ವಶಾಸ್ತ್ರಗಳಿಗೂ ಮೂಲಭೂತವೂ ಆದ ಇಂತಹ ಋಗ್ವೇದಸಂಹಿತೆಯನ್ನು ಸರಳವಾದ ಕನ್ನಡಭಾಷೆಯಲ್ಲಿ ವಿಮರ್ಶಾನುವಾದಸಹಿತವಾಗಿ ಪ್ರಕಾಶಪಡಿಸು ವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರಾದಿಯಾದ ಸಕಲ ಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ, ಕರ್ನಾಟಕಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ ಶ್ರೀಜಯಚಾಮರಾಜೇಂದ್ರ ಒಡೆಯರ್ ಬಹದ್ದೂರು ಜಿ.ಸಿ.ಬಿ., ಜಿ.ಸಿ ಎಸ್.ಐ. ಮಹಾಪ್ರಭುವರ್ಯರು ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹಮಾಡುತ್ತಿರುವುದು ಕರ್ನಾಟಕ ಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿ ಗಳಾದ ನಮ್ಮ ಪ್ರಭುವರ್ಯರಿಗೂ, ಅವರ ಕುಟುಂಬಕ್ಕೂ (ವೇದಮಂತ್ರಗಳಲ್ಲಿ ಅತಿಮುಖ್ಯವೆಂದು ಪರಿಗಣಿಸಲ್ಪ ಟ್ಟಿರುವ ಗಾಯತ್ರೀ ಎಂಬ ಮಂತ್ರನಾಮಾಂಕಿತರಾದ) ರಾಜಕುಮಾರಿಗೂ, ಸಮಸ್ತ ಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕಫಲಗಳಾದ, ಆಯುರಾರೋಗ್ಯೈಶ್ವರ್ಯಾದಿ ಸಕಲ ಸಂಪತ್ತನ್ನೂ ಪಾರಮಾರ್ಥಿಕವಾದ ಅಧ್ಯಾತ್ಮಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು.<br>ವಿರೋಧಿನಾಮ ಸಂ॥ ಜ್ಯೇಷ್ಠ ಬ॥ ಸಪ್ತಮೀ ಶುಕ್ರವಾರ<br>17-6-1949

ಅನುವಾದಕ<br>**ಹೆಚ್. ಪಿ. ವೆಂಕಟರಾವ್**<br>ಆಸ್ಥಾನ ಮಹಾವಿದ್ವಾನ್

॥ ಶ್ರೀಃ ॥

# ವಿ ಷ ಯಾ ನು ಕ್ರ ಮ ಣಿ ಕೆ

## ಪ್ರಥಮಾಷ್ಟಕೆ ಪ್ರಥಮಾಧ್ಯಾಯ

## ಪ್ರಥಮ ಮಂಡಲದ ಸೂಕ್ತಗಳು ೩-೧೯

ಪುಟಸಂಖ್ಯೆ

ಪುಟಸಂಖ್ಯೆ



ಪ್ರಥಮಾಧ್ಯಾಯದ ವಿಷಯಾನುಕ್ರಮಣಿಕೆ ಸಮಾಪ್ತವು.



## ಸಂಕೇತಾಕ್ಷರಗಳ ವಿವರಣೆಯು

ಅಥ. ಸಂ.—ಅಥರ್ವವೇದಸಂಹಿತಾ
ಆಪ. ಸೂ.—ಆಪಸ್ತಂಬಶ್ರೌತಸೂತ್ರ
ಆಪ. ಧ. ಸೂ.—ಆಪಸ್ತಂಬಧರ್ಮಸೂತ್ರ
ಆಪ. ಪ. ಸೂ.—ಆಪಸ್ತಂಬಪರಿಭಾಷಾಸೂತ್ರ
ಆ. ಸೂ.—ಆಶ್ವಲಾಯನ ಶ್ರೌತಸೂತ್ರ
ಉ. ಸೂ.—ಉಣಾದಿ ಸೂತ್ರ
ಋ. ಸಂ.—ಋಗ್ವೇದಸಂಹಿತಾ
ಐ. ಆ.—ಐತರೇಯಾರಣ್ಯಕ
ಐ. ಉ.—ಐತರೇಯೋಪನಿಷತ್
ಐ. ಬ್ರಾ.—ಐತರೇಯಬ್ರಾಹ್ಮಣ
ಛಾ. ಉ.—ಛಾಂದೋಗ್ಯೋಪನಿಷತ್
ಜೈ. ಸೂ—ಜೈಮಿನೀಯ ಪೂರ್ವಮೀಮಾಂಸಾಸೂತ್ರ
ಜೈ. ನ್ಯಾ. ವಿ.—ಜೈಮಿನಿಯ ನ್ಯಾಯಮಾಲಾವಿಸ್ತರ
ತಾ. ಬ್ರಾ.—ತಾಂಡ್ಯಮಹಾಬ್ರಾಹ್ಮಣ
ತೈ. ಆ.—ತೈತ್ತಿರೀಯ ಆರಣ್ಯಕ
ತೈ. ಬ್ರಾ.—ತೈತ್ತಿರೀಯಬ್ರಾಹ್ಮಣ
ತೈ. ಸಂ.—ತೈತ್ತಿರೀಯ ಸಂಹಿತಾ
ನಿ.—ನಿರುಕ್ತ, ನಿಘಂಟು
ಪಾ. ಸೂ.—ಪಾಣಿನೀಯ ಸೂತ್ರ
ಪಾ. ಶಿ.—ಪಾಣಿನೀಯ ಶಿಕ್ಷಾ
ಫಿ. ಸೂ.—ಫಿಟ್‌ಸೂತ್ರ
ಬ್ರ. ಸೂ.—ಬ್ರಹ್ಮಸೂತ್ರ
ಮ. ಭಾ.—ಮಹಾಭಾರತ
ಮ ಸ್ಮೃ.—ಮನುಸ್ಮೃತಿ
ಮೈ. ಸಂ.—ಮೈತ್ರಾಯಣೀಯಸಂಹಿತಾ
ಯಾ. ಸ್ಮೃ—ಯಾಜ್ಞವಲ್ಕ್ಯಸ್ಮೃತಿ
ವಾ. ಸಂ.—ವಾಜಸನೇಯಸಂಹಿತಾ
ವಾ. ಪು.—ವಾಯುಪುರಾಣ
ವಿ. ಪು.—ವಿಷ್ಣುಪುರಾಣ
ವೇ. ಸೂ.—ವೇದಾಂತಸೂತ್ರ
ಶ. ಬ್ರಾ.—ಶತಪಥಬ್ರಾಹ್ಮಣ
ಸಾ. ಸಂ.—ಸಾಮವೇದಸಂಹಿತಾ ಇತ್ಯಾದಿ.



|| ಶ್ರೀ ಮಹಾಗಣಾಧಿಪತಯೇ ನಮಃ ||

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯಸಹಿತಾ

# ಋಗ್ವೇದ ಸಂಹಿತಾ

## ಭಾಗ—೨

ಶ್ರೀ ಪರಮೇಶ್ವರನ ನಿಃಶ್ವಾಸರೂಪವಾದ ನಾಲ್ಕು ವೇದಗಳಲ್ಲಿ ಮೊದಲನೆಯದಾದ ಋಗ್ವೇದವನ್ನು ಸಾಯಣಭಾಷ್ಯಸಹಿತವಾಗಿಯೂ, ಕರ್ನಾಟಕಭಾಷಾನುವಾದವಿವರಣೆಗಳಿಂದಲೂ ಮತ್ತು ಅನೇಕ ಉಪಯುಕ್ತಾಂಶಗಳಿಂದಲೂ ಸಹಿತವಾಗಿ ಬರೆಯಲುಪಕ್ರಮಿಸಿ, ಮೊದಲನೆಯ ಭಾಗದಲ್ಲಿ ಋಗ್ವೇದಪೂರ್ವಪೀಠಿಕೆಯನ್ನೂ, ಸಾಯಣಭಾಷ್ಯಭೂಮಿಕೆಯನ್ನೂ, ಸಂಹಿತಾಭಾಗದ ಪ್ರಥಮಮಂಡಲದಲ್ಲಿ **ಅಗ್ನಿಮೀಳೇ ಪುರೋಹಿತಂ** ಮತ್ತು **ವಾಯವಾಯಾಹಿ ದರ್ಶತ** ಎಂಬ ಮೊದಲಿನ ಎರಡು ಸೂಕ್ತಗಳ ಅರ್ಥಾನುವಾದವನ್ನೂ ವಿಸ್ತಾರವಾಗಿ ವಿವರಿಸಿ ಈಗ ಈ ಎರಡನೆಯ ಭಾಗದಲ್ಲಿ **ಅಶ್ವಿನಾ ಯಜ್ವರೀರಿಷಃ** ಎಂಬ ಮೂರನೆಯ ಸೂಕ್ತದ ಅರ್ಥಾನುವಾದವನ್ನು ಪ್ರಾರಂಭಿಸುವೆವು.

ಋಗ್ವೇದಸಂಹಿತೆಯಲ್ಲಿ ಒಟ್ಟು ೧೦೨೮ ಸೂಕ್ತಗಳಿರುವುವು. ಈ ಸೂಕ್ತಗಳಿಗೆಲ್ಲಾ ದ್ರಷ್ಟೃಗಳಾದ (ಸೂಕ್ತಗಳನ್ನು ರಚಿಸಿದ) ಅನೇಕ ಋಷಿಗಳಿರುವರು. ಈ ೧೦೨೮ ಸೂಕ್ತಗಳಿಂದ ಕೂಡಿದ ಋಗ್ವೇದಸಂಹಿತೆಯನ್ನು ಹತ್ತು ಮಂಡಲಗಳನ್ನಾಗಿಯೂ, ಪ್ರತಿಮಂಡಲವನ್ನೂ ಅನೇಕ ಅನುವಾಕಗಳನ್ನಾಗಿಯೂ, ಅನುವಾಕ

ಗಳನ್ನು ಸೂಕ್ತಗಳನ್ನಾಗಿಯೂ ವಿಭಾಗಿಸಿರುವರು. ಪ್ರಥಮಮಂಡಲದಲ್ಲಿ ೧೯೧ ಸೂಕ್ತಗಳಿವೆ. ಇವುಗಳನ್ನು ೨೪ ಅನುವಾಕಗಳನ್ನಾಗಿ ವಿಭಾಗಿಸಿರುವರು. ಅದರ ಕ್ರಮವು ಈ ರೀತಿ ಇರುವುದು—

| ಅನುವಾಕ | | ಸೂಕ್ತ ಸಂಖ್ಯೆ | | ಒಟ್ಟು ಸೂಕ್ತಗಳು | |
|---|---|---|---|---|---|
| ೧ ನೆಯ ಅನುವಾಕ— | | ೧— ೩ ಸೂಕ್ತಗಳು. | | ೩ | ಒಟ್ಟು ೩೦ ಋಕ್ಕುಗಳು |
| ೨ | ,, | ೪— ೭ | ,, | ೪ | ೪೦ |
| ೩ | ,, | ೮— ೧೧ | ,, | ೪ | ೪೦ |
| ೪ | ,, | ೧೨— ೧೭ | ,, | ೬ | ೬೬ |
| ೫ | ,, | ೧೮— ೨೩ | ,, | ೬ | ೭೭ |
| ೬ | ,, | ೨೪— ೩೦ | ,, | ೭ | ೯೭ |
| ೭ | ,, | ೩೧— ೩೫ | ,, | ೫ | ೭೧ |
| ೮ | ,, | ೩೬— ೪೩ | ,, | ೮ | ೯೬ |
| ೯ | ,, | ೪೪— ೫೦ | ,, | ೭ | ೮೨ |
| ೧೦ | ,, | ೫೧— ೫೭ | ,, | ೭ | ೭೨ |
| ೧೧ | ,, | ೫೮— ೬೪ | ,, | ೭ | ೭೪ |
| ೧೨ | ,, | ೬೫— ೭೩ | ,, | ೯ | ೯೧ |
| ೧೩ | ,, | ೭೪— ೮೪ | ,, | ೧೧ | ೯೮ |
| ೧೪ | ,, | ೮೫— ೯೩ | ,, | ೯ | ೧೦೬ |
| ೧೫ | ,, | ೯೪—೧೦೫ | ,, | ೧೨ | ೧೨೫ |
| ೧೬ | ,, | ೧೦೬—೧೧೫ | ,, | ೧೦ | ೧೦೭ |
| ೧೭ | ,, | ೧೧೬—೧೨೦ | ,, | ೫ | ೮೩ |
| ೧೮ | ,, | ೧೨೧—೧೨೬ | ,, | ೬ | ೭೦ |
| ೧೯ | ,, | ೧೨೭—೧೩೩ | ,, | ೭ | ೬೦ |
| ೨೦ | ,, | ೧೩೪—೧೩೯ | ,, | ೬ | ೪೦ |
| ೨೧ | ,, | ೧೪೦—೧೫೬ | ,, | ೧೭ | ೧೧೯ |
| ೨೨ | ,, | ೧೫೭—೧೬೪ | ,, | ೮ | ೧೨೩ |
| ೨೩ | ,, | ೧೬೫—೧೭೯ | ,, | ೧೫ | ೧೨೪ |
| ೨೪ | ,, | ೧೮೦—೧೯೧ | ,, | ೧೨ | ೧೧೫ |
| ಒಟ್ಟು ೨೪ | | ೧೯೧ | | | ೨೦೦೬ |

ಇಷ್ಟು ಸೂಕ್ತಗಳೂ ಒಂದೇ ದೇವತೆಯನ್ನು ಪ್ರತಿಪಾದನೆಮಾಡುವುದಿಲ್ಲ. ಈ ಸೂಕ್ತಗಳು ಅಗ್ನಿ, ಇಂದ್ರ, ವಾಯು ಮುಂತಾದ ಅನೇಕ ದೇವತೆಗಳ ಸ್ತೋತ್ರಗಳನ್ನೊಳಗೊಂಡಿವೆ. ಋಷಿಗಳೂ (ಮಂತ್ರದ್ರಷ್ಟೃ ಅಥವಾ ಮಂತ್ರಗಳನ್ನು ರಚಿಸಿದವರು) ಸಹ ಅನೇಕರಿದಾರೆ. ಇವರಲ್ಲಿ ವಿಶ್ವಾಮಿತ್ರ, ವಸಿಷ್ಠ, ವಾಮದೇವ,

ಗೋತಮ, ಭರದ್ವಾಜ ಮುಂತಾದ ಸಪ್ತರ್ಷಿಗಳೂ, ಅವರ ವಂಶದವರೂ, ಅವರ ಶಿಷ್ಯವರ್ಗಕ್ಕೆ ಸೇರಿದ ಅನೇಕ ಋಷಿಗಳೂ ಇದಾರೆ. ಋಗ್ವೇದದ ಋಷಿಗಳ ಹೆಸರನ್ನೂ ಅವರು ರಚಿಸಿರುವ ಸೂಕ್ತ, ಮಂತ್ರಸಂಖ್ಯೆ, ಮುಂತಾದ ವಿವರಗಳನ್ನು ನಾವು ಹಿಂದೆಯೇ (ಭಾಗ ೧. ಪೇಜು 191-205) ಹೇಳಿದೇವೆ. ಛಂದಸ್ಸುಗಳಲ್ಲಿಯೂ ಗಾಯತ್ರೀ, ತ್ರಿಷ್ಟುಪ್ ಜಗತೀ ಮುಂತಾದ ಅನೇಕ ಭೇದಪ್ರಭೇದಗಳಿವೆ. ಇಷ್ಟು ಭೇದಪ್ರಭೇದಗಳಿಂದ ಕೂಡಿದ ಋಗ್ವೇದದ ೧೦೨೮ ಸೂಕ್ತಗಳನ್ನು ಮೂರುವಿಧವಾಗಿ ವಿಂಗಡಿಸಬಹುದು.—

೧. **ಋಷಿಕ್ರಮ**—ಒಬ್ಬೊಬ್ಬ ಮುಖ್ಯ ಋಷಿಯೂ ಅವನ ವಂಶಸ್ಥರೂ ರಚಿಸಿದ ಸೂಕ್ತಗಳನ್ನು ಒಂದೊಂದು ಭಾಗ ಅಥವಾ ಮಂಡಲವನ್ನಾಗಿ ವಿಂಗಡಿಸುವುದು ಒಂದು ಕ್ರಮ. ಈ ರೀತಿಯಲ್ಲಿಯೇ ಋಗ್ವೇದದ ೨, ೩, ೪, ೫, ೬, ೭, ೮ ನೆಯ ಮಂಡಲಗಳು (ಒಟ್ಟು ೭ ಮಂಡಲಗಳು) ವಿಂಗಡಿಸಲ್ಪಟ್ಟಿವೆ.

೨. **ದೇವತಾಕ್ರಮ** —ಆಯಾ ದೇವತೆಗಳನ್ನು ಸ್ತುತಿಸುವ ಮಂತ್ರಗಳನ್ನು ಅಥವಾ ಸೂಕ್ತಗಳನ್ನು ಒಂದೊಂದು ಗುಂಪನ್ನಾಗಿ ವಿಂಗಡಿಸುವುದು ಮತ್ತೊಂದು ಕ್ರಮ. ಎಂದರೆ ಅಗ್ನಿಸಂಬಂಧವಾದ ಸೂಕ್ತಗಳ ಗುಂಪು ಒಂದು, ಇಂದ್ರಸಂಬಂಧವಾದ ಸೂಕ್ತಗಳ ಗುಂಪು ಮತ್ತೊಂದು ಇತ್ಯಾದಿ. ಈ ಕ್ರಮವು ಋಗ್ವೇದದ ೯ ನೆಯ ಮಂಡಲದಲ್ಲಿ ಅನುಸರಿಸಲ್ಪಟ್ಟಿರುವುದು. ಈ ಮಂಡಲದಲ್ಲಿರುವ ಎಲ್ಲ ಸೂಕ್ತಗಳಿಗೂ **ಪವಮಾನಃ ಸೋಮಃ** ಎಂಬ ಒಂದೇ ದೇವತೆಯು. ಬೇರೆ ದೇವತೆಗಳಿಲ್ಲ. ಋಷಿಗಳೂ ಛಂದಸ್ಸುಗಳೂ ಮಾತ್ರ ಬೇರೆ ಬೇರೆ ಇವೆ. ಇದು ಎರಡನೆಯ ಕ್ರಮವು.

೩. **ಛಂದಃಕ್ರಮ**—ಒಂದೇ ಛಂದಸ್ಸಿನ ಮಂತ್ರಗಳನ್ನು (ಅಥವಾ ಸೂಕ್ತಗಳನ್ನು) ಒಂದೊಂದು ಗುಂಪನ್ನಾಗಿ ವಿಂಗಡಿಸುವುದೇ ಈ ಕ್ರಮವು. ಎಂದರೆ ಗಾಯತ್ರೀಛಂದಸ್ಸಿನ ಮಂತ್ರಗಳನ್ನು ಒಂದು ಗುಂಪನ್ನಾಗಿಯೂ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳನ್ನು ಮತ್ತೊಂದು ಗುಂಪನ್ನಾಗಿಯೂ, ಇದರಂತೆಯೇ ಪ್ರತಿಯೊಂದು ಜಾತಿಯ ಛಂದಸ್ಸಿನ ಮಂತ್ರಗಳನ್ನೆಲ್ಲಾ ಸೇರಿಸಿ ಒಂದೊಂದು ಗುಂಪನ್ನಾಗಿ ವಿಂಗಡಿಸುವುದು ಮೂರನೆಯ ಕ್ರಮ. ಈ ಕ್ರಮವು ಅಷ್ಟು ಸಮರ್ಪಕವಾಗಿ ಕಂಡುಬರುವುದಿಲ್ಲವಾದ್ದರಿಂದ ಈ ಕ್ರಮವನ್ನು ಋಗ್ವೇದದಲ್ಲಿ ಅನುಸರಿಸಿಲ್ಲ.

ಇದಲ್ಲದೆ ಮೇಲೆ ಹೇಳಿದ ಒಂದನೆಯ ಕ್ರಮಕ್ಕೆ ಸೇರದಿರುವ ಅನೇಕ ಸಣ್ಣ ಸಣ್ಣ ಸೂಕ್ತಗಳು ಇರುವುದರಿಂದ ಅವುಗಳನ್ನೆಲ್ಲಾ ಸೇರಿಸಿ ಒಂದು ಮಂಡಲವನ್ನಾಗಿ ವಿಂಗಡಿಸುವುದೂ ಒಂದು ಕ್ರಮ. ಈ ಕ್ರಮವು ೧ ಮತ್ತು ೧೦ ನೆಯ ಮಂಡಲಗಳಲ್ಲಿ ಕಂಡುಬರುವುದು. ೧ ನೆಯ ಮಂಡಲದಲ್ಲಿ ಪ್ರಾಯಶಃ ಒಂದು ನೂರು ಮಂತ್ರಗಳಿಗೆ (ಸ್ವಲ್ಪ ಹೆಚ್ಚುಕಡಿಮೆ ಇರಬಹುದು) ಒಬ್ಬ ಋಷಿಯಂತೆ ಇದಾರೆ. ಉದಾಹರಣೆಗಾಗಿ ಪ್ರಥಮ ಮಂಡಲದಲ್ಲಿ ೧ ನೆಯ ಮಂತ್ರದಿಂದ ೧೦೨ ಮಂತ್ರಗಳವರೆಗೆ **ಮಧುಚ್ಛಂದಾ ವೈಶ್ವಾಮಿತ್ರಃ** ಎಂಬುವರೂ ೧೧೧ ರಿಂದ ೨೫೩ ರವರೆಗೆ **ಮೇಧಾತಿಥಿಃ ಕಾಣ್ವಃ** ಎಂಬುವರೂ ೨೫೪ ರಿಂದ ೩೫೦ ರವರೆಗೆ **ಅಜೀಗರ್ತಿಃ ಶುನಶ್ಶೇಫಃ** ಎಂಬುವರೂ ಋಷಿಗಳು. ಆದ್ದರಿಂದಲೇ ಈ ಪ್ರಥಮಮಂಡಲದ ಋಷಿಗಳಿಗೆ ಶತರ್ಚಿನರೆಂದು (ನೂರು ಋಕ್ಕುಗಳನ್ನು ರಚಿಸಿದ ಋಷಿಗಳೆಂದು) ಹೆಸರು ಬಂದಿರಬಹುದು.

೧೦ ನೆಯ ಮಂಡಲದಲ್ಲಿ ಈ ಕ್ರಮವೂ ಕಂಡುಬರುವುದಿಲ್ಲ. ಈ ಮಂಡಲದಲ್ಲಿ ಅನೇಕ ಸಣ್ಣ ಸಣ್ಣ ಸೂಕ್ತಗಳೂ (ಕ್ಷುದ್ರಸೂಕ್ತಗಳು) ಸಪ್ತರ್ಷಿಕುಲಕ್ಕೆ ಸೇರಿರುವ ಮತ್ತು ಸೇರದಿರುವ ಅನೇಕ ಋಷಿಗಳೂ, ಕ್ಷುದ್ರ

ದೇವತೆಗಳೂ ಎಂದರೆ ಅಗ್ನಿ, ಇಂದ್ರ ಮುಂತಾದ ಪ್ರಧಾನದೇವತೆಗಳಲ್ಲದೆ ಸಣ್ಣ ಸಣ್ಣ ದೇವತೆಗಳೂ ರಾತ್ರಿ, ಶ್ರದ್ಧಾ ಮುಂತಾದ ಅಚೇತನವಸ್ತುಗಳ ಸ್ತುತಿಯೂ ಸೇರಿರುವುವು. ಇಂತಹ ನಾನಾವಿಧವಾದ ಸೂಕ್ತಗಳು ೧೦ ನೆಯ ಮಂಡಲದಲ್ಲಿರುವವು.

ಒಂದೊಂದು ಸೂಕ್ತದಲ್ಲಿ ಒಂದರಿಂದ ಎಷ್ಟು ಬೇಕಾದರೂ ಋಕ್ಕುಗಳಿರಬಹುದು. ಸಾದಾರಣವಾಗಿ ಒಂದೇ ದೇವತೆಗೆ ಉದ್ದಿಷ್ಟವಾದ ಮಂತ್ರಗಳು ಒಂದು ಸೂಕ್ತವೆಂದು ಗಣನೆ. ವೇದದ ಯಾವ ಮಂತ್ರವನ್ನು ಹೇಳಬೇಕಾದರೂ ಪ್ರಾರಂಭದಲ್ಲಿ ಅದಕ್ಕೆ ಋಷಿ, ದೇವತೆ, ಮತ್ತು ಛಂದಸ್ಸು ಈ ಮೂರನ್ನೂ ಹೇಳಿ ಆಮೇಲೆ ಮಂತ್ರವನ್ನು ಹೇಳಬೇಕು. ಒಂದೇ ಋಕ್ಕಿಗೆ ಒಬ್ಬ ಋಷಿ, ಇರಬಹುದು, ಅಥವಾ ಅನೇಕ ಸೂಕ್ತಗಳಿಗೆ ಒಬ್ಬ ಋಷಿ ಇರಬಹುದು. ೧, ೯, ಮತ್ತು ೧೦ ನೆಯ ಮಂಡಲ ಹೊರತಾಗಿ ಬಾಕಿ ಮಂಡಲಗಳಿಗೆ ಒಂದೇ ಗುಂಪಿನ ಋಷಿಗಳಿರುವರು.

ಸೂಕ್ತಗಳನ್ನು ವಿಂಗಡಿಸಿರುವುದರಲ್ಲಿ ಒಂದು ನಿರ್ದಿಷ್ಟವಾದ ಕ್ರಮವು ಅನುಸರಿಸಲ್ಪಟ್ಟಿದೆ. ಒಂದು ಮಂಡಲದಲ್ಲಿ ಒಬ್ಬ ಋಷಿಗೆ ಸಂಬಂಧಪಟ್ಟ ಸೂಕ್ತಗಳಲ್ಲಿ ಮೊದಲು ಅಗ್ನಿ ದೇವತೆಗೆ ಸಂಬಂಧಪಟ್ಟ ಸೂಕ್ತಗಳಿರುವುವು. ಆ ಸೂಕ್ತಗಳಲ್ಲಿಯೂ ಮೊದಲು ಗಾಯತ್ರೀಛಂದಸ್ಸಿನ ಸೂಕ್ತಗಳು, ಬಳಿಕ ತ್ರಿಷ್ಟುಪ್ ಜಗತೀ ಮುಂತಾದ ಇತರ ಛಂದಸ್ಸಿನ ಸೂಕ್ತಗಳು ಇರುವವು. ಮತ್ತು ಈ ಸೂಕ್ತಗಳಲ್ಲಿಯೂ ಸಣ್ಣಸಣ್ಣ ಸೂಕ್ತಗಳು ಎಂದರೆ 3, 4, 5, 6, ಋಕ್ಕುಗಳುಳ್ಳ ಸೂಕ್ತಗಳು ಪ್ರಾರಂಭದಲ್ಲಿಯೂ ಬಳಿಕ ಕ್ರಮಕ್ರಮವಾಗಿ ಹೆಚ್ಚು ಋಕ್ಕುಗಳುಳ್ಳ ಸೂಕ್ತಗಳೂ ಇರುವುವು. ಈರೀತಿ ಅಗ್ನಿದೇವತಾಕವಾದ ಸೂಕ್ತಗಳು ಮುಗಿದಮೇಲೆ ಇಂದ್ರದೇವತಾಕವಾದ ಸೂಕ್ತಗಳು ಪ್ರಾರಂಭವಾಗುವುವು. ಅವುಗಳೂ ಮೇಲೆ ಹೇಳಿದ ನಿಯಮಗಳಿಗೊಳಪಟ್ಟಿರುವುವು ಇದಾದಮೇಲೆ ಇತರ ದೇವತೆಗಳು, ಎಂದರೆ ವಿಶ್ವದೇವತೆಗಳು, ಉಷಸ್ಸು ಮುಂತಾದ ದೇವತೆಗಳಿಗೆ ಸಂಬಂಧಪಟ್ಟ ಸೂಕ್ತಗಳು ಬರುವುವು. ಅನೇಕ ಋಷಿಗಳೂ, ಬೇರೆಬೇರೆ ದೇವತೆಗಳೂ, ಬೇರೆಬೇರೆ ಛಂದಸ್ಸುಗಳೂ ಒಂದೇ ಸೂಕ್ತದಲ್ಲಿ ಕಂಡುಬರುವುವು. ಇಂತಹ ಸೂಕ್ತಗಳು ಎಷ್ಟೋ ಕಡೆಗಳಲ್ಲಿರುವುವು. ಇವೆಲ್ಲವೂ ಆದಮೇಲೆ ಆ ಮಂಡಲಕ್ಕೆ ಸಂಬಂಧಪಟ್ಟ ಬೇರೆ ಋಷಿಯ ಸೂಕ್ತಗಳು ಹಿಂದೆ ಹೇಳಿದ ಕ್ರಮದಲ್ಲಿಯೇ ಪ್ರಾರಂಭವಾಗುವುವು. 9 ನೇ ಮಂಡಲದಲ್ಲಿ ಮಾತ್ರ ಎಲ್ಲಾ ಸೂಕ್ತಗಳಿಗೂ ಪವಮಾನಃಸೋಮಃ ಎಂಬ ಒಂದೇ ದೇವತೆಯಾಗಿರುವುದರಿಂದ ಗಾಯತ್ರಿಯೇ ಮೊದಲಾದ ಛಂದಸ್ಸಿನ ಕ್ರಮವೂ, ಸೂಕ್ತಗಳ ಪರಿಮಾಣವೂ ಅನುಸರಿಸಲ್ಪಟ್ಟಿರುವುದು

ಸೂಕ್ತಗಳು ಸಾಧಾರಣವಾಗಿ ಒಬ್ಬ ದೇವತೆಯನ್ನೇ ಉದ್ದೇಶಿಸುತ್ತವೆ. ಆದರೆ ಕೆಲವು ಸಂದರ್ಭಗಳಲ್ಲಿ ಒಂದು ಸೂಕ್ತಕ್ಕೆ ಅನೇಕ ದೇವತೆಗಳಿರಬಹುದು. ಒಂದೊಂದು ಋಕ್ಕಿಗೆ ಒಬ್ಬೊಬ್ಬ ದೇವತೆಯಿರಬಹುದು. ಅಥವಾ ಒಂದೇ ಸೂಕ್ತಕ್ಕೆ, ಒಂದೇ ಮಂತ್ರಕ್ಕೆ ಇಬ್ಬರು ದೇವತೆಗಳಿರಬಹುದು. ಮೊದಲನೆಯ ಮಂಡಲದ 2 ನೆಯ ಸೂಕ್ತದಲ್ಲಿ 9 ಋಕ್ಕುಗಳಿವೆ. ಅದರಲ್ಲಿ ಮೂರುಮೂರು ಮಂತ್ರಕ್ಕೊಬ್ಬರಂತೆ ವಾಯು, ಇಂದ್ರವಾಯುಗಳು ಮತ್ತು ಮಿತ್ರಾವರುಣರು ಎಂದು ಮೂರು ದೇವತೆಗಳು. ಅದೇ ಮಂಡಲದಲ್ಲಿ 6 ನೆಯ ಸೂಕ್ತಗಳಲ್ಲಿ ಹತ್ತು ಋಕ್ಕುಗಳಿವೆ. ಇದರಲ್ಲಿ ಮೊದಲನೆಯ ಮೂರಕ್ಕೆ ಇಂದ್ರನು ದೇವತೆ. ಬಾಕಿ ಋಕ್ಕುಗಳಲ್ಲಿ ಎಂಟನೆಯ ಮತ್ತು ಒಂಭತ್ತನೆಯದಕ್ಕೆ ಮರುತ್ತುಗಳು, ಉಳಿದ ಋಕ್ಕುಗಳಲ್ಲಿ ಒಂದೊಂದಕ್ಕೆ ಒಬ್ಬೊಬ್ಬರಂತೆ ಮರುತ್ತುಗಳು, ಇಂದ್ರ ಮರುತ್ತುಗಳು, ಮರುತ್ತುಗಳು ಮತ್ತು ಇಂದ್ರ ಮರುತ್ತುಗಳು ಕ್ರಮವಾಗಿ ದೇವತೆಗಳು. ಹದಿನಾಲ್ಕನೆಯ ಸೂಕ್ತದಲ್ಲಿರುವ ಹನ್ನೆರಡು ಮಂತ್ರಗಳಿಗೆ (ಅತ್ರವಿಶೇಷಃ ಅಸ್ಯ ಸೂಕ್ತಸ್ಯ ವಿಶ್ವೇ

ದೇವೈಸ್ಸಹಿತೋ ಅಗ್ನಿರ್ದೇವತಾ) ವಿಶ್ವೇದೇವತೆಗಳಿಂದ ಸಹಿತನಾದ ಅಗ್ನಿಯು ದೇವತೆ. ಹದಿಮೂರನೆಯ ಸೂಕ್ತದ ಒಂಭತ್ತನೆಯ ಮಂತ್ರಕ್ಕೆ ಮೂರು ದೇವತೆಗಳು, ಸರಸ್ವತೀ, ಇಳಾ ಮತ್ತು ಭಾರತಿಯರು. ಇದೇರೀತಿ ಅನೇಕ ಉದಾಹರಣೆಗಳು ಸಿಗುತ್ತವೆ. ಆದರೆ ಪ್ರಾಯಶಃ ಒಂದು ಸೂಕ್ತಕ್ಕೆ ಒಂದೇ ದೇವತೆ.

ಋಗ್ವೇದದಲ್ಲಿ ವಿಶೇಷವಾಗಿ ಬರುವ ದೇವತೆಗಳೆಂದರೆ ಅಗ್ನಿ, ಇಂದ್ರ, ಮರುತ್ತುಗಳು, ವಿಶ್ವೇದೇವತೆಗಳು, ಅಶ್ವಿನೀದೇವತೆಗಳು, ಪವಮಾನಸೋಮ ಇತ್ಯಾದಿ. ಅದರಲ್ಲಿ ಹೆಚ್ಚು ಮಂತ್ರಗಳು ಅಗ್ನಿ ಮತ್ತು ಇಂದ್ರ ದೇವತಾಕವಾದವು. ಒಟ್ಟು ಋಗ್ವೇದದಲ್ಲಿ ಕಾಲುಭಾಗವು ಇಂದ್ರನಪರವಾಗಿವೆ. ಇಂದ್ರನಾದಮೇಲೆ ಹೆಚ್ಚು ಮಂತ್ರಗಳು ಅಗ್ನಿಪರವಾಗಿವೆ. ಅನಂತರ ಇತರ ದೇವತೆಗಳು.

ಈ ಮಂಡಲಗಳಲ್ಲಿ ಇನ್ನೊಂದು ವಿಶೇಷ ಕಂಡುಬರುತ್ತದೆ. ಎಂಟು ಮತ್ತು ಒಂಭತ್ತನೆಯ ಮಂಡಲಗಳು ಹೊರತು, ಉಳಿದ ಎಂಟು ಮಂಡಲಗಳಲ್ಲಿ ಮೊದಲನೆಯ ಸೂಕ್ತ ಅಗ್ನಿಪರವಾಗಿಯೇ ಇದೆ. ಎಂಟನೆಯದರಲ್ಲಿ ಇಂದ್ರಪರವಾದ ಮಂತ್ರದಿಂದ ಪ್ರಾರಂಭಿಸುತ್ತದೆ. ಒಂಭತ್ತನೆಯ ಮಂಡಲವಷ್ಟೂ ಒಂದೇ ದೇವತೆಯನ್ನುದ್ದೇಶಿಸಿದೆ. ಪವಮಾನಸೋಮದೇವತೆಯೇ ಈ ಮಂಡಲದ ದೇವತೆ. ಇತರ ಮಂಡಲಗಳಂತೆ ಋಷಿಗಳು ಒಂದೇ ಗುಂಪಿನವರಲ್ಲ. ಇತರ ಮಂಡಲದ ಋಷಿಗಳೆಲ್ಲರೂ ಈ ಮಂಡಲದಲ್ಲಿ ಬರುತ್ತಾರೆ. ಹತ್ತನೆಯ ಮಂಡಲಕ್ಕೆ ಋಷಿಗಳೂ ನಾನಾಗುಂಪಿನವರು. ದೇವತೆಗಳೂ ಅನೇಕರು.

ಪ್ರಕೃತಸಂದರ್ಭದಲ್ಲಿ—ಮೊದಲನೆಯ ಅನುವಾಕದಲ್ಲಿರುವ ೩ ಸೂಕ್ತಗಳಲ್ಲಿ ೧-೨ ಸೂಕ್ತಗಳನ್ನು ಹಿಂದೆಯೇ (೧ನೆಯ ಭಾಗದಲ್ಲಿ) ವಿವರಿಸಿರುವುದರಿಂದ ಈಗ ಈ ಅನುವಾಕದ ಕೊನೆಯ ಸೂಕ್ತವಾದ **ಅಶ್ವಿನಾ ಯಜ್ವರೀರಿಷಃ** ಎಂಬ ಮೂರನೆಯ ಸೂಕ್ತದ ವಿವರಣೆಗಳನ್ನು ಪ್ರಾರಂಭಿಸುವೆವು.

ಅರ್ಥಾನುವಾದಕ್ಕೆ ಪೂರ್ವದಲ್ಲಿ ಈ ಸೂಕ್ತದ ವಿನಿಯೋಗಕ್ರಮವನ್ನು ಹೇಳುವೆವು—

> **ಅಶ್ವಿನೇತಿ ದ್ವಾದಶರ್ಚಂ ತೃತೀಯಂ ಸೂಕ್ತಂ । ತತ್ರಾಶ್ವಿನಸ್ತೃಚಃ ಪ್ರಾತರನುವಾಕಸ್ಯಾಶ್ವಿನೇ ಕ್ರತೌ ವಿನಿಯುಕ್ತಃ । ತಥಾ ಚ ಸೂತ್ರಿತಂ । ಅಥಾಶ್ವಿನ ವಿಷೋ ಉಷಾಃ ಪ್ರಾತರ್ಯುಜೇತಿ ಚತಸ್ರೋಽಶ್ವಿನಾ ಯಜ್ವರೀರಿಷಃ ॥ ಆ. ೪-೧೫ । ಇತಿ ॥**

ಈ ಸೂಕ್ತದಲ್ಲಿ ೧೨ ಋಕ್ಕುಗಳಿರುವವು. ಅಥವಾ ೪ ತೃಚಗಳಿರುವವು. ತೃಚವೆಂದರೆ ೩ ಋಕ್ಕುಗಳ ಸಮುದಾಯವೆಂದರ್ಥವು. ೧ನೆಯ ತೃಚಕ್ಕೆ (೧-೩ ಋಕ್ಕುಗಳಿಗೆ) ಅಶ್ವಿನೀದೇವತೆಗಳೂ, ೨ನೆಯ ತೃಚಕ್ಕೆ (೪-೬ ಋಕ್ಕುಗಳಿಗೆ) ಇಂದ್ರನೂ, ೩ನೆಯ ತೃಚಕ್ಕೆ (೭-೯ ಋಕ್ಕುಗಳಿಗೆ) ವಿಶ್ವೇದೇವತೆಗಳೂ, ೪ನೆಯ ತೃಚಕ್ಕೆ (೧೦-೧೨ ಋಕ್ಕುಗಳಿಗೆ, ) ಸರಸ್ವತಿಯೂ ದೇವತೆಗಳಾಗಿರುವರು.

ಅಗ್ನಿಷ್ಟೋಮಯಾಗದ ಸಂಕ್ಷೇಪ ವಿವರಣೆಯನ್ನು ನಾವು ಹಿಂದೆಯೇ (ಭಾಗ ೧ ಪೇ. 667-669) ಕೊಟ್ಟಿರುವೆವು. ಅಗ್ನಿಷ್ಟೋಮಯಾಗಗಳಲ್ಲಿ ಸೋಮರಸವನ್ನು ಹಿಂಡಿ ತೆಗೆಯುವ ದಿನಕ್ಕೆ ಸುತ್ಯಾದಿನವೆಂದು ಹೆಸರು. ಸೋಮರಸ ತೆಗೆಯುವ ಕಾಲದಲ್ಲಿ ಸ್ತೋತ್ರ, ಶಸ್ತ್ರಗಳೆಂದು ಹೇಳಲ್ಪಡುವ ಕೆಲವು ಸೂಕ್ತಗಳನ್ನು ಪಠನೆಮಾಡುವುದರಿಂದ ಆ ದಿನಕ್ಕೆ ಸುತ್ಯಾದಿನವೆಂದೂ ಹೆಸರು. ಆ ದಿನದಲ್ಲಿ ಪ್ರಾತಃಕಾಲದಲ್ಲಿ ಎಂದರೆ,

ಹಿಂದಿನ ದಿನ ಅರ್ಧರಾತ್ರಿ ಕಳೆದಮೇಲೆ ಸೂರ್ಯೋದಯವಾಗುವುದರೊಳಗೆ ಪಕ್ಷಿಗಳ ಕಿಲಕಿಲಧ್ವನಿಯು ಕೇಳಿ ಬರುವುದಕ್ಕಿಂತ ಮುಂಚೆಯೇ ಹೋತೃವು ಪ್ರಾತರನುವಾಕಗಳೆಂಬ ಮಂತ್ರಗಳನ್ನು ಹೇಳಿ ಮುಗಿಸಬೇಕು. ಈ ಪ್ರಾತರನುವಾಕವು ಆಗ್ನೇಯಕ್ರತು (ಅಗ್ನಿಸಂಬಂಧವಾದ ಋಕ್ಕುಗಳು) ಉಷಸ್ಯಕ್ರತು, ಆಶ್ವಿನಕ್ರತು ಎಂದು ಮೂರುಭಾಗಗಳನ್ನೊಳಗೊಂಡಿರುವುದು. ಪ್ರತಿಯೊಂದು ಭಾಗದಲ್ಲಿಯೂ ಗಾಯತ್ರೀ, ಅನುಷ್ಟುಪ್, ತ್ರಿಷ್ಟುಪ್, ಬೃಹತೀ, ಉಷ್ಣಿಕ್, ಜಗತೀ, ಪಂಕ್ತಿಃ ಎಂಬ ಏಳುವಿಧವಾದ ಛಂದಸ್ಸುಗಳಿಂದ ಕೂಡಿದ ಅನೇಕ ಮಂತ್ರಗಳಿರಬೇಕು.

ಪ್ರಾತರನುವಾಕಪಠನಾನಂತರ ಪ್ರಾತಸ್ಸವನವೆಂಬ ಕರ್ಮವು ನಡೆಯುವುದು ಸವನವೆಂದರೆ ಸೋಮ ಲತೆಯನ್ನು ಕಲ್ಲುಗಳಿಂದ (ಗ್ರಾವಾಣ) ಜಜ್ಜಿ ರಸವನ್ನು ಹಿಂಡಿ ತೆಗೆಯುವುದು. ಈ ಕರ್ಮವು ಮೂರು ಕಾಲ ಗಳಲ್ಲಿಯೂ ನಡೆಯುವುದು. ಪ್ರಾತಃಕಾಲದಲ್ಲಿ ರಸ ತೆಗೆಯುವುದಕ್ಕೆ ಪ್ರಾತಸ್ಸವನವೆಂದೂ ಮಧ್ಯಾಹ್ನಕಾಲದಲ್ಲಿ ರಸತೆಗೆಯುವುದಕ್ಕೆ ಮಾಧ್ಯಂದಿನಸವನವೆಂದೂ, ಸಾಯಂಕಾಲದಲ್ಲಿ ರಸತೆಗೆಯುವುದಕ್ಕೆ ತೃತೀಯಸವನ ವೆಂದೂ ಹೆಸರು.

ಈ ಮೂರು ಸವನಗಳಲ್ಲಿಯೂ ಒಟ್ಟು ಹನ್ನೆರಡು ಸ್ತೋತ್ರಗಳನ್ನೂ ಹನ್ನೆರಡು ಶಸ್ತ್ರ (ಮಂತ್ರ) ಗಳನ್ನೂ ಪಠಿಸಬೇಕು ಇಲ್ಲಿ ಸ್ತೋತ್ರ ಮತ್ತು ಶಸ್ತ್ರಮಂತ್ರಗಳ ವಿವರಣೆಯು ಅವಶ್ಯಕವಾಗಿರುವುದು. ಸ್ತೋತ್ರ ವೆಂದರೆ ಗಾನಮಾಡುವುದಕ್ಕೆ (ಸಾಮಗಾನ) ಅರ್ಹವಾದ ಋಕ್ಕುಗಳು. ಈ ಸಾಮಗಾನಮಂತ್ರವನ್ನು ಉದ್ಗಾತೃ ವೆಂಬ ಋತ್ವಿಜನು ಗಾನಮಾಡುವನು. ಅವನು ಒಂದೊಂದು ಸ್ತೋತ್ರವನ್ನು ಗಾನಮಾಡಿದ ಕೂಡಲೇ ಅದಕ್ಕೆ ಪ್ರತಿಯಾಗಿ ಹೋತೃವು ಶಸ್ತ್ರಮಂತ್ರವನ್ನು (ಋಗ್ವೇದದ ಋಕ್ಕುಗಳು) ಪಠಿಸುವನು. ಶಸ್ತ್ರವೆಂದರೆ ಗಾನ ಮಾಡದೆ ಸುಮ್ಮನೆ ಪಠಿಸುವ ಋಗ್ವೇದಮಂತ್ರವು. ಈ ಶಸ್ತ್ರಮಂತ್ರವನ್ನು ಹೋತೃವೂ ಅವನ ಕಡೆಯವರಾದ ಹೋತೃಕರು ಎಂದರೆ ಮೈತ್ರಾವರುಣ, ಬ್ರಾಹ್ಮಣಾಚ್ಛಂಸಿ, ಅಚ್ಛಾವಾಕ ಎಂಬ ಸಹಾಯಕ ಋತ್ವಿಜರು ಪಠಿಸು ವರು. ಈ ಮಂತ್ರಗಳನ್ನು ಅಗ್ನಿಷ್ಟೋಮಯಾಗದ ಪ್ರಾತರನುವಾಕದಲ್ಲಿ ಮೂರು ಸವನಗಳಲ್ಲಿಯೂ ಪಠಿಸುವ ವಿವರವನ್ನು ಕೆಳಗೆ ಕೊಟ್ಟಿದೆ—

## ೧. ಪ್ರಾತಸ್ಸವನ

| ಸ್ತೋತ್ರಮಂತ್ರಗಳು | ಶಸ್ತ್ರಮಂತ್ರಗಳು |
|---|---|
| ೧. ಬಹಿಷ್ಪವಮಾನಸ್ತೋತ್ರ | ೧. ಆಜ್ಯಶಸ್ತ್ರ |
| ೨. ಆಜ್ಯಸ್ತೋತ್ರಗಳು | ೨. ಪ್ರಉಗಶಸ್ತ್ರ (ಇವುಗಳನ್ನು ಹೋತೃವು ಪಠಿಸುವನು) |
| ೩. ,, | ೩. ಆಜ್ಯಶಸ್ತ್ರಗಳು |
| ೪. ,, | ೪. ,, |
| ೫. ,, | ೫. ,, |
| (ಈ ಎರಡು ಸ್ತೋತ್ರಗಳನ್ನು ಉದ್ಗಾತೃವು ಗಾನಮಾಡುವನು) | (ಈ ಮೂರು ಶಸ್ತ್ರಗಳನ್ನು ಹೋತೃವಿನ ಸಹಾಯಕರಾದ ಮೈತ್ರಾವರುಣ, ಬ್ರಾಹ್ಮಣಾಚ್ಛಂಸಿ, ಅಚ್ಛಾವಾಕ ಎಂಬ ಋತ್ವಿಜರು ಪಠಿಸುವರು). |

## ೨. ಮಾಧ್ಯಂದಿನಸವನ

| ಸ್ತೋತ್ರಮಂತ್ರಗಳು | ಶಸ್ತ್ರಮಂತ್ರಗಳು |
|---|---|
| ೬. ಮಾಧ್ಯಂದಿನಪವಮಾನಸ್ತೋತ್ರ | ೬. ಮರುತ್ವತೀಯಶಸ್ತ್ರ |
| ೭. ಪೃಷ್ಠಸ್ತೋತ್ರ | ೭. ನಿಷ್ಕೇವಲ್ಯಶಸ್ತ್ರ (ಈ ಎರಡು ಶಸ್ತ್ರಗಳನ್ನು ಹೋತೃವು ಪಠಿಸುವನು) |
| ೮. ,, | ೮. ನಿಷ್ಕೇವಲ್ಯಶಸ್ತ್ರ |
| ೯. ,, | ೯. ,, |
| ೧೦. ,, | ೧೦. ,, |
| (ಈ ಐದನ್ನೂ ಉದ್ಗಾತೃವು ಗಾನಮಾಡುವನು) | (ಈ ಮೂರನ್ನೂ ಹೋತೃವಿನ ಸಹಾಯಕರಾದ ಮೈತ್ರಾವರುಣಾದಿಗಳು ಪಠಿಸುವರು) |

## ೩. ತೃತೀಯಸವನ

| ಸ್ತೋತ್ರಮಂತ್ರಗಳು | ಶಸ್ತ್ರಮಂತ್ರಗಳು |
|---|---|
| ೧೧. ಆರ್ಭವ ಅಥವಾ ತೃತೀಯಪವಮಾನ | ೧೧. ವೈಶ್ವದೇವಶಸ್ತ್ರ |
| ೧೨. ಅಗ್ನಿಷ್ಟೋಮ ಸಾಮ(ಯಜ್ಞಾಯಜ್ಞೀಯ) | ೧೨. ಆಗ್ನಿಮಾರುತಶಸ್ತ್ರ |
| (ಈ ಎರಡು ಸ್ತೋತ್ರಗಳನ್ನು ಉದ್ಗಾತೃವು ಗಾನಮಾಡುವನು) | (ಈ ಎರಡು ಶಸ್ತ್ರಗಳನ್ನು ಹೋತೃವು ಪಠಿಸುವನು) |

ಭಾಷ್ಯಕಾರರು ಹೇಳಿರುವ **ಆಜ್ಯೈಃ ಸ್ತುವತೇ**—ಉದ್ಗಾತೃವು ಆಜ್ಯಸ್ತೋತ್ರ ಮಂತ್ರಗಳಿಂದ (ಪ್ರಾತಸ್ಸವನದಲ್ಲಿ) ಗಾನರೂಪವಾಗಿ ಸ್ತೋತ್ರಮಾಡುವನು, **ಪೃಷ್ಠೈಃ ಸ್ತುವತೇ**—ಉದ್ಗಾತೃವು ಪೃಷ್ಠಸ್ತೋತ್ರ ಮಂತ್ರಗಳಿಂದ (ಮಾಧ್ಯಂದಿನಸವನದಲ್ಲಿ) ಗಾನರೂಪವಾಗಿ ಸ್ತೋತ್ರಮಾಡುವನು, **ಪ್ರಉಗಂ ಶಂಸತಿ** ಹೋತೃವು ಪ್ರಉಗಶಸ್ತ್ರಮಂತ್ರಗಳನ್ನು (ಪ್ರಾತಸ್ಸವನದಲ್ಲಿ) ಪಠಿಸುವನು; **ನಿಷ್ಕೇವಲ್ಯಂ ಶಂಸತಿ**—ಹೋತೃವು ನಿಷ್ಕೇವಲ್ಯ ಶಸ್ತ್ರಮಂತ್ರಗಳನ್ನು (ಮಾಧ್ಯಂದಿನಸವನದಲ್ಲಿ) ಪಠಿಸುವನು ಎಂದರ್ಥವು. ಎಂದರೆ ಉದ್ಗಾತೃವು ಪ್ರಾತಸ್ಸವನದಲ್ಲಿ ಆಜ್ಯಸ್ತೋತ್ರಗಳಿಂದ ಗಾನಮಾಡಿದಕೂಡಲೇ ಅದಕ್ಕೆ ಪ್ರತಿಯಾಗಿ ಹೋತೃವು ಪ್ರಉಗಶಸ್ತ್ರ ಮಂತ್ರಗಳನ್ನು ಪಠಿಸುವನು. ಹಾಗೆಯೇ ಉದ್ಗಾತೃವು ಮಾಧ್ಯಂದಿನಸವನದಲ್ಲಿ ಪೃಷ್ಠಸ್ತೋತ್ರಗಳಿಂದ ಗಾನ ಮಾಡಿದಕೂಡಲೇ ಹೋತೃವು ನಿಷ್ಕೇವಲ್ಯಶಸ್ತ್ರಮಂತ್ರಗಳನ್ನು ಪಠಿಸುವನು, ಇತ್ಯಾದಿ.

ಪ್ರಾತರನುವಾಕಮಂತ್ರಪಠನಸಂದರ್ಭದಲ್ಲಿ **ಅಗ್ನಿಮೀಳೇ** ಎಂಬ ಸೂಕ್ತವನ್ನು ಪಠಿಸಬೇಕೆಂದು ಅದರ ವಿನಿಯೋಗವನ್ನೂ ಎರಡನೆಯ ಸೂಕ್ತವಾದ **ವಾಯವಾ ಯಾಹಿ** ಎಂಬ ಒಂಭತ್ತು ಋಕ್ಕಿನ ಸೂಕ್ತವಿನಿಯೋಗ ವನ್ನೂ ಹಿಂದೆಯೇ ಹೇಳಿರುವುದಷ್ಟೆ. ಈಗ ಮೂರನೆಯದಾದ **ಅಶ್ವಿನಾ ಯಜ್ವರೀರಿಷಃ** ಎಂಬ ಹನ್ನೆರಡು ಋಕ್ಕು ಗಳ ಸೂಕ್ತವನ್ನು **ಪ್ರಉಗಶಸ್ತ್ರ**ವೆಂಬ ಶಸ್ತ್ರಮಂತ್ರಪಠನಸಂದರ್ಭದಲ್ಲಿ ಹೋತೃವು ಪಠಿಸಬೇಕು. ಆ ಪ್ರಉಗಶಸ್ತ್ರ ಮಂತ್ರಗಳ ಕ್ರಮವು ಈರೀತಿ ಇದೆ—**ವಾಯು, ಇಂದ್ರವಾಯೂ, ಮಿತ್ರಾವರುಣಾ, ಅಶ್ವಿನೌ, ಇಂದ್ರಃ, ವಿಶ್ವೇದೇವಾಃ, ಸರಸ್ವತೀ** ಎಂಬ ಏಳು ದೇವತೆಗಳನ್ನು ಸ್ತುತಿಸುವ ಮಂತ್ರಗಳು. ಪ್ರತಿಯೊಂದು ದೇವತೆಗೂ **ತೃಚ**ವೆಂದು ಹೇಳಲ್ಪಡುವ ಮೂರು ಮೂರು ಋಕ್ಕುಗಳಿವೆ. **ವಾಯವಾ ಯಾಹಿ** ಎಂಬ ಸೂಕ್ತದಲ್ಲಿರುವ

ಒಂಭತ್ತು ಋಕ್ಕುಗಳಲ್ಲಿ ಮೊದಲನೆಯ ಮೂರು ಋಕ್ಕುಗಳು ವಾಯುವನ್ನೂ, ನಾಲ್ಕರಿಂದ ಆರುವರೆಗಿನ ಋಕ್ಕುಗಳು ಇಂದ್ರ ವಾಯುಗಳನ್ನೂ, ಏಳರಿಂದ ಒಂಭತ್ತುವರೆಗಿನ ಋಕ್ಕುಗಳು ಮಿತ್ರಾವರುಣರನ್ನೂ, ಮುಂದಿನ **ಅಶ್ವಿನಾ ಯಜ್ವರೀರಿಷಃ** ಎಂಬ ಸೂಕ್ತದಲ್ಲಿ ಒಂದರಿಂದ ಮೂರು ಋಕ್ಕುಗಳು ಅಶ್ವಿನೀದೇವತೆಗಳನ್ನೂ, ನಾಲ್ಕರಿಂದ ಆರರವರೆಗಿನ ಋಕ್ಕುಗಳು ಇಂದ್ರನನ್ನೂ, ಏಳರಿಂದ ಒಂಭತ್ತರವರೆಗಿನ ಋಕ್ಕುಗಳು ವಿಶ್ವೇದೇವರನ್ನೂ ಒಂಭತ್ತರಿಂದ ಹನ್ನೆರಡರವರೆಗಿನ ಋಕ್ಕುಗಳು ಸರಸ್ವತಿಯನ್ನೂ ಪ್ರತಿಪಾದಿಸುವವು. ಆದುದರಿಂದ ಎರಡು ಸೂಕ್ತಗಳಿಂದ ಒಟ್ಟು ಏಳು ತೃಚ (ಇಪ್ಪತ್ತೊಂದು ಋಕ್ಕುಗಳು) ಗಳಿಂದ ಕೂಡಿದ ಏಳು ದೇವತೆಗಳ ಶಸ್ತ್ರಮಂತ್ರಗಳಿರುವವು. ಇವುಗಳನ್ನು ಹೋತೃವು ಪ್ರಾತಸ್ಸವನದಲ್ಲಿ ಎರಡನೆಯದಾದ ಪ್ರಉಗಶಸ್ತ್ರವನ್ನು (ಉದ್ಗಾತೃವು ಆಜ್ಯಸ್ತೋತ್ರಗಳನ್ನು ಗಾನಮಾಡಿದಕೂಡಲೇ) ಪಠಿಸುವಾಗ ಹೇಳಬೇಕು. ಇದೇ ಈ ಎರಡು ಮತ್ತು ಮೂರನೆಯ ಸೂಕ್ತಗಳ ವಿನಿಯೋಗವು.

ಈ ವಿನಿಯೋಗಕ್ರಮವು ಐತರೇಯಬ್ರಾಹ್ಮಣದಲ್ಲಿ **ಗ್ರಹೋಕ್ಥಂ** (ಐ. ಬ್ರಾ. ೩-೧) ಎಂಬ ಖಂಡದಲ್ಲಿ ಹೇಳಿರುವುದು. ಆಶ್ವಲಾಯನರೂ ಸಹ ತಮ್ಮ ಶ್ರೌತಸೂತ್ರದಲ್ಲಿ **ಸ್ತೋತ್ರಮಗ್ರೇ ಶಸ್ತ್ರಾತ್** (ಆಶ್ವ. ಸೂ. ೫-೧೦) ಎಂಬ ಖಂಡಗಳಲ್ಲಿ ಹೇಳಿರುವರು. ಈ ವಿಚಾರದಲ್ಲಿ ಅನುಕ್ರಮಣಿಕೆಯು ಹೀಗೆ ಹೇಳುವುದು—**ವಾಯೋ ವಾಯವ್ಯೈಂದ್ರವಾಯವಮೈತ್ರಾವರುಣಾಸ್ತೃಚಾಃ ಅಶ್ವಿನಾ ದ್ವಾದಶಾಶ್ವಿನ್ಯೈಂದ್ರವೈಶ್ವದೇವಸಾರಸ್ವತಾಸ್ತೃಚಾಃ ಸಪ್ತೈತಾಃ ಪ್ರಉಗದೇವತಾಃ** ಎಂದರೆ **ವಾಯವಾಯಾಹಿ** ಎಂಬ ಸೂಕ್ತದಲ್ಲಿ ಮೂರು ಮೂರು ಋಕ್ಕುಗಳಿಗೆ ಒಬ್ಬೊಬ್ಬ ದೇವತೆಯಂತೆ **ವಾಯು, ಇಂದ್ರವಾಯೂ, ಮಿತ್ರಾವರುಣಾ** ಎಂಬ ಮೂರು ದೇವತೆಗಳೂ **ಅಶ್ವಿನಾಯಜ್ವರೀರಿಷಃ** ಎಂಬ ಸೂಕ್ತದಲ್ಲಿ ಹಿಂದಿನಂತೆಯೇ ಮೂರು ಮೂರು ಋಕ್ಕುಗಳಿಗೆ **ಅಶ್ವಿನಾ, ಇಂದ್ರಃ, ವಿಶ್ವದೇವಾಃ, ಸರಸ್ವತೀ** ಎಂಬ ನಾಲ್ಕು ದೇವತೆಗಳೂ ಸ್ತುತಿಸಲ್ಪಟ್ಟಿರುವರು. ಈ ಏಳು ದೇವತೆಗಳಿಗೂ ಪ್ರಉಗದೇವತೆಗಳೆಂದು ಹೆಸರು. ಇದೇ ಈ ಸೂಕ್ತದ ವಿನಿಯೋಗಕ್ರಮವು.



॥ ಓಂ ॥

## ಸೂಕ್ತ—೩

॥ ಮಂಡಲ—೧ ॥ ಅನುವಾಕ—೧ ॥ ಸೂಕ್ತ—೩ ॥

॥ ಅಷ್ಟಕ —೧ ॥ ಅಧ್ಯಾಯ—೧ ॥ ವರ್ಗ— ೫, ೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೧–೧೨ ॥

ಋಷಿಃ—ಮಧುಚ್ಛಂದಾಃ ವೈಶ್ವಾಮಿತ್ರಃ ।

ದೇವತಾ— ೧–೩ ಅಶ್ವಿನೌ । ೪–೬ ಇಂದ್ರಃ ॥ ೭–೯ ವಿಶ್ವೇದೇವಾಃ ॥

೧೦–೧೨ ಸರಸ್ವತೀ ॥

॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಅಶ್ವಿನಾ ಯಜ್ವರೀರಿಷೋ ದ್ರವತ್ಪಾಣೀ ಶುಭಸ್ಪತೀ ।
ಪುರುಭುಜಾ ಚನಸ್ಯತಂ ॥ ೧ ॥

॥ ಪದಪಾಠಃ ॥

ಅಶ್ವಿನಾ । ಯಜ್ವರೀಃ । ಇಷಃ । ದ್ರವತ್ಪಾಣೀ ಇತಿ ದ್ರವತ್ಽಪಾಣೀ ।
ಶುಭಃ । ಪತೀ ಇತಿ ।
ಪುರುಽಭುಜಾ । ಚನಸ್ಯತಂ ॥ ೧ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಾಮಿಷೋ ಹವಿರ್ಲಕ್ಷಣಾನ್ಯನ್ನಾನಿ ಚನಸ್ಯತಂ । ಇಚ್ಛತಂ । ಭುಂಜಾಥಾಮಿತ್ಯರ್ಥಃ । ಯದ್ಯಪಿ ಚನಃಶಬ್ದೋಽನ್ನವಾಚೀ ತಥಾಪೀಷ ಇತ್ಯನೇನ ಸಹ ನಾಸ್ತಿ ಪುನರುಕ್ತಿದೋಷಃ । ಇಚ್ಛಾಮುಪಲಕ್ಷಯಿತುಂ ಪ್ರಯುಕ್ತತ್ವಾತ್ । ವಕ್ತವ್ಯಮುವಾಚ । ಸಮೂಲಕಾಷಂಕಷತೀತ್ಯಾದೌ ಯಥಾ ಪುನರುಕ್ತ್ಯಭಾವಸ್ತದ್ವತ್ । ಕೀದೃಶೀರಿಷಃ । ಯಜ್ವರೀಃ । ಯಾಗನಿಷ್ಪಾದಿಕಾಃ । ಕೀದೃಶಾವಶ್ವಿನೌ । ದ್ರವತ್ಪಾಣೀ । ಹವಿರ್ಗ್ರಹಣಾಯ ದ್ರವದ್ಭ್ಯಾಂ ಧಾವದ್ಭ್ಯಾಂ ಪಾಣಿಭ್ಯಾಮುಪೇತೌ । ಶುಭಸ್ಪತೀ । ಶೋಭನಸ್ಯ ಕರ್ಮಣಃ ಪಾಲಕೌ । ಪುರುಭುಜಾ । ವಿಸ್ತೀರ್ಣಭುಜೌ ಬಹುಭೋಜಿನೌ

ವಾ | ಅಶ್ವಿನಾ | ಆಮಂತ್ರಿತಸ್ಯೇತಿ ಷಾಷ್ಠಿಕಮಾದ್ಯುದಾತ್ತತ್ವಂ | ಯಜ್ವರೀಃ | ಯಾಗಕರಣಾನಾಮುಪ್ಯ-ನ್ನಾನಾಮಪಿಪ್ಪಿನತ್ತೀತಿವತ್ ಸ್ವವ್ಯಾಪಾರೇ ಕರ್ತೃತ್ವವಿವಕ್ಷಯಾ ಸುಯಜೋರ್ಙ್ವನಿಪ್ | ಪಾ. ೩-೨-೧೦೩ | ಇತಿ ಙ್ವನಿಪ್ಪ್ರತ್ಯಯಃ | ವನೋ ರ ಚ | ಪಾ-೪-೧-೭ | ಇತಿ ಙೀಪ್ | ತತ್ಸಂನಿಯೋಗೇನ ರೇಫಾದೇಶಃ | ಪ್ರತ್ಯಯತ್ರಯಸ್ಯಾನುದಾತ್ತತ್ವಾತ್ ಸುಪ್ಪಿತಾವಿತ್ಯನುದಾತ್ತತ್ವಾದ್ಧಾತುಸ್ವರ ಏವಾವಶಿಷ್ಯತೇ | ಇಷಃಶಬ್ದೇ ಶಸೋಽನುದಾತ್ತತ್ವಾತ್ಪ್ರಾತಿಪದಿಕಸ್ವರ ಏವ ಶಿಷ್ಯತೇ | ದ್ರವಂತೌ ಧಾವಂತೌ ಪಾಣೀ ಯಯೋಸ್ತಯೋಃ ಸಂಬೋಧನಂ ದ್ರವತ್ಪಾಣೀ ಇತಿ | ತಸ್ಯಾಮಂತ್ರಿತಾದ್ಯುದಾತ್ತತ್ವಂ ನ ಪುನರಾಷ್ಟಮಿಕೋ ನಿಘಾತೋಽಪಾದಾದಾವಿತಿ ಪ್ರತಿಷೇಧಾತ್ | ಇಷ ಇತಿ ಪೂರ್ವಪದಸ್ಯ ಸುಬಾಮಂತ್ರಿತ ಇತಿ ಪರಾಂಗವದ್ಭಾವೇನ ಮಿತ್ರಾವರುಣಾವೃತಾವೃಧೌ | ಋ. ೧-೨-೮ | ಇತಿವದಪಾದಾದಿತ್ವಮಿತಿ ಚೇನ್ನ | ತತ್ರ ಸಾಮಾನಾಧಿ-ಕರಣ್ಯೇನ ಪರಸ್ಪರಾನ್ವಯಾತ್ | ಇಹ ತ್ವಿಷೋ ದ್ರವತ್ಪಾಣೀ ಇತ್ಯನಯೋಃ ಸರಸ್ವತಿಶುತುದ್ರಿಪದವದ-ಸಾಮರ್ಥ್ಯೇನ ಪ್ರಯುಕ್ತತ್ವಾತ್ | ಶುಭ ಇತಿ ಶುಭ ಶುಂಭ ದೀಪ್ತಾವಿತ್ಯಸ್ಯ ಸಂಪದಾದಿತ್ವಾದ್ಭಾವೇ ಕ್ವಿಬಂತಸ್ಯ ಷಷ್ಠ್ಯೇಕವಚನಂ | ಷಷ್ಠ್ಯಾಃ ಪತಿಪುತ್ರ | ಪಾ. ೮-೩-೫೩ | ಇತಿ ವಿಸರ್ಜನೀಯಸ್ಯ ಸತ್ವಂ | ತಸ್ಯ ಪತೀ ಇತ್ಯಾಮಂತ್ರಿತೇ ಪರತಃ ಪರಾಂಗವದ್ಭಾವಾದಾಮಂತ್ರಿತಾದ್ಯುದಾತ್ತತ್ವಂ | ನ ಪುನರಾಷ್ಟ-ಮಿಕೋ ನಿಘಾತಃ | ತಸ್ಮಿನ್ನರ್ಥೇ ದ್ರವತ್ಪಾಣೀ ಇತಿ ಪೂರ್ವಸ್ಯಾಮಂತ್ರಿತಸ್ಯಾಮಂತ್ರಿತಂ ಪೂರ್ವ-ಮವಿದ್ಯಮಾನವದಿತ್ಯವಿದ್ಯಮಾನವದ್ಭಾವೇನ ಪಾದಾದಿತ್ವಾದಪಾದಾದಾವಿತಿ ಪ್ರತಿಷೇಧಾತ್ | ನನು ಮಿತ್ರಾವರುಣಾವೃತಾವೃಧಾವಿತಿವನ್ನಾಮಂತ್ರಿತೇ ಸಮಾನಾಧಿಕರಣ ಇತ್ಯವಿದ್ಯಮಾನವದ್ಭಾವಪ್ರತಿಷೇಧೇನ ಭವಿತವ್ಯಮಿತಿ ಚೇನ್ನ | ಮಿತ್ರಾವರುಣಪದಂ ಹಿ ಸಾಮಾನ್ಯವಚನಮಿತಿ ಯುಕ್ತಸ್ತಸ್ಯಾವಿದ್ಯಮಾನ-ವತ್ತ್ವಪ್ರತಿಷೇಧಃ | ದ್ರವತ್ಪಾಣೀಪದಂ ತು ನ ತಥೇತಿ ವೈಷಮ್ಯಾತ್ | ಪುರುಭುಜಾ | ಪುರೂ ವಿಸ್ತೀರ್ಣೌ ಭುಜೌ ಯಯೋಸ್ತೌ | ಆಮಂತ್ರಿತಾದ್ಯುದಾತ್ತತ್ವಂ | ಸುಪಾಂ ಸುಲುಗಿತಿ ಡಾದೇಶಃ | ಪುರು ಬಹು ಭುಂಜಾತೇ ಇತಿ ವಾ | ಚನಸ್ಯತಮಿತ್ಯತ್ರ ಚಾಯತೇರನ್ನೇ ಹ್ರಸ್ವಶ್ಚ | ಉ. ೪-೧೯೯ | ಇತಿ ಚಾಯ್ಯ ಪೂಜಾನಿಶಾಮನಯೋರಿತ್ಯಸ್ಯಾಸುನ್ಪ್ರತ್ಯಯ ಆಕಾರಸ್ಯ ಹ್ರಸ್ವೇ ಚಾನುಕೃಷ್ಟೇ ನುಡಾಗಮೋ ಚ | ಉ. ೪-೧೯೬ | ಲೋಪೋ ವ್ಯೋರ್ವಲಿ | ಪಾ. ೬-೧-೬೬ | ಇತಿ ಯಕಾರಲೋಪೇ ಚನಃಶಬ್ದೋಽನ್ನ-ನಾಮಸು ಪಠಿತಃ | ತದಾತ್ಮನ ಇಚ್ಛತೀತಿ ಸುಪ ಆತ್ಮನಃ ಕ್ಯಚ್ | ಪಾ. ೩-೧-೮ | ಸನಾದ್ಯಂತಾಃ | ಪಾ. ೩-೧-೩೨ | ಇತಿ ಧಾತುತ್ವಾಲ್ಲೋಣ್ಮಧ್ಯಮದ್ವಿವಚನಂ | ಕ್ಯಚಃ ಪ್ರತ್ಯಯಸ್ವರೇಣೋದಾತ್ತತ್ವಂ | ಶಪ್ಯೇಕಾದೇಶೇ ಕೃತ ಏಕಾದೇಶ ಉದಾತ್ತೇನೋದಾತ್ತಃ | ಪಾ ೮-೨-೫ | ಇತ್ಯುದಾತ್ತಃ | ಉಪರ್ಯು-ಖ್ಯಾತಸ್ಯ ಲಸಾರ್ವಧಾತುಕಾನುದಾತ್ತತ್ವೇ ಸ್ವರಿತತ್ವಂ | ನ ಚ ತಿಙ್ಙತಿಙ ಇತಿ ನಿಘಾತಃ | ಪೂರ್ವಸ್ಯಾ-ಮಂತ್ರಿತಸ್ಯಾವಿದ್ಯಮಾನವದ್ಭಾವೇನ ಪದಾದಪರತ್ವಾತ್ಪಾದಾದಿತ್ವಾದ್ವಾ ತದಪ್ರಾಪ್ತೇಃ ||

|| ಪ್ರತಿಪದಾರ್ಥ ||

(ಹೇ) **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ (ನೀವು) | **ಶುಭಸ್ಪತೀ**—ಒಳ್ಳೆಯ ಕರ್ಮಗಳ (ಯಜ್ಞಯಾಗಾದಿ ಕರ್ಮಗಳ) ಪಾಲಕರು. | **ಪುರುಭುಜಾ**—ನಿಮ್ಮ ಬಾಹುಗಳು ಉದ್ದವಾಗಿವೆ, ವಿಸ್ತೀರ್ಣವಾಗಿವೆ ಅಥವಾ ನೀವು ಹೆಚ್ಚಾಗಿ ಭೋಜನಮಾಡತಕ್ಕವರು | **ದ್ರವತ್ಪಾಣೀ**—(ಹವಿರ್ಗ್ರಹಣಕ್ಕಾಗಿ) ಕೈಗಳನ್ನು ಚಾಚಿಕೊಂಡು ಓಡಿ ಬರುವವರು | (ಇಂತಹ ನೀವು) **ಯಜ್ವರೀಃ**—ಯಾಗ ಸಂಬಂಧವಾದ | **ಇಷಃ**—ಹವಿಸ್ಸಿನ ರೂಪವಾದ ಅನ್ನವನ್ನು | **ಚನಸ್ಯತಂ**—ತಿನ್ನುವುದಕ್ಕೆ ಅಪೇಕ್ಷೆಪಡುವಿರಿ. (ಭಕ್ಷಿಸಿ)

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ಶುಭಕಾರ್ಯಗಳನ್ನು ನಿರ್ವಿಘ್ನವಾಗಿ ನಡೆಯುವಂತೆ ರಕ್ಷಿಸತಕ್ಕವರು. ನೀವು ಆಜಾನುಬಾಹುಗಳು, ನಿಮ್ಮ ಭುಜಗಳು ಬಹುದೊಡ್ಡವಾಗಿವೆ ಅಥವಾ ನೀವು ಬಹುವಾಗಿ ಭೋಜನಮಾಡುವವರು. ಆದುದರಿಂದ ಈಗ ನಾವು ಈ ಯಜ್ಞದಲ್ಲಿ ಸಿದ್ಧಪಡಿಸಿರುವ ಹವಿಸ್ಸನ್ನು (ಅನ್ನವನ್ನು) ಭಕ್ಷಿಸುವುದಕ್ಕಾಗಿ ನಿಮ್ಮ ಕೈಗಳನ್ನು ನೀಡಿಕೊಂಡು ಬೇಗ ಬಂದು ಅನ್ನವನ್ನು ಭಕ್ಷಿಸಿ

English Translation.

O Asvins, you are cherishers of good deeds, your arms are long (or you are great eaters). You desire the sacrificial food with outstretched hands.

॥ ವಿಶೇಷವಿಷಯಗಳು ॥

ಅಶ್ವಿನೀದೇವತೆಗಳು ಇಬ್ಬರು. ಒಬ್ಬನ ಹೆಸರು **ದಸ್ರಾ** ಎಂತಲೂ ಇನ್ನೊಬ್ಬನ ಹೆಸರು **ನಾಸತ್ಯಾ** ಎಂತಲೂ ಹೇಳುವ ರೂಢಿಯಿದೆ. ಆದರೂ ಈ ಶಬ್ದಗಳನ್ನು ಅನೇಕಸಂದರ್ಭಗಳಲ್ಲಿ ಇಬ್ಬರನ್ನೂ ಒಟ್ಟಿಗೆ ಸಂಬೋಧನೆಮಾಡುವುದರಲ್ಲಿ ಉಪಯೋಗಿಸುವುದು ಕಂಡುಬರುವುದು. ಇವರ ಉತ್ಪತ್ತಿ ವಿಚಾರದಲ್ಲಿ ಪುರಾಣಗಳಲ್ಲಿ ಒಂದು ಉಪಾಖ್ಯಾನವಿದೆ ಸೂರ್ಯನ ಪತ್ನಿಯಾದ ಸಂಜ್ಞಾದೇವಿಯು ಕಾರಣಾಂತರದಿಂದ ಸೂರ್ಯನಲ್ಲಿ ಅಸಮಾಧಾನಗೊಂಡು ಕಾಡಿಗೆ ಹೋಗಿ ಹೆಣ್ಣುಕುದುರೆಯ ರೂಪದಿಂದ ತಪಸ್ಸನ್ನು ಮಾಡುತ್ತಿದ್ದಳೆಂದೂ ಅದನ್ನು ಸೂರ್ಯನು ತಿಳಿದು ತಾನೂ ಗಂಡುಕುದುರೆಯ ರೂಪದಿಂದ ಅವಳಿದ್ದಲ್ಲಿಗೆ ಹೋಗಿ ಕೆಲವುಕಾಲ ಇದ್ದನೆಂದೂ ಆಗ ಅವರಿಗೆ ಈ ಅಶ್ವಿನೀದೇವತೆಗಳು ಪುತ್ರರಾಗಿ ಜನಿಸಿದರೆಂದೂ ಹೇಳಲ್ಪಟ್ಟಿದೆ. ಋಗ್ವೇದದಲ್ಲಿ ಇವರ ವಿಷಯಕವಾದ ಅನೇಕ ಸೂಕ್ತಗಳಿವೆ. ಇವು ಬಹುಗಂಭೀರವಾಗಿಯೂ ಇವರ ಗುಣಗಳನ್ನೂ ಪರಾಕ್ರಮಗಳನ್ನೂ ಹೊಗಳುವುದಾಗಿಯೂ ಇರುವವು. ಯಜುರ್ವೇದದಲ್ಲಿ "**ಅಶ್ವಿನೌ ವೈ ದೇವಾನಾಂ ಭಿಷಜೌ**" ಎಂದರೆ ಈ ಅಶ್ವಿನೀದೇವತೆಗಳು ದೇವತೆಗಳ ವೈದ್ಯರೆಂದು ಹೇಳಿರುವುದು. ಹಿಂದೆ ಋಜ್ರಾಶ್ವನೆಂಬುವನು ತನ್ನ ತಂದೆಯ ಅಪ್ಪಣೆಯ ಪ್ರಕಾರ ವನದಲ್ಲಿ ಮೇಕೆಗಳನ್ನು ಮೇಯಿಸುತ್ತಿರುವಾಗ ಅಶ್ವಿನೀದೇವತೆಗಳು ವೃಕ (ತೋಳ) ರೂಪದಿಂದ ಬರಲು ಅವರಿಗೆ ನೂರು ಮೇಕೆಗಳನ್ನು ಆಹಾರಾರ್ಥವಾಗಿ ಕೊಟ್ಟನೆಂದೂ ಅದನ್ನು ತಿಳಿದು ಇವನ ತಂದೆಯು ಮಹಾಕೋಪದಿಂದ ಮಗನ ಕಣ್ಣುಗಳನ್ನು ಕೀಳಿಸಿ ಕುರುಡನನ್ನಾಗಿ ಮಾಡಿದನೆಂದೂ, ಬಳಿಕ ಋಜ್ರಾಶ್ವನು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಲು ಅವರು ಇವನ ಸ್ತೋತ್ರಕ್ಕೆ ಸಂತೋಷಪಟ್ಟು ಇವನಿಗೆ ಕಣ್ಣುಗಳನ್ನು ಕೊಟ್ಟು ಅನುಗ್ರಹಿಸಿದರೆಂದೂ ಈ ಮಂಡಲದ ೧೧೬ ನೆಯ ಸೂಕ್ತದಲ್ಲಿ ಹೇಳಿದೆ. ಈ ದೇವತೆಗಳ ಇಂತಹ ಅನೇಕ ಪರಾಕ್ರಮಗಳೂ ಸಾಹಸಗಳೂ ೧೧೬-೧೨೦ ನೆಯ ಸೂಕ್ತಗಳಲ್ಲಿಯೂ ಇತರ ಕಡೆಗಳಲ್ಲಿಯೂ ವರ್ಣಿಸಲ್ಪಟ್ಟಿವೆ

ಋಗ್ವೇದದಲ್ಲಿ ಕೆಲವು ದೇವತೆಗಳನ್ನು ಸ್ತೋತ್ರಮಾಡುವಾಗ ಕೆಲವು ನಿರ್ದಿಷ್ಟವಾದ ಶಬ್ದಗಳು ಪ್ರಯೋಗಿಸಲ್ಪಟ್ಟಿವೆ ಅಗ್ನಿಯನ್ನು ಸ್ತೋತ್ರಮಾಡುವಾಗ **ಕವಿ, ಹೋತೃ, ಗೃಹಪತಿ** ಮೊದಲಾದ ಶಬ್ದಗಳೂ ಇಂದ್ರನ ವಿಷಯವಾಗಿ, **ಶತಕ್ರತು, ವೃತ್ರಘ್ನ ಪುರುಹೂತ ಚಿತ್ರಭಾನು** ಮುಂತಾದ ಶಬ್ದಗಳೂ, **ಅಶ್ವಿನೀ**

ದೇವತೆಗಳ ವಿಷಯವಾಗಿ **ನಾಸತ್ಯಾ, ಶುಭಸ್ಪತೀ, ನರಾ, ಪುರುಭುಜಾ, ರಥ** ಮೊದಲಾದ ಶಬ್ದಗಳೂ ಉಪ ಯೋಗಿಸಲ್ಪಡುವವು ಇಂಥಹ ಅನೇಕ ಶಬ್ದಗಳನ್ನು ಆಯಾಯ ದೇವತೆಗಳ ವಿಷಯದಲ್ಲಿ ಎಲ್ಲಾ ಋಷಿಗಳೂ ಉಪಯೋಗಿಸಿರುವುದರಿಂದ ಆ ಶಬ್ದಗಳಿಗೆ ಈಗ ನಮಗೆ ತೋರುವ ಅಥವಾ ರೂಢಿಯಲ್ಲಿರುವ ಅರ್ಥಗಳಲ್ಲದೆ ಒಂದು ನಿರ್ದಿಷ್ಟವಾದ ಅರ್ಥವಿದ್ದಿರಬೇಕೆಂದು ಸ್ಪಷ್ಟವಾಗುವುದು. ಆ ಶಬ್ದಗಳನ್ನು ಯಾವ ಅರ್ಥದಲ್ಲಿ ಋಷಿ ಗಳು ಉಪಯೋಗಿಸಿರುವರೆಂದು ಈಗ ಹೇಳುವುದು ಕಷ್ಟವಾಗಿದೆ ವ್ಯಾಕರಣಾನುಸಾರವಾಗಿಯೂ ಅವಯವಾರ್ಥ ನಿಷ್ಪತ್ತಿಯಿಂದಲೂ ನಾವು ಯಾವುದಾದರೂ ಒಂದು ಸಮಂಜಸವಾದ ಅರ್ಥವನ್ನು ಕಲ್ಪಿಸಿದರೂ ಹಿಂದಿನ ಋಷಿ ಗಳ ಅಭಿಪ್ರಾಯವು ಆರೀತಿಯಾಗಿತ್ತೇ ಎಂಬುವುದು ಅನುಮಾನಾಸ್ಪದವಾಗಿದೆ ಆ ಶಬ್ದಗಳು ಈಗ ರೂಢಿಯ ಲ್ಲಿದ್ದರೂ ಅವುಗಳಿಗೆ ಹಿಂದೆ ಬಳಕೆಯಲ್ಲಿದ್ದ ಅರ್ಥವು ಈಗಿರುವುದಿಲ್ಲ. ಆಧುನಿಕಸಂಸ್ಕೃತದಲ್ಲಿ ಅವುಗಳ ಅರ್ಥವು ಬೇರೆಯಾಗಿರುವುದರಿಂದ ನಾವು ವ್ಯಾಖ್ಯಾನಮಾಡುವ ಅರ್ಥವು ಹಿಂದಿನ ಋಷಿಗಳ ಅಭಿಪ್ರಾಯಗಳಿಗೆ ಸರಿಯಾಗಿ ರುವುದೆಂದು ಹೇಳಲು ಸಾಧ್ಯವಿಲ್ಲ.

**ಅಶ್ವಿನಾ** ಅಥವಾ **ಅಶ್ವಿನೌ**—ಎಂಬ ಶಬ್ದಗಳು ಋಗ್ವೇದದಲ್ಲಿ ಮೂರುವಿಧವಾದ ಸ್ವರಗಳಿಂದ ಎಂದರೆ

**ಅಶ್ವಿನಾ, ಅಶ್ವಿನಾ, ಅಶ್ವಿನಾ ; ಅಶ್ವಿನೌ, ಅಶ್ವಿನೌ, ಅಶ್ವಿನೌ**

ಎಂದು ಅನೇಕ ಕಡೆಗಳಲ್ಲಿ ಉಪಯೋಗಿಸಲ್ಪಟ್ಟಿವೆ. ಮೊದಲನೆಯ ಶಬ್ದವು ಆದ್ಯುದಾತ್ತವು, ಎರಡನೆಯದು ಸರ್ವಾನುದಾತ್ತ ಈ ಎರಡುವಿಧಶಬ್ದಗಳೂ ಅಶ್ವಿನೀದೇವತೆಗಳನ್ನು ಸಂಬೋಧನೆಮಾಡುವ ಸಂದರ್ಭಗಳಲ್ಲಿಯೂ ಮೂರನೆಯದಾದ ಮಧ್ಯೋದಾತ್ತವು ಅಶ್ವಿನೀದೇವತೆಗಳು ಅಥವಾ ಅಶ್ವಿನೀದೇವತೆಗಳನ್ನು ಎಂಬ ಅರ್ಥವನ್ನು ಹೇಳುವಾಗಲೂ ಉಪಯೋಗಿಸುವುದು ರೂಢಿಯಾಗಿದೆ.

**ಅಶ್ವಿನಾ** ಎಂಬ ಶಬ್ದವು ನಾಮವಾಚಕ ಎಂದರೆ ನಿರ್ದಿಷ್ಟರಾದ ವ್ಯಕ್ತಿಗಳನ್ನು ತಿಳಿಸುವುದರಿಂದ ಆ ಶಬ್ದಕ್ಕೆ ಅವಯವಾರ್ಥವನ್ನು ಕಲ್ಪಿಸುವುದು ಸರಿಯಲ್ಲ. ಆದರೂ ವೇದಾರ್ಥಯತ್ನಕಾರರು ಈ ಶಬ್ದಕ್ಕೆ—**ಅಶ್ವಃ ಅಸ್ಯಾಸ್ತೀತಿ ಅಶ್ವೀ ತೌ ಅಶ್ವಿನೌ**—ಎಂದರೆ ಕುದುರೆಯುಳ್ಳವರು ಅಥವಾ ಕುದುರೆಯ ಮೇಲೆ ಸವಾರಿಮಾಡು ವವರು ಎಂದರ್ಥಮಾಡಿರುವರು. ಈ ವಿಧವಾದ ಅರ್ಥಕ್ಕೆ ಋಗ್ವೇದದಲ್ಲಿ ಅವಕಾಶವಿಲ್ಲ. ಏಕಂದರೆ, ಅನೇಕ ಋಕ್ಕುಗಳಲ್ಲಿ ಅಶ್ವಿನೀದೇವತೆಗಳು ರಥದಮೇಲೆ ಕುಳಿತಿರುವಂತೆ ಸಂಬೋಧನೆಮಾಡಿರುವುದೇ ಹೊರತು ಕುದು ರೆಯ ಮೇಲೆ ಕುಳಿತು ಸವಾರೀಮಾಡುತ್ತಿರುವಂತೆ ಎಲ್ಲಿಯೂ ಹೇಳಿಲ್ಲ. ಆದುದರಿಂದ ಅವರ ಅಭಿಪ್ರಾಯವು ಸಮಂಜಸವಾಗಿಲ್ಲ. ಆದರೆ ಅಶ್ವಿನೀದೇವತೆಗಳು ಅಶ್ವರೂಪದಿಂದ (ಕುದುರೆಯ ರೂಪದಿಂದ) ಇದ್ದ ಸೂರ್ಯ ಮತ್ತು ಸೂರ್ಯಪತ್ನಿಯಾದ ಸಂಜ್ಞಾದೇವಿಯರಿಂದ ಉತ್ಪನ್ನರಾದುದರಿಂದ ಇವರಿಗೆ **ಅಶ್ವಿನಾ** ಅಥವಾ **ಅಶ್ವಿನೌ** ಎಂದು ಹೆಸರು ಬಂದಿರಬಹುದೆಂದು ಊಹಿಸುವುದು ಯುಕ್ತವೆಂದು ತೋರುವುದು. **ಅಶ್ವಿನಾ** ಮತ್ತು **ಅಶ್ವಿನೌ** ಎಂಬ ಎರಡುವಿಧವಾದ ರೂಪಗಳೂ ದ್ವಿವಚನಗಳು. ಇವು ಪ್ರಥಮಾ ಮತ್ತು ದ್ವಿತೀಯಾವಿಭಕ್ತಿಗಳಲ್ಲಿ ಸಂದ ರ್ಭಾನುಸಾರ ಉಪಯೋಗಿಸಲ್ಪಟ್ಟಿರುವವು.

**ಯಜ್ವರೀಃ**—ಈ ಶಬ್ದವು ಋಗ್ವೇದಸಂಹಿತೆಯಲ್ಲಿ ಎರಡು ಋಕ್ಕುಗಳಲ್ಲಿ ಮಾತ್ರ ಉಪಯೋಗಿಸಲ್ಪ ಟ್ಟಿರುವುದು. ಈ ಋಕ್ಕಿನಲ್ಲಿಯೂ,

ಪ್ರಾತರ್ಯುಜಂ ನಾಸತ್ಯಾಧಿ ತಿಷ್ಠಥಃ ಪ್ರಾತರ್ಯಾವಾಣಂ ಮಧುವಾಹನಂ ರಥಂ ।
ವಿಶೋ ಯೇನ ಗಚ್ಛಥೋ ಯಜ್ವರೀರ್ನರಾ ಕೀರೇಶ್ಚಿದ್ಯಜ್ಞಂ ಹೋತೃಮಂತಮಶ್ವಿನಾ ॥
(ಋ ಸಂ. ೧೦-೪೧-೨)

ಎಂಬ ಋಕ್ಕಿನಲ್ಲಿಯೂ ಈ ಶಬ್ದಪ್ರಯೋಗವಿದೆ. ಎರಡು ಸ್ಥಳಗಳಲ್ಲಿಯೂ ಈ ಶಬ್ದಕ್ಕೆ ಇದೇ ಅರ್ಥವಿದೆ. ವಿಶೇಷವೇನೂ ಇಲ್ಲ.

ಇಷಃ—ಇಷಶಬ್ದಕ್ಕೆ ಅನ್ನ, ಆಹಾರವೆಂದರ್ಥವು ಈ ಶಬ್ದದ ಸ್ವರವೂ ಕೂಡ ಇಷಃ, ಇಷಃ ಎಂದು ಆದ್ಯುದಾತ್ತವಾಗಿಯೂ ಅಂತ್ಯೋದಾತ್ತವಾಗಿಯೂ ಇರುವುದು.

ದ್ರವತ್ಪಾಣೀ—ಈ ಶಬ್ದವು ಋಗ್ವೇದಸಂಹಿತೆಯ ಈ ಋಕ್ಕಿನಲ್ಲಿ ಮಾತ್ರವೇ ಇರುವುದು. ಈ ಶಬ್ದದ ಚತುರ್ಥೀ ಬಹುವಚನವಾದ ದ್ರವತ್ಪಾಣಿಭಿಃ ಎಂಬ ಶಬ್ದವು—

ಹಿರಣ್ಯಯೇನ ರಥೇನ ದ್ರವತ್ಪಾಣಿಭಿರಶ್ವೈಃ ॥
ಧೀಜವನಾ ನಾಸತ್ಯಾ ॥ (ಋ. ಸಂ. ೮-೫-೩೫)

ಎಂಬ ಋಕ್ಕಿನಲ್ಲಿ ಮಾತ್ರವಿರುವುದು ಬೇರೆ ಎಲ್ಲಿಯೂ ಇದರ ಪ್ರಯೋಗವಿಲ್ಲ. ಇದರ ಅರ್ಥವು ಸಾಯಣ ಭಾಷ್ಯಾನುಸಾರವಾಗಿ—ಕೈಗಳನ್ನು ನೀಡಿಕೊಂಡು ಅಥವಾ ಚಾಚಿಕೊಂಡು ಎಂದಾಗುವುದು. ಈ ಅರ್ಥವು ಈ ಋಕ್ಕುಗಳಲ್ಲಿ ಸರಿಹೋಗುವುದಾದರೂ ಎರಡನೆಯ ಋಕ್ಕಿನ ದ್ರವತ್ಪಾಣಿಭಿರಶ್ವೈಃ ಎಂಬ ಸ್ಥಳದಲ್ಲಿ ದ್ರವತ್ಪಾಣಿಭಿಃ ಎಂಬ ಶಬ್ದವು ಅಶ್ವೈಃ ಎಂಬುದಕ್ಕೆ ವಿಶೇಷಣವಾಗಿರುವುದರಿಂದ ಇಲ್ಲಿ ದ್ರವತ್ಪಾಣಿಭಿಃ ಎಂದರೆ ವೇಗವಾಗಿ ಚಲಿಸುವ ಪಾದಗಳುಳ್ಳ (ಕುದುರೆಗಳಿಂದ) ಎಂದರ್ಥಮಾಡಬೇಕಾಗುವುದು. ಆದುದರಿಂದ ಪಾಣಿಶಬ್ದವನ್ನು ಕೈಗಳು ಮತ್ತು ಕಾಲುಗಳು (ಖುರ) ಎಂಬ ಎರಡು ಅರ್ಥಗಳನ್ನೂ ಸೂಚಿಸುವುದಾಗಿ ತಿಳಿಯಬೇಕು.

ಶುಭಸ್ಪತೀ—ಶುಭಃ ಪತೀ ಎಂಬ ಎರಡುಶಬ್ದಗಳಿಗೂ ಒಟ್ಟಿಗೆ ಅರ್ಥವನ್ನು ಭಾಷ್ಯದಲ್ಲಿ ವಿವರಿಸಲಾಗಿದೆ. ಶುಭಕರ್ಮಗಳನ್ನು ಉಂಟುಮಾಡುವವರು ಎಂದರ್ಥವು. ಸ್ಕಂದಸ್ವಾಮಿ ಮತ್ತು ವೆಂಕಟಮಾಧವರು ಈ ಶಬ್ದಗಳಿಗೆ "ಉದಕೇಶ್ವರೌ" ಎಂದರೆ ಜಲಾಭಿಮಾನಿಗಳು, ಉದಕಾಧಿಪತಿಗಳು ಎಂದು ಅರ್ಥಮಾಡಿರುವರು. ಇವರ ಅಭಿಪ್ರಾಯದಲ್ಲಿ ಶುಭಃ ಎಂದರೆ ಉದಕಗಳು ಎಂದು. ವೇದಾರ್ಥಯತ್ನಕಾರರು ಐಶ್ವರ್ಯಾಧಿಪತಿಗಳು (Lords of prosperity) ಎಂದರ್ಥಮಾಡಿರುವರು Grassman, Ludwing, Geldner, Monier Williams, Griffith ಎಂಬ ಪಾಶ್ಚಾತ್ಯಪಂಡಿತರು ಈ ಶಬ್ದಕ್ಕೆ ಶುಭ ಶುಂಭ ದೀಪ್ತೌ ಎಂಬ ಧಾತುಪಾಠದ ಪ್ರಕಾರ Lords of Splendour ಎಂಬ ಅರ್ಥವನ್ನು ಅನುಮೋದಿಸುವರು. ದ್ವಿವಚನಾಂತವಾದ ಈ ಶಬ್ದವು ಋಗ್ವೇದಸಂಹಿತೆಯ ೧-೩-೧, ೧-೩೪-೬; ೧-೪೭-೫, ೧-೧೨೦-೬. ೫-೭೫-೮; ೮-೫-೧೧; ೮-೨೨-೪; ೮-೮೭-೫; ೧೦-೪೦-೪; ೧೦-೪೦-೧೨, ೧೦-೪೦-೧೩; ೧೦-೮೫-೧೫, ೧೦-೧೩೧-೪; ೮-೫೯-೩, ೮-೫೯-೫; ಈ ಋಕ್ಕುಗಳಲ್ಲಿ ಉಪಯೋಗಿಸಲ್ಪಟ್ಟಿದೆ. ಕೊನೆಯ ಎರಡು ಋಕ್ಕುಗಳಲ್ಲಿ ಇಂದ್ರಾವರುಣರ ವಿಷಯದಲ್ಲಿಯೂ ಉಳಿದ ಎಲ್ಲಾ ಋಕ್ಕುಗಳಲ್ಲಿಯೂ ಅಶ್ವಿನೀದೇವತೆಗಳ ವಿಷಯದಲ್ಲಿಯೂ ಈ ಶುಭಸ್ಪತೀ ಎಂಬ ಶಬ್ದಗಳ ಪ್ರಯೋಗವಿದೆ. ಇದರಂತೆ ಶವಸಸ್ಪತೀ ದನುಸ್ಪತೀ ಎಂಬ ಶಬ್ದಗಳು ಬೇರೆ ದೇವತೆಗಳ ವಿಷಯದಲ್ಲಿ ಪ್ರಯೋಗಿಸಲ್ಪಟ್ಟಿವೆ. ಅಶ್ವಿನೀದೇವತೆಗಳ ವಿಷಯದಲ್ಲಿಲ್ಲ. ಸಾಯಣಾಚಾರ್ಯರು ಶುಭಸ್ಪತೀ ಶಬ್ದಗಳ ವಿಚಾರದಲ್ಲಿ

ಒಂದೊಂದು ಕಡೆ ಒಂದೊಂದು ವಿಧವಾಗಿ ವ್ಯಾಖ್ಯಾನಮಾಡಿರುವರು. ಒಂದೆರಡು ಕಡೆಗಳಲ್ಲಿ ಶುಭ ಎಂದರೆ ಶೋಭ, ಪ್ರಕಾಶ ಎಂದು ಅರ್ಥಮಾಡಿರುವರು. ಆದುದರಿಂದ ಈ ಶಬ್ದದ ನಿರ್ದಿಷ್ಟಾರ್ಥವು ಇನ್ನೂ ಸಂದಿಗ್ಧವಾಗಿಯೇ ಉಳಿದಿದೆ.

ಇದಲ್ಲದೆ ಋಗ್ವೇದದಲ್ಲಿ ಪತೀ ಎಂಬ ಶಬ್ದವು ಕೆಲವು ಸಮಾಸಪದಗಳ ಉತ್ತರಪದವಾಗಿ ಉಪಯೋಗಿಸಲ್ಪಟ್ಟಿದೆ. ಹೇಗೆಂದರೆ—

**ಸದಸ್ಪತೀ** ( ಋ. ಸಂ. ೧–೨೧-೫, )

**ಗೋಪತೀ** ( ಋ. ಸಂ. ೯-೧೯-೨, )

**ದಂಪತೀ** ( ಋ. ಸಂ ೫-೩–೨ : ೮-೩೧-೫ , ೧೦-೧೦-೫ ; ೧೦-೬೮-೨ , ೧೦–೮೫-೩೨ ; ೧೦-೯೫-೧೨ , ೧೦–೧೬೨-೪ )

**ನೃಪತೀ** ( ಋ. ಸಂ. ೭-೬೭-೧ ; ೭-೭೧-೪ )

**ಮದಪತೀ** ( ಋ ಸಂ ೬-೬೯–೩ )

**ವನಸ್ಪತೀ** ( ಋ. ಸಂ. ೧-೨೮-೮ )

**ಶಚೀಪತೀ** ( ಋ. ಸಂ. ೭-೬೭-೫ )

**ಸತ್ಪತೀ** ( ಋ. ಸಂ. ೫-೬೫-೨ , ೬-೬೦–೬ , ೧೦-೬೫-೨ )

**ಸಿಂಧುಪತೀ** ( ಋ ಸಂ. ೭-೬೪-೨ )

**ಸ್ವಃಪತೀ** ( ಋ. ಸಂ. ೯-೧೯-೨ )

**ಪುರುಭುಜಾ**— ಇದು ದ್ವಿವಚನಾಂತಶಬ್ದವು. ಈ ಶಬ್ದಪ್ರಯೋಗವು ಋ. ಸ. ೧-೩-೧ ; ೧-೧೧೬-೧೩ ; ೧-೧೧೬-೧೪ , ೫-೪೯-೧ ; ೫-೭೩-೧ , ೬-೬೩-೫ , ೬-೬೩-೮ , ೮-೮–೧೭ , ೮-೧೦-೬ ; ೮-೮೬-೩ ಎಂಬ ಹತ್ತು ಋಕ್ಕುಗಳಲ್ಲಿದೆ. ಈ ಋಕ್ಕಿನಲ್ಲಿ ಈ ಶಬ್ದವು ಆದ್ಯುದಾತ್ತವಾಗಿಯೂ ಉಳಿದ ಋಕ್ಕುಗಳಲ್ಲಿ ಸರ್ವಾನುದಾತ್ತವಾಗಿಯೂ ಇರುವುದು ಸರ್ವಾನುದಾತ್ತವಿರುವ ನಾಮವಾಚಕಶಬ್ದಗಳು ಸಾಧಾರಣವಾಗಿ ಸಂಬೋಧನೆಯನ್ನು ನಿರ್ದೇಶಿಸುವುದರಿಂದ ಆ ಸ್ಥಳಗಳಲ್ಲೆಲ್ಲಾ ಅದೇರೀತಿ ಪ್ರಯೋಗವಿದೆ. ಅರ್ಥವಿಚಾರದಲ್ಲಿ ಈ ಶಬ್ದಕ್ಕೆ ಒಂದೊಂದು ಋಕ್ಕಿನಲ್ಲಿ ಒಂದೊಂದು ವಿಧವಾಗಿ ಅರ್ಥಮಾಡಿರುವರು ಹೇಗೆಂದರೆ—

**ಅಜೋಹವೀನ್ನಾಸತ್ಯಾ ಕರಾ ವಾಂ ಮಹೇ ಯಾಮನ್ಪುರುಭುಜಾ ಪುರಂಧಿಃ**

(ಋ. ಸಂ. ೧-೧೧೬-೧೩)

ಇಲ್ಲಿ ಪುರುಭುಜಾ ಎಂದರೆ **ಬಹೂನಾಂ ಪಾಲಕೌ**—ಅನೇಕರನ್ನು ರಕ್ಷಿಸುವವರು.

**ಉತೋ ಕವಿಂ ಪುರುಭುಜಾ ಯುವಂ ಹ ಕೃಪಮಾಣಮಕೃಣುತಂ ವಿಚಕ್ಷೇ**

(ಋ. ಸಂ. ೧-೧೧೬-೧೪)

ಇಲ್ಲಿ ಪುರುಭುಜಾ ಶಬ್ದಕ್ಕೆ **ಮಹಾಬಾಹೌ, ಪ್ರಭೂತಹಸ್ತೌ** ಮಹಾಬಾಹುಗಳುಳ್ಳವರು ಎಂದರ್ಥವು.

**ಆ ವಾಂ ನರಾ ಪುರುಭುಜಾ ವವೃತ್ಯಾಂ ದಿವೇ ದಿವೇ ಚಿದಶ್ವಿನಾ ಸಖೀಯನ್**

(ಋ. ಸಂ. ೫-೪೯-೧)

ಇಲ್ಲಿ **ಪುರು ಭುಂಜಾತಾ** ಎಂದರೆ ಬಹುವಾಗಿ ಭೋಜನಮಾಡುವವರು.

**ಯದ್ವಾ ಪುರೂ ಪುರುಭುಜಾ ಯದಂತರಿಕ್ಷ ಆ ಗತಂ ।**

(ಋ. ಸಂ. ೫-೭೩-೧)

ಇಲ್ಲಿ **ಬಹುಷು ಯಜ್ಞೇಷು ಭೋಕ್ತಾರೌ** ಎಂದರೆ ಅನೇಕ ಯಜ್ಞಗಳಲ್ಲಿ ಭುಜಿಸುವವರು ಎಂದರ್ಥವು.

**ಅಧಿ ಶ್ರಿಯೇ ದುಹಿತಾ ಸೂರ್ಯಸ್ಯ ರಥಂ ತಸ್ಥೌ ಪುರುಭುಜಾ ಶತೋತಿಂ ।**

(ಋ. ಸಂ. ೬-೬೩-೫)

**ಪುರು ಹಿ ವಾಂ ಪುರುಭುಜಾ ದೇಷ್ಣಂ ಧೇನುಂ ನ ಇಷಂ ಪಿನ್ವತಮಸಕ್ರಾಂ ।**

(ಋ. ಸಂ. ೬-೬೩-೮)

ಇಲ್ಲಿಯೂ ಸಹ **ಬಹುಪಾಲಕೌ** ಎಂದರ್ಥಮಾಡಿದಾರೆ.

**ಆ ನೋ ಗಂತಂ ರಿಶಾದಸೇಮಂ ಸ್ತೋಮಂ ಪುರುಭುಜಾ** । (ಋ. ಸಂ. ೮-೮-೧೭)

ಇಲ್ಲಿ " **ಬಹುಲಸ್ಯ ಹವಿಷೋ ಭೋಕ್ತಾರೌ** " ಹವಿಸ್ಸನ್ನು ಹೆಚ್ಚಾಗಿ ಭಕ್ಷಿಸತಕ್ಕವರು ಎಂದರ್ಥವು.

**ಯದಂತರಿಕ್ಷೇ ಪತಥಃ ಪುರುಭುಜಾ ಯದ್ವೇಮೇ ರೋದಸೀ ಅನು !** (ಋ. ಸಂ. ೮-೧೦-೬)

ಇಲ್ಲಿ " **ಬಹೂನಾಂ ಪಾಲಕೌ** " ಎಂದೇ ಅರ್ಥಮಾಡಿದಾರೆ.

**ಯುವಂ ಹಿ ಷ್ಮಾ ಪುರುಭುಜೇಮಮೇಧತುಂ ವಿಷ್ಣಾಪ್ವೇ ದದಥುರ್ವಸ್ಯ ಇಷ್ಟಯೇ ।**

(ಋ. ಸಂ. ೮-೮೬-೩)

ಇಲ್ಲಿ " **ಬಹೂನಾಂ ಧನಾದಿದಾನೇನ ಭೋಜಯಿತಾರೌ** " ಮತ್ತು "**ಬಹೂನಾಂ ಸ್ತೋತೄಣಾಂ ಪಾಲಯಿತಾರೌ** " ಎಂದರೆ " ಅನೇಕರಿಗೆ ಧನಾದಿ ಐಶ್ವರ್ಯವನ್ನು ಕೊಟ್ಟು ಆ ಮೂಲಕ ಅವರು ಕೊಟ್ಟ ಹವಿಸ್ಸನ್ನು ಭಕ್ಷಿಸತಕ್ಕವರು " ಮತ್ತು " ತಮ್ಮನ್ನು ಸ್ತೋತ್ರಮಾಡುವ ಅನೇಕರನ್ನು ಸಂರಕ್ಷಿಷತಕ್ಕವರು " ಎಂದು **ಎರಡು** ವಿಧವಾಗಿಯೂ ಅರ್ಥಮಾಡಿರುವರು

**ಚನಸ್ಯತಂ**— ಈ ದ್ವಿವಚನಾಂತವಾದ ಧಾತುವಿನ ಅರ್ಥವು " ಅನ್ನವನ್ನು ಭಕ್ಷಿಸಿರಿ " ಎಂದಿರುವು ದಾದರೂ, **ಇಷಃ**— ಹವಿಸ್ಸಿನ ರೂಪದಲ್ಲಿರುವ ಅನ್ನವನ್ನು, **ಚನ್ಯಸತಂ**— ಭಕ್ಷಿಸಿರಿ ಎಂದು ಹೇಳಿದರೆ **ಅನ್ನ** ಎಂಬ ಅರ್ಥವು ಎರಡು ಶಬ್ದಗಳಲ್ಲಿಯೂ ಬಂದಿರುವುದರಿಂದ ದ್ವಿರುಕ್ತಿದೋಷವುಂಟಾಗುವುದಿಲ್ಲವೇ ಎಂದರೆ, ಅದಕ್ಕೆ ಭಾಷ್ಯಕಾರರು ಆರೀತಿ ದ್ವಿರುಕ್ತಿಪಠನವು ಅನೇಕ ಸಂದರ್ಭಗಳಲ್ಲಿ ರೂಢಿಯಾಗಿ ಬಂದಿರುವುದರಿಂದ ಬಾಧಕವೇನೂ ಇಲ್ಲವೆಂದು ಹೇಳಿ ಈ ವಿಚಾರದಲ್ಲಿ " ಸಮೂಲಕಾಷಂ ಕಷತಿ " ಎಂಬ ಒಂದು ಉದಾಹರಣೆಯನ್ನು ಕೊಟ್ಟಿದಾರೆ. ಇದು ವೇದವಾಕ್ಯವಲ್ಲ ಇಂತಹ ಪುನರುಕ್ತಿಸಂಬಂಧವಾದ ಶಬ್ದಗಳು ವೇದದಲ್ಲಿಯೇ ಅಲ್ಲಲ್ಲಿ ಇರುವುವು. ಉದಾಹರಣೆಗಾಗಿ ಕೆಲವು ಋಕ್ಕುಗಳನ್ನು ನಾವು ಕೊಟ್ಟಿದೇವೆ —

**ಯೋ ಅಶ್ವಾನಾಂ ಯೋ ಗವಾಂ ಗೋಪತಿರ್ವಶೀ ಯ ಆರಿತಃ ಕರ್ಮಣಿಕರ್ಮಣಿ ಸ್ಥಿರಃ ।**
(ಋ. ಸಂ. ೧-೧೦೧-೪)

**ಇಹೇಂದ್ರಾಗ್ನೀ ಉಪಹ್ವಯೇ ತಯೋರಿತ್ಸ್ತೋಮಮುಶ್ಮಸಿ ।**
**ತಾ ಸೋಮಂ ಸೋಮಪಾತಮಾ ॥** (ಋ. ಸಂ. ೧-೨೧-೪)

**ದ್ರವಿಣೋದಾ ದ್ರವಿಣಸಸ್ತುರಸ್ಯ ದ್ರವಿಣೋದಾಃ ಸನರಸ್ಯ ಪ್ರ ಯಂಸತ್ ।**
(ಋ. ಸಂ. ೧-೯೬-೮)

ಈ ಋಕ್ಕುಗಳಲ್ಲಿರುವ "**ಗವಾಂ ಗೋಪತಿಃ**" "**ಸೋಮಂ ಸೋಮಪಾತಮಾ**" "**ದ್ರವಿಣೋದಾ ದ್ರವಿಣಸಃ**" ಎಂಬ ಶಬ್ದಗಳು ಪುನರುಕ್ತಿಯನ್ನು ಸಮರ್ಥಿಸುತ್ತವೆ.

॥ ವ್ಯಾಕರಣಪ್ರಕ್ರಿಯಾ ॥

## ॥ ಅಥ ತೃತೀಯಂ ಸೂಕ್ತಂ ॥

ಅಶ್ವಿನಾ, **ಆಮಂತ್ರಿತಸ್ಯಚ**, (ಪಾ. ಸೂ. ೬-೧-೧೯೮) ಎಂಬ ಆರನೇ ಅಧ್ಯಾಪರಿತಸೂತ್ರದಿಂದ ಆದ್ಯುದಾತ್ತ ಬರುವುದು. **ಯಜ್ವರೀ :**—ಯಜ್ವರೀ :—ಯಾಗ ನಿಷ್ಪಾದನ ಕರ್ತೃಗಳಾದ ಇಷಃ =ಅನ್ನಗಳನ್ನು ಚನಸ್ಯತಂ =ಇಚ್ಛಿಸಿರಿ, ಎಂದು ಅರ್ಥವು. ಇಲ್ಲಿ ಅನ್ನವು ಯದ್ಯಪಿ ಯಾಗನಿಷ್ಪಾದನದಲ್ಲಿ ಕರಣವಾಗುವುದೇ ವಿನಾ ಕರ್ತೃವಾಗುವುದಿಲ್ಲ ಆದರೂ, ಅಸಿಶ್ಛಿನತ್ತಿ ಕತ್ತಿಯು ಕತ್ತರಿಸುವುದು, ಎಂಬಲ್ಲಿ ಛೇದನಕ್ರಿಯೆಯಲ್ಲಿ ಆಸಿಯು ಕರಣವಾದರೂ, ಕತ್ತಿಯ ವ್ಯಾಪಾರದಲ್ಲಿ ಕತ್ತಿಗೆ ಸ್ವಾತಂತ್ರ್ಯವಿರುವುದರಿಂದ **ಸ್ವತಂತ್ರಃಕರ್ತಾ**, (ಪಾ. ಸೂ ೧-೪-೫೪) ಎಂಬುದರಿಂದ ಹೇಗೆ ಕರ್ತೃತ್ವವಿವಕ್ಷೆಮಾಡುತ್ತೇವೆಯೋ ಅದೇರೀತಿಯಲ್ಲಿ ಇಲ್ಲಿಯೂ ಕರ್ತೃತ್ವವಿವಕ್ಷೆಯನ್ನು ಮಾಡಿಕೊಳ್ಳಬೇಕು. **ಸುಯಜೋರ್ಙ್ವನಿಪ್** (ಪಾ. ಸೂ ೩-೨-೧೦೩) ಷುಞ್ ಅಭಿಷವೇ ಯಜ ದೇವಪೂಜಾದೌ ಎಂಬ ಧಾತುಗಳಿಗೆ ಭೂತಾರ್ಥದಲ್ಲಿ **ಙ್ವನಿಪ್** ಬರುವುದು ಎಂಬುದರಿಂದ **ಙ್ವನಿಪ್** ಪ್ರತ್ಯಯವು ಬರುವುದು, ನಂತರ **ವನೋರಚ** (ಪಾ ಸೂ ೪-೧-೭) ಸ್ತ್ರೀತ್ವವಿವಕ್ಷೆ ಮಾಡಿದಾಗ ವನ್ನಂತ ಪ್ರಾತಿಪದಿಕದಮುಂದೆ **ಙೀಪ್** ಬರುವುದು. ರೇಫವೂ ಅಂತಾದೇಶವಾಗಿ ಬರುವುದು ಎಂಬುದರಿಂದ **ಯಜ್ವನ್**, ಎಂಬಲ್ಲಿ **ಙೀಪ್** ಪ್ರತ್ಯಯವೂ ನಕಾರಕ್ಕೆ ರೇಫಾದೇಶವೂ ಬಂದರೆ **ಯಜ್ವರೀ** ಎಂದಾಗುವುದು. ಇಲ್ಲಿ **ಙ್ವನಿಪ್ ಙೀಪು** ಗಳೆರಡೂ ಪಿತ್ತಾದ್ದರಿಂದ, **ಅನುದಾತ್ತೌ ಸುಪ್ಪಿತೌ** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತ ಬರಲು ಧಾತು ಸ್ವರವೇ ನಿಲ್ಲುವುದು. ಇಷಃ ಎಂಬಲ್ಲಿ ಶಸ್ಸು ಸುಪ್ಪಾದ್ದರಿಂದ ಅನುದಾತ್ತ, ಆದ್ದರಿಂದ ಪ್ರಾತಿಪತಿಕಸ್ವರಮಾತ್ರ ನಿಲ್ಲುವುದು **ದ್ರವತ್ಪಾಣೀ-ದ್ರವಂತೌ** =ಧಾವಂತೌ **ಪಾಣೀ ಯಯೋಸ್ತೌ, ತಯೋಸ್ಸಂಬೋಧನಂ,** ಎಂದು ವಿಗ್ರಹ, **ದ್ರವತ್ಪಾಣೀ** ಎಂಬುದು ಎರಡನೇಪಾದದ ಆದಿಯಲ್ಲಿರುವುದು. ಆದ್ದರಿಂದ **ಅಪಾದಾದೌ** ಎಂದು ನಿಷೇಧ ಬರುವಕಾರಣ ಆಷ್ಟಮಿಕಸೂತ್ರದಿಂದ ಅನುದಾತ್ತ ಬರುವುದಿಲ್ಲ. ಆದರೆ **ಇಷಃ** ಎಂಬ ಪೂರ್ವಪದಕ್ಕೆ **ಸುಬಾಮಂತ್ರಿತೇ ಪರಾಂಗವತ್ಸ್ವರೇ** (ಪಾ ಸೂ. ೨ ೧-೨) ಎಂಬುದರಿಂದ ಪರಾಂಗವದ್ಭಾವ ಬರುವುದರಿಂದ **ಮಿತ್ರಾವರುಣಾವೃತಾವೃಧೌ** ಎಂಬುದರಂತೆ ಪಾದಾದಿಗತತ್ವ ಬರುವುದಿಲ್ಲ ಎನ್ನುತ್ತೇವೆಂದರೆ ಅದು ಆಗುವುದಿಲ್ಲ ಏಕೆಂದರೆ **ಸುಬಾಮಂತ್ರಿತೇ** ಎಂಬುದು ಪದವಿಧಿಯಾದ್ದರಿಂದ ಸಾಮರ್ಥ್ಯವಿರುವಾಗಲೇ ಬರುವುದು. ಮಿತ್ರಾವರುಣಾವೃತಾವೃಧೌ ಎಂಬಲ್ಲಿ ಪದದ್ವಯಗಳಿಗೆ ಪರಸ್ಪರಾನ್ವಯವಿರುವುದರಿಂದ ಸಾಮರ್ಥ್ಯವಿರುವುದು ಇಲ್ಲಿ ಇಷಃದ್ರವತ್ಪಾಣೀ ಪದಗಳಿಗೆ ಪರಸ್ಪರಾನ್ವಯವಿಲ್ಲದಕಾರಣ ಸರಸ್ವತಿ ಶುತುದ್ರಿ ಪದ

ಗಳಂತೆ ಸಾಮರ್ಥ್ಯವಿಲ್ಲ. ಆದ್ದರಿಂದ ಪರಾಂಗವದ್ಭಾವ ಬರುವುದಿಲ್ಲ. ಅಂದಮೇಲೆ ಶಾಷ್ಠಸೂತ್ರದಿಂದ ಉದಾತ್ತವೇ ಬರುವುದು. **ಶುಭ ಶುಂಭ ದೀಪ್ತೌ** ಎಂದು ಪಠಿತವಾದ ಶುಭಧಾತುವು **ಸಂಪದಾದಿ** ಗಣದಲ್ಲಿರುವುದರಿಂದ **ಸಂಪದಾದಿಭ್ಯಃಕ್ವಿಪ್** (ಪಾ. ಸೂ. ೩-೩-೧೦೮ ಭಾವಾ. ೯) ಎಂಬುದರಿಂದ ಭಾವೇಕ್ವಿಪ್ ಪ್ರತ್ಯಯಬರುವುದು. ಇದಕ್ಕೆ ಷಷ್ಠ್ಯೇಕವಚನವನ್ನು ಹಚ್ಚಿದರೆ ಶುಭಃ ಎಂದಾಗುವುದು. **ಷಷ್ಠ್ಯಾಃ ಪತಿಪುತ್ರಪೃಷ್ಠಪಾರ ಪದಪಯಸ್ಪೋಷೇಷು** (ಪಾ. ಸೂ. ೮-೩-೫೩) ಪತಿಮೊದಲಾದ ಶಬ್ದಗಳು ಪರವಾಗಿರುವಾಗ ಷಷ್ಠೀವಿಭಕ್ತಿಯ ವಿಸರ್ಗಕ್ಕೆ ಸತ್ವಬರುವುದು ಎಂಬುದರಿಂದ ಸಕಾರಾದೇಶಬಂದರೆ **ಶುಭಸ್ಪತೀ** ಎಂದಾಗುವುದು. ಇದಕ್ಕೆ **ಪತೀ** ಎಂಬ ಆಮಂತ್ರಿತವು ಪರವಾಗಿರುವುದರಿಂದ **ಸುಬಾಮಂತ್ರಿತೇ ಪರಾಂಗವತ್ಸ್ವರೇ** ಎಂಬುದರಿಂದ ಪರಾಂಗವದ್ಭಾವಬಂದು ಆಮಂತ್ರಿತದಂತೆ ಭಾವಿಸಲ್ಪಟ್ಟು **ಆಮಂತ್ರಿತಸ್ಯಚ** (ಪಾ. ಸೂ ೬-೧-೧೯೮) ಎಂಬುದರಿಂದ ಆದ್ಯುದಾತ್ತಬರುವುದು. ಆಷ್ಟಮಿಕಾನುದಾತ್ತವು ಬರುವುದಿಲ್ಲ. ಏಕೆಂದರೆ ಆಷ್ಟಮಿಕಾನುದಾತ್ತವನ್ನು ಮಾಡುವಾಗ ಇದಕ್ಕಿಂತಲೂ ಪೂರ್ವದಲ್ಲಿರುವ **ದ್ರವತ್ಪಾಣೀ** ಎಂಬ ಆಮಂತ್ರಿತನಾದ ಪೂರ್ವಪದಕ್ಕೆ **ಆಮಂತ್ರಿತಂ ಪೂರ್ವಮವಿದ್ಯಮಾನವತ್** (ಪಾ. ಸೂ. ೮-೧-೭೨) ಎಂಬುದರಿಂದ ಅವಿದ್ಯಮಾನವದ್ಭಾವಬರುವುದರಿಂದ **ಅಪಾದಾದೌ** ಎಂದು ಪ್ರತಿಷೇಧ ಬರುವುದು, ಆದರೆ **ಮಿತ್ರಾವರುಣಾವೃತಾವೃಧೌ**ಎಂಬಲ್ಲಿ ಹೇಗೆ ಅವಿದ್ಯಮಾನವದ್ಭಾವಕ್ಕೆ ಪ್ರತಿಷೇಧಬರುವುದೋ ಹಾಗೆಯೇ ಇಲ್ಲಿಯೂ **ನಾಮಂತ್ರಿತೇ ಸಮಾನಾಧಿಕರಣೇ ಸಾಮಾನ್ಯವಚನಂ** (ಪಾ. ಸೂ ೮-೧-೭೩) ಎಂಬ ಸೂತ್ರದಿಂದ ಅವಿದ್ಯಮಾನವದ್ಭಾವಕ್ಕೆ ಪ್ರತಿಷೇಧಬರಲಿ ಎಂದರೆ ಸೂತ್ರದಲ್ಲಿ **ಸಾಮಾನ್ಯವಚನೇ** ಎಂದಿರುವುದು ಮಿತ್ರಾವರುಣಾ ಎಂಬುದು ಸಾಮಾನ್ಯವಚನವಾದ್ದರಿಂದ, ಅಲ್ಲಿ ಅವಿದ್ಯಮಾನವದ್ಭಾವಪ್ರತಿಷೇಧ ಬರುವುದು. ದ್ರವತ್ಪಾಣೀ ಎಂಬುದು ವಿಶೇಷಣವಾದ್ದರಿಂದ ವಿಶೇಷವಚನವಾಗುವುದೇ ವಿನಾ ಸಾಮಾನ್ಯವಚನವಾಗುವುದಿಲ್ಲ. ಆದ್ದರಿಂದ ಅವಿದ್ಯಮಾನವದ್ಭಾವಪ್ರತಿಷೇಧ ಬರುವುದಿಲ್ಲ. ಏವಂಚ ಅವಿದಮಾನವದ್ಭಾವಬಂದು **ಅಪಾದಾದೌ** ಎಂದು ನಿಷೇಧಬರುವುದರಿಂದ ಆಷ್ಟಮಿಕಾನುದಾತ್ತ ಬರುವುದಿಲ್ಲ. ಆದ್ದರಿಂದ ಷಾಷ್ಠವಾದ ಆದ್ಯುದಾತ್ತವೇ ಬರುವುದು. **ಪುರು** ವಿಸ್ತೀರ್ಣವಾದ **ಭುಜೌ** ಬಾಹುಗಳು ಯಾರಿಗೆ ಇವೆಯೋ ಅವರು **ಪುರುಭುಜೌ** ಎನ್ನಲ್ಪಡುತ್ತಾರೆ. ಇದು ಸಂಬೋಧನದ್ವಿವಚನಾಂತ, ಇಲ್ಲಿ **ಸುಪಾಂಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಔಪ್ರತ್ಯಯಕ್ಕೆ **ಡಾ** ಆದೇಶಬರುವುದು, ಆಮಂತ್ರಿತಸಂಜ್ಞೆ ಇರುವುದರಿಂದ ಷಾಷ್ಠವಾದ ಆದ್ಯುದಾತ್ತಸ್ವರಬರುವುದು. **ಪುರು**-ಹೆಚ್ಚಾಗಿ **ಭುಂಜಾತೇ**-ತಿನ್ನುತ್ತಾರೆ. ಆದ್ದರಿಂದ ಪುರುಭುಜೌ ಎಂದಾಗಲೀ **ವ್ಯುತ್ಪತ್ತಿ**ಹೇಳಬಹುದು. **ಚನಸ್ಯತಂ** = **ಚಾಯತೇರನ್ನೇ ಹ್ರಸ್ವಶ್ಚ** (ಉ. ಸೂ. ೮-೬೩೯) ಚಾಯೃ ಪೂಜಾನಿಶಾಮನಯೋಃ ಎಂಬ ಧಾತುವಿಗೆ **ಅನ್ನ** ಎಂಬ ಅರ್ಥವು ಬೋಧಿತವಾಗುವಾಗ **ಅಸುನ್** ಪ್ರತ್ಯಯಬರುವುದು, ಪ್ರತ್ಯಯಕ್ಕೆ **ನುಟ್** ಆಗಮವೂ ಧಾತುವಿಗೆ ಹ್ರಸ್ವವೂ ಸಹ ಬರುವುದು ಎಂಬುದರಿಂದ ಚಾಯೃಧಾತುವಿಗೆ ಅಸುನ್‌ಪ್ರತ್ಯಯವೂ ಅಸುನ್ನಿನ ಆದಿಗೆ ನುಡಾಗಮವೂ, ಚಾ ಎಂಬುದಕ್ಕೆ ಹ್ರಸ್ವವೂ ಬಂದಮೇಲೆ ಚಯ್‌ನಸ್ ಎಂದಿರುವಾಗ **ಲೋಪೋವ್ಯೋರ್ವಲಿ** (ಪಾ. ಸೂ. ೬-೧-೬೬) ಅಶ್ ವರ್ಣಪರವಾಗಿರುವಾಗ ಅವರ್ಣದ ಮುಂದಿರುವ ಪದಾಂತಯಕಾರ ವಕಾರಗಳಿಗೆ **ಲೋಪ**ವು ವಿಕಲ್ಪವಾಗಿ ಬರುವುದು. ಎಂಬುದರಿಂದ ಯಕಾರಕ್ಕೆ ಲೋಪಬಂದರೆ **ಚನಃ** ಎಂದಾಗುವುದು. (ನಿರ. ೬-೧೬) ಇಲ್ಲಿ ಯಾಸ್ಕರು **ಚನಃ** ಶಬ್ದವನ್ನು ಅನ್ನನಾಮಗಳಲ್ಲಿ ಪಠಿಸಿರುವರು. **ಚನಃ ಆತ್ಮನಃ ಇಚ್ಛತಿ**-ಅನ್ನವನ್ನು ತನಗೆ ಅಪೇಕ್ಷಿಸುತ್ತಾನೆ ಎಂದು ವಿಗ್ರಹಮಾಡಿದಾಗ **ಸುಪ ಆತ್ಮನಃಕ್ಯಚ್** (ಪಾ ಸೂ ೩-೧-೮) ಇಷ್‌ಧಾತುವಿಗೆ ಅನ್ವಯಿಸುವ ಕರ್ಮವಾಚಕವಾಗಿಯೂ, ಇಷ್‌ಧಾತುವಿಗೆ ಅನ್ವಯಿಸುವ ಕರ್ತೃವಿನ ಸಂಬಂಧವನ್ನು ಹೊಂದಿದ್ದಾಗಿಯೂ ಇರುವ ಸುಬಂತದಮುಂದೆ ಇಚ್ಛೆ ಎಂಬ ಅರ್ಥದಲ್ಲಿ **ಕ್ಯಚ್** ಪ್ರತ್ಯಯ ಬರುವುದು. ಎಂಬುದರಿಂದ **ಕ್ಯಚ್** ಪ್ರತ್ಯಯ ಬರಲು, **ಕ್ಯಚ್ಚು** ಸನಾದಿಯಲ್ಲಿರುವುದರಿಂದ, **ಸನಾದ್ಯಂತಾಧಾತವಃ** (ಪಾ.

ಸೂ. ೩-೧-೩೨) ಎಂಬುದರಿಂದ ಧಾತುಸಂಜ್ಞೆ ಬರಲು ಲೋಟ್ ಮಧ್ಯಮಪುರುಷ ದ್ವಿವಚನದಲ್ಲಿ **ಚನಸ್ಯತಂ** ಎಂದಾಗುವುದು, ಇಲ್ಲಿ ಕ್ಯಚ್ಚು ಪ್ರತ್ಯಯಸ್ವರದಿಂದ ಉದಾತ್ತ, ಇದರಮುಂದೆ ಬರುವ ವಿಕರಣಪ್ರತ್ಯಯ ಶಪ್ಪು ಪಿತ್ತಾದ್ದರಿಂದ ಅನುದಾತ್ತ, ಕ್ಯಚ್ಚಿನ ಅಕಾರಕ್ಕೂ ಶಪ್ಪಿನ ಅಕಾರಕ್ಕೂ, **ಅತೋಗುಣೇ** ಎಂದು ವಿಹಿತಪರರೂಪ ದಿಂದ ಅಕಾರವೊಂದೇ ಏಕಾದೇಶಬರುವುದು **ಏಕಾದೇಶ ಉದಾತ್ತೇನೋದಾತ್ತಃ** (ಪಾ. ಸೂ. ೮-೨೮) ಎಂಬುದ ರಿಂದ ಏಕಾದೇಶವು ಉದಾತ್ತವಾಗುವುದು. ತಂ ಎಂಬುದು ಲ ಸಾರ್ವಧಾತುಕವಾದ್ದರಿಂದ **ತಾಸ್ಯನುದಾತ್ತೇತ್**- (ಪಾ. ಸೂ. ೬-೧-೧೮೬) ಎಂಬುದರಿಂದ ಬಂದ ಅನುದಾತ್ತವು **ಉದಾತ್ತಾದನುದಾತ್ತಸ್ಯ** ಎಂಬುದರಿಂದ ಸ್ವರಿತ ವಾಗುವುದು. ಇದು ತಿಙಂತವಾದರೂ **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಅನುದಾತ್ತಬರು ವುದಿಲ್ಲ. **ಪುರಭುಜಾ** ಎಂಬ ಪೂರ್ವಪದವು ಆಮಂತ್ರಿತವಾದ್ದರಿಂದ **ಆಮಂತ್ರಿತಂ ಪೂರ್ವಮವಿದ್ಯಮಾನವತ್** ಎಂಬುದರಿಂದ ಅವಿದ್ಯಮಾನವದ್ಭಾವ ಬರುವುದು ಆದ್ದರಿಂದ ಅತಿಙಂತವಾದ ಪದಕ್ಕಿಂತಲೂ ಪರವಾಗುವುದಿಲ್ಲ, ಅಥವಾಪಾದಿಯಾಗುವುದು ಅನುದಾತ್ತ ಸಾಮಾನ್ಯವೂ **ಅನುದಾತ್ತಂ ಸರ್ವಮಪಾದಾದೌ** ಎಂಬುದರಿಂದ ಅಪಾ ದಾದಿಯಲ್ಲಿಯೇ ಬರುವುದು, ಆದ್ದರಿಂದ ಅನುದಾತ್ತ ಬರುವುದಿಲ್ಲ.

॥ ಸಂಹಿತಾಪಾಠಃ ॥

ಅಶ್ವಿನಾ ಪುರುದಂಸಸಾ ನರಾ ಶವೀರಯಾ ಧಿಯಾ ॥
ಧಿಷ್ಣ್ಯಾ ವನತಂ ಗಿರಃ ॥ ೨ ॥

॥ ಪದಪಾಠಃ ॥

ಅಶ್ವಿನಾ । ಪುರುಽದಂಸಸಾ । ನರಾ । ಶವೀರಯಾ । ಧಿಯಾ ॥
ಧಿಷ್ಣ್ಯಾ । ವನತಂ । ಗಿರಃ ॥ ೨ ॥

॥ ಸಾಯಣಭಾಷ್ಯಂ ॥

ಅಶ್ವಿನಾ ಹೇ ಅಶ್ವಿನೌ ಯುವಾಂ ಗಿರೋಽಸ್ಮದೀಯಾಃ ಸ್ತುತೀರ್ಧಿಯೋದರಯುಕ್ತಯಾ ಬುದ್ಧ್ಯಾ ವನತಂ । ಸಂಭಜತಂ । ಸ್ವೀಕುರುತಂ । ಕೀದೃಶಾವಶ್ವಿನೌ । ಪುರುದಂಸಸಾ ಬಹುಕರ್ಮಾಣೌ । ಷಡ್ವಿಂಶತಿಸಂಖ್ಯಾಕೇಷು ಕರ್ಮನಾಮಸು ದಂಸ ಇತಿ ಪಠಿತಂ । ನರಾ ನೇತಾರೌ ಧಿಷ್ಣ್ಯಾ ಧಾರ್ಷ್ಟ್ಯ- ಯುಕ್ತೌ ಬುದ್ಧಿಮಂತೌ ವಾ । ಕೀದೃಶ್ಯಾ ಧಿಯಾ । ಶವೀರಯಾ ಗತಿಯುಕ್ತಯಾ । ಅಪ್ರತಿಹತಪ್ರಸರ- ಯೇತ್ಯರ್ಥಃ ॥ ಅಶ್ವಿನೇತ್ಯಾದ್ಯಾಮಂತ್ರಿತಚತುಷ್ಟಯಸ್ಯ ಷಾಷ್ಠಿಕಮಾಮಂತ್ರಿತಾದ್ಯುದಾತ್ತತ್ವಂ । ಪಾದಾ- ದಿತ್ವಾನ್ನಾಷ್ಟಮಿಕೋ ನಿಘಾತಃ । ಪುರುದಂಸಸೇತ್ಯಪಿ ಹಿ ಪಾದಾದಿರೇವಾಮಂತ್ರಿತಂ ಪೂರ್ವಮವಿದ್ಯ-

ಮಾನವದಿತಿ ಪೂರ್ವಸ್ಯಾವಿದ್ಯಮಾನವತ್ತ್ವಾತ್ । ನಾಮಂತ್ರಿತೇ ಸಮಾನಾಧಿಕರಣ ಇತಿ ಪೂರ್ವಸ್ಯ ಸಾಮಾನ್ಯವಚನತ್ವೇನಾಸ್ಯ ವಿಶೇಷವಚನತ್ವೇನ ನಾವಿದ್ಯಮಾನವತ್ತ್ವಮಿತಿ ಚೇನ್ನ । ಅಶ್ವಿಶಬ್ದವತ್ಪುರುದಂಸಸಃ ಶಬ್ದಸ್ಯಾಪ್ಯಶ್ವಿನೋರೇವ ರೂಢ್ಯಾ ಪ್ರಯುಜ್ಯಮಾನತಯಾ ಸಾಮಾನ್ಯಶಬ್ದತ್ವಾತ್ ಸಾಮಾನ್ಯವಚನಂ ನಾವಿದ್ಯಮಾನವದಿತ್ಯುಕ್ತೇಽರ್ಥಾತ್ಪರಸ್ಯ ವಿಶೇಷವಚನತ್ವಾವಗಮಾತ್ । ಉಭಯೋಃ ಸಾಮಾನ್ಯವಚನತ್ವೇ ಪರ್ಯಾಯತ್ವೇನ ಪೌನರುಕ್ತ್ಯಾತ್ಸಹಾಪ್ರಯೋಗ ಇತಿ ಚೇನ್ನ । ಗುಣವಿಶೇಷಸಂಕೀರ್ತನವತ್ಪ್ರಸಿದ್ಧಾನೇಕನಾಮವಿಶೇಷಸಂಬಂಧಸಂಕೀರ್ತನಸ್ಯಾಪಿ ಸ್ತುತ್ಯುಪಯೋಗೇನ ಸಪ್ರಯೋಜನತ್ವಾನ್ನಿಷ್ಪ್ರಯೋಜನಪುನರ್ವಚನಸ್ಯೈವ ಪುನರುಕ್ತತ್ವಾತ್ । ಅಶ್ವಿಪುರುದಂಸಃಶಬ್ದಯೋರೇಕಾರ್ಥವೃತ್ತಿತ್ವೇಽಪಿ ಪರ್ಯಾಯತ್ವಾದೇವ ಪ್ರವೃತ್ತಿನಿಮಿತ್ತಭೇದಾಭಾವೇನಾಸಾಮಾನಾಧಿಕರಣ್ಯಾದಪಿ ನಾವಿದ್ಯಮಾನವತ್ತ್ವಪ್ರತಿಷೇಧಃ । ಭಿನ್ನಪ್ರವೃತ್ತಿನಿಮಿತ್ತಾನಾಮೇವ ಹ್ಯೇಕಸ್ಮಿನ್ನರ್ಥೇ ವೃತ್ತಿಃ ಸಾಮಾನಾಧಿಕರಣ್ಯಂ ॥ ಅಶ್ವಿಶಬ್ದಸ್ಯಾಶ್ವಸಂಬಂಧೋ ನಿಮಿತ್ತಂ ಪುರುದಂಸಃಶಬ್ದಸ್ಯ ತು ಬಹುಕರ್ಮಸಂಬಂಧ ಇತಿ ಪ್ರವೃತ್ತಿನಿಮಿತ್ತಭೇದ ಇತಿ ಚೇನ್ನ । ತದ್ಧಿ ದ್ವಯಂ ವ್ಯುತ್ಪತ್ತಿಮಾತ್ರನಿಮಿತ್ತಂ ನ ಪ್ರವೃತ್ತಿನಿಮಿತ್ತಂ । ವ್ಯುತ್ಪತ್ತಿನಿಮಿತ್ತಭೇದಮಾತ್ರೇಣಾಪಿ ಸಾಮಾನಾಧಿಕರಣ್ಯಾಭಿಧಾನೇ ವೃಕ್ಷಮಹೀರುಹಶಬ್ದಯೋರಪಿ ತಥಾತ್ವಪ್ರಸಂಗಃ । ಅತ ಏವ ಹೀಡೇ ರಂತೇಽದಿತೇ ಸರಸ್ವತಿ ಪ್ರಿಯೇ ಪ್ರೇಯಸಿ ಮಹಿ ವಿಶ್ರುತಿ । ಏತಾನಿ ತೇ ಅಘ್ನಿಯೇ ನಾಮಾನಿ । ತೈ. ಸಂ. ೭-೧-೬-೮ । ಇತ್ಯತ್ರ ಸಹಸ್ರತಮೀಪ್ರಶಂಸೋಪಯೋಗಿತ್ವೇನೇಡಾದಿಶಬ್ದಾನಾಮೇತಾನಿ ತೇ ಅಘ್ನಿಯೇ ನಾಮಾನೀತಿ ವಚನೇನ ಪರ್ಯಾಯಾಣಾಮಪ್ಯನೇಕವಿಶಿಷ್ಟನಾಮಸಂಬಂಧನಿಬಂಧನಸ್ತುತ್ಯರ್ಥತ್ವೇನೈವ ಸಹಪ್ರಯೋಗಃ । ಸ್ತುತ್ಯುಪಯೋಗೇನೈವ ವ್ಯುತ್ಪತ್ತಿನಿಮಿತ್ತಭೇದವಿವಕ್ಷಾಯಾಮಪಿ ಪರ್ಯಾಯತ್ವೇನಾಸಾಮಾನಾಧಿಕರಣ್ಯಾದೇವ ನಾಮಂತ್ರಿತ ಇತಿ ನಿಷೇಧಾಭಾವಾದಾಮಂತ್ರಿತಂ ಪೂರ್ವಮವಿದ್ಯಮಾನವದಿತಿ ಪೂರ್ವಪೂರ್ವಸ್ಯಾವಿದ್ಯಮಾನವತ್ತ್ವಾತ್ಸರ್ವೇಷಾಂ ಷಾಷ್ಠಿಕಮಾದ್ಯುದಾತ್ತತ್ವಂ ತದ್ವತ್ಪ್ರಕೃತೇಽಪಿ । ಕ್ಷ್ಯಾ ಶ್ಯಾ ಪ್ಯಾ ಕಟಿಪಟಿ ಶೌಟಿಭ್ಯ ಈರ್ಣ । ಉ. ೪-೩೦ । ಇತ್ಯತ ಈರನ್ನಿತ್ಯನುವೃತ್ತೌ ಬಹುಲವಚನಾದನ್ಯತ್ರಾಪೀತ್ಯನೇನ ಶು ಗತಾವಿತಿ ಧಾತೋರೀರನ್ಪ್ರತ್ಯಯೇ ಕೃತೇ ಸತಿ ನಿತ್ತ್ವಾಚ್ಛವೀರಯಾಶಬ್ದ ಆದ್ಯುದಾತ್ತಃ । ಧಿಯೇತ್ಯತ್ರ ಸಾವೇಕಾಚ ಇತಿ ವಿಭಕ್ತಿರುದಾತ್ತಾ । ವನತಮಿತ್ಯತ್ರ ಶಪಃ ಪಿತ್ತ್ವಾಲ್ಲೋಣ್ಮಧ್ಯಮದ್ವಿವಚನಸ್ಯ ಲಸಾರ್ವಧಾತುಕತ್ವಾಚ್ಚ ವನ ಷಣ ಸಂಭಕ್ತಾವಿತಿ ಧಾತೂದಾತ್ತತ್ವಮೇವ ಶಿಷ್ಯತೇ । ನ ಚ ತಿಙ್ಙತಿಙ ಇತಿ ನಿಘಾತಃ ಪೂರ್ವಾಮಂತ್ರಿತಸ್ಯಾವಿದ್ಯಮಾನವತ್ತ್ವೇನ ಪಾದಾದಿತ್ವಾತ್ । ಗಿರಃ । ಸುಪೋಽನುದಾತ್ತತ್ವೇ ಪ್ರಾತಿಪದಿಕಸ್ವರಃ ಶಿಷ್ಯತೇ ॥

॥ ಪ್ರತಿಪದಾರ್ಥಃ ॥

ಪುರುದಂಸಸಾ—ಬಹುಕರ್ಮಯುಕ್ತರಾದ ಎಂದರೆ ಅನೇಕ ಕರ್ಮಗಳನ್ನು ಮಾಡುವ, । ನರಾ—ಜನರಿಗೆ ಮುಖಂಡರಾದ ಅಥವಾ ಮಾರ್ಗದರ್ಶಕರಾದ, । ಧಿಷ್ಣ್ಯಾ—ಬುದ್ಧಿವಂತರಾದ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ, (ನೀವು) । ಶವೀರಯಾ—ಅಪ್ರತಿಹತವಾದ, ತಡೆಯಿಲ್ಲದ । ಧಿಯಾ—ಆದರಬುದ್ಧಿಯಿಂದ । ಗಿರಃ—ನಾವು ಮಾಡುವ ಸ್ತೋತ್ರರೂಪವಾದ ವಾಕ್ಯಗಳನ್ನು । ವನತಂ—ಸ್ವೀಕರಿಸಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ಅನೇಕ ಕರ್ಮಗಳನ್ನು ಎಂದರೆ ಸಾಹಸಕಾರ್ಯಗಳನ್ನು ಮಾಡುವವರು; ಜನರಿಗೆ ಮಾರ್ಗದರ್ಶಕರು, ಮಹಾಬುದ್ಧಿವಂತರು ಅಥವಾ ಧೈರ್ಯಶಾಲಿಗಳು. ಇಂತಹ ನೀವು ಅಪ್ರತಿಹತವಾದ ನಿಮ್ಮ ಬುದ್ಧಿಯಿಂದ ನಾವು ಮಾಡುವ ಸ್ತೋತ್ರರೂಪವಾದ ವಾಕ್ಯಗಳನ್ನು ಆದರಪೂರ್ವಕವಾಗಿ ಸ್ವೀಕರಿಸಿರಿ.

English Translation.

O Aswins, performers of mighty deeds, leaders of men, endowed with fortitude, accept our praises with unaverted (loving) mind.

॥ ವಿಶೇಷವಿಷಯಗಳು ॥

ಈ ಸೂಕ್ತದಲ್ಲಿರುವ ಅಶ್ವಿನೀದೇವತೆಗಳನ್ನು ಪ್ರತಿಪಾದಿಸುವ ಮೂರು ಋಕ್ಕುಗಳ ಪದಗಳೂ ಬಹಳ ಕ್ಲಿಷ್ಟವಾಗಿವೆ. ಅನೇಕ ಭಾಷ್ಯಕಾರರು ವ್ಯಾಕರಣಾನುಸಾರವಾಗಿ ಶಬ್ದಗಳಿಗೆ ಅವಯವಾರ್ಥವನ್ನು ಕಲ್ಪಿಸಿ ಒಂದುವಿಧವಾದ ಅಭಿಪ್ರಾಯ ಬರುವಂತೆ ವ್ಯಾಖ್ಯಾನಮಾಡಿದಾರೆ. ಆದರೆ ಋಗ್ವೇದದ ಅನೇಕ ಶಬ್ದಗಳಿಗೆ ಅವಯವಾರ್ಥಕಲ್ಪನೆಯಿಂದ ಅರ್ಥವು ಸರಿಹೋಗುವುದಿಲ್ಲ. ಅಲ್ಲದೆ ಈಗಿನ ಸಂಸ್ಕೃತಭಾಷೆಯಲ್ಲಿ ಆ ಶಬ್ದಗಳಿಗೆ ರೂಢಿಯಲ್ಲಿರುವ ಅರ್ಥಗಳು ವೇದಕಾಲದಲ್ಲಿ ಇರಲಿಲ್ಲವೆಂಬುದೂ ಮತ್ತು ಆ ಶಬ್ದಗಳಿಗೆ ಪ್ರತ್ಯೇಕವಾದ ಅರ್ಥವು ಬಳಕೆಯಲ್ಲಿತ್ತೆಂದೂ ಊಹಿಸಲು ಸಾಕಾದಷ್ಟು ಆಧಾರಗಳಿವೆ. ಆ ಕಾಲದಲ್ಲಿ ವ್ಯಾಕರಣವು ರಚಿತವಾಗಿರಲಿಲ್ಲ. ವೇದಶಬ್ದಗಳನ್ನೇ ಮೂಲಾಧಾರವಾಗಿ ಇಟ್ಟುಕೊಂಡು ಪಾಣಿನಿಮಹರ್ಷಿಯು ವ್ಯಾಕರಣವನ್ನು ರಚಿಸಿರುವ ವಿಷಯದಲ್ಲಿ ಸಂಶಯವಿಲ್ಲ. ಇದಲ್ಲದೆ ಪಾಣಿನಿಯ ವ್ಯಾಕರಣವು ಈಗಿನ ಸಂಸ್ಕೃತಭಾಷೆಯಲ್ಲಿ ರೂಢವಾಗಿರುವ ಶಬ್ದಗಳ ನಿಷ್ಪತ್ತಿಮೊದಲಾದವನ್ನು ವಿಶೇಷವಾಗಿ ಸಮರ್ಥಿಸುವುದು. ಅನೇಕ ವೇದಶಬ್ದಗಳು ವ್ಯಾಕರಣನಿಯಮಗಳಿಗೆ ಒಳಪಡುವುದಿಲ್ಲ. ಉದಾಹರಣೆಗಾಗಿ ಒಂದೇ ಶಬ್ದವನ್ನು ಒಂದೇ ಅರ್ಥದಲ್ಲಿ ಬೇರೆಬೇರೆ ರೂಪಗಳಿಂದ ಹೇಳಲಾಗಿದೆ. ಭಾಷೆಯನ್ನನುಸರಿಸಿ ವ್ಯಾಕರಣವನ್ನು ರಚಿಸಿರುವರೇ ಹೊರತು ವ್ಯಾಕರಣನಿಯಮಗಳನ್ನನುಸರಿಸಿ ಭಾಷೆಯು ಹುಟ್ಟಿಲ್ಲ. ಆದುದರಿಂದ ಅವಯವಾರ್ಥಕಲ್ಪನೆಯಿಂದ ನಾವು ವೇದಶಬದ್ದಗಳಿಗೆ ಏನೋ ಒಂದು ವಿಧವಾದ ಅರ್ಥವನ್ನು ಹೊಂದಿಸಿದರೂ ಪ್ರಾಚೀನಕಾಲದ ಋಷಿಗಳು ಆ ಶಬ್ದಗಳನ್ನು ಆ ಅರ್ಥದಲ್ಲಿಯೇ (ಅವಯವಾರ್ಥ) ಉಪಯೋಗಿಸುತ್ತಿದ್ದರೆಂದು ಹೇಳುವುದು ಸಾಹಸದಮಾತೇ ಸರಿ.

**ಪುರುದಂಸಸಾ**—ಈ ಶಬ್ದವು ಋಗ್ವೇದದಲ್ಲಿ ನಾಲ್ಕು ಋಕ್ಕುಗಳಲ್ಲಿ ಪ್ರಯೋಗಿಸಲ್ಪಟ್ಟಿದೆ. ಈ ಋಕ್ಕಿನಲ್ಲಿ ಈ ಶಬ್ದವು ಆದ್ಯುದಾತ್ತವಾಗಿಯೂ ಋ.ಸಂ. ೬-೬೩-೧೦ ಮತ್ತು ೭-೯-೫ ಋಕ್ಕುಗಳಲ್ಲಿ ಸರ್ವಾನುದಾತ್ತವಾಗಿಯೂ ಋ. ಸಂ. ೭-೭೩-೧ ರಲ್ಲಿ ಮಧ್ಯೋದಾತ್ತವಾಗಿಯೂ ಇರುವುದು. ಸರ್ವಾನುದಾತ್ತವಾದ ಪ್ರಥಮಾವಿಭಕ್ತಿಯ ಪದವು ಸಂಬೋಧನೆಯನ್ನುಮಾಡುವುದಕ್ಕಾಗಿ ಉಪಯೋಗಿಸಲ್ಪಡುವುದೆಂದು ಹಿಂದೆಯೇ ಹೇಳಿದ್ದೇವೆ. ಮೇಲೆ ಹೇಳಿದ ಋಕ್ಕುಗಳಲ್ಲದೆ, ಈ ಪದದ ಬೇರೆ ರೂಪಗಳಾದ **ಪುರುದಂಸಂ** ಮತ್ತು **ಪುರುದಂಸಾ** ಎಂಬ ಶಬ್ದಗಳು ಋ. ಸಂ. ೩-೧-೨೩ ಮತ್ತು ೭-೭೩-೧ ನೆಯ ಋಕ್ಕುಗಳಲ್ಲಿ ಪ್ರಯೋಗಿಸಲ್ಪಟ್ಟಿವೆ. ಈ ಸ್ಥಳಗಳಲ್ಲಲ್ಲದೆ ಬೇರೆ ಎಲ್ಲಿಯೂ ಈ ಶಬ್ದಪ್ರಯೋಗವಿಲ್ಲ,

ಈ ಶಬ್ದವು **ಪುರು, ದಂಸ** ಎಂಬ ಎರಡು ಪ್ರತ್ಯೇಕವಾದ ಶಬ್ದಗಳನ್ನೊಳಗೊಂಡಿದೆ. ಪುರು ಎಂದರೆ ಬಹು, ಬಹಳ ಎಂದರ್ಥವು. ಈ ಶಬ್ದವು ಹಿಂದಿನ ಋಕ್ಕಿನಲ್ಲಿರುವ **ಪುರುಭುಜಾ** ಎಂಬ ಪದದಲ್ಲಿ ಇರುವುದು. ಅದರ ಅರ್ಥವನ್ನು ಹಿಂದೆಯೇ ವಿವರಿಸಿದೇವೆ. ದಂಸಶಬ್ದವು ಕರ್ಮವಾಚಕಗಳಾದ ೨೬ ಶಬ್ದಗಳ ಮಧ್ಯದಲ್ಲಿರುವುದರಿಂದ ಈ ಶಬ್ದಕ್ಕೆ ಕರ್ಮ ಅಥವಾ ಕೆಲಸವೆಂದು ಅರ್ಥವು. ಆದುದರಿಂದ ಭಾಷ್ಯಕಾರರು **ಪುರುದಂಸಸಾ** ಎಂಬ ಶಬ್ದಕ್ಕೆ **ಬಹುಕರ್ಮಾಣೌ** ಎಂದರೆ ಅನೇಕ ಕೆಲಸಗಳನ್ನು ಮಾಡುವ ಶಕ್ತಿಯುಳ್ಳವರೆಂದು ಹೇಳಿರುವರು

ವೆಂಕಟಮಾಧವರು **ಆಶ್ಚರ್ಯಭೂತವಿವಿಧಕರ್ಮಾಣೌ**—ಇವರ ಕೆಲಸಗಳು ಅತ್ಯಾಶ್ಚರ್ಯಕರಗಳಾಗಿರುವವು ಎಂದರ್ಥಮಾಡಿರುವರು. ವಿಲ್ಸನ್ ಪಂಡಿತನು "ಅದ್ಭುತ ಅಥವಾ ಸಾಹಸಕೃತ್ಯಗಳನ್ನೆಸಗುವವರು" ಎಂದೂ Grassman, Ludwing ಮೊದಲಾದ ಪಾಶ್ಚಾತ್ಯಪಂಡಿತರು ವೆಂಕಟಮಾಧವರ ಅಭಿಪ್ರಾಯವನ್ನೇ ಅನುಸರಿಸಿ "ಆಶ್ಚರ್ಯಕರವಾದ ಕೆಲಸಗಳನ್ನು ಮಾಡುವವರು" ಎಂದೂ ಹೇಳಿದಾರೆ. ಋಗ್ವೇದದ ಪ್ರಥಮಮಂಡಲದ ೧೧೨, ೧೧೬, ೧೧೭, ೧೧೮ ನೆಯ ಸೂಕ್ತಗಳಲ್ಲಿ ಈ ದೇವತೆಗಳ ಅನೇಕ ಸಾಹಸಕೃತ್ಯಗಳ ವರ್ಣನೆಯಿರುವುದರಿಂದ ವೆಂಕಟಮಾಧವರ ಅಭಿಪ್ರಾಯವೇ ಸರಿಯೆಂದು ತೋರುವುದು.

**ನರಾ**--ಸಾಯಣ ಮತ್ತು ವೆಂಕಟಮಾಧವರು ಈ ಶಬ್ದಕ್ಕೆ **ನೇತಾರೌ**--ಮುಖಂಡರು, ಮಾರ್ಗದರ್ಶಕರು ಎಂದೂ, ಸ್ಕಂದಸ್ವಾಮಿಯು ಮನುಷ್ಯಾಕೃತಿಯಿಂದಿರುವವರೆಂದೂ ಅರ್ಥಮಾಡಿರುವರು. Wilson expreses Sayana's meaning by "guides." Whitnery renders 'narah' with manly and Stevenson with "who assumes the human form" and Geldner in his Der Rigveda, gives several meanings of this word. ಇವುಗಳಲ್ಲೆಲ್ಲಾ ಸಾಯಣರ ಅಭಿಪ್ರಾಯವೇ ಸಾಧುವೆಂದು ಕಾಣುವುದು. ಆದರೂ **ನರಾ** ಎಂಬ ಶಬ್ದವು ಅಶ್ವಿನೀದೇವತೆಗಳನ್ನು ಸ್ತೋತ್ರಮಾಡುವ ಸಂದರ್ಭಗಳಲ್ಲಿ ವಿಶೇಷವಾಗಿ ಉಪಯೋಗಿಸಲ್ಪಡುವುದರಿಂದ ಈ ಶಬ್ದಕ್ಕೆ ಯಾವುದಾದರೂ ಒಂದು ನಿರ್ದಿಷ್ಟವಾದ ಅರ್ಥವು ಆ ಕಾಲದಲ್ಲಿ ಬಳಕೆಯಲ್ಲಿತ್ತೆಂದು ಧಾರಾಳವಾಗಿ ಹೇಳಬಹುದು.

**ಶವೀರಯಾ** ಈ ಶಬ್ದದ ಪ್ರಯೋಗವು ಋಗ್ವೇದದಲ್ಲಿ ಈ ಋಕ್ಕಿನಲ್ಲಿಯೂ "ಅಶ್ವಿನಾವಶ್ವಾವತ್ಯೇಷಾ ಯಾತಂ ಶವೀರಯಾ" (ಋ. ಸಂ. ೧-೩೦-೧೭) ಎಂಬ ಋಕ್ಕಿನಲ್ಲಿಯೂ ಮಾತ್ರವಿರುವುದು ಮತ್ತೆಲ್ಲಿಯೂ ಇಲ್ಲ. ಭಾಷ್ಯಕಾರರು ಈ ಶಬ್ದದ ನಿಷ್ಪತ್ತಿಯನ್ನು ಈರೀತಿ ಮಾಡಿರುವರು **ಶು ಗತಾವಿತಿ ಧಾತೋರೀರನ್ಪ್ರತ್ಯಯೇ ಕೃತೇಸತಿ ಗತಿಯುಕ್ತಯಾ, ಅಪ್ರತಿಹತಪ್ರಸರಯೇತ್ಯರ್ಥಃ** ಅಪ್ರತಿಹತವಾದ ಗಮನದಿಂದ ಯುಕ್ತವಾದ ಎಂದರ್ಥವು. ಮತ್ತು ಈ ಶಬ್ದವು **ಶವೀರಾ** ಎಂಬ ಆಕಾರಾಂತಸ್ತ್ರೀಲಿಂಗಶಬ್ದದ ಚತುರ್ಥ್ಯೇಕವಚನವೆಂದು **ಪರಿ**ಗಣಿಸಿ **ಧಿಯಾ** ಎಂಬ ಶಬ್ದಕ್ಕೆ ವಿಶೇಷಣವನ್ನಾಗಿ ಭಾವಿಸಿರುವರು. ವೆಂಕಟಮಾಧವರು **ಶು** ಎಂದರೆ ಕ್ಷಿಪ್ರವೆಂದು ಅರ್ಥಮಾಡಿ **ಕ್ಷಿಪ್ರಗತ್ಯಾ** ಎಂದು ಚತುರ್ಥೀವಿಭಕ್ತಿಯನ್ನಾಗಿಯೇ ಹೇಳಿರುವರು. ಆದರೆ ಸ್ಕಂದಸ್ವಾಮಿಯು ಈ ರೀತಿ ಹೇಳಿರುವರು—**ಶು ಇತಿ ಕ್ಷಿಪ್ರನಾಮ । ಈರ ಗತೌ । ಕ್ಷಿಪ್ರಮೀರಣಂ ಗಮನಂ ಶವೀರಂ । ಅಥವಾ ಶವ ಇತಿ ಬಲನಾಮ । ಪರಬಲಸ್ಯ ಪ್ರೇರಣಮಪನೋದಃ ಶವೀರಃ । ತೇನ ಯೌ ಯಾತಃ ಗಚ್ಛತಃ ತೌ । ಶೀಘ್ರಗಾಮಿನೌ ಪರಬಲಾಪನೋದಗಾಮಿನಾವಿತ್ಯರ್ಥಃ । ಅಥವಾ ಅನವಗ್ರಹಾತ್ ಪದಸ್ಯ ಯಾಶಬ್ದೋ ವಿಭಕ್ತೇರಾದೇಶೋ, ನ ಯಾತೇ ರೂಪಂ । ಶವೀರಶಬ್ದಸ್ತು ಪೂರ್ವವತ್ಕರ್ತೃಸಾಧನಃ । ಶೀಘ್ರಗಾಮಿನೌ ಪರಬಲಸ್ಯ ಪ್ರೇರಯಿತಾರಾವಿತ್ಯರ್ಥಃ । ಶವತೇರ್ವಾ ಗತ್ಯರ್ಥಸ್ಯ ಶವೀರಶಬ್ದಃ । ಯಜ್ಞಾನ್ ಶತ್ರೂನ್ ವಾ ಪ್ರತಿಗಂತಾರಾವಿತ್ಯರ್ಥಃ** ಎಂದರೆ,—**ಶು** ಎಂದರೆ **ಕ್ಷಿಪ್ರ**, ಬೇಗನೆ. ಶು ಎಂಬ ಶಬ್ದವು ಕ್ಷಿಪ್ರಸೂಚಕವಾದ ಇಪ್ಪತ್ತಾರು ಪದಗಳ ಮಧ್ಯದಲ್ಲಿ ಪಠಿತವಾಗಿದೆ (ಯಾಸ್ಕರ ನಿಘಂಟು ೨-೧೫) **ಈರ ಗಮನ**. ಕ್ಷಿಪ್ರವಾದ ಗಮನವುಳ್ಳವರು; ಅಥವಾ **ಶವ** ಎಂದರೆ ಬಲವು. ಶವಸ್ ಶಬ್ದವು ಬಲಸೂಚಕವಾದ ೨೮ ಶಬ್ದಗಳ ಮಧ್ಯದಲ್ಲಿರುವುದು (ನಿಘಂಟು ೨-೯) ಪರಬಲವನ್ನು ಅಥವಾ ಶತ್ರುಬಲವನ್ನು ನಾಶಮಾಡುವುದಕ್ಕಾಗಿ ಬೇಗನೆ ಹೋಗುವವರು ಅಥವಾ ಹವಿರ್ಭಾಗವನ್ನು ಸ್ವೀಕರಿಸುವುದಕ್ಕಾಗಿ ಯಜ್ಞವೇದಿಕೆಗೆ ಹೋಗುವವರು ಎಂದು ಅರ್ಥಮಾಡಿ **ಶವೀರಯಾ** ಎಂಬ ಶಬ್ದವು ಪ್ರಥಮಾವಿಭಕ್ತಿಯ ದ್ವಿವಚನಾಂತ ಶಬ್ದವೆಂದೂ **ಅಶ್ವಿನಾ** ಶಬ್ದಕ್ಕೆ ವಿಶೇಷಣವೆಂದೂ

ಹೇಳಿರುವರು. ವೇದಾರ್ಥಯತ್ನಕಾರರೂ, ಪಾಶ್ಚಾತ್ಯಪಂಡಿತರೂ ಶವೀರಶಬ್ದಕ್ಕೆ Strong, Mighty, Powerful ಬಲವಾದ, ಶಕ್ತಿಯುಕ್ತವಾದ ಎಂದು ಅರ್ಥಮಾಡಿರುವರು.

**ಧಿಯಾ**—ಸಾಯಣ ಮತ್ತು ಸ್ಕಂದಸ್ವಾಮಿಯು ಇದಕ್ಕೆ **ಆದರಯುಕ್ತಯಾ ಬುದ್ಧ್ಯಾ**, ಆದರ ಪೂರ್ವಕವಾದ ಬುದ್ಧಿಯಿಂದ ಎಂದು ಚತುರ್ಥ್ಯೇಕವಚನದ ಅರ್ಥವನ್ನು ಹೇಳಿರುವರು. ಕೆಲವು ಪಾಶ್ಚಾತ್ಯ ಪಂಡಿತರೂ ಧಿಯಾ ಶಬ್ದಕ್ಕೆ ಮನಸ್ಸು, ಯೋಚನೆ, ಲಕ್ಷ್ಯ ಎಂದು ಅರ್ಥಮಾಡಿ ವನತಂ ಎಂಬ ಕ್ರಿಯಾಪದಕ್ಕೆ ಹೊಂದಿಸಿರುವರು. ಭಾಷ್ಯಕಾರರೂ ಅದೇ ರೀತಿ ಸಮನ್ವಯಮಾಡಿರುವರು. ಆದರೆ ವೆಂಕಟಮಾಧವರು ಧಿಯಾ ಶಬ್ದವನ್ನು ಧಿಷ್ಣ್ಯಾಶಬ್ದಕ್ಕೆ ವಿಶೇಷಣವೆಂದು ಭಾವಿಸಿರುವರು. ಅನೇಕ ಸಂದರ್ಭಗಳಲ್ಲಿ ಧಿಯಾ ಶಬ್ದವನ್ನು ಪ್ರಥಮಾವಿಭಕ್ತಿಯಲ್ಲಿ ಉಪಯೋಗಿಸಲಾಗಿದೆ. ಇಂತಹ ಸಂದರ್ಭದಲ್ಲಿ ಧಿಯಾ ಎಂದರೆ ಬುದ್ಧಿಯುಳ್ಳ, ಬುದ್ಧಿಯುಳ್ಳವರು ಎಂದರ್ಥವು.

**ಧಿಷ್ಣ್ಯಾ**—ಭಾಷ್ಯಕಾರರು (ಸಾಯಣರು) ಈ ಶಬ್ದಕ್ಕೆ **ಧಾರ್ಷ್ಟ್ಯಯುಕ್ತೌ** ಧೈರ್ಯಶಾಲಿಗಳು ಅಥವಾ **ಬುದ್ಧಿಮಂತೌ** ಬುದ್ಧಿಶಾಲಿಗಳು ಎಂದರ್ಥಮಾಡಿರುವರು. ಸ್ಕಂದಸ್ವಾಮಿಯು—" ಧಿಷಣೇತಿ ವಾಙ್ನಾಮ । ತಸ್ಯಾಃ ಪುತ್ರೌ ಧಿಷ್ಣ್ಯೌ । ಅಪತ್ಯೇ ಯತ್ಪ್ರತ್ಯಯೋ ದ್ರಷ್ಟವ್ಯಃ । ಅಥವಾ ಧೀರಿತಿಪ್ರಜ್ಞಾನಾಮ । ಷ್ಣ್ಯ ವೇಷ್ಟನೇ । ಧೀಃ ವೇಷ್ಟಯಿತ್ರೀ ಸರ್ವಾರ್ಥಗ್ರಹಣಸಮರ್ಥಾ ಯಯೋಸ್ತೌ ಧಿಷ್ಣೌ । ಧಿಷ್ಣಾವೇವ ಧಿಷ್ಣ್ಯೌ ಅತ್ಯಂತಪ್ರಜ್ಞಾವಿತ್ಯರ್ಥಃ ॥ " ಧಿಷಣಾ ಎಂದರೆ ವಾಕ್ಕಿನ ಹೆಸರು. ಅದರ ಪುತ್ರರು ಅಥವಾ ಧೀಃ ಎಂದರೆ ಪ್ರಜ್ಞೆಯು ಷ್ಣ್ಯ-ಯುಕ್ತರಾದವರು ಎಂದರೆ ಪ್ರಜ್ಞೆಯಿಂದ ಕೂಡಿದವರು, ಸರ್ವಾರ್ಥ ಗ್ರಹಣಸಮರ್ಥರು, ಅತ್ಯಂತ ಪ್ರಜ್ಞಾಶಾಲಿಗಳು ಎಂದರ್ಥವು. ಸಾಯಣರು ಹೇಳುವ ಧೈರ್ಯಶಾಲಿಗಳು, ಬುದ್ಧಿವಂತರು ಎಂಬ ಅರ್ಥವನ್ನೇ ವಿಲ್ಸನ್ ಪಂಡಿತರು ಅನುಮೋದಿಸುವರು. Grassman renders it "free giving, willingly giving, willingly helping" Geldner renders it "wise"; Ludwig–"praisworthy" ಧಿಷಣಾ ಎಂದರೆ ವಾಕ್ಯವು. ಅಥವಾ ಶಬ್ದಜಾಲವು ಈ ಶಬ್ದವು ಧೀಃ ಎಂಬ ಧಾತುವಿನಿಂದ ಹುಟ್ಟಿರುತ್ತದೆ. ಆದುದರಿಂದ ಧಿಷ್ಣ್ಯ ಶಬ್ದಕ್ಕೆ "Those that kindle the thoughts" ಮನಸ್ಸನ್ನು (ಅಥವಾ ವಾಕ್ಯಗಳನ್ನು) ಪ್ರೇರಿಸತಕ್ಕವರು ಎಂಬ ಅರ್ಥದಲ್ಲಿ ಇತರ ಭಾಷ್ಯಕಾರರು ಈ ಶಬ್ದಕ್ಕೆ ಅರ್ಥಮಾಡಿರುವರು. ಈ ಶಬ್ದವು ಆದ್ಯುದಾತ್ತವಾಗಿ ಋ. ಸಂ. ೧-೩-೨; ೧-೧೮೨-೧ ಮತ್ತು ೨; ೨-೪೧-೯ ಈ ಋಕ್ಕುಗಳಲ್ಲಿಯೂ ಸರ್ವಾನುದಾತ್ತವಾಗಿ ಋ. ಸಂ. ೧-೮೯-೪; ೧-೧೧೭-೧೯; ೧-೧೮೧-೩; ೪-೬೩-೬; ೭-೫-೧೪; ೭-೨೬-೧೨ ಈ ಋಕ್ಕುಗಳಲ್ಲಿಯೂ ಪಠಿತವಾಗಿದೆ.

**ವನತಂ**—ಈ ಶಬ್ದವು ಆದ್ಯುದಾತ್ತವಾಗಿ ಋ. ಸಂ. ೧-೩-೨, ೭-೯೪-೨ ಋಕ್ಕುಗಳಲ್ಲಿಯೂ ಸರ್ವಾನುದಾತ್ತವಾಗಿ ಋ. ಸಂ. ೧-೯೩-೯ ಈ ಋಕ್ಕಿನಲ್ಲಿಯೂ ಪಠಿತವಾಗಿದೆ.

**ಗಿರಃ**—ಈ ಶಬ್ದವು ಋಗ್ವೇದಸಂಹಿತೆಯಲ್ಲಿ ೧೫೦ ಋಕ್ಕುಗಳಲ್ಲಿ ಉಪಯೋಗಿಸಲ್ಪಟ್ಟಿರುವುದು. ಇದಕ್ಕೆ ವಾಕ್ಯಗಳನ್ನು ಅಥವಾ ಸ್ತೋತ್ರಗಳನ್ನು ಎಂದರ್ಥವು. ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಗಳ ಬಹುವಚನದಲ್ಲಿಯೂ ಷಷ್ಠ್ಯೇಕವಚನದಲ್ಲಿಯೂ ಈ ಶಬ್ದದ ಪ್ರಯೋಗವಿರುವುದು. ಇದು ಯಾವಾಗಲೂ ಆದ್ಯುದಾತ್ತಪದವು. ಇದರ ಅರ್ಥವಿಚಾರದಲ್ಲಿ ಹೆಚ್ಚು ವಿವರಣೆ ಅವಶ್ಯಕವಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ಅಶ್ವಿನಾ, ಪುರುದಂಸಸಾ, ನರಾ, ಧಿಷ್ಣ್ಯಾ** ಎಂಬ ನಾಲ್ಕಕ್ಕೂ ಆಮಂತ್ರಿತಸಂಜ್ಞೆ ಇರುವುದರಿಂದ, ಷಾಷ್ಠವಾದ ಆಮಂತ್ರಿತಾದ್ಯುದಾತ್ತವೇ ಬರುವುದು. ಎಲ್ಲವೂ ಪಾದಾದಿಯಲ್ಲಿರುವುದರಿಂದ ಅಪಾದಾದೌ ಎಂದು ನಿಷೇಧಬರುವುದರಿಂದ ಆಷ್ಟಮಿಕಾನುದಾತ್ತವು ಬರುವುದಿಲ್ಲ. **ಪುರುದಂಸಸಾ** ಎಂಬ ಎರಡನೇ ಆಮಂತ್ರಿತವೂ ಸಹ ಮೊದಲನೆಯ ಅಶ್ವಿನಾ ಎಂಬ ಆಮಂತ್ರಿತವು, **ಆಮಂತ್ರಿತಂ ಪೂರ್ವಮವಿದ್ಯಮಾನವತ್** (ಪಾ. ಸೂ. ೮-೧-೭೨) ಎಂಬುದರಿಂದ ಅವಿದ್ಯಮಾನವದ್ಭಾವವನ್ನು ಹೊಂದುವುದರಿಂದ ಪಾದಾದಿಯಲ್ಲಿರುವುದೇ ಆಗುವುದು. ಆದರೆ ಮೊದಲನೆಯ ಆಮಂತ್ರಿತವು ಸಾಮಾನ್ಯವಚನವಾದ್ದರಿಂದಲೂ, ಎರಡನೆಯದು ವಿಶೇಷವಚನವಾದ್ದರಿಂದಲೂ, '**ನಾಮಂತ್ರಿತೇ ಸಮಾನಾಧಿಕರಣೇ ಸಾಮಾನ್ಯವಚನಂ** | (ಪಾ.ಸೂ. ೮-೧-೭೩) ಎಂಬುದರಿಂದ ಅವಿದ್ಯಮಾನವದ್ಭಾವಪ್ರತಿಷೇಧ ಬರುವುದು, ತಥಾಚ ಎರಡನೆಯದು ಪಾದಾದಿಯಾಗುವುದಿಲ್ಲ ಎನ್ನುತ್ತೀವೆ ಎಂದರೆ, ಹಾಗೆಹೇಳಲಾಗುವುದಿಲ್ಲ. ಏಕೆಂದರೆ ಪುರುದಂಸಸ್ ಶಬ್ದವೂ ಸಹ ಅಶ್ವಿ ಶಬ್ದದಂತೆ ರೂಢಿಯಾಗಿ ಪ್ರಯೋಗಿಸಲ್ಪಡುವುದು ಆದ್ದರಿಂದ, ಅದೂ ಸಾಮಾನ್ಯವಚನವೇ ಆಗುವುದು. ಅವಿದ್ಯಮಾನವದ್ಭಾವಪ್ರತಿಷೇಧ ಹೇಳುವ ಸೂತ್ರವು, ಸಾಮಾನ್ಯವಚನವು ಅವಿದ್ಯಮಾನವದ್ಭಾವವನ್ನು ಹೊಂದುವುದಿಲ್ಲ ಎಂದು ಹೇಳಿದರೆ ಅರ್ಥಾತ್ ಸಮಾನಾಧಿಕರಣವಾದ ಪರಪದವು ವಿಶೇಷವಚನವಾಗಬೇಕೆಂದು ಸಿದ್ಧವಾಗುವುದು. ಇಲ್ಲಿ ಎರಡೂ ಸಾಮಾನ್ಯವಚನವಾದ್ದರಿಂದ ಅವಿದ್ಯಮಾನವದ್ಭಾವಪ್ರತಿಷೇಧಬರುವುದಿಲ್ಲ, ಆದರೆ ಎರಡೂ ಸಾಮಾನ್ಯವಚನವಾದರೆ ಪರ್ಯಾಯಶಬ್ದವಾಗುವುದರಿಂದ **ಪರ್ಯಾಯಶಬ್ದಾನಾಂ ಸಹಪ್ರಯೋಗೋ ನಾಸ್ತಿ** ಅಂದರೆ ಪರ್ಯಾಯಶಬ್ದವನ್ನು ಜತೆಯಲ್ಲಿ ಪ್ರಯೋಗಿಸಬಾರದು, ಎಂದು ನಿಷೇಧವಿರುವುದರಿಂದ, ಎರಡನ್ನೂ ಸಾಮಾನ್ಯವಚನವೆಂದು ಒಪ್ಪಲಾಗುವುದಿಲ್ಲ ಎಂದು ಹೇಳಲಾಗುವುದಿಲ್ಲ. ಎಲ್ಲಿ ಪ್ರಯೋಜನ ಸಂಭವಿಸುವುದಿಲ್ಲವೋ (ಘಟಃ, ಕಲಶಃ ಇತ್ಯಾದಿಸ್ಥಳಗಳಲ್ಲ) ಅಲ್ಲಿ ಸಹ ಪ್ರಯೋಗ ನಿಷೇಧಬರುವುದು, ಇಲ್ಲಿ ಗುಣವಿಶೇಷವನ್ನು ಹೇಳುವುದು ಹೇಗೆ ಸ್ತೋತ್ರದಲ್ಲಿ ಉಪಯುಕ್ತವಾಗುವುದೋ ಅದೇರೀತಿಯಲ್ಲಿ ಪ್ರಸಿದ್ಧ ಅನೇಕ ನಾಮಸಂಬಂಧವನ್ನು ಹೇಳುವುದೂ ಸ್ತುತ್ಯುಪಯುಕ್ತವಾದ್ದರಿಂದ ಪ್ರಯೋಜನವತ್ತಾಗಿಯೇ ಇರುವುದು. ಆದ್ದರಿಂದ, **ಪರ್ಯಾಯಶಬ್ದಾನಾಂ** ಎಂಬ ನಿಷೇಧಬರುವುದಿಲ್ಲ.

ಅಲ್ಲದೆ, **ನಾಮಂತ್ರಿತೇ** ಎಂಬ ಸೂತ್ರದಲ್ಲಿ ಸಮಾನಾಧಿಕರಣೇ ಎಂದಿರುವುದು. ಸಮಾನಾಧಿಕರಣವೆಂದರೆ, **ಭಿನ್ನಪ್ರವೃತ್ತಿನಿಮಿತ್ತಾನಾಂ ಶಬ್ದಾನಾಮೇಕಸ್ಮಿನ್ನರ್ಥೇ ವೃತ್ತಿಸ್ಸಾಮಾನಾಧಿಕರಣ್ಯಂ** ಬೇರೆಬೇರೆ ಪ್ರವೃತ್ತಿನಿಮಿತ್ತವನ್ನು ಹೊಂದಿರುವ ಶಬ್ದಗಳು ಒಂದೇ ಅರ್ಥವನ್ನು ಬೋಧಿಸುವುದಕ್ಕೆ ಸಾಮಾನಾಧಿಕರಣ್ಯ ಎಂದು ಹೆಸರು. ಇಲ್ಲಿ ' ಅಶ್ವಿನಾ, ಪುರಂದಸಸಾ, ಎಂಬ ಎರಡು ಪದಗಳೂ ಒಂದೇ ಅರ್ಥವನ್ನು ಬೋಧಿಸುವುದರಿಂದ ಪರ್ಯಾಯಶಬ್ದಗಳಾಗುವುದರಿಂದ ಪ್ರವೃತ್ತಿನಿಮಿತ್ತಭೇದವಿರುವುದಿಲ್ಲ, ಆದಕಾರಣ ಸಾಮಾನಾಧಿಕರಣ್ಯಲಕ್ಷಣವು ಬರುವುದಿಲ್ಲ. ಆದ್ದರಿಂದ 'ನಾಮಂತ್ರಿತೇ ' ಎಂಬ ಸೂತ್ರಪ್ರವೃತ್ತವಾಗುವುದಿಲ್ಲವಾದ್ದರಿಂದ ಅವಿದ್ಯಮಾನವದ್ಭಾವಪ್ರತಿಷೇಧಕ್ಕೆ ಪ್ರಾಪ್ತಿಯೇ ಇಲ್ಲ, ಆದರೆ ಅಶ್ವಿಶಬ್ದವು ಅಶ್ವಸಂಬಂಧವನ್ನು ನಿಮಿತ್ತಮಾಡಿಕೊಂಡು ಪ್ರವೃತ್ತವಾಗಿರುವುದು, ಪುರುದಂಸಸ್‌ಶಬ್ದವು ಅನೇಕ ಕರ್ಮಸಂಬಂಧವನ್ನು ನಿಮಿತ್ತಮಾಡಿಕೊಂಡು ಪ್ರವೃತ್ತನಾಗಿರುವುದು ಆದ್ದರಿಂದ ಪ್ರವೃತ್ತಿನಿಮಿತ್ತಭೇದವಿದೆ ಎಂದು ಉಪಪಾದಿಸಲಾಗುವುದಿಲ್ಲ. ಈ ಎರಡೂ ವ್ಯುತ್ಪತ್ತಿಗೆಮಾತ್ರ ನಿಮಿತ್ತವೇ ವಿನಾ ಪ್ರವೃತ್ತಿನಿಮಿತ್ತವಲ್ಲವು ವ್ಯುತ್ಪತ್ತಿನಿಮಿತ್ತಭೇದಮಾತ್ರವನ್ನು ನಿಮಿತ್ತಮಾಡಿಕೊಂಡ ಸಾಮಾನಾಧಿಕರಣ್ಯವನ್ನು ಒಪ್ಪಿಕೊಂಡರೆ ವೃಕ್ಷ, ಮಹೀರುಹಶಬ್ದಗಳಿಗೂ ಸಾಮಾನಾಧಿಕರಣ್ಯವನ್ನು ಹೇಳಬೇಕಾಗಿ

ಬರುವುದು. ಆದ್ದರಿಂದಲೇ ' ಇಡೇರಂತೇऽದಿತೇ ಸರಸ್ವತಿ ಪ್ರಿಯೇ ಪ್ರೇಯಸಿ ಮಹಿ ವಿಶ್ರುತ್ಯೇತಾನಿತೇ ಅಘ್ನ್ಯೇ ನಾಮಾನಿ ' (ತೈ. ಸಂ. ೭-೧-೬-೮) ಎಂಬಲ್ಲಿ ಸಹಸ್ರತಮಿಪ್ರಶಂಸೆಯಲ್ಲಿ ಉಪಯೋಗವಾಗತಕ್ಕ ' ಇಡೇ, ಮೊದಲಾದ ಶಬ್ದಗಳು ಎತಾನಿ ತೇ ಅಘ್ನ್ಯೇ ನಾಮಾನಿ, ಎಂಬುದರಿಂದ ಪರ್ಯಾಯಶಬ್ದಗಳಾದಾಗ್ಯೂ, ಅನೇಕ ನಾಮಸಂಬಂಧವನ್ನು ಬೋಧಿಸಿ ಸ್ತುತಿಯಲ್ಲಿ ಅನ್ವಿತವಾಗಿ ಸಪ್ರಯೋಜನಗಳಾಗಿರುವುದರಿಂದ ಸಹಪ್ರಯುಕ್ತಗಳಾಗಿರುವುವು ಸ್ತುತಿಗೆ ಉಪಯೋಗವಾಗುವಂತೆ ವ್ಯುತ್ಪತ್ತಿಭೇದವಮಾತ್ರವನ್ನು ವಿವಕ್ಷೆಮಾಡಿದರೂ ಪರ್ಯಾಯಶಬ್ದವಾದ್ದರಿಂದ ಸಾಮಾನಾಧಿಕರಣ್ಯವಿಲ್ಲದಕಾರಣ ' ನಾಮಂತ್ರಿತೇ ಸಮಾನಾಧಿಕರಣೇ ' ಎಂಬ ನಿಷೇಧವು ಬರುವುದಿಲ್ಲವಾದ್ದರಿಂದ ' ಆಮಂತ್ರಿತಂ ಪೂರ್ವಮವಿದ್ಯಮಾನವತ್ ' ಎಂಬುದರಿಂದ ಪೂರ್ವ ಪೂರ್ವಪದಗಳಿಗೆ ಅವಿದ್ಯಮಾನವದ್ಭಾವಬರುವುದರಿಂದ ಎಲ್ಲಾಪದಗಳಿಗೂ ಆರನೇ ಅಧ್ಯಾಯದ ಸೂತ್ರದಿಂದ ಆದ್ಯುದಾತ್ತಬರುವುದು. ಇದರಂತೆಯೇ ಪ್ರಕೃತದಲ್ಲಿಯೂ ತಿಳಿಯಬೇಕು.

'ಬಹುಲವಚನಾದನ್ಯತ್ರಾಪಿ ' ಇಲ್ಲಿ ' ಕೃಶೄಪೄಕಟಿಪಟಿಶೌಟಿಭ್ಯ ಈರನ್' (ಉ ಸೂ. ೪-೩೦) ಇದರಿಂದ ಈರನ್ ಎಂದು ಸಂಬಂಧಿಸಲು, ಬೇರೆಧಾತುಗಳಮೇಲೂ ಈರನ್ ಪ್ರತ್ಯಯವು ಬಹುಲವಾಗಿಬರುವುದು ಎಂದರ್ಥವಾಗುವುದು. ಇದರಿಂದ ಶುಧಾತು (ಶು.ಗತೌ) ವಿನ ಮೇಲೆ ಈರನ್ ಪ್ರತ್ಯಯವನ್ನು ಇಟ್ಟರೆ, ಶುವು ಈರ ಎಂದಿರುವಾದ ಗುಣಾದೇಶಳಗು ಬಂದು ' ಶವೀರ ' ಎಂದಾಗುವುದು. ಪ್ರತ್ಯಯವು ನಿತ್ತಾದ್ದರಿಂದ ' ಞ್ನಿತ್ಯಾದಿರ್ನಿತ್ಯಂ ' ಎಂಬುದರಿಂದ ಆದ್ಯುದಾತ್ತ ಶವೀರಯಾ ಶಬ್ದ. ಧಿಯಾ, ಎಂಬಲ್ಲಿ **ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ**—(ಪಾ. ಸು. ೬-೧-೧೬೮) ಎಂಬುದರಿಂದ ತೃತೀಯಾವಿಭಕ್ತಿಯು ಉದಾತ್ತವಾಗುವುದು. ' ವನತಂ ' ಎಂಬಲ್ಲಿ ವಿಕರಣವಾದ ಶಪ್ಪು ಪಿತ್ತಾದ್ದರಿಂದ ಅನುದಾತ್ತೌ ಸುಪ್ಪಿತೌ, ಎಂಬುದರಿಂದಲೂ, ಲೋಣ್ಮಧ್ಯಮಪುರುಷ ದ್ವಿವಚನವಾದ ' ತಂ ' ಎಂಬುದು ಲಸ್ಥಾನಿಕಸಾರ್ವಧಾತುಕವಾದರಿಂದ ' ತಾಸ್ಯನುತೀತ್- ' ಇತ್ಯಾದಿಸೂತ್ರದಿಂದಲೂ ಅನುದಾತ್ತವನ್ (ವನಸಣಸಂಭಕ್ತೌ) ಎಂಬಲ್ಲಿ, ಧಾತುವಿನಲ್ಲಿ, ಉದಾತ್ತಸ್ವರವೇ ನಿಲ್ಲವುದು. ' ತಿಙ್ಙತಿಙಃ ' ಎಂಬುದರಿಂದ ಅನುದಾತ್ತವು ಧಿಷ್ಣ್ಯಾ ಎಂಬ ಪೂರ್ವಪದಕ್ಕೆ ಅವಿದ್ಯಮಾನವದ್ಭಾವ ಬಂದಿರುವುದರಿಂದ ವನತಂ ಎಂಬುದು ಪದಾತ್ಪರವಾಗದೆಯೂ, ಪಾದಾದಿಗತವಾಗಿಯೂ ಆಗುವುದರಿಂದ ಬರುವುದಿಲ್ಲ. ಗಿರಃ ಎಂಬಲ್ಲಿ ಸುಪ್ಪಿಗೆ ಅನುದಾತ್ತಬರಲು ಪ್ರಾತಿಪದಕಸ್ವರವೇ ನಿಲ್ಲುವುದು ॥ ೨ ॥

॥ ಸಂಹಿತಾಪಾಠಃ ॥

ದಸ್ರಾ ಯುವಾಕವಃ ಸುತಾ ನಾಸತ್ಯಾ ವೃಕ್ತಬರ್ಹಿಷಃ ।
ಆ ಯಾತಂ ರುದ್ರವರ್ತನೀ ॥ ೩ ॥

॥ ಪದಪಾಠಃ ॥

ದಸ್ರಾ । ಯುವಾಕವಃ । ಸುತಾಃ । ನಾಸತ್ಯಾ । ವೃಕ್ತऽಬರ್ಹಿಷಃ ॥
ಆ । ಯಾತಂ । ರುದ್ರವರ್ತನೀ ಇತಿ ರುದ್ರऽವರ್ತನೀ ॥ ೩ ॥

॥ ಸಾಯಣಭಾಷ್ಯಂ ॥

ಅತ್ರಾಶ್ವಿನೇತ್ಯನುವರ್ತತೇ । ಹೇ ಅಶ್ವಿನಾವಾ ಯಾತಂ । ಅಸ್ಮಿನ್ಕರ್ಮಣ್ಯಾಗಚ್ಛತಂ । ಕಿಮರ್ಥಮಿತಿ ತದುಚ್ಯತೇ । ಸುತಾ ಯುಷ್ಮದರ್ಥಂ ಸೋಮಾ ಅಭಿಷುತಾಃ । ತಾನ್ ಸ್ವೀಕರ್ತುಮಿತಿ ಶೇಷಃ । ಕೀದೃಶಾವಶ್ವಿನೌ । ದಸ್ರಾ ದಸ್ರೌ ಶತ್ರೂಣಾಮುಪಕ್ಷಪಯಿತಾರೌ । ಯದ್ವಾ । ದೇವವೈದ್ಯತ್ವೇನ ರೋಗಾಣಾಮುಪಕ್ಷಪಯಿತಾರೌ । ಅಶ್ವಿನೌ ವೈ ದೇವಾನಾಂ ಭಿಷಜೌ । ಐ.ಬ್ರಾ. ೧-೧೮ । ಇತಿ ಶ್ರುತೇಃ । ನಾಸತ್ಯಾ । ಅಸತ್ಯಮನೃತಭಾಷಣಂ । ತದ್ರಹಿತೌ । ಅತ್ರ ಯಾಸ್ಕಃ । ಸತ್ಯಾವೇವ ನಾಸತ್ಯಾವಿತ್ಯೌರ್ಣವಾಭಃ । ಸತ್ಯಸ್ಯ ಪ್ರಣೇತಾರಾವಿತ್ಯಾಗ್ರಾಯಣಃ । ನಿ. ೬-೧೩ । ಇತಿ । ರುದ್ರವರ್ತನೀ । ರುದ್ರಶಬ್ದಸ್ಯ ರೋದನಂ ಪ್ರವೃತ್ತಿನಿಮಿತ್ತಂ । ಯದರೋದೀತ್ತದ್ರುದ್ರಸ್ಯ ರುದ್ರತ್ವಮಿತಿ ತೈತ್ತಿರೀಯಾಃ । ತದ್ಯದ್ರೋದಯಂತಿ ತಸ್ಮಾದ್ರುದ್ರಾ ಇತಿ ವಾಜಸನೇಯಿನಃ । ರುದ್ರಾಣಾಂ ಶತ್ರುರೋದನಕಾರಿಣಾಂ ಶೂರಭಟಾನಾಂ ವರ್ತನಿರ್ಮಾರ್ಗೋ ಧಾಟೀರೂಪೋ ಯಯೋಸ್ತೌ ರುದ್ರವರ್ತನೀ । ಯಥಾ ಶೂರಾ ಧಾಟೀಮುಖೇನ ಶತ್ರೂನ್ ರೋದಯಂತಿ ತದ್ವದೇತಾವಿತ್ಯರ್ಥಃ । ಯುವಾಕವ ಇತ್ಯಭಿಷುತಸೋಮಾನಾಂ ವಿಶೇಷಣಂ । ವಸತೀವರೀಭಿರೇಕಧನಾಭಿಶ್ಚಾದ್ಭಿರ್ಮಿಶ್ರಿತಾ ಇತ್ಯರ್ಥಃ । ವೃಕ್ತಬರ್ಹಿಷಃ । ವೃಕ್ತಾನಿ ಮೂಲೈರ್ವರ್ಜಿತಾನಿ ಬರ್ಹೀಂಷ್ಯಾಸ್ತರಣರೂಪಾಣಿ ಯೇಷಾಂ ಸೋಮಾನಾಂ ತೇ ವೃಕ್ತಬರ್ಹಿಷಃ । ಯದ್ವಾ । ಭರತಾ ಇತ್ಯಾದಿಷ್ವಷ್ಟಸ್ವೃತ್ವಿಙ್ನಾಮಸು ವೃಕ್ತಬರ್ಹಿಷ ಇತಿ । ತದಾನೀಂ ತೃತೀಯಾರ್ಥೇ ಪ್ರಥಮಾ । ಋತ್ವಿಗ್ಭಿರಭಿಷುತಾ ಇತ್ಯನ್ವಯಃ ॥ ದಸ್ರಾ । ಆಮಂತ್ರಿತಸ್ಯೇತ್ಯಾದ್ಯುದಾತ್ತಃ । ಯುವಾಕವಃ । ಯು ಮಿಶ್ರಣೇ । ಯುವಂತಿ ಮಿಶ್ರೀಭವಂತಿ ವಸತೀವರೀಪ್ರಭೃತಿಭಿಃ ಶ್ರಯಣದ್ರವ್ಯೈರಿತಿ ಯುವಾಕವಃ । ಕಟಿಕುಷ್ಯಾದಿಷ್ವಗಣಿತಸ್ಯಾಪಿ ಯೌತೇರ್ಬಹುಲಗ್ರಹಣಾತ್ । ಉ. ೩-೭೭ । ಕಾಕುಪ್ರತ್ಯಯಃ । ತಸ್ಯ ಕಿತ್ವೇನ ಗುಣಾಭಾವಾದುವಙಾದೇಶಃ । ಪ್ರತ್ಯಯಸ್ವರೇಣಾಕಾರ ಉದಾತ್ತಃ । ನ ವಿದ್ಯತೇಽಸತ್ಯಮನಯೋರಿತಿ ನಾಸತ್ಯೌ। ನಭ್ರಾಣ್ನಪಾನ್ನವೇದಾ ನಾಸತ್ಯೇತ್ಯಾದಿನಾ ॥ ಪಾ. ೬-೩-೭೫ । ಪ್ರಕೃತಿವದ್ಭಾವಾನ್ನಞೋ ನಲೋಪಾಭಾವಃ । ಪಾದಾದಿತ್ವೇನಾನಿಘಾತಾದಾಮಂತ್ರಿತಾದ್ಯುದಾತ್ತತ್ವಂ । ವೃಕ್ತಬರ್ಹಿಷಃ । ವೃಕ್ತಂ ಮೂಲೈರ್ವರ್ಜಿತಂ ಬರ್ಹಿರಾಸ್ತೀರ್ಣಂ ಯೇಷಾಂ ಸೋಮಾನಾಂ ತೇ ವೃಕ್ತಬರ್ಹಿಷಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರೇಣ ಕ್ತಪ್ರತ್ಯಯಸ್ವರ ಏವ ಶಿಷ್ಯತೇ । ಆ ಇತ್ಯೇತ್ರೋಪಸರ್ಗಾಶ್ಚಾಭಿವರ್ಜಂ । ಫಿ. ೪-೧೩। ಇತ್ಯುದಾತ್ತಃ । ರುದ್ರವರ್ತನೀ । ಆಮಂತ್ರಿತಸ್ಯ ಚೇತ್ಯಾಮಂತ್ರಿತನಿಘಾತಃ ॥

॥ ಪ್ರತಿಪದಾರ್ಥ ॥

**ದಸ್ರಾ**— ಶತ್ರುಗಳನ್ನು ಅಥವಾ ರೋಗಗಳನ್ನು ನಾಶಮಾಡುವ । **ನಾಸತ್ಯಾ**— ಅನೃತಭಾಷಣರಹಿತರಾದ (ಸುಳ್ಳನ್ನಾಡದಿರುವ) । **ರುದ್ರವರ್ತನೀ**— ಪರಾಕ್ರಮಶಾಲಿಗಳಾದ ಯೋಧರ ಮಾರ್ಗಾನುವರ್ತಿಗಳಾದ (ಎಲೈ ಅಶ್ವಿನೀದೇವತೆಗಳೇ), । **ವೃಕ್ತಬರ್ಹಿಷಃ**— ಮೂಲವನ್ನು ಕತ್ತರಿಸಿರುವ ಕುಶವೆಂಬ ದರ್ಭೆಯ ಹುಲ್ಲಿನ ಮೇಲೆ ಇಡಲ್ಪಟ್ಟಿರುವ । **ಯುವಾಕವಃ**— ಮಿಶ್ರವಸ್ತುಗಳಿಂದ ಕೂಡಿದ ಅಥವಾ ನೀವು ಅಪೇಕ್ಷಿಸುವ । **ಸುತಾಃ**— ಲತೆಯನ್ನು ಜಜ್ಜಿ ಸಿದ್ಧಪಡಿಸಿರುವ ಸೋಮರಸವನ್ನು (ಸ್ವೀಕರಿಸುವುದಕ್ಕಾಗಿ) । **ಆ ಯಾತಂ**—(ಇಲ್ಲಿಗೆ ಎಂದರೆ ನಾವು ಯಜ್ಞಮಾಡುವ ಸ್ಥಳಕ್ಕೆ) ಬನ್ನಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ಶತ್ರುಗಳನ್ನು ನಾಶಮಾಡುವವರು, ಅಥವಾ ನೀವು ದೇವವೈದ್ಯರಾದ್ದರಿಂದ ರೋಗಗಳನ್ನು ನಾಶಮಾಡುವವರು. ಅಸತ್ಯವನ್ನಾಡುವವರಲ್ಲ ; ಯಾವಾಗಲೂ ವೀರರ ಮಾರ್ಗಾನುಸರಣೆಯನ್ನೇ ಮಾಡುವವರು. ಇಂತಹ ನೀವು ನಿಮಗಾಗಿ ನಾವು ಸಿದ್ಧಪಡಿಸಿ ಬರ್ಹಿಸ್ಸಿನ ಎಂದರೆ ಯಜ್ಞಯೋಗ್ಯವಾದ ದರ್ಭೆಯ ಮೇಲೆ ಇಟ್ಟಿರುವ ಸೋಮರಸವನ್ನು ಪಾನಮಾಡುವುದಕ್ಕಾಗಿ ಈ ನಮ್ಮ ಯಜ್ಞಭೂಮಿಗೆ ಬನ್ನಿ.

English Translation

O Aswins, destroyers of enemies (or of deseases) shorn of untruth. who wander on the path of heroes, come to the mixed libations of Soma juice pressed and placed on lopped Kusa-grass.

॥ ವಿಶೇಷವಿಷಯಗಳು ॥

**ದಸ್ರಾ**—ಅಶ್ವಿನೀದೇವತೆಗಳಲ್ಲಿ ಒಬ್ಬನಿಗೆ ದಸ್ರಾ ಎಂತಲೂ ಮತ್ತೊಬ್ಬನಿಗೆ ನಾಸತ್ಯಾ ಎಂತಲೂ ಹೆಸರು. ಆದರೂ ಒಂದೇ ಶಬ್ದವು ದ್ವಿವಚನಾಂತವಾಗಿದ್ದರೆ ಇಬ್ಬರನ್ನೂ ನಿರ್ದೇಶಮಾಡುವುದು. ಈ ಋಕ್ಕಿನಲ್ಲಿ ಇಬ್ಬರ ಹೆಸರನ್ನೂ ಪ್ರತ್ಯೇಕವಾಗಿ ಹೇಳಿರುವುದರಿಂದ ಇಬ್ಬರನ್ನೂ ನಿರ್ದೇಶಿಸಿರುವುದು. ಇದಲ್ಲದೆ ಈ ಶಬ್ದಗಳು ಅಂಕಿತನಾಮವನ್ನು ಸೂಚಿಸುವುದೆಂದು ಹೇಳುವುದಾದರೆ ಈ ಶಬ್ದಗಳಿಗೆ ಬೇರೆ ಯಾವ ಅರ್ಥವನ್ನೂ ಮಾಡಬೇಕಾಗಿಲ್ಲ. ಹಾಗಿಲ್ಲದೆ ಈ ಎರಡು ಶಬ್ದಗಳೂ ಅಶ್ವಿನೀದೇವತೆಗಳ ಗುಣಗಳನ್ನು ಹೇಳುವ ವಿಶೇಷಣಗಳೆಂದು ಭಾವಿಸುವುದಾದರೆ ಅವುಗಳಿಗೆ ಅವಯವಾರ್ಥವನ್ನು ಕಲ್ಪಿಸಬೇಕಾಗುವುದು. ಭಾಷ್ಯಕಾರರು ಈ ರೀತಿಯಾಗಿಯೇ ಭಾವಿಸಿ ಅವಯವಾರ್ಥ ನಿಷ್ಪತ್ತಿಯನ್ನು ಮಾಡಿದಾರೆ. ಭಾಷ್ಯಕಾರರು ಈ ಶಬ್ದಕ್ಕೆ-**ಶತ್ರೂಣಾಮುಪಕ್ಷಪಯಿತಾರೌ। ಯದ್ವಾ ದೇವವೈದ್ಯತ್ವೇನ ರೋಗಾಣಾಮುಪಕ್ಷಪಯಿತಾರೌ** ಎಂದರೆ, ಶತ್ರುಗಳನ್ನು ನಾಶಮಾಡುವವರು ಅಥವಾ ಇವರು ದೇವವೈದ್ಯರಾದ್ದರಿಂದ ರೋಗಗಳನ್ನು ನಾಶಮಾಡುವವರು, ಎಂದರ್ಥಮಾಡಿದಾರೆ. ಸ್ಕಂದಸ್ವಾಮಿಯು ಶತ್ರುನಾಶಕರೆಂದೂ, ನೋಡುವುದಕ್ಕೆ ಸುಂದರಾಕಾರವುಳ್ಳವರೆಂದೂ ಹೇಳುವರು. ವೆಂಕಟಮಾಧವರು, ಸುಂದರರೂಪವುಳ್ಳವರೆಂದು ಹೇಳುವರು. ವಾಜಸನೇಯಸಂಹಿತೆಯ ( ಶುಕ್ಲಯಜುರ್ವೇದದ) ಭಾಷ್ಯಕಾರರಾದ ಉವ್ವಟ ಮತ್ತು ಮಹೀಧರರೆಂಬುವರು ವಾ. ಸಂ. ೩೩-೫೮ ನೆಯ ಮಂತ್ರದಲ್ಲಿ ಬರುವ ಈ ಪದಕ್ಕೆ ಇದೇ ಅರ್ಥವನ್ನೇ ಪ್ರತಿಪಾದಿಸಿರುವರು. Grassman ಎಂಬುವರು Wonder-workers ಎಂದೂ Ludwig ಎಂಬುವರು Wonderful ಎಂದೂ Monier Williams ಎಂಬುವರು accomplishing wonderful deeds ಎಂದೂ ಅರ್ಥಮಾಡಿದಾರೆ. ಇವರೆಲ್ಲರೂ ಈ ಋಕ್ಕಿನಲ್ಲಿ ಇರುವ ಈ ಶಬ್ದದ ಅರ್ಥವನ್ನು ಈರೀತಿಮಾಡಿದ್ದರೂ ಇತರಕಡೆಗಳಲ್ಲಿ ಬರುವ ಇದೇಶಬ್ದಕ್ಕೆ ಬೇರೆ ಬೇರೆ ಅರ್ಥಮಾಡಿದಾರೆ. ಇದಲ್ಲದೆ Ludwig ಪಂಡಿತರು ಈ ಶಬ್ದಕ್ಕೆ

ಋ. ಸಂ. ೧-೩-೩ , ೧-೧೩೯-೩ , ೬-೯-೭ ಇತ್ಯಾದಿ ಋಕ್ಕುಗಳಲ್ಲಿ wonderful ಆಶ್ಚರ್ಯಕರವಾದ ಎಂದೂ,

ಋ. ಸಂ. ೧-೩೦-೧೭; ೮-೫-೨; ೮-೫-೧೧; ೮-೮-೧; ೮-೨೨-೧೭ ಇತ್ಯಾದಿ ಋಕ್ಕುಗಳಲ್ಲಿ wonder-workers ಆಶ್ಚರ್ಯಕರವಾದ ಕೃತ್ಯಗಳನ್ನೆಸಗುವವರು ಎಂದೂ,

ಋ. ಸಂ. ೧-೪೬-೨; ೧-೪೭-೩; ೧-೪೭-೬; ೧-೧೧೨-೨೪; ೧-೧೧೬-೧೦; ೧-೧೧೭-೫; ೧-೧೧೭-೨೧; ೧-೧೧೮-೩; ಮೊದಲಾದ ಋಕ್ಕುಗಳಲ್ಲಿ beneficent ಉದಾರಿ ಅಥವಾ ಉಪಕಾರಮಾಡುವವರೆಂದೂ,

ಋ. ಸಂ. ೧-೧೧೬-೧೬; ೧-೧೧೭-೨೦; ಮೊದಲಾದ ಋಕ್ಕುಗಳಲ್ಲಿ good-looking ನೋಡುವುದಕ್ಕೆ ಸುಂದರವಾಗಿರುವರೆಂದೂ

ಋ. ಸಂ. ೭-೬೯-೩; ೮-೮೭-೫ ಮೊದಲಾದ ಋಕ್ಕುಗಳಲ್ಲಿ destroyers ಶತ್ರು ಅಥವಾ ರೋಗ ನಾಶಕರೆಂದೂ ವಿಧವಿಧವಾದ ಅರ್ಥವನ್ನು ಹೇಳಿದಾರೆ. ಇದರಂತೆ Geldner ಪಂಡಿತರು master worker, able, dexterous, possessing Supernatural strength ಎಂದು ಅನೇಕಾರ್ಥಗಳನ್ನು ಹೇಳಿದಾರೆ. Langlois ಮತ್ತು Griffith ಎಂಬುವರೂ ಸಹ ಬೇರೆ ಬೇರೆ ಅರ್ಥಗಳನ್ನು ಕಲ್ಪಿಸಿದಾರೆ. ಆದರೆ **ದಸ್ರಾ** ಎಂಬ ಶಬ್ದವು **ದಸ್ ದರ್ಶನೇ** ಎಂಬ ಧಾತುವಿನಿಂದ ಉಂಟಾಗಿರುವುದರಿಂದ ಈ ಶಬ್ದಕ್ಕೆ ದರ್ಶನೀಯ ಅಥವಾ ಸುಂದರರೂಪವುಳ್ಳ ಎಂಬ ಅರ್ಥವೇ ಸಮಂಜಸವಾಗಿರುವುದೆಂದು ಅನೇಕರ ಅಭಿಪ್ರಾಯವಾಗಿದೆ.

**ಯುವಾಕವಃ**–ಸಾಯಣಾಚಾರ್ಯರು **ಯು ಮಿಶ್ರಣೇ** ಎಂಬ ಧಾತುವಿನಿಂದ ಈ ಶಬ್ದದ ಉತ್ಪತ್ತಿಯಾಗಿರುವುದೆಂದು ಹೇಳಿ ಇದಕ್ಕೆ ಮಿಶ್ರಿತವೆಂದು ಅರ್ಥಮಾಡಿರುವರು. ಮಿಶ್ರಿತದ್ರವ್ಯವೆಂದರೆ, ಹಸುವಿನ ಹಾಲು, ಮೊಸರು, ಯವ ಮೊದಲಾದ ಆಶಿರದ್ರವ್ಯಗಳು. ಸೋಮರಸದ ವಿಷಯವಾಗಿ ನಾವು ಹಿಂದೆಯೇ (ಭಾಗ ೧. ಪೇಜು ೬೭೪-೬೭೬) ವಿಸ್ತಾರವಾಗಿ ವಿವರಿಸಿದೇವೆ. ಸ್ಕಂದಸ್ವಾಮಿಯು—**ಯುವಾಂ ಕಾಮಯಂತೇ ಇತಿ ಯುವಾಕವಃ । ಯುಷ್ಮತ್ಪಾನಕಾಮಾ ಇತ್ಯರ್ಥಃ ॥** ಎಂದರೆ ನೀವು ಪಾನಮಾಡಲು ಅಪೇಕ್ಷೆಪಡುವ ಎಂದರೆ ನಿಮಗೆ ಪ್ರೀತಿಪಾತ್ರವಾದ ಎಂದರ್ಥವು. ವೆಂಕಟಮಾಧವರೂ ಇದೇ ಅರ್ಥವನ್ನೇ ಅನುಮೋದಿಸುವರು. ಉವ್ವಟ ಮತ್ತು ಮಹೀಧರರು ತಮ್ಮ ವಾಜಸನೇಯಸಂಹಿತೆಯ ವಾ. ಸಂ. ೩೩-೫೮ ನೆಯ ಮಂತ್ರದಲ್ಲಿ ಈ ಶಬ್ದಕ್ಕೆ ಸ್ಕಂದ ಸ್ವಾಮಿಯ ಅರ್ಥವನ್ನೇ ವಿಶದವಾಗಿ ಹೇಳಿರುವರು. ಪಾಶ್ಚಾತ್ಯ ಪಂಡಿತರ ಅಭಿಪ್ರಾಯವೂ ಇದರಂತೆಯೇ ಇದೆ. ಸಾಯಣಾಚಾರ್ಯರೂ ಕೂಡ ಬೇರೆ ಋಕ್ಕುಗಳಲ್ಲಿ ಎಂದರೆ ಋ. ಸಂ. ೧-೧೨೦-೩; ೧-೧೨೦-೯; ೩-೫೮-೯; ೩-೬೦-೩; ೭-೬೭-೪; ೭-೬೮-೧; ೭-೬೮-೭ ಈ ಋಕ್ಕುಗಳಲ್ಲಿ ಈ ಶಬ್ದಕ್ಕೆ (ಎಂದರೆ ಯುವಾಕುಶಬ್ದಕ್ಕೆ) **ಯುವಾಂ ಕಾಮಯಮಾನ** ಎಂದರೆ ನೀವು ಅಪೇಕ್ಷೆಪಡುವ ಎಂದೇ ಅರ್ಥಮಾಡಿದಾರೆ. **ಯುವಾಕು** ಎಂಬ ಶಬ್ದವು ಋಗ್ವೇದದಲ್ಲಿ ೭ ಸ್ಥಳಗಳಲ್ಲಿ ಉಪಯೋಗಿಸಿದ್ದರೂ **ಯುವಾಕವಃ** ಎಂಬ ಶಬ್ದವು ಮಾತ್ರ ಈ ಋಕ್ಕಿನಲ್ಲಿ ಮಾತ್ರ ಉಪಯೋಗಿಸಲ್ಪಟ್ಟಿದೆ ಮತ್ತೆಲ್ಲಿಯೂ ಇಲ್ಲ. ಯುವಾಶಬ್ದವು ಯುಷ್ಮದರ್ಥದಲ್ಲಿ ಇತರ ಪದಗಳೊಂದಿಗೆ ಸೇರಿರುವ ಕೆಲವು ಉದಾಹರಣೆಗಳನ್ನು ಕೆಳಗೆ ಕೊಟ್ಟಿದೆ—

**ಯುವಾನೀತಸ್ಯ** (ಋ. ಸಂ. ೮-೨೬-೧೨) ॥ **ಯುವಾದತ್ತಸ್ಯ** (ಋ. ಸಂ. ೮-೨೬-೧೨)
**ಯುವಾಯವಃ** (ಋ. ಸಂ. ೧-೧೩೫-೬). **ಯುವಾಯುಜಂ** (ಋ. ಸಂ. ೧-೧೧೯-೫)
**ಯುವಾವತೇ** (ಋ. ಸಂ. ೩-೬೨-೧).

ಮೇಲಿನ ಪಟ್ಟಿಯಲ್ಲಿರುವ ಮೊದಲಿನ ಎರಡುಶಬ್ದಗಳ ಪ್ರಯೋಗವಿಚಾರದಲ್ಲಿ ಅದೇ ಅರ್ಥವಿರುವ **ಯುಷ್ಮಾನೀತಃ**

(ಋ. ಸಂ. ೨-೨೭-೧೧) **ಯುಷ್ಮಾದತ್ತಸ್ಯ** (ಋ. ಸಂ. ೫-೫೪-೧೩ ; ೮-೪೭-೬) ಎಂಬ ಪದಗಳೂ ರೂಢಿಯಲ್ಲಿರುವವು.

**ಸುತಾಃ**—ಜಜ್ಜಿ ಹಿಂಡಿ ತೆಗೆದ (Pressed out, extracted) ಎಂದು ಈ ಶಬ್ದಾರ್ಥವು. ಸೋಮಲತೆಯನ್ನು ಕಲ್ಲುಗಳಿಂದ (ಗ್ರಾವಾಣ) ಜಜ್ಜಿ ರಸವನ್ನು ಹಿಂಡಿ ತೆಗೆಯುವಾಗ, ಆ ರೀತಿ ತೆಗೆಯುವ ರಸಕ್ಕೆ ಸುತ ಎಂದು ಋಗ್ವೇದದಲ್ಲಿ ಹೇಳುವ ರೂಢಿಯಿದೆ. ಆಧುನಿಕಸಂಸ್ಕೃತದಲ್ಲಿ ಸುತ ಎಂದರೆ ಪುತ್ರನೆಂದರ್ಥವು.

**ನಾಸತ್ಯಾ**—ಇದು ಅಶ್ವಿನೀದೇವತೆಗಳನ್ನು ಹೇಳುವ ಶಬ್ದವು. ಇದಕ್ಕೆ ಅವಯವಾರ್ಥದ ಅವಶ್ಯಕತೆ ಇಲ್ಲದಿದ್ದರೂ ಭಾಷ್ಯಕಾರರು—ಅಸ್ಯತ್ಯಮನೃತಭಾಷಣಂ ತದ್ರಹಿತೌ ಎಂದು ವಿವರಿಸಿ, ಯಾಸ್ಕರ—**ಸತ್ಯಾವೇವ ನಾಸತ್ಯಾವಿತ್ಯೌರ್ಣವಾಭಃ । ಸತ್ಯಸ್ಯ ಪ್ರಣೇತಾರಾವಿತ್ಯಾಗ್ರಾಯಣಃ** ಎಂಬ ಎರಡು ಪ್ರಮಾಣವಚನಗಳನ್ನು ಉದಹರಿಸಿರುವರು. ಈ ಶಬ್ದದ ರೂಪನಿಷ್ಪತ್ತಿವಿಷಯದಲ್ಲಿ ಬೇರೆ ಬೇರೆ ಕ್ರಮಗಳನ್ನನುಸರಿಸಿದ್ದರೂ ಅರ್ಥವಿಚಾರದಲ್ಲಿ ಮಾತ್ರ ಎಲ್ಲರ ಅಭಿಮತವೂ ಒಂದೇ ಆಗಿರುವುದು.

**ವೃಕ್ತಬರ್ಹಿಷಃ**—ಈ ಶಬ್ದವು ಮಧ್ಯೋದಾತ್ತವಾಗಿ ಋ. ಸಂ. ೧-೩-೩ ; ೧-೧೪-೫ ಮೊದಲಾದ ೧೯ ಸ್ಥಳಗಳಲ್ಲಿಯೂ, ಸರ್ವಾನುದಾತ್ತವಾಗಿ ಋ. ಸಂ. ೧-೩೮ ೧; ೮-೭-೨೦; ೮-೭-೨೧ ಎಂಬ ಮೂರು ಸ್ಥಳಗಳಲ್ಲಿಯೂ ಉಪಯೋಗಿಸಲ್ಪಟ್ಟಿರುವುದು. ಇದಲ್ಲದೆ ಈ ಶಬ್ದದ ಬೇರೆ ವಿಭಕ್ತಿಯಾದ **ವೃಕ್ತಬರ್ಹಿಷಂ** ಎಂಬ ಶಬ್ದವು ಋ. ಸಂ. ೧-೪೦-೭ ರಲ್ಲಿಯೂ **ವೃಕ್ತಬರ್ಹಿಷೇ** ಎಂಬ ಶಬ್ದವು ಋ. ಸಂ. ೧-೧೨-೩ ; ೩-೫೯-೯ ; ೧೦-೬೧-೧೫ ನೆಯ ಋಕ್ಕುಗಳಲ್ಲಿಯೂ ಇರುವುದು. ಈ ಶಬ್ದಕ್ಕೆ ಸಾಯಣರು ಎರಡು ವಿಧವಾದ ಅರ್ಥವನ್ನು ಹೇಳಿರುವರು -**ವೃಕ್ತಾನಿ ಮೂಲೈರ್ವರ್ಜಿತಾನಿ ಬರ್ಹೀಂಷ್ಯಾಸ್ತರಣರೂಪಾಣಿ ಯೇಷಾಂ ಸೋಮಾನಾಂ ತೇ ವೃಕ್ತಬರ್ಹಿಷಃ** ಮತ್ತು **ಯದ್ವಾ ಭರತಾ ಇತ್ಯಾದಿಷ್ವಷ್ಟಸ್ವೃತ್ವಿಜ್ನಾಮಸು ವೃಕ್ತಬರ್ಹಿಷ ಇತಿ । ತದಾನೀಂ ತೃತೀಯಾರ್ಥೇ ಪ್ರಥಮಾ । ಋತ್ವಿಗ್ಭಿರಭಿಷುತಾ ಇತ್ಯನ್ವಯಃ** ಎಂದು. ಎಂದರೆ ಮೂಲವನ್ನು (ಬೇರಿನ ಭಾಗವನ್ನು) ಕತ್ತರಿಸಿದ ದರ್ಭೆಗಳನ್ನು ಹರಡಿ ಅದರ ಮೇಲೆ ಇಡುವ ಸೋಮಪಾತ್ರೆಯೆಂದು ಒಂದು ಅರ್ಥವು. ಎಂಟು ಜನ ಋತ್ವಿಕ್ಕುಗಳ ಹೆಸರುಗಳಲ್ಲಿ ಒಂದಾದ **ವೃಕ್ತಬರ್ಹಿಷಃ** ಎಂಬ ಹೆಸರಿನ ಋತ್ವಿಜನಿಂದ ಹಿಂಡಿ ತೆಗೆದು ಸಿದ್ಧಪಡಿಸಿದ ಸೋಮರಸಗಳು ಎಂದು ಇನ್ನೊಂದರ್ಥವು. ಮೊದಲನೆಯ ಅರ್ಥದಲ್ಲಿ **ವೃಕ್ತಬರ್ಹಿಷಃ** ಶಬ್ದವು ಸೋಮಶಬ್ದಾರ್ಥವನ್ನು ಹೇಳುವ **ಸುತಾಃ** ಎಂಬ ಶಬ್ದಕ್ಕೆ ವಿಶೇಷಣವು. ಎರಡನೆಯ ಅರ್ಥದಲ್ಲಿ ತೃತೀಯಾವಿಭಕ್ತಿಯ ಅರ್ಥದಲ್ಲಿ ಪ್ರಥಮಾವಿಭಕ್ತಿಯ ಪ್ರಯೋಗವಿರುವುದರಿಂದ ಇದು ಋತ್ವಿಕ್ಕುಗಳಿಗೆ ವಿಶೇಷಣವು. ಇದಲ್ಲದೆ ಸಾಯಣರು ಈ ಕುಶಾಸ್ತರಣವನ್ನು ಸೋಮರಸವನ್ನು ಇಡುವುದಕ್ಕಾಗಿ ಇರುವುದೆಂದು ಹೇಳುವರು. ಸ್ಕಂದಸ್ವಾಮಿಯು ಕುಶಾಸ್ತರಣವು ಅಶ್ವಿನೀದೇವತೆಗಳು ಬಂದು ಕೂಡುವುದಕ್ಕಾಗಿರುವುದೆಂದು ಹೇಳುವರು. ಆದರೆ ಯಜ್ಞಪ್ರಯೋಗದಲ್ಲಿ ಬರ್ಹಿರ್ವಿಸರಣವು ಹೋಮದ್ರವ್ಯ ಅಥವಾ ಸೋಮರಸವನ್ನು ಇಡುವುದಕ್ಕಾಗಿ ಅನೇಕಕಡೆಗಳಲ್ಲಿ ಹೇಳಿರುವುದರಿಂದ ಸಾಯಣರ ಅಭಿಪ್ರಾಯವೇ ಸಾಧುವೆಂದು ತೋರುವುದು. ಈ ಋಕ್ಕಿನಲ್ಲಿ ಎರಡುವಿಧವಾದ ಅರ್ಥವನ್ನು ವಿವರಿಸಿದ್ದರೂ ಇತರ ಋಕ್ಕುಗಳಲ್ಲಿರುವ ಈ ಶಬ್ದಕ್ಕೆ ಸಾಯಣರು—**ವೃಕ್ತಬರ್ಹಿಷಃ ಆಸ್ತರಣಾರ್ಥಂ ಛಿನ್ನದರ್ಭಾಃ** ಎಂಬ ಒಂದೇ ಅರ್ಥವನ್ನು ಹೇಳಿರುವರು. ಈ ಅರ್ಥವೇ ಸಮಂಜಸವಾಗಿರುವುದು. ಪಾಶ್ಚಾತ್ಯ ವಿದ್ವಾಂಸರಲ್ಲಿ Wilson 'placed on lopped grass' ಎಂದೂ Ludwig ಎಂಬುವರು—'havig the barhis cut' ಎಂದೂ Geldner ಪಂಡಿತರು—'having the Barhis placed around' ಎಂದೂ ಅರ್ಥಮಾಡಿರುವರು. ಈ ಅರ್ಥವಿವರಣೆಮಾಡುವಾಗ ಪದಗಳ

ಪ್ರಯೋಗದಲ್ಲಿ ಹೆಚ್ಚುಕಡಿಮೆ ಇದ್ದರೂ ಮುಖ್ಯಾರ್ಥದಲ್ಲಿ ಹೆಚ್ಚು ಬದಲಾವಣೆಯಿಲ್ಲ. Grassman ಎಂಬುವರು—'of one who has spread the Sacrificial grass–Monier Williams ಎಂಬುವರು—'one who has gathered and spread the Sacrificial grass' ಎಂದೂ ಈ ಶಬ್ದಕ್ಕೆ ದರ್ಭೆಯನ್ನುಹರಡುವ ಪುರುಷ (ಋತ್ವಿಕ್) ಎಂದು ಅರ್ಥಮಾಡಿದಾರೆ. ಸಾಯಣಾಚಾರ್ಯರೂ ಸಹ ಈ ಅರ್ಥವನ್ನೇ ಕೆಲವು ಕಡೆ ಎಂದರೆ ಋ. ಸಂ. ೬-೬೮-೧ , ೮-೩೬-೧ ಈ ಋಕ್ಕುಗಳಲ್ಲಿ ಸಮರ್ಥಿಸಿ ವೃಕ್ತಬರ್ಹಿಷಃ ಎಂಬ ಶಬ್ದದ ಷಷ್ಠೀವಿಭಕ್ತಿಯ ಅರ್ಥವನ್ನು ವಿಶದೀಕರಿಸಿದಾರೆ.

**ರುದ್ರವರ್ತನೀ**—ಈ ಶಬ್ದವು ಸರ್ವಾನುದಾತ್ತವಾಗಿ ಋ. ಸಂ. ೧-೩-೩ ; ೮-೨೨-೧ ; ೧೦-೩೯-೧೧ ಈ ಋಕ್ಕುಗಳಲ್ಲಿಯೂ, ಮಧ್ಯೋದಾತ್ತವಾಗಿ ಋ ಸಂ. ೮-೨೨-೧೪ ನೆಯ ಋಕ್ಕಿನಲ್ಲಿಯೂ ಇರುವುದು—

**ಆಯಾತಂ ರುದ್ರವರ್ತನೀ** (ಋ. ಸಂ. ೧-೩-೩)

**ಯಮುಶ್ವಿನಾ ಸುಹವಾ ರುದ್ರವರ್ತನೀ ಆ ಸೂರ್ಯಾಯೈ ತಸ್ಥತುಃ** । (ಋ. ಸಂ. ೮-೨೨-೧)

**ಯಮುಶ್ವಿನಾ ಸುಹವಾ ರುದ್ರವರ್ತನೀ ಪುರೋರಥಂ ಕೃಣುಥಃ ಪತ್ನ್ಯಾ ಸಹ** ।

(ಋ. ಸಂ. ೧೦-೩೯-೧೧)

**ತಾವಿದ್ದೋಷಾ ತಾ ಉಷಸಿ ಶುಭಸ್ಪತೀ ತಾ ಯಾಮನ್ರುದ್ರವರ್ತನೀ** । (ಋ. ಸಂ. ೮-೨೨-೧೪)
ಈ ಶಬ್ದಪ್ರಯೋಗವು ಈ ನಾಲ್ಕು ಋಕ್ಕುಗಳಲ್ಲಲ್ಲದೆ ಮತ್ತೆಲ್ಲಿಯೂ ಇಲ್ಲ. ಈ ನಾಲ್ಕು ಸ್ಥಳಗಳಲ್ಲಿಯೂ ಅಶ್ವಿನೀ ದೇವತೆಗಳಿಗೆ ವಿಶೇಷಣಪದಗಳಾಗಿವೆ. ಬೇರೆ ದೇವತೆಗಳ ವಿಷಯದಲ್ಲಿ ಈ ಶಬ್ದಪ್ರಯೋಗವಿಲ್ಲದಿರುವುದರಿಂದ ಈ ಶಬ್ದಕ್ಕೆ ಒಂದು ನಿರ್ದಿಷ್ಟಾರ್ಥವು ಇರಬೇಕೆಂದೂ ಅದು ಇತರ ದೇವತೆಗಳಿಗೆ ಅನ್ವಯಿಸದೆ ಈ ಅಶ್ವಿನೀದೇವತೆಗಳಿಗೆ ಮಾತ್ರ ಅನ್ವಯಿಸುವುದಾಗಿರುವುದರಿಂದ ಭಾಷ್ಯಕಾರರು ಹೇಳುವ ಅರ್ಥವು ಹೊಂದುವುದೇ ಎಂಬುದು ಅನುಮಾನಾಸ್ಪದವಾಗಿದೆ. ಆದರೆ ಬೇರೆ ವಿಧವಾದ ಅರ್ಥಪ್ರತಿಪಾದನೆಗೆ ತಕ್ಕ ಸಾಮಗ್ರಿಯು ಇಲ್ಲದಿರುವುದರಿಂದ ಅವರ ಅರ್ಥವನ್ನೇ ಅನುಮೋದಿಸಬೇಕಾಗಿದೆ. ಭಾಷ್ಯಕಾರರು ರುದ್ರಶಬ್ದಕ್ಕೆ ಅರ್ಥವನ್ನು ವಿವರಿಸುವಾಗ ಈ ರೀತಿ ರೂಪನಿಷ್ಪತ್ತಿಯನ್ನು ಮಾಡಿರುವರು—**ಸೋಽರೋದೀದ್ಯದರೋದೀತ್ತದ್ರುದ್ರಸ್ಯ ರುದ್ರತ್ವಂ** (ತೈ. ಸಂ. ೧-೫-೧) ಅಳುವುದರಿಂದ ಅಥವಾ ರೋದನಮಾಡುವುದರಿಂದ ರುದ್ರನೆಂಬ ಹೆಸರು ಬಂದಿತು. ಎಂದರೆ ಶತ್ರುವನ್ನು ಅಳುವಂತೆ ಮಾಡುವ ವೀರನಿಗೆ ರುದ್ರನೆಂದು ಹೇಳಬಹುದು. ರುದ್ರವರ್ತನೀ ಎಂದರೆ ವೀರರ ಮಾರ್ಗದಲ್ಲಿ ನಡೆಯುವವರು ಅಥವಾ ವೀರರ ಮಾರ್ಗಾನುಯಾಯಿಗಳು ಎಂದರ್ಥವು. Grassman ಪಂಡಿತನು **ರುದ್ ಪ್ರಕಾಶನೇ** ಎಂಬ ಧಾತುವಿನ ಅರ್ಥಪ್ರಕಾರ **ರುದ್ರ** ಎಂಬ ಪದಕ್ಕೆ Brilliant ಪ್ರಕಾಶಮಾನವಾದ ಎಂದರ್ಥಮಾಡಿರುವನು. ಇದರಂತೆ **ರುದ್ರವರ್ತನೀ** ಎಂದರೆ ಪ್ರಕಾಶಮಾನವಾದ ಎಂದರೆ ಉತ್ತಮವಾದ ಮಾರ್ಗದಲ್ಲಿ ಸಂಚರಿಸುವವರು ಎಂದಾಗುವುದು. ಅಥವಾ ಋಗ್ವೇದದಲ್ಲಿ **ರುದ್ರ** ಎಂಬ ಒಂದು ನಿರ್ದಿಷ್ಟವಾದ ದೇವತೆಯಿರುವುದು. ಆ ದೇವತೆಯ ಸ್ವಭಾವವು ಕೋಪದಿಂದ ಕೂಡಿ ಶತ್ರುಗಳನ್ನು ಕೊಲ್ಲುವುದು ಹಿಂಸೆಮಾಡುವುದು ಎಂದು ಮೊದಲಾಗಿ ರುದ್ರದೇವತಾಕವಾದ ಅನೇಕ ಸೂಕ್ತಗಳಲ್ಲಿ ವರ್ಣನೆ ಇರುವುದು. **ರುದ್ರವರ್ತನೀ** ಎಂದರೆ ಆ ರುದ್ರದೇವನ ಮಾರ್ಗವನ್ನು ಅನುಸರಿಸುವವರು ಎಂದರೆ ಶತ್ರುನಾಶಕರು ಎಂಬ ಅರ್ಥವಿರಬಹುದೇ ಎಂಬ ಸಂದೇಹವು ಸಹಜವಾಗಿ ಉಂಟಾಗುವುದು. ಆದುದರಿಂದ ಈ ಶಬ್ದಕ್ಕೆ ಆ **ಕಾಲದಲ್ಲಿ** ಯಾವ ಅರ್ಥವು ಬಳಕೆಯಲ್ಲಿತ್ತೆಂದು ಹೇಳುವುದು ಸಾಧ್ಯವಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

ದಸ್ರಾ, ಎಂಬುದು ಸಂಬೋಧನದ್ವಿವಚನಾಂತ, ಔಪ್ರತ್ಯಯಕ್ಕೆ ' ಸುಪಾಂ ಸುಲುಕ್ ' ಇತ್ಯಾದಿಸೂತ್ರದಿಂದ ಡಾ ಆದೇಶ ' ಆಮಂತ್ರಿತಸ್ಯ ಚ (ಪಾ ಸೂ. ೬-೧-೧೯೮) ಎಂಬುದರಿಂದ ಉದಾತ್ತಬರುವುದು. ಯುವನ್ತಿ-ಮಿಶ್ರೀಭವನ್ತಿ ಇತಿ ಮಿಶ್ರವಾಗುತ್ತವೆ ಎಂದು, ಯುವಾಕವಃ ಎಂಬಲ್ಲಿ ವಿಗ್ರಹವು. ಯು (ಯುಮಿಶ್ರಣೇ) ಧಾತುವಿನ ಮೇಲೆ ಕಟಿಕುಷ್ಯಾದಿಷು ಕಾಕುಃ (ಉ. ಸೂ. ೩-೩೫೭) ಎಂಬ ಸೂತ್ರದಿಂದ ಈ ಗಣದಲ್ಲಿ ಯುಧಾತುವಿಗೆ ಪಾಠವಿಲ್ಲದೇ ಇದ್ದರೂ ಬಹುಲಗ್ರಹಣದಿಂದ ಕಾಕುಪ್ರತ್ಯಯಬರುವುದು. ಪ್ರತ್ಯಯಾದಿಕಕಾರವು ಇತ್ಸಂಜ್ಞೆಯನ್ನು ಹೊಂದುವುದು. ಯು+ಆಕು ಎಂದಿರುವಾಗ ಪ್ರತ್ಯಯ ಕಿತ್, ಆದ್ದರಿಂದ ' ಕ್ಙಿತಿಚ ' ಎಂದು ಗುಣ ನಿಷೇಧ. ' ಅಚಿಶ್ನುಧಾತುಭ್ರುವಾಂಯೋರಿಯಙ್ಙುವಙೌ ' ಎಂಬುದರಿಂದ ಉವಙ್ ಆದೇಶಬರುವುದು. ಪ್ರಥಮಾ ಬಹುವಚನದಲ್ಲಿ ಯುವಾಕವಃ ಎಂದಾಗುವುದು. ಆಕಾರವು ಪ್ರತ್ಯಯಸ್ವರದಿಂದ ಉದಾತ್ತವು. ನ ವಿದ್ಯತೇ ಅಸತ್ಯಂ ಅನಯೋಃ (ಇವರಲ್ಲಿ ಅಸತ್ಯ ಎಂದರೆ ಸುಳ್ಳು ಇರುವುದಿಲ್ಲ) ಎಂದು ವಿಗ್ರಹಮಾಡಿದರೆ ನಾಸತ್ಯಾ ಎಂದಾಗುವದು, ನಞ್‌ನ ನಕಾರಕ್ಕೆ ' ನಲೋಪೋ ನಞಃ ' (ಪಾ. ಸೂ. ೬-೩-೭೩) ಉತ್ತರಪದವು ಪರದಲ್ಲಿರುವಾಗ ನಞ್‌ನ ನಕಾರಕ್ಕೆ ಲೋಪ ಬರುವುದು ಎಂಬುದರಿಂದ ಲೋಪಪ್ರಾಪ್ತವಾದರೆ, ' ನಭ್ರಾಣ್ಣಪಾನ್ನವೇದಾ ನಾಸತ್ಯಾ ನಮುಚಿನಕುಲ ನಖ ನಪುಂಸಕ ನಕ್ಷತ್ರ ನಾಕೇಷುಪ್ರಕೃತ್ಯಾ' (ಪಾ. ಸೂ. ೬-೩-೭೫) ಇವುಗಳ ನಕಾರಕ್ಕೆ ಪ್ರಕೃತಿವದ್ಭಾವ ಬರುವುದು ಎಂಬುದರಿಂದ ಪ್ರಕೃತಿವದ್ಭಾವ ಬರುವುದರಿಂದ ನಕಾರಕ್ಕೆ ಲೋಪ ಬರುವುದಿಲ್ಲ. ಇದು ಎರಡನೇ ಪಾದದ ಆದಿಯಲ್ಲಿರುವುದರಿಂದ ಅಪಾದಾದೌ ಎಂದು ಆಷ್ಟಮಿಕಾನುದಾತ್ತಕ್ಕೆ ನಿಷೇಧ ಬರುವಕಾರಣ ಆರನೇ ಅಧ್ಯಾಯದ ಆಮಂತ್ರಿತೋದಾತ್ತವೇ ಬರುವುದು ವೃಕ್ತಂ= ಮೂಲೈರ್ವರ್ಜಿತಂ, ಬರ್ಹಿಃ ಆಸ್ತೀರ್ಣಂ ಯೇಷಾಂ ಸೋಮಾನಾಂ ತೇ ಎಂದರೆ ಯಾವ ಸೋಮಗಳಿಗಾಗಿ ಕತ್ತರಿಸಲ್ಪಟ್ಟ ಬುಡವುಳ್ಳ ದರ್ಭೆಯು ಹರಡಲ್ಪಟ್ಟಿರುವುದೋ, ಆ ಸೋಮಗಳಿಗೆ ವೃಕ್ತಬರ್ಹಿಷಃ ಎನ್ನುವರು. ಇದು ಬಹುವ್ರೀಹಿಯಾದ್ದರಿಂದ 'ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ' (ಪಾ ಸೂ. ೬-೨-೧) ಎಂದು ವೃಕ್ತಪದಕ್ಕೆ ಪೂರ್ವಪದಪ್ರಕೃತಿಸ್ವರಬರಲು ಕ್ತ ಪ್ರತ್ಯಯಸ್ವರವೇ ನಿಲ್ಲುವುದು. ಆ ಎಂಬಲ್ಲಿ ' ಉಪಸರ್ಗಾಶ್ಚಾಭಿವರ್ಜಂ ' (ಫಿ. ಸೂ. ೮೧) ಅಭಿ ಎಂಬುದನ್ನು ಳಿದು ಬಾಕಿ ಉಪಸರ್ಗಗಳು ಉದಾತ್ತವಾಗುವುವು ಎಂಬುದರಿಂದ ಉದಾತ್ತವು ಬರುವುದು. ರುದ್ರವರ್ತನೀ ಇಲ್ಲಿ ' ಆಮಂತ್ರಿತಸ್ಯ ಚ ' (ಪಾ. ಸೂ. ೮-೧-೧೯) ಎಂಬುದರಿಂದ ಆಮಂತ್ರಿತಾನುದಾತ್ತಬರುವುದು ॥ ೩ ॥

॥ ಸಂಹಿತಾಪಾಠಃ ॥

ಇಂದ್ರಾ ಯಾಹಿ ಚಿತ್ರಭಾನೋ ಸುತಾ ಇಮೇ ತ್ವಾಯವಃ ।
ಅಣ್ವೀಭಿಸ್ತನಾ ಪೂತಾಸಃ ॥ ೪ ॥

॥ ಪದಪಾಠಃ ॥

ಇಂದ್ರ । ಆ । ಯಾಹಿ । ಚಿತ್ರಭಾನೋ ಇತಿ ಚಿತ್ರಽಭಾನೋ । ಸುತಾಃ ।
ಇಮೇ । ತ್ವಾಽಯವಃ ॥
ಅಣ್ವೀಭಿಃ । ತನಾ । ಪೂತಾಸಃ ॥ ೪ ॥

॥ ಸಾಯಣಭಾಷ್ಯಂ ॥

ಚಿತ್ರಭಾನೋ ಚಿತ್ರದೀಪ್ತೇ ಹೇ ಇಂದ್ರಾಸ್ಮಿನ್ಕರ್ಮಣ್ಯಾ ಯಾಹಿ । ಆಗಚ್ಛ । ಸುತಾ ಅಭಿಷುತಾ ಇಮೇ ಸೋಮಾಸ್ತ್ವಾಯವಸ್ತ್ವಾಂ ಕಾಮಯಮಾನಾ ವರ್ತಂತೇ । ಅಣ್ವೀಭಿಃ । ಅಗ್ರುವ ಇತ್ಯಾದಿಷು ದ್ವಾವಿಂಶತಿಸಂಖ್ಯಾಕೇಷ್ವಂಗುಲಿನಾಮಸ್ವಣ್ವ್ಯ ಇತಿ ಪಠಿತಂ । ಋತ್ವಿಜಾಮಂಗುಲಿಭಿಃ ಸುತಾ ಇತ್ಯನ್ವಯಃ। ಕಿಂಚ। ಏತೇ ಸೋಮಾಸ್ತನಾ ನಿತ್ಯಂ ಪೂತಾಸಃ ಪೂತಾ ಶುದ್ಧಾ ದಶಾಪವಿತ್ರೇಣ ಬಹುಧಾ ಶೋಧಿತತ್ವಾತ್ । ಇಂದ್ರಶಬ್ದಂ ಯಾಸ್ಕೋ ಬಹುಧಾ ನಿರ್ವಕ್ತಿ । ಇಂದ್ರ ಇರಾಂ ದೃಣಾತೀತಿ ವೇರಾಂ ದದಾತೀತಿ ವೇರಾಂ ದಧಾತೀತಿ ವೇರಾಂ ದಾರಯತೀತಿ ವೇರಾಂ ಧಾರಯತೀತಿ ವೇಂದವೇ ದ್ರವತೀತಿ ವೇಂದೌ ರಮತ ಇತಿ ವೇಂದ್ಧೇ ಭೂತಾನೀತಿ ವಾ ತದ್ಯದೇನಂ ಪ್ರಾಣೈಃ ಸಮೈಂಧಂಸ್ತದಿಂದ್ರಸ್ಯೇಂದ್ರತ್ವಮಿತಿ ವಿಜ್ಞಾಯತ ಇದಂಕರಣಾದಿತ್ಯಾಗ್ರಾಯಣ ಇದಂ ದರ್ಶನಾದಿತ್ಯೌಪಮನ್ಯವ ಇದಂತೇರ್ವೈಶ್ವರ್ಯಕರ್ಮಣ ಇನ್ಛತ್ರೂಣಾಂ ದಾರಯಿತಾ ವಾ ದ್ರಾವಯಿತಾ ವಾದರಯಿತಾ ಚ ಯಜ್ವನಾಂ । ನಿ. ೧೦-೮ । ಇತಿ । ಅಸ್ಯಾಯಮರ್ಥಃ । ದೃ ವಿದಾರಣ ಇತಿ ಧಾತುಃ । ಇರಾಮನ್ನಮುದ್ದಿಶ್ಯ ತನ್ನಿಷ್ಪಾದಕಜಲಸಿದ್ಧ್ಯರ್ಥಂ ದೃಣಾತಿ ಮೇಘಂ ವಿದೀರ್ಣಂ ಕರೋತೀತೀಂದ್ರಃ । ಡುದಾಞ್ ದಾನ ಇತಿ ಧಾತುಃ - ಇರಾಮನ್ನಂ ವೃಷ್ಟಿನಿಷ್ಪಾದನೇನ ದದಾತೀತೀಂದ್ರಃ ಧಾಞ್ ಪೋಷಣಾರ್ಥಃ । ಇರಾಮನ್ನಂ ತೃಪ್ತಿಕಾರಣಂ ಸಸ್ಯಂ ದಧಾತಿ ಜಲಪ್ರದಾನೇನ ಪುಷ್ಣಾತೀತೀಂದ್ರಃ । ಇರಾಮುತ್ಪಾದಯಿತುಂ ಕರ್ಷಕಮುಖೇನ ಭೂಮಿಂ ವಿದಾರಯತೀತೀಂದ್ರಃ । ಪೂರ್ವೋಕ್ತಪೋಷಣಮುಖೇನೇರಾಂ ಧಾರಯತಿ ವಿನಾಶರಾಹಿತ್ಯೇನ ಸ್ಥಾಪಯತೀತೀಂದ್ರಃ । ಇಂದುಃ ಸೋಮೋ ವಲ್ಲೀರಸಃ । ತದರ್ಥಂ ಯಾಗಭೂಮೌ ದ್ರವತಿ ಧಾವತೀತೀಂದ್ರಃ । ಇಂದೌ ಯಥೋಕ್ತೇ ಸೋಮೇ ರಮತೇ ಕ್ರೀಡತೀತೀಂದ್ರಃ ಞಿಇಂಧೀ ದೀಪ್ತಾವಿತಿ ಧಾತುಃ । ಭೂತಾನಿ ಪ್ರಾಣಿದೇಹಾನಿಂದ್ಧೇ ಜೀವಚೈತನ್ಯರೂಪೇಣಾಂತಃ ಪ್ರವಿಶ್ಯ ದೀಪಯತೀತೀಂದ್ರಃ । ಏತದೇವಾಭಿಪ್ರೇತ್ಯ ವಾಜಸನೇಯಿನ ಆಮನಂತಿ । ಇಂಧೋ ಹ ವೈ ನಾಮೈಷ ಯೋऽಯಂ ದಕ್ಷಿಣೇऽಕ್ಷನ್ಪುರುಷಃ । ತಂ ವಾ ಏತಮಿಂಧಂ ಸಂತಮಿಂದ್ರ ಇತ್ಯಾಚಕ್ಷತೇ । ಪರೋಕ್ಷೇಣ ಪರೋಕ್ಷಪ್ರಿಯಾ। ಇವ ಹಿ ದೇವಾಃ ಪ್ರತ್ಯಕ್ಷದ್ವಿಷಃ ಶತ. ಬ್ರಾ. ೧೪-೬-೧೧-೨ । ಇತಿ । ತದ್ಯದಿತ್ಯಾದಿಕಂ ಬ್ರಾಹ್ಮಣಾಂತರವಾಕ್ಯಂ । ತತ್ರತ್ರೇಂದ್ರವಿಷಯೋ ನಿರ್ವಚನಮುಚ್ಯತ ಇತಿ ಶೇಷಃ । ಯದ್ಯಸ್ಮಾತ್ಸಾಕ್ಷಾತ್ಕಾರಣಾದೇನಂ ಪರಮಾತ್ಮರೂಪಮಿಂದ್ರಂ ದೇವಂ ಪ್ರಾಣೈರ್ವಾಕ್ಚಕ್ಷುರಾದೀಂದ್ರಿಯೈಃ ಪ್ರಾಣಾಪಾನಾದಿವಾಯುಭಿಶ್ಚ ಸಹಿತಂ ಸಮೈಂಧನ್ನುಪಾಸಕಾ ಧ್ಯಾನೇನ ಸಮ್ಯಕ್ ಪ್ರಕಾಶಿತವಂತಸ್ತತ್ತಸ್ಮಾತ್ಸಾಕ್ಷಾತ್ಕಾರಣಾದಿಂದ್ರನಾಮ ಸಂಪನ್ನಂ - ಅಸ್ಮಿನ್ಪಕ್ಷ ಇಧ್ಯತೇ ದೀಪ್ಯತ ಇತಿ ಕರ್ಮಣಿ ವ್ಯುತ್ಪತ್ತಿಃ । ಆಗ್ರಾಯಣನಾಮಕೋ ಮುನಿರಿದಂಕರಣಾದಿಂದ್ರ ಇತಿ ನಿರ್ವಚನಂ ಮನ್ಯತೇ । ಇಂದ್ರೋ ಹಿ ಪರಮಾತ್ಮರೂಪೇಣೇದಂ ಜಗತ್ಕರೋತಿ । ಔಪ। ಮನ್ಯವನಾಮಕೋ ಮುನಿರಿದಂದರ್ಶನಾದಿಂದ್ರ ಇತಿ ನಿರ್ವಚನಮಾಹ। ಇದಮಿತ್ಯಾಪರೋಕ್ಷ್ಯಮುಚ್ಯತೇ। ವಿವೇಕೇನ ಹಿ ಪರಮಾತ್ಮಾನಮಾಪರೋಕ್ಷ್ಯೇಣ ಪಶ್ಯತಿ । ಏತದೇವಾಭಿಪ್ರೇತ್ಯಾರಣ್ಯಕಾಂಡೇ ಸಮಾಮ್ನಾಯತೇ ಸ ಏತಮೇವ ಪುರುಷಂ ಬ್ರಹ್ಮ ತತಮಮಪಶ್ಯದಿದಮದರ್ಶಮಿತೀ೩ । ತಸ್ಮಾದಿದಂದ್ರೋ ನಾಮೇದಂದ್ರೋ ಹ ವೈ ನಾಮ ತಮಿದಂದ್ರಂ ಸಂತಮಿಂದ್ರ ಇತ್ಯಾಚಕ್ಷತೇ ಪರೋಕ್ಷೇಣ ಪರೋಕ್ಷಪ್ರಿಯಾ ಇವ ಹಿ ದೇವಾಃ ಐ. ಆ. ೨-೪-೩ । ಇತಿ । ಇದಿ ಪರಮೈಶ್ವರ್ಯ ಇತಿ ಧಾತುಃ । ಸ್ವಮಾಯಯಾ ಜಗದ್ರೂಪತ್ವಂ ಪರಮೈಶ್ವರ್ಯಂ । ತದ್ಯೋಗಾದಿಂದ್ರಃ । ಅನೇನಾಭಿಪ್ರಾಯೇಣ ಶ್ರೂಯತೇ । ಇಂದ್ರೋ

ಮಾಯಾಭಿಃ ಪುರುರೂಪ ಈಯತೇ ಋಗ್ವೇ. ೬-೪೭-೧೮ | ಇತಿ ಇನಶಬ್ದಸ್ಯೇಶ್ವರವಾಚಕಸ್ಯಾಕಾರಲೋಪೇ ಸತಿ ನಕಾರಾಂತಮಿನ್ನಿತಿ ಪದಂ ಭವತಿ | ದ್ರಾ ಭಯೆ ಇತಿ ಧಾತುಃ | ಸ ಚ ಪರಮೇಶ್ವರಃ ಶತ್ರೂಣಾಂ ದಾರಯಿತ್ವಾ ಭೀಷಯಿತೇತೀಂದ್ರಃ | ದ್ರುಗತಾವಿತಿ ಧಾತುಃ | ಶತ್ರೂಣಾಂ ದ್ರಾವಯಿತ್ವಾ ಪಲಾಯನಂ ಪ್ರಾಪಯಿತೇತೀಂದ್ರಃ | ಯಜ್ವನಾಂ ಯಾಗಾನುಷ್ಠಾಯಿನಾಮಾದರಯಿತಾ ಭಯಸ್ಯ ಪರಿಹರ್ತಾ | ಏವಮೇತಾನಿ ನಿರ್ವಚನಾನಿ ದ್ರಷ್ಟವ್ಯಾನೀತಿ | ಇಂದ್ರೇತ್ಯತ್ರಾಮಂತ್ರಿತಾದ್ಯುದಾತ್ತತ್ವಂ | ಆ ಇತ್ಯತ್ರ ನಿಪಾತತ್ವೇನಾದ್ಯುದಾತ್ತಃ | ಚಿತ್ರಭಾನೋ | ಪದಾತ್ಪರತ್ವಾದಾಮಂತ್ರಿತನಿಘಾತಃ | ತ್ವಾಮಿಚ್ಛಂತೀತ್ಯರ್ಥೇ ಯುಷ್ಮಚ್ಛಬ್ದಾತ್ಸುಪ ಆತ್ಮನಃ ಕ್ಯಚ್ | ಪಾ. ಸೂ. ೩-೧-೮ | ಪ್ರತ್ಯಯೋತ್ತರಪದಯೋಶ್ಚ | ಪಾ. ೭-೨-೯೮| ಇತಿ ಮಪರ್ಯಂತಸ್ಯ ತ್ವಾದೇಶಃ| ಕ್ಯಾಚ್ಛಂದಸಿ| ಪಾ. ೩-೨-೧೭೦ | ಇತಿ ಕ್ಯಜಂತಾದುಪ್ರತ್ಯಯಃ ತ್ವತ್ಯ ಇತಿ ಪ್ರಾಪ್ತೌ ಯುಷ್ಮದಸ್ಮದೋರನಾದೇಶೇ ಪಾ.೭-೨-೮೬| ಇತ್ಯವಿಭಕ್ತಾವಪಿ ಹಲಾದೌ ವ್ಯತ್ಯಯೇನಾತ್ವಂ| ಉಕಾರಃ ಪ್ರತ್ಯಯಸ್ವರೇಣಾದ್ಯುದಾತ್ತಃ| ಅಣುಶಬ್ದಃ ಸೌಕ್ಷ್ಮ್ಯವಾಚಕಸ್ತದ್ಯೋಗಾತ್ಸೂಕ್ಷ್ಮೇಷ್ವಂಗುಲೀಷು ವರ್ತತೇ | ವೋತೋ ಗುಣವಚನಾತ್ | ಪಾ. ೪-೧-೪೪ || ಇತಿ ಙೀಷಿ ಪ್ರಾಪ್ತೇ ವ್ಯತ್ಯಯೇನ ಙೀನ್ | ನಿತ್ವಾದಾದ್ಯುದಾತ್ತಃ| ತನಾ ಇತ್ಯಯಂ ನಿಪಾತೋ ನಿತ್ಯಮಿತ್ಯರ್ಥೇ ನಿಪಾತತ್ವಾದಾದ್ಯುದಾತ್ತಃ| ಪೂತಾಸಃ | ಆಜ್ಜಸೇರಸುಕ್ | ಪಾ. ೭-೧-೫೦ | ಇತ್ಯಸುಕ್ ||

|| ಪ್ರತಿಪದಾರ್ಥ ||

**ಚಿತ್ರಭಾನೋ**—ಆಶ್ಚರ್ಯಕರವಾದ ಪ್ರಕಾಶದಿಂದ ಬೆಳಗುವ ಎಲೈ ಇಂದ್ರನೇ | **ಆ ಯಾಹಿ**—(ನಾವು ಮಾಡುತ್ತಿರುವ ಈ ಯಜ್ಞವೇದಿಕೆಗೆ) ಬಾ | **ತ್ವಾಯವಃ**—ನೀನು ಅಪೇಕ್ಷಿಸುವ (ಅಥವಾ ನಿನಗೆ ಇಷ್ಟವಾದ) | **ಇಮೇ ಸುತಾಃ**—(ಸೋಮಲತೆಯನ್ನು ಜಜ್ಜಿ ತೆಗೆದ) ಈ ಸೋಮರಸಗಳು | **ಅಣ್ವೀಭಿಃ**—(ಋತ್ವಿಕ್ಕುಗಳ) ಬೆರಳುಗಳಿಂದ (ಅಥವಾ ದಶಾಪವಿತ್ರವೆಂಬ ಸೋಮರಸವನ್ನು ಶೋಧಿಸುವ ಬಟ್ಟೆಯಿಂದ) **ತನಾ**—ಯಾವಾಗಲೂ | **ಪೂತಾಸಃ**—ಶೋಧಿಸಲ್ಪಟ್ಟು ಪಾನಯೋಗ್ಯವಾಗಿವೆ.

|| ಭಾವಾರ್ಥ ||

ಎಲೈ ಇಂದ್ರನೇ ನೀನು ವಿಚಿತ್ರವಾದ ಕಾಂತಿಯಿಂದ ಬೆಳಗುವವನು ; ನಿನಗೆ ಇಷ್ಟವಾದ (ಅಥವಾ ನಿನಗೋಸ್ಕರವಾಗಿ) ಸೋಮರಸವನ್ನು ಋತ್ವಿಕ್ಕುಗಳು ಬೆರಳುಗಳಿಂದ (ಅಥವಾ ಜಾಲರಿಯಂತಿರುವ ಬಟ್ಟೆಯಿಂದ) ಚೆನ್ನಾಗಿ ಶೋಧಿಸಿ ಪಾನಯೋಗ್ಯವಾಗುವಂತೆ ಸಿದ್ಧಪಡಿಸಿರುವರು. ಆ ಸೋಮರಸವನ್ನು ಪಾನಮಾಡುವುದಕ್ಕಾಗಿ ಈ ನಮ್ಮ ಯಜ್ಞವೇದಿಕೆಗೆ ಬರುವವನಾಗು.

## English Translation.

Come hither, O Indra, of wonderful splendour ; these libations of soma juice, ever pure, expressed by the fingers of the priests are deserious of you.

|| ವಿಶೇಷವಿಷಯಗಳು ||

ಈ ಋಕ್ಕೂ ಮುಂದಿನ ಎರಡು ಋಕ್ಕುಗಳೂ ಐಂದ್ರಸ್ತೃಚಃ ಎಂದರೆ ಇಂದ್ರನ ಸಂಬಂಧವಾದ ತೃಚವು, ಇಂದ್ರನನ್ನು ಸ್ತೋತ್ರಮಾಡುವ ಮೂರು ಮಂತ್ರಗಳು.

**ಇಂದ್ರ**—ಭಾಷ್ಯಕಾರರು ಇಂದ್ರಶಬ್ದದ ನಿಷ್ಪತ್ತಿಯನ್ನು ವಿವರಿಸುವಾಗ ಯಾಸ್ಕರು ಹೇಳಿರುವ ನಿರುಕ್ತ ವನ್ನೇ ಉದಹರಿಸಿದಾರೆ—“ **ಇಂದ್ರ ಇರಾಂ ದೃಣಾತೀತಿ ವೇರಾಂ ದದಾತೀತಿ ವೇರಾಂ ದಧಾತೀತಿ ವೇರಾಂ ದಾರಯತೀತಿ ವೇರಾಂ ಧಾರಯತೀತಿ ವೇಂದವೇ ದ್ರವತೀತಿ ವೇಂದೌ ರಮತ ಇತಿ ವೇಂಧೇ ಭೂತಾನೀತಿ ವಾ ತದ್ಯದೇನಂ ಪ್ರಾಣೈಃ ಸಮೈಂಧಂಸ್ತದಿಂದ್ರಸ್ಯೇಂದ್ರತ್ವಮಿತಿ ವಿಜ್ಞಾಯತ ಇದಂಕರಣಾದಿತ್ಯಾಗ್ರಾ- ಯಣ ಇದಂದರ್ಶನಾದಿತ್ಯೌಪಮನ್ಯವ ಇಂದತೇರ್ವೈಶ್ವರ್ಯಕರ್ಮಣ ಇಞ್ಛತ್ರೂಣಾಂ ದಾರಯಿತಾ ವಾ ದ್ರಾವಯಿತಾ ವಾದರಯಿತಾ ಚ ಯಜ್ವನಾಂ** | ಇತಿ | ನಿ. ೧೦-೮ ||” ಇದರ ಅರ್ಥಾನುವಾದವನ್ನು ಅವರೇ ಮಾಡಿದಾರೆ.

(1) **ದೃ ವಿದಾರಣ ಇತಿ ಧಾತುಃ | ಇರಾಮನ್ನಮುದ್ದಿಶ್ಯ ತನ್ನಿಷ್ಪಾದಕಜಲಸಿಧ್ಯರ್ಥಂ ದೃಣಾತಿ ಮೇಘಂ ವಿದೀರ್ಣಂ ಕರೋತೀತೀಂದ್ರಃ**—ದೃ ಎಂಬ ಧಾತುವಿಗೆ ಸೀಳು ವುದು, ಕತ್ತರಿಸುವುದು ಎಂದರ್ಥವು. ಇರಾ ಎಂದರೆ ಅನ್ನವು (ಆಹಾರವು) ಓಷಧಿವನ ಸ್ಪತಿಗಳಿಂದ ಎಂದರೆ ಸಸ್ಯವರ್ಗದಿಂದ ನಮಗೆ ಲಭಿಸುವುದು. ಆ ಸಸ್ಯವರ್ಗವು ಬೆಳೆಯ ಬೇಕಾದರೆ ಜಲವು ಅವಶ್ಯಕವು. ಆ ಜಲಕ್ಕಾಗಿ ಎಂದರೆ ಮಳೆ ಹುಯ್ಯುವುದಕ್ಕಾಗಿ ಮೇಘವನ್ನು (ವಿದ್ಯುತ್, ವಜ್ರಾಯುಧದಿಂದ) ಕತ್ತರಿಸುವವನಾದ ಕಾರಣ **ಇಂದ್ರ**ನೆಂಬ ಹೆಸರಾಯಿತು.

(2) **ಡುದಾಞ್ ದಾನ ಇತಿ ಧಾತುಃ | ಇರಾಮನ್ನಂ ವೃಷ್ಟಿನಿಷ್ಪಾದನೇನ ದದಾತೀತೀಂದ್ರಃ ||** ದಾ ಎಂಬ ಧಾತುವಿಗೆ ಕೊಡುವುದು ಎಂದರ್ಥವು. ಇರಾಂ ಎಂದರೆ ಅನ್ನವನ್ನು ವೃಷ್ಟಿ (ಮಳೆಯ) ಮೂಲಕ ಕೊಡುವವನಾದುದರಿಂದ ಇಂದ್ರನೆಂದು ಹೆಸರು.

(3) **ಧಾಞ್ ಪೋಷಣಾರ್ಥಃ | ಇರಾಮನ್ನಂ ತೃಪ್ತಿಕಾರಣಂ ಸಸ್ಯಂ ದಧಾತಿ ಜಲಪ್ರದಾ- ನೇನ ಪುಷ್ಣಾತೀತೀಂದ್ರಃ ||** ಧಾ ಎಂಬ ಧಾತುವಿಗೆ ಪೋಷಣೆಮಾಡುವುದು ಎಂದರ್ಥವು. ಅನ್ನವನ್ನು ಕೊಡುವ ಸಸ್ಯಾದಿಗಳನ್ನು ಜಲಪ್ರದಾನದಿಂದ (ಮಳೆಯಿಂದ) ಪೋಷಿಸುವವ ನಾದ ಕಾರಣ ಇಂದ್ರನೆಂದು ಹೆಸರು.

(4) **ಇರಾಮುತ್ಪಾದಯಿತುಂ ಕರ್ಷಕಮುಖೇನ ಭೂಮಿಂ ವಿದಾರಯತೀತೀಂದ್ರಃ |** ಆಹಾ ರೋತ್ಪಾದನೆಗಾಗಿ ಭೂಮಿಯನ್ನು ಉಳಬೇಕಷ್ಟೆ. ಭೂಮಿಯನ್ನು ಉಳುವಾಗ ಅದನ್ನು ನೇಗಲಿನಿಂದ ಸೀಳುವಂತೆ ಮಾಡಿ ಬೆಳೆಗೆ ಅನುಕೂಲಪಡಿಸುವವನಾದುದರಿಂದ ಇಂದ್ರ ನೆಂದು ಹೆಸರು.

(5) **ಪೂರ್ವೋಕ್ತಪೋಷಣಮುಖೇನೇರಾಂ ಧಾರಯತಿ ವಿನಾಶರಾಹಿತ್ಯೇನ ಸ್ಥಾಪಯತೀ- ತೀಂದ್ರಃ |** ಹಿಂದೆ ಹೇಳಿದಂತೆ ಸಸ್ಯಾದಿಗಳನ್ನು ಪೋಷಣೆಮಾಡಿ ಅವುಗಳು ನಾಶವಾಗ ದಂತೆ ಸಂರಕ್ಷಿಸತಕ್ಕವನಾದುದರಿಂದ ಇಂದ್ರನೆಂದು ಹೆಸರು.

(6) **ಇಂದುಃ ಸೋಮೋ ವಲ್ಲೀರಸಃ | ತದರ್ಥಂ ಯಾಗಭೂಮೌ ದ್ರವತಿ ಧಾವತೀತೀಂದ್ರಃ |** **ಇಂದುವೆಂದರೆ ಸೋಮಲತೆಯಿಂದ ಸಿದ್ಧಪಡಿಸಿದ ಸೋಮರಸವು. ಯಜ್ಞಭೂಮಿ**

ಯಲ್ಲಿ ಇಂತಹ ಸೋಮಪಾನಾರ್ಥವಾಗಿ ಧಾವಿಸಿ (ಬೇಗನೆ ಓಡಿ) ಬರುವವನಾದುದರಿಂದ ಇಂದ್ರನೆಂದು ಹೆಸರು.

(7) ಇಂದೌ ಯಥೋಕ್ತೇ ಸೋಮೇ ರಮತೇ ಕ್ರೀಡತೀತೀಂದ್ರಃ । ಹಿಂದೆ ಹೇಳಿದ ಸೋಮರಸದಿಂದ ತೃಪ್ತನಾಗಿ ವಿಹರಿಸುವವನಾದುದರಿಂದ ಇಂದ್ರನೆಂದು ಹೆಸರು.

(8) ಞಿಇಂಧೀ ದೀಪ್ತಾವಿತಿ ಧಾತುಃ । ಭೂತಾನಿ ಪ್ರಾಣಿದೇಹಾನಿಂಧೇ ಜೀವಚೈತನ್ಯರೂಪೇಣಾಂತಃಪ್ರವಿಶ್ಯ ದೀಪಯತೀತೀಂದ್ರಃ ॥ ಇಂಧ್ ಧಾತುವಿಗೆ, ಬೆಳಗುವುದು, ಪ್ರಕಾಶಿಸುವುದು ಎಂದರ್ಥ. ಪ್ರಾಣಿಗಳ ಶರೀರಗಳಲ್ಲಿ ಚೈತನ್ಯರೂಪದಿಂದ ಪ್ರವೇಶಿಸಿ ಅವುಗಳು ತಮ್ಮ ತಮ್ಮ ಕೃತ್ಯಗಳನ್ನು ಮಾಡುವಂತೆ ಪ್ರೇರಿಸುತ್ತಾ ಬೆಳಗುತ್ತಿರುವವನಾದುದರಿಂದ ಇಂದ್ರನೆಂದು ಹೆಸರು.

(9) ಯದ್ವೈಸ್ಸಾಕ್ಷಾತ್ಕಾರಣಾದೇನಂ ಪರಮಾತ್ಮರೂಪಮಿಂದ್ರಂ ದೇವಂ ಪ್ರಾಕ್ಶ್ವೈರ್ವಾಕ್‌ಚಕ್ಷುರಾದೀಂದ್ರಿಯೈಃ ಪ್ರಾಣಾಪಾನಾದಿವಾಯುಭಿಶ್ಚ ಸಹಿತಂ ಸಮ್ಯೈಂಧನ್ನುಪಾಸಕಾ ಧ್ಯಾನೇನ ಸಮ್ಯಕ್ಪ್ರಕಾಶಿತವಂತಸ್ತತ್ಸಾಕ್ಷಾತ್ಕಾರಣಾದಿಂದ್ರನಾಮ ಸಂಪನ್ನಂ । ಪರಮಾತ್ಮರೂಪನಾದ ಈ ದೇವನನ್ನು ಉಪಾಸಕರು ವಾಕ್‌ಚಕ್ಷುರಾದೀಂದ್ರಿಯಗಳಿಂದಲೂ ಪ್ರಾಣಾಪಾನಾದಿ ವಾಯುಗಳಿಂದಲೂ ಸೇರಿಸಿ ಧ್ಯಾನದಿಂದ ಚೆನ್ನಾಗಿ ಪ್ರಕಾಶಿಸುತ್ತಿರುವಂತೆ ಭಾವಿಸುವುರಾದ್ದರಿಂದ ಇಂದ್ರನೆಂಬ ಹೆಸರಾಯಿತು.

(10) ಆಗ್ರಾಯಣನಾಮಕೋ ಮುನಿರಿದಂಕರಣಾದಿಂದ್ರ ಇತಿ ನಿರ್ವಚನಂ ಮನ್ಯತೇ । ಇಂದ್ರೋ ಹಿ ಪರಮಾತ್ಮರೂಪೇಣೇದಂ ಜಗತ್ಕರೋತಿ—ಇದಂಕರಣ ಎಂದರೆ ಪರಮಾತ್ಮರೂಪದಿಂದ ಇಂದ್ರನು ಈ ಜಗತ್ತನ್ನು ನಿರ್ಮಾಣಮಾಡುವುದರಿಂದ (ಸೃಷ್ಟಿಸುವುದರಿಂದ) ಈ ದೇವನಿಗೆ ಇಂದ್ರನೆಂದು ಹೆಸರು ಬಂದಿತು ಎಂದು ಆಗ್ರಾಯಣನೆಂಬ ಮುನಿಯು ಹೇಳುವನು.

(11) ಔಪಮನ್ಯವನಾಮಕೋ ಮುನಿರಿದಂದರ್ಶನಾದಿಂದ್ರ ಇತಿ ನಿರ್ವಚನಮಾಹ । ಇದಮಿತ್ಯಾಪರೋಕ್ಷ್ಯಮುಚ್ಯತೇ । ಔಪಮನ್ಯವನೆಂಬ ಮುನಿಯು, ಇದನ್ನು ಎಂದರೆ ಎಲ್ಲವನ್ನೂ ನೋಡುವವನಾದುದರಿಂದ ಇಂದ್ರನೆಂದು ಹೆಸರಾಯಿತು ಎಂದು ಹೇಳುವನು. ಇಲ್ಲಿ ಇದಂ ಎಂದರೆ ಅಪರೋಕ್ಷ್ಯ, ಕಣ್ಣಿಗೆ ಪ್ರತ್ಯಕ್ಷವಾಗಿ ಗೋಚರಿಸದಿರುವುದು. ಆದುದರಿಂದಲೇ "ಪರೋಕ್ಷಪ್ರಿಯಾ ಇವ ಹಿ ದೇವಾಃ" ಎಂದು ಶ್ರುತಿಯು ಹೇಳುತ್ತಿರುವುದು.

(12) ಇದಿ ಪರಮೈಶ್ವರ್ಯೇ ಇತಿ ಧಾತುಃ । ಸ್ವಮಾಯಯಾ ಜಗದ್ರೂಪತ್ವಂ ಪರಮೈಶ್ವರ್ಯಂ । ತದ್ಯೋಗಾದಿಂದ್ರಃ । ಇದಿ ಧಾತುವಿಗೆ ಪರಮೈಶ್ವರ್ಯವೆಂಬ ಅರ್ಥವಿರುವುದು. ಈ ದೇವನಿಗೆ ತನ್ನ ಮಾಯೆಯಿಂದ ಜಗದ್ರೂಪತ್ವವೆಂಬ ಪರಮೈಶ್ವರ್ಯವಿರು

ವುದರಿಂದ ಇಂದ್ರನೆಂಬ ಹೆಸರಾಯಿತು. ಈ ಅಭಿಪ್ರಾಯವನ್ನು "ಇಂದ್ರೋ ಮಾಯಾಭಿಃ ಪುರುರೂಪ ಈಯತೇ'' (ಋ. ಸಂ. ೬-೪೭-೧೮) ಎಂಬ ವೇದವಾಕ್ಯವು ಸಮರ್ಥಿಸುವುದು.

(13) ಇನಶಬ್ದಸ್ಯೇಶ್ವರವಾಚಕಸ್ಯಾಕಾರಲೋಪೇ ಸತಿ ನಕಾರಾಂತಮಿನ್ನಿತಿ ಪದಂ ಭವತಿ| ದ್ರಾ ಭಯೇ ಇತಿ ಧಾತುಃ | ಸ ಚ ಪರಮೇಶ್ವರಃ ಶತ್ರೂಣಾಂ ದಾರಯಿತಾ ಭೀಷಯಿತೇತೀಂದ್ರಃ || ಇನಶಬ್ದವು ಈಶ್ವರವಾಚಕವು. ಈ ಇನ ಶಬ್ದದ ನಕಾರದಮೇಲಿರುವ ಅಕಾರವು ಲೋಪವಾದರೆ ಇನ್ ಎಂಬ ಪದವು ನಿಲ್ಲುವುದು. ದ್ರಾ ಎಂಬ ಧಾತುವಿಗೆ ಭಯವೆಂದರ್ಥವು. ಪರಮೇಶ್ವರನಾದ ಆ ದೇವನು ಶತ್ರುಗಳಿಗೆ ಭಯವನ್ನುಂಟುಮಾಡುವವನಾದ್ದರಿಂದ ಅವನಿಗೆ ಇಂದ್ರ ನೆಂಬ ಹೆಸರು.

(14) ದ್ರು ಗತಾವಿತಿ ಧಾತುಃ | ಶತ್ರೂಣಾಂ ದ್ರಾವಯಿತಾ ಪಲಾಯನಂ ಪ್ರಾಪಯಿತೇತೀಂದ್ರಃ || ದ್ರು ಎಂಬ ಧಾತುವಿಗೆ ಗತ್ಯರ್ಥ ಎಂದರೆ ಹೋಗು, ಓಡಿಹೋಗು ಎಂದರ್ಥವು. ಈ ದೇವನು ಶತ್ರುಗಳನ್ನು ಓಡಿಹೋಗುವಂತೆ ಮಾಡುವವನಾದ್ದರಿಂದ ಇವನಿಗೆ ಇಂದ್ರನೆಂದು ಹೆಸರು.

(15) ಯಜ್ವನಾಂ ಯಾಗಾನುಷ್ಠಾಯಿನಾಮಾದರಯಿತಾ ಭಯಸ್ಯ ಪರಿಹರ್ತಾ—ತನ್ನನ್ನು ಯಾಗಾದಿಗಳಿಂದ ಆರಾಧಿಸುವವರನ್ನು ಆದರಿಸಿ ಅವರ ಭಯವನ್ನು ಪರಿಹಾರಮಾಡುವವನಾದುದರಿಂದ ಈ ದೇವನಿಗೆ ಇಂದ್ರನೆಂದು ಹೆಸರು.

ಇದರಂತೆಯೇ ಇಂದ್ರಶಬ್ದಕ್ಕೆ ಅನೇಕ ನಿರ್ವಚನಗಳನ್ನು ಕಲ್ಪಿಸಬಹುದು.

ಚಿತ್ರಭಾನೋ—ಈ ಶಬ್ದಕ್ಕೆ ಭಾಷ್ಯಕಾರರೂ, ಸ್ಕಂದಸ್ವಾಮಿ, ವೆಂಕಟಮಾಧವ ಮತ್ತು ಪಾಶ್ಚಾತ್ಯ ಪಂಡಿತರೂ ಸಹ ವಿಚಿತ್ರವಾದ ಅಥವಾ ಆಶ್ಚರ್ಯಕರವಾದ ಕಾಂತಿಯಿಂದ ಬೆಳಗುವವನು ಎಂದೇ ಅರ್ಥಮಾಡಿದಾರೆ. ಪರಸ್ಪರ ವಿಶೇಷವಾಗಿ ಭಿನ್ನಾಭಿಪ್ರಾಯವಿಲ್ಲ. ಈ ಚಿತ್ರಭಾನುಶಬ್ದವು ಅಗ್ನಿ, ಇಂದ್ರ, ಸವಿತೃ, ಮರುತ್ ದೇವತೆಗಳನ್ನು ಉದ್ದೇಶಿಸಿ ಪ್ರಯೋಗಿಸಲ್ಪಟ್ಟಿದೆ. ಈ ಶಬ್ದವಿರುವ ಋಕ್ಕುಗಳನ್ನು ಕೆಳಗೆ ಕೊಟ್ಟಿದೆ—

ವಿಭಕ್ತಾಸಿ ಚಿತ್ರಭಾನೋ ಸಿಂಧೋರೂರ್ಮಾ ಉಪಾಕ ಆ | (ಋ. ಸಂ. ೧-೨೭-೬).

ತಂ ತ್ವಾ ಘೃತಸ್ನವೀಮಹೇ ಚಿತ್ರಭಾನೋ ಸ್ವರ್ದೃಶಂ | (ಋ. ಸಂ. ೫-೨೬-೨)

ತಂ ತ್ವಾ ಯಮೋ ಅಚಿಕೇಚ್ಚಿತ್ರಭಾನೋ ದಶಾಂತರುಷ್ಯಾದತಿರೋಚಮಾನಂ |
(ಋ. ಸಂ. ೧೦-೫೧-೩)

ಸಮನಂ ಚಿದದಹಶ್ಚಿತ್ರಭಾನೋಽವ ವ್ರಾಧಂತಮಭಿನದ್ವೃಧಶ್ಚಿತ್ | (ಋ.ಸಂ. ೧೦-೬೯-೧೧)

ತ್ರೀಯಾ ಅಗ್ನಿಶ್ಚಿತ್ರಭಾನುರ್ಹವಂ ಮೇ ವಿಶ್ವಾಭಿರ್ಗೀರ್ಭಿರಮೃತೋ ವಿಚೇತಾಃ |
(ಋ. ಸಂ. ೨-೧೦-೨)

ಚಿತ್ರಭಾನುರುಷಸಾಂ ಭಾತ್ಯಗ್ರೇಽಪಾಂ ಗರ್ಭಃ ಪ್ರಸ್ವ೧ ಆ ವಿವೇಶ | (ಋ. ಸಂ. ೭-೯-೩)

**ಚಿತ್ರಭಾನುಂ ರೋದಸೀ ಅಂತರುರ್ವೀ ಸ್ವಾಹುತಂ ವಿಶ್ವತಃ ಪ್ರತ್ಯಂಚಂ** | (ಋ. ಸಂ. ೭-೧೨-೧)

**ಮಂದ್ರಂ ಹೋತಾರಮೃತ್ವಿಜಂ ಚಿತ್ರಭಾನುಂ ವಿಭಾವಸುಂ** | (ಋ. ಸಂ. ೮-೪೪-೬)
ಈ ಋಕ್ಕುಗಳಲ್ಲಿ ಚಿತ್ರಭಾನುಶಬ್ದವು ಅಗ್ನಿಯನ್ನು ಪ್ರಶಂಸಿಸುವುದು.

**ಆಸ್ಥಾದ್ರಥಂ ಸವಿತಾ ಚಿತ್ರಭಾನುಃ ಕೃಷ್ಣಾ ರಜಾಂಸಿ ತವಿಷೀಂ ದಧಾನಃ** | (ಋ. ಸಂ. ೧-೩೫-೪)
ಇಲ್ಲಿ ಈ ಶಬ್ದವು ಸವಿತೃದೇವತೆಗೆ ವಿಶೇಷಣವಾಗಿದೆ.

**ಮಹಿಷಾಸೋ ಮಾಯಿನಶ್ಚಿತ್ರಭಾನವೋ ಗಿರಯೋ ನ ಸ್ವತವಸೋ ರಘುಷ್ಯದಃ** |
(ಋ. ಸಂ. ೧-೬೪-೭)

**ಆ ಗಚ್ಛಂತೀಮವಸಾ ಚಿತ್ರಭಾನವಃ ಕಾಮಂ ವಿಪ್ರಸ್ಯ ತರ್ಪಯಂತ ಧಾಮಭಿಃ** |
(ಋ. ಸಂ. ೧-೮೫-೧೧)

ಇಲ್ಲಿ ಚಿತ್ರಭಾನವಃ ಎಂಬ ಶಬ್ದವು ಮರುದ್ದೇವತೆಗಳ ಪರವಾಗಿದೆ.

**ಸುತಾಃ**—ಸುತಾಃ ಎಂಬ ಶಬ್ದಕ್ಕೆ ಹಿಂಡಿ ತೆಗೆದ ಎಂದರ್ಥವು. **ಸೋಮಾಃ**—ಸೋಮರಸಗಳು ಎಂಬುದನ್ನು ಅಧ್ಯಾಹಾರಮಾಡಿಕೊಳ್ಳಬೇಕು.

**ತ್ವಾಯವಃ**—ಈ ಶಬ್ದವು ಪ್ರಥಮಾವಿಭಕ್ತಿಯ ಬಹುವಚನವು, ಸುತಾಃ ಎಂಬ ಶಬ್ದಕ್ಕೆ ವಿಶೇಷಣವು. ಇಲ್ಲಿ ತ್ವಾ ಎಂದರೆ ಯುಷ್ಮತ್ ಎಂದರ್ಥವು.

**ಅಣ್ವೀಭಿಃ**—ಅಣ್ವೀಭಿಃ ಎಂಬ ಚತುರ್ಥೀಬಹುವಚನಾಂತಶಬ್ದವು ಈ ಋಕ್ಕಿನಲ್ಲಿಮಾತ್ರ ಉಪಯೋಗಿಸಲ್ಪಟ್ಟಿರುವುದು. ಅಂಗುಲಿ (ಬೆರಳು) ಎಂಬ ಅರ್ಥವನ್ನು ಸೂಚಿಸುವ ಇಪ್ಪತ್ತೆರಡು ಶಬ್ದಗಳ ಮಧ್ಯದಲ್ಲಿ ಅಣ್ವೀ ಶಬ್ದವು ಪಠಿತವಾಗಿದೆ (ನಿ. ೨-೫) ಭಾಷ್ಯಕಾರರೂ ಇತರರೂ ಸಹ ಈ ಶಬ್ದಕ್ಕೆ ಬೆರಳುಗಳೆಂದೇ ಅರ್ಥ ಮಾಡಿರುವರು ಈ ಶಬ್ದವು **ಅಣು** ಬಹಳ ಸಣ್ಣದು ಎಂಬ ಪದದಿಂದ ವ್ಯುತ್ಪತ್ತಿಯಿರುವುದರಿಂದ ಈ ಶಬ್ದಕ್ಕೆ ಬಹಳ ಸಣ್ಣರಂಧ್ರಗಳುಳ್ಳ ಜಾಲರಿಯು (ವಂದರಿಯು) ಅಥವಾ ಸೋಮವನ್ನು ಸೋಸುವುದಕ್ಕಾಗಿ ಉಪಯೋಗಿಸುವ ಒರಟುಬಟ್ಟೆಯು ಎಂದು ಕೆಲವರು ಅಭಿಪ್ರಾಯಪಡುವರು. ಸೋಮಲತೆಯನ್ನು ಕಲ್ಲುಗಳಿಂದ (ಗ್ರಾವಾಣ) ಜಜ್ಜಿದಮೇಲೆ ಅದನ್ನು ಹಿಂಡುವಾಗ ಬೆರಳುಗಳನ್ನು ಉಪಯೋಗಿಸಬೇಕಷ್ಟೆ. ಆದುದರಿಂದ **ಅಣ್ವೀಭಿಃ ಸುತಾಃ** ಎಂದರೆ ಬೆರಳುಗಳಿಂದ ಹಿಂಡಿ ತೆಗೆದ ರಸವು ಎಂದು ಹೇಳುವುದು ಸರಿಯಾಗಿರುವುದು. ಇದಲ್ಲದೆ **ಪೂತಾಸಃ** ಎಂಬ ಶಬ್ದವು ಶುದ್ಧಗೊಳಿಸಿರುವ ಎಂಬ ಅರ್ಥವನ್ನು ಹೇಳಿರುವುದರಿಂದ **ಅಣ್ವೀಭಿಃ ಪೂತಾಸಃ** ಬೆರಳುಗಳಿಂದ ಶೋಧಿಸಿದ ಎಂದು ಹೇಳುವುದಕ್ಕಿಂತ ಜಾಲರಿಯಂತಿರುವ ಬಟ್ಟೆಯಿಂದ ಶೋಧಿಸಿದ ಎಂದು ಹೇಳುವುದು ಸಮಂಜಸವಾಗಿರುವುದು. ಈ ಕಾರಣದಿಂದಲೇ ಕೆಲವರು ಅಣ್ವೀಭಿಃ ಎಂಬ ಶಬ್ದಕ್ಕೆ ಜಾಲರಿಯಂತಿರುವ ಬಟ್ಟೆಯಿಂದ ಎಂಬ ಅರ್ಥವನ್ನು ಅನುಮೋದಿಸುವರು. ಆದರೆ ಅಣ್ವೀ ಶಬ್ದವು ಅಂಗುಲಿವಾಚಕವೆಂದು ನಿರುಕ್ತದಲ್ಲಿ ಸ್ಪಷ್ಟವಾಗಿ ಹೇಳಿರುವುದರಿಂದ ಈ ಅರ್ಥವೇ ವಿಶೇಷವಾಗಿ ಪರಿಗ್ರಾಹ್ಯವು.

**ತನಾ**—ಈ ಶಬ್ದವನ್ನು ಅವ್ಯಯವೆಂದು ಭಾಷ್ಯಕಾರರು ಹೇಳಿ ಇದಕ್ಕೆ **ಯಾವಾಗಲೂ** ಎಂದರ್ಥ ಮಾಡಿರುವರು. ಈ ಅರ್ಥವನ್ನಲ್ಲದೆ ಬೇರೆಬೇರೆ ಸ್ಥಳಗಳಲ್ಲಿ ಬೇರೆಬೇರೆ ಅರ್ಥವನ್ನು ಹೇಳಿರುವರು. ಸ್ಕಂದ

ಸ್ವಾಮಿಯು ಈ ಪದಕ್ಕೆ ಅರ್ಥಮಾಡುವಾಗ—**ತನಾಶಬ್ದೋ ದಶಾಪವಿತ್ರವಚನಃ । ಅಣ್ವೀಭಿರ್ದಶಾಪವಿತ್ರೇಣ ಚ ಪೂತಾಃ । ಹಸ್ತೇನ ದಶಾಪವಿತ್ರಮಾದಾಯ ಪೂತಾ ಇತ್ಯರ್ಥಃ** ॥ ಎಂದರೆ ತನಾಶಬ್ದಕ್ಕೆ ದಶಾಪವಿತ್ರವೆಂದು ಹೆಸರು (ಜಾಲರಿಯಂತಿರುವ ಸೋಸುವ ಬಟ್ಟೆ). ಆದುದರಿಂದ **ಅಣ್ವೀಭಿಸ್ತನಾ ಪೂತಾಸಃ** ಎಂಬ ವಾಕ್ಯಕ್ಕೆ, ಬೆರಳುಗಳಿಂದ ಬಟ್ಟೆಯನ್ನು ತೆಗೆದುಕೊಡು ಶುದ್ಧಮಾಡಿದ ಎಂದರ್ಥವಾಗುವುದು ಎಂದು ಹೇಳಿದಾರೆ. ಈ ಅರ್ಥವೇ ಸಮಂಜಸವಾಗಿರುವುದು. ತನಾ ಶಬ್ದಕ್ಕೆ ಅನೇಕಾರ್ಥಗಳಿದ್ದರೂ ಸೋಮರಸದ ಸಂಬಂಧದಲ್ಲಿ ಉಪಯೋಗಿಸುವಾಗ ಈ ಶಬ್ದಕ್ಕೆ ದಶಾಪವಿತ್ರವೆಂತಲೇ ಅರ್ಥಮಾಡುವುದು ಸಕಾರಣವಾಗಿರುವುದು. ಈ ವಿಷಯವಾಗಿ ೯ ನೆಯ ಮಂಡಲದಲ್ಲಿ ಸೋಮಸಂಬಂಧವಾದ ಪ್ರಯೋಗಗಳಿರುವ ಕೆಲವು ಉದಾಹರಣೆಗಳನ್ನು ಕೊಡುತ್ತೇವೆ.

**ವಾರೇಣ ಶಶ್ವತಾ ತನಾ** । (ಋ. ಸಂ. ೯-೧-೬)

**ತ್ವಂ ಸೋಮ ವಿಪಶ್ಚಿತಂ ತನಾ ಪುನಾನ ಆಯುಷು** । (ಋ. ಸಂ. ೯-೧೬-೮)

**ಪ್ರಸುವಾನೋ ಧಾರಯಾ ತನೇಂದುರ್ಹಿನ್ವಾನೋ ಅರ್ಷತಿ** । (ಋ. ಸಂ- ೯-೩೪-೧)

**ಸಹಸ್ರಧಾರೋ ಯಾತ್ ತನಾ** । (ಋ. ಸಂ. ೯-೫೨-೨)

**ಆಯುಯೋಸ್ತ್ರಿಂಶತಂ ತನಾ ಸಹಸ್ರಾಣಿ ಚ ದದ್ಮಹೇ** । (ಋ ಸಂ. ೯-೫೮-೪)

**ತನಾ ಕೃಣ್ವಂತೋ ಅರ್ವತೇ** । (ಋ. ಸಂ. ೯-೬೨-೨)

**ಜಹಾತಿ ವವ್ರಿಂ ಪಿತುರೇತಿ ನಿಷ್ಕೃತಮುಪಪ್ರುತಂ ಕೃಣುತೇ ನಿರ್ಣಿಜಂ ತನಾ** ।
(ಋ. ಸಂ. ೯-೭೧-೨)

**ಪಿಬಂತಿ ಮಿತ್ರೋ ಅರ್ಯಮಾ ತನಾ ಪೂತಸ್ಯ ವರುಣಃ** । (ಋ. ಸಂ. ೮-೯೪-೫)
ಈ ಸ್ಥಳಗಳಲ್ಲೆಲ್ಲಾ ತನಾಶಬ್ದಕ್ಕೆ ದಶಾಪವಿತ್ರವೆಂದು (a fringed filtering cloth) ಅರ್ಥಮಾಡುವುದೇ ಸಮಂಜಸವಾಗಿರುವುದು.

**ಪೂತಾಸಃ**—ಪೂತಾಸಃ ಎಂಬುದು ಪ್ರಥಮಾ ಬಹುವಚನದ ಪ್ರಾಚೀನಪ್ರಯೋಗವು. ಈ ಶಬ್ದಪ್ರಯೋಗವು ಈ ಋಕ್ಕಿನಲ್ಲಿ ಮಾತ್ರ ಇದೆ. ಇನ್ನೆಲ್ಲಿಯೂ ಇಲ್ಲ. ಪೂತಾಃ ಎಂಬ ಶದಪ್ರಯೋಗವು ಋ. ಸಂ. ೧-೭೯-೧೦ ; ೯-೨೨-೩ , ೯-೧೦೧-೧೨ , ೧೦-೧೮-೨ ಈ ಋಕ್ಕುಗಳಲ್ಲಿರುವುದು. ಅರ್ಥದಲ್ಲಿ ಈ ಎರಡು ಶಬ್ದಗಳಿಗೂ ಏನೂ ವ್ಯತ್ಯಾಸವಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

ಇಂದ್ರ ಎಂಬಲ್ಲಿ ಆಮಂತ್ರಿತಾದ್ಯುದಾತ್ತಸ್ವರ ಬರುವುದು. ಆ ಎಂಬುದು ನಿಪಾತ. ಆದ್ದರಿಂದ **ನಿಪಾತಾ ಆದ್ಯುದಾತ್ತಾಃ** (ಫಿ. ಸೂ. ೮೦) ಎಂಬುದರಿಂದ ಆದ್ಯುದಾತ್ತ ಬರುವುದು. ಚಿತ್ರಭಾನೋ ಎಂಬ ಆಮಂತ್ರಿತವು ಪದಾತ್ಪರವಾಗಿರುವುದರಿಂದ ಅಷ್ಟಮಿಕ ಆಮಂತ್ರಿತಾನುದಾತ್ತ ಬರುವುದು. **ತ್ವಾಂ ಇಚ್ಛತಿ** (ನಿನ್ನನ್ನು ಅಪೇಕ್ಷಿಸುತ್ತಾನೆ) ಎಂದು ವಿವಕ್ಷೆಮಾಡಿದಾಗ **ಸುಪ ಆತ್ಮನಃಕ್ಯಚ್** (ಪಾ. ಸೂ. ೩-೧-೮) ಎಂಬುದ

ರಿಂದ ಯುಷ್ಮಚ್ಛಬ್ದಕ್ಕೆ 'ಕ್ಯಚ್' ಪ್ರತ್ಯಯವನ್ನು ಹಚ್ಚಲು **ಪ್ರತ್ಯಯೋತ್ತರಪದಯೋಶ್ಚ** (ಪಾ. ಸೂ. ೭-೨-೦೮) ಪ್ರತ್ಯಯ ಅಥವಾ ಉತ್ತರಪದ ಇವು ಪರದಲ್ಲಿರುವಾಗ ಏಕಾರ್ಥವನ್ನು ಹೇಳುವ ಯುಷ್ಮದಸ್ಮಚ್ಛಬ್ದಗಳ ಮಪರ್ಯಂತಕ್ಕೆ ಅಂದರೆ (ಯುಷ್ಮ್, ಅಸ್ಮ್ ಇವುಗಳಿಗೆ) ಕ್ರಮವಾಗಿ ತ್ವ, ಮ, ಆದೇಶಗಳು ಬರುವುವು ಎಂಬುದರಿಂದ ತ್ವ ಆದೇಶ ಬಂದರೆ ತ್ವ+ಅದ್+ಯ ಎಂದಿರುವಾಗ **ಅತೋಗುಣೇ** ಎಂಬುದರಿಂದ ಪರರೂಪ ಬಂದರೆ 'ತ್ವದ್ಯ' ಎಂದಿರುವಾಗ, 'ಕ್ಯಾಚ್ಛಂದಸಿ' (ಪಾ. ಸೂ. ೩-೨-೧೭೦) ಕ್ಯಪ್ರತ್ಯಯವನ್ನು ಕೊನೆಯಲ್ಲಿ ಹೊಂದಿರುವ ಧಾತುವಿನಮುಂದೆ ವೇದದಲ್ಲಿ 'ಉ' ಪ್ರತ್ಯಯಬರುವುದು ಎಂಬುದರಿಂದ 'ಉ' ಪ್ರತ್ಯಯಬಂದರೆ ಕ್ಯಪ್ರತ್ಯಯದ ಅಕಾರಕ್ಕೆ ಲೋಪಬಂದು ಬಹುವಚನದಲ್ಲಿ ತ್ವದ್ಯವಃ ಎಂದು ಆಗಬೇಕಾಗಿಬಂದರೆ, **ಯುಷ್ಮದಸ್ಮದೋರನಾದೇಶೇ** (ಪಾ.ಸೂ. ೭-೨-೮೬) ಆದೇಶವನ್ನು ಹೊಂದದಿರುವ, ವಿಭಕ್ತಿಯು ಹಲಾದಿ ಪರವಾಗಿರುವಾಗ ಯುಷ್ಮದ್, ಅಸ್ಮದ್ ಶಬ್ದಗಳಿಗೆ 'ಆ' ಆದೇಶಬರುವುದು ಎಂಬುದರಿಂದ ವ್ಯತ್ಯಾಸದಿಂದ ವಿಭಕ್ತಿಯಲ್ಲದ ಹಲಾದಿ ಪ್ರತ್ಯಯಪರವಾಗಿರುವಾಗಲೂ ಆಕಾರಾದೇಶ ಬಂದರೆ ತ್ವ+ಆ+ಯು, ಸವರ್ಣದೀರ್ಘತ್ವಾಯು, ಪ್ರ. ವಿ. ಬಹುವಚನದಲ್ಲಿ ತ್ವಾಯವಃ ಎಂದಾಗುವುದು. ಉಕಾರವು ಪ್ರತ್ಯಯಸ್ವರದಿಂದ ಆದ್ಯುದಾತ್ತವು. ಅಣು ಶಬ್ದವು ಸೂಕ್ಷ್ಮ ಎಂಬ ಅರ್ಥವನ್ನು ಹೇಳುವುದು. ಸೂಕ್ಷ್ಮಾರ್ಥವನ್ನು ಮುನ್ನಿಟ್ಟುಕೊಂಡು ಪ್ರಕೃತದಲ್ಲಿ ಬೆರಳು ಎಂಬ ಅರ್ಥವನ್ನು ಬೋಧಿಸುವುದು, ಅದು ಗುಣವಾಚಕವಾದ್ದರಿಂದ **ವೋತೋಗುಣವಚನಾತ್** (ಪಾ. ಸೂ. ೪-೧-೪೪) ಉಕಾರಾಂತ ಗುಣವಾಚಕದಮುಂದೆ ಸ್ತ್ರೀಲಿಂಗದಲ್ಲಿ ಙೀಷ್‌ಪ್ರತ್ಯಯವು ವಿಕಲ್ಪವಾಗಿ ಬರುವುದು ಎಂಬುದರಿಂದ ಙೀಷ್‌ಪ್ರಾಪ್ತವಾದರೆ ವ್ಯತ್ಯಯದಿಂದ ಇಲ್ಲಿ ಙೀನ್‌ಪ್ರತ್ಯಯ ಬರುವುದು. ಅದು ನಿತ್ತು. ಆದ್ದರಿಂದ ಆದ್ಯುತ್ತವಾಗುವುದು. ತನಾ, ಇದು ನಿತ್ಯ ಎಂಬ ಅರ್ಥದಲ್ಲಿ ನಿಪಾತಿತವಾಗಿರುವುದು, ನಿಪಾತವಾದ್ದರಿಂದ ಆದ್ಯುದಾತ್ತವಾಗುವುದು. **ಪೂತಾಸಃ** ಎಂಬಲ್ಲಿ **ಆಜ್ಜಸೇರಸುಕ್** (ಪಾ. ಸೂ. ೭-೧-೫೩) ಅವರ್ಣಾಂತಶಬ್ದದ ಮುಂದಿರುವ ಜಸ್‌ಪ್ರತ್ಯಯಕ್ಕೆ ಅಸುಕ್ ಬರುವುದು ಎಂಬುದರಿಂದ ಅಸುಕ್ ಆಗಮ ಬಂದರೆ ಪೂತಾಸಸ್, ರುತ್ವ ವಿಸರ್ಗಗಳು ಬಂದರೆ ಪೂತಾಸಃ ಎಂದಾಗುವುದು ॥ ೪ ॥

॥ ಸಂಹಿತಾಪಾಠಃ ॥

ಇಂದ್ರಾ ಯಾಹಿ ಧಿಯೇಷಿತೋ ವಿಪ್ರಜೂತಃ ಸುತಾವತಃ ।
ಉಪ ಬ್ರಹ್ಮಾಣಿ ವಾಘತಃ ॥ ೫ ॥

॥ ಪದಪಾಠಃ ॥

ಇಂದ್ರ । ಆ । ಯಾಹಿ । ಧಿಯಾ । ಇಷಿತಃ । ವಿಪ್ರಽಜೂತಃ ।
ಸುತಽವತಃ ।
ಉಪ । ಬ್ರಹ್ಮಾಣಿ । ವಾಘತಃ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಮಾ ಯಾಹಿ । ಅಸ್ಮಿನ್ಕರ್ಮಣ್ಯಾಗಚ್ಛ । ಕಿಮರ್ಥಂ । ವಾಘತಃ ಋತ್ವಿಜೋ ಬ್ರಹ್ಮಾಣಿ ವೇದರೂಪಾಣಿ ಸ್ತೋತ್ರಾಣ್ಯುಪೈತುಂ । ಕೀದೃಶಸ್ತ್ವಂ । ಧಿಯಾಸ್ಮದೀಯಯಾ ಪ್ರಜ್ಞ-ಯೇಷಿತಃ ಪ್ರಾಪ್ತಃ । ಅಸ್ಮದ್ಭಕ್ತ್ಯಾ ಪ್ರೇರಿತ ಇತ್ಯರ್ಥಃ । ವಿಪ್ರಜೂತಃ । ಯಥಾ ಯಜಮಾನಭಕ್ತ್ಯಾ ಪ್ರೇರಿತಸ್ತಥಾನ್ಯೈರಪಿ ವಿಪ್ರೈರ್ಮೇಧಾವಿಭಿರ್ಋತ್ವಿಗ್ಭಿಃ ಪ್ರೇರಿತಃ । ಕೀದೃಶಸ್ಯ ವಾಘತಃ । ಸುತಾವತಃ ಅಭಿಷುತಸೋಮಯುಕ್ತಸ್ಯ ॥ ಕೇತ ಇತ್ಯಾದಿಷ್ವೇಕಾದಶಸು ಪ್ರಜ್ಞಾನಾಮಸು ಧೀರಿತಿ ಪಠಿತಂ । ಚತು-ರ್ವಿಂಶತಿಸಂಖ್ಯಾಕೇಷು ಮೇಧಾವಿನಾಮಸು ವಿಪ್ರೋ ಧೀರ ಇತಿ ಪಠಿತಂ । ಭರತಾ ಇತ್ಯಾದಿಷ್ವಷ್ಟ-ಸ್ವೃತ್ವಿಙ್ನಾಮಸು ವಾಘತ ಇತಿ ಪಠಿತಂ । ಇಷಿತ ಇತ್ಯತ್ರೇಷ ಗತಾವಿತ್ಯಸ್ಮಾನ್ನಿಷ್ಠಾಯಾಮಿಡಾಗಮಃ । ಆಗವಾ ಅನುದಾತ್ತಾಃ । ಮ. ೩-೧-೩-೭ । ಇತೀಟೋಽನುದಾತ್ತತ್ವಾತ್ ಕ್ತಸ್ವರಃ ಶಿಷ್ಯತೇ । ವಿಪ್ರ-ಜೂತಃ । ಡುವಪ್ ಬೀಜತಂತುಸಂತಾನ ಇತಿ ಧಾತೋರ್ಋಜ್ರೇಂದ್ರಾಗ್ರವಜ್ರವಿಪ್ರೇತ್ಯಾದಿನಾ । ಉ. ೨-೨೮ । ರನ್ಪ್ರತ್ಯಯಾಂತೋ ವಿಪ್ರಶಬ್ದೋ ನಿಪಾತಿತಃ । ನಿಪಾತನಾದುಪಧಾಯಾ ಇಕಾರೋ ಲಘೂಪಧ-ಗುಣಾಭಾವಶ್ಚ । ನಿತ್ವಾದಾದ್ಯುದಾತ್ತಃ । ತೈಜರ್ೂತಃ । ಪ್ರಾಪ್ತಃ । ಜೂ ಇತಿ ಸೌತ್ರೋ ಧಾತುರ್ಗ-ತ್ಯರ್ಥಃ । ಶ್ರ್ಯುಕಃ ಕಿತಿ । ಪಾ. ೭-೨-೧೧ । ಇತೀಟ್ಪ್ರತಿಷೇಧಃ । ತೃತೀಯಾ ಕರ್ಮಣಿ । ಪಾ. ೬-೨-೪೮ । ಇತಿ ಪೂರ್ವಪದಪ್ರಕೃತಿಸ್ವರತ್ವಂ । ಸುತಾವತಃ । ಛಾಂದಸಂ ದೀರ್ಘತ್ವಂ । ಮತುಪೋಽನು-ದಾತ್ತತ್ವಾತ್ ಕ್ತಪ್ರತ್ಯಯಸ್ವರ ಏವ ಶಿಷ್ಯತೇ । ಬ್ರಹ್ಮಾಣಿ । ನಬ್ವಿಷಯಸ್ಯಾನಿಸಂತಸ್ಯೇತ್ಯಾದ್ಯುದಾತ್ತಃ । ವಾಘಚ್ಛಬ್ದ ಋತ್ವಿಙ್ನಾಮಸು ಪಠಿತಃ ಪ್ರಾತಿಪದಿಕಸ್ವರಃ ॥

॥ ಪ್ರತಿಪದಾರ್ಥ ॥

(ಹೇ) ಇಂದ್ರ—ಎಲೈ ಇಂದ್ರನೇ, (ನೀನು) । ಧಿಯಾ—(ನಮ್ಮ) ಬುದ್ಧಿಯಿಂದ (ಭಕ್ತಿಯಿಂದ) । ಇಷಿತಃ—ಪ್ರೇರಿತನಾಗಿ (ಮತ್ತು) ವಿಪ್ರಜೂತಃ—ಮೇಧಾವಿಗಳಾದ (ಬುದ್ಧಿವಂತರಾದ) ಋತ್ವಿಕ್ಕುಗಳಿಂದಲೂ ಪ್ರೇರಿತನಾಗಿ । ಸುತಾವತಃ—ಸೋಮರಸವನ್ನು ಸಿದ್ಧಪಡಿಸಿ ಇಟ್ಟುಕೊಂಡಿರುವ । ವಾಘತಃ—ಋತ್ವಿಜನ ಬ್ರಹ್ಮಾಣಿ—ವೇದರೂಪವಾದ ಸ್ತೋತ್ರಗಳನ್ನು । ಉಪ—ಹೊಂದುವುದಕ್ಕಾಗಿ । ಆ ಯಾಹಿ—(ನಾವು ಮಾಡು ತ್ತಿರುವ ಈ ಯಜ್ಞಸಂಬಂಧವಾದ ಕರ್ಮದಲ್ಲಿ) ಬರುವವನಾಗು.

॥ ಭಾವಾರ್ಥ ॥

ಎಲೈ ಇಂದ್ರನೇ, ನಾವು ಮತ್ತು ಋತ್ವಿಕ್ಕುಗಳೂ ಭಕ್ತಿಯಿಂದ ನಿನ್ನನ್ನು ಸ್ತೋತ್ರಮಾಡುವೆವು. ಮತ್ತು ಋತ್ವಿಜನು, ಸೋಮರಸವನ್ನು ಸಿದ್ಧಪಡಿಸಿರುವನು. ನಮ್ಮ ಭಕ್ತಿಯಿಂದ ಪ್ರೇರಿತನಾಗಿ ಅದನ್ನು ಪಾನ ಮಾಡುವುದಕ್ಕಾಗಿಯೂ ನಾವು ಮಾಡುವ ವೇದರೂಪವಾದ ಸ್ತೋತ್ರಗಳನ್ನು ಸ್ವೀಕರಿಸುವುದಕ್ಕಾಗಿಯೂ ನಾವು ಮಾಡುತ್ತಿರುವ ಈ ಯಜ್ಞಕರ್ಮಕ್ಕೆ ಬರುವವನಾಗು.

## English Translation.

O Indra, you are moved by our devoted prayers and that of learned men. Come hither to receive our prayers and the soma juice pressed and prepared for your sake.

॥ ವಿಶೇಷವಿಷಯಗಳು ॥

**ಧಿಯಾ**—ಇದು ಧೀಶಬ್ದದ ತೃತೀಯಾವಿಭಕ್ತಿಯ ಏಕವಚನವು. ಈ ಶಬ್ದವು "ಕೇತ" ಮೊದಲಾದ ಪ್ರಜ್ಞಾರ್ಥಸೂಚಕವಾದ ೧೧ ನಾಮಗಳ ಮಧ್ಯದಲ್ಲಿ ಪಠಿತವಾಗಿದೆ. ಈ ಶಬ್ದಕ್ಕೆ ಇಲ್ಲಿ ಬುದ್ಧಿಯಿಂದ, ವಿವೇಕದಿಂದ, ಮನಃಪೂರ್ವಕವಾದ ಆಸಕ್ತಿಯಿಂದ ಎಂದರ್ಥವು. ಪೌರ್ವಾತ್ಯ ಮತ್ತು ಪಾಶ್ಚಾತ್ಯಪಂಡಿತರು ಈ ಶಬ್ದಕ್ಕೆ ಸಂದರ್ಭಾನುಸಾರವಾಗಿ ವಿಧವಿಧವಾದ ಅರ್ಥವನ್ನು ಮಾಡಿರುವರು. ಆಯಾ ಸ್ಥಳಗಳಲ್ಲಿ ಆ ಅರ್ಥಗಳನ್ನು ವಿವರಿಸಲಾಗುವುದು.

**ಇಷಿತಃ**—ಈ ಶಬ್ದವು "ಇಷ ಗತೌ" ಎಂಬ ಧಾತುವಿನಿಂದ ಉತ್ಪನ್ನವಾಗಿದೆ. ಈ ಶಬ್ದಕ್ಕೆ ಇಲ್ಲಿ ಕರೆಯಲ್ಪಟ್ಟ, ಪ್ರೇರಿತವಾದ, ಪ್ರಾರ್ಥಿಸಲ್ಪಟ್ಟ ಎಂದು ಅರ್ಥವು.

**ವಿಪ್ರಜೂತಃ**—ಇದು ವಿಪ್ರ ಮತ್ತು ಜೂತ ಎಂಬ ಎರಡುಪದಗಳನ್ನೊಳಗೊಂಡ ಸಮಾಸಪದವು. ವಿಪ್ರಶಬ್ದವು ಮೇಧಾವಿನಾಮಸೂಚಕವಾದ ಇಪ್ಪತ್ತುನಾಲ್ಕು ಶಬ್ದಗಳ ಮಧ್ಯದಲ್ಲಿ ಪಠಿತವಾಗಿದೆ. ಆದುದರಿಂದ ಈ ಶಬ್ದಕ್ಕೆ, ಮೇಧಾವಿಗಳು, ಬುದ್ಧಿವಂತರು, ವಿವೇಚನಾಶಕ್ತಿಯುಳ್ಳವರು ಎಂದರ್ಥವು. ಜೂತಃ ಎಂದರೆ ಪ್ರಾಪ್ತಃ, ಅಭಿಷ್ಟುತಃ, ಪ್ರೇರಿತಃ—ಹೊಂದಲ್ಪಟ್ಟ, ಸ್ತುತಿಸಲ್ಪಟ್ಟ, ಪ್ರೇರಿಸಲ್ಪಟ್ಟ ಎಂದರ್ಥವು ವಿಪ್ರಶಬ್ದಕ್ಕೆ ಆಧುನಿಕಸಂಸ್ಕೃತದಲ್ಲಿ ಬ್ರಾಹ್ಮಣ ಎಂಬರ್ಥವು ರೂಢಿಯಲ್ಲಿದ್ದರೂ ವೇದಸಾಹಿತ್ಯದಲ್ಲಿ ಅದರಲ್ಲಿಯೂ ಋಗ್ವೇದದಲ್ಲಿ ಈ ಶಬ್ದವನ್ನು ಈ ಅರ್ಥದಲ್ಲಿ ಉಪಯೋಗಿಸಿಲ್ಲ. ವಿಪ್ರಶಬ್ದವು ಋಗ್ವೇದದಲ್ಲಿ ಅನೇಕಋಕ್ಕುಗಳಲ್ಲಿ ಪ್ರಯೋಗಿಸಲ್ಪಟ್ಟಿದ್ದರೂ ವಿಪ್ರಜೂತಃ ಎಂಬ ಶಬ್ದವು ಈ ಋಕ್ಕಿನಲ್ಲಿ ಮಾತ್ರವಿರುವುದು. ಬೇರೆ ಎಲ್ಲಿಯೂ ಇದರ ಪ್ರಯೋಗವಿಲ್ಲ. ಜೂತಃ ಎಂಬ ಶಬ್ದಕ್ಕೆ ಭಾಷ್ಯಕಾರರು ಪ್ರಾಪ್ತ, ಪ್ರೇರಣ ಎಂದು ಅನೇಕಕಡೆಗಳಲ್ಲಿ ಅರ್ಥಮಾಡಿರುವರು ಉದಾಹರಣೆಗಾಗಿ.

**ಶೋಚಿಷ್ಕೇಶಂ ವೃಷಣಂ ಯಮಿಮಾ ವಿಶಃ ಪ್ರಾವಂತು ಜೂತಯೋ ವಿಶಃ ॥**

(ಋ. ಸಂ. ೧-೧೨೭-೨)

ಈ ಋಕ್ಕಿನಲ್ಲಿ ಜೂತಯೋ ಎಂದರೆ ಪ್ರಾಪ್ತಯೋ ಎಂದೂ.

**ವೀಳುಪತ್ಮಭಿರಾಶುಹೇಮಭಿರ್ವಾ ದೇವಾನಾಂ ವಾ ಜೂತಿಭಿಃ ಶಾಶದಾನಾ ॥**

(ಋ. ಸಂ. ೧-೧೧೬-೨)

ಈ ಋಕ್ಕಿನಲ್ಲಿ ಜೂತಿಭಿಃ ಎಂದರೆ ಪ್ರೇರಣೈಶ್ಚ ಎಂದೂ ಅರ್ಥಮಾಡಿರುವರು ಜೂತ ಎಂಬ ಶಬ್ದವು ಸಮಾಸೋತ್ತರಪದದಲ್ಲಿ ಈ ಅರ್ಥವನ್ನು ಸೂಚಿಸುವ ಕೆಲವು ಉದಾಹರಣೆಗಳನ್ನು ಕೊಟ್ಟಿದ್ದೇವೆ—

**ಅದ್ರಿಜೂತಃ,—ರಥೋ ಹ ವಾಮೃತಜಾ ಅದ್ರಿಜೂತಃ ಪರಿ ದ್ಯಾವಾಪೃಥಿವೀ ಯಾತಿ ಸದ್ಯಃ ।**

(ಋ. ಸಂ. ೩-೫೮-೮)

**ಆದಿತ್ಯಜೂತಃ—ದಧಾನೋ ಗೋಮದಶ್ವವತ್ಸುವೀರ್ಯಮಾದಿತ್ಯಜೂತ ಏಧತೇ ।**

(ಋ. ಸಂ. ೮-೪೬-೫)

**ಇಂದ್ರಜೂತಃ—ಯದಂಗ ತ್ವಾ ಭರತಾಃ ಸಂತರೇಯುರ್ಗವ್ಯನ್ ಗ್ರಾಮ ಇಷಿತ ಇಂದ್ರಜೂತಃ ।**

(ಋ. ಸಂ. ೩-೩೩-೧೧)

**ದೇವಜೂತಃ**— ಮಹಾ ಋಷಿರ್ದೇವಜಾ ದೇವಜೂತೋಽಸ್ತಭ್ನಾತ್ಸಿಂಧುಮರ್ಣವಂ ನೃಚಕ್ಷಾಃ ।
(ಋ. ಸಂ. ೩-೫೩-೯ ಮತ್ತು ೪-೧೧ ೪ , ೭-೮೪-೩ , ೮-೩೧- ೩)

**ಬಾಹುಜೂತಃ**— ಯುಷ್ಮದೇತಿ ಮುಷ್ಟಿಹಾ ಬಾಹುಜೂತೋ ಯುಷ್ಮತ್ಸದಶ್ವೋ ಮರುತಃ ಸುವೀರಃ । (ಋ. ಸಂ ೫-೫೮-೪)

**ವಾತಜೂತಃ**— ವಿ ವಾತಜೂತೋ ಅತಸೇಷು ತಿಷ್ಠತೇ ವೃಥಾ ಜುಹೂಭಿಃ ಸೃಣ್ಯಾ ತುವಿಷ್ವಣಿಃ ।
(ಋ. ಸಂ. ೧-೫೮-೪ ಮತ್ತು ೧-೬೫-೪ , ೧೦-೧೭-೧)

**ಶ್ಯೇನಜೂತಃ**— ಅಪ್ಸು ದ್ರಪ್ಸೋ ವಾವೃಧೇ ಶ್ಯೇನಜೂತೋ ದುಹ ಈಂ ಪಿತಾ ದುಹ ಈಂ ಪಿತುರ್ಜಾಂ । (ಋ ಸಂ. ೯-೮೯-೨)

Ludwig, Williams, Griffith ಮೊದಲಾದ ಪಾಶ್ಚಾತ್ಯ ಪಂಡಿತರು ವಿಪ್ರಶಬ್ದಕ್ಕೆ ಬೇರೆಬೇರೆ ಋಕ್ಕುಗಳಲ್ಲಿ Sage, wise, skilled in work or rite, skilled in speech, singer, Priest, Worshipper' Sacrificier, Fullfiller, Giver of delight, corageous, Sagacious, Pious, Brahmana ಇವೇ ಮೊದಲಾದ ಅರ್ಥಗಳನ್ನು ಹೇಳಿದ್ದರೂ ಈ ಋಕ್ಕಿನಲ್ಲಿ ಈ ಶಬ್ದಕ್ಕೆ Prudent or intelligent ವಿವೇಕಿ, ಬುದ್ಧಿಶಾಲಿ ಎಂಬ ಅರ್ಥವೇ ಸರಿಯಾಗಿ ಹೊಂದುವುದು ಎಂದು ಹೇಳಿರುವರು.

**ಸುತಾವತಃ ಅಥವಾ ಸುತವತಃ**— ಸುತ ಎಂಬ ಶಬ್ದವು **ಸು** (ರಸವನ್ನು) ಹಿಂಡು ಅದುವುು ಎಂಬ ಅರ್ಥವುಳ್ಳ ಧಾತುವಿನಿಂದ ಉತ್ಪನ್ನವಾದ ಶಬ್ದವು. **ಸುತಃ ಸೋಮಃ ಅಸ್ಯಾಸ್ತೀತಿ ಸುತಾವಾನ್ ತಸ್ಯ ಸುತಾವತಃ** ಎಂದು ಈ ಶಬ್ದದ ನಿಷ್ಪತ್ತಿಯು. ಈ ಶಬ್ದವು ವಾಘತಃ ಎಂಬ ಶಬ್ದಕ್ಕೆ ವಿಶೇಷಣವಾಗಿರುವುದು. ಈ ಶಬ್ದವು ಸಾಧಾರಣವಾಗಿ ಸೋಮರಸವನ್ನು ಹಿಂಡಿ ತೆಗೆಯುವ ಸಂದರ್ಭದಲ್ಲಿ ಉಪಯೋಗಿಸಲ್ಪಡುವುದು.

**ಉಪ**— ಸಮೀಪ, ಹತ್ತಿರ. ಅಥವಾ ಸಮೀಪಕ್ಕೆ ಹೋಗುವುದು, ಸಮೀಪವನ್ನು ಹೊಂದುವುದು ಇತ್ಯಾದಿ.

**ಬ್ರಹ್ಮಾಣಿ**— ಈ ಶಬ್ದಕ್ಕೆ ಭಾಷ್ಯಕಾರರು ಸ್ತೋತ್ರವೆಂದು ಅರ್ಥಮಾಡಿರುವರು. ಸ್ಕಂದಸ್ವಾಮಿಯು —ನಿಘಂಟುವಿನ ೨-೭ ಸೂತ್ರದಂತೆ ಬ್ರಹ್ಮಶಬ್ದಕ್ಕೆ ಅನ್ನವೆಂದೂ ಸ್ತೋತ್ರವೆಂದೂ ಎರಡು ಅರ್ಥಗಳನ್ನೂ ಹೇಳಿರುವರು. ಪಾಶ್ಚಾತಪಂಡಿತರಲ್ಲಿ Ludwig, Williams, Griffith ಮೊದಲಾದವರು ಈ ಶಬ್ದಕ್ಕೆ Sacred Word, Preyer, Strotra, Homage, honour, song, libation, oblation, Praise, adoration, Devotion, Offering, Sacred rite, Food ಎಂದು ಸಂದರ್ಭಾನುಸಾರವಾಗಿ ವಿಧವಿಧವಾಗಿ ಅರ್ಥಮಾಡಿರುವರು ಇವರು ಬೇರೆ ಬೇರೆ ಪದಗಳನ್ನು ಉಪಯೋಗಿಸಿದ್ದರೂ ಸಾಯಣ ಮತ್ತು ಸ್ಕಂದಸ್ವಾಮಿಯು ಉಪಯೋಗಿಸಿರುವ ಅರ್ಥಗಳಿಗೆ ವಿಶೇಷವ್ಯತ್ಯಾಸವಿಲ್ಲ.

**ವಾಘತಃ**— ನಿಘಂಟುವಿನಲ್ಲಿಯೇ ಈ ಶಬ್ದಕ್ಕೆ ಋತ್ವಿಕ್ ಎಂದು ಸ್ಪಷ್ಟವಾಗಿ ಹೇಳಿರುವುದರಿಂದ ಭಾಷ್ಯಕಾರರೂ ಸ್ಕಂದಸ್ವಾಮಿ ಮುಂತಾದವರೂ ಈ ಅರ್ಥವನ್ನೇ ಅನುಮೋದಿಸಿದಾರೆ. ಪಾಶ್ಚಾತ್ಯಪಂಡಿತರ ಅಭಿಪ್ರಾಯವೂ ಈ ಅರ್ಥಕ್ಕೆ ವ್ಯತಿರಿಕ್ತವಾಗಿಲ್ಲ. ಉಪಯೋಗಿಸಿರುವ ಶಬ್ದಗಳು ಮಾತ್ರ ಬೇರೆಬೇರೆಯಾಗಿರುವುವು. ಈ ಶಬ್ದವು ಋಗ್ವೇದದಲ್ಲಿ ೧-೩-೫ ; ೧-೫೮-೭ ; ೧-೮೮-೬ ; ೧-೧೧೦-೪ ; ೩-೨-೧ ; ೩-೩೭-೨ ; ೬-೧೬-೧೩ ; ೭-೩೨-೧ ; ೮-೭೮-೪ ; ೧೦-೬೨-೭ ; ೩-೬೦-೪ ಎಂಬ ಈ ಹನ್ನೊಂದು ಋಕ್ಕುಗಳಲ್ಲಿ ಮಾತ್ರ ಉಪಯೋಗಿಸಲ್ಪಟ್ಟಿರುವುದು.

॥ ವ್ಯಾಕರಣಪ್ರಕ್ರಿಯಾ ॥

ಇಷಗತೌ ಎಂಬ ಧಾತುವಿನಮೇಲೆ ಕ್ತಪ್ರತ್ಯಯವನ್ನಿಟ್ಟರೆ **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂಬುದರಿಂದ ತ ಎಂಬುದಕ್ಕೆ ಇಟ್ ಆಗಮ ಬಂದರೆ ಇಷಿತಃ ಎಂದಾಗುವುದು. ಇಲ್ಲಿ **ಆಗಮಾ ಅನುದಾತ್ತಾಃ** (ಪಾ. ಸೂ. ೩-೧-೩-ವಾ ೭) ಆಗಮುಗಳು ಅನುದಾತ್ತವಾಗುವವು ಎಂಬುದರಿಂದ ಇ ಎಂಬುದು ಅನುದಾತ್ತವಾಗುವುದು. ಆದ್ದರಿಂದ ಕ್ತಪ್ರತ್ಯಯ ಸ್ವರವು ನಿಲ್ಲುವುದು. ಡು ವಪ್ ಬೀಜಸಂತಾನೇ ಎಂಬ ಧಾತುವು **ಋಜ್ರೇಂದ್ರಾಗ್ರ ವಜ್ರ ವಿಪ್ರ ಕುಬ್ರ ಚುಬ್ರ ಕ್ಷುರ ಖುರಭದ್ರೋಗ್ರ ಭೇರ ಭೇಲ ಶುಕ್ರ ಶಕ್ಲ ಗೌರವನ್ರೇರಮಾಲಾಃ** (ಉ. ಸೂ. ೨-೧೮೬) ಈ ೧೯ ಶಬ್ದಗಳು ರ೯ ಪ್ರತ್ಯಯಾಂತವಾಗಿ ನಿಪಾತಿಸಲ್ಪಡುವುವು, ಎಂಬುದರಿಂದ ರನ್‌ಪ್ರತ್ಯಯಾಂತವಾಗಿ ನಿಪಾತಿಸಲ್ಪಟ್ಟಿರುವುದು. ನಿಪಾತನವಾದ್ದರಿಂದಲೇ ವಪ್‌ಧಾತುವಿನ ಅಕಾರಕ್ಕೆ ಇಕಾರವೂ ಇಕಾರಕ್ಕೆ ಲಘೂಪಧಗುಣವಿಲ್ಲದೇ ಇರುವಿಕೆಯೂ ಸಿದ್ಧಿಸುವುದು. ಇದು ನಿತ್ತಾದ್ದರಿಂದ, ಆದ್ಯುದಾತ್ತ, ವಿಪ್ರೈಃಜೂತಃ, ವಿಪ್ರಜೂತಃ, ಜೂ ಎಂಬುದು ಸೂತ್ರಪಠಿತವಾದ ಧಾತುವು. ಇದಕ್ಕೆ 'ಗತಿ' ಎಂದರ್ಥವು. ಜೂಧಾತುವಿನಮೇಲೆ ಬಂದ ಕ್ತಪ್ರತ್ಯಯಕ್ಕೆ **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂಬುದರಿಂದ ಇಡಾಗಮಪ್ರಾಪ್ತವಾದರೆ **ಶ್ರ್ಯುಕಃಕಿತಿ** (ಪಾ. ಸೂ. ೭-೨-೧೧) ಶ್ರಿಞ್‌ಧಾತು, ಉ, ಋ, ೠ, ವರ್ಣಾಂತವಾದ ಏಕಾಚ್ಕಧಾತು. ಇವುಗಳಮುಂದಿರುವ ಗಿತ್, ಕಿತ್, ಪ್ರತ್ಯಯಗಳಿಗೆ ಇಡಾಗಮ ಬರುವುದಿಲ್ಲ. ಎಂಬುದರಿಂದ ನಿಷೇಧ ಬರುವುದು, ನಂತರ **ತೃತೀಯಾಕರ್ಮಣಿ** (ಪಾ. ಸೂ. ೬-೨-೪೮) ಕರ್ಮಣಿಕ್ತ ಪ್ರತ್ಯಯಾಂತ ಶಬ್ದವು ಪರವಾಗಿರುವಾಗ ತೃತೀಯಾಂತವು ಪ್ರಕೃತಿಸ್ವರವನ್ನು ಹೊಂದುವುದು, ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುವುದು. ಷುಧಾತುವಿನಮೇಲೆ ಕ್ತಪ್ರತ್ಯಯಬಂದರೆ ಸುತ ಎಂದಾಗುತ್ತೆ. ಇದರಮೇಲೆ ಮತುಪ್ ಪ್ರತ್ಯಯಬಂದರೆ ಸುತವತಃ ಎಂದಿರುವುದು. ಛಾಂದಸವಾಗಿ ಪೂರ್ವಪದಕ್ಕೆ ದೀರ್ಘಬಂದರೆ ಸುತಾವತಃ ಎಂದಾಗುವುದು. ಮತುಪ್ ಅನುದಾತ್ತವಾದ್ದರಿಂದ ಕ್ತಪ್ರತ್ಯಯಸ್ವರ ನಿಲ್ಲುವುದು, ಬ್ರಹ್ಮಾಣಿ **ನಬ್ವಿಷಯಸ್ಯಾನಿಸಂತಸ್ಯ** (ಫಿ. ಸೂ. ೨೬) ಎಂಬುದರಿಂದ ಆದ್ಯುದಾತ್ತ, ವಾಘತ್ ಎಂಬುದನ್ನು ಋತ್ವಿಙ್ನಾಮಧೇಯಮಧ್ಯದಲ್ಲಿ ಯಾಸ್ಕರು ಪಠಿಸಿರುವುದರಿಂದ ಪ್ರಾತಿಪದಿಕವು, ಆದ್ದರಿಂದ ಪ್ರಾತಿಪದಿಕಸ್ವರ ಬರುವುದು ॥ ೫ ॥

॥ ಸಂಹಿತಾಪಾಠಃ ॥

ಇಂದ್ರಾ ಯಾಹಿ ತೂತುಜಾನ ಉಪ ಬ್ರಹ್ಮಾಣಿ ಹರಿವಃ ।
ಸುತೇ ದಧಿಷ್ವ ನಶ್ಚನಃ ॥ ೬ ॥

॥ ಪದಪಾಠಃ ॥

ಇಂದ್ರ । ಆ । ಯಾಹಿ । ತೂತುಜಾನಃ । ಉಪ । ಬ್ರಹ್ಮಾಣಿ । ಹರಿವಃ ।
ಸುತೇ । ದಧಿಷ್ವ । ನಃ । ಚನಃ ॥ ೬ ॥

॥ ಸಾಯಣಭಾಷ್ಯಂ ॥

ಹರಿಶಬ್ದ ಇಂದ್ರಸಂಬಂಧಿನೋರಶ್ವಯೋರ್ನಾಮಧೇಯಂ । ಹರೀ ಇಂದ್ರಸ್ಯ ರೋಹಿತೋಽಗ್ನೇರಿತಿ ತದೀಯೋಽಶ್ವನಾಮತ್ವೇನ ಪಠಿತತ್ವಾತ್ । ಹೇ ಹರಿವಃ ಅಶ್ವಯುಕ್ತೇಂದ್ರ ತ್ವಂ ಬ್ರಹ್ಮಾಣ್ಯುಪೈತುಮಾ ಯಾಹಿ। ಕೀದೃಶಸ್ತ್ವಂ। ತೂತುಜಾನಃ ತ್ವರಮಾಣಃ। ಆಗತ್ಯ ಚಾಸ್ಮಿನ್ಸುತೇ ಸೋಮಾಭಿಷವಯುಕ್ತೇ ಕರ್ಮಣಿ ನೋಽಸ್ಮದೀಯಂ ಚನೋಽನ್ನಂ ಹವಿರ್ಲಕ್ಷಣಂ ದಧಿಷ್ವ ಧಾರಯ । ಸ್ವೀಕುರ್ವಿತ್ಯರ್ಥಃ । ತೂತುಜಾನಃ । ತುಜೇರ್ಲಿಟಿ ಲಿಟಃ ಕಾನಜ್ವಾ। ಪಾ. ೩-೨-೧೦೬ । ಇತಿ ಕಾನಜಾದೇಶಃ । ತುಜಾದೀನಾಂ ದೀರ್ಘೋಽಭ್ಯಾಸಸ್ಯ। ಪಾ. ೬-೧-೭। ಇತ್ಯಭ್ಯಾಸಸ್ಯ ದೀರ್ಘತ್ವಂ । ಅಭ್ಯಸ್ತಾನಾಮಾದಿಃ ಪಾ. ೬-೧-೧೮೯ । ಇತ್ಯಾದ್ಯುದಾತ್ತತ್ವಂ । ಹರಿವ ಇತ್ಯತ್ರ ಹರಯೋಽಸ್ಯ ಸಂತೀತಿ ಮತುಪಿ ಛಂದಸೀರಃ । ಪಾ. ೮-೨-೧೫ । ಇತಿ ಮಕಾರಸ್ಯ ವತ್ವಂ । ಸಂಬುದ್ಧಾವುಗಿದಚಾಂ । ಪಾ. ೭-೧-೭೦ । ಇತಿ ನುಂ । ಸಂಯೋಗಾಂತಲೋಪೇ । ಪಾ. ೮-೨-೨೩ । ನಕಾರಸ್ಯ ಮತುವಸೋ ರುಃ ಸಂಬುದ್ಧೌ ಛಂದಸಿ । ಪಾ. ೮-೩-೧ । ಇತಿ ರುತ್ವಂ । ಆಷ್ಟಮಿಕೋ ನಿಘಾತಃ । ಬ್ರಹ್ಮಾಣೀತ್ಯಸ್ಯ ಹರಿವ ಇತ್ಯನೇನಾಸಾಮರ್ಥ್ಯಾತ್ಸಮರ್ಥಃ ಪದವಿಧಿರಿತಿ ನಿಯಮಾತ್ಸುಬಾಮಂತ್ರಿತಪರಾಂಗವದ್ಭಾವಾಭಾವೇನಾಮಂತ್ರಿತನಿಘಾತಾಭಾವಾದಾದ್ಯುದಾತ್ತತ್ವೇ ಸತ್ಯುಪೇತ್ಯಕಾರಸ್ಯ ಸನ್ನತರಃ । ದಧಿಷ್ವೇತ್ಯತ್ರ ದಧಾತೇರ್ಲೋಟಿ ಥಾಸ್ । ಥಾಸಃ ಸೇ । ಪಾ. ೩-೪-೮೦ । ಸವಾಭ್ಯಾಂ ವಾಮೌ । ಪಾ. ೩-೪-೯೧ । ಇತ್ಯೇಕಾರಸ್ಯ ವಾದೇಶಃ । ಛಂದಸ್ಯುಭಯಥಾ । ಪಾ. ೩-೪-೧೧೭ । ಇತಿ ಸಾರ್ವಧಾತುಕಾರ್ಧಧಾತುಕಸಂಜ್ಞಯೋಃ ಸತ್ತ್ವೋಃ ಸಾರ್ವಧಾತುಕತ್ವೇನ ಶಪಿ । ಪಾ. ೩-೧-೬೮ । ತಸ್ಯ ಶ್ಲೌ ಚ ದ್ವಿರ್ಭಾವಃ ಪಾ. ೬-೧-೧೦ । ಆರ್ಧಧಾತುಕತ್ವೇನೇಡಾಗಮಶ್ಚ । ಪಾ. ೭-೨-೩೫ । ಆತೋ ಲೋಪ ಇಟಿ ಚ । ಪಾ. ೬-೪-೬೪ । ಇತ್ಯಾಕಾರಲೋಪಃ । ಚನಃ । ಚಾಯತೇರನ್ನೇ ಹ್ರಸ್ವಶ್ಚ । ಉ. ೪-೧೯೯ । ಇತ್ಯಸುನಂತಃ । ಚಕಾರಾನ್ನುಡಾಗಮೋ ಯಲೋಪಃ ॥

॥ ಪ್ರತಿಪದಾರ್ಥ ॥

ಹರಿವಃ—ಅಶ್ವಗಳಿಂದ ಕೂಡಿದ (ಅಶ್ವಯುಕ್ತವಾದ ರಥದಲ್ಲಿ ಕುಳಿತಿರುವ) । ಇಂದ್ರ—ಎಲೈ ಇಂದ್ರನೇ (ನೀನು) । ತೂತುಜಾನಃ—ವೇಗವುಳ್ಳವನಾಗಿ, ಜಾಗ್ರತೆಯಾಗಿ । ಬ್ರಹ್ಮಾಣಿ—(ನಾವು ಮಾಡುವ) ಸ್ತೋತ್ರಗಳನ್ನು । ಉಪ—ಸ್ವೀಕರಿಸುವುದಕ್ಕಾಗಿ । ಆ ಯಾಹಿ—ಬರುವವನಾಗು । (ಮತ್ತು ಬಂದು) ಸುತೇ—ಸೋಮಾಭಿಷವಯುಕ್ತವಾದ ಈ ಕರ್ಮದಲ್ಲಿ ಎಂದರೆ ನಾವು ಮಾಡುತ್ತಿರುವ ಸೋಮಸಂಬಂಧವಾದ ಯಜ್ಞದಲ್ಲಿ । ನಃ—ನಮ್ಮ । ಚನಃ—ಹವಿಸ್ಸಂಬಂಧವಾದ ಅನ್ನವನ್ನು । ದಧಿಷ್ವ—ಧರಿಸು ಎಂದರೆ ಸ್ವೀಕರಿಸು ।

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಅಶ್ವಗಳನ್ನು ಕಟ್ಟಿದ ರಥದಲ್ಲಿ ಕುಳಿತು ನಾವು ಮಾಡುವ ಸ್ತೋತ್ರಗಳನ್ನೂ, ಮತ್ತು ಈಗ ನಾವು ನಿನಗಾಗಿ ಮಾಡುತ್ತಿರುವ ಸೋಮರಸವನ್ನು ತೆಗೆಯುತ್ತಿರುವ ಈ ಯಜ್ಞಕರ್ಮದಲ್ಲಿ ನಾವು ಅರ್ಪಿಸುವ ಅನ್ನವನ್ನೂ ಸ್ವೀಕರಿಸುವುದಕ್ಕಾಗಿ ಜಾಗ್ರತೆಯಾಗಿ (ಬೇಗನೆ) ಬರುವವನಾಗು.

## English Translation.

O Indra, come hither quickly with the tawny horses to our prayers and accept our food in this libation.

॥ ವಿಶೇಷವಿಷಯಗಳು ॥

**ತೂತುಜಾನಃ**—ಈ ಶಬ್ದಕ್ಕೆ ಭಾಷ್ಯಕಾರರು ತ್ವರಮಾಣಃ ಎಂದೂ ಸ್ಕಂದಸ್ವಾಮಿಯು ಕ್ಷಿಪ್ರಂ (ಬೇಗನೆ, ಶೀಘ್ರವಾಗಿ) ಎಂದೂ ಅರ್ಥಮಾಡಿರುವರು. ಪಾಶ್ಚಾತ್ಯಪಂಡಿತರಲ್ಲಿ Ludwig ಎಂಬುವರು hasty, speedy, exerting ಎಂದೂ Williams ಎಂಬುವರು fleet ಎಂದೂ, Benfey ಎಂಬುವರು exerted ಎಂದೂ Rosen ಎಂಬುವರು hastened ಎಂದೂ ಈ ಶಬ್ದದ ಅರ್ಥವನ್ನು ಈ ಋಕ್ಕಿನ ವಿಷಯದಲ್ಲಿ ಹೇಳಿರುವರು ಇದಲ್ಲದೆ Ludwig ಎಂಬುವರು ಈ ಶಬ್ದಪ್ರಯೋಗವಿರುವ (ಎಂದರೆ ಋ.ಸಂ. ೬-೨೯-೫; ೧೦-೪೪-೧) ಸ್ಥಳಗಳಲ್ಲಿ exerting ಎಂದೂ (ಋ. ಸಂ. ೭-೮೪-೫ ರಲ್ಲಿ) Urging ಎಂದೂ (ಋ. ಸಂ. ೪-೩೨-೨ ರಲ್ಲಿ) Pushing ಎಂದೂ, (ಋ. ಸಂ- ೧೦-೪೪-೧ ; ೧-೧೨೯-೧ ರಲ್ಲಿ) Prompt ಎಂದೂ (ಋ.ಸಂ. ೪-೩೨-೨ ; ೧-೬೧-೧೨ ; ೭-೬೭-೬ ; ೭-೮೪-೫ ಈ ಋಕ್ಕುಗಳಲ್ಲಿ) Active, strong ಎಂದೂ ಈ ಶಬ್ದಕ್ಕೆ ಅರ್ಥವನ್ನು ಹೇಳಿದಾರೆ.

**ಬ್ರಹ್ಮಾಣಿ**—ಈ ಶಬ್ದದ ವಿಷಯವನ್ನು ಹಿಂದಿನ ಋಕ್ಕಿನಲ್ಲಿಯೇ ವಿವರಿಸಿದೇವೆ.

**ಹರಿವಃ**—ಇದಕ್ಕೆ ಭಾಷ್ಯಕಾರರು ಹರಯೋಽಸ್ಯ ಸಂತೀತಿ ಎಂದರೆ ಅಶ್ವಗಳುಳ್ಳವನು ಎಂದು ಅರ್ಥಮಾಡಿರುವರು. ಇತರ ಭಾಷ್ಯಕಾರರ ಅರ್ಥವೂ ಇದೇ ರೀತಿ ಇರುವುದು. ಅಶ್ವಗಳುಳ್ಳವನು ಎಂದರೆ ಅಶ್ವಗಳನ್ನು ಕಟ್ಟಿದ ರಥದಲ್ಲಿ ಕುಳಿತಿರುವವನು ಎಂದರ್ಥವು. ಹರೀ ಎಂದರೆ ಇಂದ್ರನ ಅಶ್ವಗಳು. ಈ ಅರ್ಥವನ್ನು

**ತಿಷ್ಠಾ ಹರೀ ರಥ ಆಯುಜ್ಯಮಾನಾ ಯಾಹಿ ವಾಯುರ್ನ ನಿಯುತೋ ನೋ ಅಚ್ಛ ।**
(ಋ. ಸಂ. ೩-೩೫-೧)

ಎಂಬ ಮಂತ್ರವು ಸಮರ್ಥಿಸುವುದು. ಪಾಶ್ಚಾತ್ಯಪಂಡಿತರಲ್ಲಿ Griffith ಎಂಬುವರು Having a gold colour horse ಎಂದೂ Williams ಎಂಬುವರು provided with the horse named Hari ಎಂದೂ Ludwig, Rosen, Benfey ಎಂಬುವರು Possessed of bey or towny horses ಎಂದೂ ಈ ಶಬ್ದದ ಅರ್ಥವನ್ನು ವಿವರಿಸಿರುವರು.

**ದಧಿಷ್ವ**—ಈ ಶಬ್ದವು ಧಾ ಧಾತುವಿನ ಲೋಟ್‌ರೂಪವು. ಈ ಶಬ್ದಕ್ಕೆ ಇಲ್ಲಿ ಸ್ವೀಕರಿಸು ಎಂದರ್ಥಮಾಡಬಹುದು.

॥ ವ್ಯಾಕರಣಪ್ರಕ್ರಿಯಾ ॥

ತೂತುಜಾನಃ, ತುಜ ಧಾತುವಿನಮುಂದೆ ಲಿಟ್ ಪ್ರತ್ಯಯವನ್ನಿಟ್ಟರೆ **ಲಿಟಿಧಾತೋರನಭ್ಯಾಸಸ್ಯ** (ಪಾ. ಸೂ. ೬-೧-೮) ಲಿಟ್ಟು ಪರವಾಗಿರುವಾಗ ಅಭ್ಯಾಸವಲ್ಲದುದಾಗಿಯೂ ಒಂದು ಸ್ವರವುಳ್ಳದ್ದಾಗಿಯೂ ಇರುವ ಮೊದಲನೆಯ ಧಾತ್ವವಯವಕ್ಕೆ ದ್ವಿರುಚ್ಚಾರಣೆ ಬರುವುದು. ಧಾತುವು ಅಜಾದಿಯಾಗಿರುವ ಪಕ್ಷದಲ್ಲಿ ಎರಡನೇ

ಏಕಾಚ್ಚಿಗೆ ದ್ವಿರುಚ್ಚಾರಣೆ ಬರುವುದು, ಎಂಬುದರಿಂದ ದ್ವಿರುಚ್ಚಾರಣೆಬಂದರೆ ತುಜ್ ತುಜ್+ಲಿಟ್ ಎಂದಿರುವಾಗ **ಹಲಾದಿಶ್ಶೇಷಃ** (ಪಾ. ಸೂ ೭-೪-೬೦) ಅಭ್ಯಾಸದ ಮೊದಲನೆಯ ವ್ಯಂಜನವು ನಿಲ್ಲುವುದು ಮಿಕ್ಕ ವ್ಯಂಜನಗಳು ಲೋಪವನ್ನು ಹೊಂದುವುವು. (ಅಭ್ಯಾಸವೆಂದರೆ ದ್ವಿರುಚ್ಚರಿತ ಶಬ್ದದ ಪೂರ್ವಭಾಗ) ಎಂಬುದರಿಂದ ಮೊದಲ ನೆಯ ತುಜ್ ನಜಕಾರಕ್ಕೆ ಲೋಪಬಂದರೆ ತು ತುಜ್+ಲಿಟ್ ಎಂದಿರುವಾಗ **ಲಿಟಃ ಕಾನಜ್ವಾ** (ಪಾ. ಸೂ. ೩-೨-೧೦೬) ಛಂದಸ್ಸಿನಲ್ಲಿ ಲಿಟ್ಟಿಗೆ ಕಾನಜಾದೇಶ ವಿಕಲ್ಪವಾಗಿ ಬರುವುದು ಎಂಬುದರಿಂದ ಕಾನಜಾದೇಶಬರುವುದು, ಕಾನಚ್ ನಲ್ಲಿ 'ಆನ' ಎಂಬದು ನಿಲ್ಲುವುದು ತುತುಜ್+ಆನ ಎಂದಿರುವಾಗ **ತುಜಾದೀನಾಂ ದೀರ್ಘೋಽಭ್ಯಾಸಸ್ಯ** (ಪಾ. ಸೂ. ೬-೧-೭) ತುಜಾದಿಗಣಪಠಿತ ಧಾತುಗಳ ಅಭ್ಯಾಸಕ್ಕೆ ದೀರ್ಘಬರುವುದು ಎಂಬುದರಿಂದ ದೀರ್ಘ ಬಂದರೆ ತೂತುಜಾನಃ ಎಂದಾಗುವುದು. ಇಲ್ಲಿ **ಅಭ್ಯಸ್ತಾನಾಮಾದಿಃ** (ಪಾ ಸೂ. ೬-೧-೧೮೯) ಇಡಾಗಮದಲ್ಲಿರುವ ಸ್ವರವನ್ನು ಆದಿಯಲ್ಲಿ ಹೊಂದಿರುವ ಲಸಾರ್ವಭೌತಿಕವಾದ ಸಾರ್ವಧಾತುಕವು ಪರವಾಗಿರುವಾಗ ಅಭ್ಯಸ್ತದ ಆದಿಯು ಉದಾತ್ತವಾಗುವುದು ಎಂಬುದರಿಂದ ಆದ್ಯುದಾತ್ತ; ಬರುವುದು. ಹರಿವಃ ಎಂಬಲ್ಲಿ ಹರಯಃ ಅಸ್ಯ ಸನ್ತಿ ಇತಿ (ಕುದುರೆಗಳು ಇವನಲ್ಲಿವೆ ಎಂದು) ಅರ್ಥವಿವಕ್ಷೆಮಾಡಿದಾಗ 'ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್' (ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯಬಂದರೆ ಇದರ ಮಕಾರಕ್ಕೆ **ಛಂದಸೀರಃ**(ಪ. ಸೂ. ೮-೨-೧೫) ಇಕಾರ ಅಥವಾ ರೇಫವನ್ನು ಕಡೆಯಲ್ಲಿ ಹೊದಿರುವ ಶಬ್ದದಮುಂದಿರುವ ಮತುಪ್ಪಿನ ಮಕಾರಕ್ಕೆ ವಕಾರಬರುವುದು ಎಂಬುದರಿಂದ ವಕಾರಬರುವುದು, ಹರಿವತ್ ಎಂದಿರುವುದು. ಸಂಬೋಧನಾ ಏಕವಚನ ಪ್ರತ್ಯಯವನ್ನಿಟ್ಟರೆ ಮತುಪ್ಪು ಉಗಿತ್, ಆದ್ದರಿಂದ **ಉಗಿದಚಾಂ ಸರ್ವನಾಮಸ್ಥಾನೇऽಧಾತೋಃ** (ಪಾ. ಸೂ. ೭-೧-೭೦) ಸರ್ವನಾಮ ಸ್ಥಾನವು ಪರವಾಗಿರುವಾಗ ಧಾತುಭಿನ್ನವಾದ ಉಗಿತ್ತಿಗೂ ನಕಾರ ಲೋಪವನ್ನು ಹೊಂದಿರುವ ಅಂಚ್ ಧಾತುವಿಗೂ ನುಮ್ ಆಗಮಬರುವುದು ಎಂಬುದರಿಂದ ನುಮ್ ಆಗಮಬಂದರೆ ಹರಿವನ್+ತ್ ಎಂದಿರುವುದು ನಂತರ **ಸಂಯೋಗಾಂತಸ್ಯಲೋಪಃ** (ಗಾ. ಸೂ. ೮-೨-೨೩) ಸಂಯೋಗವನ್ನು ಕೊನೆಯಲ್ಲಿ ಹೊಂದಿರುವ ಪದದಕೊನೆಗೆ ಲೋಪ ಬರುವುದು ಎಂಬುದರಿಂದ, **ಹಲ್ಙ್ಯಾಭ್ಯೋ** ಇತ್ಯಾದಿ ಸೂತ್ರದಿಂದ ಸಂಬುದ್ಧಿಲೋಪಾನಂತರ ಕೊನೆಯತ್‌ಗೆ ಲೋಪ ಬರುವುದು. ಈಗ **ಮತುವಸೋರು ಸಂಬುದ್ಧೌ ಛಂದಸಿ** (ಪಾ ಸೂ ೮-೩-೧) ಮತುಗ್- ವಸು ಈ ಎರಡು ಪ್ರತ್ಯಯಗಳನ್ನು ಕೊನೆಯಲ್ಲಿ ಉಳ್ಳಶಬ್ದಕ್ಕೆ ಛಂದಸ್ಸಿನಲ್ಲಿ, ರು ಆದೇಶಬರುವುದು ಎಂಬುದರಿಂದ ರು ಆದೇಶ ಬರುವುದು. ರುಆದೇಶವು **ಅಲೋಽಂತ್ಯಸ್ಯ** (ಪಾ. ಸೂ. ೧-೧-೫೨) ಎಂಬ ಪರಿಭಾಷೆಯಿಂದ ನಕಾರಕ್ಕೆ ಬರುವುದು. ರೇಫಕ್ಕೆ ವಿಸರ್ಗ, ಹರಿವಃ ಎಂದಾಗುವುದು, ಇಲ್ಲಿ ಆಷ್ಟಮಿಕ ಅನುದಾತ್ತಬರುವುದು.

**ಸುಬಾಮಂತ್ರಿತೇ ಪರಾಂಗವತ್ಸ್ವರೇ** (ಪಾ. ಸೂ. ೨-೧-೨) ಎಂಬುದರಿಂದ ವಿಧಿಸಲ್ಪಡುವ ಪರಾಂಗ ವದ್ಭಾವವು. ಇದು ಪದವಿಧಿಯಾದಕಾರಣ **ಸಮರ್ಥಃ ಪದವಿಧಿಃ** (ಪಾ.ಸೂ. ೨-೧-೧) ಎಂಬ ಪರಿಭಾಷೆಯನ್ನನು ಸರಿಸಿ ಸಾಮರ್ಥ್ಯವಿರುವಾಗಲೇ ಪ್ರವೃತ್ತಿಸುವುದೆಂದು ನಿರೂಪಿತವಾಗಿರುವುದು ಇಲ್ಲಿ ಬ್ರಹ್ಮಾಣಿ ಹರಿವಃ ಎಂಬಿವುಗಳಿಗೆ ಪರಸ್ಪರಾನ್ವಯವಿಲ್ಲದಕಾರಣ ಸಾಮರ್ಥ್ಯವಿಲ್ಲ ಆದ್ದರಿಂದ ಪರಾಂಗವದ್ಭಾವ ಬರುವುದಿಲ್ಲ. ಆದ್ದರಿಂದ ಬ್ರಹ್ಮಾಣಿ ಎಂಬುದಕ್ಕೆ ಆಷ್ಟಮಿಕಾಮಂತ್ರಿತಾನುದಾತ್ತವು ಬರುವುದಿಲ್ಲ. ಆದ್ಯುದಾತ್ತವಾಗಿಯೇ ಇರುವುದು. ಏವಂಚ ಬ್ರಹ್ಮಾಣಿ ಎಂಬುದರ ಮೊದಲನೆಯ ಉದಾತ್ತದ ಹಿಂದೆ ಇರುವ ಅನುದಾತ್ತವಾದ ಉಪ ಎಂಬುದರ ಅಕಾರವು **ಉದಾತ್ತಸ್ವರಿತಪರಸ್ಯ ಸನ್ನತರಃ** (ಪಾ. ಸೂ. ೧-೨-೪೦) ಎಂಬುದರಿಂದ ಅನುದಾತ್ತತರವಾಗುವುದು.

ಧಾಞ್‌ಧಾತು (ಡುಧಾಞ್‌ಧಾರಣ ಪೋಷಣಯೋಃ) ವಿನ ಮೇಲೆ ಲೋಟ್ ಆತ್ಮನೇಪದದಲ್ಲಿ ಮಧ್ಯಮಪುರುಷ ಏಕವಚನ ಥಾಸ್ ಬಂದರೆ ಧಾ+ಥಾಸ್ ಇದ್ದರೆ **ಥಾಸಸ್ಸೇ** (ಪಾ. ಸೂ. ೩-೪-೮೦) ಟಿಕಾರೇತ್ಸಂಜ್ಞಕ

ವಾದ ಲಕಾರಸ್ಥಾನದಲ್ಲಿ ಬಂದ ಥಾಸ್‌ಗೆ ಸೇ ಆದೇಶಬರುವುದು ಎಂಬುದರಿಂ ಸೇ ಆದೇಶಬಂದರೆ, **ಸವಾಭ್ಯಾಂ ವಾಮೌ** (ಪಾ ಸೂ. ೩-೪-೯೧), ಸಕಾರ ವಕಾರಗಳಮುಂದಿರುವ ಲೊಟ್ಟಿನ ಏಕಾರಕ್ಕೆ ಕ್ರಮವಾಗಿ ವ- ಅಮ್ ಎಂಬ ಆದೇಶಗಳು ಬರುವುವು ಎಂಬುದರಿಂದ ಏಕಾರಕ್ಕೆ ವ ಆದೇಶಬಂದರೆ ಧಾ+ಸ್ವ ಎಂದಿರುವಾಗ **ಛಂದಸ್ಯು ಭಯಥಾ** (ಪಾ. ಸೂ. ೩-೪-೧೧೭) ಧಾತ್ವಧಿಕಾರದಲ್ಲಿ ವಿಹಿತವಾದ ಪ್ರತ್ಯಯಗಳು ಸಾರ್ವಧಾತುಕ ಆರ್ಧಧಾತುಕ ಎಂಬ ಎರಡು ಸಂಜ್ಞೆಯನ್ನೂ ಹೊಂದುವುವು ಎಂಬುದರಿಂದ ಎರಡು ಸಂಜ್ಞೆಯೂ ಬರಲಾಗಿ ಸಾರ್ವಧಾತುಕಸಂಜ್ಞೆ ಯನ್ನು ಮುನ್ನಿಟ್ಟುಕೊಂಡು **ಕರ್ತರಿಶಪ್** (ಪಾ.ಸೂ. ೩-೧-೬೮) ಕರ್ತ್ರರ್ಥಕ ಸಾರ್ವಧಾತುಕಪರವಾಗಿರುವಾಗ ಶಪ್ ಬರುವುದು. ಎಂಬುದರಿಂದ ಶಪ್ ವಿಕರಣಬಂದರೆ, ಈ ಶಪ್‌ಗೆ **ಜುಹೋತ್ಯಾದಿಭ್ಯಃ ಶ್ಲುಃ** (ಪಾ. ಸೂ. ೨-೪-೭೫) ಜುಹೋತ್ಯಾದಿಧಾತುಗಳಿಗೆ ಬಂದ ಶಪ್ ವಿಕರಣಕ್ಕೆ ಶ್ಲು (ಲೋಪ) ಬರುವುದು ಎಂಬುದರಿಂದ ಶ್ಲು ಬಂದರೆ **ಶ್ಲೌ** (ಪಾ. ಸೂ. ೬-೧-೧೦) ಶ್ಲು ಬಂದಿರುವಾಗ ಧಾತುವಿಗೆ ದ್ವಿರುಚ್ಚಾರಣೆಬರುವುದು ಎಂಬುದರಿಂದ ದ್ವಿತ್ವ ಬಂದರೆ ಧಾ – ಧಾ+ಸ್ವಹ್ರಸ್ವಃ (ಪಾ. ಸೂ- ೭-೪-೫೯) ಅಭ್ಯಾಸೇ ಚರ್ಚ (ಪಾ. ಸೂ. ೮-೪-೫೪) ಎಂಬ ಸೂತ್ರಗಳಿಂದ ಹ್ರಸ್ವ ಜಶ್ತ್ವಗಳು ಬಂದರೆ ದ ಧಾ+ಸ್ವ ಎಂದಿರುವಾಗ ಆರ್ಧಧಾತುಕಸಂಜ್ಞೆಯನ್ನು ಮುನ್ನಿಟ್ಟುಕೊಂಡು ' ಆರ್ಧ ಧಾತುಕಸ್ಯೇಡ್ವಲಾದೇಃ ' (ಪಾ. ಸೂ. ೭-೨-೩೫) ಎಂಬುದರಿಂದ ಸ್ವಗೆ ಇಡಾಗಮವಮಾಡಿದರೆ ದಧಾ+ಇಸ್ವ ಎಂದಿರು ವಾಗ **ಆತೋಲೋಪ ಇಟಿಚ** (ಪಾ. ಸೂ. ೬-೪-೬೪) ಕಿತ್ತುಙಿತ್ತು ಆದ ಅಜಾದ್ಯಾರ್ಧಧಾತುಕ ಅಥವಾ ಇಡಾ ಗಮ ಇವು ಪರದಲ್ಲಿರುವಾಗ ಆಕಾರಕ್ಕೆ ಲೋಪಬರುವುದು ಎಂಬುದರಿಂದ ಆಕಾರಕ್ಕೆ ಲೋಪಬಂದು ' ಆದೇಶಪ್ರ ತ್ಯಯಯೋಃ ' (ಪಾ.ಸೂ. ೮-೩-೫೯)ಎಂಬುದರಿಂದ ಸಕಾರಕ್ಕೆ ಷತ್ವಬಂದರೆ ದಧಿಷ್ವ ಎಂದಾಗುವುದು. **ಚಾಯತೇ ರನ್ನೇಹ್ರಸ್ವಶ್ಚ** (ಉ. ಸೂ. ೪-೬-೫೯) ಅನ್ನ ಎಂಬ ಅರ್ಥವನ್ನು ವಿವಕ್ಷೆಮಾಡಿದಾಗ ಚಾಯೃಧಾತುವಿಗೆ ಅಸುನ್ ಪ್ರತ್ಯಯವೂ, ಪ್ರತ್ಯಯಕ್ಕೆ ನುಟ್ ಆಗಮವೂ ಚಾ ಎಂಬುದಕ್ಕೆ ಹ್ರಸ್ವವೂಬರುವುದು. ಎಂಬುದರಿಂದ ಚಾಯೃ ಧಾತುವಿಗೆ ಅಸುನ್ ನುಟ್ ಹ್ರಸ್ವಗಳು ಬಂದರೆ ಚಯ್‌ನ **ಲೋಪೋವ್ಯೋರ್ವಲಿ** (ಪಾ. ಸೂ. ೬-೧-೬೬) ಎಂಬುದರಿಂದ ಯ ಲೋಪಬಂದರೆ ಚನಃ ಎಂದಾಗುವುದು ॥೬॥

**ಇಲ್ಲಿಗೆ ಐದನೆಯ ವರ್ಗವು ಮುಗಿದುದು**

॥ ಸಂಹಿತಾಪಾಠಃ ॥

ಓಮಾ॑ಸಶ್ಚರ್ಷಣೀಧೃತೋ॒ ವಿಶ್ವೇ॑ ದೇವಾಸ॒ ಆ ಗ॑ತ ।
ದಾ॒ಶ್ವಾಂಸೋ॑ ದಾ॒ಶುಷಃ॑ ಸು॒ತಂ ॥ ೭ ॥

॥ ಪದಪಾಠಃ ॥

ಓಮಾ॑ಸಃ । ಚ॒ರ್ಷ॒ಣಿ॒ಽಧೃತಃ॒ । ವಿಶ್ವೇ॑ । ದೇ॒ವಾ॒ಸಃ॒ । ಆ । ಗ॒ತ॒ ॥
ದಾ॒ಶ್ವಾಂಸಃ॑ । ದಾ॒ಶುಷಃ॑ । ಸು॒ತಂ ॥ ೭ ॥

॥ ಸಾಯಣಭಾಷ್ಯಂ ॥

ಹೇ ವಿಶ್ವೇ ದೇವಾಸ ಏತನ್ನಾಮಕಾ ದೇವವಿಶೇಷಾ ದಾಶುಷೋ ಹವಿರ್ದತ್ತವತೋ ಯಜಮಾನಸ್ಯ ಸುತಮಭಿಷುತಂ ಸೋಮಂ ಪ್ರತ್ಯಾ ಗತ । ಆಗಚ್ಛತ । ತೇ ಚ ದೇವಾ ಓಮಾಸೋ ರಕ್ಷಕಾಃ ಚರ್ಷಣೀಧೃತೋ ಮನುಷ್ಯಾಣಾಂ ಧಾರಕಾ ದಾಶ್ವಾಂಸಃ ಫಲಸ್ಯ ದಾತಾರಃ ಮನುಷ್ಯಾ ಇತ್ಯಾದಿಷು ಪಂಚವಿಂಶತಿಸಂಖ್ಯಾಕೇಷು ಮನುಷ್ಯನಾಮಸು ಚರ್ಷಣಿಶಬ್ದಃ ಪಠಿತಃ । ಅಶ್ವಿನಾವಿತ್ಯಾದಿಷ್ವೇಕತ್ರಿಂಶತ್ಸಂಖ್ಯಾಕೇಷು ದೇವವಿಶೇಷನಾಮಸು ವಿಶ್ವೇ ದೇವಾಃ ಸಾಧ್ಯಾ ಇತಿ ಪಠಿತಂ । ಏತಾಮೃಚಂ ಯಾಸ್ಕ ಏವಂ ವ್ಯಾಖ್ಯಾತವಾನ್ । ಅವಿತಾರೋ ವಾವನೀಯಾ ವಾ ಮನುಷ್ಯಧೃತಃ ಸರ್ವೇ ಚ ದೇವಾ ಇಹಾಗಚ್ಛತ ದತ್ತವಂತೋ ದತ್ತವತಃ ಸುತಮಿತಿ ತದೇತದೇಕಮೇವ ವೈಶ್ವದೇವಂ ಗಾಯತ್ರಂ ತೃಚಂ ದಶತಯೀಷು ವಿದ್ಯತೇ ಯತ್ತು ಕಿಂಚಿದ್ಬಹುದೈವತಂ ತದ್ವೈಶ್ವದೇವಾನಾಂ ಸ್ಥಾನೇ ಯುಜ್ಯತೇ ಯದೇವ ವಿಶ್ವಲಿಂಗಮಿತಿ ಶಾಕಪೂಣಿಃ । ನಿ. ೧೨-೪೦ । ಇತಿ । ಅತ್ರ ವಿಶ್ವಶಬ್ದಃ ಸರ್ವಶಬ್ದಪರ್ಯಾಯ ಇತಿ ಯಾಸ್ಕಸ್ಯ ಮತಂ । ದೇವವಿಶೇಷಸ್ಯೈವಾಸಾಧಾರಣಂ ಲಿಂಗಮಿತಿ ಶಾಕಪೂಣೇರ್ಮತಂ । ಅವಂತೀತ್ಯೋಮಾಸೋ ದೇವಾಃ । ಮನ್ನಿತ್ಯನುವೃತ್ತಾವವಿಸಿವಿಸಿಶುಷಿಭ್ಯಃ ಕಿತ್ । ಉ. ೧-೧೪೩ । ಇತಿ ಮನ್ಪ್ರತ್ಯಯಃ । ಜ್ವರತ್ವರಸ್ರಿವ್ಯವಿಮವಾಮುಪಧಾಯಾಶ್ಚ । ಪಾ. ೬-೪-೨೦ । ಇತ್ಯೂಠ್ । ಮನಃ ಕಿತ್ತ್ವೇಽಪಿ ಬಾಹುಲಕತ್ವಾದ್ಗುಣಃ । ಆಜ್ಜಸೇರಸುಕ್ । ಪಾ. ೭-೧-೫೦ । ಇತಿ ಜಸೇರಸುಗಾಗಮಃ । ಆಮಂತ್ರಿತಾದ್ಯುದಾತ್ತತ್ವಂ । ಚರ್ಷಣಯೋ ಮನುಷ್ಯಾಃ । ತಾನ್ವೃಷ್ಟಿದಾನಾದಿನಾ ಧಾರಯಂತೀತಿ ಚರ್ಷಣೀಧೃತೋ ದೇವಾಃ । ಪೂರ್ವಸ್ಯಾಮಂತ್ರಿತಸ್ಯ ಸಾಮಾನ್ಯವಚನಸ್ಯ ವಿಭಾಷಿತಂ ವಿಶೇಷವಚನೇ ಬಹುವಚನಂ । ಪಾ. ೮-೧-೭೪ । ಇತ್ಯವಿದ್ಯಮಾನವತ್ತ್ವಪ್ರತಿಷೇಧಾದಪಾದಾದಿತ್ವೇನ ನಿಘಾತಃ । ನನ್ವತ ಏವ ವಿದ್ಯಮಾನವತ್ತ್ವಾತ್ಸುಬಾಮಂತ್ರಿತ ಇತಿ ಪರಾಂಗವತ್ತ್ವೇನೈಕಪದೀಭಾವಾತ್ಪಾದಾದಪರತ್ವೇನ ಕಥಂ ನಿಘಾತ ಇತಿ ಚೇನ್ನ । ವತ್ಕರಣಂ ಸ್ವಾಶ್ರಯಮಪಿ ಯಥಾ ಸ್ಯಾತ್ । ಮ. ೮-೧-೭೨ । ಇತಿ ವಚನಾತ್ಪದಭೇದಪ್ರಯುಕ್ತಸ್ಯ ನಿಘಾತಸ್ಯಾಪ್ಯುಪಪತ್ತೇಃ । ಏಕಪದ್ಯೇಽಪ್ಯಾದ್ಯುದಾತ್ತತ್ವೇಽನುದಾತ್ತಂ ಪದಮೇಕವರ್ಜಮಿತಿ ಸುತರಾಮೇವ ನಿಘಾತೋ ಭವಿಷ್ಯತಿ । ಇತ್ಥಮೇವ ತರ್ಹಿ ದ್ರವತ್ಪಾಣೀ ಶುಭಸ್ಪತೀ ಇತ್ಯತ್ರಾಪಿ ಪರಾಂಗವತ್ತ್ವೇನೈಕಪದ್ಯಾದುತ್ತರಸ್ಯ ಶೇಷನಿಘಾತಪ್ರಸಂಗ ಇತಿ ಚೇನ್ನ । ತತ್ರ ಪರಾಂಗವದ್ಭಾವಸ್ಯ ಪರೇಣಾಮಂತ್ರಿತಂ ಪೂರ್ವಮವಿದ್ಯಮಾನವದಿತ್ಯವಿದ್ಯಮಾನವದ್ಭಾವೇನ ಬಾಧಿತತ್ವಾತ್ । ಇಹ ಪುನರ್ವಿಭಾಷಿತಂ ವಿಶೇಷವಚನೇ ಬಹುವಚನಮಿತ್ಯವಿದ್ಯಮಾನವತ್ತ್ವಸ್ಯ ನಿಷೇಧಾತ್ । ಪೂರ್ವಸ್ಯಾಪ್ಯಾಮಂತ್ರಿತಸ್ಯ ವಿದ್ಯಮಾನವತ್ತ್ವಾತ್ಪರಾಂಗವತ್ತ್ವಂ ಸ್ವೀಕೃತಮಿತಿ ವೈಷಮ್ಯಂ॥ ವಿಶ್ವೇ। ಪಾದಾದಿತ್ವಾದಾದ್ಯುದಾತ್ತಃ । ಗಣದೇವತಾವಚನಶ್ಚಾತ್ರ ವಿಶ್ವಶಬ್ದೋ ನ ಸರ್ವಶಬ್ದಪರ್ಯಾಯ ಇತಿ ವಿಶೇಷ್ಯಪರತಯಾ ಸಾಮಾನ್ಯವಚನತ್ವಾದೋಮಾಸ ಇತ್ಯನೇನ ನ ಸಾಮಾನಾಧಿಕರಣ್ಯಂ । ಸಾಮಾನಾಧಿಕರಣ್ಯೇ ಹಿ ಪೂರ್ವಸ್ಯ ಪಾದಸ್ಯ ಪರಾಂಗವದ್ಭಾವೇ ಸತಿ ಮಿತ್ರಾವರುಣಾವೃತಾವೃಧಾವಿತ್ಯಾದಾವಿವಾತ್ರಾಪ್ಯಾಮಂತ್ರಿತಾದ್ಯುದಾತ್ತತಾ ನ ಸ್ಯಾತ್। ವಿಶ್ವ ಇತ್ಯಸ್ಯ ವಿಶೇಷಣಂ ದೇವಾಸ ಇತಿ । ದೀವ್ಯಂತೀತಿ ದೇವಾಃ ಪ್ರಕಾಶವಂತಃ। ನನ್ವವಯವಪ್ರಸಿದ್ಧೇಃ ಸಮುದಾಯಪ್ರಸಿದ್ಧಿರ್ಬಲೀಯಸೀ। ಪರಿ. ೯೮ । ಇತಿ ರೂಢ ಏವಾರ್ಥೋ ದೇವಶಬ್ದಸ್ಯ ಗ್ರಾಹ್ಯೋ ನ ಯೌಗಿಕಃ । ಯೌಗಿಕತ್ವೇ ಹ್ಯವಯವಾರ್ಥಾನುಸಂಧಾನವ್ಯವಧಾನೇನ ಪ್ರತಿಪತ್ತಿರ್ವಿಕ್ಷಿಪ್ತಾ ಸ್ಯಾತ್ । ಸಮುದಾಯಪ್ರಸಿದ್ಧಾ ತು ನ ವಿಕ್ಷೇಪ ಇತಿ ಚೇನ್ನ । ಸಮುದಾಯ-

ಪ್ರಸಿದ್ಧಾ ಹಿ ದೇವಶಬ್ದಸ್ಯ ಸಾಮಾನ್ಯಪರತಯಾ ವಿಶೇಷವಚನತ್ವಾಭಾವಾದ್ವಿಭಾಷಿತಂ ವಿಶೇಷವಚನೇ ಬಹುವಚನಮಿತ್ಯನೇನಾನಿಷಿದ್ಧತ್ವಾದ್ವಿಶ್ವೇ ಇತ್ಯಸ್ಯಾವಿದ್ಯಮಾನವತ್ತ್ವೇನ ಶುಭಸ್ಪತೀ ಇತಿ ಪದವದ್ದೇವಾಸ ಇತ್ಯಸ್ಯಾಪ್ಯಾದ್ಯುದಾತ್ತತ್ವಂ ಸ್ಯಾತ್ | ಸ್ವರಾನುಸಾರೇಣ ಚ ರೂಢಿತ್ಯಾಗೇನಾಪಿ ದೇವಶಬ್ದಸ್ಯ ಯೋಗಸ್ವೀಕಾರೋ ಯುಕ್ತ ಏವ | ಆ ಗತ | ಆಗಚ್ಛತ | ಬಹುಲಂ ಛಂದಸೀತಿ ಶಪೋ ಲುಕಿ ಸತ್ಯನುದಾತ್ತೋಪದೇಶೇತ್ಯಾದಿನಾ ಮಕಾರಲೋಪಃ | ಅಜಃ ಪದಾತ್ಪರತ್ವಾನ್ನಿಘಾತಃ | ದಾಶ್ವಾಂಸಃ | ದಾಶೃ ದಾನ ಇತ್ಯಸ್ಯ ಕ್ವಸೌ ದಾಶ್ವಾನ್ ಸಾಹ್ವಾನ್ ಮೀಢ್ವಾಂಶ್ಚ | ಪಾ. ೬-೧-೧೨ | ಇತಿ ನಿಪಾತನಾತ್ಕ್ರಾದಿನಿಯಮಪ್ರಾಪ್ತ ಇಡಾಗಮೋ ದ್ವಿರ್ವಚನಂ ಚ |ಪಾ ೭-೨-೧೩ | ನ ಭವತಿ | ಪ್ರತ್ಯಯಸ್ವರೇಣ ಕ್ವಸೋರುದಾತ್ತತ್ವಂ ದಾಶುಷ ಇತ್ಯತ್ರ ವಸೋಃ ಸಂಪ್ರಸಾರಣಂ | ಪಾ ೬-೪-೧೩೧ | ಇತಿ ಸಂಪ್ರಸಾರಣಂ | ಸಂಪ್ರಸಾರಣಾಚ್ಚ | ಪಾ ೬-೧-೧೦೮ | ಇತಿ ಪೂರ್ವರೂಪತ್ವಂ | ಆದೇಶಪ್ರತ್ಯಯಯೋಃ | ಪಾ. ೮-೩-೫೯ | ಇತಿ ಷತ್ವಂ ||

|| ಪ್ರತಿಪದಾರ್ಥಃ ||

ಓಮಾಸಃ—ರಕ್ಷಕರಾದ | ಚರ್ಷಣೀಧೃತಃ—ಮನುಷ್ಯರನ್ನು ಧಾರಣೆ ಅಥವಾ ಪೋಷಣೆಮಾಡುವ | ದಾಶ್ವಾಂಸಃ—(ಯಜ್ಞ) ಫಲವನ್ನು ಕೊಡುವ (ಹೇ) ವಿಶ್ವೇ ದೇವಾಸಃ—ವಿಶ್ವೇದೇವತೆಗಳೆಂದು ಕರೆಯಲ್ಪಡುವ ನೀವು ! ದಾಶುಷಃ—ಹವಿಸ್ಸನ್ನು ಕೊಡುವ ಯಜಮಾನನ | ಸುತಂ—ಹಿಂಡಿ ಸಿದ್ಧಪಡಿಸಿರುವ ಸೋಮವನ್ನು (ಪಾನಮಾಡುವುದಕ್ಕಾಗಿ) | ಆ ಗತ—ಬನ್ನಿರಿ.

|| ಭಾವಾರ್ಥ ||

ಎಲೈ ವಿಶ್ವೇದೇವತೆಗಳೇ, ನೀವು ಮನುಷ್ಯರನ್ನು (ಅಥವಾ ಯಜ್ಞಮಾಡತಕ್ಕವರನ್ನು) ಸಂರಕ್ಷಿಸುವವರು ಮತ್ತು ಯಜ್ಞಕರ್ಮಗಳಿಗೆ ಫಲವನ್ನು ಕೊಟ್ಟು ಮನುಷ್ಯರನ್ನು ಪೋಷಿಸತಕ್ಕವರು. ಇಂತಹ ನೀವು ಯಜಮಾನನು ನಿಮಗಾಗಿ ಸಿದ್ಧಪಡಿಸಿರುವ ಸೋಮವನ್ನು ಪಾನಮಾಡುವುದಕ್ಕಾಗಿ ಇಲ್ಲಿಗೆ ಬನ್ನಿರಿ.

## English Translation.

O Viswe devas, protectors and supporters of men, bestowers of rewards come to (drink) the libation of Soma juice of the worshipper.

|| ವಿಶೇಷವಿಷಯಗಳು ||

ಇಲ್ಲಿಂದ ಮುಂದಿನ ಮೂರು ಋಕ್ಕುಗಳಿಗೆ ವೈಶ್ವದೇವಸ್ತೃಚವೆಂದು ಹೆಸರು- ಈ ಋಕ್ಕುಗಳನ್ನು ಅಭಿಜಿತ್‌ಸವನದಲ್ಲಿ ಹೇಳುವರು ಮತ್ತು ಚಾತುರ್ಮಾಸ್ಯವೆಂಬ ಯಾಗದಲ್ಲಿ ಸೋಮರಸವನ್ನು ತೆಗೆಯುವ ದಿವಸ ಅಧ್ವರ್ಯುವು ಸೋಮವನ್ನು ದ್ರೋಣಕಲಶವೆಂಬ ಒಂದು ದೊಡ್ಡ ಮರದಪಾತ್ರೆಯಿಂದ ಸೋಮವನ್ನು ತೆಗೆಯುವಾಗ ಈ ಮಂತ್ರಗಳನ್ನು ಪಠಿಸುವನು

**ಓಮಾಸಃ**—ಸಂಬೋಧನಪ್ರಥಮಾಬಹುವಚನವು. ಈ ಶಬ್ದಕ್ಕೆ ರಕ್ಷಕರು, ಸಹಾಯಮಾಡುವವರು ಎಂದರ್ಥವು. ಋಗ್ವೇದದಲ್ಲಿ ಇನ್ನೆಲ್ಲಿಯೂ ಈ ಶಬ್ದದ ಪ್ರಯೋಗವಿಲ್ಲ.

**ಚರ್ಷಣೀಧೃತಃ**—ಚರ್ಷಣೀಶಬ್ದವು ಮನುಷ್ಯಾರ್ಥಸೂಚಕವಾದ ಇಪ್ಪತ್ತೈದು ಶಬ್ದಗಳ ಮಧ್ಯದಲ್ಲಿ ಪಠಿತವಾಗಿರುವುದು (ನಿ. ೨-೩).

**ಯ ಏಕಶ್ಚರ್ಷಣೀನಾಂ ವಸೂನಾಮಿರಜ್ಯಸಿ** । (ಋ. ಸಂ. ೧-೭-೯)

**ಧರ್ತಾರಾ ಚರ್ಷಣೀನಾಂ** । (ಋ. ಸಂ. ೧-೧೭-೨)

**ಸೇದು ರಾಜಾಕ್ಷಯತಿ ಚರ್ಷಣೀನಾಮರಾನ್ನ ನೇಮಿಃ ಪರಿ ತಾ ಬಭೂವ** ॥

(ಋ. ಸಂ. ೧-೩೨-೧೫)

ಇವೇ ಮೊದಲಾದ ಋಕ್ಕುಗಳಲ್ಲಿ **ಚರ್ಷಣೀನಾಂ** ಎಂಬ ಶಬ್ದಕ್ಕೆ ಭಾಷ್ಯಕಾರರೂ, ಇತರರೂ ಮನುಷ್ಯರೆಂದೇ ಅರ್ಥಮಾಡಿರುವರು. Monier Williams ಎಂಬ ಪಂಡಿತನು **ಚರ್ಷಣೀ** ಶಬ್ದವು **ಕೃಷ್**—ಉಳು, ವ್ಯವಸಾಯಮಾಡು ಎಂಬ ಧಾತುವಿನಿಂದ ಉಂಟಾಗಿರುವುದರಿಂದ ಚರ್ಷಣೀ ಎಂದರೆ ಉಳುವವರು, ವ್ಯವಸಾಯ ಮಾಡುವ ಜನರು ಎಂದರ್ಥಮಾಡಿದಾರೆ. ಈ ಅರ್ಥವೂ ಸಾಧುವಾದುದೆಂದು ತೋರುತ್ತದೆ. ಇತರ ಪಾಶ್ಚಾತ್ಯ ಪಂಡಿತರು ಇದಕ್ಕೆ ಅರ್ಥಮಾಡುವಾಗ Man, people, race, stock, tribe ಎಂಬ ಶಬ್ದಗಳನ್ನು ಉಪ ಯೋಗಿಸಿದಾರೆ. ಈ ಪದವನ್ನು ವಿಶೇಷಣವಾಗಿ ಉಪಯೋಗಿಸುವ ಸಂದರ್ಭದಲ್ಲಿ, hastening, brisk, active ಎಂಬ ಅರ್ಥವಿರುವುದೆಂದು ಹೇಳುವರು. Griffith ಎಂಬುವರು ಈ ಶಬ್ದವು **ಚರ್** ಸಂಚರಿಸು ಎಂಬ ಧಾತುವಿನಿಂದ ಉಂಟಾಗಿರುವುದರಿಂದ ಈ ಚರ್ಷಣೀಶಬ್ದವು Living beings ಪ್ರಾಣಿಗಳು ಎಂಬ ಅರ್ಥ ವನ್ನು ಸೂಚಿಸುವುದೆಂದು ಹೇಳುವರು. ಋಗ್ವೇದಕಾಲದಲ್ಲಿ ಆರ್ಯರು ವ್ಯವಸಾಯದಲ್ಲಿ ನಿರತರಾಗಿದ್ದುದರಿಂದ Cultivating people ಎಂಬ ಅರ್ಥವೇ ಸಮಂಜಸವಾಗಿರುವುದೆಂದು ಅನೇಕರ ಅಭಿಮತವು. **ಧೃ** ಎಂಬ ಧಾತುವಿಗೆ ಧಾರಣೆ ಪೋಷಣೆ ಎಂಬರ್ಥವಿರುವುದರಿಂದ ಚರ್ಷಣೀಧೃತಃ ಎಂಬ ಶಬ್ದಕ್ಕೆ ಮನುಷ್ಯರನ್ನು ಪೋಷಿಸ ತಕ್ಕವರು, ರಕ್ಷಿಸತಕ್ಕವರು ಎಂದು ಅರ್ಥಮಾಡುವ ವಿಷಯದಲ್ಲಿ ಸಂಶಯಪಡಬೇಕಾಗಿಲ್ಲ.

**ವಿಶ್ವೇ ದೇವಾಸಃ**—ಅಶ್ವಿನೌ ಮೊದಲಾದ ದೇವತಾವಿಶೇಷಗಳನ್ನು ಸೂಚಿಸುವ ಮೂವತ್ತೊಂದು ನಾಮಗಳ ಮಧ್ಯದಲ್ಲಿ ಈ ದೇವತೆಗಳ ಹೆಸರು ಪಠಿತವಾಗಿರುವುದು. ಇವರು ಪ್ರತ್ಯೇಕವಾದ ವಿಶೇಷದೇವತೆ ಗಳೆಂದು ಭಾಷ್ಯಕಾರರು ಹೇಳುವರು. ಕೆಲವರು ಎಲ್ಲಾ ದೇವತೆಗಳೆಂದು ಹೇಳುವರು. ಆದರೆ ವಿಶ್ವೇದೇವತೆ ಗಳೆಂದು ಪ್ರತ್ಯೇಕವಾದ ದೇವತೆಗಳನ್ನು ಋಷಿಗಳು ಆರಾಧಿಸುತ್ತಿದ್ದರೆಂದು ಇತರ ಸೂಕ್ತಗಳಲ್ಲಿರುವ ವಿಷಯ ಗಳಿಂದ ಸ್ಪಷ್ಟವಾಗಿ ಹೇಳಬಹುದು. ಈ ವಿಚಾರದಲ್ಲಿ ಯಾಸ್ಕರು ಈ ಋಕ್ಕಿಗೆ ವಿವರಣೆಯನ್ನು ಬರೆದಿರುವರು— **ಅವಿತಾರೋ ವಾವನೀಯಾ ವಾ ಮನುಷ್ಯಧೃತಃ ಸರ್ವೇ ದೇವಾ ಇಹಾಗಚ್ಛತ ದತ್ತ್ವಂತೋ ದತ್ತವತಃ ಸುತಮಿತಿ, ತದೇತದೇಕಮೇವ ವೈಶ್ವದೇವಂ ಗಾಯತ್ರಂ ತೃಚಂ ದಶತಯೀಷು ವಿದ್ಯತೇ ಯತ್ತು ಕಿಂಚಿ- ದ್ಬಹುದೈವತಂ ತದ್ವೈಶ್ವದೇವಾನಾಂ ಸ್ಥಾನೇ ಯುಜ್ಯತೇ ಯದೇವ ವಿಶ್ವಲಿಂಗಮಿತಿ ಶಾಕಪೂಣಿಃ** (ನಿ-೧೨-೪೦) ಈ ಋಕ್ಕಿನ ಅರ್ಥವಿಚಾರದಲ್ಲಿ ನಾವು ಹೇಳಿರುವ ಅರ್ಥಕ್ಕೂ ಯಾಸ್ಕರ ಅರ್ಥಕ್ಕೂ ಏನೂ ವ್ಯತ್ಯಾಸ ವಿಲ್ಲ. ಆದರೆ ಯಾಸ್ಕರ ಅಭಿಪ್ರಾಯದಂತೆ **ವಿಶ್ವೇದೇವಾಃ** ಎಂದರೆ ಎಲ್ಲಾ ದೇವತೆಗಳು ಎಂದು. ಮತ್ತು **ವಿಶ್ವೇದೇವರೆಂದರೆ ಆ ಹೆಸರಿನಿಂದ ಕರೆಯಲ್ಪಡುವ ವಿಶೇಷದೇವತೆಗಳೆಂದು** ಶಾಕಪೂಣಿ ಎಂಬುವರ **ಮತವೆಂದು**

ಯಾಸ್ಕರೇ ಹೇಳಿರುವರು. ಆದುದರಿಂದ ಅವರ ಕಾಲದಲ್ಲಿಯೇ ಈ ವಿಚಾರದಲ್ಲಿ ಭಿನ್ನಾಭಿಪ್ರಾಯವಿತ್ತೆಂದು ದೃಢವಾಗಿ ಹೇಳಬಹುದು. ಈಗ ಗೃಹ್ಯಾದಿಕರ್ಮಗಳಲ್ಲಿ ರೂಢಿಯಿರುವಂತೆ ಹೇಳುವುದಾದರೆ ಈ ವಿಶ್ವೇದೇವತೆಗಳು ಸಾಧಾರಣದೇವತೆಗಳ ಗುಂಪಿಗೆ ಸೇರಿದವರಲ್ಲವೆಂದೂ ಇವರದೇ ಹದಿಮೂರು ಜನರ ವಿಶೇಷ ಗುಂಪೆಂದೂ ತಿಳಿಯಬರುವುದು. ಅದು ಹೇಗಾದರೂ ಇರಲಿ ಋಗ್ವೇದದಲ್ಲಿ ವರ್ಣಿಸಿರುವ ವಿಶ್ವೇದೇವತೆಗಳು ಪ್ರತ್ಯೇಕವಾದ ದೇವತೆಗಳ ಗುಂಪಿಗೆ ಸೇರಿದವರೆಂದು ಹೇಳುವುದೇ ಯುಕ್ತವಾಗಿ ತೋರುವುದು.

ಆ ಗತ—ಮಧ್ಯಮಪುರುಷ ಬಹುವಚನವು. ಈಗಿನ ಸಂಸ್ಕೃತದಲ್ಲಿ ಇದು ಆಗಚ್ಛತ ಎಂದಾಗುವುದು.

ದಾಶ್ವಾಂಸಃ—ದಾಶೃ ದಾನ ಎಂಬ ಧಾತುವಿನಿಂದ ಉಂಟಾದ ಈ ಪದಕ್ಕೆ ಕೊಡುವವರು, ಎಂದರೆ ತಮ್ಮನ್ನು ಸ್ತೋತ್ರಮಾಡುವ ಮನುಷ್ಯರಿಗೆ ಫಲವನ್ನು ಕೊಡುವವರು ಎಂದರ್ಥವು. ಪಾಶ್ಚಾತ್ಯಪಂಡಿತರು ಈ ಶಬ್ದವನ್ನು Donors, distributors, bestowers of riches. ಮೊದಲಾದ ಶಬ್ದಗಳಿಂದ ವಿವರಿಸಿರುವರು.

ದಾಶುಷಃ—ಈ ಶಬ್ದವು ಷಷ್ಠ್ಯೇಕವಚನವು, (ದೇವತೆಗಳಿಗೆ ಹವಿಸ್ಸನ್ನು) ಕೊಡುವ ಅಥವಾ ಕೊಡುತ್ತಿರುವ ಎಂದರ್ಥವು. ಇದು ದಾಶ್ವಾಂಸಃ ಎಂಬ ಶಬ್ದದಂತೆಯೇ ಇದೆ. ಇದಕ್ಕೆ ಪಾಶ್ಚಾತ್ಯ ಪಂಡಿತರ ಅರ್ಥವು Of the distributors (Ludwig, Benfey), of the worshipper (Rosen, Griffith, Williams), of the offerers ಮೊದಲಾದ ಶಬ್ದಗಳಿಂದ ವಿವರಿಸಲ್ಪಟ್ಟಿದೆ.

ವಿಶ್ವೇದೇವತೆಗಳ ವಿಷಯದಲ್ಲಿ ಕೆಲವು ಮುಖ್ಯಾಂಶಗಳನ್ನು ಇಲ್ಲಿ ಹೇಳುವುದು ಅವಶ್ಯಕವಾಗಿರುವುದು. ಋಗ್ವೇದದಲ್ಲಿ ವಿಶ್ವೇದೇವತೆಗಳನ್ನು ಮಾತ್ರ ಸ್ತೋತ್ರಮಾಡಿರುವ ೬೩ ಸೂಕ್ತಗಳಿವೆ. ಇದಲ್ಲದೆ ಋ. ಸಂ. ೧-೧೬೪ ನೆಯ ಸೂಕ್ತದಲ್ಲಿ ಮೊದಲನೆಯ ೪೧ ಋಕ್ಕುಗಳು ವಿಶ್ವೇದೇವತೆಗಳ ಪರವಾಗಿವೆ. ಇವುಗಳಲ್ಲೆಲ್ಲಾ—ಋ. ಸಂ. ೧೦-೧೫೫ ಈ ಸೂಕ್ತವನ್ನು ಬಿಟ್ಟು—ಉಳಿದ ಎಲ್ಲಾ ಸೂಕ್ತಗಳಲ್ಲಿಯೂ ಅನೇಕ ದೇವತೆಗಳನ್ನು ಎಂದರೆ ಇತರ ಸೂಕ್ತಗಳಲ್ಲಿರುವಂತೆ ಅಗ್ನಿ, ಇಂದ್ರ ಮೊದಲಾದ ದೇವತೆಗಳನ್ನು ಸ್ತುತಿಸಿರುವುದಲ್ಲದೆ ವೃಕ್ಷಗಳು, ನದಿಗಳು, ಪರ್ವತಗಳು, ಗೋವುಗಳು, ಅಶ್ವಗಳು ಮೊದಲಾದವುಗಳೂ ಪ್ರತಿಪಾದಿಸಲ್ಪಟ್ಟಿವೆ. ಇವುಗಳಲ್ಲದೆ ಇತರ ದೇವತಾಕವಾದ ಸೂಕ್ತಗಳಲ್ಲಿ ಅನೇಕ ಕಡೆ ಒಟ್ಟು ೧೭ ಋಕ್ಕುಗಳು ವಿಶ್ವೇದೇವತಾಕವಾಗಿವೆ. ಈ ಸ್ಥಳಗಳಲ್ಲೆಲ್ಲಾ ವಿಶ್ವೇದೇವತೆಗಳೇ ಈ ಋಕ್ಕುಗಳಿಗೆ ದೇವತೆಗಳೆಂದು ಹೇಳಲ್ಪಟ್ಟಿದೆ. ಮತ್ತು ಋ. ಸಂ. ೧೦-೧೨೫-೧ ನೆಯ ಮಂತ್ರದಲ್ಲಿ ವಿಶ್ವೇದೇವತೆಗಳ ಜೊತೆಯಲ್ಲಿ ವಸುರುದ್ರಾದಿತ್ಯರೂ ಸೇರಿದಾರೆ.

ವಾಜಸನೇಯ ಸಂಹಿತೆಯ (ಶುಕ್ಲಯಜುರ್ವೇದ) ೨-೨೨ ನೆಯ ಮಂತ್ರದಲ್ಲಿ ಇಂದ್ರನು, ಆದಿತ್ಯರು, ವಸುಗಳು, ಮರುತ್ತು ವಿಶ್ವೇದೇವತೆಗಳೊಡನೆ ಸೇರಬೇಕೆಂದು ಪ್ರಾರ್ಥಿಸಲ್ಪಟ್ಟಿರುವರು. ಅದೇ ಸಂಹಿತೆಯ ३३-೪೫ ರಿಂದ ४೭ ಮಂತ್ರಗಳಲ್ಲಿ ಇಂದ್ರ, ವಾಯು ಮತ್ತು ಇತರ ದೇವತೆಗಳು ವಿಶ್ವೇದೇವತೆಗಳ ಜೊತೆಯಲ್ಲಿ ಸ್ತುತಿಸಲ್ಪಟ್ಟಿದಾರೆ.

ಅಥರ್ವಣವೇದದ ೨೦-೬೨-೬ ನೆಯ ಮಂತ್ರದಲ್ಲಿ ವಿಶ್ವೇದೇವತೆಗಳನ್ನು ಏಕವಚನದಲ್ಲಿ ಸೂಚಿಸಲಾಗಿದೆ ಮತ್ತು ವಿಶ್ವೇದೇವತೆಗಳ ಪರವಾದ ಅನೇಕ ಸೂಕ್ತಗಳು ಅಥರ್ವಣವೇದದಲ್ಲಿವೆ.

ಬ್ರಾಹ್ಮಣಗಳಲ್ಲಿಯೂ ಸಹ ವಿಶ್ವೇದೇವತೆಗಳ ಹೆಸರು ಅಲ್ಲಲ್ಲಿ ಸೂಚಿತವಾಗಿದೆ. ಕೌಶೀತಕೀ ಬ್ರಾಹ್ಮಣದ ೪-೧೪, ಗೋಪಥ ಬ್ರಾಹ್ಮಣದ ೧-೨೦ ನೆಯ ಮಂತ್ರಗಳಲ್ಲಿ ಎಲ್ಲಾ ದೇವತೆಗಳನ್ನು ವಿಶ್ವೇದೇವತೆಗಳೆಂಬ ಹೆಸರ

ನಿಂದಲೇ ಸಂಬೋಧನೆಮಾಡಲಾಗಿದೆ. ಶತಪಥ ಬ್ರಾಹ್ಮಣದ ೩-೯-೨-೬ ನೆಯ ಮಂತ್ರದಲ್ಲಿ ವಿಶ್ವೇದೇವತೆಗಳು ಸೂರ್ಯನ ಕಿರಣಗಳೆಂದೂ. ಶ. ಬ್ರಾ. ೧೪-೨-೨-೩೭ ರಲ್ಲಿ ಪ್ರಾಣಾದಿವಾಯುಗಳೆಂದೂ ಶ. ಬ್ರಾ. ೬-೧-೧-೪೨ ರಲ್ಲಿ ಯಜ್ಞಕರ್ಮಗಳೆಂದೂ. ಶ. ಬ್ರಾ. ೨-೪-೪-೧೩ ರಲ್ಲಿ ಇಂದ್ರಾಗ್ನಿಗಳೆಂದೂ ಕರೆಯಲ್ಪಟ್ಟಿದಾರೆ. ತೈತ್ತಿರೀಯ ಆರಣ್ಯಕದಲ್ಲಿ (ತೈ. ಆ. ೫-೧-೬) ವಿಶ್ವೇದೇವತೆಗಳ ಜೊತೆಯಲ್ಲಿ ಇಂದ್ರಾಗ್ನಿಗಳು ಸ್ತುತಿಸಲ್ಪಟ್ಟಿದಾರೆ.

ಪುರಾಣಗಳಲ್ಲಿ ಕೆಲವುಕಡೆ ಈ ವಿಶ್ವೇದೇವತೆಗಳು ದಿಕ್ಕುಗಳಿಗೆ ಅಧಿಪತಿಗಳೆಂದು ಹೇಳಲ್ಪಟ್ಟಿದೆ. ನಿರುಕ್ತದಲ್ಲಿ (ನಿ. ೧೨-೩೯) ವಿಶ್ವೇದೇವತೆಗಳೆಂದರೆ ಎಲ್ಲಾ ದೇವತೆಗಳೂ ಎಂದಿದೆ. ನಿರುಕ್ತದ ಭಾಷ್ಯಕಾರರಾದ ದುರ್ಗಾಚಾರ್ಯರೆಂಬುವರು ವಿಶ್ವೇದೇವತೆಗಳೆಂದರೆ ಸೂರ್ಯನ ಕಿರಣಗಳೆಂದು ಅರ್ಥಮಾಡಿದಾರೆ ನಿರುಕ್ತಕಾರ ರಾದ ಯಾಸ್ಕರು ವಿಶ್ವೇದೇವತೆಗಳೆಂದರೆ ಸಮಸ್ತ ದೇವತೆಗಳು ಎಂದು ತಮ್ಮ ಅಭಿಪ್ರಾಯವನ್ನು ಹೇಳಿರುವುದಲ್ಲದೆ ಶಾಕಪೂಣಿ ಎಂಬುವರ ಅಭಿಪ್ರಾಯವನ್ನು ಸೂಚಿಸಿರುವರು. ಶೌನಕರು ತಮ್ಮ ಬೃಹದ್ದೇವತಾ ಎಂಬ ಗ್ರಂಥದಲ್ಲಿ (ಬೃ. ದೇ. ೨-೧೨೮ ರಿಂದ ೧೩೪ ಶ್ಲೋಕಗಳು) ವಿಶ್ವೇದೇವತೆಗಳ ವಿಷಯವಾಗಿ ಹೇಳುವಾಗ, ವಿಶ್ವೇದೇವಾಃ ಎಂದರೆ ಸಮಸ್ತದೇವತೆಗಳು ಎಂದು ಯಾಸ್ಕರು ಮತ್ತು ಶಾಂಡಿಲ್ಯರು ಅಭಿಪ್ರಾಯಪಡುವರೆಂದು ಹೇಳಿದಾರೆ ಶೌನಕರ ಮತವೂ ಅದೇರೀತಿ ಇದೆ.

ಸಾಯಣಾಚಾರ್ಯರು ಈ ಋಕ್ಕಿಗೆ ವ್ಯಾಖ್ಯಾನಮಾಡುವಾಗ ವಿಶ್ವೇದೇವರೆಂದರೆ ಅಶ್ವಿನೀದೇವತೆಗಳೇ ಮೊದಲಾದ ಮೂವತ್ತೊಂದು ಮಂದಿ ದೇವತೆಗಳು ಸೇರಿ ವಿಶ್ವೇದೇವತೆಗಳೆಂದು ಕರೆಯಲ್ಪಡುವರೆಂಬುದಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದಾರೆ.

ಪಾಶ್ಚಾತ್ಯಪಂಡಿತರಲ್ಲಿ Langlois, Kaegi, Hopkins ಎಂಬುವರು ವಿಶ್ವೇದೇವತೆಗಳೆಂದರೆ ಸಮಸ್ತದೇವತೆಗಳು ಎಂದೂ Wilson, Griffith, Macdonell ಎಂಬುವರು ವಿಶ್ವೇದೇವತೆಗಳೆಂದರೆ ಸಮಸ್ತದೇವತೆಗಳು ಅಥವಾ ವಿಶ್ವೇದೇವತೆಗಳೆಂಬ ಪ್ರತ್ಯೇಕವಾದ ದೇವತೆಗಳ ಸಮೂಹ ಎಂಬ ಎರಡು ವಿಧವಾದ ಅರ್ಥವನ್ನು ಅನುಮೋದಿಸುವರು.

ಮುಖ್ಯಾಭಿಪ್ರಾಯವೇನೆಂದರೆ—ಪೂರ್ವದಲ್ಲಿ ಎಂದರೆ ಬಹುಪ್ರಾಚೀನಕಾಲದಲ್ಲಿ ವಿಶ್ವೇದೇವತೆಗಳೆಂದರೆ ಸಮಸ್ತದೇವತೆಗಳೆಂಬ ಅರ್ಥವೇ ರೂಢಿಯಲ್ಲಿದ್ದು ಕಾಲಕ್ರಮೇಣ ವಿಶ್ವೇದೇವರೆಂದರೆ, ಆ ಹೆಸರಿನ ಪ್ರತ್ಯೇಕ ದೇವತೆಗಳ ಸಮೂಹವೆಂದು ಭಾವಿಸುವುದು ಬಳಕೆಗೆ ಬಂತೆಂದೂ ಹೇಳಬಹುದು. ಅನೇಕ ಬ್ರಾಹ್ಮಣಗಳಲ್ಲಿಯೂ ಪುರಾಣಗಳಲ್ಲಿಯೂ ವಿಶ್ವೇದೇವತೆಗಳೇ ಒಂದು ಪ್ರತ್ಯೇಕವಾದ ದೇವತೆಗಳ ಗುಂಪೆಂದು ಸೂಚಿಸಲ್ಪಟ್ಟಿದೆ. ಆದರೆ ಯಾಸ್ಕರ ಕಾಲದಲ್ಲಿಯೂ ಸಹ ಈ ವಿಷಯದಲ್ಲಿ ಭಿನ್ನಾಭಿಪ್ರಾಯವಿತ್ತೆಂದು ಯಾಸ್ಕರ ನಿರುಕ್ತದಿಂದಲೇ ತಿಳಿದುಬರುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಅವಂತಿ ಇತಿ ಓಮಾಸಃ** ಕಾಪಾಡುವುದರಿಂದ ದೇವತೆಗಳಿಗೆ ಓಮಾಸಃ ಎಂದು ಹೆಸರು, **ಅವಿ ಸಿವಿ ಸಿ ಶುಷಿಭ್ಯಃಕಿತ್** (ಉ.ಸೂ. ೧-೧೪೧) ಅವರಕ್ಷಣಾದೌ, ಷಿವು ತಂತು ಸಂತಾನೇ, ಷಿಞ್ ಬಂಧನೇ, ಶುಷ ಶೋಷಣೇ ಈ ಧಾತುಗಳಿಗೆ ಮನ್ ಪ್ರತ್ಯಯಬರುವುದು ಅದು ಕಿತ್ತಾಗುವುದು ಎಂಬುದರಿಂದ ಅವ ಧಾತುವಿನ ಮುಂದೆ ಮನ್

ಬರಲು, **ಜ್ವರ ತ್ವರಸ್ರಿವ್ಯವಿಮವಾಮುಪಧಾಯಾಶ್ಚ** (ಪಾ. ಸೂ. ೬-೪-೨೦) ಕ್ವಿಪ್ರತ್ಯಯ, ಝಲಾದಿಪ್ರತ್ಯಯ, ಅಥವಾ ಅನುನಾಸಿಕಾದಿಪ್ರತ್ಯಯವು ಪರದಲ್ಲಿರುವಾಗ ಜ್ವರಾದಿ ಧಾತುಗಳ ಉಪಾಂತ್ಯವರ್ಣವಕಾರಗಳಿಗೆ ಊರ್, ಬರುವುದು ಎಂಬುದರಿಂದ ಅವ್‌ಗೆ ಊರ್‌ಬರಲು ಊ+ಮ ಎಂದಿರುವಾಗ ಮನ್ನುಕಿತ್ತಾದಗೂ ಬಹುಲ ಗ್ರಹಣದಿಂದ **ಕ್ಣಿತಿಚ** (ಪಾ. ಸೂ. ೧-೧-೫) ಎಂದು ಗುಣನಿಷೇಧ ಬಾರದಕಾರಣ **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೧-೮೪) ಎಂಬುದರಿಂದ ಗುಣ ಬರುವುದು. ನಂತರ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಜಸ್‌ಪ್ರತ್ಯಯಕ್ಕೆ ಅಸುಕ್ ಆಗಮ ಬರಲು ಓಮಾಸಃ ಎಂದಾಗುವುದು. ಇಲ್ಲಿ ಷಾಷ್ಠವಾದ ಆಮಂತ್ರಿತಾದ್ಯುದಾತ್ತ ಬರುವುದು. ಚರ್ಷಣಯಃ ಎಂದರೆ ಮನುಷ್ಯರು ಅವರನ್ನು 'ಧಾರಯನ್ತಿ' (ಮಳೆ ಮೊದಲಾದವುಗಳನ್ನು ಕೊಟ್ಟು ರಕ್ಷಿಸುವರು) ಆದ್ದರಿಂದ ಚರ್ಷಣೀಧೃತಃ ಎಂದರೆ ದೇವತೆಗಳು. ಓಮಾಸಃ ಎಂಬ ಪೂರ್ವದ ಆಮಂತ್ರಿತವು ಸಾಮಾನ್ಯವಚನ, ಆದ್ದರಿಂದ **ವಿಭಾಷಿತಂ ವಿಶೇಷವಚನೇ** (ಬಹುವಚನಂ), (ಪಾ. ಸೂ. ೮-೧-೭೪) ವಿಶೇಷಣವಾದ ಆಮಂತ್ರಿತವು ಪರವಾಗಿರುವಾಗ ಪೂರ್ವದಲ್ಲಿರುವ ಬಹುವಚನವಾದ ಆಮಂತ್ರಿತವು ವಿಕಲ್ಪದಿಂದ ಅವಿದ್ಯಮಾನವದ್ಭಾವವನ್ನು ಹೊಂದುವುದು, ಎಂಬುದರಿಂದ ಅವಿದ್ಯಮಾನವದ್ಭಾವವು ಬರದೇ ಇರುವಪಕ್ಷದಲ್ಲಿ ಇದು ಪಾದಾದಿಯಾಗದಕಾರಣ ಆಷ್ಟಮಿಕಾನುದಾತ್ತಬರುವುದು. ಹಾಗಾದರೆ ವಿಭಾಷಿತಂ ವಿಶೇಷವಚನೇ ಬಹುವಚನಂ ಎಂಬದು ವೈಕಲ್ಪಿಕವು. ಇದರಿಂದ ಅವಿದ್ಯಮಾನವದ್ಭಾವನಿಷೇಧ ಬಂದರೆ ಪೂರ್ವಪದವು ವಿದ್ಯಮಾನವಾಗುವುದು. ಈಗ **ಸುಬಾಮಂತ್ರಿತೇ ಪರಾಂಗವತ್ಸ್ವರೇ** (ಪಾ. ಸೂ. ೨-೧-೨) ಇದರಿಂದ ಪರಾಂಗವದ್ಭಾವಬಂದರೆ ಓಮಾಸಶ್ಚರ್ಷಣೀ ಎಂಬುದು ಒಂದೇಪದವೆಂದು ಭಾವಿಸಬೇಕಾಗುವುದು. ಹೀಗಾದರೆ ಚರ್ಷಣೀಧೃತಃ ಎಂಬುದಕ್ಕೆ ಪದಾತ್ಪರತ್ವಬರುವುದಿಲ್ಲ. ಆದ್ದರಿಂದ ಆಷ್ಟಮಿಕಾನುದಾತ್ತ ಹೇಗೆಬರುವುದು ಎನ್ನಬಹುದು. ಅವಿದ್ಯಮಾನವಾಗುವುದು ಎಂದು ಹೇಳದೆ ಅವಿದ್ಯಮಾನವದ್ಭವತಿ ಎಂದು ವತ್ಕರಣವಿರುವುದರಿಂದ (ವತ್ಕರಣಂಸ್ವಾಶ್ರಯಮಪಿಯಥಾಸ್ಯಾತ್ (ಪಾ. ಮ. ೮-೧-೭೨) ಸ್ವಾಶ್ರಯಕಾರ್ಯವೂ ಬರುವುದಕ್ಕಾಗಿ ವತ್ಕರಣವು) ಎಂಬ ವಚನವನ್ನನುಸರಿಸಿ ಸ್ವಾಶ್ರಯಕಾರ್ಯವೂ ಬರುವುದು. ಆದ್ದರಿಂದ ಪದಭೇದವನ್ನು ಮುನ್ನಿಟ್ಟು ಅನುದಾತ್ತವೂ ಬರುವುದು, ಅಥವಾ ಒಂದೇಪದವೆಂದು ಭಾವಿಸಿದರೂ ಆಮಂತ್ರಿತಾದ್ಯುದಾತ್ತಬಂದರೆ **ಅನುದಾತ್ತಂ ಪದಮೇಕವರ್ಜಂ** (ಪಾ. ಸೂ. ೭-೧-೧೫೮) ಎಂಬುದರಿಂದ ಮಿಕ್ಕವುಗಳಿಗೆ ಅನುದಾತ್ತವು ಸುಲಭವಾಗಿ ಸಿದ್ಧವಾಗುವುದು. ಹೀಗಾದರೆ ಇದೇರೀತಿಯಲ್ಲಿ 'ದ್ರವತ್ಪಾಣೀ ಶುಭಸ್ಪತೀ' ಎಂಬಲ್ಲಿಯೂ ಪರಾಂಗವದ್ಭಾವದಿಂದ ಐಕಪದ್ಯ (ಒಂದೇಪದವಾಗುವಿಕೆ) ಏರ್ಪಡಲು ಉತ್ತರಪದಕ್ಕೆ ಶೇಷಾನುದಾತ್ತ ಬರಬೇಕಾಗುವುದು ಎಂದರೆ ಇಲ್ಲ, ಇಲ್ಲಿ ಆಮಂತ್ರಿತಂ ಪೂರ್ವಮವಿದ್ಯಮಾನವತ್ (ಪಾ. ಸೂ ೮-೧-೭೨) ಎಂಬ ಪರದಲ್ಲಿರುವ ಅವಿದ್ಯಮಾನವದ್ಭಾವದಿಂದ ಪರಾಂಗವದ್ಭಾವವು ಬಾಧಿತವಾಗುವುದು. ಇಲ್ಲಾದರೋ **ವಿಭಾಷಿತಂ ವಿಶೇಷವಚನೇ ಬಹುವಚನಂ** ಎಂಬುದರಿಂದ ಅವಿದ್ಯಮಾನವದ್ಭಾವಕ್ಕೆ ಪಾಕ್ಷಿಕನಿಷೇಧಮಾತ್ರ ಬರುವುದು, ಆದ್ದರಿಂದ ಪೂರ್ವಪದ ಆಮಂತ್ರಿತವೂ ಇದ್ದೇ ಇರುವುದರಿಂದ ಪರಾಂಗವದ್ಭಾವವನ್ನು ಒಪ್ಪುತ್ತೇವೆ, ಅಂತು ಇಲ್ಲಿ ಬಾಧತದಭಾವಗಳಿಂದ ವೈಷಮ್ಯವಿರುವಿರುವುದು. ವಿಶ್ವೇ, ಪಾದಾದಿಯಾದ್ದರಿಂದ ಆದ್ಯುದಾತ್ತ, ಈ ವಿಶ್ವ ಶಬ್ದವು ಸರ್ವನಾಮ ಶಬ್ದಗಳ ಮಧ್ಯದಲ್ಲಿ ಪಠಿತವಾಗಿರುವ ಸರ್ವಾರ್ಥಕವಾದ (ಎಲ್ಲ ಎಂಬರ್ಥವನ್ನು ಬೋಧಿಸುವ) ಶಬ್ದವಲ್ಲ. ಗಣದೇವತಾವಾಚಕವಾದ ಶಬ್ದವು. ಆದ್ದರಿಂದ ಇದು ವಿಶೇಷ್ಯವಾಗುವುದರಿಂದ ಸಾಮಾನ್ಯವಚನವಾಗುವುದು, ಆದ್ದರಿಂದ ಇದಕ್ಕೆ ಓಮಾಸಃ ಎಂಬುದರೊಂದಿಗೆ ಸಾಮಾನಾಧಿಕರಣ್ಯವು (ಏಕಾರ್ಥಬೋಧಕತ್ವವು) ಇರುವುದಿಲ್ಲ. ಸಾಮಾನಾಧಿಕರಣ್ಯವಿದ್ದಪಕ್ಷದಲ್ಲಿ 'ಓಮಾಸಶ್ಚರ್ಷಣೀಧೃತಃ' ಎಂಬ ಪೂರ್ವಪಾದಕ್ಕೆ ಪರಾಂಗವದ್ಭಾವ ಬಂದರೆ 'ಮಿತ್ರಾವರುಣಾವೃತಾವೃಧೌ ಇತ್ಯಾದಿಸ್ಥಲಗಳಲ್ಲಿ ದ್ವಿತೀಯ ಪಾದಾದಿಯಲ್ಲಿರುವ ಋತಾವೃಧೌ ಎಂಬುದಕ್ಕೆ ಹೇಗೆ ಉದಾತ್ತ

ಬರದೇ ಅನುದಾತ್ತ ಬಂದಿರುವುದೋ ಅದೇರೀತಿಯಲ್ಲಿ ಇಲ್ಲಿಯೂ ಉದಾತ್ತವುಬರದೇ ಅನುದಾತ್ತವೇ ಬರಬೇಕಾಗುವುದು. ಸಾಮಾನಾಧಿಕರಣ್ಯವಿಲ್ಲದಿದ್ದರೆ **ನಾಮಂತ್ರಿತೇ ಸಮಾನಾಧಿಕರಣೇ ಸಾಮಾನ್ಯವಚನಂ** (ಪಾ. ಸೂ. ೮-೧-೭೩) ಎಂಬುದರಿಂದ ಅವಿದ್ಯಮಾನವದ್ಭಾವಕ್ಕೆ ಪ್ರತಿಷೇಧ ಬರುವುದಿಲ್ಲ, ಆದ್ದರಿಂದ **ಆಮಂತ್ರಿತಂ ಪೂರ್ವಮವಿದ್ಯಮಾನವತ್** ( ಪಾ. ಸೂ. ೮-೧-೭೨ ) ಎಂಬುದರಿಂದ ಅವಿದ್ಯಮಾನವದ್ಭಾವ ಬರುವುದು, **ಸುಬಾಮಂತ್ರಿತೇ ಪರಾಂಗವತ್ಸ್ವರೇ** ಎಂಬುದರಿಂದ ಪರಾಂಗವದ್ಭಾವಬರುವುದಿಲ್ಲ. ಆದ್ದರಿಂದ ಪಾದಾದಿಯಾಗುವ 'ವಿಶ್ವೇ' ಎಂಬುದಕ್ಕೆ ಅಷ್ಟಮಿಕಾನುದಾತ್ತಬರದೇ ಷಾಷ್ಠವಾದ ಉದಾತ್ತವೇ ಬರುವುದು. 'ದೇವಾಸಃ' ಎಂಬುದು 'ವಿಶ್ವೇ' ಎಂಬುದಕ್ಕೆ ವಿಶೇಷಣವು. 'ದೀವ್ಯಂತೀತಿ ದೇವಾಃ' ಎಂಬ ವ್ಯುತ್ಪತ್ತಿಯಿಂದ ದೇವಾಃ ಎಂದಾಗುವುದು. ಆದ್ದರಿಂದ ಪ್ರಕಾಶವುಳ್ಳವರು ಎಂದರ್ಥವೇರ್ಪಡುವುದು. **ಅವಯವಪ್ರಸಿದ್ಧೇಃ ಸಮುದಾಯಪ್ರಸಿದ್ಧಿರ್ಬಲೀಯಸೀ** (ಪರಿಭಾಷಾ ೮೮) ಅವಯವಶಕ್ತಿಯಿಂದ ಸಿದ್ಧವಾಗುವ ಅರ್ಥಕ್ಕಿಂತಲೂ ಸಮುದಾಯಶಕ್ತಿಸಿದ್ಧವಾದ ಅರ್ಥವು ಬಲವಾದುದು ಎಂಬ ಪರಿಭಾಷೆಯಿಂದ ದೇವಾಃ ಎಂಬಲ್ಲಿ ರೂಢವಾದ (ಸಮುದಾಯಶಕ್ತಿಸಿದ್ಧವಾದ) ಅರ್ಥವನ್ನು (ದೇವತೆಗಳು) ಸ್ವೀಕರಿಸಬೇಕೇ ವಿನಾ, ಯೌಗಿಕವಾದ (ಅವಯವ ಶಕ್ತಿಸಿದ್ಧವಾದ) ಅರ್ಥವನ್ನು (ಪ್ರಕಾಶವುಳ್ಳವರು) ಸ್ವೀಕರಿಸಲಾಗದು, ಈ ಪರಿಭಾಷೆಯು 'ವಿಳಂಬಿತ ಧೀಹೇತೋರಿವಿಳಂಬಿತ ಧೀಹೇತುರ್ಬಲೀಯಾನ್' ಎಂಬ ನ್ಯಾಯದಿಂದ ಸಿದ್ಧವಾದುದು. ಯೌಗಿಕಾರ್ಥಸ್ವೀಕಾರಪಕ್ಷದಲ್ಲಿ, ಅವಯವಾರ್ಥಾನುಸಂಧಾನವು ಆವಶ್ಯಕವಾದ್ದರಿಂದ, ಈ ಪ್ರತೀತಿಯು ವಿಳಂಬಿತವಾಗುವುದು, ರೂಢಿಪಕ್ಷದಲ್ಲಿ ಅವಯವಾರ್ಥವು ಆವಶ್ಯಕವಿಲ್ಲ, ಆದಕಾರಣ ಶೀಘ್ರಪ್ರತೀತಿ ಏರ್ಪಡುವುದು, ಇದೇ ಅರ್ಥವನ್ನೇ **ಯೋಗಾದ್ರೂಢಿರ್ಬಲೀಯಸೀ** ಎಂಬ ವಚನವೂ ಹೇಳುವುದು ಆದ್ದರಿಂದ ರೂಢ್ಯರ್ಥಸ್ವೀಕಾರವೇ ಯುಕ್ತವಾಗಿರುವುದು. ಆದರೂ ಸ್ವರಸಾಮಂಜಸ್ಯಕ್ಕಾಗಿ, ಇಲ್ಲಿ ಪೂರ್ವೋಕ್ತವಚನಗಳನ್ನುಲ್ಲಂಘಿಸಿ ಯೌಗಿಕಾರ್ಥವನ್ನೇ ಸ್ವೀಕರಿಸಬೇಕು. ರೂಢ್ಯರ್ಥವನ್ನು ಸ್ವೀಕರಿಸಿದರೆ ದೇವಶಬ್ದವು ಸಾಮಾನ್ಯವಚನವಾಗುವುದೇವಿನಾ ವಿಶೇಷವಚನವಾಗುವುದಿಲ್ಲ. ಆದ್ದರಿಂದ **ವಿಭಾಷಿತಂ ವಿಶೇಷವಚನೇ** (ಬಹುವಚನಂ), (ಪಾ. ಸೂ. ೮-೧-೭೪) ಎಂಬುದರಿಂದ ಅವಿದ್ಯಮಾನವದ್ಭಾವಪ್ರತಿಷೇಧ ಬರುವುದಿಲ್ಲ. ಅಂದಮೇಲೆ **ಆಮಂತ್ರಿತಂ ಪೂರ್ವಮವಿದ್ಯಮಾನವತ್** ಎಂಬುದರಿಂದ ವಿಶ್ವೇ ಎಂಬ ಪೂರ್ವಪದಕ್ಕೆ ಅವಿದ್ಯಮಾನವದ್ಭಾವ ಬಂದರೆ ಶುಭಸ್ಪತೀ ಎಂಬ ಪದದಹಾಗೆ ದೇವಾಸಃ ಎಂಬಲ್ಲಿಯೂ ಆದ್ಯುದಾತ್ತವು ಬರಬೇಕಾಗಿಬರುವುದು, ಆದಕಾರಣ ಯೌಗಿಕಾರ್ಥವನ್ನೇ ಇಲ್ಲಿ ಸ್ವೀಕರಿಸಬೇಕು. ದೇವಾಸಃ ಎಂಬಲ್ಲಿ **ಆಜ್ಜಸೇರಸುಕ್** (ಪಾ. ಸೂ- ೭-೧-೫೦) ಎಂಬುದರಿಂದ ಅಸುಗಾಗಮ ಬಂದಿರುವುದು. ಆಗತ ಎಂಬುದಕ್ಕೆ ಆಗಚ್ಛತ ಎಂದರ್ಥವು. ಆಙ್ ಉಪಸರ್ಗದಿಂದ ಕೂಡಿರುವ 'ಗಮ್' ಧಾತುವಿಗೆ ಲೋಟ್ ಮಧ್ಯಮಪುರುಷ ಬಹುವಚನ 'ಥ' ಪ್ರತ್ಯಯವನ್ನಿಟ್ಟರೆ ಅದಕ್ಕೆ **ತಸ್ಥಸ್ಥಮಿ ಪಾಂತಾಂತಂತಾಮಃ** (ಪಾ. ಸೂ. ೪-೧-೧) ಎಂಬುದರಿಂದ ತ ಆದೇಶಬರುತ್ತೆ. **ಕರ್ತರಿಶಪ್** (ಪಾ. ಸೂ. ೬-೧-೬೮) ಎಂಬುದರಿಂದ ಪ್ರಾಪ್ತವಾದ ಶಪ್ಪಿಗೆ **ಬಹುಲಂ ಛಂದಸಿ** (ಪಾ. ಸೂ. ೨-೪-೭೩) ಎಂಬುದರಿಂದ ಲುಕ್ ಬರುವುದು. ನಂತರ **ಅನುದಾತ್ತೋಪದೇಶ:**—(ಪಾ. ಸೂ. ೬-೪-೩೭) ಎಂಬುದರಿಂದ ಮಕಾರಕ್ಕೆ ಲೋಪಬರುತ್ತೆ. ಆಗತ ಎಂದಾಗುವುದು. ಆಙ್ ಎಂಬ ಪದಕ್ಕಿಂತಲೂ ಪರದಲ್ಲಿರುವುದರಿಂದ ಅಷ್ಟಮಿಕಾನುದಾತ್ತ ಬರುವುದು. 'ದಾಶ್ವಾಂಸಃ' ದಾಶೃ ದಾನೇ ಧಾತುವಿನಮೇಲೆ ಲಿಟ್ ಇಟ್ಟರೆ **ಕ್ವಸುಶ್ಚ** (ಪಾ. ಸೂ. ೦-೨-೧೦೭) ಎಂಬುದರಿಂದ ಕ್ವಸುಪ್ರತ್ಯಯ ಬರುವುದು. ವಸ್ ಪ್ರತ್ಯಯವು ವಲಾದಿಯಾದ್ದರಿಂದ **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂಬುದರಿಂದ ಇಡಾಗಮಪ್ರಾಪ್ತವಾದರೆ ಅದಕ್ಕೆ **ನೇಡ್ವಶಿಕೃತಿ** (ಪಾ. ಸೂ. ೭-೨-೮) ವಶಾದಿಯಾದಕೃತ್ತಿಗೆ ಇಟ್ ಬರುವುದಿಲ್ಲ ಎಂಬುದರಿಂದ ನಿಷೇಧಪ್ರಾಪ್ತವಾದರೆ **ಕೃ ಸೃ ಭೃ ವೃ ಸ್ತು ದ್ರು ಶ್ರು ಪ್ರೋಃ ಲಿಟಿ** (ಪಾ ಸೂ ೭-೨-೧೩) **ಪ್ರಕೃತಿ**

ಅಥವಾ ಪ್ರತ್ಯಯ ಇವುಗಳನ್ನು ನಿಮಿತ್ತಮಾಡಿಕೊಂಡು ಬರುವ ಎಲ್ಲಾ ಇಟ್ ಆಗಮನಿಷೇಧಗಳೂ ಲಿಟ್ಟಿನಲ್ಲಿ ಬರುವಪಕ್ಷದಲ್ಲಿ ' ಕೃಸೃ ' ಇತ್ಯಾದಿ ಅಷ್ಟಧಾತುಗಳ ಮುಂದಿರುವ ಲಿಟ್ಟಿಗೇ ಬರುವುವು. ಬಾಕಿಧಾತುಗಳ ಮುಂದಿರುವ ಲಿಟ್ಟಿಗೆ ಯಾವ ಇಟ್ ಆಗಮನಿಷೇಧವೂ ಬರುವುದಿಲ್ಲ, ಎಂಬ ಕ್ರಾದಿನಿಯಮದಿಂದ ಕ್ರಾದ್ಯಷ್ಟಕ ಭಿನ್ನವಾದ ದಾಶ್ ಧಾತುವಿನ ಮುಂದಿರುವ ಲಿಟ್‌ಸ್ಥಾನದಲ್ಲಿ ಬಂದಿರುವ ವಸ್‌ಪ್ರತ್ಯಯಕ್ಕೆ ಇಟ್ ಆಗಮಪ್ರಾಪ್ತವಾದರೆ **ದಾಶ್ವಾನ್ ಸಾಹ್ವಾನ್ ಮೀಢ್ವಾಂಶ್ಚ** (ಪಾ. ಸೂ. ೬-೧-೧೨) ಎಂಬ ಸೂತ್ರದಲ್ಲಿ ಪಾಣಿನಿ ಮಹರ್ಷಿಗಳು ಇಟ್ ಆಗಮವಿಲ್ಲದೇ ಇರುವುದನ್ನು ನಿಪಾತಿಸಿರುವುದರಿಂದ ಇಟ್ ಬರುವುದಿಲ್ಲ, ಇದೇಸೂತ್ರದಲ್ಲಿ ದಾಶ್ವಾನ್ ಎಂದು ದ್ವಿರ್ವಚನವಿಲ್ಲದಿರುವಿಕೆಯನ್ನು ನಿಪಾತಿಸಿರುವುದರಿಂದ **ಲಿಟಿಧಾತೋರನಭ್ಯಾಸಸ್ಯ** (ಪಾ. ಸೂ. ೬-೧-೮) ಎಂಬುದರಿಂದ ದ್ವಿತ್ವವೂ ಬರುವುದಿಲ್ಲ, ಪ್ರತ್ಯಯಸ್ವರದಿಂದ ಕ್ವಸುವು ಉದಾತ್ತವಾಗುವುದು, **ದಾಶುಷೇ** ದಾಶ್ವಸ್ ಎಂಬ ಕ್ವಸುಪ್ರತ್ಯಯಾಂತದಮೇಲೆ ಚತುರ್ಥೀವಿಭಕ್ತಿಯ ಏಕವಚನದ ಏ ಪ್ರತ್ಯಯವನ್ನಿಟ್ಟರೆ ದಾಶ್ವಸ್+ಏ ಎಂದಿರುವಾಗ **ವಸೋಸ್ಸಂಪ್ರಸಾರಣಂ** (ಪಾ.ಸೂ. ೬-೪-೧೩೧) ವಸ್ವಂತವಾಗಿಯೂ ಭಸಂಜ್ಞಿಕವಾಗಿಯೂ ಇರುವ ಅಂಗಕ್ಕೆ ಸಂಪ್ರಸಾರಣ ಬರುವುದು. (ಭ ಸಂಜ್ಞೆ ಎಂದರೆ **ಯಚಿಭಂ** (ಪಾ. ಸೂ. ೧-೪-೧೮) ಪ್ರಾಗಿವಾತ್ಕಃ (ಪಾ. ಸೂ. ೫-೩-೭೦) ಎಂದು ವಿಹಿತವಾದ ಕ-ಪ್ರತ್ಯಯವನ್ನು ಅವಧಿಮಾಡಿ ವಿಹಿತವಾಗಿರುವ ಪ್ರತ್ಯಯಗಳಲ್ಲಿ ಯಕಾರಾದಿ ಅಥವಾ ಅಜಾದಿಯಾದ ಪ್ರತ್ಯಯಗಳ ಹಿಂದಿರುವುದು ಭ ಸಂಜ್ಞೆಯನ್ನು ಹೊಂದುವುದು. ಸಂಪ್ರಸಾರಣವೆಂದರೆ **ಇಗ್ಯಣಸ್ಸಂಪ್ರಸಾರಣಂ** (ಪಾ. ಸೂ. ೧-೧-೪೫) ಯ, ವ, ರ, ಲ, ಗಳ ಸ್ಥಾನಗಳಲ್ಲಿ ಕ್ರಮವಾಗಿ ಬರುವ ಇ, ಉ, ಋ ಗಳಿಗೆ ಸಂಪ್ರಸಾಣರವೆಂದು ಹೆಸರು, ಈ ರೀತಿ ಭ ಸಂಜ್ಞೆ ಸಂಪ್ರಸಾರಣಸಂಜ್ಞೆಗಳು ಸೂತ್ರಿತವಾಗಿರುವುವು. ಇಲ್ಲಿ ಪೂರ್ವೋದಾಹೃತಸೂತ್ರದಿಂದ ಸಂಪ್ರಸಾರಣಬಂದರೆ ದಾಶ್+ಉ+ಅಸ್+ಏ ಎಂದಿರುವಾಗ **ಸಂಪ್ರಸಾರಣಾಚ್ಚ** ಪಾ. ಸೂ. ೬-೧-೧೦೮) ಸಂಪ್ರಸಾರಣದ ಮುಂದೆ ಸ್ವರವಿದ್ದರೆ ಇವೆರಡರ ಸ್ಥಾನದಲ್ಲಿ ಪೂರ್ವರೂಪ ಬರುವುದು ಎಂಬುದರಿಂದ ಪೂರ್ವರೂಪಬಂದರೆ ದಾಶ್+ಉಸ್+ಏ ಎಂದಾಗುವುದು ಈಗ **ಆದೇಶಪ್ರತ್ಯಯಯೋಃ** (ಪಾ. ಸೂ. ೮-೩-೫೯) ಆದೇಶವಾಗಿಬಂದ ಸಕಾರಕ್ಕೆ ಅಥವಾ ಪ್ರತ್ಯಯಾವಯವಾದ ಸಕಾರಕ್ಕೆ ಇಣ್ ಕವರ್ಗಗಳಿಗಿಂತಲೂ ಪರದಲ್ಲಿರುವಾಗ ಷಕಾರ ಬರುವುದು ಎಂಬುದರಿಂದ ದಾಶುಸ್ ಎಂಬ ಪ್ರತ್ಯಯಾವಯವವಾದ ಸಕಾರಕ್ಕೆ ಷಕಾರ ಬಂದರೆ ದಾಶುಷೇ ಎಂದಾಗುವುದು ॥ ೭ ॥

॥ ಸಂಹಿತಾಪಾಠಃ ॥

ವಿಶ್ವೇ ದೇವಾಸೋ ಅಪ್ತುರಃ ಸುತಮಾಗಂತ ತೂರ್ಣಯಃ ।
ಉಸ್ರಾ ಇವ ಸ್ವಸರಾಣಿ ॥ ೮ ॥

॥ ಪದಪಾಠಃ ॥

ವಿಶ್ವೇ । ದೇವಾಸಃ । ಅಪ್ಽತುರಃ । ಸುತಂ । ಆ । ಗಂತ । ತೂರ್ಣಯಃ ॥
ಉಸ್ರಾಃಽಇವ । ಸ್ವಸರಾಣಿ ॥ ೮ ॥

॥ ಸಾಯಣಭಾಷ್ಯಂ ॥

ವಿಶ್ವೇ ದೇವಾಸ ಏತನ್ನಾಮಕಗಣರೂಪಾ ದೇವವಿಶೇಷಾಃ ಸುತಂ ಸೋಮಮಾ ಗಂತ । ಆಗಚ್ಛಂತು । ಕೀದೃಶಾಃ । ಅಪ್ತುರಃ । ತತ್ತತ್ಕಾಲೇ ವೃಷ್ಟಿಪ್ರದಾ ಇತ್ಯರ್ಥಃ । ತೂರ್ಣಯಃ ತ್ವರಾಯುಕ್ತಾಃ ।ಯಜಮಾನಮನುಗ್ರಹೀತುಮಾಲಸ್ಯರಹಿತಾ ಇತ್ಯರ್ಥಃ ವಿಶ್ವೇಷಾಂ ದೇವಾನಾಂ ಸೋಮಂ ಪ್ರತ್ಯಾಗಮನ ಉಸ್ರಾ ಇತ್ಯಾದಿರ್ದೃಷ್ಟಾಂತಃ । ಉಸ್ರಾಃ ಸೂರ್ಯರಶ್ಮಯಃ ಸ್ವಸರಾಣ್ಯಹಾನಿ ಪ್ರತ್ಯಾಲಸ್ಯರಹಿತಾ ಯಥಾ ಸಮಾಗಚ್ಛಂತಿ ತದ್ವತ್ । ಏೇದಯ ಇತ್ಯಾದಿಷು ಪಂಚದಶಸು ರಶ್ಮಿನಾಮಸೂಸ್ರಾವಸವ ಇತಿ ಪಠಿತಂ । ವಸ್ತೋರಿತ್ಯಾದಿಷು ದ್ವಾದಶಸ್ವಹರ್ನಾಮಸು ಸ್ವಸರಾಣಿ ಘ್ರಂಸೋ ಘರ್ಮ ಇತಿ ಪಠಿತಂ । ತಚ್ಚ ಪದಂ ಯಾಸ್ಕೇನ ವ್ಯಾಖ್ಯಾತಂ । ಸ್ವಸರಾಣ್ಯಹಾನಿ ಭವಂತಿ ಸ್ವಯಂಸಾರೀಣ್ಯಪಿ ವಾ ಸ್ವರಾದಿತ್ಯೋ ಭವತಿ ಸ ಏತಾನಿ ಸಾರಯತಿ ।ಉಸ್ರಾ ಇವ ಸ್ವಸರಾಣೀತ್ಯಪಿ ನಿಗಮೋ ಭವತಿ । ನಿ. ೫-೪ । ಇತಿ ॥ ದೇವಾಸಃ । ಪಚಾದ್ಯಜಂತಶ್ಚಿತ್ತ್ವಾದಂತೋದಾತ್ತಃ । ಪಾ. ೩-೧-೧೩೪ । ಅಪ್ತುರಃ ತುರ ತ್ವರಣೇ ಶ್ಲುವಿಕರಣೇ । ತುತುರಿತಿ ತ್ವರಯಂತೀತ್ಯರ್ಥೇ ಕ್ವಿಪ್ಚೇತಿ ಕ್ವಿಪ್ । ಗತಿಕಾರಕೋಪಪದಾತ್ಕೃದಿತ್ಯುತ್ತರಪದಪ್ರಕೃತಿಸ್ವರತ್ವಂ । ಆ ಗಂತ । ಆಗಚ್ಛಂತ್ವಿತ್ಯರ್ಥೇ ವ್ಯತ್ಯಯೇನ ಮಧ್ಯಮಪುರುಷಬಹುವಚನಂ। ಬಹುಲಂ ಛಂದಸೀತಿ ಶಪೋ ಲುಕ್ । ತಸ್ಯ ತಪ್ತನಪ್ತನಥನಾಶ್ಚ । ಪಾ. ೭-೧-೪೫ । ಇತಿ ತಬಾದೇಶೇಽಪಿತ್ । ಪಾ. ೧-೨-೪ । ಇತಿ ಪ್ರತಿಷೇಧಾದಙಿತ್ತ್ವಾದನುನಾಸಿಕಲೋಪಾಭಾವಃ । ತಿಙ್ಙತಿಙ ಇತಿ ನಿಘಾತಃ । ಞಿತ್ವರಾ ಸಂಭ್ರಮ ಇತಿ ಧಾತೋಸ್ತ್ವರಂತ ಇತಿ ತೂರ್ಣಯಃ । ನಿರಿತ್ಯನುವೃತ್ತೌ ವಹಿಶ್ರಿಶ್ರುಯುದ್ರುಗ್ಲಾಹಾತ್ವರಿಭ್ಯೋ ನಿತ್ । ಉ. ೪-೫೧ । ಇತಿ ನಿಪ್ರತ್ಯಯಃ । ನಿತ್ತ್ವಾದಾದ್ಯುದಾತ್ತಃ । ಉಸ್ರಾ ಇವೇತ್ಯತ್ರೇವೇನ ವಿಭಕ್ತ್ಯಲೋಪಃ ಪೂರ್ವಪದಪ್ರಕೃತಿಸ್ವರತ್ವಂ ಚ । ಪಾ- ೨-೧-೪-೨ । ಇತಿ ಸಮಾಸೇ ಪೂರ್ವಪದಪ್ರಕೃತಿಸ್ವರತ್ವಂ ನಿತ್ಯಂ । ಸರತೀತಿ ಸರಃ ಸೂರ್ಯಃ । ಪಚಾದ್ಯಚ್ । ಸ್ವಃ ಸರೋ ಯೇಷಾಂ ತಾನಿ ಸ್ವಸರಾಣ್ಯಹಾನಿ । ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮಿತಿ ಸ್ವಶಬ್ದ ಆದ್ಯುದಾತ್ತಃ ॥

॥ ಪ್ರತಿಪದಾರ್ಥ ॥

**ಅಪ್ತುರಃ**—ವೃಷ್ಟಿಪ್ರದರಾದ (ಮಳೆಯನ್ನು ಕೊಡುವ) । (ಹೇ) **ವಿಶ್ವೇ ದೇವಾಸಃ**—ಎಲೈ ವಿಶ್ವೇದೇವತೆಗಳೇ । (ನೀವು) **ಉಸ್ರಾಇವ ಸ್ವಸರಾಣಿ**—ಸೂರ್ಯರಶ್ಮಿಗಳು ಹಗಲಿನಲ್ಲಿ ಬಂದು ಮುಟ್ಟುವಂತೆ । **ಸುತಂ**—ಸಿದ್ಧಪಡಿಸಿರುವ **ಸೋಮ**ರಸವನ್ನು (ಪಾನಮಾಡುವುದಕ್ಕಾಗಿ) । **ತೂರ್ಣಯಃ**—ತ್ವರಯುಕ್ತರಾಗಿ (ವೇಗವಾಗಿ, ಬೇಗನೆ) । **ಆಗಂತ**—ಬನ್ನಿರಿ ।

॥ ಭಾವಾರ್ಥ ॥

ಎಲೈ ವಿಶ್ವೇದೇವತೆಗಳೇ, ನೀವು ವೃಷ್ಟಿಪ್ರದರು, ಎಂದರೆ ಮಳೆ ಬರುವಂತೆ ಮಾಡುವವರು. ನಿಮಗಾಗಿ ಸೋಮರಸವು ಸಿದ್ಧವಾಗಿರುವುದು ಅದನ್ನು ಪಾನಮಾಡುವುದಕ್ಕಾಗಿ, ಹಗಲಿನಲ್ಲಿ (ಸೂರ್ಯೋದಯವಾದ ಕೂಡಲೆ) ಸೂರ್ಯನ ರಶ್ಮಿಗಳು ನಮ್ಮನ್ನು ಬಂದುಸೇರುವಂತೆ, ಬೇಗನೆ ಬನ್ನಿರಿ.

English Translation.

May Visvedevas, givers of rain, swift in action, come to the libation (of soma juice) as the (sun's) rays (come) to the days.

॥ ವಿಶೇಷವಿಷಯಗಳು ॥

**ಅಪ್ತುರಃ**— ಭಾಷ್ಯಕಾರರೂ, ಸ್ಕಂದಸ್ವಾಮಿಯೂ ಇದಕ್ಕೆ ವೃಷ್ಟಿಪ್ರದಾಃ ಎಂದರೆ ಮಳೆಯನ್ನು ಕೊಡುವವರು ಎಂದರ್ಥಮಾಡಿದಾರೆ. ಪಾಶ್ಚಾತ್ಯರಲ್ಲಿ ಈ ಶಬ್ದಕ್ಕೆ Gloss ಎಂಬುವರು Stepping over an expanse of water, commanding over water, overcoming all difficulty ಎಂದೂ Griffith ಎಂಬುವರು active, pushing, hardworking ಎಂದೂ, Ludwig ಎಂಬುವರು Securer of rains, Active, quick, swift ಎಂದೂ Williams ಎಂಬುವರು shedder of rains ಎಂದೂ Rosen ಎಂಬುವರು rich in rains ಎಂದೂ Benfey ಎಂಬುವರು worthy, active, diligent ಎಂದೂ ವಿಧವಿಧವಾಗಿ ಅರ್ಥಮಾಡಿದಾರೆ. ಈ **ಅಪ್ತುರಃ** ಎಂಬ ಶಬ್ದವು ವಿಶ್ವೇದೇವತೆಗಳ ಪರವಾಗಿ ಮಾತ್ರವಲ್ಲದೆ ಇತರ ದೇವತೆಗಳ ಎಂದರೆ ಅಶ್ವಿನೀದೇವತೆಗಳು, ಇಂದ್ರ, ಅಗ್ನಿ ಪವಮಾನಃಸೋಮ ಮೊದಲಾದ ದೇವತೆಗಳ ಪರವಾಗಿಯೂ ಉಪಯೋಗಿಸಲ್ಪಟ್ಟಿದೆ—

ಅಶ್ವಿನಿದೇವತೆಗಳ ಪರವಾಗಿ— **ಯೇ ಅಪ್ತುರೋ ದಿವ್ಯಾಸೋ ನ ಗೃಧ್ರಾ ಅಭಿ ಪ್ರಯೋ ನಾಸತ್ಯಾ ವಹಂತಿ** ॥ (ಋ. ಸಂ. ೧-೧೧೮-೪)

ಇಂದ್ರನ ಪರವಾಗಿ—**ಯಜ್ಞೇನ ಗಾತುಮಪ್ತುರೋ ವಿವಿದ್ರಿರೇ ಧಿಯೋ ಹಿನ್ವಾನಾ ಉಶಿಜೋ ಮನೀಷಿಣಃ** ॥ (ಋ. ಸಂ. ೨-೨೧-೫ ಮತ್ತು ೩-೫೧-೨)

ಪವಮಾನಃಸೋಮಃ— **ಇಂದ್ರಂ ವರ್ಧಂತೋ ಅಪ್ತುರಃ ಕೃಣ್ವಂತೋ ವಿಶ್ವಮಾರ್ಯಂ** ॥
(ಋ. ಸಂ. ೯-೬೩-೫ ; ೯-೬೧-೧೩ ; ೯-೬೩-೨೧ ; ೯-೧೦೮-೭)

ಅಗ್ನಿ ಪರವಾಗಿ— **ಅಗ್ನಿಂ ಯಂತುರಮಪ್ತುರಮೃತಸ್ಯ ಯೋಗೇ ವನುಷಃ** ॥
(ಋ. ಸಂ. ೩-೨೭-೧೧) ಇತ್ಯಾದಿ

**ಸುತಂ**— ಕಲ್ಲುಗಳಿಂದ ಜಜ್ಜಿ ರಸವನ್ನು ಹಿಂಡಿತೆಗೆದು ಸೋಸಿ ಪಾನಯೋಗ್ಯವಾಗುವಂತೆ ಸಿದ್ಧಪಡಿಸಿರುವ ಎಂದರ್ಥವು. ಇದರ ಜೊತೆಯಲ್ಲಿ ಸೋಮಂ ಎಂಬ ಶಬ್ದವು ಉಪಯೋಗಿಸಿರುವುದೂ ಉಂಟು ಇಲ್ಲದಿರುವುದೂ ಉಂಟು. ಎರಡು ಸಂದರ್ಭಗಳಲ್ಲಿಯೂ ಸೋಮರಸವೆಂದೇ ಅರ್ಥವು.

**ತೂರ್ಣಯಃ**—ತ್ವರಮಾಣಾಃ, ಜಾಗ್ರತೆಯಾಗಿ, ಬೇಗನೆ, ಯಜಮಾನನಿಗೆ ಯಜ್ಞಫಲವನ್ನು ಕೊಡುವುದಕ್ಕಾಗಿ ಆಲಸ್ಯಮಾಡದೆ ಬೇಗನೆ ಬರುವವರು ಎಂದು ಭಾಷ್ಯಕಾರರು ಅರ್ಥಮಾಡಿದಾರೆ. ಪಾಶ್ಚಾತ್ಯಪಂಡಿತರೂ speedy, diligently, hastily, quickly, swift, quick in work, ಎಂದು ಬೇರೆ ಬೇರೆ ಶಬ್ದಗಳಲ್ಲಿ ಭಾಷ್ಯಕಾರರ ಅಭಿಪ್ರಾಯವನ್ನೇ ಅನುಮೋದಿಸಿದಾರೆ.

**ಉಸ್ರಾಇವ ಮತ್ತು ಸ್ವಸರಾಣಿ**— ಈ ಶಬ್ದವು ರಶ್ಮಿವಾಚಕವಾದ ಹದಿನೈದು ಪದಗಳ ಮಧ್ಯದಲ್ಲಿ ಪಠಿತವಾಗಿದೆ (ನಿ. ೨-೧೫) ಮತ್ತು ಗೋವುಗಳು ಎಂಬ ಅರ್ಥದಲ್ಲಿ ಒಂಭತ್ತು ಪದಗಳ ಮಧ್ಯದಲ್ಲಿ ಪಠಿತವಾಗಿದೆ (ನಿ. ೩-೯) ಮತ್ತು ಸ್ವಸರಾಣಿ ಎಂಬ ಶಬ್ದವು ಅಹಸ್ಸೂಚಕವಾದ ಹನ್ನೆರಡು ಶಬ್ದಗಳ ಮಧ್ಯದಲ್ಲಿಯೂ ಗೃಹ ಎಂಬ ಅರ್ಥಸೂಚಕವಾದ ಇಪ್ಪತ್ತೆರಡು ನಾಮಗಳ ಮಧ್ಯದಲ್ಲಿಯೂ ಪಠಿತವಾಗಿದೆ. ಆದುದರಿಂದ **ಉಸ್ರಾಇವ ಸ್ವಸರಾಣಿ** ಎಂಬ ದೃಷ್ಟಾಂತವಾಕ್ಯಕ್ಕೆ ಭಾಷ್ಯಕಾರರು ಹೇಳಿರುವ ಅರ್ಥವಲ್ಲದೆ "ಗೋವುಗಳು ತಮ್ಮ ಮನೆಗೆ ಹೋಗುವಂತೆ" ಎಂದೂ ಅರ್ಥಮಾಡಬಹುದು. ಸ್ಕಂದಸ್ವಾಮಿಯೂ ವೆಂಕಟಮಾಧವರೂ ಈ ಎರಡು ವಿಧವಾದ ಅರ್ಥವನ್ನೂ ಹೇಳಿರುವರು. ಪಾಶ್ಚಾತ್ಯಪಂಡಿತರೂ ಸಹ, ಸ್ವಸರಾಣಿ ಎಂಬ ಶಬ್ದಕ್ಕೆ day, cowshed, stall, abode, grazing ಮೊದಲಾದ ಶಬ್ದಗಳಿಂದ ಅರ್ಥಮಾಡಿರುವರು. ಸ್ವಸರಾಣಿ ಎಂಬ ಶಬ್ದವು ಋ. ಸಂ. ೧-೩೪-೭; ೨-೧೯-೨; ೨-೩೪-೫; ೩-೬೦-೬ ಈ ಋಕ್ಕುಗಳಲ್ಲಿ ಉಪಯೋಗಿಸಲ್ಪಟ್ಟಿರುವುದು.

॥ ವ್ಯಾಕರಣಪ್ರಕ್ರಿಯಾ ॥

ದೇವಾಸಃ, **ನನ್ದಿಗ್ರಹಿ ಪಚಾದಿಭ್ಯೋಲ್ಯುಣಿನ್ಯಚಃ** (ಪಾ. ಸೂ. ೩-೧-೧೩೪) ಎಂಬುದರಿಂದ, ಪಚಾದಿಯಾದ ದಿವ್ ಎಂಬುದಕ್ಕೆ ಅಚ್ ಪ್ರತ್ಯಯಬರುವುದು. ಪ್ರಥಮಾ ಬಹುವಚನದಲ್ಲಿ **ಆಜ್ಜಸೇರಸುಕ್** ಎಂಬುದರಿಂದ ಅಸುಕ್ ಆಗಮಬರುವುದು. ಅಚ್ ಪ್ರತ್ಯಯವು ಚಿತ್ತಾದ್ದರಿಂದ ದೇವ ಎಂಬುದು **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತವಾಗುವುದು. ಅಪ್ತುರಃ—ತುರ ತ್ವರಣೇ ಎಂಬ ಧಾತುವು ಶ್ಲು ವಿರಕಣವನ್ನು ಹೊಂದುವ ಜುಹೋತ್ಯಾದಿಯಲ್ಲಿ ಪಠಿತವಾಗಿರುವುದು. ಅಪಃ ತುತುರತಿ = ತ್ವರಯನ್ತಿ (ನೀರನ್ನು ಆಯಾಕಾಲದಲ್ಲಿ ಸುರಿಸುವುವು) ಎಂದು ಅರ್ಥವಿವಕ್ಷೆಮಾಡಿದಾಗ ತುರ ಧಾತುವಿನಮೇಲೆ **ಕ್ವಿಪ್‌ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯಬರುವುದು ಕ್ವಿಪ್ಪಿನಲ್ಲಿರುವ ವರ್ಣಗಳೆಲ್ಲವೂ ಲುಪ್ತವಾಗುವುವು. ಪ್ರಥಮಾ ಬಹುವಚನಪ್ರತ್ಯಯ ಜಸ್ಸನ್ನಿಟ್ಟರೆ ಅಪ್ತುರಃ ಎಂದಾಗುವುದು ಇಲ್ಲಿ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರಬರುವುದು. ಆಗಂತ-ಆಗಚ್ಛಂತು ಎಂಬ ಅರ್ಥ ವಿವಕ್ಷೆಮಾಡಿದಾಗ ಪ್ರಥಮ ಪುರುಷ ಬಹುವಚನಕ್ಕೆ ಬದಲಾಗಿ ಮಧ್ಯಮಪುರುಷ ಬಹುವಚನ ಪ್ರತ್ಯಯ ಥ ಬಂದಿರುವುದು, ಅದಕ್ಕೆ **ತಸ್ಥಸ್ಥಮಿಪಾಂತಾಂತಂತಾಮಃ** (ಪಾ. ಸೂ. ೩-೪-೧೦೧) ಎಂಬುದರಿಂದ ತ ಆದೇಶಬರುವುದು. ವಿಕರಣಪ್ರತ್ಯಯ ಶಪ್‌ಗೆ **ಬಹುಲಂ ಛಂದಸಿ** (ಪ. ಸೂ. ೨-೪-೭೩) ಎಂಬುದರಿಂದ ಲೋಪಬರುವುದು. ತಕಾರಕ್ಕೆ **ತಪ್ತನಪ್ತನಥನಾಶ್ಚ** (ಪಾ. ಸೂ. ೭-೧-೪೫) ತಪ್, ತನಪ್ ಥನ ಎಂಬ ಆದೇಶಗಳು ತಕಾರಕ್ಕೆ ಬರುವುವು. ಎಂಬುದರಿಂದ, ತಪ್, ಬರುವುದು. ತಪ್‌ನಲ್ಲಿ ಪಕಾರ ಲುಪ್ತವಾಗುವುದು. **ಸಾರ್ವಧಾತುಕಮಪಿತ್** (ಗಾ. ಸೂ. ೧-೨-೯) ಪಿತ್ತಲ್ಲದ ಸಾರ್ವಧಾತುಕವು ಙಿತ್ತಾಗುವುದು, ಎಂದು ಹೇಳಿರುವುದು ಇಲ್ಲಿ ಪಿತ್ತಾದ್ದರಿಂದ ಸಾರ್ವಧಾತುಕವಾದ ತಕಾರವು ಙಿತ್ತಾಗುವುದಿಲ್ಲ. ಆದ್ದರಿಂದ **ಅನುದಾತ್ತೋಪದೇಶ ವನತಿತನೋತ್ಯಾದೀನಾಮನುನಾಸಿಲೋಪೋಝಲಿಕಿಙತಿ** (ಪಾ. ಸೂ. ೬-೪-೩೭) ಎಂಬುದರಿಂದ ಅನುನಾಸಿಕವಾದ ಮಕಾರಕ್ಕೆ ಲೋಪಬರುವುದಿಲ್ಲ, 'ನಶ್ಚಾಪ ದಾಂತಸ್ಯ ಝಲಿ' (ಪಾ. ಸೂ. ೮-೩-೨೪) ಝಲ್ ವರ್ಣಪರದಲ್ಲಿರುವಾಗ ಪದದಕೊನೆಯಲ್ಲಿಲ್ಲದ ನಕಾರ ಮಕಾರಗಳಿಗೆ ಅನುಸ್ವಾರ ಬರುವುದು ಎಂಬುದರಿಂದ ಮಕಾರಕ್ಕೆ **ಅನುಸ್ವಾರಬಂದು ಅನುಸ್ವಾರಕ್ಕೆ, 'ಅನುಸ್ವಾರಸ್ಯಯಯಿಪರ ಸವರ್ಣಃ'** (ಪಾ. ಸೂ. ೮-೪-೫೮) ಯಯ್‌ವರ್ಣವು

ಪರವಾಗಿರುವಾಗ ಅನುಸ್ವಾರಕ್ಕೆ ಪರಸವರ್ಣ ಬರುವುದು ಎಂಬುದರಿಂದ ಪರಸವರ್ಣ ನಕಾರಬಂದರೆ ಆಗನ್ತ್ರ ಎಂದು ಆಗುವುದು; ಇಲ್ಲಿ ತಿಙ್ಙತಿಙಃ (ಪಾ. ಸೂ. ೧೮-೧-೨೮) ಎಂಬುದರಿಂದ ಅನುದಾತ್ತಬರುವುದು. ತ್ವರಂತೇ ಇತಿ ತೂರ್ಣಯಃ—**ವಹಿಶ್ರಿಶ್ರು ಯುದ್ರು ಗ್ಲಾಹಾತ್ವರಿಭ್ಯೋ ನಿತ್** (ಉ.ಸೂ. ೪-೪-೯೧) ವಹಪ್ರಾಪಣೇ, ಶ್ರಿ-ಞ್‌ಸೇವಾಯಾಂ, ಶ್ರುಶ್ರವಣೇ, ಯುಮಿಶ್ರಣೇ, ದ್ರುಗತೌ, ಗ್ಲೈಮ್ಲೈ ಹರ್ಷಕ್ಷಯೇ, ಓಹಾಕ್ ಗತೌ, ಞಿತ್ವರಾಸಂಭ್ರಮೇ ಈ ಧಾತುಗಳಮೇಲೆ ನಿಪ್ರತ್ಯಯಬರುವುದು ಅದು ನಿತ್ತಾಗುವುದು ಎಂಬುದರಿಂದ, ಞಿತ್ವರಾ ಸಂಭ್ರಮೇ ಎಂಬ ಧಾತುವಿಗೆ ನಿಪ್ರತ್ಯಯಬಂದರೆ ತ್ವರ್+ನಿ ಎಂದಿರುವಾಗ **ಜ್ವರತ್ವರಸ್ರಿವ್ಯವಿಮವಾಮುಪಧಾಯಾಶ್ಚ** (ಪಾ. ಸೂ. ೬-೪-೨೦) ಎಂಬುದರಿಂದ ಊರ್ ಬಂದು ಪ್ರತ್ಯಯ ನಕಾರಕ್ಕೆ **ರಷಾಭ್ಯಾಂ ನೋಣಃ ಸ್ಸಮಾನಪದೇ** (ಪಾ. ಸೂ. ೮-೪-೧) ಎಂಬುದರಿಂದ ಣಕಾರಬಂದರೆ ತೂರ್ಣಿ ಎಂದಾಗುವುದು. ಪ್ರತ್ಯಯವು ನಿತ್ತಾದ್ದರಿಂದ ನಿತ್ಸ್ವರಬರುವುದು. ಪ್ರಥಮಾ ಬಹುವಚನದಲ್ಲಿ ತೂರ್ಣಯಃ ಎಂದಾಗುವುದು. ಉಸ್ರಾ ಇವ ಎಂಬಲ್ಲಿ ಇವೇನ (**ಸಹನಿತ್ಯಸಮಾಸಃ**) **ವಿಭಕ್ತ್ಯಲೋಪಃ ಪೂರ್ವಪದಪ್ರಕೃತಿಸ್ವರತ್ವಂ ಚ** (ಪಾ. ಸೂ. ೨-೧-೪ ವಾ. ೨) ಎಂಬುದರಿಂದ ನಿತ್ಯವಾಗಿ ಸಮಾಸಬಂದರೆ ಪೂರ್ವಪದದ ಪ್ರಕೃತಿಸ್ವರಬರುವುದು. ಸರತಿ ಗಚ್ಛತಿ' (ಹೋಗುತ್ತಾನೆ) ಇತಿ ಸರಃ ಸೂರ್ಯಃ, ಸೃಧಾತುವಿಗೆ ಪಚಾದ್ಯಚ್ ಪ್ರತ್ಯಯಬರುವುದು, ಸ್ವಃ ಸರಃ ಯೇಷಾಂ ತಾನಿ (ಯಾವುಗಳಿಗೆ ಸೂರ್ಯನು ಸ್ವತ್ತೋ ಅವುಗಳಿಗೆ ಸ್ವಸರ ಎಂದು ಹೆಸರು) ಸ್ವಸರಾಣಿ ಅಹಾನಿ, ಇಲ್ಲಿ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರಬರುವುದು. ಆದ್ದರಿಂದ ಸ್ವಶಬ್ದವು ಆದ್ಯುದಾತ್ತವಾಗುವುದು. ॥ ೮ ।'

॥ ಸಂಹಿತಾಪಾಠಃ ॥

ವಿಶ್ವೇ ದೇವಾಸೋ ಅಸ್ರಿಧ ಏಹಿಮಾಯಾಸೋ ಅದ್ರುಹಃ ।
ಮೇಧಂ ಜುಷಂತ ವಹ್ನಯಃ ॥ ೯ ॥

॥ ಪದಪಾಠಃ ॥

ವಿಶ್ವೇ । ದೇವಾಸಃ । ಅಸ್ರಿಧಃ । ಏಹಿಮಾಯಾಸಃ । ಅದ್ರುಹಃ ॥
ಮೇಧಂ । ಜುಷಂತ । ವಹ್ನಯಃ ॥ ೯ ॥

॥ ಸಾಯಣಭಾಷ್ಯಂ ॥

ವಿಶ್ವೇದೇವಾಸ ಏತನ್ನಾಮಕಾ ದೇವವಿಶೇಷಾ ಮೇಧಂ ಹವಿರ್ಯಜ್ಞಸಂಬದ್ಧಂ ಜುಷಂತ । ಸೇವಂತಾಂ । ಕೀದೃಶಾಃ । ಅಸ್ರಿಧಃ ಕ್ಷಯರಹಿತಾಃ ಶೋಷರಹಿತಾ ವಾ ಏಹಿಮಾಯಾಸಃ ಸರ್ವತೋ ವ್ಯಾಪ್ತಪ್ರಜ್ಞಾಃ । ಯದ್ವಾ । ಸೌಚೀಕಮಗ್ನಿಮಪ್ಸು ಪ್ರವಿಷ್ಟಮೇಹಿ ಮಾ ಯಾಸೀರಿತಿ ಯದವೋಚನ್ ತದನುಕರಣಹೇತುಕೋಽಯಂ ವಿಶ್ವೇಷಾಂ ದೇವಾನಾಂ ವ್ಯಪದೇಶ ಏಹಿಮಾಯಾಸ ಇತಿ । ಅದ್ರುಹೋ

ದ್ರೋಹರಹಿತಾಃ ವಹ್ನಯೋ ವೋಢಾರೋ ಧನಾನಾಂ ಪ್ರಾಪಯಿತಾರಃ || ಅಸ್ರಿಧಃ | ಸ್ರಿಧೇಃ ಕ್ಷಯಾರ್ಥಸ್ಯ ಶೋಷಣಾರ್ಥಸ್ಯ ವಾ ಸಂಪದಾದಿಭ್ಯೋ ಭಾವೇ ಕ್ವಿಪಿ | ಪಾ. ೩-೩-೧೦೮-೯ | ನಞಾ ಬಹುವ್ರೀಹಿಃ | ಪೂರ್ವಪದಪ್ರಕೃತಿಸ್ವರಂ ಬಾಧಿತ್ವಾ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ | ಏಹಿಮಾಯಾಸಃ | ಈಹ ಚೇಷ್ಟಾಯಾಂ | ಆ ಸಮಂತಾದೀಹತ ಇತ್ಯೇಹಿಃ | ಇನ್ | ಉ. ೪-೧೧೭ | ಇತಿ ಸರ್ವಧಾತುಸಾಧಾರಣ ಇನ್ಪ್ರತ್ಯಯೋ ನಿತ್ತ್ವಾದಾದ್ಯುದಾತ್ತಃ | ಏಹಿರ್ಮಾಯಾ ಪ್ರಜ್ಞಾ ಯೇಷಾಮಿತಿ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ಅಥವಾ | ಆಙ ಉದಾತ್ತಾದುತ್ತರಸ್ಯೇಹೀತಿ ಲೋಣ್ಮಧ್ಯಮೈಕವಚನಸ್ಯ ತಿಙ್ಙತಿಙ ಇತಿ ನಿಘಾತ ಏಕಾದೇಶ ಉದಾತ್ತೇನೋದಾತ್ತ ಇತ್ಯೇಕಾರ ಉದಾತ್ತಃ | ಏಹೀತ್ಯೇತತ್ಪದಯುಕ್ತಂ ಮಾ ಯಾಸೀರಿತ್ಯತ್ರ ಮಾಯೇತ್ಯಕ್ಷರದ್ವಯಂ ಯೇಷಾಂ ತ ಏಹಿಮಾಯಾಸಃ | ಪೂರ್ವಪದಪ್ರಕೃತಿಸ್ವರಃ | ಅದ್ರುಹಃ | ದ್ರುಹ ಜಿಘಾಂಸಾಯಾಂ | ಸಂಪದಾದಿತ್ವಾದ್ಭಾವೇ ಕ್ವಿಪಿ ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ | ಮೇಧಂ | ಮೇಧೃ ಸಂಗಮೇ ಚ | ಮೇಧ್ಯತೇ ದೇವೈಃ ಸಂಗಮ್ಯತ ಇತಿ ಮೇಧಂ ಹವಿಃ | ಕರ್ಮಣಿ ಘಞ್ | ಞಿತ್ವಾದಾದ್ಯುದಾತ್ತಃ | ಜುಷಂತ ಸೇವಂತಾಮಿತ್ಯರ್ಥೇ ಛಂದಸಿ | ಲುಙ್ಲಙ್ಲಿಟಃ | ಪಾ. ೩-೪-೬ | ಇತಿ ಧಾತುಸಂಬಂಧೇ ಲಙ್ | ಯತ ಉಕ್ತರೂಪಾ ವಿಶ್ವೇದೇವಾ ಅತೋ ಜುಷಂತೇತಿ ದ್ರುಹಾದಿಧಾತ್ವರ್ಥೈಃ ಸಂಬಂಧಾತ್ | ಬಹುಲಂ ಛಂದಸ್ಯಮಾಙ್ಯೋಗೇಽಪಿ | ಪಾ ೬-೪-೭೫ | ಇತ್ಯಡಾಗಮಾಭಾವಃ | ವಹ್ನಯಃ | ನಿರಿತ್ಯನುವೃತ್ತೌ ವಹಿಶ್ರಿಶ್ರ್ವಾದಿನಾ ವಿಹಿತಸ್ಯ ನಿಪ್ರತ್ಯಯಸ್ಯ ನಿತ್ತ್ವಾದಾದ್ಯುದಾತ್ತತ್ವಂ ||

|| ಪ್ರತಿಪದಾರ್ಥ ||

ವಿಶ್ವೇ ದೇವಾಸಃ— ಎಲೈ ವಿಶ್ವೇದೇವತೆಗಳೇ (ನೀವು) | ಅಸ್ರಿಧಃ— ಕ್ಷಯರಹಿತರು, ನಾಶರಹಿತರು | ಏಹಿಮಾಯಾಸಃ— ಸಮಸ್ತದಿಕ್ಕುಗಳಲ್ಲಿಯೂ ಸಮಸ್ತವಿಷಯದಲ್ಲಿಯೂ ಪ್ರಜ್ಞೆ (ತಿಳಿವಳಿಕೆ) ಯುಳ್ಳವರು | ಅದ್ರುಹಃ— ದ್ರೋಹರಹಿತರಾದವರು, | ವಹ್ನಯಃ—(ನಿಮ್ಮನ್ನು ಸ್ತೋತ್ರಮಾಡುವವರಿಗೆ ಧನಾದ್ಯೈಶ್ವರ್ಯವನ್ನು) ವಹಿಸತಕ್ಕವರು, ತಂದುಕೊಡುವವರು |(ಇಂತಹ ನೀವು) ಮೇಧಂ— ಯಜ್ಞಸಂಬಂಧವಾದ ಹವಿಸ್ಸನ್ನು | ಜುಷಂತ— ಸೇವಿಸಿರಿ (ಭಕ್ಷಿಸಿರಿ).

|| ಭಾವಾರ್ಥ ||

ಎಲೈ ವಿಶ್ವೇದೇವತೆಗಳೇ, ನೀವು ನಾಶರಹಿತರು, ಎಲ್ಲಾ ವಿಷಯಗಳಲ್ಲಿಯೂ ಪೂರ್ಣವಾದ ಪ್ರಜ್ಞೆಯುಳ್ಳವರು ಎಂದರೆ ಸಮಸ್ತವನ್ನೂ ಬಲ್ಲವರು. ನೀವು ಮತ್ತೊಬ್ಬರಿಗೆ ದ್ರೋಹವೆಣಿಸುವವರಲ್ಲ. ನಿಮ್ಮನ್ನು ಸ್ತೋತ್ರಮಾಡುವವರಿಗೆ ಧನಾದ್ಯೈಶ್ವರ್ಯವನ್ನು ತಂದುಕೊಡತಕ್ಕವರು. ಇಂತಹ ನೀವು ನಾವು ಕೊಡುವ ಯಜ್ಞಸಂಬಂಧವಾದ ಹವಿಸ್ಸನ್ನು ಸೇವಿಸಿರಿ.

English Translation.

May the Visve devas, who are immortal, Omniscient, devoid of malice and bearers (of riches), accept the Sacrificial food.

॥ ವಿಶೇಷವಿಷಯಗಳು ॥

ಅಸ್ರಿಧಃ—ಭಾಷ್ಯಕಾರರು ಇದಕ್ಕೆ ಕ್ಷಯರಹಿತರು ಅಥವಾ ಶೋಷಣರಹಿತರು—not causing drought, or dryness, ಎಂದರ್ಥಮಾಡಿರುವರು. ಪಾಶ್ಚಾತ್ಯರು—Unfailing, undecaying, undrying, undaunted, fearless, friendly, harmless, ಇತ್ಯಾದಿ ಶಬ್ದಗಳನ್ನು ಪ್ರಯೋಗಿಸಿರುವರು.

ಏಹಿಮಾಯಾಸಃ—ಈ ಶಬ್ದಪ್ರಯೋಗವು ಋಗ್ವೇದದಲ್ಲಿ ಈ ಋಕ್ಕಿನಲ್ಲಿ ಮಾತ್ರವಿರುವುದು ಬೇರೆ ಎಲ್ಲಿಯೂ ಇಲ್ಲ. ಭಾಷ್ಯಕಾರರು ಈ ಶಬ್ದಕ್ಕೆ **ಸರ್ವತೋ ವ್ಯಾಪ್ತಪ್ರಜ್ಞಾಃ** ಎಂದು ವ್ಯಾಖ್ಯಾನಮಾಡಿರುವರು. ಸ್ಕಂದಸ್ವಾಮಿಯು **ಅಹೀನಮಾಯಾಃ ಅನ್ಯೂನಪ್ರಜ್ಞಾನಾ** ಎಂದು ಹೇಳಿರುವರು. ಇವರಿಬ್ಬರೂ ಮತ್ತು ವೆಂಕಟಮಾಧವರೂ ಈ ಶಬ್ದದ ಉತ್ಪತ್ತಿವಿಚಾರದಲ್ಲಿ ಅಥವಾ ಈ ಶಬ್ದವು ಹೇಗೆ ರೂಢಿಯಲ್ಲಿ ಬಂದಿತೆಂಬ ವಿಚಾರದಲ್ಲಿ ಕೌಷೀತಕೀಬ್ರಾಹ್ಮಣದ ವಾಕ್ಯವನ್ನು ಉದಾಹರಿಸಿದಾರೆ- **ಸೌಚೀಕಮಗ್ನಿಮಪ್ಸು ಪ್ರವಿಷ್ಟಮೇಹಿ ಮಾಯಾಸೀರಿತಿ ಯದವೋಚನ್ ತದನುಕರಣಹೇತುಕೋಽಯಂ ವಿಶ್ವೇಷಾಂ ದೇವಾನಾಂ ವ್ಯಪದೇಶ ಏಹಿಮಾಯಾಸ ಇತಿ**—ಸೌಚೀಕನಾಮಕನಾದ ಅಗ್ನಿಯು ನೀರಿನಲ್ಲಿ ಪ್ರವೇಶಿಸುವುದನ್ನು ಕಂಡು ದೇವತೆಗಳು **ಏಹಿ ಮಾ ಯಾಸೀಃ** ಎಂದರೆ "ಹೋಗಬೇಡ, ಬಾ" ಎಂದು ಏಹಿಮಾಯಾಸೀಃ ಎಂಬ ಶಬ್ದಗಳನ್ನು ಉಪಯೋಗಿಸಿದ್ದರಿಂದ ಅದನ್ನನುಸರಿಸಿ ಈ ಏಹಿಮಾಯಾಸಃ ಎಂಬ ಶಬ್ದವು ರೂಢಿಗೆ ಬಂದಿರಬಹುದೆಂದು ಅಭಿಪ್ರಾಯಪಡುವರು: ಋಗ್ವೇದಸಂಹಿತೆಯ ಹತ್ತನೆಯ ಮಂಡಲದ ೫೧ ನೆಯ ಸೂಕ್ತದಲ್ಲಿ (ಋ. ೧೦-೫೧-೬) ಈ ವಿಷಯವು ವಿಶದವಾಗಿ ವರ್ಣಿಸಲ್ಪಟ್ಟಿದೆ—

**ಅಗ್ನೇಃ ಪೂರ್ವೇ ಭ್ರಾತರೋ ಅರ್ಥಮೇತಂ ರಥೀವಾಧ್ವಾನಮನ್ವಾವರೀವುಃ ।**
**ತಸ್ಮಾದ್ಭಿಯಾ ವರುಣ ದೂರಮಾಯಂ ಗೌರೋ ನ ಕ್ಷೇಪ್ನೋರವಿಜೇ ಜ್ಯಾಯಾಃ ॥**
**ಕುರ್ಮಸ್ತ ಆಯುರಜರಂ ಯದಗ್ನೇ ಯಥಾ ಯುಕ್ತೋ ಜಾತವೇದೋ ನ ರಿಷ್ಯಾಃ ।**
**ಅಥಾ ವಹಾಸಿ ಸುಮನಸ್ಯಮಾನೋ ಭಾಗಂ ದೇವೇಭ್ಯೋ ಹವಿಷಃ ಸುಜಾತ ॥**
**ಪ್ರಯಾಜಾನ್ಮೇ ಅನುಯಾಜಾಂಶ್ಚ ಕೇವಲಾನೂರ್ಜಸ್ವಂತಂ ಹವಿಷೋ ದತ್ತ ಭಾಗಂ ।**
**ಘೃತಂ ಚಾಪಾಂ ಪುರುಷಂ ಚೌಷಧೀನಾಮಗ್ನೇಶ್ಚ ದೀರ್ಘಮಾಯುರಸ್ತು ದೇವಾಃ ॥**
**ತವ ಪ್ರಯಾಜಾ ಅನುಯಾಜಾಶ್ಚ ಕೇವಲ ಊರ್ಜಸ್ವಂತೋ ಹವಿಷಃ ಸಂತು ಭಾಗಾಃ ।**
**ತವಾಗ್ನೇ ಯಜ್ಞೋ೩ ಯಮಸ್ತು ಸರ್ವಸ್ತುಭ್ಯಂ ನಮಂತಾಂ ಪ್ರದಿಶಶ್ಚತಸ್ರಃ ॥**

(ಋ. ಸಂ. ೧೦-೫೧-೬ ರಿಂದ ೯)

ಈ ಸೂಕ್ತವು ದೇವತೆಗಳಿಗೂ ಅಗ್ನಿಗೂ ನಡೆದ ಸಂಭಾಷಣೆಯು. ಮುಖ್ಯವಿಚಾರವೇನೆಂದರೆ—ಅಗ್ನಿಗೆ **ಭೂಪತಿ, ಭುವನಪತಿ, ಭೂತಾನಾಂಪತಿ** ಎಂಬ ಹೆಸರಿನ ಮೂವರು ಜ್ಯೇಷ್ಠಸಹೋದರರಿದ್ದರು ಅವರೂ ಅಗ್ನಿಯಂತೆಯೇ ದೇವತೆಗಳಿಗೆ ಯಜ್ಞದಲ್ಲಿ ಹವಿಸ್ಸನ್ನು ವಹಿಸುತ್ತಿದ್ದರು. ಹೀಗಿರುವಲ್ಲಿ ಯಜ್ಞದಲ್ಲಿ ಹೋಮಮಾಡುವಾಗ ವಜ್ರಸದೃಶವಾದ ವಷಟ್ಕಾರ ಶಬ್ದಪೂರ್ವಕವಾದ ಹೋಮಗಳಿಂದ ಈ ಮೂವರು ಸಹೋದರರೂ ಮೃತರಾದರು. ಅದನ್ನು ಕಂಡು ಕಿರಿಯವನಾದ ಅಗ್ನಿಯು ಭೀತನಾಗಿ ನೀರಿನಲ್ಲಿ ಹೋಗಿ ಅವಿತುಕೊಂಡಿದ್ದನು. ದೇವತೆಗಳು ಅಗ್ನಿಯನ್ನು ಹುಡುಕುತ್ತಿರುವಾಗ ನೀರಿನಲ್ಲಿದ್ದ ಮೀನುಗಳು ಅಗ್ನಿಯು ನೀರಿನಲ್ಲಿ ಇರುವನೆಂದು ದೇವತೆಗಳಿಗೆ

ತಿಳಿಸಿದವು. ಆಗ ದೇವತೆಗಳು ಬಂದು ಅಗ್ನಿಯನ್ನು ಕುರಿತು ಸಂಭಾಷಿಸಿದರು. ಆ ಸಂಭಾಷಣೆಯೇ ಈ ಸೂಕ್ತದಲ್ಲಿ ವಿವರಿಸಲ್ಪಟ್ಟಿದೆ. ದೇವತೆಗಳು ಅಗ್ನಿಯನ್ನು ನೀರಿನಿಂದ ಎದ್ದು ಬರಬೇಕೆಂದೂ ಹಿಂದಿನಂತೆ ತಮಗೆ ಹವಿಸ್ಸನ್ನು ವಹಿಸಬೇಕೆಂದೂ ಪ್ರಾರ್ಥಿಸಲು ಅಗ್ನಿಯು ತನ್ನ ಸಹೋದರರು ಮೃತರಾದುದರಿಂದ ತನಗೂ ಅದೇ ಗತಿ ಪ್ರಾಪ್ತವಾಗುವುದೆಂದೂ ಆದ್ದರಿಂದ ತಾನು ಬರುವುದಿಲ್ಲವೆಂದೂ ಹೇಳಿದನು. ಅದಕ್ಕೆ ದೇವತೆಗಳು, ಮರಣಕ್ಕಾಗಿ ಹೆದರಬೇಡವೆಂದೂ ನಿನಗೆ ಮರಣದ ಭಯವುಂಟಾಗದಂತೆ ಮಾಡುವುವೆಂದೂ ಹೇಳಲು, ಅಗ್ನಿಯು ಪುನಃ ಇಂತೆಂದನು—ಒಳ್ಳೆದು, ಮರಣಭಯವನ್ನು ನನಗೆ ತಪ್ಪಿಸುವುದಲ್ಲದೆ ಯಾಗಗಳಲ್ಲಿ ಪ್ರಯಾಜಾ, ಅನುಯಾಜಾ, ಊರ್ಜಸ್ವತ್, ಸ್ವಿಷ್ಟಕೃತ್, ಆಜ್ಯಭಾಗ ಮೊದಲಾದ ಕೆಲವು ವಿಶೇಷ ಆಹುತಿಗಳನ್ನು ನನಗೆ ಕೊಡಬೇಕು ಎಂದನು. ದೇವತೆಗಳು ಹಾಗೆಯೇ ಆಗಲೆಂದೊಪ್ಪಿ ಅವನು ಕೇಳಿದ ಹವಿರ್ಭಾಗಗಳನ್ನು ಕೊಟ್ಟು, ಯಜ್ಞದಲ್ಲಿ ಮುಖ್ಯಪಾತ್ರವನ್ನು ವಹಿಸುವಂತೆಯೂ ಸರ್ವರಿಂದಲೂ ನಮಸ್ಕೃತನಾಗುವಂತೆಯೂ ದೀರ್ಘಾಯುವಾಗುವಂತೆಯೂ ವರವನ್ನಿತ್ತು ಪೂರ್ವದಂತೆ ಹವಿರ್ವಹನಕಾರ್ಯದಲ್ಲಿ ಅವನನ್ನು ನಿಯಮಿಸಿದರು ಎಂದು ಈ ಸೂಕ್ತದ ಮುಖ್ಯಾಭಿಪ್ರಾಯವು.

ಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲಿ ಈ ವಿಷಯವಾಗಿ ಈ ರೀತಿ ಇರುವುದು—

> ಅಗ್ನೇಸ್ತ್ರಯೋ ಜ್ಯಾಯಾಗ್ಂಸೋ ಭ್ರಾತರ ಆಸನ್ತೇ ದೇವೇಭ್ಯೋ ಹವ್ಯಂ ವಹಂತಃ ಪ್ರಾಮೀಯಂತ ಸೋಽಗ್ನಿರಬಿಭೇದಿತ್ಥಂ ವಾವ ಸ್ಯ ಆರ್ತಿಮಾರಿಷ್ಯತೀತಿ ಸ ನಿಲಾಯತ ಸೋಽಪಃ ಪ್ರಾವಿಶತ್ತಂ ದೇವತಾಃ ಪ್ರೈಷಮೈಚ್ಛನ್ತಂ ಮತ್ಸ್ಯಃ ಪ್ರಾಬ್ರವೀತ್ತಮಶಪದ್ಧಿಯಾಧಿಯಾ ತ್ವಾ ವಧ್ಯಾಸುರ್ಯೋ ಮಾ ಪ್ರಾವೋಚ ಇತಿ ತಸ್ಮಾನ್ಮತ್ಸ್ಯಂ ಧಿಯಾಧಿಯಾ ಘ್ನಂತಿ ಶಪ್ತೋ ಹಿ ತಮನ್ವವಿಂದನ್ತಮಬ್ರುವನ್ನುಪ ನ ಆ ವರ್ತಸ್ವ ಹವ್ಯಂ ನೋ ವಹೇತಿ ಸೋಽಬ್ರವೀದ್ವರಂ ವೃಣೈ ಯದೇವ ಗೃಹೀತಸ್ಯಾಹುತಸ್ಯ ಬಹಿಃ ಪರಿಧಿಸ್ಕಂದಾತ್ತನ್ಮೇ ಭ್ರಾತೃಣಾಂ ಭಾಗಧೇಯಮಸದಿತಿ ತಸ್ಮಾದ್ಯದ್ಗೃಹೀತಸ್ಯಾಹುತಸ್ಯ ಬಹಿಃ ಪರಿಧಿ ಸ್ಕಂದತಿ ತೇಷಾಂ ತದ್ಭಾಗಧೇಯಂ ತಾನೇವ ತೇನ ಪ್ರೀಣಾತಿ ಪರಿಧೀನ್ಪರಿ ದಧಾತಿ ರಕ್ಷಸಾಮಪಹತ್ಯೈ ॥ (ತೈ. ಸಂ. ೨-೬-೬)

ಪೂರ್ವದಲ್ಲಿ ಅಗ್ನಿಗೆ ಮೂರು ಮಂದಿ ಜ್ಯೇಷ್ಠಸಹೋದರರಿದ್ದರು. ಅವರು ದೇವತೆಗಳಿಗೆ ಯಜ್ಞಯಾಗಾದಿಗಳಲ್ಲಿ ಯಜಮಾನನು ಕೊಡುವ ಹವಿಸ್ಸನ್ನು ಒಯ್ಯುತ್ತಿದ್ದರು. ಅವರು ಮೃತರಾಗಲು ಅಗ್ನಿಯು ತನಗೂ ಆ ಗತಿ ಪ್ರಾಪ್ತವಾಗಬಹುದೆಂದು ಹೆದರಿ ಓಡಿಹೋಗಿ ನೀರಿನಲ್ಲಿ ಪ್ರವೇಶಿಸಿ ಯಾರಿಗೂ ಕಾಣದಂತೆ ಅವಿತುಕೊಂಡಿದ್ದನು. ದೇವತೆಗಳು ಅಗ್ನಿಯು ಎಲ್ಲಿಹೋದನೆಂದು ಹುಡುಕುತ್ತಿರುವಾಗ ನೀರಿನಲ್ಲಿದ್ದ ಒಂದು ಮೀನು, ಅಗ್ನಿಯು ನೀರಿನಲ್ಲಿ ಅವಿತುಕೊಂಡಿರುವನೆಂದು ದೇವತೆಗಳಿಗೆ ಹೇಳಿತು. ಮೀನಿನ ಈ ಚಾಡಿಮಾತನ್ನು ಕೇಳಿ ಅಗ್ನಿಗೆ ಕೋಪ ಬಂದು ಇನ್ನುಮೇಲೆ ನೀರಿನಲ್ಲಿರುವ ಮೀನುಗಳನ್ನು ಜನರು ಬಲೆ ಮೊದಲಾದ ಸಾಧನಗಳಿಂದ ಹಿಡಿದು ಕೊಲ್ಲುವಂತೆ ಶಪಿಸಿದನು. ಅದರಂತೆ ಈಗಲೂ ಜನರು ಮೀನುಗಳನ್ನು ಹಿಡಿದು ಕೊಂದು ತಿನ್ನುತ್ತಿರುವರು. ಬಳಿಕ ದೇವತೆಗಳು ಅಗ್ನಿಯನ್ನು ಕುರಿತು ಎಲೈ ಅಗ್ನಿಯೇ, ನೀನು ಹಿಂತಿರುಗಿ ಬಂದು ನಮಗೆ ಹವಿರ್ವಹನಕಾರ್ಯದಲ್ಲಿ ಉದ್ಯುಕ್ತನಾಗಿರು ಎನ್ನಲು ಅದಕ್ಕೆ ಅಗ್ನಿಯು--ಯಜ್ಞದಲ್ಲಿ ಹೋಮಮಾಡುವಾಗ ಪರಿಧಿಯ. (ರಾಕ್ಷಸರು ಬಂದು ಯಜ್ಞಕ್ಕೆ ವಿಘ್ನಮಾಡದಂತೆ ಅಗ್ನಿಯ ಸುತ್ತಲೂ ನಾಲ್ಕು ದಿಕ್ಕುಗಳಲ್ಲಿ ಇಡುವ ದರ್ಭವಿಶೇಷಗಳು.) ಹೊರಗಡೆ ಎಂದರೆ ಈಚೆ ಬೀಳುವ ಆಜ್ಯವೇ ಮೊದಲಾದ ಆಹುತಿಗಳ ಭಾಗವು ನನ್ನ ಸಹೋದರರಿಗೆ ಹವಿರ್ಭಾಗವಾಗು

ವಂತೆ ವರವನ್ನು ಕೊಟ್ಟರೆ ತಾನು ನೀರಿನಿಂದ ಬಂದು ಪೂರ್ವದಂತೆ ದೇವತೆಗಳಿಗೆ ಹವಿಸ್ಸನ್ನು ಒಯ್ಯುವೆನೆಂದು ಹೇಳಿದನು. ಅದಕ್ಕೆ ದೇವತೆಗಳು ಸಮ್ಮತಿಸಿ ಅವನಿಗೆ ಆರೀತಿ ವರವನ್ನು ಕೊಟ್ಟರು. ಇತ್ಯಾದಿ ಉಪಾಖ್ಯಾನವಿದೆ.

ಆದುದರಿಂದ ಅಗ್ನಿಯು ನೀರನ್ನು ಪ್ರವೇಶಿಸುವ ಸಂದರ್ಭದಲ್ಲಿ ದೇವತೆಗಳು ಅವನನ್ನುದ್ದೇಶಿಸಿ ಹೇಳಿದ—"**ಏಹಿ ಮಾ ಯಾಸೀಃ**—ಹೋಗಬೇಡ ಬಾ" ಎಂಬ ವಾಕ್ಯದ ಅನುಕರಣೆಯಿಂದ ಈ **ಏಹಿಮಾಯಾಸಃ** ಎಂಬ ಶಬ್ದವು ರೂಢಿಗೆ ಬಂತೆಂದು ಹಲವರ ಅಭಿಪ್ರಾಯವು.

ಕೆಲವರು **ಅಹಿಮಾಯಾ** ಎಂಬ ಶಬ್ದದ ರೂಪಾಂತರವೇ ಏಹಿಮಾಯಾಸಃ ಎಂಬ ಶಬ್ದವಾಗುವುದೆಂದು ಅಭಿಪ್ರಾಯಪಡುವರು. ಈ ಶಬ್ದದ ಬೇರೆ ಬೇರೆ ವಿಭಕ್ತಿರೂಪಗಳಾದ **ಅಹಿಮಾಯಾನ್** (ಋ. ಸಂ. ೧-೧೯೦-೪), **ಅಹಿಮಾಯಾಃ** (ಋ. ಸಂ ೬-೫೨-೧೫ ; ೧೦-೬೩-೪) **ಅಹಿಮಾಯಸ್ಯ** (ಋ. ಸಂ. ೬-೨೦-೭) ಎಂಬ ಶಬ್ದಗಳು ಮೇಲೆ ಕೊಟ್ಟಿರುವ ನಾಲ್ಕು ಋಕ್ಕುಗಳಲ್ಲಿ ಮಾತ್ರ ಪ್ರಯೋಗಿಸಲ್ಪಟ್ಟಿವೆ. ಈ ಶಬ್ದಕ್ಕೆ ಪಾಶ್ಚಾತ್ಯಪಂಡಿತರು—

**Roth**—Of many shapes or agile like a serpent, tricky as a serpent.
**Williams**—Having unsurpassable wisdom.
**Griffith**—Having Superhuman Power.
**Ludwig**—Having the wiles of serpants.

ಎಂದು ನಾನಾವಿಧ ಅರ್ಥಗಳನ್ನು ಹೇಳಿರುವರು. ಮಾಯಾಶಬ್ದಕ್ಕೆ ಋಗ್ವೇದದಲ್ಲಿ ಈ ಕೆಳಗಿನ ಅರ್ಥಗಳನ್ನು ಹೇಳಬಹುದಾಗಿದೆ.

(1) Creative power.
(2) Miraculous power (ಋ. ಸಂ. ೧-೧೬೦-೩ ; ೨-೧೭-೫ &c.)
(3) Power of assuming various shapes (ಋ. ಸಂ. ೩-೫೩-೮ ; ೫-೬೩-೬ ; ೬-೨೨-೬ &c.)
(4) Wiles, tactics, tricks (ಋ. ಸಂ. ೧-೮೦-೭ ; ೬-೧೮-೯ &c.)
(5) Sorcery,witchcraft, magic (ಋ. ಸಂ. ೨-೭೭-೧೬ ; ೮-೨೩-೧೫ ; ೬-೪೫-೯ &c.)
(6) Illusion (ಋ. ಸಂ. ೧೦-೫೪-೨)

ಪೂರ್ವದಲ್ಲಿ ಈ ಶಬ್ದಕ್ಕೆ wisdom, intelligence ಬುದ್ಧಿ ಕುಶಲತೆ ಎಂಬ ಅರ್ಥಗಳಿದ್ದರಬಹುದು. ಕಾಲಕ್ರಮೇಣ ಬೇರೆ ಬೇರೆ ಅರ್ಥಗಳಲ್ಲಿ ಉಪಯೋಗಿಸುವುದು ರೂಢಿಗೆ ಬಂದಂತೆ ತೋರುತ್ತದೆ. ಪುರಾಣಗಳಲ್ಲಿಯೂ ವೇದಾಂತಗಳಲ್ಲಿಯೂ ಮಾಯಾಶಬ್ದಕ್ಕೆ ಪ್ರಕೃತಿ, divine power, creative power, supernatural power ಮೊದಲಾದ ಅರ್ಥಗಳು ರೂಢಿಯಲ್ಲಿವೆ. ಋಗ್ವೇದದಲ್ಲಿ ಈ ಶಬ್ದದ ಬೇರೆ ಬೇರೆ ರೂಪಗಳಾದ **ಮಾಯಾ, ಮಾಯಯಾ, ಮಾಯಾಃ, ಮಾಯಾಭಿಃ, ಮಾಯಾಂ, ಮಾಯಾವಾನ್, ಮಾಯಾವಿನಃ, ಮಾಯಾವಿನಂ, ಮಾಯಿನಃ, ಮಾಯಿನಂ, ಮಾಯಿನಾ, ಮಾಯಿನಾಂ, ಮಾಯಿಾ,** ಮೊದಲಾದ ಶಬ್ದಗಳು ಅನೇಕ ಋಕ್ಕುಗಳಲ್ಲಿ ಬೇರೆ ಬೇರೆ ಅರ್ಥಗಳಲ್ಲಿ ಉಪಯೋಗಿಸಲ್ಪಟ್ಟಿವೆ. ಆಯಾ ಸ್ಥಳಗಳಲ್ಲಿ ಅವುಗಳ ಅರ್ಥವನ್ನು ವಿವರಿಸಲಾಗುವುದು.

**ಅದ್ರುಹಃ**—ದ್ರುಹ ಜಿಘಾಂಸಾಯಾಂ ಎಂಬ ಧಾತುವಿನಿಂದ ಈ ಶಬ್ದದ ಉತ್ಪತ್ತಿಯಾಗಿದೆ. ಈ ಶಬ್ದದ ಅರ್ಥವು—ದ್ರೋಹರಹಿತರು, not injuring, kindly disposed, without evil, without ill-will, without hostility, Guileless, not deceiving, devoid of malignity ಎಂದಾಗುವುದು. ಅರ್ಥವಿವರಣೆಗಾಗಿ ಬೇರೆ ಬೇರೆ ಶಬ್ದಗಳನ್ನೂ ಉಪಯೋಗಿಸಿದರೂ ಮುಖ್ಯಾಭಿಪ್ರಾಯವು ಒಂದೇ ಆಗಿರುವುದು.

॥ ವ್ಯಾಕರಣಪ್ರಕ್ರಿಯಾ ॥

ಕ್ಷಯ ಅಥವಾ ಶೋಷಣ ಎಂಬ ಅರ್ಥವನ್ನು ಬೋಧಿಸುವ ಸ್ರಿಧುಧಾತುವಿಗೆ 'ಸಂಪದಾದಿಭ್ಯಃ ಕ್ವಿಪ್' (ಪಾ. ಸೂ. ೩-೩-೧೦೮ ವಾ. ೯) ಎಂಬುದರಿಂದ ಭಾವೇಕ್ವಿಪ್ಪ್ರತ್ಯಯವನ್ನು ಮಾಡಿದಾಗ ನಞ್ ನೊಂದಿಗೆ ನ ವಿದ್ಯತೇ ಸ್ರಿತ್ ಯೇಷಾಂ ತೇ ಎಂದು ಬಹುವ್ರೀಹಿ ಸಮಾಸಬರುವುದು, ಇಲ್ಲಿ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಎಂಬ ಪೂರ್ವಪದಪ್ರಕೃತಿಸ್ವರವನ್ನು ಬಾಧಿಸಿ **ನಞ್ ಸುಭ್ಯಾಂ** (ಪಾ. ಸೂ. ೬-೨-೧೭೨) ಬಹುವ್ರೀಹಿಯಲ್ಲಿ ನಞ್, ಸುಗಳ ಮುಂದಿರುವ ಉತ್ತರಪದವು ಅಂತೋದಾತ್ತವಾಗುವುದು ಎಂಬುದರಿಂದ ಅಸ್ರಿಧ್ ಎಂಬುದು ಅಂತೋದಾತ್ತ ಏಹಿಮಾಯಾಸಃ—ಆ-ಸುತ್ತಲೂ ಈಹತೇ ವ್ಯಾಪಿಸಿರುವನು ಆದ್ದರಿಂದ ಏಹಿಃ, ಆ ಉಪಸರ್ಗದಿಂದಕೂಡಿದ ಈಹಚೇಷ್ಟಾಯಾಂ ಎಂಬ ಧಾತುವಿಗೆ ಇನ್ (ಉ.ಸೂ. ೨-೫೫೭) ಎಲ್ಲಧಾತುಗಳಿಗೂ ಇನ್ ಪ್ರತ್ಯಯಬರುವುದು ಎಂಬುದರಿಂದ ಇನ್ ಪ್ರತ್ಯಯಬಂದರೆ, ಏಹಿ ಎಂದಾಗುವುದು, ಪ್ರತ್ಯಯವು ನಿತ್ತಾದ್ದರಿಂದ ನಿತ್ಸ್ವರ ಬರುವುದು. ಏಹಿಃ ಮಾಯಾ=ಪ್ರಜ್ಞಾ ಯೇಷಾಂ ತೇ 'ಯಾರಪ್ರಜ್ಞೆಯು ಸರ್ವತಃ ವ್ಯಾಪ್ತವಾಗಿರುವುದೋ ಅವರು ಏಹಿಮಾಯಾಸಃ ಎನ್ನಲ್ಪಡುತ್ತಾರೆ' ಏಹಿಮಾಯಾಸಃ, ಇದು ಬಹುವ್ರೀಹಿ ಸಮಾಸವಾದ್ದರಿಂದ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರಬರುವುದು. ಅಥವಾ, ಆಜ್ಞ್ನಿಪಾತವಾದ್ದರಿಂದ ಆದ್ಯುದಾತ್ತ ಅದರ ಮುಂದಿರುವ 'ಇಣ್‌ಗತೌ' ಧಾತುವಿನ ಲೋಟ್ ಮಧ್ಯಮಪುರುಷ ಏಕವಚನವಾದ 'ಇಹಿ' ಎಂಬುದು ತಿಜ್ಞತಿಙಃ (ಪಾ. ಸೂ. ೮-೧-೨೮) ಎಂಬುದರಿಂದ ಅನುದಾತ್ತ. ಆ+ಇಹಿ ಇವುಗಳಿಗೆ ಗುಣಬಂದಮೇಲೆ ಏಕಾದೇಶದಿಂದ ಬಂದ ಏಕಾರವು **ಏಕಾದೇಶ ಉದಾತ್ತೇನೋದಾತ್ತಃ** (ಪಾ.ಸೂ. ೮-೨-೫) ಎಂಬುದರಿಂದ ಉದಾತ್ತವಾಗುವುದು ಏಹೀತಿ ಪದಯುಕ್ತಂ ಮಾಯಾಸೀಃ' ಇತ್ಯತ್ರ ಮಾಯಾ ಇತ್ಯಕ್ಷರದ್ವಯಂ ಯೇಷಾಂ ತೇ ಏಹಿಮಾಯಾಸಃ) ಏಹಿಪದದಿಂದ ಕೂಡಿರುವ 'ಮಾಯಾಸೀಃ' ಎಂಬಲ್ಲಿರುವ ಮಾಯಾ ಎಂಬೆರಡು ಅಕ್ಷರಗಳು ಯಾರಲ್ಲಿವೆಯೋ ಅವರು ಏಹಿಮಾಯಾಸಃ, ಬಹುವ್ರೀಹಿಯಾದ್ದರಿಂದ ಪೂರ್ವಪದ ಪ್ರಕೃತಿಸ್ವರಬರುವುದು. ಅದ್ರುಹಃ—ದ್ರುಹ ಜಿಘಾಂಸಾಯಾಂ ಎಂಬ ಧಾತು ಸಂಪದಾದಿಗಣದಲ್ಲಿರುವುದರಿಂದ ಕ್ವಿಪ್ ಪ್ರತ್ಯಯಬರುವುದು ನಞ್ ನೊಂದಿಗೆ ಬಹುವ್ರೀಹಿಯನ್ನು ಮಾಡಿದಮೇಲೆ **ನಞ್‌ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರ ಪದವು ಅಂತೋದಾತ್ತವಾಗುವುದು. ಮೇಧಂ- ಮೇಧೃಸಂಗಮೇ ಎಂಬ ಧಾತುವಿನಿಂದ ಆಗಿರುವುದು ಮೇಧ್ಯತೇ ಸಂಗಮ್ಯತೇ ದೇವೈಃ ಇತಿ ಮೇಧಂ, ಹವಿಸ್ಸು ದೇವತೆಗಳೊಂದಿಗೆ ಸೇರುವುದರಿಂದ ಅದಕ್ಕೆ ಮೇಧಂ ಎಂದು ಹೆಸರು ಬಂದಿದೆ. ಕರ್ಮಣಿ ಘಞ್‌ಪ್ರತ್ಯಯಬಂದಿರುವುದು. ಪ್ರತ್ಯಯವು ಞಿತ್ತಾದ್ದರಿಂದ ಆದ್ಯುದಾತ್ತಬರುವುದು, ಜುಷನ್ತ—ವಿಶ್ವೇದೇವತೆಗಳಿಗೆ ದ್ರುಹಾದಿ ಧಾತ್ವರ್ಥಸಂಬಂಧವಿರುವುದರಿಂದ **ಛಂದಸಿ ಲುಙ್‌ಲಙ್‌ಲಿಟಃ** (ಪಾ.ಸೂ. ೩-೪-೬) ಎಂಬುದರಿಂದ, ಸೇವತಾಂ, (ಸೇವಿಸಲಿ) ಎಂಬ ಅರ್ಥದಲ್ಲಿ ಲಙ್ ಬರುವುದು **ಬಹುಲಂ ಛಂದಸ್ಯಮಾಙ್ಯೋಗೇಽಪಿ**

(ಉ.ಸೂ. ೬-೪-೭೫) ಮಾಙ್ ಯೋಗವಿಲ್ಲದಿದ್ದರೂ ಮಾಙ್ ಯೋಗವಿದ್ದರೂ ಅಟ್ ಆಟ್ ಆಗಮಗಳು ಬಹುಲವಾಗಿ ಬರುವುವು ಅಂದರೆ ಮಾಙ್ ಯೋಗವಿಲ್ಲದಿದ್ದರೂ ಕೆಲವೆಡೆಗಳಲ್ಲಿ ಬರುವುದಿಲ್ಲ. ಕೆಲವೆಡೆಗಳಲ್ಲಿ ಮಾಙ್ ಯೋಗವಿದ್ದರೂ ಬರುವುವು ಎಂಬುದರಿಂದ ಅಟ್ ಆಗಮಬರುವುದಿಲ್ಲ. ವಕ್ಷ್ಯಯಃ ಇಲ್ಲಿ ವಹಿಶ್ರಿ (ಉ. ಸೂ. ೪-೪೯೧) ಇತ್ಯಾದಿ ಸೂತ್ರದಿಂದ ನಿಪ್ರತ್ಯಯಬರುವುದು. ಅದು ನಿತ್ತಾದ್ದರಿಂದ ಆದ್ಯುದಾತ್ತಬರುವುದು ‖ ೯ ‖

‖ ಸಂಹಿತಾಪಾಠಃ ‖

ಪಾವಕಾ ನಃ ಸರಸ್ವತೀ ವಾಜೇಭಿರ್ವಾಜಿನೀವತೀ ।
ಯಜ್ಞಂ ವಷ್ಟು ಧಿಯಾವಸುಃ ‖ ೧೦ ‖

‖ ಪದಪಾಠಃ ‖

ಪಾವಕಾ । ನಃ । ಸರಸ್ವತೀ । ವಾಜೇಭಿಃ । ವಾಜಿನೀಽವತೀ ‖
ಯಜ್ಞಂ । ವಷ್ಟು । ಧಿಯಾಽವಸುಃ ‖ ೧೦ ‖

‖ ಸಾಯಣಭಾಷ್ಯಂ ‖

ಸಾರಸ್ವತೇ ತೃಚೇ ಯಾ ಪ್ರಥಮಾ ಸಾನ್ವಾರಂಭಣೀಯೇಷ್ಟೌ ಸರಸ್ವತ್ಯಾಃ ಪುರೋನುವಾಕ್ಯಾ । ತಥಾ ದರ್ಶಪೂರ್ಣಮಾಸಾವಾರಪ್ಸ್ಯಮಾನ ಇತ್ಯಸ್ಮಿನ್ಖಂಡೇ ಪಾವಕಾ ನಃ ಸರಸ್ವತೀ ಪಾವೀರವೀ ಕನ್ಯಾ ಚಿತ್ರಾಯುಃ । ಆ. ೨-೮ । ಇತಿ ಸೂತ್ರಿತಂ ‖

ಸರಸ್ವತೀ ದೇವೀ ವಾಜೇಭಿರ್ಹವಿರ್ಲಕ್ಷಣೈರನ್ನೈರ್ನಿಮಿತ್ತಭೂತೈಃ । ಯದ್ವಾ । ಯಜಮಾನೇಭ್ಯೋ ದಾತವ್ಯೈರನ್ನೈರ್ನಿಮಿತ್ತಭೂತೈಃ । ನೋಽಸ್ಮದೀಯಂ ಯಜ್ಞಂ ವಷ್ಟು। ಕಾಮಯತಾಂ। ಕಾಮಯಿತ್ವಾ ಚ ನಿರ್ವಹತ್ವಿತ್ಯರ್ಥಃ । ತಥಾ ಚಾರಣ್ಯಕಕಾಂಡೇ ಶ್ರುತ್ಯೈವ ವ್ಯಾಖ್ಯಾತಂ । ಯಜ್ಞಂ ವಷ್ಟ್ವಿತಿ ಯದಾಹ ಯಜ್ಞಂ ವಹತ್ವಿತ್ಯೇವ ತದಾಹ। ಐ.ಆ. ೧-೧-೪। ಇತಿ। ಕೀದೃಶೀ ಸರಸ್ವತೀ । ಪಾವಕಾ ಶೋಧಯಿತ್ರೀ ವಾಜಿನೀವತ್ಯನ್ನವತ್ಕ್ರಿಯಾವತೀ ಧಿಯಾವಸುಃ ಕರ್ಮಪ್ರಾಪ್ಯಧನನಿಮಿತ್ತಭೂತಾ । ವಾಗ್ದೇವತಾ ಯಾಸ್ತಥಾವಿಧಂ ಧನನಿಮಿತ್ತತ್ವಮಾರಣ್ಯಕಕಾಂಡೇ ಶ್ರುತ್ಯಾ ವ್ಯಾಖ್ಯಾತಂ। ಯಜ್ಞಂ ವಷ್ಟು ಧಿಯಾವಸುರಿತಿ ವಾಗ್ವೈ ಧಿಯಾವಸುಃ। ಐ.ಆ. ೧-೧-೪। ಇತಿ। ಶ್ಯೇನಃ ಸೋಮ ಇತ್ಯಾದಿಷು ಪಂಚತ್ರಿಂಶತ್ಸಂಖ್ಯಾಕೇಷು ದೇವತಾವಿಶೇಷವಾಚಿಷು ಪದೇಷು ಸರಮಾ ಸರಸ್ವತೀತಿ ಪಠಿತಂ । ಏತಾಮೃಚಂ ಯಾಸ್ಕ ಏವಂ ವ್ಯಾಚಷ್ಟೇ । ಪಾವಕಾ ನಃ ಸರಸ್ವತ್ಯನ್ನೈರನ್ನವತೀ ಯಜ್ಞಂ ವಷ್ಟು ಧಿಯಾವಸುಃ ಕರ್ಮವಸುಃ । ನಿ. ೧೧-

೨೬ । ಇತಿ ॥ ಪವನಂ ಪಾವಃ ಶುದ್ಧಿಃ । ಪಾವಂ ಕಾಯತೀತಿ ಪಾವಕಾ । ಕೈ ಗೈ ರೈ ಶಬ್ದೇ । ಆತೋಽನುಪಸರ್ಗೇ ಕಃ । ಪಾ. ೩-೨-೩ । ಇತಿ ಕಪ್ರತ್ಯಯಃ । ಕೃದುತ್ತರಪದಪ್ರಕೃತಿಸ್ವರತ್ವೇನಾಂತೋದಾತ್ತತ್ವಂ । ಯದ್ವಾ । ಪುನಾತೇರ್ಣ್ಯರ್ಥೇ ಣ್ವುಲಿ ಪ್ರತ್ಯಯಸ್ಥಾತ್ಕಾತ್ಪೂರ್ವಸ್ಯಾತ ಇದಾಪ್ಯಸುಪಃ । ಪಾ. ೭-೩-೪೪ । ಇತೀತ್ವಸ್ಯಾಭಾವೋಽಂತೋದಾತ್ತತ್ವಂ ಚ ಛಾಂದಸಂ ದ್ರಷ್ಟವ್ಯಂ । ಸರಃಶಬ್ದಃ ಸರ್ತೇರಸುನಂತತ್ವಾದಾದ್ಯುದಾತ್ತಃ । ಮತುಪ್ಙೀಪೋಃ ಪಿತ್ತ್ವಾದನುದಾತ್ತತ್ವಂ । ವಾಜೇಭಿಃ । ವಾಜಶಬ್ದೋ ವೃಷಾದಿತ್ವಾದಾದ್ಯುದಾತ್ತಃ । ಸ ಹ್ಯವೃತ್ತ್ಕೃತತ್ವಾದಾಕೃತಿಗಣಃ । ವಾಜೋಽನ್ನಮಾಸ್ವಿತಿ ವಾಜಿನ್ಯಃ ಕ್ರಿಯಾಃ । ಅತ ಇನಿಠನೌ । ಪಾ. ೫-೨-೧೧೫ । ಇತೀನಿಪ್ರತ್ಯಯಃ । ತಾಃ ಕ್ರಿಯಾ ಯಸ್ಯಾಃ ಸಂತಿ ಸಾ ಸರಸ್ವತೀ ವಾಜಿನೀವತೀ । ಛಂದಸೀರ ಇತಿ ಮತುಪೋ ವತ್ವಂ । ಮತುಪ್ಙೀಪೋಃ ಪಿತ್ತ್ವೇನಾನುದಾತ್ತತ್ವಾದಿನೇಃ ಪ್ರತ್ಯಯಾದ್ಯುದಾತ್ತತ್ವಮೇವ ಶಿಷ್ಯತೇ । ಯಜ್ಞಂ । ಯಜಯಾಚೇತ್ಯಾದಿನಾ । ಪಾ. ೩-೩-೯೦ । ನಙ್ಪ್ರತ್ಯಯಃ । ಪ್ರತ್ಯಯಸ್ವರೇಣಾಂತೋದಾತ್ತಃ । ವಷ್ಟು । ವಶ ಕಾಂತೌ । ಕಾಂತಿರಭಿಲಾಷಃ । ಅದಿಪ್ರಭೃತಿಭ್ಯಃ ಶಪ ಇತಿ ಶಪೋ ಲುಕ್ । ನಿಘಾತಃ । ಧಿಯಾವಸುಃ । ಧಿಯಾ ಕರ್ಮಣಾ ವಸು ಯಸ್ಯಾಃ ಸಕಾಶಾದ್ಭವತಿ ಸಾ ಧಿಯಾವಸುಃ । ಸಾವೇಕಾಚ ಇತಿ ವಿಭಕ್ತಿರುದಾತ್ತಾ । ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮಿತಿ ವಿಭಕ್ತಿಸ್ವರ ಏವ ಶಿಷ್ಯತೇ । ಛಾಂದಸಸ್ತೃತೀಯಾಯಾ ಅಲುಕ್ ।

॥ ಪ್ರತಿಪದಾರ್ಥ ॥

**ಪಾವಕಾ**—(ಜನರನ್ನು) ಪವಿತ್ರಗೊಳಿಸುವ, ಅಥವಾ ಶುದ್ಧಿಗೊಳಿಸುವ । **ವಾಜಿನೀವತೀ**—(ಸ್ತೋತ್ರಗಳನ್ನು ಮಾಡುವ ಜನರಿಗೆ) ಅನ್ನಾದ್ಯಾಹಾರಗಳನ್ನು ಳ್ಳವಳಾದ (ಕೊಡುವವಳಾದ) । **ಧಿಯಾವಸುಃ**—ಯಜ್ಞಾದಿ ಕರ್ಮಗಳಿಗೆ ಫಲಭೂತವಾದ ಧನಾದಿಗಳಿಗೆ ಕಾರಣಭೂತಳಾದ ! **ಸರಸ್ವತೀ**—ಸರಸ್ವತೀದೇವಿಯು (ವಾಗ್ದೇವತೆಯು ಅಥವಾ ಸರಸ್ವತೀ ಎಂಬ ನದಿಯು) । **ನಃ**—ನಮ್ಮ । **ಯಜ್ಞಂ**—ಯಜ್ಞವನ್ನು । **ವಾಜೇಭಿಃ**—ಹವಿರ್ಲಕ್ಷಣರೂಪವಾದ ಅನ್ನಗಳಿಗಾಗಿ । **ವಷ್ಟು**—ಅಪೇಕ್ಷಿಸಲಿ (ಯಜ್ಞವನ್ನು ಸಾಂಗವಾಗಿ ನಡೆಯುವಂತೆ ನಿರ್ವಹಿಸಲಿ) ॥

॥ ಭಾವಾರ್ಥ ॥

ಸರಸ್ವತೀದೇವಿಯು ಜನರನ್ನು ಶುದ್ಧಿಗೊಳಿಸುವವಳು, ಯಜ್ಞಾದಿಗಳಿಂದ ಆರಾಧನೆಮಾಡುವ ಜನರಿಗೆ ಅನ್ನಾದಿಗಳನ್ನು ಕೊಡುವವಳು ; ಮತ್ತು ಧನರೂಪವಾದ ಐಶ್ವರ್ಯಪ್ರಾಪ್ತಿಗೂ ಕಾರಣಭೂತಳಾದವಳು. ಇಂತಹ ಸರಸ್ವತಿಯು ನಾವು ಕೊಡುವ ಹವಿರ್ಲಕ್ಷಣರೂಪವಾದ ಅನ್ನಾದಿಗಳಿಂದ ತೃಪ್ತಿಗೊಂಡು ನಮ್ಮ ಯಜ್ಞವನ್ನು ಸಾಂಗವಾಗಿ ನೆರವೇರುವಂತೆ ಮಾಡಲಿ.

English Translation.

May Saraswati, the purifier, the bestower of food, recompenser of worships with wealth, be attracted to our rite by our offer of sacrificial food.

॥ ವಿಶೇಷವಿಷಯಗಳು ॥

**ಪಾವಕಾನಃ** ಎಂಬ ಈ ಋಕ್ಕೂ ಮುಂದಿನ ಎರಡು ಋಕ್ಕುಗಳೂ ಸೇರಿ **ಸಾರಸ್ವತಸ್ತೃಚಃ** ಎಂದರೆ ಸರಸ್ವತೀಸಂಬಂಧವಾದ ಮೂರು ಋಕ್ಕುಗಳು ಎನಿಸುವವು. ಈ ಮೂರು ಋಕ್ಕುಗಳಲ್ಲಿ ಮೊದಲನೆಯದಾದ ಈ ಪಾವಕಾನಃ ಎಂಬ ಋಕ್ಕು ಅನ್ವಾರಂಭಣೀಯೇಷ್ಟಿ ಎಂಬ ಯಜ್ಞವಿಶೇಷದಲ್ಲಿ ಸರಸ್ವತಿಯನ್ನು ಆಹ್ವಾನಮಾಡುವ ಪುರೋನುವಾಕ್ಯಾ ಎಂಬ ಮಂತ್ರವು. ಯಜ್ಞದಲ್ಲಿ ಯಾವ ದೇವತೆಯನ್ನಾಗಲಿ ಉದ್ದೇಶಿಸಿ ಹೋಮಮಾಡುವಾಗ ಎರಡು ಋಕ್ಕುಗಳನ್ನು ಉಪಯೋಗಿಸುವರು. ಆ ಎರಡು ಋಕ್ಕುಗಳೂ ಆ ದೇವತೆಗೆ ಸಂಬಂಧಪಟ್ಟಿದ್ದಾಗಿರಬೇಕು. ಮೊದಲನೆಯ ಋಕ್ಕನ್ನು ಪಠಿಸಿ ದೇವತೆಯನ್ನು ಆಹ್ವಾನಮಾಡುವರು. ಇಂತಹ ಋಕ್ಕಿಗೆ **ಪುರೋನುವಾಕ್ಯಾ** ಎಂದು ಹೆಸರು. ಮತ್ತೊಂದು ಋಕ್ಕಿನಿಂದ ಆ ದೇವತೆಯನ್ನುದ್ದೇಶಿಸಿ ಹೋಮಮಾಡುವರು. ಈ ಮಂತ್ರಕ್ಕೆ **ಯಾಜ್ಯಾ** ಎಂದು ಹೆಸರು. ಅದರಂತೆ ಅನ್ವಾರಂಭಣೀಯೇಷ್ಟಿಯಲ್ಲಿಯೂ ಪುರೋನುವಾಕ್ಯಾ ಮತ್ತು ಯಾಜ್ಯಾ ಎಂಬ ಎರಡು ಋಕ್ಕುಗಳನ್ನು ಉಪಯೋಗಿಸುವರು. ಈ ವಿಷಯವನ್ನು ಆಶ್ವಲಾಯನ ಮಹರ್ಷಿಯು ತಮ್ಮ ಶ್ರೌತಸೂತ್ರದಲ್ಲಿ (ಆಶ್ವ. ಶ್ರೌ ಸೂ. ೨-೮) ತಥಾ ದರ್ಶಪೂರ್ಣಮಾಸಾವಾರಪ್ಸ್ಯಮಾನ ಎಂಬ ಖಂಡದಲ್ಲಿ ಈ ರೀತಿ ಹೇಳಿರುವರು.

**ಪಾವಕಾ ನಃ ಸರಸ್ವತೀ ಪಾವೀರವೀ ಕನ್ಯಾ ಚಿತ್ರಾಯುಃ** । (ಆಶ್ವ. ೨-೮)

ಈ ಅನ್ವಾರಂಭಣೀಯೇಷ್ಟಿಯನ್ನೂ ದರ್ಶಪೂರ್ಣಮಾಸಯಾಗವನ್ನೂ ಮಾಡುವುದಕ್ಕೆ ಪೂರ್ವದಲ್ಲಿ ಯಜಮಾನನು ಪುಣ್ಯಾಹವಾಚನ, ನಾಂದೀಶ್ರಾದ್ಧ, ಉದಕಶಾಂತ್ಯಾಖ್ಯ ಕರ್ಮಗಳನ್ನು ನೆರವೇರಿಸಿ ಪತ್ನಿಯ ಹಸ್ತದಲ್ಲಿ ಪ್ರತಿಸರವೆಂಬ ಸೂತ್ರವನ್ನು ಕಟ್ಟಿ ಬಳಿಕ ಮಾರನೆಯದಿನ ಸ್ನಾನಾದಿನಿತ್ಯಕರ್ಮಗಳನ್ನು ನೆರವೇರಿಸಿದ ಬಳಿಕ— **ಯಾವಜ್ಜೀವಂ ದರ್ಶಪೂರ್ಣಮಾಸಾಭ್ಯಾಂ ಯಕ್ಷ್ಯೇ** ಎಂದು ಸಂಕಲ್ಪಮಾಡಬೇಕು. ಅನಂತರ **ಅನ್ವಾರಂಭಣೀಯಯಾ** ಯಕ್ಷ್ಯೇ ಎಂದೂ ಸಂಕಲ್ಪಮಾಡಿ ಅಗ್ನಿವಿಹರಣವೆಂಬ ಗಾರ್ಹಪತ್ಯಾಗ್ನಿಯಿಂದ ಅಗ್ನಿಯನ್ನು ತರುವ ಅಗ್ನ್ಯಾನಯನವೆಂಬ ಕರ್ಮವನ್ನು ನೆರವೇರಿಸಬೇಕು. ಬಳಿಕ ಅನ್ವಾಧಾನವನ್ನು ಹೇಳುವಾಗ **ಅಗ್ನಾವಿಷ್ಣೂ, ಸರಸ್ವತೀ, ಸರಸ್ವಾನ್, ಅಗ್ನಿರ್ಭಗೀ** ಎಂಬ ಪ್ರಧಾನದೇವತೆಗಳನ್ನುದ್ದೇಶಿಸಿ ಪ್ರಧಾನಹೋಮವನ್ನು ಮಾಡಬೇಕು. ಅಗ್ನಾವಿಷ್ಣುಗಳಿಗೆ ಏಕಾದಶಕಪಾಲಃ ಪುರೋಡಾಶವೂ, ಸರಸ್ವತೀದೇವತೆಗೆ ಚರುವೂ, ಸರಸ್ವಾನ್ ಎಂಬ ದೇವತೆಗೆ ದ್ವಾದಶಕಪಾಲಃ ಪುರೋಡಾಶವೂ, ಅಗ್ನಿರ್ಭಗೀ ಎಂಬ ದೇವತೆಗೆ ಅಷ್ಟಾದಶಕಪಾಲಃ ಪುರೋಡಾಶವೂ ಹೋಮದ್ರವ್ಯಗಳು. ಈ ಹೋಮಗಳನ್ನು ಪೂರ್ಣಮಾಸಯಾಗಾನುಸಾರವಾಗಿ ಮಾಡಬೇಕು. ಈ ದೇವತೆಗಳಿಗೆ ಹೋಮಮಾಡುವಾಗ ಉಪಯೋಗಿಸುವ **ಪುರೋನುವಾಕ್ಯಾ** ಮತ್ತು **ಯಾಜ್ಯಾ** ಎಂಬ ಮಂತ್ರಗಳು ಈ ರೀತಿ ಇರುವವು—

**ಅಗ್ನಾವಿಷ್ಣೂ**—**ಅಗ್ನಾವಿಷ್ಣೂ ಸಜೋಷಸಾ** (ಪುರೋನುವಾಕ್ಯಾ)
**ಅಗ್ನಾವಿಷ್ಣೂ ಮಹಿ ಧಾಮ** (ಯಾಜ್ಯಾ)

**ಸರಸ್ವತೀ** — **ಪಾವಕಾನಃ ಸರಸ್ವತೀ** (ಪುರೋನುವಾಕ್ಯಾ) ಋ. ಸಂ. ೧-೩-೧೦
**ಪಾವೀರವೀಕನ್ಯಾ** (ಯಾಜ್ಯಾ) ಋ. ಸಂ. ೬-೪೯-೭

**ಸರಸ್ವಾನ್** — **ಪೀಪಿವಾಂಸಂ ಸರಸ್ವತಃ** (ಪುರೋನುವಾಕ್ಯಾ) ಋ. ಸಂ. ೭-೯೬-೬
**ದಿವ್ಯಂ ಸುಪರ್ಣಂ ವಾಯಸಂ** (ಯಾಜ್ಯಾ) ಋ. ಸಂ. ೧-೧೬೪-೨

**ಅಗ್ನಿರ್ಭಗೀ— ಆಸವಂ ಸವಿತುಃ** (ಪುರೋನುವಾಕ್ಯಾ) ಋ. ಸಂ. ೮-೧೦೨-೬

**ಸ ನೋ ರಾಧಾಂಸ್ಯಾಭರ** (ಯಾಜ್ಯಾ) ಋ. ಸಂ. ೭-೧೫-೧೧

ಎಂದರೆ ಈ ಅನ್ವಾರಂಭಣೀಯೇಷ್ಟಿಯಲ್ಲಿ ಸರಸ್ವತೀದೇವತೆಯನ್ನು ಆಹ್ವಾನಮಾಡುವ ಸಂದರ್ಭದಲ್ಲಿ—

**ಪಾವಕಾನಃ ಸರಸ್ವತೀ ವಾಜೇಭಿರ್ವಾಜಿನೀವತೀ ।**

**ಯಜ್ಞಂ ವಷ್ಟು ಧಿಯಾವಸುಃ** (ಋ. ಸಂ. ೧-೩-೧೦)

ಎಂಬ ಋಕ್ಕನ್ನು ಪುರೋನುವಾಕ್ಯದ ಮಂತ್ರವನ್ನಾಗಿಯೂ,

**ಪಾವೀರವೀ ಕನ್ಯಾ ಚಿತ್ರಾಯುಃ ಸರಸ್ವತೀ ವೀರಪತ್ನೀ ಧಿಯಂ ಧಾತ್ ।**
**ಗ್ನಾಭಿರಚ್ಛಿದ್ರಂ ಶರಣಂ ಸಜೋಷಾ ದುರಾಧರ್ಷಂ ಗೃಣತೇ ಶರ್ಮ ಯಂಸತ್ ॥**

(ಋ. ಸಂ ೬-೪೯-೭)

ಎಂಬ ಋಕ್ಕನ್ನು ಯಾಜ್ಯಾ ಮಂತ್ರವನ್ನಾಗಿಯೂ ಉಪಯೋಗಿಸಬೇಕೆಂದು ಹೇಳಿರುವರು.

**ಪಾವಕಾ**—ಈ ಶಬ್ದವು ಪೂಙ್ ಪವಿತ್ರಗೊಳಿಸು ಶುದ್ಧಿಮಾಡು ಎಂಬ ಧಾತುವಿನಿಂದ ಉತ್ಪನ್ನವಾಗಿದೆ. ಭಾಷ್ಯಕಾರರು—**ಪವನಂ ಪಾವಃ ಶುದ್ಧಿಸ್ತಂ ಕಾಯತೀತಿ ಪಾವಕಾ** ಎಂದು ಈ ಶಬ್ದದ ರೂಪ ನಿಷ್ಪತ್ತಿಯನ್ನು ಮಾಡಿದಾರೆ. ಪವಿತ್ರಗೊಳಿಸುವವಳು, (ಪಾಪಗಳನ್ನು ಪರಿಹರಿಸಿ) ಶುದ್ಧಿಗೊಳಿಸುವವಳು ಎಂದರ್ಥವು. ಪಾವಕಶಬ್ದವು ಅಗ್ನಿ, ಮರುತ್, ಸೋಮ ಮೊದಲಾದ ದೇವತೆಗಳ ವಿಷಯದಲ್ಲಿಯೂ ಅನೇಕ ಕಡೆ ಉಪಯೋಗಿಸಲ್ಪಟ್ಟಿದ್ದರೂ ಅಗ್ನಿಯ ವಿಷಯದಲ್ಲಿಯೇ ವಿಶೇಷವಾಗಿ ಉಪಯೋಗಿಸಲ್ಪಟ್ಟಿರುವುದು. —

**ಅಗ್ನಿ—ಅಗ್ನೇ ಪಾವಕ ರೋಚಿಷಾ ಮಂದ್ರಯಾ ದೇವ ಜಿಹ್ವಯಾ ।** (ಋ. ಸಂ. ೫-೨೬-೧)

**ಸ ನಃ ಪಾವಕ ದೀದಿವೋಽಗ್ನೇ ದೇವಾ ಇಹಾವಹ ।** (ಋ. ಸಂ. ೧-೧೨-೧೦)

**ಅಸ್ಯಾ ಜರಾಸೋ ದಮಾ ಮರಿತ್ರಾ ಅರ್ಚದ್ಧೂಮಾಸೋ ಅಗ್ನಯಃ ಪಾವಕಾಃ ॥**

(ಋ. ಸಂ. ೧೦-೪೬-೭)

**ಇಂದ್ರ—ಮಿಹಃ ಪಾವಕಾಃ ಪ್ರತತಾ ಅಭೂವನ್ ಸ್ವಸ್ತಿ ನಃ ಪಿಪೃಹಿ ಪಾರಮಾಸಾಂ ।**

(ಋ. ಸಂ. ೩-೩೧-೨೦)

**ಉಷಾಃ— ವ್ಯೂ ವಜ್ರಸ್ಯ ತಮಸೋ ದ್ವಾರೋಚ್ಛಂತೀರವ್ರಂಛುಚಯಃ ಪಾವಕಾಃ ॥**

(ಋ. ಸಂ. ೪-೫೧-೨)

**ಆಪಃ—ಸಮುದ್ರಾರ್ಥಾ ಯಾಃ ಶುಚಯಃ ಪಾವಕಾಸ್ತಾ ಆಪೋ ದೇವೀರಿಹ ಮಾಮವಂತು.**

(ಋ. ಸಂ- ೭-೪೯-೨)

**ಮರುತಃ—ಋತೇನ ಸತ್ಯಮೃತಸಾಪ ಆಯಂಛುಚಿಜನ್ಮಾನಃ ಶುಚಯಃ ಪಾವಕಾಃ ।**

(ಋ. ಸಂ. ೭-೫೬-೧೨)

ಇತ್ಯಾದಿ ಮಂತ್ರಗಳಲ್ಲಿ ಪಾವಕಶಬ್ದವು ಬೇರೆ ಬೇರೆ ದೇವತೆಗಳ ವಿಷಯವಾಗಿ ಉಪಯೋಗಿಸಲ್ಪಟ್ಟಿರುವುದು ಪಾಶ್ಚಾತ್ಯಪಂಡಿತರು ಈ ಶಬ್ದಕ್ಕೆ Purifier, purifying, bright, glittering, pure, sacred, blazing, flaming ಮೊದಲಾದ ಶಬ್ದಗಳಿಂದ ಅರ್ಥವಿವರಣೆಯನ್ನು ಮಾಡಿರುವರು. ಅಗ್ನಿಸಂಬಂಧವಾದ ಅರ್ಥವನ್ನು ಹೇಳುವಾಗ ಶುದ್ಧಿಗೊಳಿಸುವ ಮತ್ತು ಪ್ರಕಾಶಮಾನವಾದ ಎಂಬ ಎರಡು ಅರ್ಥಗಳನ್ನೂ ಹೇಳ ಬಹುದು.

**ಸರಸ್ವತೀ**—ಸಾಯಣಾಚಾರ್ಯರು ಋಗ್ವೇದಮಂತ್ರಗಳಲ್ಲಿ ಉಪಯೋಗಿಸಲ್ಪಟ್ಟಿರುವ ಸರಸ್ವತೀ ಶಬ್ದಕ್ಕೆ ಐದುವಿಧವಾದ ಅರ್ಥವಿವರಣೆಯನ್ನು ಕೊಟ್ಟಿದಾರೆ.

(1) **ನದೀ**—ಋ. ಸಂ. ೧-೧೪೨-೯ ; ೧-೧೬೪-೫೨ ; ೨-೩೦-೮.

(2) **ನದಿಯ ಹೆಸರು**—ಋ. ಸಂ. ೧-೩-೧೨ ; ೨-೪೧-೬ ; ೩-೨೩-೪ ; ೬-೪೧ ರಲ್ಲಿ ೪, ೭, ೧೦ ೧೧, ೧೩ ನೆಯ ಋಕ್ಕುಗಳು ; ೬-೫೨-೬ ; ೬-೬೧-೨ ; ೭-೩೬-೬ ; ೭-೯೫-೧ & ೨ ; ೭-೯೬-೧ ; ೮-೨೧-೧೭ & ೧೮ ; ೧೦-೬೪-೯ ; ೧೦-೬೫-೧೩.

(3) **ದೇವತೆಯ ಹೆಸರು**—ಋ. ಸಂ. ೫-೪೩-೧೧ ; ೫-೪೬-೨ ; ೬-೪೯-೭ ; ೫-೫೦-೧೨ ; ೧೦-೧೭-೭ ; ೧೦-೩೦-೧೨.

(4) **ಆಕಾಶಾಭಿಮಾನಿದೇವತೆ**—(ಇಳಾ, ಭಾರತೀ, ಸರಸ್ವತೀ ಎಂಬ ಮೂವರು ದೇವತೆಗಳಲ್ಲಿ ಒಂದು)-ಋ. ಸಂ. ೧-೧೮೮-೮.

(5) **ವಾಗ್ದೇವೀ**—ಋ. ಸಂ. ೨-೧-೧೧ ; ೩-೪-೮ ; ೩-೫೪-೧೩ ; ೫-೪೨-೧೨ ; ೭-೩೯-೫ ; ೭-೪೦-೩ ; ೯-೬೭-೩೨.

ಋಗ್ವೇದದಲ್ಲಿ ಸರಸ್ವತೀ ದೇವಿಯನ್ನು ಸ್ತೋತ್ರಮಾಡುವ ಅನೇಕ ಮಂತ್ರಗಳಿವೆ. ಆದರೆ ಈ ಸರಸ್ವತೀ ದೇವಿಯು ಯಾರು ಅವಳ ಸ್ವರೂಪವೇನು ಎಂಬ ವಿಷಯದಲ್ಲಿ ನಿರುಕ್ತಕಾರರು ಏನನ್ನೂ ಹೇಳಿರುವುದಿಲ್ಲ. **ನದೀವದ್ದೇವತಾವಚ್ಚ ನಿಗಮಾ ಭವಂತಿ** ಎಂದು ಮಾತ್ರ ಹೇಳಿದಾರೆ. ಎಂದರೆ, ಸರಸ್ವತೀ ದೇವತಾಕವಾದ ಕೆಲವು ಮಂತ್ರಗಳಲ್ಲಿ ಸರಸ್ವತಿಯು ನದಿಯೆಂದೂ ಕೆಲವು ಮಂತ್ರಗಳಲ್ಲಿ ಒಂದು ದೇವತೆಯೆಂದೂ ವರ್ಣನೆ ಇದೆ. ಆದರೆ ಸರಸ್ವತಿಯೆಂಬ ನದಿಯೇ ಓರ್ವ ದೇವತೆಯೆಂದು ಭಾವಿಸಿ ಸ್ತುತಿಸಲ್ಪಟ್ಟಿದೆಯೋ ಅಥವಾ ದೇವತೆಯನ್ನೇ ನದಿಯೆಂದು ಭಾವಿಸಿ ಸ್ತುತಿಸಲ್ಪಟ್ಟಿದೆಯೋ ಎನ್ನುವುದು ವಿಶದವಾಗಿಲ್ಲ. ಆದುದರಿಂದ ಸರಸ್ವತೀ ಎನ್ನುವುದು ನದೀ, ಮತ್ತು ದೇವತೆಗಳೆರಡನ್ನೂ ಸೂಚಿಸುವುದೆಂದು ಹೇಳಬೇಕಾಗಿದೆ. ಸರಸ್ವತಿಯು ಒಂದು ದೇವತೆಯೆಂದು ಹೇಳುವ ಪಕ್ಷದಲ್ಲಿ ಆ ದೇವತೆ ಯಾರು ? ಅದರ ಸ್ವರೂಪವೇನು ? ಆ ದೇವತೆಯ ಸ್ಥಾನಮಾನಗಳಾವುವು ? ಇವೇ ಮೊದಲಾದ ವಿಷಯಗಳಿಗೆ ಸಮಂಜಸವಾದ ಉತ್ತರವನ್ನು ಹೇಳುವುದು ಸುಲಭಸಾಧ್ಯವಲ್ಲ. ಸರಸ್ವತಿಯು ಒಂದು ನದಿಯೆಂದು ಹೇಳುವ ಪಕ್ಷದಲ್ಲಿ ಆ ಹೆಸರಿನ ಪ್ರಸಿದ್ಧವಾದ ಒಂದು ನದಿಯು ಪೂರ್ವದಲ್ಲಿ ಇತ್ತೆಂದೂ (ಈಗಿನ ಸರಸುತಿ the modern Sarsuti) ಅದನ್ನೇ ಋಗ್ವೇದದಲ್ಲಿ ಸ್ತುತಿಸಲ್ಪಟ್ಟಿರುವುದೆಂದೂ ಹೇಳಬಹುದು. ಹೀಗೆ ಹೇಳುವ ಸಂದರ್ಭದಲ್ಲಿ ಕೆಲವು ನಿರ್ದಿಷ್ಟವಾದ ದೇವತೆಗಳನ್ನು ಉದ್ದೇಶಿಸಿ ಮಾಡುವ ಯಜ್ಞಯಾಗಾದಿಗ ಳಲ್ಲಿ ನದೀ ಮೊದಲಾದ ಅಚೇತನ ವಸ್ತುಗಳ ಪ್ರತಿಪಾದನೆಯು ನಿಷಿದ್ಧವಲ್ಲವೇ ಎಂಬ ಸಂಶಯವು ತಲೆದೋರು

ವುದು. ಈ ವಿಷಯದಲ್ಲಿ ಜೈಮಿನಿಮಹರ್ಷಿಯು ತಮ್ಮ ಮೀಮಾಂಸಾ ಸೂತ್ರದಲ್ಲಿ **ಅಚೇತನೇऽರ್ಥಬಂಧನಾತ್** (ಜೈ. ಸೂ. ೧-೨-೩೫) ಪೂರ್ವಪಕ್ಷವನ್ನು ಮಾಡಿರುವುದಕ್ಕೆ ಭಾಷ್ಯಕಾರರು **ಅಭಿಮಾನಿವ್ಯಪದೇಶಃ** (ವೇ. ಸೂ. ೨-೧-೫) ಎಂಬ ವೇದಾಂತಸೂತ್ರವನ್ನು ಉದಹರಿಸಿ ಸಮಾಧಾನವನ್ನು ಹೇಳಿರುವರು. ಎಂದರೆ ವೇದಮಂತ್ರಗಳಲ್ಲಿ ಅನೇಕ ಕಡೆ ಅಚೇತನವಸ್ತುಗಳನ್ನು ಸಂಬೋಧನೆಮಾಡಿರುವ ಸಂದರ್ಭದಲ್ಲಿ. ಆ ಅಚೇತನವಸ್ತುಗಳ ಅಭಿಮಾನದೇವತೆಗಳನ್ನು ಕುರಿತು ಹೇಳಿರುವುದೆಂದು ತಿಳಿಯಬೇಕೆಂದು ಹೇಳಿರುವರು. (ಭಾಗ ೧ 380-381 ಪೇಜುಗಳನ್ನು ನೋಡಿ). ಆದುದರಿಂದ ನದಿಯೆಂದು ಸ್ತೋತ್ರಮಾಡಿರುವ ಕಡೆಗಳಲ್ಲಿ ಆ ನದ್ಯಭಿಮಾನಿದೇವತೆಯನ್ನು ಸ್ತೋತ್ರಮಾಡಿರುವುದೆಂದು ತಿಳಿಯಬೇಕು. ಈ ಸರಸ್ವತೀದೇವತೆಯ ವಿಷಯದಲ್ಲಿ ಅನೇಕರು ಅನೇಕ ವಿಧವಾಗಿ ಅಭಿಪ್ರಾಯಪಡುವರು—

(1) ಪುರಾಣಾದಿಗಳಲ್ಲಿ ಸರಸ್ವತಿಯೆಂದರೆ **ವಾಗಧಿಷ್ಠಾತ್ರೀ, ಶಾರದಾ, ವಿದ್ಯಾಸ್ವರೂಪಿಣೀ, ಹಂಸವಾಹಿನೀ**—ವಾಗಭಿಮಾನಿದೇವತೆಯೂ, ಶಾರದಾ ಎಂಬ ಹೆಸರಿನಿಂದ ಪ್ರಸಿದ್ಧಳೂ, ವಿದ್ಯಾಸ್ವರೂಪಿಣಿಯೂ ಹಂಸದಮೇಲೆ ಕುಳಿತಿರುವವಳೂ ಆದ ದೇವತಾವಿಶೇಷವೆಂದು ಹೇಳಲ್ಪಟ್ಟಿರುವುದು.

(2) ಅಥವಾ ಈ ಸರಸ್ವತೀದೇವಿಯು ಉಪಾಧಿವಿಶೇಷವಿಶಿಷ್ಟಳಾದ ಆದಿತ್ಯರೂಪಳಾಗಿರುವಳೆಂದೂ ಹೇಳುವರು. ಉಪಾಧಿಯೆಂದರೆ ಸಂಧ್ಯಾಕಾಲವು. ಆದುದರಿಂದ ಸಂಧ್ಯಾಕಾಲಪ್ರಕಾಶಯುಕ್ತನಾದ ಆದಿತ್ಯನೇ ಸರಸ್ವತೀರೂಪದಿಂದ ಇಲ್ಲಿ ಸ್ತುತಿಸಲ್ಪಟ್ಟಿರುವನೆಂದು ಕೆಲವರ ಮತವು.

(3) ಸರಃ ಶಬ್ದವು ಸೃ—ಸರಿ, ಸಂಚರಿಸು ಎಂಬ ಧಾತುವಿನಿಂದ ಉತ್ಪನ್ನವಾಗಿದೆ. **ಸರಃ ಅಸ್ಯಾ ಅಸ್ತೀತಿ** ಅಥವಾ **ಸರಃ ತೇಜೋ ಯಸ್ಯಾ ವಿದ್ಯತೇ ಸಾ ಸರಸ್ವತೀತಿ ಭವತಿ** ಎಂದರೆ ತೇಜೋರೂಪದಿಂದ ಪ್ರಕಾಶಿಸುವಳಾದುದರಿಂದ ಸರಸ್ವತೀ ಎಂದು ಹೆಸರು.

(4) ಅಥವಾ—**ಪ್ರಾತರ್ವಾಚಾಂ ಪ್ರವರ್ತಿಕಾ, ಪ್ರಾಣಿನಾಂ ಸ್ವಾಪಪರಿತ್ಯಾಗೇನ ಸ್ವೋಚಿತವ್ಯವಹಾರೇಷು ಪ್ರವೃತ್ತೌ ಶಬ್ದಾಯಮಾನತಾಯಾಃ ಪ್ರವೃತ್ತೇಃ, ರಾತ್ರೌ ಚ ವಾಚಾಂ ನಿರೋಧಕಾ ರಾತ್ರೌ ಪ್ರಾಣಿನಾಂ ನಿಲಾಯನಿಲೀನತ್ವೇನ ಸುಪ್ತ್ಯಮಾನತಯಾ ಶಬ್ದವಿರಾಮಾತ್ । ಏವಂ ಚ ಶಬ್ದಸ್ಯ ಪ್ರವರ್ತಿಕಾ ನಿವರ್ತಿಕಾ ಏಷೈವ ಲೋಕೇ ಸರಸ್ವತೀತ್ವೇನ ವ್ಯಪದಿಶ್ಯತೇ ನಾನ್ಯಾ ॥** ಎಂದರೆ ಪ್ರಾತಃಕಾಲದಲ್ಲಿ ಪ್ರಾಣಿಗಳು ನಿದ್ರೆಯಿಂದ ಎಚ್ಚರಗೊಂಡು ಮಾತನಾಡುವುದು ಮೊದಲಾದ ತಮ್ಮ ತಮ್ಮ ವ್ಯಾಪಾರವ್ಯವಹಾರಾದಿಗಳಲ್ಲಿ ತೊಡಗಿರುವವು. ರಾತ್ರಿಕಾಲದಲ್ಲಿ ಪ್ರಾಣಿಗಳು ನಿದ್ರೆಯಲ್ಲಿ ಆಸಕ್ತವಾಗಿರುವಾಗ ಮಾತನಾಡುವುದು ಶಬ್ದಮಾಡುವುದು ಮೊದಲಾದ ಕರ್ಮಗಳಿಲ್ಲದೆ ವ್ಯವಹಾರಾದಿಗಳಿಂದ ವಿರಾಮವನ್ನು ಹೊಂದಿರುವವು. ಆದುದರಿಂದ ಮಾತನಾಡುವ ಅಥವಾ ಶಬ್ದಮಾಡುವ ವಿಚಾರದಲ್ಲಿ ಪ್ರವರ್ತನೆನಿವರ್ತನೆಗಳಿಗೆ ಕಾರಣಭೂತಳಾಗಿರುವುದರಿಂದ ಈ ವಾಗ್ದೇವತೆಗೆ ಸರಸ್ವತೀ ಎಂದು ಹೆಸರು.

(5) ಹಿಂದೆ ಹೇಳಿದಂತೆ ವಾಗ್ರೂಪತ್ವಾದಿಗಳು ಈ ದೇವತೆಗೆ ಇರುವುದರಿಂದ ಈ ಸರಸ್ವತೀದೇವಿಯು ಉಷಾರೂಪಿಣಿಯಾಗಿರುವಳು ಆದುದರಿಂದಲೇ ಉಷಾದೇವತೆಯ ಹೆಸರುಗಳಾದ **ಸೂನೃತಾ, ಸೂನೃತಾವತೀ ಸೂನೃತಾವರೀ** ಮೊದಲಾದ ಶಬ್ದಗಳ ಮಧ್ಯದಲ್ಲಿ ಈ ಸರಸ್ವತೀದೇವತೆಯ ಹೆಸರು ಇರುವುದು. ಇಲ್ಲಿ ಸೂನೃತ ಶಬ್ದಕ್ಕೆ ಪ್ರಿಯವೂ ಸತ್ಯವೂ ಆದ ಮಾತುಗಳೆಂದರ್ಥವು.

ಇದರಂತೆ ಸರಸ್ವತೀದೇವತಾವಿಚಾರದಲ್ಲಿ ಬೃಹದ್ದೇವತಾಗ್ರಂಥಕರ್ತರಾದ ಶೌನಕರೂ ಇತರ ಗ್ರಂಥಕಾರರೂ ವಿಧ ವಿಧವಾಗಿ ಅರ್ಥಮಾಡಿರುವರು.

ಈಗ ಋಗ್ವೇದದಲ್ಲಿ ಈ ಸರಸ್ವತೀಶಬ್ದವು ಯಾವ ಯಾವ ಅರ್ಥಗಳಲ್ಲಿ ಉಪಯೋಗಿಸಲ್ಪಟ್ಟಿರುವು ದೆಂದು ಸ್ವಲ್ಪಮಟ್ಟಿಗೆ ವಿಚಾರಮಾಡೋಣ. ಈ ವಿಷಯದಲ್ಲಿ ಮುಖ್ಯವಾಗಿ ಮೂರು ಅಂಶಗಳನ್ನು ಗಮನಿಸ ಬೇಕಾಗಿರುವುದು. (1) ಈಗ ನಾವು ವ್ಯಾಖ್ಯಾನಮಾಡುತ್ತಿರುವ ಪ್ರಸಕ್ತವಾದ **ಪಾವಕಾನಃ ಸರಸ್ವತೀ** ಎಂಬ ಋಕ್ಕು (2) ಸರಸ್ವತೀದೇವತಾಕವಾದ ಇತರ ಋಕ್ಕುಗಳು. (3) ಈ ಋಕ್ಕುಗಳನ್ನು ರಚಿಸಿದ ಋಷಿಗಳು ಮತ್ತು ಅವರ ವಂಶಸ್ಥರು. ಈ ಮೂರು ವಿಷಯಗಳನ್ನೂ ವಿಮರ್ಶೆಮಾಡುವೆವು —

ಪ್ರಸಕ್ತವಾದ ಈ ಸೂಕ್ತದಲ್ಲಿ ೧೦, ೧೧, ೧೨ ನೆಯ ಋಕ್ಕುಗಳು ಸರಸ್ವತೀದೇವತಾಕಮಂತ್ರ ಗಳು. ೧೦, ೧೧ ನೆಯ ಋಕ್ಕುಗಳಲ್ಲಿ ಸರಸ್ವತೀನದಿಯನ್ನೇ ಒಂದು ದೇವತೆಯನ್ನಾಗಿ ಭಾವಿಸಿ ಸ್ತುತಿಸಲ್ಪಟ್ಟಿರು ವುದು. ಭಾಷ್ಯಕಾರರಾದ ಸಾಯಣಾಚಾರ್ಯರು ೧೦–೧೧ ನೇಯ ಋಕ್ಕುಗಳಲ್ಲಿ ಸರಸ್ವತಿಯನ್ನು ವಾಗ್ದೇವತೆ ಯೆಂದೂ, ೧೨ ನೆಯ ಋಕ್ಕಿನಲ್ಲಿ ಸರಸ್ವತೀ ಎಂಬ ನದಿಯ ಅಭಿಮಾನಿದೇವತೆಯೆಂದೂ ವ್ಯಾಖ್ಯಾನಮಾಡಿರುವರು. Griflith ಎಂಬ ಪಂಡಿತರು ಸರಸ್ವತಿಯೆಂದರೆ ವಾಗ್ದೇವತೆಯೆಂದು ಅರ್ಥಮಾಡಿರುವರು ಆದರೆ **ಪಾವಕಾ** ಎಂಬ ಶಬ್ದಕ್ಕೆ " ನೀರಿನಿಂದ ಶುದ್ಧಿಗೊಳಿಸುವ " ಎಂಬ ಅರ್ಥವನ್ನು ಮಾಡುವಾಗಲೂ **ಅರ್ಣ** ಎಂಬ ಶಬ್ದಕ್ಕೆ ನದಿಯೆಂದು ಅರ್ಥಮಾಡುವಾಗಲೂ, ಸರಸ್ವತಿಯೆಂದರೆ ಒಂದು ನದೀ ಅಥವಾ ನದಿಯ ಅಭಿಮಾನದೇವತೆ ಎಂದು ಹೇಳಬೇಕಾಗುವುದು. ಆಧುನಿಕ ಪಂಡಿತರಲ್ಲಿ ಕೆಲವರು ಸರಸ್ವತಿಯೆಂದರೆ ಸಿಂಧೂನದಿಯೆಂದೂ ಅಭಿಪ್ರಾಯ ಪಡುವರು. ಆದರೆ ಈ ಋಕ್ಕನ್ನು ರಚಿಸಿದ ವಿಶ್ವಾಮಿತ್ರಪುತ್ರನಾದ ಮಧುಚ್ಛಂದಋಷಿಯ ಆಶ್ರಮವು ಕುರುಕ್ಷೇತ್ರ ದಲ್ಲಿರುವ ಈಗಿನ ಸರಸುತಿ ಎಂಬ ನದಿಯ ಪಶ್ಚಿಮ ದಡದ ಮೇಲೆ ಇತ್ತೆಂದು ಹೇಳಿರುವುದರಿಂದ (ಮಹಾಭಾರತ, ಶಲ್ಯಪರ್ವ, ಅಧ್ಯಾಯ ೪೩) ಈ ಸರಸುತಿ ಎಂಬ ನದಿಯನ್ನೇ ಮಧುಚ್ಛಂದಋಷಿಯು ಸ್ತೋತ್ರಮಾಡಿರುವನೆಂದು ಊಹಿಸಲವಕಾಶವಿದೆ. ಏಕೆಂದರೆ, ಒಂದು ನದಿಯನ್ನು ಸ್ತೋತ್ರಮಾಡುವಾಗ ತಾನು ವಾಸಿಸುವ ಸ್ಥಳದ ಸಮೀಪ ದಲ್ಲಿರುವ ಪ್ರಸಿದ್ಧವಾದ ನದಿಯನ್ನು ಬಿಟ್ಟು ಎಲ್ಲಿಯೋ ದೂರದಲ್ಲಿರುವ (ಅದೇ ಹೆಸರಿನ) ಬೇರೊಂದು ನದಿಯನ್ನು ಸ್ತೋತ್ರಮಾಡಿರುವನೆಂದು ಹೇಳುವುದು ನ್ಯಾಯವೆಂದು ತೋರುವುದಿಲ್ಲ. ಎರಡನೆಯ ಮಂಡಲದಲ್ಲಿ ಸರಸ್ವತೀ ದೇವತಾಕವಾದ ಋ. ಸಂ. ೨-೩೦-೮, ೨-೩೨-೮; ೨-೪೧-೧೬ ರಿಂದ ೧೮ ಋಕ್ಕುಗಳನ್ನೆಲ್ಲಾ ಶುನಹೋತ್ರನ ಪುತ್ರನಾದ ಗೃತ್ಸಮದ ಎಂಬ ಋಷಿಯೇ ರಚಿಸಿರುವನು. ಈ ಗೃತ್ಸಮದಋಷಿಯು ಅತ್ರಿಋಷಿಯ ವಂಶದಲ್ಲಿ ಅತ್ರಿಯಿಂದ ಆರನೆಯ ತಲೆಯವನೆಂದು ತಿಳಿದುಬರುವುದು (ಮೈಸೂರು ಗವರ್ನಮೆಂಟು ಓರಿಯಂಟಲ್ ಲೈಬ್ರರಿಯಲ್ಲಿ ಪ್ರಿಂಟಾದ No. 25 ನೇ ಪ್ರವರ ಮತ್ತು ಗೋತ್ರ ಎಂಬ ಗ್ರಂಥದ ಪ್ರಕಾರ). ವಿಶ್ವಾಮಿತ್ರನು ಅತ್ರಿಯಿಂದ ಐದನೇ ತಲೆಯವನು. ಒಟ್ಟು ಎಂಟು ಋಕ್ಕುಗಳಲ್ಲಿ ಈ ಗೃತ್ಸಮದಋಷಿಯು ಸರಸ್ವತಿಯನ್ನು

ಸ್ತೋತ್ರಮಾಡಿದಾನೆ. ಋ. ಸಂ. ೨-೧-೧೧ ಮತ್ತು ೨-೩-೮ ನೆಯ ಋಕ್ಕುಗಳಲ್ಲಿ ಸರಸ್ವತಿಯನ್ನು ಇಡಾ ಮತ್ತು ಭಾರತಿಯರೊಡನೆ ಸ್ತುತಿಸಿದಾನೆ. ಋ. ಸಂ. ೨-೩೫-೫ ರಲ್ಲಿ ಈ ಮೂವರನ್ನು ಎಂದರೆ, ಇಡಾ, ಸರಸ್ವತೀ, ಭಾರತೀ ಎಂಬುವರನ್ನು ಮೂರು ಮಂದಿ ದೇವತೆಯರೆಂದು ಹೇಳಿದಾನೆ. ಋ. ಸಂ. ೨-೩೦-೮ ರಲ್ಲಿ ಸರಸ್ವತಿಯನ್ನು ಇಂದ್ರ ಮತ್ತು ಮರುತ್ತುಗಳೊಡನೆ ಸ್ತೋತ್ರಮಾಡಿದಾನೆ. ಋ. ಸಂ, ೨-೩೨-೮ ರಲ್ಲಿ ಸರಸ್ವತಿಯನ್ನು ಓರ್ವ ದೇವತೆಯನ್ನಾಗಿ ಹೇಳಿದಾನೆ. ಋ. ಸಂ. ೨-೪೧ ನೇಯ ಸೂಕ್ತದ ೧೬ ನೆಯ ಋಕ್ಕಿನಲ್ಲಿ ಸರಸ್ವತಿಯನ್ನು ಬಹುದೊಡ್ಡ ನದಿಯೆಂದೂ ಬಹುದೊಡ್ಡ ದೇವತೆಯೆಂದೂ ೧೮ನೆಯ ಋಕ್ಕಿನಲ್ಲಿ ಋತಾವರೀ ಎಂದರೆ (ಋತ–ನೀರು) ಹೆಚ್ಚಾದ ನೀರುಳ್ಳ ನದಿಯೆಂದೂ ವರ್ಣಿಸಿದಾನೆ. ಇದನ್ನು ನೋಡಿ ಪಾಶ್ಚಾತ್ಯಪಂಡಿತರಲ್ಲಿ ಕೆಲವರು ಬಹುದೊಡ್ಡ ನದಿಯೆಂದು ಹೇಳಿರುವುದರಿಂದ ಸಿಂಧುನದಿಯೇ ಇರಬೇಕೆಂದು ಹೇಳುತ್ತಾರೆ. ಆದರೆ ಅದು ಸರಿಯಲ್ಲ. ಏಕೆಂದರೆ ಕವಿಯು ಒಂದು ನದಿಯನ್ನಾಗಲಿ, ದೇವತೆಯನ್ನಾಗಲಿ ಸ್ತೋತ್ರಮಾಡುವಾಗ (ಅದು ಚಿಕ್ಕದು ಅಥವಾ ಸಾಧಾರಣವಾಗಿದ್ದರೂ) ಅದನ್ನು ಬಹುದೊಡ್ಡದೆಂದು ವರ್ಣಿಸುವುದು ಸಾಧಾರಣವಾಗಿದೆ. ಋ. ಸಂ. ೨-೩೦-೮ ನೆಯ ಋಕ್ಕಿನಲ್ಲಿ ಈ ಗೃತ್ಸಮದಋಷಿಯು ಸರಸ್ವತಿಯನ್ನು ಸಿಡಿಲು ಮತ್ತು ಮಿಂಚಿನ ಅಧಿದೇವತೆಯೆಂದು ಭಾವಿಸಿ ಸ್ತೋತ್ರಮಾಡಿರುವನೆಂದು ಕೆಲವರು ಅಭಿಪ್ರಾಯಪಡುವರು. ಆದರೆ ಒಬ್ಬ ಋಷಿಯು ಒಂದೇ ದೇವತೆಯನ್ನು ಬೇರೆ ಬೇರೆ ಅರ್ಥದಲ್ಲಿ ವರ್ಣಿಸಿರುವನೆಂದು ಹೇಳುವುದು ಸಕಾರಣವಾಗಿ ತೋರುವುದಿಲ್ಲ. ಋ. ಸಂ. ೩-೨೩ ನೆಯ ಸೂಕ್ತಕ್ಕೆ ಭರತಪುತ್ರರಾದ ದೇವಶ್ರವಾ ಮತ್ತು ದೇವವಾತರೆಂಬುವರು ಋಷಿಗಳು. ಹಿಂದೆ ಹೇಳಿದ ಗೋತ್ರಪ್ರವರವೆಂಬ ಗ್ರಂಥದ ಪ್ರಕಾರ ಈ ಋಷಿಗಳು ವಿಶ್ವಾಮಿತ್ರನ ಪುತ್ರರೆಂದು ತಿಳಿದುಬರುವುದು. ಭರತನು ಅತ್ರಿಯಿಂದ ಆರನೆಯ ತಲೆಯವನೆಂದೂ, ವಿಶ್ವಾಮಿತ್ರನು ಏಳನೆಯ ತಲೆಯವನೆಂದೂ, ಇವರಿಬ್ಬರೂ ಅತ್ರಿಯ ಮರಿಮಗನಾದ ಪುರೂರವನ ವಂಶಸ್ಥರೆಂದೂ ಅದೇಗ್ರಂಥದಿಂದ ತಿಳಿದುಬರುವುದು. ಇವರು ಋ. ಸಂ. ೩-೨೩-೪ ನೆಯ ಋಕ್ಕಿನಲ್ಲಿ—

ನಿ ತ್ವಾ ದಧೇ ವರ ಆ ಪೃಥಿವ್ಯಾ ಇಳಾಯಾಸ್ಪದೇ ಸುದಿನತ್ವೇ ಅಹ್ನಾಂ ।
ದೃಷದ್ವತ್ಯಾಂ ಮಾನುಷಾ ಆಪಯಾಯಾಂ ಸರಸ್ವತ್ಯಾಂ ರೇವದಗ್ನೇ ದಿದೀಹಿ ॥
(ಋ. ಸಂ. ೩-೨೩-೪)

ಸರಸ್ವತೀನದಿಯ ಜತೆಯಲ್ಲಿ **ದೃಷದ್ವತೀ** ಮತ್ತು **ಆಪಯಾ** ಎಂಬ ಬೇರೆ ಎರಡು ನದಿಗಳ ಹೆಸರನ್ನು ಹೇಳಿದಾರೆ. ದೃಷದ್ವತಿಯು ಈಗಿನ ಚಿತ್ರಾಂಗವೆಂಬ ನದಿಯು (the modern Chitrang, Chautag, or Chitang) **ಆಪಯಾ** ಎಂಬುವುದು ಈಗಿನ **ಅಪಗಾ** ಎಂಬ ನದಿಯು (the modern Apaga) ಈ ಎರಡು ನದಿಗಳೂ ಸರಸ್ವತಿಯ ನದಿಯ ಸಮೀಪದಲ್ಲಿಯೇ ಇರುವುದರಿಂದ ಸರಸ್ವತಿಯು ಸಿಂಧುನದಿಯಲ್ಲವೆಂದು ಧಾರಾಳವಾಗಿ ಹೇಳಬಹುದು ವಿಶ್ವಾಮಿತ್ರಋಷಿಯ ಆಶ್ರಮವೂ ಸಹ (ಕುರುಕ್ಷೇತ್ರದಲ್ಲಿರುವ) ಈ ಸರಸ್ವತೀನದಿಯ ಪಶ್ಚಿಮದಡದಲ್ಲಿಯೇ ಇತ್ತೆಂದು ಈಚಿನ ಪರಿಶೋಧನೆಗಳಿಂದ ವ್ಯಕ್ತವಾಗಿದೆ (see Dey's Geographical Dic.) ಇದುವರೆಗೆ ಹೇಳಿದ ವಿಷಯಗಳೆಲ್ಲವೂ ಅತ್ರಿ ಮತ್ತು ವಿಶ್ವಾಮಿತ್ರಋಷಿಗಳ ವಂಶಸ್ಥರ ಸಂಬಂಧವಾದವು.

ಈಗ ಭರದ್ವಾಜ ಮತ್ತು ಅವರ ವಂಶಸ್ಥರ ವಿಷಯವನ್ನು ವಿಮರ್ಶೆಮಾಡೋಣ. ಋ. ಸಂ.೬-೪೯-೭; ೬-೫೦-೧೨ ; ೬.೫೨-೬ ಈ ಮೂರು ಋಕ್ಕುಗಳಿಗೂ ಭರದ್ವಾಜಪುತ್ರನಾದ **ಋಜಿಶ್ವಾ** ಎಂಬುವನೇ ಋಷಿಯು. ಈ ಮೂರು ಋಕ್ಕುಗಳಲ್ಲಿ ಮೊದಲನೆಯ ಮತ್ತು ಮೂರನೆಯ ಋಕ್ಕುಗಳಲ್ಲಿ ಸರಸ್ವತಿಯು ಒಂದು ನದಿಯೆಂಬ

ವಿಚಾರವು ಸ್ಪಷ್ಟವಾಗಿ ಉಕ್ತವಾಗಿದೆ. ಎರಡನೆಯ ಮಂತ್ರದಲ್ಲಿ ರುದ್ರ, ವಿಷ್ಣು, ವಾಯು, ಪರ್ಜನ್ಯ ಎಂಬ ದೇವತೆಗಳ ಜತೆಯಲ್ಲಿ ಸರಸ್ವತಿಯ ಹೆಸರು ಸೂಚಿಸಲ್ಪಟ್ಟಿದ್ದರೂ ಸರಸ್ವತಿಯು ನದಿಯ ಹೆಸರೆಂದು ಭಾವಿಸಬಹು ದಾಗಿದೆ. ಏಕೆಂದರೆ ಆ ಋಷಿಯು ಎರಡು ಋಕ್ಕುಗಳಲ್ಲಿ ಸರಸ್ವತಿಯು ನದಿಯೆಂದು ಹೇಳಿರುವುದರಿಂದ ಮತ್ತೊಂದು ಋಕ್ಕಿನಲ್ಲಿ ಅದೇ ಋಷಿಯು ಸರಸ್ವತಿಯನ್ನು ನದಿಯೆಂದೇ ಭಾವಿಸಿ ಸ್ತೋತ್ರಮಾಡಿರುವುದು ಸಹಜ ವಾಗಿದೆ ಭರದ್ವಾಜರ ಆಶ್ರಮವು ಪ್ರಯಾಗದಲ್ಲಿ (Allahabad) ಇದ್ದಿತು. ಆದುದರಿಂದ ಭರದ್ವಾಜಪುತ್ರ ನಾದ ಋಜಿಶ್ವಾ ಎಂಬುವನು ತನ್ನ ಆಶ್ರಮಕ್ಕೆ ಸಮೀಪದಲ್ಲಿರುವ ಒಂದು ನದಿಯನ್ನೇ ಸ್ತೋತ್ರಮಾಡಿರಬೇಕು. ಭರದ್ವಾಜಋಷಿಯ ಋ. ಸಂ. ೬-೬೧ ನೆಯ ಸೂಕ್ತವೆಲ್ಲಾ (ಒಟ್ಟು ೧೪ ಋಕ್ಕುಗಳು) ಸರಸ್ವತೀವಿಷಯವಾಗಿಯೇ ಇದೆ. ಈ ಸೂಕ್ತದಲ್ಲಿರುವ ಹಲವು ಶಬ್ದಗಳ ಅರ್ಥವು ಸಿಂಧೂನದಿಗೆ ಅನ್ವಯಿಸುವುದೆಂದು ಕೆಲವು ಪಾಶ್ಚಾತ್ಯ ಪಂಡಿತರ ಅಭಿಪ್ರಾಯವು. ಆದರೆ ಆ ಶಬ್ದಗಳು ಸರಸ್ವತೀನದಿಗೂ ಸಹ ಅನ್ವಯಿಸುವುದರಿಂದ ಸಂಶಯಕ್ಕೆ ಅವಕಾಶವಿಲ್ಲ.

ಏಳನೆಯ ಮಂಡಲದಲ್ಲಿರುವ ಋ. ಸಂ. ೭-೯-೫, ೭-೩೫-೧೧; ೭-೩೬-೬, ೭-೪೦-೩; ೭-೯೫; ೭-೯೬ ಈ ಋಕ್ಕುಗಳಿಗೆಲ್ಲಾ ವಸಿಷ್ಠನೇ ಋಷಿಯು. ವಸಿಷ್ಠಋಷಿಯ ಆಶ್ರಮವು ರಾಜಪುಟಾನಾದಲ್ಲಿರುವ ಆರಾವಳೀಪರ್ವತದ ಅಬು ಎಂಬ ಬೆಟ್ಟದ (Mount Abu) ಸಮೀಪದಲ್ಲಿತ್ತೆಂದು ತಿಳಿದುಬರುವುದು. ಮೊದಲ ನೆಯ ನಾಲ್ಕುಮಂತ್ರಗಳೂ ಕಡೆಯ ಎರಡು ಸೂಕ್ತಗಳೂ ಸರಸ್ವತಿಯನ್ನು ನದಿಯೆಂದೇ ಹೇಳಿ ಸ್ತುತಿಸಿರುವವು. ಈ ಋಕ್ಕುಗಳಲ್ಲಿರುವ ಸಿಂಧುಮಾತಾ ಮತ್ತು ಆಸಮುದ್ರಾತ್ ಎಂಬ ಶಬ್ದಗಳು ಸಿಂಧುನದಿಗೇ ವಿಶೇಷವಾಗಿ ಅನ್ವಯಿಸುವುದರಿಂದ ಸಿಂಧುನದಿಯೇ ಈ ಮಂತ್ರಗಳಲ್ಲಿ ಸ್ತುತಿಸಲ್ಪಟ್ಟಿರುವುದೆಂದು ಕೆಲವರು ಹೇಳುವರು. ಈ ವಿವಾದವನ್ನು ಸಂಪೂರ್ಣವಾಗಿ ತಳ್ಳಿಹಾಕುವುದಕ್ಕಾಗುವುದಿಲ್ಲ. ಆದರೂ ಒಂದು ನದಿಯ ವಿಷಯವನ್ನು ಹೇಳು ವಾಗ ಮತ್ತೊಂದು ನದಿಯನ್ನು ಅದಕ್ಕೆ ಹೋಲಿಸುವುದೂ, ಉತ್ಪ್ರೇಕ್ಷೆಯಿಂದ ಕೂಡಿದ ಪ್ರಶಂಸೆಯನ್ನು ಮಾಡು ವುದೂ ಅಸಂಭವವಲ್ಲ.

ಎಂಟನೆಯ ಮಂಡಲದಲ್ಲಿರುವ ಋ. ಸಂ. ೮-೨೧-೧೭ ಮತ್ತು ೧೮ ಋಕ್ಕುಗಳಿಗೆ ಕಣ್ವಋಷಿಯ ಪುತ್ರನಾದ ಶೋಭರಿ ಎಂಬುವನು ಋಷಿಯು. ಈ ಋಷಿಯು, ಮೇಲೆ ಹೇಳಿದ ಋಕ್ಕುಗಳಲ್ಲಿ ಚಿತ್ರನೆಂಬ ರಾಜನು ಸರಸ್ವತೀನದಿಯ ತೀರದಲ್ಲಿ ಮಾಡಿದ ಯಜ್ಞವನ್ನೂ ಆ ರಾಜನ ದಾನಪ್ರಶಂಸೆಯನ್ನೂ ವರ್ಣಿಸಿರು ವನು. ಶೌನಕರ ಬೃಹದ್ದೇವತಾಗ್ರಂಥದಲ್ಲಿ (೬-೫೮ ರಿಂದ ೬೨) ಈ ಚಿತ್ರರಾಜನು ಕುರುಕ್ಷೇತ್ರದಲ್ಲಿ ಯಜ್ಞ ಮಾಡಿದನೆಂದು ಹೇಳಿರುವುದರಿಂದ ಸರಸ್ವತಿಯು ಸಮೀಪದಲ್ಲಿರುವ ನದಿಯೇ ಆಗಿರಬೇಕು ಮತ್ತು,

**ಪೂಷಾ ವಿಷ್ಣುರ್ಹವನಂ ಮೇ ಸರಸ್ವತ್ಯವಂತು ಸಪ್ತ ಸಿಂಧವಃ ।**
**ಅಪೋ ವಾತಃ ಪರ್ವತಾಸೋ ವನಸ್ಪತಿಃ ಶೃಣೋತು ಪೃಥಿವೀ ಹವಂ ॥** (ಋ. ಸಂ. ೮-೫೪-೪)

ಈ ಋಕ್ಕಿನಲ್ಲಿ ಪೂಷಾ, ವಿಷ್ಣು, ಸರಸ್ವತೀ, ಸಪ್ತಸಿಂಧವಃ (ಏಳು ನದಿಗಳು) ಆಪಃ, ವಾತಃ, ಪರ್ವತಾಸಃ, ವನಸ್ಪತಿಃ ಪೃಥಿವೀ ಈ ದೇವತೆಗಳ ಮಧ್ಯದಲ್ಲಿ ಸರಸ್ವತಿಯೂ ಸೂಚಿಸಲ್ಪಟ್ಟಿರುವುದು. ಅದರಂತೆಯೇ ಋ. ಸಂ. ೯-೬೭-೩೨ ರಲ್ಲಿ ಆ ಮಂತ್ರದ ಋಷಿಯಾದ ವಸಿಷ್ಠ ಅಥವಾ ಪವಿತ್ರ ಎಂಬುವರು ಸರಸ್ವತೀ ಶಬ್ದವನ್ನು ಉಪ ಯೋಗಿಸಿರುವರು. ಇಲ್ಲಿ ಸರಸ್ವತಿಯು ಒಂದು ದೇವತೆ ಅಥವಾ ನದಿ ಎಂಬ ಎರಡು ಅರ್ಥಗಳಲ್ಲಿ ಯಾವುದಾ ದರೂ ಆಗಬಹುದು. ಋ. ಸಂ. ೧೦-೩೦-೧೨ ರಲ್ಲಿ ಸರಸ್ವತಿಯೆಂದರೆ ಯಾವ ನದಿಯೆಂದು ನಿರ್ದಿಷ್ಟವಾಗಿ

ಹೇಳಿಲ್ಲ. ಋ. ಸಂ. ೧೦-೬೪-೯ ರಲ್ಲಿ ಈ ಮಂತ್ರದ ಋಷಿಯಾದ ಗಯನೆಂಬುವನು (ಅತ್ರಿಋಷಿಯ ವಂಶಸ್ಥ) ಸಿಂಧೂ ಮತ್ತು ಸರಯೂ (Gogra) ನದಿಗಳ ಜತೆಯಲ್ಲಿಯೇ ಸರಸ್ವತಿಯನ್ನು ಹೇಳಿರುವನು. ಮತ್ತು

ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿ ಸ್ತೋಮಂ ಸಚತಾ ಪರುಷ್ಣ್ಯಾ ।
ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾರ್ಜೀಕೀಯೇ ಶೃಣುಹ್ಯಾ ಸುಷೋಮಯಾ ॥
(ಋ. ಸಂ. ೧೦-೭೫-೫)

ಎಂಬ ಋಕ್ಕಿನಲ್ಲಿ ಸರಸ್ವತೀನದಿಯು, ಗಂಗಾ (the Ganges) ಯಮುನಾ (the Jamna) ಶುತುದ್ರಿ (the Sutlej) ಪರುಷ್ಣಿ (the Ravi) ಅಸಿಕ್ನಿ (the Chinab) ವಿತಸ್ತಾ (the Jhelam) ಮರುದ್ವೃಧಾ (the United Stream of the Jhelam and Chenab) ಆರ್ಜೀಕೀಯಾ (the Bias) ಮತ್ತು ಸುಷೋಮಾ (the Indus) ಎಂಬ ನದಿಗಳ ಜತೆಯಲ್ಲಿ ಹೇಳಲ್ಪಟ್ಟಿರುವುದರಿಂದ ಸರಸ್ವತೀನದಿಯೇ ಒಂದು ಪ್ರತ್ಯೇಕವಾದ ನದಿಯೆಂದೂ ಸಿಂಧುನದಿಯಲ್ಲವೆಂದೂ ಸ್ಪಷ್ಟವಾಗುವುದು. ಮೇಲಿನ ಋಕ್ಕಿರುವ ಸೂಕ್ತವೆಲ್ಲಾ ನದಿಗಳ ಪರವಾಗಿಯೇ ಇದೆ. ಎಂದರೆ ಈ ಸೂಕ್ತದಲ್ಲಿರುವ ೯ ಋಕ್ಕುಗಳಿಗೂ ನದಿಗಳೇ ದೇವತೆಗಳು. ಈ ಸೂಕ್ತಕ್ಕೆ ಪ್ರಿಯಮೇಧಋಷಿಯ ಪುತ್ರನಾದ ಸಿಂಧುಕ್ಷಿತ್ ಎಂಬುವನು ಋಷಿಯು.

ಸರಸ್ವತಿಯು ತಿಸ್ರೋ ದೇವ್ಯಃ ಎಂದು ಹೇಳಲ್ಪಡುವ ಮೂರು ಮಂದಿ ದೇವತೆಯರಲ್ಲಿ ಒಬ್ಬಳೆಂದು ಆಪ್ರೀಸೂಕ್ತಗಳಲ್ಲಿ ಹೇಳಲ್ಪಟ್ಟಿದೆ. ಋಗ್ವೇದಸಂಹಿತೆಯಲ್ಲಿ ಆಪ್ರೀಸೂಕ್ತಗಳೆಂದು ಹೇಳಲ್ಪಡುವ ೧೦ ಸೂಕ್ತಗಳಿವೆ. ಶೌನಕರ ಅನುವಾಕಾನುಕ್ರಮಣಿಯಲ್ಲಿ ಈ ಸೂಕ್ತಗಳ ವಿವರವು ಈರೀತಿ ಇದೆ—

ಶ್ಲೋಕಸ್ಯಾಸ್ಯ ಯಥಾಸಂಖ್ಯಂ ಸೂಕ್ತಾನಿ ದಶ ವೈ ವಿದುಃ ।
ನ ಆ ವಹಾಗ್ನ ಆ ವಹಾದ್ಯ ರಾಜಸೀತ್ಯಗ್ನಿರ್ನಿ ಚ ।
ಸಮಿತ್ಸಮಿತ್ಸು ಶೋಚಿಷೇ ಜುಷಸ್ವ ವಿಶ್ವತಸ್ತಥಾ ।
ಇಮಾಂ ಮೇ ಅದ್ಯ ಮನ್ವಿಮಾ ಯಥರ್ಷಿಪಕ್ಷ ಆಪ್ರಿಯಃ ॥
ವಸಿಷ್ಠಶುನಕೌ ವಿನಾ ಸಮಿದ್ಧಸರ್ವಪಕ್ಷತಾ ।
ಜುಷಸ್ವಾದಿದ್ವಿತೀಯಯಾ ತನೂನಪಾದ್ವಿರೋಧಿತಾ ।
ಯಜುಃ ಶ್ರುತೌ ತಥಾಶ್ರುತೇಃ ಸಮಿದ್ಧಸೂಕ್ತಮಧ್ಯತಃ ।
ಪ್ರಜಾಪತೇಃ ಪಶೋಃ ಸದಾ ಭವೇಯುರದ್ಯ ಮನ್ವಿಮಾಃ ।
ಇತೀರಿತಂ ಹಿ ಬಹ್ವೃಚೈರ್ಯಥರ್ಷಿ ವೇತಿ ಸೂತ್ರತಃ ॥

| ಸಂಖ್ಯೆ. | ಸೂಕ್ತದ ಪ್ರಾರಂಭ. | ಮಂಡಲ ಮತ್ತು ಸೂಕ್ತ. | ಋಕ್ಸಂಖ್ಯೆ. | ಸೂಕ್ತದ ಋಷಿ. |
|---|---|---|---|---|
| 1 | ಸುಸಮಿದ್ಧೋನ ಆವಹ | ೧— ೧೩ | ೧೨ | ಮೇಧಾತಿಥಿಃ ಕಾಣ್ವಃ |
| 2 | ಸಮಿದ್ಧೋ ಅಗ್ನ ಆವಹ | ೧—೧೪೨ | ೧೩ | ದೀರ್ಘತಮಾ ಔಚಥ್ಯಃ |
| 3 | ಸಮಿದ್ಧೋ ಅದ್ಯ ರಾಜಸಿ | ೧—೧೮೮ | ೧೧ | ಅಗಸ್ತ್ಯೋ ಮೈತ್ರಾವರುಣಿಃ |
| 4 | ಸಮಿದ್ಧೋ ಅಗ್ನಿರ್ನಿಹಿತಃ | ೨—೩ | ೧೧ | ಗೃತ್ಸಮದಃ |

| | | | | |
|---|---|---|---|---|
| 5 | ಸಮಿತ್ಸಮಿತ್ಸುಮನಾ | ೩—೪ | ೧೧ | ಗಾಥಿನೋ ವಿಶ್ವಾಮಿತ್ರಃ |
| 6 | ಸುಸಮಿದ್ಧಾಯ ಶೋಚಿಷೇ | ೫—೫ | ೧೧ | ವಸುಶ್ರುತ ಆತ್ರೇಯಃ |
| 7 | ಜುಷಸ್ವನಃ ಸಮಿಧಮಗ್ನೇ | ೭—೨ | ೧೧ | ಮೈತ್ರಾವರುಣಿರ್ವಸಿಷ್ಠಃ |
| 8 | ಸಮಿದ್ಧೋ ವಿಶ್ವತಸ್ಪತಿಃ | ೯—೫ | ೧೧ | ಕಾಶ್ಯಪೋಽಸಿತೋ ದೇವಲೋ ವಾ |
| 9 | ಇಮಾಂ ಮೇ ಅಗ್ನೇಸಮಿಧಂ | ೧೦—೭೦ | ೧೧ | ಸುಮಿತ್ರೋ ವಾಧ್ರ್ಯಶ್ವಃ |
| 10 | ಸಮಿದ್ಧೋ ಅದ್ಯಮನುಷೋ | ೧೦—೧೧೦ | ೧೧ | ಜಮದಗ್ನಿರ್ಭಾರ್ಗವಃ |

ಮೇಲೆ ಹೇಳಿದ ಸೂಕ್ತಗಳಲ್ಲಿ ೧—೨ ನೆಯ ಸೂಕ್ತಗಳಲ್ಲಿ ೧೨ ಮತ್ತು ೧೩ ಋಕ್ಕುಗಳಿವೆ. ಮಿಕ್ಕ ಸೂಕ್ತಗಳಲ್ಲೆಲ್ಲಾ ೧೧ ಋಕ್ಕುಗಳಿವೆ. ಈ ೧೧ ಋಕ್ಕುಗಳಿಗೆ ದೇವತೆಗಳು ಈರೀತಿ ಇರುವರು.

| | | |
|---|---|---|
| ೧ ನೆಯ | ಋಕ್ಕು— | ಇಧ್ಮಃ ಸಮಿದ್ಧೋಽಗ್ನಿರ್ವಾ |
| ೨ | ,, | ತನೂನಪಾತ್ |
| ೩ | ,, | ಇಳಃ |
| ೪ | ,, | ಬರ್ಹಿಃ |
| ೫ | ,, | ದೇವೀರ್ದ್ವಾರಃ |
| ೬ | ,, | ಉಷಾಸಾನಕ್ತಾ |
| ೭ | ,, | ದೇವ್ಯಾ ಹೋತಾರಾ ಪ್ರಚೇತಸಾ |
| ೮ | ,, | ತಿಸ್ರೋ ದೇವ್ಯಃ ಸರಸ್ವತೀಳಾಭಾರತ್ಯಃ |
| ೯ | ,, | ತ್ವಷ್ಟಾ |
| ೧೦ | ,, | ವನಸ್ಪತಿಃ |
| ೧೧ | ,, | ಸ್ವಾಹಾಕೃತಯಃ |

೧೨ ಋಕ್ಕುಗಳಲ್ಲಿರುವ ಮೊದಲನೆಯ ಸೂಕ್ತದಲ್ಲಿ ನರಾಶಂಸಃ ಎಂಬ ದೇವತೆಯೂ ೧೩ ಋಕ್ಕುಗಳಿರುವ ಎರಡನೆಯ ಸೂಕ್ತದಲ್ಲಿ ನರಾಶಂಸಃ ಮತ್ತು ಇಂದ್ರಃ ಎಂಬ ದೇವತೆಗಳೂ ಇರುವುದರಿಂದ ಇತರ ಸೂಕ್ತಗಳಲ್ಲಿರುವಂತೆ ೧೧ ಋಕ್ಕುಗಳಿಗೆ ಬದಲಾಗಿ ೧೨ ಮತ್ತು ೧೩ ಋಕ್ಕುಗಳಿವೆ. ಮಿಕ್ಕ ವಿಷಯಗಳಲ್ಲಿ ಏನೂ ವ್ಯತ್ಯಾಸವಿಲ್ಲ. ಛಂದಸ್ಸು ಮತ್ತು ಋಷಿಗಳು ಮಾತ್ರ ಬೇರೆ ಬೇರೆ. ಪಶುಯಾಗದಲ್ಲಿ ಅಗ್ನಿಯನ್ನು (ಸಮಿದ್ಧೋಽಗ್ನಿ) ಸ್ತುತಿಸುವಾಗ ಮತ್ತು ಏಕಾದಶ ಪ್ರಯಾಜಹೋಮಗಳನ್ನು ಮಾಡುವಾಗ ಈ ಸೂಕ್ತಗಳನ್ನು ಪಠಿಸುವರು. ಈ ಸೂಕ್ತಗಳಲ್ಲಿ ತಿಸ್ರೋ ದೇವ್ಯಃ ಎಂದರೆ ಇಳಾ ಸರಸ್ವತೀ ಭಾರತೀ ಎಂಬ ಮೂರು ದೇವತೆಗಳ ಸ್ತೋತ್ರವಿದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯವೇನೆಂದರೆ—ಅಗ್ನಿಯು ಭೂಮಿ, ಅಂತರಿಕ್ಷ, ಸ್ವರ್ಗಗಳಲ್ಲಿ ಮೂರು ರೂಪಗಳಿಂದ ಆರಾಧಿಸಲ್ಪಡುವನು. ಭಾರತಿಯು ಸೂರ್ಯನ ಕಿರಣಗಳನ್ನು ಸೂಚಿಸುವುದರಿಂದ ಈ ದೇವತೆಯು (ಎಂದರೆ ಸೂರ್ಯನು) ಸ್ವರ್ಗ (ದಿವ) ದಲ್ಲಿರುವ ಅಗ್ನಿಯ ರೂಪವು. ಸರಸ್ವತಿಯು ಸಿಡಿಲುಮಿಂಚುಗಳಿಗೆ ಅಭಿ

ಮಾನಿದೇವತೆಯನ್ನಾಗಿ ಅನೇಕ ಕಡೆ ವರ್ಣಿಸಿರುವುದರಿಂದ ಈ ಸರಸ್ವತಿಯು ಅಂತರಿಕ್ಷದಲ್ಲಿರುವ ಅಗ್ನಿಯ ರೂಪವು. ಇಳಾದೇವಿಯು ಭೂಮಿಯ ಮೇಲಿರುವ ಪ್ರಜೆಗಳಿಗೆ (ಜನಗಳಿಗೆ)ಧನಾದಿಗಳನ್ನು ದೀರ್ಘಾಯುವನ್ನೂ ಕೊಡುವವಳಾದುದರಿಂದ ಈ ದೇವತೆಯು ಭೂಮಿಯಲ್ಲಿರುವ ಅಗ್ನಿಯ ರೂಪವು ಎಂದು ಈ ಇಳಾ ಸರಸ್ವತೀ ಭಾರತಿಯರ ಸಂಕೇತವು. ಈ ಮೂವರು ದೇವತೆಗಳೂ ಯಜ್ಞವೇದಿಕೆಗೆ ಬಂದು ಬರ್ಹಿಸ್ತರಣದ (ಹರಡಿರುವ ದರ್ಭೆಗಳ) ಮೇಲೆ ಬಂದು ಕುಳಿತುಕೊಳ್ಳಬೇಕೆಂದು ಋಷಿಗಳು ಸ್ತೋತ್ರಮಾಡಿದಾರೆ.

ಸರಸ್ವತಿಯು ನದಿಯಲ್ಲದೆ ಬೇರೆ ದೇವತೆಯೆಂದು ಭಾವಿಸಿ ಋಷಿಗಳು ಸ್ತೋತ್ರಮಾಡಿರುವ ಕೆಲವು ಉದಾಹರಣೆಗಳನ್ನು ಕೊಡುತ್ತೇವೆ.

(1) ತಾನ್ಪೂರ್ವಯಾ ನಿವಿದಾ ಹೂಮಹೇ ವಯಂ ಭಗಂ ಮಿತ್ರಮದಿತಿಂ ದಕ್ಷಮಸ್ರಿಧಂ ।
ಅರ್ಯಮಣಂ ವರುಣಂ ಸೋಮಮಶ್ವಿನಾ ಸರಸ್ವತೀ ನಃ ಸುಭಗಾ ಮಯಸ್ಕರತ್ ।
(ಋ. ಸಂ. ೧-೮೯-೩)

ಈ ಋಕ್ಕಿನಲ್ಲಿ ಸರಸ್ವತಿಯು ವಾಗ್ದೇವತೆ ಅಥವಾ ಶಿಡಿಲುಮಿಂಚುಗಳ ಅಭಿಮಾನಿದೇವತೆ.

(2) ಸರಸ್ವತಿ ತ್ವಮಸ್ಮಾಂ ಅವಿಡ್ಢಿ ಮರುತ್ವತೀ ಧೃಷತೀ ಜೇಷಿ ಶತ್ರೂನ್ ।
(ಋ. ಸಂ. ೨-೩೦-೮)

(3) ಸರಸ್ವತೀ ಶೃಣವನ್ ಯಜ್ಞಿಯಾಸೋ ಧಾತಾ ರಯಿಂ ಸಹವೀರಂ ತುರಾಸಃ ।
(ಋ. ಸಂ- ೩-೫೪-೧೩)

ಈ ಋಕ್ಕುಗಳಲ್ಲಿ ಸರಸ್ವತಿಯು ನದೀ ಎಂದಾಗಲೀ ಶಿಡಿಲುಮಿಂಚುಗಳ ಅಭಿಮಾನಿದೇವತೆಯೆಂದಾಗಲಿ ಭಾವಿಸಲ್ಪಟ್ಟಿರುವುದು.

(4) ದಮೂನಸೋ ಅಪಸೋ ಯೇ ಸುಹಸ್ತಾ ವೃಷ್ಣಃ ಪತ್ನೀರ್ನದ್ಯೋ ವಿಭ್ವತಷ್ಟಾಃ ।
ಸರಸ್ವತೀ ಬೃಹದ್ದಿವೋತ ರಾಕಾ ದಶಸ್ಯಂತೀರ್ವರಿವಸ್ಯಂತು ಶುಭ್ರಾಃ ।
(ಋ. ಸಂ. ೫-೪೨-೧೨)

(5) ಆ ನೋ ದಿವೋ ಬೃಹತಃ ಪರ್ವತಾದಾ ಸರಸ್ವತೀ ಯಜತಾ ಗಂತು ಯಜ್ಞಂ ।
(ಋ. ಸಂ. ೫-೪೩-೧೧)

(6) ಉಭಾ ನಾಸತ್ಯಾ ರುದ್ರೋ ಅಧ ಗ್ನಾಃ ಪೂಷಾ ಭಗಃ ಸರಸ್ವತೀ ಜುಷಂತ ।
(ಋ. ಸಂ. ೫-೪೬-೨)

ಈ ಮೂರು ಋಕ್ಕುಗಳಲ್ಲಿಯೂ ಸರಸ್ವತಿಯು ಶಿಡಿಲುಮಿಂಚುಗಳ ಅಭಿಮಾನಿದೇತೆಯು. Griffith ಎಂಬುವರು ಈ ಮೂರು ಋಕ್ಕುಗಳಲ್ಲಿ ಮೊದಲನೆಯದರಲ್ಲಿ ಸರಸ್ವತಿಯನ್ನು ಸಿಂಧು ಅಥವಾ ಸರಸ್ವತಿ ಎಂಬ ಯಾವುದಾದರೂ ಒಂದು ನದಿಯೆಂತಲೂ, ೨-೩ ನೆಯ ಋಕ್ಕುಗಳಲ್ಲಿ ದೇವತೆಯೆಂತಲೂ ವ್ಯಕ್ತವಾಗುವುದೆಂದು ಅಭಿಪ್ರಾಯ ಪಡುವರು. K. C. ಚಟ್ಟೋಪಾಧ್ಯಾಯ ಎಂಬುವರು ೧-೨ ನೆಯ ಋಕ್ಕುಗಳು ಸಿಂಧುನದಿಗೆ ಅನ್ವಯಿಸುವುದೆಂದು ಹೇಳುವರು. ಈ ಮೂರು ಋಕ್ಕುಗಳೂ ಅತ್ರಿಋಷಿಯ ವಂಶಸ್ಥರಿಂದಲೇ ಉಕ್ತವಾಗಿದೆ. ಮೊದಲನೆಯ

ಋಕ್ಕಿಗೆ ಅತ್ರಿ ಅಥವಾ ಅತ್ರಿಯ ಪುತ್ರನಾದ ಭೌಮನೆಂಬುವನೂ, ಎರಡನೆಯ ಋಕ್ಕಿಗೆ ಅತ್ರಿಯೂ. ಮೂರನೆಯ ಋಕ್ಕಿಗೆ ಅತ್ರಿಯ ವಂಶಸ್ಥನಾದ ಪ್ರತಿಕ್ಷತ್ರನೆಂಬುವನೂ ಋಷಿಗಳು. ಎರಡನೆಯ ಋಕ್ಕಿನಲ್ಲಿ ಸರಸ್ವತಿಯನ್ನು ಸ್ವರ್ಗದಿಂದಲೂ (ದಿವಃ) ಮೇಘಮಂಡಲದಿಂದಲೂ (ಪರ್ವತಾದಾ) ಆಹ್ವಾನೆ ಮಾಡಲಾಗಿದೆ. ಮೊದಲನೆಯ ಋಕ್ಕಿನಲ್ಲಿ ಪತ್ನೀಃ ಎಂಬ ಶಬ್ದವಿರುವುದರಿಂದ ಸರಸ್ವತಿಯನ್ನೂ, ಇತರ ನದಿಗಳನ್ನೂ ಇಂದ್ರನ ಪತ್ನಿಯರನ್ನಾಗಿ ಭಾಷ್ಯಕಾರರು ಭಾವಿಸಿರುವರು.

(7) ಅಗ್ನಿರಿಂದ್ರೋ ವರುಣೋ ಮಿತ್ರೋ ಅರ್ಯಮಾ ವಾಯುಃ ಪೂಷಾ ಸರಸ್ವತೀ
ಸಜೋಷಸಃ । (ಋ. ಸಂ. ೧೦-೬೫-೧)

(8) ವಿಶ್ವೇ ದೇವಾಸಃ ಶೃಣವನ್ ವಚಾಂಸಿ ಮೇ ಸರಸ್ವತೀ ಸಹ ಧೀಭಿಃ ಪುರಂಧ್ಯಾ ।
(ಋ. ಸಂ. ೧೦-೬೫-೧೩)

ಈ ಎರಡು ಋಕ್ಕುಗಳಲ್ಲಿಯೂ ಸರಸ್ವತಿಯು ವಾಗ್ದೇವತೆಯು.

(9) ಯತ್ಸುರಾಮಂ ವ್ಯಪಿಬಃ ಶಚೀಭಿಃ ಸರಸ್ವತೀ ತ್ವಾ ಮಘವನ್ನಭಿಷ್ಣಕ್ ।
(ಋ. ಸಂ. ೧೦-೧೩೧-೫)

ಈ ಋಕ್ಕಿನಲ್ಲಿ ಸರಸ್ವತಿಯು ಇಂದ್ರನೊಡನೆ ಇರುವಂತೆ ಹೇಳಿರುವುದರಿಂದ ಸರಸ್ವತಿಯು ಸಿಡಿಲುಮಿಂಚುಗಳ ಅಭಿಮಾನಿದೇವತೆಯೆಂದಾಗಲಿ, ವಾಗ್ದೇವತೆಯೆಂದಾಗಲಿ ಭಾವಿಸಬಹುದು.

(10) ಗರ್ಭಂ ಧೇಹಿ ಸಿನೀವಾಲಿ ಗರ್ಭಂ ಧೇಹಿ ಸರಸ್ವತಿ । (ಋ. ಸಂ. ೧೦-೧೮೪-೨)
ಇಲ್ಲಿ ಸರಸ್ವತಿಯನ್ನು ವಾಗ್ದೇವತೆಯೆಂದೇ ಹೇಳುವುದು ಸಮಂಜಸವಾಗಿರುವುದು.

ಸರಸ್ವತೀನದಿಯು ಆ ಕಾಲದಲ್ಲಿ ಎಲ್ಲೆಲ್ಲಿ ಹರಿಯುತ್ತಿತ್ತೆಂಬ ವಿಚಾರದಲ್ಲಿ ತಿಳಿದಮಟ್ಟಿಗೆ ಸೂಕ್ಷ್ಮವಾಗಿ ವಿವರಿಸುವೆವು. ಈ ವಿವರಣೆಯು (1)R.D.Oldham in Journal of Asiatic Society Bengal 1886 page 322 (2) C.F. Oldham, Journal of Royal Asiatic Society 1893, page 51 (3) Maps of the Cambridge History of India Vol. I Ancient India (4) Maps of Punjab published by the Surveyor-General of India (5) Ancient India as described by Magastheneses and Arrian ಎಂಬ ಭಾಷಣಗಳನ್ನನುಸರಿಸಿ ಬರೆಯಲ್ಪಟ್ಟಿರುವುದು. ಸರಸ್ವತೀನದಿಯು ಆ ಕಾಲದಲ್ಲಿ ಒಂದು ದೊಡ್ಡನದಿಯಾಗಿದ್ದಿತು. ಹಿಮಾಲಯಪರ್ವತದಲ್ಲಿರುವ ಸಿರ್ಮೂರ್ (Sismur) ಪರ್ವತಶ್ರೇಣಿಯಲ್ಲಿ ಉದ್ಭವಿಸಿ ಅಲ್ಲಿಂದ ಪಶ್ಚಿಮಕ್ಕೂ ಸ್ವಲ್ಪದಕ್ಷಿಣಕ್ಕೂ ಹರಿಯುವುದು. ಇದರ ಉದ್ಭವಸ್ಥಾನದಲ್ಲಿ ಐದು ಸಣ್ಣ ಸಣ್ಣ ತೊರೆಗಳು (ನೀರು ಹರಿಯುವ ಸಣ್ಣ ಹಳ್ಳಗಳು) ಸೇರಿ ಈ ನದಿಯಾಗಿ ಮುಂದಕ್ಕೆ ಹರಿದಿರಬಹುದು. ಆದುದರಿಂದ ಇದಕ್ಕೆ ಪಂಚಜಾತಾ ಎಂಬ ಹೆಸರು ಬಂದಿರಬೇಕು. ಸ್ವಲ್ಪದೂರ ಹರಿದ ಮೇಲೆ ದೃಷದ್ವತೀ ಎಂಬ ನದಿಯು (the modern Chitrang) ಪೂರ್ವದಿಕ್ಕಿನಿಂದ ಹರಿದು ಬಂದು ಇದಕ್ಕೆ ಸೇರುವುದು. ಆಪಯಾ ಎಂಬುದು ದೃಷದ್ವತಿಗೆ ಉಪನದಿಯು. ಆಕಾಲದ ಸರಸ್ವತಿಯು ಈಗಿನ ಸರಸುತಿನದಿಯ ದಕ್ಷಿಣಕ್ಕಿತ್ತು. (ಮರಳುಭೂಮಿಗಳಲ್ಲಿ ಹರಿಯುವ ನದಿಗಳು ತಮ್ಮ ಪಾತ್ರಗಳನ್ನು ಅನೇಕವೇಳೆ ಬದಲಾಯಿಸುವುವು.) ಈಗಿನ ಸರಸುತಿನದಿಗೆ ಮಾರ್ಕಂಡಾ (Markand) ಮತ್ತು ಗಗ್ಗರ್ (Ghaggar) ಎಂಬ ಸಣ್ಣ

ನದಿಗಳು ಸೇರುವುವು. ಬಳಿಕ ಸರಸ್ವತಿಯು ದಕ್ಷಿಣ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಪ್ರವಹಿಸಿ ಕಡೆಗೆ ಸಮುದ್ರವನ್ನು ಸೇರುವುದು. ಈಗಿನ ಹಾಕ್ರ (Hakra) ಎಂಬ ಒಣಗಿಹೋಗಿರುವ ನದಿಯ ಪಾತ್ರವೇ ಆಗಿನ ಸರಸ್ವತೀ ನದಿಯ ಪಾತ್ರವಾಗಿರಬೇಕು ಅದು ಈಗಿನ (Sutlej) ಎಂಬ ನದಿಯೊಡನೆ ಸಂಗಮವಾಗಿ ಸಿಂಧೂನದಿಯಲ್ಲಿ ಐಕ್ಯವಾಗಿರಬಹುದು. ಅಥವಾ ನೇರವಾಗಿ ಸಿಂಧೂನದಿಗೇ ಹೋಗಿ ಸೇರಿರಬಹುದು. ಆ ಕಾಲದಲ್ಲಿ ಸಿಂಧೂನದಿಯು ಈಗಿರುವುದಕ್ಕಿಂತ ಬಹುದೂರ ಪೂರ್ವದಿಕ್ಕಿನಲ್ಲಿತ್ತು ಮತ್ತು (Rann of Kach) ಎಂಬ ಕೊಲ್ಲಿಯ ಸಮೀಪದಲ್ಲಿ ಸಮುದ್ರವನ್ನು ಸೇರುತ್ತಿತ್ತು. ಮ್ಯಾಕ್ಸ್ ಮುಲ್ಲರ್ (Max Muller) ಪಂಡಿತನು ಋ. ಸಂ. ೭-೯೫-೨ ನೆಯ ಋಕ್ಕಿನಲ್ಲಿ ಹೇಳಿರುವ **ಆಸಮುದ್ರಾತ್** ಎಂಬ ಶಬ್ದದ ಆಧಾರದಮೇಲೆ ಈ ಸರಸ್ವತೀನದಿಯು ನೇರವಾಗಿ ಸಮುದ್ರಕ್ಕೆ ಹೋಗಿ ಸೇರುತ್ತಿತ್ತೆಂದು ಅಭಿಪ್ರಾಯಪಡುತ್ತಾನೆ. ಈ ನದಿಯು ಸಮುದ್ರಕ್ಕೆ ಸೇರುವ ಮೊದಲು ಮರಳುಕಾಡಿನ ಪ್ರದೇಶದಲ್ಲಿ ಹರಿಯುತ್ತಿದ್ದುದರಿಂದ ನದಿಯು ಸಮುದ್ರಕ್ಕೆ ಸೇರುವ ಮೊದಲೇ ಮರುಭೂಮಿಯಲಿ ಇಂಗಿಹೋಗಿರಬಹುದು (See Muir's Sanskrit Texts Vol. II page 393) ಈರೀತಿ ನದಿಯು ಮರುಭೂಮಿಯಲ್ಲಿ ಇಂಗಿಹೋದ ವಿಚಾರದ ವರ್ಣನೆಯು ಮಹಾಭಾರತದಲ್ಲಿಯೂ (ವನಪರ್ವ ತೀರ್ಥಯಾತ್ರಾ ವರ್ಣನೆ) ಮತ್ತು ಮನುಸಂಹಿತೆಯಲ್ಲಿಯೂ (೧–೨೧) ಹೇಳಲ್ಪಟ್ಟಿದೆ. ಈ ಎಲ್ಲಾ ಕಾರಣಗಳಿಂದ ಈಗಿನ ಸರಸುತಿ ನದಿಯೇ ಹಿಂದಿನ ಸರಸ್ವತೀನದಿಯಾಗಿರಬೇಕೆಂದು ಹೇಳಬಹುದು.

**ವಾಜೇಭಿಃ**—ಈ ಶಬ್ದವು ಈ ಋಕ್ಕಿನಲ್ಲಿ ಅನ್ನ ಆಹಾರ ಎಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದು. "ಅನ್ನಂ ವೈ ವಾಜಃ" ಎಂದು ತೈತ್ತಿರೀಯಶ್ರುತಿವಾಕ್ಯವಿರುವುದು. ಪಾಶ್ಚಾತ್ಯಪಂಡಿತರು ಈ ಶಬ್ದವು ಅನೇಕ ಋಕ್ಕುಗಳಲ್ಲಿ ಅನೇಕವಿಧವಾದ ಅರ್ಥಗಳಲ್ಲಿ ಉಪಯೋಗಿಸಲ್ಪಟ್ಟಿರುವುದೆಂದು ಹೇಳುವರು. ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಟ್ಟಿರುವೆವು—

(1) Power, strength ಋ.ಸಂ. ೧-೨೭-೮ ; ೧-೧೧೦-೬; ೩-೨೫-೩ ; ೪-೨೨-೩ ; ೫-೧೫-೫ ; ೬-೨೫-೧೧ &c.

(2) Swiftnets (of the steeds) ಋ. ಸಂ. ೫-೮೫-೨, ೧೦-೩೯-೧೦.

(3) Combat ; ಋ. ಸಂ. ೧-೪-೪ ; ೧-೭-೪ , ೨-೨೩-೧೩ &c.

(4) Refreshment, food, nourishment ಋ. ಸಂ. ೧-೯೧-೧೮ ; ೬-೨೪-೩ , ೧೦-೫-೪; ೧೦-೯೬-೯ &c.

(5) Offering, food or drink of offering ಋ.ಸಂ. ೧-೩೬-೨ ; ೩-೧೨-೯ ; ೪-೩-೧೫ ; ೫-೯-೨ ; ೬-೪೫-೨೯ &c.

(6) Horse ಋ. ಸಂ. ೧-೫೨-೧ ; ೨-೧-೧೨ ; ೩-೨-೩ ; ೪-೨೯-೧ &c.

(7) One of the three Rubhus ಋ. ಸಂ. ೧-೧೬೧-೬ , ೪-೩೩-೩ , ೭-೪೮-೨ &c.

(8) All the three Rubhus ಋ. ಸಂ. ೧೦-೨೩-೨ ; ೧೦-೭೪-೧೦ &c.

Grassmann ಎಂಬ ಪಂಡಿತನು ಈ ಶಬ್ದದ ಅನೇಕ ಋಕ್ಕುಗಳಲ್ಲಿರುವ ವಿಧವಿಧವಾದ ಅರ್ಥವಿವರಣೆಗಾಗಿ ಒಂದು ದೊಡ್ಡ ಪಟ್ಟಿಯನ್ನೇ ಕೊಟ್ಟಿರುವನು. ಅದು ಅತಿ ವಿಸ್ತಾರವಾಗಿರುವುದರಿಂದಲೂ ಆಯಾ ಸಂದರ್ಭದಲ್ಲಿ ಆ ಅರ್ಥಗಳನ್ನು ವಿವರಿಸುವುದು ಉಚಿತವಾಗಿರುವುದರಿಂದಲೂ ಅದನ್ನು ಇಲ್ಲಿ ಬರೆಯಬೇಕಾದ ಅವಶ್ಯಕತೆ ಇರುವುದಿಲ್ಲ.

**ವಾಜಿನೀವತೀ**—ಈ ಶಬ್ದದ ಅರ್ಥವೂ ಹಿಂದೆ ಹೇಳಿದ **ವಾಜೇಭಿಃ** ಎಂಬ ಶಬ್ದದ ಅರ್ಥವನ್ನೇ ಅನುಸರಿಸಿರುವುದು ಇದಕ್ಕೆ ರಾಮನಾಥ್ ಎಂಬುವರು Bestower of food ಎಂದೂ Benfey ಎಂಬುವರು filled up or rich with offerings ಎಂದೂ Geldner ಎಂಬುವರು rich with reward ಎಂದೂ Rosen ಎಂಬುವರು provided with food ಎಂದೂ Ludwig ಎಂಬುವರು rich with steed ಎಂದೂ ವೇದಾರ್ಥಯತ್ನಕಾರರು Mounted on a charger ಎಂದೂ ಅರ್ಥಮಾಡಿರುವರು. ಕೆಲವರು **ವಾಜಿನೀ** ಎಂದರೆ ಆಹಾರವನ್ನು ಉತ್ಪನ್ನಮಾಡುವ ನದೀತೀರದ ಫಲವತ್ತಾದ ಭೂಮಿಯೆಂದೂ **ವಾಜಿನೀವತೀ** ಎಂದರೆ ಅಂತಹ ಫಲವತ್ತಾದ ಭೂಮಿಗೆ ನೀರನ್ನು ಒದಗಿಸುವುದರ ಮೂಲಕ ಜನರಿಗೆ ಅನ್ನಾದ್ಯಾಹಾರಗಳನ್ನು ನೀಡುವ ನದಿಯೆಂದೂ ಹೇಳುವರು.

**ಯಜ್ಞಂ**—ಯಜ್ಞಶಬ್ದವು ನಿರುಕ್ತದಲ್ಲಿ ಹದಿನೈದು ಶಬ್ದಗಳ ಮಧ್ಯದಲ್ಲಿ ಪಠಿತವಾಗಿರುವುದು (ನಿ. ೩-೧೯) ಈ ಶಬ್ದಕ್ಕೆ ಎರಡುವಿಧವಾಗಿ ಅರ್ಥಮಾಡಬಹುದು. (1) ದೇವತೆಯನ್ನು ಸ್ತೋತ್ರಾದಿಗಳಿಂದ ಆರಾಧಿಸುವುದು (2) ಅಂಗೋಪಾಂಗಕರ್ಮಗಳಿಂದಲೂ, ಮಂತ್ರಪಠನದಿಂದಲೂ, ಪಶುವನ್ನು ಅರ್ಪಿಸುವುದರಿಂದಲೂ ಅನೇಕ ಹೋಮಗಳಿಂದಲೂ ಮಾಡಬೇಕಾದ ಕರ್ಮವಿಶೇಷವು. ಈ ಎರಡನೇ ವಿಧವಾದ ಕರ್ಮವೇ ಸಾಧಾರಣವಾಗಿ ವೇದಗಳಲ್ಲಿ ಯಜ್ಞಶಬ್ದದಿಂದ ವಿವರಿಸಲ್ಪಟ್ಟಿರುವುದು.

**ವಷ್ಟು**—ಈ ಶಬ್ದವು **ವಶ ಕಾಂತೌ** ಎಂಬ ಧಾತುವಿನ ಲೋಣ್ಮಧ್ಯಮಪುರುಷೈಕವಚನವು. ಭಾಷ್ಯಕಾರರು ಈ ಧಾತುವಿಗೆ ಅಪೇಕ್ಷಿಸು ಎಂದರ್ಥ ಹೇಳಿ **ನಿರ್ವಹತ್ವಿತ್ಯರ್ಥಃ** ಯಜ್ಞಕರ್ಮವನ್ನು ಸಾಂಗಗೊಳಿಸಲಿ ಎಂದು ಮುಖ್ಯಾರ್ಥವನ್ನು ಹೇಳಿರುವರು. ಇದನ್ನು ಸಮರ್ಥನೆಮಾಡುವುದಕ್ಕಾಗಿ ಐತರೇಯ ಆರಣ್ಯಕದ **ಯಜ್ಞಂ ವಷ್ಟ್ವಿತಿ ಯದಾಹ ಯಜ್ಞಂ ವಹತ್ವಿತ್ಯೇವ ತದಾಹ** (ಐ. ಆ. ೧-೧-೪) ಎಂಬ ವಾಕ್ಯವನ್ನು ಉದಹರಿಸಿರುವರು. Geldner ಮತ್ತು Grassmann ಎಂಬ ಪಂಡಿತರೀರ್ವರೂ desire, wish for, make efforts, carry on to completion ಎಂದು ಅರ್ಥಮಾಡಿರುವರು. ಕಡೆಯ ಅರ್ಥವೇ ಇಲ್ಲಿ ಸರಿಯಾಗಿರುವುದು.

**ಧಿಯಾವಸುಃ**— ಈ ಶಬ್ದದ ಅರ್ಥವಿವರಣೆಯನ್ನು ಭಾಷ್ಯಕಾರರು ಈ ರೀತಿ ಮಾಡಿರುವರು— **ಧಿಯಾವಸುಃ ಕರ್ಮಪ್ರಾಪ್ಯಧನನಿಮಿತ್ತಭೂತಾ । ವಾಗ್ದೇವತಾಯಾಸ್ತಥಾವಿಧಂ ಧನನಿಮಿತ್ತತ್ವಮಾರಣ್ಯಕ-ಕಾಂಡೇ ಶ್ರುತ್ಯಾ ವ್ಯಾಖ್ಯಾತಂ। ಯಜ್ಞಂ ವಷ್ಟು ಧಿಯಾವಸುರಿತಿ ವಾಗ್ವೈ ಧಿಯಾವಸುಃ**-(ಐ.ಆ.೧-೧-೪) ಎಂದರೆ ಧಿಯಾವಸು ಶಬ್ದಕ್ಕೆ ಯಜ್ಞಾದಿಕರ್ಮಗಳಿಂದ ಲಭಿಸುವ ಧನಾದ್ಯೈಶ್ವರ್ಯಪ್ರಾಪ್ತಿಗೆ ಕಾರಣಭೂತಳಾದವಳು ಎಂದರ್ಥವು. ವಾಗ್ದೇವತೆಯು ಧನಪ್ರಾಪ್ತಿಗೆ ಕಾರಣಭೂತಳೆಂದು ಹೇಳುವ ಐತರೇಯಾರಣ್ಯಕದ **ಯಜ್ಞಂ ವಷ್ಟು** ಇತ್ಯಾದಿವಾಕ್ಯವನ್ನೂ ಉದಾಹರಿಸಿದಾರೆ. ಮತ್ತು ಈ ಶಬ್ದದ ರೂಪನಿಷ್ಪತ್ತಿವಿಚಾರದಲ್ಲಿ-- **ಧಿಯಾ ಕರ್ಮಣಾ ವಸು ಯಸ್ಯಾಃ ಸಕಾಶಾದ್ಭವತಿ ಸಾ ಧಿಯಾವಸುಃ** ಎಂದರೆ ಕರ್ಮಗಳಿಗೆ ಫಲರೂಪವಾಗಿ ಹೊಂದಬೇಕಾದ ಐಶ್ವರ್ಯವು ಯಾವ ದೇವತೆಯಿಂದ ಲಭಿಸುವುದೋ ಆ ದೇವತೆಗೆ ಧಿಯಾವಸುಃ ಎಂದು ಹೆಸರು ಎಂದು ಹೇಳಿದಾರೆ. ಪಾಶ್ಚಾತ್ಯಪಂಡಿತರು Supporter of all by wisdom, recompenser of worship or religious ceremonies, bestower of riches, source of wealth, rich in sense of intellect, one rewarding for devotion excellent-minded ಮೊದಲಾದ ಶಬ್ದಗಳಿಂದ ಅರ್ಥವಿವರಣೆಮಾಡಿದಾರೆ. ಈ ಶಬ್ದವು ಋಗ್ವೇದದಲ್ಲಿ ಋ. ಸಂ. ೧-೩-೧೦ , ೧-೫೮-೯ ; ೧೦-೬೦-೫ ; ೧-೬೧-೧೬ ; ೧-೬೨-೧೩ , ೧-೬೪-೧೫ ; ೩-೩-೨ ಎಂಬ ಎಂಟು ಋಕ್ಕುಗಳಲ್ಲಿ ಮಾತ್ರ ಪ್ರಯೋಗಿಸಲ್ಪಟ್ಟಿದೆ.

॥ ವ್ಯಾಕರಣಪ್ರಕ್ರಿಯಾ ॥

ಪಾವಂ ಕಾಯತೀತಿ ಪಾವಕಾ, ಕೈ ಗೈ ಶಬ್ದೇ ಎಂದು ಪಠಿತವಾದ ಕೈಧಾತುವಿಗೆ, **ಆದೇಚ ಉಪದೇಶೇ ಽಶಿತಿ** (ಪಾ. ಸೂ. ೬-೧-೪೫) ಉಪದೇಶದಲ್ಲಿ ಏ ಓ ಐ ಔ ಗಳನ್ನು ಕೊನೆಯಲ್ಲಿ ಹೊಂದಿರುವ ಧಾತುವಿನ ಕಡೆಯ ವರ್ಣಕ್ಕೆ ಆ ಆದೇಶಬರುವುದು. ಆದರೆ ಶಿತ್ತಾದ ಪ್ರತ್ಯಯಪರದಲ್ಲಿದ್ದರೆ ಬರುವುದಿಲ್ಲ ಎಂಬುದರಿಂದ ಆಕಾರ ಬಂದರೆ ಪಾವಕಾ ಎಂದಿರುವಾಗ **ಆತೋಽನುಪಸರ್ಗೇ ಕಃ** (ಪಾ.ಸೂ- ೩-೨-೩) ಉಪಸರ್ಗವಲ್ಲದ ಸುಬಂತವು ಉಪಪದವಾಗಿದ್ದರೆ ಆಕಾರಾಂತಧಾತುವಿನ ಮುಂದೆ ಕಪ್ರತ್ಯಯ ಬರುವುದು ಎಂಬುದರಿಂದ ಕ ಪ್ರತ್ಯಯ ಬರುವುದು, **ಆತೋಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಆಕಾರಕ್ಕೆ ಲೋಪಬಂದು, **ಅಜಾದ್ಯತಷ್ಟಾಪ್** (ಪಾ. ಸೂ. ೪-೧-೪) ಎಂಬುದರಿಂದ ಟಾಪ್ಪ್ರತ್ಯಯ ಬಂದರೆ ಪಾವಕಾ ಎಂದಾಗುವುದು, ಪಾವಕಾ ಎಂಬುದು ಕೃದಂತವಾದ್ದರಿಂದ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರ ಪದಪ್ರಕೃತಿಸ್ವರ ಬಂದು ಅಂತೋದಾತ್ತವಾಗುವುದು. ಅಥವಾ ಪುನಾತಿ ಪವಿತ್ರಮಾಡುತ್ತದೆ ಎಂಬ ಅರ್ಥವನ್ನು ವಿವಕ್ಷಿಸಿದಾಗ ಪೂಙ್ ಧಾತುವಿನಮೇಲೆ ಣ್ವುಲ್‌ತೃಚೌ ಎಂಬ ಸೂತ್ರದಿಂದ ಣ್ವುಲ್ಪ್ರತ್ಯಯವನ್ನಿಟ್ಟರೆ **ಯುವೋರನಾಕೌ** (ಪಾ. ಸೂ. ೭-೧-೧) ಅನುನಾಸಿಕಗಳಾದ ಯು ವು ಇವುಗಳಿಗೆ ಕ್ರಮವಾಗಿ ಅನ ಅಕ ಆದೇಶಗಳು ಬರುವುವು ಎಂಬುದರಿಂದ ಅಕಾದೇಶ ಬಂದರೆ ಪೂ+ಅಕ ಗುಣ ಮತ್ತು ಅವಾದೇಶಗಳನ್ನು ಮಾಡಿದರೆ ಪಾವಕ, ಸ್ತ್ರೀತ್ವನಿಮಿತ್ತವಾದ ಟಾಪ್‌ಪ್ರತ್ಯಯಬಂದರೆ ಪಾವಕಾ ಎಂದಾಗುವುದು, ಆದರೆ ಹೀಗೆ ವ್ಯುತ್ಪತ್ತಿಯನ್ನು ಮಾಡಿದರೆ ಇಲ್ಲಿ **ಪ್ರತ್ಯಸ್ಥಾತ್ಕಾತ್ಪೂರ್ವಸ್ಯಾತ ಇದಾಪ್ಯಸುಪಃ** (ಪಾ. ಸೂ. ೭-೩-೪೪) ಸುಪ್ಪಿಗಿಂತಲೂ ಪರವಾಗಿಲ್ಲದ ಟಾಪ್ ಪ್ರತ್ಯಯದ ಹಿಂದಿರುವ ಪ್ರತ್ಯಯಸ್ಥಕಕಾರಕ್ಕಿಂತಲೂ ಪೂರ್ವದಲ್ಲಿರುವ ಹ್ರಸ್ವಾಕಾರಕ್ಕೆ ಇತ್ವಬರುವುದು ಎಂಬುದರಿಂದ, ಇತ್ವಬರಬೇಕಾಗಿಬಂದರೆ, ಅದು **ಪಾವಕಾದೀನಾಂ ಛಂದಸಿ ಪ್ರತ್ಯಯಸ್ಥಾತ್ಕಾದಿತ್ವಂ ನೇತಿ ವಾಚ್ಯಂ** ವಾ. (ಪಾ. ಸೂ. ೭-೩-೪೫-೩) ಎಂಬುದರಿಂದ ಛಾಂದಸವಾಗಿ ಇಲ್ಲಿ ಬರುವುದಿಲ್ಲವೆಂದು ಸಮಾಧಾನ ಹೇಳಬೇಕು. ಅಂತೋದಾತ್ತಸ್ವರವನ್ನೂ ಛಾಂದಸವಾಗಿಯೇ ಒಪ್ಪಬೇಕಾಗುವುದು. **ಸರಸ್ವತೀ**-ಸೃಧಾತುವಿನಮೇಲೆ ಅಸುಗ್‌ಪ್ರತ್ಯಯವನ್ನಿಟ್ಟರೆ ಸರಃ ಎಂದಾಗುವುದು, ಪ್ರತ್ಯಯವು ನಿತ್ತಾದ್ದರಿಂದ ನಿತ್ಸ್ವರ ಆದ್ಯುದಾತ್ತಬರುವುದು. ಇದರ ಮುಂದೆ ಬಂದಿರುವ ಮತುಪ್ ಙೀಪ್‌ಪ್ರತ್ಯಯಗಳು ಪಿತ್ತಾದ್ದರಿಂದ ಅನುದಾತ್ತವಾಗುವುವು.

॥ ಸಂಹಿತಾಪಾಠಃ ॥

ಚೋದಯಿತ್ರೀ ಸೂನೃತಾನಾಂ ಚೇತಂತೀ ಸುಮತೀನಾಂ ।
ಯಜ್ಞಂ ದಧೇ ಸರಸ್ವತೀ ॥ ೧೧ ॥

॥ ಪದಪಾಠಃ ॥

ಚೋದಯಿತ್ರೀ । ಸೂನೃತಾನಾಂ । ಚೇತಂತೀ । ಸುಮತೀನಾಂ ॥
ಯಜ್ಞಂ । ದಧೇ । ಸರಸ್ವತೀ ॥ ೧೧ ॥

॥ ಸಾಯಣಭಾಷ್ಯಂ ॥

**ಯಾ ಸರಸ್ವತೀ ಸೇಯಮಿಮಂ ಯಜ್ಞಂ ದಧೇ । ಧಾರಿತವತೀ । ಕೀದೃಶೀ । ಸೂನೃತಾನಾಂ ಪ್ರಿಯಾಣಾಂ ಸತ್ಯವಾಕ್ಯಾನಾಂ ಚೋದಯಿತ್ರೀ ಪ್ರೇರಯಿತ್ರೀ । ಸುಮತೀನಾಂ ಶೋಭನಬುದ್ಧಿಯುಕ್ತಾನಾಮನುಷ್ಠಾತೄಣಾಂ ಚೇತಂತೀ । ತದೀಯಮನುಷ್ಠೇಯಂ ಜ್ಞಾಪಯಂತೀ ॥ ಚೋದಯಿತ್ರೀ । ಚುದ ಪ್ರೇರಣೇ । ಣ್ಯಂತಾತ್ತೃಚ್ । ಚಿತ್ತ್ವಾದಂತೋದಾತ್ತಃ । ಋನ್ನೇಭ್ಯೋ ಙೀಪ್ । ಪಾ ೪-೧-೫ । ಇತಿ ಙೀಪ್ । ತಸ್ಯೋದಾತ್ತಯಣೋ ಹಲ್ಪೂರ್ವಾತ್ । ಪಾ. ೬-೧-೧೭೪ । ಇತ್ಯುದಾತ್ತತ್ವಂ । ಸೂನೃತಾನಾಂ । ಊನ ಪರಿಹಾಣ ಇತ್ಯತಃ ಕ್ವಿಪ್ಸ್ಪೇತಿ ಕ್ವಿಪಿ ಸುತರಾಮೂನಯತ್ಯಪ್ರಿಯಮಿತಿ ಸೂನಿತಿ ಪ್ರಿಯಮುಚ್ಯತೇ । ತಚ್ಚ ತದೃತಂ ಸತ್ಯಂ ಚೇತಿ ಸೂನೃತಂ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ಚೇತಂತೀ । ಚಿತೀ ಸಂಜ್ಞಾನೇ । ಅತ್ರ ಶಪೋ ಙೀಪಶ್ಚ ಪಿತ್ತ್ವಾದನುದಾತ್ತತ್ವಂ ಶತುಶ್ಚಾದುಪದೇಶಾಲ್ಲಸಾರ್ವಧಾತುಕಸ್ವರೇಣಾನುದಾತ್ತತ್ವಂ । ಧಾತ್ವಂತಸ್ವರ ಏವ ಶಿಷ್ಯತೇ । ಸುಮತಿಶಬ್ದಸ್ಯ ಮತುಪಿ ಹ್ರಸ್ವತ್ವಾನ್ನಾಮನ್ಯತರಸ್ಯಾಂ । ಪಾ. ೬-೧-೧೭೬ । ಇತಿ ವಿಭಕ್ತೇರುದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ಸರಸ್ವತೀ**—ಸರಸ್ವತೀದೇವಿಯು । **ಸೂನೃತಾನಾಂ**—ಪ್ರಿಯವೂ ಸತ್ಯವೂ ಆದ ವಾಕ್ಯಗಳನ್ನು ಅಥವಾ ವಾಕ್ಯಗಳನ್ನಾಡುವ ಮನುಷ್ಯರನ್ನು । **ಚೋದಯಿತ್ರೀ**—ಪ್ರೇರಿಸುವವಳು । **ಸುಮತೀನಾಂ**-(ಯಜ್ಞಯಾಗಾದಿಗಳನ್ನು ಮಾಡುವುದರಲ್ಲಿ ಆಸಕ್ತರಾದ ಎಂದರೆ) ಒಳ್ಳೇ ಬುದ್ಧಿಯುಳ್ಳ ಮನುಷ್ಯರ(ನ್ನು) । **ಚೇತಂತೀ**-(ಒಳ್ಳೆಯ ಕರ್ಮಮಾಡುವುದರಲ್ಲಿ) ಜ್ಞಾಪಿಸುವವಳು, (ಇಂತಹ ಸರಸ್ವತೀದೇವಿಯು) **ಯಜ್ಞಂ**—(ನಾವು ಮಾಡುತ್ತಿರುವ) ಯಜ್ಞವನ್ನು । **ದಧೇ**—ಧರಿಸಿರುವಳು (ನೆರವೇರಿಸುವಳು).

॥ ಭಾವಾರ್ಥ ॥

ನಾವು ಸ್ತೋತ್ರಮಾಡುವ ಸರಸ್ವತೀದೇವಿಯು ಮನುಷ್ಯರನ್ನು ಪ್ರಿಯವಾದ ಮತ್ತು ಸತ್ಯವಾದ ಮಾತುಗಳನ್ನಾಡುವಂತೆ ಪ್ರೇರಿಸುವವಳು ಅಥವಾ ಸತ್ಯಭಾಷಿಗಳಾದ ಜನರಿಗೆ ಒಳ್ಳೆಯ ಕೆಲಸಗಳಲ್ಲಿ ಪ್ರವೃತ್ತಿಯುಂಟಾಗುವಂತೆ ಪ್ರೇರಿಸುವವಳು ಮತ್ತು ಸದ್ಬುದ್ಧಿಯುಳ್ಳ ಜನರನ್ನು ಸತ್ಕಾರ್ಯಮಾಡುವುದರಲ್ಲಿ ಜ್ಞಾಪಕಮಾಡಿ ಸಹಾಯ ಮಾಡುವವಳು. ಇಂತಹ ಸರಸ್ವತಿಯು ನಾವು ಮಾಡುವ ಯಜ್ಞವನ್ನು ನಿರ್ವಿಘ್ನವಾಗಿ ನೆರವೇರುವಂತೆ ಮಾಡಲಿ.

English Translation.

Saraswati, the inspirer of those who speak only the truth and instructress of the right-minded has supported the sacrifice.

॥ ವಿಶೇಷವಿಷಯಗಳು ॥

ಈ ಮಂತ್ರವು **ಸೌತ್ರಾಮಣಿ** ಎಂಬ ಯಾಗದಲ್ಲಿಯೂ, **ವೈಶ್ವದೇವ, ಉಖಾಸಂಭರಣ** (which takes place at the new and full moon days) **ಏಕಾಷ್ಟಕ** (the eighth day after full moon) ಇವುಗಳಲ್ಲಿ ಉಪಯೋಗಿಸಲ್ಪಡುವವು. ಮುಖ್ಯವಾಗಿ ವೈಶ್ವದೇವವೆಂಬ ಕರ್ಮದಲ್ಲಿ ಸರಸ್ವತಿಗೆ ಬಲಿಪ್ರದಾನದಲ್ಲಿ ಈ ಮಂತ್ರದ ಪ್ರಯೋಗವಿರುವುದು.

**ಚೋದಯಿತ್ರೀ**—ಚುದ ಪ್ರೇರಣೆ ಎಂಬ ಧಾತುವಿನಿಂದ ಉಂಟಾದ ರೂಪವು, ಪ್ರೇರಿಸುವವಳು ಎಂದರ್ಥವು. ಪಶ್ಚಾತ್ಯರು—Inspire, incite, rouse, stimulate, furnish, quickly, hasten, hurry, stir, agitate, encourage ಮೊದಲಾದ ಶಬ್ದಗಳಿಂದ ಅರ್ಥವಿವರಣೆಮಾಡಿರುವರು.

**ಸೂನೃತಾನಾಂ**--ಸೂನೃತಶಬ್ದವು ಉಪಸ್ಸನ್ನು ಸೂಚಿಸುವ ೧೬ ಪದಗಳ ಮಧ್ಯದಲ್ಲಿಯೂ (ನಿ.೨-೧೯) ಅನ್ನಾರ್ಥಸೂಚಕವಾದ ೨೮ ಪದಗಳ ಮಧ್ಯದಲ್ಲಿಯೂ (ನಿ. ೩-೯) ಪಠಿತವಾಗಿದೆ. ಈ ಪದವು ಋತ ಶಬ್ದದಿಂದ ಉಂಟಾಗಿರುವುದು. ಋತವೆಂದರೆ ನಿಜ, ಸತ್ಯ ಎಂದರ್ಥವು. ಆದುದರಿಂದ ಸೂನೃತಶಬ್ದವು ಋಗ್ವೇದದಲ್ಲಿ ಪಾಶ್ಚಾತ್ಯರಿಂದ One delighting in truth, good word, agreeable speach, truth, praise, song, receiving good qualities, joy-giving, glorious deed ಮೊದಲಾದ ಶಬ್ದಗಳಿಂದ ವಿವರಿಸಲ್ಪಟ್ಟಿದೆ.

**ಚೇತಂತೀ**__ಈ ಶಬ್ದದ ಅರ್ಥವೂ ಸ್ವಲ್ಪ ಹೆಚ್ಚುಕಡಿಮೆ ಚೋದಯಿತ್ರೀ ಶಬ್ದದ ಅರ್ಥದಂತೆಯೇ ಇರುವುದು. ಈ ಶಬ್ದಕ್ಕೆ Perceive, conceive, understand, inspire ಮೊದಲಾದ ಅರ್ಥವನ್ನು ಹೇಳಬಹುದು.

**ಸುಮತೀನಾಂ**--ಈ ಶಬ್ದವು ಮನ್ ಧಾತುವಿನಿಂದ ಉಂಟಾಗಿರುವುದು. ಇದಕ್ಕೆ Think, meditate, contemplate, immagine, observe, believe, regard ಮೊದಲಾದ ಅರ್ಥಗಳನ್ನು ಹೇಳಬಹುದು. ಈ ಋಕ್ಕಿನಲ್ಲಿ ಈ ಶಬ್ದಕ್ಕೆ ಒಳ್ಳೆ ಬುದ್ಧಿಯುಳ್ಳವರು, ಸತ್ಕರ್ಮಗಳಲ್ಲಿ ಆಸಕ್ತರು ಅಥವಾ ಅವುಗಳನ್ನು ಮಾಡುವವರು, right-thinking, right-minded ಮೊದಲಾದ ಅರ್ಥವನ್ನು ಹೇಳಬಹುದು.

ಈ ಋಕ್ಕಿನ ಮುಖ್ಯಾಭಿಪ್ರಾಯವೇನೆಂದರೆ--ಸರಸ್ವತೀದೇವಿಯು ಜನರನ್ನು ಸತ್ಯವಾಕ್ಯಗಳನ್ನಾಡುವಂತೆಯೂ ಒಳ್ಳೆಯ ಕೆಲಸಗಳನ್ನು ಮಾಡುವಂತೆಯೂ ಪ್ರೇರಿಸುವವಳು ಮತ್ತು ಮನುಷ್ಯರ ಬುದ್ಧಿಯನ್ನು ಸಹ ಒಳ್ಳೆಯ ವ್ಯಾಪಾರಗಳಲ್ಲಿ ಆಸಕ್ತವಾಗುವಂತೆ ಮಾಡುವವಳು ಆದುದರಿಂದ ಈಗ ನಾವು ಮಾಡುತ್ತಿರುವ ಯಜ್ಞದಲ್ಲಿ ನಮಗೆ ಸದ್ಬುದ್ಧಿಯನ್ನು ಕೊಟ್ಟು ಆ ಯಜ್ಞವು ಸಾಂಗವಾಗಿ ನೆರವೇರುವಂತೆ ಮಾಡುವುದಲ್ಲದೆ ಆದರ ಫಲವನ್ನು ಸಹ ನಮಗೆ ದೊರಕುವಂತೆ ಅನುಗ್ರಹಮಾಡುವಳು ಎಂದರ್ಥವು

॥ ವ್ಯಾಕರಣಪ್ರಕ್ರಿಯಾ ॥

ಚೋದಯಿತ್ರೀ- ಚುದಪ್ರೇರಣೇ ಎಂಬ ಧಾತುವಿಗೆ ಣಿಚ್ ಪ್ರತ್ಯಯವನ್ನು ಹಚ್ಚಿದರೆ, ಲಘೂಪಧಗುಣಬಂದು ಚೋದಿ-ಎಂದಾಗುತ್ತೆ. ಇದರಮೇಲೆ **ಣ್ವುಲ್‌ತೃಚೌ** (ಪಾ.ಸೂ. ೧-೧-೩೩) ಎಂಬುದರಿಂದ ತೃಚ್ ಪ್ರತ್ಯಯವನ್ನು ಹಚ್ಚಿದರೆ, ಆದಕ್ಕೆ **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ- ೭-೨-೫೩) ಎಂಬುದರಿಂದ ಇಟ್ ಆಗಮ, ಚೋದಿ ಎಂಬಲ್ಲಿರುವ ಇಗೆ **ಸಾರ್ವಧಾತುಕಾರ್ಧಧಾತುಕಯೋಃ** (ಪಾ.ಸೂ. ೭-೩-೮೪) ಗುಣವೆ ಬಂದು **ಏಚೋಯವಾಯಾವಃ** ( ಪಾ. ಸೂ. ೬-೧-೭೮ ) ಎಂಬುದರಿಂದ ಏಗೆ ಅಯ್ ಬಂದರೆ ಚೋದಯಿತೃ ಎಂದಿರುವಾಗ 'ಋನ್ನೆಭ್ಯೋಙೀಪ್' (ಪಾ. ಸೂ. ೪-೧-೫) ಸ್ತ್ರೀಲಿಂಗದಲ್ಲಿ ಋಕಾರನಕಾರಗಳನ್ನು ಕಡೆಯಲ್ಲಿ ಹೊಂದಿರುವ ಶಬ್ದಗಳಮುಂದೆ ಙೀಪ್ ಪ್ರತ್ಯಯಬರುವುದು ಎಂಬುದರಿಂದ ಙೀಪ್ ಬಂದರೆ ಯಣಾದೇಶಬಂದು

ಚೋದಯಿತ್ರೀ ಎಂದಾಗುವುದು. ತೃಚ್ ಪ್ರತ್ಯಯವು ಚಿತ್ತಾದ್ದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತ. **ಉದಾತ್ತಯಣೋಹಲ್ಪೂರ್ವಾತ್** (ಪಾ. ಸೂ. ೬-೧-೧೭೪) ಉದಾತ್ತವರ್ಣದಸ್ಥಾನದಲ್ಲಿ ಬಂದ ಯ, ವ, ರ, ಲ, ಗಳು ವ್ಯಂಜನದ ಮುಂದಿರುವಾಗ ಯವರಲಗಳ ಮುಂದಿರುವ ನದೀಸಂಜ್ಞಕ ವರ್ಣವೂ, ಶಸಾದಿಯಾದ ವಿಭಕ್ತಿಯೂ ಸಹ ಉದಾತ್ತವಾಗುವುದು. ಎಂಬುದರಿಂದ ಙೀಪ್ಪು ಉದಾತ್ತ. ಸೂನೃತಾನಾಂ-ಊನಪರಿಹಾಣೇಧಾವಿಗೆ **ಕ್ವಿಪ್‌ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ಪನ್ನು ಮಾಡಿದರೆ ಊನ್ ಎಂದಾಗುತ್ತೆ ಸುತರಾಂ ಊನಯತಿ ಅಪ್ರಿಯಂ (ಅಪ್ರಿಯವನ್ನು ನಿಶ್ಶೇಷವಾಗಿ ಪರಿಹರಿಸುವನು) ಎಂದರ್ಥವಾದಾಗ ಸೂನ್ ಪದವು ಪ್ರಿಯ ಎಂಬ ಅರ್ಥವನ್ನು ಹೇಳುವುದು. ಋತಂ ಎಂದರೆ ಸತ್ಯವೆಂದು ಅರ್ಥ. ಸೂನ್ ಚ ತತ್ ಋತಂ ಚ ಎಂದು ಕರ್ಮಧಾರಯ ಸಮಾಸ ಮಾಡಿದರೆ ಸೂನೃತಂ ಎಂದಾಗುವುದು ಇಲ್ಲಿ **ಪರಾದಿಶ್ಛಂದಸಿ ಬಹುಲಂ** (ಪಾ. ಸೂ. ೬-೨-೧೯೯) ಛಂದಸಿನಲ್ಲಿ ಪರಪದದ ಆದಿಯು ಬಹುಲವಾಗಿ ಉದಾತ್ತವಾಗುವುದು ಎಂಬುದರಿಂದ ಉತ್ತರಪದದ ಆದಿಯು ಉದಾತ್ತ, ಸೂನ್ ಎಂಬಲ್ಲಿ **ಅಯಸ್ಮಯಾದೀನಿ ಛಂದಸಿ** (ಪಾ.ಸೂ. ೧-೪-೨೦ ) ಅಯಸ್ಮಯಾದಿಗಣಪಠಿತಶಬ್ದಗಳು ಛಂದಸ್ಸಿನಲ್ಲಿ ಯಥಾಯೋಗ್ಯವಾದ ಭಸಂಜ್ಞೆ ಪದಸಂಜ್ಞೆಗಳನ್ನು ಹೊಂದುವುವು ಎಂಬುದರಿಂದ ಭಸಂಜ್ಞೆ ಬರುವುದು ಆದಕಾರಣ ಪದಸಂಜ್ಞೆ ಇಲ್ಲದೇ ಇರುವುದರಿಂದ **ನ ಲೋಪಃ ಪ್ರಾತಿಪದಿಕಾಂತಸ್ಯ** (ಪಾ ಸೂ. ೮-೨-೭) ಪ್ರಾತಿಪದಿಕಸಂಜ್ಞಕಪದದ ಕೊನೆಯಲ್ಲಿರುವ ನಕಾರಕ್ಕೆ ಲೋಪಬರುವುದು ಎಂಬುದರಿಂದ ನಕಾರಕ್ಕೆ ಲೋಪಬರುವುದಿಲ್ಲ. ಚೇತನ್ತೀ-ಚಿತೀ ಸಂಜ್ಞಾನೇ ಧಾತುವಿಗೆ ಲಟ್-ಅದರಸ್ಥಾನದಲ್ಲಿ **ಲಟಶ್ಶತೃಶಾನಚೌ** (ಪಾ. ಸೂ. ೩-೨-೧೨೪) ಎಂಬುದರಿಂದ ಶತೃಪ್ರತ್ಯಯ ಬಂದರೆ ಚಿತ್+ಅತ್ ಎಂದಿರುವಾಗ ಶಪ್ (ಅಕಾರ) ವಿಕರಣಬಂದು ಚಿತ್ ಎಂಬಲ್ಲಿ **ಲಘೂಪಧಗುಣ,** ಚೇತ್+ಅ+ಅತ್- **ಅತೋಗುಣೇ** (ಪಾ. ಸೂ. ೬-೧-೯೭) ಎರಡು ಅಕಾರಗಳಿಗೂ ಪರರೂಪಬಂದರೆ ಚೇತತ್-ಶತೃವು ಉಗಿತ್ತಾದ್ದರಿಂದ **ಉಗಿತಶ್ಚ** (ಪಾ. ಸೂ. ೪-೧-೬) ಉ ಋ ೢ ಇತ್ಸಂಜ್ಞಕವಾದ ಪ್ರಾತಿಪದಿಕದಮುಂದೆ ಸ್ತ್ರೀಲಿಂಗದಲ್ಲಿ ಙೀಪ್ ಬರುವುದು ಎಂಬುದರಿಂದ ಙೀಪ್‌ಬರುತ್ತೆ ಚೇತತ್+ಈ ಎಂದಿರುವಾಗ **ಆಚ್ಛೀನದ್ಯೋರ್ನುಂ** (ಪಾ. ಸೂ. ೭-೧- ೮) ಅವರ್ಣವನ್ನು ಕೊನೆಯಲ್ಲಿ ಹೊಂದಿರುವ ಅಂಗದಮುಂದೆ ಇರುವ ಯಾವಶತೃ ಪ್ರತ್ಯಯಾವಯವವಿದೆಯೋ ಅದನ್ನು ಕೊನೆಯಲ್ಲಿ ಹೊಂದಿರುವ ಅಂಗಕ್ಕೆ ಶೀನದೀಸಂಜ್ಞಕ ವರ್ಣಗಳು ಪರದಲ್ಲಿರುವಾಗ ಙೀಪ್ ವಿಕಲ್ಪವಾಗಿಬರುವುದು ಎಂಬುದರಿಂದ ಚೇತತ್ ಎಂಬಲ್ಲಿ ನುಮ್ ಆಗಮುಪ್ರಥಮೈಕವಚನ ಸುಪ್ರತ್ಯಯಕ್ಕೆ **'ಹಲ್ಙ್ಯಾಭ್ಯೋದೀರ್ಘಾತ್'** (ಪಾ.ಸೂ. ೬-೧-೬೮) ಎಂಬುದರಿಂದ ಲೋಪಬಂದರೆ ಚೇತನ್ತೀ ಎಂದಾಗುತ್ತೆ, ಶಪ್ ಙೀಪ್ಪು ಎರಡೂ ಪಿತ್ತಾದ್ದರಿಂದ ಅನುದಾತ್ತ, ಶತೃಪ್ರತ್ಯಯವು ಅದುಪದೇಶವಾದ್ದರಿಂದ, **ತಾಸ್ಯನುದಾತ್ತೇತ್-,** (ಪಾ. ಸೂ. ೬-೧-೧೮೬) ಎಂಬುದರಿಂದ ಲಸ್ಥಾನಿಕಸಾರ್ವಧಾತುಕಸ್ವರ ಬಂದು ಅನುದಾತ್ತ, ಚೇತ್ ಎಂಬಲ್ಲಿ **ಧಾತೋಃ,** (ಪಾ. ಸೂ. ೬-೧-೧೬೨) ಧಾತುವಿನ ಕಡೆಯವರ್ಣವು ಉದಾತ್ತವಾಗುವುದು ಎಂಬುದರಿಂದ ಏಕಾರವು ಉದಾತ್ತವಾಗುವುದು. ಸುಮತೀನಾಂ= ಶೋಭನಾ ಮತಿಃ ಯೇಷಾಂ ತೇ (ಒಳ್ಳೆಯ ಬುದ್ಧಿಯುಳ್ಳವರು) ಎಂದು ಬಹುವ್ರೀಹಿ ಸಮಾಸಮಾಡಿದಾಗ **ನಞ್‌ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಸುಮತಿಶಬ್ದವು ಅಂತೋದಾತ್ತ ಇದರಮುಂದೆ ಷಷ್ಠೀ ಬಹುವಚನಪ್ರತ್ಯಯವನ್ನಿಟ್ಟಾಗ ನುಡಾಗಮದೀರ್ಘಗಳು ಬಂದು ಸುಮತೀನಾಂ ಎಂದಾಗುತ್ತೆ. ಇಲ್ಲಿ **ನಾಮನ್ಯತರಸ್ಯಾಂ** (ಪಾ. ಸೂ. ೬-೧-೧೭೭) ಮತುಪ್ ಪ್ರತ್ಯಯವನ್ನು ಹಚ್ಚಿದಾಗ ಹ್ರಸ್ವವನ್ನು ಕಡೆಯಲ್ಲಿ ಹೊಂದಿರುವ ಶಬ್ದವು ಅಂತೋದಾತ್ತವಾಗಿದ್ದರೆ ಅದರಮುಂದಿರುವ ನಾಮ್ ಎಂಬ ಷಷ್ಠೀವಿಭಕ್ತಿಯು ಉದಾತ್ತವಾಗುವುದು ಎಂಬುದರಿಂದ ಸುಮತೀನಾಂ ಎಂಬಲ್ಲಿರುವ ನಾಮ್ ಎಂಬುದು ಉದಾತ್ತ ॥ ೧೧ ॥

॥ ಸಂಹಿತಾಪಾಠಃ ॥

ಮಹೋ ಅರ್ಣಃ ಸರಸ್ವತೀ ಪ್ರ ಚೇತಯತಿ ಕೇತುನಾ ।
ಧಿಯೋ ವಿಶ್ವಾ ವಿ ರಾಜತಿ ॥ ೧೨ ॥

॥ ಪದಪಾಠಃ ॥

ಮಹಃ । ಅರ್ಣಃ । ಸರಸ್ವತೀ । ಪ್ರ । ಚೇತಯತಿ । ಕೇತುನಾ ॥
ಧಿಯಃ । ವಿಶ್ವಾಃ । ವಿ । ರಾಜತಿ ॥ ೧೨ ॥

॥ ಸಾಯಣಭಾಷ್ಯಂ ॥

ದ್ವಿವಿಧಾ ಹಿ ಸರಸ್ವತೀ ವಿಗ್ರಹವದ್ದೇವತಾ ನದೀರೂಪಾ ಚ । ತತ್ರ ಪೂರ್ವಾಭ್ಯಾಮೃಗ್ಭ್ಯಾಂ ವಿಗ್ರಹವತೀ ಪ್ರತಿಪಾದಿತಾ । ಅನಯಾ ತು ನದೀರೂಪಾ ಪ್ರತಿಪಾದ್ಯತೇ । ತಾದೃಶೀ ಸರಸ್ವತೀ ಕೇತುನಾ ಕರ್ಮಣಾ ಪ್ರವಾಹರೂಪೇಣ ಮಹೋ ಅರ್ಣಃ ಪ್ರಭೂತಮುದಕಂ ಪ್ರ ಚೇತಯತಿ । ಪ್ರಕರ್ಷೇಣ ಜ್ಞಾಪಯತಿ । ಕಿಂಚ । ಸ್ವಕೀಯೇನ ದೇವತಾರೂಪೇಣ ವಿಶ್ವಾ ಧಿಯಃ ಸರ್ವಾಣ್ಯನುಷ್ಠಾತೃಪ್ರಜ್ಞಾನಾನಿ ವಿರಾಜತಿ । ವಿಶೇಷೇಣ ದೀಪಯತಿ । ಅನುಷ್ಠಾನವಿಷಯಾ ಬುದ್ಧೀಃ ಸರ್ವದೋತ್ಪಾದಯತೀತ್ಯರ್ಥಃ । ಸರಸ್ವತ್ಯಾ ದ್ವಿರೂಪತ್ವಂ ಯಾಸ್ಕೋ ದರ್ಶಯತಿ । ತತ್ರ ಸರಸ್ವತೀತ್ಯೇತಸ್ಯ ನದೀವದ್ದೇವತಾವಚ್ಚ ನಿಗಮಾ ಭವಂತಿ । ನಿ. ೨-೨೩ । ಇತಿ । ಏಕಶತಸಂಖ್ಯಾಕೇಷೂದಕನಾಮಸ್ವರ್ಣಃ ಕ್ಷೋದ ಇತಿ ಪಠಿತಂ । ಏತಾಮೃಚಂ ಯಾಸ್ಕೋ ವ್ಯಾಚಷ್ಟ । ಮಹದರ್ಣಃ ಸರಸ್ವತೀ ಪ್ರಚೇತಯತಿ ಪ್ರಜ್ಞಾಪಯತಿ ಕೇತುನಾ ಕರ್ಮಣಾ ಪ್ರಜ್ಞಯಾ ವೇಮಾನಿ ಚ ಸರ್ವಾಣಿ ಪ್ರಜ್ಞಾನಾನ್ಯಭಿವಿರಾಜತಿ । ನಿ. ೧೧-೨೭ । ಇತಿ ॥ ಮಹೋ ಅರ್ಣಃ । ಮಹದಿತಿ ತಕಾರಸ್ಯ ವ್ಯತ್ಯಯೇನ ಸಕಾರಃ । ತಸ್ಯ ರುತ್ವೋತ್ವಗುಣಾಃ । ಪ್ರಾತಿಪದಿಕಸ್ವರೇಣಾಂತೋದಾತ್ತಃ । ಏಙಃ ಪದಾಂತಾದತಿ ಪಾ. ೬-೧-೧೦೯ । ಇತಿ ಪೂರ್ವರೂಪೇ ಪ್ರಾಪ್ತೇ ಪ್ರಕೃತ್ಯಾಂತಃಪಾದಮವ್ಯಪರೇ । ಪಾ. ೬-೧-೧೧೫ । ಇತಿ ಪ್ರಕೃತಿಭಾವಃ । ಅರ್ತೇರಿತ್ಯರ್ಣಃ । ಉದಕೇ ನುಟ್ ಚ । ಉ. ೪-೧೯೬ । ಇತ್ಯಸುನ್ಪ್ರತ್ಯಯೋ ನುಡಾಗಮಶ್ಚ । ಕೇತುನಾ । ಪ್ರಾತಿಪದಿಕಸ್ವರೇಣಾಂತೋದಾತ್ತಃ । ವಿಶ್ವಾಃ । ವಿಶ್ವಶಬ್ದಃ ಕ್ವನ್ಪ್ರತ್ಯಯಾಂತ ಆದ್ಯುದಾತ್ತಃ ॥ ೬ ॥ ॥ ೧ ॥

॥ ಪ್ರತಿಪದಾರ್ಥ ॥

ಸರಸ್ವತೀ—ಸರಸ್ವತೀ ನದಿಯು । ಕೇತುನಾ—ಪ್ರವಾಹರೂಪವಾದ ಕರ್ಮದಿಂದ (ಪ್ರವಹಿಸುವುದರಿಂದ) । ಮಹೋ ಅರ್ಣಃ—ಬಹು ಹೆಚ್ಚಾದ ನೀರನ್ನು । ಪ್ರಚೇತಯತಿ—ವಿಶೇಷವಾಗಿ ಪ್ರದರ್ಶಿಸುವಳು । (ಮತ್ತು) ವಿಶ್ವಾ ಧಿಯಃ—(ಯಜ್ಞಕರ್ಮದಲ್ಲಾಸಕ್ತರಾದ) ಸಮಸ್ತ ಜನರ ಬುದ್ಧಿಯನ್ನು (ಪ್ರಜ್ಞೆಯನ್ನು) । ವಿರಾಜತಿ—ಉದ್ದೀಪನಗೊಳಿಸುವಳು ॥

॥ ಭಾವಾರ್ಥ ॥

ಸರಸ್ವತೀನದಿಯು ಬಹು ಅಗಾಧಪ್ರವಾಹದಿಂದ ಹರಿಯುತ್ತಿರುವುದರಿಂದ ಈ ನದಿಯಲ್ಲಿ ಬಹುಹೆಚ್ಚಾಗಿ ನೀರಿರುವುದು ಮತ್ತು ಈ ದೇವಿಯು ತನ್ನನ್ನು ಸ್ತೋತ್ರಮಾಡುವ ಅಥವಾ ಯಜ್ಞದಿಂದ ಆರಾಧಿಸುವ ಜನರ ಮನಸ್ಸನ್ನು ಪ್ರಕಾಶಗೊಳಿಸುವಳು ಎಂದರೆ ಜನರ ಬುದ್ಧಿಯನ್ನು ಚುರುಕಾಗುವಂತೆ ಪ್ರೇರಿಸುವಳು.

English Translation.

Saraswati (river) mamfests herself by her acts (flowing) as a mighty river and (ın her own form) enlightens peoples's minds.

॥ ವಿಶೇಷವಿಷಯಗಳು ॥

ಈ ಮಂತ್ರವು ಸೌತ್ರಾಮಣೀ ಎಂಬ ಯಾಗದಲ್ಲಿ ಸರಸ್ವತಿಯನ್ನು ಸ್ತೋತ್ರಮಾಡುವುದಕ್ಕಾಗಿ ಉಪಯೋಗಿಸಲ್ಪಡುವುದು. ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಈರೀತಿ ಹೇಳಿರುವರು—**ಮಹದರ್ಣಃ ಸರಸ್ವತೀ ಪ್ರಚೇತಯತಿ ಪ್ರಜ್ಞಾಪಯತಿ ಕೇತುನಾ ಕರ್ಮಣಾ ಪ್ರಜ್ಞಯಾ ವೇಮಾನಿ ಚ ಸರ್ವಾಣಿ ಪ್ರಜ್ಞಾನಾನ್ಯಭಿವಿರಾಜತಿ** (ನಿ. ೧೧-೨೭). ಸರಸ್ವತಿಯು ನದೀರೂಪವನ್ನೂ, ವಾಗ್ದೇವತೆಯ ರೂಪವನ್ನು ಯಾಸ್ಕರು **ತತ್ರ ಸರಸ್ವತೀತ್ಯೇತಸ್ಯ ನದೀವದ್ದೇವತಾವಚ್ಚ ನಿಗಮಾ ಭವಂತಿ** (ನಿ. ೨-೨೩) ಎಂಬ ವಚನದಿಂದ ಹೇಳಿರುವರು. ಈ ಋಕ್ಕಿನಲ್ಲಿ ಪೂರ್ವಾರ್ಧದಲ್ಲಿ ಎಂದರೆ ೧-೨ ನೆಯ ಪಾದಗಳಲ್ಲಿ ಸರಸ್ವತಿಯನ್ನು ನದೀರೂಪದಂತೆಯೂ ೩ ನೆಯ ಪಾದದಲ್ಲಿ ದೇವತಾರೂಪದಂತೆಯೂ ಭಾವಿಸಿ ಸ್ತೋತ್ರಮಾಡಲ್ಪಟ್ಟಿರುವುದು.

**ಮಹೋ ಅರ್ಣಃ**—ಅರ್ಣಶಬ್ದವು ಉದಕಸೂಚಕವಾದ ೧೦೧ ನಾಮಗಳ ಮಧ್ಯದಲ್ಲಿ ಪಠಿತವಾಗಿರುವುದು. ಅರ್ಣವೆಂದರೆ ಉದಕವೆಂದೂ, ನದಿಯೆಂದೂ ಅರ್ಥವು. ಇಲ್ಲಿ ಸರಸ್ವತೀನದಿಯು ಸಿಂಧು ಮೊದಲಾದ ನದಿಗಳಷ್ಟು ದೊಡ್ಡದಾಗಿಲ್ಲದಿದ್ದರೂ **ಮಹೋ ಅರ್ಣಃ** ಎಂದರೆ ಹೆಚ್ಚಾದ ನೀರುಳ್ಳ ದೊಡ್ಡನದಿ ಎಂದು ಸ್ತೋತ್ರಮಾಡಿರುವುದು ಸರಿಯೇ ಎಂದರೆ, ಸ್ತೋತ್ರಮಾಡುವಾಗ ದೇವತೆಗೆ ಇರುವ ಸ್ವಲ್ಪ ಗುಣವನ್ನು ಉತ್ಪ್ರೇಕ್ಷೆಮಾಡಿ ಬಹಳವಾಗಿರುವುದೆಂದು ಪ್ರಶಂಸೆಮಾಡುವುದು ಲೋಕದಲ್ಲಿ ರೂಢಿಯಾಗಿದೆ, ಅದಲ್ಲದೆ ಈ ಋಕ್ಕಿನ ಋಷಿಯಾದ ಮಧುಚ್ಛಂದ ಋಷಿಯು ನೋಡಿರುವ ನದಿಗಳಲ್ಲೆಲ್ಲಾ ಇದೇ ದೊಡ್ಡದಾಗಿರಬಹುದು. ಮತ್ತು ದೂರದಲ್ಲಿರುವ ಸಿಂಧು ಮೊದಲಾದ ದೊಡ್ಡನದಿಗಳನ್ನು ಆ ಋಷಿಯು ನೋಡಿಲ್ಲದಿರಬಹುದು. ಆದುದರಿಂದ ಈ ನದಿಯು ಬಹು ದೊಡ್ಡ ನದಿಯೆಂದೂ ಇದರಲ್ಲಿ ಬಹಳವಾಗಿ ನೀರಿರುವುದೆಂದೂ ಸ್ತೋತ್ರಮಾಡಿರುವುದು ಸಹಜವಾಗಿದೆ.

**ಕೇತುನಾ**—ಇದಕ್ಕೆ ಭಾಷ್ಯಕಾರರೂ ಯಾಸ್ಕರೂ **ಕರ್ಮಣಾ** ಕೆಲಸದಿಂದ ಎಂದು ಅರ್ಥಮಾಡಿರುವರು. ನದೀಪರವಾಗಿ ಅರ್ಥಹೇಳುವಾಗ **ಕೇತುನಾ** ಎಂದರೆ ಬಹಳ ಅಗಾಧವಾಗಿಯೂ ಗಂಭೀರವಾಗಿಯೂ ಇರುವ ಪ್ರವಾಹ (ರೂಪಕರ್ಮ) ದಿಂದ ಎಂದೂ ದೇವತಾಪರವಾಗಿ ಅರ್ಥಮಾಡುವಾಗ ಜನರ ಮನಸ್ಸನ್ನು ಉದ್ದೀಪನ (ಪ್ರೇರಣೆ)ಗೊಳಿಸುವ ಕರ್ಮದಿಂದ ಎಂದು ಅರ್ಥಮಾಡಬಹುದು. ಸರಸ್ವತೀನದಿಯ ಅಗಾಧಪ್ರವಾಹವು (Saraswati"s mighty, endless and impetuous flood) ಋ. ಸಂ. ೬-೬೧-೨ ಮೊದಲಾದ ಅನೇಕ ಮಂತ್ರಗಳಲ್ಲಿ ವರ್ಣಿಸಲ್ಪಟ್ಟಿರುವುದು. ಈ ಶಬ್ದಕ್ಕೆ ಪಾಶ್ಚಾತ್ಯರು Brightness, banner, flag, activity, wisdom ಎಂದು ಅರ್ಥಮಾಡಿರುವರು. ಸ್ಕಂದಸ್ವಾಮಿಯು **ಕೇತುನಾ** ಎಂದರೆ **ಗರ್ಜನಾಖ್ಯೇನ ಕರ್ಮಣಾ**

ಎಂದೂ ಯಾಸ್ಕರು **ಕರ್ಮಣಾ ಪ್ರಜ್ಞಯಾ ವಾ** ಎಂದೂ ವ್ಯಾಖ್ಯಾನಮಾಡಿರುವರು. ಉವ್ವಟ ಮತ್ತು ಮಹೀಧರರ ಅಭಿಪ್ರಾಯವೂ ಸ್ಕಂದಸ್ವಾಮಿಯ ಅಭಿಪ್ರಾಯದಂತೆಯೇ ಇದೆ. ವೆಂಕಟಮಾಧವರು **ಕೇತುನಾ** ಎಂದರೆ **ಕರ್ಮಣಾ** ಎಂದು ಮಾತ್ರ ಹೇಳಿರುವರು.

**ಧಿಯಃ**— ಬುದ್ಧಿ, ಆಲೋಚನೆ. ಯಾಸ್ಕರು **ಪ್ರಜ್ಞಾ** ಎಂದೂ ಸ್ಕಂದಸ್ವಾಮಿಯು **ಕರ್ಮಾಣಿ, ಪ್ರಜ್ಞಾ** ಎಂದೂ ವೆಂಕಟಮಾಧವರು **ಪ್ರಜ್ಞಾ** ಎಂದೂ ಉವ್ವಟ ಮತ್ತು ಮಹೀಧರರು **ಬುದ್ಧಿ** ಎಂದೂ ಹೇಳಿರುವರು. ಪಾಶ್ಚಾತ್ಯರಲ್ಲಿ Grassman ಎಂಬುವರು act of devotion ಎಂದೂ ಡಾ|| ಸರೂಪರವರು Devotion, thought ಎಂದು ಅರ್ಥಮಾಡಿರುವರು.

**ವಿರಾಜತಿ**—ಭಾಷ್ಯಕಾರರು ಇದಕ್ಕೆ **ವಿಶೇಷೇಣ ದೀಪಯತಿ**—ಹೆಚ್ಚಾಗಿ ಪ್ರಕಾಶಗೊಳಿಸುವಳು, ಪ್ರೇರಿಸುವಳು, ಉದ್ದೀಪನಗೊಳಿಸುವಳು ಎಂದು ಹೇಳಿದಾರೆ. ಈ ಶಬ್ದವು ರಾಜ್ ಧಾತುವಿನ ಪ್ರಥಮಪುರುಷೈಕವಚನವು ಇದಕ್ಕೆ shine, preside, govern, brighten ಎಂದು ಅರ್ಥ ಹೇಳಬಹುದು. **ಧಿಯೋ ವಿರಾಜತಿ** ಎಂದರೆ ಮನಸ್ಸನ್ನು ಸತ್ಕಾರ್ಯಗಳಲ್ಲಿ ಪ್ರವರ್ತಿಸುವಂತೆ ಪ್ರೇರಿಸುವಳು. ಅಥವಾ ನಮ್ಮ ಮನಸ್ಸನ್ನು ಸಂತೋಷವಾಗಿರುವಂತೆ ಮಾಡುವವಳು ಎಂದಭಿಪ್ರಾಯವು.

|| ವ್ಯಾಕರಣಪ್ರಕ್ರಿಯಾ ||

ಮಹೋ ಅರ್ಣಃ— ಮಹತ್ ಶಬ್ದದ ತಕಾರಕ್ಕೆ ವ್ಯತ್ಯಾಸದಿಂದ ಸಕಾರಬರುವುದು, ಸಕಾರಕ್ಕೆ **ಸಸಜುಷೋರುಃ** (ಪಾ.ಸೂ. ೮-೨೬೬) ಎಂಬುದರಿಂದ ರು ಆದೇಶ, ರುಗೆ **ಅತೋರೋರಪ್ಲುತಾದಪ್ಲುತೇ** (ಪಾ. ಸೂ. ೬!೧-೧೧೩) ಎಂಬುದರಿಂದ ಉ ಆದೇಶ ಮಹ+ಉ ಈಗ **ಆದ್ಗುಣಃ** (ಪಾ. ಸೂ. ೬-೧-೮೭) ಎಂಬುದರಿಂದ ಗುಣಬಂದರೆ ಮಹೋ ಎಂದಾಗುವುದು. ನಂತರ ಅರ್ಣಃ ಪದವನ್ನು ಸೇರಿಸಿದಾಗ **ಏಙಃಪದಾಂತಾದತಿ** (ಪಾ. ಸೂ. ೭-೧-೧೦೯) ಪದದ ಕೊನೆಯಲ್ಲಿರುವ ಏ ಓ ಗಳಿಗೆ ಹ್ರಸ್ವಾಕಾರ ಪರದಲ್ಲಿದ್ದರೆ ಪೂರ್ವಪರವರ್ಣಗಳ ಸ್ಥಾನದಲ್ಲಿ ಪೂರ್ವರೂಪಬರುವುದು ಎಂಬುದರಿಂದ ಪುರ್ವರೂಪವು ಪ್ರಾಪ್ತವಾದರೆ **ಪ್ರಕೃತ್ಯಾಂತಃ ಪಾದಮವ್ಯಪರೇ,** (ಪಾ. ಸೂ. ೬-೧-೧೧೫) ಋಕ್ಪಾದದ ಮಧ್ಯದಲ್ಲಿರುವ ಏ ಓ ಗಳಿಗೆ ಹ್ರಸ್ವಾಕಾರಪರದಲ್ಲಿದ್ದರೆ ಪ್ರಕೃತಿಭಾವ (ಸಂಧಿಕಾರ್ಯವಿಲ್ಲದಿರುವಿಕೆ) ಬರುವುದು, ವಕಾರಯಕಾರದ ಹಿಂದಿರುವ ಹ್ರಸ್ವಾಕಾರವು ಪರದಲ್ಲಿದ್ದರೆ ಈ ಪ್ರಕೃತಿಭಾವ ಬರುವುದಿಲ್ಲ. ಎಂಬುದರಿಂದ ಪ್ರಕೃತಿಭಾವಬಂದು ' ಮಹೋ ಅರ್ಣಃ' ಎಂದೇ ಇರುವುದು. ಅರ್ಣಶಬ್ದವು ಋ ಗತೌ ಧಾತುವಿನಿಂದ ಬಂದಿರುವುದು (ಅರ್ತಿ ಹರಿಯುತ್ತದೆ, ಹೋಗುತ್ತದೆ) ಇತ್ಯರ್ಣಃ ಎಂದು ವ್ಯುತ್ಪತ್ತಿ, ಋ ಧಾತುವಿಗೆ 'ಉದಕೇ ನುಟ್‌ಚ ' (ಉ. ಸೂ, ೪-೬೩೬) ನೀರು ಎಂಬ ಅರ್ಥವನ್ನು ವಿವಕ್ಷಿಸಿದಾಗ ಋ ಧಾತುವಿನ ಮುಂದೆ ಅಸುನ್ ಪ್ರತ್ಯಯವೂ, ಅದಕ್ಕೆ ನುಡಾಗಮವೂ ಬರುವುದು ಎಂಬುದರಿಂದ, ಅಸುನ್‌ಪ್ರತ್ಯಯವೂ ನುಡಾಗಮವೂ ಬಂದರೆ ಋ+ನಸ್ ಎಂದಿರುವಾಗ ಗುಣದಿಂದ ಋಗೆ ಅರ್ ಬಂದು ಅರ್+ನಸ್ ಎಂದಿರುವಾಗ **ರಷಾಭ್ಯಾಂನೋಣಃ ಸಮಾನಪದೇ** (ಪಾ. ಸೂ. ೮-೪-೧) ಅಖಂಡಪದದಲ್ಲಿ ರೇಫಷಕಾರಗಳ ಮುಂದಿರುವ ನಕಾರಕ್ಕೆ ಣಕಾರಬರುವುದು ಎಂಬುದರಿಂದ ಣತ್ವ ಬಂದು ರುತ್ವ ವಿಸರ್ಗಗಳು ಬಂದರೆ ಅರ್ಣಃ ಎಂದಾಗುವುದು. ಕೇತುನಾ, ಇದು ಪ್ರಾತಿಪದಿಕಸ್ವರದಿಂದ ಅಂತೋದಾತ್ತ. ವಿಶ್ವಾಃ- ವಿಶ್ವಶಬ್ದವು ಕ್ವನ್‌ಪ್ರತ್ಯಯಾಂತ, ಇಲ್ಲಿ ಆದ್ಯುದಾತ್ತಸ್ವರವು ಬರುವುದು || ೧೨ ||

**ಇಲ್ಲಿಗೆ ೩ನೇ ಸೂಕ್ತವು ಸಂಪೂರ್ಣವು.**

॥ ಓಂ ॥

# ನಾಲ್ಕನೆಯ ಸೂಕ್ತವು

### ಸಾಯಣಭಾಷ್ಯಂ

**ಪ್ರಥಮೇ ಮಂಡಲೇ ದ್ವಿತೀಯಾನುವಾಕೇ ಚತ್ವಾರಿ ಸೂಕ್ತಾನಿ । ತತ್ರ ಸುರೂಪೇತ್ಯಾದಿಕಂ ದಶರ್ಚಂ ಪ್ರಥಮಂ ಸೂಕ್ತಂ ಸುರೂಪಕೃತ್ನುಂ ದಶೇತ್ಯನುಕ್ರಾಂತತ್ವಾತ್ । ಪೂರ್ವವನ್ಮಧುಚ್ಛಂದಸೋ ಗಾಯತ್ರಸ್ಯ ಚಾನುವೃತ್ತೇಸ್ತ್ರೇ ಏವರ್ಷಿಚ್ಛಂದಸೀ। ಇಂದ್ರಂ ಪೃಚ್ಛೇತಿ ಚತುರ್ಥ್ಯಾಮೃಚಿ ಲಿಂಗದರ್ಶನಾದಿಂದ್ರೋ ದೇವತಾ । ಅಭಿಪ್ಲವಷಡಹೇ ಬ್ರಾಹ್ಮಣಾಚ್ಛಂಸಿನಃ ಪ್ರಾತಃಸವನೇ ಸ್ತೋಮವೃದ್ಧಾವಾವಾಪಾರ್ಥಾನಿ ಸುರೂಪಕೃತ್ನುಮೂತಯ ಇತ್ಯಾದೀನಿ ಷಟ್ ಸೂಕ್ತಾನಿ । ಸೂತ್ರಿತಂ ಚಾಭಿಪ್ಲವಪೃಷ್ಠ್ಯಾಹಾನೀತಿ ಖಂಡೇ ಬ್ರಾಹ್ಮಣಾಚ್ಛಂಸಿನಃ ಸುರೂಪಕೃತ್ನುಮೂತಯ ಇತಿ ಷಟ್‌ಸೂಕ್ತಾನಿ । ಅ. ೭-೫ । ಇತಿ । ಆದ್ಯಾನಿ ತ್ರೀಣಿ ಸೂಕ್ತಾನಿ ಮಹಾವ್ರತೇ ನಿಷ್ಕೇವಲ್ಯ ಔಷ್ಣಿಹತೃಚಾಶೀತೌ ಶಸ್ತವ್ಯಾನಿ । ಉಕ್ತಂ ಚ ಶೌನಕೇನ । ಸುರೂಪಕೃತ್ನುಮೂತಯ ಇತಿ ತ್ರೀಣ್ಯೇಂದ್ರ ಸಾನಸಿಂ ರಯಿಮಿತಿ ಸೂಕ್ತೇ । ಐ. ಆ. ೫-೨-೫ । ಇತಿ ಚತುರ್ವಿಂಶೇಽಹನಿ ಮಾಧ್ಯಂದಿನೇ ಸವನೇ ಬ್ರಾಹ್ಮಣಾಚ್ಛಂಸಿನಃ ಸುರೂಪಕೃತ್ನುಮೂತಯ ಇತಿ ವೈಕಲ್ಪಿಕಃ ಸ್ತೋತ್ರಿಯಸ್ತೃಚಃ। ಹೋತ್ರಕಾಣಾಮಿತಿ ಖಂಡೇ ಮದೇ ಮದೇ ಹಿ ನೋ ದದಿಃ ಸುರೂಪಕೃತ್ನುಮೂತಯೇ। ಅ. ೭-೪ । ಇತಿ ಸೂತ್ರಿತತ್ವಾತ್ ॥ ಅಗ್ನಿಷ್ಟೋಮೇ ವೈಶ್ವದೇವಶಸ್ತ್ರೇ ಸುರೂಪಕೃತ್ನುಮೂತಯ ಇತಿ ಧಾಯ್ಯಾ । ಸುರೂಪಕೃತ್ನುಮೂತಯೇ ತಕ್ಷನ್ರಥಂ । ಅ. ೫-೧೮ । ಇತಿ ಸೂತ್ರಿತತ್ವಾತ್ ॥**

## ॥ ಅನುವಾದವು ॥

ನಾವು ಹಿಂದೆ ಹೇಳಿದಂತೆ (ಋ.ಸಂ. ಭಾಗ II, ಪೇಜು ೨ ನೋಡಿ) ಪ್ರಥಮಮಂಡಲದ ಮೊದಲನೆಯ ಅನುವಾಕದ ಮೂರು ಸೂಕ್ತಗಳೂ ಮುಗಿದುವು. ಇಲ್ಲಿಂದ ಮುಂದೆ ಎರಡನೆಯ ಅನುವಾಕವು ಪ್ರಾರಂಭವಾಗುವುದು. ಈ ಅನುವಾಕದಲ್ಲಿ ೪-೭ ಸೂಕ್ತಗಳು ಎಂದರೆ (1) **ಸುರೂಪಕೃತ್ನುಮೂತಯೇ** (2) **ಆ ತ್ವೇತಾ ನಿಷೀದತ** (3) **ಯುಂಜಂತಿ ಬ್ರಧ್ನಮರುಷಂ** (4) **ಇಂದ್ರಮಿದ್ಗಾಥಿನೋ ಬೃಹತ್** ಎಂಬ ನಾಲ್ಕು ಸೂಕ್ತಗಳಿರುವುವು. ಈ ನಾಲ್ಕು ಸೂಕ್ತಗಳಲ್ಲಿ ಪ್ರತಿಯೊಂದರಲ್ಲಿಯೂ ಹತ್ತು ಹತ್ತು ಋಕ್ಕುಗಳಿರುವುವು. ಹಿಂದಿನ ಸೂಕ್ತಗಳ ಋಷಿಯಾದ ಮಧುಚ್ಛಂದಾ ವೈಶ್ವಾಮಿತ್ರನೆಂಬುವನೇ ಈ ನಾಲ್ಕು ಸೂಕ್ತಗಳಿಗೂ ಋಷಿಯು- ಈ ಸೂಕ್ತಕ್ಕೆ ದೇವತೆಯು ಇಂದ್ರನು. ಮೊದಲು ಮೂರು ಋಕ್ಕುಗಳಲ್ಲಿ ಯಾವ ದೇವತೆಯ ಹೆಸರನ್ನೂ ಸ್ಪಷ್ಟವಾಗಿ ಹೇಳಿಲ್ಲ. ನಾಲ್ಕನೆಯ ಋಕ್ಕಿನಲ್ಲಿ **ಇಂದ್ರಂ ಪೃಚ್ಛ** ಎಂದು ಹೇಳಿರುವುದರಿಂದಲೂ ಅಲ್ಲಿಂದ ಮುಂದೆ ೫, ೬, ೯, ೧೦ ನೆಯ ಋಕ್ಕುಗಳಲ್ಲಿಯೂ ಇಂದ್ರಶಬ್ದವು ಪಠಿತವಾಗಿರುವುದರಿಂದಲೂ ಈ ಸೂಕ್ತಕ್ಕೆಲ್ಲಾ ಇಂದ್ರನೇ ದೇವತೆಯು. ಒಂದು ಸೂಕ್ತದಲ್ಲಿರುವ ಋಕ್ಕುಗಳಲ್ಲೆಲ್ಲಾ ದೇವತೆಯ ಹೆಸರು ಪಠಿತವಾಗಿರಬೇಕೆಂಬ ನಿಯಮವೇನೂ ಇಲ್ಲ. ಕೆಲವು ಋಕ್ಕುಗಳಲ್ಲಿದ್ದು ಉಳಿದ ಋಕ್ಕುಗಳು ಆ ದೇವತೆಯ ವಿಷಯವನ್ನು ಪ್ರತಿಪಾದಿಸುವಂ

ತ್ರಿದ್ದರೆ ಸೂಕ್ತದ ಎಲ್ಲಾ ಋಕ್ಕುಗಳಿಗೂ ಅದೇ ದೇವತೆಯೆಂದು ಹೇಳಬೇಕು. ಈ ಸೂಕ್ತದ ವಿನಿಯೋಗಕ್ರಮ ವೇನೆಂದರೆ—ಅಭಿಪ್ಲವಷಡಹವೆಂಬ ಯಾಗದಲ್ಲಿ ಪ್ರಾತಸ್ಸವನಕಾಲದಲ್ಲಿ ಬ್ರಾಹ್ಮಣಾಚ್ಛಂಸೀ ಎಂಬ ಹೋತೃವಿನ ಸಹಾಯಕ ಋತ್ವಿಜನು ಸ್ತೋಮವೃದ್ಧಿಗಾಗಿ ಸುರೂಪಕೃತ್ನುಮೂತಯೇ ಎಂಬ ಈ ಸೂಕ್ತವನ್ನು ಮುಂದಿನ ಐದು ಸೂಕ್ತಗಳನ್ನೂ ಪಠಿಸಬೇಕು. ಈ ವಿಷಯದಲ್ಲಿ—**ಸೂತ್ರಿತಂ ಚಾಭಿಪ್ಲವಷೃಷ್ಠ್ಯಾಹಾನೀತಿ ಖಂಡೇ ಬ್ರಾಹ್ಮಣಾಚ್ಛಂಸಿನಃ ಸುರೂಪಕೃತ್ನುಮೂತಯ ಇತಿ ಷಟ್ ಸೂಕ್ತಾನಿ** (ಆ. ಸೂ. ೭-೫). ಈ ಆರು ಸೂಕ್ತಗಳಲ್ಲಿ ಮೊದಲ ಮೂರುಸೂಕ್ತಗಳು ಮಹಾವ್ರತವೆಂಬ ಕರ್ಮದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳಾಗಿ ಉಪಯೋಗಿಸಲ್ಪಡುವವು ಎಂದು **ಅಭಿಪ್ಲವಷೃಷ್ಠ್ಯಾಹಾನಿ** ಎಂಬ ಖಂಡದಲ್ಲಿ ಹೇಳಿರುವುದು. ಈ ವಿಚಾರದಲ್ಲಿ ಶೌನಕರು ಐತರೇಯ ಆರಣ್ಯಕದ ವಾಕ್ಯವನ್ನು ಉದಹರಿಸಿರುವರು—**ಸುರೂಪಕೃತ್ನುಮೂತಯ ಇತಿ ತ್ರೀಣ್ಯೈಂದ್ರ ಸಾನಸಿಂ ರಯಿಮಿತಿ ಸೂಕ್ತೇ** (ಐ. ಆ. ೫-೨-೫) ಎಂದರೆ **ಸುರೂಪಕೃತ್ನುಮೂತಯೇ** ಎಂದು ಮೊದಲಾದ ಮೂರು ಸೂಕ್ತಗಳನ್ನೂ, **ಐಂದ್ರ ಸಾನಸಿಂ ರಯಿಂ** ಎಂದು ಮೊದಲಾದ ಎರಡು ಸೂಕ್ತಗಳನ್ನು ಪಠಿಸಬೇಕೆಂದರ್ಥವು. ಮತ್ತು ಮೇಲೆ ಹೇಳಿದ ಯಾಗದಲ್ಲಿ ಇಪ್ಪತ್ತನಾಲ್ಕನೆಯ ದಿನದಲ್ಲಿ ಮಾಧ್ಯಂದಿನಸವನದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು **ಸುರೂಪಕೃತ್ನುಮೂತಯೇ** ಎಂಬ ತೃಚವನ್ನು (ಮೂರು ಋಕ್ಕುಗಳನ್ನು) ವೈಕಲ್ಪಿಕವಾಗಿ ಹೇಳಬಹುದು. ಈ ವಿಷಯದಲ್ಲಿ ಆಶ್ವಲಾಯನಸೂತ್ರವು—**ಹೋತ್ರಕಾಣಾಮಿತಿ ಖಂಡೇ ಮದೇ ಮದೇ ಹಿ ನೋ ದದಿಃ ಸುರೂಪಕೃತ್ನುಮೂತಯೇ** ಇತಿ (ಆ.ಸೂ. ೭-೪) ಎಂದರೆ **ಮದೇ ಮದೇ ಹಿ ನೋ ದದಿಃ** (ಋ. ಸಂ. ೧-೮೧-೭) ಎಂಬ ತೃಚವನ್ನೂ **ಸುರೂಪಕೃತ್ನುಮೂತಯೇ** (೧-೪-೧) ಎಂಬ ತೃಚವನ್ನೂ ಪಠಿಸಬೇಕೆಂದು ಹೇಳಿರುವುದು ಮತ್ತು ಅಗ್ನಿಷ್ಟೋಮಯಾಗದಲ್ಲಿ ವೈಶ್ವದೇವಶಸ್ತ್ರಮಂತ್ರವನ್ನು ಪಠಿಸುವಾಗ—**ಸುರೂಪಕೃತ್ನುಮೂತಯೇ** (ಋ. ಸಂ. ೧-೪-೧) ಮತ್ತು **ತಕ್ಷನ್ರಥಂ ಸುವೃತಂ** (ಋ. ಸಂ. ೧-೧೧೧-೧) **ಇತಿ ಸೂತ್ರಿತತ್ವಾತ್** (ಆ. ಸೂ. ೫-೧೮) ಎಂದರೆ, ಈ ಋಕ್ಕುಗಳನ್ನು ವಿಶೇಷಮಂತ್ರಗಳನ್ನಾಗಿ ಪಠಿಸಬಹುದೆಂದು ಆಶ್ವಲಾಯನ ಸೂತ್ರದಲ್ಲಿ ಹೇಳಿರುವುದು.

॥ ಓಂ ॥

## ಸೂಕ್ತ—೪

॥ ಮಂಡಲ—೧ ॥ ಅನುವಾಕ—೨ ॥ ಸೂಕ್ತ—೪ ॥
॥ ಅಷ್ಟಕ —೧ ॥ ಅಧ್ಯಾಯ—೧ ॥ ವರ್ಗ— ೭, ೮ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೧–೧೦ ॥
ಋಷಿಃ—ಮಧುಚ್ಛಂದಾ ವೈಶ್ವಾಮಿತ್ರಃ ।
ದೇವತಾ— ಇಂದ್ರಃ ॥
॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಸುರೂಪಕೃತ್ನುಮೂತಯೇ ಸುದುಘಾಮಿವ ಗೋದುಹೇ ॥
ಜುಹೂಮಸಿ ದ್ಯವಿದ್ಯವಿ ॥ ೧ ॥

॥ ಪದಪಾಠಃ ॥

ಸುರೂಪಕೃತ್ನುಂ । ಊತಯೇ । ಸುದುಘಾಂಽಇವ । ಗೋಽದುಹೇ ॥
ಜುಹೂಮಸಿ । ದ್ಯವಿಽದ್ಯವಿ ॥ ೧ ॥

॥ ಸಾಯಣಭಾಷ್ಯಂ ॥

ಸುರೂಪಕೃತ್ನುಂ ಶೋಭನರೂಪೋಪೇತಸ್ಯ ಕರ್ಮಣಃ ಕರ್ತಾರಮಿಂದ್ರಮೂತಯೇಽಸ್ಮ-ದ್ರಕ್ಷಾರ್ಥಂ ದ್ಯವಿ ದ್ಯವಿ ಪ್ರತಿದಿನಂ ಜುಹೂಮಸಿ । ಆಹ್ವಯಾಮಃ । ಆಹ್ವಾನೇ ದೃಷ್ಟಾಂತಃ। ಗೋದುಹೇ ಗೋದುಗರ್ಥಂ ಸುದುಘಾಮಿವ ಸುಷ್ಠು ದೋಗ್ಧ್ರೀಂ ಗಾಮಿವ । ಯಥಾ ಲೋಕೇ ಗೋರ್ಗೋ ದೋಗ್ಧಾ ತದರ್ಥಂ ತಸ್ಯಾಭಿಮುಖೇನ ದೋಹನೀಯಾಂ ಗಾವಾಹ್ವಯತಿ ತದ್ವತ್ । ವಸ್ತೋರಿತ್ಯಾದಿಷು ದ್ವಾದಶಸ್ವಹರ್ನಾಮಸು ದ್ಯವಿದ್ಯವೀತಿ ಪಠಿತಂ । ಸುರೂಪಕೃತ್ನುಂ । ಕರೋತೀತಿ ಕೃತ್ನುಃ । ಕೃಹ-ನಿಭ್ಯಾಂ ಕ್ನುಃ । ಉ. ३-३೦ । ಕಿತ್ವಾದ್ಗುಣಾಭಾವಃ । ತಕಾರೋಪಜನಶ್ಛಾಂದಸಃ । ಸಮಾಸಾಂತೋ-ದಾತ್ತಃ । ಊತಯೇ । ಅವತೇರ್ಧಾತೋರುದಾತ್ತ ಇತ್ಯನುವೃತ್ತಾವೂತಿಯೂತಿಜೂತಿಸಾತಿಹೇತಿ-ಕೀರ್ತಯಶ್ಚ । ಪಾ. ३-३-೯೭ । ಇತಿ ಕ್ತಿನ್ನುದಾತ್ತೋ ನಿಪಾತಿತಃ । ಸುದುಘಾಂ । ಸುಷ್ಠು ದುಗ್ಧ ಇತಿ-ಸುದುಘಾ । ದುಹಃ ಕಬ್ಘಶ್ಚ । ಪಾ. ३-२-೭೦। ಇತಿ ಕಪ್ಪ್ರತ್ಯಯೋ ಹಕಾರಸ್ಯ ಚ ಘಕಾರಃ । ಕಿತ್ವಾ-ದ್ಗುಣಾಭಾವಃ । ಕಪಃ ಪಿತ್ವಾದನುದಾತ್ತತ್ವೇ ಧಾತುಸ್ವರೇಣೋಕಾರ ಉದಾತ್ತಃ । ಸುಶಬ್ದೇನ ಗತಿ-ಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವೇನ ಸ ಏವ ಸ್ವರಃ । ಇವೇನ ವಿಭಕ್ತ್ಯಲೋಪಃ ಪೂರ್ವಪದ-ಪ್ರಕೃತಿಸ್ವರತ್ವಂ ಚೇತೀವಸಮಾಸೇ ಸ ಏವ ಸ್ವರಃ । ಗಾಂ ದೋಗ್ಧೀತಿ ಗೋಧುಕ್ । ಸತ್ಸೂದ್ವಿಷೇ-ತ್ಯಾದಿನಾ । ಪಾ. ३-२-೬೧ । ಕ್ವಿಪ್ । ಕೃದುತ್ತರಪದಪ್ರಕೃತಿಸ್ವರತ್ವಂ । ಜುಹೂಮಸಿ । ಹ್ವಯತೇ-ರ್ಲಡುತ್ತಮಪುರುಷಬಹುವಚನೇ ಬಹುಲಂ ಛಂದಸೀತಿ ಶಪಃ ಶ್ಲುಃ ॥ ಪಾ. ಪಾ. ೨-೪-೭೬ । ಅಭ್ಯಸ್ತಸ್ಯ ಚ । ಪಾ. ೬-೧-३३ । ಇತ್ಯಭ್ಯಸ್ತಕಾರಣಸ್ಯ ಹ್ವಯತೇಃ ಪ್ರಾಗೇವ ದ್ವಿರ್ವಚನಾತ್ಸಂಪ್ರಸಾರಣಂ । ಸಂಪ್ರಸಾರಣಾಚ್ಚ । ಪಾ. ೬-೧-೧೦೮ । ಇತಿ ಪರಪೂರ್ವತ್ವಂ । ಹಲಃ । ಪಾ. ೬-೪-೨ । ಇತಿ ದೀರ್ಘಃ । ತತಃ ಶ್ಲಾವಿತಿ ದ್ವಿರ್ವಚನಂ । ಅಭ್ಯಾಸಸ್ಯ ಹ್ರಸ್ವಃ । ಪಾ. ೭-೪-೫೯ । ಚುತ್ವಜಶ್ತ್ವೇ । ಪಾ. ೭-೪-೬೨ । ೮-೪-೫३ । ಇದಂತೋ ಮಸಿಃ । ಪಾ. ೭-೧-೪೬ । ಇತೀಕಾರಾಗಮಃ । ಪ್ರತ್ಯಯಸ್ವರೇಣ ಮಕಾರಸ್ಯೋ-ದಾತ್ತತ್ವಂ । ದ್ಯವಿ ದ್ಯವಿ । ದ್ಯೋಶಬ್ದಃ ಪ್ರಾತಿಪದಿಕಸ್ವರೇಣಾಂತೋದಾತ್ತಃ । ನಿತ್ಯವೀಪ್ಸಯೋಃ । ಪಾ. ೮-೧-೪ । ಇತಿ ದ್ವಿರ್ಭಾವಃ ತಸ್ಯ ಪರಮಾಮ್ರೇಡಿತಂ । ಪಾ. ೮-೧-೨ । ಅನುದಾತ್ತಂ ಚ । ಪಾ. ೮-೧-३ । ಇತಿ ದ್ವಿತೀಯಸ್ಯಾನುದಾತ್ತತ್ವಂ ॥

॥ ಪ್ರತಿಪದಾರ್ಥ ॥

ಗೋದುಹೇ—ಹಾಲನ್ನು ಕರೆಯುವುದಕ್ಕಾಗಿ । ಸುದುಘಾಮಿವ—ಹಾಲುಕರೆಯುವ (ಅಥವಾ ಹಾಲನ್ನು ಕೊಡುವ) ಹಸುವನ್ನು ಕರೆಯುವಂತೆ । ಸುರೂಪಕೃತ್ನುಂ—ಒಳ್ಳೆಯ (ಸುಂದರವಾದ) ಕೆಲಸಗಳನ್ನು

ಮಾಡುವ (ಇಂದ್ರನನ್ನು) | ಊತಯೇ—(ನಮ್ಮ) ರಕ್ಷಣೆಗಾಗಿ | ದ್ಯವಿದ್ಯವಿ—ಪ್ರತಿದಿನವೂ | ಜುಹೂಮಸಿ—ಆಹ್ವಾನಮಾಡುತ್ತೇವೆ (ನಮ್ಮ ಸಮೀಪಕ್ಕೆ ಬರುವಂತೆ ಕರೆಯುತ್ತೇವೆ).

॥ ಭಾವಾರ್ಥ ॥

ಹಾಲನ್ನು ಕೊಡುವ ಹಸುವನ್ನು ನಾವು ಪ್ರೀತಿಯಿಂದ ನಮ್ಮ ಸಮೀಪಕ್ಕೆ ಕರೆಯುವಂತೆ (ಬರಮಾಡಿಕೊಳ್ಳುವಂತೆ) ವಿಚಿತ್ರವಾದ ಕೆಲಸಗಳನ್ನು ಎಂದರೆ ಸಾಹಸಕೃತ್ಯಗಳನ್ನು ಮಾಡಬಲ್ಲ ಇಂದ್ರನನ್ನು ನಮ್ಮ ರಕ್ಷಣೆಗಾಗಿ ನಾವು ಪ್ರತಿದಿನವೂ ಕರೆಯುತ್ತೇವೆ.

English Translation.

We invoke the performer of beautiful actions (Indra) day by day for our protection like a good milch-cow for the purpose of milking.

॥ ವಿಶೇಷವಿಷಯಗಳು ॥

ಸುರೂಪಕೃತ್ನುಂ—ಈ ಶಬ್ದಪ್ರಯೋಗವು ಈ ಋಕ್ಕಿನಲ್ಲಲ್ಲದೆ ಋಗ್ವೇದದಲ್ಲಿ ಮತ್ತೆಲ್ಲಿಯೂ ಇಲ್ಲ. ಭಾಷ್ಯಕಾರರು ಈ ಪದಕ್ಕೆ-ಶೋಭನರೂಪೋಪೇತಸ್ಯ ಕರ್ಮಣಃ ಕರ್ತಾರಂ—ಒಳ್ಳೆಯ ರೂಪದಿಂದ ಕೂಡಿದ ಕಾರ್ಯಗಳನ್ನು ಮಾಡುವ ಎಂದು ಅರ್ಥಮಾಡಿರುವರು. ಸ್ಕಂದಸ್ವಾಮಿ ಮತ್ತು ವೆಂಕಟಮಾಧವರ ಅರ್ಥವಿವರಣೆಯೂ ಇದೇ ರೀತಿ ಇದೆ. Griffith ಮತ್ತು Macdonell ಎಂಬುವರು ಸಾಯಣರ ಅರ್ಥವನ್ನೇ ಅನುಸರಿಸಿದಾರೆ. Grassmann ಎಂಬ ಜರ್ಮನ್ ಪಂಡಿತನು—" He who knows to perform beautiful things " —ಸುಂದರಕೃತ್ಯಗಳನ್ನು ಮಾಡಲು ಸಾಮರ್ಥ್ಯವುಳ್ಳ ಎಂದೂ Ludwig ಪಂಡಿತನು- " Creater of beautiful forms "—ಸುಂದರ ಆಕಾರಗಳನ್ನು ನಿರ್ಮಿಸಬಲ್ಲ ಎಂದೂ ಅರ್ಥಮಾಡಿದಾರೆ. ಆದರೆ Geldner ಎಂಬ ಪಂಡಿತನು—" when he assumes his good forms or he who shows himself from his best side "—ತನ್ನ ಉತ್ತಮವಾದ ರೂಪವನ್ನು ತೋರ್ಪಡಿಸುವ ಎಂದು ಹೇಳಿ ಈ ಅಭಿಪ್ರಾಯಸಮರ್ಥನೆಗಾಗಿ—

ರೂಪಂರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ |
ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾ ದಶ ||

(ಋ. ಸಂ. ೬-೪೭-೧೮)

ಎಂಬ ಋಕ್ಕನ್ನು ಉದಾಹರಿಸಿದಾನೆ. ಇದರ ಅರ್ಥವು—" He has become suitable to every form ; this true form of his is to be recognised again and again. Indra assumes many forms by virtue of his mysterious power ; for, ten hundred horses have been yoked for him "—ಇಂದ್ರನು ತನ್ನ ಮಾಯಾಶಕ್ತಿಯಿಂದ ಅನೇಕ ರೂಪಗಳನ್ನು ಧರಿಸಲು ಸಮರ್ಥನು ಎಂದು ಮುಖ್ಯಾಭಿಪ್ರಾಯವು. ಮತ್ತು—

**ರೂಪಂರೂಪಂ ಮಘವಾ ಬೋಭವೀತಿ ಮಾಯಾಃ ಕೃಣ್ವಾನಸ್ತನ್ವಂ೧ಪರಿ ಸ್ವಾಂ ॥**
**(ಋ. ಸಂ. ೩-೫೩-೮)**

ಎಂಬ ಋಕ್ಕಿನಲ್ಲಿಯೂ ಸಹ ಇಂದ್ರನು ಅನೇಕ ರೂಪಗಳನ್ನು ಧರಿಸಲು ಸಮರ್ಥನೆಂದು ಹೇಳಿರುವುದು. ನಿರುಕ್ತದಲ್ಲಿಯೂ ಸಹ (ನಿ. ೧೦-೧೭) ಈ ಋಕ್ಕಿಗೆ ಈ ರೀತಿ ವಿವರಣೆ ಇರುವುದು—

> **ವಿಶ್ವಾಮಿತ್ರಸ್ಯಾರ್ಷಂ । ಯಾವಂತಿ ಕಾನಿಚಿದ್ರೂಪಾಣಿ ಮಘವಾ ಇಂದ್ರೋ ಭವಿತುಮಿಚ್ಛತಿ ತಾನಿ ಸರ್ವಾಣ್ಯಪ್ರತಿಬಂಧೇನ ಬೋಭವೀತಿ ಪುನಃಪುನರ್ಭವತೀತಿ । ಕಥಂ? ಮಾಯಾಃ ಕೃಣ್ವಾನಃ ಇದಂ ಭವಾಮೀದಂ ಭವಾಮಿತ್ಯೇವಂ " ತನ್ವಂ ಪರಿ ಸ್ವಾಂ " ಸ್ವಾಂ ತನುಂ ತತ್ತದಾಕೃತ್ಯಾನೇಕವಿಧಾಂ ವಿಕುರ್ವಾಣಃ । ತೇನಾಸಾವಚಿಂತ್ಯಪ್ರಭಾವತ್ವಾಚ್ಛಕ್ನೋತಿ ತತ್ತದ್ರೂಪಮಾವೇಷ್ಟುಂ ॥ ಇತ್ಯಾದಿ**

ಎಂದರೆ ಈ ಋಕ್ಕಿನಲ್ಲಿ ವಿಶ್ವಾಮಿತ್ರಋಷಿಯು ಈ ರೀತಿ ಹೇಳಿರುವನು—

ಇಂದ್ರನು ತನ್ನ ಮಾಯಾಶಕ್ತಿಯಿಂದ ತನ್ನ ಶರೀರವನ್ನು ಅನೇಕವಿಧವಾಗಿ ಪರಿವರ್ತನೆಗೊಳಿಸಲು ಎಂದರೆ ಕಾಲೋಚಿತವಾಗಿ ಅನೇಕವಿಧವಾದ ಶರೀರಾಕೃತಿಗಳನ್ನು ಧರಿಸಲು ಸಮರ್ಥನು ಎಂದು. ಶತ್ರುಸಂಹಾರ ಕಾಲದಲ್ಲಿ ಭಯಂಕರವಾದ ರೂಪವನ್ನೂ ಭಕ್ತರ ಅಥವಾ ಸ್ತೋತ್ರಮಾಡುವ ಜನರ ಇಷ್ಟಾರ್ಥಗಳನ್ನು ಸಲ್ಲಿಸುವಾಗ ಸುಂದರವಾದ ರೂಪವನ್ನು ಧರಿಸಲು ಶಕ್ತಿಯುಳ್ಳವನೆಂದೂ ಇವನಿಗೆ ಈ ವಿಧವಾದ ಕಾರ್ಯಗಳಿಗೆ ತಕ್ಕ ಮಾಯಾ ಶಕ್ತಿಯಿರುವುದೆಂದೂ ಅಭಿಪ್ರಾಯವು. ಆದುದರಿಂದ ಪ್ರಸಕ್ತವಾದ ಋಕ್ಕಿನಲ್ಲಿ **ಸುರೂಪಕೃತ್ನುಂ** ಎಂಬ ಪದವು ನಮ್ಮ ಸಂರಕ್ಷಣೆಗಾಗಿ ಪ್ರೀತಿಪುರಸ್ಸರವಾಗಿ ಇಂದ್ರನನ್ನು ಆಹ್ವಾನಮಾಡುವುದರಿಂದ ಇಂದ್ರನು ತನ್ನ ಮಾಯಾ ಶಕ್ತಿಯಿಂದ ಸುಂದರವಾದ ಎಂದರೆ ಸೌಮ್ಯವಾದ ರೂಪವನ್ನು ಧರಿಸಿ ನಮ್ಮನ್ನು ಕಾಪಾಡುವುದಕ್ಕಾಗಿ ಇಲ್ಲಿಗೆ ಬರಲಿ ಎಂದು ಸೂಚಿಸುವುದಕ್ಕಾಗಿ ಋಷಿಯು ಈ ಶಬ್ದವನ್ನು ಪ್ರಯೋಗಮಾಡಿರಬಹುದು. **ಕೃತ್ನುಶಬ್ದವು** ಪರದಲ್ಲಿ ಬರುವ **ಲೋಕಕೃತ್ನುಂ** ಎಂಬ ಪದವು—

> **ತಂ ತೇ ಮದಂ ಗೃಣೀಮಸಿ ವೃಷಣಂ ಪೃತ್ಸು ಸಾಸಹಿಂ ।**
> **ಉ ಲೋಕಕೃತ್ನುಮದ್ರಿವೋ ಹರಿಶ್ರಿಯಂ ॥** (ಋ. ಸಂ. ೭-೧೫-೪)
> **ತಂ ತ್ವಾ ಮದಾಯ ಘೃಷ್ವಯ ಉ ಲೋಕಕೃತ್ನುಮೀಮಹೇ ।**
> **ತವ ಪ್ರಶಸ್ತಯೇ ಮಹೀಃ ॥** (ಋ. ಸಂ. ೯-೨-೮)

ಎಂಬ ಎರಡು ಋಕ್ಕುಗಳಲ್ಲಿ ಮಾತ್ರವಿರುವುದು. ಈ ಪದವು ಎರಡು ಋಕ್ಕುಗಳಲ್ಲಿಯೂ ಇಂದ್ರನ ಪರವಾಗಿಯೇ ಇರುವುದು ಎಂದರೆ ಇಂದ್ರನಿಗೆ ಅನ್ವಯಿಸುವುದು.

**ಊತಯೇ**—ರಕ್ಷಣೆಗಾಗಿ, ಕಾಪಾಡುವುದಕ್ಕಾಗಿ. ಈ ಶಬ್ದವು ಮತ್ತು ಇದರ ರೂಪಾಂತರಗಳಾದ **ಊತಯಃ, ಊತಿಃ, ಊತಿಭಿಃ, ಊತಿಂ ಊತಿಷು ಊತೀ, ಊತೀಃ, ಊತ್ಯಾ** ಎಂಬ ಶಬ್ದಗಳು ಋಗ್ವೇದದಲ್ಲಿ ಅನೇಕಕಡೆ ಉಪಯೋಗಿಸಲ್ಪಟ್ಟಿವೆ. ನಿರುಕ್ತದಲ್ಲಿ (ನಿ. ೫-೩) **ಊತಿಃ**—ಅವನಂ ಎಂದು ಹೇಳಿ,

**ಆ ತ್ವಾ ರಥಂ ಯಥೋತಯೇ ಸುಮ್ನಾಯ ವರ್ತಯಾಮಸಿ |** (ಋ. ಸಂ. ೬-೫-೧)

ಎಂಬ ಉದಾಹರಣೆಯಾಗಿ ಕೊಟ್ಟಿರುವ ಋಕ್ಕಿನಲ್ಲಿರುವ **ಊತಯೇ** ಎಂಬ ಶಬ್ದಕ್ಕೆ ಅವನಾಯ, ರಕ್ಷಣಾಯ ಎಂದು ಅರ್ಥವಿವರಣೆಯನ್ನು ಕೊಟ್ಟಿರುವರು. ಇಂತಹ ಉದಾಹರಣೆಗಳು ಋಗ್ವೇದದಲ್ಲಿ ಬೇಕಾದಷ್ಟಿವೆ. ಶತ್ರುಗಳಿಂದ ಬಾಧೆಯನ್ನು ತಪ್ಪಿಸಿ ಅಭಯವನ್ನುಂಟುಮಾಡಬೇಕೆಂದೂ ತಮ್ಮನ್ನು ರಕ್ಷಿಸಬೇಕೆಂದೂ ಇಂದ್ರನನ್ನು ಪ್ರಾರ್ಥಿಸುವ ಋಕ್ಕುಗಳು ಋಗ್ವೇದದಲ್ಲಿ ಅನೇಕಕಡೆ ಇವೆ.

**ತ್ರಾತಾರಮಿಂದ್ರಮವಿತಾರಮಿಂದ್ರಂ ಹವೇಹವೇ ಸುಹವಂ ಶೂರಮಿಂದ್ರಂ ||**
(ಋ. ಸಂ. ೬-೪೭-೧೧)

**ಬಾಧತಾಂ ದ್ವೇಷೋ ಅಭಯಂ ಕೃಣೋತು ಸುವೀರ್ಯಸ್ಯ ಪತಯಃ ಸ್ಯಾಮ ||**
(ಋ. ಸಂ. ೬-೪೭-೧೨)

ಇಂದ್ರನ ವಿಷಯವಾಗಿ ಇಂತಹ ಋಕ್ಕುಗಳು ಅನೇಕವಿವೆ.

**ಸುದುಘಾಮಿವ ಗೋದುಹೇ**— ಹಾಲಿಗಾಗಿ ಹಸುವನ್ನು ಕರೆಯುವಂತೆ– ಈ ಉಪಮಾನವು ಅಥವಾ ಇದೇ ಅರ್ಥವುಳ್ಳ ಉಪಮಾನವು (ಉಪ್ಪೋಪಮಾ) ಋಗ್ವೇದದಲ್ಲಿ ಅನೇಕಕಡೆ ಉಪಯೋಗಿಸಿರುವುದರಿಂದ ಆ ಕಾಲದಲ್ಲಿ ಈ ವಾಕ್ಯವನ್ನು ಉದಹರಿಸುವುದು ಬಳಕೆಯಲ್ಲಿತ್ತೆಂದು ತೋರುವುದು.

**ತಂ ತ್ವಾ ವಯಂ ಸುದುಘಾಮಿವ ಗೋದುಹೋ ಜುಹೂಮಸಿ ಶ್ರವಸ್ಯವಃ ||**
(ಋ. ಸಂ. ೮-೫೨-೪)

**ಇಂದ್ರಂ ಧೇನುಂ ಸುದುಘಾಮನ್ಯಾಮಿಷಮುರುಧಾರಾಮರಂಕೃತಂ |** (ಋ. ಸಂ. ೮-೧-೧೦)
**ಉಪಹ್ವಯೇ ಸುದುಘಾಂ ಧೇನುಮೇತಾಂ ಸುಹಸ್ತೋ ಗೋಧುಗುತದೋಹದೇನಾಂ |**
(ಋ. ಸಂ. ೧-೧೬೪-೨೬)

ಹಾಲನ್ನು ಕೊಡುವ ಹಸುವು ಎಲ್ಲರಿಗೂ ಪ್ರಿಯವಾಗಿರುವುದಷ್ಟೆ. ಅದರಂತೆ ಶತ್ರುಗಳ ಬಾಧೆಯಿಂದ ಕಾಪಾಡುವ ಇಂದ್ರನು ಎಲ್ಲರಿಗೂ ಬೇಕಾದವನೆಂದಭಿಪ್ರಾಯವು.

**ದ್ಯವಿದ್ಯವಿ**— ಪ್ರತಿದಿನವೂ. ನಿತ್ಯವೀಪ್ಸಯೋರಿತಿ ದ್ವಿರ್ಭಾವಃ (ಪಾ. ೮-೧-೪) ಒಂದು ಶಬ್ದವು ಎರಡಾವೃತ್ತಿ ಪಠಿತವಾದರೆ ಪ್ರತಿಯೊಂದೂ ಎಂದು ಅಭಿಪ್ರಾಯವು. ಉದಾ.— **ದಿವೇದಿವೇ, ಅಹರಹಃ, ಮಾಸಿಮಾಸಿ, ಯಜ್ಞೇಯಜ್ಞೇ, ಭರೇಭರೇ ಹವೇಹವೇ, ದಮೇದಮೇ, ಇತ್ಯಾದಿ.**

|| ವ್ಯಾಕರಣಪ್ರಕ್ರಿಯಾ ||

## ೪ ನೆಯ ಸೂಕ್ತ

**ಸುರೂಪ ಕೃಕ್ನುಂ-ರು ಶಬ್ದೇ-ಧಾತು.** ಇದರಮುಂದೆ **ಖಷ್ಪ ಶಿಲ್ಪ ಶಷ್ಪ ಬಾಷ್ಪ ರೂಪ ಪರ್ಪ ತಲ್ಪಾಃ** (ಉ. ಸೂ. ೬-೩೦೮) ಖನು ಅವದಾರಣೇ, ಶೀಲಸಮಾಧೌ, ಶಸುಹಿಂಸಾಯಾಂ, ಬಾಧೃ ಲೋಡನೇ ರುಶಬ್ದೇ, ಪೄಪಾಲನಪೂರಣಯೋಃ, ತಲಪ್ರತಿಷ್ಠಾಕರಣೇ, ಈ ಏಳು ಧಾತುಗಳಮುಂದೆ ಪ ಎಂಬ ಪ್ರತ್ಯ

ಯವೂ, ಕೆಲವುಕಾರ್ಯಗಳೂ ನಿಪಾತಿಸಲ್ಪಡುವವು ಎಂಬುದರಿಂದ ಪಪ್ರತ್ಯಯ ಬರುತ್ತದೆ. ರು+ಪ, ಈಗ ನಿಪಾತನದಿಂದಲೇ ದೀರ್ಘ ಬಂದರೆ ರೂಪ ಎಂದಾಗುವುದು , ರೂಪ್ಯತೇ ಇತಿ ರೂಪಂ ಎಂದು ಇಲ್ಲಿ ವಿಗ್ರಹವು. ಅಂದರೆ ಜನರಿಂದ ಸ್ತೋತ್ರಮಾಡಲ್ಪಡುವುದರಿಂದ ರೂಪ, ಎಂದು ಹೆಸರಾಗಿದೆ ಎಂದು ಅರ್ಥ. ಶೋಭನಂ ರೂಪಂ ಯಸ್ಯ ತತ್ ಎಂದು ಬಹುವ್ರೀಹಿ ಸಮಾಸ—ಸುರೂಪಂ ಎಂದಾಗುವುದು. ಸುರೂಪಸ್ಯ ಕೃತ್ನುಃ ಎಂದು ನಂತರ ಷಷ್ಠೀಸಮಾಸ. ಕರೋತಿ ಇತಿ ಕೃತ್ನುಃ- 'ಕೃಹನಿಭ್ಯಾಂ ಕ್ನುಃ' ( ಉ. ಸೂ. ೩-೩೧೦ ) ಡುಕೃಞ್ ಕರಣೇ-ಹನ ಹಿಂಸಾಗತ್ಯೋಃ ಎಂಬ ಧಾತುಗಳಿಗೆ ಕ್ನು ಪ್ರತ್ಯಯಬರುವುದು- ಕ್ನು ಬಂದರೆ-ಕೃ+ನು ಎಂಬಲ್ಲಿ ಪ್ರತ್ಯಯವು ಕಿತ್ತಾದ್ದರಿಂದ ಗುಣಬರುವುದಿಲ್ಲ, ಛಂದಸ್ಸಾದ್ದರಿಂದ ತಕಾರವು ಹೆಚ್ಚಾಗಿ ಸೇರಿಕೊಳ್ಳುವುದು. ಉಣಾದಿಯಲ್ಲಿ ಕೃಹನಿಭ್ಯಾಂ ಕ್ತ್ನುಃ (ಉ. ಸೂ. ೩-೩-೧೦) ಎಂದು ತಕಾರದಿಂದ ಕೂಡಿರುವ ಪ್ರತ್ಯಯವೇ ಯದ್ಯಪಿ ವಿಧಿಸಿದೆ, ಆದುದರಿಂದಲೇ ಹನ್-ಧಾತುವಿನ ಮುಂದೆ ಕ್ತ್ನು-ಪ್ರತ್ಯಯಬಂದು ಹತ್ನುಃ ಎಂದಾಗುತ್ತೆ. ಆದರೂ ತಕಾರಪಾಠ ಇಲ್ಲ ಎಂದು ಇಟ್ಟುಕೊಂಡು ಭಾಷ್ಯದಲ್ಲಿ, ಛಾಂದಸವಾಗಿ ತಕಾರವನ್ನು ಸೇರಿಸಿಕೊಳ್ಳಬೇಕೆಂದು ಹೇಳಲಾಗಿದೆ. ಇಲ್ಲಿ ರೂಪ ಎಂಬೆಡೆ ಧಾತೋಃ (ಪಾ. ಸೂ. ೬-೧-೧೬೨) ಎಂಬುದರಿಂದ ಧಾತುವಿನ ಉಕಾರ ಉದಾತ್ತ-ಪ್ರತ್ಯಯವನ್ನು ಹಚ್ಚಿದ ನಂತರ ಆದ್ಯುದಾತ್ತಶ್ಚ (ಪಾ. ಸೂ. ೩-೧-೩) ಎಂಬುದರಿಂದ ಸತಿಶಿಷ್ಟವಾದ ಪ್ರತ್ಯಯಾದ್ಯುದಾತ್ತ ಬರಲು ಶೇಷಾನುದಾತ್ತಸ್ವರದಿಂದ ಊಕಾರ ಅನುದಾತ್ತ. ಅಂತು ರೂಪ ಎಂಬುದು ಅಂತೋದಾತ್ತ. ಸುಶಬ್ದದೊಂದಿಗೆ ಬಹುವ್ರೀಹಿ ಬಂದರೆ, ಸಮಾಸಸ್ಯ (ಪಾ. ಸೂ. ೬-೧-೨೨೩) ಎಂಬ ಅಂತೋದಾತ್ತವನ್ನು ಬಾಧಿಸಿ ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್, (ಪಾ. ಸೂ- ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಪ್ರಾಪ್ತವಾದರೆ ಇದು ನಞ್‌ಸುಭ್ಯಾಮ್ (ಪಾ. ಸೂ. ೬-೨-೧೭೨) ಬಹುವ್ರೀಹಿ ಸಮಾಸದಲ್ಲಿ ನಞ್‌ಸು-ಇವುಗಳ ಮುಂದೆ ಇರುವ ಉತ್ತರಪದವು ಅಂತೋದಾತ್ತ ವಾಗುವುದು ಎಂಬುದರಿಂದ ಸುರೂಪ ಎಂಬುದು ಅಂತೋದಾತ್ತ. ಮಿಕ್ಕ ಎರಡು ಸ್ವರಗಳೂ ಶೇಷಾನುದಾತ್ತಸ್ವರದಿಂದ ಅನುದಾತ್ತಗಳು- ಕೃತ್ನುಶಬ್ದದಲ್ಲಿ ತ್ನು ಪ್ರತ್ಯಯಸ್ವರಬಂದು ಶೇಷಾನುದಾತ್ತದಿಂದ ಕೃ ಎಂಬುದು ಅನುದಾತ್ತ-ಕೃತ್ನುಎಂಬುದು ಅಂತೋದಾತ್ತ-ಸುರೂಪಸ್ಯ ಕೃತ್ನುಃ ಎಂದು ಷಷ್ಠೀಸಮಾಸ ಮಾಡಿದಾಗ, ಸುರೂಪಕೃತ್ನು ಎಂಬಲ್ಲಿ ಸಮಾಸಸ್ಯ ಎಂಬುದರಿಂದ ಅಂತೋದಾತ್ತ ಬರುವುದು ಸುರೂಪಕೃತ್ನು- ಎಂಬುದರ ಮುಂದೆ ದ್ವಿತೀಯಾ ಏಕವಚನದ ಅಮ್ ಪ್ರತ್ಯಯ ಹಚ್ಚಬೇಕು. ಅನುದಾತ್ತೌ ಸುಪ್ಪಿತೌ (ಪಾ. ಸೂ. ೩-೧-೪) ಎಂಬುದರಿಂದ ಅಮ್—ಅನುದಾತ್ತ. ಕೃತ್ನು—ಅಮ್ ಎಂಬಲ್ಲಿ ಅಮಿಪೂರ್ವಃ (ಪಾ.ಸೂ. ೬-೧-೧೦೭) ಎಂಬುದರಿಂದ ತ್ನು ಎಂಬಲ್ಲಿಯ ಉದಾತ್ತ ಉಕಾರ-ಅಮ್ ನ ಅನುದಾತ್ತ ಅಕಾರ, ಇವೆರಡಕ್ಕೂ ಪೂರ್ವರೂಪದಿಂದ ಏಕಾದೇಶವಾಗಿ ಉಕಾರ ಬರುವುದು. ಅದು ಏಕಾದೇಶ ಉದಾತ್ತೇನೋದಾತ್ತಃ, (ಪಾ.ಸೂ. ೮-೨-೫) ಎಂಬುದರಿಂದ ಉದಾತ್ತವಾಗುವುದು, ಏವಂಚ ಸುರೂಕೃತ್ನುಮ್ ಎಂಬಲ್ಲಿ ತ್ನು ನ ಉಕಾರ ಉದಾತ್ತ ಮಿಕ್ಕ ಅಚ್ಚುಗಳು ಅನುದಾತ್ತಗಳು ಎಂದು ಏರ್ಪಟ್ಟಿತು. ಊತಯೇ—ಊತಿಯೂತಿಜೂತಿ-ಸಾತಿ ಹೇತಿ ಕೀರ್ತಯಶ್ಚ (ಪಾ. ಸೂ. ೩-೩-೯೭) ಮಂತ್ರೇವೃಷೇಷಪಚಮನವಿದಭೂವೀರಾ ಉದಾತ್ತಃ ಎಂಬ ಪೂರ್ವಸೂತ್ರದಲ್ಲಿರುವ ಉದಾತ್ತಪದವು ಇಲ್ಲಿಗೆ ಅನುವೃತ್ತವಾಗುವುದು. ಊತಿ, ಇತ್ಯಾದಿಕ್ತಿನ್ ಪ್ರತ್ಯಯಾಂತ ಶಬ್ದಗಳು ಕ್ತಿನ್ನಂತವಾಗಿ ನಿಪಾತಿಸಲ್ಪಡುವುವು. ಅವು ಅಂತೋದಾತ್ತಗಳಾಗುವುವು ಎಂಬುದರಿಂದ ಊತಿ ಎಂಬುದು ಅಂತೋದಾತ್ತ, ಅವ ರಕ್ಷಣೆ ಧಾತುವಿಗೆ ಕ್ತಿನ್ ಪ್ರತ್ಯಯವನ್ನಿಟ್ಟರೆ ಜ್ವರತ್ವರಸ್ರಿವ್ಯವಿ (ಪಾ.ಸೂ. ೬-೪-೨೦) ಇತ್ಯಾದಿ ಸೂತ್ರದಿಂದ ಉಪಧಾವಕಾರಗಳಿಗೆ ಊಠ್ ಬಂದರೆ ಊತಿ ಎಂದಾಗುತ್ತೆ. ಇಲ್ಲಿ ಧಾತುಸ್ವರಕ್ಕೆ ಪ್ರತ್ಯಯಸ್ವರದಿಂದಲೂ, ಅದಕ್ಕೆ ನಿತ್ಸ್ವರದಿಂದಲೂ ಬಾಧಬರುವುದರಿಂದ ನಿತ್ಸ್ವರವಿಲ್ಲಬೇಕಾಗಿ ಬಂದರೆ ಅದಕ್ಕೂ ಬಾಧಕವಾಗಿ ನಿಪಾತನದಿಂದ ತಿ ಯ ಇಕಾರ ಉದಾತ್ತ. ಊ-ಎಂಬುದು ಶೇಷಾನುದಾತ್ತದಿಂದ ಅನು

**ದಾತ್ತ**-ಊತಿಶಬ್ದದ ಮುಂದೆ ಚತುರ್ಥೀವಿಭಕ್ತಿ ಙೇಪ್ರತ್ಯಯ ಹಚ್ಚಿದರೆ-ಊತಿ+ಎ ಈಗ **ಘೇರ್ಙಿತಿ** (ಪಾ ಸೂ. ೭-೩೧೧೧) ಸಖಿ ಶಬ್ದವನ್ನು ಬಿಟ್ಟು ನದೀ ಸಂಜ್ಞೆಯನ್ನು ಹೊಂದದೇ ಇರುವ ಹ್ರಸ್ವ ಇಕಾರ-ಹ್ರಸ್ವ ಉಕಾರಗಳನ್ನು ಕೊನೆಯಲ್ಲಿ ಹೊಂದಿರುವ ಶಬ್ದಗಳಿಗೆ ಘಿ-ಎಂದು ಸಂಜ್ಞೆ-ಇಂತಹ ಶಬ್ದಕ್ಕೆ ಙಕಾರೇತ್ಸಂಜ್ಞಕ ಪ್ರತ್ಯಯವು ಮುಂದೆ ಇರುವಾಗ ಗುಣಬರುವುದು, ಎಂಬುದರಿಂದ ಗುಣಬಂದರೆ- ಊತೇ+ಏ-ಅಯಾದೇ- ಊತಯೇ ಎಂದಾಗುತ್ತೆ. ಇಲ್ಲಿ ಙೇಪ್ರತ್ಯಯ ಸುಪ್ ಆದ್ದರಿಂದ ಅನುದಾತ್ತ-ಙೇಪ್ರತ್ಯಯವನ್ನು ನಿಮಿತ್ತಮಾಡಿಕೊಂಡು ಬಂದ ಗುಣವು ಉದಾತ್ತವಾದ ತಿ-ಯ ಇಕಾರದ ಸ್ಥಾನದಲ್ಲಿ ಬರುವುದರಿಂದ ಉದಾತ್ತ, ಅದರ ಸ್ಥಾನದಲ್ಲಿ ಬಂದ ಅಯ್ ಆದೇಶವೂ ಸ್ಥಾನಿವದ್ಭಾವದಿಂದ ಉದಾತ್ತ. ಅಂತು ಊತಯೇ ಎಂಬಲ್ಲಿ ಊ ಎಂಬ ಮೊದಲನೆಯ ಅಚ್ಚು ಅನುದಾತ್ತ ಎರಡನೆಯದು ಉದಾತ್ತ, ಮೂರನೆಯದು 'ಉದಾತ್ತಾದನುದಾತ್ತಸ್ಯಸ್ವರಿತಃ' (ಪಾ. ಸೂ. ೮-೪-೬೬) ಉದಾತ್ತದ ಪರದಲ್ಲಿರುವ ಅನುದಾತ್ತವು ಸ್ವರಿತವಾಗುವುದು ಎಂಬುದರಿಂದ ಸ್ವರಿತವು. **ಸುದುಘಾಂ:—** ಸುಷ್ಟು ದುಗ್ಧೇ (ಚೆನ್ನಾಗಿಕರೆಯುವುದು) ಇತಿ ಸುದುಘಾ. ದುಹ ಪ್ರಪೂರಣೇ ಧಾತುವಿಗೆ **ದುಹಃಕಬ್‌ಘಶ್ಚ** (ಪಾ. ಸೂ. ೩-೨-೭೦) ಸುಬಂತವು ಉಪಪದವಾಗಿರುವಾಗ ದುಹ ಧಾತುವಿನ ಮುಂದೆ ಕಪ್‌ಪ್ರತ್ಯಯ ಬರುವುದು ದುಹ್‌ನ ಹಕಾರಕ್ಕೆ ಘ್ ಆದೇಶಬರುವುದು ಎಂಬುದರಿಂದ ಕಪ್ರತ್ಯಯ ಬಂದರೆ ದುಹ್+ಅ-ಇದರಿಂದಲೇ ಹ್‌ಗೆ ಘಾದೇಶ ಬಂದರೆ ದುಘ್+ಅ, ಪ್ರತ್ಯಯವು ಕಿತ್ತಾದ್ದರಿಂದ ಲಘೂಪಧ ಗುಣಬರುವುದಿಲ್ಲ. ಕಪ್ ಪ್ರತ್ಯಯವು ಪಿತ್ತಾದ್ದರಿಂದ 'ಅನುದಾತ್ತಸುಪ್ಪಿತೌ' ಎಂಬುದರಿಂದ ಅನುದಾತ್ತ. ದುಹ್‌ನ ಉಕಾರಕ್ಕೆ **ಧಾತೋಃ** (ಪಾ. ಸೂ ೬-೧-೧೬೨) ಎಂಬುದರಿಂದ ಉದಾತ್ತ ಬರುವುದು. ಸು ಶಬ್ದದೊಡಿಗೆ ದುಘ್ ಎಂಬುದಕ್ಕೆ ಸಮಾಸಮಾಡಿದರೆ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಪೂರ್ವದಲ್ಲಿ ಹೇಳಿದ ಸ್ವರವೇ ನಿಲ್ಲುವುದು. ಸ್ತ್ರೀಲಿಂಗದಲ್ಲಿ ಟಾಪ್ ಬಂದರೆ ಸುದುಘಾ ಎಂದಾಗುವುದು 'ಸುದುಘಾಮ್' ಎಂಬ ದ್ವಿತೀಯಾ ಏಕವಚನಾಂತಕ್ಕೆ **ಇವೇನ ಸಮಾಸೋ ವಿಭಕ್ತ್ಯಲೋಪಃ ಪೂರ್ವಪದಪ್ರಕೃತಿಸ್ವರತ್ವಂ ಚ** ಎಂಬ ಅನುಶಾಸನಪ್ರಕಾರ ಇವಶಬ್ದದೊಂದಿಗೆ ಸಮಾಸವನ್ನು ಮಾಡಿದರೆ ಆದೇಸ್ವರವೇ ಇರುವುದು. **ಗೋದುಹೇ:—** ಗಾಂ ದೋಗ್ಧಿ (ಹಸುವನ್ನು ಕರೆಯುತ್ತಾನೆ) ಇತಿ ಗೋಧುಕ್. **ಸತ್ಸೂದ್ವಿಷದ್ರುಹ ದುಹ ಯುಜ ವಿದ ಭಿದ ಚ್ಛಿದ ಜಿನೀರಾಜಾಮುಪಸರ್ಗೇಽಪಿ ಕ್ವಿಪ್** (ಪಾ. ಸೂ ೩-೨-೬೧) ಷದ್ಲೃ ವಿಶರಣ ಗತ್ಯವಸಾದನೇಷು, ಷೂಙ್‌ಪ್ರಾಣಿಗರ್ಭವಿಮೋಚನೇ, ದ್ವಿಷ ಅಪ್ರೀತೌ, ದ್ರುಹ ಜಿಘಾಂಸಾಯಾಂ, ದುಹಪ್ರಪೂರಣೇ ಯುಜಿರ್‌ಯೋಗೇ ಯುಜ ಸಮಾಧೌ, ವಿದ ಜ್ಞಾನೇ ವಿದ ವಿಚಾರಣೇ ವಿದ ಸತ್ತಾಯಾಂ, ಭಿದಿರ್ ವಿದಾರಣೇ, ಛಿದಿರ್ ದ್ವೈಧೀಕರಣೇ, ಜಿ ಜಯೇ, ಣೀಞ್‌ಪ್ರಾಪಣೇ, ರಾಜೃದೀಪ್ತೌ, ಈ ಧಾತುಗಳಿಗೆ ಉಪಸರ್ಗವಿದ್ದರೂ ಇಲ್ಲದಿದ್ದರೂ ಸುಬಂತವು ಉಪಪದವಾಗಿರುವಾಗ ಕ್ವಿಪ್ ಬರುವುದು ಎಂಬುದರಿಂದ ದುಹ್ ಧಾತುವಿನಮೇಲೆ ಕ್ವಿಪ್ ಪ್ರತ್ಯಯಬರುವುದು. ಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರವೇ ಬರುವುದು.

ಜುಹೂಮಸಿ :—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಎಂಬ ಧಾತುವು ಭ್ವಾದಿ(೧ನೆ) ಗಣದಲ್ಲಿರುವುದು. ಇದರಮೇಲೆ ಲಟ್ ಉತ್ತಮಪುರುಷ ಬಹುವಚನವನ್ನಿಟ್ಟರೆ ಹ್ವೇ+ಮಸ್ ಎಂದಿರುವಾಗ ಬರುವ ಶಪ್ (ಅ) ವಿಕರಣಕ್ಕೆ **ಬಹುಲಂ ಛಂದಸಿ** (ಪಾ. ಸೂ. ೨-೪-೭೬) ಛಂದಸ್ಸಿನಲ್ಲಿ ಶ್ಲು ವು (ಶ್ಲು ಶಬ್ದವನ್ನುಚ್ಚರಿಸಿ ಬರುವ ಲೋಪ) ಬಹುಲವಾಗಿ ಬರುವುದು ಎಂಬುದರಿಂದ ಶ್ಲು (ಲೋಪ) ಬರುವುದು, **ಅಭ್ಯಸ್ತಸ್ಯ ಚ** (ಪಾ. ಸೂ. ೬-೧-೩೩) ಷಷ್ಠಾಧ್ಯಾಯಸೂತ್ರದಿಂದ ದ್ವಿರುಚ್ಚಾರಣೆ ಬಂದಕಡೆಯಲ್ಲಿ ದ್ವಿರುಚ್ಚರಿತ ಶಬ್ದಗಳೆರಡಕ್ಕೂ ಸೇರಿ ಅಭ್ಯಸ್ತ ಎಂದು ಹೆಸರು. ಈ ಅಂಶವನ್ನು 'ಉಭೇ ಅಭ್ಯಸ್ತಂ' ಎಂಬ ಸೂತ್ರದಿಂದ ಸ್ಪಷ್ಟಪಡಿಸಿರುವರು. ಅಭ್ಯಸ್ತ ಸಂಜ್ಞೆಗೆ

ಕಾರಣವಾದ ಹ್ವೇಞ್ ಧಾತುವಿಗೆ ಸಂಪ್ರಸಾರಣ ಬರುವುದು ಎಂಬುದರಿಂದ ಸಂಪ್ರಸಾರಣ ಬಂದರೆ ಹು+ಏ+ಮಸ್ ಎಂದಿರುವುದು, ಈಗ **ಸಂಪ್ರಸಾರಣಾಚ್ಚ** (ಪಾ. ಸೂ. ೬-೧-೧೦೮) ಸಂಪ್ರಸಾರಣದ ಮುಂದೆ ಅಚ್ ಇದ್ದರೆ ಪೂರ್ವಪರಗಳ ಸ್ಥಾನದಲ್ಲಿ, ಪೂರ್ವರೂಪ ಒಂದೇ ಬರುವುದು ಎಂಬುದರಿಂದ ಪೂರ್ವರೂಪಬಂದರೆ ಹು+ಮಸ್ ಆಗುವುದು. 'ಹಲಃ' (ಪಾ. ಸೂ. ೬-೪-೨) ಅಂಗಾವಯವವಾದ ವ್ಯಂಜನದ ಮುಂದೆ ಯಾವ ಸಂಪ್ರಸಾರಣವಿದೆಯೋ ಅದನ್ನು ಕೊನೆಯಲ್ಲಿ ಹೊಂದಿರುವ ಅಂಗಕ್ಕೆ ದೀರ್ಘಬರುವುದು, ಎಂಬುದರಿಂದ ಉಕಾರಕ್ಕೆ ದೀರ್ಘ ಬಂದರೆ ಹೂ+ಮಸ್ ಈಗ **ಶ್ಲೌ** (ಪಾ. ಸೂ. ೬-೧-೧೦) ಶ್ಲು ಬಂದಿರುವಾಗ ಧಾತುವಿಗೆ ದ್ವಿರುಚ್ಚಾರಣೆ ಬರುವುದು. ಎಂಬುದರಿಂದ ದ್ವಿರುಚ್ಚಾರಣೆ ಬಂದರೆ ಹೂ+ಹೂ+ಮಸ್ **ಹ್ರಸ್ವಃ** (ಪಾ. ಸೂ. ೭-೪-೫೯) ಅಭ್ಯಾಸದ ಅಚ್ಚಿಗೆ ಹ್ರಸ್ವ ಬಂದರೆ ಹು+ಹೂ+ಮಸ್ **ಕುಹೋಶ್ಚುಃ** (ಪಾ. ಸೂ. ೭-೪-೬೨) ಅಭ್ಯಾಸದಲ್ಲಿರುವ ಕವರ್ಗ ಹಕಾರಗಳಿಗೆ ಚವರ್ಗವು ಆದೇಶವಾಗಿ ಬರುವುದು. ಎಂಬುದರಿಂದ ಹಕಾರಕ್ಕೆ ಝಕಾರ ಬಂದರೆ **ಅಭ್ಯಾಸೇ ಚರ್ಚ** (ಪಾ. ಸೂ ೮-೪-೫೪) ಅಭ್ಯಾಸದಲ್ಲಿರುವ ಝಶ್ ವರ್ಣಗಳಿಗೆ ಜಶ್ ವರ್ಣಗಳೂ ಖಯ್ ವರ್ಣಗಳಿಗೆ ಚರ್ ವರ್ಣಗಳು ಬರುವುವು ಎಂಬುದರಿಂದ ಝಕಾರಕ್ಕೆ ಜಕಾರ ಬಂದರೆ ಜು+ಹೂ+ಮಸ್ **ಇದಂತೋಮಸಿ** (ಪಾ.ಸೂ. ೭-೧-೪೬) ಮಸ್ ಎಂಬುದು ಇಕ್ ಆಗಮವನ್ನು ಹೊಂದುವುದು ಎಂಬುದರಿಂದ ಇಕಾರಾಗಮ ಬಂದರೆ 'ಜುಹೂಮಸಿ' ಎಂದಾಗುವುದು. ಪ್ರತ್ಯಯಸ್ವರದಿಂದ ಮ ಎಂಬುದು ಉದಾತ್ತ.

**ದ್ಯವಿದ್ಯವಿ:**— ದ್ಯುತ-ದೀಪ್ತೌ ಧಾತು- ಇದರಮುಂದೆ **ಉಣಾದಯೋ ಬಹುಲಂ** (ಪಾ.ಸೂ. ೩-೩-೧) ಎಂಬಲ್ಲಿ ಬಹುಲಗ್ರಹಣವಿರುವುದರಿಂದ ಡೋಪ್ರತ್ಯಯ ಬರುವುದು. ಭಟ್ಟೋಜೀದೀಕ್ಷಿತರು ಕೌಮುದಿಯಲ್ಲಿ **ಗಮೇರ್ಡೋಃ** (ಉ. ಸು. ೨-೨೨೬) ಎಂಬ ಸೂತ್ರದ ವಿವರಣೆಯಲ್ಲಿ ಬಾಹುಲಕಾದ್ಯುತೇರಪಿ ದ್ಯೌಃ ಎಂದು ಹೇಳಿರುವರು. ದ್ಯು ಅಭಿಗಮನೇ ಧಾತುವಿನಮುಂದೆ ಡೋ ಪ್ರತ್ಯಯ ಎಂದು ಭೋಜದೇವನು ಅಭಿಪ್ರಾಯಪಟ್ಟಿರುವನು. ದ್ಯೋ ಎಂಬುದು ಫಿಷಃ (ಉ.ಸೂ. ೧) ಎಂಬುದರಿಂದ ಅಂತೋದಾತ್ತ. ಸಪ್ತಮ್ಯೇಕವಚನದಲ್ಲಿ ದ್ಯವಿ-**ನಿತ್ಯವೀಪ್ಸಯೋಃ** (ಪಾ. ಸೂ. ೮-೧-೪) ಎಂಬುದರಿಂದ ದ್ವಿತ್ವಬಂದರೆ ದ್ಯವಿದ್ಯವಿ. ಇಲ್ಲಿ **ತಸ್ಯ ಪರಮಾಮ್ರೇಡಿತಂ** (ಪಾ. ಸೂ. ೮-೧-೨) ದ್ವಿರುಚ್ಚಾರಣೆಯನ್ನು ಹೊಂದಿದ ಶಬ್ದದ ಎರಡನೇ ಭಾಗಕ್ಕೆ ಆಮ್ರೇಡಿತವೆಂದು ಹೆಸರು. 'ಅನುದಾತ್ತಂ ಚ' (ಪಾ. ಸೂ ೮-೧-೩) ಆಮ್ರೇಡಿತಕ್ಕೆ (ದ್ವಿರುಕ್ತ ಶಬ್ದದ ಎರಡನೇ ಭಾಗಕ್ಕೆ) ಅನುದಾತ್ತ ಬರುವುದು. ಎಂಬುದರಿಂದ ಎರಡನೇ ದ್ಯವಿ ಎಂಬುದು ಅನುದಾತ್ತ. ॥ ೧ ॥

॥ ಸಂಹಿತಾಪಾಠಃ ॥

ಉಪ ನಃ ಸವನಾ ಗಹಿ ಸೋಮಸ್ಯ ಸೋಮಪಾಃ ಪಿಬ ।
ಗೋದಾ ಇದ್ರೇವತೋ ಮದಃ ॥ ೨ ॥

॥ ಪದಪಾಠಃ ॥

ಉಪ । ನಃ । ಸವನಾ । ಆ । ಗಹಿ । ಸೋಮಸ್ಯ । ಸೋಮಽಪಾಃ । ಪಿಬ ॥
ಗೋಽದಾಃ । ಇತ್ । ರೇವತಃ । ಮದಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ಸೋಮಪಾಃ ಸೋಮಸ್ಯ ಪಾತರಿಂದ್ರ ಸೋಮಂ ಪಾತುಂ ನೋಽಸ್ಮದೀಯಾನಿ ಸವನಾ ತ್ರೀಣಿ ಸವನಾನಿ ಪ್ರತ್ಯುಪ ಸಮೀಪ ಆಗಹಿ । ಆಗಚ್ಛ । ಆಗತ್ಯ ಚ ಸೋಮಸ್ಯ ಸೋಮಂ ಪಿಬ । ರೇವತೋ ಧನವತಸ್ತವ ಮದೋ ಹರ್ಷೋ ಗೋದಾ ಇದ್ಗೋಪ್ರದ ಏವ । ತ್ವಯಿ ಹೃಷ್ಟೇ ಸತ್ಯಸ್ಮಾಭಿರ್ಗಾವೋ ಲಭ್ಯಂತ ಇತ್ಯರ್ಥಃ ॥ ಉಪ । ನಿಪಾತತ್ವಾದಾದ್ಯುದಾತ್ತಃ । ಸವನಾ । ಸೂಯತೇ ಸೋಮ ಏಷ್ವಿತಿ ಸವನಾನಿ । ಅಧಿಕರಣೇ ಲ್ಯುಟ್ । ಪಾ. ೩-೩-೧೧೭ । ಸುಪೋ ಡಾದೇಶಶ್ಛಿಲೋಪಶ್ಚ । ಲಿತೀತಿ ಪ್ರತ್ಯಯಾತ್ಪೂರ್ವಸ್ಯಾಕಾರಸ್ಯೋದಾತ್ತತ್ವಂ । ಗಹಿ । ಗಮೇರ್ಬಹುಲಂ ಛಂದಸೀತಿ ಶಪೋ ಲುಕ್ । ಹೇರ್ಙಿತ್ತ್ವಾದನುದಾತ್ತೋಪದೇಶೇತ್ಯಾದಿನಾ । ಪಾ. ೬-೪-೩೭ । ಮಕಾರಲೋಪಃ । ಅತೋ ಹೇಃ । ಪಾ. ೬-೪-೧೦೫ । ಇತ್ಯಾಭಾಚ್ಛಾಸ್ತ್ರೀಯೋ ಲುಕಿ ಕರ್ತವ್ಯೇಽಸಿದ್ಧವದತ್ರಾಭಾತ್ । ಪಾ. ೬-೪-೨೨ । ಇತ್ಯಾಭಾಚ್ಛಾಸ್ತ್ರೀಯೋ ಮಕಾರಲೋಪೋಽಸಿದ್ಧವದ್ಭವತಿ । ಸೋಮಪಾಃ । ಆಮಂತ್ರಿತಸ್ಯ ಚೇತಿ ನಿಘಾತಃ । ತಸ್ಯಾವಿದ್ಯಮಾನವತ್ತ್ವೇಽಪಿ ಪೂರ್ವಾಪೇಕ್ಷಯಾ ತಿಙ್ಙತಿಙ ಇತಿ ಪಿಬೇತ್ಯಸ್ಯ ನಿಘಾತಃ । ನ ಚ ಪೂರ್ವಸ್ಯಾಪಿ ಪರಾಂಗವದ್ಭಾವೇನಾವಿದ್ಯಮಾನವತ್ತ್ವಂ । ಅಸಾಮರ್ಥ್ಯೇನ ತದಭಾವಾತ್ । ಗಾಂ ದದಾತೀತಿ ಗೋದಾಃ । ಕ್ವಿಪ್ಚ । ಪಾ. ೩-೨-೭೬ । ಇತಿ ಕ್ವಿಪಂ ಪರಮಪಿ ಸರೂಪಂ ಬಾಧಿತ್ವಾ ಪ್ರತಿಪದವಿಧಿತ್ವಾದಾತೋ ಮನಿನ್ಕ್ವನಿಬ್ವನಿಪಶ್ಚ । ಪಾ. ೩-೨-೭೪ । ಇತಿ ವಿಚ್ । ಕ್ವಿಪಿ ಹಿ ಘುಮಾಸ್ಥೇತ್ಯಾದಿನಾ ಪಾ. ೬-೪-೬೬ । ಧಾತೋರಾಕಾರಸ್ಯೇತ್ವಂ ಸ್ಯಾತ್ । ರೇವತಃ । ರಯಿರ್ಧನಮಸ್ಯಾಸ್ತೀತಿ ಮತುಪ್ । ಹ್ರಸ್ವನುಡ್ಭ್ಯಾಂ ಮತುಪ್ । ಪಾ. ೬-೧-೧೭೬ । ಇತಿ ಮತುಬುದಾತ್ತಃ । ಛಂದಸೀರಃ । ಪಾ. ೮-೨-೧೫ । ಇತಿ ವತ್ವಂ । ರಯೇರ್ಮತೌ ಬಹುಲಂ ಛಂದಸಿ । ಪಾ. ೬-೧-೩೭-೬ । ಇತಿ ಸಂಪ್ರಸಾರಣಪರಪೂರ್ವತ್ವೇ ಗುಣಶ್ಚ । ಮದಃ । ಮದೋಽನುಪಸರ್ಗೇ । ಪಾ ೩-೩-೬೭ । ಇತ್ಯಪ್ । ಪಿತ್ತ್ವಾದನುದಾತ್ತಃ ॥

॥ ಪ್ರತಿಪದಾರ್ಥ ॥

ಸೋಮಪಾಃ—ಸೋಮಪಾನಮಾಡುವ ಎಲೈ ಇಂದ್ರನೇ । ನಃ—ನಮ್ಮ । ಸವನಾ—ಯಜ್ಞದಲ್ಲಿ ನಾವು ಮಾಡುವ ಪ್ರಾತಸ್ಸವನ, ಮಾಧ್ಯಂದಿನಸವನ, ತೃತೀಯಸವನಗಳಿಗೆ ಅಥವಾ ನಾವು ಮಾಡುವ ಯಜ್ಞಕ್ಕೆ । ಉಪಾಗಹಿ—ಬರುವವನಾಗು । (ಅಲ್ಲಿಗೆ ಬಂದು) ಸೋಮಸ್ಯ—ಸೋಮರಸವನ್ನು । ಪಿಬ—ಪಾನಮಾಡು । ರೇವತಃ—ಧನಾದ್ಯೈಶ್ವರ್ಯಯುಕ್ತನಾದ ನಿನ್ನ । (ಸೋಮಪಾನದಿಂದ ಉಂಟಾಗುವ) ಮದಃ—ಸಂತೋಷವು ಗೋದಾಃ—(ನಮ್ಮಗಳಿಗೆ) ಗೋವುಗಳನ್ನು ಕೊಡುವುದು.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಸೋಮಪಾನಮಾಡುವವನಾದುದರಿಂದ ಈಗ ನಾವು ಮಾಡುತ್ತಿರುವ ಯಜ್ಞಸಂಬಂಧವಾದ ಪ್ರಾತಸ್ಸವನ, ಮಾಧ್ಯಂದಿನಸವನ ತೃತೀಯಸವನಗಳೆಂಬ ಮೂರು ಸವನಗಳಿಗೂ ಬಂದು ನಾವು ಸಿದ್ಧಪಡಿಸಿರುವ ಸೋಮವನ್ನು ಪಾನಮಾಡು. ಹಾಗೆ ಪಾನಮಾಡುವುದರಿಂದ ನಿನಗೆ ಸಂತೋಷವುಂಟಾಗಿ ಐಶ್ವರ್ಯಯುಕ್ತನಾದ ನೀನು ನಮಗೆ ಗೋವುಗಳನ್ನು (ಗೋಸಂಪತ್ತನ್ನು) ಕೊಡುವವನಾಗುವೆ.

English Translation.

O Soma-drinker, come hither to our Sacrifices and Partake of the Soma; you being rich the satisfaction you get from drinking Soma is verily the cause of the gift of cattle.

॥ ವಿಶೇಷವಿಷಯಗಳು ॥

**ಉಪ ಆ ಗಹಿ**— **ಉಪ**-ಸಮೀಪಕ್ಕೆ ನಾವು ಮಾಡುತ್ತಿರುವ ಯಜ್ಞದ ಸಮೀಪಕ್ಕೆ. **ಆ ಗಹಿ**— ಬಾ, ಬರುವವನಾಗು.

**ಸವನಾ**— **ಸೂಯತೇ ಸೋಮ ಏಷ್ವಿತಿ ಸವನಾನಿ (ಸವನಾ)** ಸೋಮರಸವನ್ನು ಹಿಂಡಿ ತೆಗೆಯುವ ಕರ್ಮಕ್ಕೆ (ಯಜ್ಞಕ್ಕೆ) ಸವನವೆಂದು ಹೆಸರು. ಸವನವೆಂದರೆ ಪ್ರಾತಸ್ಸವನಾದಿ ಸವನತ್ರಯಗಳೆಂದೂ ಅಥವಾ ಸವನಕರ್ಮವಿರುವ ಯಜ್ಞವೆಂದೂ ಅರ್ಥಮಾಡಬಹುದು. ಹೇಗೆ ಮಾಡಿದರೂ ಮುಖ್ಯಾಭಿಪ್ರಾಯವು ಒಂದೇ ಆಗಿರುವುದು.

**ಗೋದಾಃ**— **ಗಾಂ ದದಾತೀತಿ ಗೋದಾಃ ಗೋಪ್ರದಃ**— ಗೋವುಗಳನ್ನು ಅಥವಾ ಪಶುಸಂಪತ್ತನ್ನು ಕೊಡುವವನು. ಇದರಂತೆ **ಸೋಮಂ ಪಿಬತೀತಿ ಸೋಮಪಾಃ**— ದಾಃ ಎಂಬ ಪ್ರತ್ಯಯಪರವಾದ ಉದಾಹರಣೆಗಳು ಋಗ್ವೇದದಲ್ಲಿ ೧೭ ಇರುವುವು—

**ಅಶ್ವದಾಃ | ಆತ್ಮದಾಃ | ಓಜೋದಾಃ | ಗೋದಾಃ | ದ್ರವಿಣೋದಾಃ | ಧನದಾಃ | ಬಲದಾಃ | ಭೂರಿದಾಃ | ವಸ್ತ್ರದಾಃ | ವಾಜದಾಃ | ವಾಸೋದಾಃ | ಸಹೋದಾಃ | ಸಹಸ್ರದಾಃ | ಸುದಾಃ | ಸ್ವಸ್ತಿದಾಃ | ಹಿರಣ್ಯದಾಃ | ಭೂರಿದಾಃ ||**

ಇತ್— ಏವ. ಉದಾ-**ಇಂದ್ರಃ ಗೋದಾಃ**— ಇಂದ್ರನು ಗೋವುಗಳನ್ನು ಕೊಡುವವನಾಗಿರುವನು. ಆದರೆ ಇತ್ ಎಂಬ ಶಬ್ದವನ್ನು ಉಪಯೋಗಿಸಿರುವ **ಇಂದ್ರಃ ಗೋದಾ ಇತ್** ಎಂಬ ವಾಕ್ಯಕ್ಕೆ— ಇಂದ್ರನು ಗೋವುಗಳನ್ನು ಕೊಡುವವನೇ ಆಗಿರುವನು ಎಂದರ್ಥವು. ಇತ್ ಶಬ್ದವು ಅವಧಾರಣಾರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದು.

**ರೇವತಃ**— **ರಯಿರ್ಧನಮಸ್ಯಾಸ್ತೀತಿ ರೇವಾನ್ ತಸ್ಯ ರೇವತಃ** ಎಂದು ವಿಗ್ರಹವು. ಧನವುಳ್ಳವನ (ಇಂದ್ರನ) ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಉಪ.**— ಇದು ನಿಪಾತವಾದ್ದರಿಂದ **ನಿಪಾತಾ ಆದ್ಯುದಾತ್ತಾಃ** (ಫಿಸೂ. ೮೦) ಎಂಬುದರಿಂದ ಆದ್ಯುದಾತ್ತ. ಸವನಾ— ಸೂಯತೇ ಸೋಮಃ ಏಷ್ವಿತಿಸವನಾನಿ. (ಯಾವುಗಳಲ್ಲಿ ಸೋಮಲತೆಯು ಪೀಡಿಸಲ್ಪಡುವುದೋ ಅಂತಹ ಯಾಗಗಳಿಗೆ ಸವನ ಎಂದು ಹೆಸರು) ಇಲ್ಲಿ **ಕರಣಾಧಿಕರಣಯೋಶ್ಚ** (ಪಾ.ಸೂ. ೩-೩-೧೧೭) ಕರಣ, ಅಧಿಕರಣ ಈ ಅರ್ಥಗಳಲ್ಲಿ, ಲ್ಯುಟ್ ಪ್ರತ್ಯಯುಬರುವುದು. ಎಂಬುದರಿಂದ ಷುಞ್ ಧಾತುವಿಗೆ ಲ್ಯುಟ್ ಪ್ರತ್ಯಯು ಬಂದರೆ, ಷು+ಯು. **ಧಾತ್ವಾದೇಷಃ ಸಃ** (ಪಾ. ಸೂ. ೬-೧-೬೪) ಎಂಬುವದಿಂದ ಷಕಾರಕ್ಕೆ ಸಕಾರ.

**ಯುವೋರನಾಕಾ** (ಪಾ. ಸೂ. ೭-೧-೧) ಎಂಬುದರಿಂದ ಯು ಗೆ ಅನ ಬಂದರೆ ಸು+ಅನ, ಗುಣಾವಾದೇಶಗಳು ಬಂದರೆ ಸವನ ಎಂದಿರುವುದು. ದ್ವಿತೀಯಾ ಬಹುವಚನ ಪ್ರತ್ಯಯಕ್ಕೆ **ಸುಪಾಂಸುಲುಕ್,** (ಪಾ ಸೂ. ೭-೧-೩೯) ಎಂಬುದರಿಂದ ಡಾ ಆದೇಶಬಂದರೆ ಸವನ+ಆ ಎಂಬಲ್ಲಿ ನಕಾರದ ಮುಂದಿರುವ ಅಕಾರಕ್ಕೆ **ಟೇಃ** (ಪಾ. ಸೂ. ೬-೪-೧೪೩) ಎಂಬುದರಿಂದ ಲೋಪಬಂದು ಸವನಾ ಎಂದಾಗುವುದು **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಹಿಂದಿರುವ ಸ ಎಂಬಲ್ಲಿರುವ ಅಕಾರವು ಉದಾತ್ತವಾಗುವುದು. ಗಹಿ:—ಗಮ್ಲೃ ಗತೌ ಧಾತುವಿನಮೇಲೆ ಲೋಟ್ ಮಧ್ಯಮ ಪುರುಷ ಏಕವಚನ ಸಿಪ್ ಪ್ರತ್ಯಯವನ್ನಿಟ್ಟರೆ, ಗಮ್+ಸಿ. **ಕರ್ತರಿ ಶಪ್** (ಪಾ. ಸೂ. ೩-೬-೬೮) ಎಂಬುದರಿಂದ ಬರುವ ಶಪ್ (ಅ) ವಿಕರಣಪ್ರತ್ಯಯಕ್ಕೆ **ಬಹುಲಂ ಛಂದಸಿ** (ಪಾ. ಸೂ ೨-೪-೭೩) ಎಂಬುದರಿಂದ ಲುಕ್ (ಲೋಪ) **ಸೇರ್ಹ್ಯಪಿಚ್ಚ** (ಪಾ. ಸೂ. ೩-೪-೮೭) ಸಿ ಗೆ ಹಿ ಆದೇಶ ಬರುವುದು-ಅದು ಪಿತ್ತಾಗುವುದಿಲ್ಲ ಎಂಬುದರಿಂದ, ಸಿ ಗೆ, ಹಿ, ಬಂದರೆ ಗಮ್+ಹಿ, **ಸಾರ್ವಧಾತುಕಮಪಿತ್** (ಪಾ. ಸೂ. ೧-೨-೪) ಅಪಿತ್ತಾದ ಸಾರ್ವಧಾತುಕಪ್ರತ್ಯಯವು ಙಿತ್ತಾಗುವುದು ಎಂಬುದರಿಂದ ಹಿ ಎಂಬುದು ಙಿತ್ತಾದ್ದರಿಂದ **ಅನುದಾತ್ತೋಪದೇಶ,** (ಪಾ.ಸೂ. ೬-೪-೩೭) ಎಂಬುದರಿಂದ ಅನುನಾಸಿಕವಾದ ಮಕಾರಕ್ಕೆ ಲೋಪ ಬರುವುದು. ಗ+ಹಿ ಎಂದಾಗುವುದು. ಗ ವಿನ ಅಕಾರದ ಮುಂದಿರುವ ಹಿ ಗೆ, **ಅತೋಹೇಃ** (ಪಾ ಸೂ ೬-೪-೧೦೫) ಹ್ರಸ್ವಾಕಾರದ ಮುಂದಿರುವ ಹಿ ಗೆ ಲುಕ್ ಬರುವುದು ಎಂಬುದರಿಂದ ಲುಕ್ ಪ್ರಾಪ್ತವಾಗುವುದು. ಆದರೆ **ಅಸಿದ್ಧವದತ್ರಾಭಾತ್** (ಪಾ. ಸೂ. ೬-೪-೨೨) ಈ ಸೂತ್ರದಿಂದ ಆರಂಭಿಸಿ ಈ ಪಾದವು ಮುಗಿಯುವವರಿಗೂ ಇರತಕ್ಕ ಸೂತ್ರಗಳಿಗೆ ಆಭೀಯ ಎಂದು ಹೆಸರು. ಸಮಾನಾಶ್ರಯವಾದ ಆಭೀಯ ಶಾಸ್ತ್ರವನ್ನು ಮಾಡುವಾಗ ಮತ್ತೊಂದು ಆಭೀಯ ಶಾಸ್ತ್ರವು ಅಸಿದ್ಧವಾದಂತೆ ಆಗುವುದು ಎಂಬ ಪರಿಭಾಷೆಯಿಂದ, **ಅತೋಹೇಃ** (ಪಾ. ಸೂ. ೬-೪-೧೦೫) ಎಂಬ ಆಭೀಯಶಾಸ್ತ್ರವನ್ನು ಮಾಡುವಾಗ, **ಅನುದಾತ್ತೋಪದೇಶ** (ಪಾ. ಸೂ. ೬-೪-೩೭) ಎಂಬ ಆಭೀಯ ಶಾಸ್ತ್ರವು ಅಸಿದ್ಧವಾದಂತೆ ಆಗುವುದು ಅಂದರೆ ಅನುನಾಸಿಕ ಮಕಾರವು ಇದ್ದಂತೆ ಆಗುವುದು ಈಗ ಮಕಾರ ವ್ಯವಧಾನವಿರುವುದರಿಂದ ಹ್ರಸ್ವಾಕಾರಕ್ಕಿಂತಲೂ ಅವ್ಯವಹಿತ ಪರದಲ್ಲಿ ಹಿ ಎಂಬುದಿಲ್ಲವಾದಕಾರಣ ಹಿ ಗೆ ಲುಕ್ ಬರುವುದಿಲ್ಲ. **ಸೋಮಪಾಃ,** ಎಂಬಲ್ಲಿ **ಆಮನ್ತ್ರಿತಸ್ಯಚ** (೬-೧-೧೯) ಎಂಬುದರಿಂದ ಸರ್ವಾನುದಾತ್ತ. ಇದಕ್ಕೆ **ಆಮಂತ್ರಿತಂ ಪೂರ್ವಮವಿದ್ಯಮಾನವತ್** (ಪಾ. ಸೂ ೮-೧-೭೨) ಎಂಬುದರಿಂದ ಅವಿದ್ಯಮಾನವದ್ಭಾವ ಬಂದರೂ ಅದಕ್ಕಿಂತಲೂ ಹಿಂದಿರುವ ಪದವನ್ನು ನಿಮಿತ್ತಮಾಡಿಕೊಂಡು **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಪಿಬ ಎಂಬುದಕ್ಕೆ ಅನುದಾತ್ತಬರುವುದು ಆದರೆ ಪೂರ್ವಪದವಾದ ಸೋಮಸ್ಯ ಎಂಬುದಕ್ಕೂ **ಸುಬಾಮಂತ್ರಿತೇ ಪರಾಂಗವತ್ಸ್ವರೇ** (ಪಾ ಸೂ. ೨-೧-೨) ಎಂಬುದರಿಂದ ಪರಾಂಗವದ್ಭಾವ ಬಂದರೆ ಅವಿದ್ಯಮಾನವದ್ಭಾವವು ಪ್ರಾಪ್ತವಾಗುವುದು ಆದರೂ 'ಸೋಮಸ್ಯ ಸೋಮಪಾಃ' ಎಂಬಿವುಗಳಿಗೆ ಪರಸ್ಪರಾನ್ವಯವಿಲ್ಲದಕಾರಣ ಸಾಮರ್ಥ್ಯವಿಲ್ಲ. ಆದ್ದರಿಂದ ಪರಾಂಗವದ್ಭಾವಬರುವುದಿಲ್ಲ. ಆದ್ದರಿಂದ 'ಸೋಮಸ್ಯ' ಎಂಬುದಕ್ಕೆ ಅವಿದ್ಯಮಾನವದ್ಭಾವ ಬರುವುದಿಲ್ಲ **ಗಾಂ, ದದಾತಿ ಇತಿ ಗೋದಾಃ** ( ಹಸುವನ್ನು ಕೊಡುವವನು ) **ಡುದಾಞ್** ದಾನೇ ಎಂಬ 'ದಾ' ಧಾತುವು ಆಕಾರಾಂತವಾದ್ದರಿಂದ '**ಕ್ವಿಪ್ ಚ**' (ಪಾ. ಸೂ. ೩-೨-೭೬) ಎಂಬುದರಿಂದ ಬರುವ ಕ್ವಿಪ್ ಪ್ರತ್ಯಯವು ಪರದಲ್ಲಿದ್ದರೂ ಅದನ್ನು ಬಾಧಿಸಿ ಪ್ರತಿಪದೋಕ್ತವಿಧಿಯಾದ್ದರಿಂದ '**ಆತೋಮನಿನ್ ಕ್ವನಿಪ್ ವನಿಪಶ್ಚ**' (ಪಾ.ಸೂ. ೩-೨-೭೪) ಆಕಾರಾಂತ ಧಾತುವಿನ ಮೇಲೆ ಸುಬಂತ ಅಥವಾ ಉಪಸರ್ಗಗಳು ಉಪಪದವಾಗಿರುವಾಗ ಮನಿನ್ ಕ್ವನಿಪ್, ವನಿಪ್ ಈ ಪ್ರತ್ಯಯಗಳು ಬರುವುವು. ಈ ಸೂತ್ರದಲ್ಲಿರುವ ಚಕಾರದಿಂದ ವಿಚ್‌ಪ್ರತ್ಯಯವೂ ಬರುವುದು ಎಂಬುದರಿಂದ ವಿಚ್‌ಪ್ರತ್ಯಯ ಬರುವುದು. ಪದವಿಶೇಷವನ್ನು ಉಚ್ಚರಿಸಿ ವಿಹಿತವಾಗಿರುವ ವಿಧಿಯು ಪ್ರತಿಪದೋಕ್ತವಿಧಿಯು. ಹೀಗೆ ವಿಚ್ ಪ್ರತ್ಯಯವನ್ನು

ಒಪ್ಪದೇ ಕ್ವಿ ಪ್ರತ್ಯಯವನ್ನು ಒಪ್ಪುವಪಕ್ಷದಲ್ಲಿ ‘ **ಘುಮಾಸ್ಥಾಗಾಪಾ ಜಹಾತಿಸಾಂಹಲಿ** ’ (ಪಾ. ಸೂ. ೬-೪-೬೬) ದಾಪ್, ದೈಪ್ ಧಾತುಗಳನ್ನು ಬಿದು ದಾ, ಅಥವಾ ಧಾ ರೂಪ ಧಾತುಗಳಿಗೆ ಘುಸಂಜ್ಞೆ ಬರುವುದು. ಈ ಸೂತ್ರ ನಿರ್ದಿಷ್ಟಧಾತುಗಳ ಆಕಾರಕ್ಕೆ ವ್ಯಂಜನಾದಿಯಾಗಿದ್ದು ಕಿತ್ತು ಅಥವಾ ಙಿತ್ತು ಆದ ಆರ್ಧಧಾತುಕಪ್ರತ್ಯಯವು ಪರವಾಗಿರುವಾಗ ‘ ಈ ’ ಆದೇಶ ಬರುವುದು, ಎಂಬುದರಿಂದ ಘುಸಂಜ್ಞಕವಾದ ‘ ದಾ ’ ಎಂಬುದಕ್ಕೆ ಈ ಬರ ಬೇಕಾಗುವುದು. ಆದರೆ ಕ್ವಿಪ್ ಪ್ರತ್ಯಯದಲ್ಲಿ ಎಲ್ಲ ವರ್ಣಗಳಿಗೂ ಲೋಪಬರುವುದರಿಂದ ಇದು ಹಲಾದಿ ಪ್ರತ್ಯಯವಾಗುವುದಿಲ್ಲ. ಆದ್ದರಿಂದ ಕ್ವಿಪ್ ಪ್ರತ್ಯಯಪಕ್ಷದಲ್ಲಿಯೂ ‘ ಈ ’ ಆದೇಶಕ್ಕೆ ಅವಕಾಶವಿರುವುದಿಲ್ಲ. ಈತ್ವವು ಹಲಾದಿಪ್ರತ್ಯಯವನ್ನು ನಿಮಿತ್ತಮಾಡಿಕೊಂಡುಬರುವುದರಿಂದ ಅಲಾಶ್ರಯವಾದ ಕಾರ್ಯ. ಆದ್ದರಿಂದ ‘ **ಅನಲ್ವಿಧೌ** ’ ಎಂದು ನಿಷೇಧ ಬರುವುದರಿಂದ ಸ್ಥಾನಿವದ್ಭಾವದಿಂದ ಹಲಾದಿತ್ವವನ್ನು ತರಲಾಗುವುದಿಲ್ಲ. ‘ **ಪ್ರತ್ಯಯಲೋಪೇಪ್ರತ್ಯಯಲಕ್ಷಣಂ** ’ (ಪಾ. ಸೂ. ೧-೧-೬೨) ಇದು ವಿಧಾಯಕವೆಂದೂ ನಿಯಾಮಕವೆಂದೂ ಎರಡು ಪಕ್ಷಗಳಿರುವುವು. ಎಲ್ಲಿ ಪ್ರತ್ಯಯವು ಪ್ರಧಾನವಾಗಿ ಆಶ್ರಯಿಸಲಾಗಿರುವುದೋ ಅಲ್ಲಿ ಅಲ್ವಿಧಿಯಾದಾಗ್ಯೂ ಪ್ರತ್ಯಯನಿಮಿತ್ತಕಕಾರ್ಯವಿಧಾನಕ್ಕಾಗಿ ಈ ಸೂತ್ರವು ಮಾಡಲಾಗಿದೆ. ಆದ್ದರಿಂದಲೇ ‘ ಅತೃಣೇಟ್ ’ ಎಂಬಲ್ಲಿ ‘ **ತೃಣಹಇಮ್** ’ (ಪಾ. ಸೂ. ೭-೩-೯೨) ಎಂಬುದರಿಂದ ಹಲಾದಿಯೂ ಪಿತ್ತೂ ಆದ ಸಾರ್ವಧಾತುಕ ಪ್ರತ್ಯಯಪರದಲ್ಲಿರುವಾಗ ವಿಹಿತವಾದ ಇಮಾಗಮವು, ಲಙ್ ಸ್ಥಾನವಲ್ಲಿ ಬಂದ ತಿಪ್ಪಿಗೆ ಲೋಪ ಬಂದಿದ್ದರೂ ಬರುವುದು. ಯದ್ಯಪಿ ‘ ವರ್ಣಾಶ್ರಯೇ ನಾಸ್ತಿ ಪ್ರತ್ಯಯಲಕ್ಷಣಂ ’ ಎಂಬುದರಿಂದ ಹಲಾದಿತ್ವವು ಪ್ರತ್ಯಯಲಕ್ಷಣದಿಂದ ಬರಲಾರದೆಂದು ಶಂಕೆಬರಬಹುದು ಆದರೂ ಎಲ್ಲಿ ವರ್ಣವು ಪ್ರಧಾನವಾಗಿ ಉಪಾತ್ತವಾಗಿರುವುದೋ ಅಲ್ಲಿಯೇ ‘ ವರ್ಣಾಯೇ ’ ಎಂಬ ನಿಷೇಧ ಬರುವುದು. ‘ ಗವೇಹಿತಂ ’ ಎಂದು ವಿಗ್ರಹಮಾಡಿದಾಗ ಗೋಶಬ್ದದ ಮುಂದಿರುವ ಏ ಎಂಬ ಚತುರ್ಥೀವಿಭಕ್ತಿಗೆ ಲುಕ್ ಬಂದಿರುವುದು, ‘**ಏಚೋಽಯವಾಯಾವಃ**’ (ಪಾ. ಸೂ. ೬,೧-೭೮) ಎಂಬಲ್ಲಿ ಅಚ್ ಪರವಾಗಿರುವಾಗ ಏಚ್ಚಿಗೆ ಆಯಾದ್ಯಾದೇಶಗಳು ಬರುವುವು ಎಂದು ಪ್ರಧಾನವಾಗಿ ಅಚ್ ಎಂಬ ವರ್ಣವು ಆಶ್ರಿತವಾಗಿರುವುದು. ಆದ್ದರಿಂದ ಇಲ್ಲಿ ಪ್ರತ್ಯಯಲಕ್ಷಣ ಬರುವುದಿಲ್ಲ. ಆದಕಾರಣ ಲುಪ್ತವಾದ ಏ ಯನ್ನು ನಿಮಿತ್ತಮಾಡಿಕೊಂಡು ಗೋ ಶಬ್ದದ ಓಕಾರಕ್ಕೆ ಅವಾದೇಶಬರುವುದಿಲ್ಲ. ಪ್ರಕೃತದಲ್ಲಿ ‘ ಹಲಾದೌಪಿತಿ ’ ಎಂದು ಅಪ್ರಧಾನವಾಗಿ ವರ್ಣಾಶ್ರಯವಿರುವುದರಿಂದ, ‘ ವರ್ಣಾಶ್ರಯೇ ’ ಎಂಬ ನಿಷೇಧ ಬರುವುದಿಲ್ಲ. ಆದ್ದರಿಂದ ತಿಪ್ಪಿಗೆ ಲೋಪಬಂದರೂ ಪ್ರತ್ಯಯಲಕ್ಷಣದಿಂದ ಹಲಾಪಿತ್ಸಾರ್ವಧಾತುಕಪರತ್ವವು ಸಂಭವಿಸುವುದರಿಂದ ಇಮಾಗಮ ಬರಲು ತಡೆಯಿಲ್ಲ. ಈ ಪಕ್ಷದಲ್ಲಿ ಕ್ವಿಪ್‌ಗೆ ಲೋಪಬಂದರೂ, ‘**ಘುಮಾಸ್ಥಾ**’ ಎಂಬಲ್ಲಿ ಹಲಾದಿಯೂ ಕಿತ್ತು ಅಥವಾ ಙಿತ್ತು ಆದ ಆರ್ಧಧಾತುಕಪರವಾಗಿರುವಾಗ ಈತ್ವ ಬರುವುದು ಎಂಬಲ್ಲಿ ಅಪ್ರಧಾನವಾಗಿ ವರ್ಣಾಶ್ರಯವಿರುವುದರಿಂದ **ವರ್ಣಾಶ್ರಯೇನಾಸ್ತಿ** ಎಂಬ ನಿಷೇಧ ಬರುವುದಿಲ್ಲ. ಪ್ರತ್ಯಯವು ಪ್ರಧಾನವಾಗಿ ಆಶ್ರಿತವಾಗಿರುವುದರಿಂದ, ಪ್ರತ್ಯಯಲಕ್ಷಣವು ಬರುವುದರಿಂದ ಈತ್ವವು ಪ್ರಾಪ್ತವಾಗುವುದು. ಇನ್ನು ನಿಯಮಪಕ್ಷದಲ್ಲಿ ನೋಡುವ, ಸ್ಥಾನಿವತ್ಸೂತ್ರದಿಂದ ಸಿದ್ಧವಾಗುವಾಗ ಈ ಸೂತ್ರವು ‘ **ಸಿದ್ಧೇ ಸತ್ಯಾರಭ್ಯಮಾಣೋವಿಧಿರ್ನಿಯಮಾಯಭವತಿ** ’ ಎಂಬ ನ್ಯಾಯದಿಂದ ನಿಯಾಮಕವಾಗುವುದು. ಪ್ರತ್ಯಯಕ್ಕೆ ಅಸಾಧಾರಣವಾದ ರೂಪವು ಯಾವ ಕಾರ್ಯದಲ್ಲಿ ಪ್ರಯೋಜಕವೋ ಆದೇ ಕಾರ್ಯವು ಪ್ರತ್ಯಯಕ್ಕೆ ಲೋಪ ಬಂದಿದ್ದರೂ ಬರುವುದು ಪ್ರತ್ಯಯಾಪ್ರತ್ಯಯಸಾಧಾರಣವಾದ ರೂಪವನ್ನು ನಿಮಿತ್ತಮಾಡಿಕೊಂಡುಬರುವ ಕಾರ್ಯವು ಪ್ರತ್ಯಯಲಕ್ಷಣದಿಂದ ಬರುವುದಿಲ್ಲವೆಂದು ನಿಯಮಶರೀರ. ಇದರಿಂದ ಶೋಭನಾಃ ದೃಷದಃ ಯಸ್ಯ ಪ್ರಾಸಾದಸ್ಯ ಸಃ ಸುದೃಷತ್ಪ್ರಾಸಾದಃ ಎಂಬಲ್ಲಿ ಅಸಂತತ್ವವು ಪ್ರತ್ಯಯಾಪ್ರತ್ಯಯಸಾಧಾರಣವಾದ್ದರಿಂದ ಅದನ್ನು ಮುನ್ನಿಟ್ಟುಕೊಂಡು ‘ **ಸೋರ್ಮನಸೀ ಅಲೋಮೋಷಸೀ** ’ (ಪಾ. ಸೂ. ೬-೨-೧೧೭) ಸು ಎಂಬುದರ ಮುಂದೆ

ಇರುವ ಲೋರ್ಮ್ಗ, ಉಷಸ್ ಎಂಬ ಶಬ್ದಗಳನ್ನುಳಿದ ಮನ್ನಂವು, ಅಸಂತವೂ ಸಹ ಆದ್ಯುದಾತ್ತವಾಗುವುದು ಎಂದು ವಿಹಿತವಾದ ಆದ್ಯುದಾತ್ತವು ಪ್ರತ್ಯಯಲಕ್ಷಣದಿಂದ ಬರುವುದಿಲ್ಲ. ಸು, ದೃಷ್‌ದ್ ಅಸ್ ಎಂಬಲ್ಲಿ ಬಹು ವ್ರೀಹಿ ಬಂದು ಅಸ್ ಎಂಬುದಕ್ಕೆ ಲುಕ್ ಬಂದಿರುವುದು. ಆದ್ದರಿಂದ ಸುದೃಷದ್ ಎಂಬುದು ಸ್ವತಃ ಅಸಂತವಲ್ಲ. ಪ್ರತ್ಯಯ ಲಕ್ಷಣವೂ ಇಲ್ಲಿ ಬರುವುದಿಲ್ಲ. ಪ್ರಕೃತದಲ್ಲಿ ಈ ಪಕ್ಷದಲ್ಲಿ ಹಲಾದಿತ್ವವು ಪ್ರತ್ಯಯಾಪ್ರತ್ಯಯ ಸಾಧಾರಣವಾದ್ದರಿಂದ ಅದನ್ನು ಪ್ರತ್ಯಯ ಲಕ್ಷಣದಿಂದ ತರಲಾಗುವುದಿಲ್ಲ ಆದ್ದರಿಂದ ಕ್ವಿಪ್ಪನ್ನು ಮಾಡಿದರೂ, ಈತ್ವವು ಬರುವುದಿಲ್ಲ, ವಸ್ತುತಃ, **ಧ್ಯಾಪ್ಯೋಸ್ಸಂಪ್ರಸಾರಣಂಚ** ಎಂಬ ವಾರ್ತಿಕದಲ್ಲಿ ಮಹಾಭಾಷ್ಯಕಾರರು 'ಧೀಧ್ಯಾರ್ಯತೇರ್ದಧಾತೇರ್ವಾ' ಎಂದು ಹೇಳಿರುವರು. ಈ ಭಾಷ್ಯವನ್ನು ಪರ್ಯಾಲೋಚಿಸಿದರೆ 'ಧಾ' ಧಾತುವಿನ ಮುಂದೆ ಕ್ವಿಪ್ಪನ್ನಿಟ್ಟಾಗ **ಘುಮಾಸ್ಥಾ** ಎಂಬುದರಿಂದ ಈತ್ವ ಅಭ್ಯುಪಗತವಾಗಿರುವುದು, ಆದ್ದರಿಂದ, **ಹಲಿ** ಎಂಬು ದಕ್ಕೆ **ಅನಚಿ** ಎಂದು ಅರ್ಥವೇರ್ಪಡುವುದು ಏ ವಂಚ, **'ಘುಮಾಸ್ಥಾ-'** ಇತ್ಯಾದಿ ಸೂತ್ರಕ್ಕೆ ಕಿತ್ತು ಅಥವಾ ಙಿ ತ್ತು ಆದ ಅಜಾದಿಯಲ್ಲದ ಆರ್ಧಧಾತುಕವು ಪರದಲ್ಲಿದ್ದರೆ, ಘುಮಾಸ್ಥಾದಿ ಧಾತುಗಳಿಗೆ ಈತ್ವಬರುವುದು ಎಂದು ಅರ್ಥವಾಗುವುದು ಏವಂಚ, ಗೋದಾಃ ಎಂಬಲ್ಲಿ ಕ್ವಿಪ್ ಪ್ರತ್ಯಯವನ್ನು ಮಾಡಿದರೆ, ಅದು ಅಜಾದಿಯಲ್ಲದ ಕಿತ್ತಾದ ಆರ್ಧಧಾತುಕವಾದ್ದರಿಂದ, ಅದನ್ನು ನಿಮಿತ್ತ ಮಾಡಿಕೊಂಡು, ಈತ್ವಬರಬೇಕಾಗುವುದು, ಆದಕ್ಕಾಗಿ ವಿಚ್ ಪ್ರತ್ಯಯವನ್ನೇ ಮಾಡಬೇಕು, ಎಂದು ವರ್ಣಿತವಾಗಿರುವುದು ಯುಕ್ತವಾಗಿರುವುದು, ಹೀಗಾದರೆ, ಶಂಸ್ಥಾ ಎಂಬಲ್ಲಿ **'ಅಂಬಾಬಗೋಭೂ-'**(ಪಾ. ಸೂ-) ಎಂಬ ಸೂತ್ರದಲ್ಲಿರುವ ಸವ್ಯೇಷ್ಠಾ ಎಂಬಲ್ಲಿಯೂ ಕ್ವಿಪ್ಪನ್ನು ಮಾಡಿ ದರೆ ಈತ್ವ ಬರಬೇಕಾಗುವುದು. ಆದ್ದರಿಂದ ಅಲ್ಲಿಯೂ ವಿಚ್ ಬರುವುದೆಂದೇ ಇಟ್ಟುಕೊಳ್ಳಬೇಕಾಗುವುದು. 'ಧೀಧ್ಯಾರ್ಯತೇರ್ದದಾತೇರ್ವಾ' ಎಂಬಲ್ಲಿ ಭಾಷ್ಯಕಾರರಿಗೆ ಅಪೂರ್ವವಾದ ಈತ್ವವಿಧಿಯಲ್ಲಿ ತಾತ್ಪರ್ಯವೆಂದು ಇಟ್ಟುಕೊಂಡರೆ ಹಲಿ, ಎಂಬುದಕ್ಕೆ ಅನಚಿ ಎಂದು ಅರ್ಥವಾಗುವುದಿಲ್ಲ. ಆಗ ಕ್ವಿಪ್ಪನ್ನುಮಾಡಿದರೂ ಈತ್ವ ಬರುವು ದಿಲ್ಲ. ಏವಂಚ ಘುಮಾಸ್ಥಾ ಸೂತ್ರದಲ್ಲಿ, **ಈತ್ವೇವಕಾರಪ್ರತಿಷೇಧೋವಕ್ತವ್ಯಃ ಘ್ಯತೇಂ ಘ್ಯತಸಾವಾನ ಇತಿ ದರ್ಶನಾತ್**, ಎಂಬ ವಾರ್ತಿಕಾರಂಭ ಪಕ್ಷದಲ್ಲಿಯೂ, ಕ್ವಿಪ್ಪನ್ನು ಮಾಡಿದಾಗ ಈತ್ವವು ಪ್ರವರ್ತಿಸುವುದಿಲ್ಲ, ಈ ವಾರ್ತಿಕ ಪ್ರತ್ಯಾಖ್ಯಾನ ಪಕ್ಷದಲ್ಲಿ ಆರಂಭ ಪ್ರತ್ಯಾಖ್ಯಾನಗಳಿಗೆ ಫಲೈಕ್ಯಕ್ಕಾಗಿ ಪಾದಿಧಾತುಗಳ ಮುಂದೆ ಕ್ವನಿಪ್ ಬರುವುದಿಲ್ಲವೆಂದು ಇಟ್ಟುಕೊಳ್ಳಬೇಕು, ಹಲಿ ಎಂಬುದಕ್ಕೆ ಅನಜಾದಿ ಎಂದು ಅರ್ಥವಾದರೆ, ಪಾದಿ ಧಾತುಗಳ ಮುಂದೆ, ಕ್ವಿಪ್ಪೂ ಬರುವುದಿಲ್ಲವೆಂದು ಇಟ್ಟುಕೊಳ್ಳಬೇಕು. ದಧಾತೇರ್ವಾ ಎಂಬಲ್ಲಿ, ಅಪೂರ್ವವಾದ ಈತ್ವವೇ ಭಾಷ್ಯಕಾರಾಭಿಮತವೆಂದು ಒಪ್ಪಿ ಹಲಿ ಎಂಬುದಕ್ಕೆ ಅನಜಾದಿ ಎಂದು ಅರ್ಥವನ್ನು ವರ್ಣಿಸದೇ ಇದ್ದರೆ ಪಾದಿಧಾ ಗಳ ಮುಂದೆ ಕ್ವಿಪ್‌ಗೆ ಉತ್ಪತ್ತಿಯನ್ನು ಒಪ್ಪಿದರೂ ಬಾಧಕವಿರುವುದಿಲ್ಲ. ರಯಿಃ **ಅಸ್ಯ ಅಸ್ತಿ ಇತಿ ರೇವಾನ್** (ಹಣವು ಇವನಲ್ಲಿ ಇದೆ) **ತದಸ್ಯಾಸ್ತ್ಯಸ್ಮಿನ್ನಿತಿಮತುಪ್** (ಪಾ ಸೂ. ೫-೨-೯೪) ಎಂಬುದರಿಂದ ರಯಿ ಶಬ್ದದ ಮೇಲೆ ಮತುಪ್ ಪ್ರತ್ಯಯವನ್ನು ಹಚ್ಚಿದಾಗ ರಯಿ+ಮತ್-'ಛಂದಸೀರಃ' (ಪಾ. ಸೂ. ೮-೨-೧೫) ಇವರ್ಣ ಅಥವಾ ರೇಫದ ಮುಂದಿರುವ ಮತುಪ್ಪಿನ ಮಕಾರಕ್ಕೆ ವಕಾರ ಬರುವುದು ಎಂಬುದರಿಂದ ವಕಾರ ಬಂದರೆ ರಯಿ+ವತ್-**ರಯೇರ್ಮತೌಬಹುಲಂಛಂದಸಿ** (ಪಾ. ೬-೧-ವಾ. ೬) ರಯಿ ಶಬ್ದಕ್ಕೆ ಮತುಪ್ಪನ್ನು ಹಚ್ಚಿದಾಗ ಛಂದಸ್ಸಿನಲ್ಲಿ ಸಂಪ್ರಸಾರಣವು ಬಹುಲವಾಗಿ ಬರುವುದು. ಎಂಬುದರಿಂದ ಯಕಾರಕ್ಕೆ ಇಕಾರ ಬಂದರೆ **'ಸಂಪ್ರಸಾ ರಣಾಚ್ಚ'** (ಪಾ. ಸೂ. ೬-೧-೧೦೮) ಎಂಬುದರಿಂದ ಪೂರ್ವರೂಪ ಬಂದು **'ಆದ್ಗುಣಃ'** (ಪಾ. ಸೂ. ೬-೧-೮೭) ಎಂಬುದರಿಂದ ಗುಣ ಬಂದರ, ರೇವತ್-ಪ್ರಥಮೈಕವಚನದಲ್ಲಿ ರೇವಾನ್=ಇಲ್ಲಿ ರಯಿಮತ್ ಎಂದಿರುವಾಗ **"ಹ್ರಸ್ವನುಡ್ಭ್ಯಾಂ ಮತುಪ್"** (ಪಾ. ಸೂ. ೬-೧-೧೭೬) ಅಂತೋದಾತ್ತಹ್ರಸ್ವವನ್ನು ಕಡೆಯಲ್ಲಿ ಹೊಂದಿರುವ

ಶಬ್ದ, ನುಟ್ ಇವುಗಳ ಮುಂದಿರುವ ಮತುಪ್ಪು ಉದಾತ್ತವಾಗುವುದು ಎಂಬುದರಿಂದ ಮತುಪ್ಪು ಉದಾತ್ತ.- ಮದಃ-'ಮದೋನುಪಸರ್ಗೇ' (ಪಾ ಸೂ. ೩-೩-೬೭) ಉಪಸರ್ಗಭಿನ್ನವಾದ ಸಂಬಂತವು ಉಪಪದವಾಗಿರುವಾಗ ಮದಧಾತುವಿನ ಮುಂದೆ-'ಅಪ್' ಪ್ರತ್ಯಯು ಬರುವುದು ಎಂಬುವದರಿಂದ ಅಪ್ ಬರುವುದು. ಅದು ಪಿತ್ತ್ವಾದ್ದರಿಂದ ಅನುದಾತ್ತ ॥ ೨ ॥

॥ ಸಂಹಿತಾಪಾಠಃ ॥

ಅಥಾ ತೇ ಅಂತಮಾನಾಂ ವಿದ್ಯಾಮ ಸುಮತೀನಾಂ ।
ಮಾ ನೋ ಅತಿ ಖ್ಯ ಆ ಗಹಿ ॥ ೩ ॥

॥ ಪದಪಾಠಃ ॥

ಅಥ । ತೇ । ಅಂತಮಾನಾಂ । ವಿದ್ಯಾಮ । ಸುಽಮತೀನಾಂ ॥
ಮಾ । ನಃ । ಅತಿ । ಖ್ಯಃ । ಆ । ಗಹಿ ॥ ೩ ॥

॥ ಸಾಯಣಭಾಷ್ಯಂ ॥

ಅಥ ಸೋಮಪಾನಾನಂತರಂ ಹೇ ಇಂದ್ರ ತೇ ತವಾಂತಮಾನಾಮಂತಿಕತಮಾನಾಮತಿಶಯೇನ ಸಮೀಪವರ್ತಿನಾಂ ಸುಮತೀನಾಂ ಶೋಭನಮತಿಯುಕ್ತಾನಾಂ ಶೋಭನಪ್ರಜ್ಞಾನಾಂ ಪುರುಷಾಣಾಂ ಮಧ್ಯೇ ಸ್ಥಿತ್ವಾ ವಿದ್ಯಾಮ । ವಯಂ ತ್ವಾಂ ಜಾನೀಯಾಮ । ಯದ್ವಾ । ಸುಮತೀನಾಂ । ಶೋಭನಬುದ್ಧೀನಾಂ ಕರ್ಮಾನುಷ್ಠಾನವಿಷಯಾಣಾಂ ಲಾಭಾರ್ಥಮಿತ್ಯಧ್ಯಾಹಾರಃ । ಬುದ್ಧಿಲಾಭಾಯ ತ್ವಾಂ ಸ್ಮರೇಮೇತ್ಯರ್ಥಃ । ತ್ವಮಪಿ ನೋಽತಿ ಮಾಖ್ಯಃ । ಅಸ್ಮಾನತಿಕ್ರಮ್ಯಾನ್ಯೇಷಾಂ ತ್ವತ್ಸ್ವರೂಪಂ ಮಾ ಪ್ರಕಥಯ । ಕಿಂತ್ವಾ ಗಹ್ಯಸ್ಮಾನೇವಾಗಚ್ಛ । ಅಥೇತಿ ನಿಪಾತ ಆದ್ಯುದಾತ್ತಃ । ನಿಪಾತಸ್ಯ ಚೇತಿ ದೀರ್ಘತ್ವಂ । ಅಂತಮಾನಾಂ । ಅತಿಶಯೇನಾಂತಿಕಾ ಇತ್ಯತಿಶಾಯನೇ ತಮಪ್ । ಪಾ. ೫-೩-೫೫ । ತಮೇ ತಾದೇಶ್ಚ । ಪಾ. ೬-೪-೧೪೯-೯ । ಇತಿ ತಾದಿಲೋಪಃ । ಅಂತೋಽಸ್ಯಾಸ್ತೀತ್ಯಂತಿಕಃ ಸಮೀಪಃ । ಅತ ಇನಿಠನಾವಿತಿ ಠನ್ । ನಿತ್ತ್ವಾದಾದ್ಯುದಾತ್ತಃ । ದೂರೋತ್ಕರ್ಷಸ್ಯ ವ್ಯವಸಾನಂ ನಾಸ್ತಿ । ಸಾಮೀಪ್ಯೋತ್ಕರ್ಷಸ್ಯ ಪುನರ್ಯೋ ಯಸ್ಯ ಸಮೀಪಃ ಸ ಏವ ತಸ್ಯಾಂತ ಇತ್ಯಂತವತ್ತ್ವಾತ್ಸಮೀಪಮಂತಿಕಮುಚ್ಯತೇ । ವಿದ್ಯಾಮ । ವೇತ್ತೇರ್ಲಿಙಿ । ಯಾಸುಟ್ ಪರಸ್ಮೈಪದೇಷೂದಾತ್ತೋ ಙಿಚ್ಚ । ಪಾ. ೩-೪-೧೦೩ । ಇತಿ ಯಾಸುಡುದಾತ್ತಃ । ಪಾದಾದಿತ್ವಾತ್ತಿಙ್ಙತಿಙ ಇತಿ ನ ನಿಘಾತಃ । ಸುಮತೀನಾಂ । ಮತಿಶಬ್ದೇ ಕ್ತಿನಂತೇಽಪಿ ಮಂತ್ರೇ ವೃಷೇಷಪಚಮನವಿದಭೂವೀರಾ ಉದಾತ್ತಃ । ಪಾ. ೩-೩-೯೬ ।

ಇತೀಕಾರ ಉದಾತ್ತಃ | ಶೋಭನಾ ಮತಿರ್ಯೇಷಾಂ ತೇ ಸುಮತಯ ಇತಿ ಬಹುವ್ರೀಹೌ ಪೂರ್ವಪದ-ಪ್ರಕೃತಿಸ್ವರಾಪವಾದೇನ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತಃ | ಶೋಭನಾ ಮತಯಃ ಸುಮತಯ ಇತಿ ಕರ್ಮಧಾರಯೇಽಪ್ಯವ್ಯಯಪೂರ್ವಪದಪ್ರಕೃತಿಸ್ವರಾಪವಾದಃ | ಕೃದುತ್ತರಪದಪ್ರಕೃತಿಸ್ವರೇಣಾಂ-ತೋದಾತ್ತತ್ವೈವ | ಅತೋ ಮತುಪಿ ಹ್ರಸ್ವಾದಂತೋದಾತ್ತಾಚ್ಚ ಸುಮತಿಶಬ್ದಾತ್ಪರಸ್ಯ ನಾಮೋ ನಾಮನ್ಯ-ತರಸ್ಯಾಮಿತ್ಯುದಾತ್ತತ್ವಂ | ಖ್ಯಃ | ಖ್ಯಾ ಪ್ರಕಥನ ಇತ್ಯಸ್ಯ ಲುಙಾ ಸಿಪ್ಯಸ್ಯತಿವಕ್ತಿಖ್ಯಾತಿಭ್ಯೋಽಙ್ | ಪಾ. ೩-೧-೫೨ | ಇತಿ ಚ್ಲೇರಙಾದೇಶಃ| ಆತೋ ಲೋಪ ಇಟಿ ಚ| ಪಾ.೬-೪-೬೪ | ಇತ್ಯಾಕಾರಲೋಪಃ | ಇತಶ್ಚ | ಪಾ. ೩-೪-೧೦೦ | ಇತೀಕಾರಲೋಪೋ ರುತ್ವವಿಸರ್ಗೌ | ನ ಮಾಙ್ಯೋಗೇ | ಪಾ ೬-೪-೭೪| ಇತ್ಯಡಭಾವಃ | ಗಹಿ | ಗಮೇರ್ಬಹುಲಂ ಛಂದಸೀತಿ ಶಪೋ ಲುಕಿ ಹೇರ್ಙಿತ್ತ್ವಾದನುದಾತ್ತೋಪ-ದೇಶೇತಿ ಮಕಾರಲೋಪಸ್ಯಾಸಿದ್ಧವದತ್ರಾ ಭಾದಿತ್ಯಸಿದ್ಧತ್ವಾದತೋ ಹೇರಿತಿ ಲುಗ್ನ ಭವತಿ ||

|| ಪ್ರತಿಪದಾರ್ಥ ||

**ಅಥ**—ಸೋಮಪಾನಾನಂತರ | (ಎಲೈ ಇಂದ್ರನೇ) **ವಯಂ**—ನಾವು | **ತೇ**—ನಿನ್ನ | **ಅಂತಮಾನಾಂ**—ಅತ್ಯಂತ ಸಮೀಪದಲ್ಲಿರುವ | **ಸುಮತೀನಾಂ**—ಒಳ್ಳೆಯ ಬುದ್ಧಿಯುಳ್ಳ (ವಿವೇಕಿಗಳ ಅಥವಾ ಪ್ರಜ್ಞಾನಂತರ) ಮನುಷ್ಯರ (ಮಧ್ಯದಲ್ಲಿದ್ದುಕೊಂಡು) || **ವಿದ್ಯಾಮ**—ನಿನ್ನನ್ನು ತಿಳಿಯುತ್ತೇವೆ (ನಿನ್ನ ಸ್ಮರಣೆ ಮಾಡುತ್ತೇವೆ ಅಥವಾ ಕರ್ಮಾನುಷ್ಠಾನವಿಷಯ ಪ್ರಾಪ್ತಿಗಾಗಿ ಪ್ರಜ್ಞಾಲಾಭಕ್ಕಾಗಿ ನಿನ್ನ ಸ್ಮರಣೆಮಾಡುತ್ತೇವೆ)! (ನೀನು ಸಹ) **ನಃ**—ನಮ್ಮನ್ನು **ಅತಿ**—ಬಿಟ್ಟು (ಇತರರಿಗೆ) | **ಮಾ ಖ್ಯಃ**—(ನಿನ್ನ ಸ್ವರೂಪವನ್ನು) ಹೇಳಬೇಡ | **ಆ ಗಹಿ**—(ನಮ್ಮ ಸಮೀಪಕ್ಕೇ) ಬರುವವನಾಗು

|| ಭಾವಾರ್ಥ ||

ಎಲೈ ಇಂದ್ರನೇ, ಸೋಮಪಾನಾನಂತರ ನಾವು ನಿನ್ನ ಸಮೀಪದಲ್ಲಿದ್ದುಕೊಂಡು ಸತ್ಕರ್ಮಾನುಷ್ಠಾನ ವಿಷಯದಲ್ಲಿ ಒಳ್ಳೆಯ ಬುದ್ಧಿಗಾಗಿ ಅಥವಾ ಉತ್ತಮವಾದ ಪ್ರಜ್ಞಾ (ತಿಳುವಳಿಕೆ) ಲಾಭಕ್ಕಾಗಿ ನಿನ್ನನ್ನು ಸ್ಮರಣೆ ಮಾಡುತ್ತಿರುವೆವು. ಇಂತಹ ನಮ್ಮ ಸಮೀಪಕ್ಕೆ ನೀನು ಬರಬೇಕು ಇತರರಿಗೆ ನಿನ್ನ ಸ್ವರೂಪವನ್ನು ತಿಳಿಸ ಬೇಡ ಮತ್ತೂ ಅವರಿಗೆ ಒಳ್ಳೆಯ ಬುದ್ಧಿಯುಂಟಾಗುವಂತೆಯೂ ಮಾಡಬೇಡ.

English Translation.

We recognize you in the midst of the right-minded who are nearest to you, come to us; do not reveal yourself to others.

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿ ವಿಶೇಷಕಠಿನವಾದ ಶಬ್ದಗಳಿಲ್ಲದೆ ಸುಲಭವಾದ ಮತ್ತು ಬಳಕೆಯಲ್ಲಿರುವ ಶಬ್ದಗಳಿಂದಲೇ ಕೂಡಿದ್ದರೂ ಋಷಿಯ ಆಶಯವೇನೆಂಬುದು ಅಷ್ಟು ಸ್ಪಷ್ಟವಾಗಿಲ್ಲ. ಭಾಷ್ಯಕಾರರೂ ಇತರರೂ ಕೆಲವು ಅಧ್ಯಾಹಾರಪದಗಳನ್ನು ಉಪಯೋಗಿಸಿ ಸ್ವಲ್ಪಮಟ್ಟಿಗೆ ಅರ್ಥವಾಗುವಂತೆ ಬರೆದಿದಾರೆ. ಆದರೂ ಅರ್ಥವು ಸಮಂಜಸ

ವಾಗಿ ಹೊಂದುವುದಿಲ್ಲ. ಸುಮತೀನಾಂ ವಿದ್ಯಾಮ ಮತ್ತು ಮಾ ನೋ ಅತಿ ಖ್ಯಃ ಎಂಬ ವಾಕ್ಯಗಳ ಅರ್ಥವು ವಿಶದವಾಗಬೇಕಾದರೆ ಇನ್ನೂ ಕೆಲವು ಶಬ್ದಗಳ ಅವಶ್ಯಕತೆ ಇದೆ. ಅಂತಹ ಶಬ್ದಗಳು ಋಕ್ಕಿನಲ್ಲಿಲ್ಲ. ಛಂದಸ್ಸಿಗೆ ಲೋಪಬರುವುದೆಂದೋ ಅಥವಾ ತನ್ನ ಮನಸ್ಸಿನಲ್ಲಿರುವ ಅಭಿಪ್ರಾಯವು ಋಕ್ಕಿನಲ್ಲಿರುವ ಶಬ್ದಗಳಿಂದಲೇ ವ್ಯಕ್ತ ವಾಗುವುದೆಂದೋ ಋಷಿಯು ಅವಶ್ಯಕವೂ ಮುಖ್ಯವೂ ಆದ ಕೆಲವು ಶಬ್ದಗಳನ್ನು ಬಿಟ್ಟಿರುವಂತೆ ತೋರುವುದು. ಆದುದರಿಂದ ಈ ಋಕ್ಕಿನ ಮತ್ತು ಮುಂದಿನ ಎರಡು ಮೂರು ಋಕ್ಕುಗಳ ಅರ್ಥವು ಅಸ್ಪಷ್ಟವಾಗಿಯೇ ಉಳಿದಿದೆ.

**ಅಥ**— ಈ ಶಬ್ದದ ಥಕಾರವು ಛಂದಸ್ಸಿನ ಅನುಕೂಲಕ್ಕಾಗಿ ದೀರ್ಘವಾಗಿರುವುದು. ಇಂತಹ ಉದಾ ಹರಣೆಗಳು ಋಗ್ವೇದದಲ್ಲಿ ಬೇಕಾದಷ್ಟಿವೆ. ಉದಾ–ಸಚಸ್ವ–ಸಚಸ್ವಾ (ಋ. ಸಂ. ೧-೧-೯) ಶ್ರುಧಿ-—ಶ್ರುಧೀ (ಋ. ಸಂ. ೧-೨-೧) ಪೃಚ್ಛ—ಪೃಚ್ಛಾ (ಋ. ಸಂ. ೧-೪-೪) ಪಿಬ–ಪಿಬಾ ( ಋ. ಸಂ. ೧-೧೪-೧೦ ) ಇತ್ಯಾದಿ | **ಸುಮತೀನಾಂ**—ಈ ಶಬ್ದದ ವಿವರಣೆಯನ್ನು ಹಿಂದೆಯೇ ಕೊಟ್ಟಿದೇವೆ. (ಪೇ. 81 ನೋಡಿ) **ಮಾ**—ನಿಷೇ ಧಾರ್ಥಕಶಬ್ದವು. ಬೇಡ ಎಂದರ್ಥವು.ಈ ಶಬ್ದವು ಋಗ್ವೇದದಲ್ಲಿ ವಿಶೇಷವಾಗಿ ಬಳಕೆಯಲ್ಲಿದೆ | **ಅತಿ**—ವಿನಹ, ಬಿಟ್ಟು ಹೊರತು, Beyond, besides &c.

॥ ವ್ಯಾಕರಣಪ್ರಕ್ರಿಯಾ ॥

ಅಥ ಎಂಬುದು ನಿಪಾತ ಆದ್ದರಿಂದ 'ನಿಪಾತಾ ಆದ್ಯುದಾತ್ತಾಃ' (ಪಾ. ಸೂ. ೮೦) ಎಂಬುದರಿಂದ ಆದ್ಯು ದಾತ್ತ 'ನಿಪಾತಸ್ಯ ಚ' (ಪಾ.ಸೂ. ೬-೩-೧೩೬) ಮಂತ್ರದಲ್ಲಿರುವ ನಿಪಾತಕ್ಕೆ ದೀರ್ಘ ಬರುವುದು-ಎಂಬುದರಿಂದ ದೀರ್ಘ ಬಂದರೆ ಅಥಾ ಎಂದಾಗುವುದು. ಅಂತಮಾನಾಂ, ಅಂತಃ ಅಸ್ಯ ಅಸ್ತಿ (ಅವಧಿಯು ಇದಕ್ಕೆ ಇದೆ) ಎಂದು ವ್ಯುತ್ಪತ್ತಿ ಮಾಡಿದಾಗ 'ಅತ ಇನಿಠನೌ' (ಪಾ. ಸೂ. ೫-೨-೧೧೫) ಮತ್ವರ್ಥದಲ್ಲಿ ಹ್ರಸ್ವ ಅಕಾರಾಂತ ಪ್ರಾತಿಪದಿಕದ ಮುಂದೆ ಇನಿ, ಠನ್ ಪ್ರತ್ಯಯಗಳು ಬರುವುವು ಎಂಬುದರಿಂದ ಠನ್ ಪ್ರತ್ಯಯವನ್ನು, ಮಾಡಿದರೆ ಅದಕ್ಕೆ 'ಠಸ್ಯೇಕಃ' (ಪಾ. ಸೂ. ೭-೩-೫೦) ಎಂಬುದರಿಂದ ಇಕಾದೇಶ ಬಂದರೆ ಅಂತ+ಇಕ ಎಂದಿರುವಾಗ, ಯಸ್ಯೇತಿಚ (ಪಾ. ಸೂ. ೬-೪ ೧೪೮)ತ್ ಮುಂದಿರುವ 'ಅ'ಗೆ ಲೋಪ ಬಂದರೆ ಅಂತಿಕ ಎಂದು ಆಗುವುದು. ದೂರದ ಉತ್ಕರ್ಷಕ್ಕೆ ಅವಧಿ ಇರುವುದಿಲ್ಲ. ಸಮೀಪದ ಉತ್ಕರ್ಷಕ್ಕಾದರೋ ಯಾವುದು ಯಾವುದಕ್ಕೆ ಸಮೀಪ ದಲ್ಲಿರುವುದೋ ಅದೇ ಅದಕ್ಕೆ ಅವಧಿಯಾಗುವುದು., ಅಂತ (ಅವಧಿ) ಇರುವುದರಿಂದ ಅನ್ತಿಕ ಶಬ್ದವು ಸಮೀಪ ಎಂಬ ಅರ್ಥವನ್ನು ಹೇಳುವುದು. ಅತಿಶಯೇನ ಅನ್ತಿಕಾಃ ಎಂದು ಅತಿಶಯಾರ್ಥ ವಿವಕ್ಷೆ ಮಾಡಿದಾಗ 'ಅತಿ ಶಾಯನೇ ತಮಬಿಷ್ಠನೌ' (ಪಾ. ಸೂ. ೫-೩-೫೫) ಅತಿಶಯಾರ್ಥದಲ್ಲಿರುವ ಪ್ರಾತಿಪದಿಕದ ಮುಂದೆ ಸ್ವಾರ್ಥದಲ್ಲಿ ತಮಪ್ ಇಷ್ಠನ್ ಪ್ರತ್ಯಯಗಳು ಬರುವುವು ಎಂಬುದರಿಂದ ತಮಪ್ ಬಂದರೆ ಅನ್ತಿಕ+ತಮ ಎಂದಿರುವಾಗ **ತಮೇತಾ ದೇಶ್ಚ** (ಪಾ. ಸೂ ೬-೪-೧೪೯-ವಾ. ೯) ತಮಪ್ ಪ್ರತ್ಯಯವು ಪರದಲ್ಲಿರುವಾಗ ತಕಾರಾದಿ ವರ್ಣಸಮುದಾ ಯಕ್ಕೆ ಲೋಪ ಬರುವುದು ಎಂಬುದರಿಂದ ಅನ್ತಿಕ ಎಂಬಲ್ಲಿ ತಿಕ ಎಂಬುದಕ್ಕೆ ಲೋಪ ಬರುವುದು ಅನ್ತಮ ಎಂದಾಗುವುದು. ಷಷ್ಠೀ ಬಹುವಚನದಲ್ಲಿ ಅನ್ತಮಾನಾಂ ವಿದ್ಯಾಮ–ವಿದಜ್ಞಾನೇ ಎಂಬ ಅದಾದಿಕ ಧಾತು ವಿನ ಮೇಲೆ ಲಿಙ್ ಲಕಾರವನ್ನಿಟ್ಟಾಗ **ಯಾಸುಟ್ ಪರಸ್ಮೈಪದೇಷೂದಾತ್ತೋಙಿಚ್ಚ** (ಪಾ. ಸೂ ೩-೪-೧೦೩) ಲಿಙ್ ಸ್ಥಾನದಲ್ಲಿ ಬಂದ ಪರಸ್ಮೈಪದ ಪ್ರತ್ಯಯಗಳಿಗೆ, ಯಾಸುಟ್, ಆಗಮ ಬರುವುದು ಅದು ಉದಾತ್ತವೂ ಙಿತ್ತೂ ಆಗುವುದು, ಎಂಬುದರಿಂದ ಯಾಸುಟ್ ಉದಾತ್ತ. ಇದು ಪಾದದ ಆದಿಯಲ್ಲಿರುವುದರಿಂದ 'ತಿಙ್ಙತಿಙಃ'

ಎಂಬುದರಿಂದ ಅನುದಾತ್ತ ಬರುವುದಿಲ್ಲ. **ಸುಮತೀನಾಂ**-ಮತಿಶಬ್ದವು ಕ್ತಿನ್ನಂತವಾದರೂ ನಿತ್ಸ್ವರ (ಆದ್ಯುದಾತ್ತ) ಬರುವುದಿಲ್ಲ **ಮಂತ್ರೇವೃಷೇಷ ಪಚ ಮನ ವಿದ ಭೂ ವೀರಾ ಉದಾತ್ತಃ** (ಪಾ. ಸೂ. ೩-೩-೯೬) ವೃಷು ಸೇಚನೇ, ಇಷು ಇಚ್ಛಾಯಾಂ, ಡುಪಚಷ್‌ಪಾಕೇ, ಮನ ಜ್ಞಾನೇ, ವಿದ ಸತ್ತಾಯಾಂ, ಭೂ ಸತ್ತಾಯಾಂ, ವೀ, ಗತಿವ್ಯಾಪ್ತಿಪ್ರಜನಕಾನ್ತ್ಯಸನಖಾದನೇಷು, ರಾದಾನೇ ಎಂಬೀ ಧಾತುಗಳಿಗೆ ಕ್ತಿನ್ ಪ್ರತ್ಯಯ ಬರುವುದು ಅದು ಉದಾತ್ತವಾಗುವುದು, ಎಂಬುದರಿಂದ ಮನಧಾತುವಿಗೆ ಕ್ತಿನ್ನನ್ನು ಹಚ್ಚಿದಾಗ **ಅನುದಾತ್ತೋಪದೇಶ** (ಪಾ. ಸೂ. ೬-೧-೧೮೬) ಎಂಬುದರಿಂದ ಅನುನಾಸಿಕವಾದ ನಕಾರಕ್ಕೆ ಲೋಪ ಬಂದರೆ ಮತಿ ಎಂದಾಗುವುದು- ಕ್ತಿನ್ನಿನ ಇಕಾರವು ಪೂರ್ವಸೂತ್ರದಿಂದ ಉದಾತ್ತ. ಶೋಭನಾ ಮತಿಃ ಯೇಷಾಂ ತೇ (ಒಳ್ಳೆಯ ಬುದ್ಧಿಯು ಯಾರಿಗೆ ಇದೆಯೋ ಅವರು) ಸುಮತಯಃ ಎಂದು ಬಹುವ್ರೀಹಿಸಮಾಸ ಮಾಡಿದಾಗ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಎಂದು ವಿಹಿತವಾದ ಪೂರ್ವಪದಪ್ರಕೃತಿಸ್ವರಕ್ಕೆ ಅಪವಾದವಾದ **ನಞ್‌ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದವು ಅಂತೋದಾತ್ತವಾಗುವುದು. ಶೋಭನಾಶ್ಚ ತಾಃ ಮತಯಶ್ಚ-(ಒಳ್ಳೆಯ ಬುಧಿಯು) ಎಂದು ಕರ್ಮಧಾರಯ ಸಮಾಸ ಮಾಡಿದಾಗಲೂ **ತತ್ಪುರುಷೇತುಲ್ಯಾರ್ಥ-** (ಪಾ. ಸೂ. ೬-೨-೨) ಎಂದು ವಿಹಿತವಾದ ಅವ್ಯಯ ಪೂರ್ವಪದಪ್ರಕೃತಿಸ್ವರಕ್ಕೆ ಅಪವಾದವಾದ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರಬಂದು ಉತ್ತರಪದವು ಅಂತೋದಾತ್ತವಾಗಿಯೇ ಆಗುವುದು. ಆದ್ದರಿಂದ ಮತುಪ್ಪನ್ನು ಮಾಡಿದಾಗ ಹ್ರಸ್ವವನ್ನು ಕೊನೆಯಲ್ಲಿ ಹೊಂದಿರುವುದೂ ಅಂತೋದಾತ್ತವೂ ಆದ ಸುಮತಿ ಶಬ್ದದ ಮುಂದಿರುವ ನಾಮ್ ಎಂಬ ಷಷ್ಠೀಬಹುವಚನ ವಿಭಕ್ತಿಗೆ **ನಾಮನ್ಯತರಸ್ಯಾಂ** (ಪಾ. ಸೂ. ೬-೧-೧೭೭) ಎಂಬುದರಿಂದ ಉದಾತ್ತ ಬರುವುದು. **ಖ್ಯಃ**-ಖ್ಯಾಪ್ರಕಥನೇ ಧಾತುವಿಗೆ ಲುಙ್‌ನಲ್ಲಿ ಮಧ್ಯಮ ಪುರುಷ ಏಕವಚನ ಸಿಪ್ ಬರುವುದು ಖ್ಯಾ+ಸಿ **ಚ್ಲೇರ್ಲುಙಿ** (ಪಾ.ಸೂ. ೩-೧-೪೩) ಲುಙ್ಙ ನಲ್ಲಿ ಧಾತುವಿನ ಮುಂದೆ ಚ್ಲಿ ಬರುವುದು ಎಂಬುದರಿಂದ ಚ್ಲಿ ಬಂದರೆ ಖ್ಯಾ+ಚ್ಲಿ. ಸಿ-**ಅಸ್ಯತಿವಕ್ತಿಖ್ಯಾತಿಭ್ಯೋಙ್** (ಪಾ. ಸೂ. ೩-೧-೫೨) ಈ ಧಾತುಗಳ ಮುಂದಿರುವ ಚ್ಲಿಗೆ ಅಙ್ ಆದೇಶ ಬರುವುದು ಖ್ಯಾ+ಅ. ಸಿ, **ಆತೋಲೋಪ ಇಟಿ ಚ** (ಪಾ. ಸೂ. ೬-೪-೬೪) ಕಿತ್ತು (ಅಥವಾ) ಙಿತ್ತು ಆದ ಅಜಾದ್ಯಾರ್ಧಧಾತುಕ, ಅಥವಾ ಇಟ್ ಆಗಮ ಇವುಗಳ ಹಿಂದಿರುವ ಆಕಾರಕ್ಕೆ ಲೋಪ ಬರುವುದು ಎಂಬುದರಿಂದ ಆಕಾರಕ್ಕೆ ಲೋಪ ಖ್ಯ್+ಅ+ಸಿ **ಇತಶ್ಚ** (ಪಾ. ಸೂ. ೩-೪-೧೦೦) ಙಕಾರೇತ್ಸಂಜಕವಾದ ಲಕಾರಸ್ಥಾನದಲ್ಲಿ ಬಂದ ಇಕಾರಾಂತವಾದ ಪರಸ್ಮೈಪದ ಪ್ರತ್ಯಯಗಳ ಕೊನೆಯ ವರ್ಣಕ್ಕೆ ಲೋಪ ಬರುವುದು ಎಂಬುದರಿಂದ ಇಕಾರಕ್ಕೆ ಲೋಪ. **ಸಸಜುಷೋರುಃ** (ಪಾ. ಸೂ ೮-೩-೧೫) ಎಂಬುದರಿಂದ ವಿಸರ್ಗವೂ ಬರುವುದು. **ನಮಾಙ್ಯೋಗೇ** (ಪಾ. ಸೂ. ೬-೪-೭೪) ಮಾಙ್ ಎಂಬ ಅವ್ಯಯಯೋಗವಿರುವಾಗ ಅಟ್-ಆಟ್ ಎಂಬ ಆಗಮಗಳು ಬರುವುದಿಲ್ಲ ಎಂಬುದರಿಂದ **ಲುಙ್ ಲಙ್ ಲೃಙ್ಕ್ಷ್ವಡುದಾತ್ತಃ** (ಪಾ. ಸೂ. ೬-೪-೭೧) ಎಂಬುದರಿಂದ ಪ್ರಾಪ್ತವಾದ ಅಡಾಗಮವು ಬರುವುದಿಲ್ಲ. **ಗಹಿ**-ಗಮ್ ಧಾತುವಿಗೆ ಲೋಟ್-ಮಧ್ಯಮಪುರುಷ ಏಕವಚನ ಸಿಪ್ಪನ್ನಿಟ್ಟಾಗ ಶಪ್‌ಗೆ **ಬಹುಲಂಛಂದಸಿ** (ಪಾ. ಸೂ. ೨-೪-೭೩) ಎಂಬುದರಿಂದ ಲುಕ್ ಬರುವುದು. **ಸೇಹ್ಯಪಿಚ್ಚ** (ಪಾ. ಸೂ. ೩-೪-೮೭) ಎಂಬುದರಿಂದ ಸಿಪ್ಪಿನ ಸ್ಥಾನದಲ್ಲಿ ಬಂದ-ಹಿಯು **ಸಾರ್ವಧಾತುಕಮಪಿತ್** ಎಂಬುದರಿಂದ ಙಿತ್ತಾದ್ದರಿಂದ **ಅನುದಾತ್ತೋಪದೇಶವನತಿತನೋತ್ಯಾದೀನಾಮನುನಾಸಿಕಲೋಪೋಝಲಿಕಿಙತಿ** ( ಪಾ. ಸೂ.೬-೪-೩೭ ) ಎಂಬುದರಿಂದ ಮಕಾರಕ್ಕೆ ಲೋಪ ಬರುವುದು **ಅಸಿದ್ಧವದತ್ರಾಭಾತ್** (ಪಾ. ಸೂ. ೬-೪-೨೨) ಎಂಬುದರಿಂದ ಮಕಾರಲೋಪವು ಅಸಿದ್ಧವಾಗುವುದರಿಂದ **ಅತೋಹೇಃ** (ಪಾ. ಸೂ. ೬-೪-೧೦೫) ಎಂಬುದರಿಂದ 'ಹಿ'ಗೆ ಲುಕ್ ಬರುವುದಿಲ್ಲ. ॥೩॥

॥ ಸಂಹಿತಾಪಾಠಃ ॥

ಪರೇಹಿ ವಿಗ್ರಮಸ್ತೃತಮಿಂದ್ರಂ ಪೃಚ್ಛಾ ವಿಪಶ್ಚಿತಂ ।
ಯಸ್ತೇ ಸಖಿಭ್ಯ ಆ ವರಂ ॥ ೪ ॥

॥ ಪದಪಾಠಃ ॥

ಪರಾ । ಇಹಿ । ವಿಗ್ರಂ । ಅಸ್ತೃತಂ । ಇಂದ್ರಂ । ಪೃಚ್ಛ । ವಿಪಃ ऽ ಚಿತಂ ॥
ಯಃ । ತೇ । ಸಖಿ ऽ ಭ್ಯಃ । ಆ । ವರಂ ॥ ೪ ॥

॥ ಸಾಯಣಭಾಷ್ಯಂ ॥

ಅತ್ರ ಯಜಮಾನಂ ಪ್ರತಿ ಹೋತಾ ಬ್ರೂತೇ । ಹೇ ಯಜಮಾನ ತ್ವಮಿಂದ್ರಂ ಪರೇಹಿ । ಇಂದ್ರಸ್ಯ ಸಮೀಪೇ ಗಚ್ಛ । ಗತ್ವಾ ಚ ವಿಪಶ್ಚಿತಂ ಮೇಧಾವಿನಂ ಹೋತಾರಂ ಮಾಂ ಪೃಚ್ಛ । ಅಸೌ ಹೋತಾ ಸಮ್ಯಕ್ ಸ್ತುತವಾನ್ನ ಚೇತ್ಯೇವಂ ಪ್ರಶ್ನಂ ಕುರು । ಯ ಇಂದ್ರಸ್ತೇ ತವ ಯಜಮಾನಸ್ಯ ಸಖಿಭ್ಯ ಋತ್ವಿಗ್ಭ್ಯೋ ವರಂ ಶ್ರೇಷ್ಠಂ ಧನಪುತ್ರಾದಿಕಮಾ ಸಮಂತಾತ್ಪ್ರಯಚ್ಛತೀತಿ ಶೇಷಃ । ತಾದೃಶಮಿಂದ್ರಮಿತಿ ಪೂರ್ವತ್ರಾನ್ವಯಃ । ಪುನರಪಿ ಕೀದೃಶಂ । ವಿಗ್ರಂ ಮೇಧಾವಿನಂ ಅಸ್ತೃತಮಹಿಂಸಿತಂ । ವಿಪ್ರ ಇತ್ಯಾದಿಷು ಚತುರ್ವಿಂಶತಿಸಂಖ್ಯಾಕೇಷು ಮೇಧಾವಿನಾಮಸು ವಿಗ್ರವಿಪಶ್ಚಿಚ್ಛಬ್ದೌ ಪಠಿತೌ ॥ ವಿಗ್ರಂ ವೃಷಾದಿತ್ವಾದಾದ್ಯುದಾತ್ತಃ । ಅಸ್ತೃತಂ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ । ಇಂದ್ರಶಬ್ದ ಋಜ್ರೇಂದ್ರಾಗ್ರೇತ್ಯಾದಿನಾ ರನ್ । ನಿತ್ತ್ವಾದಾದ್ಯುದಾತ್ತಃ । ಸಖಿಭ್ಯಃ । ಸಮಾನೇ ಖ್ಯಃ ಸ ಚೋದಾತ್ತಃ । ಉ. ೪-೧೩೬ । ಇತಿ ಸಮಾನ ಉಪಪದೇ ಖ್ಯಾತೇರಿಣ್ । ಡಿದಿತ್ಯನುವೃತ್ತೇಸ್ತಸ್ಯ ಡಿತ್ತ್ವಾಟ್ಟಿಲೋಪಶ್ಚ ಪಾ. ೬-೪-೧೪೩ । ತತ್ಸನ್ನಿಯೋಗೇನ ಯಲೋಪಃ । ಉಪಪದಸ್ಯೋದಾತ್ತತ್ವಂ । ಸಮಾನಸ್ಯ ಛಂದಸ್ಯಮೂರ್ಧಪ್ರಭೃತ್ಯುದರ್ಕೇಷು । ಪಾ ೬ ३-೮೪ । ಇತಿ ಸಭಾವಃ । ಅತಃ ಸಖಿಶಬ್ದ ಆದ್ಯುದಾತ್ತಃ । ವ್ರಿಯತ ಇತಿ ವರಃ । ಗ್ರಹವೃದೃನಿಶ್ಚಿಗಮಶ್ಚ । ಪಾ. ३-३-೫೮ । ಇತ್ಯಪ್ । ತಸ್ಯ ಪಿತ್ತ್ವಾದ್ಧಾತುಸ್ವರ ಏವ ॥

॥ ಪ್ರತಿಪದಾರ್ಥ ॥

ಈ ಋಕ್ಕಿನಲ್ಲಿ ಹೋತೃವೆಂಬ ಋತ್ವಿಜನು ಯಜಮಾನನನ್ನುದ್ದೇಶಿಸಿ ಹೇಳುವನು—

(ಎಲೈ ಯಜಮಾನನೇ ನೀನು) ವಿಗ್ರಂ--ಬುದ್ಧಿಶಾಲಿಯಾದ । ಇಂದ್ರಂ ಪರೇಹಿ--ಇಂದ್ರನ ಸಮೀಪಕ್ಕೆ ಹೋಗು । (ಹೋಗಿ) ಅಸ್ತೃತಂ—ಶತ್ರುಗಳ ಹಿಂಸೆಗೊಳಗಾಗದ (ಇಂದ್ರನನ್ನು ಕುರಿತು) ವಿಪಶ್ಚಿತಂ ಪೃಚ್ಛ—ಈ ಮೇಧಾವಿಯಾದ (ಹೋತೃವು ನಿನ್ನನ್ನು ಸರಿಯಾಗಿ ಸ್ತೋತ್ರಮಾಡಿದನೇ ಇಲ್ಲವೇ ಎಂಬುದನ್ನು) ಕೇಳು । ಯಃ—(ಯಾವ) ಆ ಇಂದ್ರನು । ತೇ—ನಿನ್ನ । ಸಖಿಭ್ಯಃ—ಸ್ನೇಹಿತರಾದ ಋತ್ವಿಜರಿಗೆ । ವರಂ—ಶ್ರೇಷ್ಠವಾದ ಧನಪುತ್ರಾದಿ ಸಂಪತ್ತನ್ನು । ಆ (ಯಚ್ಛತಿ)—(ಕೊಡುವನು) ।

‖ ಭಾವಾರ್ಥ ‖

ಹೋತೃವು ಯಜ್ಞಮಾಡುವ ಯಜಮಾನನನ್ನು ಕುರಿತು ಈ ರೀತಿ ಹೇಳುವನು—ಎಲೈ ಯಜಮಾನನೇ, ನೀನು ಬುದ್ಧಿಶಾಲಿಯಾದ (ಮೇಧಾವಿಯಾದ) ಇಂದ್ರನ ಸಮೀಪಕ್ಕೆ ಹೋಗಿ-ಈ ಹೋತೃವು ನಿನ್ನನ್ನು ಚೆನ್ನಾಗಿ ಸ್ತೋತ್ರಮಾಡಿದನೇ ಇಲ್ಲವೇ ಎಂಬುದನ್ನು ಕೇಳು. ಇಂದ್ರನು ಹೋತೃ ಮಾಡಿದ ಸ್ತೋತ್ರಗಳಿಂದ ಸಂತೋಷಪಟ್ಟಿರುವನಾದ್ದರಿಂದ ನಿನ್ನ ಸ್ನೇಹಿತರುಗಳೆನಿಸಿದ ಋತ್ವಿಜರಿಗೂ ನಿನಗೂ ಧನ, ಪುತ್ರಸಂಪತ್ತು ಮೊದಲಾದ ಶ್ರೇಷ್ಠವಾದ ವರಗಳನ್ನನುಗ್ರಹಿಸುವನು.

English Translation

Go (worshipper) to the wise (and) uninjured Indra and ask him of the (fitness of the) learned (priest who recites his praise.) Indra will bestow the best of blessings to your friends (priests).

‖ ವಿಶೇಷವಿಷಯಗಳು ‖

ವಿಗ್ರಂ, ವಿಪಶ್ಚಿತಂ— ಈ ಶಬ್ದಗಳು ಮೇಧಾವಿ ಎಂಬ ಅರ್ಥವನ್ನು ಸೂಚಿಸುವ ೨೪ ಪದಗಳ ಮಧ್ಯದಲ್ಲಿ ಪಠಿತವಾಗಿವೆ (ನಿ ೩-೧೫) ಈ ಶಬ್ದಗಳಿಗೆ ಬುದ್ಧಿವಂತ, ಮೇಧಾವಿ, ವಿವೇಕಿ ಎಂದರ್ಥವು. ವಿಗ್ರಂ ಎಂಬ ಶಬ್ದವು ಋಗ್ವೇದದಲ್ಲಿ ಎರಡು ಕಡೆ ಮಾತ್ರ ಪ್ರಯೋಗಿಸಲ್ಪಟ್ಟಿದೆ. ಪ್ರಸಕ್ತವಾದ ಈ ಋಕ್ಕಿನಲ್ಲಿಯೂ

ತಾ ವಿಗ್ರಂ ಧೈಥೇ ಜಠರಂ ಪೃಣಧ್ಯಾ ಆ ಯತ್ಸದ್ಮ ಸಭೃತಯಃ ಪೃಣಂತಿ ‖ (ಋ. ಸಂ ೬-೬೭-೭)

ಎಂಬ ಋಕ್ಕಿನಲ್ಲಿಯೂ ಈ ಶಬ್ದಪ್ರಯೋಗವಿದೆ. ಇನ್ನೆಲ್ಲಿಯೂ ಇಲ್ಲ. ವಿಪಶ್ಚಿತಂ ಎಂಬ ಶಬ್ದವು ಋಗ್ವೇದದಲ್ಲಿ ೨೩ ಕಡೆಗಳಲ್ಲಿ ಉಪಯೋಗಿಸಲ್ಪಟ್ಟಿದ

ಅಸ್ತೃತಂ—ಸ್ತೃ ಧಾತುವಿನಿಂದ ಉಂಟಾದ ಸ್ತೃತ ಶಬ್ದದ ನಿಷೇಧಾರ್ಥಕರೂಪವು ನಸ್ತೃತಂ—ಅಸ್ತೃತಂ.

ಸಖಿಭ್ಯಃ—ಸ್ನೇಹಿತರಿಗೆ ಎಂದರೆ ಯಜಮಾನನ ಸ್ನೇಹಿತರೆಂದು ಕರೆಯಲ್ಪಡುವ ಋತ್ವಿಜರಿಗೆ ಎಂದರ್ಥವು. ಋತ್ವಿಜರು ಯಜ್ಞಮಾಡುವ ಯಜಮಾನನ ಸ್ನೇಹಿತರೆಂಬ ವಿಷಯದಲ್ಲಿ—

ಆ ಪ್ಯಾಯಯ ಸಖೀನ್ತ್ಸನ್ಯಾ ಮೇಧಯೇತ್ಯಾಹರ್ತ್ವಿಜೋ ವಾ ಅಸ್ಯ ಸಖಾಯಸ್ತಾನೇ-
ವಾಪ್ಯಾಯಯತಿ ‖ (ತೈ. ಸಂ ೬-೨-೨)

ಎಂಬ ತೈತ್ತರೀಯ ಶ್ರುತಿಯ ವಾಕ್ಯವಿರುವುದು. ಇಲ್ಲಿ ಋತ್ವಿಜೋ ವಾ ಅಸ್ಯ ಸಖಾಯಃ ಎಂದರೆ ಋತ್ವಿಕ್ಕುಗಳು ಯಜಮಾನನ ಸ್ನೇಹಿತರು ಎಂದು ಸ್ಪಷ್ಟವಾಗಿ ಹೇಳಿರುವುದು.

‖ ವ್ಯಾಕರಣಪ್ರಕ್ರಿಯಾ ‖

ಪರಾ— ನಿಪಾತಾ ಆದ್ಯುದಾತ್ತಾಃ (ಫಿ.ಸೂ. ೮೦) ಎಂಬುದರಿಂದ ಆದ್ಯುದಾತ್ತ ಬರಲು ಶೇಷಾನುದಾತ್ತ ಸ್ವರದಿಂದ ಕೊನೆಯ ವರ್ಣ ಅನುದಾತ್ತ. ಆಕಾರಕ್ಕೆ ಸಂಹಿತಾಕಾಲದಲ್ಲಿ ಇಹಿ ಶಬ್ದದ ಅನುದಾತ್ತ ಇಕಾರದೊಂದಿಗೆ ಗುಣಸಂಧಿಯಿಂದ ಏಕಾರವು ಏಕಾದೇಶವಾಗಿ ಬರುವುದು. ಈ ಏಕಾದೇಶವು ಅನುದಾತ್ತಗಳ ಸ್ಥಾನ

ದಲ್ಲಿ ಬರುವುದರಿಂದ **ಸ್ಥಾನಿವದಾದೇಶೋಽನಲ್ವಿಧೌ** (ಪಾ. ಸೂ. ೧-೧-೫೬) ಎಂದು ವಿಹಿತವಾದ ಸ್ಥಾನಿವದ್ಭಾವದಿಂದ ಅನುದಾತ್ತವೇ ಆಗುವುದು. ಅನಂತರ [illegible] ಉದಾತ್ತವಾದ [illegible] ಇರುವುದರಿಂದ **ಉದಾತ್ತಾದನುದಾತ್ತಸ್ಯ ಸ್ವರಿತಃ** ಎಂಬುದರಿಂದ ಸ್ವರಿತವಾಗುವುದು. [illegible]

ಇಹಿ-ಇಣ್ ಗತೌ-ಧಾತು. ಇದರ ಮುಂದೆ ಲೋಟ್ ಮಧ್ಯಮಪುರುಷ ಏಕವಚನ ಸಿಪ್-ಇ+ಸಿ. **ಸೇರ್ಹ್ಯಪಿಚ್ಚ** (ಪಾ. ಸೂ. ೩-೪-೮೭) ಎಂಬುದರಿಂದ ಸಿಗೆ ಹಿ ಆದೇಶ, ಶಪ್ ವಿಕರಣ ಅದಕ್ಕೆ **ಅದಿಪ್ರಭೃತಿಭ್ಯಃ ಶಪಃ** (ಪಾ. ಸೂ. ೨-೪-೭೨) ಎಂಬುದರಿಂದ ಲುಕ್, ಹಿಯು-ಅಪಿತ್ ಆದ್ದರಿಂದ **ಸಾರ್ವಧಾತುಕಮಪಿತ್** (ಪಾ. ಸೂ. ೧-೨-೪) ಪಕಾರೇತ್ಸಂಜ್ಞಕವಲ್ಲದ ಸಾರ್ವಧಾತುಕವು ಙಿತ್ತಾಗುವುದು ಎಂಬುದರಿಂದ ಙಿತ್ವ ಬರುತ್ತದೆ. ಈಗ ಕ್ಙಿತಿ ಚ (ಪಾ. ಸೂ. ೧-೧-೫) ಎಂದು ಗುಣಕ್ಕೆ ನಿಷೇಧ ಬರುವುದರಿಂದ **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಗುಣ ಬರುವುದಿಲ್ಲ. ಇಹಿ ಎಂದಾಗುವುದು. ಇದು ಪರಾ-ಎಂಬ ತಿಙಂತವಲ್ಲದ ಪದದ ಮುಂದೆ ಇರುವುದರಿಂದ ತಿಙ್ಙತಿಙಃ (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ-ಮೊದಲನೆಯ ಅನುದಾತ್ತವು ಹಿಂದೆ ಹೇಳಿದಂತೆ ಪರಾಶಬ್ದದ ಆಕಾರದೊಂದಿಗೆ ಏಕಾದೇಶವನ್ನು ಹೊಂದಿ ಸ್ವರಿತವಾಗುತ್ತೆ. ಎರಡನೆಯ ವಿಗ್ರಂ ಎಂಬಲ್ಲಿಯ ಉದಾತ್ತ ವಿಯು ಪರದಲ್ಲಿರುವುದರಿಂದ **ಉದಾತ್ತಸ್ವರಿತಪರಸ್ಯಸನ್ನತರಃ** (ಪಾ. ಸೂ. ೧-೨-೪೦) ಎಂಬುದರಿಂದ ಅನುದಾತ್ತತರವಾಗುವುದು.

ವಿಗ್ರಮ್-ವಿ ಎಂಬ ಉಪಸರ್ಗಪೂರ್ವಕವಾದ ಗ್ರಾ ಶಬ್ದೇ ಎಂಬ ಧಾತುವಿನ ಮುಂದೆ **ಅನ್ಯೇಷ್ವಪಿ ದೃಶ್ಯತೇ** (ಪಾ. ಸೂ. ೩-೨-೧೦೧) ಇಲ್ಲಿ ದೃಶ್ಯತೇ-ಎಂದು ದೃಶಿಗ್ರಹಣ ಸಾಮರ್ಥ್ಯದಿಂದ ಪ್ರಯೋಗಗಳಲ್ಲಿ ಕಂಡುಬಂದಂತೆ ಸಕಲ ಧಾತುಗಳ ಮುಂದೆಯೂ ಡ ಪ್ರತ್ಯಯ ಬರುವುದು, ಈ ದೃಶಿಗ್ರಹಣದಿಂದಲೇ ಪ್ರತ್ಯಯವು ಡಿತ್ತಾದರೂ ಕೆಲವು ಕಡೆಗಳಲ್ಲಿ ಟಿಗೆ **ಲೋಪವೂ** ಬರುವುದಿಲ್ಲ. ಪ್ರಕೃತ ಗ್ರಾ-ಧಾತುವಿನ ಮುಂದೆ ಡ ಪ್ರತ್ಯಯ ಬಂದರೆ ವಿ-ಗೃ+ಅ-ಗುಣಾದೇಶದಿಂದ ಮೊದಲೆ ರೇಫ ಬಂದರೆ ವಿಗ್ರ-ಎಂದಾಗುತ್ತದೆ. ಈ ಪಕ್ಷದಲ್ಲಿ ಡಿತ್ಕರಣವಿದ್ದರೂ ದೃಶಿಗ್ರಹಣದಿಂದ ಟಿ ಲೋಪ ಬರುವುದಿಲ್ಲ ಎಂದು ಕ್ಲಿಷ್ಟ ಕಲ್ಪನೆಯನ್ನು ಮಾಡಬೇಕು. **ಸಾರ್ವಧಾತುಕ**-ಇತ್ಯಾದಿ ಸೂತ್ರದಿಂದ ಗುಣವು ಬರಲಿ ಎಂದು ಹೇಳಿದರೆ ಅದನ್ನು ನಿವಾರಣೆ ಮಾಡುವುದೂ ಕ್ಲೇಶಸಾಧ್ಯ. ಆದ್ದರಿಂದ ಮೂಲವಿಭುಜಾದಿ ಗಣದಲ್ಲಿ ವಿಗ್ರಶಬ್ದವನ್ನು ಪಠಿಸಿ **ಕಪ್ರಕರಣೇ ಮೂಲವಿಭುಜಾದಿಭ್ಯ ಉಪಸಂಖ್ಯಾನಂ** (ಪಾ. ಸೂ. ೩-೨-೫ ವಾರ್ತಿಕ) ಎಂಬುದರಿಂದ ಕ ಪ್ರತ್ಯಯವನ್ನು ಮಾಡುವುದು ಉಚಿತವು. ಈಗ ಡಿತ್ಕರಣವಿಲ್ಲದುದರಿಂದ ಟಿ ಲೋಪಕ್ಕೆ ಅವಕಾಶ ಇಲ್ಲ. ಪ್ರತ್ಯಯವು ಕಿತ್ತಾದ್ದರಿಂದ ಗುಣಕ್ಕೆ ನಿಷೇಧ ಬರುವುದು. ಈ ಎರಡು ಕಲ್ಪದಲ್ಲಿಯೂ ಸಂದೇಹ ಬರುವುದರಿಂದ ಪದಕಾಲದಲ್ಲಿ ಅವಗ್ರಹ ಇಲ್ಲ ಎಂದು ತಿಳಿಯಬೇಕು. ವಿಶೇಷೇಣ ಗೃಣಾತಿ-(ಚೆನ್ನಾಗಿ ಹೇಳುವವನು) ಇತಿ ವಿಗ್ರಹಃ ಮೇಧಾವಿ ಎಂದು ಅರ್ಥವು-ಈ ಎರಡು ಪಕ್ಷದಲ್ಲಿಯೂ [illegible] ಗುಣಾದೇಶದಿಂದ ಅಪಹೃತವಾಗುವುದು; ಪ್ರತ್ಯಯದ ಆದ್ಯುದಾತ್ತವು ಸಿದ್ಧವು, ವಿ ಎಂಬ ಉಪಸರ್ಗದೊಂದಿಗೆ ಸಮಾಸ ಮಾಡಿದರೆ 'ಗತಿಕಾರಕೋಪಪದಾತ್ಕೃತ್' ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬಂದು ವಿಗ್ರ ಎಂಬುದಕ್ಕೆ ಅಂತೋದಾತ್ತವು ಪ್ರಾಪ್ತವಾಗುವುದು. ಆದುದರಿಂದ ವಿಗ್ರ ಶಬ್ದವನ್ನು ವೃಷಾದಿಗಣದಲ್ಲಿ ಸೇರಿಸಿಕೊಳ್ಳಬೇಕು. ಈಗ **ವೃಷಾದೀನಾಂ ಚ** (ಪಾ. ಸೂ. ೬-೧-೨೦೩) ವೃಷಾದಿಗಣಪಠಿತಶಬ್ದಗಳ ಆದಿಯು ಉದಾತ್ತವಾಗುವುದು ಎಂಬುದರಿಂದ ವಿಗ್ರ ಎಂಬುದು ಆದ್ಯುದಾತ್ತ. ಈ ಎರಡು ಕಲ್ಪಗಳಲ್ಲಿಯೂ ಪದಕಾರರು ಅವಗ್ರಹವನ್ನು ಮಾಡದೇ ಇರುವುದರಿಂದಲೂ, ವೃಷಾದಿಗಣದಲ್ಲಿ ಪಾಠವನ್ನು ಕಲ್ಪಿಸಬೇಕಾಗಿರುವುದರಿಂದಲೂ ಈ ಕಲ್ಪಗಳು ಗುರುಭೂತಗಳು ಎಂದರೆ ಬೇರೆ ರೀತಿಯಲ್ಲಿ ವಿಗ್ರಶಬ್ದವನ್ನು ನಿಷ್ಪತ್ತಿ ಮಾಡಬಹುದು. ವಿಃ ಪೃಥಗ್ಭಾವೇ

ಮಾತ್ರ ಸಖಿ ಶಬ್ದವು ಸಾಧುವಾಗುವುದು ವ್ರಿಯತೇ ಇತಿ ವರಃ **ಗ್ರಹವೃದೃನಿಶ್ಚಿಗಮಶ್ಚ** (ಪಾ. ಸೂ. ೩-೩-೫೮) ಗ್ರಹ, ವೃ, ದೃ, ನಿಶ್ಚಿ, ಗಮ್ ಇವುಗಳ ಮುಂದೆ ಅಪ್ ಪ್ರತ್ಯಯ ಬರುವುದು. ಎಂಬುದರಿಂದ ಅಪ್ ಪ್ರತ್ಯಯ ಬಂದರೆ ವೃ+ಅ-**ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ ೭-೩-೮೪) ಎಂಬುದರಿಂದ ಗುಣ ಬಂದರೆ ವರಃ ಎಂದಾಗುವುದು, ಪ್ರತ್ಯವು ಪಿತ್ತಾದ್ದರಿಂದ ಅನುದಾತ್ತ ವ-ಎಂಬುದು **ಧಾತೋಃ** (ಪಾ. ಸೂ. ೩-೧-೯೧) ಎಂಬುದರಿಂದ ಉದಾತ್ತ ॥ ೪ ॥

॥ ಸಂಹಿತಾಪಾಠಃ ॥

ಉತ ಬ್ರುವಂತು ನೋ ನಿದೋ ನಿರನ್ಯತಶ್ಚಿದಾರತ ।
ದಧಾನಾ ಇಂದ್ರ ಇದ್ದುವಃ ॥ ೫ ॥

॥ ಪದಪಾಠಃ ॥

ಉತ । ಬ್ರುವಂತು । ನಃ । ನಿದಃ । ನಿಃ । ಅನ್ಯತಃ । ಚಿತ್ । ಆರತ ॥
ದಧಾನಾಃ । ಇಂದ್ರೇ । ಇತ್ । ದುವಃ ॥ ೫ ॥

॥ ಸಾಯಣಭಾಷ್ಯಂ ॥

**ನೋಽಸ್ಮಾಕಂ ಸಂಬಂಧಿನ ಋತ್ವಿಜ ಇತಿ ಶೇಷಃ । ತೇ ಬ್ರುವಂತು । ಇಂದ್ರಂ ಸ್ತುವಂತು । ಉತಮಪಿ ಚ ಹೇ ನಿದೋ ನಿಂದಿತಾರಃ ಪುರುಷಾ ನಿರಾರತ । ಇತೋ ದೇಶಾನ್ನಿರ್ಗಚ್ಛತ । ಅನ್ಯತಶ್ಚಿದನ್ಯಸ್ಮಾದಪಿ ದೇಶಾನ್ನಿರ್ಗಚ್ಛತ । ಕೀದೃಶಾ ಋತ್ವಿಜಃ । ಇಂದ್ರೇ ದುವಃ ಪರಿಚರ್ಯಾಂ ದಧಾನಾಃ ಕುರ್ವಾಣಾಃ । ಇಚ್ಛಬ್ದೋಽವಧಾರಣೇ । ಸರ್ವದಾ ಪರಿಚರ್ಯಾಂ ಕುರ್ವಂತ ಏವ ತಿಷ್ಠಂತ್ವಿತ್ಯರ್ಥಃ । ನಿಂದಂತೀತಿ ನಿದಃ । ನಿದಿ ಕುತ್ಸಾಯಾಂ । ಕ್ವಿಪಿ ನುಮಭಾವಶ್ಛಾಂದಸಃ । ಸುಪೋಽನುದಾತ್ತತ್ವಾದ್ಧಾತುಸ್ವರಃ । ಆಮಂತ್ರಿತತ್ವೇಽಪಿ ವಾಕ್ಯಾಂತರತ್ವೇನ ಸ್ವವಾಕ್ಯಗತಪದಾದಪರತ್ವಾನ್ನ ನಿಘಾತ ಇತ್ಯಾದ್ಯುದಾತ್ತತ್ವಮೇವ । ಅನ್ಯತಃ ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ ಚಿದಿತ್ಯಪಿಶಬ್ದಾರ್ಥೇ । ತೇನ ನ ಕೇವಲಮಿತಃ । ಇತೋ ನಿರ್ಗತ್ಯಾನ್ಯತೋಽಪಿ ನಿರ್ಗಚ್ಛತೇತಿ ಗಮ್ಯತೇ । ಸ ಏಷ ಧಾತ್ವರ್ಥಯೋಃ ಸಂಬಂಧ ಆರತೇತಿ ಲುಙಾ ದ್ಯೋತ್ಯತೇ । ಸ ಹಿ ಧಾತುಸಂಬಂಧಾಧಿಕಾರೇ ವಿಧೀಯತೇ । ಆರತ । ಅರ್ತೇಶ್ಛಂದಸಿ ಲುಙ್ಲಙ್ಲಿಟ ಇತಿ ಲೋಡರ್ಥೇ ಲುಙ್ । ಮಧ್ಯಮಬಹುವಚನಸ್ಯ ತಾದೇಶಃ । ಸರ್ತಿಶಾಸ್ತ್ಯರ್ತಿಭ್ಯಶ್ಚ । ಪಾ. ೩-೧-೫೬ । ಇತಿ ಚ್ಲೇರಙಾದೇಶಃ । ಋದೃಶೋಽಙಿ ಗುಣಃ । ಪಾ. ೭-೪-೧೬ । ಇತಿ ಗುಣಃ । ಆಡಾಗಮಃ । ದಧಾನಾಃ । ಶಾನಚಶ್ಚಿತ್ತ್ವಾತ್ಪ್ರಾಪ್ತಮಂತೋದಾತ್ತಂ ಬಾಧಿತ್ವಾ ಪರತ್ವಾದಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ದುವಃ । ನಬ್ವಿಷಯಸ್ಯಾನಿಸಂತಸ್ಯೇತ್ಯಾದ್ಯುದಾತ್ತಃ ॥ ೭ ॥**

॥ ಪ್ರತಿಪದಾರ್ಥ ॥

**ಇಂದ್ರೇ ಇತ್**—ಇಂದ್ರನಲ್ಲಿಯೇ (ಇಂದ್ರನನ್ನು) | **ದುವಃ**—ಪರಿಚರ್ಯೆಯನ್ನು (ಸೇವೆಯನ್ನು) | **ದಧಾನಾಃ**—ಮಾಡುವ | **ನಃ**—ನಮ್ಮ (ಋತ್ವಿಜರು) | **ಬ್ರುವಂತು**—(ಇಂದ್ರನನ್ನು ಸ್ತೋತ್ರಮಾಡಲಿ | **ಉತ**—ಮತ್ತು | **ನಿದಃ**—(ಇಂದ್ರನನ್ನು)ನಿಂದೆಮಾಡುವ ಪುರುಷರು | **ಅನ್ಯತಶ್ಚಿತ್**—ಇಲ್ಲಿಂದಲೂ, ಇತರ ಕಡೆಗಳಿಂದಲೂ | **ನಿರಾರತ**—ಹೊರಟುಹೋಗಲಿ.

॥ ಭಾವಾರ್ಥ ॥

ಇಂದ್ರನನ್ನು ಸೇವೆಮಾಡುವುದರಲ್ಲಿಯೇ ಆಸಕ್ತರಾದ ನಮ್ಮ ಋತ್ವಿಜರು (ಮತ್ತು ಪುತ್ರಾದಿ ಬಂಧುಜನರೂ) ಇಂದ್ರನನ್ನು ಸ್ತೋತ್ರಮಾಡಲಿ, ಮತ್ತು ಇಂದ್ರನನ್ನು ನಿಂದೆಮಾಡುವ ಪುರುಷರು ಇಲ್ಲಿಂದಲೂ ಬೇರೆ ಪ್ರದೇಶದಿಂದಲೂ ಹೊರಟುಹೋಗಲಿ.

English Translation

Let our (priests and relatives) engaged in the service of Indra, sing his praises. O revilers, depart from (here and) every other place.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವನ್ನು ಇತರ ಭಾಷ್ಯಕಾರರೂ, ಪಾಶ್ಚಾತ್ಯಪಂಡಿತರೂ ವಿಧವಿಧವಾಗಿ ಅರ್ಥ ಮಾಡಿರುವರು—

(1) Wilson—Let our minsters earnestly performing his worship exclaim,—depart, ye revilers from hence and every other place (where he is adored)

(2) Dr. Sitanath—Let our revilers say--you have estranged yourself from all other (gods) because of your having preference of service only for Indra.

(3) Vedarthayatna—Whether the revilers may say to us that we might indeed be lost to all other gods by serving Indra alone.

ನಃ—ಭಾಷ್ಯಕಾರರು ನಃ ಎಂಬ ಶಬ್ದಕ್ಕೆ ನಮ್ಮ (ನಮಗೆ ಸಂಬಂಧಪಟ್ಟ, ನಮ್ಮ ಯಜ್ಞದಲ್ಲಿ ಭಾಗವಹಿಸುತ್ತಿರುವ) ಋತ್ವಿಜರೆಂದು ಅರ್ಥಮಾಡಿರುವರು. ಸ್ಕಂದಸ್ವಾಮಿಯು, ಋತ್ವಿಜರು ಮತ್ತು ಪುತ್ರಾದಿಗಳೂ ಎಂದು ಹೇಳಿರುವರು. ಆದರೆ ಋತ್ವಿಜರು ಅಥವಾ ಪುತ್ರಾದಿಗಳು ಎಂಬ ಶಬ್ದವನ್ನು ಅಧ್ಯಾಹಾರಮಾಡಿಕೊಳ್ಳುವದಕ್ಕಿಂತಲೂ ನಃ ಎಂಬ ಶಬ್ದವನ್ನು ನಿದಃ ಎಂಬ ಶಬ್ದದ ಜತೆಗೆ ಸೇರಿಸಿ ಅರ್ಥಮಾಡುವುದೇ ಸಮಂಜಸವಾ

॥ ಸಾಯಣಭಾಷ್ಯಂ ॥

ಹೇ ದಸ್ಮ ಶತ್ರೂಣಾಮುಪಕ್ಷಪಯಿತರಿಂದ್ರ ತ್ವದನುಗ್ರಹಾದರಿರುತ ಶತ್ರವೋಽಪಿ ನೋಽಸ್ಮಾನ್ ಸುಭಗಾನ್ ಶೋಭನಧನೋಪೇತಾನ್ವೋಚೇಯುಃ । ಉಚ್ಯಾಸುಃ । ಕೃಷ್ಟಯೋ ಮನುಷ್ಯಾ ಅಸ್ಮನ್ಮಿತ್ರ-ಭೂತಾ ವದಂತೀತಿ ಕಿಮು ವಕ್ತವ್ಯಮಿತಿ ಶೇಷಃ । ತತೋ ಧನಸಂಪನ್ನಾ ವಯಮಿಂದ್ರಸ್ಯ ಶರ್ಮ-ಣೀಂದ್ರಪ್ರಸಾದಲಬ್ಧೇ ಸುಖೇ ಸ್ಯಾಮೇತ್ । ಭವೇಮೈವ । ಮಘಮಿತ್ಯಾದಿಷ್ವಷ್ಟಾವಿಂಶತಿಸಂಖ್ಯಾಕೇಷು ಧನನಾಮಸು ರಯಿಃ ಕ್ಷತ್ರಂ ಭಗ ಇತಿ ಪಠಿತಂ । ಮನುಷ್ಯಾ ಇತ್ಯಾದಿಷು ಪಂಚವಿಂಶತಿಸಂಖ್ಯಾಕೇಷು ಮನುಷ್ಯನಾಮಸು ಕೃಷ್ಟಯ ಇತಿ ಪಠಿತಂ ॥ ಉತ ॥ ಏವಮಾದೀನಾಮಂತಃ । ಫಿ. ४-೧४ । ಇತ್ಯಂ-ತೋದಾತ್ತಃ । ಸುಭಗಾನ್ । ಭಗಶಬ್ದಸ್ಯ ಕ್ರತ್ವಾದಿಷು ಪಾಠಾನ್ನಞ್ಸುಭ್ಯಾಮಿತ್ಯುತ್ತರಪದಾಂತೋ-ದಾತ್ತತ್ವಂ ಬಾಧಿತ್ವಾ ಕ್ರತ್ವಾದಯಶ್ಚ ॥ ಪಾ. ೬-೨-೧೧೮ । ಇತ್ಯುತ್ತರಪದಾದ್ಯುದಾತ್ತತ್ವಂ । ಸಂಹಿತಾಯಾಂ ದೀರ್ಘಾದಟಿ ಸಮಾನಪಾದೇ । ಪಾ. ೮-೩-೯ । ಇತಿ ನಕಾರಸ್ಯ ರುತ್ವಂ । ಭೋಭಗೋ । ಪಾ. ೮-೩-೧೭ । ಇತಿ ಯತ್ವಂ। ಲೋಪಃ ಶಾಕಲ್ಯಸ್ಯ । ಪಾ. ೮-೩-೧೯ । ಇತಿ ಯಲೋಪಃ । ತಸ್ಯಾಸಿದ್ಧವತ್ತ್ವಾನ್ನ ಪುನಃ ಸಂಧಿಕಾರ್ಯಂ । ಆತೋಽಟಿ ನಿತ್ಯಂ । ಪಾ. ೮-೩-೩ । ಇತ್ಯಾಕಾರಸ್ಯ ಸಾನುನಾಸಿಕತಾ । ಅರಿಃ । ವಚನವ್ಯತ್ಯಯಃ । ಅಚ ಇಃ । ಉ. ४-೧೩೮ । ಇತೀಪ್ರತ್ಯಯಾಂತಃ । ಪ್ರತ್ಯಯಸ್ವರೇಣಾಂತೋದಾತ್ತಃ ವೋಚೇಯುಃ । ಉಚ್ಯಾಸುಃ । ವಚ ಪರಿಭಾಷಣ ಇತ್ಯಸ್ಮಾದಾಶೀರ್ಲಿಙ್ ಝೋರ್ಜುಸಾದೇಶೇ । ಪಾ. ೩-४-೧೦೮ । ಲಿಙ್ಯಾಶಿಷ್ಯಙ್ । ಪಾ. ೩-೧-೮೬ । ಇತ್ಯಙ್ಪ್ರತ್ಯಯೇ ವಚ ಉಮ್ । ಪಾ. ೭-४-೨೦ । ಇತ್ಯುಮಾಗಮಃ । ಗುಣಃ । ಕಿದಾಶಿಷಿ । ಪಾ. ೩-४-೧೦४ । ಇತಿ ಯಾಸುಟ್ । ಛಂದಸ್ಯುಭಯಥಾ । ಪಾ. ೩ ४-೧೧೭ । ಇತಿ ಲಿಙಾದೇಶಸ್ಯ ಸಾರ್ವಧಾತುಕತ್ವಾಲ್ಲಿಙಃ ಸಲೋಪೋಽನಂತ್ಯಸ್ಯ । ಪಾ. ೭-೨-೭೯। ಇತಿ ಸಕಾರಲೋಪಃ । ಅತೋ ಯೇಯಃ ಪಾ ೭-೨-೮೦ । ಆದ್ಗುಣಃ । ಪಾ. ೬-೧-೮೭ । ಅಙೋಽ-ದುಪದೇಶತ್ವಾಲ್ಲಸಾರ್ವಧಾತುಕಸ್ವರೇಣ ಲಿಙೋಽನುದಾತ್ತತ್ವಂ । ಅಙ್ಪ್ರತ್ಯಯಸ್ವರ ಏವ ಶಿಷ್ಯತೇ । ತೇನ ಸಹೋಕಾರಸ್ಯ ಗುಣ ಏಕಾದೇಶ ಉದಾತ್ತೇನೋದಾತ್ತ ಇತ್ಯುದಾತ್ತಃ । ದಸ್ಮ । ದಸು ಉಪಕ್ಷಯ ಇತ್ಯಸ್ಮಾದಂತೆರ್ಭಾವಿತಣ್ಯರ್ಥಾದಿಷಿಯುಧೀಂಧಿದಶಿಸ್ಯಾಧೂಸೂಭ್ಯೋ ಮಕ್ । ಉ. ೧-೧४४ । ಪದಾ-ತ್ಪರತ್ವಾದಾಮಂತ್ರಿತನಿಘಾತಃ । ಕೃಷ್ಟಯಃ । ಕ್ತಿಚ್ಕ್ತೌ ಚ ಸಂಜ್ಞಾಯಾಂ । ಪಾ ೩-೩-೧೭४ । ಇತಿ ಕ್ತಿಚಿ ಮನುಷ್ಯನಾಮತ್ವಾಚ್ಚಿತ ಇತ್ಯಂತೋದಾತ್ತಃ । ಸ್ಯಾಮ । ಅಸ ಭುವಿ । ಶ್ನಸೋರಲ್ಲೋಪಃ । ಪಾ. ೬-४-೧೧೧ । ಯಾಸುಟ ಉದಾತ್ತತ್ವಂ । ಪಾದಾದಿತ್ವಾದನಿಘಾತಃ । ಶರ್ಮಣಿ । ಶೄ ಹಿಂಸಾಯಾಂ। ಹಿನಸ್ತಿ ದುಃಖಮಿತಿ ಶರ್ಮ । ಅನ್ಯೇಭ್ಯೋಽಪಿ ದೃಶ್ಯಂತೇ । ಪಾ. ೩-೨-೭೫ । ಇತಿ ಮನಿನ್ । ನೇಡ್ವಶಿ ಕೃತಿ । ಪಾ. ೭-೨-೮ । ಇತೀಟ್ಪ್ರತಿಷೇಧಃ । ನಿತ್ತ್ವಾದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**(ಹೇ)ದಸ್ಮ**—ಶತ್ರುನಾಶಕನಾದ ಎಲೈ ಇಂದ್ರನೇ (ನಿನ್ನ ಅನುಗ್ರಹದಿಂದ) । **ಅರಿರುತ**—ಶತ್ರುಗಳೂ ಕೂಡ । **ನಃ**—ನಮ್ಮನ್ನು । **ಸುಭಗಾನ್**—ಧನವಂತರೆಂದು ಅಥವಾ ಐಶ್ವರ್ಯವಂತರೆಂದು । **ವೋಚೇಯುಃ**-ಹೇಳಲಿ । **ಕೃಷ್ಟಯಃ**—(ನಮ್ಮ ಶತ್ರುಗಳೇ ನಮ್ಮ ವಿಚಾರದಲ್ಲಿ ಒಳ್ಳೆಯವಮಾತನ್ನಾಡುವಾಗ ನಮ್ಮ ಮಿತ್ರರಾದ) ಮನುಷ್ಯರು (ಆರೀತಿ ಹೇಳುವುದೇನಾಶ್ಚರ್ಯವು?) । **ಇಂದ್ರಸ್ಯ**—ಇಂದ್ರನ (ಅನುಗ್ರಹದಿಂದ ಉಂಟಾದ) । **ಶರ್ಮಣಿ**—ಸುಖದಲ್ಲಿ । **ಸ್ಯಾಮೇತ್**—ಇದ್ದೇ ಇರುವೆವು ।

॥ ಭಾವಾರ್ಥ ॥

ಎಲೈ ಶತ್ರುನಾಶಕನಾದ ಇಂದ್ರನೇ, ನಿನ್ನ ಅನುಗ್ರಹದಿಂದ ನಮ್ಮ ಶತ್ರುಗಳೂ ಕೂಡ ನಮ್ಮನ್ನು ಐಶ್ವರ್ಯವಂತರೆಂದು ಹೊಗಳುವರು. ಹೀಗಿರುವಲ್ಲಿ ನಮ್ಮ ಮಿತ್ರರಾದ ಇತರ ಮನುಷ್ಯರು ಆರೀತಿ ಹೇಳುವುದೊಂದಾಶ್ಚರ್ಯವೇ? ಇದಲ್ಲದೆ ನಿನ್ನ (ಇಂದ್ರನ) ಅನುಗ್ರಹದಿಂದ ನಾವು ಸುಖವಾಗಿಯೇ ಇರುವೆವು.

English Translation.

Destroyer of foes, let our enemies say we are prosperous, let men (congratulate us); may we ever live in happiness through your (favour)

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥಕ್ಕೂ ಹಿಂದಿನ ಋಕ್ಕಿನ ಅರ್ಥಕ್ಕೂ ಸ್ವಲ್ಪಮಟ್ಟಿಗೆ ಹೋಲಿಕೆ ಇರುವುದು. ಎಂದರೆ ಎರಡು ಋಕ್ಕಿನ ಮುಖ್ಯಾಭಿಪ್ರಾಯವೂ ಒಂದೇ ಆಗಿರುವುದು.

**ಸುಭಗಾನ್**—ಮಘ ಮೊದಲಾದ ಧನಸೂಚಕವಾದ ಇಪ್ಪತ್ತೆಂಟು ನಾಮಗಳ ಮಧ್ಯದಲ್ಲಿ ಭಗಶಬ್ದವು ಪಠಿತವಾಗಿರುವುದರಿಂದ (ನಿ. ೩-೯) ಭಗಶಬ್ದಕ್ಕೆ ಧನವೆಂದರ್ಥವು. **ಸುಭಗಾನ್** ಎಂದರೆ ಹೆಚ್ಚಾಗಿ ಧನವುಳ್ಳವರೆಂದರ್ಥವು.

**ಅರಿಃ**--ಇಲ್ಲಿ ಏಕವಚನವು ಬಹುವಚನಾರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದು. ಸಾಮಾನ್ಯವಾಗಿ ನಾವು ಮಾತನಾಡುವಾಗ ಶತ್ರುವು (enemy) ಎಂದರೆ ನಮ್ಮ ಶತ್ರುಪಕ್ಷಕ್ಕೆ ಸೇರಿದ ಜನಗಳು, ನಮಗೆ ಹಿತೈಷಿಗಳಲ್ಲದವರು ಎಂದು ಹೇಳುವುದು ರೂಢಿಯಷ್ಟೆ ಅದರಂತೆ ಇಲ್ಲಿ ಅರಿಃ-ಶತ್ರುವು ಎಂದು ಏಕವಚನ ಪ್ರಯೋಗವಿದ್ದರೂ "ನಮ್ಮ ಶತ್ರುಗಳು, ನಮಗೆ ಆಗದವರು" ಎಂದು ಬಹುವಚನಾರ್ಥವನ್ನೇ ಹೇಳಬೇಕು.

**ದಸ್ಮ**--ಈ ಶಬ್ದಕ್ಕೆ ಭಾಷ್ಯಕಾರರು **ಶತ್ರೂಣಾಮುಪಕ್ಷಯಿತಃ** ಶತ್ರುಗಳ ವಿನಾಶಕನೆಂದು ಅರ್ಥ ಮಾಡಿರುವರು. **ದಸು ಉಪಕ್ಷಯೇ** ಎಂಬ ಧಾತುವಿನಿಂದ ಉಂಟಾದ ರೂಪವು. ಈ ಶಬ್ದಕ್ಕೆ ಸ್ಕಂದ ಸ್ವಾಮಿಯು **ದರ್ಶನೀಯ** ಎಂದರೆ ಸುಂದರನಾದ ಎಂದು ಅರ್ಥಮಾಡಿರುವರು. ಭಾಷ್ಯಕಾರರಾದ ಸಾಯಣರೂ ಕೂಡ ಋ. ಸಂ. ೧-೬೨ ನೇ ಸೂಕ್ತದ ೫, ೧೧, ೧೨ನೇ ಋಕ್ಕುಗಳಲ್ಲಿ **ದಸ್ಮ** ಶಬ್ದಕ್ಕೆ ದರ್ಶನೀಯವೆಂದೇ ಅರ್ಥಮಾಡಿರುವರು. ಈ ಶಬ್ದವು ಋಗ್ವೇದದಲ್ಲಿ ಮೇಲೆ ಹೇಳಿದ ಋಕ್ಕುಗಳಲ್ಲಲ್ಲದೆ ಋ. ಸಂ. ೧-೧೩೮-೪, ೨-೯-೫; ೪-೧-೩; ೫-೩೧-೭; ೬-೧-೧; ೬-೧೮-೫, ೭-೩-೪; ೭-೨೨-೮, ೮-೯೭-೧೮, ೮-೧೦೩-೭, ೧೦-೭-೧; ೧೦-೪೩-೨; ೧೦-೧೪೭-೫ ಈ ಋಕ್ಕುಗಳಲ್ಲಿಯೂ ಪ್ರಯೋಗಿಸಲ್ಪಟ್ಟಿರುವುದು. ಮೇದಂಸ್ ಧಾತುವಿನ ವಿವಿಧರೂಪಗಳಾದ **ದಂಸಃ, ದಂಸನಾ, ದಂಸಭಿಃ, ದಂಸನಾಭಿಃ ದಂಸನೈಃ, ದಂಸಯುಃ ದಂಸಸಾ ದಂಸಾಂಸಿ** ಎಂಬ ಶಬ್ದಗಳ ಪ್ರಯೋಗವು ಋಗ್ವೇದದಲ್ಲಿ ಅನೇಕಕಡೆಗಳಲ್ಲಿವೆ. Geldner ಮೊದಲಾದ ಪಂಡಿತರು ಈ ಶಬ್ದಕ್ಕೆ master ಎಂದು ಅರ್ಥಮಾಡಿರುವರು.

**ಕೃಷ್ಟಯಃ**--ಈ ಶಬ್ದವು ಮನುಷ್ಯಾರ್ಥವಾಚಕವಾದ ಇಪ್ಪತ್ತೈದು ಪದಗಳ ಮಧ್ಯದಲ್ಲಿ ಪಠಿತವಾಗಿರುವುದು (ನಿ. ೩-೮) ಈ ಶಬ್ದವು **ಕೃಷ್**-ಉಳು, ವ್ಯವಸಾಯುವಮಾಡು ಎಂಬ ಧಾತುವಿನಿಂದ ಉತ್ಪನ್ನವಾಗಿರುವುದರಿಂದ ಇದಕ್ಕೆ ವ್ಯವಸಾಯುವಮಾಡುವ ಜನರು, ಉಳುವ ಮನುಷ್ಯರು ಎಂದರ್ಥವು. ಎಂದರೆ ಜನರು ಮನುಷ್ಯರು ಎಂದು ಸಾಮಾನ್ಯಾರ್ಥವು.

**ಶರ್ಮಣಿ**--ಶರ್ಮಶಬ್ದವು ಗೃಹನಾಮವಾಚಕಗಳಾದ ಇಪ್ಪತ್ತೆರಡು ಶಬ್ದಗಳ ಮಧ್ಯದಲ್ಲಿ ಪಠಿತವಾಗಿರುವುದರಿಂದ (ನಿ ೩-೮) ಈ ಶಬ್ದಕ್ಕೆ ಸ್ಕಂದಸ್ವಾಮಿಯು ಗೃಹವೆಂದು ಎಂದರೆ, **ಇಂದ್ರಸ್ಯ ಶರ್ಮಣಿ** ಇಂದ್ರನ ಗೃಹದಲ್ಲಿ ಎಂದರೆ ಇಂದ್ರನ ಲೋಕದಲ್ಲಿ ಎಂದರ್ಥವಮಾಡಿರುವರು. ಇದು ಅಷ್ಟು ಸಮಂಜಸವಾಗಿ ಕಾಣುವುದಿಲ್ಲ ಇದಲ್ಲದೆ ಶರ್ಮಶಬ್ದವು ಸುಖನಾಮವಾಚಕಗಳಾದ ಇಪ್ಪತ್ತು ಪದಗಳ ಮಧ್ಯದಲ್ಲಿ ಪಠಿತವಾಗಿರುವುದರಿಂದ (ನಿ ೩-೧೧) ಶರ್ಮಶಬ್ದಕ್ಕೆ ಸುಖವೆಂದೇ ಅರ್ಥವಮಾಡುವುದು ಯುಕ್ತವಾಗಿರುವುದು.

## ।। ವ್ಯಾಕರಣಪ್ರಕ್ರಿಯಾ ।।

ಉತ, **ಏವಾದೀನಾಮಂತಃ** (ಫಿ. ಸೂ. ೮೨) ಏವಾದಿಗಣಪಠಿತಶಬ್ದಗಳ ಅಂತವು ಉದಾತ್ತವಾಗುವುದು ಎಂದು ಉತ ಶಬ್ದವು ಅಂತೋದಾತ್ತವಾಗುವುದು. **ಸುಭಗಾನ್**—ಭಗಶಬ್ದವು ಕ್ರತ್ವಾದಿ ಗಣದಲ್ಲಿ ಪಠಿತವಾಗಿರುವುದು. ಆದ್ದರಿಂದ **ನೞ್ಸುಭ್ಯಾಂ** (ಪಾ. ಸೂ ೬-೨-೧೭೨) ಬಹುವ್ರೀಹಿಯಲ್ಲಿ ನಞ್ ಸುಗಳ ಮುಂದಿರುವ ಉತ್ತರಪದವು ಅಂತೋದಾತ್ತವಾಗುವುದು ಎಂಬುದರಿಂದ ಬರುವ ಅಂತೋದಾತ್ತವನ್ನು ಬಾಧಿಸಿ **ಕ್ರತ್ವಾದಯಶ್ಚ** (ಪಾ. ಸೂ. ೬-೨-೧೧೮) ಸು ಎಂಬುದರ ಮುಂದಿರುವ ಕ್ರತ್ವಾದಿಗಣಪಠಿತಶಬ್ದಗಳು ಆದ್ಯುದಾತ್ತಗಳಾಗುವುವು, ಎಂಬುದರಿಂದ ಪ್ರತಿಪದೋಕ್ತವಾದ ಆದ್ಯುದಾತ್ತ ಬರುವುದು ಸುಭಗಾನ್ ಎಂಬುದು ದ್ವಿತೀಯಾ ಬಹುವಚನಾಂತ. ಇದಕ್ಕೆ ಸಂಹಿತಾಕಾಲದಲ್ಲಿ **ದೀರ್ಘಾದಟಿ ಸಮಾನಪಾದೇ** (ಪಾ. ಸೂ. ೮-೩-೯) ನಕಾರ ಅಟ್ ವರ್ಣಗಳು ಒಂದೇ ಪಾದದಲ್ಲಿರುವಾಗ ದೀರ್ಘದ ಮುಂದಿರುವ ನಕಾರಕ್ಕೆ ಅಟ್ ಪರವಾಗಿದ್ದರೆ ರು ಆದೇಶ ಬರುವುದು, ಎಂಬುದರಿಂದ ನಕಾರಕ್ಕೆ ರು ಬರುವುದು, **ಭೋ ಭಗೋ ಅಘೋ ಅಪೂರ್ವಸ್ಯ ಯೋಽಶಿ** (ಪಾ. ಸೂ. ೮-೩ ೧೭) ಭೋ, ಭಗೋ-ಅಘೋ-ಶಬ್ದಗಳ ಅಥವಾ ಅವರ್ಣದ ಮುಂದಿರುವ ರು ಗೆ ಯ್ ಆದೇಶ ಬರುವುದು ಎಂದು ಯಾದೇಶ ಬಂದರೆ ಸುಭಗಾಯ್-ಅರಿಃ, **ಲೋಪಶ್ಶಾಕಲ್ಯಸ್ಯ** (ಪಾ ಸೂ ೮-೩-೧೯) ಅವರ್ಣದ ಮುಂದಿರುವ, ಪದದ ಕಡೆಯ ಯಕಾರ ವಕಾರಗಳಿಗೆ ಅಲ್ ಪರವಾಗಿದ್ದರೆ ಲೋಪವು ಶಾಕಲ್ಯರ ಮತದಲ್ಲಿ ಬರುವುದು ಎಂಬುದರಿಂದ ಯ್‌ಗೆ ಲೋಪ ಬಂದರೆ ಸುಭಗಾ+ಅರಿಃ ಈಗ **ಪೂರ್ವತ್ರಾಸಿದ್ಧಂ** (ಪಾ. ಸೂ. ೮-೨-೧) ಎಂಬುದರಿಂದ ಯಲೋಪವು ಅಸಿದ್ಧವಾಗುವುದರಿಂದ **ಅಕಸ್ಸವರ್ಣೇ ದೀರ್ಘಃ** (ಪಾ. ಸೂ ೬-೧-೧೦೧) ಎಂದು ಸವರ್ಣದೀರ್ಘಸಂಧಿ ಬರುವುದಿಲ್ಲ. **ಆತೋಽಟಿ ನಿತ್ಯಂ** (ಪಾ ಸೂ. ೮-೩-೩) ಅಟ್ ಪರದಲ್ಲಿರುವಾಗ ರುವಿನ ಹಿಂದಿರುವ ಆಕಾರಕ್ಕೆ ಅನುನಾಸಿಕಾಕಾರ ಬರುವುದು, ಸುಭಗಾँ ಅರಿಃ ಎಂದಾಗುವುದು ಅರಿಃ,-ಇಲ್ಲಿ ಬಹುವಚನಕ್ಕೆ ಬದಲಾಗಿ ಏಕವಚನ ಬಂದಿರುವುದು **ಅಚ ಇಃ** (ಉ ಸೂ. ೪-೫೭೮) ಅಜಂತ ಧಾತುವಿನ ಮುಂದೆ ಇ ಪ್ರತ್ಯಯ ಬರುವುದು ಎಂಬುದರಿಂದ ಋ ಧಾತುವಿಗೆ ಇ ಪ್ರತ್ಯಯ ಬಂದರೆ ಋ+ಇ **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಗುಣ ಬಂದರೆ ಅರಿ ಎಂದಾಗುತ್ತೆ ಇದು ಪ್ರತ್ಯಯಸ್ವರದಿಂದ ಅಂತೋದಾತ್ತ. **ವೋಚೇಯುಃ**-ವಚ ಪರಿಭಾಷಣೇ ಎಂಬ ಧಾತುವಿನ ಮೇಲೆ ಆಶೀರ್ಲಿಙ್ನಲ್ಲಿ ಪ್ರಥಮ ಪುರುಷ ಬಹುವಚನ ಝಿ ಪ್ರತ್ಯಯವನ್ನಿಟ್ಟರೆ ವಚ್+ಝಿ **ಲಿಙಾಶಿಷ್ಯಙ್** (ಪಾ. ಸೂ. ೩-೧-೮೬) ಆಶೀರ್ಲಿಙ್

ಪರವಾಗಿರುವಾಗ ಛಂದಸ್ಸಿನಲ್ಲಿ ಧಾತುವಿನ ಮುಂದೆ ಅಜ್ ಪ್ರತ್ಯಯ ಬರುವುದು ಎಂಬುದರಿಂದ ಅಜ್ ಬಂದರೆ **ವಚ್+ಅ+ಝಿ-ಝೇರ್ಜುಸ್** (ಪಾ ಸೂ. ೩-೪-೧೦೮) ಎಂದು ಝಿಗೆ ಜುಸ್ ಬರುವುದು, ಜುಸ್‌ನಲ್ಲಿ ಜಕಾರಕ್ಕೆ **ಚುಟೂ** (ಪಾ ಸೂ. ೧-೩-೭) ಪ್ರತ್ಯಯಾದಿಯಾದ ಚವರ್ಗ ಟವರ್ಗಗಳು ಇತ್ಸಂಜ್ಞೆಯನ್ನು ಹೊಂದುವುವು ಎಂದು ಇತ್ಸಂಜ್ಞೆ ಬಂದರೆ, ಅದಕ್ಕೆ **ತಸ್ಯಲೋಪಃ** (ಪಾ. ಸೂ ೧-೩-೯) ಎಂದು ಲೋಪ ಬರುವುದು. **ವಚ್+ಅ+ಉಸ್, ವಚಿ ಉಮ್** (ಪಾ. ಸೂ ೭-೪-೨೦) ಅಜ್ ಪರದಲ್ಲಿರುವಾಗ ವಚ್ ಧಾತುವಿನ ವ ಎಂಬುದರ ಮುಂದೆ ಉಮ್ ಆಗಮ ಬರುವುದು ವ+ಉ+ಚ್+ಅ+ಉಸ್, **ಆದ್ಗುಣಃ** (ಪಾ ಸೂ. ೬-೧-೮೭) ಅವರ್ಣದ ಮುಂದೆ ಇ-ಉ-ಋಗಳಿದ್ದರೆ ಗುಣ ಬರುವುದು ಎಂಬುದರಿಂದ ಗುಣ ಬಂದರೆ **ವೋಚ್+ಅ+ಉಸ್. ಯಾಸುಟ್ ಪರಸ್ಮೈಪದೇಷೂದಾತ್ತೋಙಿಚ್ಚ** (ಪಾ. ಸೂ. ೩-೪-೧೦೩) ಎಂಬುದರಿಂದ ಉಸ್‌ನ ಹಿಂದೆ ಯಾಸುಟ್ ಆಗಮ ಬರುವುದು, ಯಾಸ್ ಎಂಬುದು **ಕಿದಾಶಿಷಿ** (ಪಾ ಸೂ. ೩-೪-೧೦೪) ಆಶೀರ್ಲಿಙ್ಗೆ ಬಂದ ಯಾಸುಡಾಗಮವು ಕಿತ್ತಾಗುವುದು ಎಂಬುದರಿಂದ ಕಿತ್ತಾಗುವುದು ಇದು ವೈಯಾಕರಣ ಪ್ರಕ್ರಿಯೆ. ಮಾಧವಾಚಾರ್ಯರು **ಕಿದಾಶಿಷಿ** (ಪಾ. ಸೂ ೩-೪-೧೦೨) ಆಶೀರ್ಲಿಙ್ ಸ್ಥಾನದಲ್ಲಿ ಬಂದ ಪರಸ್ಮೈಪದಪ್ರತ್ಯಯಕ್ಕೆ ಕಿತ್ತಾದ ಯಾಸುಟ್ ಬರುವುದು ಎಂದು ಅರ್ಥವನ್ನು ವರ್ಣಿಸಿ ಇದೇ ಸೂತ್ರದಿಂದಲೇ ಯಾಸುಟ್ ಬರುವುದು ಎನ್ನುವರು. ಅಂತು **ವೋಚ+ಯಾಸ್+ಉಸ್** ಎಂದಿರುವುದು. **ಛಂದಸ್ಯುಭಯಥಾ** (ಪಾ ಸೂ. ೩-೪-೧೧೭) ಛಂದಸ್ಸಿನಲ್ಲಿ ಧಾತ್ವಧಿಕಾರ ವಿಹಿತ ಪ್ರತ್ಯಯವು ಸಾರ್ವಧಾತುಕ ಆರ್ಧಧಾತುಕ ಎಂಬ ಎರಡು ಸಂಜ್ಞೆಗಳನ್ನೂ ಯಥಾಯೋಗ್ಯವಾಗಿ ಹೊಂದುವುದು ಎಂಬುದರಿಂದ 'ಯಾಸ್ ಉಸ್' ಎಂಬುದಕ್ಕೆ ಸಾರ್ವಧಾತುಕ ಸಂಜ್ಞೆ ಬಂದರೆ **ಲಿಙಸ್ಸಲೋಪೋಽನನ್ತ್ಯಸ್ಯ** (ಪಾ. ಸೂ. ೭-೨-೭೯) ಸಾರ್ವಧಾತುಕ ಸಂಜ್ಞೆಯನ್ನು ಹೊಂದಿರುವ ಲಿಙ್ ಸಂಬಂಧಿಯಾದ ಕಡೆಯಲ್ಲಿಲ್ಲದ ಸಕಾರಕ್ಕೆ ಲೋಪ ಬರುವುದು ಎಂಬುದರಿಂದ ಸಕಾರಕ್ಕೆ ಲೋಪ ಬರುವುದು, **ಅತೋ ಯೇ ಯಃ** (ಪಾ. ಸೂ. ೭-೨-೮೦) ಹ್ರಸ್ವಾಕಾರದ ಮುಂದಿರುವ ಸಾರ್ವಧಾತುಕಾವಯವವಾದ ಯಾ ಎಂಬುದಕ್ಕೆ ಇಯ್ ಆದೇಶ ಬರುವುದು ಎಂಬುದರಿಂದ ಯಾ ಗೆ ಇಯ್ ಬಂದರೆ **ವೋಚ+ಇಯ್+ಉ** ಸ್-**ಆದ್ಗುಣಃ** (ಪಾ. ಸೂ. ೬-೧-೮೭) ಎಂದು ಗುಣಬಂದರೆ ವೋಚೇಯುಃ-ಅಜ್ ಎಂಬುದು ಅದುಪದೇಶವಾದ್ದರಿಂದ **ತಾಸ್ಯನುದಾತ್ತೇತ್** (ಪಾ. ಸೂ ೬-೧-೧೮೬) ಎಂಬ ಸೂತ್ರದಿಂದ ಲಿಙ್ ಸ್ಥಾನದಲ್ಲಿ ಬಂದ ಸಾರ್ವಧಾತುಕವು ಅನುದಾತ್ತ ಅಜ್-ಪ್ರತ್ಯಯಸ್ವರದಿಂದ ಉದಾತ್ತ. ಇದರೊಂದಿಗೆ ಇಕಾರಕ್ಕೆ ಬಂದ ಗುಣವು **ಏಕಾದೇಶ ಉದಾತ್ತೇನೋದಾತ್ತಃ** (ಪಾ ಸೂ. ೮-೨-೫) ಎಂಬುದರಿಂದ ಉದಾತ್ತ. **ದಸ್ಮ:— ದಸು ಉಪಕ್ಷಯೇ** ಣಿಚ್ಪ್ರತ್ಯಯಾರ್ಥವನ್ನು ಅಂತರ್ಭಾವ ಮಾಡಿಕೊಂಡಾಗ ಈ ಧಾತುವಿನ ಮುಂದೆ **ಇಷಿಯುಧೀನ್ಧಿದಸಿಶ್ಯಾಧೂಸೂಭ್ಯೋಮಕ್** (ಉ. ಸೂ. ೧-೧-೪೨) ಎಂಬುದರಿಂದ ಮಕ್ ಪ್ರತ್ಯಯ ಬರುವುದು. ಇದು ಪದದ ಮುಂದೆ ಇರುವುದರಿಂದ ಆಷ್ಟಮಿಕವಾದ **'ಆಮಂತ್ರಿತಸ್ಯ ಚ'** ಎಂಬುದರಿಂದ ಅನುದಾತ್ತ ಬರುವುದು. ಕೃಷ್ಟಯಃ **ಕ್ತಿಚ್ ಕ್ತೌ ಚ ಸಂಜ್ಞಾಯಾಂ** (ಪಾ. ಸೂ. ೩-೩-೧೭೪) ಆಶೀರರ್ಥದಲ್ಲಿ ಕ್ತಿಚ್ ಕ್ತ ಎಂಬ ಪ್ರತ್ಯಯಗಳು ಸಂಜ್ಞೆ ತೋರುವಾಗ ಬರುವುವು ಎಂಬುದರಿಂದ ಮನುಷ್ಯರು ಎಂಬ ಸಂಜ್ಞೆ ತೋರುವಾಗ ಕ್ತಿಚ್ ಬರುತ್ತೆ, **ಚಿತಃ** (ಪಾ. ಸೂ ೬-೧-೧೬೩) ಎಂಬುದರಿಂದ ಅಂತೋದಾತ್ತ ಬರುವುದು. ಸ್ಯಾಮ-ಅಸಭುವಿ, ವಿಧಿ **ಲಿಙ್**, ಯಾಸುಟ್ ಆಗಮ, ಉತ್ತಮ ಪುರುಷ ಬಹುವಚನ ಮಸ್ ಪ್ರತ್ಯಯ ಅಸ್ ಯಾಸ್ ಮಸ್-**ಲಿಙಸ್ಸಲೋಪೋಽನನ್ತ್ಯಸ್ಯ** (ಪಾ. ಸೂ. ೭-೨-೭೯) ಎಂಬುದರಿಂದ ಲೋಪ, ಕೊನೆಯ ಸಕಾರಕ್ಕೆ **ನಿತ್ಯಂ ಙಿತಃ** (ಪಾ. ಸೂ. ೩-೪-೯೯) ಎಂಬುದರಿಂದ ಲೋಪ, ಧಾತ್ವಕಾರಕ್ಕೆ **ಶ್ನಸೋರಲ್ಲೋಪಃ** (ಪಾ. ಸೂ ೬-೪-೧೧೧) ಶ್ನ-ಅಸ್ ಇವುಗಳ ಅಕಾರಕ್ಕೆ ಕಿತ್ತು ಅಥವಾ ಙಿತ್ತು ಆದ **ಸಾರ್ವಧಾತುಕಪರವಾಗಿರುವಾಗ ಲೋಪ** ಬರುವುದು, ಎಂಬುದರಿಂದ ಲೋಪ ಬರುವುದು, **ಸ್ಯಾಮ** ಎಂದಾಗ್ಗು

ವುದು. ಯಾಸುಟ್ಟ್ವ ಉದಾತ್ತ ಸ್ಯಾಮ ಎಂಬುದು ಪಾದಾದಿಯಲ್ಲಿರುವುದರಿಂದ **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂದು ನುದಾತ್ತ ಬರುವುದಿಲ್ಲ. **ಶರ್ಮಣಿ—ಶೄಹಿಂಸಾಯಾಂ, ಹಿನಸ್ತಿ ದುಃಖಂ**(ದುಃಖವನ್ನು ನಾಶಪಡಿಸುವುದು) ಎಂಬ ಅರ್ಥದಲ್ಲಿ ಶರ್ಮ ಎಂದಾಗುವುದು. **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ ಸೂ. ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ ಬಂದು ಶೄ ಧಾತುವಿಗೆ ಗುಣಬಂದರೆ ಶರ್ಮ—ಮನ್ನಿ **ನೇಡ್ವಶಿಕೃತಿ** (ಪಾ. ಸೂ ೭-೨-೮) ವಶಾದಿಯಾದ ಕೃತ್ತಿಗೆ ಇಟ್ ಆಗಮ ಬರುವುದಿಲ್ಲ ಎಂಬುದರಿಂದ **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂದು ಪ್ರಾಪ್ತವಾದ ಇಟ್ಟಿಗೆ ನಿಷೇಧ ಬರುವುದು ಮನಿನ್ಪ್ರತ್ಯಯವು ನಿತ್ತಾದ್ದರಿಂದ **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದರಿಂದ ನಿತ್ಸ್ವರ ಆದ್ಯುದಾತ್ತ ಬರುವುದು- ॥ ೬ ॥

॥ ಸಂಹಿತಾಪಾಠಃ ॥

ಏಮಾಶುಮಾಶವೇ ಭರ ಯಜ್ಞಶ್ರಿಯಂ ನೃಮಾದನಂ ।
ಪತಯನ್ಮಂದಯತ್ಸಖಂ ॥ ೭ ॥

॥ ಪದಪಾಠಃ ॥

ಆ । ಈಂ । ಆಶುಂ । ಆಶವೇ । ಭರ । ಯಜ್ಞಽಶ್ರಿಯಂ । ನೃಽಮಾದನಂ ॥
ಪತಯತ್ । ಮಂದಯತ್ಽಸಖಂ ॥ ೭ ॥

॥ ಸಾಯಣಭಾಷ್ಯಂ ॥

ಈಮಿತಿ ನಿಪಾತ ಇದಂಶಬ್ದಾರ್ಥೇ ವರ್ತತೇ । ಹೇ ಯಜಮಾನಾಶವೇ ಕೃತ್ಸ್ನಸೋಮಯಾಗವ್ಯಾಪ್ತಾಯೇಂದ್ರಾಯೇಮಾ ಭರ । ಇಮಂ ಸೋಮಮಾಹರ । ಕೀದೃಶಂ ಸೋಮಂ । ಆಶುಂ ಸವನತ್ರಯವ್ಯಾಪ್ತಂ ಯಜ್ಞಶ್ರಿಯಂ ಯಜ್ಞಸ್ಯ ಸಂಪದ್ರೂಪಂ ನೃಮಾದನಂ ನೃಣಾಮೃತ್ವಿಗ್ಯಜಮಾನಾನಾಂ ಹರ್ಷಹೇತುಂ ಪತಯತ್ಪತಯಂತಂ ಕರ್ಮಾಣಿ ಪ್ರಾಪ್ನುವಂತಂ ಮಂದಯತ್ಸಖಂ । ಯ ಇಂದ್ರೋ ಮಂದಯತಿ ಯಜಮಾನಾನ್ ಹರ್ಷಯತಿ ತಸ್ಮಿನ್ನಿಂದ್ರೇ ಸಖಿಭೂತೋಽಯಂ ಸೋಮಃ । ತತ್ಪ್ರೀತಿಹೇತುತ್ವಾತ್ತೃಪ್ತಿಹೇತುತ್ವಾದ್ವಾ ॥ ಆಶುಂ । ಕೃವಾಪಾಜಿಮಿಸ್ವದಿಸಾಧ್ಯಶೂಭ್ಯ ಉಣ್ । ಉ. ೧-೧ । ಇತ್ಯುಣ್ ।ಪ್ರತ್ಯಯಸ್ವರಃ । ಆಶವೇ । ಪೂರ್ವವತ್ । ಯಜ್ಞಶ್ರಿಯಂ । ಸಮಾಸಸ್ಯೇತ್ಯಂತೋದಾತ್ತಃ । ಮಾದ್ಯಂತೇಽನೇನೇತಿ ಮಾದನಃ । ಕರಣಾಧಿಕರಣಯೋಶ್ಚ । ಪಾ. ೩-೩-೧೧೭ । ಇತಿ ಲ್ಯುಟ್ । ತಸ್ಯ ಲಿತ್ತ್ವಾತ್ಪೂರ್ವ ಆಕಾರ ಉದಾತ್ತಃ । ಗತಿಕಾರಕೋಪಪದಾತ್ಕೃದಿತಿ ಸ ಏವ ಶಿಷ್ಯತೇ । ಪತಯತ್ । ಪತೇರದಂತಸ್ಯ ಚೌರಾದಿಕೋ ಣಿಚ್ । ಪಾ. ೩-೧-೨೫ । ಅತೋ ಲೋಪಃ । ಪಾ. ೬-೪-೪೮ । ತಸ್ಯ

ಸ್ಥಾನಿವತ್ತ್ವಾದುಪಧಾಯಾ ವೃದ್ಧ್ಯಭಾವಃ ! ಪಾ. ೭-೨-೧೧೬ । ೧-೧-೫೬ । ಲಟಃ ಶತ್ರಾದೇಶಃ । ತಸ್ಯ ಛಂದಸ್ಯುಭಯಥೇತ್ಯಾರ್ಧಧಾತುಕತ್ವೇನ ಶಬಭಾವಾದದುಪದೇಶಾತ್ । ಪಾ. ೬-೧-೧೮೬ । ಇತಿ ನಿಘಾತಾಭಾವೇನ ಪ್ರತ್ಯಯಾದ್ಯುದಾತ್ತತ್ವಮೇವ ಭವತಿ । ಆರ್ಧಧಾತುಕತ್ವೇಽಪಿ ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ । ಪರಿ. ೩೫ । ಇತಿ ನೇಡನಿಟಿ । ಪಾ. ೬-೪-೫೧ । ಇತಿ ಣಿಲೋಪಾಭಾವಃ । ಸುಪಾಂ ಸುಲುಗಿತ್ಯಮೋಲುಕ್ । ನ ಲುಮತಾ । ಪಾ ೧-೧-೬೩ । ಇತಿ ಪ್ರತ್ಯಯಲಕ್ಷಣನಿಷೇಧಾದುಗಿದಚಾಂ । ಪಾ. ೭-೧-೭೦ । ಇತಿ ನ ನುಮ್ । ಏವಂ ಮಂದಯಚ್ಛಬ್ದೋಂತೋದಾತ್ತಃ । ಮಂದಯತೀಂದ್ರೇ ಸಖಾ । ಸಪ್ತಮೀತಿ ಯೋಗವಿಭಾಗಾತ್ಸಮಾಸಃ । ತತ್ಪುರುಷೇ ತುಲ್ಯಾರ್ಥೇತಿ ಸಪ್ತಮೀಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

(ಎಲೈ ಯಜಮಾನನೇ) **ಯಜ್ಞಶ್ರಿಯಂ**—ಯಜ್ಞಕ್ಕೆ ಸಂಪದ್ರೂಪವಾದ । **ನೃಮಾದನಂ**—ಋತ್ವಿಗ್ಯಜಮಾನನೇ ಮೊದಲಾದ ಜನರಿಗೆ ಹರ್ಷವನ್ನುಂಟುಮಾಡುವ । **ಪತಯತ್**—ಕೆಟ್ಟುಹೋಗುವ ಕರ್ಮಗಳನ್ನು ಸರಿಪಡಿಸುವ ಸಾಮರ್ಥ್ಯವುಳ್ಳ । **ಮಂದಯತ್ಸಖಂ**—ಯಜಮಾನನೇ ಮೊದಲಾದವರನ್ನು ಹರ್ಷಪಡಿಸುವ ಇಂದ್ರನಿಗೆ ಸ್ನೇಹಿತನಂತಿರುವ । **ಈಂ ಆಶುಂ**—ಸವನತ್ರಯಗಳಲ್ಲಿಯೂ ವ್ಯಾಪ್ತವಾದ ಎಂದರೆ ಸಿದ್ಧಪಡಿಸುವ ಈ ಸೋಮರಸವನ್ನು ! **ಆಶವೇ**—ಯಜ್ಞವ್ಯಾಪ್ತನಾದ ಎಂದರೆ ಯಜ್ಞದಲ್ಲಿ ಮುಖ್ಯಪಾತ್ರವನ್ನು ವಹಿಸುವ (ಮುಖ್ಯದೇವನಾದ) ಇಂದ್ರನಿಗೆ । **ಆ ಭರ**—ತೆಗೆದುಕೊಂಡುಬಾ ॥

॥ ಭಾವಾರ್ಥ ॥

ಹೋತೃವು ಯಜಮಾನನನ್ನು ಅಥವಾ ಅಧ್ವರ್ಯುವನ್ನು ಉದ್ದೇಶಿಸಿ ಹೇಳುವ ವಾಕ್ಯವಿದು—ಎಲೈ ಯಜಮಾನನೇ (ಅಥವಾ ಅಧ್ವರ್ಯುವೇ) ಈಗ ಈ ಯಜ್ಞದಲ್ಲಿ ಸಿದ್ಧಪಡಿಸಿರುವ ಸೋಮರಸವು ಯಜ್ಞಕ್ಕೆ ಮುಖ್ಯವಾಗಿ ಸಂಪತ್ತೆನಿಸಿರುವುದು. ಎಂದರೆ ಇದರಿಂದಲೇ ಯಜ್ಞಕ್ಕೆ ಕಳೆಕಟ್ಟಿರುವುದು. ಇಂತಹ ಸೋಮರಸವು ಋತ್ವಿಗ್ಯಜಮಾನರಾದಿಯಾದ ಸಮಸ್ತಜನರಿಗೂ ಹರ್ಷವನ್ನುಂಟುಮಾಡುವುದು ; ಕರ್ಮಲೋಪವಾಗಿದ್ದಲ್ಲಿ ಅದನ್ನು ಸರಿಪಡಿಸುವ ಶಕ್ತಿಯುಳ್ಳದ್ದು. ಇದಲ್ಲದೆ ಈ ಸೋಮರಸವು ಯಜಮಾನನಿಗೆ ಹರ್ಷವನ್ನುಂಟುಮಾಡುವ ಇಂದ್ರನಿಗೆ ಸ್ನೇಹಿತನಂತೆ ಪ್ರೀತಿಪಾತ್ರವಾದುದು. ಇಂತಹ ಸೋಮರಸವನ್ನು, ಎಲೈ ಯಜಮಾನನೇ ಇಂದ್ರನಿಗಾಗಿ ಬೇಗನೆ ತೆಗೆದುಕೊಂಡುಬಾ.

## English Translation.

Offer to Indra, pervader (of the whole Soma Sacrifice) the Soma juice that is present (at the three Savana ceremonies) the wealth of the Sacrifice, the Source of joy to men (including priests and worshipper), the favourite of Indra who gives happiness to the worshippers.

॥ ವಿಶೇಷವಿಷಯಗಳು ॥

ಈ ಋಕ್ಕು ಯಜಮಾನ ಅಥವಾ ಅಧ್ವರ್ಯುವನ್ನು ಉದ್ದೇಶಿಸಿ ಹೇಳಲ್ಪಟ್ಟಿರುವುದು. **ಈಂ**—ಸ್ಕಂದಸ್ವಾಮಿಯು **ಈಂ** ಎಂದರೆ **ಏನಂ ಸೋಮಂ** "ಸೋಮರಸವನ್ನು" ಎಂದರ್ಥಮಾಡಿರುವರು **ಆಶುಂ**—ಈ ಶಬ್ದಕ್ಕೆ ಸಾಧಾರಣವಾಗಿ "ಬೇಗನೆ, ಜಾಗ್ರತೆಯಾಗಿ" ಎಂದರ್ಥವು. ಇದು ವಿಶೇಷಣಪದವಾದರೂ ಇಲ್ಲಿ ವಿಶೇಷ್ಯಪದವಾಗಿ ಉಪಯೋಗಿಸಲ್ಪಟ್ಟಿರುವುದು. Geldner ಪಂಡಿತನು ಈ ಶಬ್ದವು ಈ ಋಕ್ಕಿನಲ್ಲಿ ಕ್ರಿಯಾವಿಶೇಷಣವಾಗಿ ಪ್ರಯೋಗಿಸಲ್ಪಟ್ಟಿರುವುದೆಂದು ಅಭಿಪ್ರಾಯಪಡುವನು. ಋಗ್ವೇದದಲ್ಲಿ ಈ ಆಶು ಶಬ್ದವು ಅನೇಕ ಕಡೆಗಳಲ್ಲಿ "ವೇಗವಾಗಿ ಹೋಗುವ" ಎಂಬ ಅರ್ಥದಲ್ಲಿ ಕುದುರೆಗಳಿಗೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿರುವುದು. ಈ ಅರ್ಥದಲ್ಲಿಯೇ ಅನೇಕಕಡೆಗಳಲ್ಲಿ ರಥ, ಚಕ್ರ, ಪಕ್ಷಿ, ದೂತ, ವಾಯು, ಇಂದ್ರ, ಸೋಮ ಈ ಶಬ್ದಗಳಿಗೂ ವಿಶೇಷಣಶಬ್ದವಾಗಿರುವುದು.

ನೃಮಾದನಂ-ಮದವನ್ನು ಉಂಟುಮಾಡುವ ಸೋಮರಸವನ್ನು ಪಾನಮಾಡುವುದರಿಂದ ಮನುಷ್ಯರಿಗೆ ಸಂತೋಷವುಂಟಾಗುವುದು ಸಹಜವೇ ಆಗಿದೆ. ಆದುದರಿಂದ ಸೋಮಪಾನವು ಮನುಷ್ಯರಿಗೆ ಸಂತೋಷಪ್ರದವಾಗಿದೆ ಎಂದು ಅನೇಕಕಡೆಗಳಲ್ಲಿ ಹೇಳಿದೆ ಈ ಶಬ್ದದ ಪ್ರಯೋಗವು—

**ತ್ವಂ ಸೋಮ ನೃಮಾದನಃ ಪವಸ್ವ ಚರ್ಷಣೀಸಹೇ ।** (ಋ ಸಂ. ೯-೨೪-೪)

**ತ್ವಂ ಸುತೋ ನೃಮಾದನೋ ದಧನ್ವಾನ್ ಮತ್ಸರಿಂತಮಃ ।** (ಋ. ಸಂ. ೯-೬೭-೨)

ಈ ಋಕ್ಕುಗಳಲ್ಲಿಮಾತ್ರವಿರುವುದು. ಇನ್ನೆಲ್ಲಿಯೂ ಇಲ್ಲ. ಮಾದನ ಶಬ್ದವು ಮದ್-ಸಂತೋಷವನ್ನುಂಟುಮಾಡು, to rejoice, exhilarate ಎಂಬ ಧಾತುವಿನಿಂದ ಉತ್ಪನ್ನವಾಗಿದೆ.

**ಪತಯತ್**—ಈ ಶಬ್ದದ ಅರ್ಥವಿಚಾರದಲ್ಲಿ ಅನೇಕ ಪಂಡಿತರು ಬಹುವಾಗಿ ಚರ್ಚೆಮಾಡಿದಾರೆ. **ಪತಯಂತಂ= ಗಚ್ಛಂತಂ** ಎಂದು ಸ್ಕಂದಸ್ವಾಮಿಯ ಅಭಿಪ್ರಾಯವು. ವೆಂಕಟಮಾಧವರು **ಪತಯತ್** ಎಂಬ ಶಬ್ದಕ್ಕೆ **ಮನುಷ್ಯಾನ್ ಪಾತಯತಿ ಹಿ ಸೋಮಃ**--ಮನುಷ್ಯರನ್ನು ರಕ್ಷಿಸುವ ಸೋಮವು ಎಂದು ಅರ್ಥಮಾಡಿದಾರ. ಪಾಶ್ಚಾತ್ಯರು ಈ ಶಬ್ದಕ್ಕೆ accelarating, quickening, inspiring to friends ಎಂದು **ಅರ್ಥ**ಮಾಡಿದಾರೆ

॥ ವ್ಯಾಕರಣಪ್ರಕ್ರಿಯಾ ॥

ಆಶುಂ—**ಕೃವಾಪಾಜಿ ಮಿಸ್ವದಿಸಾಧ್ಯಶೂಭ್ಯ ಉಣ್** (ಉ. ಸೂ. ೧-೧) ಡುಕೃಞ್ ಕರಣೇ, ವಾಗತಿಗಂಧನಯೋಃ, ಪಾ ಪಾನೇ-ಜಿ ಅಭಿಭವೇ, ಡು ಮಿಞ್ ಪ್ರಕ್ಷೇಪಣೇ, ಸ್ವದ ಆಸ್ವಾದನೇ, ಸಾಧಸಂಸಿದ್ಧೌ ಅಶೂ ವ್ಯಾಪ್ತೌ, ಈ ಧಾತುಗಳ ಮುಂದೆ ಉಣ್ ಪ್ರತ್ಯಯ ಬರುವುದು ಎಂಬುದರಿಂದ ಅಶ್ ಧಾತುವಿಗೆ ಉಣ್ ಪ್ರತ್ಯಯ ಬಂದರೆ **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಞಿತ್ತು ಅಥವಾ ಣಿತ್ತು ಆದ ಪ್ರತ್ಯಯಪರದಲ್ಲಿರುವಾಗ ಉಪಾಂತ್ಯದ ಅಕಾರಕ್ಕೆ ವೃದ್ಧಿ ಬರುವುದು ಎಂಬುದರಿಂದ ವೃದ್ಧಿ ಬಂದರೆ ಆಶು ಎಂದಾಗುತ್ತೆ. ಪ್ರತ್ಯಯಸ್ವರ ಆದ್ಯುದಾತ್ತ ಬರುವುದು. ಆಶವೇ ಎಂಬಲ್ಲಿ ಇದರಂತೆ ತಿಳಿಯುವುದು. **ಭರ-ಹೃಞ್ ಹರಣೇ ಧಾತು**-ಇದರ ಮುಂದೆ ಲೋಟ್-ಇದರ ಸ್ಥಾನದಲ್ಲಿ ಪರಸ್ಮೈಪದದಲ್ಲಿ ಮಧ್ಯಮಪುರುಷ ಏಕವಚನ ಸಿಪ್ ಹೃ+ಸಿ. ಸಿಯ ಸ್ಥಾನ

ದಲ್ಲಿ **ಸೇರ್ಹ್ಯಪಿಚ್ಚ** (ಪಾ. ಸೂ. ೩-೪-೮೭) ಲೋಟ್ ಸ್ಥಾನದಲ್ಲಿ ಬಂದ ಸಿಗೆ ಹಿ ಆದೇಶ ಬರುವುದು ಮತ್ತು ಅದು ಅಪಿತ್ ಆಗುವುದು ಎಂಬುದರಿಂದ ಹಿ-ಆದೇಶ- ಹೃ+ಹಿ, **ಕರ್ತರಿ ಶಪ್** (ಪಾ ೩-೧-೬೮) ಕರ್ತೃ ಎಂಬ ಅರ್ಥವನ್ನು ಬೋಧಿಸುವ ಸಾರ್ವಧಾತುಕ ಪ್ರತ್ಯಯ ಪರದಲ್ಲಿರುವಾಗ ಧಾತುವಿನ ಮುಂದೆ ಶಪ್ ಬರುವುದು- ಇದರಿಂದ ಶಪ್ ವಿಕರಣ ಬರುತ್ತೆ. ಹೃ+ಅ+ಹಿ-ಈಗ **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಸಾರ್ವಧಾತುಕ ಅಥವಾ ಆರ್ಧಧಾತುಕ ಪರದಲ್ಲಿರುವಾಗ ಇ-ಉ-ಋ-ಲೃ-ವರ್ಣಾಂತವಾದ ಅಂಗಕ್ಕೆ ಗುಣ ಬರುವುದು ಎಂಬುದರಿಂದ ಗುಣ ಬರುವುದು. ಋ ಕಾರಕ್ಕೆ ಅ-ಎಂಬ ಗುಣ ಬರುವಾಗ ಅದು **ಉರಣ್ರಪರಃ** (ಪಾ. ಸೂ. ೧-೧-೫೧) ಋಕಾರಸ್ಥಾನದಲ್ಲಿ ಬರುವ ಅಣ್ (ಅ-ಇ-ಉ) ವರ್ಣಗಳು ರೇಫಶಿರಸ್ಕವಾಗಿಯೇ ಬರುವುವು ಇದರಿಂದ ರೇಫಶಿರಸ್ಕವಾದ ಅಕಾರ ಎಂದು ಅರ್ ಬಂದರೆ ಹರ್+ಅ+ಹಿ-ಈಗ **ಅತೋಹೇಃ** (ಪಾ. ಸೂ. ೬-೪-೧೦೫) ಹ್ರಸ್ವಾಕಾರದ ಮುಂದೆ ಇರುವ ಹಿಗೆ ಲುಕ್ ಬರುವುದು ಎಂಬುದರಿಂದ ಹಿ-ಗೆ ಲೋಪ-ಹರ್+ಅ=ಹರ, ಈಗ ಹೃಗ್ರಹೋರ್ಭಶ್ಛಂದಸಿ ಎಂಬುದರಿಂದ ಹಕಾರಕ್ಕೆ ಭಕಾರಾದೇಶ ಬಂದು ಭರ ಎಂದಾಗುವುದು. ಇದು ಪದದ ಮುಂದೆ ಇರುವುದರಿಂದಲೂ ಪಾದದ ಆದಿಯಲ್ಲಿಲ್ಲದೇ ಇರುವುದರಿಂದಲೂ **ತಿಙ್ಙತಿಙಃ** ಎಂಬುದರಿಂದ ಸರ್ವಾನುದಾತ್ತ. ಸಂಹಿತಾಕಾಲದಲ್ಲಿ ಇದು ವೇ-ಎಂಬ ಸ್ವರಿತದ ಮುಂದೆ ಇರುವುದರಿಂದ **ಸ್ವರಿತಾತ್ಸಂಹಿತಾಯಾಮನುದಾತ್ತಾನಾಂ** ಎಂಬುದರಿಂದ ಪ್ರಚಯವಾಗುವುದು. **ಯಜ್ಞಶ್ರಿಯಂ-ಯಜಯಾಚಯತವಿಚ್ಛಪ್ರಚ್ಛರಕ್ಷೋನಙ್** (ಪಾ. ಸೂ ೩-೩-೯೦) ಈ ಧಾತುಗಳ ಮುಂದೆ ನಙ್ ಪ್ರತ್ಯಯ ಬರುವುದು. ಇದರಿಂದ ಯಜ್ ಧಾತುವಿನ ಮುಂದೆ ನಙ್ ಬಂದರೆ ಯಜ್+ನ ಈಗ **ಸ್ತೋಃಶ್ಚುನಾಶ್ಚುಃ** (ಪಾ. ಸೂ. ೮-೪-೪೦) ಶಕಾರ ಚವರ್ಗಗಳ ಯೋಗ ಇರುವಾಗ ಕ್ರಮವಾಗಿ ಸಕಾರ ತವರ್ಗಗಳಿಗೆ ಶಕಾರ ಚವರ್ಗಗಳು ಬರುವುವು ಎಂಬುದರಿಂದ ತವರ್ಗದ ಐದನೇ ಅಕ್ಷರವಾದ ನಕಾರದ ಸ್ಥಾನದಲ್ಲಿ ಚವರ್ಗದ ಐದನೇ ಅಕ್ಷರವಾದ ಞ ಬರುವುದು. ಯಜ್-ಞ-**ಜಞೋರ್ಜ್ಞಃ** ಎಂಬುದರಿಂದ, ಜ್-ಞ ಎರಡೂ ಸೇರಿದರೆ ಯಜ್ಞ ಎಂದಾಗುವುದು **ಶ್ರಿಞ್ ಸೇವಾಯಾಂ** ಧಾತುವಿನ ಮುಂದೆ ಕ್ವಿಪ್-**ಕ್ವಿಬ್ವಚಿಪ್ರಚ್ಛ್ಯಾಯತಸ್ತುಕಟಪ್ರುಜುಶ್ರೀಣಾಂ ದೀರ್ಘೋಽಸಂಪ್ರಸಾರಣಂ ಚ** ಎಂಬ ವಾರ್ತಿಕದಿಂದ ದೀರ್ಘ ಬಂದರೆ ಶ್ರೀ ಎಂದಾಗುತ್ತೆ. ಈಗ ಯಜ್ಞಸ್ಯ ಶ್ರೀಃ-ಎಂದು ಷಷ್ಠೀತತ್ಪುರುಷ ಸಮಾಸ. ಯಜ್ಞಶ್ರೀಃ ಇದರ ಮುಂದೆ-ಅಮ್-ಪ್ರತ್ಯಯವನ್ನಿಟ್ಟಾಗ ಯಜ್ಞಶ್ರೀ+ಅಮ್-ಈಗ **ಅಚಿಶ್ನುಧಾತುಭ್ರುವಾಂಯ್ವೋರಿಯಙುವಙೌ** (ಪಾ. ಸೂ ೬-೪-೭೭) ಅಜಾದಿಯಾದ ಪ್ರತ್ಯಯ ಪರದಲ್ಲಿರುವಾಗ ಶ್ನು ಪ್ರತ್ಯಯಾಂತವಾದ ಅಂಗ, ಇ-ಉ. ವರ್ಣಾಂತವಾದ ಅಂಗ, ಭ್ರೂಶಬ್ದರೂಪವಾದ ಅಂಗ ಇವುಗಳಿಗೆ ಇಯಙ್-ಉ ವಙ್ ಎಂಬ ಆದೇಶಗಳು ಬರುವವು-ಅಂದರೆ, ಇಕಾರಕ್ಕೆ-ಇಯಙ್ ಉಕಾರಕ್ಕೆ-ಉವಙ್ ಎಂದು ತಿಳಿಯಬೇಕು. ಪ್ರಕೃತ ಈ ಸೂತ್ರದಿಂದ ಈಕಾರಕ್ಕೆ ಇಯಙ್ ಬಂದು ಯಜ್ಞಶ್ರಿಯಮ್ ಎಂದಾಗುತ್ತದೆ. ಇಲ್ಲಿ **ಸಮಾಸಸ್ಯ** (ಪಾ. ಸೂ. ೬-೧-೨೨೩) ಎಂಬುದರಿಂದ ಅಂತೋದಾತ್ತ. ಮಾದ್ಯಂತೇ ಅನೇನ (ಈ ಸಾಧನದಿಂದ ಹರ್ಷಿಸುವರು) ಇತಿ ಮಾದನಃ **ಕರಣಾಧಿಕರಣಯೋಶ್ಚ** (ಪಾ. ಸೂ. ೩-೩-೧೧೭) ಎಂಬುದರಿಂದ ಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ ಬರುವುದು. ಪ್ರತ್ಯಯ ಲಿತ್ತಾದ್ದರಿಂದ **ಲಿತಿ** (ಪಾ. ಸೂ, ೬-೧-೧೯೩) ಎಂಬುದರಿಂದ ಪ್ರತ್ಯಯಕ್ಕಿಂತಲೂ ಪೂರ್ವದಲ್ಲಿರುವ ಆಕಾರವು ಉದಾತ್ತವಾಗುವುದು. ನೃಮಾದನಃ ಎಂಬ ಸಮಾಸದಲ್ಲಿ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬಂದು ಆಕಾರವು ಉದಾತ್ತವಾಗಿಯೇ ಇರುವುದು. ಪತ ಯತ್-ಪತಗತೌ ಧಾತುವು ಚುರಾದಿ(೧೦ನೇ ಗಣ)ಯಲ್ಲಿ ಹ್ರಸ್ವಾಕಾರಾಂತವಾಗಿ ಪಠಿತವಾಗಿರುವುದು. ಇದರ ಮುಂದೆ **ಸತ್ಯಾಪ, ಪಾಶ, ರೂಪ, ವೀಣಾ, ತೂಲ, ಶ್ಲೋಕ, ಸೇನಾ, ಲೋಮ, ತ್ವಚ, ವರ್ಮ, ವರ್ಣ, ಚೂರ್ಣ, ಚುರಾದಿಭ್ಯೋಣಿಚ್** (ಪಾ. ಸೂ. ೩-೧-೨೫) ಇವುಗಳ ಮುಂದೆ ಣಿಚ್ ಪ್ರತ್ಯಯ ಬರುವುದು ಎಂಬು

ದರಿಂದ ಣಿಚ್ ಬರುವುದು. **ಅತೋ ಲೋಪಃ** (ಪಾ. ಸೂ. ೬-೪-೪೮) ಆರ್ಧಧಾತುಕ ಪ್ರತ್ಯಯದ ಉಪದೇಶ ಕಾಲದಲ್ಲಿ ಹ್ರಸ್ವಾಕಾರಾಂತಶಬ್ದದ ಅಕಾರಕ್ಕೆ ಆರ್ಧಧಾತುಕ ಪರವಾಗಿರುವಾಗ ಲೋಪ ಬರುವುದು, ಎಂಬುದರಿಂದ ಪತ ಎಂಬುದರ ಕೊನೆಯ ಅಕಾರಕ್ಕೆ ಲೋಪ ಬರುವುದು, ಣಿಚ್ಪ್ರತ್ಯಯದ ಣಕಾರಕ್ಕೆ **ಚುಟೂ** (ಪಾ. ಸೂ. ೧-೩-೭) ಎಂಬುದರಿಂದ ಇತ್ಸಂಜ್ಞೆ **ತಸ್ಯಲೋಪಃ**(ಪಾ ಸೂ. ೧-೩-೯)ಎಂಬುದರಿಂದ ಲೋಪ. **ಅಲೋಂತ್ಯಾತ್ಪೂರ್ವ ಉಪಧಾ** (ಪಾ. ಸೂ ೧-೬೫) ಕೊನೆಯ ವರ್ಣದ ಪೂರ್ವ ವರ್ಣಕ್ಕೆ ಉಪಧಾ ಎಂದು ಸಂಜ್ಞೆ ಎಂಬುದರಿಂದ, ಪತ್ ಎಂಬ ಲ್ಲಿರುವ ಮಧ್ಯದ ಅಕಾರವು ಉಪಧಾ ಆಗಿರುವುದು. ಅದಕ್ಕೆ **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಞಿತ್ತು ವಾ ಣಿತ್ತು ಆದ ಪ್ರತ್ಯಯಗಳು ಪರವಾಗಿರುವಾಗ ಉಪಧಾಭೂತವಾದ ಹ್ರಸ್ವಾಕಾರಕ್ಕೆ ವೃದ್ಧಿ ಬರುವುದು, ಎಂಬುದರಿಂದ ವೃದ್ಧಿ (ಆಕಾರ) ಪ್ರಾಪ್ತವಾಗುವುದು. ಆದರೆ **ಸ್ಥಾನಿವದಾದೇಶೋನಲ್ವಿಧೌ** (ಪಾ. ಸೂ. ೧-೧-೫೬) ಆದೇಶವು ಸ್ಥಾನಿಯಂತೆ ಆಗುವುದು, ಅಲಾಶ್ರಯ (ವರ್ಣಾಶ್ರಯ) ಕಾರ್ಯವನ್ನು ಮಾಡುವಾಗ ಆದೇಶವು ಸ್ಥಾನಿ ಯಂತೆ ಆಗುವುದಿಲ್ಲ, ಎಂಬುದರಿಂದ **ಅತೋಲೋಪಃ** (ಪಾ. ಸೂ. ೪-೪೮) ಎಂಬುದರಿಂದ ಬಂದ 'ಅ' ಲೋಪಕ್ಕೆ ಸ್ಥಾನಿವದ್ಭಾವ ಬಂದರೆ, ಅಕಾರವಿದ್ದಂತೆ ಆಗುವುದು. ಆಗ, ತ್ ಎಂಬುದು ಉಪಧೆಯಾಗುವುದೇ ವಿನಾ ಅ ಎಂಬುದು ಉಪಧೆಯಾಗುವುದಿಲ್ಲ ಆದ್ದರಿಂದ ವೃದ್ಧಿ ಬರುವುದಿಲ್ಲ, ಪತಿ ಎಂಬುದರ ಮುಂದೆ ಲಟ್ಟನ್ನಿಟ್ಟರೆ **ಲಟಶ್ಶತೃಶಾನಚಾ ವಪ್ರಥಮಾಸಮಾನಾಧಿಕರಣೇ** (ಪಾ. ಸೂ. ೩-೨-೧೨೪) ಎಂಬುದರಿಂದ ಅದಕ್ಕೆ ಶತೃ ಆದೇಶ ಬರುವುದು ಶತೃ ಪ್ರತ್ಯಯವು ಶಿತ್ ಆದರೂ **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಆರ್ಧಧಾತುಕ ಸಂಜ್ಞೆ ಬಂದರೆ **ಕರ್ತರಿಶಪ್** (ಪಾ. ಸೂ. ೩-೧-೬೮) ಎಂಬುದರಿಂದ ಶಪ್ ವಿಕರಣಪ್ರತ್ಯಯ ಬರುವುದಿಲ್ಲ. ಆದ್ದರಿಂದ ಶತೃ ಎಂಬ ಲಸಾರ್ವಧಾತುಕವು ಅದುಪದೇಶಕ್ಕಿಂತಲೂ ಪರವಾಗುವುದಿಲ್ಲ ಆದಕಾರಣ **ತಾಸ್ಯನುದೆ ದಾತ್ತೇನ್ಙಿದದುಪದೇಶಾಲ್ಲ ಸಾರ್ವಧಾತುಕಮನುದಾತ್ತನುಹ್ನ್ವಿಙೋಃ** (ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತ ಬರುವುದಿಲ್ಲ, ಆದ್ದರಿಂದ ಪ್ರತ್ಯಯಸ್ವರದಿಂದ ಆದ್ಯುದಾತ್ತವೇ ಬರುವುದು. ಈ ರೀತಿಯಲ್ಲಿ ಅನುದಾತ್ತ ಸ್ವರ ನಿವೃತ್ತಿಗಾಗಿ ಶತೃಪ್ರತ್ಯಯವನ್ನು ಆರ್ಧಧಾತುಕವೆಂದೊಪ್ಪಿದರೆ- **ಣೇರನಿಟಿ** (ಪಾ. ಸೂ. ೬-೪-೫೧) ಇಡಾದಿ ಯಾಗಿಲ್ಲದ ಆರ್ಧಧಾತುಕವು ಪರವಾಗಿದ್ದರೆ ಣಿಚ್‌ಗೆ ಲೋಪ ಬರುವುದು ಎಂಬುದರಿಂದ, ಣಿಚ್ಪ್ರಯಕ್ಕೆ (ಪತಿ ಎಂಬುದರ ಇಕಾರಕ್ಕೆ) ಲೋಪವು ಪ್ರಾಪ್ತವಾಗುವುದು, ಆದರೂ **ಸರ್ವೇವಿಧಯಶ್ಛಂದಸಿವಿಕಲ್ಪ್ಯಂತೇ** (ಪರಿಭಾ ೩೫) ಎಲ್ಲಾ ವಿಧಿಗಳೂ ವೇದದಲ್ಲಿ ವಿಕಲ್ಪವಾಗಿ ಬರುವುವು ಎಂಬುದರಿಂದ 'ಣೇರನಿಟಿ' (ಪಾ. ಸೂ. ೬-೪-೫೧) ಎಂದು ವಿಹಿತವಾದ ಣಿ ಲೋಪವೂ ವಿಕಲ್ಪವಾದ್ದರಿಂದ ಅದು ಇಲ್ಲಿ ಬರುವುದಿಲ್ಲ- ಪತಿ+ಅತ್-ಗುಣ ಅಯಾ ದೇಶ ಗಳು ಬಂದರೆ ಪತಯತ್-ಇದರ ಮುಂದೆ ಅಮ್ ವಿಭಕ್ತಿಯನ್ನು ಹಚ್ಚಿದರೆ **ಸುಪಾಂಸು ಲುಕ್** (ಪಾ. ಸೂ. ೭-೧-೩೯) ಇತ್ಯಾದಿ ಸೂತ್ರದಿಂದ, ಅದಕ್ಕೆ ಲುಕ್ ಬರುವುದು, **ಸುಡನಪುಂಸಕಸ್ಯ** (ಪಾ. ಸೂ. ೧-೧-೪೩) ನಪುಂಸಕಲಿಂಗವಲ್ಲದ ಶಬ್ದದ ಮುಂದೆ ಬಂದಿರುವ ಸು-ಔ-ಜಸ್, ಅಮ್-ಔಟ್-ಎಂಬ ಐದು ಪ್ರತ್ಯಯಗಳು ಸರ್ವನಾಮಸ್ಥಾನಸಂಜ್ಞೆಯನ್ನು ಹೊಂದುವುವು ಎಂಬುದರಿಂದ, ಅಮ್‌ಗೆ ಸರ್ವನಾಮಸ್ಥಾನಸಂಜ್ಞೆ ಇರುವುದು. ಅದಕ್ಕೆ ಪೂರ್ವೋಕ್ತರೀತಿಯಲ್ಲಿ ಲೋಪ ಬಂದಿದ್ದರೂ **ಪ್ರತ್ಯಯಲೋಪೇ ಪ್ರತ್ಯಯಲಕ್ಷಣಂ** (ಪಾ ಸೂ. ೧-೧-೬೨) ಪ್ರತ್ಯಯಕ್ಕೆ ಲೋಪ ಬಂದಿದ್ದರೂ ಲುಪ್ತಪ್ರತ್ಯಯನಿಮಿತ್ತಕವಾದ ಕಾರ್ಯವು ಬರುವುದು, ಎಂಬುದರಿಂದ ಪ್ರತ್ಯ ಲಕ್ಷಣ ಬಂದರೆ **ಉಗಿದಚಾಂ ಸರ್ವನಾಮಸ್ಥಾನೇಽಧಾತೋಃ** (ಪಾ. ಸೂ. ೭-೨-೭೦) ಸರ್ವನಾಮಸ್ಥಾನಪ್ರತ್ಯ ಯವು ಪರವಾಗಿರುವಾಗಿರುವಾಗ ಧಾತುಸಂಬಂಧಿಯಲ್ಲದ ಉಗಿತ್ತಿಗೂ ನ ಕಾರಲೋಪವನ್ನು ಹೊಂದಿರುವ ಅಂಚು ಧಾತುವಿಗೂ ಕಡೆಯಸ್ವರದ ಮುಂದೆ ನುಮ್ ಬರುವುದು, ಎಂಬುದರಿಂದ ನುಮಾಗಮವು ಪ್ರಾಪ್ತವಾಗುವುದು. ಆದರೂ **ನ ಲುಮತಾಂಗಸ್ಯ** (ಪಾ. ಸೂ. ೧-೧-೬೩) ಲುಕ್-ಶ್ಲು-ಲುಪ್ ಈ ಶಬ್ದಗಳನ್ನು ಉಚ್ಚರಿಸಿ ಎಲ್ಲಿ ಪ್ರತ್ಯ

ಯಕ್ಕೆ ಲೋಪ ಬಂದಿರುವುದೋ ಅಲ್ಲಿ ಲುಪ್ತಪ್ರತ್ಯಯವನ್ನು ನಿಮಿತ್ತಮಾಡಿಕೊಂಡು ಅಂಗಕ್ಕೆ ಕಾರ್ಯ ಬರುವುದಿಲ್ಲ, ಎಂದು ಪ್ರತ್ಯಯ ಲಕ್ಷಣಕ್ಕೆ ನಿಷೇಧವಿರುವುದರಿಂದ ಸರ್ವನಾಮಸ್ಥಾನಪರಕತ್ವವಿಲ್ಲದ ಕಾರಣ **ಉಗಿದಚಾಂ** ಎಂಬುದರಿಂದ ನುಮಾಗಮ ಬರುವುದಿಲ್ಲ. ಇದೇ ರೀತಿಯಲ್ಲಿ 'ಮಂದಯತ್' ಶಬ್ದವೂ ಅಂತೋದಾತ್ತವು, ಮಂದಯತಿ ಸಖಾ (ಹರ್ಷವನ್ನುಂಟುಮಾಡುವ ಇಂದ್ರನಲ್ಲಿ ಸ್ನೇಹಿಯಾಗಿರುವುದು) **ಸಪ್ತಮೀ ಶೌಂಡೈಃ** (ಪಾ. ಸೂ. ೨-೧-೪೦) ಎಂಬ ಸೂತ್ರವನ್ನು, 'ಸಪ್ತಮೀ' ಎಂದು ವಿಭಾಗಮಾಡುವುದು. ಅದಕ್ಕೆ ಸಪ್ತಮ್ಯಂತವಾದ ಸುಬಂತ ಸಮರ್ಥವಾದ ಸುಬಂತದೊಂದಿಗೆ ಸಮಾಸವನ್ನು ಹೊಂದುವುದು ಎಂದು ಅರ್ಥವಾಗುವುದು ಈ ವಿಭಕ್ತವಾದ 'ಸಪ್ತಮೀ' ಎಂಬ ಸೂತ್ರದಿಂದ ಇಲ್ಲಿ ಸಮಾಸಬಂದಿರುವುದು. **ತತ್ಪುರುಷೇತುಲ್ಯಾರ್ಥ ತೃತೀಯಾ ಸಪ್ತಮೀ**-(ಪಾ. ಸೂ. ೬-೨-೨) ಎಂಬುದರಿಂದ ಸಪ್ತಮ್ಯಂತ ಪೂರ್ವಪದಪ್ರಕೃತಿಸ್ವರವೇ ನಿಲ್ಲುವುದು. **ರಾಜಾಹಸ್ಸಖಿಭ್ಯಷ್ಟಚ್** )ಪಾ. ಸೂ. ೫-೪-೯೧) ಎಂಬುದರಿಂದ ಟಚ್ ಪ್ರತ್ಯಯ ಬಂದಿರುವುದು. ॥ ೭ ॥

॥ ಸಂಹಿತಾಪಾಠಃ ॥

ಅಸ್ಯ ಪೀತ್ವಾ ಶತಕ್ರತೋ ಘನೋ ವೃತ್ರಾಣಾಮಭವಃ ।
ಪ್ರಾವೋ ವಾಜೇಷು ವಾಜಿನಂ ॥ ೮ ॥

॥ ಪದಪಾಠಃ ॥

ಅಸ್ಯ । ಪೀತ್ವಾ । ಶತಕ್ರತೋ ಇತಿ ಶತ ಽ ಕ್ರತೋ । ಘನಃ । ವೃತ್ರಾಣಾಂ ।
ಅಭವಃ ॥
ಪ್ರ । ಆವಃ । ವಾಜೇಷು । ವಾಜಿನಂ ॥ ೮ ॥

॥ ಸಾಯಣಭಾಷ್ಯಂ ॥

ಹೇ ಶತಕ್ರತೋ ಬಹುಕರ್ಮಯುಕ್ತೇಂದ್ರ ತ್ವಮಸ್ಯ ಸೋಮಸ್ಯ ಸಂಬಂಧಿನಮಂಶಂ ಪೀತ್ವಾ ವೃತ್ರಾಣಾಂ ವೃತ್ರನಾಮಕಾಸುರಪ್ರಮುಖಾಣಾಂ ಶತ್ರೂಣಾಂ ಘನೋಽಭವಃ ॥ ಹಂತಾಭೂಃ । ತತೋ ವಾಜೇಷು ಸಂಗ್ರಾಮೇಷು ವಾಜಿನಂ ಸಂಗ್ರಾಮವಂತಂ ಸ್ವಭಕ್ತಂ ಪ್ರಾವಃ । ಪ್ರಕರ್ಷೇಣ ರಕ್ಷಿತವಾನಸಿ ॥ ಅಸ್ಯೇತೀದಂಶಬ್ದೇನ ಪ್ರಯೋಗಸಮಯೇ ಪುರೋದೇಶಸ್ಥಃ ಸೋಮೋ ನಿರ್ದಿಶ್ಯತೇ ನ ತು ಪೂರ್ವಪ್ರಕೃತಃ ಸೋಮಃ ಪರಾಮೃಶ್ಯತೇ । ಅತೋಽನನ್ವಾದೇಶತ್ವಾನ್ನಾತ್ರೇದಮೋಽನ್ವಾದೇಶೇಽಶನುದಾತ್ತಸ್ತೃತೀಯಾದಾ । ಪಾ. ೨-೪-೩೨ । ಇತ್ಯಶಾದೇಶಃ । ಅತೋ ನ ಸರ್ವಾನುದಾತ್ತತ್ವಂ ಕಿಂತು ತ್ಯದಾ-

**ದ್ಯತ್ವೇ । ಪಾ. ೭-೨-೧೦೨ । ಹಲಿ ಲೋಪಃ । ಪಾ. ೭-೨-೧೧೩ । ಅಕಾರಃ ಪ್ರಾತಿಪದಿಕಸ್ವರೇಣೋದಾತ್ತ ಇತ್ಯಂತೋದಾತ್ತಾದಿತ್ಯನುವೃತ್ತಾವೂಡಿದಂಪದಾದ್ಯಪ್ಪುಮ್ರೈದ್ಯುಭ್ಯಃ । ಪಾ. ೬-೧-೧೭೧ । ಇತಿ ವಿಭಕ್ತಿ-ರುದಾತ್ತಾ। ಪೀತ್ವಾ । ಪಿಬತೇಃ ಕ್ತ್ವಾಪ್ರತ್ಯಯೇ ಘುಮಾಸ್ಥಾದಿನೇತ್ವಂ। ಪ್ರತ್ಯಯಸ್ವರೇಣಾಂತೋದಾತ್ತಃ ಅಸಾಮರ್ಥ್ಯಾನ್ನ ಪರಾಮಂತ್ರಿತಾಂಗವದ್ಭಾವಃ । ಘನಃ । ಮೂರ್ತೌ ಘನಃ । ಪಾ. ೩-೩-೭೭ । ಇತಿ ಹಂತೇರ್ಧಾತೋಃ ಕರ್ತರ್ಯಪ್ಪ್ರತ್ಯಯಃ। ತದಸ್ಯಾಸ್ತೀತ್ಯರ್ಶಆದಿತ್ವಾದಜಂತಃ । ಚಿತ್ತ್ವಾದಂತೋದಾತ್ತಃ। ವಾಜೇಷು । ವೃಷಾದಿತ್ವಾದಾದ್ಯುದಾತ್ತಃ । ವಾಜಿನಂ । ಇನಿಪ್ರತ್ಯಯಸ್ವರಃ ॥**

॥ ಪ್ರತಿಪದಾರ್ಥ ॥

(ಹೇ) **ಶತಕ್ರತೋ**—ಅನೇಕ ಸಾಹಸಕೃತ್ಯಗಳನ್ನು ಮಾಡುವ ಎಲೈ ಇಂದ್ರನೇ । (ನೀನು) **ಅಸ್ಯ**—ಈ ಸೋಮರಸದ ಸ್ವಲ್ಪಭಾಗವನ್ನು । **ಪೀತ್ವಾ**—ಪಾನಮಾಡಿ । **ವೃತ್ರಾಣಾಂ**—ವೃತ್ರರೆಂದು ಕರೆಯಲ್ಪಡುವ (ಶತ್ರುಗಳ) । **ಘನಃ**—ಸಂಹಾರಕನು । **ಅಭವಃ**—ಆಗು । (ಮತ್ತು) **ವಾಜೇಷು**—(ಶತ್ರುಗಳೊಡನೆ ನಾವು ಮಾಡುವ ಅನೇಕ) ಯುದ್ಧಗಳಲ್ಲಿ । **ವಾಜಿನಂ**—ಯುದ್ಧಮಾಡುವವನನ್ನು (ನಿನ್ನ ಭಕ್ತನಾದ ನಮ್ಮ ವೀರನನ್ನು) **ಪ್ರಾವಃ**—ಮುಖ್ಯವಾಗಿ ರಕ್ಷಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಅನೇಕ ಸಾಹಸಕೃತ್ಯಗಳನ್ನೆಸಗುವವನು. ನಾವು ಸಿದ್ಧಪಡಿಸಿ ನಿನಗಾಗಿ ಇಲ್ಲಿ ಇಟ್ಟಿರುವ ಈ ಸೋಮರಸವನ್ನು ಪಾನಮಾಡಿ ವೃತ್ರರೆಂಬ ಹೆಸರಾದ ನಮ್ಮ ಶತ್ರುಗಳನ್ನು ಸಂಹಾರಮಾಡು ಮತ್ತು ಶತ್ರುಗಳೊಡನೆ ನಾವು ಹೋರಾಡುವ ಯುದ್ಧಗಳಲ್ಲಿ ನಿನ್ನವನಾದ ನಮ್ಮ ಯೋಧನನ್ನು ಶತ್ರುಬಾಧೆಯಿಂದ ರಕ್ಷಿಸು.

English Translation

O (Indra) performer of many deeds, having drunk of this (Soma), you have become destroyer of our enemies headed by Vritra and protected our warrior in battles.

॥ ವಿಶೇಷವಿಷಯಗಳು ॥

**ಅಸ್ಯ**—ಈ ಸೋಮರಸದ, ನಿನಗಾಗಿ ಇಲ್ಲಿ ಇಟ್ಟಿರುವ ಈ ಸೋಮರಸದ. ಭಾಷ್ಯಕಾರರು **ಅಂಶಂ** ಎಂಬ ಪದವನ್ನು ಅಧ್ಯಾಹಾರಮಾಡಿ ಈ ಸೋಮರಸದ ಭಾಗವನ್ನು ಎಂದರ್ಥಮಾಡಿರುವರು. ಸ್ಕಂದಸ್ವಾಮಿ ಮತ್ತು ವೆಂಕಟಮಾಧವರು ಷಷ್ಠೀವಿಭಕ್ತಿಯಲ್ಲಿರುವ ಅಸ್ಯಶಬ್ದವು ದ್ವಿತೀಯಾವಿಭಕ್ತಿಯ ಅರ್ಥದಲ್ಲಿ ಉಪಯೋಗಿ

ಸಲ್ಪಟ್ಟಿರುವುದೆಂದು ಹೇಳಿ ಇದಕ್ಕೆ ಅಮುಂ ಸೋಮಂ ಈ ಸೋಮರಸವನ್ನು ಎಂದರ್ಥಮಾಡಿರುವರು. ಒಂದು ವಿಭಕ್ತಿಯು ಅರ್ಥವನ್ನು ಹೇಳುವ ಸಂದರ್ಭದಲ್ಲಿ ಮತ್ತೊಂದು ವಿಭಕ್ತಿಯನ್ನು ಉಪಯೋಗಿಸಿರುವುದು ಋಗ್ವೇದ ದಲ್ಲಿ ವಿಶೇಷವಾಗಿ ಕಾಣಬರುವುದು.

**ಶತಕ್ರತೋ**—ಭಾಷ್ಯಕಾರರು ಈ ಶಬ್ದಕ್ಕೆ **ಬಹುಕರ್ಮಯುಕ್ತ**—ಅನೇಕ ಸಾಹಸಕೃತ್ಯಗಳನ್ನು ಮಾಡುವ ಎಂದರ್ಥಮಾಡಿರುವರು. ವೆಂಕಟಮಾಧವರು ಕ್ರತು ಶಬ್ದಕ್ಕೆ ಪ್ರಜ್ಞೆಯೆಂದು ಅರ್ಥಮಾಡಿರುವರು. ಸ್ಕಂದಸ್ವಾಮಿಯು ಈ ಎರಡು ಅರ್ಥಗಳನ್ನೂ ಹೇಳಿರುವರು. ಇಲ್ಲಿ ಶತಶಬ್ದವು ಅನೇಕ ಎಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದು. ಇಂಗ್ಲಿಷ್ ಭಾಷೆಯಲ್ಲಿಯೂ ಸಹ hundred, thousand ಎಂಬ ಶಬ್ದಗಳನ್ನು ಅನೇಕ ಎಂಬ ಅರ್ಥದಲ್ಲಿ ಉಪಯೋಗಿಸುವುದು ರೂಢಿಯಾಗಿದೆ. ಪುರಾಣಾದಿ ಗ್ರಂಥಗಳಲ್ಲಿ ಶತಕ್ರತು ಎಂಬ ಶಬ್ದಕ್ಕೆ ನೂರು ಅಶ್ವಮೇಧಯಾಗಗಳನ್ನು ಮಾಡಿದವನು ಎಂಬ ಅರ್ಥವಿದೆ. ಮತ್ತು ಇಂದ್ರನು ಇಂದ್ರಪದವಿಯನ್ನು ಪಡೆಯುವುದಕ್ಕೆ ಪೂರ್ವದಲ್ಲಿ ನೂರು ಅಶ್ವಮೇಧಯಜ್ಞಗಳನ್ನು ಮಾಡಿ ಆ ಪದವಿಯನ್ನು ಪಡೆದನೆಂದೂ ಮತ್ತು ನೂರು ಯಜ್ಞಗಳನ್ನು ಮಾಡಿದವರು ಆ ಇಂದ್ರಪದವಿಯನ್ನು ಪಡೆಯುವರೆಂದು ಪ್ರಸಿದ್ಧಿ ಇರುವುದರಿಂದ ಅನೇಕ ಸಂದರ್ಭಗಳಲ್ಲಿ ಇತರರು ನೂರು ಯಜ್ಞಗಳನ್ನು ಮಾಡದಂತೆ ಅನೇಕ ವಿಘ್ನಗಳನ್ನುಂಟುಮಾಡಿರುವನೆಂದೂ ಪುರಾಣಾದಿಗಳಲ್ಲಿ ಹೇಳಲ್ಪಟ್ಟಿದೆ. ಆದರೆ ಇಂದ್ರನಿಗೆ ವೇದಗಳಲ್ಲಿ ಇರುವ ಸ್ಥಾನವೇ ಬೇರೆ, ಪುರಾಣಾದಿ ಆಧುನಿಕ ಗ್ರಂಥಗಳಲ್ಲಿ ಹೇಳಿರುವ ಸ್ಥಾನವೇ ಬೇರೆ. ಎಂದರೆ ಇಂದ್ರನು ದೇವತೆಗಳಲ್ಲಿ ಅತ್ಯಂತ ಶ್ರೇಷ್ಠನೆಂದು ಅವನ ಸಾಹಸಕೃತ್ಯಗಳನ್ನು ವರ್ಣಿಸಿ ಸ್ತೋತ್ರಮಾಡಿರುವ ಅನೇಕ ಸೂಕ್ತಗಳಿವೆ. ಅಷ್ಟೇಕೆ ? ಋಗ್ವೇದದಲ್ಲಿ ಇಂದ್ರನ ಪರವಾದ ಸ್ತೋತ್ರಗಳಿರುವಷ್ಟು ಮತ್ತಾವ ದೇವತೆಯ ವಿಷಯದಲ್ಲಿಯೂ ಇರುವುದಿಲ್ಲ. ಪುರಾಣಾದಿ ಗ್ರಂಥಗಳಲ್ಲಿ ಇಂದ್ರನ ಸ್ಥಾನವು ಅಂತಹ ಉಚ್ಚಸ್ಥಾನದಲ್ಲಿರದೆ ಬ್ರಹ್ಮ, ವಿಷ್ಣು, ಶಿವ ಮೊದಲಾದ ದೇವತೆಗಳಿಗೆ ಅಧೀನನೆಂದು ಹೇಳಲ್ಪಟ್ಟಿದೆ. ಋಗ್ವೇದದಲ್ಲಿಯೂ ಇತರ ವೇದಗಳಲ್ಲಿಯೂ ಇಂದ್ರನ ಪರವಾಗಿ ಹೇಳುವಾಗ ಶತಕ್ರತುಶಬ್ದವನ್ನು ಉಪಯೋಗಿಸಿರುವುದು ವಿಶೇಷವಾಗಿ ಕಂಡುಬರುವುದು.

**ವೃತ್ರಾಣಾಂ**—ವೃತ್ರನೆಂಬುವನು ಪ್ರಸಿದ್ಧನಾದ ಒಬ್ಬ ದೈತ್ಯನು. ಅವನನ್ನು ಇಂದ್ರನು ಸಂಹಾರ ಮಾಡಿದನು. ಈ ವಿಷಯವು ಋಗ್ವೇದದಲ್ಲಿಯೂ ಇತರ ವೇದಗಳಲ್ಲಿಯೂ ಬಹುವಾಗಿ ವರ್ಣಿಸಲ್ಪಟ್ಟಿರುವುದು. ಈ ವೃತ್ರಾಸುರನು ಮಳೆಯನ್ನು ಬಾರದಂತೆ ತಡೆಗಟ್ಟುವನೆಂದೂ, ಆದುದರಿಂದ ಇಂದ್ರನು ಅವನನ್ನು ಸಂಹಾರ ಮಾಡಿ ಮಳೆ ಬರುವಂತೆ ಮಾಡುವನೆಂದೂ ಅಲ್ಲಲ್ಲಿ ಹೇಳಿದೆ. ವೃತ್ರ ಶಬ್ದವು ಮಳೆಯೆಂಬ ಉಪಮಾನಾರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದೆಂದು ನಿರುಕ್ತಕಾರರೂ ಇತರರೂ ಅಭಿಪ್ರಾಯಪಡುವರು. ನಿರುಕ್ತದಲ್ಲಿ ಈರೀತಿ ಇರುವುದು—

**ತತ್ಕೋ ವೃತ್ರಃ । ಮೇಘ ಇತಿ ನೈರುಕ್ತಾಃ । ತ್ವಾಷ್ಟ್ರೋಽಸುರ ಇತ್ಯೈತಿ-**
**ಹಾಸಿಕಾಃ । ಅಪಾಂ ಚ ಜ್ಯೋತಿಷಶ್ಚ ಮಿಶ್ರೀಭಾವಕರ್ಮಣೋ ವರ್ಷಕರ್ಮ**
**ಜಾಯತೇ । ತತ್ರೋಪಮಾರ್ಥೇನ ಯುದ್ಧವರ್ಣಾ ಭವಂತಿ ॥** (ನಿ ೨-೧೬)

ಇದರ ಅಭಿಪ್ರಾಯವು—ವೃತ್ರನೆಂದರೆ ಯಾರು ? ವೃತ್ರಶಬ್ದಕ್ಕೆ ನಿರುಕ್ತಕಾರರು ಮೇಘವೆಂದೂ, ಇತಿಹಾಸ ಕರ್ತರು ತ್ವಷ್ಟೃವಿನ ಮಗನಾದ ಓರ್ವ ದೈತ್ಯನೆಂದೂ ಹೇಳುವರು. ಜಲವಿದ್ಯುತ್ತುಗಳ (ನೀರು ಮತ್ತು

**ಮಿಂಚುಗಳ) ಸಂಯೋಗದಿಂದ ಮಳೆಯು ಬರುವುದು. ಆದುದರಿಂದ ಸಿಡಿಲು ಮಿಂಚು ಇವುಗಳಿಂದ ಕೂಡಿದ ಮಳೆಯನ್ನು ಇಂದ್ರನಿಗೂ ವೃತ್ರಾಸುರನಿಗೂ ನಡೆದ ಯುದ್ಧವೆಂದು ಉಪಮಾನವಾಗಿ ವರ್ಣಿಸುವುದು ರೂಢಿಯಾಗಿದೆ ಎಂದರ್ಥವು.**

ಗುಡುಗು, ಸಿಡಿಲು, ಮಿಂಚು ಇವುಗಳ ಆರ್ಭಟದಿಂದಲೂ, ಗಾಳಿಯ ಹೊಡೆತದಿಂದಲೂ, ರಭಸವಾಗಿ ಸುಯ್ಯುವ ನೀರಿನ ಧಾರೆಗಳಿಂದಲೂ, ಉಂಟಾಗುವ ಮಳೆಯು ಕೋಲಾಹಲದಿಂದ ಯುಕ್ತವಾದ ಯುದ್ಧದಂತೆ ಕಾಣುವುದರಿಂದ ಈ ವೃಷ್ಟಿಕರ್ಮವನ್ನು ಯುದ್ಧಕ್ಕೆ ಹೋಲಿಸಿ ವರ್ಣಿಸುವುದು ರೂಢಿಯಾಗಿದ್ದಂತೆ ಕಂಡು ಬರುವುದು. ಈ ರೀತಿ ವರ್ಣಿಸಿರುವ ಯುದ್ಧದಲ್ಲಿ ಕಪ್ಪಗಿರುವ ಮೇಘಗಳೇ ವೃತ್ರನು. ಆಗಾಗ ಥಳಥಳನೆ ಮೇಘಮಧ್ಯದಲ್ಲಿ ಕಾಣಿಸುವ ಮಿಂಚೇ ಇಂದ್ರನ ವಜ್ರಾಯುಧವು ಸಿಡಲಿನ ಭಯಂಕರವಾದ ಧ್ವನಿಯೇ ಯುದ್ಧದಲ್ಲಿ ಉಂಟಾಗುವ ಘೋರ ಆರ್ಭಟವು. ಈ ಸಿಡಿಲುಮಿಂಚುಗಳ ಅರ್ಭಟವು ಮಳೆ ಬರುವುದಕ್ಕೆ ಪೂರ್ವದಲ್ಲಿಯೂ ಮಳೆಯ ಪ್ರಾರಂಭದೆಸೆಯಲ್ಲಿಯೂ ವಿಶೇಷವಾಗಿರುವುದರಿಂದಲೂ ಸ್ವಲ್ಪಕಾಲಾನಂತರ ಇವುಗಳ ಆರ್ಭಟವು ಕಮ್ಮಿಯಾಗಿ ಮಳೆಯು ಹೆಚ್ಚಾಗಿ ಬೀಳುವುದರಿಂದಲೂ ಇಂದ್ರನು ತನ್ನ ವಜ್ರಾಯುಧವನ್ನು ಮಹಾ ಶಬ್ದದೊಡನೆ ಕಪ್ಪಗಿರುವ ವೃತ್ರಾಸುರನ ಮೇಲೆ ಪ್ರಯೋಗಿಸಿ ಅವನನ್ನು ಕೊಂದಮೇಲೆ ಅವನು ತಡೆಗಟ್ಟಿದ್ದ ಮಳೆಯು ಯಥೇಚ್ಛವಾಗಿ ಸುಯ್ಯುವುದೆಂದು ವೃಷ್ಟಿಕರ್ಮವನ್ನು ಇಂದ್ರ ಮತ್ತು ವೃತ್ರಾಸುರರ ಯುದ್ಧಕ್ಕೆ ಹೋಲಿಸಿ ವರ್ಣನೆಮಾಡಿರುವುದು. ವೃತ್ರಶಬ್ದವು ಮೇಘನಾಮವಾಚಕಗಳಾದ ಮೂವತ್ತು ಶಬ್ದಗಳ ಮಧ್ಯದಲ್ಲಿ ಪಠಿತವಾಗಿರುವುದರಿಂದ (ನಿ. ೨-೨೨) ಈ ವಿಧವಾದ ಅರ್ಥಕ್ಕೆ ಸಮರ್ಥನೆಯುಂಟಾಗುವುದು.

ಭಾಗವತಾದಿ ಪುರಾಣಗಳಲ್ಲಿ ವೃತ್ರನು ತ್ವಷ್ಟ್ರುಪ್ರಜಾಪತಿಯ ಮಗನೆಂದೂ ಅವನನ್ನು ಇಂದ್ರನು ಸಂಹಾರಮಾಡಿದನೆಂದೂ ವಿಸ್ತಾರವಾದ ವರ್ಣನೆ ಇದೆ. ಯಜುರ್ವೇದದ ತೈತ್ತಿರೀಯಸಂಹಿತೆಯಲ್ಲಿಯೂ ತೈತ್ತಿರೀಯಬ್ರಾಹ್ಮಣದಲ್ಲಿಯೂ ಇಂತಹ ವರ್ಣನೆ ಅನೇಕಕಡೆಗಳಲ್ಲಿದೆ. ಈ ವಿಷಯವಾಗಿ ಹೆಚ್ಚು ವಿವರಗಳನ್ನು ಮುಂದೆ ಕೊಡಲಾಗುವುದು.

॥ ವ್ಯಾಕರಣಪ್ರಕ್ರಿಯಾ ॥

**ಅಸ್ಯ**-ಇದಿ-ಪರಮೈಶ್ವರ್ಯೇ ಧಾತು, ಇಲ್ಲಿ ಇಕಾರಕ್ಕೆ ಇತ್ಸಂಜ್ಞೆ ಇರುವುದರಿಂದ **ಇದಿತೋನುಮ್ ಧಾತೋಃ** ಎಂಬುದರಿಂದ ನುಮಾಗಮ-ಇನ್ದ್ ಎಂದಾಗುತ್ತೆ-ಈಗ **ಇನ್ದೇಃ ಕಮಿರ್ನಲೋಪಶ್ಚ** (ಉ ಸೂ.೪-೫೯೬) ಇನ್ದಿ-ಎಂಬುದರ ಮುಂದೆ ಕಮಿ ಪ್ರತ್ಯಯವೂ-ಪ್ರಕೃತಿಯಲ್ಲಿರುವ ನಕಾರಕ್ಕೆ ಲೋಪವೂ ಬರುವುದು ಎಂಬುದರಿಂದ ಕಮಿಪ್ರತ್ಯಯ ನಕಾರಲೋಪಗಳು ಬರುವುವು. ಪ್ರತ್ಯಯದಲ್ಲಿ ಕ್ ಮತ್ತು ಇ ಎರಡಕ್ಕೂ ಇತ್ಸಂಜ್ಞೆ ಬಂದು ಲೋಪ ಬಂದರೆ ಅಮ್ ಉಳಿಯುವುದು. ಇದ್+ಅಮ್=ಇದಮ್ ಎಂದಾಗುವುದು-ದಶಪಾದೀಕಾರರು **ಇಣೋ-ದಮುಕ್** ಎಂದು ಸೂತ್ರವನ್ನಿಟ್ಟುಕೊಂಡು ಇಣ್‌ಗತೌ ಧಾತುವಿನ ಮುಂದೆ ದಮುಕ್ ಪ್ರತ್ಯಯ ಬಂದು ಇದಮ್ ಎಂದಾಗುವದು ಎನ್ನುವರು. ಇದಂ ಶಬ್ದದಿಂದ ಪ್ರಯೋಗಕಾಲದಲ್ಲಿ ಮುಂಭಾಗದಲ್ಲಿ ಪ್ರತ್ಯಕ್ಷವಾಗಿ ತೋರುವ ಸೋಮವು ನಿರ್ದಿಷ್ಟವಾಗಿರುವುದು ಪೂರ್ವಮಂತ್ರಗಳಲ್ಲಿ ಪ್ರಸ್ತುತವಾದ ಸೋಮವು ಇಲ್ಲಿ ಪರಾಮರ್ಶಿಸಲ್ಪಡುವುದಿಲ್ಲ. ಆದ್ದರಿಂದ ಇದು ಅನ್ವಾದೇಶವಾಗುವುದಿಲ್ಲ. ಅನ್ವಾದೇಶ ಎಂದರೆ ಪೂರ್ವದಲ್ಲಿ ಯಾವುದಾದರೂ ಕಾರ್ಯವನ್ನು ಹೇಳುವ ಉದ್ದೇಶದಿಂದ ಪ್ರಸ್ತುತವಾದುದಕ್ಕೆ ಪುನಃ ಬೇರೆ ಕಾರ್ಯವನ್ನು ಹೇಳುವುದಕ್ಕಾಗಿ ಪರಾಮರ್ಶಮಾಡುವಿಕೆ

(ಕಿಂಚಿತ್ಕಾರ್ಯಂವಿಧಾತುಮುಪಾತ್ತಸ್ಯಕಾರ್ಯಾಂತರಂವಿಧಾತುಂಪುನರುಪಾದಾನಂ ಅನ್ವಾದೇಶಃ), ಇಲ್ಲಿ ಪ್ರತ್ಯಕ್ಷವಾಗಿ ಕಾಣತಕ್ಕ ಸೋಮವು ಅಸ್ಯ ಎಂಬುದರಿಂದ ಬೋಧಿತವಾಗುವುದರಿಂದ ಇದು ಅನ್ವಾದೇಶವಲ್ಲ, ಆದ್ದರಿಂದ **ಇದಮೋऽನ್ವಾದೇಶೇऽಶನುದಾತ್ತಸ್ತೃತೀಯಾದೌ** (ಪಾ. ಸವ. ೨-೪-೩೨) ತೃತೀಯಾದಿ ವಿಭಕ್ತಿಯು ಪರವಾಗಿರುವಾಗ ಅನ್ವಾದೇಶವಿಷಯವಾದ ಇದಂ ಶಬ್ದಕ್ಕೆ ಅನುದಾತ್ತವಾದ ಅಶ್ ಆದೇಶ ಬರುವುದು ಎಂಬುದರಿಂದ ಅಶ್ ಆದೇಶ ಬರುವುದಿಲ್ಲ ಆದ್ದರಿಂದ 'ಅಸ್ಯ' ಸರ್ವಾನುದಾತ್ತವಾಗುವುದಿಲ್ಲ **ತ್ಯದಾದೀನಾಮಃ** (ಪಾ. ಸೂ. ೭-೨-೧೦೩) ತ್ಯದಾದಿಗಣಪಠಿತಶಬ್ದಗಳಿಗೆ ವಿಭಕ್ತಿಪರವಾಗಿರುವಾಗ ಅಕಾರವು ಅಂತಾದೇಶವಾಗಿ ಬರುವುದು, ಎಂಬುದರಿಂದ ಇದಮ್ ಶಬ್ದಕ್ಕೆ ಷಷ್ಠ್ಯೇಕವಚನ ಙಸ್ ಪ್ರತ್ಯಯ ಪರವಾಗಿರುವಾಗ ಅಕಾರಾದೇಶ ಬಂದರೆ **ಅತೋಗುಣೇ** (ಪಾ. ಸೂ. ೬-೧-೯೭) ಎಂಬುದರಿಂದ ಪರರೂಪ ಬಂದು ಷಷ್ಠಿಗೆ ಸ್ಯ ಆದೇಶ ಬಂದರೆ ಇದ+ಸ್ಯ ಎಂದಿರುವಾಗ **ಹಲಿಲೋಪಃ** (ಪಾ ಸೂ ೭-೨-೧೧೩) ಹಲಾದಿಯಾದ ತೃತೀಯಾದಿ ವಿಭಕ್ತಿ ಪರದಲ್ಲಿರುವಾಗ ಕಕಾರವಿಲ್ಲದ ಇದಂ ಶಬ್ದದ ಇದ್ ಎಂಬುದಕ್ಕೆ ಲೋಪ ಬರುವುದು ಎಂಬುದರಿಂದ ಇದ್‌ಗೆ ಲೋಪ ಬಂದರೆ ಅಸ್ಯ ಎಂದು ನಿಲ್ಲುವುದು. ಇಲ್ಲಿ ಅಕಾರವು ಪ್ರಾತಿಪದಿಕಸ್ವರದಿಂದ ಉದಾತ್ತ, **ಊಡಿದಂಪದಾದ್ಯಪ್ಪುಮ್ರೈದ್ಯುಭ್ಯಃ** (ಪಾ. ಸೂ. ೬-೧-೧೭೧) ಊಠ್, ಇದಮ್, **ಪದ್ದನ್ನೋಮಾಸ್** (ಪಾ. ಸೂ. ೬-೧-೬೩) ಎಂದು ವಿಹಿತವಾದ ಆರುಪದಾದಿಗಳು, ಅಪ್, ಪುಮ್-ರೈ-ದಿವ್-ಅಂತೋದಾತ್ತವಾಗಿಯೂ ಏಕಾಚ್ಚವಾಗಿಯೂ ಇರುವ ಈ ಶಬ್ದಗಳ ಮುಂದಿರುವ ಅಸರ್ವನಾಮಸ್ಥಾನ ವಿಭಕ್ತಿಯು ಉದಾತ್ತವಾಗುವುದು, ಎಂಬುದರಿಂದ 'ಸ್ಯ' ಎಂಬುದು ಉದಾತ್ತ ನಂತರ **ಅನುದಾತ್ತಂಪದಮೇಕವರ್ಜಂ** (ಪಾ.ಸೂ.೬-೧-೧೫೮) ಎಂಬ ಸೂತ್ರದಿಂದ ಶೇಷಾನುದಾತ್ತ ಬರುವುದರಿಂದ 'ಅ' ಎಂಬುದು ಅನುದಾತ್ತವಾಗುವುದು.

ಪಾ ಪಾನೇ ಧಾತುವಿನ ಮೇಲೆ ಕ್ತ್ವಾ ಪ್ರತ್ಯಯ ಬಂದರೆ **ಘುಮಾಸ್ಥಾ ಗಾಪಾ ಜಹಾತಿ ಸಾಂಹಲಿ** (ಪಾ. ಸೂ ೬-೪-೬೬) ಎಂಬುದರಿಂದ ಪಾ ಧಾತುವಿನ ಆಕಾರಕ್ಕೆ ಈಕಾರ ಬಂದು ಪೀತ್ವಾ ಎಂದಾಗುವುದು. ಇದು ಪ್ರತ್ಯಯಸ್ವರದಿಂದ ಅಂತೋದಾತ್ತವಾಗುವುದು. ಪೀತ್ವಾ ಶತಕ್ರತೋ ಎಂಬವುಗಳಿಗೆ ಪರಸ್ಪರಾನ್ವಯವಿಲ್ಲದೇ ಇರುವುದರಿಂದ ಸಾಮರ್ಥ್ಯವಿಲ್ಲ. ಆದಕಾರಣದಿಂದ ಪೀತ್ವಾ ಎಂಬುದಕ್ಕೆ ಪರಾಂಗವದ್ಭಾವ ಬರುವುದಿಲ್ಲ.

**ಶತಕ್ರತೋ-ಪಂಚವಿಂಶತಿತ್ರಿಂಶಚ್ಚತ್ವಾರಿಂಶತ್ಪಂಚಾಶತ್ಷಷ್ಟಿಸಪ್ತತ್ಯಶೀತಿ ನವತಿ ಶತಮ್**(ಪಾ ಸೂ ೫-೧-೫೯) ಈ ರೂಢಿಶಬ್ದಗಳು ನಿಪಾತಿಸಲ್ಪಡುವುವು, ಎಂಬ ಸೂತ್ರದಿಂದ ' ದಶದಶತಃ ಪರಿಮಾಣಮಸ್ಯ ' ಎಂದು ವಿಗ್ರಹ ಮಾಡಿವಾಗ ತ ಪ್ರತ್ಯಯವೂ ಪ್ರಕೃತಿಗೆ ಶ ಆದೇಶವೂ ಬಂದು ಶತ ಎಂದಾಗುತ್ತೆ-ಇದು ಪ್ರತ್ಯಯಸ್ವರದಿಂದ ಅಂತೋದಾತ್ತ-ಉಣಾದಿಗಳು ವ್ಯುತ್ಪನ್ನಗಳು ಎಂಬ ಪಕ್ಷದಲ್ಲಿ. ಅವ್ಯುತ್ಪನ್ನಗಳು ಎಂಬ ಪಕ್ಷದಲ್ಲಿ ಪ್ರಾತಿಪದಿಕಸ್ವರದಿಂದ ಅಂತೋದಾತ್ತ, ಕೃಞ್‌ಧಾತುವಿನ ಮುಂದೆ **ಕೃಞಃ ಕತುಃ** (ಉ ಸೂ ೧-೭೭) ಕೃಞ್ ಧಾತುವಿನ ಮುಂದೆ ಕತು ಪ್ರತ್ಯಯಬರುವುದು ಎಂಬುದರಿಂದ ಕತುಪ್ರತ್ಯಯ ಕೃ+ಅತು-ಯಣಾದೇಶ ಕ್ರತುಎಂದಾಗುತ್ತೆ ಇದು ಪ್ರತ್ಯಯ ಸ್ವರದಿಂದ ಅಂತೋದಾತ್ತ. ಇವೆರಡು ಶಬ್ದಗಳಿಗೂ ಬಹುವ್ರೀಹಿ ಸಮಾಸಸಂಬುದ್ಧಿಯಲ್ಲಿ ಶತಕ್ರತೋ ಎಂದಾಗುತ್ತೆ. ಇದು **ಆಮನ್ತ್ರಿತಸ್ಯಚ** ಎಂಬ ಎಂಟನೇ ಅಧ್ಯಾಯದ ಸೂತ್ರದಿಂದ ಸರ್ವಾನುದಾತ್ತ. ಘನಃ-**ಮೂರ್ತೌ ಘನಃ** (ಪಾ.ಸೂ.-೩-೭೭)ಕಾಠಿನ್ಯ ಎಂಬ ಅರ್ಥವು ಪ್ರತಿಪಾದಿತವಾಗುವಾಗ, ಹನ ಧಾತುವಿನ ಮುಂದೆ ಅಪ್ ಪ್ರತ್ಯಯವೂ. ಧಾತುವಿಗೆ ಘನಾದೇಶವೂ ಬರುವುದು. ಘನಃ ಅಸ್ಯ ಅಸ್ತಿ ಎಂದು ವ್ಯುತ್ಪತ್ತಿಮಾಡಿದಾಗ **ಅರ್ಶಆದಿಭ್ಯೋऽಚ್** (ಪಾ. ೫-೨-೧೨೭) ಎಂಬುದರಿಂದ ಅಚ್ಪ್ರತ್ಯಯ ಬರುವುದು ಅಚ್ಪ್ರತ್ಯಯವು ಚಿತ್ತಾದ್ದರಿಂದ **ಚಿತಃ** (ಪಾ. ಸೂ.

೬-೧-೧೬೩) ಎಂಬುದರಿಂದ ಅಂತೋದಾತ್ತ. ವಾಜೇಷು-ವೃಷಾದೀನಾಂ ಚ (ಪಾ. ಸೂ. ೬-೧-೨೦೩) ವೃಷಾದಿ ಗಣಪಠಿತಶಬ್ದಗಳ ಆದಿಯು ಉದಾತ್ತವಾಗುವುದು ಎಂಬುದರಿಂದ ವೃಷಾದಿಗಣದಲ್ಲಿ ಸೇರಿದ ವಾಜ ಶಬ್ದವು ಆದ್ಯುದಾತ್ತ. ವಾಜನಂ, ವಾಜಃ ಅಸ್ಯ ಅಸ್ತಿ ಎಂಬ ಅರ್ಥದಲ್ಲಿ ಅತಇನಿಠನೌ (ಪಾ. ಸೂ. ೫-೨-೧೧೫) ಎಂಬುದರಿಂದ ಇನಿ ಪ್ರತ್ಯಯ ಬರುವುದು. ಆದ್ದರಿಂದ ಪ್ರತ್ಯಯಸ್ವರ ಬರುವುದು ॥ ೮ ॥

॥ ಸಂಹಿತಾಪಾಠಃ ॥

ತಂ ತ್ವಾ ವಾಜೇಷು ವಾಜಿನಂ ವಾಜಯಾಮಃ ಶತಕ್ರತೋ।
ಧನಾನಾಮಿಂದ್ರ ಸಾತಯೇ ॥ ೯ ॥

॥ ಪದಪಾಠಃ ॥

ತಂ । ತ್ವಾ । ವಾಜೇಷು । ವಾಜಿನಂ । ವಾಜಯಾಮಃ । ಶತಕ್ರತೋ ಇತಿ ಶತಽಕ್ರತೋ ॥
ಧನಾನಾಂ । ಇಂದ್ರ । ಸಾತಯೇ ॥ ೯ ॥

॥ ಸಾಯಣಭಾಷ್ಯಂ ॥

ಹೇ ಶತಕ್ರತೋ ಬಹುಕರ್ಮಯುಕ್ತ ಯದ್ವಾ ಬಹುಪ್ರಜ್ಞಾನಯುಕ್ತೇಂದ್ರ ಧನಾನಾಂ ಸಾತಯೇ ಸಂಭಜನಾರ್ಥಂ ವಾಜೇಷು ಯುದ್ಧೇಷು ವಾಜಿನಂ ಬಲವಂತಂ ತ್ವಾ ಪೂರ್ವಮಂತ್ರೋಕ್ತ-ಗುಣಯುಕ್ತಂ ತ್ವಾಂ ವಾಜಯಾಮಃ । ಅನ್ನವಂತಂ ಕುರ್ಮಃ । ರಣ ಇತ್ಯಾದಿಷು ಷಟ್ಚತ್ವಾರಿಂಶತ್ಸು ಸಂಗ್ರಾಮನಾಮಸು ಪೌಂಸ್ಯೇ ಮಹಾಧನೇ ವಾಜೇಽಗ್ಮನ್ನಿತಿ ಪಠಿತಂ । ಅಷ್ಟಾವಿಂಶತಿಸಂಖ್ಯಾಕೇಷ್ವನ್ನ-ನಾಮಸ್ವಂಧೋ ವಾಜಃ ಪಾಜ ಇತಿ ಪಠಿತಂ । ಉರು ತುವೀತ್ಯಾದಿಷು ದ್ವಾದಶಸು ಬಹುನಾಮಸು ಶತಂ ಸಹಸ್ರಮಿತಿ ಪಠಿತಂ। ಅಪ್ನೋಽಪ್ನ ಇತ್ಯಾದಿಷು ಷಡ್ವಿಂಶತಿಸಂಖ್ಯಾಕೇಷು ಕರ್ಮನಾಮಸು ಶಕ್ಮ ಕ್ರತುರಿತಿ ಪಠಿತಂ । ಕೇತಃ ಕೇತುರಿತ್ಯಾದಿಷ್ವೇಕಾದಶಸು ಪ್ರಜ್ಞಾನಾಮಸು ಕ್ರತುರಸುರಿತಿ ಪಠಿತಂ ॥ ತ್ವಾ । ಅನುದಾತ್ತಂ ಸರ್ವಮಿತ್ಯನುವೃತ್ತೌ ತ್ವಾಮೌ ದ್ವಿತೀಯಾಯಾ ಇತಿ ತ್ವಾದೇಶಃ । ವಾಜೇಷು । ವಜ ವ್ರಜ ಗತೌ । ವಾಜಯತಿ ಗಮಯತಿ ಶರೀರನಿರ್ವಾಹಮನೇನೇತಿ ವಾಜೋ ಬಲಮನ್ನಂ ವಾ । ಣ್ಯಂತಾತ್ಕರಣೇ ಘಞ್ । ತತ್ರ ಞ್ನಿತ್ಸ್ವರಸ್ಯಾಪವಾದೇ ಕರ್ಷಾತ್ವತಃ । ಪಾ. ೬-೧-೧೯೭ । ಇತ್ಯಂತೋದಾತ್ತತ್ವೇ ಪ್ರಾಪ್ತೇ ತಸ್ಯಾಪ್ಯಪವಾದತ್ವೇನ ವೃಷಾದೀನಾಂ ಚ । ಪಾ. ೬-೧-೨೦೩ । ಇತ್ಯಾದ್ಯುದಾತ್ತತ್ವಂ । ವಾಜಯಾಮಃ । ವಾಜೋಽಸ್ಯಾಸ್ತೀತಿ ವಾಜವಾನ್ । ತಂ ಕುರ್ಮ ಇತ್ಯರ್ಥೇ ತತ್ಕರೋತಿ ತದಾಚಷ್ಟೇ । ಪಾ. ೩-೧-೨೬,

೫-೬ | ಇತಿ ಣಿಚ್ | ಇಷ್ಠವಣೌ ಪ್ರಾತಿಪದಿಕಸ್ಯ | ಪಾ. ೬-೪-೧೫೫-೧ | ಇತಿ ತಸ್ಮಿನ್ಪರತೆ ಇಷ್ಠವದ್ಭಾವಾದ್ವಿನ್ಮತೋರ್ಲುಕ್ | ಪಾ. ೫-೩-೬೫ | ಇತಿ ಮತುಪೋ ಲುಕ್ | ಟೇಃ | ಪಾ. ೬-೪-೧೫೫ | ಇತ್ಯಕಾರಲೋಪಃ | ಣಿಚಶ್ಚಿತ್ತ್ವಾದಂತೋದಾತ್ತತ್ವಂ ಶಪಃ ಪಿತ್ತ್ವೇನಾನುದಾತ್ತತ್ವಂ ಲಸಾರ್ವಧಾತುಕಸ್ವರೇಣಾಖ್ಯಾತಸ್ಯಾಪ್ಯನುದಾತ್ತತ್ವಂ | ಪಾದಾದಿತ್ವಾತ್ತಿಙ್ಙತಿಜ ಇತಿ ನ ನಿಘಾತಃ | ಶತಕ್ರತೋ | ಆಮಂತ್ರಿತನಿಘಾತಃ | ಧನಾನಾಂ | ನಬ್ವಿಷಯಸ್ಯಾನಿಸಂತಸ್ಯೇತ್ಯಾದ್ಯುದಾತ್ತಃ | ಸಾತಯೇ | ಉದಾತ್ತ ಇತ್ಯನುವೃತ್ತಾವೂತಿಯೂತಿಜೂತಿಸಾತಿಹೇತಿಕೀರ್ತಯಶ್ಚೇತಿ ಕ್ತಿನ್ನುದಾತ್ತಃ ||

|| ಪ್ರತಿಪದಾರ್ಥ ||

(ಹೇ) ಶತಕ್ರತೋ—ಅನೇಕ ಸಾಹಸಕರ್ಮಯುಕ್ತನಾದ ಅಥವಾ ಬಹುಪ್ರಜ್ಞಾಶಾಲಿಯಾದ | ಇಂದ್ರ—ಎಲೈ ಇಂದ್ರನೇ | ಧನಾನಾಂ—ಧನಾದಿದ್ರವ್ಯಗಳ | ಸಾತಯೇ—ಪ್ರಾಪ್ತಿಗಾಗಿ | ವಾಜೇಷು—ಯುದ್ಧಗಳಲ್ಲಿ | ವಾಜಿನಂ—ಬಲಶಾಲಿಯಾದ | ತಂ—ಪೂರ್ವೋಕ್ತಮಂತ್ರಗುಣಯುಕ್ತನಾದ | ತ್ವಾ—ನಿನ್ನನ್ನು | ವಾಜಯಾಮಃ—ಅನ್ನವಂತನನ್ನಾಗಿ ಮಾಡುವೆವು (ಹವಿಸ್ಸಿನ ರೂಪದಿಂದಿರುವ ಅನ್ನವನ್ನು ನಿನಗೆ ಸಮರ್ಪಿಸುವೆವು )

|| ಭಾವಾರ್ಥ ||

ಎಲೈ ಪ್ರಜ್ಞಾಶಾಲಿಯಾದ ಇಂದ್ರನೇ, ಪಶುಪುತ್ರಧನಾದಿಸಂಪತ್ತನ್ನು ಪಡೆಯುವುದಕ್ಕಾಗಿ, ಯುದ್ಧಗಳಲ್ಲಿ ಬಲಶಾಲಿಯಾದ ಎಂದರೆ ಪರಾಕ್ರಮಶಾಲಿಯಾದ ನಿನಗೆ ಹವಿಸ್ಸನ್ನು ಎಂದರೆ ಅನ್ನವನ್ನು ಅರ್ಪಿಸುವೆವು.

English Translation.

O Indra performer of many sacrifices (or one endowed with great wisdom), we offer sacrificial food to you who are powerful in battles, for the acquisition of riches.

|| ವಿಶೇಷವಿಷಯಗಳು ||

ವಾಜಶಬ್ದದ ಅರ್ಥವನ್ನು ಹಿಂದೆಯೇ ವಿವರಿಸಿದೇವೆ. ವಾಜಯಾಮಃ—ಈ ಕ್ರಿಯಾಪದಕ್ಕೆ ಭಾಷ್ಯಕಾರರು ಅನ್ನವಂತಂ ಕುರ್ಮಃ—ಅನ್ನವಂತನನ್ನಾಗಿ ಮಾಡುವೆವು ಎಂದೂ, ಸ್ಕಂದಸ್ವಾಮಿಯು ವಾಜಯತಿರರ್ಚಯತಿಕರ್ಮಾ, ಸ್ತುಮಃ ಸ್ತೋತ್ರಮಾಡುವೆವು ಎಂದೂ ವೆಂಕಟಮಾಧವರು ಸ್ತುತಿಭಿರ್ಬಲಿನಂ ಕುರ್ಮಃ ಸ್ತೋತ್ರಗಳಿಂದ ಪ್ರಶಂಸೆಮಾಡಿ ನಿನ್ನನ್ನು ಬಲಶಾಲಿಯನ್ನಾಗಿ ಮಾಡುವೆವು ಎಂದೂ ಅರ್ಥವಿವರಣೆಮಾಡಿದಾರೆ.

ಭಾಷ್ಯಕಾರರು ಈ ಋಕ್ಕಿನಲ್ಲಿರುವ ವಾಜ, ಶತ, ಕ್ರತು, ಎಂಬ ಶಬ್ದಗಳ ಅರ್ಥವಿಚಾರದಲ್ಲಿ ನಿರುಕ್ತ ವಾಕ್ಯಗಳನ್ನು ಉದಾಹರಿಸಿದಾರೆ—

ವಾಜೇ—ರಣ ಮೊದಲಾದ ನಲವತ್ತಾರು ಯುದ್ಧವಾಚಕ ಶಬ್ದಗಳ ಮಧ್ಯದಲ್ಲಿ ವಾಜೇ ಎಂಬ ಶಬ್ದವು ಪಠಿತವಾಗಿದೆ (ನಿ. ೩-೯-೧೯)

**ವಾಜಃ**— ಅಂಥ ಮೊದಲಾದ ಇಪ್ಪತ್ತೆಂಟು ಅನ್ನವಾಚಕಶಬ್ದಗಳ ಮಧ್ಯದಲ್ಲಿ ವಾಜಃ ಎಂಬ ಶಬ್ದವು ಪಠಿತವಾಗಿದೆ. (ನಿ. ೩-೯-೪)

**ಶತ**— ಉರು ಮೊದಲಾದ ಹನ್ನೆರಡು ಬಹುವಾಚಕಶಬ್ದಗಳ ಮಧ್ಯದಲ್ಲಿ ಶತಂ ಎಂಬ ಶಬ್ದವು ಪಠಿತವಾಗಿದೆ. (ನಿ. ೩-೧೩-೧)

**ಕ್ರತುಃ**— ಅಪಃ ಮೊದಲಾದ ಇಪ್ಪತ್ತಾರು ಕರ್ಮವಾಚಕ ಶಬ್ದಗಳ ಮಧ್ಯದಲ್ಲಿ ಕ್ರತುಃ ಎಂಬ ಶಬ್ದವು ಪಠಿತವಾಗಿದೆ. (ನಿ. ೨-೧) ಮತ್ತು—

ಕೇತಃ ಮೊದಲಾದ ಹನ್ನೊಂದು ಪ್ರಜ್ಞಾವಾಚಕಶಬ್ದಗಳ ಮಧ್ಯದಲ್ಲಿ ಕ್ರತುಃ ಎಂಬ ಶಬ್ದವು ಪಠಿತವಾಗಿದೆ. (ನಿ. ೩-೧೩-೧೭)

|| ವ್ಯಾಕರಣಪ್ರಕ್ರಿಯಾ ||

**ತ್ವಾ**- **ತ್ವಾಮೌ ದ್ವಿತೀಯಾಯಾಃ** (ಪಾ. ಸೂ. ೮-೧-೨೩) **ಅನುದಾತ್ತಂ ಸರ್ವಮಪಾದಾದೌ** (ಪಾ. ೮-೧-೧೮) ಎಂಬ ಸೂತ್ರವು ಇಲ್ಲಿ ಅನುವೃತ್ತವಾಗುವುದು. ಪದಕ್ಕಿಂತಲೂ ಪರದಲ್ಲಿರತಕ್ಕವುಗಳಾಗಿಯೂ ಪಾದದ ಆದಿಯಲ್ಲಿಲ್ಲದವುಗಳಾಗಿಯೂ ಇರುವ ದ್ವಿತೀಯೈಕವಚನಾಂತಗಳಾದ ಯುಷ್ಮತ್ ಅಸ್ಮತ್ ಶಬ್ದಗಳಿಗೆ ಕ್ರಮವಾಗಿ ತ್ವಾ, ಮಾ, ಎಂಬ ಆದೇಶಗಳು ಬರುವುವು. ಅವು ಅನುದಾತ್ತಗಳಾಗುವುವು ಎಂಬುದರಿಂದ ತ್ವಾಂ ಎಂಬುದಕ್ಕೆ ತ್ವಾ ಆದೇಶ ಬಂದಿರುವುದು. ಅದು ಅನುದಾತ್ತವು. **ವಾಜೇಷು**- **ವಜವ್ರಜಗತೌ**-ಧಾತು ವಾಜಯತಿ-ಗಮಯತಿ ಶರೀರನಿರ್ವಾಹಂ ಅನೇನ (ಶರೀರದ ನಿರ್ವಾಹವನ್ನು ಈ ಸಾಧನದಿಂದ ಹೊಂದಿಸುವನು) ಇತಿ ವಾಜಃ ಅಂದರೆ-ಬಲ-ಅಥವಾ ಅನ್ನ ಎಂದು ಅರ್ಥ. ವಜಧಾತುವಿನಮೇಲೆ ಣಿಚ್ಪ್ರತ್ಯಯವನ್ನಿಟ್ಟರೆ-ಕರಣ ಎಂಬ ಅರ್ಥದಲ್ಲಿ ಘಞ್ ಪ್ರತ್ಯಯ ಬರುವುದು. **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧೆಗೆ ವೃದ್ಧಿ ಬರುವುದು, **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿ ಲೋಪ-ವಾಜ ಎಂದಾಗುವುದು. **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದಕ್ಕೆ ಅಪವಾದವಾದ **ಕರ್ಷಾತ್ವತೋಘಞೋಂತಉದಾತ್ತಃ** (ಪಾ.ಸೂ. ೬-೧-೧೫೯) ಕರ್ಷಧಾತು, ಆಕಾರವನ್ನು ಹೊಂದಿರುವ ಧಾತು ಇವೆರಡರ ಮುಂದೆ ಘಞ್ ಪ್ರತ್ಯಯವಿದ್ದರೆ ಆ ಘಞ್ ಪ್ರತ್ಯಯಾಂತಶಬ್ದದ ಅಂತವು ಉದಾತ್ತವಾಗುವುದು ಎಂಬುದರಿಂದ ಅಂತೋದಾತ್ತ ಪ್ರಾಪ್ತವಾದರೆ ಇದಕ್ಕೂ ಅಪವಾದವಾದ **ವೃಷಾದೀನಾಂ ಚ** (ಪಾ. ಸೂ ೬-೧-೨೦೩) ಎಂಬುದರಿಂದ ಆದ್ಯುದಾತ್ತ ಬರುವುದು. **ವಾಜಯಾಮಃ**,-ವಾಜಃ ಅಸ್ಯ ಅಸ್ತಿ (ಅನ್ನವು ಅಥವಾ ಬಲವು ಇವನಿಗೆ ಇದೆ) ಎಂದು ವ್ಯುತ್ಪತ್ತಿಮಾಡಿದಾಗ **ತದಸ್ಯಾಸ್ತ್ಯಸ್ಮಿನ್ನಿತಿಮತುಪ್** (ಪಾ. ಸೂ. ೫-೨-೯೩) ಎಂಬುದರಿಂದ ಮತುಪ್ ಬರುವುದು, **ಮಾದುಪಧಾಯಾಶ್ಚ ಮತೋರ್ವೋಽಯವಾದಿಭ್ಯಃ** (ಪಾ. ಸೂ. ೮-೨-೯) ಮವರ್ಣ ಅವರ್ಣಗಳನ್ನು ಕೊನೆಯಲ್ಲಿ ಹೊಂದಿರುವ ಶಬ್ದಗಳ ಅಥವಾ ಮವರ್ಣ ಅವರ್ಣ ಇವುಗಳು ಉಪಾಂತ್ಯದಲ್ಲಿರುವ ಶಬ್ದಗಳು ಇವುಗಳ ಮುಂದಿರುವ ಮತುಪ್ಪಿನ ಮಕಾರಕ್ಕೆ ವಕಾರ ಬರುವುದು ಎಂಬುದರಿಂದ ವಕಾರ ಬಂದರೆ ವಾಜವತ್. ಸುಪ್ರತ್ಯಯವನ್ನು ಹಚ್ಚಿದಾಗ **ಅತ್ವಸಂತಸ್ಯಚಾಧಾತೋಃ** (ಪಾ. ಸೂ. ೬-೪-೧೪) ಎಂಬುದರಿಂದ ದೀರ್ಘವೂ **ಉಗಿದಚಾಂಸರ್ವನಾಮಸ್ಥಾನೇ ಧಾತೋಃ** ಎಂಬುದರಿಂದ ನುಮಾಗಮವೂ ಬಂದು ವಾಜವಾನ್ತ್ ಸು ಎಂದಿರುವಾಗ **ಹಲ್ಙ್ಯಾಭ್ಯೋ ದೀರ್ಘಾತ್ಸುತಿಸ್ಯಪೃಕ್ತಂಹಲ್** (ಪಾ. ಸೂ. ೬-೧-೬೮) ಎಂಬುದರಿಂದ ಸುಲೋಪ **ಸಂಯೋಗಾಂತಸ್ಯಲೋಪಃ**

(ಪಾ. ಸೂ. ೮-೨-೨೩) ಎಂಬುದರಿಂದ ತಲೋಪ, **ಪೂರ್ವತ್ರಾಸಿದ್ಧಂ** (ಪಾ. ಸೂ. ೮-೨.೧) ಎಂಬುದರಿಂದ ತಲೋಪವು ಅಸಿದ್ಧವಾಗುವುದರಿಂದ 'ನ ಲೋಪಃ ಪ್ರಾತಿಪದಿಕಾಂತಸ್ಯ' ಎಂಬುದರಿಂದ ನ ಲೋಪ ಬರುವುದಿಲ್ಲ. **ವಾಜವಾ** ಎಂದಾಗುವುದು ವಾಜವಂತಂ ಕುರ್ಮಃ (ಅನ್ನವುಳ್ಳವನನ್ನಾಗಿ ಅಥವಾ ಬಲವುಳ್ಳವನನ್ನಾಗಿ ಮಾಡುತ್ತೇವೆ) ಎಂದು ವಿವಕ್ಷಿಸಿದಾಗ **ತತ್ಕರೋತಿ ತದಾಚಷ್ಟೇ** (ಪಾ. ಸೂ. ೩-೧-೨೬ ಮ ೫-೬) ದ್ವಿತೀಯಾಂತಪ್ರಾತಿಪದಿಕದ ಮುಂದೆ ಕರೋತಿ ಎಂಬ ಅರ್ಥದಲ್ಲಿಯೂ ಆಚಷ್ಟೇ ಎಂಬ ಅರ್ಥದಲ್ಲಿಯೂ ಣಿಚ್ ಪ್ರತ್ಯಯ ಬರುವುದು, ಎಂಬುದರಿಂದ ಣಿಚ್ಪ್ರತ್ಯಯ ಬಂದರೆ ವಾಜವತ್+ಅಮ್+ಣಿಚ್, **ಸನಾದ್ಯಂತಾ ಧಾತವಃ** (ಪಾ. ಸೂ. ೩-೧-೩೨) ಧಾತುಸಂಜ್ಞೆ ಬಂದರೆ, **ಸುಪೋಧಾತುಪ್ರಾತಿಪದಿಕಯೋಃ** (ಪಾ. ಸೂ. ೨-೪-೭೧) ಎಂಬುದರಿಂದ ಅಮ್ ವಿಭಕ್ತಿಗೆ ಲೋಪ ಬರುವುದು. **ಣಾವಿಷ್ಠವತ್ಪ್ರಾತಿಪದಿಕಸ್ಯ** (ಪಾ. ಸೂ ೬-೪-೧೫೫-ವಾ-೧) ಇಷ್ಠನ್ ಪ್ರತ್ಯಯವು ಪರವಾಗಿರುವಾಗ ಯಾವ ಯಾವ ಕಾರ್ಯಗಳು ಬರುವುವೋ ಆ ಕಾರ್ಯಗಳು ಣಿಚ್ಪ್ರತ್ಯಯ ಪರದಲ್ಲಿರುವಾಗಲೂ ಬರುವುವು. ಇಷ್ಠನ್ ಪ್ರತ್ಯಯವು ಪರದಲ್ಲಿರುವಾಗ **ವಿನ್ಮತೋರ್ಲುಕ್** (ಪಾ. ಸೂ. ೫-೩-೬೫) ಇಷ್ಠನ್, ಈಯಸುನ್ ಈ ಎರಡು ಪ್ರತ್ಯಯಗಳು ಪರದಲ್ಲಿರುವಾಗ ವಿನ್-ಮತುಪ್ ಪ್ರತ್ಯಯಗಳಿಗೆ ಲುಕ್ (ಲೋಪ) ಬರುವುದು ಎಂದು ಮತುಪ್ಪಿಗೆ ಲುಕ್ಕು ವಿಹಿತವಾಗಿರುವುದು. ಈ ಲುಕ್ಕು **ಣಾವಿಷ್ಠವತ್** ಎಂಬ ಅತಿದೇಶದಿಂದ ಣಿಚ್ಪ್ರತ್ಯಯ ಪರದಲ್ಲಿರುವಾಗಲೂ ಬರುವುದು. ಎಂದು ಹೇಳಿರುವುದರಿಂದ ವತ್-ಎಂಬ ಮತುಪ್ಪಿಗೆ ಲುಕ್ ಬರುವುದು. ವಾಜ+ಇ ಎಂದಿರುವುದು, **ಟೇಃ** (ಪಾ. ಸೂ. ೬-೪-೧೫೫) ಇಷ್ಠನ್-ಇಮನಿಚ್-ಈಯಸುನ್ ಪ್ರತ್ಯಯಗಳು ಪರವಾಗಿದ್ದರೆ ಭಸಂಜ್ಞಕಾಂಗಾವಯವವಾದ ಟಿಗೆ ಲೋಪ ಬರುವುದು ಎಂಬುದರಿಂದ ಅಕಾರಕ್ಕೆ ಲೋಪ ಬಂದರೆ ವಾಜಿ-ಈ ಧಾತುವಿನ ಮುಂದೆ ಲಡುತ್ತಮಪುರುಷ ಬಹುವಚನವನ್ನಿಟ್ಟರೆ **ಕರ್ತರಿ ಶಪ್** (ಪಾ. ಸೂ. ೩-೧-೬೮) ಎಂಬುದರಿಂದ ಶಪ್ ಬಂದರೆ ಗುಣ ಅಯಾದೇಶ ವಾಜಯ+ಮಸ್, **ಅತೋದೀರ್ಘೋಯಞಿ** (ಪಾ. ಸೂ. ೭-೩-೧೦೧) ಯಞಾದಿಯಾದ ಸಾರ್ವಧಾತುಕಪರವಾಗಿದ್ದರೆ ಹ್ರಸ್ವಾಕಾರಾಂತವಾದ ಅಂಗಕ್ಕೆ ದೀರ್ಘ ಬರುವುದು ಎಂಬುದರಿಂದ ದೀರ್ಘಬಂದರೆ ವಾಜಯಾಮಸ್-ರುತ್ವವಿಸರ್ಗಗಳು ಬಂದರೆ ವಾಜಯಾಮಃ ಶಪ್ಪು ಪಿತ್ತಾದ್ದರಿಂದ **ಅನುದಾತ್ತೌ ಸುಪ್ಪಿತೌ** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತ ಮಃ ಎಂಬ ಆಖ್ಯಾತಪ್ರತ್ಯಯವು, **ತಾಸ್ಯನುದಾತ್ತೇತ್**-(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತ. **ಅನುದಾತ್ತಂ ಸರ್ವಮಪಾದಾದೌ** (ಪಾ. ಸೂ. ೮-೧-೧೮) ಅನುದಾತ್ತಸಾಮಾನ್ಯವು ಪಾದಾದಿಯಲ್ಲಿರುವ ಪದಕ್ಕೆ ಬರುವುದಿಲ್ಲವೆಂದು ನಿಷೇಧವಿರುವುದರಿಂದ ಎರಡನೇ ಪಾದದ ಆದಿಯಲ್ಲಿರುವ 'ವಾಜಯಾಮಃ' ಎಂಬುದಕ್ಕೆ **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಅನುದಾತ್ತ ಬರುವುದಿಲ್ಲ, ಶತಕ್ರತೋ — **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ಅನುದಾತ್ತ **ಧನಾನಾಂ-ನಬ್ವಿಷಯಸ್ಯಾನಿಸಂತಸ್ಯ** (ಪಿ. ಸೂ. ೨೬) ಎಂಬುದರಿಂದ ಆದ್ಯುದಾತ್ತ. **ಸಾತಯೇ,** ಉದಾತ್ತಃ ಎಂಬ ಪದವು ಅನುವೃತ್ತಿಯಾಗಿ ಬಂದರೆ **ಊತಿಯೂತಿಜೂತಿಸಾತಿಹೇತಿಕೀರ್ತಯಶ್ಚ** (ಪಾ. ಸೂ. ೩-೩-೯೭) ಎಂಬುದರಿಂದ ಕ್ತಿನ್ ಪ್ರತ್ಯಯವು ಉದಾತ್ತ ‖ ೯ ‖

‖ ಸಂಹಿತಾಪಾಠಃ ‖

ಯೋ ರಾಯೋ೩ವನಿರ್ಮಹಾನ್ತ್ಸುಪಾರಃ ಸುನ್ವತಃ ಸಖಾ ।
ತಸ್ಮಾ ಇಂದ್ರಾಯ ಗಾಯತ ‖ ೧೦ ‖

॥ ಪದಪಾಠಃ ॥

ಯಃ । ರಾಯಃ । ಅವನಿಃ । ಮಹಾನ್ । ಸುಽಪಾರಃ । ಸುನ್ವತಃ । ಸಖಾ ॥
ತಸ್ಮೈ । ಇಂದ್ರಾಯ । ಗಾಯತ ॥ ೧೦ ॥

॥ ಸಾಯಣಭಾಷ್ಯಂ ॥

ಯ ಇಂದ್ರೋ ರಾಯೋ ಧನಸ್ಯಾವನೀ ರಕ್ಷಕಃ ಸ್ವಾಮೀ ವಾ ತಸ್ಮಾ ಇಂದ್ರಾಯ ಗಾಯತ । ಹೇ ಋತ್ವಿಜಸ್ತತ್ಪ್ರೀತ್ಯರ್ಥಂ ಸ್ತುತಿಂ ಕುರುತ । ಕೀದೃಶ ಇಂದ್ರಃ । ಮಹಾನ್ ಗುಣೈರಧಿಕಃ ಸುಪಾರಃ ಸುಷ್ಠು ಕರ್ಮಣಃ ಪೂರಯಿತಾ ಸುನ್ವತೋ ಯಜಮಾನಸ್ಯ ಸಖಾ ಸಖಿವತ್ಪ್ರಿಯಃ ॥ ರಾಯಃ । ಊಡಿದಂಪದಾದ್ಯಪ್ಪುಮ್ರೈದ್ಯುಭ್ಯಃ ಇತಿ ವಿಭಕ್ತೇರುದಾತ್ತತ್ವಂ । ಅವನಿಃ । ಅವ ರಕ್ಷಣಗತಿಪ್ರೀತಿತೃಪ್ತ್ಯವಗಮಪ್ರವೇಶಶ್ರವಣಸ್ವಾಮ್ಯರ್ಥಯಾಚನಕ್ರಿಯೇಚ್ಛಾದೀಪ್ತ್ಯವಾಪ್ತ್ಯಾಲಿಂಗನಹಿಂಸಾದಹನಭಾವವೃದ್ಧಿಷು ಚೇತ್ಯಸ್ಮಾದರ್ತಿಸೃಧೃಧಮ್ಯಮ್ಯಶ್ಯವಿತೃಭ್ಯೋಽನಿಃ । ಉ. ೨-೧೦೩ । ಇತ್ಯನಿಃ । ಪ್ರತ್ಯಯಾದ್ಯುದಾತ್ತತ್ವಂ । ಸುಪಾರಃ। ಪೄ ಪಾಲನಪೂರಣಯೋರಿತ್ಯಸ್ಮಾಣ್ಣಿಜಂತಾತ್ಕರ್ತರೀತ್ಯನುವೃತ್ತೌ । ಪಾ. ೩-೧-೬೮ । ಪಚಾದ್ಯಚ್ । ಪಾ. ೩-೧-೧೩೪ । ಚಿತ ಇತ್ಯಂತೋದಾತ್ತಃ । ಸುನ್ವತಃ । ಶತುರನುಮೋ ನದ್ಯಜಾದೀ । ಪಾ. ೬-೧-೧೭೩ । ಇತಿ ವಿಭಕ್ತಿರುದಾತ್ತಾ । ಸಖಾ । ಸಮಾನೇ ಖ್ಯಃ ಸ ಚೋದಾತ್ತಃ । ಉ. ೪-೧೩೬ । ಇತೀಣ್ಪ್ರತ್ಯಯಾಂತಃ । ತತ್ಸನ್ನಿಯೋಗೇನ ಯಲೋಪಃ। ಸಶಬ್ದಸ್ಯ ಚೋದಾತ್ತಃ । ಡಿತ್ತ್ವಾಟ್ಟಿಲೋಪಃ ತಸ್ಮೈ । ಅದಿರಿತ್ಯನುವೃತ್ತೌ ತ್ಯಜಿತನಿಯಜಿಭ್ಯೋ ಡಿತ್ । ಉ. ೧-೧೩೦ । ಇತಿ ತನೋತೇರದಿಪ್ರತ್ಯಯಃ। ಡಿತ್ತ್ವಾಟ್ಟಿಲೋಪೇ ಪ್ರತ್ಯಯಸ್ವರೇಣ ತಚ್ಛಬ್ದ ಉದಾತ್ತಃ । ತ್ಯದಾದ್ಯತ್ವಂ । ಏಕಾದೇಶ ಉದಾತ್ತೇನೋದಾತ್ತ ಇತ್ಯುದಾತ್ತಃ । ಸಾವೇಕಾಚಸ್ತೃತೀಯಾದಿರ್ವಿಭಕ್ತಿರಿತಿ । ವಿಭಕ್ತೇರುದಾತ್ತತ್ವೇ ಪ್ರಾಪ್ತೇ ಪ್ರಥಮೈಕವಚನೇಽವರ್ಣಾಂತತ್ವಾನ್ನ ಗೋಶ್ವನ್ಸಾವವರ್ಣ । ಪಾ ೬-೧-೧೮೨ । ಇತಿ ನಿಷೇಧಃ । ಇಂದ್ರಾಯ । ಇಂದ್ರಶಬ್ದೋ ರನ್ಪ್ರತ್ಯಯಾಂತೋ ನಿಪಾತಿತಃ । ನಿತ್ತ್ವಾದಾದ್ಯುದಾತ್ತಃ । ಕರ್ಮಣಾ ಯಮಭಿಪ್ರೈತಿ ಸ ಸಂಪ್ರದಾನಂ । ಪಾ. ೧-೪-೩೨ । ಇತ್ಯತ್ರ ಕ್ರಿಯಾಗ್ರಹಣಂ ಕರ್ತವ್ಯಂ । ಪಾ. ೧-೪-೩೨-೧ । ಇತಿ ವಚನಾದ್ಗಾನಕ್ರಿಯಯಾ ಪ್ರಾಪ್ಯತ್ವಾತ್ಸಂಪ್ರದಾನತ್ವೇನ ಚತುರ್ಥೀ ॥

॥ ಪ್ರತಿಪದಾರ್ಥ ॥

(ಹೇ ಋತ್ವಿಜಃ—ಎಲೈ ಋತ್ವಿಕ್ಕುಗಳೇ) **ಯಃ**—ಯಾವ ಇಂದ್ರನು । **ರಾಯಃ**—ಐಶ್ವರ್ಯದ । **ಅವನಿಃ**—ಸಂರಕ್ಷಕನೋ ಅಥವಾ ಸ್ವಾಮಿಯೋ । **ಮಹಾನ್**—ಗುಣಾಧಿಕ್ಯದಿಂದ ಮಹನೀಯನೆಂದು ಕರೆಯಲ್ಪಡುವನೋ । **ಸುಪಾರಃ**—ಯಜ್ಞಾದಿಕರ್ಮಗಳನ್ನು ನಿರ್ವಿಘ್ನವಾಗಿ ಪೂರೈಸುವಂತೆ ಮಾಡುವನೋ । **ಸುನ್ವತಃ**—(ಇಂದ್ರನಿಗಾಗಿ) ಸೋಮರಸವನ್ನು ಹಿಂಡಿ ಸಿದ್ಧಪಡಿಸಿಟ್ಟುಕೊಂಡಿರುವ (ಯಜಮಾನನಿಗೆ) **ಸಖಾ**—ಸ್ನೇಹಿತನಂತೆ ಪ್ರೀತಿಪಾತ್ರನೋ । **ತಸ್ಮೈ**—ಅಂತಹ । **ಇಂದ್ರಾಯ**—ಇಂದ್ರನಿಗಾಗಿ (ಇಂದ್ರನನ್ನುದ್ದೇಶಿಸಿ) **ಗಾಯತ**—ಸ್ತೋತ್ರಗಳಿಂದ ಗಾನಮಾಡಿರಿ.

॥ ಭಾವಾರ್ಥ ॥

ಇಂದ್ರನು ಧನಾದ್ಯೈಶ್ವರ್ಯಗಳ ರಕ್ಷಕನು ಅಥವಾ ಸ್ವಾಮಿಯು; ಮಹಾಗುಣಶಾಲಿಯು, ಯಜ್ಞಾದಿ ಕರ್ಮಗಳನ್ನು ನ್ಯೂನಾತಿರಿಕ್ತಗಳಿಲ್ಲದಂತೆ ಪೂರ್ಣಗೊಳಿಸುವವನು; ಇಂದ್ರನ ಪ್ರೀತ್ಯರ್ಥವಾಗಿ ಸೋಮರಸವನ್ನು ಹಿಂಡಿ ಪಾನಯೋಗ್ಯವಾಗುವಂತೆ ಸಿದ್ಧಪಡಿಸಿರುವ ಯಜಮಾನನಿಗೆ ಸ್ನೇಹಿತನಂತೆ ಅತ್ಯಂತ ಪ್ರೀತಿಪಾತ್ರನು. ಇಂತಹ ಇಂದ್ರನನ್ನು, ಎಲೈ ಋತ್ವಿಕ್ಕುಗಳೇ, ಸ್ತೋತ್ರಗಳಿಂದಲೂ ಸಾಮಗಳಿಂದಲೂ ಗಾನಮಾಡಿರಿ.

## English Translation

Sing (to) that Indra who is protector (or lord) of wealth, who is great (with many virtues) the perfector of good deeds, the friend of the worshipper.

॥ ವಿಶೇಷ ವಿಷಯಗಳು ॥

ಇದೇ ಶಬ್ದಗಳನ್ನೊಳಗೊಂಡು ಇದೇ ಅರ್ಥವನ್ನು ಹೇಳುವ ಮತ್ತೊಂದು ಋಕ್ಕು ಎಂಟನೆಯ ಮಂಡಲದ ಮೂವತ್ತೆರಡನೆಯ ಸೂಕ್ತದ ಹದಿಮೂರನೆಯ ಋಕ್ಕಿನಲ್ಲಿರುವುದು—

**ಯೋ ರಾಯೋ೩ ವನಿರ್ಮಹಾನ್ತ್ಸುಪಾರಃ ಸುನ್ವತಃ ಸಖಾ । ತಮಿಂದ್ರಮಭಿ ಗಾಯತ**

(ಋ. ಸಂ. ೮-೩೨-೧೩)

ಈ ಋಕ್ಕಿಗೆ ಮೇಧಾತಿಥಿಃ ಕಾಣ್ವಃ ಎಂಬುವನು ಋಷಿಯು. ಪ್ರಸಕ್ತವಾದ ಮಂತ್ರಕ್ಕೂ ಈ ಮಂತ್ರಕ್ಕೂ ಒಂದೆರಡನೆಯ ಪಾದಗಳಲ್ಲಿ ಏನೂ ವ್ಯತ್ಯಾಸವಿಲ್ಲ. ಮೂರನೆಯ ಪಾದದಲ್ಲಿ ಮಾತ್ರ ತಸ್ಮಾ ಇಂದ್ರಾಯ ಎಂಬ ಶಬ್ದಗಳಿಗೆ ಬದಲಾಗಿ ತಮಿಂದ್ರಮಭಿ ಎಂಬ ಶಬ್ದಗಳಿರುವವು-ಅರ್ಥದಲ್ಲೇನೂ ವ್ಯತ್ಯಾಸವಿಲ್ಲ. ಈ ಎರಡು ಋಕ್ಕುಗಳಲ್ಲಿ ಯಾವುದು ಪ್ರಾಚೀನವೆಂದು ಹೇಳುವುದು ಕಷ್ಟವಾಗಿದೆ.

**ರಾಯಃ**—ಧನದ ಎಂದರ್ಥವು **ಅವನಿಃ**—ಈ ಪದಕ್ಕೆ ಭಾಷ್ಯಕಾರರೂ, ವೆಂಕಟಮಾಧವರೂ ರಕ್ಷಕಃ-ರಕ್ಷಕನು ಅಥವಾ ಸ್ವಾಮಿಯು ಎಂದರ್ಥಮಾಡಿದಾರೆ. ಸ್ಕಂದಸ್ವಾಮಿಯು ಈ ಅರ್ಥದ ಜತೆಗೆ ಬೇರೊಂದು ಅರ್ಥವನ್ನು ಹೇಳಿರುವನು—"**ಅವನಿಃ । ಪೃಥಿವೀನಾಮ್ಯೈತತ್ । ಆಶ್ರಯತ್ವಸಾಮಾನ್ಯಾತ್ತು ಇಂದ್ರೇ ಪ್ರಯುಜ್ಯತೇ । ಯಥಾ ಪೃಥಿವೀ ಸರ್ವಾರ್ಥಾನಾಮಾಶ್ರಯಸ್ತದ್ವದಾಶ್ರಯ ಇತ್ಯರ್ಥಃ ।**" ಎಂದರೆ ಅವನಿ ಎಂಬ ಶಬ್ದಕ್ಕೆ ಪೃಥಿವಿಯು ಎಂದರ್ಥವು. ಈ ಶಬ್ದವು ಇಂದ್ರನ ಸಂಬಂಧವಾಗಿ ಉಪಯೋಗಿಸಲ್ಪಟ್ಟಿರುವುದು. ಭೂಮಿಯು ಹೇಗೆ ಧನಾದಿ ಸಮಸ್ತ ಪದಾರ್ಥಗಳಿಗೂ ಆಶ್ರಯಭೂತವಾದುದೋ ಅದೇ ರೀತಿ ಇಂದ್ರನೂ ಸಹ ಧನಕ್ಕೆ ಆಶ್ರಯಭೂತನು ಎಂದರೆ ಇಂದ್ರನು ಧನಾದಿಗಳನ್ನು ಕೊಡುವವನು ಎಂದು ಹೇಳಿದಾರೆ. ಈ ವಿಧವಾಗಿ ಅರ್ಥಮಾಡುವುದಕ್ಕಿಂತಲೂ ಸಾಯಣರ ಅರ್ಥವೇ ಸಮಂಜಸವಾಗಿರುವುದು.

**ರಾಯಃ** ಮತ್ತು **ಅವನಿಃ** ಎಂಬ ಪದಗಳನ್ನು ಸೇರಿಸುವಾಗ ಮಧ್ಯದಲ್ಲಿ ಕಂಪವೆಂಬುವ ತ್ರಿಮಾತ್ರಾ ಕಾಲಸೂಚಕವಾದ ೩ ಎಂಬ ಸಂಖ್ಯೆಯನ್ನು ಸ್ವರಿತಾನುದಾತ್ತಚಿಹ್ನೆಗಳೊಡನೆ ಬರೆಯುವುದು ಋಗ್ವೇದ ಸಂಹಿತೆಯಲ್ಲಿ ರೂಢಿಯಾಗಿದೆ. ಇತರ ವೇದಗಳಲ್ಲಿ ಈ ವಿಧವಾದ ಉಚ್ಚಾರಣೆಯು ಇರುವುದಿಲ್ಲ. ಈ ವಿಚಾರದಲ್ಲಿ

ಈ ರೀತಿ ಪ್ರಮಾಣವಿರುವುದು—ಋಗ್ವೇದೇ ಜಾತ್ಯಸ್ವರಿತಾತ್ಪರತ್ರೋದಾತ್ತೇ ವಾ ಸ್ವರಿತೇ ವಾ ಪರೇ ತಸ್ಯ ಸ್ವರಿತಸ್ಯೋದಾತ್ತತ್ವಾನುದಾತ್ತತ್ವೇ ಸ್ಪಷ್ಟಮುಚ್ಚಾರಣೀಯೇ ಇತಿ ಬೋಧಯಿತುಂ ತಾದೃಶಸ್ಥಲೇ ತತ್ಸ್ವರಸ್ಯಾವೃತ್ಯಾದಿಬೋಧನಾಯಾಂಕಾನ್ವಿತಸ್ಯ ಸ್ವರಚಿಹ್ನಾನಿ ಲಿಖ್ಯಂತೇ ಸ ಚ ಕಂಪ ಇತಿ ವ್ಯವಹ್ರಿಯತೇ ತತ್ರತ್ಯ ಉಚ್ಚಾರಣವಿಶೇಷೋ ವೈದಿಕೈಃ ॥ ತಸ್ಯಾಸ್ಯ ಕಂಪಸ್ಯ ಅಭಿಪ್ರಾಯವಿಶೇಷೋಽತ್ರ ಆನಂದತೀರ್ಥಾಚಾರ್ಯೈಃ ಶ್ಲೋಕೇನ ಸಂಗೃಹ್ಯತೇ । ಸ ಇತ್ಥಂ—ಕಂಪೋಽಶೇಷಗ್ರಹೇ ಕ್ವಾಪಿ ಲಜ್ಜಾಯಾಂ ವಾ ಪುರಾತನೇ । ಪೃಥಕ್ತ್ವೇ ಧೃಷ್ಯತಾಯಾಂ ವಾ ಹರಿಣರ್ಕ್ಸಂಹಿತೋದಿತಃ " ಇತಿ ।
ಇದರ ವಿವರಣೆಯನ್ನು Macdonellಎಂಬ ಪಂಡಿತನು ಈ ರೀತಿ ವಿವರಿಸಿರುವನು—**Rayah 3 Avanih:** a peculiar way of marking the accent; the rule is that when on independent **Svarita** immediately preceds an **Udatta it** is accompanied by the sign of the numeral 3 if its vowal is long (and by 1 if it is short e. g. **Apsv 1 Antah:**) the figure being marked with both the **Svarita**;and the **Anudatta.**

**ಮಹಾನ್+ಸುಪಾರಃ=ಮಹಾನ್ತ್ಸುಪಾರಃ** ಇಲ್ಲಿ ಮಹಾನ್ ಮತ್ತು ಸುಪಾರಃ ಎಂಬ ಶಬ್ದಗಳನ್ನು ಸಂಹಿತಾಕಾಲದಲ್ಲಿ ಸೇರಿಸುವಾಗ ನಕಾರದ ಮುಂದೆ ತಕಾರವನ್ನು ಸೇರಿಸಿ ಮುಂದಿನ ಸಕಾರವನ್ನು ಉಚ್ಚರಿಸುವುದು ರೂಢಿಯಾಗಿದೆ. ಎಂದರೆ ನ್+ಸು=ನ್+ತ್+ಸು=ನ್ತ್ಸ ಎಂದು. ಈ ವಿಧವಾದ ಉಚ್ಚಾರಣೆಯು ಅಭಿಪ್ರಾಯಭೇದವೆಂದು ಶೌನಕರು ತಮ್ಮ ಋಗ್ವೇದ ಪ್ರಾತಿಶಾಖ್ಯದಲ್ಲಿ (ಋ. ಪ್ರಾ. ೪-೧೫) ಹೇಳಿರುವರು. ಅಕ್ಷರಗಳನ್ನು ಕಷ್ಟವಿಲ್ಲದಂತೆ ಸ್ಪಷ್ಟವಾಗಿ ಉಚ್ಚಾರಣೆಮಾಡಲು ಅನುಕೂಲವಾಗುವಂತೆ ಈ ರೀತಿ ಪ್ರಯೋಗವಿರುವುದು.

**ಸುಪಾರಃ**—ತೀರವನ್ನು ಮುಟ್ಟುವುದು, ಕೊನೆಯನ್ನು ಮುಟ್ಟುವುದು, ಕೊನೆಗಾಣಿಸುವುದು ಎಂದರ್ಥವು. ಭಾಷ್ಯಕಾರರು " ಕರ್ಮವನ್ನು " ಎಂಬ ಪದವನ್ನು ಅಧ್ಯಾಹಾರಮಾಡಿ ಅರ್ಥವಿವರಣೆ ಮಾಡಿರುವರು. ಪಾಶ್ಚಾತ್ಯಪಂಡಿತರು ಈ ಶಬ್ದಕ್ಕೆ ' Carrying well across (to the other bank) ", leading to Success ಎಂದು ಅರ್ಥಮಾಡಿರುವರು.

**ತಸ್ಮಾ ಇಂದ್ರಾಯ ಗಾಯತ**—ಈ ಮೂರನೆಯ ಪಾದವು. ಋ. ಸಂ. ೧-೫-೪ ಮತ್ತು ಅಥರ್ವಣ. ೨೦-೬೯-೭ ಈ ಋಕ್ಕುಗಳ ಮೂರನೆಯ ಪಾದಗಳಲ್ಲಿಯೂ ಪಠಿತವಾಗಿರುವುದು.

॥ ವ್ಯಾಕರಣಪ್ರಕ್ರಿಯಾ ॥

ಯಃ-**ತ್ಯಜಿತನಿಯಜಿಭ್ಯೋ ಡಿತ್** (ಉ. ಸೂ. ೧-೧೨೯) ತ್ಯಜ ಹಾನೌ, ತನು ವಿಸ್ತಾರೇ-ಯಜ ದೇವಪೂಜಾದೌ ಈ ಮೂರುಧಾತುಗಳ ಮುಂದೆ ಬರುವ ಅದಿಪ್ರತ್ಯಯವು ಡಿತ್ತಾಗುವುದು ಎಂಬುದರಿಂದ ಯಜಧಾತುವಿನ ಮುಂದೆ ಅದಿಪ್ರತ್ಯಯ ಪ್ರತ್ಯಯವು ಡಿತ್ ಆದ್ದರಿಂದ ಧಾತುವಿನ ಟಿ ಆದ ಅಜ್‌ಗೆ ಲೋಪ. ಯ್+ಅದ್=ಯದ್ ಎಂದಾಗುವುದು. ಈ ಶಬ್ದವು ಪ್ರತ್ಯಯಸ್ವರದಿಂದ ಆದ್ಯುದಾತ್ತ. ಉಣಾದಿಗಳು ಅವ್ಯುತ್ಪನ್ನಗಳು ಎಂಬ ಪಕ್ಷದಲ್ಲಿ ಪ್ರಾತಿಪದಿಕಸ್ವರದಿಂದ ಅಂತೋದಾತ್ತ-ಈ ಶಬ್ದದಮುಂದೆ ಪ್ರಥಮಾಏಕವಚನ ಸುಪ್ರತ್ಯಯ ಇದನ್ನು ನಿಮಿತ್ತಮಾಡಿಕೊಂಡು **ತ್ಯದಾದೀನಾಮಃ** (ಪಾ. ಸೂ. ೭-೧-೧೦೨) ಎಂಬುದರಿಂದ ದ್ ಗೆ ಅಕಾದೇಶ ಯ+ಅ+ಸು. **ಅತೋಗುಣೇ** (ಪಾ. ಸೂ. ೬-೧-೯೭) ಎಂಬುದರಿಂದ ಎರಡು ಅಕಾರಗಳಿಗೂ ಪರರೂಪ

ಬಂದು ಒಂದೇ ಅಕಾರ ಬರುವುದು ಯ+ಸು ಈಗ **ಸಸಜುಷೋರುಃ** (ಪಾ. ಸೂ. ೮-೨-೬೬) ಎಂಬುದರಿಂದ ಸು ಗೆ ರು ಆದೇಶ. ಇದಕ್ಕೆ **ಖರವಸಾನಯೋರ್ವಿಸರ್ಜನೀಯಃ** (ಪಾ. ಸೂ. ೮-೩-೧೫) ಎಂಬುದರಿಂದ ವಿಸರ್ಗ ಯಃ ಎಂದಾಗುವುದು. ಇಲ್ಲಿ ವ್ಯಂಜನವು ಅನುದಾತ್ತವಾದುದರಿಂದ ವ್ಯಂಜನವಾದ ದ್ ಸ್ಥಾನದಲ್ಲಿ ಬಂದ ಅಕಾರವು ಅನುದಾತ್ತ. ಯ ಎಂಬಲ್ಲಿಯ ಉದಾತ್ತ ಅಕಾರ ದ್ ಸ್ಥಾನದ ಅನುದಾತ್ತ ಅಕಾರ ಇವೆರಡರ ಸ್ಥಾನದಲ್ಲಿ ಪರರೂಪದಿಂದ ಬಂದ ಅಕಾರವು ಸ್ಥಾನಿವದ್ಭಾವದಿಂದ ಯದ್ಯಪಿ ನ್ಯಾಯವಾಗಿ ಸ್ವರಿತವಾಗಬೇಕು. ಆದರೂ **ಏಕಾದೇಶ ಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಎಂಬ ವಿಶೇಷವಿಧಿ ಇರುವುದರಿಂದ ಅದು ಉದಾತ್ತ. ಈ ರೀತಿಯಲ್ಲಿ ಯಃ ಎಂಬುದು ಉದಾತ್ತ, ಇನ್ನು ಯಃ ಎಂಬುದಕ್ಕೆ ರಾಯಃ ಶಬ್ದದೊಂದಿಗೆ ಸಂಹಿತೆಯನ್ನು ಮಾಡಿದರೆ **ಪೂರ್ವತ್ರಾಸಿದ್ಧಂ** (ಪಾ. ಸೂ. ೮-೨-೧) ಎಂಬುದರಿಂದ ಸಪಾದಸಪ್ತಾಧ್ಯಾಯದ ಕಾರ್ಯವಾದ ಉತ್ವವನ್ನು ಮಾಡುವಾಗ ತ್ರೈಪಾದಿಕಕಾರ್ಯವಾದ ವಿಸರ್ಗವು ಅಸಿದ್ಧವಾಗುವುದು ಅಂದರೆ ಯರ್+ರಾಯಃ ಎಂದು ಇದ್ದಂತೆ ಆಗುತ್ತದೆ. ಯದ್ಯಪಿ ರುತ್ವವೂ ತ್ರೈಪಾದಿಕವೇ ಆದರೂ ಉತ್ವವನ್ನು ಮಾಡುವಾಗ ಅದು ಅಸಿದ್ಧವಾಗುವುದಿಲ್ಲ. ಏಕೆಂದರೆ ಉತ್ವವಿಧಿಯಲ್ಲಿ ರೋಃ ಉತ್ವ ಭವತಿ ಎಂದು ಈ ರುವನ್ನೇ ಉದ್ದೇಶ್ಯವನ್ನಾಗಿ ಇಟ್ಟುಕೊಂಡು ಉತ್ವವನ್ನು ವಿಧಿಸಿರುವುದರಿಂದ ಇದು ಅಸಿದ್ಧವಾಗುವುದಿಲ್ಲ. ಹಶಿಚ (ಪಾ. ಸೂ. ೬-೧-೧೧೪) ಎಂಬುದರಿಂದ ರುಗೆ ಉತ್ವ ಬಂದರೆ ಯ+ಉ+ರಾಯಃ ಎಂದಾಗುತ್ತೆ. ಅ+ಉ ಎರಡಕ್ಕೂ **ಆದ್ಗುಣಃ** ಎಂಬುದರಿಂದ ಗುಣಬಂದರೆ ಯೋ ಎಂದಾಗುವುದು. ಇಲ್ಲಿ ವ್ಯಂಜನಸ್ಥಾನದಲ್ಲಿ ಬಂದ ಉಕಾರವು ಅನುದಾತ್ತ. ಉದಾತ್ತ ಅನುದಾತ್ತಗಳ ಸ್ಥಾನದಲ್ಲಿ ಗುಣದಿಂದ ಬಂದ ಓಕಾರವು ಮೊದಲಿನಂತೆಯೇ **ಏಕಾದೇಶ ಉದಾತ್ತೇನ** ಎಂಬುದರಿಂದ ಉದಾತ್ತ. ಏವಂ ಚ ಯೋ ಎಂಬುದು ಉದಾತ್ತ ಎಂದು ಏರ್ಪಟ್ಟಿತು

**ರಾಯಃ—ರಾತೇರ್ಡೈಃ** (ಉ. ಸೂ. ೨-೨೫) ರಾ ದಾನೇ ಎಂಬ ಧಾತುವಿನಮುಂದೆ ಡೈಪ್ರತ್ಯಯ ಬರುವುದು ಎಂಬುದರಿಂದ ರಾ ಧಾತುವಿನ ಮುಂದೆ ಡೈ ಪ್ರತ್ಯಯ-ಪ್ರತ್ಯಯದಲ್ಲಿ **ಚುಟೂ** (ಪಾ.ಸೂ. ೧-೩-೭ ಎಂಬುದರಿಂದ ಡ್‌ಗೆ ಇತ್ಸಂಜ್ಞೆ ಬಂದು ಅದಕ್ಕೆ ಲೋಪಬಂದರೆ ಐ ಮಾತ್ರ ಉಳಿಯುತ್ತೆ. ಪ್ರತ್ಯಯವು ಡಿತ್ ಆದ್ದರಿಂದ ಧಾತುವಿನ ಟಿ ಆದ ಆಕಾರಕ್ಕೆ ಲೋಪ ರ್+ಐ= ರೈ ಎಂದಾಗುತ್ತೆ. ಇದು ಪ್ರತ್ಯಯಸ್ವರದಿಂದ ಅಂತೋದಾತ್ತ. ಇದರ ಮುಂದೆ ಷಷ್ಠೀವಿಭಕ್ತಿ ಏಕವಚನ ಙಸ್ ಪ್ರತ್ಯಯ ರೈ+ಅಸ್ **ಏಚೋಽಯವಾಯಾವಃ** (ಪಾ.ಸೂ. ೬-೧-೭೮) ಎಂಬುದರಿಂದ ಐ ಗೆ ಆಯ್ ಆದೇಶ. ರಾಯಸ್, ಸ್‌ಗೆ ರುತ್ವವಿಸರ್ಗಗಳು ಬಂದರೆ ರಾಯಃ ಎಂದಾಗುವುದು. ಇಲ್ಲಿ **ಅನುದಾತ್ತೌ ಸುಪ್ಪಿತೌ** (ಪಾ.ಸೂ. ೩-೧-೪) ಎಂಬುದರಿಂದ ವಿಭಕ್ತಿಯು ಅನುದಾತ್ತವಾಗಿ ರಾ ಶಬ್ದದ ಆಕಾರವು ಪ್ರತ್ಯಯಸ್ವರದಿಂದ ಉದಾತ್ತವಾಗಿರುವುದರಿಂದ ಅದೇ ನಿಲ್ಲಬೇಕಾಗಿ ಬಂತು. ಆದರೆ **ಊಡಿದಂ ಪದಾದ್ಯಪ್ಪುಮ್ರೈದ್ಯುಭ್ಯಃ** (ಪಾ. ಸೂ. ೬-೧-೧೭೧) ಇವುಗಳ ಮುಂದಿರುವ ಅಸರ್ವನಾಮಸ್ಥಾನವಿಭಕ್ತಿಯು ಉದಾತ್ತವಾಗುವುದು, ಎಂಬುದರಿಂದ ರಾಯಃ ಎಂಬಲ್ಲಿರುವ ಷಷ್ಠೀವಿಭಕ್ತಿಯು ಉದಾತ್ತ. ಆದ್ದರಿಂದ ರಾಯಃ ಎಂಬುದು ಅಂತೋದಾತ್ತ. ರಾಯಃ ಎಂಬುದನ್ನು ಅವನಿ ಶಬ್ದದೊಂದಿಗೆ ಸಂಹಿತಾಕಾಲದಲ್ಲಿ ತ್ರೈಪಾದಿಕವಾದ ವಿಸರ್ಗವು ಅಸಿದ್ಧವಾಗುವುದು. ರಾಯಸ್+ಅವನಿ. ಸಸಜುಷೋರುಃ (ಪಾ.ಸೂ ೮-೨-೬೬) ಎಂಬುದರಿಂದ ಸ್ ಗೆ ರು ಆದೇಶ. ಇದು ತ್ರೈಪಾದಿಕವಾದರೂ ಉತ್ವವನ್ನು ಮಾಡುವಾಗ ಅಸಿದ್ಧವಾಗುವುದಿಲ್ಲ. **ಅತೋರೋರಪ್ಲುತಾದಪ್ಲುತೇ** (ಪಾ. ಸೂ. ೬-೧-೧೧೩) ಪ್ಲುತವಲ್ಲದ ಹ್ರಸ್ವಾಕಾರ ಪರದಲ್ಲಿದ್ದರೆ ಪ್ಲುತವಲ್ಲದ ಹ್ರಸ್ವಾಕಾರದ ಮುಂದೆ ಇರುವ ರು ಗೆ ಉ ಆದೇಶ ಬರುವುದು ಎಂಬುದರಿಂದ ಪ್ಲುತವಲ್ಲದ ಹ್ರಸ್ವಾಕಾರಗಳೆರಡರ ಮಧ್ಯೆ ಇರುವ ರು ಗೆ ಉ ಆದೇಶ. ರಾಯ+ಉ+ಅವನಿಃ ಈ ಉಕಾರ ವ್ಯಂಜನಸ್ಥಾನದಲ್ಲಿ ಬಂದಿರು

ವುದರಿಂದ ಸ್ಥಾನಿವದ್ಭಾವದಿಂದ ಅನುದಾತ್ತ. ವ್ಯಂಜನಮನುದಾತ್ತಂ ಎಂಬ ಅನುಶಾಸನದಿಂದ ವ್ಯಂಜನಗಳೆಲ್ಲವೂ ಅನುದಾತ್ತಗಳು ಎಂಬುದನ್ನು ಮರೆಯಬಾರದು. ರಾಯ+ಉ ಎರಡಕ್ಕೂ ಗುಣದಿಂದ ಓಕಾರ. ಈ ಓಕಾರವು ಪೂರ್ವದಲ್ಲಿರುವ ಉದಾತ್ತಾಕಾರ, ಪರದಲ್ಲಿರುವ ಅನುದಾತ್ತ ಉಕಾರ' ಇವೆರಡರ ಸ್ಥಾನದಲ್ಲಿ ಬಂದಿದೆ. ಆದ್ದರಿಂದ ಸ್ಥಾನಿವದ್ಭಾವದಿಂದ ಸ್ವರಿತವಾಗಬೇಕು ಆದರೂ **ಏಕಾದೇಶ ಉದಾತ್ತೇನ** ಎಂಬ ವಿಶೇಷವಿಧಿಯಿಂದ ಉದಾತ್ತ ವಾಗುವುದು. ರಾಯೋ+ಅವನಿ ಎಂದಿರುವಾಗ **ಏಙಃ ಪದಾಂತಾದತಿ** (ಪಾ.ಸೂ. ೬-೧-೧೦೯) ಪದದ ಕೊನೆ ಯಲ್ಲಿರುವ ಏ ಓ ಗಳ ಮುಂದೆ ಹ್ರಸ್ವಾಕಾರ ಇದ್ದರೆ ಪೂರ್ವಪರವರ್ಣಗಳ ಸ್ಥಾನದಲ್ಲಿ ಪೂರ್ವದ ರೂಪವೇ ಬರುವುದು ಎಂಬುದರಿಂದ ಓ+ಅ ಎರಡರ ಸ್ಥಾನದಲ್ಲಿಯೂ ಓಕಾರ ಒಂದೇ ಬರುವುದು. ಇದು ಉದಾತ್ತಾನು ದಾತ್ತ ಉಭಯಸ್ಥಾನದಲ್ಲಿ ಬಂದಿರುವುದರಿಂದ ಉಭಯಧರ್ಮಕವಾದ ಸ್ವರಿತವು ಸ್ಥಾನಿವದ್ಭಾವದಿಂದ ಪ್ರಾಪ್ತ ವಾಗುವುದು. ಆದರೆ **ಏಕಾದೇಶ** ಎಂಬ ವಿಶೇಷವಿಧಿಯಿಂದ ಉದಾತ್ತವೇ ಬರಬೇಕಾಯಿತು. ಈಗ ಇದನ್ನು ಬಾಧಿಸಿ ಸ್ವರಿತೋವಾನುದಾತ್ತೇ ಪದಾದೌ (ಪಾ.ಸೂ. ೮-೨-೬) ಪದದ ಆದಿಯಲ್ಲಿರುವ ಅನುದಾತ್ತವು ಪರವಾಗಿ ರುವಾಗ ಉದಾತ್ತದೊಂದಿಗೆ ಅನುದಾತ್ತಕ್ಕೆ ಬರುವ ಏಕಾದೇಶವು ವಿಕಲ್ಪವಾಗಿ ಸ್ವರಿತವಾಗುವುದು ಎಂಬುದರಿಂದ ಸ್ವರಿತ ಬರುವುದು. ಈ ಸ್ವರಿತವು ಜಾತ್ಯಸ್ವರಿತಕ್ಕೆ ಸಮಾನವಾದ್ದರಿಂದ ಇದರ ಮುಂದೆ ಉದಾತ್ತವಿದ್ದರೆ ಸ್ವರಿತಾವಯವಗಳಾದ ಉದಾತ್ತಾನುದಾತ್ತಗಳಿಗೆ ಶ್ರವಣವು ಸ್ಪಷ್ಟವಾಗಿ ಆಗುವುದು ಇಂತಹ ಸ್ಥಳದಲ್ಲಿ ಒಂದೇ ವರ್ಣವನ್ನು ಉಚ್ಚರಿಸಿದರೆ ಒಂದೇ ಪ್ರಯತ್ನದಿಂದ ಉದಾತ್ತ ಅನುದಾತ್ತ ಎರಡನ್ನೂ ತೋರಿಸಲಾಗುವುದಿಲ್ಲ ಆದ್ದರಿಂದ ಈ ವರ್ಣಕ್ಕೆ ಆವೃತ್ತಿಯನ್ನು ಮಾಡಿ ಒಂದು ವರ್ಣದಿಂದ ಉದಾತ್ತವನ್ನೂ ಮತ್ತೊಂದು ಆವೃತ್ತವಾದ ವರ್ಣದಿಂದ ಅನುದಾತ್ತವನ್ನೂ ಪ್ರದರ್ಶನಮಾಡುವುದು ವಾಡಿಕೆಯಲ್ಲಿದೆ. ಇದಕ್ಕಾಗಿ ಇಂತಹ ಸ್ಥಳಗಳಲ್ಲಿ ಆವೃತ್ತಿ ಯನ್ನು ಮಾಡುವ ಅಭಿಪ್ರಾಯವನ್ನು ತಿಳಿಯಪಡಿಸುವುದಕ್ಕಾಗಿ ಆ ಅಕ್ಷರದ ಮುಂದೆ ಅಂಕಿಯನ್ನು ಗುರುತಿಸು ವರು. ಅದನ್ನು ವೈದಿಕರು ಕಂಪ ಎನ್ನುತ್ತಾರೆ. ಇಂತಹ ಕಂಪವು ಇಲ್ಲಿ ವಿವಕ್ಷಿತ ಎಂದು ತೋರಿಸುವುದಕ್ಕಾಗಿ ಇಲ್ಲಿ ೩ ಎಂಬ ಅಂಕಿಯನ್ನು ಯೋಕಾರದ ಮುಂದೆ ಬರೆಯಲಾಗಿದೆ. ಈ ಅಂಕಿಗೆ ಸ್ವರಿತ ಎಂದು ಅರ್ಥ. ಇದರ ವಿವರಣೆಯು ಹಿಂದೆ ಹೇಳಲಾಗಿದೆ.

ಅವನಿಃ- ಅವ- ರಕ್ಷಣ ಗತಿಪ್ರೀತಿ ತೃಪ್ತ್ಯವಗಮಪ್ರವೇಶಶ್ರವಣಸ್ವಾಮ್ಯರ್ಥಯಾಚನಕ್ರಿಯೇಚ್ಛಾ ದೀಪ್ತ್ಯವಾಪ್ತ್ಯಾಲಿಂಗನಹಿಂಸಾದಾನಭಾವವೃದ್ಧಿಷು ಚ ಎಂಬ ಧಾತುವಿನ ಮುಂದೆ **ಅರ್ತಿಸೃಧೃಧಮ್ಯಮ್ಯ ಶ್ಯವಿತೃಭ್ಯೋಽನಿಃ** (ಉ. ಸೂ. ೨-೨೬೦) ಋಗತೌ-ಸೃಗತೌ-ಧೃಙ್ ಧಾರಣೇ-ಧಮಿ ಎಂಬುದು ಸೂತ್ರೋಕ್ತ ಧಾತು, ಅಮಗತೌ, ಅಶಭೋಜನೇ ಅವರಕ್ಷಣೇ-ತೃಪ್ಲವನತರಣಯೋಃ ಎಂಬೀ ಎಂಟುಧಾತುಗಳ ಮುಂದೆ ಅನಿ ಪ್ರತ್ಯಯ ಬರುವುದು ಎಂಬುದರಿಂದ ಅವಧಾತುವಿಗೆ ಅನಿಪ್ರತ್ಯಯ ಬಂದರೆ ಅವನಿ ಎಂದಾಗುತ್ತದೆ-**ಆದ್ಯುದಾ ತ್ತಶ್ಚ** (ಪಾ. ಸೂ. ೩-೧-೩) ಎಂಬ ಪ್ರತ್ಯಯ ಸ್ವರದಿಂದ ಪ್ರತ್ಯಯದ ಆದಿಯು ಉದಾತ್ತ. ಸುಪಾರಃ—ಪೃ ಪಾಲನ ಪೂರಣಯೋಃ ಎಂಬ ಧಾತುವಿನ ಮೇಲೆ ಣಿಚ್ಪ್ರತ್ಯಯ ಬಂದು **ಅಚೋಞ್ಣಿತಿ** (ಪಾ. ಸೂ.. ೭-೨-೧೧೫) ಞಿತ್ತುಣಿತ್ತು ಆದ ಪ್ರತ್ಯಯಗಳು ಪರದಲ್ಲಿದ್ದರೆ ಅಜಂತವಾದ ಅಂಗಕ್ಕೆ ವೃದ್ಧಿಬರುವುದು ಎಂಬುದರಿಂದ ವೃದ್ಧಿ ಬಂದು, ಪಾರಿ, ಎಂದಿರುವಾಗ ಆದರ ಮುಂದೆ **ನಂದಿಗ್ರಹಿಪಚಾದಿಭ್ಯೋಲ್ಯುಣಿನ್ಯಚಃ** (ಪಾ. ಸೂ. ೩-೧-೧೩೪) ಎಂಬುದರಿಂದ ಪಚಾದಿಗಣಪಠಿತವಾದ ಪಾರಿ ಎಂಬುದರ ಮುಂದೆ ಕರ್ತ್ರರ್ಥದಲ್ಲಿ ಅಚ್ಪ್ರತ್ಯಯ ಬರುವುದು, **ಣೇರ ನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಲೋಪ ಬಂದರೆ ಪಾರ-**ಚಿತಃ** (ಪಾ. ಸೂ. ೬-೧-೧೬೩) ಎಂಬುದ ರಿಂದ ಅಂತೋದಾತ್ತ. **ಸುನ್ವತಃ-ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭೩) ನುಮಾಗಮವನ್ನು

ಹೊಂದದ ಶತೃಪ್ರತ್ಯಯವನ್ನು ಕೊನೆಯಲ್ಲಿ ಹೊಂದಿರುವ ಶಬ್ದವು ಅಂತೋದಾತ್ತವಾಗಿದ್ದರೆ ಅದರ ಮುಂದೆ ಬರುವ ನದೀಸಂಜ್ಞಕವರ್ಣವೂ, ಅಜಾದಿಯಾದ ಶಸಾದಿವಿಭಕ್ತಿಯೂ ಉದಾತ್ತವಾಗುವುದು-ಎಂಬುದರಿಂದ ಸುನ್ವತ್ ಎಂಬುದರ ಮುಂದಿರುವ ಷಷ್ಠ್ಯೇಕವಚನಪ್ರತ್ಯಯಕ್ಕೆ ಉದಾತ್ತ ಬರುವುದು. ಸಖಾ-**ಸಮಾನೇಖ್ಯಶ್ಚೋದಾತ್ತಃ** (ಪಾ. ಸೂ. ೬-೧-೧೨೩) ಎಂಬುದರಿಂದ ಸಮಾನಶಬ್ದೋಪಪದಕ ಖ್ಯಾ ಧಾತುವಿನ ಮುಂದೆ ಇಣ್ ಪ್ರತ್ಯಯ-ಪ್ರತ್ಯಯವು ಡಿತ್ತಾದ್ದರಿಂದ ಟಿಲೋಪ-ತತ್ಸನ್ನಿಯೋಗದಿಂದ ಯ ಲೋಪ, ಸಮಾನಶಬ್ದಕ್ಕೆ ಉದಾತ್ತ ಸಾದೇಶ ಇವು ಬರುವುವು-ಇದರ ವಿವರಣೆಯು ೪ನೇ ಮಂತ್ರದಲ್ಲಿ ನಿರೂಪಿತವಾಗಿರುವುದು. ತಸ್ಮೈ-**ತ್ಯಜಿತನಿಯಜಿಭ್ಯೋಡಿತ್** (ಉ. ಸೂ. ೧-೧೨೯) ತ್ಯಜ್-ತನ್-ಯಜ್ ಈ ಧಾತುಗಳ ಮುಂದೆ ಅದಿಪ್ರತ್ಯಯ ಬರುವುದು ಅದು ಡಿತ್ತಾಗುವುದು ಎಂಬುದರಿಂದ ತನು ವಿಸ್ತಾರೇ ಎಂಬ ಧಾತುವಿನ ಮುಂದೆ ಅದಿ ಪ್ರತ್ಯಯ ಬಂದರೆ ತನ್+ಅದ್-ಎಂದಿರುವಾಗ ಪ್ರತ್ಯಯವು ಡಿತ್ತಾದ್ದರಿಂದ ಅನ್ ಎಂಬ ಟಿಗೆ ಲೋಪ-ತ್+ಅದ್ =ತದ್ ಶಬ್ದವು ಪ್ರತ್ಯಯ ಸ್ವರಬಂದ ಆದ್ಯುದಾತ್ತ. ಆದರ ಮೇಲೆ-ಚತುರ್ಥೀ ಏಕವಚನ ಪ್ರತ್ಯಯವನ್ನಿಟ್ಟರೆ **ತ್ಯದಾದೀನಾಮಃ** (ಪಾ. ಸೂ. ೭-೧-೧೦೨) ಅಕಾರಾದೇಶ. **ಅತೋಗುಣೇ** (ಪಾ.ಸೂ. ೬-೧-೯೭) ಎಂಬುದರಿಂದ ಪರರೂಪ-ಏಕಾದೇಶದಿಂದ ಬಂದ ಅಕಾರವು 'ಏಕಾದೇಶಉದಾತ್ತೇನೋದಾತ್ತಃ' (ಪಾ. ಸೂ. ೮-೨-೫) ಎಂಬುದರಿಂದ ಉದಾತ್ತ-ಚತುರ್ಥೀ ಏಕವಚನಪ್ರತ್ಯಯ ಙೇ ಎಂಬುದಕ್ಕೆ **ಸರ್ವನಾಮ್ನಃಸ್ಮೈ** (ಪಾ. ಸೂ. ೭-೧-೧೪) ಹ್ರಸ್ವಾಕಾರಾಂತಸರ್ವನಾಮಶಬ್ದದ ಮುಂದಿರುವ ಙೇಗೆ ಸ್ಮೈ ಬರುವುದು-ತಸ್ಮೈ ಎಂದು ಆಗುವುದು. ಸ್ಮೈ-ಎಂಬ ವಿಭಕ್ತಿಗೆ **ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ** (ಪಾ. ಸೂ. ೬-೧-೧೬೮) ಸಪ್ತಮೀಬಹುವಚನ-ಸು-ಪ್ರತ್ಯಯ ಪರವಾಗಿರುವಾಗ ಒಂದೇ ಅಚ್ಚನ್ನು ಹೊಂದಿರುವ ಶಬ್ದದ ಮುಂದಿರುವ ತೃತೀಯಾದಿ ವಿಭಕ್ತಿಯು ಉದಾತ್ತವಾಗುವುದು ಎಂಬುದರಿಂದ ಉದಾತ್ತ ಪ್ರಾಪ್ತವಾದರೆ-ತತ್ ಶಬ್ದವು ಪ್ರಥಮೈಕವಚನ ಸುಪ್ರತ್ಯಯ ಪರದಲ್ಲಿರುವಾಗ ಅವರ್ಣಾಂತವಾಗಿರುವುದರಿಂದ **ನ ಗೋಶ್ವನ್ಸಾವವರ್ಣರಾಡಙ್ಕ್ರುಙ್ಕೃದ್ಭ್ಯಃ** (ಪಾ. ಸೂ. ೬-೧-೧೮೨) ಈ ಶಬ್ದಗಳ ಮುಂದಿರುವ ವಿಭಕ್ತಿ ಮತುಪ್ ಪ್ರತ್ಯಯಗಳಿಗೆ ಉದಾತ್ತ ಬರುವುದಿಲ್ಲ, ಎಂಬುದರಿಂದ ಉದಾತ್ತಸ್ವರಕ್ಕೆ ನಿಷೇಧ ಬರುವುದು. ಇಂದ್ರಾಯ-ಇಂದ್ರಶಬ್ದವು-**ಋಜ್ರೇಂದ್ರಾಗ್ರ ವಜ್ರ ವಿಪ್ರ ಕುಬ್ರ ಚುಬ್ರ ಕ್ಷುರಖುರ ಭದ್ರೋಗ್ರ ಭೇರಭೇಲ ಶುಕ್ರಶುಕ್ಲ ಗೌರವನ್ರೇರ ಮಾಲಾಃ** (ಉ ಸೂ. ೧೮೬) ಎಂಬುದರಿಂದ ರನ್ ಪ್ರತ್ಯಯಾಂತವು. ನಿತ್ತಾದ್ದರಿಂದ ಆದ್ಯುದಾತ್ತ-**ಕರ್ಮಣಾ ಯಮಭಿಪ್ರೈತಿ ಸ ಸಂಪ್ರದಾನಂ** (ಪಾ. ಸೂ. ೧-೪-೩೨) ಎಂಬ ಸೂತ್ರದಲ್ಲಿ ಮಹಾಭಾಷ್ಯದಲ್ಲಿ **ಕ್ರಿಯಾಗ್ರಹಣಂ ಕರ್ತ್ತವ್ಯಂ** (ಪಾ. ವ. ೧-೪-೩೨) ಕ್ರಿಯೋದ್ದೇಶ್ಯವಾದ ಅರ್ಥವನ್ನು ಹೇಳುವ ಶಬ್ದವು ಸಂಪ್ರದಾನಸಂಜ್ಞೆಯನ್ನು ಹೊಂದುವುದು ಎಂದು ವಚನವಿರುವುದು-ಆದ್ದರಿಂದ ಗಾನಕ್ರಿಯೆಗೆ ಉದ್ದೇಶ್ಯವಾದ ಅರ್ಥವನ್ನು ಬೋಧಿಸುವ ಇಂದ್ರ ಎಂಬುದಕ್ಕೆ ಸಂಪ್ರದಾನಸಂಜ್ಞೆ ಬಂದರೆ **ಚತುರ್ಥೀಸಂಪ್ರದಾನೇ** (ಪಾ. ಸೂ. ೨-೩-೧೩) ಅನಭಿಹಿತಸಂಪ್ರದಾನಾರ್ಥಕಪ್ರಾತಿಪದಿಕದ ಮುಂದೆ ಚತುರ್ಥೀ ವಿಭಕ್ತಿ ಬರುವುದು ಎಂಬುದರಿಂದ ಚತುರ್ಥೀವಿಭಕ್ತಿ ಬರುವುದು. ‖ ೧೦ ‖

**೪ ನೇ ಸೂಕ್ತವು ಸಮಾಪ್ತವು**

**ಇಲ್ಲಿಗೆ ಪ್ರಥಮ ಮಂಡಲದಲ್ಲಿ ೪ನೆಯ ಸೂಕ್ತವೂ ಪ್ರಥಮಾಷ್ಟಕ ಪ್ರಥಮಾಧ್ಯಾಯದಲ್ಲಿ ೮ನೆಯ ವರ್ಗವೂ ಮುಗಿದುದು.**



|| ಓಂ ||

# ಐದನೆಯ ಸೂಕ್ತವು.

**ಆ ತ್ವಿತಿ ದ್ವಿತೀಯಂ ಸೂಕ್ತಂ ದಶರ್ಚಂ । ಸುರೂಪಕೃತ್ನುಂ ದಶೇತ್ಯನುವೃತ್ತಾವಾ ತು ಯುಂಜಂತೀತ್ಯೇವಮನುಕ್ರಾಂತತ್ವಾತ್ । ಋಷಿಚ್ಛಂದೋದೇವತಾವಿನಿಯೋಗಾಃ ಪೂರ್ವವತ್ । ವಿಶೇಷವಿನಿಯೋಗಸ್ತು । ಅತಿರಾತ್ರೇ ತೃತೀಯಪರ್ಯಾಯೇ ಮೈತ್ರಾವರುಣಶಸ್ತ್ರೇ ಸ್ತೋತ್ರಿಯೋಽಯಂ ತೃಚಃ । ಅತಿರಾತ್ರೇ ಪರ್ಯಾಯಾಣಾಮಿತಿ ಖಂಡ ಆ ತ್ವೇತಾ ನಿ ಷೀದತ । ಅ. ೬-೪ । ಇತ್ಯುಕ್ತತ್ವಾತ್॥**

## ಅನುವಾದವು.

**ಆ ತ್ವೇತಾ ನಿಷೀದತ** ಎಂಬ ಸೂಕ್ತವು ಪ್ರಥಮಮಂಡಲದ ಎರಡನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಮಂಡಲದ ಪ್ರಾರಂಭದಿಂದ ಪರಿಗಣಿಸುವುದಾದರೆ ಐದನೆಯ ಸೂಕ್ತವು. ಈ ಸೂಕ್ತದಲ್ಲಿ ಹತ್ತು ಋಕ್ಕುಗಳಿರುವುವು. ಹಿಂದೆ ಹೇಳಿದಂತೆ ಈ ಎರಡನೆಯ ಅನುವಾಕದಲ್ಲಿ ನಾಲ್ಕು ಸೂಕ್ತಗಳೂ, ಅವುಗಳಲ್ಲಿ ಪ್ರತಿಯೊಂದರಲ್ಲಿಯೂ ಹತ್ತು ಹತ್ತು ಋಕ್ಕುಗಳೂ ಇರುವುವು. ಋಷಿದೇವತಾಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ ಇರುವುವು. ಈ ಸೂಕ್ತದ ವಿಶೇಷವಿನಿಯೋಗವು—ಅತಿರಾತ್ರವೆಂಬ ಯಾಗವಿಶೇಷದಲ್ಲಿ ತೃತೀಯ ಪರ್ಯಾಯದಲ್ಲಿ ಮೈತ್ರಾವರುಣನೆಂಬ ಹೋತೃವು ಶಸ್ತ್ರಮಂತ್ರವನ್ನು ಪಠಿಸುವಾಗ ಆ ತ್ವೇತಾ ನಿಷೀದತ ಎಂದು ಪ್ರಾರಂಭವಾಗುವ ಮೂರು ಋಕ್ಕುಗಳನ್ನು ಹೇಳಬೇಕಾಗಿರುವುದು.

**ಸುರೂಪಕೃತ್ನುಮೂತಯೇ** ಎಂಬ ಹಿಂದಿನ ಸೂಕ್ತದ ಪೀಠಿಕಾನುವಾದದಲ್ಲಿ ಅಭಿಪ್ಲವಷಡಹ, ಅಭಿಪ್ಲವಪೃಷ್ಠ್ಯ, ಮಹಾವ್ರತ, ಅತಿರಾತ್ರ ಎಂಬ ಕರ್ಮವಿಶೇಷಗಳ ವಿವರಣೆಯನ್ನೂ, ಈ ಸೂಕ್ತದ ವಿನಿಯೋಗದ ಸಂಬಂಧವಾಗಿ ಹೇಳಬೇಕಾಗಿರುವ, ಸ್ತೋಮ, ವಿಷ್ಟುತಿ, ಪರ್ಯಾಯ ಮೊದಲಾದ ಕೆಲವು ಪಾರಿಭಾಷಿಕಶಬ್ದಗಳ ವಿವರಣೆಯನ್ನೂ ಹೇಳದಿದ್ದರೆ ವಿನಿಯೋಗದ ಅರ್ಥವು ಸ್ಪಷ್ಟವಾಗುವುದಿಲ್ಲ. ಯಜ್ಞಸಂಬಂಧವಾದ ಈ ವಿಶೇಷವಿಷಯಗಳು ಮುಖ್ಯವಾಗಿ ಯಜುರ್ವೇದಕ್ಕೆ ಸಂಬಂಧಪಟ್ಟಿದ್ದರೂ ಅವುಗಳನ್ನು ಇಲ್ಲಿ ಸಂದರ್ಭಾನುಸಾರ ಸೂಕ್ಷ್ಮವಾಗಿ ವಿವರಿಸಬೇಕಾಗಿರುವುದು. ಪ್ರತಿಯೊಂದು ಯಜ್ಞದ ಸ್ವರೂಪವನ್ನೂ, ಅವುಗಳನ್ನು ಮಾಡುವ ಕ್ರಮವನ್ನೂ ನಾವು ಇಷ್ಟರಲ್ಲಿಯೇ ಮುದ್ರಿಸಲಿರುವ ಯಜುರ್ವೇದಸಂಹಿತೆಯ ಪೂರ್ವಪೀಠಿಕೆಯಲ್ಲಿ ವಿಸ್ತಾರವಾಗಿ ವರ್ಣಿಸಲಾಗುವುದು. ಪ್ರಕೃತವಿಷಯಕ್ಕೆ ಸಂಬಂಧಪಟ್ಟ ವಿವರಣೆಯನ್ನು ಮಾತ್ರ ಅತಿಸೂಕ್ಷ್ಮವಾಗಿ (ಸಂಗ್ರಹರೂಪವಾಗಿ ) ಇಲ್ಲಿ ಕೊಟ್ಟಿದೆ—

**ಸೋಮಯಾಗದಲ್ಲಿ ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಷೋಡಶೀ, ಅತಿರಾತ್ರ, ಅಪ್ತೋರ್ಯಾಮ, ವಾಜಪೇಯ** ಎಂಬ ಏಳು ಮುಖ್ಯ ಪ್ರಭೇದಗಳಿವೆಯೆಂದು ಹಿಂದೆಯೇ (ಭಾಗ. ೧. ಪೇಜು 667) ಹೇಳಿರುವೆವು. ಈ ಏಳು ಸೋಮಯಾಗಗಳಿಗೆ ಅಗ್ನಿಷ್ಟೋಮವೇ ಪ್ರಕೃತಿಯಾಗಿರುವುದು ಎಂದರೆ ಮೂಲಭೂತವಾಗಿರುವುದು. ಉಳಿದ ಆರು ಯಾಗಗಳು ಅಗ್ನಿಷ್ಟೋಮದಂತೆಯೇ ಇದ್ದು ಕೆಲವು ವ್ಯತ್ಯಾಸಗಳನ್ನೊಳಗೊಂಡಿರುವುವು.

**ಅಭಿಪ್ಲವಷಳಹ, ಪೃಷ್ಠ್ಯಷಳಹ**— ಈ ಯಾಗಗಳು ಆರುದಿನಗಳಲ್ಲಿ ಮಾಡಬೇಕಾಗಿರುವುದರಿಂದ ಷಳಹ (ಆರುದಿನಗಳ) ಎಂಬ ಶಬ್ದದಿಂದ ಸೂಚಿತವಾಗಿವೆ. ಆದುದರಿಂದ ಷಳಹಯಾಗವೆಂದರೆ ಆರುದಿನಗಳಲ್ಲಿ ಮಾಡಬೇಕಾದ ಸೋಮಯಾಗವಿಶೇಷವು. ಷಡಹಸೋಮಯಾಗವು ಅಭಿಪ್ಲವ, ಮತ್ತು ಪೃಷ್ಠ್ಯ ಎಂದು ಎರಡು ವಿಧವಾಗಿರುವುದು. ಇವುಗಳ ಲಕ್ಷಣವನ್ನು ಅಶ್ವಲಾಯನರು— **ಉಭಯತೋ ಜ್ಯೋತಿಃ ಷಳಹಃ, ಅಂತರತೋ ಜ್ಯೋತಿಃ ಷಳಹಃ** ಎಂದು ಹೇಳಿರುವರು ಎಂದರೆ, ಆರುದಿನಗಳ ಈ ಯಾಗದಲ್ಲಿ ಮೊದಲನೆಯ ಮತ್ತು ಕೊನೆಯ ದಿನಗಳ ಕಾರ್ಯಕಲಾಪಗಳನ್ನು ಅಗ್ನಿಷ್ಟೋಮಯಾಗದಂತೆಯೂ ಉಳಿದ ಮೂರು, ನಾಲ್ಕು, ಐದು, ಆರು ಈ ದಿನಗಳ ಕಾರ್ಯಕಲಾಪಗಳನ್ನು ಉಕ್ಥ್ಯವೆಂಬ ಸೋಮಯಾಗದಂತೆಯೂ ಮಾಡುವ ಸೋಮ ಯಾಗಕ್ಕೆ ಅಭಿಪ್ಲವಷಡಹವೆಂದು ಹೆಸರು. ಈ ಯಾಗದ ಆದ್ಯಂತಗಳಲ್ಲಿ ಅಗ್ನಿಷ್ಟೋಮರೂಪಜ್ಯೋತಿಯಿರು ವುದರಿಂದ **ಉಭಯತೋಜ್ಯೋತಿಃ** ಎಂದೂ ಹೇಳುವರು. ಅದರಂತೆಯೇ ಆರು ದಿನಗಳ ಸೋಮಯಾಗದಲ್ಲಿ ಮೊದಲನೆಯ ಮತ್ತು ನಾಲ್ಕನೆಯ ದಿನಗಳಲ್ಲಿ ಅಗ್ನಿಷ್ಟೋಮಯಾಗದ ಕಾರ್ಯಕಲಾಪಗಳಂತೆಯೂ ಉಳಿದ ಎರಡು, ಮೂರು, ಐದು, ಆರನೆಯ ದಿವಸಗಳಲ್ಲಿ ಉಕ್ಥ್ಯಯಾಗದ ಕಾರ್ಯಕಲಾಪಗಳಂತೆಯೂ ಮಾಡುವ ಸೋಮಯಾಗವಿಶೇಷಕ್ಕೆ **ಪೃಷ್ಠ್ಯಷಡಹ** ವೆಂದು ಹೆಸರು ಈ ಯಾಗದ ಮಧ್ಯದ ದಿನವು ಎಂದರೆ ನಾಲ್ಕನೆಯ ದಿನವು ಅಗ್ನಿಷ್ಟೋಮಯಾಗದಂತೆ ಇರುವುದರಿಂದ ಇದನ್ನು **ಅಂತರತೋಜ್ಯೋತಿಃ** ಎಂದೂ ಹೇಳುವರು.

ಅಭಿಪ್ಲವಷಡಹಯಾಗದಲ್ಲಿ ವಿಷಮದಿನಗಳು ಎಂದರೆ, ಪ್ರಥಮ, ತೃತೀಯ, ಪಂಚಮದಿನಗಳಲ್ಲಿ ನಡೆಯುವ ಮಾಧ್ಯಂದಿನಸವನಗಳಲ್ಲಿ (ಮಧ್ಯಾಹ್ನಕಾಲದಲ್ಲಿ ಸೋಮರಸವನ್ನು ಹಿಂಡುವ ಕರ್ಮವಿಶೇಷಕಾಲದಲ್ಲಿ) ಉದ್ಗಾತೃಮೊದಲಾದ ಋತ್ವಿಜರು **ರಥಂತರ**ವೆಂಬ ಸಾಮಗಾನಗಳಿಂದ ಸ್ತೋತ್ರಮಾಡುವುದರಿಂದ ಈ ದಿನಗಳಿಗೆ **ರಥಂತರಪೃಷ್ಠ**ಗಳೆಂದು ಹೆಸರು. ಅದರಂತೆಯೇ ಸಮದಿನಗಳಲ್ಲಿ ಎಂದರೆ ದ್ವಿತೀಯ, ಚತುರ್ಥ, ಷಷ್ಠದಿನಗಳಲ್ಲಿ **ಬೃಹತ್ಸಾಮ**ವೆಂಬ ಸಾಮಗಾನಗಳಿಂದ ಸ್ತೋತ್ರಮಾಡುವುದರಿಂದ ಈ ದಿನಗಳಿಗೆ **ಬೃಹತ್ಪೃಷ್ಠ** ದಿನಗಳೆಂದು ಹೆಸರು. ಮೂರನೆಯ ದಿನದಿಂದ ಪ್ರಾರಂಭಿಸಿ ಪ್ರತಿದಿನವೂ ಪೃಷ್ಠ್ಯಸ್ತೋತ್ರಗಳನ್ನು ಪಠಿಸುವಾಗ ಅದಕ್ಕೆ ಪ್ರತಿಯಾಗಿ ವೈರೂಪ, ವೈರಾಜ, ಶಾಕ್ವರರೈವತಗಳೆಂದು ಹೇಳಲ್ಪಡುವ ವಿಶೇಷಸಾಮಮಂತ್ರಗಳು ಗಾನಮಾಡ ಲ್ಪಡುತ್ತವೆ. ಆ ಕಾಲದಲ್ಲಿ ಸಾಮಗಾನಕ್ಕೆ ಅನುಸಾರವಾಗಿ ಹೋತೃವರ್ಗದ ಋತ್ವಿಜರು **ಸ್ತೋಮ**ವೆಂದು ಹೇಳಲ್ಪಡುವ ಕೆಲವು ಋಕ್ಕುಗಳನ್ನು ಪಠಿಸುವರು. ಸ್ತೋಮದ ವಿವರಣೆಯು ಈ ರೀತಿ ಇರುವುದು—

**ಏಕಂ ಸಾಮ ತೃಚೇ ಕ್ರಿಯತೇ । ತಸ್ಯ ಚ ತೃಚಸ್ಯ ಆವೃತ್ತ್ಯಾ ಋಚಾಂ**
**ಸಂಖ್ಯಾ ವರ್ಧನೀಯಾ ಭವತಿ ಯಾ ಸ್ತೋಮಶಬ್ದೇನೋಚ್ಯತ ಇತಿ ॥**

ತೃಚವೆಂದರೆ ಮೂರು ಋಕ್ಕುಗಳು. ಈ ಮೂರು ಋಕ್ಕುಗಳೂ ಒಂದೇ ದೇವತೆಯನ್ನು ಪ್ರತಿಪಾದಿ ಸುವುದಾಗಿ ಇರಬೇಕು. ಇಂತಹ ಋಕ್ಕುಗಳನ್ನು ಸ್ಥಾನಭೇದಗಳಿಂದ ವಿಧವಿಧವಾಗಿಯೂ, ಒಂದೊಂದು ಋಕ್ಕನ್ನು ಒಂದಾವರ್ತಿಗಿಂತ ಹೆಚ್ಚಾಗಿ ಪಠಿಸುವುದರಿಂದಲೂ ತೃಚವನ್ನು ಅನೇಕ ಋಕ್ಕುಗಳನ್ನಾಗಿ ವೃದ್ಧಿಪಡಿಸ ಬಹುದು. ಉದಾ.— ಒಂದು ತೃಚದಲ್ಲಿ ೧, ೨, ೩ ಎಂಬ ಋಕ್ಕುಗಳಿವೆ. ಅವುಗಳನ್ನು,

೧, ೨, ೩; ೩, ೨, ೧, ೧, ೩, ೨; ೨, ೧, ೩; ೨, ೩, ೧; ೩, ೧, ೨ ಇತ್ಯಾದಿ ಸ್ಥಾನಭೇದ ಗಳಿಂದಲೂ-

೧, ೧, ೧, ೨, ೩ ; ೧, ೨, ೨, ೨, ೩ ; ೧, ೨, ೩, ೩, ೩ ಇತ್ಯಾದಿ ಅಧಿಕ ಆವೃತ್ತಿಗಳಿಂದಲೂ,

ಪಠಿಸುವಾಗ ಮೂರು ಋಕ್ಕುಗಳು ಅನೇಕ ಋಕ್ಕುಗಳಾಗುವುವು. ಈ ರೀತಿಯಾಗಿ ತೃಚವೆಂಬ ಮೂರು ಋಕ್ಕುಗಳನ್ನು ಯಾವುದಾದರೂ ಒಂದು ಕ್ರಮದಲ್ಲಿ ಪಠಿಸುವುದಕ್ಕೆ ಎಂದರೆ ೧, ೨, ೩ ಅಥವಾ ೧, ೨, ೩, ೩, ೩ ಎಂದು ಮೊದಲಾಗಿ ಪಠಿಸುವುದಕ್ಕೆ ಪರ್ಯಾಯವೆಂದು ಹೆಸರು. ಇಂತಹ ಪರ್ಯಾಯಗಳು ಮೂರಾದರೆ ಒಂದು ವಿಷ್ಟುತಿಯಾಗುವುದು. ಪ್ರತಿಯೊಂದು ಸ್ತೋಮಕ್ಕೂ ಇಂತಹ ವಿಷ್ಟುತಿಗಳು ಬೇರೆ ಬೇರೆ ಹೆಸರಿನಿಂದ ಅನೇಕವಿಧಗಳಾಗಿರುವುವು. ಆದುದರಿಂದ ಮೂರು ಋಕ್ಕಿನ ತೃಚವನ್ನು ಮೂರು ಪರ್ಯಾಯಗಳಲ್ಲಿ ವಿಧ ವಿಧವಾದ ಕ್ರಮದಿಂದ ಪಠಿಸುವುದೇ ಸ್ತೋಮವೆನಿಸುವುದು. ಸ್ತೋಮಗಳಲ್ಲಿ ತ್ರಿವೃತ್, ಪಂಚದಶಃ, ಸಪ್ತದಶಃ, ಏಕವಿಂಶಃ, ತ್ರಿಣವಃ, ತ್ರಯಸ್ತ್ರಿಂಶಃ, ಚತುರ್ವಿಂಶಃ, ಚತುಶ್ಚತ್ವಾರಿಂಶಃ, ಅಷ್ಟಾಚತ್ವಾರಿಂಶಃ ಎಂದು ಒಂಭತ್ತುವಿಧವಾದ ಸ್ತೋಮಗಳಿರುವವು. ತ್ರಿವೃತ್‌ಸ್ತೋಮದಲ್ಲಿ ತೃಚವನ್ನು ಬೇರೆ ಬೇರೆ ಕ್ರಮಗಳಲ್ಲಿ ಮೂರಾವರ್ತಿ ಪಠಿಸುವುದರಿಂದ ಈ ಸ್ತೋಮಕ್ಕೆ ತ್ರಿವೃತ್ಸ್ತೋಮವೆಂದು ಹೆಸರು. ಆದುದರಿಂದ ತ್ರಿವೃತ್ಸ್ತೋಮದ ಮೂರು ಪರ್ಯಾಯಗಳ ಒಟ್ಟು ಋಕ್ಕುಗಳ ಸಂಖ್ಯೆ ೯ ಆಗುವುದು. ಪಂಚದಶ ಮೊದಲಾದ ಸ್ತೋಮಗಳಲ್ಲಿ ಮೂರು ಪರ್ಯಾಯಗಳಿಂದ ಹದಿನೈದು ಅಥವಾ ಹೆಚ್ಚಿನ ಸಂಖ್ಯೆಯ ಋಕ್ಕುಗಳು ಆಯಾ ಸ್ತೋಮದ ಹೆಸರಿಗೆ ತಕ್ಕಂತೆ ಇರುವವು. ಎಂದರೆ ಪಂಚದಶಸ್ತೋಮದಲ್ಲಿ ಮೂರು ಪರ್ಯಾಯಗಳಿಂದ ಒಟ್ಟು ೧೫ ಋಕ್ಕುಗಳೂ ಸಪ್ತದಶಸ್ತೋಮದಲ್ಲಿ ಮೂರು ಪರ್ಯಾಯಗಳಿಂದ ಒಟ್ಟು ೧೭ ಋಕ್ಕುಗಳೂ ಇರುವವು, ಇತ್ಯಾದಿ. ಆದುದರಿಂದ ಋಕ್ಸಂಖೆಗಳಿಗೆ ಅನುಸಾರವಾಗಿ ಸ್ತೋಮಗಳಿಗೆ ಆಯಾ ಹೆಸರು ಬಂದಿರುವುದು. ಪ್ರತಿಪರ್ಯಾಯದಲ್ಲಿಯೂ ಒಂದೇ ಸಂಖ್ಯೆಯ ಋಕ್ಕುಗಳಿರಬೇಕೆಂಬ ನಿಯಮವಿಲ್ಲ. ಮೂರು ಪರ್ಯಾಯಗಳಿಂದ ಕ್ಲೃಪ್ತಸಂಖ್ಯೆಯ ಋಕ್ಕುಗಳು ಆಯಾ ಸ್ತೋಮಗಳ ವಿಷ್ಟುತಿಗಳಲ್ಲಿರಬೇಕು. ಅವುಗಳ ವಿವರವು ಈ ರೀತಿ ಇದೆ—

| | | | | |
|---|---|---|---|---|
| (೧) | ತ್ರಿವೃತ್ಸ್ತೋಮ— | ಮೂರು ಪರ್ಯಾಯಗಳಿಂದ ಒಟ್ಟು | ೯ | ಋಕ್ಕುಗಳು. |
| (೨) | ಪಂಚದಶಸ್ತೋಮ | ,, | ೧೫ | ,, |
| (೩) | ಸಪ್ತದಶಸ್ತೋಮ | ,, | ೧೭ | ,, |
| (೪) | ಏಕವಿಂಶಸ್ತೋಮ | ,, | ೨೧ | ,, |
| (೫) | ತ್ರಿಣವಸ್ತೋಮ | ,, | ೨೭ | ,, |
| (೬) | ತ್ರಯಸ್ತ್ರಿಂಶಸ್ತೋಮ | ,, | ೩೩ | ,, |
| (೭) | ಚತುರ್ವಿಂಶಸ್ತೋಮ | ,, | ೨೪ | ,, |
| (೮) | ಚತುಶ್ಚತ್ವಾರಿಂಶಸ್ತೋಮ | ,, | ೪೪ | ,, |
| (೯) | ಅಷ್ಟಾಚತ್ವಾರಿಂಶಸ್ತೋಮ | ,, | ೪೮ | ,, |

ಈ ರೀತಿ ೯ ಸ್ತೋಮಗಳ ಋಕ್ಸಂಖ್ಯೆಗಳು ಆಯಾ ಸ್ತೋಮದ ಹೆಸರಿಗೆ ತಕ್ಕಂತೆ ಇರುವವು. ಈ ಸಂಖ್ಯೆಯು ಸ್ತೋಮದಲ್ಲಿರುವ ಒಂದೊಂದು ವಿಷ್ಟುತಿಗೆ ಅನ್ವಯಿಸುವುದು ಎಂದು ತಿಳಿಯಬೇಕು. ಎಂದರೆ ತ್ರಿವೃತ್ಸ್ತೋಮ

ದಲ್ಲಿ ಮೂರು ವಿಷ್ಟುತಿಗಳಿರುವುದರಿಂದ ಒಂದೊಂದು ವಿಷ್ಟುತಿಯ ಮೂರು ಪರ್ಯಾಯಗಳಿಗೂ ೯ ಋಕ್ಕುಗಳಿರುವುವೆಂದು ತಿಳಿಯಬೇಕು. ಒಟ್ಟು ಮೂರು ವಿಷ್ಟುತಿಗಳಿಂದ ಸೇರಿ ೯ ಋಕ್ಕುಗಳಲ್ಲ, ೨೭ ಋಕ್ಕುಗಳಾಗುವವು. ಇತ್ಯಾದಿ.

ಪ್ರತಿಯೊಂದು ಸ್ತೋಮಕ್ಕೂ ಅನೇಕ ವಿಷ್ಟುತಿಗಳಿರುವುವೆಂದು ಹಿಂದೆಯೇ ಹೇಳಿರುವುದಷ್ಟೆ. ಅವುಗಳ ವಿವರವನ್ನು ಕೆಳಗೆ ಕೊಟ್ಟಿದೆ—

I ತ್ರಿವೃತ್ಸ್ತೋಮಕ್ಕೆ—

(೧) ಉದ್ಯತೀ (೨) ಪರಿವರ್ತಿನೀ (೩) ಕುಲಾಯಿನೀ ಎಂದು ಮೂರು ವಿಷ್ಟುತಿಗಳು.

II ಪಂಚದಶಸ್ತೋಮಕ್ಕೆ—

(೧) ಪಂಚಪಂಚಿನೀ (೨) ಉದ್ಯತೀ ಪ್ರಥಮಾ (೩) ಉದ್ಯತೀ ದ್ವಿತೀಯಾ ಎಂದು ಮೂರು ವಿಷ್ಟುತಿಗಳು.

III ಸಪ್ತದಶಸ್ತೋಮಕ್ಕೆ—

(೧) ದಶಸಪ್ತಾ ಪ್ರಥಮಾ (೨) ದಶಸಪ್ತಾ ದ್ವಿತೀಯಾ (೩) ಸಪ್ತಸ್ಥಿತಾ ಪ್ರಥಮಾ (೪) ಸಪ್ತಸ್ಥಿತಾ ದ್ವಿತೀಯಾ (೫) ಅನಾಮಿಕಾ (೬) ಉದ್ಯತೀ (೭) ಭಸ್ತ್ರಾ ಎಂದು ಏಳು ವಿಷ್ಟುತಿಗಳು.

IV ಏಕವಿಂಶಸ್ತೋಮಕ್ಕೆ—

(೧) ಸಪ್ತಸಪ್ತಿನೀ (೨) ಉದ್ಯತೀ (೩) ಪ್ರತಿಷ್ಟುತಿಃ (೪) ಸೂರ್ಮಿ ಎಂದು ನಾಲ್ಕು ವಿಷ್ಟುತಿಗಳು.

V ತ್ರಿಣವಸ್ತೋಮಕ್ಕೆ—

(೧) ಪ್ರತಿಷ್ಠಿತಾ (೨) ಉದ್ಯತೀ ಎಂದು ಎರಡು ವಿಷ್ಟುತಿಗಳು.

VI ತ್ರಯಸ್ತ್ರಿಂಶಸ್ತೋಮಕ್ಕೆ—

(೧) ಸಮುತ್ರ್ಯಂಶಾ (೨) ನೇದೀಯಸ್ಸಂಕ್ರಮಾ (೩) ಉದ್ಯತೀ (೪) ಪ್ರತ್ಯವರೋಹಿಣೀ (೫) ಅಂತಿಮಾ ಎಂದು ಐದು ವಿಷ್ಟುತಿಗಳು.

VII ಚತುರ್ವಿಂಶಸ್ತೋಮಕ್ಕೆ—

ಇದಕ್ಕೆ ಒಂದೇ ವಿಷ್ಟುತಿ ಇರುವುದು.

VIII ಚತುಶ್ಚತ್ವಾರಿಂಶಸ್ತೋಮಕ್ಕೆ—

(೧) ಪ್ರಥಮಾ (೨) ನಿರ್ಮಧ್ಯಾ (೩) ತೃತೀಯಾ ಎಂದು ಮೂರು ವಿಷ್ಟುತಿಗಳು.

IX ಅಷ್ಟಾಚತ್ವಾರಿಂಶಸ್ತೋಮಕ್ಕೆ—

(೧) ಪ್ರಥಮಾ (೨) ನೇದೀಯಸ್ಸಂಕ್ರಮಾ ಎಂದು ಎರಡು ವಿಷ್ಟುತಿಗಳು.

ಒಟ್ಟು ಒಂಭತ್ತು ಸ್ತೋಮಗಳಿಗೆ ಮೂವತ್ತು ವಿಷ್ಟುತಿಗಳಿರುವವು.

## ತ್ರಿವೃತ್ಸ್ತೋಮದ ವಿವರಣೆಯು.

ಈಗ ತ್ರಿವೃತ್ಸ್ತೋಮದ **ಉದ್ಯತೀ ಪರಿವರ್ತಿನೀ ಕುಲಾಯಿನೀ** ಎಂಬ ಮೂರು ವಿಷ್ಟುತಿಗಳ ಮತ್ತು ಪಂಚದಶಸ್ತೋಮದ ಉದ್ಯತೀ ಎಂಬ ವಿಷ್ಟುತಿಯ ಕ್ರಮವನ್ನು ಉದಾಹರಣೆಸಹಿತವಾಗಿ ವಿವರಿಸಿ ಮುಂದೆ ತ್ರಿವೃದಾದಿ ಒಂಭತ್ತು ಸ್ತೋಮಗಳ ವಿಷ್ಟುತಿಕ್ರಮಗಳೆಲ್ಲವನ್ನೂ ಪರ್ಯಾಯತ್ರಯಗಳಲ್ಲಿಯೂ ತೃಚದ ಋಕ್ಸಂಖ್ಯೆಗಳನ್ನು (ಮಾತ್ರ) ಕೊಟ್ಟು ವಿವರಿಸಲಾಗುವುದು. ತ್ರಿವೃತ್ಸ್ತೋಮದ ಉದ್ಯತೀ ಎಂಬ ವಿಷ್ಟುತಿಯನ್ನು ಪಠಿಸುವ ಕ್ರಮವು ಸಾಮವೇದದ ತಾಂಡ್ಯಬ್ರಾಹ್ಮಣದಲ್ಲಿ ಈ ರೀತಿ ಹೇಳಲ್ಪಟ್ಟಿದೆ—

**ತಿಸೃಭ್ಯೋ ಹಿಂಕರೋತಿ ಸ ಪರಾಚೀಭಿಃ ।**
**ತಿಸೃಭ್ಯೋ ಹಿಂಕರೋತಿ ಸ ಪರಾಚೀಭಿಃ ।**
**ತಿಸೃಭ್ಯೋ ಹಿಂಕರೋತಿ ಸ ಪರಾಚೀಭಿರುದ್ಯತೀ ತ್ರಿವೃತೋ ವಿಷ್ಟುತಿರಿತಿ ।**

ಇದರ ಅರ್ಥವು—**ತಿಸೃಭ್ಯೋ ಹಿಂಕರೋತಿ** ಎಂದರೆ ಉದ್ಗಾತೃವು ತೃಚದ ಮೂರು ಋಕ್ಕುಗಳನ್ನು ಗಾನ ಮಾಡುವನು ಎಂದು. **ಪರಾಚೀಭಿಃ** ಎಂದರೆ ವೇದದಲ್ಲಿರುವ ಕ್ರಮದಂತೆ ಎಂದು. ಆದುದರಿಂದ **ತಿಸೃಭ್ಯೋ ಹಿಂಕರೋತಿ ಪರಾಚೀಭಿಃ** ಎಂದು ಮೂರಾವರ್ತಿ ಹೇಳಿರುವುದರಿಂದ ಮೂರು ಋಕ್ಕುಗಳನ್ನೂ ವೇದದಲ್ಲಿರುವ ಕ್ರಮದಂತೆ ಮೂರು ಪರ್ಯಾಯಗಳಲ್ಲಿಯೂ ಪಠಿಸಬೇಕೆಂದರ್ಥವು—

| | | |
|---|---|---|
| ಪ್ರಥಮಪರ್ಯಾಯ | ೧, ೨, ೩ ನೆಯ | ಋಕ್ಕುಗಳು |
| ದ್ವಿತೀಯಪರ್ಯಾಯ | ೧, ೨, ೩ | ,, |
| ತೃತೀಯಪರ್ಯಾಯ | ೧, ೨, ೩ | ,, |

ಈ ರೀತಿ ಮೂರು ಪರ್ಯಾಯಗಳಲ್ಲಿಯೂ ಮೂರು ಋಕ್ಕುಗಳನ್ನೂ ಪಠಿಸಿದರೆ ಇದು ತ್ರಿವೃತ್ಸ್ತೋಮದ ಉದ್ಯತೀ ಎಂಬ ವಿಷ್ಟುತಿಕ್ರಮವಾಗುವುದು.

ಪ್ರಸಕ್ತವಾದ **ಆತ್ವೇತಾ ನಿಷೀದತ** ಎಂಬ ಸೂಕ್ತದಲ್ಲಿ ಮೊದಲನೆಯ ಮೂರು ಋಕ್ಕುಗಳು ಒಂದು ತೃಚವು. ಅದನ್ನು ತ್ರಿವೃತ್ಸ್ತೋಮದ ಉದ್ಯತೀವಿಷ್ಟುತಿಯ ಕ್ರಮದಂತೆ ಪಠಿಸಿದರೆ—

(೧) **ಆತ್ವೇತಾ ನಿಷೀದತ**.................. ॥ ೧ ॥
(೨) **ಪುರೂತಮಂ ಪುರೂಣಾಂ**............ ॥ ೨ ॥
(೩) **ಸ ಘಾ ನೋ ಯೋಗ ಆಭುವತ್**....॥ ೩ ॥

ಎಂದು ಪ್ರಥಮ ಪರ್ಯಾಯವಾಗುವುದು ದ್ವಿತೀಯ ತೃತೀಯ ಪರ್ಯಾಯಗಳೂ ಇದೇ ರೀತಿಯಲ್ಲಿರುವವು. ಈ ರೀತಿ ಮೂರು ಪರ್ಯಾಯಗಳಲ್ಲಿಯೂ ತೃಚವನ್ನು ಪಠಿಸಿದರೆ ತ್ರಿವೃತ್ಸ್ತೋಮದ ಉದ್ಯತೀ ಎಂಬ ವಿಷ್ಟುತಿಯಾಗುವುದು.

ಇದೇ ಸ್ತೋಮದ ಪರಿವರ್ತಿನೀ ಎಂಬ ವಿಷ್ಟುತಿಕ್ರಮವು—

ದ್ವಿತೀಯಾ ಪರಿವರ್ತಿನೀ ವಿಷ್ಟುತಿಃ । ಆವರ್ತನೀಯತ್ರ ಚಿಸ್ಯಾನಾವೃತ್ತರೂಪೇಣ
ಸಕೃತ್ಪಾಠೇ ಪ್ರಥಮಃ ಪರ್ಯಾಯಃ ॥
ತಥೈವ ಪುನಃ ಪಾಠೇ ದ್ವಿತೀಯಃ ॥
ತಥೈವ ಪುನಃ ಪಾಠೇ ತೃತೀಯಃ ಪರ್ಯಾಯಃ ॥ ಇತಿ ॥

ಎಂದರೆ ಈ ಎರಡನೆಯ ಪರಿವರ್ತಿನೀ ಎಂಬ ವಿಷ್ಟುತಿಯಲ್ಲಿ ಕೊನೆಯಿಂದ ಮೊದಲಿನವರೆಗೆ ಪ್ರತಿಲೋಮಕ್ರಮ ಧಿಂದ ಎಂದರೆ ೩, ೨, ೧ ಎಂಬ ಕ್ರಮದಿಂದ ತೃಚದ ಋಕ್ಕಗಳನ್ನು ಪಠಿಸಬೇಕು—

ಪ್ರಥಮಪರ್ಯಾಯ—೩, ೨, ೧
ದ್ವಿತೀಯಪರ್ಯಾಯ—೩, ೨, ೧
ತೃತೀಯಪರ್ಯಾಯ—೩, ೨, ೧

ಉದಾಹರಣೆ—

(೧) ಸ ಘಾ ನೋ ಯೋಗ ಆಭುವತ್ ... ॥ ೩ ನೆಯ ಋಕ್ಕು ॥
(೨) ಪುರೂತಮಂ ಪುರೂಣಾಂ .... ॥ ೨ ,,
(೩) ಆ ತ್ವೇತಾ ನಿಷೀದತ .... ॥ ೧ ,,

ಈ ಪರಿವರ್ತಿನೀ ಉದ್ಯತಿಯಲ್ಲಿಯೂ ಮೂರು ಪರ್ಯಾಯಗಳು ಒಂದೇ ವಿಧವಾಗಿರುವುವು.

ಈಗ ಇದೇ ತ್ರಿವೃತ್‌ಸ್ತೋಮದ ಕುಲಾಯಿನೀ ಎಂಬ ಮೂರನೆಯ ವಿಷ್ಟುತಿಕ್ರಮವನ್ನು ಹೇಳುವೆವು.

ತಿಸೃಭ್ಯೋ ಹಿಂಕರೋತಿ ಸ ಪರಾಚೀಭಿಃ ॥ ತಿಸೃಭ್ಯೋ ಹಿಂಕರೋತಿ
ಯಾ ಮಧ್ಯಮಾ ಸಾ ಪ್ರಥಮಾ, ಯೋತ್ತಮಾ ಸಾ ಮಧ್ಯಮಾ ॥
ತಿಸೃಭ್ಯೋ ಹಿಂಕರೋತಿ ಯೋತ್ತಮಾ ಸಾ ಪ್ರಥಮಾ, ಯಾ ಪ್ರಥ-
ಮಾ ಸಾ ಮಧ್ಯಮಾ, ಯಾ ಮಧ್ಯಮಾ ಸೋತ್ತಮಾ ॥ ಇತಿ ॥

ಇದರ ಅರ್ಥವು—

ಪ್ರಥಮಪರ್ಯಾಯದಲ್ಲಿ—ತಿಸೃಭ್ಯೋ ಹಿಂಕರೋತಿ ಸ ಪರಾಚೀಭಿಃ ॥ ಎಂದರೆ ಮೊದಲನೆಯ ಪರ್ಯಾಯದಲ್ಲಿ ತೃಚದ ಋಕ್ಕುಗಳನ್ನು ವೇದದ ಕ್ರಮದಂತೆಯೇ ಎಂದರೆ ೧, ೨, ೩ ಎಂಬುದಾಗಿ ಹೇಳಬೇಕು. ಉದಾ—

(೧) ಆತ್ವೇತಾ ನಿಷೀದತ........ ........... ॥ ೧ ನೆಯ ಋಕ್ಕು ॥
(೨) ಪುರೂತಮಂ ಪುರೂಣಾಂ............ ॥ ೨ ,,
(೩) ಸ ಘಾ ನೋ ಯೋಗ ಆಭುವತ್....॥ ೩ ,,

ದ್ವಿತೀಯಪರ್ಯಾಯದಲ್ಲಿ—ತಿಸೃಭ್ಯೋ ಹಿಂಕರೋತಿ ಯಾ ಮಧ್ಯಮಾ ಸಾ ಪ್ರಥಮಾ, ಯೋತ್ತಮಾ ಸಾ ಮಧ್ಯಮಾ, ಯಾ ಪ್ರಥಮಾ ಸೋತ್ತಮಾ ॥ ॥ ದ್ವಿತೀಯ ಪರ್ಯಾಯದಲ್ಲಿ ತೃಚದ ಮಧ್ಯದ (೨ನೆಯ) ಋಕ್ಕನ್ನು ಮೊದಲಲ್ಲಿಯೂ, ಕೊನೆಯ (೩ನೆಯ) ಋಕ್ಕನ್ನು

ಮಧ್ಯದಲ್ಲಿಯೂ, ಮೊದಲನೆಯ (೧ನೆಯ )ಋಕ್ಕನ್ನು ಕೊನೆಯಲ್ಲಿಯೂ ಪಠಿಸಬೇಕು ಎಂದರೆ ಇದರ ಕ್ರಮವು ೨, ೩, ೧, ಉದಾ—

(೧) **ಪುರೂತಮಂ ಪುರೂಣಾಂ**............॥ ೨ ನೆಯ ಋಕ್ಕು ॥
(೨) **ಸ ಘಾ ನೋ ಯೋಗ ಅಭುವತ್.**॥ ೩ ,,
(೩) **ಆ ತ್ವೇತಾ ನಿಷೀದತ**................॥ ೧ ,,

**ತೃತೀಯಪರ್ಯಾಯದಲ್ಲಿ—ತಿಸೃಭ್ಯೋ ಹಿಂಕರೋತಿ ಯೋತ್ತಮಾ ಸಾ ಪ್ರಥಮಾ, ಯಾ ಪ್ರಥಮಾ ಸಾ ಮಧ್ಯಮಾ, ಯಾ ಮಧ್ಯಮಾ ಸೋತ್ತಮಾ**॥ ತೃತೀಯಪರ್ಯಾಯದಲ್ಲಿ ಕೊನೆಯ (೩ ನೆಯ) ಋಕ್ಕನ್ನು ಮೊದಲಲ್ಲಿಯೂ, ಮೊದಲ (೧ ನೆಯ) ಋಕ್ಕನ್ನು ಮಧ್ಯದಲ್ಲಿಯೂ, ಮಧ್ಯದ (೨ ನೆಯ) ಋಕ್ಕನ್ನು ಕೊನೆಯಲ್ಲಿಯೂ ಪಠಿಸಬೇಕು, ಇದರ ಕ್ರಮವು ೩, ೧, ೨, ಉದಾ—

(೧) **ಸ ಘಾ ನೋ ಯೋಗ ಅಭುವತ್**....॥ ೩ ನೆಯ ಋಕ್ಕು ॥
(೨) **ಆ ತ್ವೇತಾ ನಿಷೀದತ**................ ॥ ೧ ,,
(೩) **ಪುರೂತಮಂ ಪುರೂಣಾಂ**........ ॥ ೨ ,,

ಇದು ತೃತೀಯಪರ್ಯಾಯವು. ಈ ಮೂರು ಪರ್ಯಾಯಗಳೂ ಸೇರಿ ತ್ರಿವೃತ್ಸ್ತೋಮದ ಕುಲಾಯಿನೀ ಎಂಬ ವಿಷ್ಟುತಿಯಾಗುವುದು.

## ಪಂಚದಶಸ್ತೋಮದ ವಿವರಣೆಯು.

ಈ ಸ್ತೋಮದಲ್ಲಿ ೭ ವಿಷ್ಟುತಿಗಳಿರುವುವು. ಅವುಗಳಲ್ಲಿ ೭ನೆಯ ಉದ್ಯತೀ ಎಂಬ ವಿಷ್ಟುತಿಯನ್ನು ಮಾತ್ರ ಉದಾಹರಣೆಪೂರ್ವಕವಾಗಿ ವಿವರಿಸುತ್ತೇವೆ. ಈ ಸ್ತೋಮದ ಯಾವ ವಿಷ್ಟುತಿಯ ೩ ಪರ್ಯಾಯಗಳ ಋಕ್ಕುಗಳನ್ನು ಸೇರಿಸಿದರೂ ೧೫ ಋಕ್ಕುಗಳಾಗುವುದರಿಂದ ಈ ಸ್ತೋಮಕ್ಕೆ ಪಂಚದಶಸ್ತೋಮವೆಂದು ಹೆಸರು. ಇದರ ಕ್ರಮವು—

**ಪ್ರಥಮಪರ್ಯಾಯದಲ್ಲಿ—ಪಂಚಭ್ಯೋ ಹಿಂಕರೋತಿ ಸ ತಿಸೃಭಿಃ ಸ ಏಕಯಾ ಸ ಏಕಯಾ** ॥ ಎಂದರೆ ಮೊದಲನೆಯ ಪರ್ಯಾಯದಲ್ಲಿ ತೃಚದ ಮೊದಲನೆಯ ಋಕ್ಕನ್ನು ಮೂರಾವರ್ತಿಯೂ ಎರಡನೆಯ ಮತ್ತು ಮೂರನೆಯ ಋಕ್ಕುಗಳನ್ನು ಒಂದಾವರ್ತಿಯೂ ಪಠಿಸಬೇಕು. ಇದರ ಕ್ರಮವು—೧, ೧, ೧, ೨, ೩, ಉದಾ—

(೧) **ಆ ತ್ವೇತಾ ನಿಷೀದತ** ॥ ೧ ನೆಯ ಋಕ್ಕು ॥
(೨) **ಆ ತ್ವೇತಾ ನಿಷೀದತ** ॥ ೧ ,,
(೩) **ಆ ತ್ವೇತಾ ನಿಷೀದತ** ॥ ೧ ,,
(೪) **ಪುರೂತಮಂ ಪುರೂಣಾಂ** ॥ ೨ ,,
(೫) **ಸಘಾ ನೋ ಯೋಗ ಅಭುವತ್** ॥ ೩ ,,

ದ್ವಿತೀಯಪರ್ಯಾಯದಲ್ಲಿ—ಪಂಚಭ್ಯೋ ಹಿಂಕರೋತಿ ಸ ಏಕಯಾ ಸ ತಿಸೃಭಿಃ ಸ ಏಕಯಾ॥
ಎರಡನೆಯ ಪರ್ಯಾಯದಲ್ಲಿ ಮೊದಲನೆಯ ಋಕ್ಕನ್ನು ಒಂದಾವರ್ತಿಯೂ, ಎರಡನೆಯ ಋಕ್ಕನ್ನು ಮೂರಾವರ್ತಿಯೂ, ಮೂರನೆಯ ಋಕ್ಕನ್ನು ಒಂದಾವರ್ತಿಯೂ, ಪಠಿಸಬೇಕು. ಇದರ ಕ್ರಮವು. ೧, ೨, ೨, ೨, ೩, ಉದಾ—

(೧) ಆ ತ್ವೇತಾ ನಿಷೀದತ ॥ ೧ ನೆಯ ಋಕ್ಕು ॥
(೨) ಪುರೂತಮಂ ಪುರೂಣಾಂ ॥ ೨ ,,
(೩) ಪುರೂತಮಂ ಪುರೂಣಾಂ ॥ ೨ ,,
(೪) ಪುರೂತಮಂ ಪುರೂಣಾಂ ॥ ೨ ,,
(೫) ಸ ಘಾ ನೋ ಯೋಗ ಆಭುವತ್ ॥ ೩ ,,

ತೃತೀಯಪರ್ಯಾಯದಲ್ಲಿ—ಪಂಚಭ್ಯೋ ಹಿಂಕರೋತಿ ಸ ಏಕಯಾ ಸ ಏಕಯಾ ಸ ತಿಸೃಭಿಃ॥
ಮೂರನೆಯ ಪರ್ಯಾಯದಲ್ಲಿ ಮೊದಲನೆಯ ಋಕ್ಕನ್ನು ಒಂದಾವರ್ತಿಯೂ, ಎರಡನೆಯ ಋಕ್ಕನ್ನು ಒಂದಾವರ್ತಿಯೂ, ಮೂರನೆಯ ಋಕ್ಕನ್ನು ಮೂರಾವರ್ತಿಯೂ, ಪಠಿಸಬೇಕು. ಇದರ ಕ್ರಮವು ೧, ೨, ೩, ೩, ೩, ಉದಾ—

(೧) ಆ ತ್ವೇತಾ ನಿಷೀದತ ॥ ೧ ನೆಯ ಋಕ್ಕು ॥
(೨) ಪುರೂತಮಂ ಪುರೂಣಾಂ ॥ ೨ ,,
(೩) ಸ ಘಾ ನೋ ಯೋಗ ಆಭುವತ್॥ ೩ ,,
(೪) ಸ ಘಾ ನೋ ಯೋಗ ಆಭುವತ್॥ ೩ ,,
(೫) ಸ ಘಾ ನೋ ಯೋಗ ಆಭುವತ್॥ ೩ ,,

ಈ ಮೂರು ಪರ್ಯಾಯಗಳೂ ಸೇರಿ ಪಂಚದಶಸ್ತೋಮದ ಉದ್ಯತೀ ಎಂಬ ವಿಷ್ಟುತಿಯಕ್ರಮವು. ಇದರಂತೆ ಇತರ ಸ್ತೋಮಗಳ ವಿಷ್ಟುತಿಕ್ರಮಗಳನ್ನೂ ತಿಳಿದುಕೊಳ್ಳಬೇಕು. ಈಗ ತ್ರಿವೃದಾದಿ ಅಷ್ಟಾಚತ್ವಾರಿಂಶಸ್ತೋಮಗಳ ಎಂದರೆ ಒಟ್ಟು ಒಂಭತ್ತು ಸ್ತೋಮಗಳ ವಿಷ್ಟುತಿಗಳ ಹೆಸರುಗಳನ್ನೂ ಅವುಗಳ ಪರ್ಯಾಯ ಕ್ರಮದಲ್ಲಿ ಪಠಿಸುವ ಋಕ್ಸಂಖ್ಯೆಯ ರೀತಿಯನ್ನೂ ವಿವರಿಸುತ್ತೇವೆ. ಅವುಗಳ ಕ್ರಮವು ಈರೀತಿ ಇವೆ—

I ತ್ರಿವೃತ್ಸ್ತೋಮಕ್ಕೆ—

(೧) ಉದ್ಯತೀ (೨) ಪರಿವರ್ತಿನೀ (೩) ಕುಲಾಯಿನೀ ಎಂದು ಮೂರು ವಿಷ್ಟುತಿಗಳಿರುವುವು.

(೧) ಉದ್ಯತೀ ಎಂಬ ವಿಷ್ಟುತಿಯಲ್ಲಿ—
ಪ್ರಥಮಪರ್ಯಾಯ—೧, ೨, ೩ ನೆಯ ಋಕ್ಕುಗಳು
ದ್ವಿತೀಯಪರ್ಯಾಯ—೧, ೨, ೩ ,,
ತೃತೀಯಪರ್ಯಾಯ—೧, ೨, ೩ ,,
(೨) ಪರಿವರ್ತಿನೀ ಎಂಬ ವಿಷ್ಟುತಿಯಲ್ಲಿ ,,

ಪ್ರಥಮಪರ್ಯಾಯ—೩, ೨, ೧ ನೆಯ ಋಕ್ಕುಗಳು
ದ್ವಿತೀಯಪರ್ಯಾಯ—೩, ೨, ೧ ,,
ತೃತೀಯಪರ್ಯಾಯ—೩, ೨, ೧ ,,

ಈ ಎರಡು ವಿಷ್ಟುತಿಗಳಲ್ಲಿ ಮೂರು ಪರ್ಯಾಯಗಳೂ ಒಂದೇ ಸಮನಾಗಿರುವುವು. ವ್ಯತ್ಯಾಸವಿಲ್ಲ.

(೩) ಕುಲಾಯಿನೀ ಎಂಬ ವಿಷ್ಟುತಿಯಲ್ಲಿ
ಪ್ರಥಮಪರ್ಯಾಯ—೧, ೨, ೩ ನೆಯ ಋಕ್ಕುಗಳು
ದ್ವಿತೀಯಪರ್ಯಾಯ—೨, ೩, ೧ ,,
ತೃತೀಯಪರ್ಯಾಯ—೩, ೧, ೨ ,,

II **ಪಂಚದಶಸ್ತೋಮ—**

(೧) ಪಂಚಪಂಚನೀ (೨) ಉದ್ಯತೀ ಪ್ರಥಮಾ (೩) ಉದ್ಯತೀ ದ್ವಿತೀಯಾ ಎಂದು ಮೂರು ವಿಷ್ಟುತಿಗಳು.

(೧) ಒಂದನೆಯ ಪಂಚಪಂಚನೀ ಎಂಬ ವಿಷ್ಟುತಿಯಲ್ಲಿ—
ಪ್ರಥಮಪರ್ಯಾಯ—೧, ೧, ೧, ೨, ೩ ನೆಯ ಋಕ್ಕುಗಳು
ದ್ವಿತೀಯಪರ್ಯಾಯ—೧, ೨, ೨, ೨, ೩ ,,
ತೃತೀಯಪರ್ಯಾಯ—೧, ೨, ೩, ೩, ೩ ,,

ಇದು ಪಂಚಪಂಚನೀ ಎಂಬ ವಿಷ್ಟುತಿಯ ಪಠನಕ್ರಮವು.

(೨) ಎರಡನೆಯ ಉದ್ಯತೀಪ್ರಥಮಾ ಎಂಬ ವಿಷ್ಟುತಿಯ ಕ್ರಮವು—
ಪ್ರಥಮಪರ್ಯಾಯ—೧, ೧, ೧, ೨, ೩ ,,
ದ್ವಿತೀಯಪರ್ಯಾಯ—೧, ೨, ೩ ,,
ತೃತೀಯಪರ್ಯಾಯ—೧, ೨, ೨, ೨, ೩, ೩, ೩ ,,

(೩) ಮೂರನೆಯ ಉದ್ಯತೀದ್ವಿತೀಯಾ ಎಂಬ ವಿಷ್ಟುತಿಯ ಕ್ರಮವು—
ಪ್ರಥಮಪರ್ಯಾಯ—೧, ೨, ೩ ,,
ದ್ವಿತೀಯಪರ್ಯಾಯ—೧, ೨, ೨, ೨, ೩ ,,
ತೃತೀಯಪರ್ಯಾಯ—೧, ೧, ೧, ೨, ೩, ೩, ೩ ,,

ಇವು ಪಂಚದಶಸ್ತೋಮದ ಮೂರು ವಿಷ್ಟುತಿಗಳ ಕ್ರಮವು.

III **ಸಪ್ತದಶಸ್ತೋಮ—**

(೧) ದಶಸಪ್ತಾನಾಮಿಕಾ ಪ್ರಥಮಾ (೨) ದಶಸಪ್ತಾನಾಮಿಕಾ ದ್ವಿತೀಯಾ (೩) ಸಪ್ತಾಸ್ಥಿತಾ ಪ್ರಥಮಾ (೪) ಸಪ್ತಾಸ್ಥಿತಾ ದ್ವಿತೀಯಾ (೫) ಅನಾಮಿಕಾ (೬) ಉದ್ಯತೀ (೭) ಭಸ್ತ್ರಾ ಎಂದು ಏಳು ವಿಷ್ಟುತಿಗಳು. ಅವುಗಳ ಕ್ರಮವು—

(೧) ದಶಸಪ್ತಾನಾಮಿಕಾ ಪ್ರಥಮಾ ಎಂಬ ವಿಸ್ತುತಿಯಲ್ಲಿ,

ಪ್ರಥಮಪರ್ಯಾಯ—೧, ೧, ೧, ೨, ೩ ನೆಯ ಋಕ್ಕುಗಳು

ದ್ವಿತೀಯಪರ್ಯಾಯ—೧, ೨, ೨, ೨, ೩, ,,

ತೃತೀಯಪರ್ಯಾಯ—೧, ೨, ೨, ೨, ೩, ೩, ೩ ,,

(೨) ದಶಸಪ್ತಾನಾಮಿಕಾ ದ್ವಿತೀಯಾ ಎಂಬ ವಿಸ್ತುತಿಯಲ್ಲಿ

ಪ್ರಥಮಪರ್ಯಾಯ--೧, ೧, ೧, ೨, ೩ ,,

ದ್ವಿತೀಯಪರ್ಯಾಯ—೧, ೨, ೨, ೨, ೩ ,,

ತೃತೀಯಪರ್ಯಾಯ—೧, ೧, ೧, ೨, ೩, ೩, ೩ ,,

(೩) ಸಪ್ತಾಸ್ಥಿತಾ ಪ್ರಥಮಾ ಎಂಬ ವಿಸ್ತುತಿಯಲ್ಲಿ,

ಪ್ರಥಮಪರ್ಯಾಯ—೧, ೧, ೧, ೨, ೨, ೨, ೩ ,,

ದ್ವಿತೀಯಪರ್ಯಾಯ—೧, ೨, ೩ ,,

ತೃತೀಯಪರ್ಯಾಯ—೧, ೨, ೨, ೨, ೩, ೩, ೩ ,,

(೪) ಸಪ್ತಾಸ್ಥಿತಾ ದ್ವಿತೀಯಾ ಎಂಬ ವಿಸ್ತುತಿಯಲ್ಲಿ,

ಪ್ರಥಮಪರ್ಯಾಯ—೧, ೧, ೧, ೨, ೩, ೩, ೩ ,,

ದ್ವಿತೀಯಪರ್ಯಾಯ—೧, ೨, ೩ ,,

ತೃತೀಯಪರ್ಯಾಯ—೧, ೧, ೧, ೨, ೩, ೩, ೩ ,,

(೫) ಅನಾಮಿಕಾ ಎಂಬ ವಿಸ್ತುತಿಯಲ್ಲಿ,

ಪ್ರಥಮಪರ್ಯಾಯ—೧, ೧, ೧, ೨, ೩

ದ್ವಿತೀಯಪರ್ಯಾಯ—೧, ೨, ೩

ತೃತೀಯಪರ್ಯಾಯ—೧, ೧, ೧, ೨, ೨, ೨, ೩, ೩, ೩ ,,

(೬) ಉದ್ಧೃತೀ ಎಂಬ ವಿಸ್ತುತಿಯಲ್ಲಿ,

ಪ್ರಥಮಪರ್ಯಾಯ—೧, ೨, ೩, ,,

ದ್ವಿತೀಯಪರ್ಯಾಯ—೧, ೨, ೨, ೨, ೩ ,,

ತೃತೀಯಪರ್ಯಾಯ—೧, ೧, ೧, ೨, ೨, ೨, ೩, ೩, ೩ ,,

(೭) ಭಸ್ತ್ರಾ ಎಂಬ ವಿಸ್ತುತಿಯಲ್ಲಿ,

ಪ್ರಥಮಪರ್ಯಾಯ—೧, ೧, ೧, ೨, ೨, ೨, ೩ ,,

ದ್ವಿತೀಯಪರ್ಯಾಯ---೧, ೨, ೨, ೨, ೩, ,,

ತೃತೀಯಪರ್ಯಾಯ----೧, ೨, ೩, ೩, ೩, ,,

IV ಏಕವಿಂಶಸ್ತೋಮಃ---

(೧) ಸಪ್ತಸಪ್ತಿನೀ (೨) ಉದ್ಯತೀ (೩) ಪ್ರತಿಷ್ಟುತಿಃ (೪) ಸೂರ್ವಿರ್ಾ ಎಂದು ನಾಲ್ಕು ವಿಷ್ಟುತಿಗಳು

(೧) ಸಪ್ತಸಪ್ತಿನೀ ಎಂಬ ವಿಷ್ಟುತಿಯಲ್ಲಿ

ಪ್ರಥಮಪರ್ಯಾಯ---೧, ೧, ೧, ೨, ೨, ೨, ೩ ನೆಯ ಋಕ್ಕುಗಳು
ದ್ವಿತಿಯಪರ್ಯಾಯ----೧, ೨, ೨, ೨, ೩, ೩, ೩, ,,
ತೃತೀಯಪರ್ಯಾಯ---೧, ೧, ೧, ೨, ೩, ೩, ೩, ,,

(೨) ಉದ್ಯತೀ ಎಂಬ ವಿಷ್ಟುತಿಯಲ್ಲಿ

ಪ್ರಥಮಪರ್ಾರ್ಯ----೧, ೧, ೧. ೨, ೩, ,,
ದ್ವಿತೀಯಪರ್ಯಾಯ----೧, ೨, ೨, ೨, ೩, ೩, ೩, ,,
ತೃತೀಯಪರ್ಯಾಯ----೧, ೧, ೧, ೨, ೨, ೨, ೩, ೩, ೩, ,,

(೩) ಪರಿಷ್ಟುತಿ ಎಂಬ ವಿಷ್ಟುತಿಯಲ್ಲಿ ,,

ಪ್ರಥಮಪರ್ಯರ್ಾಯ ----೧, ೧, ೧, ೨, ೨, ೨, ೩, ೩, ೩, ,,
ದ್ವಿತೀಯಪರ್ಯಾಯ---೧, ೨, ೨, ೨, ೩, ,,
ತೃತೀಯಪರ್ಯಾಯ----೧, ೧, ೧, ೨, ೩, ೩, ೩, ,,

(೪) ಸೂರ್ವಿರ್ಾ ಎಂಬ ವಿಷ್ಟುತಿಯಲ್ಲಿ

ಪ್ರಥಮಪರ್ಯಾಯ----೧, ೧, ೧, ೨, ೨, ೨, ೩, ೩, ೩, ,,
ದ್ವಿತೀಯಪರ್ಯಾಯ----೧, ೨, ೩, ,,
ತೃತೀಯಪರ್ಯಾಯ----೧, ೧, ೧, ೨, ೨, ೨, ೩, ೩, ೩, ,,

V ತ್ರಿಣವಸ್ತೋಮಃ--

(೧) ಪ್ರತಿಷ್ಠಿತಾ (೨) ಉದ್ಯತೀ ಎಂದು ಎರಡು ವಿಷ್ಟುತಿಗಳು

(೧) ಪ್ರತಿಷ್ಠಿತಾ ಎಂಬ ವಿಷ್ಟುತಿಯಲ್ಲಿ

ಪ್ರಥಮಪರ್ಯಾಯ---೧, ೧, ೧, ೨. ೨, ೨, ೨, ೨, ೩, ,,
ದ್ವಿತೀಯಪರ್ಯಾಯ----೧, ೨, ೨, ೨, ೩, ೩, ೩, ೩, ೩, ,,
ತೃತೀಯಪರ್ಯಾಯ----೧, ೧, ೧, ೧, ೧, ೨, ೩, ೩, ೩, ,,

(೨) ಉದ್ಯತೀ ಎಂಬ ವಿಷ್ಟುತಿಯಲ್ಲಿ

ಪ್ರಥಮಪರ್ಯಾಯ----೧, ೧, ೧, ೨, ೨, ೨, ೩, ,,
ದ್ವಿತೀಯಪರ್ಯಾಯ----೧, ೨, ೨, ೨, ೩, ೩, ೩, ೩, ೩, ,,
ತೃತೀಯಪರ್ಯಾಯ----೧, ೧, ೧, ೧, ೧, ೨, ೨, ೨, ೩, ೩, ೩, ,,

VI ತ್ರಯಸ್ತ್ರಿಂಶಸ್ತೋಮಃ---

(೧) ಸಮತ್ರ್ಯಂಶಾ (೨) ನೇದೀಯಸ್ಸಂಕ್ರಮಾ (೩) ಉದ್ಯತೀ (೪) ಪ್ರತ್ಯವರೋಹಿಣೀ (೫) ಅಂತಿಮಾ ಎಂದು ಐದು ವಿಷ್ಟುತಿಗಳು

(೧) ಸಮತ್ರ್ಯಂಶಾ ಎಂಬ ವಿಷ್ಟುತಿಯಲ್ಲಿ

ಪ್ರಥಮಪರ್ಯಾಯ---೧, ೧, ೧, ೨, ೨, ೨, ೨, ೨, ೨, ೨, ೩, ,,
ದ್ವಿತೀಯಪರ್ಯಾಯ---೧, ೨, ೨, ೨, ೩, ೩, ೩, ೩, ೩, ೩, ೩. ,,
ತೃತೀಯಪರ್ಯಾಯ----೧, ೧, ೧, ೧, ೧, ೧, ೧, ೨, ೩, ೩, ೩, ,,

(೨) ನೇದೀಯಸ್ಸಂಕ್ರಮಾ ಎಂಬ ವಿಷ್ಟುತಿಯಲ್ಲಿ

ಪ್ರಥಮಪರ್ಯಾಯ----೧, ೧, ೧, ೨, ೨, ೨, ೨, ೨, ೩, ೩, ೩, ,,
ದ್ವಿತೀಯಪರ್ಯಾಯ—೧, ೧, ೧, ೨, ೨, ೨, ೩, ೩, ೩, ೩, ೩, ,,
ತೃತೀಯಪರ್ಯಾಯ—೧, ೧, ೧, ೧, ೧, ೨! ೨, ೨, ೩, ೩. ೩, ,,

(೩) ಉದ್ಯತೀ ಎಂಬ ವಿಷ್ಟುತಿಯಲ್ಲಿ,

ಪ್ರಥಮ ಪರ್ಯಾಯ—೧, ೧, ೧, ೨- ೨, ೨, ೨, ೨, ೩, ,,
ದ್ವಿತೀಯ ಪರ್ಯಾಯ—೧, ೨, ೨, ೨, ೩, ೩, ೩, ೩, ೩, ೩, ೩ ,,
ತೃತೀಯ ಪರ್ಯಾಯ—೧, ೧, ೧, ೧, ೧, ೧, ೧, ೨, ೨, ೨,
೩, ೩, ೩, ,,

(೪) ಪ್ರತ್ಯವರೋಹಿಣೀ ಎಂಬ ವಿಷ್ಟುತಿಯಲ್ಲಿ,

ಪ್ರಥಮ ಪರ್ಯಾಯ—೧, ೧, ೧, ೨, ೨, ೨, ೨, ೨, ೩, ೩. ೩, ೩ ,,
ದ್ವಿತೀಯಪರ್ಯಾಯ....೧, ೧, ೧, ೧, ೧, ೨, ೨, ೨, ೩, ೩, ೩ ,,
ತೃತೀಯಪರ್ಯಾಯ—೧, ೧, ೧, ೨, ೨, ೨, ೩, ೩, ೩ ,,

(೫) ಅಂತಿಮಾ ಎಂಬ ವಿಷ್ಟುತಿಯಲ್ಲಿ,

ಪ್ರಥಮಪರ್ಯಾಯ---೧, ೧, ೧, ೨, ೨, ೨, ೨, ೨, ೨. ೨, ೩,
೩, ೩, ೩, ೩, ,,
ದ್ವಿತೀಯಪರ್ಯಾಯ---೧, ೧, ೧, ೧, ೧, ೨, ೨, ೨, ೩, ೩, ೩, ,,
ತೃತೀಯಪರ್ಯಾಯ---೧, ೧, ೧, ೨, ೩, ೩, ೩, ,,

VII ಚತುರ್ವಿಂಶಸ್ತೋಮಃ---

ಈ ಸ್ತೋಮದಲ್ಲಿ ಒಂದೇ ವಿಷ್ಟುತಿ ಇರುವುದು

ಪ್ರಥಮಪರ್ಯಾಯ---೧, ೧, ೧, ೨, ೨, ೨, ೨, ೩, ,,
ದ್ವಿತೀಯಪರ್ಯಾಯ---೧, ೨, ೨, ೨, ೩, ೩, ೩, ೩, ,,
ತೃತೀಯಪರ್ಯಾಯ---೧, ೧, ೧, ೧, ೨, ೩, ೩, ೩, ,,

VIII ಚತುಶ್ಚತ್ವಾರಿಂಶಸ್ತೋಮಃ---

(೧) ಪ್ರಥಮಾ (೨) ನಿರ್ಮಧ್ಯಾ (೩) ತೃತೀಯಾ ಎಂದು ಮೂರು ವಿಷ್ಟುತಿಗಳು

(೧) ಪ್ರಥಮಾ ಎಂಬ ವಿಷ್ಟುತಿಯಲ್ಲಿ

ಪ್ರಥಮಪರ್ಯಾಯ---೧, ೧, ೧, ೨, ೨, ೨, ೨, ೨, ೨, ೨, ೨,
೨, ೨, ೨, ೩, ,,
ದ್ವಿತೀಯಪರ್ಯಾಯ---೧, ೨, ೨, ೨, ೩,೩,೩,೩,೩,೩,೩,೩,೩,೩, ,,
ತೃತೀಯಪರ್ಯಾಯ----೧, ೧, ೧, ೧, ೧, ೧, ೧, ೧, ೧, ೧, ೧,
೨, ೩, ೩, ೩, ,,

(೨) ನಿರ್ಮಧ್ಯಾ ಎಂಬ ವಿಷ್ಟುತಿಯಲ್ಲಿ

ಪ್ರಥಮಪರ್ಯಾಯ----೧, ೧, ೧, ೨, ೨, ೨, ೨, ೨, ೨, ೨, ೨,
೨, ೨, ೩, ,,
ದ್ವಿತೀಯಪರ್ಯಾಯ----೧, ೨, ೨, ೨, ೩, ೩, ೩, ೩, ೩, ೩, ೩,
೩, ೩, ೩, ೩, ,,
ತೃತೀಯಪರ್ಯಾಯ---೧, ೧, ೧, ೧, ೧, ೧, ೧, ೧, ೧, ೧, ೧,
೨, ೩, ೩, ೩, ,,

(೩) ತೃತೀಯಾ ಎಂಬ ವಿಷ್ಟುತಿಯಲ್ಲಿ

ಪ್ರಥಮಪರ್ಯಾಯ----೧, ೧, ೧, ೨, ೨, ೨, ೨, ೨, ೨, ೨, ೨,
೨, ೨, ೨, ೩, ,,
ದ್ವಿತೀಯಪರ್ಯಾಯ----೧, ೨, ೨, ೨, ೩, ೩, ೩, ೩, ೩, ೩, ೩,
೩, ೩, ೩, ೩, ,,
ತೃತೀಯಪರ್ಯಾಯ---೧, ೧, ೧, ೧, ೧, ೧, ೧, ೧, ೧, ೧, ೨,
೩, ೩, ೩, ,,

IX ಅಷ್ಟಾಚತ್ವಾರಿಂಶಸ್ತೋಮಃ--

(೧) ಪ್ರಥಮಾ (೨) ನೇದೀಯಸ್ಸಂಕ್ರಮಾ ಎಂದು ಎರಡು ವಿಷ್ಟುತಿಗಳು

(೧) ಪ್ರಥಮಾ ಎಂಬ ವಿಷ್ಟುತಿಯಲ್ಲಿ

ಪ್ರಥಮಪರ್ಯಾಯ---೧, ೧, ೧, ೩, ೩, ೩, ೨, ೨, ೨, ೨, ೨,
೨, ೨, ೨, ೨, ೨. ,,
ದ್ವಿತೀಯಪರ್ಯಾಯ----೧, ೧, ೧, ೨, ೨, ೨, ೩, ೩, ೩, ೩, ೩,
೩, ೩, ೩, ೩, ೩.
ತೃತೀಯಪರ್ಯಾಯ----೧, ೧, ೧, ೧, ೧, ೧, ೧, ೧, ೧, ೧,
೨, ೨, ೨, ೩, ೩, ೩.

(೨) ನೇದೀಯಸ್ಸಂಕ್ರಮಾ ಎಂಬ ವಿಷ್ಟುತಿಯಲ್ಲಿ

ಪ್ರಥಮಪರ್ಯಾಯ----೧, ೧, ೧, ೨, ೨, ೨, ೨, ೨, ೨, ೨,
೨, ೨, ೨, ೨, ೨, ೩ ,,

ದ್ವಿತೀಯಪರ್ಯಾಯ----೧, ೨, ೨, ೨, ೩, ೩, ೩, ೩, ೩, ೩, ೩,
೩, ೩, ೩, ೩, ೩, ,,

ತೃತೀಯಪರ್ಯಾಯ----೧, ೧, ೧, ೧, ೧, ೧, ೧, ೧, ೧, ೧,
೧, ೧, ೨, ೩, ೩, ೩, ,,

ಸ್ತೋಮಗಳು, ಅವುಗಳ ವಿಷ್ಟುತಿಗಳು, ಅವುಗಳಲ್ಲಿರುವ ಋಕ್ಸಂಖ್ಯೆಯನ್ನು ಪಠಿಸುವ ಕ್ರಮ ಮೊದಲಾದ ವಿಷಯಗಳು ಸಾಮವೇದದ ತಾಂಡ್ಯಬ್ರಾಹ್ಮಣದಲ್ಲಿ ವಿಸ್ತಾರವಾಗಿ ವಿವರಿಸಲ್ಪಟ್ಟಿವೆ.

ಈ ವಿಧವಾದ ಸ್ತೋಮಗಳಲ್ಲಿ ತ್ರಿವೃತ್ಸ್ತೋಮವು ಪ್ರಾತಸ್ಸವನ ಕಾಲದಲ್ಲಿಯೂ ಪಂಚದಶಸ್ತೋಮವು ಮಾಧ್ಯಂದಿನ ಸವನದಲ್ಲಿಯೂ, ಸಪ್ತದಶಸ್ತೋಮವು ತೃತೀಯಸವನದಲ್ಲಿಯೂ ಪಠಿಸಲ್ಪಡುವವು. ಅಭಿಪ್ಲವ ಷಡಹ ಮೊದಲಾದ ಯಾಗಗಳಲ್ಲಿ ಪ್ರಾತಸ್ಸವನಾದಿ ಕರ್ಮಗಳಲ್ಲಿ ಗಾನಮಾಡಲ್ಪಡಬೇಕಾದ ತ್ರಿವೃದಾದಿಸ್ತೋಮಗಳನ್ನು ಗಾನಮಾಡಿದನಂತರ ಅವುಗಳ ಜತೆಗೆ ಕೆಲವು ಸಂದರ್ಭಗಳಲ್ಲಿ ಉತ್ತರಸ್ತೋಮಗಳೆಂದು ಹೇಳಲ್ಪಡುವ ಇನ್ನೂ ಕೆಲವು ಸ್ತೋಮಗಳನ್ನು ಗಾನಮಾಡುವುದು ಪದ್ಧತಿಯು. ಈ ರೀತಿಯಾಗಿ ಅಧಿಕಸ್ತೋಮಗಳನ್ನು ಗಾನಮಾಡುವುದಕ್ಕೆ ಸ್ತೋಮವೃದ್ಧಿಯೆಂದು ಹೆಸರು. ಈ ಸ್ತೋಮವೃದ್ಧಿಯ ಗಾನಗಳನ್ನು ಉದ್ಗಾತೃಮೊದಲಾದವರು ಮಾಡಿದಮೇಲೆ ಅದಕ್ಕೆ ಅನುಸಾರವಾಗಿ ಎಂದರೆ ಸ್ತೋಮವೃದ್ಧಿಗೆ ಸಮನಾಗುವಂತೆ ಕೆಲವು ಅಧಿಕ ಸಂಖ್ಯೆಯ ಋಕ್ಕುಗಳನ್ನು ಹೋತೃವರ್ಗದ ಮೈತ್ರಾವರುಣ, ಬ್ರಾಹ್ಮಣಾಚ್ಛಂಸಿ, ಅಚ್ಛಾವಾಕ ಎಂಬ ಋತ್ವಿಜರು ಪಠಿಸಬೇಕಾಗಿರುವುದು. ಎಂದರೆ ತ್ರಿವೃದಾದಿಸ್ತೋಮಗಳಲ್ಲಿ ಗಾನಮಾಡಬೇಕಾದ ಕ್ಲೃಪ್ತಸಂಖ್ಯೆಯ ಮಂತ್ರಗಳನ್ನು ಹೇಳಿದ ಮೇಲೆ ಉದ್ಗಾತೃ ಮೊದಲಾದ ಸಾಮಕರು ಇನ್ನೂ ಕೆಲವು ಹೆಚ್ಚು ಮಂತ್ರಗಳನ್ನು ಗಾನಮಾಡುವ ಸಂದರ್ಭದಲ್ಲಿ ಅದಕ್ಕೆ ಸಮನಾಗಿ ಹೊಂದಿಕೊಳ್ಳುವಂತೆ ಅಷ್ಟೇಸಂಖ್ಯೆಯ ಋಕ್ಕುಗಳನ್ನು ಹೋತೃವರ್ಗದ ಮೈತ್ರಾವರುಣಾದಿಗಳು ಪಠಿಸಬೇಕು ಹೀಗೆ ಕ್ಲೃಪ್ತಸಂಖ್ಯೆಗಿಂತ ಹೆಚ್ಚಾಗಿ ಗಾನಮಾಡುವ ಸಾಮಮಂತ್ರಗಳಿಗೆ ಅಥವಾ ಸ್ತೋಮಗಳಿಗೆ **ಸ್ತೋಮವೃದ್ಧಿ** ಎಂದೂ ಅದರಂತೆ ಕ್ಲೃಪ್ತಸಂಖ್ಯೆಗಿಂತ ಹೆಚ್ಚಾಗಿ ಪಠಿಸುವ ಋಕ್ಕುಗಳಿಗೆ **ಆವಾಪ**ವೆಂದೂ ಹೆಸರು. ಪ್ರಸಕ್ತಸಂದರ್ಭದಲ್ಲಿ ಈ ಆವಾಪಋಕ್ಕುಗಳ ಪಠನೆಗಾಗಿ **ಸುರೂಪಕೃತ್ನುಮೂತಯೇ** ಎಂದು ಮೊದಲಾಗುವ ಆರು ಸೂಕ್ತಗಳನ್ನು (ಋ. ಸಂ. ೧-೪ ರಿಂದ ಋ. ಸಂ. ೧-೯ರ ವರೆಗಿನ ಸೂಕ್ತಗಳು) ಪಠಿಸುವರು. ಎಂದರೆ ಆವಾಪಕ್ಕಾಗಿ ಆರು ಸೂಕ್ತಗಳನ್ನೂ ಪೂರ್ತಿಯಾಗಿ ಪಠಿಸಬೇಕೆಂದಲ್ಲ. ಉದ್ಗಾತೃ ಮೊದಲಾದ ಸಾಮಕರು ಎಷ್ಟು ಋಕ್ಕುಗಳನ್ನು ಗಾನಮಾಡುವರೋ ಅಷ್ಟೇ ಋಕ್ಕುಗಳನ್ನು (ಸುರೂಪಕೃತ್ನು ಮೊದಲಾದ ಮೇಲೆ ಹೇಳಿದ ಸೂಕ್ತಗಳಲ್ಲಿರುವ ಅಷ್ಟೇ ಋಕ್ಕುಗಳನ್ನು) ಪಠಿಸಬೇಕೆಂದರ್ಥವು ಈರೀತಿ ಆವಾಪಕ್ರಮದಲ್ಲಿಯೂ ಎಂದರೆ ಅಧಿಕಋಕ್ಕುಗಳನ್ನು ಪಠಿಸುವುದಕ್ಕೂ ಒಂದು ಕ್ರಮವಿರುವುದು. ಅದನ್ನು ಆಶ್ವಲಾಯನರು ತಮ್ಮ ಶ್ರೌತಸೂತ್ರದಲ್ಲಿ ಈರೀತಿ ಹೇಳಿರುವರು—

ನಿತ್ಯಾಧಿಕಂ ಸ್ತೋಮಕರಣಾತ್ಪಂಚ ಸಪ್ತದಶೇ ನವೈಕವಿಂಶೇ ದ್ವಾದಶ ಚತು-
ರ್ವಿಂಶೇ ಪಂಚದಶ ತ್ರಿಣವ ಏಕವಿಂಶತಿಂ ತ್ರಯಸ್ತ್ರಿಂಶೇ ದ್ವಾತ್ರಿಂಶತಂ ಚತು-
ಶ್ಚತ್ವಾರಿಂಶೇ ಷಟ್ತ್ರಿಂಶತಮಷ್ಟಾಚತ್ವಾರಿಂಶೇ ॥ ಇತಿ ॥

ಎಂದರೆ ಸಪ್ತದಶಸ್ತೋಮವನ್ನು ಪಠಿಸುವ ಸಂದರ್ಭದಲ್ಲಿ ಆವಾಪವು ಎಂದರೆ ಅಧಿಕಋಕ್ಕುಗಳ ಪಠನೆಯು ಐದು

ಋಕ್ಕುಗಳಾಗಿರಬೇಕು. ಏಕವಿಂಶಸ್ತೋಮಕ್ಕೆ ಆವಾಪವು ಒಂಭತ್ತು ಋಕ್ಕುಗಳು ; ಚತುರ್ವಿಂಶಸ್ತೋಮಕ್ಕೆ ಹನ್ನೆರಡು ಋಕ್ಕುಗಳು ; ತ್ರಿಣವಸ್ತೋಮಕ್ಕೆ ಹದಿನೈದು ಋಕ್ಕುಗಳು ; ತ್ರಯಸ್ತ್ರಿಂಶಸ್ತೋಮಕ್ಕೆ ಇಪ್ಪತ್ತೊಂದು ಋಕ್ಕುಗಳು ; ಚತುಶ್ಚತ್ವಾರಿಂಶಸ್ತೋಮಕ್ಕೆ ಮೂವತ್ತೆರಡು ಋಕ್ಕುಗಳು ; ಅಷ್ಟಾಚತ್ವಾರಿಂಶಸ್ತೋಮಕ್ಕೆ ಮೂವತ್ತಾರು ಋಕ್ಕುಗಳು, '' ಎಂದು. ಈ ಕ್ರಮವನ್ನೇ ಭಾಷ್ಯಕಾರರು ಸುರೂಪಕೃತ್ನುಮೂತಯೇ ಎಂಬ ಸೂಕ್ತದ ವಿನಿಯೋಗವನ್ನು ಹೇಳುವಾಗ— '' ಅಭಿಪ್ಲವಷಡಹೇ ಬ್ರಾಹ್ಮಣಾಚ್ಛಂಸಿನಃ ಪ್ರಾತಸ್ಸವನೇ ಸ್ತೋಮವೃದ್ಧಾವಾವಾಪಾರ್ಥಾನಿ ಸುರೂಪಕೃತ್ನುಮೂತಯ ಇತ್ಯಾದೀನಿ ಷಟ್ ಸೂಕ್ತಾನಿ '' ಎಂಬ ವಾಕ್ಯದಿಂದ ವಿವರಿಸಿರುವರು.

**ಸುರೂಪಕೃತ್ನುಂ, ಆ ತ್ವೇತಾ, ಯುಂಜಂತಿ ಬ್ರಧ್ನಂ** ಎಂಬ ಮೂರು ಸೂಕ್ತಗಳು ಮಹಾವ್ರತದಲ್ಲಿ ವಿನಿಯೋಗಿಸಲ್ಪಡುತ್ತವೆ. ಈ ವಿಷಯದಲ್ಲಿ ಆಶ್ವಲಾಯನರು ಈರೀತಿ ಹೇಳಿರುವರು—

> **ಏಕಾಹೋಽತಿರಾತ್ರ ಆದೌ ಪ್ರಾಯಣೀಯ ಏಷೋಂತ್ಯ ಉದಯನೀಯೋ ವ್ಯಕ್ತೋ ಮಧ್ಯೇಽಹೀನೇಷು ವೈಶ್ವಾನರ ಏಷ ಏವ ತಾವಂತರೇಣ ವ್ಯೂಳ್ಹೋ ದಶರಾತ್ರ ಏಷಾ ಪ್ರಕೃತಿಃ ಸತ್ರಾಣಾಂ ತತ್ರಾವಾಪಸ್ಥಾನಮೂರ್ಧ್ವಂ ದಶರಾತ್ರಾದೇಕಾಹಾರ್ಥೇ ಮಹಾವ್ರತಂ ಪ್ರಾಗ್ದಶರಾತ್ರಾದಿತರೇಷಾಮಹ್ನಾಂ ದ್ವ್ಯಹಾರ್ಥೇ ಗೋಆಯುಷೀ ತ್ರ್ಯಹಾರ್ಥೇ ತ್ರಿಕದ್ರುಕಾ ಅಭಿಪ್ಲವತ್ರ್ಯಹಂ ಪೂರ್ವಂ ತ್ರಿಕದ್ರುಕಾ ಇತ್ಯಾಚಕ್ಷತೇ । ಚತುರಹಾರ್ಥೇ ತ್ರಿಕದ್ರುಕಾ ಮಹಾವ್ರತಂ ಚ ಪಂಚಾಹಾರ್ಥೇಽಭಿಪ್ಲವಪಂಚಾಹ ಉತ್ತಮಸ್ಯ ತು ಷಷ್ಠಾತ್ತೃತೀಯಂ ಸವನಂ ಷಳಹಾರ್ಥೇಽಭಿಪ್ಲವಃ ಷಳಹ ಏವಂನ್ಯಾಯಾ ಆವಾಪಾ ಷಳಹಾಂತಾಃ ಪುನಃ ಪುನಃ ಪೂರ್ಣಾಃ ಪೂರ್ಣಶ್ಚ ಷಳಹಸ್ತಂತ್ರತಾಮೇವ ಗಚ್ಛತೀತಿ ॥**

ಇದರ ಅರ್ಥವು—

ಮಹಾವ್ರತವೆಂದರೆ— ಹನ್ನೆರಡು ದಿನಗಳಲ್ಲಿ ಮಾಡಬೇಕಾದ ಸೋಮಯಾಗದಲ್ಲಿ ಒಂದು ದಿನ ಮಹಾವ್ರತವೆಂಬ ಯಾಗವನ್ನು ಮಾಡಿ ಆ ಸೋಮಯಾಗವನ್ನೇ ಹದಿಮೂರು ದಿನಗಳವರೆಗೆ ನಡೆಯುವಂತೆ ಮಾಡುವುದಕ್ಕಾಗಿ ಮಹಾವ್ರತವನ್ನು ಹನ್ನೆರಡು ದಿನಗಳ ಮಧ್ಯದಲ್ಲಿ ಎಂದರೆ ಹತ್ತನೆಯ ದಿನದಿಂದ ಹನ್ನೆರಡನೆಯ ದಿನದ ಮಧ್ಯಭಾಗದಲ್ಲಿ ಇದನ್ನು ಒಂದುದಿವಸ ಮಾಡುವರು. ಪ್ರಕೃತಿರೂಪವಾದ ಎಂದರೆ ಮೂಲಭೂತವಾದ ಸೋಮಯಾಗವು ಹನ್ನೆರಡು ದಿನಗಳ ವರೆಗೆ ಮಾತ್ರ ನಡೆಯುವುದಾಗಿರುವುದು. ಮಹಾವ್ರತವನ್ನು ಮಧ್ಯದಲ್ಲಿ ಒಂದುದಿನ ಮಾಡಿದರೆ ಆ ಯಾಗವು ಹದಿಮೂರುದಿನಗಳ ಯಾಗವಾಗುವುದು. ಹನ್ನೆರಡು ದಿನಗಳವರೆಗೆ ಮಾಡಬೇಕಾದ ಯಾಗಗಳಲ್ಲಿ ಮೊದಲು ಮತ್ತು ಕೊನೆಯ ದಿನಗಳಲ್ಲಿ ಮಾಡುವ ಯಾಗವು. ಅತಿರಾತ್ರಯಾಗದಂತಿರುವುದು. ಅತಿರಾತ್ರಯಾಗವೆಂದರೆ—ಸಪ್ತಸೋಮಯಾಗಸಂಸ್ಥೆಗಳಲ್ಲಿ ಒಂದು ಪ್ರಭೇದವು. ಮಧ್ಯದ ಹತ್ತುದಿನಗಳಿಗೆ ವ್ಯೂಳ್ಹವೆಂದು ಹೆಸರು. ಹನ್ನೆರಡು ದಿನಗಳ ಯಾಗವು ಹದಿನಾಲ್ಕು ದಿನಗಳವರೆಗೆ ನಡೆಯಬೇಕಾದ್ದಲ್ಲಿ ಹನ್ನೆರಡು ದಿನಗಳ ಯಾಗಕ್ಕೆ ಗೋಆಯುಷೀ ಎಂಬ ಎರಡು ದಿನಗಳ ಯಾಗವನ್ನು ಸೇರಿಸಿ ಮೊದಲನೆಯ ದಿನವಾದಮೇಲೆ ಹತ್ತನೆಯ ದಿನದೊಳಗಾಗಿ ಮಾಡುವರು. ಆದುದರಿಂದ ಅದು ಹದಿನಾಲ್ಕು ದಿನಗಳ ಯಾಗವಾಗುವುದು. ಇದರಂತೆಯೇ ಹದಿನೈದುದಿನಗಳ ಯಾಗವಾಗುವುದಕ್ಕಾಗಿ ಹನ್ನೆರಡರ ಜತೆಗೆ

ತ್ರಿಕದ್ರುಕವೆಂಬ ಮೂರುದಿನಗಳ ಯಾಗವನ್ನು ಸೇರಿಸುವರು. ತ್ರಿಕದ್ರುಕವೆಂದರೆ ಅಭಿಪ್ಲವಷಳಹವೆಂಬ ಹಿಂದೆ ಹೇಳಿದ ಯಾಗದ ಮೊದಲಮೂರು ದಿನಗಳು. ಹದಿನಾರುದಿನಗಳ ಯಾಗಕ್ಕೆ ತ್ರಿಕದ್ರುಕ ಮತ್ತು ಮಹಾವ್ರತವನ್ನು ಸೇರಿಸುವರು. ಹದಿನೇಳು ದಿನಗಳ ಯಾಗಕ್ಕೆ ಅಭಿಪ್ಲವಷಡಹದ ಮೊದಲ ಐದು ದಿನಗಳನ್ನು ಸೇರಿಸುವರು. ಹದಿನೆಂಟುದಿನಗಳ ಯಾಗಕ್ಕೆ ಅಭಿಪ್ಲವಷಡಹದ ಆರುದಿನಗಳನ್ನು ಸೇರಿಸುವರು. ಇದರಂತೆಯೇ ಮುಂದಕ್ಕೂ ಗಣನೆಮಾಡಬೇಕು. ಕೆಳಗೆ ಕೊಟ್ಟಿರುವ ವಿವರಣೆಯಿಂದ ಇದು ಸ್ಪಷ್ಟವಾಗುವುದು.

| ಪ್ರಕೃತಿಯಾಗವು ಮತ್ತು ಅದಕ್ಕೆ ಸೇರಬೇಕಾದ ಭಾಗ (Original Secrifice) | ವಿಕೃತಿಯಾಗವು ಮತ್ತು ದಿನಸಂಖ್ಯೆ (Alterod Secrifice) | |
|---|---|---|
| ಸೋಮಯಾಗ.... | ದ್ವಾದಶಾಹಸೋಮಯಾಗ | (೧೨-ದಿನಗಳು) |
| ಸೋಮಯಾಗ+ಮಹಾವ್ರತ= | ತ್ರಯೋದಶಾಹ | (೧೩-ದಿನಗಳು) |
| ಸೋಮಯಾಗ+ಗೋಆಯುಷೀ= | ಚತುರ್ದಶಾಹ | (೧೪-ದಿನಗಳು) |
| ಸೋಮಯಾಗ+ತ್ರಿಕದ್ರುಕ (ಅಭಿಪ್ಲವ ಷಡಹದ ಮೊದಲ ಮೂರು ದಿನಗಳು) = | ಪಂಚದಶಾಹ | (೧೫-ದಿನಗಳು) |
| ಸೋಮಯಾಗ+ತ್ರಿಕದ್ರುಕ+ಮಹಾವ್ರತ= | ಷೋಡಶಾಹ (ಅಥವಾ ಷೋಡಶೀ ೧೬ ದಿನಗಳು) | |
| ಸೋಮಯಾಗ+ಅಭಿಪ್ಲವಷಡಹದಲ್ಲಿ ಮೊದಲ ಐದು ದಿನಗಳು = | ಸಪ್ತದಶಾಹ | (೧೭-ದಿನಗಳು) |
| ಸೋಮಯಾಗ+ಅಭಿಪ್ಲವಷಡಹಪೂರ್ತಿ ಎಂದರೆ ಆರು ದಿನಗಳು = | ಅಷ್ಟಾದಶಾಹ | (೧೮-ದಿನಗಳು) |

ಇತ್ಯಾದಿ. ಇಲ್ಲಿ ದ್ವಾದಶಾಹ, ತ್ರಯೋದಶಾಹ ಎನ್ನುವುದಕ್ಕೆ ಬದಲಾಗಿ ದ್ವಾದಶರಾತ್ರಿ, ತ್ರಯೋದಶರಾತ್ರಿ ಎಂದು ಹೇಳುವುದು ರೂಢಿಯು. ಸೂಕ್ತ ಅಥವಾ ಮಂತ್ರಗಳ ವಿನಿಯೋಗವನ್ನು ಹೇಳುವಾಗ ಭಾಷ್ಯಕಾರರು ಹೇಳಿರುವ ಅಭಿಪ್ಲವಷಡಹ, ಪೃಷ್ಠ್ಯಷಡಹ, ಅತಿರಾತ್ರ, ಮಹಾವ್ರತ ಮೊದಲಾದ ಯಾಗವಿಶೇಷಗಳ ಹೆಸರುಗಳನ್ನೂ, ಯಜ್ಞಗಳಲ್ಲಿ ಉಪಯೋಗಿಸಲ್ಪಡುವ ಸ್ತೋಮ, ವಿಷ್ಟುತಿ, ಪರ್ಯಾಯ ಮೊದಲಾದ ಪಾರಿಭಾಷಿಕ ಶಬ್ದಗಳ ವಿವರಣೆಯನ್ನೂ ವಾಚಕರ ಅವಗಾಹನೆಗಾಗಿ ಇದುವರೆಗೆ ಸೂಕ್ಷ್ಮವಾಗಿ ವಿವರಿಸಿದ್ದಾಯಿತು. ಗ್ರಂಥವಿಸ್ತರಭಯದಿಂದ ವಿಸ್ತಾರವಾಗಿ ವಿವರಿಸಲು ಇಲ್ಲಿ ಸಾಧ್ಯವಿಲ್ಲ ಯಜ್ಞಯಾಗಾದಿಗಳಿಗೆ ಸಂಬಂಧಪಟ್ಟ ಸಮಸ್ತ ವಿಷಯಗಳನ್ನು ವಿಸ್ತಾರವಾಗಿ ಯಜುರ್ವೇದಾನುವಾದದಲ್ಲಿ ವಿವರಿಸುವೆವು. ಅವುಗಳನ್ನು ಅಲ್ಲಿ ನೋಡಿ ತಿಳಿದುಕೊಳ್ಳಬಹುದು. ಈಗ ಐದನೆಯ ಸೂಕ್ತದ ಅರ್ಥಾನುವಾದವನ್ನು ಪ್ರಾರಂಭಿಸುವೆವು.



*

॥ ಓಂ ॥

## ಸೂಕ್ತ—೫

॥ ಮಂಡಲ—೧ ॥ ಅನುವಾಕ—೨ ॥ ಸೂಕ್ತ—೫ ॥
॥ ಅಷ್ಟಕ —೧ ॥ ಅಧ್ಯಾಯ—೧ ॥ ವರ್ಗ— ೯, ೧೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೧–೧೦ ॥
॥ ಋಷಿಃ—ಮಧುಚ್ಛಂದಾ ವೈಶ್ವಾಮಿತ್ರಃ ॥
॥ ದೇವತಾ— ಇಂದ್ರಃ ॥
॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಆ ತ್ವೇತಾ ನಿ ಷೀದತೇಂದ್ರಮಭಿ ಪ್ರ ಗಾಯತ ।
ಸಖಾಯಃ ಸ್ತೋಮವಾಹಸಃ ॥ ೧ ॥

॥ ಪದಪಾಠಃ ॥

ಆ । ತು । ಆ । ಇತ । ನಿ । ಸೀದತ । ಇಂದ್ರಂ । ಅಭಿ । ಪ್ರ । ಗಾಯತ ॥
ಸಖಾಯಃ । ಸ್ತೋಮಽವಾಹಸಃ ॥ ೧ ॥

॥ ಸಾಯಣಭಾಷ್ಯಂ ॥

ತುಶಬ್ದಃ ಕ್ಷಿಪ್ರಾರ್ಥೋ ನಿಪಾತಃ । ದ್ವಾಭ್ಯಾಮಾಙ್ಭ್ಯಾಮನ್ವೇತುಮಿತಶಬ್ದೋಽಭ್ಯಸನೀಯಃ । ಹೇ ಸಖಾಯ ಋತ್ವಿಜಃ ಕ್ಷಿಪ್ರಮಸ್ಮಿನ್ಕರ್ಮಣ್ಯಾಗಚ್ಛತಾಗಚ್ಛತ । ಆದರಾರ್ಥೋಽಭ್ಯಾಸಃ । ಆಗತ್ಯ ಚ ನಿಷೀದತ । ಉಪವಿಶತ । ಉಪವಿಶ್ಯ ಚೇಂದ್ರಮಭಿ ಪ್ರ ಗಾಯತ । ಸರ್ವತಃ ಪ್ರಕರ್ಷೇಣ ಸ್ತುತ । ಕೀದೃಶಾಃ ಸಖಾಯಃ । ಸ್ತೋಮವಾಹಸಃ । ತ್ರಿವೃತ್ಪಂಚದಶಾದಿಸ್ತೋಮಾನಸ್ಮಿನ್ಕರ್ಮಣಿ ವಹಂತಿ ಪ್ರಾಪಯಂತೀತಿ ॥ ಆ ತು ಆ ನಿಪಾತತ್ವಾದಾದ್ಯುದಾತ್ತಾಃ । ಇತ । ಇಣ್ ಗತೌ । ದ್ವ್ಯಚೋಽತಸ್ತಿಙಃ । ಪಾ. ೬-೩-೧೩೫ । ಇತಿ ಸಂಹಿತಾಯಾಂ ದೀರ್ಘತ್ವಂ । ನಿ । ನಿಪಾತತ್ವಾದಾದ್ಯುದಾತ್ತಃ । ಸೀದತ । ಪಾಘ್ರಾಧ್ಮಾಸ್ಥಾಮ್ನಾದಾಣ್ದೃಶೀತ್ಯಾದಿನಾ । ಪಾ. ೭-೩-೭೮ । ಸದೇಃ ಸೀದಾದೇಶಃ । ಸದೇರಪ್ರತೇಃ ।

ಪಾ. ೮-೩-೬೬ | ಇತಿ ಸಂಹಿತಾಯಾಂ ಷತ್ವಂ | ಅಭಿ | ಉಪಸರ್ಗಾಶ್ಚಾಭಿವರ್ಜಮಿತಿ ವಚನಾತ್ಪ್ರಾತಿಪದಿಕಾಂತೋದಾತ್ತತ್ವಂ | ಸ್ತೋಮವಾಹಸಃ | ಅರ್ತಿಸ್ತುಸುಹುಸೃಧೃಕ್ಷಿಕ್ಷುಭಾಯಾವಾಪದಿಯಕ್ಷಿನೀಭ್ಯೋ ಮನ್ | ಉ. ೧-೧೩೯ | ಇತಿ ಸ್ತೌತೇರ್ಮನ್ಪ್ರತ್ಯಯಾಂತಃ ಸ್ತೋಮಶಬ್ದೋ ನಿತ್ತ್ವಾದಾದ್ಯುದಾತ್ತಃ | ಸ್ತೋಮಂ ವಹಂತೀತಿ ಸ್ತೋಮವಾಹಸಃ | ವಹಿಹಾಧಾಞ್ಭ್ಯಶ್ಛಂದಸಿ | ಉ. ೪-೨೨೦ | ಇತ್ಯಸುನ್ಪ್ರತ್ಯಯಃ | ತತ್ರ ಣಿದಿತ್ಯನುವೃತ್ತೇರತ ಉಪಧಾಯಾಃ | ಪಾ. ೭-೨-೧೧೬ | ಇತ್ಯುಪಧಾಯಾ ವೃದ್ಧಿಃ | ಕೃದುತ್ತರಪದಪ್ರಕೃತಿಸ್ವರತ್ವೇ ಪ್ರಾಪ್ತೇ ಗತಿಕಾರಕಯೋರಪಿ ಪೂರ್ವಪದಪ್ರಕೃತಿಸ್ವರತ್ವಂ ಚ | ಉ. ೪-೨೨೬ | ಇತ್ಯೌಣಾದಿಕಸೂತ್ರಾತ್ಸಮಾಸ ಆದ್ಯುದಾತ್ತಃ ||

|| ಪ್ರತಿಪದಾರ್ಥ ||

**ಸ್ತೋಮವಾಹಸಃ**—ಸ್ತೋತ್ರಗಳನ್ನು ವಹಿಸುವ ಎಂದರೆ ಸ್ತೋತ್ರಗಳಿಂದ ಹೊಗಳುವ | (ಹೇ) **ಸಖಾಯಃ**-ಎಲೈ ಸ್ನೇಹಿತರಾದ (ಋತ್ವಿಜರೇ) | **ತು**-ಜಾಗ್ರತೆಯಾಗಿ | **ಆ ಆ ಇತ**-ಬನ್ನಿ ಬನ್ನಿ (ಬಂದು) **ನಿ ಸೀದತ**-ಕೂತುಕೊಳ್ಳಿರಿ | **ಇಂದ್ರಂ**-ಇಂದ್ರನನ್ನು | **ಅಭಿ ಪ್ರ ಗಾಯತ**-ಸ್ತೋತ್ರಗಳಿಂದ ಚೆನ್ನಾಗಿ ಗಾನ ಮಾಡಿರಿ ||

|| ಭಾವಾರ್ಥ ||

ಎಲೈ ಸ್ನೇಹಿತರಾದ ಋತ್ವಿಜರೇ, ನೀವು ಇಂದ್ರನನ್ನು ಸ್ತೋತ್ರಾದಿಗಳಿಂದ ಸಂತೋಷಪಡಿಸುವವರಾದುದರಿಂದ ಈ ಯಜ್ಞವನ್ನು ಮಾಡುವ ಸ್ಥಳಕ್ಕೆ ಬೇಗನೆ ಬನ್ನಿ. ಬಂದು ನಿಮ್ಮ ಸ್ಥಳದಲ್ಲಿ ಕುಳಿತುಕೊಂಡು ಇಂದ್ರನನ್ನು ತ್ರಿವೃದಾದಿಸ್ತೋಮ (ಸ್ತೋತ್ರ) ಗಳಿಂದ ಚೆನ್ನಾಗಿ ಗಾನರೂಪವಾಗಿ ಸ್ತೋತ್ರಮಾಡಿರಿ.

English Translation.

O friends, (priests), come hither quickly offering praises, sit down and sing repeatedly the praises of Indra.

|| ವಿಶೇಷವಿಷಯಗಳು ||

ಆ-ಆ ಎಂಬ ಶಬ್ದವು ಆದರದಿಂದ ಆಹ್ವಾನಮಾಡುವುದಕ್ಕಾಗಿ ಎರಡಾವರ್ತಿ ಪಠಿತವಾಗಿರುವುದೆಂದು ಭಾಷ್ಯಕಾರರು ಹೇಳಿರುವರು. ಇಂತಹ ಪ್ರಯೋಗಗಳು ಋಗ್ವೇದದಲ್ಲಿ ಅನೇಕಕಡೆ ಇವೆ. ಉದಾಹರಣೆಗಾಗಿ—

**ಆಹಾನಿ | ಗೃಧ್ರಾಃ | ಪರಿ | ಆ | ವಃ | ಆ | ಅಗುಃ | ಇಮಾಂ | ಧಿಯಂ | ವಾರ್ಕಾರ್ಯಾಂ | ಚ | ದೇವೀಂ ||** (ಋ. ಸಂ. ೧-೮೮-೪)

**ವಾಯೋ ಇತಿ | ಆ | ಚಂದ್ರೇಣ | ರಾಧಸಾ | ಆ | ಗತಂ | ಇಂದ್ರಃ | ಚ | ರಾಧಸಾ | ಆ | ಗತಂ ||** (ಋ. ಸಂ. ೧-೧೩೫-೪)

ಋತsವಾನಃ । ಪ್ರತಿsಚಕ್ಷ್ಯ । ಅನೃತಾ । ಪುನಃ । ಆ । ಅತಃ । ಆ । ತಸ್ಥುಃ । ಕವಯಃ । ಮಹಃ । ಪಥಃ ॥ (ಋ. ಸಂ. ೨-೨೪-೭)

ಆ । ಯಾಹಿ । ಪೂರ್ವೀಃ । ಅತಿ । ಚರ್ಷಣೀಃ । ಆ । ಅರ್ಯಃ । ಆsಶಿಷಃ । ಉಪ । ನಃ । ಹರಿsಭ್ಯಾಂ ॥ (ಋ. ಸಂ. ೩-೪೩-೨)

ಆ । ತು । ನಃ । ಇಂದ್ರ । ವೃತ್ರsಹನ್ । ಅಸ್ಮಾಕಂ । ಅರ್ಧಂ । ಆ । ಗಹಿ ॥ (ಋ.ಸಂ. ೪-೩೨-೧)

ಆ । ಗ್ರಾವsಭಿಃ । ಅಹನ್ಯೇಭಿಃ । ಅಕ್ತುsಭಿಃ । ವರಿಷ್ಠಂ । ವಜ್ರಂ । ಆ । ಜಿಘರ್ತಿ । ಮಾಯಿನಿ ॥ (ಋ. ಸಂ. ೫-೪೮-೩)

ಇತ್ಯಾದಿ. ಸ್ಕಂದಸ್ವಾಮಿಯು ಈ ವಿಚಾರದಲ್ಲಿ—" **ಆ ಆ ಇತ್ಯುಪಸರ್ಗಾಭ್ಯಾಸಾತ್ ತತ್ಸಂಬಂಧಿನ ಇತೇತ್ಯೇತಸ್ಯಾಖ್ಯಾತಸ್ಯಾಭ್ಯಾಸಃ। ಆಖ್ಯಾತಾಭ್ಯಾಸೇ ಚ ಲೋಕೇ ಗಮ್ಯತಾಂ ಗಮ್ಯತಾಮಿತ್ಯಾದೌ ಆವಶ್ಯಕರ್ತವ್ಯತಾ ಪ್ರತೀಯತೇ। ಏವಮತ್ರಾಪಿ ಕ್ಷಿಪ್ರಮೇತ । ಕ್ಷಿಪ್ರಮವಶ್ಯಮಾಗಚ್ಛತೇತ್ಯರ್ಥಃ ॥** " ಎಂದರೆ ಆ ಎಂಬ ಉಪಸರ್ಗವನ್ನು ಎರಡಾವರ್ತಿ ಪಠನಮಾಡಿರುವುದರಿಂದ ಅದಕ್ಕೆ ಸಂಬಂಧಪಟ್ಟ **ಇತ** ಎಂಬ ಕ್ರಿಯಾಪದವನ್ನು ಎರಡಾವರ್ತಿ ಪಠಿಸಿದಂತಾಯಿತು. ಕ್ರಿಯಾಪದವನ್ನು ಎರಡಾವರ್ತಿ ಪಠಿಸಿದರೆ, ಎಂದರೆ **ಗಮ್ಯತಾಂ ಗಮ್ಯತಾಂ** ಎಂದು ಎರಡಾವರ್ತಿ ಉಚ್ಚರಿಸಿದರೆ ಬೇಗನೆ ಅವಶ್ಯಕವಾಗಿ ಬಂದೇ ಬರಬೇಕೆಂಬ ಅರ್ಥವು ಭಾಸವಾಗುವುದು ಎಂದು ಹೇಳಿರುವರು. ಸಾಧಾರಣವಾಗಿ ಒಂದು ಶಬ್ದದ ಅರ್ಥವನ್ನು ಒತ್ತಿ ಹೇಳಬೇಕಾದರೆ ಅದನ್ನು ಎರಡಾವರ್ತಿ ಹೇಳುವುದು ಲೋಕವ್ಯವಹಾರದಲ್ಲಿ ರೂಢಿಯಿರುವುದು. ಇಲ್ಲಿಯೂ ಅದರಂತೆ ಎಂದು ಭಾವಿಸಬೇಕು.

**ತು**–ಈ ಶಬ್ದಕ್ಕೆ ಇಲ್ಲಿ, ಖಂಡಿತವಾಗಿ, ಅವಶ್ಯಕವಾಗಿ, ಬೇಗನೆ ಎಂದು ಅರ್ಥಮಾಡಬಹುದು.

**ಇಂದ್ರಮಭಿ ಪ್ರ ಗಾಯತ**–ಈ ಪಾದವು ಅನೇಕ ಋಕ್ಕುಗಳಲ್ಲಿ ಪುನಃ ಪಠಿತವಾಗಿರುವುದು.

**ಪಾಂತಮಾ ವೋ ಅಂಧಸ ಇಂದ್ರಮಭಿ ಪ್ರ ಗಾಯತ** । (ಋ. ಸಂ. ೮-೯೨-೧)

ಇತ್ಯಾದಿ.

**ಸಖಾಯಃ**:—ಎಂದರೆ ಋತ್ವಿಜರು, ಉದ್ಗಾತೃ ಮುಂತಾದವರು. ಈ ಶಬ್ದದ ವಿವರಣೆಯನ್ನು ನಾವು ಹಿಂದೆಯೇ ಕೊಟ್ಟಿದೇವೆ.

**ಸ್ತೋಮವಾಹಸಃ**:—ಸ್ತೋಮವೆಂದರೆ ಸ್ತೋತ್ರಮಾತ್ರವಲ್ಲ ಅದರ ವಿಸ್ತಾರವಾದ ವಿವರಣೆಯನ್ನು ಈ ಸೂಕ್ತದ ಪೀಠಿಕೆಯಲ್ಲಿ ಕೊಟ್ಟಿದೇವೆ. ಸ್ತೋಮವನ್ನು ಎಂದರೆ ಸ್ತೋತ್ರವನ್ನು ಇಂದ್ರನಿಗೆ ಒಯ್ಯುವವರು ಎಂದರೆ ಇಂದ್ರನಿಗೆ ಗೊತ್ತಾಗುವಂತೆ ಅವನ ಗುಣಗಳನ್ನು ಗಾನಮಾಡುವವರು ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

ಆ–ತು–ಆ, ಈ ಮೂರೂ ನಿಪಾತವಾದ್ದರಿಂದ **ನಿಪಾತಾ ಆದ್ಯುದಾತ್ತಾಃ** (ಫಾ. ಸೂ. ೮೦) ಎಂಬುದರಿಂದ ಆದ್ಯುದಾತ್ತ. ಇತ-ಲೋಟ್ ಮಧ್ಯಮಪುರುಷ ಬಹುವಚನ-ಥ-ಪ್ರತ್ಯಯ–**ಲೋಟೋಲಙ್ವತ್** (ಪಾ.ಸೂ ೩-೪-೮೫) ಎಂಬುದರಿಂದಲಙ್ವದ್ಭಾವ **ತಸ್ಥಸ್ಥಮಿಪಾಂತಾಂತಂತಾಮಃ** (ಪಾ.ಸೂ. ೩-೪-೧೦೧) ಇದರಿಂದ ಥಗೆ

ತ-ಆದೇಶ, ಮಧ್ಯದಲ್ಲಿ ವಿಕರಣ, ಶಪ್-ಅದಕ್ಕೆ ಲುಕ್-ತ-ಎಂಬುದು ಅಪಿತ್ತಾದ ಸಾರ್ವಧಾತುಕ ಆದಕಾರಣ **ಸಾರ್ವಧಾತುಕಮಪಿತ್** (ಪಾಸೂ ೧.೨-೪) ಎಂಬುದರಿಂದ ಙಿತ್ತಾಗುವುದು. **ಕ್ಙಿತಿಚ** (ಪಾಸೂ ೧-೧-೫) ಎಂಬುದರಿಂದ ಗುಣಕ್ಕೆ ನಿಷೇಧ. ಇತ ಎಂದು ರೂಪವಾಗುವುದು. ಇಲ್ಲಿ **ಧಾತೋಃ** (ಪಾಸೂ ೬-೧.೧೬೨) ಎಂಬುದರಿಂದ ಧಾತು ಇಕಾರಕ್ಕೆ ಅಂತೋದಾತ್ತವೂ-**ಆದ್ಯುದಾತ್ತಶ್ಚ** (ಪಾಸೂ ೩-೧-೩) ಎಂಬುದರಿಂದ ತ-ಪ್ರತ್ಯಯಕ್ಕೆ ಆದ್ಯುದಾತ್ತವೂ ಪ್ರಾಪ್ತವಾದರೆ ಸತಿಶಿಷ್ಟವಾದುದರಿಂದ ಪ್ರತ್ಯಯ ಸ್ವರವು ಪ್ರಬಲವಾದ ಕಾರಣ ಆದೇ ಬಂದು **ಅನುದಾತ್ತಂ ಪದಮೇಕವರ್ಜಂ** (ಪಾಸೂ ೬-೧-೧೫೮) ಎಂಬ ಶೇಷಾನುದಾತ್ತಸ್ವರದಿಂದ ಇ ಯು ಅನುದಾತ್ತವಾಗಬೇಕಾಯಿತು. ಅವರೆ ಇತ ಎಂಬ ತಿಙಂತಪದವು ಅತಿಙಂತವಾದ ಪದದ ಮುಂದೆ ಇರುವುದರಿಂದ **ತಿಙ್ಙತಿಙಃ** ( ಪಾ. ಸೂ. ೮-೧-೨೮ ) ಎಂಬುದರಿಂದ ಸರ್ವಾನುದಾತ್ತ ಬರುವುದು. ಸಂಹಿತಾಕಾಲದಲ್ಲಿ ಪೂರ್ವದಲ್ಲಿರುವ ಉದಾತ್ತವಾದ ಆಕಾರಕ್ಕೂ ಅನುದಾತ್ತವಾದ ಇತ ಶಬ್ದದ ಇಕಾರಕ್ಕೂ ಗುಣಸಂಧಿಯಿಂದ ಏ ಎಂಬುದೊಂದೇ ಆದೇಶ ಬರುವುದು. ಅದು **ಏಕಾದೇಶ ಉದಾತ್ತೇನೋದಾತ್ತಃ** (ಪಾಸೂ ೮-೨-೫) ಎಂಬುದರಿಂದ ಉದಾತ್ತವು. ತ-ಪ್ರತ್ಯಯದ ಆಕಾರಕ್ಕೆ ನಿ-ಎಂಬ ಉದಾತ್ತವು ಪರದಲ್ಲಿರುವುದರಿಂದ **ಉದಾತ್ತಸ್ವರಿತಪರಸ್ಯ** ಸನ್ನತರಃ (ಪಾಸೂ ೧-೨-೪೦) ಎಂಬುದರಿಂದ ಅನುದಾತ್ತತರವು ಬರುವುದು. ಸಂಹಿತಾಕಾಲದಲ್ಲಿ 'ದ್ವ್ಯಚೋತಸ್ತಿಙಃ' (ಪಾ. ಸೂ. ೬-೩-೧೩೫) ಋಕ್ಕಿನಲ್ಲಿ ಎರಡು ಅಚ್ಚುಗಳುಳ್ಳ ತಿಙಂತದ ಹ್ರಸ್ವಾಕಾರಕ್ಕೆ ದೀರ್ಘ ಬರುವುದು- ಎಂಬುದರಿಂದ ದೀರ್ಘ ಬಂದರೆ ಇತಾ-ಎಂದಾಗುತ್ತೆ. ಈ ಮಂತ್ರದಲ್ಲಿ ಪ್ರಯುಕ್ತವಾಗಿರುವ ಎರಡು ಆಕಾರಗಳೂ ಉಪಸರ್ಗಗಳು. ಉಪಸರ್ಗಗಳಿಗೆ ಕ್ರಿಯಾಪದದೊಂದಿಗೆ ಅನ್ವಯವನ್ನು ಹೇಳಬೇಕು. ಆ ಕ್ರಿಯಾಪದವು ಸಂಭವವಿದ್ದು ಯೋಗ್ಯತೆಯೂ ಇದ್ದರೆ ಸಮೀಪಪದಲ್ಲಿರುವುದರಿಂದ ಪ್ರಕೃತ ವಾಕ್ಯದಲ್ಲಿರುವುದೇ ಆಗುವುದು. ಇಲ್ಲಿ-ಇಂತಹುದು ಇತ ಎಂಬುದು. ಇದು ಸಕೃತ್ (ಒಂದಾವರ್ತಿ) ಉಚ್ಚರಿತವಾಗಿದೆ. ಇದ್ದರಿಂದ ಇದಕ್ಕೆ ಒಂದೇ ಆವರ್ತಿ ಅನ್ವಯವು ಬರುವುದು. ಏಕೆಂಗರೆ ಶಬ್ದಗಳಿಗೆ ವಿರಮ್ಯ ವ್ಯಾಪಾರವನ್ನು ಒಪ್ಪುವುದಿಲ್ಲ-ಅಂದರೆ ಒಂದುಶಬ್ದವು ಒಂದು ಕಡೆ ಅನ್ವಯಿಸಿ ವಿರಾಮವನ್ನು ಹೊಂದಿದಮೇಲೆ ಆಕಾಂಕ್ಷೆ ಇಲ್ಲದೇ ಇರುವುದರಿಂದ ಮತ್ತೊಂದುಕಡೆ ಅನ್ವಯಿಸಲಾರದು. **ಸಕೃದುಚ್ಚರಿತಃ ಶಬ್ದಃಶಬ್ದಃಸಕೃದೇವಾರ್ಥಂ ಗಮಯತಿ ಪ್ರತ್ಯರ್ಥಂಶಬ್ದನಿವೇಶಃ** ಎಂಬ ನ್ಯಾಯವೂ ಇದೇ ಅಭಿಪ್ರಾಯವನ್ನು ಹೇಳುವುದು. ಅಂತು ಪ್ರಕೃತ ಒಂದಾವರ್ತಿ ಉಚ್ಚರಿಸಿರುವ ಇತ ಎಂಬುದು ಒಂದು ಆ ಎಂಬ ಉಪಸರ್ಗದೊಡನೆ ಅನ್ವಯಿಸುವುದು. ಒಂದೇ ಕಾಲದಲ್ಲಿ ಎರಡು ಆ ಎಂಬುದರೊಂದಿಗೆ ಅನ್ವಯಿಸಲಾರದು ಅದ್ದರಿಂದ ಒಂದು ಆಕಾರದೊಂದಿಗೆ ಇತ ಎಂಬುದು ಅನ್ವಯಿಸಿದ ಮೇಲೆ ಅದು ನಿರಾಕಾಂಕ್ಷವಾದುದರಿಂದ ಇನ್ನೊಂದರೊಂದಿಗೆ ಅನ್ವಯಬರುವುದಿಲ್ಲ. ಹೀಗಾದರೆ ಇನ್ನೊಂದು ಆ ಎಂಬುದು ಅನ್ವಯಿಸದೇ ಹೋಗುವುದು. ಅದರ ಅನ್ವಯಕ್ಕಾಗಿ ಯೋಗ್ಯವಾದ ಕ್ರಿಯಾಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಅಂದಮೇಲೆ ಸ್ವತಂತ್ರವಾದ ಕ್ರಿಯಾಪದದ ಅಧ್ಯಾಹಾರ ಮಾಡಿಕೊಂಡರೆ ಗೌರವ ಬರುವುದು. ಸಮೀಪದ ವಾಕ್ಯದಲ್ಲಿರುವುದಕ್ಕೆ ಆವೃತ್ತಿಯನ್ನು ಮಾಡಿ ಸಂಬಂಧವನ್ನು ಹೇಳಿದರೆ ಲಾಘವ ಬರುವುದು- ಅದ್ದರಿಂದ ಪ್ರಕೃತ ವಾಕ್ಯದಲ್ಲಿರುವ ಇತ ಶಬ್ದವನ್ನು ಆವರ್ತಿ ಮಾಡಿ ಎರಡು ಆಕಾರದೊಂದಿಗೆ ಅನ್ವಯಿಸುವುದು ಯುಕ್ತವಾಗಿರುವುದು ; ಆದುದರಿಂದಲೇ ಮೀಮಾಂಸಾ ಶಾಸ್ತ್ರದಲ್ಲಿ **ಸಂತೇವಾತಃ ಪ್ರಣೇತನಗಚ್ಛತಾಂ-ಸಮಂಗಾನಿಯಜತ್ರೈಃ-ಸಂಯಜ್ಞಪತಿರಾಶಿಷಾ** ಎಂಬಲ್ಲಿ ಮೂರನೆಯ ವಾಕ್ಯದಲ್ಲಿ ಸಂ ಎಂಬ ಉಪಸರ್ಗದ ಅನ್ವಯಕ್ಕಾಗಿ ಯೋಗ್ಯವಾದ ಕ್ರಿಯಾಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು ಎಂದು ಪೂರ್ವಪಕ್ಷವನ್ನು ಮಾಡಿ ಮೊದಲನೆಯ ವಾಕ್ಯದಲ್ಲಿರುವ ಗಚ್ಛತಾಂ ಎಂಬುದಕ್ಕೆ ಆವೃತ್ತಿಯನ್ನು ಮಾಡಿ ಅದನ್ನೇ ಸಂಬಂಧಿಸಿಕೊಳ್ಳಬೇಕೆಂದು ಸಿದ್ಧಾಂತವನ್ನು ಮಾಡಿರುವರು. ನಿ-ನಿಪಾತವಾದ್ದರಿಂದ ಆದ್ಯುದಾತ್ತ.

'ಸೀದತ-ಷದ್ಲೃವಿಶರಣಗತ್ಯವಸಾದನೇಷು' **ಧಾತ್ವಾದೇಃಷಃಸಃ** (ಪಾ. ಸೂ. ೬-೧-೬೪) ಎಂಬುದರಿಂದ ಷಕಾರಕ್ಕೆ ಸಕಾರ ಬಂದು ಸದ್ ಆಗುವುದು. ಈ ಧಾತುವಿನ ಮುಂದೆ ಲೋಟ್ ಮಧ್ಯಮಪುರುಷ ಬಹುವಚನ ಥ ಪ್ರತ್ಯಯ, ಅದಕ್ಕೆ ತ ಆದೇಶ. ಮಧ್ಯದಲ್ಲಿ ಶಪ್ ಇದು ಪರದಲ್ಲಿರುವಾಗ **ಪಾಘ್ರಾಧ್ಮಾಸ್ಥಾಮ್ನಾದಾಣ್ದೃಶ್ಯರ್ತಿಸರ್ತಿಶದಸದಾಂಪಿಬಜಿಘ್ರಧಮತಿಷ್ಠಮನಯಚ್ಛಪಶ್ಯರ್ಚ್ಛಧೌಶೀಯಸೀದಾಃ** (ಪಾ. ಸೂ. ೭-೩-೭೮) ಇತ್ಸಂಜ್ಞಕ ಶಕಾರಾದಿ ಪ್ರತ್ಯಯಪರವಾಗಿರುವಾಗ ಪಾ ಮೊದಲಾದ ಧಾತುಗಳಿಗೆ ಪಿಬ ಮೊದಲಾದ ಆದೇಶಗಳು ಕ್ರಮವಾಗಿ ಬರುವುವು. ಸದ್ (ಷದ್ಲೃ-ವಿಶರಣಗತ್ಯವಸಾದನೇಷು) ಎಂಬ ಧಾತುವಿಗೆ ಸೀದ-ಎಂಬ ಆದೇಶಬರುವುದು. ನಿ ಉಪಸರ್ಗವು ಸೇರಿದಾಗ, ಸಂಹಿತಾಕಾಲದಲ್ಲಿ **ಸದಿರಪ್ರತೇಃ** (ಪಾ. ಸೂ. ೮-೩-೬೬) ಪ್ರತಿಭಿನ್ನವಾದ ಉಪಸರ್ಗದ ಮುಂದಿರುವ ಸದ್ ಧಾತುವಿನ ಸಕಾರಕ್ಕೆ ಷಕಾರಬರುವುದು ಎಂಬುದರಿಂದ ಷಕಾರ ಬಂದರೆ 'ನಿಷೀದತ' ಎಂದಾಗುವುದು.

ಇಲ್ಲಿ ಧಾತುಸ್ವರದಿಂದ ಸೀಯ ಈ ಕಾರಕ್ಕೆ ಉದಾತ್ತ ಬಂದರೆ ಸತಿ ಶಿಷ್ಟವಾದ ತ ಪ್ರತ್ಯಯದ ಸ್ವರವು ಪ್ರಬಲವಾದ್ದರಿಂದ ಅದು ನಿಂತು ಶೇಷಾನುದಾತ್ತದಿಂದ ಸೀಯ ಈಕಾರ ಅನುದಾತ್ತವಾಗಬೇಕಾಗಿ ಬಂತು. ಆದರೆ ಇಲ್ಲಿ ತ ಎಂಬುದು ಶಪ್ ಎಂಬ ಅದುಪದೇಶಕ್ಕಿಂತಲೂ ಪರದಲ್ಲಿದೆ. ಆದ್ದರಿಂದ **ತಾಸ್ಯನುದಾತ್ತೇನ್ಙಿದದುಪದೇಶಾಲ್ಲಸಾರ್ವಧಾತುಕಮನುದಾತ್ತಮಹ್ನ್ವಿಙೋಃ** (ಪಾ. ಸೂ. ೬-೧.೧೮೬) ಎಂಬುದರಿಂದ ತ ಎಂಬುದು ಅನುದಾತ್ತ. **ಅನುದಾತ್ತೌಸುಪ್ಪಿತೌ** (ಪಾ. ಸೂ. ೩-೧-೪) ಎಂಬುದರಿಂದ ಶಪ್ ಅನುದಾತ್ತ. ಅಂತು ಧಾತುಸ್ವರವೇ ನಿಲ್ಲಬೇಕಾಗಿ ಬಂತು. ಆದರೂ **ತಿಙ್ಙತಿಙಃ** ಎಂಬುದರಿಂದ ಸೀದತ ಎಂಬುದು ಸರ್ವಾನುದಾತ್ತವಾಗುವುದು. ಸಂಹಿತೆಯಲ್ಲಿ ನಿ ಎಂಬ ಉಪಸರ್ಗದ ಉದಾತ್ತವಾದ ಇಕಾರದ ಮುಂದೆ ಇರುವುದರಿಂದ ಸೀಯ ಈ ಕಾರವು **ಉದಾತ್ತಾದನುದಾತ್ತಸ್ಯಸ್ವರಿತಃ** ಎಂಬುದರಿಂದ ಸ್ವರಿತ. ಈ ಸ್ವರಿತದ ಮುಂದೆ ಇರುವ ದ-ತ ಎರಡಕ್ಕೂ 'ಸ್ವರಿತಾತ್ಸಂಹಿತಾಯಾಮನುದಾತ್ತಾನಾಂ, (ಪಾ. ಸೂ. ೧-೨-೩೯) ಸಂಹಿತೆಯಲ್ಲಿ ಸ್ವರಿತದ ಮುಂದೆ ಇರುವ ಅನುದಾತ್ತಗಳಿಗೆ ಏಕಶ್ರುತಿ (ಪ್ರಚಯ) ಬರುವುದು ಎಂಬುದರಿಂದ ಪ್ರಚಯ ಸ್ವರಪ್ರಾಪ್ತವಾಯಿತು. ಆದರೆ ತ ಎಂಬುದರ ಅಕಾರಕ್ಕೂ ಮುಂದಿರುವ ಇಂದ್ರಶಬ್ದದ ಇಕಾರಕ್ಕೂ ಗುಣರೂಪ ಏಕಾದೇಶವಾಗಿ ಬರುವುದರಿಂದ ಏ ಆಗುವುದು. ಈ ಏ ಎಂಬುದು ಉದಾತ್ತ ಅನುದಾತ್ತಗಳೆರಡರ ಸ್ಥಾನದಲ್ಲಿ ಬಂದಿರುವುದರಿಂದ **ಏಕಾದೇಶ ಉದಾತ್ತೇನೋದಾತ್ತಃ** ಎಂಬುದರಿಂದ ಉದಾತ್ತ. ಈಗ ಉದಾತ್ತವಾದ ಈ ಏಕಾರವು ಪರದಲ್ಲಿರುವುದರಿಂದ ದ ಎಂಬುದರ ಅಕಾರವು **ಉದಾತ್ತಸ್ವರಿತಪರಸ್ಯಸನ್ನತರಃ** ಎಂಬುದರಿಂದ ಅನುದಾತ್ತತರ. ಮೂರನೆಯದು ಮೊದಲು ಹೇಳಿದಂತೆ ಉದಾತ್ತ. ಇಂದ್ರಂ-'ಇದಿಪರಮೈಶ್ವರ್ಯೇ' ಧಾತು ಇದರಮುಂದೆ ಔಣಾದಿಕ ರನ್‌ಪ್ರತ್ಯಯ. ಧಾತುವು ಇದಿತ್ ಆದ್ದರಿಂದ **ಇದಿತೋನುಮ್‌ಧಾತೋಃ** (ಪಾ.ಸೂ. ೭-೧-೫೮) ಇಕಾರೇತ್ಸಂಜ್ಞೆಯನ್ನು ಹೊಂದಿರುವ ಧಾತುವಿನ ಅಂತ್ಯಸ್ವರದ ಮುಂದೆ ನ್ ಆಗಮ ಬರುವುದು ಎಂಬುದರಿಂದ ನ್ ಆಗಮಬಂದರೆ ಇಂದ್ರ ಎಂದಾಗುವು. ಪ್ರತ್ಯಯನಿತ್ ಆದ್ದರಿಂದ ನಿತ್ಸ್ವರದಿಂದ ಇಂದ್ರಶಬ್ದ ಆದ್ಯುದಾತ್ತ, ಶೇಷಾನುದಾತ್ತಸ್ವರದಿಂದ ಕೊನೆಯ ವರ್ಣವಾದ ಅಕಾರ ಅನುದಾತ್ತ. ಇದು ಉದಾತ್ತಕ್ಕಿಂತಲೂ ಪರದಲ್ಲಿರುವುದರಿಂದ ಸ್ವರಿತವಾಗುವುದು. ಇದರ ಮುಂದೆ ದ್ವಿತೀಯಾ ವಿಭಕ್ತಿ ಏಕವಚನ ಅಮ್ ಇದು ಅನುದಾತ್ತ **ಅಮಿಪೂರ್ವಃ** (ಪಾ. ಸೂ. ೬-೧-೧೦೭) ಎಂಬುದರಿಂದ ಅನುದಾತ್ತಗಳಾದ ಎರಡು ಅಕಾರಗಳ ಸ್ಥಾನದಲ್ಲಿ ಒಂದೇ ಅಕಾರ ಬರುವುದು. ಇದು ಅನುದಾತ್ತಗಳೆರಡರ ಸ್ಥಾನದಲ್ಲಿ ಬಂದಿರುವುದರಿಂದ ಸ್ಥಾನಿವದ್ಭಾವದಿಂದ ಅನುದಾತ್ತ. ಈ ಅನುದಾತ್ತವು ಉದಾತ್ತದ ಮುಂದೆ ಇರುವುದರಿಂದ ಸ್ವರಿತವಾಗುವುದು.

**ಅಭಿ-ಉ** ಎಂದು ಹೇಳಿರುವುದರಿಂದ ಆದ್ಯುದಾತ್ತ ಬರುವುದಿಲ್ಲ- ಇಲ್ಲಿ **ಅಂತೋದಾತ್ತಸ್ತ್ವಭೀತ್ಯಯಂ** ಎಂಬ ವಚನದಿಂದ **ಲೋಪೇ ಸೋಂತ ಉದಾತ್ತಃ** (ಫಿ ಸು. ೧) ಎಂಬ ಸೂತ್ರದಿಂದ **ಲೋ ಅಭಿ** ಎಂಬುದು **ಅಂತೋದಾತ್ತ**-

**ಪ್ರ**-ಇದು ನಿಪಾತ. ಆದ್ದರಿಂದ **ನಿಪಾತಾ ಆದ್ಯುದಾತ್ತಾಃ** (ಫಿ.ಸೂ. ೮೦) ಎಂಬುದರಿಂದ ಆದ್ಯುದಾತ್ತ ಅಥವಾ ಉಪಸರ್ಗವಾದ್ದರಿಂದ **ಉಪಸರ್ಗಾಶ್ಚಾಭಿವರ್ಜಂ**(ಫಿ.ಸೂ. ೮೧) ಎಂಬುದರಿಂದ ಆದ್ಯುದಾತ್ತ **ಗಾಯತ** 'ಗೈ ಶಬ್ದೇ' ಧಾತು. ಇದರ ಮುಂದೆ ಲೋಟ್ ಮಧ್ಯಮಪುರುಷ ಬಹುವಚನ ಥ ಪ್ರತ್ಯಯ, ಅದಕ್ಕೆ ತ ಆದೇಶ, ಶಪ್ ವಿಕರಣ, ಗೈ+ಅ+ತ. ಈಗ **ಏಚೋಽಯವಾಯಾವಃ** (ಪಾ. ಸೂ. ೬-೧-೭೮) ಎಂಬುದರಿಂದ ಐಗೆ ಆಯ್ ಆದೇಶ ಗಾಯತ ಎಂದು ರೂಪವಾಗುವುದು. ಇಲ್ಲಿ ಧಾತು ಸ್ವರದಿಂದ ಧಾತುವಿನ ಕೊನೆಯ ವರ್ಣ ಉದಾತ್ತ ತ ಎಂಬುದು ಪ್ರತ್ಯಯಸ್ವರದಿಂದ ಆದ್ಯುದಾತ್ತ. ಇದು ಸತಿಶಿಷ್ಟವಾದ್ದರಿಂದ ಪ್ರಬಲ. ಆದ್ದರಿಂದ ಶೇಷಾನುದಾತ್ತದಿಂದ ಧಾತುವಿನಕೊನೆಯ ವರ್ಣವೂ ಅನುದಾತ್ತ ಶಪ್ ಪಿತ್ತಾದ್ದರಿಂದ ಅನುದಾತ್ತವಾಗಬೇಕಾಗಿ ಬಂತು. ಆದರೆ ಶಪ್ ಎಂಬ ಅದುಪದೇಶದ ಮುಂದೆ ತ ಎಂಬ ಲ ಸ್ಥಾನಿಕವಾದ ಸಾರ್ವಧಾತುಕವಿರುವುದರಿಂದ **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ತ ಅನುದಾತ್ತ. ಏವಂಚ ಧಾತುಸ್ವರವೇ ನಿಂತು ಗಾಯತ ಎಂಬುದು ಆದ್ಯುದಾತ್ತವಾಗಬೇಕಾಯಿತು. ಆದರೂ **ತಿಙ್ಙತಿಙಃ** ಎಂಬುದರಿಂದ ಇದು ಸರ್ವಾನುದಾತ್ತ. **ಸಂಹಿತಾಕಾಲದಲ್ಲಿ** ಪ್ರ ಎಂಬ ಉದಾತ್ತದ ಮುಂದೆ ಇರುವುದರಿಂದ ಗಾ ಎಂಬುದು ಸ್ವರಿತ. ಇದರ ಮುಂದಿರುವ ವರ್ಣಗಳೆರಡೂ **ಸ್ವರಿತಾತ್ಸಂಹಿತಾಯಾ** ಎಂಬುದರಿಂದ ಪ್ರಚಯ. **ಸ್ತೋಮವಾಹಸಃ-ಅರ್ತಿಸ್ತುಸುಹುಸೃಧೃಕ್ಷಿಕ್ಷುಭಾಯಾವಾಪದಿಯಕ್ಷಿನೀಭ್ಯೋಮನ್**(ಉ.ಸೂ. ೧-೧೩೭)ಈ ಧಾತುಗಳ ಮುಂದೆ ಮನ್ ಪ್ರತ್ಯಯಬರುವುದು, ಎಂಬುದರಿಂದ ಸ್ತು (ಷ್ಟುಞ್ ಸ್ತುತೌ) ಧಾತುವಿನ ಮುಂದೆ ಮನ್ ಪ್ರತ್ಯಯ ಬಂದರೆ-ಸ್ತೋಮಎಂದಾಗುವುದು ಮನ್ ಪ್ರತ್ಯಯವು ನಿತ್ತಾದ್ದರಿಂದ ನಿತ್ಸ್ವರ ಆದ್ಯುದಾತ್ತ ಬರುವುದು. **ಸ್ತೋಮಂವಹನ್ತೀತಿ** (**ತ್ರಿವೃತ್** ಮೊದಲಾದ ಸ್ತೋಮಗಳನ್ನು ಈ ಕರ್ಮದಲ್ಲಿ ಹೊಂದಿಸುವರು) ಎಂದು ವಿಗ್ರಹವು. **ವಹಿ ಹಾ ಧಾ ಞ್ ಭ್ಯಶ್ಛಂದಸಿ** (ಉ. ಸೂ. ೪-೬೬೦) ಛಂದಸ್ಸಿನಲ್ಲಿ ಈ ಧಾತುಗಳ ಮುಂದೆ ಅಸುನ್ ಪ್ರತ್ಯಯ ಬರುವುದು ಅದು ಣಿತ್ತಾಗುವುದು ಎಂಬುದರಿಂದ ವಹಧಾತುವಿನ ಮುಂದೆ ಅಸುನ್ ಪ್ರತ್ಯಯ ಬಂದರೆ ಪ್ರತ್ಯಯವು ಣಿತ್ತಾದ್ದರಿಂದ **ಅತ ಉಪಧಾಯಾಃ** (ಪಾ ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ ಬಂದರೆ ಸ್ತೋಮವಾಹಸಃ ಎಂದಾಗುವುದು. ಇಲ್ಲಿ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨ ೧೩೯) ಕೃದುತ್ತರಪದಪ್ರಕೃತಿಸ್ವರ ಪ್ರಾಪ್ತವಾದರೆ **ಗತಿಕಾರಕಯೋರಪಿ ಪೂರ್ವಪದ ಪ್ರಕೃತಿಸ್ವರತ್ವಂಚ** (ಉ ಸೂ ೪-೬೬೬) ಗತಿಕಾರಕಗಳು ಉಪಪದವಾಗಿರುವಾಗ ಪೂರ್ವಪದಪ್ರಕೃತಿಸ್ವರಬರುವುದು ಎಂಬ ಔಣಾದಿಕ ಸೂತ್ರದಿಂದ ಪೂರ್ವಪದಪ್ರಕೃತಿಸ್ವರಬಂದು ಸಮಾಸವು ಆದ್ಯುದಾತ್ತವಾಗುವುದು. ॥ ೧ ॥

॥ ಸಂಹಿತಾಪಾಠಃ ॥

ಪುರೂತಮಂ ಪುರೂಣಾಮೀಶಾನಂ ವಾರ್ಯಾಣಾಂ ।
ಇಂದ್ರಂ ಸೋಮೇ ಸಚಾ ಸುತೇ ॥ ೨ ॥

॥ ಪದಪಾಠಃ ॥

ಪುರುಽತಮಂ । ಪುರೂಣಾಂ । ಈಶಾನಂ । ವಾರ್ಯಾಣಾಂ ॥
ಇಂದ್ರಂ । ಸೋಮೇ । ಸಚಾ । ಸುತೇ ॥ ೨ ॥

॥ ಸಾಯಣಭಾಷ್ಯಂ ॥

ಸಖಾಯೋಽಭಿಪ್ರಗಾಯತೇತಿ ಪದದ್ವಯಮತ್ರಾನುವರ್ತತೇ । ಹೇ ಸಖಾಯ ಋತ್ವಿಜಃ ಸಚಾ ಯೂಯಂ ಸರ್ವೈಃ ಸಹ । ಯದ್ವಾ । ಸಚಾ ಪರಸ್ಪರಸಮವಾಯೇನ ಸುತೇಽಭಿಷುತೇ ಸೋಮೇ ಪ್ರವೃತ್ತೇ ಸತೀಂದ್ರಮಭಿಪ್ರಗಾಯತ । ಕೀದೃಶಮಿಂದ್ರಂ । ಪುರೂತಮಂ । ಪುರೂನ್ಬಹೂಞ್ಛತ್ರೂಂಸ್ತಮಯತಿ ಗ್ಲಾಪಯತೀತಿ ಪುರೂತಮಃ । ಪುರೂಣಾಂ ಬಹೂನಾಂ ವಾರ್ಯಾಣಾಂ ವರಣೀಯಾನಾಂ ಧನಾನಾಮೀಶಾನಂ ಸ್ವಾಮಿನಂ ॥ ಪುರೂತಮಂ । ತಮು ಗ್ಲಾನ ಇತಿ ಧಾತೋರಂತರ್ಭಾವಿತಣ್ಯರ್ಥಾತ್ಪಚಾದ್ಯಚಿ ಚಿತ್ತ್ವಾದಂತೋದಾತ್ತೇಽಪಿ ಕೃದುತ್ತರಪದಪ್ರಕೃತಿಸ್ವರತ್ವಂ ಬಾಧಿತ್ವಾ ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ಪುರೂಣಾಂ । ಪೄ ಪಾಲನಪೂರಣಯೋರಿತ್ಯಸ್ಮಾತ್ ಕುರಿತ್ಯನುವೃತ್ತೌ ಪೄಭಿದಿವ್ಯಧಿಗೃಧಿಧೃಷಿದೃಶಿಭ್ಯಃ । ಉ. ೧-೨೪ । ಇತಿ ಕುಪ್ರತ್ಯಯಃ । ಕಿತ್ತ್ವಾದ್ಗುಣನಿಷೇಧೇ । ಪಾ. ೧-೧-೫ । ಉದೋಷ್ಠ್ಯಪೂರ್ವಸ್ಯ । ಪಾ. ೭-೧-೧೦೨ । ಇತ್ಯುಕಾರಃ । ಉರಣ್ ರಪರಃ । ಪಾ. ೧-೧-೫೧. ಪ್ರತ್ಯಯಸ್ವರೇಣಾಂತೋದಾತ್ತಃ ಪುರುಶಬ್ದಃ । ಅತೋ ನುಮಿ ಹ್ರಸ್ವಾದಂತೋದಾತ್ತಾತ್ಪುರುಶಬ್ದಾತ್ಪರಸ್ಯ ನಾಮೋ ನಾಮನ್ಯತರಸ್ಯಾಂ । ಪಾ. ೬-೧-೧೭೭ । ಇತ್ಯಂತೋದಾತ್ತತ್ವಂ । ಈಶಾನಂ । ಈಶ ಐಶ್ವರ್ಯ ಇತಿ ಧಾತೋರನುದಾತ್ತೇತ್ತ್ವಾತ್ಪರಸ್ಯ ಶಾನಚೋ ಲಸಾರ್ವಧಾತುಕಾನುದಾತ್ತತ್ವಂ । ವಾರ್ಯಾಣಾಂ । ವೃಞ್ ಸಂಭಕ್ತಾವಿತ್ಯಸ್ಮಾದೃಹಲೋರ್ಣ್ಯತ್ । ಪಾ. ೩-೧-೧೨೪ । ಕ್ಯಬ್ವಿಧೌ ಹಿ ವೃಞ ಏವ ಗ್ರಹಣಂ ನ ವೃಙಃ । ಪಾ. ೩-೧-೧೦೯-೧ । ತಿತ್ಸ್ವರಿತಂ । ಪಾ. ೬-೧-೧೮೫ । ಇತಿ ಪ್ರತ್ಯಯಸ್ವರಿತಂ ಬಾಧಿತ್ವಾ ಈಡವಂದವೃಶಂಸದುಹಾಂ ಣ್ಯತಃ । ಪಾ. ೬-೧-೨೧೪ । ಇತಿ ಣ್ಯದಂತಸ್ಯಾದ್ಯುದಾತ್ತತ್ವಂ । ಯತೋಽನಾವಃ । ಪಾ. ೬-೧-೨೧೩ । ಇತ್ಯತ್ರ ತು ಣ್ಯತೋ ಗ್ರಹಣಂ ನ ಭವತಿ ತಸ್ಯ ದ್ವ್ಯನುಬಂಧಕತ್ವಾತ್ । ಏಕಾನುಬಂಧಗ್ರಹಣೇ ನ ದ್ವ್ಯನುಬಂಧಕಸ್ಯೇತಿ ನಿಯಮಾತ್ । ಸಚಾ । ಷಚ ಸಮವಾಯೇ ಧಾತ್ವಾದೇಃ ಷಃ ಸಃ। ಪಾ. ೬-೧-೬೪। ಸಂಪದಾದಿತ್ವಾದ್ಭಾವೇ ಕ್ವಿಪ್ । ಪಾ. ೩-೩-೧೦೮-೯ । ಇತಿ ಕ್ವಿಪ್। ತೃತೀಯೈಕವಚನಂ । ಧಾತುಸ್ವರೇಣಾದ್ಯುದಾತ್ತಃ । ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ । ಪರಿ. ೩೫। ಇತಿ ನ್ಯಾಯೇನ ಸಾವೇಕಾಚ ಇತಿ ಸೂತ್ರಂ ನ ಪ್ರವರ್ತತೇ । ಸಚೇತ್ಯಸ್ಯ ನಿಪಾತತ್ವಪಕ್ಷೇ ಸ್ಪಷ್ಟಮಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಸಚಾ**—(ಎಲ್ಲರೂ ಎಂದರೆ ಋತ್ವಿಗ್ಯಜಮಾನಾದಿಯಾಗಿ ಎಲ್ಲರೂ) ಸೇರಿ ಅಥವಾ ಪರಸ್ಪರ ಮಿಳಿತವಾಗಿ । **ಸೋಮೇ**–ಸೋಮರಸವು । **ಸುತೇ**–ಸಿದ್ಧಪಡಿಸಲಾಗಿ (ಸಿದ್ಧಪಡಿಸಿದ ಮೇಲೆ) । (ಹೇ ಸಖಾಯಃ—

ಎಲೈ ಸ್ನೇಹಿತರೇ ಅಥವಾ ಋತ್ವಿಜರೇ) | **ಪುರುತಮಂ**—ಶತ್ರುನಾಶಕನಾದ | **ಪುರೂಣಾಂ**—ಬಹಳವಾದ | **ವಾರ್ಯಾಣಾಂ**—ಧನಾದ್ಯೈಶ್ವರ್ಯಗಳಿಗೆ | **ಈಶಾನಂ**—ಸ್ವಾಮಿಯಾದ | **ಇಂದ್ರಂ**—ಇಂದ್ರನನ್ನು| (ಅಭಿ ಪ್ರ ಗಾಯತ—ಚೆನ್ನಾಗಿ ಸ್ತೋತ್ರಮಾಡಿರಿ)

॥ ಭಾವಾರ್ಥ ॥

ಎಲೈ ಋತ್ವಿಗ್ಯಜಮಾನಾದಿ ಸ್ನೇಹಿತರೇ, ನೀವು ಎಲ್ಲರೂ ಸೇರಿ ಈ ಯಜ್ಞದಲ್ಲಿ ಸೋಮರಸವನ್ನು ಸಿದ್ಧಪಡಿಸಿದಮೇಲೆ ಶತ್ರುಸಂಹಾರಕನೂ, ಅಪಾರವಾದ ಐಶ್ವರ್ಯಕ್ಕೆ ಒಡೆಯನೂ ಆದ ಇಂದ್ರನನ್ನು ಸ್ತೋತ್ರಮಾಡಿರಿ

English Translation.

O friends (preists), when soma is pressed sing along with others (or in a body) Indra, the subduer of many foes and the lord of many riches.

॥ ವಿಶೇಷ ವಿಷಯಗಳು ॥

ಈ ಋಕ್ಕಿನಲ್ಲಿ ಕರ್ತೃವಾಗಲಿ, ಕ್ರಿಯಾಪದವಾಗಲಿ ಇಲ್ಲದಿರುವುದರಿಂದ ಹಿಂದಿನ ಋಕ್ಕಿನಲ್ಲಿ ಹೇಳಿರುವ **ಸಖಾಯಃ**-ಎಂಬ ಕರ್ತೃಪದವನ್ನೂ **ಅಭಿ ಪ್ರ ಗಾಯತ** ಎಂಬ ಕ್ರಿಯಾಪದವನ್ನೂ ಅಧ್ಯಾಹಾರಮಾಡಿಕೊಳ್ಳಬೇಕೆಂದು ಭಾಷ್ಯಕಾರರು ಹೇಳಿರುವರು. ಆದುದರಿಂದ ಹಿಂದಿನ ಋಕ್ಕಿನ ಅರ್ಥವನ್ನೇ ಈ ಋಕ್ಕಿನಲ್ಲಿ ಮುಂದುವರಿದು ಹೇಳಿರುವುದೆಂದು ಭಾವಿಸಬೇಕು.

**ಪುರುತಮಃ**—ಈ ಶಬ್ದಕ್ಕೆ ಭಾಷ್ಯಕಾರರು, ಶತ್ರುವನ್ನು ದಮನಮಾಡುವನೆಂದು ಹೇಳಿರುವರು. ಸ್ಕಂದಸ್ವಾಮಿಯು-" **ಪುರುತಮಂ | ಪುರುಶಬ್ದೋ ಬಹುನಾಮ | ತಮು ಅಭಿಕಾಂಕ್ಷಾಯಾಂ | ಬಹುಭಿರ್ಯೋಽಭಿಕಾಂಕ್ಷ್ಯತೇ ಪ್ರಾರ್ಥ್ಯತೇ ಯಾಚ್ಯತೇ ಸ ಪುರುತಮಸ್ತಂ ಪುರುತಮಂ** " ಎಂದರೆ, **ಪುರು** ಎಂಬ ಶಬ್ದಕ್ಕೆ ಬಹು, ಅನೇಕ ಎಂದರ್ಥವು. **ತಮು** ಎಂಬ ಧಾತುವಿಗೆ ಅಪೇಕ್ಷಿಸು, ಯಾಚಿಸು, ಪ್ರಾರ್ಥಿಸು ಎಂದರ್ಥವು. ಆದುದರಿಂದ ಪುರುತಮಂ ಎಂಬ ಶಬ್ದಕ್ಕೆ ಅನೇಕರಿಂದ ಪ್ರಾರ್ಥಿಸಲ್ಪಟ್ಟ, ಅನೇಕರಿಗೆ ಇಷ್ಟನಾದ, ಬೇಕಾದವನಾದ ಎಂದರ್ಥವು. ವೆಂಕಟಮಾಧವರೂ ಸಾಯಣರ ಅರ್ಥವನ್ನೇ ಅನುಮೋದಿಸಿರುವರು.

ಸಚಾ—ಸಹಿತವಾಗಿ, ಒಟ್ಟಾಗಿ, ಕಲೆತು ಇತ್ಯಾದಿ. ಈ ಶಬ್ದದ ಪ್ರಯೋಗವು ಋಗ್ವೇದದಲ್ಲಿ ೧-೫-೨ ; ೧-೭-೨ , ೧-೯-೩ , ೧-೧೦-೪ ; ೧-೪೦-೧ , ೧-೫೦-೧೧ ಮೊದಲಾದ ೮೮ ಋಕ್ಕುಗಳಲ್ಲಿರುವುದು.

॥ ವ್ಯಾಕರಣಪ್ರಕ್ರಿಯಾ ॥

ಪುರೂತಮಂ—ತಮು ಗ್ಲಾನೇ ಎಂಬ ಅಂತರ್ಭಾವಿತ ಣಿಚ್ಪ್ರತ್ಯಯಾರ್ಥಕ ಧಾತುವಿನ ಮುಂದೆ **ನಂದಿಗ್ರಹಿಪಚಾದಿಭ್ಯೋಲ್ಯುಣಿನ್ಯಚಃ** (ಪಾ. ಸೂ. ೩-೧-೧೩೪) ಎಂಬುದರಿಂದ ಇದು ಪಚಾದಿಯಾದ್ದರಿಂದ ಅಚ್ಪ್ರತ್ಯಯ ಬಂದರೆ ಪ್ರತ್ಯಯವು ಚಿತ್ತಾದ್ದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತ. ಆದಾಗ್ಯೂ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬ ಕೃದುತ್ತರ ಪದಪ್ರಕೃತಿಸ್ವರ

ವನ್ನು ಬಾಧಿಸಿ **ಪರಾದಿಶ್ಛಂದಸಿಬಹುಲಂ** (ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದದ ಆದಿಯು ಉದಾತ್ತವಾಗುವುದು. **ಪುರೂಣಾಂ ಪ್ಯಾ ಭಿದಿ ವ್ಯಧಿ ಗೃಧಿ ಧೃಷಿಭ್ಯಃ** (ಉ. ಸೂ. ೧-೨೩) ಪ್ಯಾ ಪಾಲನ ಪೂರಣಯೋಃ, ಭಿದಿರ್ ವಿದಾರಣೇ, ವ್ಯಧ ತಾಡನೇ, ಗೃಧು ಅಭಿಕಾಂಕ್ಷಾಯಾಂ, ಞಿ ಧೃಷಾಪ್ರಾಗಲ್ಭ್ಯೇ ಎಂಬ ಧಾತುಗಳ ಮುಂದೆ ಕು- ಪ್ರತ್ಯಯ ಬರುವುದು. ಎಂಬುದರಿಂದ ಕುಪ್ರತ್ಯಯ ಬಂದರೆ ಕ್ ಗೆ 'ಲಶಕ್ವತದ್ಧಿತೇ' (ಪಾ. ಸೂ. ೧-೩-೮) ತದ್ಧಿತಭಿನ್ನಪ್ರತ್ಯಯಾದಿಯಾದ ಲಕಾರ ಶಕಾರ ಕವರ್ಗಗಳಿಗೆ ಇತ್ಸಂಜ್ಞೆಬರುವುದು ಎಂದು ಇತ್ಸಂಜ್ಞೆ ಬಂದು ಲೋಪ ಬಂದರೆ ಪ್ಯಾ+ಉ-**ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಗುಣಪ್ರಾಪ್ತವಾದರೆ ಪ್ರತ್ಯಯವು ಕ್ಕಿತ್ತಾದ್ದರಿಂದ **ಕ್ಕಿತಿಚ** (ಪಾ. ಸೂ. ೧-೧-೫) ಎಂಬುದರಿಂದ ಗುಣಕ್ಕೆ ನಿಷೇಧ ಬರುವುದು. **ಉದೋಷ್ಠ್ಯ ಪೂರ್ವಸ್ಯ** (ಪಾ. ಸೂ. ೭-೧-೧೦೨) ಅಂಗಾವಯುವವಾದ ಓಷ್ಠ್ಯ ವರ್ಣದ ಅಂದರೆ ಉಕಾರ ಪವರ್ಗಗಳ ಮುಂದಿರುವ ಋಕಾರವನ್ನು ಕಡೆಯಲ್ಲಿ ಹೊಂದಿರುವ ಅಂಗಕ್ಕೆ ಉತ್ ಆದೇಶಬರುವುದು. ಉತ್ ನ ತ್‌ಗೆ ಇಂತ್ಸಂಜ್ಞಾಲೋಪಗಳು ಬರುವುವು. **ಉರಣ್ರಪರಃ** (ಪಾ ಸೂ. ೧-೧-೫೧) ಋಕಾರಸ್ಥಾನದಲ್ಲಿ ಬರುವ ಅ ಇ ಉ ವರ್ಣಗಳು ರೇಫಶಿರಸ್ಕವಾಗಿ ಬರುವುವು ಎಂಬುದರಿಂದ ರೇಫಶಿರಸ್ಕವಾಗಿ ಉ-ಬಂದರೆ ಪುರು ಎಂದಾಗುವುದು. ಇದು ಪ್ರತ್ಯಯ ಸ್ವರದಿಂದ ಅಂತೋದಾತ್ತ. ಆದ್ದರಿಂದ ಮತುಪ್ ಪ್ರತ್ಯಯವನ್ನು ಮಾಡಿದಾಗ ಹ್ರಸ್ವಾಂತವಾಗಿಯೂ ಅಂತೋದಾತ್ತವಾಗಿಯೂ ಇರುವ ಪುರು ಶಬ್ದದ ಮುಂದೆ ಬಂದಿರುವ ಷಷ್ಠೀ ಬಹುವಚನ ನಾಮ್ ಎಂಬುದು **ನಾಮನ್ಯ ತರಸ್ಯಾಂ** (ಪಾ. ಸೂ. ೬-೧-೧೭೭) ಎಂಬುದರಿಂದ ಉದಾತ್ತವಾಗುವುದು. **ಈಶಾನಂ**—ಈಶ ಐಶ್ವರ್ಯೇ ಎಂಬ ಧಾತುವಿನ ಮುಂದೆ ಲಟ್ಪ್ರತ್ಯಯ. ಅದಕ್ಕೆ ಶಾನಚ್ ಆದೇಶ ಬಂದರೆ ದ್ವಿತೀಯಾ ಏಕವಚನದಲ್ಲಿ ಈಶಾನಂ ಎಂದಾಗುವುದು. ಈಶಧಾತುವು ಅನುದಾತ್ತೇತ್ತು- ಆದ್ದರಿಂದ ಅದರ ಮುಂದೆ ಇರುವ ಲಸ್ಥಾನಿಕ ಸಾರ್ವಧಾತುಕವಾದ ಶಾನಚ್ಚಿಗೆ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತ ಬರುವುದು. **ವಾರ್ಯಾಣಾಂ**-ವೃಙ್ ಸಂಭಕ್ತೌ ಎಂಬಧಾತುವಿನ ಮುಂದೆ **ಋಹಲೋರ್ಣ್ಯತ್** (ಪಾ. ಸೂ. ೩-೧-೧೨೪) ಋಕಾರ ಅಥವಾ ವ್ಯಂಜನಗಳನ್ನು ಕೊನೆಯಲ್ಲಿ ಹೊಂದಿರುವ ಧಾತುವಿನ ಮುಂದೆ ಣ್ಯತ್ ಎಂಬ ಪ್ರತ್ಯಯ ಬರುವುದು ಎಂಬುದರಿಂದ ಣ್ಯತ್ ಪ್ರತ್ಯಯ ಬರುವುದು. ಆದರೆ **ಏತಿಸ್ತುಶಾಸ್ವೃದೃಜುಷಃಕ್ಯಪ್** (ಪಾ. ಸೂ. ೩-೧-೧೦೯) ಇಣ್-ಷ್ಟುಞ್-ಶಾಸು-ವೃ-ದೃ ಜುಷ್ ಧಾತುಗಳ ಮುಂದೆ ಕ್ಯಪ್ ಬರುವುದು ಎಂಬ ಸೂತ್ರದಲ್ಲಿ ವೃ. ಎಂಬುದರಿಂದ **ಕ್ಯಬ್ವಿಧೌವೃಞ್‌ಗ್ರಹಣಂ** (ಪಾ ಮ. ೩-೧-೧೦೯) ಎಂಬ ಮಹಾಭಾಷ್ಯದ ಅನುಶಾಸನದಿಂದ ವೃಞ್‌ವರಣೇ ಎಂಬುದನ್ನೇ ತೆಗೆದುಕೊಳ್ಳಬೇಕು. ವೃಙ್ ಸಂಭಕ್ತೌ ಎಂಬುದನ್ನು ತೆಗೆದುಕೊಳ್ಳಲಾಗುವುದಿಲ್ಲ. ಆದ್ದರಿಂದ ವೃಙ್‌ಧಾತುವಿನ ಮುಂದೆ ಪೂರ್ವೋಕ್ತ ಸೂತ್ರದಿಂದ ಕ್ಯಪ್ ಬರುವುದಿಲ್ಲ. **ತಿತ್ಸ್ವರಿತಮ್** (ಪಾ. ಸೂ. ೬-೧-೧೮೫) ತಕಾರೇತ್ಸಂಜ್ಞಕ ಪ್ರತ್ಯಯವು ಸ್ವರಿತವಾಗುವುದು. ಎಂಬುದರಿಂದ ಬರುವ ಸ್ವರಿತವನ್ನು ಬಾಧಿಸಿ **ಈಡವನ್ದವೃಶಂಸದುಹಾಂಣ್ಯತಃ** (ಪಾ. ಸೂ. ೬-೧-೨೧೪) ಣ್ಯತ್ ಪ್ರತ್ಯಯಾಂತವಾದ ಈ ಧಾತುಗಳ ಆದಿಯು ಉದಾತ್ತವಾಗುವುದು ಎಂಬುದರಿಂದ ವಾರ್ಯ ಎಂಬಣ್ಯದಂತದ ಆದಿಯು ಉದಾತ್ತ ಈಡ ವನ್ದ ಎಂದು ಆತ್ಮನೇ ಪದಧಾತುಗಳ ಸಾಹಚರ್ಯದಿಂದಸೂತ್ರದಲ್ಲಿರುವ ವೃ ಎಂಬುದರಿಂದ ಆತ್ಮನೇಪದಿಯಾದ ವೃಙ್‌ಧಾತುವಿಗೆ ಗ್ರಹಣವು ಈ ಸೂತ್ರದಲ್ಲಿ ಆಗುವುದು ಣ್ಯತ್ ಪ್ರತ್ಯಯದಲ್ಲಿ ಣಕಾರ ತಕಾಗಳಿಗೆ ಇತ್ಸಂಜ್ಞೆ ಯತ್ ಪ್ರತ್ಯಯದ ತಕಾರಕ್ಕೆ ಮಾತ್ರ ಇತ್ಸಂಜ್ಞೆ ಎರಡರಲ್ಲಿಯೂ ಯ ಎಂದೇನಿಲ್ಲುವುದು. ಇಲ್ಲಿ **ಯತೋಽನಾವಃ** (ಪಾ. ಸೂ. ೬-೧-೨೧೩) ನೌ ಎಂಬುದನ್ನುಳಿದು ಯತ್ಪ್ರತ್ಯಯಾಂತ ಶಬ್ದವು ಎರಡು ಅಚ್ಚುಗಳನ್ನು ಹೊಂದಿದ್ದರೆ ಅದರ ಅದಿಯು ಉದಾತ್ತವಾಗುವುದು ಎಂಬುದರಿಂದಲೇ ಆದ್ಯುದಾತ್ತಬರಲಿ ಎಂದು ಆಕ್ಷೇಪಿಸಬಹುದು. ಆದರೆ ಯತ್ ಪ್ರತ್ಯಯವು ಏಕಾನುಬಂಧಕ (ಇತ್ಸಂಜ್ಞಕವಾದ ಒಂದು ವರ್ಣವನ್ನು

ಹೊಂದಿರುವುದು) ಣ್ಯತ್ ಪ್ರತ್ಯಯವು ದ್ವ್ಯನುಬಂಧಕ (ಇತ್ಸಂಜ್ಞಕವಾದ ಎರಡು ವರ್ಣಗಳನ್ನು ಹೊಂದಿರುವುದು.) ಆದ್ದರಿಂದ **ಏಕಾನುಬಂಧಗ್ರಹಣೇ ನ ದ್ವ್ಯನುಬಂಧಕಸ್ಯ**–ಏಕಾನುಬಂಧಕಕ್ಕೆ ಗ್ರಹಣವಿರುವಲ್ಲಿ ದ್ವ್ಯನುಬಂಧಕಕ್ಕೆ ಗ್ರಹಣಬರುವುದಿಲ್ಲ ಎಂಬ ನಿಯಮದಿಂದ ಯತ್ ಎಂಬುದರಿಂದ ಣ್ಯತ್ತನ್ನು ಗ್ರಹಿಸಲಾಗುವುದಿಲ್ಲ ಆದ್ದರಿಂದ **ಯತೋಽನಾವಃ** (ಪಾ. ಸೂ ೬-೧-೨೧೩) ಎಂಬುದು ಇಲ್ಲಿ ಬರುವುದಿಲ್ಲ **ಸಚಾ**–ಷಚ ಸಮವಾಯೇ ಎಂಬ ಧಾತು. **ಧಾತ್ವಾದೇಃ ಷಃ ಸಃ** (ಪಾ. ಸೂ. ೬-೧-೬೪) ಧಾತುವಿನ ಆದಿಯಲ್ಲಿರುವಷಕಾರಕ್ಕೆ ಸಕಾರ ಬರುವುದು ಎಂಬುದರಿಂದ ಷಕಾರಕ್ಕೆ ಸಕಾರಬರುವುದು **ಸಂಪದಾದಿಭ್ಯಃ ಕ್ವಿಪ್** (ಪಾ. ಸೂ. ೩-೩-೧೦೮) ಎಂಬುದರಿಂದ ಕ್ವಿಪ್ ಬರುವುದು. ಸಚಾಎಂಬುದು ತೃತೀಯಾ ಏಕವಚನಾಂತ ಧಾತುಸ್ವರದಿಂದ ಆದ್ಯುದಾತ್ತವಾಗುವುದು. **ಸರ್ವೇವಿಧಯಶ್ಛಂದಸಿ ವಿಕಲ್ಪ್ಯಂತೇ** (ಪರಿಭಾ. ೩೫) ಛಂದಸ್ಸಿನಲ್ಲಿ ಎಲ್ಲಾ ಗಳಿಗೂ ವಿಧಿವಿಕಲ್ಪವಿರುವುದು. ಎಂಬುದರಿಂದ 'ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ' (ಪಾ.ಸೂ. ೬,೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತ ಬರುವುದಿಲ್ಲ. ಸಚಾ ಎಂಬುದು ನಿಪಾತ ಎಂಬ ಪಕ್ಷದಲ್ಲಿ **ನಿಪಾತಾ ಆದ್ಯುದಾತ್ತಾಃ** (ಫಿ. ಸೂ. ೮೦) ಎಂಬುದರಿಂದ ಆದ್ಯುದಾತ್ತವಾಗುವುದು ಎಂಬುದು ಸ್ಪಷ್ಟವಾಗಿರುವುದು ||೨||

|| ಸಂಹಿತಾಪಾಠಃ ||

## ಸ ಘಾ ನೋ ಯೋಗ ಆ ಭುವತ್ಸ ರಾಯೇ ಸ ಪುರಂಧ್ಯಾಂ |
## ಗಮದ್ವಾಜೇಭಿರಾ ಸ ನಃ || ೩ ||

|| ಪದಪಾಠಃ ||

**ಸಃ | ಘ | ನಃ | ಯೋಗೇ | ಆ | ಭುವತ್ | ಸಃ | ರಾಯೇ | ಸಃ | ಪುರಂ ಽ ಧ್ಯಾಂ ||**
**ಗಮತ್ | ವಾಜೇಭಿಃ | ಆ | ಸಃ | ನಃ || ೩ ||**

|| ಸಾಯಣಭಾಷ್ಯಂ ||

**ಘ ಶಬ್ದೋಽವಧಾರಣಾರ್ಥೋ ನಿಪಾತಃ ಸರ್ವೈಸ್ತಚ್ಛಬ್ದೈಃ ಸಂಬಧ್ಯತೇ | ಸ ಘ ಸ ಏವೇಂದ್ರಃ ಪೂರ್ವಮಂತ್ರೋಕ್ತಗುಣವಿಶಿಷ್ಟೋ ನೋಽಸ್ಮಾಕಂ ಯೋಗೇ ಪೂರ್ವಮಪ್ರಾಪ್ತಸ್ಯ ಪುರುಷಾರ್ಥಸ್ಯ ಸಂಬಂಧ ಆ ಭುವತ್ | ಆಭವತು | ಪುರುಷಾರ್ಥಂ ಸಾಧಯತ್ವಿತ್ಯರ್ಥಃ | ಸ ಏವ ರಾಯೇ ಧನಾರ್ಥಮಾ ಭುವತ್ | ಆಭವತು | ಸ ಏವ ಪುರಂಧ್ಯಾಂ ಯೋಷಿತ್ಯಾ ಭುವತ್| ಯದ್ವಾ ಬಹುವಿಧಾಯಾಂ ಬುದ್ಧಾವಾ ಭುವತ್ | ಪುರಂಧಿರ್ಬಹುಧೀಃ | ನಿ. ೬-೧೩ | ಇತಿ ಯಾಸ್ಕಃ | ಸ ಏವ ವಾಜೇಭಿರ್ದೇಯೈರನ್ನೈಃ**

ಸಹ ನೋಽಸ್ಮಾನಾ ಗಮತ್ | ಆಗಚ್ಛತು || ಘ | ಚಾದಯೋಽನುದಾತ್ತಾ ಇತ್ಯನುದಾತ್ತಃ | ಸಂಹಿತಾಯಾಮೃಚಿ ತುನುಘಮಕ್ಷುತಙ್ಕುತ್ರೋರುಷ್ಯಾಣಾಂ | ಪಾ. ೬-೩-೧೩೩ | ಇತಿ ದೀರ್ಘಃ | ಯೋಗೇ | ಘಞಿಃ ಞಿತ್ವಾದಾದ್ಯುದಾತ್ತತ್ವಂ | ಭುವತ್ | ಭೂಯಾತ್| ಭವತೇರಾಶೀರ್ಲಿಙಾ ಪರತೋ ಲಿಙ್ಯಾಶಿಷ್ಯಙಿತ್ಯಙ್ಪ್ರತ್ಯಯಃ | ತಸ್ಯ ಙಿತ್ವೇನ ಗುಣಾಭಾವಾದುವಙಾದೇಶಃ | ಕಿದಾಶಿಷೀತಿ ಯಾಸುಣ್ಣಾ ಭವತ್ಯನಿತ್ಯಮಾಗಮಶಾಸನಮಿತಿ ವಚನಾತ್ | ತಿಙ್ಙತಿಙ ಇತಿ ನಿಘಾತಃ | ಊಡಿದಂಪದಾದ್ಯಪ್ಪುಮ್ರೈದ್ಯುಭ್ಯ ಇತಿ ರಾಯ ಇತ್ಯೇತಸ್ಯ ವಿಭಕ್ತೇರುದಾತ್ತತ್ವಂ | ಪುರಂಧ್ಯಾಂ| ಪುರಂಧಿಃ ಪುರುಧೀಃ | ಪೃಷೋದರಾದಿತ್ವಾತ್ ಪಾ. ೬-೩-೧೦೯ | ಉಕಾರಸ್ಯಾಮಾದೇಶ ಈಕಾರಸ್ಯ ಹ್ರಸ್ವಶ್ಚ | ಆದ್ಯುದಾತ್ತಪ್ರಕರಣೇ ದಿವೋದಾಸಾದೀನಾಂ ಛಂದಸ್ಯುಪಸಂಖ್ಯಾನಂ | ಪಾ. ೬-೨-೯೧-೧ | ಇತ್ಯಾದ್ಯುದಾತ್ತತ್ವಂ | ಅಥವಾ ಪುರಂ ಶರೀರಂ ಧೀಯತೇಽಸ್ಯಾಮಿತಿ ಕರ್ಮಣ್ಯಧಿಕರಣೇ ಚ | ಪಾ. ೩-೩-೯೩ | ಇತಿ ಕಿ ಪ್ರತ್ಯಯಃ | ಅಲುಕ್‌ಛಾಂದಸಃ | ನಬ್ವಿಷಯಸ್ಯಾನಿಸಂತಸ್ಯೇತಿ ಪುರುಶಬ್ದ ಆದ್ಯುದಾತ್ತಃ | ದಾಸೀಭಾರಾದಿತ್ವಾತ್ | ಪಾ. ೬-೨-೪೨ | ಪೂರ್ವಪದಪ್ರಕೃತಿಸ್ವರತ್ವಂ | ಗಮತ್ | ಗಮೇರ್ಲೇಟಸ್ತಿಪ್ | ಇತಶ್ಚ ಲೋಪಃ | ಪರಸ್ಮೈಪದೇಷ್ವಿತೀಕಾರಲೋಪಃ | ಬಹುಲಂ ಛಂದಸೀತಿ ಶಪೋ ಲುಕ್ | ಲೇಟೋಽಡಾಟಾವಿತ್ಯಡಾಗಮಃ | ಆಗಮಾ ಅನುದಾತ್ತಾಃ | ಮ. ೩-೧-೩-೭ | ಇತಿ ತಸ್ಯಾನುದಾತ್ತತ್ವೇ ಧಾತುಸ್ವರ ಏವ ಶಿಷ್ಯತೇ | ವಾಜೇಭಿಃ | ವೃಷಾದಿತ್ವಾದಾದ್ಯುದಾತ್ತಃ ||

|| ಪ್ರತಿಪದಾರ್ಥ ||

ಸ ಘ—ಆ ಇಂದ್ರನೇ | ನಃ—ನಮಗೆ | ಯೋಗೇ—ನಮಗೆ ಇಷ್ಟವಾದ ಪುರುಷಾರ್ಥವನ್ನು ಕೊಡುವ ಸಂಬಂಧದಲ್ಲಿ | ಆ ಭುವತ್—(ಅನುಕೂಲವಾಗಿ) ಇರಲಿ | ಸಃ—ಆ ಇಂದ್ರನು | ರಾಯೇ—ಧನವನ್ನು ಕೊಡುವ ವಿಚಾರದಲ್ಲಿಯೂ | (ಆ ಭುವತ್-ಅನುಕೂಲವಾಗಿರಲಿ) | ಸಃ-ಆ ಇಂದ್ರನು | ಪುರಂಧ್ಯಾಂ—ಯುವತಿಯರನ್ನು ಕೊಡುವ ವಿಚಾರದಲ್ಲಿಯೂ ಅಥವಾ ಸರಿಯಾದ ತಿಳವಳಿಕೆಯನ್ನು ಉಂಟುಮಾಡುವ ವಿಚಾರದಲ್ಲಿಯೂ | (ಆ ಭುವತ್-ಅನುಕೂಲವಾಗಿರಲಿ) | ಸಃ—ಆ ಇಂದ್ರನೇ | ವಾಜೇಭಿಃ—ಅನ್ನಾದ್ಯಾಹಾರಗಳಿಂದ ನಃ—ನಮ್ಮ ಸಮೀಪಕ್ಕೆ | ಆ ಗಮತ್—ಬರಲಿ ||

|| ಭಾವಾರ್ಥ ||

ನಮಗೆ ಇಷ್ಟವಾದ ವಸ್ತುಪ್ರಾಪ್ತಿ, ಐಶ್ವರ್ಯ (ಪತ್ನಿಯರಿಗಾಗಿ ಅನುಕೂಲರಾದ) ಯುವತಿಯರು ಅಥವಾ ಕಾಲೋಚಿತವಾದ ತಿಳವಳಿಕೆ ಇವುಗಳನ್ನು ನಾವು ಪಡೆದು ಸುಖಿಸಬೇಕಾದರೆ ಆ ಇಂದ್ರನೇ ನಮಗೆ ಅನುಕೂಲನಾಗಿರಬೇಕು. ಎಂದರೆ ಇಂದ್ರನ ಅನುಗ್ರಹದಿಂದಲೇ ಈ ವಿಧವಾದ ಇಷ್ಟಾರ್ಥಗಳನ್ನು ಪಡೆಯಲು ಸಾಧ್ಯವು. ಇದಲ್ಲದೆ ಆ ಇಂದ್ರನೇ ನಮ್ಮ ಸಮೀಪಕ್ಕೆ ಬಂದು ನಮಗೆ ಬೇಕಾದ ಅನ್ನವನ್ನು (ಆಹಾರವನ್ನು) ಕೊಡುವವನಾಗಲಿ.

English Translation

May he be to us for the attainment of our objects; may he be to us for the acquirement of riches; may he be to us for the acquisition of young women or manifold knowledge; may he come to us with food.

॥ ವಿಶೇಷವಿಷಯಗಳು ॥

**ಘ**—ಏವ, ಅವಧಾರಣಾರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದು- ಈ ಶಬ್ದವು ಅನೇಕ ಕಡೆಗಳಲ್ಲಿ ಸಂಹಿತಾಕಾಲದಲ್ಲಿ ಛಂದಸ್ಸಿನ ಅನುಕೂಲಕ್ಕಾಗಿ ದೀರ್ಘಾಕ್ಷರವಾಗಿ ಉಪಯೋಗಿಸಲ್ಪಟ್ಟಿದ್ದರೂ ಪದಪಾಠದಲ್ಲಿ ಹ್ರಸ್ವಾಕ್ಷರವಾಗಿರುವುದು.

**ಯೋಗೇ**—ಇಷ್ಟಾರ್ಥವನ್ನು ಹೊಂದುವುದು ಎಂದು ಭಾಷ್ಯಕಾರರು ಅರ್ಥಮಾಡಿರುವರು. ಸ್ಕಂದ ಸ್ವಾಮಿಯು " ಯೋಗಃ ಉದ್ಯೋಗಃ, ಉತ್ಸಾಹಃ ಅಲಬ್ಧಲಾಭೋ ವಾ'' ಎಂದರೆ ಉದ್ಯೋಗ, ಉತ್ಸಾಹ, ಇದು ವರೆಗೆ ಪಡೆಯದೇ ಇರುವ ಇಷ್ಟವಸ್ತು ಎಂದರ್ಥಮಾಡಿರುವರು.

**ಪುರಂಧ್ಯಾಂ**—ಭಾಷ್ಯಕಾರರು ಯುವತಿಯರೆಂದೂ ಪ್ರಜ್ಞೆಯೆಂದೂ ಎರಡು ವಿಧವಾದ ಅರ್ಥವನ್ನು ಹೇಳಿರುವರು. **ಪುರಂಧಿರ್ಯೋಷೇತ್ಯಾಹ** ಎಂದು ಶ್ರುತಿವಾಕ್ಯವಿರುವುದು (ತೈ.ಬ್ರಾ.) ಸ್ಕಂದಸ್ವಾಮಿ ಮತ್ತು ವೆಂಕಟಮಾಧವರು ಬುದ್ಧಿ, ತಿಳುವಳಿಕೆ, ಪ್ರಜ್ಞೆಯೆಂದೇ ಅರ್ಥಮಾಡಿರುವರು. Hillebrandt ಪಂಡಿತನು ಈ ಪುರಂಧಿ ಶಬ್ದಕ್ಕೆ ಅನೇಕ ಅರ್ಥಗಳನ್ನು ಹೇಳಿರುವನು. ಅವುಗಳಲ್ಲಿ Active, Zealous, fertile, munificent, generous ಎಂಬುವು ಕೆಲವು. ಋ.ಸಂ. ೫-೪೨-೫ ; ೬-೪೯-೧೪ ; ೬-೨೧-೯ ; ೭-೩೬-೮ , ೭-೩೯-೪ ; ೧೦-೮೫-೩೬ ಈ ಋಕ್ಕುಗಳಲ್ಲಿ ವಿಪುಲೈಶ್ವರ್ಯ ಅಥವಾ ಅಭಿವೃದ್ಧಿಗೆ ಅಧಿದೇವತೆ Personified as a godess of abundance and liberality ಎಂಬ ಅರ್ಥದಲ್ಲಿ ಈ ಶಬ್ದಪ್ರಯೋಗವಿದೆ. ಪಾಶ್ಚಾತ್ಯ ಪಂಡಿತರು ನಾನಾ ಋಕ್ಕುಗಳಲ್ಲಿ ಇರುವ ಈ ಶಬ್ದಕ್ಕೆ ಸಮಯೋಚಿತವಾಗಿ ವಿಧವಿಧವಾಗಿ ಅರ್ಥಮಾಡಿದಾರೆ. ಭಾಷ್ಯಕಾರರೂ ಸಹ ಬೇರೆ ಬೇರೆ ಅರ್ಥ ಹೇಳಿದಾರೆ. ಆಯಾ ಸಂದರ್ಭದಲ್ಲಿ ಆಯಾ ಅರ್ಥಗಳನ್ನು ವಿಶದವಾಗಿ ವಿವರಿಸಲಾಗುವುದು.

॥ ವ್ಯಾಕರಣಪ್ರಕ್ರಿಯಾ ॥

ಘ—ಇದು ಚಾದಿಗಣದಲ್ಲಿರುವುದರಿಂದ **ಚಾದಯೋಽನುದಾತ್ತಾಃ** (ಫಿ. ಸೂ. ೮೪) ಎಂಬುದರಿಂದ ಅನುದಾತ್ತ. ಸಂಹಿತಾಕಾಲದಲ್ಲಿ **ಋಚಿತುನುಘಮಕ್ಷುತಙ್ ಕುತ್ರೋರುಷ್ಯಾಣಾಂ** (ಪಾ. ಸೂ. ೬-೩-೧೩೩) ಋಗ್ವೇದದಲ್ಲಿ ತು ನು ಘ ಮಕ್ಷು ಥ ಎಂಬುದಕ್ಕೆ ಆ ದೇಶವಾಗಿ ಬಂದ ಙಾತ್ತಾದ ತಕಾರ ತು ತ್ರ ಉರುಷ್ಯ ಇವು ಗಳಿಗೆ ದೀರ್ಘ ಬರುವುದು ಎಂಬುದರಿಂದ ದೀರ್ಘ ಬರುವುದು. **ಯೋಗೇ**—ಘಞ್ ಪ್ರತ್ಯಯಾಂತವಾದ ಶಬ್ದ ಪ್ರತ್ಯಯವು ಞಿತ್ತಾದ್ದರಿಂದ ಯೋಗೇ ಎಂಬುದು ಆದ್ಯುದಾತ್ತ. **ಭುವತ್**—ಇದಕ್ಕೆ ಭೂಯಾತ್ ಎಂದು ಅರ್ಥವು. **ಭೂಸತ್ತಾಯಾಂ** ಎಂಬ ಧಾತುವಿನ ಮುಂದೆ ಆಶೀರ್ಲಿಙ್ ಪರದಲ್ಲಿರುವಾಗ **ಲಿಙ್ಯಾಶಿಷ್ಯಙ್** (ಪಾ. ಸೂ. ೩-೧-೮೬) ಎಂಬುವರಿಂದ ಅಙ್‌ಪ್ರತ್ಯಯ ಬರುವುದು- ಪ್ರತ್ಯಯವು ಙಿತ್ತಾದ್ದರಿಂದ **ಕ್ಣಿತಿಚ** (ಪಾ. ಸೂ. ೧-೧೫) ಎಂಬುದ ರಿಂದ ಗುಣ ನಿಷೇಧ ಬರುವುದು **ಅಚಿಶ್ನುಧಾತುಭ್ರುವಾಂ ಯ್ವೋರಿಯಙುವಙೌ** (ಪಾ ಸೂ. ೬-೪-೭೭) ಎಂಬು ದರಿಂದ ಉವಙಾದೇಶಬರುವುದು. **ಅನಿತ್ಯಮಾಗಮಶಾಸನಂ** (ಪರಿಭಾ ೯೨-೨) ಆಗಮವನ್ನು ವಿಧಿಸುವ ಶಾಸ್ತ್ರ ಗಳು ಅನಿತ್ಯವಾದುವು ಎಂಬುದರಿಂದ ಮಾಧವಾಚಾರ್ಯರ ಮತದಂತೆ **ಕ್ರಿದಾಶಿಷಿ** (ಪಾ.ಸೂ- ೩-೪-೧೦೪) ಎಂಬು ದರಿಂದಾಗಲೀ-ನೈಯ್ಯಾಕರಣರ ಪಕ್ಷದಂತೆ **ಯಾಸುಟ್ಪರಸ್ಮೈಪದೇಷೂದಾತ್ತೋಙಿಚ್ಚ** (ಪಾ.ಸೂ. ೩-೪-೧೧೩).

ಎಂಬುದರಿಂದಾಗಲೀ ವಿಹಿತವಾದ ಯಾ ಸುಡಾಗನುವು ಬರುವುದಿಲ್ಲ, ಭುವತ್ ಎಂಬಲ್ಲಿ **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಅನುದಾತ್ತ ಬರುವುದು. ರಾಯೇ ಇಲ್ಲಿರುವ ವಿಭಕ್ತಿಯು ರೈಶಬ್ದದ ಮುಂದೆ ಇರುವುದರಿಂದ **ಊಡಿದಂಪದಾದ್ಯಪ್ಪುಂರೈದ್ಯುಭ್ಯಃ** (ಪಾ. ಸೂ. ೬-೧-೧೭೧) ಎಂಬುದರಿಂದ ಉದಾತ್ತವಾಗುವುದು. ಪುರಂಧೀ ಪುರು=ಬಹುವಿಧವಾದ ಧೀಃ ಬುದ್ಧಿ ಎಂದರ್ಥವುಳ್ಳ ಪುರುಧೀಶಬ್ದದಿಂದ ಆಗಿರುವುದು. ಇಲ್ಲಿ **ಪೃಷೋದರಾದೀನಿ ಯಥೋಪದಿಷ್ಟಂ** (ಪಾ. ಸೂ. ೬-೩-೧೦೯) ಪೃಷೋದರ ಎಂಬ ಪದಕ್ಕೆ ಸದೃಶವಾದ ಪದಗಳು ಶಿಷ್ಟೋಚ್ಚರಿತಕ್ರಮವನ್ನನುಸರಿಸಿ ಸಾಧುಗಳಾಗುವುವು. ಇಲ್ಲಿ ಆದಿಶಬ್ದವು ಪ್ರಕಾರವಾಚಿ. ಪ್ರಕಾರ ಎಂದರೆ ಸಾದೃಶ್ಯ. ವ್ಯಾಕರಣ ಶಾಸ್ತ್ರ ಸಿದ್ಧವಾದ ಲೋಪಾಗಮಾದೇಶಾದಿರಹಿತತ್ವೇನ ಸಾದೃಶ್ಯವನ್ನು ವಿವಕ್ಷೆಮಾಡಬೇಕು. ಪುರುಧೀಶಬ್ದದ ಉಕಾರಕ್ಕೆ ಅಮ್ ಆ ದೇಶವೂ ಈಕಾರಕ್ಕೆ ಹ್ರಸ್ವವೂ ವ್ಯಾಕರಣಶಾಸ್ತ್ರಸಿದ್ಧವಲ್ಲದಿದ್ದರೂ ಶಿಷ್ಟರು ಪುರಂಧಿ ಎಂದು ಉಚ್ಚರಿಸುವುದರಿಂದ ಪೂರೋಕ್ತಸೂತ್ರದಿಂದ ಅವು ಬರುವುವು ಪುರಂಧಿ ಎಂದಾಗುವುದು. **ಆದ್ಯುದಾತ್ತಪ್ರಕರಣೇದಿವೋದಾಸಾದೀನಾಂ ಛಂದಸ್ಯುಪಸಂಖ್ಯಾನಂ** ( ಪಾ. ಸೂ. ೬-೨-೯೧-೧ ) ಛಂದಸ್ಸಿನಲ್ಲಿ ಬರುವ ದಿವೋದಾಸಾದಿಗಣಕ್ಕೆ ಸೇರಿದ ಶಬ್ದಗಳನ್ನು ಆದ್ಯುದಾತ್ತಪ್ರಕರಣಲ್ಲಿ ಪಠಿಸಬೇಕು ಅಂದನೇಲೆ ಅವುಗಳಿಗೆ ಆದ್ಯುದಾತ್ತ ಬರುವುದು ಎಂದರ್ಥ ಎಂಬುದರಿಂದ ಆದ್ಯುದಾತ್ತ ಬರುವುದು ಅಥವಾ ಪುರಂ ಶರೀರಂ ಧೀಯತೇ ಅಸ್ಯಾಂ ಎಂದು ವಿಗ್ರಹ ಮಾಡಿದಾಗ **ಕರ್ಮಣ್ಯಧಿಕರಣೇ ಚ** (ಪಾ. ಸೂ. ೩-೩-೯೩) ಕರ್ಮವಾಚಕಪದವು ಉಪಪದವಾಗಿರುವಾಗ ಅಧಿಕರಣಾರ್ಥದಲ್ಲಿ ಘುಸಂಜ್ಞಕವಾದ ಧಾತುವಿನ (ದಾ-ಧಾ) ಮುಂದೆ ಕಿ ಪ್ರತ್ಯಯ ಬರುವುದು ಎಂಬುದರಿಂದ ಕಿ ಪ್ರತ್ಯಯ ಬರುವುದು ಪುರಂಧಾ+ಇ ಇಲ್ಲಿರುವ ಆ ಕಾರಕ್ಕೆ **ಆತೋಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಲೋಪಬರುವುದು. ಅಮ್ ವಿಭಕ್ತಿಗೆ **ಸುಪೋಧಾತುಪ್ರಾತಿಪದಿಕಯೋಃ** (ಪಾ. ಸೂ ೨-೪-೭೧) ಎಂಬದರಿಂದ ವಿಹಿತವಾದ ಲುಕ್ಕು ಇದು ಛಾಂದಸವಾದ್ದರಿಂದ ಬರುವುದಿಲ್ಲ. ನಬ್ವಿಷಯಸ್ಯಾನಿಸಂತಸ್ಯ, (ಫಿ. ಸೂ. ೨೬) ಎಂಬುದರಿಂದ ಪುರ ಶಬ್ದವು ಆದ್ಯುದಾತ್ತ **ಕುರುಗಾರ್ಹಪತ ರಿಕ್ತಗುರ್ವಸೂತಜರತ್ಯಶ್ಲೀಲ ದೃಢರೂಪಾ, ಪಾರೇವಡವಾತೈತಿಲಕದ್ರೂಃ, ಪಣ್ಯಕಂಬಲೋದಾಸೀಭಾರಾಣಾಂಚ** (ಪಾ. ಸೂ. ೬-೨-೪೨) ಈ ಏಳು ಸಮಾಸಗಳ, ಮತ್ತು ದಾಸೀಭಾರ ಮೊದಲಾದ ಶಬ್ದಗಳ ಪೂರ್ವಪದವು ಪ್ರಕೃತಿಸ್ವರವನ್ನು ಹೊಂದುವುದು ಎಂಬುದರಿಂದ ದಾಸೀಭಾರಾದಿಗೆ ಸೇರಿದ ಪುರಂಧಿ ಶಬ್ದದ ಪೂರ್ವಪದವು ಪ್ರಕೃತಿಸ್ವರವನ್ನು ಹೊಂದುವುದು ಆದ್ದರಿಂದ ಪುರಂಧಿ ಎಂಬ ಸಮಾಸಪದವು ಆದ್ಯುದಾತ್ತವೇ ಆಗುವುದು. **ಗಮತ್**—ಗಮ್ಲೃ ಗತೌ ಎಂಬ ಧಾತುವಿನ ಮುಂದೆ ಲೇಟ್ ಪ್ರತ್ಯಯವನ್ನಿಟ್ಟರೆ ಲೇಟ್ಟಿಗೆ ಪ್ರಥಮಪುರುಷ ಏಕವಚನ ತಿಪ್ ಬರುವುದು, ಶಪ್ ವಿಕರಣಕ್ಕೆ **ಬಹುಲಂಛಂದಸಿ** (ಪಾ. ಸೂ. ೨-೪-೭೩) ಎಂಬುದರಿಂದ ಲುಕ್ ಬರುವುದು ತಿಪ್ ಪ್ರತ್ಯಯದ ಇಕಾರಕ್ಕೆ **ಇತಶ್ಚ ಲೋಪಃಪರಸ್ಮೈಪದೇಷು** (ಪಾ.ಸೂ. ೩-೪-೯೭) ಪರಸ್ಮೈಪದದಲ್ಲಿ ಲೇಟ್ಟಿನ ಸ್ಥಾನದಲ್ಲಿ ಬಂದ ತಿಙ್ಙಿನ ಇಕಾರಕ್ಕೆ ಲೋಪಬರುವುದು ಎಂಬುದರಿಂದ ಲೋಪ **ಲೇಟೋಽಡಾಟೌ** (ಪಾ. ಸೂ. ೩-೪-೯೪) ಲೇಟ್ಟಿಗೆ ಅಟ್ ಆಟ್ ಎಂಬ ಆಗಮಗಳು ಬರುವುವು ಅವು ಪಿತ್ತಾಗುವುವು ಎಂಬುದರಿಂದ ಪ್ರತ್ಯಯಕ್ಕೆ ಅಟ್ ಆಗಮ ಬರುವುದು ಗಮ್+ಅ ತ್ ಎಂದಿರುವುದು. **ಆಗಮಾ ಅನುದಾತ್ತಾಃ** (ಪಾ. ಸೂ ಮ. ೩-೧-೩-೭) ಆಗಮಗಳು ಅನುದಾತ್ತಗಳಾಗುವುವು ಎಂಬುದರಿಂದ ಅತ್ ಎಂಬಲ್ಲಿರುವ ಅಕಾರವು ಅನುದಾತ್ತ. ಗಮ್ ಎಂಬಲ್ಲಿ ಧಾತುಸ್ವರ ಉದಾತ್ತವೇ ಇರುವುದು. **ವಾಜೇಭಿಃ**—ವೃಷಾದಿಯಲ್ಲಿರುವುದರಿಂದ **ವೃಷಾದೀನಾಂ ಚ** (ಪಾ. ಸೂ ೬-೧-೨೦೩) ಎಂಬುದರಿಂದ ಆದ್ಯುದಾತ್ತ ॥೩॥

ಸಂಹಿತಾಪಾಠಃ

ಯಸ್ಯ ಸಂಸ್ಥೇ ನ ವೃಣ್ವತೇ ಹರೀ ಸಮತ್ಸು ಶತ್ರವಃ ।
ತಸ್ಮಾ ಇಂದ್ರಾಯ ಗಾಯತ ॥ ೪ ॥

ಪದಪಾಠಃ

ಯಸ್ಯ । ಸಂऽಸ್ಥೇ । ನ । ವೃಣ್ವತೇ । ಹರೀ ಇತಿ । ಸಮತ್ऽಸು । ಶತ್ರವಃ ॥
ತಸ್ಮೈ । ಇಂದ್ರಾಯ । ಗಾಯತ ॥ ೪ ॥

ಸಾಯಣಭಾಷ್ಯಂ

ಸಮತ್ಸು ಯುದ್ಧೇಷು ಯಸ್ಯೇಂದ್ರಸ್ಯ ಸಂಸ್ಥೇ ರಥೇ ಯುಕ್ತೌ ಹರೀ ದ್ವಾವಶ್ವೌ ಶತ್ರವೋ ನ ವೃಣ್ವತೇ ನ ಸಂಭಜಂತೇ । ರಥಮಶ್ವೌ ಚ ದೃಷ್ಟ್ವಾ ಪಲಾಯಂತ ಇತ್ಯರ್ಥಃ । ತಸ್ಮಾ ಇಂದ್ರಾಯ ತತ್ಸಂತೋಷಾರ್ಥಂ ಹೇ ಋತ್ವಿಜೋ ಗಾಯತ । ಸ್ತುತಿಂ ಕುರುತ । ರಣ ಇತ್ಯಾದಿಷು ಷಟ್ಚತ್ವಾರಿಂಶತ್ಸು ಸಂಗ್ರಾಮನಾಮಸು ಸಮತ್ಸು ಸಮರಣ ಇತಿ ಪಠಿತಂ ॥ ಸಂಸ್ಥೇ । ಸಮ್ಯಕ್ ತಿಷ್ಠತೀತಿ ಸಂಸ್ಥೋ ರಥಃ । ಆತಶ್ಚೋಪಸರ್ಗೇ । ಪಾ ೩-೧-೧೩೬ । ಇತಿ ಕಪ್ರತ್ಯಯಃ । ಕೃದುತ್ತರಪದಪ್ರಕೃತಿಸ್ವರತ್ವಂ । ವೃಣ್ವತೇ। ಪ್ರತ್ಯಯಸ್ವರೇಣಾಕಾರ ಉದಾತ್ತಃ । ಸತಿ ಶಿಷ್ಟಸ್ವರಬಲೀಯಸ್ತ್ವಮನ್ಯತ್ರ ವಿಕರಣೇಭ್ಯಃ । ಪಾ. ೬-೧-೧೫೮-೯ । ತಿಙ್ಙತಿಙ ಇತಿ ನಿಘಾತೋ ನ ಭವತಿ ಯದ್ವೃತ್ತಾನ್ನಿತ್ಯಮಿತಿ ಪ್ರತಿಷೇಧಾತ್ । ಪಂಚಮೀ-ನಿರ್ದೇಶೇಽಪಿ । ಪಾ. ೧-೧-೬೭ । ಅತ್ರ ವ್ಯವಹಿತೇಽಪಿ ಕಾರ್ಯಮಿಷ್ಯತೇ । ಪರತೋ ರಥಮಿತಿ ಹರೀ ಅಶ್ವೌ । ಇನ್ನಿತ್ಯನುವೃತ್ತೌ ಹೃಪಿಷಿರುಹಿವೃತಿವಿದಿಛಿದಿಕೀರ್ತಿಭ್ಯಶ್ಚ । ಉ. ೪-೧೧೮ । ಇತೀನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ಸಮತ್ಸು । ಸಂಪೂರ್ವಾದತ್ತೇಃ ಕ್ವಿಪ್ । ಶತ್ರವಃ ಶತಿಃ ಸೌತ್ರೋ ಧಾತು-ರ್ಹಿಂಸಾರ್ಥಃ । ರುಶತಿಭ್ಯಾಂ ಕ್ರುನ್ । ಉ. ೪-೧೦೩ । ನಿತ್ತ್ವಾದಾದ್ಯುದಾತ್ತತ್ವಂ । ತಸ್ಮೈ । ಸಾವೇಕಾಚ ಇತಿ ವಿಭಕ್ತ್ಯುದಾತ್ತಸ್ಯ ನ ಗೋಶ್ವನ್ಸಾವವರ್ಣೇತಿ ಪ್ರತಿಷೇಧಾತ್ಪ್ರಾತಿಪದಿಕಸ್ವರ ಏವ ॥

॥ ಪ್ರತಿಪದಾರ್ಥ ॥

ಸಮತ್ಸು—ಯುದ್ಧಗಳಲ್ಲಿ । ಶತ್ರವಃ—ಶತ್ರುಗಳು । ಯಸ್ಯ—ಯಾವ (ಇಂದ್ರನ) । ಸಂಸ್ಥೇ—ರಥದಲ್ಲಿ (ಹೂಡಿರುವ) । ಹರೀ—ಎರಡು ಕುದುರೆಗಳನ್ನು । ನ ವೃಣ್ವತೇ—ಹೊಂದಲಾರರೋ । ತಸ್ಮೈ—ಅಂತಹ । ಇಂದ್ರಾಯ—ಇಂದ್ರನಿಗಾಗಿ । ಗಾಯತ—ಸ್ತೋತ್ರಗಳಿಂದ ಗಾನಮಾಡಿರಿ ॥

॥ ಭಾವಾರ್ಥ ॥

ಯುದ್ಧಗಳಲ್ಲಿ ಶತ್ರುಗಳು ಯಾವ ಇಂದ್ರನ ರಥಕ್ಕೆ ಹೂಡಿರುವ ಕುದುರೆಗಳ ಸಮೀಪಕ್ಕೆ ಸಹ ಬರಲಸಮರ್ಥರೋ ಅಂತಹ ಶಕ್ತಿಯುಳ್ಳ ಇಂದ್ರನನ್ನುದ್ದೇಶಿಸಿ ಸ್ತೋತ್ರಾದಿಗಳಿಂದ ಗಾನಮಾಡಿರಿ.

## English Translation

Sing in honour of that Indra whose pair of towny horses the enemies do not approach in battles.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಇಂದ್ರನ ಶಕ್ತಿಯನ್ನು ಅಪ್ರತ್ಯಕ್ಷವಾಗಿ (indirectly) ವರ್ಣಿಸಿರುವುದು. ಇಂದ್ರನಿಗೂ ಅವನ ಶತ್ರುಗಳಿಗೂ ಯುದ್ಧ ನಡೆಯುವಾಗ ಆ ಶತ್ರುಗಳು ಇಂದ್ರನ ರಥಕ್ಕೆ ಕಟ್ಟಿದ ಕುದುರೆಗಳ ಸಮೀಪಕ್ಕೆ ಸಹ ಬರಲು ಶಕ್ತಿಯಿಲ್ಲದಿರುವಾಗ ಇಂದ್ರನೊಡನೆ ಸಂಧಿಸಿ ಯುದ್ಧಮಾಡುವುದೆಂತು? ಆದುದರಿಂದ ಇಂದ್ರನ ರಥವನ್ನು ಕಂಡಕೂಡಲೇ ಶತ್ರುಗಳು ಪಲಾಯನಮಾಡುವುರೆಂದು ಎಂದರೆ ಹೆದರಿ ಓಡಿಹೋಗುವರೆಂದು ಅಭಿಪ್ರಾಯವು.

**ಸಂಸ್ಥೇ—ಸಮ್ಯಕ್ ತಿಷ್ಠತೀತಿ ಸಂಸ್ಥೋ ರಥಃ** । ಯುದ್ಧಾದಿಗಳಲ್ಲಿ ದೃಢವಾಗಿ ನಿಲ್ಲುವುದಾದುದರಿಂದ ಇದಕ್ಕೆ ಸಂಸ್ಥ ಎಂದರೆ ರಥವೆಂದರ್ಥವು. ಸ್ಕಂದಸ್ವಾಮಿಯು ಸಂಸ್ಥೇ ಎಂಬ ಶಬ್ದಕ್ಕೆ ಸಂಗ್ರಾಮೇ-ಯುದ್ಧದಲ್ಲಿ ಎಂದರ್ಥಮಾಡಿರುವರು. ಆದರೆ ಈ ಋಕ್ಕಿನಲ್ಲಿ ಯುದ್ಧಶಬ್ಧಸೂಚಕವಾದ ಸಮತ್ಸು ಎಂಬ ಪ್ರತ್ಯೇಕಪದವಿರುವುದರಿಂದ ಸಂಸ್ಥ ಎಂಬ ಶಬ್ದಕ್ಕೆ ಪುನಃ ಯುದ್ಧವೆಂಬ ಅರ್ಥವನ್ನು ಹೇಳಬೇಕಾದ ಅವಶ್ಯಕತೆ ಇರುವುದಿಲ್ಲ. ಆದುದರಿಂದ ಭಾಷ್ಯಕಾರರು ಮಾಡಿರುವ ರಥವೆಂಬ ಅರ್ಥವೇ ಇಲ್ಲಿ ಸರಿಯೆಂದು ಹೇಳಬೇಕಾಗಿರುವುದು.

**ಹರೀ—ಹರತೋ ರಥಮಿತಿ ಹರೀ ಅಶ್ವೌ** । ರಥವನ್ನು ಒಯ್ಯುವುದರಿಂದ ಇವಕ್ಕೆ ಹರೀ ಎಂದರೆ ಕುದುರೆಗಳು ಎಂದರ್ಥವು. ಹರಿಶಬ್ದವು ಸಾಧಾರಣವಾಗಿ ಕುದುರೆ ಎಂಬ ಅರ್ಥದಲ್ಲಿ ಉಪಯೋಗಿಸಲ್ಪಡುವುದಾಗಿದ್ದರೂ ಈ ಶಬ್ದಕ್ಕೆ tawny or bay horse ಹರಿತವರ್ಣದ ಕುದುರೆಗಳೆಂದು ಹೇಳಬೇಕಾಗುವುದು. ಈ ಶಬ್ದವು ಆಧುನಿಕಸಂಸ್ಕೃತದಲ್ಲಿಯೂ ಬಳಕೆಯಲ್ಲಿದೆ.

**ಸಮತ್ಸು**—ರಣ ಮೊದಲಾದ ನಲವತ್ತಾರು ಯುದ್ಧವಾಚಕಗಳಾವ ಶಬ್ದಗಳ ಮಧ್ಯದಲ್ಲಿ ಸಮತ್ಸು ಎಂಬ ಶಬ್ದವು ಪಠಿತವಾಗಿದೆ (ನಿ. ೩-೯). ಈ ಶಬ್ದವು ಯಾವಾಗಲೂ ಸಪ್ತಮೀ ಬಹುವಚನದಲ್ಲಯೇ ಉಪಯೋಗಿಸಲ್ಪಡುವುದು. ಈ ಋಕ್ಕಿನಲ್ಲಲ್ಲದೆ ಋ. ಸಂ. ೧-೬೬-೩; ೧-೭೦-೬; ೧-೧೩೦-೮; ೧-೧೭೩-೭; ೨-೧೨-೩; ೩-೩೦-೨೨; ೪-೨೦-೧; ೪-೨೪-೬, ೪-೩೮-೪, ೫-೩೩-೪; ೬-೧೮-೬; ೬-೨೫-೯ ಇತ್ಯಾದಿ ೨೯ ಋಕ್ಕುಗಳಲ್ಲಿ ಈ ಶಬ್ದಪ್ರಯೋಗವಿದೆ. ಸ್ಕಂದಸ್ವಾಮಿಯು ಈ ಶಬ್ದಕ್ಕೆ—**ಅದ ಭಕ್ಷಣೇ । ಸಂಭಕ್ಷಯತ್ಸು ಪರಸ್ಪರಂ ಯೋದ್ಧೃಷು ಮಹತಿ ಯುದ್ಧೇ ಪ್ರವೃತ್ತ ಇತ್ಯರ್ಥಃ** ॥ ಎಂದರೆ ಅದ ಎಂಬ ಧಾತುವಿಗೆ ಭಕ್ಷಿಸು ಎಂದರ್ಥವು. ಆದುದರಿಂದ ಸಮತ್ಸು ಎಂಬ ಶಬ್ದಕ್ಕೆ ಯುದ್ಧದಲ್ಲಿ ಭಟರು ಒಬ್ಬರನ್ನೊಬ್ಬರು ಕಡಿದಾಡಿ ಭಕ್ಷಿಸುವರಾದುದರಿಂದ ಸಮತ್ಸು ಎಂದರೆ ಯುದ್ಧಗಳಲ್ಲಿ ಎಂದರ್ಥಮಾಡಿದಾರೆ. ಪಾಶ್ಚಾತ್ಯರು ಈ ಶಬ್ದಕ್ಕೆ fight, battle, contest, especially battle where confused voices of men, and din of weapons are heard ಎಂಬ ಅರ್ಥವೆಂದು ಅಭಿಪ್ರಾಯಪಡುವರು.

### ವ್ಯಾಕರಣಪ್ರಕ್ರಿಯಾ

**ಸಂಸ್ಥೇ-ಸಮ್ಯಕ್ ತಿಷ್ಠತಿ ಇತಿ** (ಚೆನ್ನಾಗಿಇರುವುದು ಎಂದು) **ಸಂಸ್ಥಃ** ರಥ ಎಂದರ್ಥ. ಸಂ ಎಂಬ ಉಪಸರ್ಗದ ಮುಂದಿರುವ ಸ್ಥಾ (ಷ್ಠಾ ಗತಿನಿವೃತ್ತೌ)ಎಂಬ ಧಾತುವಿಗೆ **ಆತಶ್ಚೋಪಸರ್ಗೇ** (ಪಾ.ಸೂ. ೩-೧-೧೩೬)ಉಪಸರ್ಗವು ಉಪಪದವಾಗಿರುವಾಗ ಆಕಾರಾಂತ ಧಾತುವಿನ ಮುಂದೆ ಕ, ಪ್ರತ್ಯಯಬರುವುದು. ಎಂಬುದರಿಂದ ಕ ಪ್ರತ್ಯಯ ಬಂದರೆ, **ಆತೋಲೋಪಇಟಿಚ** (ಪಾ. ಸೂ. ೬-೪-೬೪) ಎಂಬುದರಿಂದ ಆಕಾರಕ್ಕೆ **ಲೋಪ**ಬರುವುದು. ಕೃದುತ್ತರಪದಪ್ರಕೃತಿಸ್ವರ ಬರುವುದು. ವೃಣ್ವತೇ-ವೃಞ್‌ವರಣೇ ಸ್ವಾದಿ, ಲಟ್ ಆತ್ಮನೇಪದ ಪ್ರಥಮ ಪುರುಷ ಬಹುವಚನ **ಸ್ವಾದಿಭ್ಯಃಶ್ನುಃ** (ಸಾ. ಸೂ. ೩-೧-೭೩) ಸ್ವಾದಿಗಣಪಠಿತಧಾತುಗಳಿಗೆ ಶ್ನು ವಿಕರಣ ಬರುವುದು ವೃ+ನು+ಝ **ಅತ್ಮನೇಪದೇಷ್ವನತಃ** (ಪ್ರಾ. ಸೂ. ೭-೧-೫) ಅಕಾರವನ್ನುಳಿಹ ವರ್ಣದ ಮುಂದಿರುವ ಆತ್ಮನೇ ಪದದ ಝ್ ಎಂಬುದಕ್ಕೆ ಅತ್ ಆದೇಶ ಬರುವುದು ಎಂಬುದರಿಂದ ಝ್ ಎಂಬುದಕ್ಕೆ ಅತ್ ಆದೇಶ ಬಂದರೆ ವೃ+ನು+ಅತ ಉಕಾರಕ್ಕೆ **ಹುಶ್ನುವೋಸ್ಸಾರ್ವಧಾತುಕೇ** (ಪಾ. ಸೂ ೬-೪-೮೭) ಸಾರ್ವಧಾತುಕಪರದಲ್ಲಿರುವಾಗ ಹುಧಾತುವಿಗೂ, ಶ್ನುಪ್ರತ್ಯಯಾಂತವಾಗಿಯೂ ಅನೇಕಾಚ್ಕವಾಗಿಯೂ ಇರುವ ಅಂಗದ ಅವಯುವವಾದ ಉಕಾರವು ಸಂಯುಕ್ತಾಕ್ಷರದ ಮುಂದೆ ಇಲ್ಲದೆ ಇದ್ದರೆ ಅದಕ್ಕೂ ಯಣ್ ಬರುವುದು ಎಂಬುದರಿಂದ ಯಣಾದೇಶ. **ಟಿತ ಆತ್ಮನೇ ಪದಾನಾಂ ಟೇರೇ** (ಪಾ. ಸೂ. ೩-೪-೭೯) ಟಿತ್ತಾದ ಲಕಾರಸ್ಥಾನದಲ್ಲಿ ಬಂದ ಆತ್ಮನೇಪದ ಪ್ರತ್ಯಯದ ಟಿ-ಗೆ ಏ ಬರುವುದು. ಇದರಿಂದ ತವಿನ ಅಕಾರಕ್ಕೆ ಏಬಂದರೆ **ಋವರ್ಣಾನ್ನಸ್ಯಣತ್ವಂ ವಾಚ್ಯಂ** (೮-೪-೧ ವಾ ೧) ಎಂಬುದರಿಂದ ಋಕಾರದಮುಂದೆ ಇರುವ ನಕಾರಕ್ಕೆ ಣಕಾರಾದೇಶ ಬಂದುವೃಣ್ವತೇ ಎಂದಾಗುವುದು. ಇಲ್ಲಿ ಮೊದಲು ಧಾತುಸ್ವರವೂ ನಂತರ ಝಪ್ರತ್ಯಯಸ್ವರವೂ ನಂತರ ಶ್ನುಪ್ರತ್ಯಯಸ್ವರವೂ ಬರುವುದು **ಸತಿಶಿಷ್ಟಸ್ವರಬಲೀಯಸ್ತ್ವಂ ಅನ್ಯತ್ರವಿಕರಣೇಭ್ಯಃ** (ಪಾ- ಸೂ. ೬-೧-೧೫೮-೭-೧೧) ಕೆಲವು ಸ್ವರಗಳು ಉತ್ಪನ್ನವಾದ ಮೇಲೆ ವಿಹಿತವಾದ ಸ್ವರವು ಬಲವಾದುದು ಎಂಬುದರಿಂದ ಧಾತುಸ್ವರ ಪ್ರತ್ಯಯಸ್ವರಗಳು ಬಂದಮೇಲೆ ಶ್ನುವಿಕರಣಕ್ಕೆ ಬರುವ ಸ್ವರವು ಬಲವಾದ್ದರಿಂದ ಶ್ನುಗೆ ಉದಾತ್ತವನ್ನುವಿಧಿಸುವ **ಆದ್ಯುದಾತ್ತಶ್ಚ** ಎಂಬ ಸೂತ್ರದಲ್ಲಿ ಏಕವಾಕ್ಯತಾಪನ್ನವಾದ **ಅನುದಾತ್ತಂ ಪದಮೇಕವರ್ಜಂ** (ಪಾ. ಸೂ. ೬-೧-೧೫೮) ಎಂಬುದರಿಂದ ಪ್ರತ್ಯಯದ ಅಕಾರವು ಅನುದಾತ್ತವಾಗಲಿ ಎಂದು ಆಕ್ಷೇಪ ಬರಬಹುದು. ಆದರೆ ಹಿಂದಿನ ವಚನವಲ್ಲಿ 'ಅನ್ಯತ್ರವಿಕರಣೇಭ್ಯಃ, ವಿಕರಣ'ಕ್ಕಿಂತಲೂ ಬೇರೆ ಸ್ಥಳವಲ್ಲಿ ಸತಿ ಶಿಷ್ಟಸ್ವರವು ಬಲವಾದುದೇ ವಿನಾ ವಿಕರಣವಲ್ಲಿ ಸತಿ ಶಿಷ್ಟಸ್ವರವು ಬಲವಾಗುವುದಿಲ್ಲ ಎಂಬುದರಿಂದ ವಿಕರಣಸ್ವರವು ಪ್ರತ್ಯಯ ಸ್ವರವನ್ನು ಬಾಧಿಸುವುದಿಲ್ಲ ಆದ್ದರಿಂದ ವೃಣ್ವತೇ ಎಂಬಲ್ಲಿ ಅ ಎಂಬುದು ಪ್ರತ್ಯಯ ಸ್ವರದಿಂದ ಉದಾತ್ತವೇ ಆಗುವುದು 'ಸತಿಶಿಷ್ಟಸ್ವರ ಬಲೀಯಸ್ತ್ವಮನ್ಯತ್ರವಿಕರಣೇಭ್ಯಃ' ಎಂಬಲ್ಲಿ ಮೊದಲನೆಯ ಅಂಶವು ನ್ಯಾಯಸಿದ್ಧವಾದುದು. ಉದಾತ್ತ ಅಥವಾ ಸ್ವರಿತವನ್ನು ವಿಧಿಸುವ ಶಾಸ್ತ್ರದೊಂದಿಗೆ ಏಕವಾಕ್ಯತೆಯನ್ನು ಹೊಂದಿದ **ಅನುದಾತ್ತಂ ಪದಮೇಕವರ್ಜಂ** (ಪಾ. ಸೂ. ೬-೧-೧೫೮) ಎಂಬ ಪರಿಭಾಷೆಯಿಂದ ಮಿಕ್ಕವುಗಳಿಗೆ ಅನುದಾತ್ತವು ವಿಧಿಸಲ್ಪಡುವುದು. ಅಲ್ಲಿ ಉತ್ಸರ್ಗಶಾಸ್ತ್ರವೇ ಆಗಲಿ ಅಪವಾದವೇ ಆಗಲೀ ಕೊನೆಯಲ್ಲಿ ಯಾವುದು ಪ್ರವೃತ್ತವಾಗುವುದೋ ಅಲ್ಲಿ ಈ ಪರಿಭಾಷೆಯು ಉಪಸ್ಥಿತವಾದರೆ ಪೂರ್ವದಲ್ಲಿ ಪ್ರವೃತ್ತವಾದವುಗಳಿಗೆ ಬಾಧವು ತಾನಾಗಿಯೇ ಏರ್ಪಡುವುದು. ಹೇಗೆಂದರೆ ಔಪಗವತ್ವಂ ಎಂಬುದನ್ನು ಉದಾಹರಣೆಯಾಗಿ ತೆಗೆದುಕೊಳ್ಳುವ. ಉಪಗು ಶಬ್ದದ ಮುಂದೆ ಅಣ್ ಪ್ರತ್ಯಯ. ಅದರ ಮುಂದೆ ತ್ವ ಪ್ರತ್ಯಯವು ಇರುವುದು. ಎರಡನೆಯ ಪ್ರತ್ಯಯವಾದತ್ವ ಎಂಬುದಕ್ಕೆ ಆದ್ಯುದಾತ್ತ ವಿಧಾಯಕ. **ಆದ್ಯುದಾತ್ತಶ್ಚ** ಎಂಬ ಸೂತ್ರೈಕವಾಕ್ಯತಾಪನ್ನವಾದ 'ಅನುದಾತ್ತಂ ಪದಮೇಕವರ್ಜಂ' ಎಂಬುದು ಮೊದಲನೆ ಪ್ರತ್ಯಯವಾದ ಅಣ್‌ಗೆ ಆದ್ಯುದಾತ್ತ

ವಿಧಾಯಕ 'ಆದ್ಯುದಾತ್ತಶ್ಚ' ಎಂಬುದನ್ನು ಬಾಧಿಸುವುದು, 'ಅನ್ಯತ್ರವಿಕರಣೇಭ್ಯಃ' ಎಂಬುದು ಜ್ಞಾಪಕಸಿದ್ಧವಾದ ವಚನ. ಹೇಗೆಂದರೆ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬ ಸೂತ್ರದಲ್ಲಿ ತಾಸ್ ಎಂಬ ವಿಕರಣಕ್ಕಿಂತಲೂ ಮುಂದಿರುವ ಲಸ್ಥಾನಿಕಸಾರ್ವಧಾತುಕಕ್ಕೆ ಅನುದಾತ್ತವನ್ನು ವಿಧಿಸಿರುವರು. **ಸ್ಯತಾಸೀಲ್ಯಲುಟೋಃ** (ಪಾ- ಸೂ. ೩-೧-೩೩) ಎಂಬುದರಿಂದ ಲಾವಸ್ಥೆಯಲ್ಲಿ ತಾಸ್ ಪ್ರತ್ಯಯಕ್ಕೆ ವಿಧಿ ಇದ್ದರೂ ಅಂತರಂಗವಾಗಿಯೂ ಪರವಾಗಿಯೂ ಇರುವ ಲಸ್ಥಾನಿಕ ಆದೇಶಗಳು ಬಂದಮೇಲೆ ತಾಸ್ ವಿಕರಣ ಬರುವುದು. ಈಗ 'ಸತಿಶಿಷ್ಟಸ್ವರೋಬಲಿಯಾನ್' ಎಂಬುದರಿಂದ ತಾಸ್ ಎಂಬುದಕ್ಕೆ ಬರುವ ಉದಾತ್ತವು ಬಲವಾದ್ದರಿಂದ ತಾಸ್ ಪ್ರತ್ಯಯಕ್ಕೆ ಉದಾತ್ತ ವಿಧಾಯಕ ವಿಧಿವಾಕ್ಯೈಕತಾಪನ್ನವಾದ **ಅನುದಾತ್ತಂ ಪದಮೇಕವರ್ಜಂ** ಎಂಬುದರಿಂದ ಲಸಾರ್ವಧಾತುಕಕ್ಕೆ ಅನುದಾತ್ತವು ಸಿದ್ಧವಾಗುವುದು. ಹೀಗಿರುವಲ್ಲಿ ಪುನಃ ಅನುದಾತ್ತ ವಿಧಿಯು ವ್ಯರ್ಥವಾಗಿ 'ವ್ಯರ್ಥಂ ಸತ್ ಕಿಂಚಿದರ್ಥಂ ಜ್ಞಾಪಯತಿ' ಎಂಬ ನ್ಯಾಯದಿಂದ **ಸತಿಶಿಷ್ಟಸ್ವರಬಲೀಯಸ್ತ್ವಂ ಅನ್ಯತ್ರ ವಿಕರಣೇಭ್ಯಃ** ಎಂದು ಜ್ಞಾಪಿಸುವುದು. ಈಗ ತಾಸ್ ಎಂಬುದು ವಿರಕಣವಾದ್ದರಿಂದ ತಾಸ್ ಸ್ವರವು ಪ್ರತ್ಯಯಸ್ವರಕ್ಕೆ ಬಾಧಕವಾಗುವುದಿಲ್ಲ. ಅಂದಮೇಲೆ ಲಸಾರ್ವಧಾತುಕಪ್ರತ್ಯಯಕ್ಕೆ ಪ್ರತ್ಯಯಸ್ವರಉದಾತ್ತವೇ ಬರಬೇಕಾಗಿ ಬರುವುದು. ಅನುದಾತ್ತವು ಬರದೇ ಹೋಗುವುದು ಆದ್ಧರಿಂದ ಅನುದಾತ್ತವಿಧಿಯು ಸಾರ್ಥಕವಾಗುವುದು. **ಸ್ಯತಾಸೀಲ್ಯಲುಟೋಃ** ಎಂಬಲ್ಲಿ ಆರ್ಧಧಾತುಕೇ ಎಂಬುದನ್ನು ಅನುವೃತ್ತಿಮಾಡಿಕೊಂಡು ಆರ್ಧಧಾತುಕವಾದ ಲೃಲುಟ್ಟುಗಳು ಪರವಾಗಿರುವಾಗ ಸ್ಯತಾಸಿಗಳು ಬರುವುವು ಎಂದು ಅರ್ಥವನ್ನು ಹೇಳಿದರೆ ಲಾವಸ್ಥೆಯಲ್ಲಿ ತಾಸ್ ಬಂದು ನಂತರ ಲಕಾರಸ್ಥಾನದಲ್ಲಿ ಸಾರ್ವಧಾತುಕಬರುವುದು ಈಗ ಸಾರ್ವಧಾತುಕಸ್ವರವೇ ಸತಿಶಿಷ್ಟವಾಗುವಕಾರಣ ಅದಕ್ಕೆ ಅನುದಾತ್ತ ಬರುವುದಿಲ್ಲ. ಆದಕಾರಣ **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬ ವಿಧಿಯು ಸಾರ್ಥಕವಾಗುವುದರಿಂದ ಇದಕ್ಕೆ **ಪೂರ್ವೋಕ್ತಾರ್ಥಜ್ಞಾಪಕತ್ವ** ಬರುವುದಿಲ್ಲ ಎಂದರೆ ಈ ಪಕ್ಷದಲ್ಲಿ **ಅನ್ಯತ್ರವಿಕಣೇಭ್ಯಃ** ಎಂಬುದು ವಾಚನಿಕ ಎಂದು ಇಟ್ಟುಕೊಳ್ಳಬೇಕು. ವೃಣ್ವತೇ ಎಂಬಲ್ಲಿ **ಯದ್ವೃತ್ತಾನ್ನಿತ್ಯಂ** (ಪಾ.ಸೂ. ೮-೧-೬೬ ಯಾವ ಪದದಲ್ಲಿ ಯಚ್ಛಬ್ದವಿರುವುದೋ ಅಲ್ಲಿ ಯಚ್ಛಬ್ದದ ಮುಂದಿರುವ ತಿಙಂತವು ಅನುದಾತ್ತವಾಗುವುದಿಲ್ಲ. ಆದರೆ ಇಲ್ಲಿ ವೃಣ್ವತೇ ಎಂಬ ತಿಙಂತವು ಯಚ್ಛಬ್ದಕ್ಕೆ ಅವ್ಯವಹಿತಪರದಲ್ಲಿಲ್ಲ ಆದ್ದರಿಂದ **ಯದ್ವೃತ್ತಾನ್ನಿತ್ಯಂ** ಎಂಬ ನಿಷೇಧವು ಹೇಗೆ ಬರುವುದು ಎಂದರೆ **ಪೂಜನಾತ್ಪೂಜಿತಮನುದಾತ್ತಂ** (ಪಾ. ಸೂ. ೮-೧-೬೭) ಈಸೂತ್ರದಲ್ಲಿ ಪೂಜನವು ಪೂಜಿತಸಾಪೇಕ್ಷವಾದ್ದರಿಂದ ಪೂಜನಾತ್ ಇತ್ಯುಕ್ತಿಮಾತ್ರದಿಂದಲೇ ಪೂಜಿತ ಎಂಬ ಅರ್ಥವು ಲಭಿಸುವುದು ಹೀಗಿರುವಾಗ ಪುನಃ ಪೂಜಿತಗ್ರಹಣವು ಪ್ರಶಸ್ತ ಪೂಜಿತ ಎಂಬ ಅರ್ಥ ಬರುವುದಕ್ಕಾಗಿ ಇರುವುದು ಇಲ್ಲಿ ಪ್ರಾಶಸ್ತ್ಯವು ಆನಂತರ್ಯನಿಬಂಧನವಾದುದು ಅನಂತರವಾದ ಅಂದರೆ ಅವ್ಯವಹಿತಪರದಲ್ಲಿರುವ ಪೂಜಿತ ಎಂಬ ಅರ್ಥಕ್ಕಾಗಿ ಪೂಜಿತಗ್ರಹಣ ಎಂದಾಯಿತು. ಪಂಚಮೀನಿರ್ದೇಶದಿಂದಲೇ ಆನಂತರ್ಯವು ಸಿದ್ಧವಾಗುವುದರಿಂದ ಪುನಃ ಪೂಜಿತಗ್ರಹಣವು ವ್ಯರ್ಥವಾಗಿ **ಅತ್ರ ಪ್ರಕರಣೇ ಪಂಚಮೀನಿರ್ದೇಶೇಪಿ ನಾನಂತರ್ಯಮಿಷ್ಯತೇ** ಎಂದು ಜ್ಞಾಪಿಸುವುದು. ಈಗ ಈ ವಚನದಿಂದ ಪಂಚಮೀನಿರ್ದೇಶವಿದ್ದರೂ ಆನಂತರ್ಯ ಎಂಬ ಅರ್ಥವು ಲಭಿಸುವುದಿಲ್ಲ ಆದ್ದರಿಂದ ಆನಂತರ್ಯಾರ್ಥಲಾಭಕ್ಕಾಗಿ ಮಾಡಿರುವ ಪೂಜಿತಗ್ರಹಣವು ಸಾರ್ಥಕವಾಗುವುದು ಪ್ರಕೃತದಲ್ಲಿ ಯಚ್ಛಕ್ಕಿಂತಲೂ ಅವ್ಯವಹಿತಪರದಲ್ಲಿಲ್ಲದೇ ಇದ್ದರೂ **ಯದ್ವೃತ್ತಾನ್ನಿತ್ಯಂ** ಎಂಬ ನಿಷೇಧವು ಬರುವುದರಿಂದ **ತಿಙ್ಙತಿಙ** ಎಂಬುದರಿಂದ ವೃಣ್ವತೇ ಎಂಬುದಕ್ಕೆ ಅನುದಾತ್ತ ಬರುವುದಿಲ್ಲ. ಹರತಃ ರಥಂ (ತೇರನ್ನು ಎಳೆಯುವುವು) ಇತಿ ಹರೀ, ಎರಡು ಕುದುರೆಗಳು. **ಹೃಪಿಷಿರುಹಿವೃತಿವಿದಿಛಿದಿಕೀರ್ತಿಭ್ಯಶ್ಚ** (ಉ.ಸೂ. ೪-೫-೫೮) **ಹೃಙ್ ಪಿಷ್ಲೃಸಂಚೂರ್ಣನೇ ರುಹಬೀಜಜನ್ಮನಿ ಪ್ರಾದುರ್ಭಾವೇ ಚ-ವೃತುವರ್ತನೇ-ವಿದಸತ್ತಾಯಾಂ ಕೃತಸಂಶಬ್ದನೇ**

ಈ ಧಾತುಗಳ ಮುಂದೆ ಇಕ್ಪ್ರತ್ಯಯವು ಬರುವುದು ಎಂಬುದರಿಂದ ಹೃ ಧಾತುವಿನಮುಂದೆ ಇನ್ ಬಂದನಂತರ ಗುಣ ಬಂದರೆ ದ್ವಿತೀಯಾ ದ್ವಿವಚನದಲ್ಲಿ ಹರೀ ಎಂದಾಗುವುದು. ಪ್ರತ್ಯಯವು ನಿತ್ತಾದ್ದರಿಂದ ನಿತ್ಸ್ವರ ಆದ್ಯುದಾತ್ತ-ಸಮುತ್ಸು-ಸಂಪೂರ್ವಕವಾದ ಅದ ಧಾತುವಿನ ಮುಂದೆ ಕ್ವಿಪ್ ಪ್ರತ್ಯಯ ಬರುವುದು. ಶತ್ರವಃ—ಶತಿ ಧಾತುವು ಸೌತ್ರವಾದುದು-ಎಂದರೆ ಪ್ರಸಿದ್ಧವಾದ ಧಾತುಪಾಠದಲ್ಲಿ ಇದನ್ನು ಪಾಠಮಾಡಿಲ್ಲ. ಸೂತ್ರಗಳಲ್ಲಿ ವ್ಯವಹಾರ ಮಾಡಿರುವುದರಿಂದ ಈ ಧಾತುವನ್ನು ಪ್ರಾಮಾಣಿಕವೆಂದು ಒಪ್ಪಬೇಕು ಎಂದರ್ಥ. ಹಿಂಸೆ ಎಂದು ಇದಕ್ಕೆ ಅರ್ಥ-ರುಶತಿಭ್ಯಾಂಕ್ರುನ್ (ಉ. ಸೂ. ೪-೫-೪೩) ಎಂಬುದರಿಂದ ಕ್ರುನ್ ಪ್ರತ್ಯಯ ಬರುವುದು. ಶತ್ರು ಎಂದಾಗುವುದು ಇದರಮುಂದೆ ಪ್ರಥಮಾವಿಭಕ್ತಿಬಹುವಚನ ಜಸ್ ಪ್ರತ್ಯಯವನ್ನು ಹಚ್ಚಬೇಕು. ಜಕಾರ ಸಕಾರಗಳಿಗೆ ಇತ್ಸಂಜ್ಞೆ ಬಂದು ಲೋಪ ಬರುವುದು. ಶತ್ರು+ಅಸ್ ಜಸಿ ಚ (ಪಾ. ಸೂ. ೭-೩-೧೦೯) ಜಸ್ ಪ್ರತ್ಯಯ ಪರದಲ್ಲಿರುವಾಗ ಇ ಉ ಋ ವರ್ಣಗಳನ್ನು ಕೊನೆಯಲ್ಲಿ ಹೊಂದಿರುವ ಶಬ್ದಕ್ಕೆ ಗುಣಬರುವುದು ಎಂದು ಅರ್ಥ. ಇದರಿಂದ ಶತ್ರು ಶಬ್ದದ ಉಕಾರಕ್ಕೆ ಓಕಾರ ಶತ್ರೋ+ಅಸ್-ಓಕಾರಕ್ಕೆ ಅವ್ ಆದೇಶ ಸ್‌ಗೆ ರೇಫಾದೇಶಬಂದು ವಿಸರ್ಗಬಂದರೆ ಶತ್ರವಃ ಎಂದಾಗುವುದು. ಇಲ್ಲಿ ಧಾತುಸ್ವರವನ್ನು ಬಾಧಿಸಿ ಪ್ರತ್ಯಯಾದ್ಯುದಾತ್ತವು ಪ್ರಾಪ್ತವಾದರೆ -ಅದನ್ನು ಬಾಧಿಸಿ ಞ್ನಿತ್ಯಾದಿರ್ನಿತ್ಯಂ ಎಂಬುದರಿಂದ ಶತ್ರು ಎಂಬ ಪ್ರತ್ಯಯಾಂತದ ಆದಿಗೆ ಉದಾತ್ತ ಬರುವುದು. ಕೊನೆಯ ವರ್ಣ ಅನುದಾತ್ತ ಅಸ್ ಸುಪ್ಪಾದ್ದರಿಂದ ಅನುದಾತ್ತ. ಉಕಾರಸ್ಥಾನದಲ್ಲಿ ಬಂದ ಓಕಾರ ಸ್ಥಾನಿವದ್ಭಾವದಿಂದ ಅನುದಾತ್ತ. ಅದರ ಸ್ಥಾನದಲ್ಲಿ ಬಂದ ಅಯ್ ಆದೇಶವೂ ಹೀಗೆಯೇ ಅನುದಾತ್ತ. ಅಂತು ಶತ್ರವಃ ಎಂಬಲ್ಲಿ ಮೊದಲನೆಯ ಅಕಾರ ಉದಾತ್ತ. ಎರಡು ಮೂರನೆಯ ವರ್ಣಗಳು ಅನುದಾತ್ತಗಳು.

ತಸ್ಮೈ—ತನುವಿಸ್ತಾರೇ ಧಾತು. ತ್ಯಜಿತನಿಯಜಿಭ್ಯೋಡಿತ್ (ಉ. ಸೂ. ೧-೧೩೭) ತ್ಯಾ ದ್ಯಾ ಭ ಸೋಽದಿಃ ಎಂಬ ಹಿಂದಿನ ಸೂತ್ರದಿಂದ ಅದಿಃ ಪದವು ಬರುವುದು ತ್ಯಜ ಹಾನೌ-ತನು ವಿಸ್ತಾರೇ-ಯಜ ದೇವ ಪೂಜಾದೌ ಈ ಮೂರುಧಾತುಗಳ ಮುಂದೆ ಅದಿಪ್ರತ್ಯಯ ಬರುವುದು. ಅದು ಡಿತ್ ಆಗುವುದು ಎಂದು ಸೂತ್ರಕ್ಕೆ ಅರ್ಥ. ಇದರಿಂದ ಅದಿ ಪ್ರತ್ಯಯ ಬಂದರೆ ತನ್+ಅದ್ ಪ್ರತ್ಯಯವು ಡಿತ್ತಾದ್ದರಿಂದ ಅದರ ಹಿಂದೆ ಇರುವ ಅನ್ ಎಂಬ ಟಿ ಗೆ ಲೋಪಬರುವುದು. ತ್+ಅದ್= ತದ್ ಎಂದಾಗವುದು. ಇದರ ಮುಂದೆ ಚತುರ್ಥೀ ವಿಭಕ್ತಿ ಏಕವಚನವಾದ ಙೇ ಪ್ರತ್ಯಯ. ತ್ಯದಾದೀನಾಮಃ (ಪಾ. ಸೂ. ೭-೨-೧೦೨) ವಿಭಕ್ತಿಯು ಪರದಲ್ಲಿರುವಾಗ ತ್ಯದಾದಿ ಗಣದ ಶಬ್ದಗಳ ಕೊನೆಯ ವರ್ಣಕ್ಕೆ ಅಕಾರಾದೇಶ ಬರುವುದು. ಇದರಿಂದ ದ್ ಗೆ ಅ-ಆದೇಶ. ತ+ಅ+ಏ, ಅತೋಗುಣೇ (ಪಾ. ಸೂ. ೬-೧-೬೭) ಪದದ ಕೊನೆಯಲ್ಲಿ ಇಲ್ಲದ ಹ್ರಸ್ವಾಕಾರದ ಮುಂದೆ ಗುಣ ವರ್ಣ ಅಂದರೆ ಅ-ಏ-ಓ ಗಳು ಪರದಲ್ಲಿದ್ದರೆ ಪೂರ್ವಪರ ವರ್ಣಗಳೆರಡರ ಸ್ಥಾನದಲ್ಲಿಯೂ ಪರದ ವರ್ಣವು ಒಂದೇ ಬರುವುದು. ಇದರಿಂದ ಎರಡು ಅಕಾರಗಳಿಗೂ ಪರರೂಪ ಬಂದರೆ ತ+ಏ ಸರ್ವನಾಮ್ನಃ ಸ್ಮೈ (ಪಾ. ಸೂ. ೭-೧-೧೪) ಹ್ರಸ್ವಾಕಾರಾಂತಸರ್ವನಾಮಶಬ್ದದ ಮುಂದೆ ಇರುವ ಙೇ ಪ್ರತ್ಯಯಕ್ಕೆ ಸ್ಮೈ ಆದೇಶ ಬರುವುದು. ಇದರಿಂದ ಙೇಗೆ ಸ್ಮೈ ಬಂದರೆ ತಸ್ಮೈ ಎಂದಾಗುವುದು. ಇಲ್ಲಿ ವ್ಯುತ್ಪತ್ತಿಪಕ್ಷದಲ್ಲಿ ಪ್ರತ್ಯಯ ಸ್ವರದಿಂದಲೂ ಅವ್ಯುತ್ಪತ್ತಿ ಪಕ್ಷದಲ್ಲಿ ಪ್ರಾತಿಪದಿಕ ಸ್ವರದಿಂದಲೂ ತದ್ ಶಬ್ದ ಅಂತೋದಾತ್ತ. ಪ್ರಕೃತಿ ಪ್ರತ್ಯಯ ವಿಭಾಗದಿಂದ ಸಿದ್ಧವಾಗುವುದಕ್ಕೆ ವ್ಯುತ್ಪನ್ನ ಎನ್ನುವರು. ಉಣಾದಿ ಸೂತ್ರಗಳಿಂದ ಸಿದ್ಧವಾಗುವ ಶಬ್ದಗಳನ್ನು ಹಲವರು ವ್ಯುತ್ಪನ್ನಗಳು ಅಂದರೆ ಪ್ರಕೃತಿಪ್ರತ್ಯಯ ವಿಭಾಗದಿಂದ ಸಿದ್ಧವಾದುವು ಎನ್ನುವರು. ಮತ್ತೆ ಕೆಲವರು ಅವ್ಯುತ್ಪನ್ನಗಳು ಎಂದರೆ ಪ್ರಕೃತಿಪ್ರತ್ಯಯ ವಿಭಾಗದಿಂದ ಸಿದ್ಧವಾದುವುಗಳಲ್ಲ ಎನ್ನುವರು. ಈ ಎರಡು ಪಕ್ಷದಲ್ಲಿಯೂ ತದ್ ಶಬ್ದವು ಹಿಂದೆ ಹೇಳಿದಂತೆ ಅಂತೋದಾತ್ತವೇ ಆಗುವುದು. ಙೇ ಪ್ರತ್ಯಯವು ಸುಪ್ಪಾದ್ದರಿಂದ ಅನು

ದಾತ್ತ. ಇದರ ಸ್ಥಾನದಲ್ಲಿ ಬಂದಿರುವುದರಿಂದ ಸ್ಮೈ ಅನುದಾತ್ತ. ಇಲ್ಲಿ ಯದ್ಯಪಿ 'ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ' (ಪಾ ಸೂ. ೬-೧-೧೬೮) ಸಪ್ತಮೀ ಬಹುವಚನ ಸು ಪ್ರತ್ಯಯ ಪರದಲ್ಲಿರುವಾಗ ಯಾವ ಏಕಾಚ್ಕವಾದ ರೂಪವಿದೆಯೋ ಅದರ ಮುಂದೆ ಇರುವ ತೃತೀಯಾದಿ ವಿಭಕ್ತಿಯು ಉದಾತ್ತವಾಗುವುದು. ಇದರಿಂದ ತೇಷು ರೂಪದ ಪ್ರಕ್ರಿಯಾಕಾಲದಲ್ಲಿ ತ+ಸು-ಎಂದು ಸು ಎಂಬ ಸಪ್ತಮೀಬಹುವಚನ ಪರದಲ್ಲಿರುವಾಗ ಏಕಾಚ್ಕವಾದ ಅಂದರೆ ಒಂದೇ ಸ್ವರವನ್ನು ಹೊಂದಿರುವ ಶಬ್ದದ ಮುಂದೆ ಇರುವ ಸ್ಮೈ ವಿಭಕ್ತಿಗೆ ಉದಾತ್ತವು ಪ್ರಾಪ್ತವಾಗುವುದು. ಆದರೂ ಸಃ ಎಂಬ ಪ್ರಥಮಾವಿಭಕ್ತಿಯ ಏಕವಚನ ಪ್ರಕ್ರಿಯಾ ಕಾಲದಲ್ಲಿಯೂ ತ+ಸು ಎಂದು ಸು ಪ್ರತ್ಯಯ ಪರದಲ್ಲಿರುವಾಗ ಅವರ್ಣಾಂತವಾಗಿದೆ. ಆದರಿಂದ **ನಗೋಶ್ವನ್ ಸಾವವರ್ಣರಾಡಙ್ಕ್ರುಙ್ಕೃದ್ಭ್ಯಃ** (ಪಾ. ಸೂ. ೬-೧--೧೮೨) ಗೋ ಶಬ್ದ ಶ್ವನ್ ಶಬ್ದ ಪ್ರಥಮೈಕವಚನದಲ್ಲಿ ಅವರ್ಣಾಂತವಾದ ಶಬ್ದ ರಾಟ್ ಅಙ್ ಕ್ರುಙ್ ಕೃತ್ ಇವುಗಳ ಮುಂದಿರುವ ವಿಭಕ್ತಿಗೂ ಮತುಪ್ ಪ್ರತ್ಯಯಕ್ಕೂ ಸಹ ಆರನೇ ಅಧ್ಯಾಯದಲ್ಲಿ ಹೇಳಿರುವ ಸ್ವರವು ಬರುವುದಿಲ್ಲ ಎಂದು ನಿಷೇಧ ಬರುವುದು. ಆದ್ದರಿಂದ ವಿಭಕ್ತಿಗೆ ಉದಾತ್ತ ಬರುವುದಿಲ್ಲ. ದ್ ಸ್ಥಾನದಲ್ಲಿ ಬಂದ ಅಕಾರ ವ್ಯಂಜನ ಸ್ಥಾನದಲ್ಲಿ ಬರುವುದರಿಂದ ಅನುದಾತ್ತ, ಪರರೂಪದಿಂದ ಬಂದ ಅಕಾರವು ಉದಾತ್ತ ಮತ್ತು ಅನುದಾತ್ತಗಳ ಸ್ಥಾನದಲ್ಲಿ ಬರುವುದರಿಂದ ಉದಾತ್ತವಾಗುವುದು. ಹೀಗೆ ತಸ್ಮೈ ಎಂಬಲ್ಲಿ ತ ಉದಾತ್ತ ಸ್ಮೈ ಅನುದಾತ್ತ. ಪದವನ್ನು ಬಿಡಿಸುವಾಗ ಸ್ಮೈ ಎಂಬ ಅನುದಾತ್ತವು ಉದಾತ್ತದ ಮುಂದೆ ಇರುವುದರಿಂದ ಸ್ವರಿತವಾಗುವುದು. ಸಂಹಿತಾಕಾಲದಲ್ಲಿ ಇಂದ್ರಾಯ ಶಬ್ದದ ಇ-ಯು ಪರದಲ್ಲಿರುವುದರಿಂದ' ಐ ಗೆ ಆಯ್ ಆದೇಶ ಬರುತ್ತೆ. ತಸ್ಮಾಯ್+ಇಂದ್ರಾಯ 'ಲೋಪಃಶಾಕಲ್ಯಸ್ಯ' (ಪಾ. ಸೂ. ೮-೩-೧೯) ಅಶ್ ವರ್ಣವು ಪರದಲ್ಲಿರುವಾಗ ಅವರ್ಣದ ಮುಂದೆ ಇರುವ ಪದಾಂತವಾದ ಯಕಾರ ವಕಾರಗಳಿಗೆ ಲೋಪ ಬರುವುದು ಎಂಬುದರಿಂದ ಯ್‌ಗೆ ಲೋಪ. 'ಪೂರ್ವತ್ರಾಸಿದ್ಧಮ್' (ಪಾ. ಸೂ ೮-೨-೧) ಎಂದು ಈ ಲೋಪವು ಅಸಿದ್ಧವಾಗುವುದರಿಂದ ಗುಣಸಂಧಿ ಬರುವುದಿಲ್ಲ. ಐಕಾರದ ಸ್ಥಾನದಲ್ಲಿ ಬಂದ ಆಕಾರವು ಸ್ಥಾನಿವದ್ಭಾವದಿಂದ ಅನುದಾತ್ತ. ಇದರ ಮುಂದೆ ಉದಾತ್ತ ವರ್ಣವು ಇರುವುದರಿಂದ ಇದು ಅನುದಾತ್ತತರವಾಗುವುದು.

ಸಂಹಿತಾಪಾಠಃ

## ಸು॒ತ॒ಪಾವ್ನೇ॑ ಸು॒ತಾ ಇ॒ಮೇ॑ ಶುಚ॑ಯೋ ಯಂತಿ ವೀ॒ತಯೇ॑ ।
## ಸೋಮಾ॑ಸೋ ದಧ್ಯಾ॑ಶಿರಃ ॥ ೫ ॥

ಪದಪಾಠಃ

**ಸು॒ತ॒ಽಪಾವ್ನೇ॑ । ಸು॒ತಾಃ । ಇ॒ಮೇ॑ । ಶುಚ॑ಯಃ । ಯ॒ಂತಿ॒ । ವೀ॒ತಯೇ॑ ॥**
**ಸೋಮಾ॑ಸಃ । ದಧಿ॑ಽಆಶಿರಃ ॥ ೫ ॥**

ಸಾಯಣಭಾಷ್ಯಂ

ಇಮೇ ಸೋಮಾಸೋಽಸ್ಮಿನ್ಕರ್ಮಣಿ ಸಂಪಾದಿತಾಃ ಸೋಮಾಃ ಸುತಪಾವ್ನೇಽಭಿಷುತಸ್ಯ ಸೋಮಸ್ಯ ಪಾನಕರ್ತ್ರೇ । ಷಷ್ಠ್ಯರ್ಥೇ ಚತುರ್ಥೀ । ತಸ್ಯ ಪಾತುರ್ವೀತಯೇ ಭಕ್ಷಣಾರ್ಥಂ ಯಂತಿ । ತಮೇವ ಪ್ರಾಪ್ನುವಂತಿ । ಕೀದೃಶಾಃ ಸೋಮಾಃ । ಸುತಾ ಅಭಿಷುತಾಃ ಶುಚಯೋ ದಶಾಪವಿತ್ರೇಣ ಶೋಧಿತತ್ವಾಚ್ಛುದ್ಧಾ ದಧ್ಯಾಶಿರಃ । ಅವನೀಯಮಾನಂ ದಧ್ಯಾಶೀರ್ದೋಷಘಾತಕಂ ಯೇಷಾಂ ಸೋಮಾನಾಂ ತೇ ದಧ್ಯಾಶಿರಃ ॥ ಸುತಪಾವ್ನೇ । ಸುತಂ ಪಿಬತೀತಿ ಸುತಪಾವಾ । ವನಿಪಃ ಪಿತ್ತ್ವಾದ್ಧಾತುಸ್ವರ ಏವ ಶಿಷ್ಯತೇ । ಸಮಾಸೇ ದ್ವಿತೀಯಾಪೂರ್ವಪದಪ್ರಕೃತಿಸ್ವರಂ ಬಾಧಿತ್ವಾ ಕೃದುತ್ತರಪದಪ್ರಕೃತಿಸ್ವರತ್ವಂ । ಶುಚಯಃ । ಶುಚ ದೀಪ್ತೌ । ಇನ್ನಿತ್ಯನುವೃತ್ತಾವಿಗುಪಧಾತ್ಕಿತ್ । ಉ. ೪-೧೧೯ । ಇತೀನ್ । ಕಿತ್ತ್ವಾಲ್ಲಘೂಪಧಗುಣಾಭಾವಃ । ನಿತ್ತ್ವಾದಾದ್ಯುದಾತ್ತತ್ವಂ । ವೀತಯೇ । ವೀ ಗತಿಪ್ರಜನಕಾಂತ್ಯಶನಖಾದನೇಷ್ವಿತ್ಯಸ್ಮಾನ್ಮಂತ್ರೇ ವೃಷೇಷಪಚಮನವಿದಭೂವೀರಾ ಉದಾತ್ತಃ ಪಾ. ೩-೩-೯೬ । ಇತಿ ಕ್ತಿನ್ನುದಾತ್ತಃ । ಸೋಮಾಸಃ । ಷುಞ್ ಅಭಿಷವೇ । ಅರ್ತಿಸ್ತುಸುಹುಸೃಧೃಕ್ಷಿಕ್ಷೀತ್ಯಾದಿನಾ । ಉ. ೧-೧೩೯ । ಮನ್ । ನಿತ್ತ್ವಾದಾದ್ಯುದಾತ್ತಃ । ಆಜ್ಜಸೇರಸುಕ್ । ಪಾ. ೭-೧-೫೦ । ಇತ್ಯಸುಗಾಗಮಃ । ದಧ್ಯಾಶಿರಃ । ದಧಾತಿ ಪುಷ್ಣಾತೀತಿ ದಧಿ । ಡುಧಾಞ್ ಧಾರಣಪೋಷಣಯೋಃ । ಆದೃಗಮಹನಜನಃ ಕಿಕಿನೌ ಲಿಟ್ ಚ । ಪಾ. ೩-೨-೧೭೧ । ಇತಿ ಕಿಸ್ । ಲಿಡ್ವದ್ಭಾವಾದ್ದ್ವಿರ್ಭಾವಃ । ಕಿತ್ತ್ವಾದಾಕಾರಲೋಪಃ । ನಿತ್ತ್ವಾದಾದ್ಯುದಾತ್ತತ್ವಂ । ಶ್ರೀ ಹಿಂಸಾಯಾಂ । ಶೃಣಾತಿ ಹಿನಸ್ತಿ ಸೋಮೇಽವನೀಯಮಾನಂ ಸತ್ಸೋಮಸ್ಯ ಸ್ವಾಭಾವಿಕಂ ರಸಮ್ಯೃಜೀಷತ್ವಪ್ರಯುಕ್ತಂ ನೀರಸಂ ದೋಷಂ ವೇತ್ಯಾಶೀಃ । ಕ್ವಿಪ್ಯೃತ ಇದ್ಧಾತೋಃ । ಪಾ. ೭-೧-೧೦೦ । ಇತೀತ್ವಂ ರಪರತ್ವಂ ಚ । ದಧ್ಯೇವಾಶೀರ್ಯೇಷಾಂ ಸೋಮಾನಾಂ ತೇ ದಧ್ಯಾಶಿರಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

ಸುತಾಃ—ಕಲ್ಲುಗಳಿಂದ ಜಜ್ಜಿ, ರಸವನ್ನು ಹಿಂಡಿ ತೆಗೆದಿರುವ । ಶುಚಯಃ—ದಶಾಪವಿತ್ರದಿಂದ ಶೋಧಿಸಿ ಶುದ್ಧವಾಗಿರುವ । ದಧ್ಯಾಶಿರಃ-ದಧಿ ಎಂದರೆ ಮೊಸರನ್ನು ಮಿಶ್ರಮಾಡಿರುವ । ಇಮೇ ಸೋಮಾಸಃ-ಈ ಸೋಮರಸಗಳು । ಸುತಪಾವ್ನೇ—ಸೋಮಪಾನವಮಾಡುವ ಇಂದ್ರನನ್ನು । ವೀತಯೇ—ಭಕ್ಷಣಾರ್ಥವಾಗಿ ಅಥವಾ ಪಾನಾರ್ಥವಾಗಿ । ಯಂತಿ—ಹೋಗಿಸೇರುತ್ತವೆ.

॥ ಭಾವಾರ್ಥ ॥

ಈ ಯಜ್ಞದಲ್ಲಿ ಕಲ್ಲುಗಳಿಂದ ಜಜ್ಜಿ ದಶಾಪವಿತ್ರದಿಂದ ಶೋಧಿಸಿ, ಶುದ್ಧವಾಗಿರುವಂತೆ ಮಾಡಿರುವ ಈ ಸೋಮರಸಕ್ಕೆ ಮೊಸರನ್ನು ಮಿಶ್ರಮಾಡಿ ಪಾನಯೋಗ್ಯವಾಗುವಂತೆ ಸಿದ್ಧಪಡಿಸಿರುವುದು. ಇಂತಹ ಸೋಮ ರಸಗಳು ಪಾನಾರ್ಥವಾಗಿ ಇಂದ್ರನನ್ನೇ ಹೋಗಿ ಸೇರುವವು ಎಂದರೆ ಇಂದ್ರನಿಗಾಗಿಯೇ ಇಂತಹ ಸೋಮರಸವು ಸಿದ್ಧಪಡಿಸಲ್ಪಟ್ಟಿರುವುದು. ಇದನ್ನು ಇಂದ್ರನು ಬಂದು ಪಾನಮಾಡುವನು.

## English Translation

These extracted pure Soma-juices, mixed with (or made harmless by) curds go to Soma drinker (Indra) for his drink.

॥ ವಿಶೇಷ ವಿಷಯಗಳು ॥

ಇಲ್ಲಿ ಸೋಮರಸಗಳು ಇಂದ್ರನನ್ನು ಹೋಗಿ ಸೇರುವವು ಎಂದರೆ ಇಂದ್ರನಿಗಾಗಿಯೇ ಸಿದ್ಧಪಡಿಸಿರುವುದರಿಂದ ಇಂದ್ರನು ಈ ಸೋಮವನ್ನು ಪಾನಮಾಡಿಯೇ ಮಾಡುವನು ಎಂದರ್ಥವು. ಇಂದ್ರನ ಪ್ರೀತ್ಯರ್ಥವಾಗಿಯೇ ಈ ಸೋಮರಸವು ಸಿದ್ಧಪಡಿಸಲ್ಪಟ್ಟಿರುವುದರಿಂದ ಇದು ಇಂದ್ರನನ್ನು ಸೇರಿ ಅವನಿಗೆ ತೃಪ್ತಿಯನ್ನುಂಟುಮಾಡುವುದು

**ವೀತಯೇ**—ಸ್ಕಂದಸ್ವಾಮಿ ಮತ್ತು ವೆಂಕಟಮಾಧವರು ಈ ಶಬ್ದಕ್ಕೆ ಪಾನಾರ್ಥವಾಗಿ ಎಂದರ್ಥ ಮಾಡಿರುವರು. ಸಾಯಣರು ಈ ಋಕ್ಕಿನಲ್ಲಿಯೂ ಮತ್ತು ಋ. ಸಂ. ೯-೯೭-೨೧ರಲ್ಲಿಯೂ ಭಕ್ಷಣಾರ್ಥವಾಗಿ ಎಂದೂ ಋ. ಸಂ ೩-೧೭-೫ರಲ್ಲಿ ಪ್ರೀತ್ಯರ್ಥವಾಗಿ ಎಂದೂ ಋ. ಸಂ. ೬-೧೬-೭ ಮತ್ತು ವಾಜಸನೇಯ ಸಂಹಿತಾ (ಶು. ಯಜುರ್ವೇದ) ೧-೧೫ ಮತ್ತು ೨೨-೧೩ರಲ್ಲಿ ತರ್ಪಣಾರ್ಥವಾಗಿ ಎಂದೂ ಅರ್ಥಮಾಡಿದಾರೆ.

**ಸೋಮಾಸಃ**—ಸೋಮಾಃ ಎಂಬ ಶಬ್ದದ ಪ್ರಾಚೀನಪ್ರಯೋಗವು. ಈ ಎರಡು ವಿಧವಾದ ಬಹುವಚನರೂಪಗಳೂ ಋಗ್ವೇದದಲ್ಲಿ ಬಳಕೆಯಲ್ಲಿವೆ.

**ದಧ್ಯಾಶಿರಃ**—ಈ ಶಬ್ದಕ್ಕೆ ಭಾಷ್ಯಕಾರರು **ಅವನೀಯಮಾನಂ ದಧ್ಯಾಶೀರ್ದೋಷಘಾತಕಂ ಯೇಷಾಂ ಸೋಮಾನಾಂ ತೇ ದಧ್ಯಾಶಿರಃ** ಎಂದರೆ ಸೋಮರಸದಲ್ಲಿರುವ ದೋಷಪರಿಹಾರಾರ್ಥವಾಗಿ ಮೊಸರನ್ನು ಇದಕ್ಕೆ ಮಿಶ್ರಮಾಡುವುದರಿಂದ ಇದಕ್ಕೆ ದಧ್ಯಾಶಿರಃ ಎಂದು ಹೆಸರು ಎಂದರ್ಥಮಾಡಿರುವರು. ಸೋಮರಸಕ್ಕೆ ದಧಿಯನ್ನು ಮಾತ್ರವಲ್ಲದೆ ಹಾಲು, ಹಿಟ್ಟು ಮೊದಲಾದ ಇತರ ದ್ರವ್ಯಗಳನ್ನು (ರುಚಿಗಾಗಿ) ಮಿಶ್ರಮಾಡಿ ಉಪಯೋಗಿಸುವುದು ರೂಢಿಯಲ್ಲಿತ್ತು. ಈ ವಿಚಾರವಾಗಿ ನಾವು ಈ ಋಗ್ವೇದಸಂಹಿತೆಯ ಭಾಗ ೧ ಪೇಜು 676 ರಲ್ಲಿ ವಿಸ್ತಾರವಾಗಿ ಬರೆದಿದೇವೆ ದಧ್ಯಾಶಿರಃ ಎಂಬ ಶಬ್ದವು ಈ ಋಕ್ಕಿನಲ್ಲಲ್ಲದೆ ಮುಂದೆ ಕೊಟ್ಟಿರುವ ಇತರ ಋಕ್ಕುಗಳಲ್ಲಿಯೂ ಇರುವುದು—

(೧) **ಇಮ ಆಯಾತಮಿಂದವಃ ಸೋಮಾಸೋ ದಧ್ಯಾಶಿರಃ ಸುತಾಸೋ ದಧ್ಯಾಶಿರಃ ।**
(ಋ ಸಂ. ೧-೧೩೭-೨)

(೨) **ಸುತಾ ಇಂದ್ರಾಯ ವಾಯವೇ ಸೋಮಾಸೋ ದಧ್ಯಾಶಿರಃ ॥**
(ಋ. ಸಂ. ೫-೫೧-೭)

(೩) **ಇಮ ಇಂದ್ರಾಯ ಸುನ್ವಿರೇ ಸೋಮಾಸೋ ದಧ್ಯಾಶಿರ. ॥**
(ಋ ಸಂ. ೭-೩೨-೪)

(೪) **ಏತೇ ಪೂಶಾ ವಿಪಶ್ಚಿತಃ ಸೋಮಾಸೋ ದಧ್ಯಾಶಿರಃ ॥**
(ಋ. ಸಂ. ೯-೨೨-೩)

(೫) **ಸುತಾ ಇಂದ್ರಾಯ ವಜ್ರಿಣೇ ಸೋಮಾಸೋ ದಧ್ಯಾಶಿರಃ ॥**

(ಋ. ಸಂ. ೯-೬೩-೧೫)

(೬) **ಏತೇ ಪೂತಾ ವಿಪಶ್ಚಿತಃ ಸೋಮಾಸೋ ದಧ್ಯಾಶಿರಃ ॥**

(ಋ. ಸಂ. ೯-೧೦೧-೧೨)

ಈ ದಧ್ಯಾಶಿರಶಬ್ದವಲ್ಲದೆ **ಗವಾಶಿರ, ಯವಾಶಿರ** ಮೊದಲಾದ ಇತರ ದ್ರವ್ಯಮಿಶ್ರಿತವಾದ **ಸೋಮರಸಗಳು** ಈ ಋಕ್ಕುಗಳಲ್ಲಿ ಪಠಿತವಾಗಿವೆ—

(೧) **ತೀವ್ರಾಃ ಸೋಮಾಸ ಆ ಗಹ್ಯಾಶೀರ್ವಂತಃ ಸುತಾ ಇಮೇ ॥**

(ಋ. ಸಂ. ೧-೨೩-೧)

ಈ ಋಕ್ಕಿನಲ್ಲಿ **ಆಶೀರ್ವಂತಃ ಸೋಮಾಸಃ** ಎಂದು ಇರುವುದರಿಂದ ಸೋಮರಸಕ್ಕೆ **ಹಾಲು,** ಮೊಸರು ಮೊದಲಾದ ಯಾವ ವಿಧವಾದ ಆಶಿರ ದ್ರವ್ಯಗಳನ್ನಾದರೂ ಬೆರಸಿರುವುದೆಂದು ಸಾಮಾನ್ಯವಾಗಿ ಹೇಳಿದೆ.

(೨) **ಶತಂ ವಾ ಯಃ ಶುಚೀನಾಂ ಸಹಸ್ರಂ ವಾ ಸಮಾಶಿರಾಂ ॥**

(ಋ. ಸಂ. ೧-೩೦-೨)

ಇಲ್ಲಿ ಸಮಾಶಿರಾಂ ಎಂದರೆ ಸೋಮರಸಕ್ಕೆ ಆಶಿರದ್ರವ್ಯಗಳನ್ನು ಚೆನ್ನಾಗಿ ಮಿಶ್ರಮಾಡಿರುವುದೆಂದು ಸಾಮಾನ್ಯವಾಗಿ ಹೇಳಿದೆ. ನಿರ್ದಿಷ್ಟವಾಗಿ ಯಾವ ದ್ರವ್ಯವನ್ನೂ ಹೇಳಿಲ್ಲ.

(೩) **ಸುಷುಮಾ ಯಾತಮದ್ರಿಭಿರ್ಗೋಶ್ರೀತಾ ಮತ್ಸರಾ ಇಮೇ ಸೋಮಾಸೋ ಮತ್ಸರಾ ಇಮೇ ।**

ಆ ರಾಜಾನಾ ದಿವಿಸ್ಪೃಶಾಸ್ಮತ್ರಾ ಗಂತಮುಪ ನಃ ॥

ಇಮೇ ವಾಂ ಮಿತ್ರಾವರುಣಾ ಗವಾಶಿರಃ ಸೋಮಾಃ ಶುಕ್ರಾ ಗವಾಶಿರಃ ॥

(ಋ. ಸಂ. ೧-೧೩೭-೧)

ಇಲ್ಲಿ **ಗೋಶ್ರೀತಾಃ** ಎಂದರೆ **ಗವಾಂ ಪಯೋಭಿರ್ಮಿಶ್ರಿತಾಃ** ಹಸುವಿನ ಹಾಲಿನಿಂದ ಮಿಶ್ರಿತವಾದವು ಎಂದರ್ಥವು ಇದೇ ಋಕ್ಕಿನ ಕೊನೆಯ ಪಾದದಲ್ಲಿರುವ **ಗವಾಶಿರಃ** ಎಂಬ ಶಬ್ದಕ್ಕೂ ಹಸುವಿನ ಹಾಲಿನಿಂದ ಮಿಶ್ರಿತವಾದ ಸೋಮವೆಂದೇ ಅರ್ಥವು.

(೪) **ಶುಚಿರಸಿ ಪುರುನಿಃಷ್ಠಾಃ ಕ್ಷೀರೈರ್ಮಧ್ಯತ ಆಶೀರ್ತಃ । ದಧ್ನಾ ಮಂದಿಷ್ಠಃ ಶೂರಸ್ಯ ॥**

(ಋ. ಸಂ. ೮-೨-೯)

ಇಲ್ಲಿ ಹಾಲು ಮತ್ತು ಮೊಸರು ಎರಡನ್ನೂ ಮಿಶ್ರಮಾಡಿದ ಬೇರೆ ಬೇರೆ ಎರಡು ರಸಗಳಿವೆಯೆಂದು ಹೇಳಿದೆ ಎಂದರೆ ಹಾಲನ್ನು ಮಿಶ್ರಮಾಡಿದ ಸೋಮರಸವೂ, ಮೊಸರನ್ನು ಮಿಶ್ರಮಾಡಿದ ಸೋಮರಸವೂ ಎರಡು ವಿಧವೂ ಇರುವುದೆಂದು ತಿಳಿಯಬೇಕು.

(೫) **ಸಂ ಶುಕ್ರಾಸಃ ಶುಚಯಃ ಸಂ ಗವಾಶಿರಃ ಸೋಮಾ ಇಂದ್ರಮಮಂದಿಷುಃ ॥**

(ಋ. ಸಂ. ೮-೫೨-೧೦)

ಇಲ್ಲಿ ಗವಾಶಿರ ಎಂದರೆ ಹಾಲುಮಿಶ್ರಿತವಾದ ಸೋಮವೆಂದು ಸ್ಪಷ್ಟವಾಗಿ ಹೇಳಿದೆ.

(೬) **ಅಧಾ ನಿಯುತ್ವ ಉಭಯಸ್ಯ ನಃ ಪಿಬ ಶುಚಿಂ ಸೋಮಂ ಗವಾಶಿರಂ ॥**

(ಋ- ಸಂ. ೮-೧೦೧-೧೦)

ಇಲ್ಲಿಯೂ ಗವಾಶಿರವೆಂಬ ಹಾಲುಮಿಶ್ರಿತವಾದ ಸೋಮವನ್ನೇ ಹೇಳಿದೆ.

(೭) **ಯತ್ರೇ ಸೋಮ ಗವಾಶಿರೋ ಯವಾಶಿರೋ ಭಜಾಮಹೇ ॥**

(ಋ. ಸಂ ೧-೧೮೭-೯)

(೮) **ಇಮಮಿಂದ್ರ ಗವಾಶಿರಂ ಯವಾಶಿರಂ ಚ ನಃ ಪಿಬ ।**

(ಋ. ಸಂ. ೩-೪೨-೭)

ಇಲ್ಲಿ ಗವಾಶಿರ ಮತ್ತು ಯವಾಶಿರ ಎಂಬ ಎರಡು ವಿಧವಾದ ಸೋಮರಸಗಳನ್ನೂ ಹೇಳಿದೆ-

(೯) **ಇಂದೋರಿಂದ್ರೋ ಯವಾಶಿರಃ ।**

(ಋ. ಸಂ. ೮-೯೨-೪)

(೧೦) **ತ್ರಿಕದ್ರುಕೇಷು ಮಹಿಷೋ ಯವಾಶಿರಂ ತುವಿಶುಷ್ಮಸ್ತೃಪತ್ಸೋಮಮಪಿಬದ್ವಿಷ್ಣುನಾ ಸುತಂ ಯಥಾವಶತ್ ॥** (ಋ. ಸಂ. ೨-೨೨-೧)

ಇಲ್ಲಿ ಯವಾಶಿರ ಎಂದರೆ ಹಿಟ್ಟುಮಿಶ್ರವಾದ ಸೋಮರಸವೆಂದು ಹೇಳಿದೆ.

(೧೧) **ಅಶ್ವಮೇಧಸ್ಯ ದಾನಾಃ ಸೋಮಾ ಇವ ತ್ರ್ಯಾಶಿರಃ ॥**

(ಋ. ಸಂ. ೫-೨೭-೫)

ಇಲ್ಲಿ ಸೋಮರಸಕ್ಕೆ ಹಾಲು, ಮೊಸರು, ಯವ ಎಂಬ ಮೂರು ವಿಧ ದ್ರವ್ಯಗಳನ್ನು ಮಿಶ್ರಮಾಡಿರುವುದೆಂದು ಹೇಳಿದೆ.

(೧೨) **ಸಾಧೋಃ ಪಿಬ ಪ್ರತಿಕಾಮಂ ಯಥಾ ತೇ ರಸಾಶಿರಃ ಪ್ರಥಮಂ ಸೋಮ್ಯಸ್ಯ ।**

(ಋ. ಸಂ. ೩-೪೮-೧)

ಇಲ್ಲಿ ರಸಾಶಿರ ಎಂದು ಹೇಳಿರುವುದರಿಂದ ಹಾಲು ಅಥವಾ ಮೊಸರು ಇವುಗಳಲ್ಲಿ ಯಾವುದನ್ನಾದರೂ ಮಿಶ್ರ ಮಾಡಿದ ಸೋಮವೆಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

ಸುತಪಾವ್ನೇ—ಸುತಂ ಪಿಬತೀತಿ-ಸುತಪಾವಾ (ಹಿಂಡಿದ ಸೋಮರಸವನ್ನು ಕುಡಿಯುವವನು) '**ಆತೋ ಮನಿನ್‌ಕ್ವನಿಪ್‌ವನಿಪಶ್ಚ**' (ಪಾ. ಸೂ. ೩-೨-೭೪) ಎಂಬುದರಿಂದ ವನಿಪ್ ಪ್ರತ್ಯಯ-ಪಿತ್ತಾದ್ದರಿಂದ ಅನುದಾತ್ತ ಬಂದರೆ ಪಾ ಎಂಬಲ್ಲಿ ಧಾತುಸ್ವರವೇ ನಿಲ್ಲುವುದು. ಸಮಾಸ ಬಂದಾಗ '**ತತ್ಪುರುಷೇತುಲ್ಯಾರ್ಥ**' (ಪಾ. ಸೂ- ೬-೨-೨) ಎಂಬುದರಿಂದ ಬರುವ ದ್ವಿತೀಯಾ ಪೂರ್ವಪದ ಪ್ರಕೃತಿಸ್ವರವನ್ನು ಬಾಧಿಸಿ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುವುದು. **ಶುಚಯಃ**-ಶುಚ ದೀಪ್ತೌ '**ಇಗುಪಧಾತ್ಕಿತ್**' (ಉ- ಸೂ. ೪-೫೫೯) ಇನ್ ಪದವು ಅನುವೃತ್ತವಾಗುವುದರಿಂದ, ಇಗು ಪದವಾದ ಧಾತುವಿಗೆ ಇನ್ ಬರುವುದು, ಅದು ಕಿತ್ತಾಗುವುದು, ಎಂಬುದರಿಂದ ಶುಚ್ ಧಾತುವಿನ ಮುಂದೆ ಇನ್ ಬರುತ್ತೆ.

ಪ್ರತ್ಯಯವು ಕಿತ್ತಾದ್ದರಿಂದ **ಲಘೂಪಧ** ಗುಣಬರುವುದಿಲ್ಲ. ಪ್ರತ್ಯಯವು ನಿತ್ತಾದ್ದರಿಂದ ಪ್ರತ್ಯಯಾಂತದ ಆದಿಯು ಉದಾತ್ತವಾಗುವುದು. ವೀತಯೇ — ವೀಗತಿವ್ಯಾಪ್ತಿಪ್ರಜನಕಾನ್ತ್ಯಸನಖಾದನೇಷು ಎಂಬ ಧಾತುವಿನ ಮುಂದೆ **'ಮಂತ್ರೇವೃಷೇಷಪಚಮನವಿದಭೂವೀರಾ ಉದಾತ್ತಃ'** (ಪಾ. ಸೂ. ೩-೩-೯೬) ಎಂಬುದರಿಂದ ಕ್ತಿನ್ ಪ್ರತ್ಯಯವೂ ಅದಕ್ಕೆ ಉದಾತ್ತವೂ ಬರುವುದು. ಸೋಮಾಸಃ-ಷು ಞ್ ಅಭಿಷವೇ **'ಅರ್ತಿಸ್ತುಸುಹುಸೃಧೃಕ್ಷಿಕ್ಷುಭಾಯಾವಾಪದಿಯಕ್ಷಿ ನೀಭ್ಯೋ ಮನ್'** (ಉ. ಸೂ. ೧-೧೩೭) ಎಂಬುದರಿಂದ ಮನ್ ಪ್ರತ್ಯಯ ಬರುವುದು. ಪ್ರತ್ಯಯವು ನಿತ್ತಾದ್ದರಿಂದ ಪ್ರತ್ಯಯಾಂತವು ಆದ್ಯುದಾತ್ತವಾಗುವುದು. **ಆಜ್ಜಸೇರಸುಕ್** (ಪಾ. ಸೂ ೭-೧-೫೦) ಎಂಬುದರಿಂದ ಸೋಮಶಬ್ದದ ಮುಂದೆ ಜಸ್ಸನ್ನಿಟ್ಟಾಗ ಅಸುಕ್ ಆಗಮ ಬರುವುದು. ದಧ್ಯಾಶಿರಃ—ದಧಾತಿ ಪುಷ್ಣಾತಿ ಇತಿ ದಧಿ (ಪುಷ್ಟಿ ಕೊಡುವುದು) **'ಆದೃಗಮಹನಜನಃಕಿಕಿನೌಲಿಟ್ಚ'** (ಪಾ. ಸೂ. ೩-೨-೧೭೧) ಛಂದಸ್ಸಿನಲ್ಲಿ ಆಕಾರಾಂತ ಋಕಾರಾಂತ ಧಾತುಗಳು, ಗಮಾದಿ ಧಾತುಗಳು ಇವುಗಳಿಗೆ ಕಿ-ಕಿನ್ ಎಂಬ ಪ್ರತ್ಯಯಗಳು ಪರ್ಯಾಯದಿಂದ ಬರುವುವು ಅವು ಲಿಟ್ಪ್ರತ್ಯಯದಂತೆ ಆಗುವುವು. ಎಂಬುದರಿಂದ ಧಾ ಧಾತುವಿನ ಮುಂದೆ ಕಿನ್ ಪ್ರತ್ಯಯ ಬರುವುದು, ಲಿಡ್ವದ್ಭಾವಾತಿದೇಶದಿಂದ **'ಲಿಟಿಧಾತೋರನಭ್ಯಾಸಸ್ಯ'** (ಪಾ. ಸೂ ೬-೧-೮) ಎಂಬುದರಿಂದ ದ್ವಿತ್ವ ಬರುವುದು. ಅಭ್ಯಾಸಕ್ಕೆ ಹ್ರಸ್ವ ಜಶ್ತ್ವಗಳು ಬರುವುವು. ಆಕಾರಕ್ಕೆ **'ಆತೋ ಲೋಪ ಇಟಿಚ'** (ಪಾ. ಸೂ ೬-೪-೬೪) ಎಂಬುದರಿಂದ ಲೋಪ ಬರುವುದು. ಪ್ರತ್ಯಯವು ನಿತ್ತಾದ್ದರಿಂದ ಪ್ರತ್ಯಯಾಂತದ ಆದಿಯು ಉದಾತ್ತ. ಶ್ರೀ ಹಿಂಸಾಯಾಂ-ಧಾತು-ಶೃಣಾತಿ ಹಿನಸ್ತಿ (ಸೋಮಲತೆಯಲ್ಲಿ, ಸುರಿಯಲ್ಪಟ್ಟದ್ದಾಗಿ ಅವರ ಸ್ವಾಭಾವಿಕ ರಸವನ್ನು ಹಿಂಡುವುದು. ಅಥವಾ ನೀರಸತ್ವದೋಷವನ್ನು ಹೋಗಲಾಡಿಸುವುದು.) ಎಂದು ವ್ಯುತ್ಪತ್ತಿಯಾದಾಗ ಆಶೀಃ ಎಂದಾಗುವುದು ಕ್ವಿಪ್ ಪ್ರತ್ಯಯವು ಬಂದಿರುವಾಗ **'ಋತ ಇದ್ಧಾತೋಃ'** (ಪಾ. ಸೂ. ೭-೧-೧೦೦) ಋಕಾರಾಂತ ಧಾತುವಿಗೆ ಹ್ರಸ್ವ ಇಕಾರಾ ದೇಶಬರುವುದು ಎಂದು ಇಕಾರಾದೇಶ ಬಂದರೆ **'ಉರಣ್ರಪರಃ'** (ಪಾ. ಸೂ. ೧-೧-೫೧) ಎಂಬುದರಿಂದ ಅದು ರ ಪರವಾಗಿ ಬರುವುದು. ದಧ್ನೇವ ಆಶೀಃ ಯೇಷಾಂ ಸೋಮಾನಾಂ ತೇ ದಧ್ಯಾಶಿರಃ ಎಂದು ಬಹುವ್ರೀಹಿ ಮಾಡಿದಾಗ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬.೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುವುದು. ॥ ೫ ॥

॥ ಸಂಹಿತಾಪಾಠಃ ॥

ತ್ವಂ ಸುತಸ್ಯ ಪೀತಯೇ ಸದ್ಯೋ ವೃದ್ಧೋ ಅಜಾಯಥಾಃ ।
ಇಂದ್ರ ಜ್ಯೈಷ್ಠ್ಯಾಯ ಸುಕ್ರತೋ ॥ ೬ ॥

॥ ಪದಪಾಠಃ ॥

**ತ್ವಂ । ಸುತಸ್ಯ । ಪೀತಯೇ । ಸದ್ಯಃ । ವೃದ್ಧಃ । ಅಜಾಯಥಾಃ ॥**
**ಇಂದ್ರ । ಜ್ಯೈಷ್ಠ್ಯಾಯ । ಸುಕ್ರತೋ ಇತಿ ಸುऽಕ್ರತೋ ॥ ೬ ॥**

॥ ಸಾಯಣಭಾಷ್ಯಂ ॥

ಸುಕ್ರತೋ ಶೋಭನಕರ್ಮನ್ ಶೋಭನಪ್ರಜ್ಞ ವಾ ಹೇ ಇಂದ್ರ ತ್ವಂ ಸುತಸ್ಯಾಭಿಷುತಸ್ಯ **ಸೋಮಸ್ಯ ಪೀತಯೇ ಪಾನಾರ್ಥಂ ಜ್ಯೈಷ್ಠ್ಯಾಯ ದೇವೇಷು ಜ್ಯೇಷ್ಠತ್ವಾರ್ಥಂ ಚ ಸದ್ಯಸ್ತಸ್ಮಿನ್ನೇವ ಕ್ಷಣೇ ವೃದ್ಧೋಽಜಾಯಥಾಃ । ಅಭಿವೃದ್ಧೋಽತ್ಸಾಹೇನ ಯುಕ್ತೋಽಭೂಃ ॥ ಪೀತಯೇ । ಪಾ ಪಾನ ಇತ್ಯಸ್ಮಾತ್ಸ್ಥಾಗಾಪಾಪಚೋ ಭಾವೇ । ಪಾ. ೩-೩-೯೫ । ಇತಿ ಕ್ತಿನ್ । ಘುಮಾಸ್ಥೇತ್ಯಾದಿನಾ । ಪಾ. ೬-೪-೬೬ । ಈತ್ವಂ । ತಸ್ಯ ನಿತ್ತ್ವೇಽಪಿ ವ್ಯತ್ಯಯೇನ ಪ್ರತ್ಯಯೋದಾತ್ತತ್ವಂ । ಉತ್ತರಸೂತ್ರಗತಮುದಾತ್ತ ಪದಮತ್ರಾಪಿ ವಾ ಯೋಜನೀಯಂ । ಸದ್ಯಃ । ಸದ್ಯಃ ಪರುತ್ಪರಾರೀತಿ ಸೂತ್ರೇಣ । ಪಾ. ೫-೩-೨೨ । ಸಮಾನೇಽಹನೀತ್ಯರ್ಥೇ ಸಮಾನಸ್ಯ ಸಭಾವೋ ದ್ಯಶ್ಚ ಪ್ರತ್ಯಯೋ ನಿಪಾತ್ಯತೇ । ಪ್ರತ್ಯಯಸ್ವರೇಣೋ-ದಾತ್ತಃ । ವೃದ್ಧಃ । ವೃಧು ವೃದ್ಧೌ । ಉದಿತೋ ವಾ । ಪಾ. ೭-೨-೫೬ । ಇತಿ ಕ್ತ್ವಾಪ್ರತ್ಯಯ ಇಟೋ ವಿಕಲ್ಪಿತತ್ವಾದ್ಯಸ್ಯ ವಿಭಾಷಾ । ಪಾ. ೭-೨-೧೫ । ಇತಿ ನಿಷ್ಠಾಯಾಮಿಟ್ಪ್ರತಿಷೇಧಃ । ಪ್ರತ್ಯಯಸ್ವರೇ-ಣೋದಾತ್ತಃ । ಜ್ಯೈಷ್ಠ್ಯಾಯ । ಜ್ಯೇಷ್ಠಸ್ಯ ಭಾವೋ ಜ್ಯೈಷ್ಠ್ಯಂ । ಗುಣವಚನಬ್ರಾಹ್ಮಣಾದಿಭ್ಯಃ ಕರ್ಮಣಿ ಚ । ಪಾ. ೫-೧-೧೨೪ । ಇತಿ ಷ್ಯಞ್ । ಞಿತ್ತ್ವಾದಾದ್ಯುದಾತ್ತಃ ॥**

॥ ಪ್ರತಿಪದಾರ್ಥ ॥

(ಹೇ) **ಸುಕ್ರತೋ**—ಉತ್ತಮ ಅಥವಾ ಸಾಹಸಕರ್ಮಯುಕ್ತನಾದ, ಅಥವಾ ಉತ್ತಮವಾದ ಜ್ಞಾನವುಳ್ಳ। **ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು । **ಸುತಸ್ಯ**—ಸಿದ್ಧಪಡಿಸಿರುವ ಸೋಮರಸದ ( ರಸವನ್ನು ) । **ಪೀತಯೇ**—ಪಾನಮಾಡುವುದಕ್ಕಾಗಿಯೂ । **ಜ್ಯೈಷ್ಠ್ಯಾಯ**—ದೇವತೆಗಳಲ್ಲಿ ಶ್ರೇಷ್ಠತ್ವವನ್ನು ಹೊಂದುವುದಕ್ಕಾಗಿಯೂ । **ಸದ್ಯಃ**—ಈ ಕ್ಷಣದಲ್ಲಿಯೇ । **ವೃದ್ಧಃ**—ಉತ್ಸಾಹದಿಂದ ಅಭಿವೃದ್ಧಿಯುಳ್ಳವನಾಗಿ । **ಅಜಾಯಥಾಃ**—ಆಗಿರುವೆ ।

॥ ಭಾವಾರ್ಥ ॥

ಸಾಹಸಕರ್ಮಯುಕ್ತನಾದ ಅಥವಾ ಬಹು ಪ್ರಜ್ಞೆಯುಳ್ಳ ಎಲೈ ಇಂದ್ರನೇ, ಈಗ ನಾವು ಇಲ್ಲಿ ಸಿದ್ಧಪಡಿಸಿ ಇಟ್ಟಿರುವ ಈ ಸೋಮರಸವನ್ನು ಪಾನ ಮಾಡುವುದಕ್ಕಾಗಿ ಅತ್ಯುತ್ಸಾಹಯುಕ್ತನಾಗಿರುವುದಲ್ಲದೆ ಈ ಸೋಮ ಪಾನದಿಂದ ದೇವತೆಗಳಲ್ಲೆಲ್ಲಾ ಶ್ರೇಷ್ಠನಾಗುವೆ

English Translation.

(1) Indra, performer of good deeds or possessor of fine intellect you have grown courageous for the sake of drinking the extracted Soma Juice and (attaining) seniority (among the goods).

‖ ವಿಶೇಷವಿಷಯಗಳು ‖

ವೃದ್ಧ :—ಈ ಶಬ್ದಕ್ಕೆ ಭಾಷ್ಯಕಾರರು **ಅಭಿವೃದ್ಧೋತ್ಸಾಹೇನ ಯುಕ್ತಃ** ಹೆಚ್ಚುತ್ತಿರುವ ಅಥವಾ ಹೆಚ್ಚಾದ ಉತ್ಸಾಹದಿಂದ ಕೂಡಿದ ಎಂದರ್ಥ ಮಾಡಿರುವರು. ಸ್ಕಂದಸ್ವಾಮಿಯು, **"ಪರಿವೃದ್ಧಃ ಪ್ರತಿಬಂಧಕಾಪನಯನಸಮರ್ಥಃ, ಶರೀರೇಣ ಚ ವೀರ್ಯೇಣ ಚ ಪರಿವೃದ್ಧಃ"** ಎಂದರೆ ಪ್ರತಿಬಂಧಕ ಅಥವಾ ತೊಂದರೆಗಳನ್ನು ಹೋಗಲಾಡಿಸುವುದಕ್ಕಾಗಿ ವೀರ್ಯೋತ್ಸಾಹದಿಂದಲೂ ಶರೀರ ಪ್ರಮಾಣದಿಂದಲೂ ದೊಡ್ಡದಾಗಿ ಬೆಳೆದ ಎಂದೂ, ವೆಂಕಟಮಾಧವರು ಪ್ರವೃದ್ಧಶರೀರ :—ದೊಡ್ಡ ಶರೀರವುಳ್ಳವನಾಗಿ ಎಂದೂ ಅರ್ಥಮಾಡಿರುವರು ಈ ವಿಚಾರದಲ್ಲಿ ಈ ಋಕ್ಕುಗಳನ್ನು ಇಲ್ಲಿ ಉದಾಹರಣೆಗಾಗಿ ಹೇಳಬಹುದು.

(೧) **ಅಷಾಳ್ಹೇನ ಶವಸಾ ಶೂಶುವಾಂಸಂ ಸದ್ಯಶ್ಚಿದ್ಯೋ ವಾವೃಧೇ ಅಸಾಮಿ ।**
(ಋ. ಸಂ. ೬-೧೯-೨)

(೨) **ಏವಾ ಜಜ್ಞಾನಂ ಸಹಸೇ ಅಸಾಮಿ ವಾವೃಧಾನಂ ರಾಧಸೇ ಚ ಶ್ರುತಾಯ ॥**
(ಋ. ೬-೩೮-೫)

ಈ ಎರಡು ಋಕ್ಕುಗಳಲ್ಲಿಯೂ ಇಂದ್ರನು ದೊಡ್ಡ ಆಕಾರವುಳ್ಳವನಾಗಿ ಬೆಳೆದನೆಂದು ಹೇಳಿದೆ. ಇದಲ್ಲದೆ ನಾವು ಹಿಂದೆಯೇ ಋ. ಸಂ. ೧-೮-೧ ನೇಯ ಋಕ್ಕಿನಲ್ಲಿ ಹೇಳಿದಂತೆ ಇಂದ್ರನು ತನ್ನ ಮಾಯಾಶಕ್ತಿಯಿಂದ ಸಮಯೋಚಿತವಾಗಿ ಅನೇಕ ವಿಧವಾದ ರೂಪಗಳನ್ನೂ ಆಕಾರಗಳನ್ನೂ ಧರಿಸಲು ಸಮರ್ಥನೆಂದು ವಿವರಿಸಿರುವುದರಿಂದ (ಋ ಸಂ. ಭಾಗ ೨. ಪೇಜು 89-90) ಇಲ್ಲಿಯೂ ಅದರಂತೆ ಭಾವಿಸಬೇಕು.

**ಜ್ಯೈಷ್ಠ್ಯಾಯ**—ಶ್ರೇಷ್ಠತ್ವ, ಹೆಚ್ಚುಗಾರಿಗೆ, ಉತ್ತಮಸ್ಥಾನ, ಎಂದರೆ ಮನುಷ್ಯರಲ್ಲಿಯೂ ದೇವತೆಗಳಲ್ಲಿಯೂ ಇಂತಹ ಉತ್ತಮಸ್ಥಾನ ಪ್ರಾಪ್ತಿಗಾಗಿ ಎಂದು. ಆದರೆ ಸೋಮಪಾನದಿಂದ ಇಂದ್ರನಿಗೆ ಶ್ರೇಷ್ಠತೆಯುಂಟಾಗುವುದೇ ? ಸೋಮಪಾನಕ್ಕೆ ಪೂರ್ವದಲ್ಲಿ ಇಂದ್ರನಿಗೆ ಶ್ರೇಷ್ಠತೆ ಇರಲಿಲ್ಲವೇ ಎಂದರೆ, ಇಂದ್ರನಿಗೆ ದೇವತೆಗಳಲ್ಲಿ ಶ್ರೇಷ್ಠತೆ ಇದ್ದೇ ಇದ್ದಿತು. ಸೋಮಪಾನದಿಂದ ಅದು ಹೆಚ್ಚು ವಿಕಸಿತವಾಯಿತು. ಆ ಕಾಲದಲ್ಲಿ ಸೋಮಪಾನ ಮಾಡುವುದು ಶ್ರೇಷ್ಠತೆಯ ಹೆಗ್ಗುರುತಾಗಿತ್ತು. ಈಗಲೂ ಸಹ ನಾವು ನೂತನ ದಂಪತಿಗಳನ್ನು ಆಶೀರ್ವಾದ ಮಾಡುವಾಗ ವರನ ವಿಷಯವಾಗಿ, **'ಭರ್ತಾ ತೇ ಸೋಮಪಾ ನಿತ್ಯಂ ಭವೇದ್ಧರ್ಮಪರಾಯಣಃ"** ಎಂದು ಹೇಳುವುದು ರೂಢಿಯಾಗಿದೆ. ಕೃಷ್ಣಯಜುರ್ವೇದ ತೈತ್ತಿರೀಯ ಬ್ರಾಹ್ಮಣದಲ್ಲಿ ಇಂದ್ರನ ಶ್ರೇಷ್ಠತೆಯ ವಿಷಯವಾಗಿ ಪ್ರಕಾರಾಂತರವಾಗಿ ಹೀಗೆ ಹೇಳಿದೆ—

**ಇಂದ್ರೋ ವಾ ಅಕಾಮಯತ । ಜ್ಯೈಷ್ಠ್ಯಂ ದೇವಾನಾಮಭಿಜಯೇಯಮಿತಿ । ಸ ಏತಮಿಂದ್ರಾಯ ಜ್ಯೇಷ್ಠಾಯೈ ಪುರೋಡಾಶಮೇಕಾದಶಕಪಾಲಂ ನಿರವಪನ್ಮಹಾವ್ರೀಹೀಣಾಂ । ತತೋ ವೈ ಸ ಜ್ಯೈಷ್ಠ್ಯಂ ದೇವಾನಾಮಭ್ಯಜಯತ್** (ತೈ. ಬ್ರಾ. ३-೧-೫).

ಎಂದರೆ ಇಂದ್ರನು ದೇವತೆಗಳಲ್ಲಿ ಶ್ರೇಷ್ಠತೆಯನ್ನು ಪಡೆಯುವುದಕ್ಕಾಗಿ ಜ್ಯೇಷ್ಠಾನಕ್ಷತ್ರವನ್ನುದ್ದೇಶಿಸಿ ವ್ರೀಹಿಯಿಂದ ಸಿದ್ಧಪಡಿಸಿದ ಏಕಾದಶಕಪಾಲವನ್ನು ಹೋಮಮಾಡಿ ಅದರಿಂದ ದೇವತೆಗಳಲ್ಲಿ ಶ್ರೇಷ್ಠತ್ವವನ್ನು ಪಡೆದನೆಂದು ಹೇಳಿರುವುದು.

|| ವ್ಯಾಕರಣಪ್ರಕ್ರಿಯಾ ||

**ತ್ವಮ್**— ಯುಷ್ ಧಾತುವು ಸೌತ್ರವಾದುದು. ಅಂದರೆ ಸೂತ್ರಗಳಲ್ಲಿ ವ್ಯವಹರಿಸಿರುವುದರಿಂದ ಸಿದ್ಧವಾಗಿದೆ. **ಯುಷ್ಯಸಿಭ್ಯಾಂ ಮದಿಕ್** (ಉ. ಸೂ. ೧-೧೩೬) ಯುಷ್ ಎಂಬ ಧಾತು ಅಸುಕ್ಷೇಪಣೇ. ಈ ಎರಡು ಧಾತುಗಳ ಮುಂದೆ **ಮದಿಕ್** ಪ್ರತ್ಯಯ ಬರುವುದು ಎಂದು ಈ ಸೂತ್ರದ ಅರ್ಥ. ಇದರಿಂದ ಯುಷ್ ಧಾತುವಿನ ಮುಂದೆ ಮದಿಕ್ ಪ್ರತ್ಯಯ ಬರುವುದು. ಈ ಪ್ರತ್ಯಯದಲ್ಲಿ ಇ-ಕ್ ಎರಡೂ ಲೋಪವನ್ನು ಹೊಂದಿ ಮದ್ ಮಾತ್ರ ಉಳಿಯುವುದು. ಯುಷ್+ಮದ್= ಯುಷ್ಮದ್ ಆಗುತ್ತದೆ. ಇದರ ಮುಂದೆ ಪ್ರಥಮಾ ಏಕವಚನ ಸು ಪ್ರತ್ಯಯ ಉಕಾರವು ಲೋಪಿಸಿ ಸ್ ಮಾತ್ರ ಉಳಿಯುತ್ತದೆ. ಯುಷ್ಮದ್+ಸ್ **ಙೇಪ್ರಥಮ-ಯೋರಮ್** (ಪಾ. ಸೂ. ೭-೧-೨೮) ಙೇ-ಪ್ರಥಮಯೋಃ-ಅಮ್ ಎಂದು ಇಲ್ಲಿ ಪದವಿಭಾಗ. ಪ್ರಥಮಾಚ ಪ್ರಥಮಾಚ ಪ್ರಥಮೇ ತಯೋಃ ಪ್ರಥಮಯೋಃ ಎಂದು ವಿಗ್ರಹ. ಇಲ್ಲಿ ಮೊದಲನೆಯ ಪ್ರಥಮಾ ಎಂಬುದರಿಂದ ಪ್ರಥಮಾವಿಭಕ್ತಿಗೂ, ಎರಡನೆಯ ಪ್ರಥಮಾ ಎಂಬುದರಿಂದ ದ್ವಿತೀಯಾವಿಭಕ್ತಿಗೂ ಗ್ರಹಣವು. ದ್ವಿತೀಯಾ ವಿಭಕ್ತಿಗೆ ಪ್ರಥಮಾಪದದಿಂದ ಗ್ರಹಣವು ಯುಕ್ತವೇ? ಎಂದರೆ ಇಲ್ಲಿ ಮೊದಲನೆ ಪ್ರಥಮಾಪದದಿಂದ ಪ್ರಥಮಾ ವಿಭಕ್ತಿಗೆ ಗ್ರಹಣವಾದಮೇಲೆ ದ್ವಿತೀಯಾವಿಭಕ್ತಿ ಮೊದಲುಗೊಂಡು ಆರು ವಿಭಕ್ತಿಗಳು ಉಳಿದಿವೆ. ಅವುಗಳಲ್ಲಿ ಮೊದಲನೆಯದು ದ್ವಿತೀಯಾವಿಭಕ್ತಿಯೇ ಆಗುವುದು. ಆದ್ದರಿಂದ ಎರಡನೆಯ ಪ್ರಥಮಾಪದದಿಂದ ದ್ವಿತೀಯಾ ವಿಭಕ್ತಿಗೆ ಗ್ರಹಣವು ಯುಕ್ತವೇ ಆಗಿದೆ. 'ಯುಷ್ಮದಸ್ಮದ್ಭ್ಯಾಂಙಸೋಶ್' (ಪಾ. ಸೂ. ೭-೧-೨೭) ಎಂಬ ಸೂತ್ರದಿಂದ **ಯುಷ್ಮದಸ್ಮದ್ಭ್ಯಾಂ** ಎಂಬ ಪದವು ಅನುವೃತ್ತವಾಗುವುದು. ಙೇ ಎಂಬುದರಲ್ಲಿ ಷಷ್ಠೀವಿಭಕ್ತಿಗೆ ಲೋಪಬಂದಿದೆ. ಅಂತು ಈ ಸೂತ್ರಕ್ಕೆ (೭-೧-೨೮) ಯುಷ್ಮದ್-ಅಸ್ಮದ್ ಈ ಎರಡು ಶಬ್ದಗಳ ಮುಂದೆ ಬರುವ **ಙೇ** ಪ್ರತ್ಯಯಕ್ಕೂ, ಪ್ರಥಮಾ ದ್ವಿತೀಯಾ ವಿಭಕ್ತಿಗಳಲ್ಲಿಯ ಆರು ಪ್ರತ್ಯಯಗಳಿಗೂ **ಅಮ್** ಆದೇಶ ಬರುವುದು ಎಂದು ಅರ್ಥವು. ಇದರಿಂದ ಸ್‌ಗೆ ಅಮ್ ಆದೇಶ. ಯುಷ್ಮದ್ ಅಮ್, **ತ್ವಾಹೌಸೌ** (ಪಾ. ಸೂ. ೭-೨-೯೪) ಇಲ್ಲಿ ತ್ವಾಹೌ-ಸೌ ಎಂದು ಪದವಿಭಾಗ **ಮಪರ್ಯನ್ತಸ್ಯ** (ಪಾ. ಸೂ. ೭-೨-೯೧) ಎಂಬುದು ಅಧಿಕಾರದಿಂದ ಬರುವುದು ಯುಷ್ಮದಸ್ಮದೋರನಾದೇಶೇ (ಪಾ. ಸೂ. ೭-೨-೮೬) ಇದರಿಂದ ಯುಷ್ಮದಸ್ಮದೋಃ ಎಂಬುದು ಅನುವೃತ್ತವಾಗುವುದು. ಅಂತು ಈ ಸೂತ್ರಕ್ಕೆ ಸು ಪ್ರತ್ಯಯ ಪರದಲ್ಲಿರುವಾಗ ಯುಷ್ಮದ್-ಅಸ್ಮದ್ ಶಬ್ದಗಳ ಮಪರ್ಯಂತಕ್ಕೆ ಎಂದರೆ ಯುಷ್ಮ್ ಅಸ್ಮ್ ಇವುಗಳಿಗೆ ಕ್ರಮವಾಗಿ ತ್ವ-ಅಹ, ಎಂಬ ಆದೇಶಗಳು ಬರುವುವು ಎಂದು ಅರ್ಥ. ಇದರಿಂದ ತ್ವ ಆದೇಶ ಬಂದರೆ ತ್ವ-ಅದ್-ಅಮ್ ಎಂದಾಗುತ್ತದೆ 'ಅತೋಗುಣೇ' (ಪಾ.ಸೂ. ೬-೧-೯೭) ಪದದ ಕೊನೆಯಲ್ಲಿಲ್ಲದ ಅಕಾರದ ಮುಂದೆ ಗುಣವರ್ಣ ಅಂದರೆ ಅ-ಏ-ಓಗಳು ಪರದಲ್ಲಿರುವಾಗ ಪೂರ್ವಪರಗಳ ಸ್ಥಾನಗಳಲ್ಲಿ ಪರರೂಪ ಒಂದೇ ಬರುವುದು ಎಂಬುದರಿಂದ ತ್ವ+ಅದ್ ಎಂಬಲ್ಲಿ ಪರರೂಪ ತ್ವದ್+ಅಮ್ **ಶೇಷೇಲೋಪಃ** (ಪಾ. ಸೂ. ೭-೨-೯೦) ಶೇಷೇ-ಲೋಪಃ ಎಂದು ಪದವಿಭಾಗ- 'ಅಷ್ಟನ ಆ ವಿಭಕ್ತೌ' (ಪಾ. ಸೂ. ೭-೨-೮೪) ಎಂಬುದರಿಂದ ವಿಭಕ್ತೌ ಪದವು ಅನುವೃತ್ತವಾಗುವುದು. ಇದಕ್ಕೆ ಶೇಷೇ ಎಂಬುದು ವಿಶೇಷಣವು. ಶೇಷ ಎಂದರೆ ಹಿಂದೆ ಹೇಳಿರುವದಕ್ಕಿಂತಲೂ ಬೇರೆಯಾದುದು ಎಂದರ್ಥ. ಈ ಸೂತ್ರದ ಹಿಂದೆ ಯುಷ್ಮದಸ್ಮದೋರನಾದೇಶೇ (ಪಾ ಸೂ. ೭-೨-೮೬) ದ್ವಿತೀಯಾಯಾಂ ಚ (ಪಾ. ಸೂ. ೭-೨-೮೭) ಪ್ರಥಮಾ ಯಾಶ್ಚದ್ವಿವಚನೇ ಭಾಷಾಯಾಂ (೭-೨-೮೮) ಈ ಮೂರು ಸೂತ್ರಗಳಿಂದ ಆಕಾರಾದೇಶವನ್ನೂ 'ಯೋಚಿ' (ಪಾ. ಸೂ. ೭-೨-೮೯) ಎಂಬುದರಿಂದ ಯಕಾರಾದೇಶವನ್ನೂ ಕೆಲವು ವಿಭಕ್ತಿಗಳಲ್ಲಿ ವಿಧಿಸಿರುವರು. ಆದ್ದರಿಂದ ಶೇಷೇ ವಿಭಕ್ತೌ ಎಂಬುದಕ್ಕೆ ಆತ್ವ ಯತ್ವಗಳಿಗೆ ನಿಮಿತ್ತವಾಗದೇ ಇರುವ ವಿಭಕ್ತಿ ಎಂದು ಅರ್ಥ. ಏವಂಚ

ಅತ್ವ ಯತ್ವಗಳಿಗೆ ನಿಮಿತ್ತವಾಗದೇ ಇರುವ ವಿಭಕ್ತಿಯು ಪರದಲ್ಲಿರುವಾಗ ಯುಷ್ಮದ್ ಅಸ್ಮದ್ ಶಬ್ದಗಳ ಕೊನೆಯ ವರ್ಣಕ್ಕೆ ಲೋಪಬರುವುದು ಎಂದು ಒಂದು ಅರ್ಥ.

**ಶೇಷೇ**—ಎಂಬಲ್ಲಿ **ವಿವಕ್ಷಾತಃ ಕಾರಕಾಣಿಭವಂತಿ** ಅಂದರೆ ಕಾರಕಗಳು ವಕ್ತೃಗಳ ಇಚ್ಛೆಗೆ ಅನುಸಾರವಾಗಿ ಬರುವುವು ಎಂದು ಹೇಳಿರುವುದರಿಂದ ಷಷ್ಠೀವಿಭಕ್ತಿಯು ಅರ್ಥವಾದ ಸ್ಥಾನ ಎಂಬುದನ್ನು ಸಪ್ತಮೀ ವಿಭಕ್ತಿಯ ಅರ್ಥವಾದ ಅಧಿಕರಣ ಎಂದು ವಿವಕ್ಷೆಮಾಡಿಕೊಂಡು ಸಪ್ತಮೀವಿಭಕ್ತಿಯು ಬಂದಿದೆ. ಆದ್ದರಿಂದ ಶೇಷೇ ಎಂಬುದಕ್ಕೆ ಶೇಷಸ್ಯ ಎಂದೇ ಅರ್ಥವು. ಏನಂತ ವಿಭಕ್ತಿಯು ಪರದಲ್ಲಿರುವಾಗ ಯುಷ್ಮದ್-ಅಸ್ಮದ್ ಶಬ್ದಗಳ ಮಪರ್ಯಂತಭಾಗಕ್ಕಿಂತಲೂ ಶೇಷವಾದುದಕ್ಕೆ ಲೋಪಬರುವುದು ಎಂದು ಮತ್ತೊಂದು ಅರ್ಥ. ತ್ವದ್+ಅಮ್ ಎಂಬಲ್ಲಿ ಮೊದಲನೆ ಅರ್ಥದಂತೆ ಕೊನೆಯ ವರ್ಣಕ್ಕೆ ಲೋಪಬಂದರೆ ತ್ವ+ಅಮ್ **ಅಮಿಪೂರ್ವಃ** (ಪಾ. ಸೂ. ೬-೧-೧೦೭) ಎಂಬುದರಿಂದ ಪೂರ್ವರೂಪ ಬಂದರೆ ತ್ವಮ್ ಎಂದಾಗುವುದು. ಎರಡನೇ ಅರ್ಥರೀತ್ಯಾ ತ್ವದ್-ಅಮ್ ಎಂಬಲ್ಲಿ ಅದ್ ಎಂಬುದಕ್ಕೆ ಲೋಪಬಂದು ತ್ವ್ ಅಮ್=ತ್ವಮ್ ಎಂದಾಗುವುದು. ಹೀಗೆ ಎರಡು ಪಕ್ಷದಲ್ಲ ತ್ವಮ್ ಎಂಬ ರೂಪವು ಸಿದ್ಧಿಸುವುದು. ಯುಷ್ಮದ್ ಎಂಬಲ್ಲಿ ವ್ಯುತ್ಪತ್ತಿಪಕ್ಷದಲ್ಲಿ ಪ್ರತ್ಯಯ ಸ್ವರದಿಂದ ಮ ವರ್ಣದ ಅಕಾರ ಉದಾತ್ತ, ಅವ್ಯುತ್ಪತ್ತಿ ಪಕ್ಷದಲ್ಲಿ **ಫಿಷೋಂತಉದಾತ್ತಃ** (ಫಿ ಸೂ. ೧-೧) ಎಂಬುದರಿಂದ ಅಕಾರಉದಾತ್ತ, ಎರಡು ಪಕ್ಷದಲ್ಲಿ ಶೇಷಾನುದಾತ್ತಸ್ವರದಿಂದ ಯು ವರ್ಣದ ಉಕಾರ ಅನುದಾತ್ತ, ಪ್ರಥಮೈಕವಚನ ಸು ಎಂಬ ಸುಪ್ಪಿನಸ್ಥಾನದಲ್ಲಿ ಬಂದ ಅಮ್ ಎಂಬುದು ಸ್ಥಾನಿವದ್ಭಾವದಿಂದ ಅನುದಾತ್ತ **ಅನುದಾತ್ತೌ ಸುಪ್ಪಿತೌ** ಎಂಬ ಸೂತ್ರದಿಂದ ಸು ಅನುದಾತ್ತ. ಯುಷ್ಮ ಎಂಬುದಕ್ಕೆ ಬಂದ ತ್ವ ಆದೇಶವು ಸ್ಥಾನಿವದ್ಭಾವದಿಂದ ಅನುದಾತ್ತ, ತ್ವ+ಅಮ್‌ಗಳಿಗೆ ಪರರೂಪದಿಂದ ಬಂದ ಅಕಾರವು **ಏಕಾದೇಶಉದಾತ್ತೇನೋದಾತ್ತಃ** ಎಂಬುದರಿಂದ ಉದಾತ್ತ. **ಶೇಷೇ ಲೋಪಃ** ಎಂಬುದರಿಂದ ದಕಾರಕ್ಕೆ ಲೋಪ ಎಂಬ ಪಕ್ಷದಲ್ಲಿ ತ್ವ ಅಮ್‌ಗಳಿಗೆ ಪೂರ್ವರೂಪದಿಂದ ಬರುವ ಏಕಾದೇಶವು ಹಿಂದೆ ಹೇಳಿದಂತೆಯೇ ಉದಾತ್ತ. **ಶೇಷೇ ಲೋಪಃ** ಎಂಬುದರಿಂದ ಅದ್‌ಗೆ ಲೋಪ ಎಂಬ ಪಕ್ಷದಲ್ಲಿ ತ್ವದ್ ಅಮ್ ಎಂಬಲ್ಲಿ ಹಿಂದೆ ಹೇಳಿದಂತೆ ಉದಾತ್ತವಾದ ಅದ್‌ಗೆ ಲೋಪಬಂದಿರುವುದರಿಂದ **ಅನುದಾತ್ತಸ್ಯಚಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಯಾವ ಅನುದಾತ್ತವನ್ನು ನಿಮಿತ್ತಮಾಡಿಕೊಂಡು ಉದಾತ್ತವರ್ಣಕ್ಕೆ ಲೋಪವು ಬರುವುದೋ ಆ ಅನುದಾತ್ತವು ಉದಾತ್ತವಾಗುವುದು ಎಂಬುದರಿಂದ ಅದ್ ಎಂಬ ಉದಾತ್ತಲೋಪಕ್ಕೆ ನಿಮಿತ್ತವಾದ ಅಮ್ ಎಂಬಲ್ಲಿಯ ಅನುದಾತ್ತವು ಉದಾತ್ತವಾಗುವುದು

**ಸುತಸ್ಯ**—ಷುಞ್ ಅಭಿಷವೇ ಧಾತು. ಇದರಮುಂದೆ '**ನಿಷ್ಠಾ** (ಪಾ. ಸೂ. ೩-೨-೧೦೨) ಭೂತಾರ್ಥದಲ್ಲಿರುವ ಧಾತುವಿನ ಮುಂದೆ ಕ್ತ ಮತ್ತು ಕ್ತವತು ಎಂಬ ಪ್ರತ್ಯಯಗಳು ಪರ್ಯಾಯದಿಂದ ಬರುವುವು ಎಂಬುದರಿಂದ ಕ್ತ ಪ್ರತ್ಯಯ ಬರುತ್ತೆ. ಕ್‌ಗೆ ಇತ್ಸಂಜ್ಞೆಬಂದು ಲೋಪ ಬರುವುದು. **ಧಾತ್ವಾದೇಃಷಃಸಃ** (ಪಾ. ಸೂ. ೬-೧-೬೪ ಎಂಬುದರಿಂದ ಷಕಾರಕ್ಕೆ ಸಕಾರ ಸು+ತ= ಸುತ ಎಂದಾಗುವುದು. ಇದರಮುಂದೆ ಷಷ್ಠೀವಿಭಕ್ತಿ ಏಕವಚನ ಙಸ್ ಪ್ರತ್ಯಯ ಸುತ+ಙಸ್ **ಟಾಙಸಿಙಸಾಮಿನಾತ್ಸ್ಯಾಃ** (ಪಾ. ಸೂ. ೭-೧-೧೨) ಅಕಾರವನ್ನು ಕೊನೆಯಲ್ಲಿ ಹೊಂದಿರುವ ಶಬ್ದದ (ಅಂಗದ) ಮುಂದೆ ಇರುವ ಟಾ-ಙಸಿ-ಙಸ್ ಇವುಗಳಿಗೆ ಕ್ರಮವಾಗಿ ಇನ್—ಆತ್-ಸ್ಯ ಎಂಬ ಆದೇಶಗಳು ಬರುವುವು ಎಂಬುದರಿಂದ ಙಸ್‌ಗೆ ಸ್ಯ-ಆದೇಶ ಬಂದು ಸುತಸ್ಯ ಎಂದಾಗುವುದು ಪ್ರತ್ಯಯ ಸ್ವರದಿಂದ ಸುತಶಬ್ದವು ಅಂತೋದಾತ್ತ **ಅನುದಾತ್ತೌ ಸುಪ್ಪಿತೌ** ಎಂಬುದರಿಂದ ಅನುದಾತ್ತವಾದ ಙಸ್‌ನ ಸ್ಥಾನ

ದಲ್ಲಿ ಬಂದ ಸ್ಯ ವು ಸ್ಥಾನಿವದ್ಭಾವದಿಂದ ಅನುದಾತ್ತ. ಈ ಕೊನೆಯ ಅನುದಾತ್ತವು ಉದಾತ್ತವಾದ ತ ಎಂಬುದರ ಮುಂದೆ ಇರುವುದರಿಂದ **ಉದಾತ್ತಾದನುದಾತ್ತಸ್ಯ ಸ್ವರಿತಃ** ಎಂಬುದರಿಂದ ಸ್ವರಿತವಾಗುವುದು.

**ಪೀತಯೇ**— ಪಾ ಪಾನೇ ಎಂಬ ಧಾತುವಿನ ಮುಂದೆ **ಸ್ಥಾ ಗಾ ಪಾ ಪಚೋಭಾವೇ** (ಪಾ ಸೂ. ೩-೩-೯೫) ಈ ಧಾತುಗಳ ಮುಂದೆ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯು ಬರುವದು ಎಂಬುದರಿಂದ ಕ್ತಿನ್ ಪ್ರತ್ಯಯ ಬಂದರೆ **ಘುಮಾಸ್ಥಾಗಾಪಾಜಹಾತಿಸಾಂಹಲಿ** (ಪಾ. ಸೂ. ೬-೪-೬೬] ಘುಸಂಜ್ಞೆಯುಳ್ಳ ಧಾತುಗಳು ಎಂದರೆ ದಾ-ಧಾ ಮೊದಲಾದ ಧಾತುಗಳು ಮಾ-ಸ್ಥಾ-ಗಾ-ಪಾ ಜಹಾತಿ ಸಾ-ಎಂಬ ಧಾತುಗಳ ಅಕಾರಕ್ಕೆ ಹಲಾದಿಯಾಗಿದ್ದು ಕಿತ್ ಅಥವಾ ಙಿತ್ ಆದ ಆರ್ಧಧಾತುಕಪ್ರತ್ಯಯ ಪರದಲ್ಲಿದ್ದರೆ ಈಕಾರಾದೇಶ ಬರುವುದು ಎಂಬುದರಿಂದ ಈತ್ವಬಂದು **ಪೀತಿ** ಎಂದಾಗುವುದು. ಪ್ರತ್ಯಯ ನಿತ್ತಾದರೂ ವ್ಯತ್ಯಯದಿಂದ **ಆದ್ಯುದಾತ್ತಸ್ಯ** (ಪಾ. ಸೂ. ೩-೧-೩) ಎಂಬುದರಿಂದ ಪ್ರತ್ಯಯಕ್ಕೆ ಆದ್ಯುದಾತ್ತವೇ ಬರುವುದು ಅಥವಾ **ಮಂತ್ರೇ ವೃಷೇಷಪಚಮನವಿದಭೂವೀರಾಉದಾತ್ತಃ** (ಪಾ. ಸೂ. ೩-೩-೯೬) ಎಂಬ ಮುಂದಿನ ಸೂತ್ರದಲ್ಲಿರುವ ಉದಾತ್ತಃ ಎಂಬ ಪದವನ್ನು **ಸ್ಥಾಗಾಪಾಪಚೋ-ಭಾವೇ** ಎಂಬ ಸೂತ್ರದಲ್ಲಿ ಅಪಕರ್ಷಮಾಡಿಕೊಂಡು ಈ ಧಾತುಗಳಿಗೆ ಕ್ತಿನ್ ಬರುವುದು. ಅದು ಉದಾತ್ತವೂ ಆಗುವುದು ಎಂದು ಅರ್ಥ ವರ್ಣಿಸಿಯಾದರೂ ಉದಾತ್ತವನ್ನು ಇಲ್ಲಿ ಉಪಪಾದಿಸಬೇಕು. ಇದರಮುಂದೆ **ಚತುರ್ಥೀವಿಭಕ್ತಿ** ಏಕವಚನ **ಙೇ** ಪ್ರತ್ಯಯ ಪೀತಿ+ಙೇ **ಶೇಷೋಘ್ಯಸಖಿ** (ಪಾ. ಸೂ. ೧-೪-೭) ನದೀ ಸಂಜ್ಞೆಯನ್ನು ಹೊಂದದೇ ಇರುವ ಹ್ರಸ್ವವಾದ ಇ ಅಥವಾ ಉ ವರ್ಣಗಳನ್ನು ಕೊನೆಯಲ್ಲಿ ಹೊಂದಿರುವ ಶಬ್ದವು ಘಿ ಎಂಬ ಸಂಜ್ಞೆಯನ್ನು ಹೊಂದುವುದು. ಆದರೆ ಸಖಿ ಶಬ್ದಕ್ಕೆ ಈ ಸಂಜ್ಞೆ ಬರುವುದಿಲ್ಲ ಎಂಬುದರಿಂದ ಪೀತಿ ಶಬ್ದಕ್ಕೆ ಘಿ ಸಂಜ್ಞೆ ಇದೆ. ಆದ್ದರಿಂದ **ಘೇರ್ಙಿತಿ** (ಪಾ. ಸೂ ೭-೩-೧೧೧) ಙಕಾರಕ್ಕೆ ಇತ್ಸಂಜ್ಞೆ ಬಂದಿರುವ ಸುಪ್ ಪರದಲ್ಲಿದ್ದರೆ ಘಿ ಸಂಜ್ಞೆಯನ್ನು ಹೊಂದಿರುವ ಶಬ್ದಕ್ಕೆ ಗುಣಬರುವುದು ಎಂಬುದರಿಂದ ಗುಣಬಂದರೆ **ಪೀತೇ+ಙೇ** ಙಕಾರಕ್ಕೆ ಇತ್ಸಂಜ್ಞೆ ಲೋಪ. ಪೀತೇ+ಏ= **ಏಚೋಽಯವಾಯಾವಃ** (ಪಾ ಸೂ. ೬-೧-೭೮) ಎಂಬುದರಿಂದ ಅಯ್ ಆದೇಶ ಬಂದರೆ ಪೀತಯ್+ಏ= ಪೀತಯೇ ಎಂದಾಗುವುದು. ಇಲ್ಲಿ ಏ ಯು ಸುಪ್ ಆದ್ದರಿಂದ ಅನುದಾತ್ತ. **ತಿ** ಎಂಬುದು ಉದಾತ್ತ ಎಂದು ಉಪಪಾದಿಸಿದೆ. ಇಕಾರ ಸ್ಥಾನದಲ್ಲಿ ಬಂದ ಏ ಎಂಬುದು ಸ್ಥಾನಿವದ್ಭಾವದಿಂದ ಉದಾತ್ತ. ಅದರ ಸ್ಥಾನದಲ್ಲಿ ಬಂದ ಅಯ್ ಆದೇಶವು ಸ್ಥಾನಿವದ್ಭಾವದಿಂದ ಉದಾತ್ತ. ಇದರ ಮುಂದೆ ಇರುವ ಅನುದಾತ್ತವಾದ ಸುಪ್‌ನ ಏ ಕಾರವು ಸ್ವರಿತವಾಗುವುದು. ಪೀ ಎಂಬಲ್ಲಿ ಈಕಾರವು ಶೇಷಾನುದಾತ್ತಸ್ವರದಿಂದ ಅನುದಾತ್ತ. ಹೀಗೆ ಪೀತಯೇ ಎಂಬಲ್ಲಿ ಮೊದಲನೆಯ ವರ್ಣ ಅನುದಾತ್ತ ಎರಡನೆಯದು ಉದಾತ್ತ ಮೂರನೆಯದು ಸ್ವರಿತ ಎಂದು ಏರ್ಪಡುವುದು.

**ಸದ್ಯಃ**— ಸದ್ಯಃ ಪರುತ್ಪರಾರ್ಯೈಷಮಃ ಪರೇದ್ಯವ್ಯದ್ಯ ಪೂರ್ವೇದ್ಯುರನ್ಯೇದ್ಯುರನ್ಯತರೇದ್ಯುರಿತ-ರೇದ್ಯುರಪರೇದ್ಯುರಧರೇದ್ಯುರುಭಯೇದ್ಯುರುತ್ತರೇದ್ಯುಃ (ಪಾ. ಸೂ. ೫-೩-೨೨) ಇವುನಿಪಾತಿಸಲ್ಪಡುವುವು. **ಸಮಾನಸ್ಯ ಸಭಾವೋದ್ಯಶ್ಚಾಹನಿ** (ಪಾ. ಸೂ. ೫-೩-೨೨) ಅಹವೃತ್ತಿಯಾದ ಸಪ್ತಮ್ಯಂತಸಮಾನ ಶಬ್ದದ ಮುಂದೆ ದ್ಯಸ್ ಪ್ರತ್ಯಯವೂ ಸಮಾನ ಶಬ್ದಕ್ಕೆ ಸ ಆದೇಶವೂ ಬರುವುದು, ಸಮಾನೇ ಅಹನಿ ಎಂಬ ಅರ್ಥದಲ್ಲಿ ಸದ್ಯಃ ಎಂದಾಗುವುದು. ಪ್ರತ್ಯಯಸ್ವರದಿಂದ ಕೊನೆಯ ವರ್ಣವು ಉದಾತ್ತವಾಗುವುದು.

**ವೃದ್ಧಃ**—ವೃಧು ವೃದ್ಧೌ ಧಾತು. **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ ವೃಧ್+ತ. **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೦೫) ವಲಾದಿಯಾದ ಆರ್ಧ ಧಾತುಕಕ್ಕೆ ಇಟ್ ಆಗಮ ಬರುವುದು.

ಎಂಬುದರಿಂದ ಯದ್ಯಪಿ ತ ಎಂಬುದಕ್ಕೆ ಇಡಾಗಮವು ಪ್ರಾಪ್ತವಾಗುವುದು. ಆದರೆ **ಯಸ್ಯವಿಭಾಷಾ** (ಪಾ. ಸೂ. ೭-೨-೧೫) ಯಾವ ಧಾತುವಿನ ಮುಂದಿರುವ ಪ್ರತ್ಯಯಕ್ಕೆ ಎಲ್ಲಾದರೂ ಒಂದು ಸ್ಥಳದಲ್ಲಿ ವಿಕಲ್ಪದಿಂದ ಇಟ್ ಆಗಮವು ವಿಹಿತವಾಗಿರುವುದೋ ಆ ಧಾತುವಿನ ಮುಂದೆ ಬರುವ ಕ್ತ ಮತ್ತು ಕ್ತವತು ಪ್ರತ್ಯಯಗಳಿಗೆ ಇಡಾಗಮವು ಬರುವುದಿಲ್ಲ. ಎಂಬುದರಿಂದ ಇಡಾಗಮಕ್ಕೆ ನಿಷೇಧ ಬರುವುದು, ವೃಧು ಧಾತುವು ಉದಿತ್. ಆದ್ದರಿಂದ **ಉದಿತೋವಾ** (ಪಾ. ಸೂ. ೭-೨)೫೬) ಉದಿತ್ತಾದ ಧಾತುವಿನ ಮುಂದೆ ಇರುವ ಕ್ತ್ವಾ ಪ್ರತ್ಯಯಕ್ಕೆ ಇಟ್ ವಿಕಲ್ಪವಾಗಿ ಬರುವುದು ಎಂದು ವೃಧು ಧಾತುವಿನ ಮುಂದೆ ಇರುವ ಪ್ರತ್ಯಯಕ್ಕೆ ವಿಕಲ್ಪವಾಗಿ ಇಟ್ ವಿಹಿತವಾಗಿದೆ. ಆದ್ದರಿಂದ ಹಿಂದೆ ಹೇಳಿದಂತೆ ಕ್ತ ಪ್ರತ್ಯಯಕ್ಕೆ ಇಲ್ಲಿ ಇಟ್ ಆಗಮ ಬರುವುದಿಲ್ಲ ವೃಧ್-ತ ಎಂದಿರುವಾಗ **ಝಷಸ್ತಥೋರ್ಧೋಽಧಃ** (ಪಾ.ಸೂ ೮-೨-೪೦) ಧಾ ಧಾತು ಸಂಬಂಧಿಯಲ್ಲ ಝಷ್ ಪ್ರತ್ಯಾಹಾರದ ವರ್ಣಗಳ ಮುಂದೆ ಇರುವ ತಕಾರ ಥಕಾರಗಳಿಗೆ ಧಕಾರಾದೇಶ ಬರುವುದು. ಎಂಬುದರಿಂದ, ಧ್ ಎಂಬ ಝಷ್ ನ ಮುಂದೆ ಇರುವ ತಕಾರಕ್ಕೆ ಧಕಾರ ಬರುತ್ತೆ. ವೃಧ್+ಧ **ಝಲಾಂ ಜಶ್ ಝಶಿ** (ಪಾ. ಸೂ. ೮-೪-೫೩) ಝಶ್ ವರ್ಣ ಪರದಲ್ಲಿಗುವಾಗ ಝಲ್ ಪ್ರತ್ಯಾಹಾರಕ್ಕೆ ಸೇರಿದ ವರ್ಣಗಳಿಗೆ ಜಶ್ ವರ್ಣಗಳು ಬರುವುವು ಎಂಬುದರಿಂದ ಮೊದಲನೆಯ ಧಕಾರಕ್ಕೆ ದಕಾರಾದೇಶ-ವೃದ್+ಧ= ವೃದ್ಧ ಎಂದಾಗುತ್ತೆ. ಧಾತು ಸ್ವರವನ್ನು ಬಾಧಿಸಿ ಪ್ರತ್ಯಯ ಸ್ವರವು ಬರುವುದರಿಂದ ಇದು ಅಂತೋದಾತ್ತ ಇದರ ಮುಂದೆ ಪ್ರಥಮೈಕ ವಚನ ಸು ಪ್ರತ್ಯಯವನ್ನು ಹಚ್ಚಿದರೆ ಸಂಹಿತಾಕಾಲದಲ್ಲಿ ಅಜಾಯಥಾಃ ಶಬ್ದದ ಅಕಾರವು ಪರದಲ್ಲಿದೆ ಆದ್ದರಿಂದ ವೃದ್ಧ+ಸ್+ಅಜಾಯಥಾಃ ಎಂಬಲ್ಲಿ-**ಸಸಜುಷೋರುಃ** (ಪಾ. ಸೂ. ೮-೨-೬೬) ಎಂಬುದರಿಂದ ಸ್ ಗೆ ರು ಆದೇಶ **ಅತೋರೋರಪ್ಲುತಾದಪ್ಲುತೇ** (ಪಾ. ಸೂ. ೬-೧-೧೧೩) ಎಂಬುದರಿಂದ ರ್‌ಗೆ ಉ ಆದೇಶ, ಅ+ಉ ಗಳಿಗೆ ಓ ಗುಣ ಬಂದು ಓ ಆಗುವುದು ವೃದ್ಧೋ+ಅಜಾಯಥಾಃ **ಪ್ರಕೃತ್ಯಾಂತಃಪಾದಮವ್ಯಪರೇ** (ಪಾ. ಸೂ. ೬-೧-೧೧೫) ಹ್ರಸ್ವಾಕಾರ ಪರದಲ್ಲಿರುವಾಗ ಋಕ್ಪಾದದ ಮಧ್ಯದಲ್ಲಿರುವ ಏ ಓಗಳಿಗೆ ಪ್ರಕೃತಿಭಾವ ಬರುವುದು. ಆದರೆ ಹ್ರಸ್ವಾಕಾರವು ಯಕಾರ ಅಥವಾ ವಕಾರದ ಹಿಂದೆ ಇದ್ದರೆ ಈ ಪ್ರಕೃತಿಭಾವ ಬರುವುದಿಲ್ಲ. ಇಲ್ಲಿ ಅಜಾಯಥಾಃ ಎಂಬಲ್ಲಿಯ ಹ್ರಸ್ವಾಕಾರವು ಯಕಾರ ವಕಾರಗಳ ಹಿಂದೆ ಇಲ್ಲ. ಆದ್ದರಿಂದ ಇದು ಪರದಲ್ಲಿರುವಾಗ ಓಕಾರಕ್ಕೆ ಪ್ರಕೃತಿಭಾವ ಬರುವುದು. ಅಂದರೆ ಯಾವ ಸಂಧಿಕಾರ್ಯವೂ ಬರುವುದಿಲ್ಲ. ಆದ್ದರಿಂದ ವೃದ್ಧೋ ಅಜಾಯಥಾಃ ಎಂದಾಗುವುದು. ಇಲ್ಲಿ ರ್ ಸ್ಥಾನದಲ್ಲಿ ಬಂದ ಉಕಾರವು ವ್ಯಂಜನ ಸ್ಥಾನದಲ್ಲಿ ಬರುವುದರಿಂದ ಅನುದಾತ್ತ. ಇದಕ್ಕೆ ವೃದ್ಧ ಶಬ್ದದ ಉದಾತ್ತ ಅಕಾರದೊಂದಿಗೆ ಗುಣಸಂಧಿಯಿಂದ ಬಂದ ಓಕಾರವು **ಏಕಾದೇಶ ಉದಾತ್ತೇನೋದಾತ್ತಃ** ಎಂಬುದರಿಂದ ಉದಾತ್ತ

**ಅಜಾಯಥಾಃ**—ಜನೀ ಪ್ರಾದುರ್ಭಾವೇ ಧಾತು. ಇದರ ಮುಂದೆ ಲಙ್. ಅದಕ್ಕೆ ಆತ್ಮನೇಪದ ಸಂಜ್ಞಕವಾದ ಮಧ್ಯಮ ಪುರುಷ ದ್ವಿವಚನ ಥಾಸ್‌ಪ್ರತ್ಯಯ. **ದಿವಾದಿಭ್ಯಃಶ್ಯನ್** (ಪಾ.ಸೂ. ೩-೧-೬೯) ದಿವಾದಿ (೪ನೇ) ಗಣ ಪಠಿತ ಧಾತುಗಳ ಮುಂದೆ ಕರ್ತೃ ಎಂಬ ಅರ್ಥವನ್ನು ಬೋಧಿಸುವ ಸಾರ್ವಧಾತುಕವು ಪರದಲ್ಲಿರುವಾಗ ಶ್ಯನ್ ವಿಕರಣ ಬರುವುದು. ಎಂಬುದರಿಂದ ಶ್ಯನ್ ಬರುವುದು. ಇದರಲ್ಲಿ ಯ ಮಾತ್ರ ಉಳಿಯುವುದು ಜನ್+ಯ+ಥಾಸ್ **ಜ್ಞಾಜನೋರ್ಜಾ**, (ಪಾ. ಸೂ. ೭-೦-೭೯) ಶಕಾರೇತ್ಸಂಜ್ಞಕ ಪ್ರತ್ಯಯವು ಪರದಲ್ಲಿರುವಾಗ ಜ್ಞಾ (ಅವಬೋಧನೇ) ಜನೀ (ಪ್ರಾದುರ್ಭಾವೇ) ಧಾತುಗಳಿಗೆ ಜಾ ಆದೇಶಬರುವುದು ಎಂಬುದರಿಂದ ಜನ್‌ಗೆ ಜಾ ಆದೇಶ. ಜಾ+ಯ ಥಾಸ್ **ಲುಙ್ ಲಙ್‌ಲೃಙ್‌ಕ್ಷ್ವಡುದಾತ್ತಃ** (ಪಾ. ಸೂ. ೬-೪-೭೧) ಲುಙ್-ಲಙ್-ಲೃಙ್ ಇವು ಪರದಲ್ಲಿರುವಾಗ ಧಾತುವಿನ ಆದಿಗೆ ಅ ಆಗಮ ಬರುವುದು ಎಂಬುದರಿಂದ ಅ ಆಗಮ ಅ ಜಾ+ಯ+

ಧಾಸ್. ಸ್‌ಗೆ ರುತ್ವ ವಿಸರ್ಗಗಳು ಬಂದರೆ ಅಜಾಯಥಾಃ ಎಂದಾಗುವುದು. ಇದು **ತಿಙ್ಙತಿಙಃ** ಎಂಬುದರಿಂದ ಸರ್ವಾನುದಾತ್ತ ಸಂಹಿತಾಕಾಲದಲ್ಲಿ ಓ ಎಂಬ ಉದಾತ್ತದ ಮುಂದೆ ಇರುವುದರಿಂದ ಅ ಸ್ವರಿತ, ಮಿಕ್ಕ ಎರಡು ಅ ಗಳು **ಸ್ವರಿತಾತ್ಸಂಹಿತಾಯಾಂ** ಎಂಬುದರಿಂದ ಸ್ವರಿತ.

**ಜ್ಯೈಷ್ಠ್ಯಾಯ**—ಜ್ಯೇಷ್ಠಸ್ಯ ಭಾವಃ ಜ್ಯೈಷ್ಠ್ಯಂ **ಗುಣವಚನ ಬ್ರಾಹ್ಮಣಾದಿಭ್ಯಃ ಕರ್ಮಣಿಚ** (ಪಾ-ಸೂ ೫-೧-೧೨೪) ಷಷ್ಠ್ಯಂತಗಳಾದ ಗುಣೋಪಸರ್ಜನ ದ್ರವ್ಯವಾಚಗಳ ಮುಂದೂ ಷಷ್ಠ್ಯಂತಗಳಾದ ಬ್ರಾಹ್ಮಣಾದಿ ಗಣಪಠಿತ ಶಬ್ದಗಳ ಮುಂದೂ ಭಾವಾರ್ಥದಲ್ಲಿಯೂ ಕರ್ಮಾರ್ಥದಲ್ಲಿಯೂ ಷ್ಯಙ್ ಪ್ರತ್ಯಯ ಬರುವುದು ಎಂಬುದರಿಂದ ಷ್ಯಙ್ ಬರುವುದು. ಪ್ರತ್ಯಯವು ಞಿತ್ತಾದ್ದರಿಂದ ಪ್ರತ್ಯಯಾಂತವು ಆದ್ಯುದಾತ್ತವಾಗುವುದು. || ೬ ||

ಸಂಹಿತಾಪಾಠಃ

ಆ ತ್ವಾ ವಿಶಂತ್ವಾಶವಃ ಸೋಮಾಸ ಇಂದ್ರ ಗಿರ್ವಣಃ |
ಶಂ ತೇ ಸಂತು ಪ್ರಚೇತಸೇ || ೭ ||

ಪದಪಾಠಃ

ಆ | ತ್ವಾ | ವಿಶಂತು | ಆಶವಃ | ಸೋಮಾಸಃ | ಇಂದ್ರ | ಗಿರ್ವಣಃ ||
ಶಂ | ತೇ | ಸಂತು | ಪ್ರಽಚೇತಸೇ || ೭ ||

|| ಸಾಯಣಭಾಷ್ಯಂ ||

ಹೇ ಇಂದ್ರ ತ್ವಾಂ ಸೋಮಾಸಃ ಸೋಮಾ ಆ ವಿಶಂತು | ಆಭಿಮುಖ್ಯೇನ ಪ್ರವಿಶಂತು | ಕೀದೃಶಾಃ ಸೋಮಾಃ | ಆಶವಃ ಸವನತ್ರಯೇ ಪ್ರಕೃತಿವಿಕೃತ್ಯೋರ್ವಾ ವ್ಯಾಪ್ತಿಮಂತಃ | ಕೀದೃಶೇಂದ್ರ | ಗಿರ್ವಣೋ ಗೀರ್ಭಿಃ ಸ್ತುತಿಭಿಃ ಸಂಭಜನೀಯ ದೇವವಿಶೇಷ | ಗಿರ್ವಣಾ ದೇವೋ ಭವತಿ ಗೀರ್ಭಿರೇನಂ ವನಯಂತಿ | ನಿ. ೬-೧೪ | ಇತಿ ಯಾಸ್ಕಃ | ತಥಾವಿಧ ಹೇ ಇಂದ್ರ ತೇ ತವ ಪ್ರಚೇತಸೇ ಪ್ರಕೃಷ್ಟಜ್ಞಾನಾಯ ಶಂ ಸುಖರೂಪಾಃ ಸೋಮಾಃ ಸಂತು || ಗಿರ್ವಣಃ | ಗೃಣಂತೀತಿ ಗಿರಃ ಸ್ತುತಯಃ | ಗೄ ಶಬ್ದೇ | ಕ್ವಿಪ್ಯೄತ ಇದ್ಧಾತೋಃ | ಪಾ. ೭-೧-೧೦೦ | ಇತೀತ್ವಂ ರಪರತ್ವಂ ಚ | ಗೀರ್ಭಿರ್ವನ್ಯತೇ ಸೇವ್ಯತ ಇತಿ ಗಿರ್ವಣಾಃ | ವನ ಷಣ ಸಂಭಕ್ತೌ | ಸಂಭಕ್ತಿಃ ಸೇವಾ | ಸರ್ವಧಾತುಭ್ಯೋಽಸುನ್ | ಉ. ೪-೧೮೮ | ಇತ್ಯಸುನ್ಪ್ರತ್ಯಯಃ | ಪ್ರಚೇತಸೇ | ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ||

॥ ಪ್ರತಿಪದಾರ್ಥ ॥

**ಗಿರ್ವಣಃ**—ವಾಕ್ಯಗಳಿಂದ ಸ್ತುತಿಸಲ್ಪಡುವ । **ಇಂದ್ರ**-ಎಲೈ ಇಂದ್ರನೇ । **ಆಶವಃ**—(ಪ್ರಕೃತಿವಿಕೃತಿ ರೂಪಗಳಾದ ಯಾಗಗಳ ಸವನತ್ರಯದಲ್ಲಿಯೂ) ಬಳಸಲ್ಪಡುವ । **ಸೋಮಾಸಃ**—ಸೋಮರಸಗಳು । **ತ್ವಾ**—ನಿನ್ನನ್ನು । **ಆ ವಿಶಂತು**—ಪ್ರವೇಶಿಸಲಿ (ನಿನ್ನನ್ನು ಸೇರಲಿ) । ( ಮತ್ತು ಆ ಸೋಮರಸಗಳು ) **ತೇ**—ನಿನಗೆ । **ಪ್ರಚೇತಸೇ**-ಉತ್ಕೃಷ್ಟಜ್ಞಾನವನ್ನುಂಟುಮಾಡುವುದಕ್ಕಾಗಿ । **ಶಂ**—ಸುಖರೂಪವಾಗಿ । **ಸಂತು**—ಆಗಲಿ ॥

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಯಾವಾಗಲೂ ವಾಕ್ಯಗಳಿಂದ (ಸ್ತೋತ್ರಗಳಿಂದ) ಸ್ತುತಿಸಲ್ಪಡುವವನು ; ನಾವು ಮಾಡುವ ಯಜ್ಞಯಾಗಾದಿಗಳಲ್ಲಿ ಸಿದ್ಧಪಡಿಸುವ ಸೋಮರಸವು ನಿನಗೆ ಸೇರಲಿ ಮತ್ತು ನೀನು ಅದರಿಂದ ತೃಪ್ತಿಗೊಳ್ಳುವುದರಿಂದ ಆ ಸೋಮರಸವು ನಿನಗೆ ಸುಖವನ್ನುಂಟುಮಾಡಲಿ.

## English Translation

O Indra, you are the object of our praises; may these pervading soma juices enter you (thereby) making you happy; may the soma juices help you to attain superior intelligence.

॥ ವಿಶೇಷವಿಷಯಗಳು ॥

ಸೋಮರಸಗಳು ನಿನ್ನನ್ನು ಪ್ರವೇಶಿಸಲಿ ಎಂದರೆ ಸೋಮರಸವನ್ನು ನೀನು ಪಾನಮಾಡು ಅದರಿಂದ ನಿನ್ನ ಉದರದಲ್ಲಿ ಸೋಮರಸವು ಪ್ರವೇಶಿಸಿದಂತಾಯಿತು ಎಂದರ್ಥವು. ಆಶವಃ—ವ್ಯಾಪ್ತವಾದ, ವಿಶೇಷವಾಗಿ ಉಪಯೋಗಿಸಲ್ಪಡುವ, ಎಂದರೆ ಯಜ್ಞದ ಸವನತ್ರಯಗಳಲ್ಲಿಯೂ ಸೋಮಾಭಿಷವಣವೇ ಮುಖ್ಯಾಂಗಭೂತವಾದುದು. ಈ ಸೋಮರಸವನ್ನು ಪಾನಮಾಡುವುದರಿಂದ ಮನಸ್ಸಿಗೆ ಸಂತೋಷವುಂಟಾಗಿ ಸುಖವಾಗುವುದಲ್ಲದೆ ಸೋಮಪಾನಮಾಡುವ ಇಂದ್ರನಿಗೆ ಬುದ್ಧಿಶಕ್ತಿಯನ್ನೂ ಹೆಚ್ಚಿಸುವುದೆಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

ಆ—ಇದು ನಿಪಾತ. ಆದ್ದರಿಂದ **ನಿಪಾತಾ ಆದ್ಯುದಾತ್ತಾಃ** ಎಂಬುದರಿಂದ ಆದ್ಯುದಾತ್ತ.

ತ್ವಾ—ಯುಷ್ ಧಾತುವಿನ ಮುಂದೆ **ಯುಷ್ಯಸಿಭ್ಯಾಂಮದಿಕ್** ಎಂಬುದರಿಂದ ಮದಿಕ್ ಪ್ರತ್ಯಯ ಯುಷ್ಮದ್ ಎಂದಾಗುತ್ತೆ. ಇದರ ಮುಂದೆ ದ್ವಿತೀಯಾ ಏಕವಚನ ಅಮ್, **ಙೇಪ್ರಥಮಯೋರಮ್** ಎಂಬುದರಿಂದ ಅಮ್‌ಗೆ ಪುನಃ ಅಮ್ ಆದೇಶ **ತ್ವಮಾವೇಕವಚನೇ** (ಪಾ. ಸೂ. ೭-೨-೯೭) ಒಂದು ವ್ಯಕ್ತಿಯನ್ನು ಬೋಧಿಸುವ ಯುಷ್ಮದ್-ಅಸ್ಮದ್ ಶಬ್ದಗಳ ಮಪರ್ಯಂತಕ್ಕೆ ಕ್ರಮವಾಗಿ ತ್ವ-ಮಾ ಆದೇಶಗಳು ಬರುವುವು. ಎಂಬುದರಿಂದ ತ್ವ ಆದೇಶ ಬಂದರೆ ತ್ವ+ಅದ್+ಅಮ್, **ದ್ವಿತೀಯಾಯಾಂ ಚ** (ಪಾ. ಸೂ. ೭-೨-೮೭) ದ್ವಿತೀಯಾ ವಿಭಕ್ತಿಯು ಪರದಲ್ಲಿರುವಾಗ ಯುಷ್ಮದ್- ಅಸ್ಮದ್ ಶಬ್ದಗಳ ದ್‌ಗೆ ಆಕಾರಾದೇಶ ಬರುವುದು.

ಎಂಬುದರಿಂದ ದ್-ಅಕಾರಾದೇಶ ತ್ವ+ಅ+ಅ+ಅಮ್, **ಅತೋಗುಣೇ** ಎಂಬುದರಿಂದ ಪರರೂಪ ತ್ವ+ಅ+ಅವ್ **ಅಕಸ್ಸವರ್ಣೇದೀರ್ಘಃ** ಎಂಬುದರಿಂದ ಸವರ್ಣದೀರ್ಘಾನಂತರ ಪೂರ್ವರೂಪ ತ್ವಾಮ್ ಎಂದಾಗುತ **ಅನುದಾತ್ತಂ ಸರ್ವಮಪಾದಾದೌ**(ಪಾ.ಸೂ. ೮-೧-೧೮) ಈ ಅಧಿಕಾರದಲ್ಲಿರುವ **ತ್ವಾಮೌದ್ವಿತೀಯಾಯಾಃ**(ಪಾ-ಸೂ. ೮-೮-೨೩) ಪದದ ಮುಂದೆ ಇರತಕ್ಕವುಗಳೂ, ಪಾದದ ಆದಿಯಲ್ಲಿಲ್ಲದವುಗಳೂ ದ್ವಿತೀಯಾ ವಿಭಕ್ತಿ ಏಕವಚನಾಂತಗಳೂ ಆದ ಯುಷ್ಮದ್-ಅಸ್ಮದ್ ಶಬ್ದಗಳಿಗೆ ಕ್ರಮವಾಗಿ ತ್ವಾ-ಮಾ ಎಂಬ ಆದೇಶಗಳು ಬರುವುವು. ಅವು ಅನುದಾತ್ತ ಗಳಾಗುವುವು ಎಂಬುದರಿಂದ ತ್ವಾಂ ಎಂಬ ದ್ವಿತೀಯೈಕವಚನಾಂತವಾದ ಯುಷ್ಮಚ್ಛಬ್ದಕ್ಕೆ ಅನುದಾತ್ತವಾದ ತ್ವಾ ಆದೇಶಈ ತ್ವಾ ಎಂಬುದು ಪದಕಾಲದಲ್ಲಿ ಅನುದಾತ್ತವಾಗಿಯೇ ಇರುವುದು. ಸಂಹಿತಾ ಕಾಲದಲ್ಲಿ ಆ ಎಂಬ ಉದಾತ್ತದ ಮುಂದೆ ಇರುವುದರಿಂದ ಸ್ವರಿತವಾಗುವುದು.

**ವಿಶನ್ತು.**—ವಿಶ ಪ್ರವೇಶನೇ ಧಾತು-ಲೋಟ್ ಪರಸ್ಮೈಪದಸಂಜ್ಞಿಕವಾದ ಪ್ರಥಮ ಪುರುಷ ಬಹುವಚನ ಝಿ ಪ್ರತ್ಯಯ. **ಝೋನ್ತಃ** (ಪಾ.ಸೂ. ೭-೧-೩ ಪ್ರತ್ಯಯಾವಯವವಾದ **ಝ್**ಗೆ ಅನ್ತ್ ಆದೇಶ ಬರುವುದು. ಎಂಬುದರಿಂದ ಝ್‌ಗೆ ಅನ್ತ್ ಆದೇಶ, **ತುದಾದಿಭ್ಯಃ ಶಃ**(ಪಾ.ಸೂ. ೩-೧-೭೭) ಎಂಬುದರಿಂದ ಶ (ಅ) ವಿಕರಣ ವಿಶ್+ಅ+ಅನ್ತಿ **ಏರುಃ** (ಪಾ. ಸೂ. ೩-೪-೮೬) ಲೋಟ್ಟಿನ ಇಕಾರಕ್ಕೆ ಉಕಾರಾದೇಶ ಬರುವುದು ಎಂಬುದರಿಂದ ಇಕಾರಕ್ಕೆ ಉಕಾರಾದೇಶ ಇಲ್ಲಿ ಯದ್ಯಪಿ **ಪುಗಂತಲಘೂಪದಸ್ಯಚ** (ಪಾ. ಸೂ. ೭-೩-೮೬) ಎಂಬುದರಿಂದ **ವಿಶ್** ಎಂಬಲ್ಲಿರುವ ಇಕಾರಕ್ಕೆ ಗುಣವು ಪ್ರಾಪ್ತವಾಗುವುದು. ಆದರೆ ಶ ಎಂಬುದು ಪಿತ್ ಅಲ್ಲದ ಸಾರ್ವಧಾತುಕವಾ ದ್ದರಿಂದ **ಸಾರ್ವಧಾತುಕಮಪಿತ್** (ಪಾ. ಸೂ. ೧-೨-೪) ಎಂಬುದರಿಂದ ಙಿತ್ತಾಗುವುದು. ಆದಕಾರಣ **ಕ್ಙಿತಿಚ** (ಪಾ. ಸೂ. ೧-೧-೫) ಎಂಬುದರಿಂದ ಗುಣಕ್ಕೆ ನಿಷೇಧ ಬರುವುದು, ಇಲ್ಲಿ **ತಿಙ್ಙತಿಙಃ** ಎಂಬುದರಿಂದ ಸರ್ವಾನು ದಾತ್ತ ಬರುವುದು.

**ಆಶವಃ.**—ಅಶೂ ವ್ಯಾಪ್ತೌ ಧಾತು. ಇದರ ಮುಂದೆ **ಕೃವಾಪಾಜಿ ಮಿಸ್ವದಿಸಾಧ್ಯಶಿಭ್ಯ ಉಣ್** (ಉ. ಸೂ. ೧-೧) ಡುಕೃಞ್ ಕರಣೇ-ವಾ ಗತಿಗಂಧನಯೋಃ-ಪಾ ಪಾನೇ, ಪಾ ರಕ್ಷಣೇ ಜಿ ಅಭಿಭವೇ ಡುಮಿಞ್ ಪ್ರಕ್ಷೇಪಣೇ ಸ್ವದ ಆಸ್ವಾದನೇ ಸಾಧ ಸಂಸಿದ್ಧೌ ಅಶೂ ವ್ಯಾಪ್ತೌ ಈ ಧಾತುಗಳ ಮುಂದೆ ಉಣ್ ಬರುವುದು. ಎಂಬುದರಿಂದ ಉಣ್ ಪ್ರತ್ಯಯ ಅಶ್+ಉ ಪ್ರತ್ಯಯವು ಣಿತ್ ಆದ್ದರಿಂದ **ಅತ ಉಪಧಾಯಾಃ** (ಪಾ ಸೂ. ೭-೨-೧೧೬) ಎಂಬುದರಿಂದ ಅಕಾರಕ್ಕೆ ವೃದ್ಧಿ ಅಂದರೆ ಆಕಾರ ಬರುತ್ತೆ. ಆಶು ಶಬ್ದದ ಮುಂದೆ ಜಸ್ ಪ್ರತ್ಯಯ. ಗುಣದಿಂದ ಓಕಾರ ಆಶೋ+ಅಸ್ ಓಕಾರಕ್ಕೆ ಅವ್ ಆದೇಶ=ಆಶವಸ್, ರುತ್ವ ವಿಸರ್ಗಗಳು ಆಶವಃ ಎಂದಾಗುವುದು. ಇಲ್ಲಿ **ಸತಿಶಿಷ್ಟಸ್ವರಬಲೀಯಸ್ತ್ವಮನ್ಯತ್ರವಿಕರಣೇಭ್ಯಃ** ಎಂಬುದರಿಂದ ಸತಿಶಿಷ್ಟ ವಾದ ಉಣ್ ಪ್ರತ್ಯಯ ಸ್ವರವು ಬರುವುದು. ಧಾತುವಿನ ಅಕಾರವು ಶೇಷಾನುದಾತ್ತ ಸ್ವರದಿಂದ ಅನುದಾತ್ತ ಇದರ ಸ್ಥಾನದಲ್ಲಿ ಬರುವ ಆಕಾರವು ಸ್ಥಾನಿವದ್ಭಾವದಿಂದ ಅನುದಾತ್ತ. ಉಣ್ ಪ್ರತ್ಯಯದ ಉಕಾರ ಉದಾತ್ತ ಆದರ ಸ್ಥಾನದಲ್ಲಿ ಗುಣದಿಂದ ಓಕಾರವೂ ಇದರ ಸ್ಥಾನದಲ್ಲಿನ ಅವಾದೇಶವೂ ಸ್ಥಾನಿವದ್ಭಾವದಿಂದ ಉದಾತ್ತ. ಅಸ್ ಸುಪ್ಪಾದ್ದರಿಂದ ಅನುದಾತ್ತ. ಪದಪಾಠದಲ್ಲಿ ಉದಾತ್ತದ ಮುಂದೆ ಇರುವುದರಿಂದ ಆಶವಃ ಎಂಬಲ್ಲಿ ಕೊನೆಯ ಅಕಾರವು **ಉದಾತ್ತಾದನುದಾತ್ತಸ್ಯ** ಎಂಬುದರಿಂದ ಸ್ವರಿತ. ಸಂಹಿತಾಕಾಲದಲ್ಲಿ ಸೋ ಎಂಬ ಉದಾತ್ತ ಪರದಲ್ಲಿ ರುವುದರಿಂದ ಅನುದಾತ್ತ ಪರವಾಗತ್ತೆ.

**ಗೃಣನ್ತೀತಿಗಿರಃ**—(**ಸ್ತುತಿಗಳು**) ಗೄಶಬ್ದೇ ಧಾತುವಿನ ಮುಂದೆ ಕ್ವಿಪ್ ಬಂದರೆ **ಋತ ಇದ್ಧಾತೋಃ** (ಪಾ.ಸೂ. ೭-೧-೧೦೦) ಎಂಬುದರಿಂದ ಇತ್ವ ಉರಣ್ರಪರಃ ಎಂಬ ಶಾಸ್ತ್ರ ಪರ್ಯಾಲೋಚನೆಯಿಂದ ರ ಪರವಾಗಿ

ಬರುವುದು. ಗೀರ್ಭಿರ್ವನ್ಯತೇ ಸೇವ್ಯತೇ ಇತಿ ಸ್ತೋತ್ರರೂಪವಾದ ಮಾತುಗಳಿಂದ ಸೇವಿಸಲ್ಪಡುತ್ತಾನೆ. **ಗಿರ್ವಣಾಃ**—ಎಂದು ವಿಗ್ರಹ ವನಷಣಸಂಭಕ್ತೌ. ಸಂಭಕ್ತಿ ಎಂದರೆ ಸೇವೆ. ಗಿರ್ ಶಬ್ದೋಪಪದಕವಾದ ವನ ಧಾತುವಿನ ಮುಂದೆ **ಸರ್ವಧಾತುಭ್ಯೋಽಸುನ್** (ಉ. ಸೂ.೧೪-೬೨೮) ಎಂಬುದರಿಂದ ಅಸುನ್ ಪ್ರತ್ಯಯ.

ಗಿರ್ವನಸ್ ಎಂಬಲ್ಲಿ **ಪೂರ್ವಪದಾತ್ಸಂಜ್ಞಾಯಾಮಗಃ** (ಪಾ. ಸೂ.೮-೪) ಸಂಜ್ಞೆ ತೋರುವಾಗ ಪೂರ್ವಪದದ ರೇಫಷಕಾರಗಳ ಮುಂದೆ (ಅಟ್-ಕವರ್ಗ-ಪವರ್ಗಗಳಿಂದ ವ್ಯವಧಾನವಿದ್ದರೂ ಬಾಧಕವಿಲ್ಲ) ಇರುವ ನಕಾರಕ್ಕೆ ಣಕಾರವು ಬರುವುದು ಎಂಬುದರಿಂದ ನ-ಗೆ ಣಕಾರ-ಸ್‌ಗೆ ರುತ್ವ ವಿಸರ್ಗಗಳು. ಸಂಬುದ್ಧಿಯಲ್ಲಿ ಗಿರ್ವಣಃ ಎಂದಾಗುತ್ತದೆ.

ದೇವರಾಜಯಜ್ವಾ ಎಂಬುವರು ಮತ್ತೊಂದು ವಿಧವಾಗಿ ಈ ಶಬ್ದಕ್ಕೆ ನಿಷ್ಪತ್ತಿ ಮಾಡಿರುವರು. ಘಟಾದಿಯಲ್ಲಿ ವನು ಯಾಚನೇ ಎಂಬ ಧಾತು ಇದೆ. ಗೀಃ ಶಬ್ದೋಪಪಾದಕವಾದ ಈ ಣಿಜಂತ ಧಾತುವಿನ ಮುಂದೆ ಅಸುನ್ ಗೀರ್+ವನ್+ಇ+ಅಸುನ್. ಣಿಚ್ ಪ್ರತ್ಯಯಕ್ಕೆ **ಣೇರನಿಟಿ** (ಪಾ- ಸೂ. ೬-೪-೫೧) ಎಂಬುದರಿಂದ ಲೋಪ ಉಪಧಾವೃದ್ಧಿ ಬಂದರೆ ವಾನ್ ಎಂದು ಯದ್ಯಪಿ ಆಗುತ್ತೆ. ಆದರೂ **ಘಟಾದಯೋಮಿತಃ** (ಗ. ಸೂ.) ಘಟಾದಿ ಧಾತುಗಳು ಮಿತ್ ಆಗುವುವು ಎಂದು ಹೇಳಿರುವುದರಿಂದ **ಮಿತಾಂಹ್ರಸ್ವಃ** (ಪಾ. ಸೂ. ೬-೪-೯೨) ಎಂಬುದರಿಂದ ಹ್ರಸ್ವ ಬರುವುದು. ಗೀರ್ ಶಬ್ದದ ಈಕಾರಕ್ಕೆ ಛಾಂದಸವಾಗಿ ಹ್ರಸ್ವಬರುವುದು. ಗಿರ್ವನಸ್ ಣತ್ವಾದಿ ಕಾರ್ಯಗಳು ಹಿಂದಿನಂತೆಯೇ ಬರುವುವು.

ಯಾಸ್ಕರು ' ಗಿರ್ವಣಾ ದೇವೋ ಗೀರ್ಭಿರೇನಂ ವನಯನ್ತಿ ' (ನಿರು ೬-೧೪) ಎಂದು ನಿರ್ವಚನ ಮಾಡಿರುವರು. ಇವರಿಗೂ ಣಿಜಂತವಾದ ವನು ದಾತುವಿನಿಂದಲೇ ಈ ರೂಪಸಿದ್ಧಿಯು ಅಭಿಮತವಾಗಿದೆ.

ಸ್ಕಂದಸ್ವಾಮಿಗಳೂ ಹೀಗೆಯೇ ಹೇಳುವರು.

ಶ್ರೀನಿವಾಸ ಎಂಬುವರು ಸ್ವಾರ್ಥದಲ್ಲಿ ಣಿಚ್ ಬರುವುದು ಎಂದು ಹೇಳಿರುತ್ತಾರೆ. ಇಲ್ಲಿ ಗೀ ಎಂಬುದು ಧಾತು ಸ್ವರದಿಂದ ಅಂತೋದಾತ್ತ. ವನ್ ಧಾತುವಿನಮುಂದೆ ಅಸುನ್ ಎಂಬ ಪಕ್ಷದಲ್ಲಿ ಪ್ರತ್ಯಯವು ನಿತ್ತಾದ್ದರಿಂದ ವನಸ್ ಎಂಬುದು ನಿತ್ಸ್ವರದಿಂದ ಆದ್ಯುದಾತ್ತ. ಗಿರ್ವಣಸ್ ಎಂಬ ಸಮಾಸದಲ್ಲಿ **ಸಮಾಸಸ್ಯ** ಎಂಬ ಅಂತೋದಾತ್ತವನ್ನು ಬಾಧಿಸಿ **ಗತಿಕಾರಕೋಪಪದಾತ್ಕೃತ್** ಎಂದು ಕೃದುತ್ತರಪದ ಪ್ರಕೃತಿಸ್ವರ ಪ್ರಾಪ್ತವಾದರೆ **ಲಘಾವಂತೇ ದ್ವಯೋಶ್ಚ ಬಹ್ವಷೋಗುರುಃ** (ಫಿ. ಸೂ. ೨-೪೨) ಪದದ ಕೊನೆಯ ವರ್ಣವು ಲಘುವಾಗಿದ್ದರೆ ಎರಡು ಅಚ್ಚುಗಳನ್ನು ಹೊಂದಿರುವ ಶಬ್ದದ ಅಥವಾ ಇನ್ನೂ ಹೆಚ್ಚು ಅಚ್ಚುಗಳನ್ನು ಹೊಂದಿರುವ ಶಬ್ದದ ಗುರು **ವರ್ಣವು** ಉದಾತ್ತವಾಗುವುದು ಎಂಬುದರಿಂದ ಗುರುವರ್ಣವಾದ ಗಿ ಎಂಬುದರ ಇಕಾರಕ್ಕೆ ಉದಾತ್ತ ಬರುವುದು. **ದೀರ್ಘ**ವಾದ ಅಕ್ಷರಗಳಿಗೂ, ಸಂಯುಕ್ತಾಕ್ಷರದ ಹಿಂದೆ ಇರುವ ಅಕ್ಷರಗಳಿಗೂ ಗುರುವರ್ಣ ಎಂದು ಹೆಸರು. **ಣಿಜಾಂತ**ವಾದವನು ಧಾತುವಿನ ಮುಂದೆ ಅಸುನ್ ಪಕ್ಷದಲ್ಲಿಯೂ ಸ್ವರವನ್ನು ಹೀಗೆಯೇ ಹೇಳಬೇಕು. ಅಂತು ಗಿರ್ವಣಃ ಎಂಬಲ್ಲಿ ಆದ್ಯುದಾತ್ತವು ಪ್ರಾಪ್ತವಾಯಿತು. ಆದರೆ ಪ್ರಕೃತ ಗಿರ್ವಣಃ ಎಂಬುದು ಆಮಂತ್ರಿತವಾದ್ದರಿಂದ **ಆಮನ್ತ್ರಿತಸ್ಯಚ** ಎಂಬ ಎಂಟನೇ ಅಧ್ಯಾಯದ ಸೂತ್ರದಿಂದ ಸರ್ವಾನುದಾತ್ತ ಬರುವುದು. ಸಂಹಿತಾಕಾಲದಲ್ಲಿ ಸೋಮಾಸಃ ಎಂಬುದರ ಅ ಎಂಬ ಸ್ವರಿತದ ಮುಂದೆ ಇರುವುದರಿಂದ **ಸ್ವರಿತಾತ್ಸಂಹಿತಾಯಾಂ** ಎಂಬುದರಿಂದ ಎಲ್ಲಾ ವರ್ಣಗಳೂ ಪ್ರಚಯಗಳು ಎಂದು ತಿಳಿಯಬೇಕು.

**ಪ್ರಚೇತಸೇ ಬಹುವ್ರೀಹೌಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೭-೨-೧) ಎಂಬುದರಿಂದ **ಪೂರ್ವಪದ ಪ್ರಕೃತಿಸ್ವರ ಬರುವುದು** ॥ ೭ ॥

ಸಂಹಿತಾಪಾಠಃ

ತ್ವಾಂ ಸ್ತೋಮಾ ಅವೀವೃಧನ್ತ್ವಾಮುಕ್ಥಾ ಶತಕ್ರತೋ ।
ತ್ವಾಂ ವರ್ಧಂತು ನೋ ಗಿರಃ ॥ ೮ ॥

ಪದಪಾಠಃ

ತ್ವಾಂ । ಸ್ತೋಮಾಃ । ಅವೀವೃಧನ್ । ತ್ವಾಂ । ಉಕ್ಥಾ । ಶತಕ್ರತೋ
ಇತಿ ಶತಕ್ರತೋ ॥
ತ್ವಾಂ । ವರ್ಧಂತು । ನಃ । ಗಿರಃ ॥ ೮ ॥

॥ ಸಾಯಣಭಾಷ್ಯಂ ॥

ಹೇ ಶತಕ್ರತೋ ಬಹುಕರ್ಮನ್ಬಹುಪ್ರಜ್ಞ ವೇಂದ್ರ ತ್ವಾಂ ಸ್ತೋಮಾಃ ಸಾಮಗಾನಾಂ ಸ್ತೋತ್ರಾಣ್ಯವೀವೃಧನ್ । ವರ್ಧಿತವಂತಿ । ತಥಾ ಬಹ್ವೃಚಾನಾಮುಕ್ಥಾ ಶಸ್ತ್ರಾಣಿ ತ್ವಾಮವೀವೃಧನ್ । ಯಸ್ಮಾತ್ಪೂರ್ವಮೇವಮಾಸೀತ್ತಸ್ಮಾದಿದಾನೀಮಪಿ ನೋಽಸ್ಮಾಕಂ ಗಿರಃ ಸ್ತುತಯಸ್ತ್ವಾಂ ವರ್ಧಂತು । ವರ್ಧಯಂತು । ಅತಿವೃದ್ಧಂ ಕುರ್ವಂತು ॥ ಸ್ತೋಮಾಃ । ಮನೋ ನಿತ್ತ್ವಾದಾದ್ಯುದಾತ್ತಃ । ಅವೀವೃಧನ್ । ವೃಧು ವೃದ್ಧೌ । ಣ್ಯಂತಾತ್ । ಪಾ. ೩-೧-೨೬ । ಲುಙಿ ಚಙಿ । ಪಾ. ೩-೧-೪೮ । ಉರ್ಋತ್ ಪಾ. ೭-೪-೭ । ಇತಿ ವೃಧೇರುಪಧಾಯಾ ಋಕಾರಸ್ಯ ಋಕಾರವಿಧಾನಾದಂತರಂಗೋಽಪಿ ಗುಣೋ ಬಾಧ್ಯತೇ । ದ್ವಿರ್ಭಾವ । ಪಾ. ೬-೧.೧೧ । ಹಲಾದಿಶೇಷ । ಪಾ. ೭-೪-೬೦ । ಸನ್ವದ್ಭಾವ । ಪಾ ೭-೪-೯೩। ಇತ್ವ । ಪಾ. ೭-೪-೭೯ । ದೀರ್ಘತ್ವ । ಪಾ. ೭-೪ ೯೪ । ಅಡಾಗಮಃ । ಪಾ. ೬ ೪-೭೧ । ಉಕ್ಥಾ । ಉಕ್ಥಾನಿ । ಪಾತೃತುದಿವಚಿರಿಚಿಸಿಚಿಭ್ಯಸ್ಥಕ್ । ಉ. ೨ ೭ । ಇತಿ ವಚೇಸ್ಥಕ್ಪ್ರತ್ಯಯಃ । ತಸ್ಯ ಕಿತ್ತ್ವಾತ್ಸಂಪ್ರಸಾರಣಂ । ಶೇಶ್ಛಂದಸಿ ಬಹುಲಂ । ಪಾ. ೬-೧-೭೦ । ಇತಿ ಶಿಲೋಪೋ ನಲೋಪಶ್ಚ । ಪ್ರತ್ಯಯಸ್ವರೇಣಾಂತೋದಾತ್ತಃ। ಅಸಾಮರ್ಥ್ಯಾದಾಮಂತ್ರಿತಪರಸ್ಯಾಪಿ ನ ಪರಾಂಗವದ್ಭಾವ ಇತಿ ನಾನುದಾತ್ತತ್ವಂ। ವರ್ಧಂತು । ಅಂತರ್ಭಾವಿತಣ್ಯರ್ಥಾದ್ವೃಧೇರ್ವ್ಯತ್ಯಯೇನ ಪರಸ್ಮೈಪದಂ ॥

॥ ಪ್ರತಿಪದಾರ್ಥ ॥

(ಹೇ) ಶತಕ್ರತೋ—ಅನೇಕ ಸಾಹಸ ಕೃತ್ಯಗಳನ್ನೆಸಗಿದ ಅಥವಾ ಬಹುಪ್ರಜ್ಞಾಶಾಲಿಯಾದ ಎಶ್ವೈ ಇಂದ್ರನೇ । ಸ್ತೋಮಾಃ—(ಉದ್ಗಾತೃ ಮೊದಲಾದ ಋತ್ವಿಜರು ಗಾನಮಾಡುವ) ತ್ರಿವೃದಾದಿ ಸ್ತೋಮಗಳು

ಎಂದರೆ ಸ್ತೋತ್ರಗಳು, | **ತ್ವಾಂ**—ನಿನ್ನನ್ನು | **ಅವೀವೃಧನ್**—ವೃದ್ಧಿಪಡಿಸಿರುವುವು ಎಂದರೆ ನಿನ್ನ ಗುಣಗಾನ ಮಾಡುವುದರಿಂದ ನಿನ್ನನ್ನು ಪ್ರಶಂಸೆಮಾಡಿರುವುವು | (ಮತ್ತು) **ಉಕ್ಥಾ**—(ಹೋತೃವರ್ಗದವರು ಪಠಿಸುವ) ಶಸ್ತ್ರಮಂತ್ರಗಳು | **ತ್ವಾಂ**—ನಿನ್ನನ್ನು (ಅವೀವೃಧನ್-ಪ್ರಶಂಸೆಮಾಡಿರುವವು) | (ಈಗ) **ನಃ**—ನಮ್ಮ ಎಂದರೆ ನಾವು ಪಠಿಸುತ್ತಿರುವ | **ಗಿರಃ**—ಸ್ತೋತ್ರರೂಪವಾದ ವಾಕ್ಯಗಳು | **ತ್ವಾಂ**—ನಿನ್ನನ್ನು | **ವರ್ಧಂತು**—ವೃದ್ಧಿಪಡಿಸಲಿ (ಪ್ರಶಂಸೆಮಾಡಲಿ)

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಬಹುಸಾಹಸಕೃತ್ಯಗಳನ್ನೆಸಗಿದವನು ಅಥವಾ ನೀನು ಬಹುಬುದ್ಧಿಶಾಲಿಯು; ಸಾಮಗಾನಮಾಡುವ ಉದ್ಗಾತೃಮೊದಲಾದ ಋತ್ವಿಜರು ನಿನ್ನನ್ನು ತ್ರಿವೃದಾದಿಸ್ತೋಮಗಳಿಂದ ನಿನ್ನ ಗುಣಗಾನ ಮಾಡಿ ನಿನ್ನನ್ನು ಪ್ರಶಂಸೆಮಾಡಿರುವರು. ಆದರಂತೆಯೇ ಹೋತೃವರ್ಗದ ಋತ್ವಿಜರು ಶಸ್ತ್ರಮಂತ್ರಪಠನದಿಂದ ನಿನ್ನನ್ನು ಪ್ರಶಂಸೆಮಾಡಿರುವರು. ಇದರಿಂದ ನಿನ್ನ ಗುಣಗಳು ಹೆಚ್ಚಿದಂತಾಯಿತು. ಈಗ ನಾವು ಮಾಡುತ್ತಿರುವ ಸ್ತೋತ್ರರೂಪವಾದ ವಾಕ್ಯಗಳು ನಿನ್ನ ಪ್ರಶಂಸೆಯನ್ನು ಇನ್ನೂ ಹೆಚ್ಚಾಗಿ ಅಭಿವೃದ್ಧಿಪಡಿಸಲಿ.

English Translation

(O Indra) performer of many deeds or one endowed with great wisdom, the chants of stomas have magnified you; (so also) the hymns of sastras have magnified you; (similarly) may our praises magnify you.

॥ ವಿಶೇಷವಿಷಯಗಳು ॥

**ತ್ವಾಂ ವರ್ಧಂತು ನೋ ಗಿರಃ**— ನಾವು ಮಾಡುವ ಸ್ತೋತ್ರರೂಪವಾದ ವಾಕ್ಯಗಳಿಂದ ನಿನ್ನ ಗುಣಗಳು ಹೆಚ್ಚಾಗಿ ಅಭಿವೃದ್ಧಿಯಾಗುವವು ಎಂದರೆ ಪ್ರಶಂಸಿಸಲ್ಪಡುವವು. ನಾವು ನಿನ್ನನ್ನು ಬಹಳವಾಗಿ ಸ್ತೋತ್ರ ಮಾಡುವೆವು ಎಂದರ್ಥವು. ಈ ವಿಧವಾದ ವಾಕ್ಯಪ್ರಯೋಗವು ಋಗ್ವೇದದಲ್ಲಿ ಇಂದ್ರನ ವಿಷಯವಾಗಿಯೂ ಅಗ್ನಿ ಮೊದಲಾದ ಇತರ ದೇವತೆಗಳ ವಿಷಯವಾಗಿಯೂ ಬಹಳವಾಗಿವೆ ಕೆಲವು ಉದಾಹರಣೆಗಳನ್ನು ಕೊಡುವೆವು—

(೧) **ಅಗ್ನಿಂ ವರ್ಧಂತು ನೋ ಗಿರೋ ಯತೋ ಜಾಯತ ಉಕ್ಥ್ಯಃ॥ (ಋ. ಸಂ. ೩-೧೦-೬)**

(೨) **ಇಮಾ ಉಕ್ಥಾ ಪುರುವಸೋ ಗಿರೋ ವರ್ಧಂತು ಯಾ ಮಮ ॥ (ಋ. ಸಂ. ೮-೩-೩)**

(೩) **ಪ್ರ ವಾಂ ಸ್ತೋಮಾಃ ಸುವೃಕ್ತಯೋ ಗಿರೋ ವರ್ಧಂತ್ವಶ್ವಿನಾ ॥ (ಋ. ಸಂ. ೮-೮-೨೨)**

(೪) **ಇಂದ್ರಂ ವರ್ಧಂತು ನೋ ಗಿರ ಇಂದ್ರಂ ಸುತಾಸ ಇಂದವಃ ॥ (ಋ. ಸಂ- ೮-೧೩-೧೬)**

(೫) **ತ್ರಿಕದ್ರುಕೇಷು ಚೇತನಂ ದೇವಾಸೋ ಯಜ್ಞಮತ್ನತ ।**
**ತಮಿದ್ವರ್ಧಂತು ನೋ ಗಿರಃ ಸದಾವೃಧಂ ॥ (ಋ. ಸಂ. ೮-೧೩-೧೮)**

(೬) **ತ್ವಾಮಗ್ನೇ ಮನೀಷಿಣಸ್ತ್ವಾಂ ಹಿನ್ವಂತಿ ಚಿತ್ತಿಭಿಃ ।**
**ತ್ವಾಂ ವರ್ಧಂತು ನೋ ಗಿರಃ ॥ (ಋ. ಸಂ. ೮-೪೧-೧೯)**

(೭) ಉತ ತ್ವಾ ಧೀತಯೋ ಮಮ ಗಿರೋ ವರ್ಧಂತ ವಿಶ್ವಹಾ ॥ (ಋ. ಸಂ. ೮-೪೧-೨೨)
(೮) ತಮಿದ್ವರ್ಧಂತು ನೋ ಗಿರೋ ವತ್ಸಂ ಸಂ ಶಿಶ್ವರೀರಿವ ।
ಯ ಇಂದ್ರಸ್ಯ ಹೃದಂ ಸನಿಃ ॥ (ಋ. ಸಂ. ೯-೬೧-೧೪)

ಇತ್ಯಾದಿ ಅನೇಕ ಉದಾಹರಣೆಗಳನ್ನು ಕೊಡಬಹುದು.

ಈ ಋಕ್ಕಿನ ಪ್ರತಿಯೊಂದು ಪಾದವು ತ್ವಾಂ ಎಂಬ ಪದದಿಂದ ಪ್ರಾರಂಭವಾಗಿರುವುದು. ಇಂತಹ ಪ್ರಾಸಬದ್ಧವೂ, ಪ್ರೌಢಾರ್ಥಯುಕ್ತವೂ ಆದ ಋಕ್ಕುಗಳು ಋಗ್ವೇದದಲ್ಲಿ ಬೇಕಾದಷ್ಟಿವೆ. ಮೊದಲನೆಯ ಪಾದದಲ್ಲಿ ವಾಕ್ಯವು ಕರ್ತೃಕ್ರಿಯೆಗಳಿಂದ ಕೂಗಿ ಸಂಪೂರ್ಣವಾಗಿರುವುದು. ಅಲ್ಲಿಂದ ಮುಂದಿನ ವಾಕ್ಯಗಳಲ್ಲಿ ತ್ವಾಂ ಮೊದಲಾದ ಮುಖ್ಯವಾದ ಪದಗಳು ಮಾತ್ರ ಪುನಃ ಪಠಿತವಾಗಿರುವುವು. ಕರ್ತೃಕ್ರಿಯಾಪದಗಳ ಅವಶ್ಯಕತೆ ಇಲ್ಲ. ಈರೀತಿಯಾದ ವಾಕ್ಯಸರಣಿಯು ಪ್ರೌಢಶೈಲಿಯ ಹೆಗ್ಗುರುತೆಂದು ಹೇಳಲು ಅಡ್ಡಿಯಿಲ್ಲ. ಇಂತಹ ಶೈಲಿಯು ವಾಕ್ಯದ ಅರ್ಥಕ್ಕೆ ಒಂದು ವಿಧವಾದ ಕಳೆಯನ್ನು ಕೊಡುವುದು. ಉದಾಹರಣೆಗಾಗಿ ಒಂದೆರಡು ಇಂತಹ ವಾಕ್ಯಗಳನ್ನು ಇಲ್ಲಿ ಕೊಡುವೆವು.

ಪ್ರಾತರಗ್ನಿಂ ಪ್ರಾತರಿಂದ್ರಂ ಹವಾಮಹೇ ಪ್ರಾತರ್ಮಿತ್ರಾವರುಣಾ ಪ್ರಾತರಶ್ವಿನಾ ।
ಪ್ರಾತರ್ಭಗಂ ಪೂಷಣಂ ಬ್ರಹ್ಮಣಸ್ಪತಿಂ ಪ್ರಾತಃ ಸೋಮಮುತ ರುದ್ರಂ ಹುವೇಮ ॥
(ಋ ಸಂ. ೭-೪೧-೧)

ಇಲ್ಲಿ ಪ್ರಾತಃ ಎಂಬ ಶಬ್ದವು ಅನೇಕಾವೃತ್ತಿ ಪಠಿತವಾಗಿದೆ.

ಅಹಂ ದಾಂ ಗೃಣತೇ ಪೂರ್ವ್ಯಂ ವಸ್ವಹಂ ಬ್ರಹ್ಮ ಕೃಣವಂ ಮಹ್ಯಂ ವರ್ಧನಂ ।
ಅಹಂ ಭುವಂ ಯಜಮಾನಸ್ಯ ಚೋದಿತಾಯಜ್ವನಃ ಸಾಕ್ಷಿ ವಿಶ್ವಸ್ಮಿನ್ಭರೇ ॥
(ಋ. ಸಂ ೧೦-೪೯-೧)

ಇಲ್ಲಿ ಅಹಂ ಎಂಬ ಶಬ್ದವು ಪುನಃ ಪುನಃ ಪಠಿತವಾಗಿರುವುದು. ಇಷ್ಟೇ ಅಲ್ಲದೆ ಈ ಋಕ್ಕಿರುವ ಸೂಕ್ತದಲ್ಲಿಯೂ ಇನ್ನೂ ಅನೇಕ ಸೂಕ್ತಗಳಲ್ಲಿಯೂ ಎಲ್ಲಾ ಋಕ್ಕುಗಳೂ ಇದರಂತೆಯೇ ಇವೆ.

ಅಗ್ನಿಃ ಸಪ್ತಿಂ ವಾಜಂಭರಂ ದದಾತ್ಯಗ್ನಿರ್ವೀರಂ ಶ್ರುತ್ಯಂ ಕರ್ಮನಿಷ್ಠಾಂ ।
ಅಗ್ನೀ ರೋದಸೀ ವಿ ಚರತ್ಸಮಂಜನ್ನಗ್ನಿರ್ನಾರೀಂ ವೀರಕುಕ್ಷಿಂ ಪುರಂಧಿಂ ॥
(ಋ. ಸಂ. ೧೦-೮೦-೧)

ಈ ಋಕ್ಕಿನಲ್ಲಿಯೂ ಈ ಸೂಕ್ತದ ಇತರ ಎಲ್ಲಾ ಋಕ್ಕುಗಳಲ್ಲಿಯೂ ಅಗ್ನಿಃ ಎಂಬ ಶಬ್ದವು ಪ್ರತಿಪಾದದಲ್ಲಿಯೂ ಪಠಿತವಾಗಿದೆ.

ಶಂ ನ ಇಂದ್ರಾಗ್ನೀ ಭವತಾಮವೋಭಿಃ ಶಂ ನ ಇಂದ್ರಾವರುಣಾ ರಾತಹವ್ಯಾ ।
ಶಮಿಂದ್ರಾ ಸೋಮಾ ಸುವಿತಾಯ ಶಂ ಯೋಃ ಶಂ ನ ಇಂದ್ರಾಪೂಷಣಾ ವಾಜಸಾತೌ ॥
(ಋ. ಸಂ. ೭-೩೫-೧)

ಈ ಋಕ್ಕಿನಲ್ಲಿಯೂ ಈ ಸೂಕ್ತದ ಇತರ ಎಲ್ಲಾ ಋಕ್ಕುಗಳಲ್ಲಿಯೂ ಶಂ ಮತ್ತು ಶಂ ನಃ ಎಂಬ ಪದಗಳು ಪ್ರತಿಪಾದದಲ್ಲಿಯೂ ಪಠಿತವಾಗಿವೆ. ಇಂತಹ ಪ್ರಾಸಬದ್ಧವಾದ ಪ್ರೌಢಶೈಲಿಯ ಋಕ್ಕುಗಳು ಋಗ್ವೇದದಲ್ಲಿ ಬಹಳವಾಗಿವೆ.

|| ವ್ಯಾಕರಣಪ್ರಕ್ರಿಯಾ ||

**ಸ್ತೋಮಾಃ**— ಷುಞ್ ಸ್ತುತೌ ಎಂಬ ಸ್ತು ಧಾತುವಿನ ಮುಂದೆ **ಅರ್ತಿಸ್ತು**—(ಉ. ಸೂ. ೧-೧೩೭) ಎಂಬುದರಿಂದ ಮನ್ ಪ್ರತ್ಯಯ ಬರುವುದು. ಮನ್ ಪ್ರತ್ಯಯವು ನಿತ್ತಾದ್ದರಿಂದ ಪ್ರತ್ಯಯಾಂತವು ಆದ್ಯುದಾತ್ತ.

**ಅವೀವೃಧನ್. ವೃಧು**— ವೃದ್ಧೌ ಎಂಬ ಧಾತುವಿನಮುಂದೆ ಣಿಚ್ಪ್ರತ್ಯಯ, ಣಿಚ್ಪ್ರತ್ಯಯಾಂತವಾದ ವೃಧುಧಾತುವಿನ ಮುಂದೆ ಲುಙ್ ಲಕಾರವನ್ನಿಟ್ಟರೆ ಚ್ಲಿ ಲುಙಿ (ಪಾ.ಸೂ.೩-೧-೪೩) ಎಂಬುದರಿಂದ ಣ್ಯಂತ ಧಾತುವಿನ ಮುಂದೆ ಚ್ಲಿ ಬರುವುದು. **ಣಿಶ್ರಿದ್ರುಸ್ರುಭ್ಯಃ ಕರ್ತ್ರರಿ ಚ ಙ್** ( ಪಾ. ಸೂ. ೩-೧-೪೮ ) ಕರ್ತ್ರರ್ಥಕವಾದಸಾರ್ವಧಾತುಕ ಪ್ರತ್ಯಯವು ಪರದಲ್ಲಿರುವಾಗ ಣಿ ಪ್ರತ್ಯಯಾಂತದ ಮುಂದೆಯೂ ಶ್ರೀ ಮೊದಲಾದ ಧಾತುಗಳ ಮುಂದೆಯೂ ಇರುವ ಚ್ಲಿ ಪ್ರತ್ಯಯಕ್ಕೆ ಚಙ್ ಬರುವುದು ಎಂಬುದರಿಂದ ಚ್ಲಿಗೆ ಚಙ್ ಬರುವುದು. (ವೃಧ್+ಇ+ಚಙ್ಝಿ) **ಉ ಋೃತ್** (ಪಾ. ಸೂ. ೭-೪-೭) ಚಙ್ ಪ್ರತ್ಯಯದ ಹಿಂದಿರುವ ಣಿ ಪ್ರತ್ಯಯಕ್ಕಿಂತಲೂ ಪೂರ್ವದಲ್ಲಿರುವ ಉಪಧಾಭೂತವಾದ ಋಕಾರಕ್ಕೆ ಋತ್ ವಿಕಲ್ಪವಾಗಿ ಬರುವುದು ಎಂದು ವೃಧ್ ಧಾತುವಿನ ಉಪಧಾ ಋಕಾರಕ್ಕೆ ಋಕಾರವೇ ಬರುವುದು. ಹೀಗೆ ಋಕಾರಕ್ಕೆ ಋಕಾರವನ್ನು ವಿಧಾನಮಾಡಿರುವ ಸಾಮರ್ಥ್ಯದಿಂದ ಅಂತರ್ಭೂತ ಣಿ ಪ್ರತ್ಯಯ ನಿಮಿತ್ತಕವಾಗುವುದರಿಂದ ಅಂತರಂಗವಾದಾಗ್ಯೂ **ಪುಗಂತಲಘೂಪಧಸ್ಯಚ** (ಪಾ.ಸೂ. ೭-೩-೮೬) ಎಂದು ವಿಹಿತವಾದ ಲಘೂಪಧ ಗುಣ ಬರುವುದಿಲ್ಲ. ಇದರಿಂದ ಗುಣ ಬರುವ ಪಕ್ಷದಲ್ಲಿ ಅತ್ ಬರಬೇಕಾಗುವುದು. ಹಾಗಾದರೆ ಚಙ್ ಪರಕ ಣಿಪರಕವಾದ ಉಪಧಾಭೂತ ಋವರ್ಣವೇ ಇಲ್ಲವಕಾರಣ **ಉಋೃತ್** (ಪಾ. ಸೂ. ೭-೪-೭)ಎಂಬ ಸೂತ್ರವು ವ್ಯರ್ಥವಾಗಿಹೋಗುವುದು. ಆದ್ದರಿಂದ ಮೊದಲು ಗುಣಬರುವುದಿಲ್ಲ. **ಚಙಿ** (ಪಾ. ಸೂ. ೬-೧-೧೧) ಚಙ್ ಪರದಲ್ಲಿರುವಾಗ ಅಭ್ಯಾಸವಲ್ಲದ ಧಾತುವಿನ ಮೊದಲನೆಯ ಏಕಾಚ್ಚಿಗೆ ದ್ವಿತ್ವ ಬರುವುದು. ಅಜಾದಿಧಾತುವಾಗಿದ್ದರೆ ಎರಡನೇ ಏಕಾಚ್ಚಿಗೆ ದ್ವಿತ್ವ ಬರುವುದು. (ಏಕಾಚ್ ಎಂದರೆ ಒಂದು ಸ್ವರವುಳ್ಳದ್ದು) ಎಂಬುದರಿಂದ ವೃಧ್‌ಗೆ ದ್ವಿತ್ವ ಬಂದರೆ ವೃಧ್ ವೃಧ್ ಇ+ಅ+ಝಿ **ಉರತ್** (ಪಾ.ಸೂ. ೭-೪-೬೬) ಪ್ರತ್ಯಯವು ಪರದಲ್ಲಿರುವಾಗ ಅಭ್ಯಾಸದಲ್ಲಿರುವ ಋಕಾರಕ್ಕೆ ಅಕಾರ ಬರುವುದು ಎಂದು ಬರುವ ಅಕಾರವು **ಉರಣ್ರಪರಃ** (ಪಾ ಸೂ. ೧-೧-೫೧) ಎಂಬ ಶಾಸ್ತ್ರದಿಂದ ರಪರವಾಗಿ ಬರುವುದು ವರ್ಧ್+ವೃಧ್+ಇ+ಅ+ಝಿ ಎಂದಾಗುವುದು. **ಹಲಾದಿಃಶೇಷಃ** (ಪಾ.ಸೂ. ೭-೪-೬೦) ಅಭ್ಯಾಸದ ಮೊದಲನೆಯ ವ್ಯಂಜನವು ನಿಲ್ಲುವುದು ಮಿಕ್ಕ ವ್ಯಂಜನಗಳು ಲೋಪವನ್ನು ಹೊಂದುವುವು ಎಂಬುದರಿಂದ ವರ್ಧ್ ಎಂಬಲ್ಲಿ ರ್ ಧ್ ಗಳಿಗೆ ಲೋಪ ಬರುವುದು. ವ ವೃಧ್+ಇ+ಅ+ಝಿ ಈಗ **ಸನ್ವಲ್ಲಘುನಿ ಚಙ್ ಪರೇऽನಗ್ಲೋಪೇ** (ಪಾ.ಸೂ. ೭-೪-೯೩) ಚಙ್ ಪರಕ ಣಿ ಪರಕ ಲಘುವರ್ಣದ ಹಿಂದೆ ಇರುವ ಅಂಗಾವಯವಾಭ್ಯಾಸಕ್ಕೆ ಸನ್ ಪ್ರತ್ಯಯ ಪರದಲ್ಲಿರುವಾಗ ಕಾರ್ಯ ಬರುವಂತೆ ಕಾರ್ಯ ಬರುವುದು ಎಂದು ಒಂದು ಅರ್ಥ. ಅಥವಾ ಚಙ್‌ಪರಕ ಣಿಪರಕವಾದ ಯಾವ ಅಂಗ ವಿದೆಯೋ ಆ ಅಂಗಾವಯವವಾದ ಅಭ್ಯಾಸವು ಲಘುವಿನ ಹಿಂದೆ ಇದ್ದರೆ ಸ‌ನ್ ಪರದಲ್ಲಿರುವಾಗ ಕಾರ್ಯ ಬರುವಂತೆ ಕಾರ್ಯ ಬರುವುದು ಎಂದು ಮತ್ತೊಂದು ಅರ್ಥ. ಈ ಎರಡು ಅರ್ಥಗಳಿಗೂ ವ್ಯತ್ಯಾಸವು ಅನೇಕಾಚ್ಕ ಧಾತುವಿನಲ್ಲಿ ತೋರುವುದು. ಏಕಾಚ್ಕ ಧಾತುವಿನಲ್ಲಿ ವ್ಯತ್ಯಾಸ ತೋರುವುದಿಲ್ಲ. ಈ ಸೂತ್ರದಿಂದ ಸನ್ವದ್ಭಾವ ಬಂದರೆ **ಸನ್ಯತಃ** (ಪಾ. ಸೂ. ೭-೪-೭೯) ಸನ್ ಪರದಲ್ಲಿರುವಾಗ ಅಭ್ಯಾಸದ ಅಕಾರಕ್ಕೆ ಇಕಾರ ಬರುವುದು ಎಂದು ಇತ್ವ ಬಂದರೆ ವಿವೃಧ್+ಇ+ಅ+ಝಿ **ದೀರ್ಘೋಲಘೋಃ** (ಪಾ. ಸೂ. ೭-೪-೯೪) ಸನ್ವದ್ಭಾವ ವಿಷಯದಲ್ಲಿ ಅಭ್ಯಾಸದಲ್ಲಿರುವ ಲಘುವರ್ಣಕ್ಕೆ ದೀರ್ಘ ಬರುವುದು ಎಂಬುದರಿಂದ ಅಭ್ಯಾಸದ ಇಕಾರಕ್ಕೆ ದೀರ್ಘಬರುವುದು. **ಲುಙ್‌ಲಙ್‌ಲೃಙ್‌ಕ್ಷ್ವ**

**ನುದಾತ್ತಃ** (ಪಾ. ಸೂ. ೬-೪-೭೧) ಇವುಗಳು ಪರದಲ್ಲಿರುವಾಗ ಅಂಗಕ್ಕೆ ಅಟ್ ಆಗಮ ಬರುವುದು ಎಂದು ಉಡಾಮ ಬರುವುದು. ಅವೀವೃಧ್+ಇ+ಅ+ಝ ಇಗೆ (ಣಿ ಪ್ರತ್ಯಯಕ್ಕೆ) **ಣೇರನಿಟಿ** (ಪಾ. ಸೂ. ೬-೪-೫೧) ಇಡಾದಿಯಲ್ಲದ ಆರ್ಧಧಾತುಕ ಪರದಲ್ಲಿರುವಾಗ ಣಿ ಗೆ ಲೋಪ ಬರುವುದು ಎಂಬುದರಿಂದ ಣಿ ಪ್ರತ್ಯಯಕ್ಕೆ ಲೋಪಬರುವುದು. ಝಕಾರಕ್ಕೆ **ಝೋಽಂತಃ** (ಪಾ ಸೂ. ೭-೧-೩) ಪ್ರತ್ಯಯಾವಯವವಾದ ಝಕಾರಕ್ಕೆ ಅನ್ತ ಆದೇಶ ಬರುವುದು ಎಂಬುದರಿಂದ ಅಂತಾದೇಶ ಬರುವುದು. ಇಕಾರಕ್ಕೆ **ಇತಶ್ಚ** (ಪಾ. ಸೂ. ೬-೪-೧೦೦) ಙಿತ್ತಾದ ಲಕಾರಸ್ಥಾನದಲ್ಲಿ ಬಂದ ಇಕಾರಾಂತವಾದ ಪರಸ್ಮೈಪದ ಪ್ರತ್ಯಯದ ಕೊನೆಯಲ್ಲಿರುವ ಇಕಾರಕ್ಕೆ ಲೋಪ ಬರುವುದು ಎಂಬುದರಿಂದ ಲೋಪ. ತಕಾರಕ್ಕೆ **ಸಂಯೋಗಾಂತಸ್ಯಲೋಪಃ** (ಪಾ ಸೂ. ೮-೨-೨೩) ಎಂಬುದರಿಂದ ಲೋಪ. ಸಂಯೋಗಾಂತ ಲೋಪವು **ಪೂರ್ವತ್ರಾಸಿದ್ಧಂ** (ಪಾ. ಸೂ. ೮-೨-೧) ಎಂಬುದರಿಂದ ಅಸಿದ್ಧವಾಗುವುದರಿಂದ **ನಲೋಪಃ ಪ್ರಾತಿಪದಿಕಾಂತಸ್ಯ** (ಪಾ. ಸೂ ೮-೨-೭) ಎಂಬುದರಿಂದ ನಕಾರಕ್ಕೆ ಲೋಪ ಬರುವುದಿಲ್ಲ. ಅವೀವೃಧನ್ ಎಂದಾಗುವುದು.

ಉಕ್ಥಾ—ಉಕ್ಥಾನಿ= ಶಸ್ತ್ರಗಳು ಎಂದರ್ಥವು —**ವಚಪರಿಭಾಷಣೇ** ಎಂಬ ಧಾತುವಿನ ಮುಂದೆ **ಪಾತೃತುದಿವಚಿರಿಚಿಸಿಚಿಭ್ಯಸ್ಥಕ್** (ಉ.ಸೂ.೨-೧೬-೪) ಈ ಧಾತುಗಳಮುಂದೆ ಥಕ್ ಪ್ರತ್ಯಯ ಬರುವುದು ಎಂಬುದರಿಂದ ಥಕ್ ಬಂದರೆ **ವಚಿಸ್ವಪಿಯಜಾದೀನಾಂಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಸಂಪ್ರಸಾರಣವೂ **ಸಂಪ್ರಸಾರಣಾಚ್ಚ** (ಪಾ ಸೂ. ೬-೧-೧೦೮) ಎಂಬುದರಿಂದ ಪೂರ್ವರೂಪವೂ ಚೋಃ ಕುಃ ಎಂಬುದರಿಂದ ಚಕಾರಕ್ಕೆ ಕಕಾರವೂ ಬಂದರೆ ಉಕ್ಥ ಎಂದಾಗುವುದು. ಉಕ್ಥ ಶಬ್ದವು ನಪುಂಸಕಲಿಂಗ ಇದರಮುಂದೆ ಪ್ರಥಮಾ ಬಹುವಚನ ಜಸ್ ಪ್ರತ್ಯಯವನ್ನಿಟ್ಟರೆ **ಜಶ್ಶಸೋಃಶಿಃ** (ಪಾ. ಸೂ. ೭-೧-೨೦) ನಪುಂಸಕಲಿಂಗವಾದ ಶಬ್ದದ ಮುಂದಿರುವ ಜಸ್ ಶಸ್‌ಗಳಿಗೆ ಶಿ ಆದೇಶ ಬರುವುದು ಎಂಬುದರಿಂದ ಜಸ್‌ಗೆ ಶಿ ಆದೇಶ **ಶಿಸರ್ವನಾಮಸ್ಥಾನಂ** (ಪಾ ಸೂ ೧-೧-೪೨) ಶಿ ಎಂಬುದು ಸರ್ವನಾಮ ಸ್ಥಾನ ಸಂಜ್ಞೆಯನ್ನು ಹೊಂದುವುದು ಎಂಬುದರಿಂದ ಶಿಗೆ ಸರ್ವನಾಮ ಸ್ಥಾನ ಸಂಜ್ಞೆ ಬಂದರೆ **ನಪುಂಸಕಸ್ಯಝಲಚಃ** (ಪಾ. ಸೂ ೭-೧-೭೨) ಸರ್ವನಾಮ ಸ್ಥಾನವು ಪರದಲ್ಲಿರುವಾಗ ಝಲಂತ ಅಥವಾ ಅಜಂತವಾದ ನಪುಂಸಕಲಿಂಗದ ಅಂಗಕ್ಕೆ ನುಮ್ ಆಗಮ ಬರುವುದು ಎಂಬುದರಿಂದ ನುಮ್ ಆಗಮ ಬಂದರೆ ಉಕ್ಥನ್-ಇ ಎಂದಿರುವಾಗ **ಸರ್ವನಾಮಸ್ಥಾನೇಚಾಸಂಬುದ್ಧೌ** (ಪಾ. ಸೂ. ೬-೪-೮) ಸಂಬುದ್ಧಿ ಭಿನ್ನಸರ್ವನಾಮಸ್ಥಾನ ಪ್ರತ್ಯಯವು ಪರದಲ್ಲಿರುವಾಗ ನಕಾರಾಂತವಾದ ಶಬ್ದದ ಉಪಧೆಗೆ ದೀರ್ಘಬರುವುದು ಎಂಬುದರಿಂದ ದೀರ್ಘಬಂದರೆ ಉಕ್ಥಾನ್ ಇ ಇಲ್ಲಿ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಛಂದಸ್ಸಿನಲ್ಲಿ ಶಿ ಎಂಬುದಕ್ಕೆ ಬಹುಲವಾಗಿ ಲೋಪ ಬರುವುದು ಎಂಬುದರಿಂದ ಶಿಗೆ ಲೋಪ **ನಲೋಪಃಪ್ರಾತಿಪದಿಕಾಂತಸ್ಯ** (ಪಾ. ಸೂ ೮-೨-೭) ಪ್ರಾತಿಪದಿಕ ಸಂಜ್ಞಕವಾದ ಪದದ ಕೊನೆಯಲ್ಲಿರುವ ನಕಾರಕ್ಕೆ ಲೋಪಬರುವುದು ಎಂಬುದರಿಂದ ನ್‌ಗೆ ಲೋಪ ಉಕ್ಥಾ ಎಂದಾಗುವುದು ಇದು ಪ್ರತ್ಯಯಸ್ವರದಿಂದ ಅಂತೋದಾತ್ತವಾಗುವುದು. ಉಕ್ಥಾ ಶಬ್ದದ ಮುಂದೆ ಶತಕ್ರತೋ ಎಂಬ ಆಮಂತ್ರಿತವು ಇರುವುದು. ಆದರೂ ಉಕ್ಥಾ ಎಂಬುದು ಅವೀವೃಧನ್ ಎಂಬಲ್ಲಿ ಅನ್ವಯಿಸುವುದೇವಿನಾ ಶತಕ್ರತೋ ಎಂಬಲ್ಲಿ ಅನ್ವಯಿಸುವುದಿಲ್ಲ. ಆದ್ದರಿಂದ ಪರಸ್ಪರಾನ್ವಯರೂಪ ಸಾಮರ್ಥ್ಯವಿಲ್ಲ. **ಸುಬಾಮಂತ್ರಿತೇ** ಎಂಬುದು ಸಾಮರ್ಥ್ಯವಿರುವಾಗಲೇ ಬರುವುದೆಂದು ಹಿಂದೆಯೇ ಉಪಪಾದಿಸಿರುವೆವು ಆದ್ದರಿಂದ **ಸುಬಾಮಂತ್ರಿತೇಪರಾಂಗವತ್ಸ್ವರೇ** (ಪಾ. ಸೂ. ೨-೧-೨) ಎಂಬುದರಿಂದ ಪರಾಂಗವದ್ಭಾವವು ಬರುವುದಿಲ್ಲ. ಆದ್ದರಿಂದ **ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬ ಎಂಟನೇ ಅಧ್ಯಾಯದ ಸೂತ್ರದಿಂದ ಅನುದಾತ್ತ ಬರುವುದಿಲ್ಲ.

**ವೃಧು ವರ್ಧನೇ** ಎಂಬ ಧಾತುವು ಆತ್ಮನೇಪದಿ. ಆದರೂ ಅಂತರ್ಭಾವಿತಣಿಜ್ಪ್ರತ್ಯಯಾರ್ಥಕವಾದ ವೃಧು ಧಾತುವಿನ ಮುಂದೆ ವ್ಯತ್ಯಯದಿಂದ ಪರಸ್ಮೈಪದವು ಬರುವುದು, ಪ್ರಥಮಪುರುಷ ಬಹುವಚನದಲ್ಲಿ ವರ್ಧನ್ತು ಎಂದಾಗುವುದು ॥ ೮ ॥

॥ ಸಂಹಿತಾಪಾಠಃ ॥

ಅಕ್ಷಿತೋತಿಃ ಸನೇದಿಮಂ ವಾಜಮಿಂದ್ರಃ ಸಹಸ್ರಿಣಂ ।
ಯಸ್ಮಿನ್ವಿಶ್ವಾನಿ ಪೌಂಸ್ಯಾ ॥ ೯ ॥

॥ ಪದಪಾಠಃ ॥

ಅಕ್ಷಿತಽಊತಿಃ । ಸನೇತ್ । ಇಮಂ । ವಾಜಂ । ಇಂದ್ರಃ । ಸಹಸ್ರಿಣಂ ॥
ಯಸ್ಮಿನ್ । ವಿಶ್ವಾನಿ । ಪೌಂಸ್ಯಾ ॥ ೯ ॥

॥ ಸಾಯಣಭಾಷ್ಯಂ ॥

ಇಂದ್ರ ಇಮಂ ವಾಜಂ ಸೋಮರೂಪಮನ್ನಂ ಸನೇತ್ । ಸಂಭಜೇತ್ । ಕೀದೃಶ ಇಂದ್ರಃ । ಅಕ್ಷಿತೋತಿರಹಿಂಸಿತರಕ್ಷಣಃ ಕದಾಚಿದಪಿ ರಕ್ಷಾಂ ನ ವಿಮುಂಚತೀತ್ಯರ್ಥಃ । ಕೀದೃಶಂ ವಾಜಂ । ಸಹಸ್ರಿಣಂ ಪ್ರಕೃತೌ ವಿಕೃತಿಷು ಚ ಪ್ರವರ್ತಮಾನತ್ವೇನ ಸಹಸ್ರಸಂಖ್ಯಾಯುಕ್ತಂ । ಯಸ್ಮಿನ್ವಾಜೇ ವಿಶ್ವಾನಿ ಸರ್ವಾಣಿ ಪೌಂಸ್ಯಾ ಪುಂಸ್ತ್ವಾನಿ ಬಲಾನಿ ವರ್ತಂತೇ ತಾದೃಶಂ ವಾಜಮಿತಿ ಪೂರ್ವತ್ರಾನ್ವಯಃ ॥ ಅಕ್ಷಿತೋತಿಃ । ನನು ಕ್ಷಿ ಕ್ಷಯೆ ಇತ್ಯಯಂ ಧಾತುರಕರ್ಮಕಃ । ತಸ್ಯ ಚ ಕರ್ಮಾಭಾವಾದಧಿಕರಣೇ ಭಾವೇ ಕರ್ತರಿ ವಾ ಕ್ತಪ್ರತ್ಯಯೇನ ಭವಿತವ್ಯಂ । ತದಿಹ ಯದಿ ಕರ್ತರ್ಯಧಿಕರಣೇ ವಾ ಸ್ಯಾತ್ತದಾ ತಯೋರರ್ಥಯೋರ್ಣ್ಯಪ್ರತ್ಯಯಸ್ಯಾವಿಧಾನಾತ್ಕ್ಷಿಯ ಇತ್ಯನುವೃತ್ತೌ । ಪಾ. ೬-೪-೫೯ । ನಿಷ್ಠಾಯಾ-ಮಣ್ಯದರ್ಥೇ । ಪಾ. ೬- -೬೦ । ಇತಿ ದೀರ್ಘೇಣ ಭವಿತವ್ಯಂ । ತಥಾ ಚ ಕ್ಷಿಯೋ ದೀರ್ಘಾತ್ । ಪಾ. ೮-೨-೪೬ । ಇತಿ ನಿಷ್ಠಾನತ್ವೇ-ಕ್ಷೀಣೇತಿ ಸ್ಯಾತ್ ನ ತ್ವಕ್ಷಿತೇತಿ । ಅಥ ನಪುಂಸಕೇ ಭಾವೇ ಕ್ತಃ । ಪಾ. ೩-೩-೧೧೪ । ಇತಿ ಭಾವಪರಃ ಕ್ಷಿತಶಬ್ದೋ ಗೃಹ್ಯತೇ । ತದಾ ತಸ್ಯ ಣ್ಯದರ್ಥತ್ವೇನಾಣ್ಯದರ್ಥ ಇತಿ ನಿಷೇಧಾದ್ದೀರ್ಘನತ್ವಯೋರಭಾವಾತ್ಕ್ಷಿತಮಿತಿ ಸಿಧ್ಯತಿ । ತದಾ ತು ನಞ್‌ತತ್ಪುರುಷಃ ಪ್ರಕೃತೇನ ನಾಸ್ತೀತೀತಿ ನ ವಿದ್ಯತೇ ಕ್ಷಿತಮತ್ರೇತಿ ಬಹುವ್ರೀಹಿಣೈವ ಭವಿತವ್ಯಂ । ತಥಾ ಚ ನಞ್‌ಸುಭ್ಯಾಂ । ಪಾ. ೬-೨-೧೭೨ । ಇತ್ಯುತ್ತರಪದಾಂತೋದಾತ್ತತ್ವಂ ಸ್ಯಾತ್ । ಪುನರೂತಿಶಬ್ದೇನ ಬಹುವ್ರೀಹೌ ಪೂರ್ವ-ಪದಪ್ರಕೃತಿಸ್ವರತ್ವೇನ ಸ ಏವ ಸ್ವರಸ್ತಿಷ್ಠೇದಿತ್ಯಭಿಮತಮಾದ್ಯುದಾತ್ತತ್ವಂ ನ ಸಿಧ್ಯೇದಿತಿ । ಸತ್ಯಂ । ಅತ ಏವಾತ್ರ ಕ್ಷಿಧಾತುರಂತರ್ಭಾವಿತಣ್ಯರ್ಥೋ ಗೃಹ್ಯತೇ । ತೇನ ಸಕರ್ಮಕತ್ವಾತ್ಕರ್ಮಣ್ಯೇಷಾ ನಿಷ್ಠಾ । ತತ-

ಶ್ಚಾಣ್ಯದರ್ಥ ಇತಿ ನಿಷೇಧಾದ್ದೀರ್ಘೋ ನಿಷ್ಠಾನತ್ವಂ ಚ ನ ಭವಿಷ್ಯತಿ । ತಥಾ ಚ ನಞ್ತತ್ಪುರುಷೇ ನ ಕ್ಷಿತಾಕ್ಷಿತಾಕ್ಷಯಿತೇತ್ಯರ್ಥಃ । ತತ್ರ ಚಾವ್ಯಯೇ ಪೂರ್ವಪದಪ್ರಕೃತಿಸ್ವರತ್ವೇನ ನಞಃ ಉದಾತ್ತತ್ವಂ । ಪುನ-ರೂತಿಪದೇನ ಬಹುವ್ರೀಹೌ ಸ ಏವ ಸ್ವರಃ ಸ್ಥಾಸ್ಯತೀತಿ ನ ಕೋಽಪಿ ದೋಷಃ । ರಿ ಕ್ಷಿ ಚಿರಿ ಜಿರಿ ದಾಶ ದೃ ಜಿಘಾಂಸಾಯಾಂ । ಧಾ. ೨೭, ೨೮-೩೩ । ಇತಿ ಕ್ಷಿಣೋತೇರ್ಹಿಂಸಾರ್ಥಸ್ಯ ವಾ ಕರ್ಮಣಿ ನಿಷ್ಠಾ । ತಥಾ ಚಾಹಿಂಸಿತೋತಿರಿತ್ಯರ್ಥ ಉಕ್ತಕ್ರಮೇಣ ಸ್ವರಃ ಸಿಧ್ಯತೀತಿ ನ ದೋಷಃ । ಸನೇತ್ । ವನ ಷಣ ಸಂಭಕ್ತೌ । ಭೌವಾದಿಕಃ । ವಾಜಂ । ವೃಷಾದಿತ್ವಾದಾದ್ಯುದಾತ್ತಃ । ಇಂದ್ರಃ । ರನ್ರೋ ನಿತ್ತ್ವಾದಾದ್ಯು-ದಾತ್ತಃ । ಸಹಸ್ರಿಣಂ ಸಹಸ್ರಮಸ್ಯಾಸ್ತಿ । ಅತ ಇನಿಠನೌ ಪಾ. ೫-೨-೧೧೫ । ಪ್ರತ್ಯಯಸ್ವರಃ । ವಿಶ್ವಾನಿ । ವಿಶೇಃ ಕ್ವನಿ । ಉ. ೧-೧೫೧ । ನಿತ್ತ್ವಾದಾದ್ಯುದಾತ್ತಃ । ಪುಂಸಃ ಕರ್ಮಾಣಿ ಪೌಂಸ್ಯಾನಿ । ಬ್ರಾಹ್ಮಣಾ-ದೇರಾಕೃತಿಗಣತ್ವಾದ್ಗುಣವಚನಬ್ರಾಹ್ಮಣಾದಿಭ್ಯಃ ಕರ್ಮಣಿ ಚ । ಪಾ. ೫-೧-೧೨೪ । ಇತಿ ಷ್ಯಞ್ । ಞಿತ್ವಾದಾದ್ಯುದಾತ್ತಃ । ಪ್ರಥಮಾಬಹುವಚನಸ್ಯ ಸುಪಾಂ ಸುಲುಗಿತ್ಯಾದಿನಾ ಡಾದೇಶಃ । ನನು ಸ್ತ್ರೀ-ಪುಂಸಾಭ್ಯಾಂ ನಞ್ಸ್ನಞೌ ಭವನಾತ್ । ಪಾ. ೪-೧-೮೭ । ಇತ್ಯನೇನ ಧಾನ್ಯಾನಾಂ ಭವನೇ ಕ್ಷೇತ್ರೇ ಖಞ್ । ಪಾ. ೫-೨-೧ । ಇತ್ಯೇತತ್ಪರ್ಯಂತೇಷ್ವಪತ್ಯಾದ್ಯರ್ಥೇಷು ನಞ್ಸ್ನಞೋರ್ವಿಧಾನಾದ್ಯಥಾ ಪುಂಸೋಽಪತ್ಯಂ ಪೌಂಸ್ನಃ ಪುಂಸ ಆಗತಃ ಪೌಂಸ್ನ ಇತ್ಯಾದಿ ತದ್ವತ್ಪುಂಸೋ ಭಾವಃ ಕರ್ಮ ವೇತ್ಯಸ್ಮಿ-ನ್ನಪ್ಯರ್ಥೇ ಷ್ಯಞಂ ಬಾಧಿತ್ವಾ ಪೌಂಸ್ನಾನೀತ್ಯೇವ ಭವಿತವ್ಯಂ । ಕಥಮುಚ್ಯತೇ ಪೌಂಸ್ಯಾನೀತಿ । ಉಚ್ಯತೇ । ಆ ಚ ತ್ವಾತ್ । ಪಾ. ೫-೧-೧೨೦ । ಇತಿ ಸೂತ್ರೇ ತ್ವಾದಿತ್ಯವಧಿನಿರ್ದೇಶಾದ್ಬ್ರಹ್ಮಸ್ತ್ವ ಃ । ಪಾ. ೫-೧-೧೩೬ । ಇತ್ಯೇತತ್ಪರ್ಯಂತೈರಿಮನಿಜಾದಿಭಿಃ ಪ್ರತ್ಯಯೈಃ ಸಹ ತ್ವತಲೋಃ ಸಮಾವೇಶಃ । ಏವಂ ತತ್ತ್ರೈವ ಚ ಶಬ್ದಾನ್ನಞ್ಸ್ನಞೋರಪಿ ಷ್ಯಞಾದಿಭಿಃ ಸಮಾವೇಶ ಏವ । ನ ಬಾಧ್ಯಬಾಧಕಭಾವಃ ॥

॥ ಪ್ರತಿಪದಾರ್ಥ ॥

ಅಕ್ಷಿತೋತಿಃ—ಯಾವಾಗಲೂ ನಾಶವಿಲ್ಲದ ರಕ್ಷಣೆಯನ್ನು ಕೊಡುವ ಅಥವಾ ಹಿಂಸೆಮಾಡದಿರುವವರಿಗೆ ರಕ್ಷಕನಾದ । **ಇಂದ್ರಃ**—ಇಂದ್ರನು । **ಯಸ್ಮಿನ್**—ಯಾವ ಹವಿಸ್ಸಿನ ಅಥವಾ ಸೋಮರೂಪವಾದ ಅನ್ನದಲ್ಲಿ **ವಿಶ್ವಾನಿ**—ಸಮಸ್ತವಾದ । **ಪೌಂಸ್ಯಾ**—ಬಲಶಕ್ತಿಗಳಿರುವವೋ ಅತಂಹ । **ಸಹಸ್ರಿಣಂ**—ಪ್ರಕೃತಿವಿಕೃತಿರೂಪ ಗಳಾದ ಅನೇಕ ಯಾಗಗಳಲ್ಲಿ ಉಪಯೋಗಿಸಲ್ಪಡುವ। **ಇಮಂ ವಾಜಂ**—ಸೋಮರೂಪವಾದ (ಅಥವಾ ಹವಿಸ್ಸಿನ ರೂಪವಾದ) ಈ ಅನ್ನವನ್ನು । **ಸನೇತ್**—ಹೊಂದಲಿ ॥

॥ ಭಾವಾರ್ಥ ॥

ಇಂದ್ರನು ಕೊಡುವ ರಕ್ಷಣೆಗೆ ಯಾವಾಗಲೂ ನಾಶವಿಲ್ಲ ಎಂದರೆ ಅವನು ಯಾವಾಗಲೂ ತನ್ನನ್ನು ಸ್ತೋತ್ರಮಾಡುವವರನ್ನು ರಕ್ಷಿಸುವನು. ಈ ವಿಚಾರದಲ್ಲಿ ಸಂಶಯ ಪಡಬೇಕಾಗಿಲ್ಲ. ಸಾವಿರಾರು ಯಜ್ಞಯಾಗಾದಿಗಳಲ್ಲಿ ನಾವು ಉಪಯೋಗಿಸುವ ಶಕ್ತಿವರ್ಧಕಗಳಾದ ಸೋಮ, ಹವಿಸ್ಸು ಮೊದಲಾದ ರೂಪಗಳಿಂದಿರುವ ಅನ್ನವನ್ನು ಇಂತಹ ಇಂದ್ರನು ಹೊಂದಲಿ ಎಂದರೆ ನಾವು ಯಜ್ಞಯಾಗಾದಿಗಳಲ್ಲಿ ಅರ್ಪಿಸುವ ಅನ್ನವನ್ನು ಇಂದ್ರನು ಸ್ವೀಕರಿಸಲಿ

## English Translation

May Indra who grants unperishable aid accept this food (in the form of soma) in which exist all manly strength and which we offer in thousands of sacrifices.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅಭಿಪ್ರಾಯವು ಸ್ಪಷ್ಟವಾಗಿಲ್ಲ. ಆದರೂ ಒಂದು ವಿಧವಾದ ಅರ್ಥವು ಭಾಸವಾಗುವಂತೆ ಭಾಷ್ಯಕಾರರು ಪ್ರಯತ್ನ ಮಾಡಿರುವರು, ಸ್ಕಂದಸ್ವಾಮಿ ಮತ್ತು ವೆಂಕಟಮಾಧವರು ಈ ಋಕ್ಕಿಗೆ ಇನ್ನೊಂದು ವಿಧವಾಗಿ ಅರ್ಥಮಾಡಿರುವರು. ಅವರ ಭಾಷ್ಯವನ್ನೂ ಅನುವಾದವನ್ನೂ ಇಲ್ಲಿ ಕೊಟ್ಟಿರುತ್ತೇವೆ.

ಸ್ಕಂದಸ್ವಾಮಿಯ ಭಾಷ್ಯ—

> ಅಕ್ಷಿತಾ ಅನ್ಯೇನಾಹಿಂಸಿತಾ ಅಕ್ಷೀಣಾ ವಾ ಊತಿಃ ಪಾಲನಂ ಯಸ್ಯ ಸೋಽಕ್ಷಿತೋತಿಃ । ಸನೇತ್ ಸಂಭಜತು। ಇಮಂ ವಾಜಂ ಸಂಗ್ರಾಮಂ ಇಂದ್ರಃ ಸಹಸ್ರಿಣಂ ಯೋದ್ಧೃಸಹಸ್ರಯುಕ್ತಂ । ಅಸ್ಮಿನ್ ಸಂಗ್ರಾಮೇಽಸ್ಮದ್ರಕ್ಷಣಾಯ ಸನ್ನಿಹಿತೋ ಭವತ್ವಿತ್ಯರ್ಥಃ । ಯಸ್ಮಿನ್ ಸಂಗ್ರಾಮೇ ಕಿಂ ಉಚ್ಯತೇ । (ಯಸ್ಮಿನ್) ವಿಶ್ವಾನಿ ಸರ್ವಾಣಿ । ಪೌಂಸ್ಯಾ । ಬಲನಾಮೈತತ್ । ಹಸ್ತ್ಯಶ್ವರಥಪದಾತ್ರಿಲಕ್ಷಣಾನಿ ಬಲಾನಿ । ಅಥವಾ ವಾಜ ಇತ್ಯನ್ನನಾಮ । ಇದಮಸ್ಮದೀಯಂ ಸೋಮಲಕ್ಷಣಮನ್ನಂ ಸಂಭಜೇತ್ ಪಿಬೇತ್ ಇಂದ್ರಃ ಸ್ತುತಿಸಹಸ್ರಯುಕ್ತಂ ಯಸ್ಮಿನ್ ಬಲಾನಿ ಸರ್ವಾಣಿ ಸಾಮರ್ಥ್ಯಲಕ್ಷಣಾನಿ । ವಾಜಃ ಪೀತಃ ಸರ್ವಸಾಮರ್ಥ್ಯಾನಿ ಜನಯತೀತ್ಯರ್ಥಃ । ಅಥವಾ ಯಸ್ಮಿನ್ ವಿಶ್ವಾನಿ ಪೌಂಸ್ಯೇತಿ ಇಂದ್ರವಿಶೇಷಣಂ । ಯಸ್ಮಿನ್ನಿಂದ್ರೇ ಸರ್ವಾಣಿ ಬಲಾನಿ ಯಃ ಸರ್ವೈರ್ಬಲೈರ್ಬಲವಾನ್ ಯೋ ಮಹಾಬಲ ಇತ್ಯರ್ಥಃ ॥

ಅನುವಾದವು—ಇಂದ್ರನು ಕೊಡುವ ರಕ್ಷಣೆಯು ಕೆಲವು ಕಾಲವಿದ್ದು ನಾಶವಾಗುವುದಿಲ್ಲ. ಯಾವಾಗಲೂ ಇರುವುದೆಂದರ್ಥವು. ಇಂತಹ ರಕ್ಷಣೆಯನ್ನು ಕೊಡುವ ಇಂದ್ರನು ಸಾವಿರಾರು ಯುದ್ಧಭಟರಿಂದ ಕೂಡಿದ ಈ ಯುದ್ಧಭೂಮಿಗೆ ನಮ್ಮ ರಕ್ಷಣೆಗಾಗಿ ಬರಲಿ. ಈ ಯುದ್ಧಭೂಮಿಯಲ್ಲಿ ಹಸ್ತ್ಯಶ್ವರಥಪದಾತಿಗಳೆಂಬ ಚತುರಂಗ ಬಲವು ಇರುವುದು. ಇಂತಹ ಯುದ್ಧಭೂಮಿಗೆ ಬಂದು ನಮ್ಮನ್ನು ಸಲಹಲಿ, ಅಥವಾ, ಸಮಸ್ತಬಲಯುಕ್ತನಾದ ಎಂದರೆ ಮಹಾಬಲಶಾಲಿಯದ ಇಂದ್ರನು ಸಹಸ್ರಸ್ತುತಿಗಳಿಂದ ಕೂಡಿದ ಮತ್ತು ಪಾನಮಾಡುವವರಿಗೆ ಸರ್ವಸಾಮರ್ಥ್ಯವನ್ನೂ ಉಂಟುಮಾಡುವ ಈ ಸೋಮರೂಪವಾದ ಅನ್ನವನ್ನು ಸ್ವೀಕರಿಸಲಿ ಮತ್ತು ನಮ್ಮನ್ನು ಯಾವಾಗಲೂ ತಪ್ಪದೆ ರಕ್ಷಿಸಲಿ.

**ಅಕ್ಷಿತೋತಿಃ**—ಅಹಿಂಸಿತರಕ್ಷಣಃ ಕದಾಚಿದಪಿ ರಕ್ಷಾಂ ನ ವಿಮುಂಚತೀತ್ಯರ್ಥಃ ಸ್ತೋತ್ರಮಾಡುವವರ ರಕ್ಷಣೆಯನ್ನು ಯಾವಾಗಲೂ ತ್ಯಜಿಸುವವನಲ್ಲ. ಇವನು ಕೊಡುವ ರಕ್ಷಣೆಯು ಕ್ಷೀಣವಾಗುವುದಿಲ್ಲ ಎಂದರ್ಥವು

ಈ ಶಬ್ದವು ಋಗ್ವೇದದಲ್ಲಿ ಈ ಋಕ್ಕಿನಲ್ಲಲ್ಲದೆ ಕೆಳಗೆ ಕೊಟ್ಟಿರುವ ಋಕ್ಕುಗಳಲ್ಲಿ ಮಾತ್ರವಿರುವುದು ಮತ್ತೆಲ್ಲಿಯೂ ಇಲ್ಲ—

**ಅರ್ಚನ್ತ್ಯರ್ಕೈರ್ಮಘವಾ ನೃಭ್ಯ ಉಕ್ಥೈರ್ದ್ಯುಕ್ಷೋ ರಾಜಾ ಗಿರಾಮಕ್ಷಿತೋತಿಃ ।**
(ಋ. ಸಂ. ೬-೨೪-೧)

**ಜನೀಯಂತೋ ಜನಿದಾಮಕ್ಷಿತೋತಿಮಾ ಚ್ಯಾವಯಾಮೋಽವತೇ ನ ಕೋಶಂ ।**
(ಋ. ಸಂ ೪-೧೭-೧೬)

**ಸತ್ರಾಜಿತೋ ಧನಸಾ ಅಕ್ಷಿತೋತಯೋ ವಾಜಯಂತೋ ರಥಾ ಇವ ॥**
(ಋ. ಸಂ. ೮.೩-೧೫)

**ವಾಜಂ**—ಅನ್ನ ಅಥವಾ ಸಂಗ್ರಾಮ (ಯುದ್ಧ)

**ಸಹಸ್ರಿಣಂ**—ಈ ಶಬ್ದವು ವಾಜಶಬ್ದಕ್ಕೆ ವಿಶೇಷಣವಾಗಿರುವುದು. ವಾಜಶಬ್ದಕ್ಕೆ ಅನ್ನವೆಂದು ಅರ್ಥ ಮಾಡುವ ಸಂದರ್ಭದಲ್ಲಿ ಸಹಸ್ರಿಣಂ ಎಂದರೆ ಸಾವಿರಾರು ಯಜ್ಞಗಳಲ್ಲಿ ಅರ್ಪಿಸುವ ಇಥವಾ ಸಾವಿರಾರು ಸ್ತುತಿಗಳಿಂದ ಪ್ರಶಂಸಿಸಲ್ಪಡುವ ಎಂದರ್ಥವು. ವಾಜಶಬ್ದಕ್ಕೆ ಯುದ್ಧವೆಂದು ಅರ್ಥಮಾಡುವಾಗ ಸಹಸ್ರಿಣಂ ಎಂದರೆ ಸಾವಿರಾರು ಯುದ್ಧಭಟರಿಂದ ಕೂಡಿದ ಯುದ್ಧವು ಎಂದು ಹೇಳಬೇಕಾಗುವುದು.

**ಯಸ್ಮಿನ್ವಿಶ್ವಾನಿ ಪೌಂಸ್ಯಾ**--ಸಮಸ್ತ ಶಕ್ತಿಸಾಮರ್ಥ್ಯಗಳಿರುವ. ವಾಜಶಬ್ದಕ್ಕೆ ಅನ್ನಎಂಬ ಅರ್ಥವನ್ನು ಹೇಳಿದರೆ ಪೌಂಸ್ಯಾ ಎಂಬ ಶಬ್ದಕ್ಕೆ ಶಕ್ತಿ, ಸಾಮರ್ಥ್ಯ, ಬಲ, ಪುಷ್ಟಿ, ಉತ್ಸಾಹ ಮೊದಲಾದ ಅರ್ಥವನ್ನು ಹೇಳಬಹುದು. ಯುದ್ಧವೆಂಬ ಅರ್ಥವನ್ನು ಹೇಳುವಾಗ ಹಸ್ತ್ಯಶ್ವಾದಿಬಲಗಳು ಅಥವಾ ಪೌರುಷೇಯ, ಪರಾಕ್ರಮ ಧೈರ್ಯ ಮೊದಲಾದ ಅರ್ಥವನ್ನು ಹೇಳಬಹುದು. ಸ್ಕಂದಸ್ವಾಮಿಯು ಹೇಳುವಂತೆ ಪೌಂಸ್ಯಾ ಎಂಬ ಶಬ್ದವು ಇಂದ್ರನಿಗೆ ವಿಶೇಷಣವನ್ನಾಗಿ ಹೇಳುವುದಾದರೆ ಸಮಸ್ತಬಲದಿಂದ ಕೂಡಿದ, ಮಹಾಬಲಶಾಲಿಯಾದ ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಅಕ್ಷಿತೋತಿಃ**-**ಕ್ಷಿ-ಕ್ಷಯೇ** ಎಂಬ ಧಾತುವು ಅಕರ್ಮಕವು. ಇದರ ಮುಂದೆ ಕ್ತ ಪ್ರತ್ಯಯಬರುವುದಾದರೆ, ಧಾತುವು ಅಕರ್ಮಕವಾದ್ದರಿಂದ ಕರ್ಮಾರ್ಥದಲ್ಲಿ ಕ್ತ ಪ್ರತ್ಯಯ ಬರುವುದಿಲ್ಲ. ಕರ್ತ್ರರ್ಥದಲ್ಲಿಯಾಗಲೀ, ಅಧಿಕರಣಾರ್ಥದಲ್ಲಿಯಾಗಲೀ, ಭಾವಾರ್ಥದಲ್ಲಿಯಾಗಲೀ ಕ್ತ ಪ್ರತ್ಯಯವು ಬರಬೇಕಾಗುವುದು. ಕರ್ತ್ರರ್ಥ ಅಧಿಕರಣಾರ್ಥಗಳಲ್ಲಿ ಕ್ತ ಪ್ರತ್ಯಯಬರುವುದು ಎಂದು ಹೇಳಿದರೆ ಕ್ಷಿ+ತ ಎಂದಿರುವಾಗ **ನಿಷ್ಠಾಯಾಮಣ್ಯದರ್ಥೇ** (ಪಾ. ಸೂ. ೬-೪-೬೦) (ಣ್ಯತ್ ಪ್ರತ್ಯಯದ ಅರ್ಥ ಭಾವ ಅಥವಾ ಕರ್ಮ, ನಿಷ್ಠಾ ಎಂದರೆ **ಕ್ತ** **ಕ್ತವತೂನಿಷ್ಠಾ** (ಪಾ. ಸೂ. ೧-೧-೨೬) ಕ್ತ. ಕ್ತವತು ಪ್ರತ್ಯಯಗಳು ನಿಷ್ಠಾ ಸಂಜ್ಞೆಯನ್ನು ಹೊಂದುವುವು ಎಂಬುವರಿಂದ, ಕ್ತ ಕ್ತವತು ಪ್ರತ್ಯಯಗಳು) ಣ್ಯತ್ಪ್ರತ್ಯಯಾರ್ಥಕವಲ್ಲದ ಕ್ತ ಕ್ತವತು ಪ್ರತ್ಯಯಗಳು ಪರವಾಗಿರುವಾಗ ಕ್ಷಿ ಧಾತುವಿಗೆ ದೀರ್ಘ ಬರುವುದು ಎಂದು ಸೂತ್ರಾರ್ಥ. ಕರ್ತೃ ಅಧಿಕರಣ ಎಂಬ ಅರ್ಥವು ಣ್ಯತ್ಪ್ರತ್ಯಯಾರ್ಥವಲ್ಲದಕಾರಣ ಕರ್ತ್ರಧಿಕರಣಾರ್ಥಕವಾದ ಕ್ತ ಪ್ರತ್ಯಯವು ಪರದಲ್ಲಿರುವಾಗ ಕ್ಷಿ ಎಂಬುದಕ್ಕೆ ದೀರ್ಘ ಬರುವುದು. ನಂತರ **ಕ್ಷಿಯೋದೀರ್ಘಾತ್** (ಪಾ ಸೂ. ೮ ೨-೪೭) ದೀರ್ಘವನ್ನು ಕೊನೆಯಲ್ಲಿ ಹೊಂದಿರುವ ಕ್ಷಿ ಧಾತುವಿನ ಮುಂದಿರುವ ಕ್ತ ಕ್ತವತುಗಳ ತಕಾರಕ್ಕೆ ನಕಾರ ಬರುವುದು ಎಂಬುದರಿಂದ ನಿಷ್ಠಾತಕಾರಕ್ಕೆ ನಕಾರ ಬಂದರೆ ಕ್ಷೀ+ನ ಎಂದಾಗುವುದು. **ಅಟ್ಕುಪ್ವಾಙ್‌ನುಮ್‌ವ್ಯವಾಯೇಽಪಿ** (ಪಾ. ಸೂ. ೮-೪-೨) ಎಂಬುದರಿಂದ ನಕಾರಕ್ಕೆ ಣಕಾರ ಬಂದರೆ ಕ್ಷೀಣ ಎಂದು ಆಗುತ್ತೆ. ನಞ್‌ನೊಂದಿಗೆ ಸಮಾಸ ಮಾಡಿದರೆ ಅಕ್ಷೀಣ

ಎಂದಾಗುವುದೇ ವಿನಾ ಅಕ್ಷಿತಂ ಎಂದು ಆಗುವುದಿಲ್ಲ. ಇನ್ನು **ನಪುಂಸಕೇಭಾವೇಕ್ತಃ** (ಪಾ. ಸೂ. ೮-೩-೪೬) ನಪುಂಸಕ ಲಿಂಗದಲ್ಲಿ ಕಾಲಸಾಮಾನ್ಯ ತೋರುವಾಗ ಭಾವಾರ್ಥದಲ್ಲಿ ಕ್ತ ಪ್ರತ್ಯಯ ಬರುವುದು ಎಂಬುದರಿಂದ, ಭಾವಾರ್ಥದಲ್ಲಿ ಕ್ತ ಪ್ರತ್ಯಯ ಬರುವುದು ಎಂದರೆ, ಈ ಪಕ್ಷದಲ್ಲಿ ಭಾವಾರ್ಥವು ಣಿಚ್ಪ್ರತ್ಯಯದ ಅರ್ಥವಾದ ರಿಂದ **ಅಣ್ಯದರ್ಥೇ** (ಪಾ. ಸೂ. ೬-೪-೬೦) ಎಂದು ನಿಷೇಧವಿರುವುದರಿಂದ ಕ್ಷಿ ಧಾತುವಿಗೆ ದೀರ್ಘ ಬರುವುದಿಲ್ಲ. ದೀರ್ಘಬಾರದ ಮೇಲೆ **ಕ್ಷಿಯೋದೀರ್ಘಾತ್** (ಪಾ. ಸೂ. ೮-೨-೪೬) ಎಂಬುದರಿಂದ ನಿಷ್ಠಾತಕಾರಕ್ಕೆ ನಕಾರವೂ ಬರುವುದಿಲ್ಲ ಕ್ಷಿತಂ ಎಂದು ಸಿದ್ಧವಾಗುವುದು. ಆದರೂ ಊತಿ ಶಬ್ದಾರ್ಥದೊಂದಿಗೆ ಅನನ್ವಯವಾಗುವುದರಿಂದ ಕ್ಷಿತ ಶಬ್ದಕ್ಕೆ ನಞ್‌ನೊಂದಿಗೆ ತತ್ಪುರುಷಸಮಾಸವನ್ನು ಮಾಡಲಾಗುವುದಿಲ್ಲ. ಬಹುವ್ರೀಹಿ ಸಮಾಸವನ್ನೇ ಮಾಡಬೇಕಾಗುವುದು. ಬಹುವ್ರೀಹಿ ಬಂದರೆ **ನಞ್‌ಸುಭ್ಯಾಂ** (ಪಾ. ಸೂ, ೬-೨-೧೭೨) ಬಹುವ್ರೀಹಿ ಸಮಾಸ ದಲ್ಲಿ ನಞ್ ಸು ಇವುಗಳ ಮುಂದಿರುವ ಉತ್ತರಪದವು ಅಂತೋದಾತ್ತವಾಗುವುದು. ಪುನಃ ಅಕ್ಷಿತ ಎಂಬುದಕ್ಕೆ ಊತಿ ಶಬ್ದದೊಂದಿಗೆ ಬಹುವ್ರೀಹಿ ಬಂದರೆ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಎಂಬು ದರಿಂದ ಪೂರ್ವಪದಪ್ರಕೃತಿಸ್ವರ ಬಂದರೆ ಅದೇ ಸ್ವರವೇ ನಿಲ್ಲಬೇಕಾಗುವುದು. ಅಂತು ಅಕ್ಷಿತೋತಿಃ ಎಂಬಲ್ಲಿ ಇಷ್ಟವಾದ ಆದ್ಯುದಾತ್ತ ಸ್ವರವು ಸಿದ್ಧಿಸದೇ ಹೋಗುವುದು ಈ ರೀತಿ ಕರ್ತೃ ಅಧಿಕರಣ ಎಂಬ ಅರ್ಥಗಳಲ್ಲಿ ಅಕ್ಷಿತ ಎಂಬ ರೂಪವೇ ಸಿದ್ಧಿಸುವುದಿಲ್ಲ. ಭಾವಾರ್ಥದಲ್ಲಿ ರೂಪವು ಸಿದ್ಧಿಸಿದರೂ ವಿವಕ್ಷಿತವಾದ ಆದ್ಯುದಾತ್ತ ಸ್ವರಸಿದ್ಧವಾಗುವುದಿಲ್ಲ. ಧಾತುವು ಅಕರ್ಮಕವಾದ್ದರಿಂದ ಕರ್ಮಾರ್ಥದಲ್ಲಿ ಕ್ತ ಪ್ರತ್ಯಯವೇ ಬರುವುದಿಲ್ಲ. ಆದ್ದ ರಿಂದ ಇಲ್ಲಿ ಹೇಗೆ ನಿರ್ವಾಹ ಮಾಡುವುದು ಎಂದರೆ ಈಗ ಉಪಪಾದಿತವಾದ ಅಂಶವು ಸತ್ಯವಾದ ದೇ. ಆದ್ದ ರಿಂದಲೇ ಇಲ್ಲಿ ಅಂತರ್ಭಾವಿತ ಣಿಚ್ಪ್ರತ್ಯಯಾರ್ಥಕವಾದ ಕ್ಷಿ ಧಾತುವನ್ನು ತೆಗೆದುಕೊಳ್ಳುವೆವು ಇದು ಸಕ ರ್ಮಕವಾದ್ದರಿಂದ ಕರ್ಮಾರ್ಥದಲ್ಲಿಯೇ ಇಲ್ಲಿ ಕ್ತ ಪ್ರತ್ಯಯ ಬರುವುದು. ಈಗ **ಅಣ್ಯದರ್ಥೇ** (ಪಾ. ಸೂ. ೬-೪-೬೦) ಎಂದು ನಿಷೇಧ ಬರುವುದರಿಂದ ದೀರ್ಘವೂ ನಂತರ ನತ್ವವೂ ಬರುವುದಿಲ್ಲ. ನಕ್ಷಿತಾ-ಅಕ್ಷಿತಾ ಎಂದು ನಞ್ ತತ್ಪುರುಷ ಸಮಾಸ ಅಕ್ಷಿತಾ-ಅಕ್ಷಯಿತಾ (ಕ್ಷಯಿಸದೇ ಇರುವ) ಎಂದರ್ಥವಾಗುವುದು. ಆದ್ದರಿಂದ **ತತ್ಪುರುಷೇತುಲ್ಯಾರ್ಥ** (ಪಾ ಸೂ. ೬-೨-೨) ಎಂಬುದರಿಂದ ಅವ್ಯಯ ಪೂರ್ವಪದ ಪ್ರಕೃತಿಸ್ವರದಿಂದ ನಞ್‌ಗೆ ಉದಾತ್ತ ಬರುವುದು. ಊತಿ ಶಬ್ದದೊಂದಿಗೆ ಬಹುವ್ರೀಹಿ ಬಂದರೂ, **ಬಹುವ್ರೀಹೌಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಅದೇ ನಿಲ್ಲುವುದು. ಆದ್ದರಿಂದ ರೂಪಸಿದ್ಧಿಯೂ ವಿವಕ್ಷಿತಸ್ವರಸಿದ್ಧಿಯೂ ಆಗುವುದರಿಂದ ಯಾವ ದೋಷವೂ ಬರುವುದಿಲ್ಲ. ಅಥವಾ 'ರಿಕ್ಷಿ ಚಿರಿ ಜಿರಿ ದಾಶ ದೃ ಹಿಂಸಾಯಾಂ, ಎಂಬ ಸ್ವಾದಿಗಣಪಠಿತವಾದ ಹಿಂಸಾರ್ಥಕವಾದ ಕ್ಷಿ ಧಾತುವಿನ ಮುಂದೆ ಕರ್ಮಾರ್ಥ ಕ್ತ ಪ್ರತ್ಯಯ ಬರುವುದು. ಅಹಿಂಸಿತವಾದ ಊತಿ (ರಕ್ಷಣ) ಯುಳ್ಳವನು ಎಂದು ಅರ್ಥವಾಗುವುದು. ಈ ಪಕ್ಷದಲ್ಲಿ ದೀರ್ಘ ಬರುವುದಿಲ್ಲ. ತತ್ಪುರುಷಸಮಾಸವು ಸಂಭವಿಸುವುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರದಿಂದ ನಞ್‌ಗೆ ಆದ್ಯುದಾತ್ತವೇ ಬರುವುದು. ಏವಂಚ ರೂಪಾಸಿದ್ಧಿವಿವಕ್ಷಿತ ಸ್ವರಾಸಿದ್ಧಿರೂಪದೋಷಗಳಿಲ್ಲವು.

**ಸನೇತ್-ಷಣಷಣಸಂಭಕ್ತೌ**—ಷಣಧಾತುವಿಗೆ **ಧಾತ್ವಾದೇಃಷಃ ಸಃ** (ಪಾ. ಸೂ. ೬-೧-೬೪) ಎಂಬುದ ರಿಂದ ಆದಿ ಷಕಾರಕ್ಕೆ ಸಕಾರಬಂದರೆ **ನಿಮಿತ್ತಾಪಾಯೇ ನೈಮಿತ್ತಿಕಸ್ಯಾಪ್ಯಪಾಯಃ** ಎಂಬುದರಿಂದ ಣತ್ವ ನಿವೃತ್ತವಾಗಿ ಸನ ಎಂದಿರುವುದು. ಸನ ಧಾತುವು ಭ್ವಾದಿ (೧ನೇ ಗಣ) ಯಲ್ಲಿ ಪಠಿತವಾಗಿರುವುದು. ಸನ ಧಾತುವಿನ ಮುಂದೆ ವಿಧಿಲಿಙ್ ಬಂದರೆ ಅದಕ್ಕೆ ಪ್ರಥಮಪುರುಷ ಏಕವಚನ ತಿ ಪ್ರತ್ಯಯ ಬರುವುದು. **ಯಾಸುಟ್‌ಪರಸ್ಮೈಪದೇಷೂದಾತ್ತೋಙಿಚ್ಚ** (ಪಾ. ಸೂ. ೩-೪-೧೦೩) ಎಂಬುದರಿಂದ ತಿ ಪ್ರತ್ಯಯಕ್ಕೆ ಯಾಸುಟ್ ಆಗಮ. **ಸುಟ್‌ತಿಥೋಃ** (ಪಾ. ಸೂ. ೩-೪-೧೦೭) ಎಂಬುದರಿಂದ ತಕಾರಕ್ಕೆ ಸುಟ್ ಆಗಮ. **ಕರ್ತರಿಶಪ್**

(ಪಾ. ಸೂ. ೩-೧-೬೮) ಎಂಬುದರಿಂದ ಧಾತುವಿನ ಮುಂದೆ ಶಪ್ (ಅ) ವಿಕರಣಬರುವುದು. **ಲಿಙಸ್ಸಲೋಪೋಽನಂತ್ಯಸ್ಯ** (ಪಾ. ಸೂ. ೭-೨-೭೯) ಎಂಬುದರಿಂದ ಸಕಾರಗಳೆರಡಕ್ಕೂ ಲೋಪ. **ಅತೋಯೇಯಃ** (ಪಾ. ಸೂ. ೭-೨-೮೦) ಎಂಬುದರಿಂದ ಯಾ ಗೆ ಇಯ್ ಆದೇಶ. **ಆದ್ಗುಣಃ** (ಪಾ. ಸೂ. ೬-೧-೮೭) ಎಂಬುದರಿಂದ ಗುಣ, **ಲೋಪೋವ್ಯೋರ್ವಲಿ** (ಪಾ. ಸೂ. ೬-೧-೬೬) ಎಂಬುದರಿಂದ ಯ ಲೋಪ **ಇತಶ್ಚ** (ಪಾ. ಸೂ. ೩-೪-೧೦೦) ಎಂಬುದರಿಂದ ಇಕಾರ ಲೋಪ ಸನೇತ್ ಎಂದಾಗುವುದು. ಇದು ವೃಷಾದಿಗಣದಲ್ಲಿರುವುದರಿಂದ **ವೃಷಾದೀನಾಂಚ** (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತ.

**ಇಂದ್ರಃ**—ಇದಿಪರಮೈಶ್ವರ್ಯೇ ಎಂಬ ಧಾತುವಿಗೆ **ಇದಿತೋನುಮ್ ಧಾತೋಃ** (ಪಾ. ಸೂ ೭-೧-೫೮) ಎಂಬುದರಿಂದ ನುಮಾಗಮ **ಋಜ್ರೇಂದ್ರಾಗ್ರ**ಃ (ಉ ಸೂ. ೨-೧-೮೬) ಎಂಬುದರಿಂದ ರನ್ ಪ್ರತ್ಯಯ. ಪ್ರತ್ಯಯವು ನಿತ್ತಾದ್ದರಿಂದ ಪ್ರತ್ಯಯಾಂತವು ಆದ್ಯುದಾತ್ತವಾಗುವುದು.

**ಸಹಸ್ರಿಣಂ**—ಸಹಸ್ರಂ ಅಸ್ಯ ಅಸ್ತಿ (ಸಹಸ್ರವು ಇವನಲ್ಲಿ ಇವೆ) ಎಂದು ವಿವಕ್ಷಿಸಿದಾಗ **ಅತ ಇನಿಠನೌ** (ಪಾ. ಸೂ. ೫-೨-೧೧೫) ಎಂಬುದರಿಂದ ಇನಿ ಪ್ರತ್ಯಯ, ದ್ವಿತೀಯೈಕವಚನ ಅಮ್ ಪ್ರತ್ಯಯ. **ಅಟ್ಕುಪ್ವಾಙ್ ನುಮ್ವ್ಯವಾಯೇಽಪಿ** (ಪಾ. ಸೂ. ೮-೪-೨) ಎಂಬುದರಿಂದ ನಕಾರಕ್ಕೆ ಣಕಾರ. ಸಹಸ್ರಿಣಾ ಪ್ರತ್ಯಯಸ್ವರ ಬರುವುದು.

ಪಿಶ್ವಾನಿ-ಪಿಶ ಧಾತುವಿನ ಮುಂದೆ **ಅಶೂಪ್ರುಷಿಲಟಿಕಣಿಖಟಿ ವಿಶ್ವಭ್ಯಃ ಕ್ವನ್** (ಉ ಸೂ. ೧-೧೪೯) ಎಂಬುದರಿಂದ ಕ್ವನ್ ಪ್ರತ್ಯಯ-ಪ್ರತ್ಯಯವು ನಿತ್ತಾದ್ದರಿಂದ ಪ್ರತ್ಯಯಾಂತದ ಆದಿಯು ಉದಾತ್ತ.

**ಪೌಂಸ್ಯಾ**—ಪುಂಸಃ ಕರ್ಮಾಣಿ ಎಂದು ವಿವಕ್ಷಿಸಿದಾಗ **ಗುಣವಚನಬ್ರಾಹ್ಮಣಾದಿಭ್ಯಃ ಕರ್ಮಣಿಚ** (ಪಾ. ಸೂ. ೫-೧-೧೨೪) ಗುಣೋಪಸರ್ಜನದ್ರವ್ಯವಾಚಕವಾದ ಶಬ್ದ ಬ್ರಾಹ್ಮಣಾದಿಗಣಪಠಿತಶಬ್ದ ಇವುಗಳ ಮುಂದೆ ಭಾವಾರ್ಥದಲ್ಲಿಯೂ ಕರ್ಮಾರ್ಥದಲ್ಲಿಯೂ ಷ್ಯಞ್ ಬರುವುದು ಎಂಬುದರಿಂದ ಬ್ರಾಹ್ಮಣಾದಿಯು ಆಕೃತಿಗಣವಾದ್ದರಿಂದ ಆ ಗಣದಲ್ಲಿ ಸೇರುವ ಪುಂಸ್ ಶಬ್ದದ ಮುಂದೆ ಷ್ಯಞ್ ಪ್ರತ್ಯಯ ಬರುವುದು. ಪ್ರತ್ಯಯವು ಞಿತ್ತಾದ್ದರಿಂದ ಪ್ರತ್ಯಯಾಂತ ಶಬ್ದದ ಆದಿಯು ಉದಾತ್ತ. ಪುಂಸ್+ಯ ಎಂದಿರುವಾಗ **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಞಿತ್ತು ಅಥವಾ ಣಿತ್ತು ಆದ ತದ್ಧಿತಪ್ರತ್ಯಯವು ಪರದಲ್ಲಿರುವಾಗ ಹಿಂದಿನ ಶಬ್ದದ ಅಚ್ ಸಮುದಾಯದ ಮೊದಲನೆಯ ಅಚ್ಚಿಗೆ ವೃದ್ಧಿ ಬಂದರೆ ಪೌಂಸ್+ಯ ಇದರ ಮುಂದೆ ಬರುವ ಪ್ರಥಮಾಬಹುವಚನಕ್ಕೆ **ಸುಪಾಂಸುಲುಕ್** (ಪಾ. ಸೂ ೭-೧-೩೯) ಎಂಬುದರಿಂದ ಡಾ ಆದೇಶ ಬಂದರೆ ಪೌಂಸ್ಯಾ ಎಂದು ಆಗುವುದು. ಆದರೆ **ಸ್ತ್ರೀಪುಂಸಾಭ್ಯಾಂ ನಞ್ಸ್ನಞೌ ಭವನಾತ್** (ಪಾ. ಸೂ. ೪-೧-೮೭) ಇಲ್ಲಿ ಭವನಾತ್ ಎಂಬುದಕ್ಕೆ ಭವನಪದಘಟಿತಸೂತ್ರಾತ್ (ಭವನ ಎಂಬ ಪದವನ್ನು ಹೊಂದಿರುವ ಸೂತ್ರ) ಎಂದರ್ಥ. ಆ ಸೂತ್ರವು **ಧಾನ್ಯಾನಾಂಭವನೇಕ್ಷೇತ್ರೇಖಞ್** (ಪಾ ಸೂ. ೫-೨ ೧) ಎಂಬುದು **ಸ್ತ್ರೀಪುಂಸಾಭ್ಯಾಂ** ಎಂಬ ಸೂತ್ರದಿಂದ **ಧಾನ್ಯಾನಾಂಭವನೇ** ಸೂತ್ರದವರೆಗೆ ಇರುವ ಅರ್ಥಗಳಲ್ಲಿ ಸ್ತ್ರೀ ಪುಂಸ್ ಶಬ್ದಗಳ ಮುಂದೆ ಕ್ರಮವಾಗಿ ನಞ್ಸ್ನಞ್ ಪ್ರತ್ಯಯವು ಬರುವುದು ಎಂದು ಸೂತ್ರಾರ್ಥವಾಗುವುದು. ಪುಂಸಃ ಅಪತ್ಯಂ ಎಂದು ವಿವಕ್ಷಿಸಿದಾಗ **ತಸ್ಯಾಪತ್ಯಂ** (ಪಾ. ಸೂ. ೪-೧-೯) ಎಂಬುದರಿಂದ ಅಣ್ ಪ್ರತ್ಯಯ ಬರುವುದಿಲ್ಲ. **ಸ್ತ್ರೀಂಪುಂಸಾಭ್ಯಾಂ** ಎಂಬುದರಿಂದ ಸ್ನಞ್ ಪ್ರತ್ಯಯವೇ ಬರುವುದು 'ಪೌಂಸ್ನಃ' ಎಂದಾಗುವುದು. ಹಾಗೆಯೇ ಪುಂಸಃ ಆಗತಃ ಎಂದು ವಿವಕ್ಷಿಸಿದರೂ **ತತ ಆಗತಃ** (ಪಾ ಸೂ. ೪-೩-೭೪) ಎಂಬುದರಿಂದ ಅಣ್ ಬರುವುದಿಲ್ಲ **ಸ್ತ್ರೀಪುಂಸಾಭ್ಯಾಂ**

ಎಂಬುದರಿಂದ ಸ್ನಞ್ ಪ್ರತ್ಯಯವೇ ಬರುವುದು 'ಪೌಂಸ್ನಃ' ಎಂದೇ ಆಗುವುದು. ಇದೇ ರೀತಿಯಲ್ಲಿ ಪುಂಸಃ ಭಾವಃ ಕರ್ಮವಾ ಎಂದು ವಿವಕ್ಷಿಸಿದಾಗಲೂ **ಗುಣವಚನಬ್ರಾಹ್ಮಣಾದಿಭ್ಯಃ ಕರ್ಮಣಿಚ** (ಪಾ. ಸೂ. ೫-೧-೧೨೪) ಎಂಬುದರಿಂದ ವಿಹಿತವಾದ ಷ್ಯಞ್ ಪ್ರತ್ಯಯವನ್ನು ಬಾಧಿಸಿ ಪುಂಸ್ ಶಬ್ದದ ಮುಂದೆ ಸ್ನಞ್ ಪ್ರತ್ಯಯವೇ ಬರಬೇಕು. ಹಾಗಾದರೆ 'ಪೌಂಸ್ನಾನಿ' ಎಂದಾಗುವುದು. ಪ್ರಥಮಾಬಹುವಚನಕ್ಕೆ ಡಾ ಆದೇಶ ಬಂದರೂ 'ಪೌಂಸ್ನಾ' ಎಂದಾಗಬೇಕು. ಪೌಂಸ್ಯಾ ಎಂಬ ರೂಪವು ಹೇಗೆ ಸಿದ್ಧಿಸುವುದು ಎಂದು ಶಂಕೆ ಬರುವುದು. ಇದಕ್ಕೆ ಹೀಗೆ ಸಮಾಧಾನ ಹೇಳಬಹುದು. **ಆಚತ್ವಾತ್** (ಪಾ. ಸೂ. ೫-೧-೧೨೦) ಇಲ್ಲಿ **ತಸ್ಯಭಾವಸ್ತ್ವತಲೌ** (ಪಾ. ಸೂ. ೫-೧-೧೧೯) ಎಂಬುದರಿಂದ ತ್ವತಲೌ ಎಂದು ಅನುವೃತ್ತವಾಗುವುದು. ಆಙ್ ಗೆ ಮರ್ಯಾದೆ ಅವಧಿ ಎಂದರ್ಥ. ತ್ವ ಪದಕ್ಕೆ ತ್ವ ಪದವನ್ನು ಹೊಂದಿರುವ ಸೂತ್ರ **ಬ್ರಹ್ಮಣಸ್ತ್ವಃ** (ಪಾ. ಸೂ. ೫-೧-೧೩೬) ಎಂದು ಅರ್ಥವಾಗುವುದು. ಏವಂಚ **ಆಚತ್ವಾತ್** ಎಂಬುದಕ್ಕೆ ಬ್ರಹ್ಮಣಸ್ತ್ವಃ ಎಂಬ ಸೂತ್ರದವರೆಗೆ ತ್ವ ತಲ್‌ಗಳು ಅಧಿಕೃತವಾಗುವುವು ಎಂದು ಅರ್ಥವಾಗುವುದು. 'ತಸ್ಯಭಾವಸ್ತ್ವತಲೌ' ಎಂಬಲ್ಲಿರುವ ತ್ವತಲ್ ಗಳಿಗೆ ಉತ್ತರಸೂತ್ರದಲ್ಲಿ ಅನುವೃತ್ತಿಯಿಂದಲೇ ವಿವಕ್ಷಿತವಾದ ಅರ್ಥವು ಸಿದ್ಧವಾಗುವಾಗ ಈ ಅಧಿಕಾರವು ವ್ಯರ್ಥವೆಂದು ತೋರಬಹುದು. ಈ ಅಧಿಕಾರವಿಲ್ಲದಿದ್ದರೆ **ಪೃಥ್ವಾದಿಭ್ಯಃ ಇಮನಿಜ್ವಾ** (ಪಾ. ಸೂ. ೫-೧-೧೨೨) ಇತ್ಯಾದಿಯಾದ ಉತ್ತರಸೂತ್ರಗಳಲ್ಲಿ ಪ್ರತ್ಯಕ್ಷನಿರ್ದಿಷ್ಟವಾದ ಇಮನಿಜ್ ಮೊದಲಾದುವುಗಳಿಂದ ವಿಧೇಯಾಕಾಂಕ್ಷೆಯು ಶಾಂತವಾಗುವುದರಿಂದ ತ್ವತಲ್ ಗಳಿಗೆ ಅನುವೃತ್ತಿ ಬರುವುದಿಲ್ಲ. ಶಾಂತಾಕಾಂಕ್ಷವಾದ ಸ್ಥಳದಲ್ಲಿಯೂ ವಿಧೇಯಾಂತರಕ್ಕೆ ಅನುವೃತ್ತಿಯನ್ನು ಒಪ್ಪಿದರೆ **ಅತಇಞ್** (ಪಾ. ಸೂ. ೪-೧-೯೫) ಇತ್ಯಾದಿಕಡೆಗಳಲ್ಲಿಯೂ **ಪ್ರಾಗ್ದೀವ್ಯತೋಽಣ್** (ಪಾ. ಸೂ. ೪-೧ ೮೩) ಎಂದು ಅಧಿಕೃತವಾದ ಅಣ್ ಪ್ರತ್ಯಯಕ್ಕೆ ಪ್ರವೃತ್ತಿ ಬರಬೇಕಾಗುವುದು. ಅಧಿಕಾರಬೋಧಕವಾದ ಆಚತ್ವಾತ್ ಎಂಬ ಸೂತ್ರವಿದ್ದರೆ ಇಲ್ಲಿ ಅವಧಿನಿರ್ದೇಶಸಾಮರ್ಥ್ಯದಿಂದ ಅಪವಾದವಾದ ಇಮನಿಜಾದಿಗಳು ಇರುವ ಸ್ಥಳಗಳಲ್ಲಿ ತ್ವತಲ್‌ಗಳಿಗೆ ಸಮಾವೇಶ ಬರುವುದು ಇದು ಒಂದು ಪ್ರಯೋಜನ ಭಾವಾರ್ಥದಲ್ಲಿ **ತಸ್ಯಭಾವಸ್ತ್ವತಲೌ** ಎಂಬುದರಿಂದ ತ್ವತಲ್‌ಗಳು ವಿಹಿತವಾಗಿರುವುವು. ಕರ್ಮಾರ್ಥದಲ್ಲಿ ವಿಹಿತವಾಗಿಲ್ಲ ಆದ್ದರಿಂದ ಗುಣವಚನಾದಿಗಳ ಮುಂದೆ ಕರ್ಮಾರ್ಥದಲ್ಲಿ ತ್ವತಲ್‌ಗಳು ಬರಲಾರವು. ಈ ಆಚತ್ವಾತ್ ಎಂಬ ಸೂತ್ರವಿದ್ದರೆ ಗುಣವಚನ (ಪಾ. ಸೂ. ೫-೧-೧೨೪) ಎಂಬಲ್ಲಿ ತ್ವತಲೌ ಎಂಬುದಕ್ಕೆ ಅನುವೃತ್ತಿ ಬರುವುದರಿಂದ **ಗುಣವಚನಾದಿಭ್ಯಃ ಭಾವೇ ಕರ್ಮಣಿಚ ಷ್ಯಞ್ ಭವತಿ ತ್ವತಲೌ ಚ ಭವತಃ** ಎಂದು ಅರ್ಥವು ಏರ್ಪಡುವುದರಿಂದ ಗುಣವಚನಾದಿಗಳ ಮುಂದೆ ಕರ್ಮಾರ್ಥದಲ್ಲಿ ತ್ವತಲ್ ಪ್ರತ್ಯಯಗಳು ಬರುವುವು. ಇದು ಮತ್ತೊಂದು ಪ್ರಯೋಜನ. ಆದರೆ ಈ ಎರಡು ಪ್ರಯೋಜನಗಳೂ ಆತ್ವಾತ್ ಎಂದು ಸೂತ್ರಮಾಡಿದರೂ ಸಿದ್ಧಿಸುವುವು. ಹೀಗಿರುವಲ್ಲಿ ಚ ಎಂಬುದು ಅಧಿಕವಾಗಿರುವುದು. ಈ ಚ ಶಬ್ದವು ಷ್ಯಞಾದಿ ಪ್ರತ್ಯಯಗಳಿಗೂ ನಞ್‌ಸ್ನಞ್‌ಗಳಿಗೂ ಬಾಧ್ಯಬಾಧಕಭಾವವಿಲ್ಲ ನಞ್‌ಸ್ನಞ್‌ಗಳಿಗೆ ಷ್ಯಞ್ಞಾದಿ ಪ್ರತ್ಯಯಗಳೊಂದಿಗೆ ಸಮಾಶವೇಶ ಆಗುವುದು ಎಂದು ಬೋಧಿಸುವುದು. ಆದ್ದರಿಂದ ಷ್ಯಞ್ ಪ್ರತ್ಯಯವು ಪುಂಸ್ ಶಬ್ದದ ಮುಂದೆ ಬರಬಹುದು. ಪೌಂಸ್ಯಾ ಎಂಬ ರೂಪವು ಸಾಧುವಾಗಿಯೇ ಇರುವುದು ॥ ೯ ॥

ಸಂಹಿತಾಪಾಠಃ

ಮಾ ನೋ॑ ಮರ್ತಾ॑ ಅ॒ಭಿ ದ್ರು॑ಹನ್ತ॒ನೂನಾ॑ಮಿಂದ್ರ ಗಿರ್ವಣಃ ।
ಈಶಾ॑ನೋ ಯವಯಾ ವ॒ಧಂ ॥ ೧೦ ॥

ಪದಪಾಠಃ

ಮಾ । ನಃ । ಮರ್ತಾಃ । ಅಭಿ । ದ್ರುಹನ್ । ತನೂನಾಂ । ಇಂದ್ರ । ಗಿರ್ವಣಃ ॥
ಈಶಾನಃ । ಯವಯ । ವಧಂ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಗಿರ್ವಣ ಇಂದ್ರ ಮರ್ತಾ ವಿರೋಧಿನೋ ಮನುಷ್ಯಾ ನೋಽಸ್ಮದೀಯಾನಾಂ ತನೂನಾಂ ಶರೀರಾಣಾಂ ಮಾಭಿ ದ್ರುಹನ್ । ಅಭಿತೋ ದ್ರೋಹಂ ಮಾ ಕುರ್ಯುಃ । ಈಶಾನಃ ಸಮರ್ಥಸ್ತ್ವಂ ವಧಂ ವೈರಿಭಿಃ ಸಂಪಾದ್ಯಮಾನಂ ಯವಯ । ಅಸ್ಮತ್ತಃ ಪೃಥಕ್ಕುರು । ಮನುಷ್ಯಾ ಇತ್ಯಾದಿಷು ಪಂಚ-ವಿಂಶತಿಸಂಖ್ಯಾಕೇಷು ಮನುಷ್ಯನಾಮಸು ಮರ್ತಾ ವ್ರಾತಾ ಇತಿ ಪಠಿತಂ ॥ ಮರ್ತಾಃ । ಅಸಿಹಸಿಮೃಗ್ರಿ-ಣ್ವಾಮಿದಮಿಲೂಪೂಧೂರ್ವಿಭ್ಯಸ್ತನ್ । ಉ. ೩-೮೬ । ಇತಿ ತನ್ । ನಿತ್ತ್ವಾದಾದ್ಯುದಾತ್ತಃ । ಅಭಿ । ಏವಮಾದೀನಾಮಂತಃ । ಫಿ. ೪-೧೪ । ದ್ರುಹನ್ । ದ್ರುಹ ಜಿಘಾಂಸಾಯಾಂ । ಲಿಙರ್ಥೇ ಲೇಟ್ । ಪಾ. ೩-೪-೭ । ಇತಿ । ಪ್ರಾರ್ಥನಾಯಾಂ । ಪಾ ೩-೩-೧೬೧ । ಲೇಟ್ । ತಸ್ಯ ಝಿ । ಪಾ. ೩-೪-೭೮ । ಝೋಽಂತಃ । ಪಾ. ೭ ೧ ೩ । ಇತಶ್ಚ ಲೋಪಃ ಪರಸ್ಮೈಪದೇಷು । ಪಾ. ೩-೪-೯೭ । ಇತೀಕಾರ ಲೋಪಃ । ಶಪೋ ಲುಕ್ । ಸಾರ್ವಧಾತುಕಮಪಿತ್ । ಪಾ. ೧-೨-೪ । ಇತಿ ಝಿಶೋ ಙಿತ್ತ್ವಲ್ಲಘೂ-ಪಧಗುಣಾಭಾವಃ । ಪಾ. ೧-೧-೫ । ತನೂನಾಂ । ಅಸಾಮರ್ಥ್ಯಾನ್ನ ಪರಾಂಗವದ್ಭಾವಃ । ಇಂದ್ರ ಗಿರ್ವಣಃ । ಗತಂ । ಈಶಾನಃ । ಧಾತೋಽನುದಾತ್ತೇತ್ತ್ವಾಚ್ಛಪೋ ಲುಕಿ ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರ ಏವ ಶಿಷ್ಯತೇ । ಯವಯ । ಯೌತೇರ್ಣಿಚಿ ಸಂಜ್ಞಾಪೂರ್ವಕೋ ವಿಧಿರನಿತ್ಯ ಇತಿ ವೃದ್ಧಿರ್ನ ಕ್ರಿಯತೇ । ಅಥವಾ ಯೌತೀತಿ ಯವಃ । ಪಚಾದ್ಯಚ್ । ಪಾ. ೩-೧-೧೩೪ । ಯವಂ ಕರೋತೀತ್ಯರ್ಥೇ ತತ್ಕರೋತಿ ತದಾಚಷ್ಟೇ । ಪಾ. ೩ ೧-೨೬, ೫-೬ । ಇತಿ ಣಿಚ್ । ಇಷ್ಠವದ್ಭಾವಾಟ್ಟಿಲೋಪಃ । ಪಾ. ೬-೪-೧೫೫-೧ । ತಸ್ಯ ಸ್ಥಾನಿವದ್ಭಾವಾದ್ವೃದ್ಧ್ಯಭಾವಃ । ಪಾ. ೧-೧-೫೬ । ವಧಂ । ಹನಶ್ಚ ವಧಃ । ಪಾ. ೩-೩-೭೬ । ಇತಿ ಭಾವೇಽಪ್ । ತತ್ಸನ್ನಿಯೋಗಶಿಷ್ಟಃ ಸ್ಥಾನಿವದ್ಭಾವೇನಾಂತೋದಾತ್ತೋ ವಧಾದೇಶಃ ಉದಾತ್ತನಿವೃತ್ತಿ-ಸ್ವರೇಣಾಪ ಉದಾತ್ತತ್ವಂ ॥ ೧೦ ॥

॥ ಪ್ರತಿಪದಾರ್ಥ ॥

ಗಿರ್ವಣಃ—ವಾಕ್ಯಗಳಿಂದ ಸ್ತುತಿಸಲ್ಪಡುವ । (ಹೇ) ಇಂದ್ರ—ಎಲೈ ಇಂದ್ರನೇ । ಮರ್ತಾಃ— (ನಮ್ಮ ವಿರೋಧಿಗಳಾದ) ಮನುಷ್ಯರು । ನಃ—ನಮ್ಮ । ತನೂನಾಂ—ಶರೀರಗಳಿಗೆ । ಮಾ ಅಭಿ ದ್ರುಹನ್—ಕೆಡಕನ್ನುಂಟುಮಾಡದಿರಲಿ । ಈಶಾನಃ—ಸರ್ವಸಮರ್ಥನಾದ (ಅಥವಾ ಸ್ವಾಮಿಯಾದ) ನೀನು । ವಧಂ—(ಶತ್ರುಗಳಿಂದ ನಮಗೆ ಉಂಟಾಗಬಹುದಾದ) ಬಾಧೆಯನ್ನು । ಯವಯ—ತಪ್ಪಿಸು ।

॥ ಭಾವಾರ್ಥ ॥

ನಮ್ಮಿಂದ ಸ್ತುತಿಸಲ್ಪಡುವ ಎಲೈ ಇಂದ್ರನೇ, ನಮಗೆ ವಿರೋಧಿಗಳಾದ ಮನುಷ್ಯರು ನಮ್ಮ ಶರೀರಗಳಿಗೆ ಎಂದರೆ ನಮಗೆ ಕೆಡಕನ್ನು (ಹಿಂಸೆಯನ್ನು) ಮಾಡದಿರಲಿ. ಸ್ವಾಮಿಯಾದ ನೀನು ಸರ್ವಸಮರ್ಥನಾಗಿರುವುದರಿಂದ ನಮ್ಮ ಶರೀರಕ್ಕೆ ಶತ್ರುಗಳಿಂದ ಉಂಟಾಗಬಹುದಾದ ಹಿಂಸೆಯನ್ನು ತಪ್ಪಿಸು

English Translation.

O Indra, adorable by praises, let not mortals do injury to our persons; you are powerful, keep away our destruction (by enemies)

॥ ವಿಶೇಷವಿಷಯಗಳು ॥

**ಮರ್ತಾಃ**—ಮನುಷ್ಯಾಃ ಎಂದು ಮೊದಲಾದ ಇಪ್ಪತ್ತೈದು ಮನುಷ್ಯವಾಚಕ ಶಬ್ದಗಳ ಮಧ್ಯದಲ್ಲಿ ಮರ್ತಾಃ ಎಂಬ ಶಬ್ದವು ಪಠಿತವಾಗಿದೆ (ನಿ.೭-೩) ಇಲ್ಲಿ ನಮ್ಮ ಶರೀರಕ್ಕೆ ಹಿಂಸೆಯನ್ನು ಮಾಡದಿರಲೆಂದು ಅಪೇಕ್ಷಿಸುವುದರಿಂದ ನಮಗೆ ಹಿಂಸೆಯನ್ನು ಮಾಡುವ ಮನುಷ್ಯನು ನಮಗೆ ವಿರೋಧಿಗಳಾದ ಮನುಷ್ಯರು ಎಂದು ತಿಳಿಯಬೇಕು. ವಿರೋಧಿಗಳಾದ ಎಂಬ ಅರ್ಥವನ್ನು ಸೂಚಿಸುವ ಶಬ್ದವು ಪ್ರಸಕ್ತವಾದ ಋಕ್ಕಿನಲ್ಲಿಲ್ಲದಿದ್ದರೂ ದ್ರುಹಃ ಎಂಬ ಶಬ್ದಪ್ರಯೋಗವಿರುವುದರಿಂದ ಮರ್ತಾಃ ಎಂಬ ಶಬ್ದಕ್ಕೆ ವಿರೋಧಿಗಳಾದ ಮನುಷ್ಯರು ಎಂದು ಭಾಷ್ಯಕಾರರು ಅರ್ಥಮಾಡಿರುವುದು ಯುಕ್ತವಾಗಿರುವುದು.

**ಯುವಯು**—ಛಂದಸ್ಸಿನ ಅನುಕೂಲಕ್ಕಾಗಿ ಸಂಹಿತಾಪಾಠದಲ್ಲಿ ಯುವಯಾ ಎಂದು ಅಂತ್ಯಾಕ್ಷರವು ದೀರ್ಘವಾಗಿರುವುದು

**ವಧಂ**—ಮರಣ, ನಾಶ, ಕೆಡಕು ಎಂದರ್ಥವು. ವೇದಾರ್ಥಯತ್ನಕಾರರು ವಧನೆಂದರೆ ಇಂದ್ರನ ವಜ್ರಾಯುಧವೆಂದು ಅರ್ಥಮಾಡಿರುವರು ಭಾಷ್ಯಕಾರರೂ ಸಹ—

**ಅರ್ಚನ್ನತ್ರ ಮರುತಃ ಸಸ್ಮಿನ್ನಾಜೌ ವಿಶ್ವೇ ದೇವಾಸೋ ಅಮದನ್ನನು ತ್ವಾ ।**
**ವೃತ್ರಸ್ಯ ಯದ್ಭೃಷ್ಟಿಮತಾ ವಧೇನ ನಿ ತ್ವಮಿಂದ್ರ ಪ್ರತ್ಯಾನಂ ಜಘಂಥ ॥**

(ಋ- ಸಂ. ೧-೫೨-೧೫)

ಎಂಬ ಈ ಋಕ್ಕಿನಲ್ಲಿ ವಧೇನ ಎಂಬ ಶಬ್ದಕ್ಕೆ ಹನನಸಾಧನೇನ ವಜ್ರೇಣ—ಸಂಹಾರಮಾಡಲು ಸಾಧನಭೂತವಾದ ವಜ್ರಾಯುಧದಿಂದ ಎಂದು ಅರ್ಥಮಾಡಿರುವರು. ಈ ಸಂದರ್ಭದಲ್ಲಿ—ನಿನ್ನ ವಜ್ರಾಯುಧವನ್ನು ನಮ್ಮ ಮೇಲೆ ಉಪಯೋಗಿಸದಿರು ಎಂದರ್ಥಮಾಡಬೇಕಾಗುವುದು.

॥ ವ್ಯಾಕರಣಪ್ರಕ್ರಿಯಾ ॥

**ಮರ್ತಾಃ** (ಅಸಿ) ಹಸಿ ಮೃಗ್ರಿಣ್ವಾಮಿ ದಮಿ ಲೂಪೂಧುರ್ವಿಭ್ಯಸ್ತನ್ (ಉ. ಸೂ. ೩-೩೬೬) (ಅಸಗತಿದೀಪ್ತ್ಯಾದಾನೇ) ಹಸೇ ಹಸನೇ, ಮೃಙ್ ಪ್ರಾಣತ್ಯಾಗೇ, ಗೄ ನಿಗರಣೇ, ಇಣ್ ಗತೌ, ವಾಗತಿಗಂಧನಯೋಃ ಅಮಗತ್ಯಾದಿಷು—ದಮು ಉಪಶಮೇ ಲೂಞ್ ಛೇದನೇ ಪೂಞ್ ಪವನೇ, ಧುರ್ವೀ ಹಿಂಸಾಯಾಂ ಈ ಧಾತು

ಗಳ ಮುಂದೆ ತನ್ ಪ್ರತ್ಯಯ ಬರುವುದು ಎಂಬುದರಿಂದ ವೃಜ್ ಧಾತುವಿನ ಮುಂದೆ ತನ್ ಪ್ರತ್ಯಯ ಬಂದು **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಗುಣಬಂದರೆ ವರ್ತ ಎಂದಾಗುವುದು, ಪ್ರತ್ಯಯವು ನಿತ್ತಾದ್ದರಿಂದ ಆದ್ಯುದಾತ್ತ ಬರುವುದು.

**ಅಭಿ—ನಿಪಾದಿರ್ನಾಮಂತಃ** (ಫಿ. ಸೂ. ೮೨) ಎಂಬುದರಿಂದ ಅಂತೋದಾತ್ತ.

**ದ್ರುಹನ್—ದ್ರುಹ ಜಿಘಾಂಸಾಯಾಂ** ಎಂಬ ಧಾತುವಿನ ಮುಂದೆ **ಲಿಙರ್ಥೇ ಲೇಟ್** (ಪಾ. ಸೂ. ೩-೪-೭) ವಿಧ್ಯಾದ್ಯರ್ಥಗಳಲ್ಲಿಯೂ ಹೇತುಹೇತುಮದ್ಭಾವಾದ್ಯರ್ಥಗಳಲ್ಲಿಯೂ ಸಹ ಛಂದಸ್ಸಿನಲ್ಲಿ ಧಾತುವಿನ ಮುಂದೆ ಲೇಟ್ ಬರುವುದು ಎಂಬುದರಿಂದ ಪ್ರಾರ್ಥನೆ ಎಂಬ ಅರ್ಥದಲ್ಲಿ ಲೇಟ್ ಬರುವುದು ಪ್ರಥಮಪುರುಷ ಬಹುವಚನದಲ್ಲಿ ಅದಕ್ಕೆ ಝಿ ಬರುವುದು. ಝಕಾರಕ್ಕೆ **ಝೋಽನ್ತಃ** (ಪಾ. ಸೂ. ೭-೧-೩) ಎಂಬುದರಿಂದ ಅನ್ತಾದೇಶ **ಇತಶ್ಚ ಲೋಪಃ ಪರಸ್ಮೈಪದೇಷು** (ಪಾ. ಸೂ. ೩-೪-೯೭) ಪರಸ್ಮೈಪದಪ್ರತ್ಯಯವು ಪರದಲ್ಲಿರುವಾಗ ಲೇಟ್ಟಿನ ಸ್ಥಾನದಲ್ಲಿ ಬಂದ ತಿಙ್ಙಿನ ಇಕಾರಕ್ಕೆ ಲೋಪವು ವಿಕಲ್ಪವಾಗಿ ಬರುವುದು ಎಂಬುದರಿಂದ ಇಕಾರಕ್ಕೆ ಲೋಪ ಶಪ್ ವಿಕರಣಕ್ಕೆ **ಬಹುಲಂ ಛಂದಸಿ** (ಪಾ. ಸೂ. ೨-೪-೭೩) ಎಂಬುದರಿಂದ ಲುಕ್ **ಸಾರ್ವಧಾತುಕ ಮಪಿತ್** (ಪಾ ಸೂ. ೧-೨-೪) ಅಪಿತ್ತಾದ ಸಾರ್ವಧಾತುಕವು ಙಿತ್ತಾಗುವುದು ಎಂಬುದರಿಂದ ಝಿ ಸ್ಥಾನದಲ್ಲಿರುವ ಅಂತ್ ಎಂಬುದು ಙಿತ್ತಾದ್ದರಿಂದ **ಕ್ಙಿತಿಚ** (ಪಾ. ಸೂ. ೧-೧-೫) ಎಂಬುದರಿಂದ ಗುಣನಿಷೇಧ ಬರುವಕಾರಣ **ಪುಗಂತಲಘೂಪಧಸ್ಯ ಚ** (ಪಾ. ಸೂ. ೭-೩-೮೬) ಎಂಬುದರಿಂದ ಗುಣವು ಬರುವುದಿಲ್ಲ.

**ತನೂನಾಂ**—ಇಂದ್ರ ಶಬ್ದವು ಆಮಂತ್ರಿತ, ಆದರೂ **ಸುಬಾಮಂತ್ರಿತೇ ಪರಾಂಗವತ್ಸ್ವರೇ** (ಪಾ. ಸೂ. ೨-೧-೨) ಸ್ವರವನ್ನು ಮಾಡುವಾಗ ಆಮಂತ್ರಿತದ ಹಿಂದಿರುವ ಸುಬಂತವು ಪರದಲ್ಲಿರುವ ಪದಕ್ಕೆ ಅಂಗವಾದಂತೆ ಆಗುವುದು ಎಂಬುದರಿಂದ ವಿಹಿತವಾದ ಪರಾಂಗವದ್ಭಾವವು ಇಲ್ಲಿ ಬರುವುದಿಲ್ಲ ಏಕೆಂದರೆ ಇದು ಪದವಿಧಿಯಾದ್ದರಿಂದ **ಸಮರ್ಥಃಪದವಿಧಿಃ** (ಪಾ. ಸೂ. ೨-೧-೧) ಎಂಬ ಪರಿಭಾಷೆಯಿಂದ ಸಾಮರ್ಥ್ಯವಿರುವಾಗಲೇ ಪ್ರವೃತ್ತವಾಗುವುದು. ಇಲ್ಲಿ ತನೂನಾಂ ಎಂಬುದಕ್ಕೆ ಇಂದ್ರ ಎಂಬ ಪದದೊಂದಿಗೆ ಅನ್ವಯವಿಲ್ಲದಕಾರಣ ಸಾಮರ್ಥ್ಯವಿಲ್ಲ. ಆದ್ದರಿಂದ ಪರಾಂಗವದ್ಭಾವ ಬರುವುದಿಲ್ಲ.

**ಇಂದ್ರ** ಇದು (ಋ. ಸಂ. ೧-೩-೪) ರಲ್ಲಿಯೂ **ಗಿರ್ವಣಃ**—ಇದು ಇದೇ ಸೂಕ್ತದ ಏಳನೇ ಮಂತ್ರದಲ್ಲಿಯೂ ವಿವೃತವಾಗಿರುವುದು.

**ಈಶಾನಃ**—ಈಶ ಐಶ್ವರ್ಯೇ ಧಾತುವಿನ ಮುಂದೆ ಲಟ್. ಅದಕ್ಕೆ ಶಾನಚ್ ಬರುವುದು. ಶಪ್ ವಿಕರಣಕ್ಕೆ **ಬಹುಲಂ ಛಂದಸಿ** (ಪಾ. ಸೂ. ೨-೪-೭೩) ಎಂಬುದರಿಂದ ಲುಕ್. ಈಶಧಾತುವು ಅನುದಾತ್ತೇತ್ತಾದ್ದರಿಂದ **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಶಾನಚ್ಚು ಅನುದಾತ್ತ. ಈಕಾರವು ಧಾತುಸ್ವರದಿಂದ ಉದಾತ್ತವಾಗಿಯೇ ನಿಲ್ಲುವುದು.

**ಯವಯಾ**—ಯು ಮಿಶ್ರಣಾಮಿಶ್ರಣಯೋಃ ಎಂಬ ಧಾತುವಿನ ಮುಂದೆ ಣಿಚ್ ಪ್ರತ್ಯಯವನ್ನಿಟ್ಟರೆ **ಅಚೋಞ್ಣಿತಿ** (ಪಾ. ಸೂ. ೭-೨-೧೧೫) ಅಜಂತವಾದ ಅಂಗಕ್ಕೆ ಞಿತ್ತು ಅಥವಾ ಣಿತ್ತು ಆದ ಪ್ರತ್ಯಯವು ಪರದಲ್ಲಿರುವಾಗ ವೃದ್ಧಿ ಬರುವುದು ಎಂಬುದರಿಂದ ವಿಹಿತವಾದ ವೃದ್ಧಿಯು **ವೃದ್ಧಿರಾದೈಚ್** (ಪಾ.ಸೂ. ೧-೧-೧) ಎಂದು ವಿಹಿತವಾದ ವೃದ್ಧಿ ಎಂಬ ಸಂಜ್ಞೆಯನ್ನು ಮುನ್ನಿಟ್ಟು ಬರುವುದರಿಂದ ಸಂಜ್ಞಾಪೂರ್ವಕ. ಆದ್ದರಿಂದ **ಸಂಜ್ಞಾಪೂರ್ವಕೋ ವಿಧಿರನಿತ್ಯಃ** ಸಂಜ್ಞೆಯನ್ನು ಮುನ್ನಿಟ್ಟು ಬರುವ ಶಾಸ್ತ್ರವು ಅನಿತ್ಯವಾದುದು ಎಂಬುದರಿಂದ

ಅಸಿತ್ಯವಾದ ಕಾರಣ ಇಲ್ಲಿ ಬರುವುದಿಲ್ಲ. ಗುಣ ಅವಾದೇಶಗಳು ಬಂದರೆ ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಯುವಯ ಎಂದಾಗುವುದು. ಅಥವಾ ಯೌತೀತಿ ಯುವಃ ಎಂದು ವ್ಯುತ್ಪತ್ತಿಮಾಡಿದರೆ **ನಂದಿಗ್ರಹಿಪಚಾದಿಭ್ಯೋಲ್ಯುಣಿನ್ಯಚಃ** (ಪಾ. ಸೂ. ೩-೧-೧೩೪) ಎಂಬುದರಿಂದ ಯು ಧಾತುವಿನ ಮುಂದೆ ಪಚಾದಿಲಕ್ಷಣವಾದ ಅಚ್ಪ್ರತ್ಯಯ, ಯುವ ಎಂದಾಗುವುದು. ಯುವಂಕರೋತಿ ಎಂದು ವಿವಕ್ಷಿಸಿದಾಗ **ತತ್ಕರೋತಿತದಾಚಷ್ಟೇ** [ಪಾ. ಸೂ. ೩-೧-೨೬, ೫-೬] ಎಂಬುದರಿಂದ ಣಿಚ್ ಪ್ರತ್ಯಯ. ಅದು ಪರದಲ್ಲಿರುವಾಗ **ಣಾವಿಷ್ಠವತ್ಪ್ರಾತಿಪದಿಕಸ್ಯ** [ಪಾ. ಸೂ. ೬-೪-೧೫೫-೧] ಎಂಬುದರಿಂದ ಇಷ್ಠವದ್ಭಾವ ಬಂದು **ಟೇಃ** [ಪಾ. ಸೂ. ೬-೪-೧೫೫] ಎಂಬುದರಿಂದ ಟಿಗೆ ಅಂದರೆ ವಕಾರದ ಮುಂದಿರುವ ಅಕಾರಕ್ಕೆ ಲೋಪ. ಲುಪ್ತವಾದ ಅಕಾರಕ್ಕೆ **ಅಚಃಪರಸ್ಮಿನ್ಪೂರ್ವವಿಧೌ** [ಪಾ ಸೂ ೧-೧-೫೭] ಸ್ಥಾನಿವದ್ಭಾವ ಬರುವುದರಿಂದ ಣಿಚ್ಪ್ರತ್ಯಯನಿಮಿತ್ತಕವಾದ ಉಪಧಾವೃದ್ಧಿಯು ಬರುವುದಿಲ್ಲ. ಆದ್ದರಿಂದ ಯುವಯ ಎಂದಾಗುವುದು. ಸಂಹಿತಾಕಾಲದಲ್ಲಿ ಕೊನೆಯವರ್ಣಕ್ಕೆ ದೀರ್ಘ.

**ವಧಂ— ಹನಶ್ಚವಧಃ** [ಪಾ. ಸೂ. ೩-೩-೭೬] ಉಪಸರ್ಗದ ಮುಂದೆ ಇಲ್ಲದೇ ಇರುವ ಹನ ಧಾತುವಿನ ಮುಂದೆ ಅಪ್ ಪ್ರತ್ಯಯ ಬರುವುದು. ಹನ ಧಾತುವಿಗೆ ಅಂತೋದಾತ್ತವಾದ ವಧ ಎಂಬ ಆದೇಶವೂ ಬರುವುದು ಎಂಬುದರಿಂದ ಹನ್ ಧಾತುವಿನ ಮುಂದೆ ಅಪ್ ಪ್ರತ್ಯಯವೂ ಹನ್ ಗೆ ವಧ ಆದೇಶವೂ ಬಂದರೆ ವಧ। ಅ ಎಂದಿರುವುದು. ಪ್ರತ್ಯಯವು ಪಿತ್ತಾದ್ದರಿಂದ **ಅನುದಾತ್ತೌಸುಪ್ಪಿತೌ** [ಪಾ. ಸೂ. ೩-೧-೪] ಎಂಬುದರಿಂದ ಅನುದಾತ್ತ. ಸೂತ್ರದಲ್ಲಿ ಅಂತೋದಾತ್ತವಾಗಿ ಪಾಠಮಾಡಿರುವುದರಿಂದ ವಧ ಎಂಬುದು ಅಂತೋದಾತ್ತ ಎಂದು ಕೆಲವರು ಅಭಿಪ್ರಾಯಪಡುವರು. ಹನ ಧಾತುವು **ಧಾತೋಃ** [ಪಾ. ಸೂ. ೬-೧-೧೬೨] ಎಂಬುದರಿಂದ ಅಂತೋದಾತ್ತ. ಆದ್ದರಿಂದ ಅದರ ಸ್ಥಾನದಲ್ಲಿ ಬರುವ ವಧ ಆದೇಶವೂ ಸಹ **ಸ್ಥಾನಿವದಾದೇಶಃ** ಎಂಬುದರಿಂದ ಅಂತೋದಾತ್ತ ಎಂದು ಮಾಧವಾಚಾರ್ಯರ ಮತ. ಅಂತು ವಧ ಎಂಬಲ್ಲಿ ಕೊನೆಯಲ್ಲಿರುವ ಅಕಾರವು ಉದಾತ್ತ ಎಂಬುದರಲ್ಲಿ ವಿಪ್ರತಿಪತ್ತಿ ಇಲ್ಲ ಈ ಅಕಾರಕ್ಕೆ **ಅತೋ ಲೋಪಃ** [ಪಾ. ಸೂ. ೬-೪-೪೮] ಎಂಬುದರಿಂದ ಲೋಪ ಬರುವುದು. ನಂತರ **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ** [ಪಾ. ಸೂ ೬-೧-೧೬೧] ಯಾವ ಅನುದಾತ್ತವನ್ನು ನಿಮಿತ್ತಮಾಡಿಕೊಂಡು ಉದಾತ್ತಕ್ಕೆ ಲೋಪ ಬರುವುದೋ ಆ ಅನುದಾತ್ತಕ್ಕೆ ಉದಾತ್ತ ಬರುವುದು ಎಂಬುದರಿಂದ ಪ್ರತ್ಯಯವಾದ ಅಕಾರವು ಉದಾತ್ತ. ॥ ೧೦ ॥

**ಇಲ್ಲಿಗೆ ಪ್ರಥಮಮಂಡಲದಲ್ಲಿ ಐದನೆಯ ಸೂಕ್ತವು ಸಮಾಪ್ತವು.**

ಒಂದನೆಯ ಅಧ್ಯಾಯದಲ್ಲಿ ಹತ್ತನೆಯ ವರ್ಗವು ಸಮಾಪ್ತವು.



# ಆರನೆಯ ಸೂಕ್ತವು

|| ಸಾಯಣಭಾಷ್ಯಂ ||

**ಸುರೂಪೇತ್ಯಾದಿಷು ಷಟ್ಸೂಕ್ತೇಷು ತೃತೀಯಸ್ಯ ಯುಂಜಂತೀತಿ ಸೂಕ್ತಸ್ಯ ಮಂತ್ರಸಂಖ್ಯಾ ಋಷಿಚ್ಛಂದೋದೈವತಾನಿ ವಿನಿಯೋಗಶ್ಚೇತ್ಯೇತೇ ಪೂರ್ವವದೇವಗಂತವ್ಯಾಃ । ದಶರ್ಚೇ ತಸ್ಮಿನ್ಸೂಕ್ತ ಆದ್ಯಾಸ್ತಿಸ್ರೋಽಂತಿಮಾ ಚೇತ್ಯೇತಾಶ್ಚತಸ್ರ ಐಂದ್ರ್ಯಃ । ಆದಹೇತ್ಯೇತಾಂ ಚತುರ್ಥೀಮಾರಭ್ಯ ಷಡೃಚೋ ಮಾರುತ್ಯಃ । ತಾಸು ಮಧ್ಯೇ ವೀಳು ಚಿದಿಂದ್ರೇಣೇತ್ಯೇತೇ ದ್ವೇ ಋಚೌ ಮಾರುತ್ಯೌ ಸತ್ಯಾವೈಂದ್ರ್ಯಾವಪಿ ಭವತಃ । ತದೇತತ್ಸರ್ವಮನುಕ್ರಮಣಿಕಾಯಾಮುಕ್ತಂ । ಸುರೂಪಕೃತ್ನುಂ ದಶೈಂದ್ರಮಾ ತು ಯುಂಜಂತ್ಯಾದಹೇತ್ಯೇತಾಃ ಷಣ್ಮಾರುತ್ಯೋ ವೀಳುಚಿದಿಂದ್ರೇಣೇತ್ಯೈಂದ್ರ್ಯೋ ಚೇತಿ ॥ ಏತಸ್ಮಿನ್ಸೂಕ್ತೇ ಯುಂಜಂತೀತ್ಯಸೌ ತೃಚಸ್ತೃತೀಯೇ ರಾತ್ರಿಪರ್ಯಾಯೇ ಬ್ರಾಹ್ಮಣಾಚ್ಛಂಸಿನೋಽನುರೂಪಃ । ತಥಾ ಚಾತಿರಾತ್ರೇ ಪರ್ಯಾಯಾಣಾಮಿತಿ ಖಂಡೇ ಯೋಗೇ ಯೋಗೇ ತವಸ್ತರಂ ಯುಂಜಂತಿ ಬ್ರಧ್ನಮರುಷಂ। ಆ. ೬-೪ । ಇತಿ ಸೂತ್ರಿತಂ ॥**

ಅನುವಾದವು-ಅಭಿಪ್ಲವಷಡಹವೆಂಬ ಯಾಗದ ಪ್ರಾತಸ್ಸವನಕಾಲದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಹೋತೃವರ್ಗದ ಋತ್ವಿಜನು ಸ್ತೋಮಾವಾಪಾರ್ಥವಾಗಿ **ಸುರೂಪಕೃತ್ನುಮೂತಯೇ** ಎಂದು ಮೊದಲಾದ ಆರು ಸೂಕ್ತಗಳನ್ನು ಪಠಿಸಬೇಕೆಂದು ಆ ಸೂಕ್ತಗಳ ವಿನಿಯೋಗವನ್ನು ನಾವು ಹಿಂದೆಯೇ (87 ನೇ ಪೇಜಿನಲ್ಲಿ) ಹೇಳಿರುವೆವು. **ಯುಂಜಂತಿ ಬ್ರಧ್ನಮರುಷಂ** ಎಂಬ ಪ್ರಸಕ್ತವಾದ ಈ ಸೂಕ್ತವು ಆ ಆರು ಸೂಕ್ತಗಳಲ್ಲಿ ಮೂರನೆಯದಾಗಿರುವುದು ಆದುದರಿಂದ ಆ ಆರು ಸೂಕ್ತಗಳ ವಿನಿಯೋಗವೇ ಈ ಸೂಕ್ತಕ್ಕೂ ಅನ್ವಯಿಸುವುದು. ಈ ಸೂಕ್ತದಲ್ಲಿ ಹತ್ತು ಋಕ್ಕುಗಳಿರುವುವು ಇವುಗಳಲ್ಲಿ ಮೊದಲಿನ ಮೂರೂ ಮತ್ತು ಕಡೆಯ ಒಂದು ಋಕ್ಕು ಒಟ್ಟು ನಾಲ್ಕು ಋಕ್ಕುಗಳು ಇಂದ್ರನ ಪರವಾಗಿರುವುವು. **ಆದಹ ಸ್ವಧಾಮನು** ಎಂದು ಮೊದಲಾದ ನಾಲ್ಕರಿಂದ ಒಂಭತ್ತರವರೆಗಿನ ಆರು ಋಕ್ಕುಗಳು ಮರುದ್ದೇವತಾ ಪರವಾಗಿರುವುವು. ಈ ಆರು ಋಕ್ಕುಗಳಲ್ಲಿಯೂ **ವೀಳು ಚಿದಾರುಜತ್ನುಭಿಃ** ಎಂಬ ಐದನೆಯ ಋಕ್ಕು, **ಇಂದ್ರೇಣ ಸಂ ಹಿ ದೃಕ್ಷಸೇ** ಎಂಬ ಏಳನೆಯ ಋಕ್ಕು ಇವೆರಡೂ ಇಂದ್ರ ಮತ್ತು ಮರುದ್ದೇವತೆಗಳಿಬ್ಬರ ಪರವಾಗಿಯೂ ಇರುವುವು. ಈ ವಿಷಯವು—'' **ಸುರೂಪಕೃತ್ನುಂ ದಶೈಂದ್ರಮಾ ತು ಯುಂಜಂತ್ಯಾದಹೇತ್ಯೇತಾಃ ಷಣ್ಮಾರುತ್ಯೋ ವೀಳು ಚಿದಿಂದ್ರೇಣೇತ್ಯೈಂದ್ರ್ಯೋ ಚೇತಿ** '' ಎಂದರೆ **ಸುರೂಪಕೃತ್ನುಂ** ಎಂಬ ಸೂಕ್ತದಲ್ಲಿರುವ ಹತ್ತು ಋಕ್ಕುಗಳು **ಆತ್ವೇತಾ** ಎಂಬ ಸೂಕ್ತದಲ್ಲಿರುವ ಹತ್ತು ಋಕ್ಕುಗಳೂ **ಯುಂಜಂತಿ** ಬ್ರಧ್ನಂ ಎಂಬ ಸೂಕ್ತದ ಮೊದಲ ಮೂರು ಮತ್ತು ಕೊನೆಯಋಕ್ಕು ಇವಿಷ್ಟೂ ಇಂದ್ರದೇವತೆಯ ಪರವಾದವು. **ಆದಹ ಸ್ವಧಾಮನು** ಎಂಬ ಋಕ್ಕಿನಿಂದ **ಅತಃಪರಿಜ್ಮನ್ನಾಗಹಿ** ಎಂಬ ಋಕ್ಕಿನವರೆಗೂ ಆಗುವ ಆರು ಋಕ್ಕುಗಳು ಮರುದ್ದೇವತಾಪರವಾದವು. ಆದರೆ ಈ ಆರು ಋಕ್ಕಗಳ ಮಧ್ಯದಲ್ಲಿ **ವೀಳು ಚಿದಾರುಜತ್ನುಭಿಃ** ಮತ್ತು **ಇಂದ್ರೇಣ ಸಂ ಹಿ ದೃಕ್ಷಸೇ** ಎಂಬ ಎರಡು ಋಕ್ಕುಗಳು ಮಾತ್ರ ಇಂದ್ರ ಹತ್ತು ಮರುತ್ ಎಂಬ ಎರಡು ದೇವತೆಗಳ ಪರವಾಗಿಯೂ ಇರುವವು" ಎಂದು ಸರ್ವಾನುಕ್ರಮಣಿಕೆಯಲ್ಲಿ ಹೇಳಿದೆ. ಪ್ರಸಕ್ತವಾದ ಈ **ಯುಂಜಂತಿ** ಬ್ರಧ್ನಂ ಎಂಬ ಸೂಕ್ತದ ಮೊದಲ ಮೂರು ಋಕ್ಕುಗಳು ಅತಿರಾತ್ರದ ಮೂರನೆಯ ರಾತ್ರಿ ಪರ್ಯಾಯದಲ್ಲಿ ಬ್ರಾಹ್ಮಣಾಚ್ಛಂಸಿ ಎಂಬ ಋತ್ವಿಜನಿಂದ ಪಠಿಸಲ್ಪಡಬೇಕು. ಈ ವಿಷಯದಲ್ಲಿ **ತಥಾ ಚಾತಿರಾತ್ರೇ ಪರ್ಯಾಯಾಣಾಮಿತಿ ಖಂಡೇ ಯೋಗೇ ಯೋಗೇ ತವಸ್ತರಂ ಯುಂಜತಿ ಬ್ರಧ್ನಮರುಷಂ ಇತಿ ಸೂತ್ರಿತಂ** (ಆಶ್ವ- ಸೂ. ೬-೪) ಎಂದು ಆಶ್ವಲಾಯನ ಸೂತ್ರದಲ್ಲಿ ಹೇಳಿರುವುದು.

॥ ಓಂ ॥

## ಸೂಕ್ತ—೬

॥ ಮಂಡಲ—೧ ॥ ಅನುವಾಕ—೨ ॥ ಸೂಕ್ತ—೬ ॥

॥ ಅಷ್ಟಕ —೧ ॥ ಅಧ್ಯಾಯ—೧ ॥ ವರ್ಗ—೧೧-೧೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೧-೧೦ ॥

॥ ಋಷಿಃ—ಮಧುಚ್ಛಂದಾ ವೈಶ್ವಾಮಿತ್ರಃ ॥

॥ ದೇವತಾ—೧-೩ ಇಂದ್ರಃ ॥ ೪, ೬, ೮, ೯. ಮರುತಃ ॥
೫, ೭ ಮರುತ ಇಂದ್ರಶ್ಚ ॥೧೦. ಇಂದ್ರಃ ॥

॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಯುಂಜಂತಿ ಬ್ರಧ್ನಮರುಷಂ ಚರಂತಂ ಪರಿ ತಸ್ಥುಷಃ ॥
ರೋಚಂತೇ ರೋಚನಾ ದಿವಿ ॥ ೧ ॥

॥ ಪದಪಾಠಃ ॥

ಯುಂಜಂತಿ । ಬ್ರಧ್ನಂ । ಅರುಷಂ । ಚರಂತಂ । ಪರಿ । ತಸ್ಥುಷಃ ॥
ರೋಚಂತೇ । ರೋಚನಾ । ದಿವಿ ॥ ೧ ॥

ಸಾಯಣಭಾಷ್ಯಂ

ಇಂದ್ರೋ ಹಿ ಪರಮೈಶ್ವರ್ಯಯುಕ್ತಃ। ಪರಮೈಶ್ವರ್ಯಂ ಚಾಗ್ನಿವಾಯ್ವಾದಿತ್ಯನಕ್ಷತ್ರರೂಪೇಣಾವಸ್ಥಾನಾದುಪಪದ್ಯತೇ । ಬ್ರಧ್ನಮಾದಿತ್ಯರೂಪೇಣಾವಸ್ಥಿತಂ ಅರುಷಂ ಹಿಂಸಕರಹಿತಾಗ್ನಿರೂಪೇಣಾವಸ್ಥಿತಂ ಚರಂತಂ ವಾಯುರೂಪೇಣ ಸರ್ವತಃ ಪ್ರಸರಂತಮಿಂದ್ರಂ ಪರಿ ತಸ್ಥುಷಃ ಪರಿತೋಽವಸ್ಥಿತಾ ಲೋಕತ್ರಯವರ್ತಿನಃ ಪ್ರಾಣಿನೋ ಯುಂಜಂತಿ । ಸ್ವಕೀಯೇ ಕರ್ಮಣಿ ದೇವತಾತ್ವೇನ ಸಂಬದ್ಧಂ ಕುರ್ವಂತಿ । ತಸ್ಯೈವೇಂದ್ರಸ್ಯ ಮೂರ್ತಿವಿಶೇಷಭೂತಾನಿ ರೋಚನಾ ರೋಚನಾನಿ ನಕ್ಷತ್ರಾಣಿ ದಿವಿ ದ್ಯುಲೋಕೇ ರೋಚಂತೇ । ಪ್ರಕಾಶಂತೇ । ಅಸ್ಯ ಮಂತ್ರಸ್ಯೋಕ್ತಾರ್ಥಪರತ್ವಂ ಬ್ರಾಹ್ಮಣಾಂತರೇ ವ್ಯಾಖ್ಯಾತಂ । ಯುಂಜಂತಿ ಬ್ರಧ್ನಮಿತ್ಯಾಹ । ಅಸೌ ವಾ ಆದಿತ್ಯೋ ಬ್ರಧ್ನಃ । ಆದಿತ್ಯಮೇವಾಸ್ಮೈ ಯುನಕ್ತಿ । ಅರುಷಮಿತ್ಯಾಹ । ಅಗ್ನಿರ್ವಾ ಅರುಷಃ । ಅಗ್ನಿಮೇವಾಸ್ಮೈ ಯುನಕ್ತಿ । ಚರಂತಮಿತ್ಯಾಹ। ವಾಯುರ್ವೈ ಚರನ್ । ವಾಯುಮೇವಾಸ್ಮೈ ಯುನಕ್ತಿ । ಪರಿ ತಸ್ಥುಷ ಇತ್ಯಾಹ । ಇಮೇ ವೈ ಲೋಕಾಃ ಪರಿ ತಸ್ಥುಷಃ। ಇಮಾನೇವಾಸ್ಮೈ ಲೋಕಾನ್ಯುನಕ್ತಿ । ರೋಚಂತೇ ರೋಚನಾ ದಿವೀತ್ಯಾಹ।

ನಕ್ಷತ್ರಾಣಿ ವೈ ರೋಚನಾ ದಿವಿ । ನಕ್ಷತ್ರಾಣ್ಯೇವಾಸ್ಮೈ ರೋಚಯತಿ । ತೈ. ಬ್ರಾ. ೩-೯-೪-೧ । ಇತಿ । ಪಂಚವಿಂಶತಿ ಸಂಖ್ಯಾಕೇಷು ಮಹನ್ನಾಮಸು ಮಹೋ ಬ್ರಧ್ನ ಇತಿ ಪಠಿತಂ । ಆದಿತ್ಯಸ್ಯಾಪಿ ಮಹತ್ತ್ವಾದೇವ ಬ್ರಧ್ನತ್ವಂ ॥ ಯುಂಜಂತಿ । ಅಂತೇಃ ಪ್ರತ್ಯಯಸ್ವರೇಣಾದ್ಯುದಾತ್ತತ್ವಂ । ಬ್ರಧ್ನಂ । ಪ್ರಾತಿಪದಿಕಾಂತೋದಾತ್ತಃ । ಅರುಷಂ । ಉಷ ರುಷ ರಿಷ ಹಿಂಸಾರ್ಥಾಃ । ರೋಷಂತೀತಿ ರುಷಾ ಹಿಂಸಕಾಃ । ಇಗುಪಧಜ್ಞಾಪ್ರೀಕಿರಃ ಕಃ । ಪಾ. ೩-೧-೧೩೫ । ಇತಿ ಕಃ । ಪ್ರತ್ಯಯಸ್ವರೇಣೋದಾತ್ತಃ । ನ ಸಂತಿ ರುಷಾ ಯಸ್ಯಾಸಾವರುಷಃ ನಞ್‌ಸುಭ್ಯಾಂ । ಪಾ. ೬-೨-೧೭೨ । ಇತ್ಯುತ್ತರಪದಾಂತೋದಾತ್ತತ್ವಂ । ಅಮಿಪೂರ್ವಃ । ಪಾ. ೬-೧-೧೦೭ । ಇತಿ ಪೂರ್ವರೂಪ ಏಕಾದೇಶ ಉದಾತ್ತೇನೋದಾತ್ತಃ । ಪಾ ೮-೨-೫ । ಇತ್ಯುದಾತ್ತತ್ವಂ । ಚರಂತಂ । ಶಪಃ ಪಿತ್ತ್ವಾದನುದಾತ್ತತ್ವಂ । ಶತುಶ್ಚ ಲಸಾರ್ವಧಾತುತಸ್ವರೇಣ ಧಾತುಸ್ವರ ಏವ ಶಿಷ್ಯತೇ । ತಸ್ಥುಷಃ । ತಿಷ್ಠತೇರ್ಲಿಟಃ। ಕ್ವಸುರಾದೇಶಃ। ಪಾ. ೩-೨-೧೦೭ । ವಸ್ಯೇಕಾಜಾದ್ಘಸಾಂ ಪಾ. ೭-೨-೬೭ । ಇತೀಟಮಂತರಂಗಮಪಿ ಬಾಧಿತ್ವಾ ಸಂಪ್ರಸಾರಣಂ ಸಂಪ್ರಸಾರಣಾಶ್ರಯಂ ಚ ಬಲೀಯಃ । ಮ. ೬-೧-೧೭-೨ । ಇತಿ ಶಸಿ ಪರತೋ ಭತ್ವಾತ್ । ಪಾ. ೧-೪-೧೮ । ವಸೋಃ ಸಂಪ್ರಸಾರಣಂ। ಪಾ. ೬-೪-೧೩೧ । ಪರಪೂರ್ವತ್ವಂ । ಶಾಸಿವಸಿಘಸೀನಾಂ ಚ । ಪಾ. ೮-೩-೬೦ । ಇತಿ ಷತ್ವಂ ವಸೋಃ । ಪ್ರತ್ಯಯಸ್ವರೇಣೋದಾತ್ತತ್ವಂ । ರೋಚಂತೇ । ತಿಙೋ ಲಸಾರ್ವಧಾತುಕಾನುದಾತ್ತತ್ವಂ । ಶಪಃ ಪಿತ್ತ್ವಾದನುದಾತ್ತತ್ವಂ। ಧಾತುಸ್ವರ ಏವ । ರೋಚನಾ । ಅನುದಾತ್ತೇತಶ್ಚ ಹಲಾದೇಃ। ಪಾ. ೩-೨-೧೪೯। ಇತಿ ಯುಚ್ । ಯುವೋರನಾಕೌ । ಪಾ. ೭-೧-೧ । ಇತ್ಯನಾದೇಶಃ । ಚಿತ ಇತ್ಯಂತೋದಾತ್ತತ್ವಂ । ದಿವಿ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ ॥

॥ ಪ್ರತಿಪದಾರ್ಥ ॥

ಪರಿ— ಸುತ್ತಲೂ, ಎಲ್ಲೆಲ್ಲಿಯೂ । ತಸ್ಥುಷಃ—(ಮೂರು ಲೋಕಗಳಲ್ಲಿಯೂ) ಇರುವ ಪ್ರಾಣಿಗಳು ॥ ಬ್ರಧ್ನಂ— ಸೂರ್ಯನ ರೂಪದಿಂದಿರುವ । ಅರುಷಂ— ಹಿಂಸಕರಹಿತನಾದ ಅಗ್ನಿರೂಪದಿಂದಿರುವ । ಚರಂತಂ— ವಾಯು ರೂಪದಿಂದ ಸರ್ವತ್ರ ಸಂಚರಿಸುತ್ತಿರುವ (ಇಂದ್ರನನ್ನು) ಯುಂಜಂತಿ—(ತಮ್ಮ ತಮ್ಮ ಕಾರ್ಯಗಳಲ್ಲಿ ಮುಖ್ಯ ದೇವತೆಯಂತೆ ಭಾವಿಸಿ) ಸಂಬಂಧವನ್ನು ಕಲ್ಪಿಸುವರು । (ಆ ಇಂದ್ರನ ವಿಶೇಷ ಮೂರ್ತಿಸ್ವರೂಪಗಳಾದ) ರೋಚನಾ— ನಕ್ಷತ್ರಗಳು । ದಿವಿ— ಸ್ವರ್ಗಲೋಕದಲ್ಲಿ (ಅಂತರಿಕ್ಷದಲ್ಲಿ) । ರೋಚಂತೆ— ಪ್ರಕಾಶಿಸುತ್ತವೆ.

॥ ಭಾವಾರ್ಥ ॥

ಇಂದ್ರನು ಪರಮೈಶ್ವರ್ಯಯುಕ್ತನು. ಪರಮೈಶ್ವರ್ಯವೆಂದರೆ ಅಗ್ನಿ ವಾಯು ಆದಿತ್ಯ ನಕ್ಷತ್ರ ಇವುಗಳ ರೂಪದಿಂದ ಇದ್ದು ಪ್ರಕಾಶಿಸುವ ಸಾಮರ್ಥ್ಯವು ಆದುದರಿಂದ ಆದಿತ್ಯರೂಪದಿಂದಲೂ ಅಗ್ನಿರೂಪದಿಂದಲೂ, ಸದಾ ಚಲಿಸುತ್ತಿರುವ ವಾಯುರೂಪದಿಂದಲೂ ಆಕಾಶದಲ್ಲಿ ಮಿನುಗುತ್ತಿರುವ ನಕ್ಷತ್ರಗಳ ರೂಪದಿಂದಲೂ ಇಂದ್ರನು ಪ್ರಕಾಶಿಸುತ್ತಿರುವನು. ಇಂತಹ ಇಂದ್ರನನ್ನು ಮೂರುಲೋಕದ ಸಮಸ್ತ ಪ್ರಾಣಿಗಳೂ ತಮ್ಮ ತಮ್ಮ ವ್ಯವಹಾರಾದಿಗಳಲ್ಲಿ ಮುಖ್ಯ ದೇವನೆಂದು ಭಾವಿಸಿ ಅವನಲ್ಲಿ ಮಹತ್ತರವಾದ ಗೌರವವೆಂಬ ಸಂಬಂಧವನ್ನು ಕಲ್ಪಿಸಿಕೊಂಡಿರುವರು.

## English Translation

Those who are standing around (i.e. living beings inhabiting the three worlds) associate with (Indra) the mighty (in the form of the sun) the non-injuring (in the form of fire) the moving (in the form of wind) the lights (or stars special incarnations of that same Indra) shine in the sky.

॥ ವಿಶೇಷ ವಿಷಯಗಳು ॥

ಈ ಋಕ್ಕಿನ ಪ್ರತಿಪದಾರ್ಥ, ಭಾವಾರ್ಥ, ಮತ್ತು ಇಂಗ್ಲಿಷ್ ಭಾಷಾಂತರವು ಸಾಯಣ ಭಾಷ್ಯವನ್ನು ಅನುಸರಿಸಿರುವುದು. ಸಾಯಣರ ಭಾಷ್ಯವು ತೈತ್ತಿರೀಯ ಬ್ರಾಹ್ಮಣದಲ್ಲಿ (ಕೃಷ್ಣಯಜುರ್ವೇದ) ಹೇಳಿರುವ ಅನುವಾದವನ್ನು ಅನುಸರಿಸಿರುವುದು. ಬ್ರಾಹ್ಮಣಗಳು ವೇದದ ಒಂದು ಭಾಗವೆಂದು ಪರಿಗಣಿಸಲ್ಪಟ್ಟಿರುವುದರಿಂದಲೂ, ಅತಿಪ್ರಾಚೀನವಾದ ವಿವರಣೆಗಳಿಂದ ಕೂಡಿರುವುದರಿಂದಲೂ ವೇದಾರ್ಥ ವಿಚಾರದಲ್ಲಿ ಮುಖ್ಯ ಪ್ರಮಾಣವೆಂದು ನಂಬಬೇಕು. ನಿರುಕ್ತಕಾರರಾದ ಯಾಸ್ಕ ಮಹರ್ಷಿಗಳು ವೇದಮಂತ್ರಗಳಿಗೆ ಅರ್ಥಮಾಡುವ ವಿಚಾರದಲ್ಲಿ ಹೀಗೆ ಹೇಳಿರುವರು–

ತದ್ಯಾನಿ ನಾಮಾನಿ ಪ್ರಾಧಾನ್ಯಸ್ತುತೀನಾಂ ದೇವತಾನಾಂ ತದ್ದೈವತಮಿತ್ಯಾಚಕ್ಷತೇ॥ ಯತ್ಕಾಮ ಋಷಿರ್ಯಸ್ಯಾಂ ದೇವತಾಯಾಮಾರ್ಥಪತ್ಯಮಿಚ್ಛನ್ಸ್ತುತಿಂ ಪ್ರಯುಂಕ್ತೇ ತದ್ದೈವತಃ ಸ ಮಂತ್ರೋ ಭವತಿ ॥ ತಾಸ್ತ್ರಿವಿಧಾ ಋಚಃ ಪರೋಕ್ಷಕೃತಾಃ ಪ್ರತ್ಯಕ್ಷಕೃತಾ ಆಧ್ಯಾತ್ಮಿಕಾಶ್ಚ । ತತ್ರ ಪರೋಕ್ಷಕೃತಾಃ ಸರ್ವಾಭಿರ್ನಾಮವಿಭಕ್ತಿಭಿರ್ಯುಜ್ಯಂತೇ, ಪ್ರಥಮಪುರುಷೈಶ್ಚಾಖ್ಯಾತಸ್ಯ ॥ ಅಥ ಪ್ರತ್ಯಕ್ಷಕೃತಾ ಮಧ್ಯಮಪುರುಷಯೋಗಾಸ್ತ್ವಮಿತಿ ಚೈತೇನ ಸರ್ವನಾಮ್ನಾ ॥ ಅಥಾಧ್ಯಾತ್ಮಿಕ್ಯ ಉತ್ತಮಪುರುಷಯೋಗಾ ಅಹಮಿತಿ ಚೈತೇನ ಸರ್ವನಾಮ್ನಾ ॥ ಪರೋಕ್ಷಕೃತಾಃ ಪ್ರತ್ಯಕ್ಷಕೃತಾಶ್ಚ ಮಂತ್ರಾ ಭೂಯಿಷ್ಠಾ ಅಲ್ಪಶ ಆಧ್ಯಾತ್ಮಿಕಾಃ ॥

(ನಿರುಕ್ತ–ದೈವತಕಾಂಡ. ಅಧ್ಯಾಯ ೭-ಖಂಡ ೧-೩)

ಎಂದರೆ ಮಂತ್ರಗಳಲ್ಲಿ ದೈವತಮಂತ್ರ, ಸ್ತುತಿಮಂತ್ರ, ಆಶೀರ್ಮಂತ್ರ, ಶಪಥ, ಅಭಿಶಾಪ, ಕಶ್ಚಿದ್ಭಾವ, ಪರಿದೇವನಾ, ನಿಂದಾ, ಪ್ರಶಂಸಾ ಎಂದು ಅನೇಕ ವಿಧವಾಗಿರುವುದು. ದೈವತಮಂತ್ರವೆಂದರೆ ದೇವತೆಗಳ ಮಹಿಮೆಯನ್ನು ವರ್ಣಿಸುವ ಮಂತ್ರ, ಸ್ತುತಿಯೆಂದರೆ ಸ್ತೋತ್ರ, ಪ್ರಾರ್ಥನೆಗಳನ್ನೊಳಗೊಂಡಿರುವ ಮಂತ್ರ, ಆಶೀಃ=ಆಶೀರ್ವಾದ, ಒಳ್ಳೆಯದನ್ನು ಹಾರೈಸುವ ಮಂತ್ರ. ಶಪಥ=ಪ್ರತಿಜ್ಞೆ ಅಭಿಶಾಪ=ಕೆಟ್ಟಹಾರೈಕೆ, ಕಶ್ಚಿದ್ಭಾವ=ಒಂದು ವಿಷಯ ಅಥವಾ ತತ್ತ್ವದ ವಿವರಣೆ, ಪರಿದೇವನಾ–ವ್ಯಸನ ನಿಂದಾ–ನಿಂದೆಯು, ಪ್ರಶಂಸಾ–ಹೊಗಳುವಿಕೆಯು, ದಾನಸ್ತುತಿ ಇತ್ಯಾದಿ

ಮೇಲೆ ಹೇಳಿದ ಅನೇಕ ವಿಧಗಳಲ್ಲಿ ದೈವತವೆಂಬ ಋಕ್ಕುಗಳು ಪರೋಕ್ಷಕೃತ, ಪ್ರತ್ಯಕ್ಷಕೃತ, ಆಧ್ಯಾತ್ಮಿಕ ಎಂದು ಮೂರು ವಿಧವಾಗಿರುವವು. ಪರೋಕ್ಷಕೃತವೆಂದರೆ- ಸ್ತುತಿಸಲ್ಪಡುವ ದೇವತೆಯು ಎದುರಿಗಿಲ್ಲದಿರುವುದರಿಂದ ಸ್ತುತಿಸುವಾಗ ಆ ದೇವತೆಯ ವಿಷಯದಲ್ಲಿ ಪ್ರಥಮಪುರುಷನಾಮಪದಗಳನ್ನೂ ಕ್ರಿಯಾಪದಗಳನ್ನೂ (Third person both in subject and predicate) ಉಪಯೋಗಿಸಿರುವ ಮಂತ್ರಗಳು ಪ್ರತ್ಯಕ್ಷಕೃವೆಂದರೆ, ಸ್ತುತಿಸಲ್ಪಡುವ ದೇವತೆಯು ಪ್ರತ್ಯಕ್ಷವಾಗಿ ಎದುರಿಗೆ ಇದ್ದಂತೆ ಭಾವಿಸಿ ಅದನ್ನು ನೀನು ನಿನ್ನ ಮೊದಲಾದ ಮಧ್ಯಮಪುರುಷಶಬ್ದಗಳಿಂದ (Second person) ಸಂಬೋಧನೆ ಮಾಡಿ ಸ್ತುತಿಸುವ ಋಕ್ಕುಗಳು. ಆಧ್ಯಾತ್ಮಿಕವೆಂದರೆ ಉತ್ತಮಪುರುಷ (First person) ಪ್ರಯೋಗವನ್ನು ಮಾಡಿ ಸ್ತುತಿಸಿರುವ ಮಂತ್ರಗಳು. ಈ ಮೂರುವಿಧ ಮಂತ್ರಗಳಲ್ಲಿ ಪರೋಕ್ಷಕೃತ ಪ್ರತ್ಯಕ್ಷಕೃತವೆಂಬ ಎರಡುವಿಧ ಮಂತ್ರಗಳು ಹೆಚ್ಚಾಗಿರುವವು, ಆಧ್ಯಾತ್ಮಿಕಮಂತ್ರಗಳು ಕೇವಲ ಸ್ವಲ್ಪಮಾತ್ರವಿರುವವು ಎಂದು.

ಈಕ್ರಮದಂತೆ ಪ್ರಸಕ್ತವಾದ ಯುಂಜಂತಿ ಬ್ರಧ್ನಮರುಷಂ ಎಂಬ ಋಕ್ಕು ದೈವತಮಂತ್ರದಲ್ಲಿ ಪರೋಕ್ಷಕೃತವೆಂಬ ಗುಂಪಿಗೆ ಸೇರಬೇಕಾಗಿರುವುದು. ಆದರೂ ತೈತ್ತಿರೀಯ ಬ್ರಾಹ್ಮಣದಲ್ಲಿ ಈ ಋಕ್ಕಿಗೆ ಆಧ್ಯಾತ್ಮಿಕಾರ್ಥವನ್ನು ಹೇಳಿರುವುದರಿಂದ ಭಾಷ್ಯಕಾರರು ಅದನ್ನನುಸರಿಸಿಯೇ ಅರ್ಥವಾಡಿರುವರು. ಆ ಬ್ರಾಹ್ಮಣದಲ್ಲಿ ಈ ಋಕ್ಕಿನ ವಿವರಣೆಯನ್ನು ಹೇಳುವಾಗ—

ಯುಂಜಂತಿ ಬ್ರಧ್ನಮಿತ್ಯಾಹ | ಅಸೌ ವಾ ಆದಿತ್ಯೋ ಬ್ರಧ್ನಃ | ಆದಿತ್ಯಮೇವಾಸ್ಮೈ-ಯುನಕ್ತಿ | ಅರುಷಮಿತ್ಯಾಹ | ಅಗ್ನಿರ್ವಾ ಅರುಷಃ | ಅಗ್ನಿಮೇವಾಸ್ಮೈ ಯುನಕ್ತಿ | ಚರಂತಮಿತ್ಯಾಹ | ವಾಯುರ್ವೈ ಚರನ್ | ವಾಯುಮೇವಾಸ್ಮೈ ಯುನಕ್ತಿ | ಪರಿ-ತಸ್ಥುಷ ಇತ್ಯಾಹ | ಇಮೇ ವೈ ಲೋಕಾಃ ಪರಿ ತಸ್ಥುಷಃ | ಇಮಾನೇವಾಸ್ಮೈ - ಲೋಕಾನ್ ಯುನಕ್ತಿ | ರೋಚಂತೇ ರೋಚನಾ ದಿವೀತ್ಯಾಹ | ನಕ್ಷತ್ರಾಣಿ ವೈ-ರೋಚನಾ ದಿವಿ | ನಕ್ಷತ್ರಾಣ್ಯೇವಾಸ್ಮೈ ರೋಚಯತಿ ||

(ತೈ. ಬ್ರಾ. ೩-೯-೪)

ಎಂದಿದೆ ಎಂದರೆ, ಬ್ರಧ್ನಶಬ್ದಕ್ಕೆ ಆದಿತ್ಯ, ಅರುಷ =ಅಗ್ನಿ, ಚರಂತ =ವಾಯು, ಪರಿ ತಸ್ಥುಷಃ =ಮೂರು ಲೋಕಗಳು, ರೋಚನಾ =ನಕ್ಷತ್ರಗಳು ಎಂದು ಆಧ್ಯಾತ್ಮಿಕಸಂಬಂಧವಾದ ಅರ್ಥವಿವರಣೆಯನ್ನು ಕೊಟ್ಟಿದೆ. ಈ ಅರ್ಥವನ್ನು ನಾವು ಪ್ರಮಾಣವೆಂದು ಒಪ್ಪಬೇಕಾದರೂ ಈ ಋಕ್ಕಿಗೆ ಇತರ ಭಾಷ್ಯಕಾರರು ಮಾಡಿರುವ ಅರ್ಥವನ್ನು ನಿರಾಕರಿಸುವಹಾಗಿಲ್ಲ

ಸ್ಕಂದಸ್ವಾಮಿಯು ಈ ಋಕ್ಕಿಗೆ ಬೇರೆವಿಧವಾಗಿ ಅರ್ಥವಿವರಣೆಯನ್ನು ಮಾಡಿರುವುದರಿಂದ ಅದನ್ನು ಇಲ್ಲಿ ವಿವರಿಸಿದೇವೆ—

ಸ್ಕಂದಸ್ವಾಮಿ ಭಾಷ್ಯಂ—

ಯೋಗಃ ಸಂಬಂಧಃ | ಯುಂಜಂತಿ ಸಂಬಂಧಯಂತಿ | ಕೇನ, ಸಾಮರ್ಥ್ಯಾತ್ ಸ್ತುತಿ-ಭಿರ್ಹವಿರ್ಭಿಶ್ಚ | ಕೇ, ಸಾಮರ್ಥ್ಯಾತ್ ಸ್ತೋತಾರಃ | ಯಷ್ಟಾರಶ್ಚ | ಬ್ರಧ್ನಂ ಮಹ-ನ್ನಾಮೈತತ್ | ಮಹಾಂತಮಿಂದ್ರಂ | ಅರುಷಂ | ರುಶತಿರ್ದೀಪ್ತ್ಯರ್ಥಃ | ರುಶದ್ವ-ತ್ಸಾರುಶತ್ತೀತಿ ಪ್ರದರ್ಶನಾತ್ | ತಸ್ಯ ವಾ ರೋಚತೇರ್ವಾ ದೀಪ್ತಿಕರ್ಮಣ ಆಙ್-ಪೂರ್ವಸ್ಯೇದಂ ರೂಪಂ | ಆಙಶ್ಚ ಹ್ರಸ್ವತ್ವಂ | ಆರುಶಂ ಆರೋಚಮಾನಂ ವಾ | ದೀಪ್ತಮಿತ್ಯರ್ಥಃ | ಅರುಷತ್ಯಾಯತೀತಿ | ಗತಿಕರ್ಮಸು ಪಾಠಾದರುಷತೇರ್ಗತ್ಯರ್ಥ-ಸ್ಯಾರುಷಶಬ್ದೋ ಗಂತೃವಚನಃ | ಶತ್ರೂನ್ ಯಜ್ಞಾನ್ ವಾ ಪ್ರತಿಗಂತಾರಂ | ಚರಂತಂ ಪರಿ ಸರ್ವತೋ ಗಚ್ಛಂತಂ | ಯತ್ರ ಯತ್ರೇಂದ್ರೋ ಗಚ್ಛತಿ ತತ್ರ ತತ್ರೈನಂ ಸ್ತೋತಾರೋ ಯಷ್ಟಾರಶ್ಚ ಸ್ತುವಂತಿ ಚೇತ್ಯರ್ಥಃ | ಅಥವಾ, ಯುಂ-ಜಂತೀತಿ ಯುಜಿಃ ಶುದ್ಧೋಽಪಿ ಸಾಮರ್ಥ್ಯಾತ್ ಸೋಪಸರ್ಗಾರ್ಥೇ ದ್ರಷ್ಟವ್ಯಃ | ಸ್ವಾರ್ಥಸಿದ್ಧ್ಯೈ ಸ್ತೋತಾರೋ ಯಷ್ಟಾರಶ್ಚೈನಂ ನಿಯುಂಜತೇ | ಮಹಾಂತಂ ದೀಪ್ತಂ ಚೇಂದ್ರಂ ಸರ್ವತೋ ಗಚ್ಛಂತಂ, ಯತ್ರ ಯತ್ರ ಗಚ್ಛತಿ ತತ್ರ ತತ್ರೈನಂ ಮನುಷ್ಯಾ ಇದಮಿದಂ ಚ ನಃ ಕುರ್ವಿತ್ಯರ್ಥಂ ಯಾಚಂತ ಇತ್ಯರ್ಥಃ | ರಥೋಽತ್ರ ಸಾಮರ್ಥ್ಯಾ-ತ್ ಯುಜ್ಯಮಾನಃ ನೇಂದ್ರಂ ಯುಂಜಂತಿ | ಇಂದ್ರಸ್ಯ ರಥಂ ಬ್ರಧ್ನಮರುಷಂ

ಚ ಸರ್ವತೋ ಗಚ್ಛಂತಂ । ಕೇ, ಸಾಮರ್ಥ್ಯಾತ್ ಸಾರಥಯೋ ಮಾತಲಿಪ್ರಭೃತಯಃ ಅನ್ಯೇಽಸ್ಯ ರಥಂ ಯುಂಜಂತಿ ಸ ನಃ ಸ್ವಯಂ ಯುನಕ್ತಿ ಬ್ರಧ್ನಾದಿಗುಣಃ ಯುಂಜಂತಿ ನ ಕಿಂಚಿದಿತಿ। ಏವಂ ಗುಣಕೀರ್ತನಾದಿಂದ್ರಸ್ಯೇಯಂ ಸ್ತುತಿಃ। ಕಿಂಚ ತಸ್ಥುಷಃ ರೋಚಂತೇ ರೋಚನಾ ದಿವಿ । ತಸ್ಥುಷ ಇತಿ ಷಷ್ಠೀನಿರ್ದೇಶಾತ್ ಪ್ರಭಾವೇನೇತಿ ವಾಕ್ಯಶೇಷಃ । ಸ್ಥಿತಸ್ಯ ವ್ಯಾಪ್ರಿಯಮಾಣೇಂದ್ರಸ್ಯ ಪ್ರಭಾವೇನ ರೋಚಂತೇ ದೀಪ್ಯಂತೇ । ರೋಚನಾ ದೀಪ್ತಿಸ್ವಭಾವಕಾನಿ ನಕ್ಷತ್ರಾಣಿ ದಿವಿ ದ್ಯುಲೋಕೇ । ಕಥಂಪುನರಿಂದ್ರಪ್ರಭಾವೇನ ನಕ್ಷತ್ರಾಣಿ ದೀಪ್ಯಂತೇ । ಉಚ್ಯತೇ । ವಕ್ಷ್ಯತೇ- " ಇಂದ್ರೋ ದೀರ್ಘಾಯ ಚಕ್ಷಸ ಆ ಸೂರ್ಯಂ ರೋಹಯದ್ದಿವಿ " ಇತಿ । ಸೂರ್ಯಸ್ಯ ಪ್ರಭಾವಶ್ಚ ಸುಷುಮ್ನೋ ನಾಮ ರಶ್ಮಿಃ ತತ್ಸಂಬಂಧಾಚ್ಚಂದ್ರಮಾ ನಕ್ಷತ್ರಾಣಿ ಚ ದೀಪ್ಯಂತೇ । ಅಥವಾ ಯುಜಿರುತ್ಪೂರ್ವಾರ್ಥೇ । ಅಂತರ್ಣೀತಣ್ಯರ್ಥಶ್ಚ ದ್ರಷ್ಟವ್ಯಃ । ಉದ್ಯೋಜಯಂತ್ಯುತ್ಸಾಹಯಂತಿ ವೃಷ್ಟಿಕರ್ಮಾಣಿ ಬ್ರಧ್ನಮರುಷಂ ಚೇಂದ್ರಂ । ಕಿಂ ಕುರ್ವಂತಂ । ಉಚ್ಯತೇ । ಚರಂತಂ ಪರಿ ತಸ್ಥುಷಃ । ಪರಿಶಬ್ದೋ ಲಕ್ಷಣೇ ಕರ್ಮಪ್ರವಚನೀಯಃ ತಸ್ಥುಷ ಇತ್ಯನೇನ ಚ ಸಂಬಧ್ಯತೇ । ತಸ್ಥಿವಃಶಬ್ದಃ ಸ್ಥಾವರವಚನಃ । ಗಚ್ಛಂತಂ ಸ್ಥಾವರಾಣಿ ಪ್ರತಿ । ಸ್ಥಾವರಗ್ರಹಣಂ ಚಾತ್ರ ಜಂಗಮಸ್ಯಾಪಿ ಪ್ರದರ್ಶನಾರ್ಥಂ । ಸೋಮಪಾನಾಯಾಸುರಯುದ್ಧಲೋಲುಪತಯಾ ಜಂಗಮಸ್ಥಾವರಾತ್ಮಕಂ ಕೃತ್ಸ್ನಂ (ಜನಂ, ಜಗತ್) ಪರಿಭ್ರಮಂತಮಿತ್ಯರ್ಥಃ । ಕೇ ಉದ್ಯೋಜಯಂತಿ । ಉಚ್ಯತೇ । ರೋಚಂತೇ ರೋಚನಾ ದಿವಿ । ಏಕವಾಕ್ಯತಾಪ್ರಸಿದ್ಧ್ಯರ್ಥಂ ಯತ್ತಚ್ಛಬ್ದಾವಧ್ಯಾಹಾರ್ಯೌ । ಆದಿತ್ಯರಶ್ಮಯೋ ರೋಚಂತೇ ರೋಚನಾ ದಿವಿ ತೇ ಆದಿತ್ಯರಶ್ಮಯೋ ಹಿ ಪ್ರಾವೃಡಾರಂಭೇ ರಸದಾತಾರಃ। ತೇ ರಸಾನರ್ಪಯಂತಃ ಉದ್ಯೋಜಯಂತೀಂದ್ರಂ ವೃಷ್ಟಿಕರ್ಮಣಿ । ಏತಸ್ಮಿಂಸ್ತ್ವರ್ಥೇ ರಶ್ಮಿವಿಷಯತ್ವಾತ್ ರೋಚನೇತ್ಯೇತತ್ ಪದಮೂಷ್ಮಾಂತನ್ಯಾಯಂ ದೃಶ್ಯತೇ ನ ಸ್ವರಾಂತಮಂತೋ ನೈಷ ಪದಕಾರಾಭಿಪ್ರಾಯಃ । ಜ್ಯೋತಿಷ್ಟ್ವಾಪೇಕ್ಷಂ ವಾ ರಶ್ಮೀನಾಂ ನಪುಂಸಕತ್ವಂ । ಅಧ್ವರ್ಯವಸ್ತ್ವಾದಿತ್ಯದೇವತಾಮೃಚಂ ಮನ್ಯಂತೇ । ಕಥಂ । ಏತೇಷಾಂ ಹಿ ವಿನಿಯೋಜನೇಽಸಿಯುಕ್ತತ್ವಾಚ್ಛ್ವೋಽನಯಾದಿತ್ಯರೂಪೇಣೋಚ್ಯತೇ । ಕಥಮವಗಮ್ಯತೇ । ಶ್ರುತೇಃ । ಏವಂ ಹಿ ಶ್ರುತಿರ್ಭವತಿ--ಯುಂಜಂತಿ ಬ್ರಧ್ನಮರುಷಮಿತ್ಯಾಹ। ಅಸೌ ವಾ ಆದಿತ್ಯೋ ಬ್ರಧ್ನಃ । ಅರುಷೋಽಮುಮೇವಾಸ್ಮಾದಾದಿತ್ಯಂ ಯುನಕ್ತಿ । ಸುವರ್ಗಸ್ಯ ಲೋಕಸ್ಯ ಸಮಷ್ಟ್ಯೈ ಇತಿ ।ತಸ್ಮಾದಾದಿತ್ಯದೇವತೇಯಮಿತಿ । ತನ್ನ । ತತ್ರಾಪಿ ವಿನಿಯೋಗವಶಾನ್ನಿಯುಜ್ಯಮಾನೋಽಶ್ವೋ ಬ್ರಧ್ನೋಽರುಷಶ್ಚೋಚ್ಯತೇ । ಭಕ್ತಿಮಾತ್ರಂ ತು ಶ್ರುತಿಃ । ಅಪಿ ಚ ಯದಿ ಶ್ರುತಿಬಲಾತ್ ತತ್ರಾದಿತ್ಯೋ ದೇವತಾ, ತಥಾ ನಾಮ ಇಹ ತ್ವೈಂದ್ರಪ್ರಕರಣೇ ಸಮಾನಾ ಬ್ರಧ್ನಾರುಷಯೋಶ್ಚೇಂದ್ರೇಽಪಿ ಸಂಭವಾತ್ । ಪರಸ್ಯಾಂ ಚರ್ಚ್ಯಸ್ಯ ಶಬ್ದೇನಾನುವಾದಾತ್ । ತೇನೇಹಾದಿಷ್ಟಸ್ಯ ಬ್ರಧ್ನಸ್ಯಾನ್ವಾದೇಶಾತ್ ತಸ್ಯಾಶ್ಚರ್ಚೋ ಹರಿಸಂಬಂಧಾದೈಂದ್ರತಾಯಾ ಅಸಂದಿಗ್ಧತ್ವಾದೈಂದ್ರತ್ವಮೇವಾಸ್ಯಾ ಋಚ ಇತಿ ॥

ಅನುವಾದವು :—ಯೋಗವೆಂದರೆ ಸಂಬಂಧವು. ಆದುದರಿಂದ **ಯುಂಜಂತಿ** ಎಂಬ ಕ್ರಿಯಾಪದಕ್ಕೆ ಸಂಬಂಧವನ್ನು ಕಲ್ಪಿಸುವರು ಎಂದರ್ಥವು. ಇಂದ್ರನಿಗೂ ಜನರಿಗೂ ಸಂಬಂಧವು ಹೇಗೆ ಎಂದರೆ ಸ್ತೋತ್ರಗಳಿಂದಲೂ ಹವಿಸ್ಸಮರ್ಪಣೆಮಾಡುವುದರಿಂದಲೂ ಇಂದ್ರನಿಗೂ ಇಂದ್ರನನ್ನು ಸ್ತೋತ್ರಮಾಡುವ ಅಥವಾ ಯಜ್ಞಾದಿಗಳಿಂದ ಆರಾಧಿಸುವ ಜನರಿಗೂ ಸಂಬಂಧವಿರುವುದೆಂದು ತಿಳಿಯಬೇಕು. ಬ್ರಧ್ನಶಬ್ದಕ್ಕೆ—ಮಹತ್, ದೊಡ್ಡದು ಎಂದು ಮಹತ್, ಬ್ರಧ್ನ ಮೊದಲಾದ ಇಪ್ಪತ್ತೈದು ಶಬ್ದಗಳ ಮಧ್ಯದಲ್ಲಿ ಹೇಳಿದೆ (ನಿ. ೩-೧೩-೫). ಆದುದರಿಂದ ಬ್ರಧ್ನಂ ಎಂಬ ಶಬ್ದವನ್ನು ಇಂದ್ರನಿಗೆ ವಿಶೇಷಣಪದವೆಂದು ಭಾವಿಸಿದಲ್ಲಿ **ಬ್ರಧ್ನಮಿಂದ್ರಂ** ಎಂದರೆ ದೊಡ್ಡವನಾದ, ಮಹಾಸಾಮರ್ಥ್ಯಶಾಲಿಯಾದ ಇಂದ್ರನನ್ನು ಎಂದರ್ಥವಾಗುವುದು. **ಅರುಷಂ** ಎಂಬ ಶಬ್ದವೂ ಇಂದ್ರನಿಗೆ ವಿಶೇಷಣವು. ರುಶತಿಧಾತುವಿಗೆ ದೀಪ್ತಿ ಕಾಂತಿ ಎಂದರ್ಥವಿರುವುದರಿಂದ ಅರುಷಂ ಎಂದರೆ ಪ್ರಕಾಶಮಾನನಾದ ಎಂದರ್ಥವು. **ರುಶದ್ವತ್ಸಾ ರುಶತೀಶ್ವೇತ್ಯಾಗಾದಾರೈಗು ಕೃಷ್ಣಾ ಸದನಾನ್ಯಸ್ಯಾಃ** (ಋ ಸಂ. ೧-೧೧೩-೨) ಎಂಬ ಋಕ್ಕಿನಲ್ಲಿ ರುಶತ್ ಶಬ್ದಕ್ಕೆ ದೀಪ್ತಿ ಕಾಂತಿ ಎಂದು ಸ್ಪಷ್ಟವಾಗಿ ಹೇಳಿದೆ (ಈ ಋಕ್ಕಿನಲ್ಲಿರುವ ರುಶತ್ ಶಬ್ದಕ್ಕೆ ಸಾಯಣರೂ ಇದೇ ಅರ್ಥಮಾಡಿದ್ದಾರೆ). ಇದಲ್ಲದೆ **ಆರುಷತ್ಯಾಯುತೀತಿ ಗತಿಕರ್ಮಸು ಪಾಠಾದರುಷತೇರ್ಗತ್ಯರ್ಥಸ್ಯಾರುಷಶಬ್ದೋ ಗಂತೃವಚನಃ** ಎಂಬ ವಾಕ್ಯಾನುಸಾರ ಅರುಷತಿಧಾತುವಿಗೆ ಗತ್ಯರ್ಥವಿರುವುದರಿಂದ **ಅರುಷಂ** ಎಂದರೆ **ಗಂತಾರಂ,** (ಶತ್ರುಗಳೊಡನೆ ಯುದ್ಧಕ್ಕಾಗಲಿ, ಯಜ್ಞಗಳಲ್ಲಿ ಹವಿಸ್ಸನ್ನು ಸ್ವೀಕರಿಸುವುದಕ್ಕಾಗಲಿ) ಹೋಗುವವನೆಂದರ್ಥವು. **ಚರಂತಂ**—ಸಮಸ್ತಪ್ರದೇಶಗಳಿಗೂ ಹೋಗುವವನು. ಇಂದ್ರನು ಎಲ್ಲೆಲ್ಲಿಗೆ ಹೋಗುವನೋ ಅಲ್ಲೆಲ್ಲಾ ಇಂದ್ರನನ್ನು ಸ್ತೋತ್ರಮಾಡುವವರು ಹೋಗಿ ಆರಾಧಿಸುವರೆಂದರ್ಥವು. ಅಥವಾ **ಯುಂಜಂತಿ ಬ್ರಧ್ನಮರುಷಂ ಚರಂತಂ** ಎಂದರೆ ಮಹಾಸಾಮರ್ಥ್ಯಶಾಲಿಯೂ ಪ್ರಕಾಶಮಾನನೂ ಆದ ಇಂದ್ರನು ಎಲ್ಲೆಲ್ಲಿ ಹೋಗುವನೋ ಅಲ್ಲೆಲ್ಲಾ ಮನುಷ್ಯರು ತಮತಮಗೆ ಇಂತಿತಹ ಅಭೀಷ್ಟಸಿದ್ಧಿಯಾಗಬೇಕೆಂದು ಇಂದ್ರನನ್ನು ಸ್ತೋತ್ರಗಳಿಂದ ಪ್ರಾರ್ಥಿಸುವರು ಎಂದಭಿಪ್ರಾಯವು

ಅಥವಾ **ಬ್ರಧ್ನಮರುಷಂ ಚರಂತಂ** ಎಂಬ ಶಬ್ದಗಳನ್ನು ಇಂದ್ರನಿಗೆ ವಿಶೇಷಣವಾಗಿ ಉಪಯೋಗಿಸಬೇಕಾಗಿಲ್ಲ ಈ ಶಬ್ದಗಳಿಗೆ ದೊಡ್ಡದೂ ಪ್ರಕಾಶಮಾನವಾದುದೂ ಎಲ್ಲೆಲ್ಲಿಯೂ ಸಂಚರಿಸುವ ಶಕ್ತಿಯುಳ್ಳದ್ದೂ ಆದ ರಥವೆಂದು ಅರ್ಥವನ್ನು ಹೇಳಬಹುದು ಇಲ್ಲಿ **ಯುಂಜಂತಿ** ಎಂದು ಹೇಳಿರುವುದರಿಂದ ಮಾತಲಿಯೇ ಮೊದಲಾದ ಇಂದ್ರನ ಸಾರಥಿಗಳು ಇಂತಹ ರಥವನ್ನು **ಯುಂಜಂತಿ** ಎಂದರೆ (ಕುದುರೆಗಳನ್ನು ಕಟ್ಟಿ) ಸಿದ್ಧಪಡಿಸುವರು ಎಂದು ಹೇಳಬಹುದು. ಆದುದರಿಂದ ಈ ವಿಷಯವಿಮರ್ಶನೆಗಳೆಲ್ಲವೂ ಇಂದ್ರನ ಸ್ತುತಿರೂಪವಾಗಿರುವುವು. **ತಸ್ಥುಷಃ** ಎಂದು ಷಷ್ಠೀವಿಭಕ್ತಿಯನ್ನು ಉಪಯೋಗಿಸಿರುವುದರಿಂದ ಇದರ ಮುಂದೆ **ಪ್ರಭಾವೇನ** ಎಂಬ ಶಬ್ದವನ್ನು ಅಧ್ಯಾಹಾರಮಾಡಿಕೊಳ್ಳಬೇಕು ಹಾಗೆ ಅಧ್ಯಾಹಾರಮಾಡಿಕೊಂಡಲ್ಲಿ **ಪರಿ ತಸ್ಥುಷಃ ಪ್ರಭಾವೇನ ರೋಚಂತೇ ರೋಚನಾ ದಿವಿ** ಎಂದರೆ ಅಂತರಿಕ್ಷದಲ್ಲಿ ಪ್ರಕಾಶಮಾನವಾಗಿ ಬೆಳಗುತ್ತಿರುವ ಸೂರ್ಯನ ರಶ್ಮಿಗಳು ವರ್ಷಾಕಾಲದಲ್ಲಿ ನೀರಿನ ಕಣಗಳನ್ನು ಹೊತ್ತು ಭೂಮಿಯಲ್ಲಿ ವೃಷ್ಟಿಯನ್ನುಂಟುಮಾಡುವಂತೆ ಇಂದ್ರನನ್ನು ಪ್ರೇರಿಸುವುವು ಎಂದು. ಎಂದರೆ ಸರ್ವಪ್ರದೇಶಗಳಲ್ಲಿಯೂ ವ್ಯಾಪಕನಾದ ಇಂದ್ರನ ಪ್ರಭಾವದಿಂದ **ರೋಚನಾ**-ಪ್ರಕಾಶದಿಂದ ಬೆಳಗುವ ನಕ್ಷತ್ರಗಳು **ದಿವಿ**-ಅಂತರಿಕ್ಷದಲ್ಲಿ **ರೋಚಂತೆ**-ಪ್ರಕಾಶಿಸುತ್ತವೆ ಎಂದು ಅರ್ಥವು. ಇಂದ್ರನ ಪ್ರಭಾವದಿಂದ ನಕ್ಷತ್ರಗಳು ಹೇಗೆ ಪ್ರಕಾಶಿಸುವವು ಎಂದರೆ—**ಇಂದ್ರೋ ದೀರ್ಘಾಯ ಚಕ್ಷಸ ಆ ಸೂರ್ಯಂ ರೋಹಯದ್ದಿವಿ** (ಋ. ಸಂ. ೧-೭-೩) ಮಂತ್ರವು ಈ ಅರ್ಥವನ್ನು ಸಮರ್ಥಿಸುವುದು. ಇಂದ್ರನು ಸರ್ವಕಾಲದಲ್ಲಿಯೂ ಜಗತ್ತನ್ನು ಬೆಳಗುವುದಕ್ಕಾಗಿ ಸೂರ್ಯನನ್ನು ಸ್ವರ್ಗದಲ್ಲಿ (ಅಂತರಿಕ್ಷದಲ್ಲಿ) ಸ್ಥಾಪಿಸಿದನು ಎಂದು ಇದರ ಅರ್ಥವು. ಸೂರ್ಯನ ಪ್ರಭಾವವಾದ ಸುಷುಮ್ನ ಎಂಬ ರಶ್ಮಿಸಂಬಂಧದಿಂದ ಚಂದ್ರನೂ ನಕ್ಷತ್ರ

ಗಳೂ ಪ್ರಕಾಶಿಸುವುವು ಅಥವಾ ಈ ರಶ್ಮಿಗಳು ವೃಷ್ಟಿಕರ್ಮದಲ್ಲಿ ಇಂದ್ರನನ್ನು **ಯುಂಜಂತಿ** ಎಂದರೆ ಉತ್ಸಾಹ ಗೊಳಿಸುವವು. ಹೇಗೆ? **ಚರಂತಂ ಪರಿ ತಸ್ಥುಷಃ** ಎಂದರೆ **ತಸ್ಥುಷಃ** ಎಂಬ ಶಬ್ದವು ಸ್ಥಾವರವನ್ನು ಸೂಚಿಸುವ ದಲ್ಲದೆ ಜಂಗಮವಸ್ತುಗಳ ನಿರ್ದೇಶವನ್ನೂ ಸೂಚಿಸುವುದು. ಆದುದರಿಂದ ಸೋಮಪಾನಾರ್ಥವಾಗಿ ಅಥವಾ ಯುದ್ಧವಮಾಡುವುದಕ್ಕಾಗಿ ಇಂದ್ರನು ಸ್ಥಾವರಜಂಗಮಾತ್ಮಕವಾದ ಸಕಲ ಜಗತ್ತನ್ನೂ ಸಂಚರಿಸುವನೆಂದರ್ಥವು.

ಯಜ್ಞದಲ್ಲಿ ಮುಖ್ಯಪಾತ್ರವಹಿಸುವ ಅಧ್ವರ್ಯು ಮೊದಲಾದ ಕೆಲವು ಋತ್ವಿಜರು ಈ ಕಾರಣಗಳಿಗಾಗಿ ಈ ಋಕ್ಕನ್ನು ಆದಿತ್ಯದೇವತಾಕವೆಂದು ತಿಳಿಯುವರು. ಏಕೆಂದರೆ ಈ ಋಕ್ಕಿನ ವಿನಿಯೋಗ ವಿಷಯದಲ್ಲಿ ಶ್ರುತಿ ವಾಕ್ಯವು (ಬ್ರಾಹ್ಮಣವು)—**ಯುಂಜಂತಿ ಬ್ರಧ್ನಮರುಷಮಿತ್ಯಾಹ । ಅಸೌ ವಾ ಆದಿತ್ಯೋ ಬ್ರಧ್ನಃ। ಅರುಷೋಽಮುಮೇವಾಸ್ಮಾದಾದಿತ್ಯಂ ಯುನಕ್ತಿ ಸುವರ್ಗಸ್ಯ ಲೋಕಸ್ಯ ಸಮಷ್ಟ್ಯೈ** ಎಂದು ಹೇಳುವುದು. ಇಲ್ಲಿ ಬ್ರಧ್ನವೆಂದರೆ ಆದಿತ್ಯನೆಂದು ಸ್ಪಷ್ಟವಾಗಿ ಹೇಳಿರುವುದರಿಂದಲೂ ಈ ಋಕ್ಕಿನಲ್ಲಿ ಇಂದ್ರಶಬ್ದವು ಇಲ್ಲದಿರುವುದ ರಿಂದಲೂ ಇದನ್ನು ಆದಿತ್ಯದೇವತೆಯ ಪರವಾದ ಋಕ್ಕೆಂದು ಹೇಳುವವಿಚಾರದಲ್ಲಿ ಸಂಶಯವುಂಟಾಗುವದು ಸಹಜವೇ ಆಗಿದೆ. ಆದರೆ ಅದು ಸರಿಯಲ್ಲ. ಏಕಂದರೆ ಬ್ರಧ್ನವೆಂದರೆ ಅಶ್ವವೆಂದೂ ಅರ್ಥವಾಗುವುದು (ನಿ ೨-೨೭). ಆದುದರಿಂದ **ಯುಂಜಂತಿ ಬ್ರಧ್ನಮರುಷಂ ಚರಂತಂ** ಎಂಬ ವಾಕ್ಯಕ್ಕೆ ಪ್ರಕಾಶಮಾನ ವಾಗಿಯೂ, ವೇಗವಾಗಿ ಚಲಿಸುವುದೂ ಆದ ಕುದುರೆಯನ್ನು (ರಥಕ್ಕೆ) ಕಟ್ಟುವರು ಎಂದರ್ಥ ಹೇಳುವಾಗ ಈ ಅರ್ಥವು ಆದಿತ್ಯನಿಗೂ ಇಂದ್ರನಿಗೂ ಸಮವಾಗಿಯೇ ಅನ್ವಯಿಸುವುದು. ಸೂರ್ಯನನ್ನು ಮಾತ್ರವೇ ಉದ್ದೇಶಿಸಿ ಹೇಳಿರುವುದೆಂದು ಹೇಳುವುದಕ್ಕಾಗುವುದಿಲ್ಲ. ಇದಲ್ಲದೆ ಈ ಸೂಕ್ತದ ಮುಂದಿನ ಋಕ್ಕಿನಲ್ಲಿ **ಹರೀ** ಎಂಬ ಇಂದ್ರನ ಅಶ್ವಗಳ ಹೆಸರನ್ನು ಸ್ಪಷ್ಟವಾಗಿ ಸೂಚಿಸಿರುವುದರಿಂದಲೂ ಐದನೆಯ ಋಕ್ಕಿನಲ್ಲಿ ಇಂದ್ರಶಬ್ದವು ಪಠಿತ ವಾಗಿರುವುದರಿಂದಲೂ ಈ ಮಂತ್ರವು ಇಂದ್ರದೇವತಾಕವೆಂದೇ ತಿಳಿಯಬೇಕು

ಇನ್ನು ವೆಂಕಟಮಾಧವರ ಭಾಷ್ಯದಲ್ಲಿ ಹೆಚ್ಚು ವಿಶೇಷವೇನೂ ಇಲ್ಲ—**ಯುಂಜಂತಿ ಬ್ರಧ್ನಂ । ಯುಂಜಂತಿ ಮಹಾಂತಮಾರೋಚಮಾನಂ ದಿವಿ ಚರಂತಂ ತಸ್ಥಿವಾಂಸೋ ದೇವಾ ವಾ ಲೋಕಾ ವಾ ರೋಚಂತೇ । ರೋಚನಾನಿ ನಕ್ಷತ್ರಾಣಿ ಇಂದ್ರತೇಜಸಾ ಸಂಧುಕ್ಷಿತಾನ್ಯಹತ್ಸ್ವೇಽಪಿ ಪ್ರಸಾರಣಮನ್ಯತ್ರಾಪಿ ದೃಷ್ಟಂ ॥** ಎಂದು ಮಾತ್ರ ಹೇಳಿರುವರು. ಎಂದರೆ ಹಿಂದೆ ಸ್ಕಂದಸ್ವಾಮಿಯ ಅರ್ಥವನ್ನೇ ಅನುಮೋದಿಸಿರು ವರು. **ತಸ್ಥಿವಾಂಸಃ** ಎಂದರೆ ದೇವತೆಗಳು ಅಥವಾ ಲೋಕಗಳೂ ಎಂದೂ, **ರೋಚನಾ** ಎಂದರೆ ನಕ್ಷತ್ರಗಳೂ ಎಂದೂ ಹೇಳಿರುವರು. ಇಂದ್ರನ ತೇಜಸ್ಸಿನಿಂದ ಹಗಲು ಪ್ರಕಾಶಿಸುವುದಲ್ಲದೆ ಆ ತೇಜಸ್ಸು (ಅಥವಾ ಸಾಮರ್ಥ್ಯವು, ಶಕ್ತಿಯು) ಸರ್ವತ್ರ ವ್ಯಾಪಿಸಿರುವುದೆಂದು ಹೇಳಿರುವರು.

**ಯುಂಜಂತಿ ಬ್ರಧ್ನಮರುಷಂ** ಎಂಬ ಪ್ರಸಕ್ತವಾದ ಋಕ್ಕು ಋಗ್ವೇದಸಂಹಿತೆಯಲ್ಲಿರುವುದಲ್ಲದೆ ಸಾಮ. ಸಂ. ೧೪೬೮, ಅಥರ್ವ. ಸಂ. ೨೦-೨೬-೪, ೨೦-೪೭-೧೦; ೨೦-೬೯-೯; ವಾಜಸನೇಯ ಸಂ. (ಶು. ಯಜುರ್ವೇದ) ೨೩-೫; ತೈ.ಸಂ (ಕೃಷ್ಣಯಜುರ್ವೇದ ಸಂ.) ೭-೪-೨೦-೧; ಮೈತ್ರಾಯಣೀಯ ಸಂ ೩-೧೬-೩, ಕೌಶೀತಕಿ ಆರಣ್ಯಕ ೪-೯; ಇವುಗಳಲ್ಲಿ ಪಠಿತವಾಗಿರುವುದು ಮತ್ತು ತೈ ಬ್ರಾ. ೩-೯-೪ ರಲ್ಲಿ ಈ ಮಂತ್ರದ ಮತ್ತು ಮುಂದಿನ ಎರಡು ಮಂತ್ರಗಳ ಅರ್ಥವಿವರಣೆಯೂ ಇರುವುದು.

ಈ ಸೂಕ್ತವು ಯಾವ ದೇವತಾಪರವಾದುದು ಎಂಬುದು ವಿವಾದಾಸ್ಪದವಾಗಿದೆ. ಏಕೆಂದರೆ ಇಂತಹ ದೇವತೆಯನ್ನೇ ಉದ್ದೇಶಿಸಿ ಹೇಳಿರುವುದೆಂದು ದೃಢಪಟ್ಟಲ್ಲಿ ಅರ್ಥವಿವರಣೆಮಾಡಲು ಅನುಕೂಲವಾಗುವುದು.

ಅನುಕ್ರಮಣಿಕೆಯಲ್ಲಿ ಈ ಸೂಕ್ತದ ೧-೩, ಮತ್ತು ೧೦ನೆಯ ಋಕ್ಕುಗಳು ಇಂದ್ರದೇವತಾಕವೆಂದೂ ೪, ೬, ೮, ೯ ನೆಯ ಋಕ್ಕುಗಳು ಮರುದ್ದೇವತಾಪರವೆಂದೂ ಹೇಳಿದೆ. ಮತ್ತು ೫ ಮತ್ತು ೭ನೆಯ ಋಕ್ಕುಗಳು ಇಂದ್ರ ಮತ್ತು ಮರುತ್ತು ಎಂಬ ಎರಡು ದೇವತೆಗಳ ಪರವಾಗಿಯೂ ಇವೆಯೆಂದೂ ಅಲ್ಲಿಯೇ ಹೇಳಿದೆ. ಆದರೆ ಸೂಕ್ತದಲ್ಲಿ ಪ್ರತಿಪಾದಿತವಾದ ವಿಷಯಗಳನ್ನು ವಿಮರ್ಶೆಮಾಡಿದಲ್ಲಿ ಮರುದ್ದೇವತೆಗಳಿಗೆ ಬದಲಾಗಿ ಅಂಗಿರಸರು ಪ್ರತಿಪಾದಿತರಾಗಿರುವರೆಂದೂ, ಇಂದ್ರನಿಗೆ ಅಂಗಿರಸ್ತಮ ಎಂಬ ಹೆಸರೂ ಇರುವುದರಿಂದಲೂ ಈ ಸೂಕ್ತದಲ್ಲಿ ಮರುದ್ದೇವತೆಗಳ ವಿಷಯವಿಲ್ಲವೆಂದು Oldenberg ಎಂಬ ಪಂಡಿತನು ಅಭಿಪ್ರಾಯಪಡುವನು. ಇದಲ್ಲದೆ ಈ ಸೂಕ್ತದ ಬಹುಭಾಗವು ಸೂರ್ಯನನ್ನುದ್ದೇಶಿಸಿ ಸ್ತುತಿಸಲ್ಪಟ್ಟಿರುವುದೆಂದು ಹೇಳುವುದಕ್ಕೂ ಸಾಕಾದಷ್ಟು ಅವಕಾಶವಿದೆ. ಪ್ರಾಚೀನ ಪಂಡಿತರಲ್ಲಿಯೂ ಕೂಡ ಈ ಸೂಕ್ತದಲ್ಲಿ ಪ್ರತಿಪಾದಿತರಾದ ದೇವತೆಗಳ ವಿಚಾರದಲ್ಲಿ ಭಿನ್ನಾಭಿಪ್ರಾಯವಿದ್ದಿತು.

ಈ ಸೂಕ್ತವು ನಿರ್ದಿಷ್ಟವಾದ ಯಾವ ಯಜ್ಞಯಾಗಾದಿಕರ್ಮಗಳನ್ನೂ ಪ್ರತಿಪಾದಿಸುವುದಿಲ್ಲ ಆದುದರಿಂದ ಈ ಸೂಕ್ತದಲ್ಲಿ ತೋರಿಬರುವ ಮುಖ್ಯಾಭಿಪ್ರಾಯವನ್ನು ಡಾ॥ ಸೀತಾನಾಥ ಪ್ರಧಾನ್ ಎಂಬುವರ ಈ ರೀತಿ ಹೇಳಿರುವರು—

It is the twilight of the early dawn; the stars are still shining. The singers yoke the sun-horse and at the same time Indra's two horses; It is the same sun who was born (at the time after the bursting open of the rock with the dawns. The patriarchs, Angirases have since regularised the sun-rise and sun-set; they who had then found out the concealed cows with the help of Indra and had then invoked Indra may the sun now appear with Indra! Indra joins in the song of the host of the devout singers. Thence come hither o wanderer, or from the bright realm of heaven. For him do our eulogies combinedly strive. We pray to Indra, for reward from here or from heaven, from the earthy or from the aerial region.

ಮಾಕ್ಸ್‌ಮುಲ್ಲರ್ ಪಂಡಿತನು ಈ ಋಕ್ಕಿನ ಅರ್ಥವನ್ನು ಹೀಗೆ ಹೇಳಿರುವನು—

Those who stand around him while he moves on, harness the bright red (steed); the lights in heaven shine forth. ಈ ಭಾಷಾಂತರವು ಮೂಲವನ್ನು ಸ್ವಲ್ಪವೂ ಬಿಡದೆ ಅನುಸರಿಸಿರುವುದು.

ಇದರಂತೆ ಕನ್ನಡದಲ್ಲಿ ಪ್ರತಿಪದಾರ್ಥವನ್ನೂ ಭಾವಾರ್ಥವನ್ನೂ ವಿವರಿಸುವೆವು—

॥ ಪ್ರತಿಪದಾರ್ಥ ॥

**ಪರಿ ತಸ್ಥುಷಃ**— ಸುತ್ತಲೂ ಇರುವ ಜನರು । **ಅರುಷಂ**— ಪ್ರಕಾಶಮಾನವಾದ (spirited) । **ಚರಂತಂ**— ವೇಗವಾದ ಗಮನವುಳ್ಳ । **ಬ್ರಧ್ನಂ**— ಕುದುರೆಯನ್ನು । **ಯುಂಜಂತಿ**— (ರಥಕ್ಕೆ) ಹೂಡುವರು । (ಆ ಕಾಲದಲ್ಲಿ) **ರೋಚನಾ**— ನಕ್ಷತ್ರಗಳು ಅಥವಾ ಸೂರ್ಯನ ರಶ್ಮಿಗಳು । **ದಿವಿ**— ಅಂತರಿಕ್ಷದಲ್ಲಿ । **ರೋಚಂತೇ** — ಬೆಳಗುತ್ತಿರುವವು.

॥ ಭಾವಾರ್ಥ ॥

ಸೂರ್ಯನು ಈಗತಾನೆ ಉದಯಿಸಿರುವುದರಿಂದ ರಶ್ಮಿಗಳು ಅಂತರಿಕ್ಷವನ್ನೆಲ್ಲಾ ವ್ಯಾಪಿಸಿ ಪ್ರಕಾಶಿಸುತ್ತಿರುವವು. ಈ ಸಮಯದಲ್ಲಿ ಸುತ್ತಲೂ ಇರುವ ಜನರು ಪ್ರಕಾಶಿಸುತ್ತಿರುವ ಎಂದರೆ ಪುಷ್ಟಿಯುಕ್ತವಾದ ಮತ್ತು ಚಲಿಸಲು ಹಾತೊರೆಯುತ್ತಿರುವ ಕುದುರೆಯನ್ನು (ರಥಕ್ಕೆ) ಹೂಡುವರು. ಈಗ ತಾನೆ ಬೆಳಕು ಹರಿಯುತ್ತಿರುವುದರಿಂದ ನಕ್ಷತ್ರಗಳು ಇನ್ನೂ ಪ್ರಕಾಶಿಸುತ್ತಿರುವುವು.

ಇಲ್ಲಿ ರಥವೆಂದರೆ ಸೂರ್ಯನ ರಥವೋ ಅಥವಾ ಇಂದ್ರನ ರಥವೋ ಎಂಬ ಸಂಶಯವು ತಲೆದೋರುವುದು. ಇಂದ್ರನ ರಥವಾದರೆ ಎರಡು ಕುದುರೆಗಳಿಂದಿರಬೇಕು. ಸೂರ್ಯನ ರಥವಾದರೆ ಏಳು ಕುದುರೆಗಳಿರಬೇಕು. ಆದರೆ **ಏಕೋ ಅಶ್ವೋ ವಹತಿ ಸಪ್ತನಾಮಾ** (ಋ. ಸೂ ೧-೧೬೪-೨) ಎಂದು ಹೇಳಿರುವುದರಿಂದ ಒಂದು ಕುದುರೆಯೆಂದರೂ ಸರಿಹೋಗುವುದು. ಆದರೆ ಎರಡನೆಯ ಋಕ್ಕಿನಲ್ಲಿ ಹರೀ ಎಂದು ಇಂದ್ರನ ಎರಡು ಅಶ್ವಗಳ ಹೆಸರು ನಿರ್ದಿಷ್ಟವಾಗಿರುತ್ತೆ. ಈ ಕಾರಣಗಳಿಂದ ಅನುಕ್ರಮಣಿಕೆಯಲ್ಲಿ ಹೇಳಿರುವುದನ್ನೇ ಪ್ರಮಾಣವೆಂದು ನಂಬಬೇಕಾಗಿರುವುದು

ಇನ್ನು ೪, ೬, ೮ ಮತ್ತು ೯ ನೆಯ ಋಕ್ಕುಗಳಲ್ಲಿ ಮರುದ್ದೇವತೆಗಳನ್ನು ಪ್ರತಿಪಾದನೆಮಾಡಿರುವ ವಿಚಾರವನ್ನು ವಿಮರ್ಶೆಮಾಡೋಣ— **ವೀಳು ಚಿದಾರುಜತ್ನುಭಿರ್ಗುಹಾ ಚಿದಿಂದ್ರ ವಹ್ನಿಭಿಃ । ಅವಿಂದ ಉಸ್ರಿಯಾ ಅನು** ಎಂಬ ಐದನೆಯ ಋಕ್ಕಿನಲ್ಲಿ ಪಣಿ ಎಂಬ ಅಸುರರು ದೇವಲೋಕದಿಂದ ಗೋವುಗಳನ್ನು ಅಪಹರಿಸಿ ಯಾರಿಗೂ ತಿಳಿಯದ ದುರ್ಗಮವಾದ ಗುಹೆಯೊಂದರಲ್ಲಿ ಬಚ್ಚಿಟ್ಟಿದ್ದರು. ಅದನ್ನು ಇಂದ್ರನು ದುರ್ಗವನ್ನು ನಾಶಪಡಿಸುವುದರಲ್ಲಿ ಸಮರ್ಥರಾದವರ (ಮರುತ್ತುಗಳ ಅಥವಾ ಅಂಗಿರಸರ) ಸಹಾಯದಿಂದ ಹುಡುಕಿ ಹಿಂದಕ್ಕೆ ತಂದನು ಎಂದು ಹೇಳಿದೆ. ಇಲ್ಲಿ ಸಮರ್ಥರಾದವರೆಂದರೆ ಸಾಯಣ, ಸ್ಕಂದಸ್ವಾಮಿ, ವೆಂಕಟಮಾಧವ ಮೊದಲಾದ ಪ್ರಾಚೀನ ಭಾಷ್ಯಕಾರರು ಮರುದ್ಭಿಃ ಎಂದು ಹೇಳಿರುವರು. ಆದರೆ Max Muller, Macdonell ಮುಂತಾದ ಪಾಶ್ಚಾತ್ಯ ಆಧುನಿಕ ಪಂಡಿತರು—ಆರುಜತ್ನುಭಿಃ ಎಂಬ ಶಬ್ದವು ಅಂಗಿರಸರಿಗೆ ಅನ್ವಯಿಸುವುದೆಂದು ಅಭಿಪ್ರಾಯಪಡುವರು ಏಕೆಂದರೆ

**ವೀಳು ಚಿದ್ದೃಳ್ಹಾ ಪಿತರೋ ನ ಉಕ್ಥೈರದ್ರಿಂ ರುಜನ್ನಂಗಿರಸೋ ರವೇಣ ।**
**ಚಕ್ರುರ್ದಿವೋ ಬೃಹತೋ ಗಾತುಮಸ್ಮೇ ಅಹಃ ಸ್ವರ್ವಿವಿದುಃ ಕೇತುಮುಸ್ರಾಃ ॥**

(ಋ. ಸಂ. ೧-೭೧-೨)

ಎಂಬ ಋಕ್ಕಿನಲ್ಲಿಯೂ ಇತರ ಕೆಲವು ಕಡೆಗಳಲ್ಲಿಯೂ ಪಣಿಯೆಂಬ ದೈತ್ಯನನ್ನು ನಿಗ್ರಹಿಸಲು ಅಂಗಿರಸರು ಇಂದ್ರನಿಗೆ ಸಹಾಯಮಾಡಿದರೆಂದು ಹೇಳಿರುವುದರಿಂದ ಪ್ರಸಕ್ತವಾದ ಈ ಸೂಕ್ತದ ಋಕ್ಕುಗಳನ್ನು ಅಂಗಿರಸರನ್ನೇ ಉದ್ದೇಶಿಸಿ ಹೇಳಲಾಗಿದೆಯೆಂದು ಅಭಿಪ್ರಾಯಪಡುವರು. ಇದಲ್ಲದೆ ಈ ಸೂಕ್ತದಲ್ಲಿರುವ ಮರುತ್ಸಂಬಂಧವಾದ ಋಕ್ಕುಗಳೆಲ್ಲಕ್ಕೂ ಅಂಗಿರಸ ಪರವಾಗಿ ಅರ್ಥವೇ ಸಮಂಜಸವಾಗಿ ಕಾಣುವುದೆಂದು Oldenberg ಎಂಬ ಜರ್ಮನ್‌ಪಂಡಿತನ ಅಭಿಮತವು. ಅಂತೂ ಈ ವಿಷಯವು ವಿವಾದಾಸ್ಪದವಾಗಿದೆಯೆಂದು ಹೇಳಬೇಕಾಗಿದೆ.

|| ವ್ಯಾಕರಣಪ್ರಕ್ರಿಯಾ ||

**ಯುಞ್ಜನ್ತಿ**— ಯುಜಿರ್ ಯೋಗೇ ಎಂಬ ಧಾತುವಿನ ಮುಂದೆ ಲಟ್ ಪ್ರಥಮಪುರುಷ ಬಹುವಚನ ವನ್ನಿಟ್ಟರೆ ಇದುರುಧಾದಿ ಧಾತುವಾದ್ದರಿಂದ ಶಪ್ ವಿಕರಣಕ್ಕೆ ಅಪವಾದವಾಗಿ **ರುಧಾದಿಭ್ಯಃಶ್ನಮ್** (ಪಾ ಸೂ. ೩-೧-೭೮) ಎಂಬುದರಿಂದ ಶ್ನಮ್ ವಿಕರಣ ಬರುವುದು. ಶ್ನಮ್ ಮಿತ್ತಾದ್ದರಿಂದ **ಮಿದಚೋಽಂತ್ಯಾತ್ಪರಃ** (ಪಾ. ಸೂ. ೧-೧-೪೭) ಮಕಾರೇತ್ಸಂಜ್ಞಕವಾದ ಆಗಮವು ಕಡೆಯ ಅಜ್ವರ್ಣದ ಮುಂದೆ ಬರುವುದು ಎಂಬುದ ರಿಂದ ಯು ವಿನ ಮುಂದೆ ನ ಬರುವುದು. ಯುನಜ್+ಝಿ. **ಝೋಽಂತಃ** (ಪಾ ಸೂ. ೭-೧-೩) ಎಂಬುದರಿಂದ ಅನ್ತಾದೇಶ. **ಶ್ನಸೋರಲ್ಲೋಪಃ** (ಪಾ.ಸೂ. ೬-೪ ೧೧೧) ಕಿತ್ತು ಅಥವಾ ಙಿತ್ತು ಆದ ಸಾರ್ವಧಾತುಕ ಪ್ರತ್ಯಯ ಪರದಲ್ಲಿರುವಾಗ ಶ್ನಮ್ ಪ್ರತ್ಯಯ ಅಸ್ ಧಾತು ಇವುಗಳ ಅಕಾರಕ್ಕೆ ಲೋಪ ಬರುವುದು. ಎಂಬುದರಿಂದ ಅಕಾರಕ್ಕೆ ಲೋಪ. ಯುನಜ್+ಅನ್ತಿ. ಈಗ **ನಶ್ಚಾಪದಾಂತಸ್ಯಝಲಿ** (ಪಾ. ಸೂ. ೮-೩-೨೪) ಝಲ್ ವರ್ಣ ಪರದಲ್ಲಿರು ವಾಗ ಪದಾಂತವಲ್ಲದ ನಕಾರ ಮಕಾರಗಳಿಗೆ ಅನುಸ್ವಾರ ಬರುವುದು ಎಂಬುದರಿಂದ ಅನುಸ್ವಾರವೂ **ಅನುಸ್ವಾ-ರಸ್ಯಯಯಿಪರಸವರ್ಣಃ** (ಪಾ. ಸೂ ೮-೪-೫೮) ಯಯ್ ವರ್ಣ ಪರದಲ್ಲಿರುವಾಗ ಅನುಸ್ವಾರಕ್ಕೆ ಪರಸವರ್ಣ ಬರುವುದು ಎಂಬುದರಿಂದ ಪರಸವರ್ಣವೂ ಬರುವುದು. ಯುಞ್ಜನ್ತಿ ಎಂದಾಗುವುದು. **ನಪದಾಂತದ್ವಿರ್ವಚನ ವರೇಯಲೋಪ ಸ್ವರಸವರ್ಣಾನುಸ್ವಾರದೀರ್ಘಜಶ್ಚರ್ವಿಧಿಷು** (ಪಾ. ಸೂ. ೧-೧-೫೮) ಈ ಕಾರ್ಯಗಳನ್ನು ಮಾಡುವಾಗ ಸ್ಥಾನಿವದ್ಭಾವ ಬರುವುದಿಲ್ಲ ಎಂದು ಸ್ಥಾನಿವದ್ಭಾವಕ್ಕೆ ನಿಷೇಧವಿರುವುದರಿಂದ ಅನುಸ್ವಾರ ಪರಸವರ್ಣ ಗಳನ್ನು ಮಾಡುವಾಗ ಶ್ನಸೋರಲ್ಲೋಪಃ ಎಂಬುದರಿಂದ ಬಂದ ಅಲೋಪಕ್ಕೆ **ಅಚಃ ಪರಸ್ಮಿನ್ಪೂರ್ವವಿಧೌ** (ಪಾ. ಸೂ. ೧-೧-೫೭) ಸ್ಥಾನಿಭೂತವಾದ ಸ್ವರಕ್ಕಿಂತಲೂ ಪೂರ್ವದಲ್ಲಿದೃಷ್ಟವಾದುದಕ್ಕೆ ಕಾರ್ಯವನ್ನು ಮಾಡುವಾಗ ಪರನಿಮಿತ್ತಕವಾಗಿ ಅಚ್‌ನ ಸ್ಥಾನದಲ್ಲಿ ಬಂದ ಆದೇಶವು ಸ್ಥಾನಿಯಲ್ಲಿರುವ ಧರ್ಮವನ್ನು ಹೊಂದುವುದು ಎಂಬುದ ರಿಂದ ಸ್ಥಾನಿವದ್ಭಾವ ಬರುವುದಿಲ್ಲ. ಆದ್ದರಿಂದ ಅನುಸ್ವಾರ ಪರಸವರ್ಣಗಳು ನಿರ್ವಿಘ್ನವಾಗಿ ಬರುವುವು. ಯುಞ್ಜನ್ತಿ ಎಂಬಲ್ಲಿರುವ ಅನ್ತಿ ಎಂಬುದು **ಆದ್ಯುದಾತ್ತಶ್ಚ** (ಪಾ ಸೂ. ೩-೧-೩) ಎಂಬುದರಿಂದ ಆದ್ಯುದಾತ್ತ.

**ಬ್ರಧ್ನಂ**— ಪ್ರಾತಿಪದಿಕಸ್ವರದಿಂದ ಅಂತೋದಾತ್ತ.

**ಅರುಷಂ**— ಉಷರುಷ ರಿಷ ಹಿಂಸಾರ್ಥಾಃ ಎಂಬ ರುಷಧಾತುವು ಇಗುಪಧವಾದ್ದರಿಂದ **ಇಗುಪಧ-ಜ್ಞಾಪ್ರೀಕಿರಃಕಃ** (ಪಾ. ಸೂ. ೩-೧-೧೩೫) ಉಪಾಂತ್ಯವರ್ಣವು ಇ, ಉ, ಋ, ಌ, ಆಗಿರುವ ಧಾತುಗಳ ಮತ್ತು ಜ್ಞಾ ಪ್ರೀ ಕ್ರಾ ಈ ಧಾತುಗಳ ಮುಂದೆಯೂ ಕ ಪ್ರತ್ಯಯ ಬರುವುದು ಎಂಬುದರಿಂದ ಕ ಪ್ರತ್ಯಯ. ಇದು ಪ್ರತ್ಯಯಸ್ವರದಿಂದ ಅಂತೋದಾತ್ತ. ರೋಷನ್ತೀತಿರುಷಾಃ ಹಿಂಸಕರು ಎಂದು ಅರ್ಥ. ನ ಸನ್ತಿ ರುಷಾಃ ಯಸ್ಯಾಸೌ ಎಂದು ಬಹುವ್ರೀಹಿಯನ್ನು ಮಾಡಿದಾಗ **ನಞ್ ಸುಭ್ಯಾಂ** (ಪಾ. ಸೂ. ೬-೨-೧೭-೨) ಎಂಬುದರಿಂದ ಉತ್ತರ ಪದವು ಅಂತೋದಾತ್ತ, ಅರುಷಶಬ್ದದ ಮುಂದೆ ದ್ವಿತೀಯಾ ಏಕವಚನ ಅಮ್ ಪ್ರತ್ಯಯವನ್ನಿಟ್ಟರೆ **ಅಮಿ-ಪೂರ್ವಃ** (ಪಾ. ಸೂ ೬-೧-೧೦೭) ಅ ಇ ಉ ಋ ಌ ಗಳಿಗೆ ಅಮ್ಮಿನ ಅ ಕಾರವು ಪರದಲ್ಲಿದ್ದರೆ ಪೂರ್ವಪರ ಸ್ಥಾನದಲ್ಲಿ ಪೂರ್ವರೂಪ ಬರುವುದು ಎಂಬುದರಿಂದ ಪೂರ್ವರೂಪ ಬಂದರೆ ಅರುಷಂ ಎಂದಾಗುವುದು. ಅಮ್ಮಿನ ಅಕಾರವು **ಅನುದಾತ್ತೌಸುಪ್ಪಿತೌ** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತ. ಏಕಾದೇಶವು **ಏಕಾದೇಶ-ಉದಾತ್ತೇನೋದಾತ್ತಃ** (ಪಾ ಸೂ ೮-೨೫) ಉದಾತ್ತದೊಂದಿಗೆ ಅನುದಾತ್ತಕ್ಕೆ ಬರುವ ಏಕಾದೇಶವು ಉದಾತ್ತ ವಾಗುವುದು ಎಂಬುದರಿಂದ ಉದಾತ್ತ.

**ಚರನ್ತಂ**—ಶಪ್ ವಿಕರಣವು ಪಿತ್ತಾದ್ದರಿಂದ ಅನುದಾತ್ತ. ಶತೃಪ್ರತ್ಯಯವು **ತಾಸ್ಯನುದಾತ್ತೇನ್ಙಿದ-ದುಪದೇಶಾತ್** (ಪಾ. ಸೂ. ೬-೧-೧೮೬) ಇತ್ಯಾದಿ ಸೂತ್ರದಿಂದ ಲಸ್ಥಾನಿಕಸಾರ್ವಧಾತುಕ ಸ್ವರವನ್ನು ಹೊಂದಿ ಅನುದಾತ್ತವಾಗುವುದು. ಚರ್ ಎಂಬಲ್ಲಿ ಧಾತುಸ್ವರ ಅಂತೋದಾತ್ತವೇ ನಿಲ್ಲುವುದು.

**ತಸ್ಥುಷಃ**—ಸ್ಥಾ (ಷ್ಠಾ ಗತಿನಿವೃತ್ತೌ) ಎಂಬ ಧಾತುವಿನ ಮುಂದೆ ಲಿಟ್ಟನ್ನಿಟ್ಟರೆ **ಕ್ವಸುಶ್ಚ** (ಪಾ ಸೂ. ೩-೨-೧೧೭) ಎಂಬುದರಿಂದ ಲಿಟ್ಟಿಗೆ ಕ್ವಸು ಆದೇಶ ಬರುವುದು. ಇದರಲ್ಲಿ ವಸ್ ಎಂಬುದು ನಿಲ್ಲುವುದು. **ಲಿಟಿ-ಧಾತೋರನಭ್ಯಾಸಸ್ಯ** (ಪಾ. ಸೂ. ೬-೧-೮) ಎಂಬುದರಿಂದ ದ್ವಿತ್ವ ಬರುವುದು. **ಶರ್ಪೂರ್ವಾಃ ಖಯಃ** (ಪಾ. ಸೂ. ೭-೪-೬೧) ಅಭ್ಯಾಸದಲ್ಲಿರುವ ಶರ್ ವರ್ಣದ ಮುಂದಿರುವ ಖಯ್‌ವರ್ಣವು ಉಳಿಯುವುದು (ಮಿಕ್ಕ ವ್ಯಂಜನಗಳಿಗೆ ಲೋಪ ಬರುವುದು) ಎಂಬುದರಿಂದ ಸಲೋಪ. **ಹ್ರಸ್ವಃ** (ಪಾ. ಸೂ. ೭-೪-೫೯) ಎಂಬುದರಿಂದ ಹ್ರಸ್ವ. **ಅಭ್ಯಾಸೇಚರ್ಚ** (ಪಾ. ಸೂ. ೮-೪-೫೪) ಚರ್ತ್ವ ಬಂದರೆ ತಸ್ಥಾ+**ವಸ್** ಇದರ ಮುಂದೆ ಶಸ್ ಪ್ರತ್ಯಯ ವನ್ನಿಟ್ಟರೆ ಭ ಸಂಜ್ಞೆ ಬರುವುದರಿಂದ ನಂತರ **ವಸೋಸ್ಸಂಪ್ರಸಾರಣಂ** (ಪಾ. ಸೂ. ೬-೪-೧೩೧) ಭ ಸಂಜ್ಞಕ ವಾದ ವಸುಪ್ರತ್ಯಯಾಂತಾಂಗಕ್ಕೆ ಸಂಪ್ರಸಾರಣ ಬರುವುದು ವೆಂಬುದರಿಂದ ಸಂಪ್ರಸಾರಣ (ವಕಾರಕ್ಕೆ ಉಕಾರ) **ವೂ ಸಂಪ್ರಸಾರಣಾಚ್ಚ** (ಪಾ. ಸೂ. ೬-೧-೧೦೮) ಎಂಬುದರಿಂದ **ಪೂರ್ವರೂಪವೂ** ಬರುವುದು. ಯದ್ಯಪಿ **ವಸ್ವೇಕಾಚಾದ್ಘಸಾಂ** (ಪಾ. ಸೂ. ೭-೨-೬೭) ದ್ವಿತ್ವ ಬಂದನಂತರ ಏಕಾಚ್ಕವಾದ ಧಾತು, ಆಕಾರಾಂತ ಧಾತು ಘ ಸ್ಲ್ ಧಾತು ಇವುಗಳ ಮುಂದಿರುವ ವಸು ಪ್ರತ್ಯಯಕ್ಕೆ ಇಡಾಗಮ ಬರುವುದು. ಬಾಕಿ ಧಾತುಗಳ ಮುಂದಿರುವ ವಸು ಪ್ರತ್ಯಯಕ್ಕೆ ಇಡಾಗಮ ಬರುವುದಿಲ್ಲ ಎಂಬುದರಿಂದ ವಿಹಿತವಾದ ಇಟ್ ಆಗಮವು ಅಂತರಂಗವಾದ್ದರಿಂದ ಮೊದಲೇ ಬರಬೇಕು. ಆದರೂ **ಸಂಪ್ರಸಾರಣಂ ತದಾಶ್ರಯಂ ಚ ಕಾರ್ಯಂ ಬಲವತ್** (ಪಾ.ವಾ. ೬-೧-೧೭-೨) ಎಂಬುದರಿಂದ ಮೊದಲು ಸಂಪ್ರಸಾರಣ ಪ್ರಯೋಜಕಕಾರ್ಯಗಳೂ ನಂತರ ಸಂಪ್ರಸಾರಣವೂ ಪೂರ್ವರೂಪವೂ ಬರುವುದು. ಆದೇಶ ಪ್ರತ್ಯಯಯೋಃ ಎಂಬುದರಿಂದ ಷತ್ವವೂ, ರುತ್ವವಿಸರ್ಗಗಳೂ ಬರುವುವು. ತಸ್ಥುಷಃ ಎಂದು ಆಗುವುದು. ವಸು ಪ್ರತ್ಯಯವು ಪ್ರತ್ಯಯಸ್ವರದಿಂದ ಉದಾತ್ತ.

**ರೋಚನ್ತೇ**—ತಙ್-ಲಸಾರ್ವಧಾತುಕ ಸ್ವರದಿಂದ ಅನುದಾತ್ತ. ಶಪ್ ಪಿತ್ತಾದ್ದರಿಂದ ಅನುದಾತ್ತ ಧಾತುಸ್ವರವೇ ನಿಲ್ಲುವುದು.

**ರೋಚನಾ—ಅನುದಾತ್ತೇತ್ಕಶ್ಚ ಹಲಾದೇಃ** (ಪಾ. ಸೂ. ೩-೨-೧೪೯) ಅನುದಾತ್ತೇತ್ಕವೂ ಅಕರ್ಮ ಕವೂ ಹಲಾದಿಯೂ ಆದ ಧಾತುವಿನ ಮುಂದೆ ಯುಚ್ ಪ್ರತ್ಯಯ ಬರುವುದು ಎಂಬುದರಿಂದ ರುಚ್ ಧಾತುವಿನ ಮುಂದೆ ಯುಚ್ ಪ್ರತ್ಯಯ ಬಂದರೆ **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಯುಗೆ ಅನ ಎಂಬ ಆದೇಶ ಬರುವುದು. ಲಘೂಪಧಗುಣ ಬರುತ್ತೆ. ಪ್ರತ್ಯಯವು ಚಿತ್ತಾದ್ದರಿಂದ **ಚಿತಃ** (ಪಾ.ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತ

ದಿವಿ **ಊಡಿದಂ ಪದಾದ್ಯಪ್ಪುಮ್ರೈದ್ಯುಭ್ಯಃ** (ಪಾ ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಯು ಉದಾತ್ತವಾಗುವುದು ॥ ೧ ॥

ಸಂಹಿತಾಪಾಠಃ

ಯುಂಜಂತ್ಯಸ್ಯ ಕಾಮ್ಯಾ ಹರೀ ವಿಪಕ್ಷಸಾ ರಥೇ ।
ಶೋಣಾ ಧೃಷ್ಣೂ ನೃವಾಹಸಾ ॥ ೨ ॥

ಪದಪಾಠಃ

ಯುಂಜಂತಿ । ಅಸ್ಯ । ಕಾಮ್ಯಾ । ಹರೀ ಇತಿ । ವಿऽಪಕ್ಷಸಾ । ರಥೇ ॥
ಶೋಣಾ । ಧೃಷ್ಣೂ ಇತಿ । ನೃऽವಾಹಸಾ ॥ ೨ ॥

॥ ಸಾಯಣಭಾಷ್ಯಂ ॥

ಅಸ್ಯ ಬ್ರಧ್ನಾದಿಶಬ್ದಪ್ರತಿಪಾದ್ಯಸ್ಯಾದಿತ್ಯಾದಿಮೂರ್ತಿಭಿಸ್ತತ್ರ ತತ್ರಾವಸ್ಥಿತಸ್ಯೇಂದ್ರಸ್ಯ ರಥೇ ಹರೀ ಏತನ್ನಾಮಾನೌ ದ್ವಾವಶ್ವೌ ಸಾರಥಯೋ ಯುಂಜಂತಿ । ಇಂದ್ರಸಂಬಂಧಿನೋರಶ್ವಯೋರ್ಹರಿನಾಮತ್ವಂ ಹರೀ ಇಂದ್ರಸ್ಯ ರೋಹಿತೋऽಗ್ನೇಃ । ನೈ. ೧-೧೫ । ಇತಿ ಪಠಿತತ್ವಾತ್ । ಕೀದೃಶೌ ಹರೀ । ಕಾಮ್ಯಾ ಕಾಮಯಿತವ್ಯೌ ವಿಪಕ್ಷಸಾ । ವಿವಿಧೇ ಪಕ್ಷಸೀ ರಥಸ್ಯ ಪಾರ್ಶ್ವೇ ಯಯೋರಶ್ವಯೋಸ್ತೌ ವಿಪಕ್ಷಸೌ । ರಥಸ್ಯ ದ್ವಯೋಃ ಪಾರ್ಶ್ವಯೋರ್ಯೋಜಿತಾವಿತ್ಯರ್ಥಃ । ಶೋಣಾ ರಕ್ತವರ್ಣೌ ಧೃಷ್ಣೂ ಪ್ರಗಲ್ಭೌ ನೃವಾಹಸಾ ನೄಣಾಂ ಪುರುಷಾಣಾಮಿಂದ್ರತತ್ಸಾರಥಿಪ್ರಮುಖಾಣಾಂ ವೋಢಾರೌ ॥ ಅಸ್ಯ. ಬ್ರಧ್ನಮಿತ್ಯುಕ್ತಸ್ಯ ಪರಾಮರ್ಶಾದಿದಮೋऽನ್ವಾದೇಶೇऽಶನುದಾತ್ತಸ್ತೃತೀಯಾದೌ । ಪಾ. ೨-೪-೩೨ । ಇತ್ಯಶ್ । ಶಿತ್ತ್ವಾತ್ ಪಾ ೧-೧-೫೫ । ಸರ್ವಾದೇಶೋऽನುದಾತ್ತಃ । ವಿಭಕ್ತಿರನುದಾತ್ತೈವೇತಿ ಸರ್ವಾನುದಾತ್ತತ್ವಂ । ಕಾಮ್ಯಾ । ಕಮು ಕಾಂತೌ । ಕಮೇರ್ಣಿಙ್ । ಪಾ. ೩-೧-೩೦ । ಕಾಮಯತೇರಚೋ ಯತ್ । ಪಾ ೩-೧-೯೭ । ತಿತ್ಸ್ವರಿತಾಪವಾದತ್ವೇನ ಯತೋऽನಾವಃ । ಪಾ. ೬-೧-೨೧೩ । ಇತ್ಯಾದ್ಯುದಾತ್ತತ್ವಂ । ಸುಪಾಂ ಸುಲುಗಿತಿ ದ್ವಿವಚನಸ್ಯ ಡಾದೇಶಃ । ಹರತೋ ರಥಮಿತಿ ಹರೀ । ಹೃಪಿಷೀತ್ಯಾದಿನಾ। ಉ. ೪-೧೧೮ । ಇನ್ । ನಿತ್ತ್ವಾದಾದ್ಯುದಾತ್ತಃ । ವಿಪಕ್ಷಸಾ । ಪಚಿವಚಿಭ್ಯಾಂ ಸುಟ್ ಚ । ಉ. ೪-೨೧೯ । ಇತಿ ಪಚೇರಸುನ್ ಸುಡಾಗಮಶ್ಚ । ವಿಭಿನ್ನೇ ಪಕ್ಷಸೀ ಪಾರ್ಶ್ವೇ ಯಯೋಸ್ತೌ । ವಿಶಬ್ದೋ ನಿಪಾತತ್ವಾದಾದ್ಯುದಾತ್ತಃ । ಪೂರ್ವಪದಪ್ರಕೃತಿಸ್ವರೇಣ ಸ ಏವ ಶಿಷ್ಯತೇ । ದ್ವಿವಚನಸ್ಯ ಡಾದೇಶಃ । ರಥೇ । ರಮಂತೇऽಸ್ಮಿನ್ನಿತಿ ರಥಃ । ರಮು ಕ್ರೀಡಾಯಾಂ । ಹನಿಕುಷಿನೀರಮಿಕಾಶಿಭ್ಯಃ ಕ್ಥನ್ । ಉ. ೨ ೨ । ಇತಿ ಕ್ಥನ್ । ಕಿತ್ತ್ವಾದನುದಾತ್ತೋಪದೇಶೇತ್ಯಾದಿನಾ । ಪಾ. ೬-೪-೩೭ । ಮಕಾರಲೋಪಃ । ನಿತ್ಸ್ವರೇಣಾದ್ಯುದಾತ್ತಃ । ಶೋಣಾ । ಶೋಣೃ ವರ್ಣಗತ್ಯೋಃ । ಗಮನಕರಣತ್ವಾತ್ಕರಣೇ ಘಞ್ । ಞಿತ್ತ್ವಾದಾದ್ಯುದಾತ್ತಃ । ಸುಪಾಂ ಸುಲುಗಿತಿ ಡಾದೇಶಃ । ಧೃಷ್ಣೂ । ಞಿಧೃಷಾ ಪ್ರಾಗಲ್ಭ್ಯೇ । ತ್ರಸಿಗೃಧಿಧೃಷಿಕ್ಷಿಪೇಃ ಕ್ನುಃ । ಪಾ ೩-೨-೧೪೦ । ಕಿತ್ತ್ವಾದ್ಗುಣಾಭಾವಃ । ಪ್ರತ್ಯಯಸ್ವರಃ । ನೃವಾಹಸಾ । ನ್ರೄನ್ವಹತ ಇತಿ ವಹೇರ್ವಹಿಹಾಧಾಞ್ಭ್ಯಶ್ಛಂದಸಿ । ಉ ೪-೨೨೦ । ಇತ್ಯಸುನ್ । ಣಿದಿತ್ಯನುವೃತ್ತೇರ್ವೃದ್ಧಿಃ । ನಿತ್ತ್ವಾದಾದ್ಯುದಾತ್ತಃ । ಕೃದುತ್ತರಪದಪ್ರಕೃತಿಸ್ವರತ್ವೇನ ಸ ಏವ ಶಿಷ್ಯತೇ ॥

॥ ಪ್ರತಿಪದಾರ್ಥ ॥

(ಸಾರಥಿಮೊದಲಾದವರು) ಅಸ್ಯ—(ಹಿಂದೆ ಹೇಳಿದಂತೆ ಆದಿತ್ಯಾದಿಶಬ್ದಪ್ರತಿಪಾದಿಕನಾದ) ಇಂದ್ರನ । ರಥೇ—ರಥದಲ್ಲಿ (ರಥಕ್ಕೆ) । ಕಾಮ್ಯಾ—(ಇಂದ್ರನಿಗೆ) ಇಷ್ಟವಾದ ಅಥವಾ ಪ್ರೀತಿಪಾತ್ರವಾದ । ಶೋಣಾ—

ರಕ್ತವರ್ಣವಾಗಿರುವ | ಧೃಷ್ಣೂ — ಉತ್ಸಾಹಯುಕ್ತವಾದ | ನೃವಾಹಸಾ— ( ಮನುಷ್ಯರೂಪದಿಂದಿರುವ ಇಂದ್ರ ಮತ್ತು ಸಾರಥಿಯನ್ನು) ವಹಿಸುವ | ವಿಪಕ್ಷಸಾ—ರಥದ ಎಡಬಲಪಾರ್ಶ್ವಗಳಲ್ಲಿ ನಿಯೋಜಿತವಾದ | ಹರೀ—ಎರಡು ಕುದುರೆಗಳನ್ನು | ಯುಂಜಂತಿ —ಹೂಡುವರು (ಕಟ್ಟುವರು)

॥ ಭಾವಾರ್ಥ ॥

ಸಾರಥಿ ಮೊದಲಾದವರು ಇಂದ್ರನ ರಥಕ್ಕೆ ಅವನ ಪ್ರೀತಿಪಾತ್ರವಾದ ಎರಡು ಕುದುರೆಗಳನ್ನು ಎಡಬಲಗಳೆಂಬ ಎರಡು ಪಾರ್ಶ್ವಗಳಲ್ಲಿ ಹೂಡುವರು. ಆ ಕುದುರೆಗಳು ಕೆಂಪುವರ್ಣದ್ದಾಗಿಯೂ ಉತ್ಸಾಹಭರಿತವಾಗಿಯೂ, ಮನುಷ್ಯರನ್ನು(ಎಂದರೆ ತಮ್ಮ ಸ್ವಾಮಿಯಾದ ಇಂದ್ರ, ಸಾರಥಿ ಮೊದಲಾದವರನ್ನು, ಹೊರುವುದರಲ್ಲಿ ಸಾಮರ್ಥ್ಯವುಳ್ಳವುಗಳಾಗಿಯೂ ಇರುವವು ಇಂತಹ ಉತ್ತಮವಾದ ಕುದುರೆಗಳನ್ನು ಇಂದ್ರನ ರಥಕ್ಕೆ ಕಟ್ಟುವರು.

English Translation.

They are harnessing to his (Indra's) chariot, one on each side, his favourite pair of bay coloured horses, high-spirited and able to carry their brave lord.

॥ ವಿಶೇಷ ವಿಷಯಗಳು ॥

ಯುಂಜಂತಸ್ಯ ಕಾಮ್ಯಾ ಎಂಬ ಪಾದವು ಆಪಸ್ತಂಬ ಶ್ರೌತಸೂತ್ರ ೨೦-೧೬-೨, ಮೈತ್ರಾಯಣೀಯ ಸಂಹಿತಾ ೯-೨-೩ ಇವುಗಳಲ್ಲಿ ಪಠಿತವಾಗಿದೆ. ತೈತ್ತಿರೀಯ ಬ್ರಾಹ್ಮಣದ ೩-೯-೪ ರಲ್ಲಿ ಈ ಋಕ್ಕಿನ ವಿವರಣೆ ಇದೆ. ಅಲ್ಲಿ-ಶೋಣಾ ಧೃಷ್ಣೂ ನೃವಾಹಸೇತ್ಯಾಹ | ಅಹೋ ರಾತ್ರೇ ವೈ ನೃವಾಹಸಾ || ಎಂದರೆ ನೃವಾಹಸಾ ಎಂಬ ಶಬ್ದಕ್ಕೆ ಹಗಲು ರಾತ್ರಿಗಳೆಂಬ ಆಧ್ಯಾತ್ಮಿಕವಾದ ಅರ್ಥವನ್ನು ಹೇಳಿದಾರೆ ಹೆಚ್ಚು ವಿಶೇಷವೇನೂ ಇಲ್ಲ.

ಕಾಮ್ಯಾ—ಇಷ್ಟವಾದ, ಪ್ರೀತಿಪಾತ್ರವಾದ, favourite.

ಹರೀ—ಇಂದ್ರನ ಎರಡು ಕುದುರೆಗಳಿಗೆ ಹರೀ ಎಂದು ಹೆಸರು.

ವಿಪಕ್ಷಸಾ—ಬೇರೆ ಬೇರೆ ಪಾರ್ಶ್ವಗಳು ಎಂದರೆ ಎಡಬಲಪಾರ್ಶ್ವಗಳು.

ರಥೇ—ರಮಂತೇಽಸ್ಮಿನ್ನಿತಿ ರಥಃ | ರಮುಕ್ರೀಡಾಯಾಂ-ಎಂದರೆ ಇದರಲ್ಲಿ ಕುಳಿತು ವಿಹರಿಸುವುದರಿಂದ ಇದಕ್ಕೆ ರಥವೆಂದು ಹೆಸರು.

ಶೋಣಾ—ಕೆಂಪುಬಣ್ಣದ crimson, bright, bay or chestnut.

ಧೃಷ್ಣೂ—ಉತ್ಸಾಹಭರಿತವಾದ, fiery, high-spirited.

ನೃವಾಹಸಾ-ಮನುಷ್ಯನನ್ನು ಅಥವಾ ಮನುಷ್ಯರನ್ನು ಹೊರುವ ಅಥವಾ ಎಳೆಯುವ ಸಾಮರ್ಥ್ಯವುಳ್ಳ

ಕಾಮ್ಯಾ, ಹರೀ, ವಿಪಕ್ಷಸಾ, ಶೋಣಾ, ಧೃಷ್ಣೂ, ನೃವಾಹಸಾ ಎಂಬ ಶಬ್ದಗಳೆಲ್ಲವೂ ದ್ವಿತೀಯಾ ದ್ವಿವಚನಾಂತಶಬ್ದಗಳು ಹರೀ ಎಂಬ ಶಬ್ದಕ್ಕೆ ವಿಶೇಷಣಗಳು.

ವ್ಯಾಕರಣಪ್ರಕ್ರಿಯಾ

**ಅಸ್ಯ**—ಪೂರ್ವಮಂತ್ರದಲ್ಲಿ ಬ್ರಧ್ನ ಮೊದಲಾದ ಪದಗಳಿಂದ ಪ್ರತಿಪಾದಿತನಾದ ಇಂದ್ರನಿಗೆ ಅಸ್ಯ ಎಂಬುದರಿಂದ ಪರಾಮರ್ಶವಿರುವುದರಿಂದ ಅಸ್ಯ ಎಂಬಲ್ಲಿಯ ಇದಂ ಶಬ್ದವು ಅನ್ವಾದೇಶವಿಷಯದಲ್ಲಿರುವುದು. ಆದ್ದರಿಂದ **ಇದಮೋಽನ್ವಾದೇಶೇಽಶನುದಾತ್ತಸ್ತೃತೀಯಾದೌ** (ಪಾ. ಸೂ. ೨-೪-೩೨) ಎಂಬುದರಿಂದ ಅನುದಾತ್ತವಾದ ಅಶ್ ಆದೇಶ ಬರುವುದು ಅಶ್ ಆದೇಶವು ಶಿತ್ತಾದ್ದರಿಂದ **ಅನೇಕಾಲ್‌ಶಿತ್ಸರ್ವಸ್ಯ** (ಪಾ. ಸೂ. ೧ ೧-೫೫) ಅನೇಕ ವರ್ಣಗಳುಳ್ಳ ಆದೇಶ ಅಥವಾ ಶಕಾರೇತ್ಸಂಜ್ಞಕವಾದ ಆದೇಶ ಇವು ಎಲ್ಲದರ (ಸ್ಥಾನಷಷ್ಠ್ಯಂತ ಪದಬೋಧ್ಯಸ್ಯ ಸರ್ವಸ್ಯ) ಸ್ಥಾನದಲ್ಲಿಯೂ ಬರುವುವು ಎಂಬುದರಿಂದ ಇದಂ ಶಬ್ದದ ಸಂಪೂರ್ಣ ಸ್ಥಾನದಲ್ಲಿ ಅಶ್ ಬರುವುದು. ವಿಭಕ್ತಿಯೂ ಅನುದಾತ್ತವೇ ಆದ್ದರಿಂದ ಅಸ್ಯ ಎಂಬುದು ಸರ್ವಾನುದಾತ್ತ.

**ಕಾಮ್ಯಾ**—ಕಮು ಕಾಂತೌ ಎಂಬ ಧಾತುವಿನ ಮುಂದೆ **ಕಮೇರ್ಣಿಙ್** (ಪಾ.ಸೂ. ೩-೧-೩೦) ಕಮ್ ಧಾತುವಿನ ಮುಂದೆ ಣಿಙ್ ಪ್ರತ್ಯಯ ಬರುವುದು ಎಂಬುದರಿಂದ ಣಿಙ್ ಪ್ರತ್ಯಯ ಬರುವುದು. **ಅತ ಉಪಧಾಯಾಃ** (ಪಾ ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ ಕಾಮಿ. ಇದು **ಸನಾದ್ಯಂತಾಧಾತವಃ** (ಪಾ. ಸೂ. ೩-೧-೩) ಎಂಬುದರಿಂದ ಧಾತುಸಂಜ್ಞೆಯನ್ನು ಹೊಂದುವುದು. ಇದರ ಮುಂದೆ **ಅಚೋಯತ್** (ಪಾ. ಸೂ. ೩-೧-೯೭) ಅಜಂತವಾದ ಧಾತುವಿನ ಮುಂದೆ ಯತ್ ಪ್ರತ್ಯಯ ಬರುವುದು ಎಂಬುದರಿಂದ ಯತ್ ಪ್ರತ್ಯಯ ಬರುವುದು. **ಣೇರನಿಟಿ** (ಪಾ. ಸೂ. ೬-೪-೫೫) ಎಂಬುದರಿಂದ ಣಿಗೆ ಲೋಪ ಕಾಮ್ಯ ಎಂದಾಗುವುದು. **ತಿತ್ಸ್ವರಿತಂ** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತ ಪ್ರಾಪ್ತವಾದರೆ ಅದಕ್ಕೆ ಅಪವಾದವಾದ **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತ ಬರುವುದು. ಇದರ ಮುಂದೆ ಬರುವ ದ್ವಿತೀಯಾದ್ವಿವಚನ ಔ ಪ್ರತ್ಯಯಕ್ಕೆ **ಸುಪಾಂ ಸುಲುಕ್** (ಪಾ. ಸೂ, ೭-೧-೩೯) ಎಂಬುದರಿಂದ ಡಾ ಆದೇಶ

ಹರತಃ ರಥಂ ಎಂದು ವ್ಯುತ್ಪತ್ತಿಯನ್ನುಮಾಡಿದರೆ ದ್ವಿತೀಯಾ ದ್ವಿವಚನದಲ್ಲಿ **ಹರೀ** ಎಂದಾಗುತ್ತೆ. **ಹೃ ಪಿ ಷಿ**-(ಉ. ಸೂ. ೪-೫೫೮) ಎಂಬುದರಿಂದ ಹೃ ಧಾತುವಿನ ಮುಂದೆ ಇನ್ ಪ್ರತ್ಯಯ. ಇದು ನಿತ್ತಾದ್ದರಿಂದ ಆದ್ಯುದಾತ್ತ.

**ವಿಪಕ್ಷಸಾ ಪಚಿವಚಿಭ್ಯಾಂಸುಟ್ಚ** (ಪಾ. ಸೂ. ೮-೩-೫೧) **ಡುಪಚಷ್ ಪಾಕೇ**-ವಚ ಪರಿಭಾಷಣೇ ಈ ಧಾತುಗಳ ಮುಂದೆ ಅಸುನ್ ಪ್ರತ್ಯಯ ಬರುವುದು, ಪ್ರತ್ಯಯಕ್ಕೆ ಸುಟ್ ಆಗಮವೂ ಬರುವುದು ಎಂಬುದರಿಂದ ಪಚ್‌ಧಾತುವಿನ ಮುಂದೆ ಅಸುನ್ ಅದಕ್ಕೆ ಸುಟ್ ಆಗಮವೂ ಬರುವುದು. ಪಚ್+ಸಸ್ **ಚೋಃಕುಃ** ( ಪಾ. ಸೂ. ೮-೨-೩೦) ಎಂಬುದರಿಂದ ಚಕಾರಕ್ಕೆ ಕಕಾರ **ಆದೇಶಪ್ರತ್ಯಯಯೋಃ** (ಪಾ. ಸೂ. ೮-೩-೫೫) ಎಂಬುದರಿಂದ ಪಕ್ಷಸ್ ಸಕಾರಕ್ಕೆ ಷತ್ವ ಎಂದಿರುವುದು **ವಿಭಿನ್ನೇ ಪಕ್ಷಸೀ ಪಾರ್ಶ್ವೇ ಯಯೋಸ್ತೌ** (ರಥದ ಬೇರೆಬೇರೆಯಾದ ಎರಡು ಪಕ್ಕಗಳಲ್ಲಿ ಕಟ್ಟಿರತಕ್ಕವು) ಎಂದು ವಿಗ್ರಹವಾದಾಗ ವಿಪಕ್ಷಸ್ ಎಂದಾಗುವುದು. ವಿ ಎಂಬುದು ನಿಪಾತವಾದ್ದರಿಂದ ಆದ್ಯುದಾತ್ತ. **ಬಹುವ್ರೀಹೌಪ್ರಕೃತ್ಯಾಪೂರ್ವಪದಂ**, (ಪಾ. ಸೂ. ೬-೨-೧) ಎಂಬುದರಿಂದ ವಿಪಕ್ಷಸ್ ಎಂಬಲ್ಲಿ ಅದೇ ಸ್ವರವೇ ನಿಲ್ಲುವುದು, ಇದರಮುಂದೆ ಬರುವ ದ್ವಿತೀಯಾದ್ವಿವಚನಕ್ಕೆ **ಸುಪಾಂಸುಲುಕ್** (ಪಾ.ಸೂ. ೭-೧-೩೯) ಎಂಬುದರಿಂದ ಡಾ ಆದೇಶ

ರಥೇ ರಮನ್ತೇ ಅಸ್ಮಿನ್ನಿತಿ ರಥಃ, ರಮುಕ್ರೀಡಾಯಾಂ ಎಂಬ ಧಾತುವಿನ ಮುಂದೆ **ಹನಿಕುಷಿ ನೀ ರಮಿಕಾಶಿಭ್ಯಃಕ್ಥನ್**, (ಉ ಸೂ. ೨-೧೫೯) ಕ್ಥ ಬರುತ್ತೆ. ಪ್ರತ್ಯಯವು ಕಿತ್ತಾದ್ದರಿಂದ ಧಾತುವಿನ ಮಕಾರಕ್ಕೆ **ಅನುದಾತ್ತೋಪದೇಶ**, (ಪಾ. ಸೂ ೬-೪-೩೭) ಇತ್ಯಾದಿ ಸೂತ್ರದಿಂದ ಲೋಪ, ನಿತ್ಸ್ವರ ಆದ್ಯುದಾತ್ತ ಬರುವುದು.

**ಶೋಣಾ**—ಕುದುರೆಗಳು ಗಮನಕ್ಕೆ ಕರಣವಾಗಿರುವುವು. ಆದ್ದರಿಂದ ' ಶೋಣೃ ವರ್ಣಗತ್ಯೋಃ ಎಂಬ ಶೋಣೃಧಾತುವಿನ ಮುಂದೆ ಕರಣಾರ್ಥದಲ್ಲಿ ಘಞ್ ಪ್ರತ್ಯಯ ಬರುವುದು. ಞಿತ್ತ್ವಾದ್ದರಿಂದ ಆದ್ಯುದಾತ್ತ. **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಔಗೆ ಡಾ ದೇಶ.

ಧೃಷ್ಣೂ ಞಿಧೃಷಾಪ್ರಾಗಲ್ಭ್ಯೇ. **ತ್ರಸಿಗೃಧಿಧೃಷಿಃ ಕ್ಷಿಪೇಃಕ್ನುಃ** (ಪಾ. ಸೂ ೩-೨-೧೪೦) ಎಂಬುದರಿಂದ **ಧೃಷ್** ಧಾತುವಿನ ಮುಂದೆ ಕ್ನು ಪ್ರತ್ಯಯ. ಪ್ರತ್ಯಯ ಕಿತ್ತ್ವಾದ್ದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯ ಸ್ವರ ಬರುವುದು.

ನೃವಾಹಸಾ—ನೄನ್-ವಹತಃ ಎಂದು ವಿಗ್ರಹ ಮಾಡಿದಾಗ **ವಹಿಹಾಧಾಞ್ಭ್ಯಶ್ಛಂದಸಿ** (ಉ. ಸೂ. ೪-೬೬೮) ಈ ಧಾತುಗಳ ಮುಂದೆ ಛಂದಸ್ಸಿನಲ್ಲಿ ಅಸುನ್ ಪ್ರತ್ಯಯ ಬರುವುದು. ಅದು ಣಿತ್ತ್ವಾಗುವುದು. ಎಂಬುದರಿಂದ ವಹ್ ಧಾತುವಿನ ಮುಂದೆ ಅಸುಣ್ ಪ್ರತ್ಯಯ **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ. **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಔಗೆ ಡಾದೇಶ. ಣಿತ್ತ್ವಾದ್ದರಿಂದ ಆದ್ಯುದಾತ್ತ. **ಗತಿಕಾರಕೋಪಪದಾತ್ಕೃತ್** (ಪಾ ಸೂ. ೬-೨-೧೩೯) ಎಂಬುದರಿಂದ ಕೃದುತ್ತರ ಪದಪ್ರಕೃತಿಸ್ವರ ಬಂದರೆ, ಆದ್ಯುದಾತ್ತವೇ ನಿಲ್ಲುವುದು ॥ ೨ ॥

॥ ಸಂಹಿತಾಪಾಠಃ ॥

ಕೇತುಂ ಕೃಣ್ವನ್ನಕೇತವೇ ಪೇಶೋ ಮರ್ಯಾ ಅಪೇಶಸೇ ।
ಸಮುಷದ್ಭಿರಜಾಯಥಾಃ ॥ ೩ ॥

॥ ಪದಪಾಠಃ ॥

**ಕೇತುಂ । ಕೃಣ್ವನ್ । ಅಕೇತವೇ । ಪೇಶಃ । ಮರ್ಯಾಃ । ಅಪೇಶಸೇ ।**
**ಸಂ । ಉಷತ್ಽಭಿಃ । ಅಜಾಯಥಾಃ ॥ ೩ ॥**

ಸಾಯಣಭಾಷ್ಯಂ

ಹೇ ಮರ್ಯಾ ಮನುಷ್ಯಾ ಇದಮಾಶ್ಚರ್ಯಂ ಪಶ್ಯತೇತ್ಯಧ್ಯಾಹಾರಃ । ಕಿಮಾಶ್ಚರ್ಯಮಿತಿ ತದುಚ್ಯತೇ । ಆದಿತ್ಯರೂಪೋಽಯಮಿಂದ್ರ ಉಷದ್ಭಿರ್ದಾಹಕೈಃ ರಶ್ಮಿಭಿಃ ಪ್ರತಿದಿನಮುಷಃಕಾಲೈರ್ವಾ ಸಂಭೂಯಾಜಾಯಥಾಃ । ಉದಪದ್ಯತ । ಅಥವಾ ಸೂರ್ಯಸ್ಯೈವಾಸ್ತಮಯೇ ಮರಣಮುಪಚರ್ಯ । ವ್ಯತ್ಯಯೇನ ಬಹುವಚನಂ ಕೃತ್ವಾ ಸಂಬೋಧನಂ ಕ್ರಿಯತೇ । ಹೇ ಮರ್ಯ ಪ್ರತಿದಿನಂ ತ್ವಮಜಾಯಥಾ ಇತಿ ಯೋಜ್ಯಂ ಕಿಂ ಕುರ್ವನ್ । ಅಕೇತವೇ ರಾತ್ರೌ ನಿದ್ರಾಭಿಭೂತತ್ವೇನ ಪ್ರಜ್ಞಾನರಹಿತಾಯ

ಪ್ರಾಣಿನೇ ಕೇತುಂ ಕೃಣ್ವನ್ । ಸ್ರಾತಃ ಪ್ರಜ್ಞಾನಂ ಕುರ್ವನ್ । ಅಪೇಶಸೇ ರಾತ್ರಾವಂಧಕಾರಾವೃತತ್ವೇನಾನಭಿವ್ಯಕ್ತತ್ವಾದ್ರೂಪರಹಿತಾಯ ಪದಾರ್ಥಾಯ ಪ್ರಾತರಂಧಕಾರನಿವಾರಣೇನ ಪೇಶೋ ರೂಪಮಭಿವ್ಯಜ್ಯಮಾನಂ ಕುರ್ವನ್ । ಪೇಶ ಇತಿ ರೂಪನಾಮ ಪಿಂಶತೇಃ । ನಿ. ೮-೧೧ । ಇತಿ ಯಾಸ್ಕಃ । ಅಕೇತವೇಽಪೇಶಸ ಇತಿ ಚತುರ್ಥೌ ಷಷ್ಠ್ಯರ್ಥೇ ದ್ರಷ್ಟವ್ಯೌ ॥ ಕೇತುಂ ಪ್ರಾತಿಪದಿಕಸ್ವರಃ ಕೃಣ್ವನ್ ಕೃವಿ ಹಿಂಸಾಕರಣಯೋಶ್ಚ । ಲಟಃ ಶತ್ರಾದೇಶಃ । ಇದಿತೋ ನುಮ್ ಧಾತೋಃ । ಪಾ ೭-೧-೫೮ । ಇತಿ ನುಮಾಗಮಃ । ಕರ್ತರಿ ಶಪಿ ಪ್ರಾಪ್ತೇ ಧಿನ್ವಿಕೃಣ್ವ್ಯೋರಚ । ಪಾ. ೩-೧-೮೦ । ಇತ್ಯುಪ್ರತ್ಯಯಃ । ತತ್ಸನ್ನಿಯೋಗೇನ ವಕಾರಸ್ಯ ಚಾಕಾರಃ । ಅತೋ ಲೋಪಃ । ಪಾ ೬-೪-೪೮ । ಇತ್ಯಕಾರಲೋಪಃ । ತಸ್ಯ ಸ್ಥಾನಿವದ್ಭಾವಾತ್ಪೂರ್ವಸ್ಯ ಲಘೂಪಧಗುಣೋ ನ ಭವತಿ । ಪಾ. ೭-೪-೮೬ । ಅಕಾರಸ್ಯ ಪ್ರತ್ಯಯಸ್ವರೇಣೋದಾತ್ತತ್ವಂ । ಅಕೇತವೇ । ಬಹುವ್ರೀಹೌ ನಞ್‌ಸುಭ್ಯಾಂ । ಪಾ. ೬-೨-೧೭೨ । ಇತ್ಯುತ್ತರಪದಾಂತೋದಾತ್ತತ್ವಂ । ಪೇಶಃ ನಬ್ವಿಷಯಸ್ಯಾನಿಸಂತಸ್ಯ । ಫಿ. ೨-೩ । ಇತ್ಯಾದ್ಯುದಾತ್ತಃ । ಮರ್ಯಾಃ। ಛಂದಸಿ ನಿಷ್ಟರ್ಕ್ಯೇತ್ಯಾದೌ । ಪಾ. ೩-೧.೧೨೩ । ಯಪ್ರತ್ಯಯಾಂತೋ ನಿಪಾತಃ । ಆಮಂತ್ರಿತನಿಘಾತಃ । ಪಾ. ೮-೧-೧೯ । ಅಸಾಮರ್ಥ್ಯಾತ್ಪೂರ್ವಸ್ಯ ನ ಪರಾಂಗವದ್ಭಾವಃ । ಅಪೇಶಸೇ । ನಞ್‌ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಸಂ । ನಿಪಾತ ಆದ್ಯುದಾತ್ತಃ । ಉಷದ್ಭಿಃ । ಉಷ ಪ್ಲುಷ ದಾಹೇ । ಜ್ವಲದ್ಭಿಃ ರಶ್ಮಿಭಿಃ । ಲಟಃ ಶತ್ರಾದೇಶೇ ಶಪಿ ಪ್ರಾಪ್ತೇ ವ್ಯತ್ಯಯೇನ ಶಃ । ಸಾರ್ವಧಾತುಕಮಪಿತ್ । ಪಾ. ೧-೨-೪ । ಇತಿ ತಸ್ಯ ಙಿತ್ತ್ವಾಲ್ಲಘೂಪಧಗುಣೋ ನ ಭವತಿ । ಶಸ್ಯ ಪ್ರತ್ಯಯಸ್ವರೇಣೋದಾತ್ತತ್ವಂ ಉಪರಿ ಶತುರದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವಂ । ಏಕಾದೇಶ ಉದಾತ್ತೇನೋದಾತ್ತಃ । ಅಜಾಯಥಾಃ । ಅಜಾಯತೇತ್ಯರ್ಥೇ ಪುರುಷವ್ಯತ್ಯಯೋ ನಿಘಾತಃ ॥

॥ ಪ್ರತಿಪದಾರ್ಥ ॥

(ಹೇ) ಮರ್ಯಾಃ—ಎಲೈ ಮನುಷ್ಯರೇ (ಈ ಆಶ್ಚರ್ಯವನ್ನು ನೋಡಿ) । ಆದಿತ್ಯರೂಪನಾದ (ಇಂದ್ರನು) ಉಷದ್ಭಿಃ—ಪ್ರತಿದಿನವೂ ಉಷಃಕಾಲದಲ್ಲಿ । ಅಕೇತವೇ—ರಾತ್ರಿಕಾಲದಲ್ಲಿ ನಿದ್ರೆಯಿಂದ ಪ್ರಜ್ಞೆಯಿಲ್ಲದವರಿಗೆ । ಕೇತುಂ—(ಪ್ರಾತಃಕಾಲದಲ್ಲಿ ಎಚ್ಚರಗೊಂಡಾಗ) ಪ್ರಜ್ಞೆಯನ್ನೂ । ಅಪೇಶಸೇ—(ರಾತ್ರಿಕಾಲದಲ್ಲಿ) ಕತ್ತಲೆದೆಸೆಯಿಂದ ಯಾವ ಆಕಾರರೂಪಗಳನ್ನೂ ನೋಡಲು ಅಸಮರ್ಥರಾದವರಿಗೆ ಬೆಳಗಾದಮೇಲೆ । ಪೇಶಃ—(ವಸ್ತುಗಳ) ಆಯಾ ರೂಪಗಳನ್ನು (ನೋಡಲು ಶಕ್ತಿಯನ್ನು) । ಕೃಣ್ವನ್—ಉಂಟುಮಾಡುತ್ತಾ । ಸಂ ಅಜಾಯಥಾಃ—ಉತ್ಪನ್ನವಾಗುವನು ॥

ಅಥವಾ

ಮರ್ಯಾಃ—ಎಲೈ ಮನುಷ್ಯನೇ (ಬಹುವಚನಕ್ಕೆ ಏಕವಚನಾರ್ಥ) । (ತ್ವಂ-ನೀನು) । ಉಷದ್ಭಿಃ ಸಮಜಾಯಥಾಃ—ಪ್ರತಿದಿನವೂ ಸೂರ್ಯಾಸ್ತಮಯ ಕಾಲದಲ್ಲಿ ನಿದ್ರಾವಶದಿಂದ ಮೃತನಂತೆ ಪ್ರಜ್ಞಾರಹಿತನಾಗಿದ್ದು ಪ್ರಾತಃಕಾಲದಲ್ಲಿ ಚೇತನಯುಕ್ತನಾಗಿ ಹುಟ್ಟುವೆ ಎಂದರೆ ಎಚ್ಚರಗೊಳ್ಳುವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಆದಿತ್ಯರೂಪದಿಂದ ಪ್ರತಿದಿನವೂ ಅಸ್ತಮಾನಕಾಲದಲ್ಲಿ ಮುಳುಗುತ್ತಲೂ, ಉಷಃಕಾಲದಲ್ಲಿ ಉದಯಿಸುತ್ತಲೂ ಇರುವೆ. ನೀನು ಅಸ್ತಮಾನನಾದಾಗ ಪ್ರಾಣಿಗಳು ನಿದ್ರಾಭಿಭೂತರಾಗುವುದು

ಕಿಂದ ಪ್ರಜ್ಞೆಯಿಲ್ಲದವರಾಗಿರುವರು ಮತ್ತು ಕತ್ತಲೆಯ ದೆಸೆಯಿಂದ ಯಾವ ವಸ್ತುಗಳ ಆಕಾರವನ್ನೂ ಸಹ ನೋಡಲಸಮರ್ಥರಾಗಿರುವರು. ಉಷಃಕಾಲದಲ್ಲಿ ನೀನು ಉದಯಿಸಿದ ಕೂಡಲೆ ಪ್ರಾಣಿಗಳು ಎಚ್ಚರಗೊಂಡು ಪ್ರಜ್ಞೆ ಅಥವಾ ಬುದ್ಧಿಯಿಂದ ಕೂಡಿ ಬೆಳಕಿನಲ್ಲಿ ಸಮಸ್ತವಸ್ತುಗಳ ರೂಪಗಳನ್ನು ನೋಡಲು ಸಮರ್ಥರಾಗುವರು. ಆದುದರಿಂದ ನಿದ್ರೆಯಿಂದ ಮೈಮರೆತಿರುವ ಪ್ರಾಣಿಗಳಿಗೆ ಮತ್ತೆ ಪ್ರಜ್ಞೆಯನ್ನುಂಟುಮಾಡಿ ಸಮಸ್ತವಸ್ತುಗಳ ಆಕಾರಾದಿಗಳನ್ನು ನೋಡಲು ಶಕ್ತಿಯನ್ನು ಪ್ರತಿದಿನವೂ ನೀನೇ ಕೊಡುತ್ತಿರುವೆ.

## English Translation

O mortals, (look at this wonder). Indra (in the form of Aditya) rises every day at dawn giving sense to the senseless (while in sleep) and form to the formless.

*or* O mortal, having been dead (asleep) at the setting of the sun you are born ever with morning rays.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು ಸ್ಪಷ್ಟವಾಗಿಲ್ಲ. ಕೇತುಶಬ್ದಕ್ಕೆ ಪ್ರಜ್ಞೆಯೆಂದು ನಿರುಕ್ತದಲ್ಲಿ ಹೇಳಿರುವುದ (ನಿ. ೩-೧೭). ತೈತ್ತಿರೀಯ ಬ್ರಾಹ್ಮಣದಲ್ಲಿ (೩-೯-೪) ಕೇತುವೆಂದರೆ ಧ್ವಜವೆಂದು ಹೇಳಿದೆ –**ಕೇತುಂ ಕೃಣ್ವನ್ನ ಕೇತವ ಇತಿ ಧ್ವಜಂ ಪ್ರತಿಮುಂಚತಿ** ಧ್ವಜಸ್ಥಾಪನೆಮಾಡುವಾಗ ಈ ಮಂತ್ರವನ್ನು ಹೇಳುವರು. ಕೇತು ಶಬ್ದಕ್ಕೆ ಧ್ವಜವೆಂದು ಅರ್ಥವಾದರೂ ಇಲ್ಲಿ ಆ ಅರ್ಥವು ಸರಿಹೋಗುವುದಿಲ್ಲ. ಗೃಹ್ಯಕರ್ಮೋಕ್ತಪ್ರಕಾರ ನವ-ಗ್ರಹಾರಾಧನೆ ಮಾಡುವಾಗ ಕೇತುಗ್ರಹವನ್ನು ಆಹ್ವಾನೆಮಾಡುವುದಕ್ಕಾಗಿ ಈ ಮಂತ್ರವನ್ನು ಹೇಳುವರು ಈ ಮಂತ್ರದಲ್ಲಿ ಕೇತುಗ್ರಹವಿಷಯವೇ ಇರುವುದಿಲ್ಲ. ಕೇತು ಎಂಬ ಶಬ್ದಮಾತ್ರ ಪಠಿತವಾಗಿರುವುದರಿಂದ ಇದನ್ನು ಹೇಳುವ ರೂಢಿಯಾಗಿರಬಹುದು. ಅದರಂತೆ ಇತರ ಗ್ರಹಗಳ ಹೆಸರಿನ ಶಬ್ದಗಳಿರುವ ಮಂತ್ರಗಳನ್ನು ಆಯಾ ಗ್ರಹಾರಾಧನೆಯಲ್ಲಿ ಉಪಯೋಗಿಸುವುದೂ ರೂಢಿಯಾಗಿರಬಹುದು. ಏಕೆಂದರೆ ಋಗ್ವೇದದಲ್ಲಿ ನವಗ್ರಹಗಳ ವಿಚಾರವೇ ಇರುವುದಿಲ್ಲ. ಸೂರ್ಯ ಮತ್ತು ಚಂದ್ರ ಎಂಬ ಎರಡು ಹೆಸರುಗಳು ಮಾತ್ರ ಅಲ್ಲಲ್ಲಿ ಕಂಡುಬರುವುದು. ನಕ್ಷತ್ರಗಳ ಹೆಸರು ಸಹ ಇರುವುದಿಲ್ಲ. ಯಜುರ್ವೇದದಲ್ಲಿ ಮಾತ್ರ ನಕ್ಷತ್ರಗಳ ಹೆಸರೂ ಅವುಗಳ ವಿವರಣೆಯೂ ಪೂರ್ಣಿಮಾ ಅಮಾವಾಸ್ಯೆಗಳೂ ವಿವರಿಸಲ್ಪಟ್ಟಿವೆ. ನವಗ್ರಹಗಳ ಹೆಸರು ಅಲ್ಲಿಯೂ ಇಲ್ಲ. ಆದುದರಿಂದ ಗ್ರಹಯಜ್ಞವು ವೇದಗಳ ಕಾಲದಲ್ಲಿ ಬಳಕೆಯಲ್ಲಿರಲಿಲ್ಲವೆಂದೂ ಈಚೆಗೆ ರೂಢಿಗೆ ಬಂದಿತೆಂದೂ ನಿಸ್ಸಂದೇಹವಾಗಿ ಹೇಳಬಹುದು.

**ಪೇಶಃ**—**ಪೇಶ ಇತಿ ರೂಪನಾಮ ಪಿಂಶತೇ** (ನಿ. ೮-೧೧) ಪೇಶವೆಂದರೆ ರೂಪವು. ಅಪೇಶಸೇ–ರೂಪವಿಲ್ಲದವರಿಗೆ.

**ಮರ್ಯಾಃ**—ಮನುಷ್ಯರು. ಈ ಶಬ್ದವು ಪ್ರಥಮಾಬಹುವಚನವು. ಈ ಋಕ್ಕಿನಲ್ಲಿ ಅಜಾಯಥಾಃ ಎಂಬ ಕ್ರಿಯಾಪದವು ಮಧ್ಯಮಪುರುಷೈಕವಚನವಾಗಿರುವುದು. ಮರ್ಯಾಃ ಎಂಬ ಶಬ್ದವನ್ನು ಕರ್ತೃವೆಂದು

ಭಾವಿಸಿದರೆ ಕ್ರಿಯಾಪದವು ಏಕವಚನವಾಗಿರುವುದರಿಂದ ಒಂದಕ್ಕೊಂದು ಹೊಂದುವುದಿಲ್ಲ. ಛಂದಸ್ಸಿನ ಅನುಕೂಲಕ್ಕಾಗಿ ಮರ್ಯ ಎಂಬ ಏಕವಚನರೂಪವನ್ನು ಮರ್ಯಾ ಎಂದು ದೀರ್ಘವಾಗಿ ಉಪಯೋಗಿಸಿರುವುದೆಂದು ಹೇಳುವ ಪಕ್ಷದಲ್ಲಿ ಇಲ್ಲಿ ಅಂತಹ ಛಂದಸ್ಸಿನ ಅನುಕೂಲಪ್ರತಿಕೂಲಗಳಿಗೆ ಕಾರಣವಿಲ್ಲ. ಏಕೆಂದರೆ ಮರ್ಯಾ ಎಂಬ ಪದದ ಮುಂದೆ ಅಪೇಶಸೇ ಎಂಬ ಪದವಿರುವುದರಿಂದಲೂ ಯಾ ಎಂಬ ಅಕ್ಷರದಲ್ಲಿರುವ ಅಕಾರವು ಮುಂದಿನ ಪದದ ಮೊದಲನೆಯ ಅಕ್ಷರವಾದ ಅಕಾರದೊಡನೆ ಸಂಧಿಯಾಗಬೇಕಾಗಿತ್ತು. ಇಲ್ಲಿ ಹಾಗಿರುವುದಿಲ್ಲ. ಇದಲ್ಲದೆ ಪದಪಾಠದಲ್ಲಿ ಮರ್ಯಾಃ ಎಂದು ವಿಸರ್ಗಾಂತ್ಯವಾದ ಬಹುವಚನಪದವು ಸ್ಪಷ್ಟವಾಗಿದೆ. ಆದುದರಿಂದ ಸಾಯಣರು ಭಾಷ್ಯದ ಪ್ರಾರಂಭದಲ್ಲಿ ಹೇಳಿರುವಂತೆ ಈ ಶಬ್ದವನ್ನು ಸಾಧಾರಣ ಜನರನ್ನು ಸಂಬೋಧನೆಮಾಡುವುದಕ್ಕೆ ಮಾತ್ರ ಉಪಯೋಗಿಸಿರುವುದೆಂದು ಹೇಳಬೇಕು. ಪಾಶ್ಚಾತ್ಯಪಂಡಿತರೂ ಇದೇ ಅಭಿಪ್ರಾಯವನ್ನು ಒಪ್ಪುವರು. ಮರ್ಯ ಎಂಬ ಏಕವಚನಶಬ್ದವನ್ನು ಉಪಯೋಗಿಸುವ ಪಕ್ಷದಲ್ಲಿ ಈ ಸಂದರ್ಭದಲ್ಲಿ ತ್ವಂ ಎಂಬ ಕರ್ತೃಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕು.

॥ ವ್ಯಾಕರಣಪ್ರಕ್ರಿಯಾ ॥

**ಕೇತುಮ್**—ಫಿಷಃ (ಫಿ. ಸೂ. ೧) ಎಂಬ ಪ್ರಾತಿಪದಿಕ ಸ್ವರದಿಂದ ಕೇತುಶಬ್ದ ಅಂತೋದಾತ್ತ.

**ಕೃಣ್ವನ್**—ಕೃವಿ ಹಿಂಸಾಕರಣಯೋಶ್ಚ ಎಂಬ ಕೃವಿಧಾತುವಿನ ಮುಂದೆ ಲಟ್ಟನಿಟ್ಟರೆ **ಲಟಶ್ಶತೃಶಾನಚಾವಪ್ರಥಮಾಸಮಾನಾಧಿಕರಣೇ** (ಪಾ. ಸೂ. ೩.೨ ೧೨೪) ಎಂಬುದರಿಂದ ಶತೃ ಆದೇಶ, ಧಾತುವು ಇದಿತ್ತು (ಇಕಾರೇತ್ಸಂಜ್ಞಕ) ಆದ್ದರಿಂದ **ಇದಿತೋನುಮ್‌ಧಾತೋಃ** (ಪಾ. ಸೂ. ೭-೧-೫೮) ಇದಿತ್ತಾದ ಧಾತುವಿಗೆ ನುಮ್ ಆಗಮಬರುವುದು ಎಂಬುದರಿಂದ ಬರುವ ನುಮ್ ಆಗಮವು **ಮಿದಚೋಂತ್ಯಾತ್ಪರಃ** (ಪಾ ಸೂ. ೧-೧-೪೭) ಎಂಬ ಪರಿಭಾಷೆಯಿಂದ ಕೃವಿನ ಮುಂದೆ ಬರುವುದು. ಶತೃ ಎಂಬ ಕರ್ತರಿಪ್ರತ್ಯಯವು ಪರದಲ್ಲಿರುವುದರಿಂದ **ಕರ್ತರಿಶಪ್** (ಪಾ. ಸೂ. ೩-೧-೬೮) ಎಂಬುದರಿಂದ ಶಪ್ ವಿಕರಣ ಪ್ರಾಪ್ತವಾದರೆ ಅದಕ್ಕೆ ಅಪವಾದವಾದ **ಧಿನ್ವಿಕೃಣ್ವ್ಯೋರಚ,** (ಪಾ ಸೂ. ೩-೧-೮೦) ಧಿನ್ವ್-ಕೃಣ್ವ್ ಇವುಗಳ ಕಡೆಯ ವರ್ಣಕ್ಕೆ ಅಕಾರ ಇವುಗಳ ಮುಂದೆ ಶಪ್ ವಿಕರಣಕ್ಕೆ ಬದಲಾಗಿ ಉ ವಿಕರಣವೂ ಬರುವುದು ಎಂಬುದರಿಂದ ಅಕಾರಾದೇಶವೂ ಉ ಪ್ರತ್ಯಯವೂ ಬಂದರೆ ಕೃನ+ಉ+ಅತ್ **ಅತೋಲೋಪಃ** (ಪಾ. ಸೂ. ೩-೧-೮೦) ಆರ್ಧಧಾತುಕಪ್ರತ್ಯಯೋಪದೇಶಕಾಲದಲ್ಲಿ ಅಕಾರಾಂತವಾಗಿರುವುದರ ಅಕಾರಕ್ಕೆ ಆರ್ಧಧಾತುಕ ಪರದಲ್ಲಿರುವಾಗ ಲೋಪಬರುವುದು ಎಂಬುದರಿಂದ ಉ ಪ್ರತ್ಯಯದ ಹಿಂದಿರುವ ಅಕಾರಕ್ಕೆ ಲೋಪ ಬರುವುದು. ಕೃನ್+ಉ+ಅತ್ ಈಗ ಉ ಪ್ರತ್ಯಯವನ್ನು ನಿಮಿತ್ತ ಮಾಡಿಕೊಂಡು **ಪುಗಂತಲಘೂಪಧಸ್ಯಚ** (ಪಾ.ಸೂ. ೭-೩-೮೬) ಸಾರ್ವಧಾತುಕ ಆರ್ಧಧಾತುಕ ಪ್ರತ್ಯಯಗಳು ಪರದಲ್ಲಿರುವಾಗ ಪುಕ್ ಎಂಬ ಆಗಮವನ್ನು ಕೊನೆಯಲ್ಲಿ ಹೊಂದಿರುವ ಅಂಗದ ಇಕ್ಕಿಗೂ, ಲಘುವರ್ಣೋಪಧಕವಾದ ಅಂಗದ ಇಕ್ಕಿಗೂ ಗುಣಬರುವುದು ಎಂಬುದರಿಂದ ಗುಣವನ್ನು ಮಾಡುವಾಗ **ಅಚಃಪರಸ್ಮಿನ್ಪೂರ್ವವಿಧೌ,** (ಪಾ. ಸೂ. ೧-೧-೫೭) ಎಂಬುದರಿಂದ ಅಲೋಪಕ್ಕೆ ಸ್ಥಾನಿವದ್ಭಾವ ಬರುವುದು. ಉಪಧಾಗುಣವು ಬರುವ ಸ್ಥಳಗಳಲ್ಲಿ ಉಪಧೆಗೂ ನಿಮಿತ್ತವಾದ ಪ್ರತ್ಯಯಕ್ಕೂ ಮಧ್ಯೆ ಒಂದು ವರ್ಣವ್ಯವಧಾನವು ಇರುವುದು. ಆದರೂ ಯೇನನಾವ್ಯವಧಾನಂ ತೇನ ವ್ಯವಹಿತೇಪಿ, ವಚನಪ್ರಾಮಾಣ್ಯಾತ್ ನಾವ್ಯವಧಾನಂ ಎಂಬುದಕ್ಕೆ ಅವರ್ಜನೀಯವಾದ ವ್ಯವಧಾನವಿದ್ದರೂ ವಚನಬಲದಿಂದ ಶಾಸ್ತ್ರವು ಪ್ರವೃತ್ತವಾಗುವುದು ಎಂಬುದರಿಂದ, ವ್ಯವಧಾನವಿಲ್ಲದ ಸ್ಥಳದಲ್ಲಿ ಶಾಸ್ತ್ರಕ್ಕೆ ಪ್ರವೃತ್ತಿ ಸರ್ವಥಾ ಇಲ್ಲದೇ ಇರುವುದರಿಂದ ಏಕಮಾತ್ರ ವರ್ಣ ವ್ಯವಧಾನವಿರುವಾಗ

ಬಂದರೂ ಅನೇಕ ವ್ಯವಧಾನವಿರುವಾಗ ಶಾಸ್ತ್ರವು ಪ್ರವೃತ್ತಿಸುವುದಿಲ್ಲ. ಇಲ್ಲಿ ಸ್ಥಾನಿವದ್ಭಾವ ಬಂದಮೇಲೆ ನಕಾರ ಅಕಾರ ಎರಡರಿಂದ ವ್ಯವಧಾನವಾಗುವುದರಿಂದ ಗುಣ ಬರುವುದಿಲ್ಲ. ಕೃನು+ಅತ್ ಬಂದಿರುವಾಗ ಶತೃವನ್ನು ನಿಮಿತ್ತ ಮಾಡಿಕೊಂಡು **ಸಾರ್ವಧಾತುಕಾರ್ಧಧಾತುಕಯೋಃ,** (ಪಾ. ಸೂ. ೭-೩-೮೪) ಎಂಬುದರಿಂದ ಗುಣ ಪ್ರಾಪ್ತವಾದರೆ ಕ್ಙಿತಿಚ (ಪಾ. ಸೂ. ೧-೧-೫) ಎಂಬುದರಿಂದ ನಿಷೇಧ ಬಂದು ಇಕೋಯಣಚಿ (ಪಾ. ಸೂ. ೬-೧-೭೭) ಎಂಬುದರಿಂದ ಯಣಾದೇಶ ಬಂದರೆ ಕೃನ್ವತ್ ಎಂದಾಗುವುದು. ಶತೃವು ಅದುಪದೇಶಾತ್ಪರವಾಗುವುದಿಲ್ಲವಾದ್ದರಿಂದ ತಾಸ್ಯನುದಾತ್ತೇತ್ ಎಂಬ ಅನುದಾತ್ತ ಬರುವುದಿಲ್ಲ. ಪ್ರತ್ಯಯಸ್ವರ ಬಂದರೆ ಶತೃವಿನ ಅಕಾರವು ಆದ್ಯುದಾತ್ತವನ್ನು ಹೊಂದುವುದು. **ಋವರ್ಣಾನ್ನಸ್ಯ ಣತ್ವಂಪಾಚ್ಯಂ,** (ಪಾ. ಸೂ. ೮-೪-೧೧) ಎಂಬುದರಿಂದ ಋಕಾರದ ಮುಂದಿರುವ ನಕಾರಕ್ಕೆ ಣಕಾರ, ಕೃಣ್ವತ್ ಇದರ ಮುಂದೆ ಸುಪ್ರತ್ಯಯವನ್ನಿಟ್ಟರೆ **ಉಗಿದಚಾಂ** (ಪಾ. ಸೂ. ೭-೧-೭೦) ಎಂಬುದರಿಂದ ನುಮಾಗಮ, **ಹಲ್ಙ್ಯಾಭ್ಯೋದೀರ್ಘಾತ್ಸುತಿಸ್ಯಪೃಕ್ತಂಹಲ್** (ಪಾ, ಸೂ. ೬-೧-೬೮) ಎಂಬುದರಿಂದ ಸು ಲೋಪ, **ಸಂಯೋಗಾಂತಸ್ಯಲೋಪಃ** (ಪಾ, ಸೂ. ೮-೨-೨೩) ಎಂಬುದರಿಂದ ತಲೋಪ. ತಲೋಪವು ಅಸಿದ್ಧವಾಗುವುದರಿಂದ ನಕಾರಕ್ಕೆ ಲೋಪ ಬರುವುದಿಲ್ಲ. ಕೃಣ್ವನ್ ಎಂದಾಗುವುದು.

**ಅಕೇತವೇ**—ಇಲ್ಲಿ ಬಹುವ್ರೀಹಿಸಮಾಸವನ್ನು ಮಾಡಿದರೆ **ನಞ್ಸುಭ್ಯಾಂ** (ಪಾ. ಸೂ, ೬-೨-೧೭೨) ಎಂಬುದರಿಂದ ಉತ್ತರಪದವು ಅಂತೋದಾತ್ತ.

**ಪೇಶಃ**— **ನಬ್ವಿಷಯಸ್ಯಾನಿಸಂತಸ್ಯ** (ಗಾ. ಸೂ ೨೬) ಎಂಬುದರಿಂದ ಆದ್ಯುದಾತ್ತ.

**ಮರ್ಯಾಃ**—**ಛಂದಸಿನಿಷ್ಟರ್ಕ್ಯದೇವಹೂಯಪ್ರಣೀಯೋನ್ನೀಯೋಚ್ಛಿಷ್ಯಮರ್ಯಸ್ತರ್ಯಾಧ್ವರ್ಯಖನ್ಯಖಾನ್ಯದೇವಯಜ್ಯಾಪೃಚ್ಛ್ಯಪ್ರತಿಷೀವ್ಯಬ್ರಹ್ಮವಾದ್ಯಭಾವ್ಯಸ್ತಾವ್ಯೋಪಚಾಯ್ಯಪೃಡಾನಿ** (ಪಾ. ಸೂ- ೩-೧-೧೨೩ ) ಛಂದಸ್ಸಿನಲ್ಲಿ ಈ ಶಬ್ದಗಳು ನಿಪಾತಿಸಲ್ಪಡುವುವು ಎಂಬುದರಿಂದ ಮೃಜ ಧಾತುವಿನ ಮುಂದೆ ಯತ್ ಪ್ರತ್ಯಯ ನಿಪಾತಿತವಾಗಿರುವುದು. ಆಮಂತ್ರಿತವಾದ್ದರಿಂದ **ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ಅನುದಾತ್ತ ಬರುವುದು. ಪೇಶಃ, ಎಂಬುದಕ್ಕೆ ಮರ್ಯಾಃ ಎಂಬುದರೊಂದಿಗೆ ಪರಸ್ಪರಾನ್ವಯವಿಲ್ಲವಾದಕಾರಣ ಸಾಮರ್ಥ್ಯವಿಲ್ಲ. ಆದ್ದರಿಂದ **ಸುಬಾಮಂತ್ರಿತೇ** (ಪಾ. ಸೂ. ೨-೧-೨) ಎಂಬುದರಿಂದ ಪರಾಂಗವದ್ಭಾವ ಬರುವುದಿಲ್ಲ.

**ಅಪೇಶಸೇ**—**ನಞ್ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದ ಅಂತೋದಾತ್ತ.

**ಸಮ್**—ನಿಪಾತವಾದ್ದರಿಂದ ಆದ್ಯುದಾತ್ತ.

**ಉಷದ್ಭಿಃ**—**ಉಷಪ್ಲುಷದಾಹೇ** ಧಾತು. ಉಷಧಾತುವಿನ ಮುಂದೆ ಲಟ್ ಪ್ರತ್ಯಯವೂ ಅದಕ್ಕೆ ಶತೃ ಆದೇಶವೂ ಬರುವುದು. ಶತೃ ಪರದಲ್ಲಿರುವಾಗ ಶಪ್ ವಿಕರಣವು ಪ್ರಾಪ್ತವಾದರೆ ಅದಕ್ಕೆ ಬದಲಾಗಿ ವ್ಯತ್ಯಯದಿಂದ ಶ ಎಂಬ ವಿಕರಣವೇ ಬರುವುದು. **ಸಾರ್ವಧಾತುಕಮಪಿತ್** (ಪಾ. ಸೂ. ೧-೨-೪) ಪಿತ್ತಲ್ಲದ ಸಾರ್ವಧಾತುಕವು ಙಿತ್ತಿನಂತೆ ಆಗುವುದು. ಎಂಬುದರಿಂದ ಶ ವು ಙಿತ್ತಾದ್ದರಿಂದ **ಕ್ಙಿತಿಚ** (ಪಾ. ಸೂ. ೧-೧-೫) ಎಂಬುದರಿಂದ ಲಘೂಪಧಗುಣಕ್ಕೆ ನಿಷೇಧ ಬರುವುದು. ಶ ಎಂಬುದು ಪ್ರತ್ಯಯಸ್ವರದಿಂದ ಉದಾತ್ತ. ಅದರ ಮುಂದಿರುವ ಶತೃವು ಅದುಪದೇಶದ ಪರದಲ್ಲಿರುವ ಲ ಸ್ಥಾನಿಕ ಸಾರ್ವಧಾತುಕವಾದ್ದರಿಂದ, ಅನುದಾತ್ತ, ವಿಕರ-

ಣದ ಅಕಾರ, ಶತೃವಿನ ಅಕಾರಗಳೆರಡಕ್ಕೂ ಅತೋಗುಣೇ ಎಂಬುದರಿಂದ ಪರರೂಪ ಏಕಾದೇಶವಾಗಿ ಬರುವುದು. ಏಕಾದೇಶದಿಂದ ಬಂದ ಅಕಾರವು ಏಕಾದೇಶ **ಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಎಂಬುದರಿಂದ ಉದಾತ್ತ

**ಅಜಾಯಥಾಃ**—ಅಜಾಯತ ಎಂಬ ಪ್ರಥಮ ಪುರುಷಕ್ಕೆ ಬದಲಾಗಿ ವ್ಯತ್ಯಯದಿಂದ ಮಧ್ಯಮ ಪುರುಷ ಬಂದಿರುವುದು. **ತಿಙ್ಙತಿಙಃ** (ಪಾ. ಸೂ, ೮-೧-೨೮) ಎಂಬುದರಿಂದ ಅನುದಾತ್ತ ॥ ೩ ॥

ಸಂಹಿತಾಪಾಠಃ

ಆದಹ ಸ್ವಧಾಮನು ಪುನರ್ಗರ್ಭತ್ವಮೇರಿರೇ ।
ದಧಾನಾ ನಾಮ ಯಜ್ಞಿಯಂ ॥ ೪ ॥

॥ ಪದಪಾಠಃ ॥

ಆತ್ । ಅಹ । ಸ್ವಧಾಂ । ಅನು । ಪುನಃ । ಗರ್ಭತ್ವಂ । ಆ ಽ ಈರಿರೇ ।
ದಧಾನಾಃ । ನಾಮ । ಯಜ್ಞಿಯಂ ॥ ೪ ॥

॥ ಸಾಯಣಭಾಷ್ಯಂ ॥

ಅತ್ರಾಸ್ತಿ ವಿಶೇಷವಿನಿಯೋಗಃ । ಚತುರ್ವಿಂಶೇಽಹನಿ ಪ್ರಾತಃಸವನೇ ಬ್ರಾಹ್ಮಣಾಚ್ಛಂಸಿಶಸ್ತ್ರ ಆದಹ ಸ್ವಧಾಮನ್ವಿತಿ ದ್ವೇ ಋಚೌ । ಇಂದ್ರೇಣ ಸಂ ಹಿ ದೃಕ್ಷಸ ಇತ್ಯೇಕಾ । ಅಯಂ ತೃಚಃ ಷಳಹಸ್ತೋತ್ರಿಯಸಂಜ್ಞಕಃ । ತಥಾ ಚ ಸೂತ್ರಿತಂ ಚತುರ್ವಿಂಶೇ ಹೋತಾಜನಿಷ್ಟೇತಿ ಖಂಡೇ । ಇಂದ್ರೇಣ ಸಂ ಹಿ ದೃಕ್ಷಸ ಆದಹ ಸ್ವಧಾಮನ್ವಿತ್ಯೇಕಾ ದ್ವೇ ಚ । ಆ. ೭-೨ । ಇತಿ । ಯದ್ಯಪ್ಯೇತದೈಂದ್ರಂ ಸೂಕ್ತಂ ತಥಾಪ್ಯಾದಹೇತ್ಯಾದಿಷು ಷಟ್ಸು ಮರುತೋ ವರ್ಣ್ಯಂತೇ । ಪ್ರಾಯೇಣೈಂದ್ರೇ ಮರುತ ಇತ್ಯನುಕ್ರಮಣಿಕಾಯಾಮುಕ್ತತ್ವಾತ್ । ಅನು. ೨ ೨೨ ॥ ಆದಿತ್ಯಯಮಾನಂತರ್ಯಾರ್ಥೋ ನಿಪಾತಃ । ಅಹೇತ್ಯವಧಾರಣಾರ್ಥಃ । ಆದಹ ವರ್ಷರ್ತೋರನಂತರಮೇವ । ಸ್ವಧಾಮನು । ಇತಃ ಪರಂ ಜನಿಷ್ಯಮಾಣಮನ್ನಮುದಕಂ ವಾನುಲಕ್ಷ್ಯ ಮರುತೋ ದೇವಾ ಗರ್ಭತ್ವಮೇರಿರೇ । ಮೇಘಮಧ್ಯೇ ಜಲಸ್ಯ ಗರ್ಭಾಕಾರಂ ಪ್ರೇರಿತವಂತಃ । ಜಲಸ್ಯ ಕರ್ತಾರಂ ಪರ್ಜನ್ಯಂ ಪ್ರೇರಿತವಂತಃ । ಪ್ರತಿಸಂವತ್ಸರಮೇವಂ ಕುರ್ವಂತೀತಿ ದರ್ಶಯಿತುಂ ಪುನಃಶಬ್ದಃ ಪ್ರಯುಕ್ತಃ । ಕೀದೃಶಾ ಮರುತಃ । ಯಜ್ಞಿಯಂ ಯಜ್ಞಾರ್ಹಂ ನಾಮ ದಧಾನಾ ಧಾರಯಂತಃ । ಸಪ್ತಸು ಗಣೇಷು ಮರುತಾಮೀದೃಙ್ಚಾನ್ಯಾದೃಙ್ಚೇತ್ಯಾದೀನಿ ಯಜ್ಞಯೋಗ್ಯಾನಿ ನಾಮಾನ್ಯನ್ಯತ್ರಾಮ್ನಾತಾನಿ । ಅಂಧ ಇತ್ಯಾದಿಷ್ವಷ್ಟಾವಿಂಶತಿಸಂಖ್ಯಾಕೇಷ್ವನ್ನನಾಮಸೂರ್ಕ್ ರಸಃ

ಸ್ವಧೇತಿ ಪಠಿತಂ । ಅರ್ಣ ಇತ್ಯಾದಿಷ್ವೇಕಶತಸಂಖ್ಯಾಕೇಷೂದಕನಾಮಸು ತೇಜಃ ಸ್ವಧಾಕ್ಷರಮಿತಿ ಪಠಿತಂ॥ ಆದಹ ನಿಪಾತಾವಾದ್ಯುದಾತ್ತೌ । ಸ್ವಧಾಂ । ಸ್ವಂ ಲೋಕಂ ದಧಾತಿ ಪುಷ್ಣಾತೀತಿ । ಸ್ವಧಾ । ಆತೋಽನುಪಸರ್ಗೇ ಕಃ । ಪಾ. ೩-೨-೩ । ಕೃದುತ್ತರಪದಪ್ರಕೃತಿಸ್ವರತ್ವಂ । ಅನುಪುನಃಶಬ್ದೌ ನಿಪಾತಾವಾದ್ಯುದಾತ್ತೌ । ಗರ್ಭಸ್ಯ ಭಾವೋ ಗರ್ಭತ್ವಂ । ಪ್ರತ್ಯಯಸ್ವರಃ । ಏರಿರೇ । ಅಂತರ್ಭಾವಿತಣ್ಯರ್ಥಾದೀರ ಗತಾವಿತ್ಯಸ್ಮಾದನುದಾತ್ತೇತಃ ಪರಸ್ಯ ಲಿಟೋ ಝಸ್ಯ ಇರೇಚ್ । ಪಾ. ೩-೪-೮೧ । ಚಿತ್ತ್ವಾದಂತೋದಾತ್ತಃ । ಸಹ ಸುಪಾ । ಪಾ. ೨-೧-೪ । ಇತ್ಯತ್ರ ಸುಪೇತಿ ಯೋಗವಿಭಾಗಾದಾಙಾ ಸಹ ತಿಙಃ ಸಮಾಸೇಽಪಿ ಸಮಾಸಸ್ಯ । ಪಾ. ೬-೧-೨೨೩ । ಇತ್ಯಂತೋದಾತ್ತತ್ವಂ । ಇಜಾದೇಶ್ಚ ಗುರುಮತೋಽನೃಚ್ಛಃ । ಪಾ. ೩-೧-೩೬ । ಇತ್ಯಾಮ್ ನ ಭವತಿ ಮಂತ್ರತ್ವಾತ್ । ಅಹಶಬ್ದಯೋಗಾನ್ನಿಘಾತಾಭಾವಃ । ತುಪಶ್ಯಪಶ್ಯತಾಹೈಃ ಪೂಜಾಯಾಂ । ಪಾ. ೮-೧-೩೯ । ಇತಿ ನಿಷೇಧಾತ್ । ದಧಾನಾಃ । ಶಾನಚಶ್ಚಿತ್ತ್ವಾದಂತೋದಾತ್ತತ್ವೇ ಪ್ರಾಪ್ತೇಽಭ್ಯಸ್ತಾನಾಮಾದಿಃ । ಪಾ. ೬-೧-೧೮೯ । ಇತ್ಯಾದ್ಯುದಾತ್ತತ್ವಂ । ಯಜ್ಞಮರ್ಹತಿ ಯಜ್ಞಿಯಂ । ಯಜ್ಞರ್ತ್ವಿಗ್ಭ್ಯಾಂ ಘಖಞೌ । ಪಾ ೫-೧-೭೧ । ಇತಿ ಘಪ್ರತ್ಯಯಃ । ಆಯನೇಯೀನೀಯಿಯಃ ಫಢಖಛಘಾಂ ಪ್ರತ್ಯಯಾದೀನಾಂ । ಪಾ. ೭-೧-೨ । ಇತೀಯಾದೇಶಃ । ಪ್ರತ್ಯಯಸ್ವರೇಣೇಕಾರ ಉದಾತ್ತಃ ॥

॥ ಪ್ರತಿಪದಾರ್ಥ ॥

**ಆತ್ ಅಹ**—(ವರ್ಷಾಕಾಲವು ಕಳೆದ) ನಂತರದಲ್ಲಿಯೇ । **ಯಜ್ಞಿಯಂ**—ಯಜ್ಞಾರ್ಹವಾದ । **ನಾಮ**—ಹೆಸರನ್ನು । **ದಧಾನಾಃ**—ಧರಿಸಿರುವ (ಮರುತ್ತುಗಳು ಎಂದರೆ ಮರುದ್ದೇವತೆಗಳು) । **ಸ್ವಧಾಂ ಅನು**—(ಇನ್ನು ಮೇಲೆ ಬೆಳೆಯಬೇಕಾಗಿರುವ ಸಸ್ಯರೂಪವಾದ) ಅನ್ನವನ್ನೂ, ಉದಕವನ್ನೂ (ಉಂಟುಮಾಡುವುದಕ್ಕಾಗಿ) **ಪುನಃ**—ಮತ್ತೆ (ಹಿಂದಿನ ವರ್ಷಾಕಾಲದಲ್ಲಾದಂತೆ ಈಗಲೂ ಸಹ) । **ಗರ್ಭತ್ವಂ**—(ಮೇಘಮಧ್ಯದಲ್ಲಿ ಜಲವು ಗರ್ಭಾಕಾರದಂತೆ ಒಟ್ಟಾಗಿ ಸೇರುವಂತೆ) ಉದಕವು ಮೇಘಮಂಡಲದಲ್ಲಿ ಒಟ್ಟಾಗಿ ಸೇರುವುದನ್ನು । **ಏರಿರೇ**—ಪ್ರೇರಿಸಿದರು (ಎಂದರೆ ಮಳೆಯನ್ನುಂಟುಮಾಡುವ ಪರ್ಜನ್ಯನನ್ನು ಪ್ರೇರಿಸಿದರು).

॥ ಭಾವಾರ್ಥ ॥

ವರ್ಷಾಕಾಲವು ಕಳೆದನಂತರ ಯಜ್ಞಯಾಗಾದಿಗಳಲ್ಲಿ ಗೌರವಿಸಲ್ಪಡುವ ಹೆಸರುಗಳಿಂದ ಪ್ರಸಿದ್ಧರಾದ ಮರುದ್ದೇವತೆಗಳು ಜನರಿಗೆ ಸಸ್ಯರೂಪವಾದ ಅನ್ನ ಮತ್ತು ಉದಕಗಳನ್ನು ಕೊಡುವುದಕ್ಕಾಗಿ ಪುನಃ ಹಿಂದಿನಂತೆ ಈಗಲೂ ವೃಷ್ಟಿಕರ್ಮದ ಅಂಗವಾಗಿ ಗರ್ಭವನ್ನು ಎಂದರೆ ಮೇಘಮಧ್ಯದಲ್ಲಿ ಜಲವು ಒಟ್ಟಾಗಿ ಸೇರಿ ಗರ್ಭರೂಪ ದಿಂದಿರುವಂತೆ ಪರ್ಜನ್ಯನನ್ನು ಪ್ರೇರಿಸಿದರು.

## English Translation.

Thereafter (the Maruts) who bear the names invoked in sacrificial rites, having seen the rain about to be engendered instigated him to resume his embryo condition (in the clouds)

॥ ವಿಶೇಷವಿಷಯಗಳು ॥

ಭಾಷ್ಯಕಾರರು ಈ ಋಕ್ಕಿಗೆ ವಿಶೇಷವಿನಿಯೋಗವಿದೆಯೆಂದು ಹೇಳಿರುವರು. ಇಪ್ಪತ್ತನಾಲ್ಕನೆಯ ದಿವಸದ ಹಗಲಿನಲ್ಲಿ ಪ್ರಾತಸ್ಸವನಕಾಲದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು **ಆದಹ ಸ್ವಧಾಮನು** ಎಂದು ಮೊದಲಾದ ಎರಡು ಋಕ್ಕುಗಳನ್ನೂ (ಎಂದರೆ ಈ ಸೂಕ್ತದ ೪ ಮತ್ತು ೫ನೆಯ ಋಕ್ಕುಗಳು) **ಇಂದ್ರೇಣ ಸಂ ಹಿ ದೃಕ್ಷಸೇ** ಎಂಬ (ಈ ಸೂಕ್ತದ ೭ನೇ ಋಕ್ಕು) ಒಂದು ಋಕ್ಕನ್ನು ಎಂದರೆ ಈ ಮೂರು ಋಕ್ಕುಗಳೂ ಸೇರಿದ ತೃಚವನ್ನು ಶಸ್ತ್ರಮಂತ್ರವನ್ನಾಗಿ ಪಠಿಸುವನು. ಈ ತೃಚಕ್ಕೆ (ಮೂರು ಋಕ್ಕುಗಳಿಗೆ) ಷಳಹಸ್ತೋತ್ರಿಯವೆಂದು ಹೆಸರಿರುವುದು. ಈ ವಿಷಯದಲ್ಲಿ ಆಶ್ವಲಾಯನರು ತಮ್ಮ ಶ್ರೌತಸೂತ್ರದ ಹೋತಾಜನಿಷ್ಟವೆಂಬ ಖಂಡದಲ್ಲಿ **ಇಂದ್ರೇಣ ಸಂ ಹಿ ದೃಕ್ಷಸ ಆದಹ ಸ್ವಧಾಮನ್ವಿತ್ಯೇಕಾ ದ್ವೇ ಚ** (ಆಶ್ವ. ಸೂ. ೭-೨) ಎಂದು ಹೇಳಿರುವರು. ಈ ಸೂಕ್ತವು ಇಂದ್ರದೇವತಾಕವಾಗಿದ್ದರೂ ಆದಹ ಎಂದು ಮೊದಲಾದ ಈ ಸೂಕ್ತದ ಆರು ಋಕ್ಕುಗಳಲ್ಲಿ ಮರು ದ್ದೇವತೆಗಳು ವರ್ಣಿಸಲ್ಪಟ್ಟಿರುವರು. ಪ್ರಾಯಶಃ ಈ ಕಾರಣಕ್ಕಾಗಿಯೇ ಅನುಕ್ರಮಣಿಕೆಯಲ್ಲಿ (ಅನು. ೨-೨೭) **ಐಂದ್ರೇ ಮರುತ** ಎಂದು ಉಕ್ತವಾಗಿರುವುದು.

ಈ ಋಕ್ಕಿನ ಅರ್ಥವೂ ಸ್ಪಷ್ಟವಾಗಿಲ್ಲ ಮರುತ್ತುಗಳ ಹೆಸರೂ ಈ ಋಕ್ಕುಗಳಲ್ಲಿಲ್ಲವಾದರೂ ಭಾಷ್ಯ ಕಾರರೂ ಅನುಕ್ರಮಣಿಕೆಯನ್ನನುಸರಿಸಿ ಮರುತ್ತುಗಳ ಪರವಾಗಿಯೇ ಅರ್ಥಮಾಡಿರುವರು. ವರ್ಷಾಕಾಲದಲ್ಲಿ ಕಪ್ಪಗಿರುವ ದೊಡ್ಡ ದೊಡ್ಡ ಮೋಡಗಳು ಗುಂಪಾಗಿ ಸೇರುವುದರಿಂದ ಅವುಗಳಲ್ಲಿ ಕೂಡುವ ಜಲರಾಶಿಯನ್ನು ಗರ್ಭವೆಂದು ಇಲ್ಲಿ ವರ್ಣಿಸಲಾಗಿದೆ ಈ ರೀತಿಯಾದ ಮೇಘಗರ್ಭದಿಂದ ಜನರಿಗೆ ವೃಷ್ಟಿರೂಪವಾದ ಉದಕವೂ, ಸಸ್ಯರೂಪವಾದ ಅನ್ನವೂ ದೊರೆಯುವುದರಿಂದ ಇದನ್ನು ಮರುದ್ದೇವತೆಗಳು ಪ್ರೇರಿಸುವರೆಂದು ಭಾವವು.

**ಆತ್**--ಅನಂತರ ಎಂದರೆ ವರ್ಷಾಕಾಲವು ಕಳೆದ ಅನಂತರ ಎಂದರ್ಥವು

**ಆಹ**--ಏವ ಅವಧಾರಣಾರ್ಥ ಅಥವಾ ಇದನ್ನು ಆಶ್ಚರ್ಯಸಂಜ್ಞಾವಾಚಕಪದವೆಂದೂ ಭಾವಿಸ ಬಹುದು.

**ಸ್ವಧಾಂ**--ಅಂಧ ಮೊದಲಾದ ಅನ್ನಸೂಚಕವಾದ ಇಪ್ಪತ್ತೆಂಟು ಶಬ್ದಗಳ ಮಧ್ಯದಲ್ಲಿ ಊರ್ಕ್, ರಸಃ, ಸ್ವಧಾ ಎಂಬ ಶಬ್ದಗಳು ಪಠಿತವಾಗಿವೆ (ನಿ. ೩-೯) ಮತ್ತು ಅರ್ಣಃ ಕ್ಷೋದಃ ಮೊದಲಾದ ೧೦೧ ಉದಕಸೂಚಕ ನಾಮಗಳ ಮಧ್ಯದಲ್ಲಿಯೂ ಸ್ವಧಾ ಶಬ್ದವು ಪಠಿತವಾಗಿದೆ (ನಿ. ೨-೨೪) ಸ್ವಧಾಶಬ್ದದ ಅರ್ಥವಿಚಾರವಾಗಿ ವಿದ್ವಾಂಸರಲ್ಲಿ ವಿಶೇಷವಾದ ಜಿಜ್ಞಾಸೆಯುಂಟಾಗಿದೆ. **ಸ್ವಂ ಲೋಕಂ ದಧಾತಿ ಪುಷ್ಣಾತೀತಿ ಸ್ವಧಾ** ಎಂದರೆ **ಲೋಕವನ್ನು ಪೋಷಿಸುವುದಾದ್ದರಿಂದ** (ಅನ್ನಕ್ಕೆ) ಸ್ವಧಾ ಎಂದು ಹೆಸರು ಎಂದು ಭಾಷ್ಯಕಾರರು ಈ ಶಬ್ದದ **ಅವಯವಾರ್ಥವನ್ನು ಹೇಳಿದಾರೆ.** ಪಾಶ್ಚಾತ್ಯಪಂಡಿತರು ಈ ಶಬ್ದಕ್ಕೆ ವಿಧವಿಧವಾದ ಅರ್ಥವಿರುವುದೆಂದು ಅಭಿ ಪ್ರಾಯಪಡುತ್ತಾರೆ. ಸ್ವ+ಧಾ=ಸ್ವಧಾ one's own place; ಸ್ವಧಾ-ಪಿತೃಗಳಿಗೆ ಹವಿಸ್ಸನ್ನು ಅಗ್ನಿಯಲ್ಲಿ ಹೋಮ ಮಾಡುವಾಗ ಈ ಶಬ್ದವನ್ನು ಉಪಯೋಗಿಸುವರು, self position; self power, inherent power, accostomed place; comfort, joy ಇತ್ಯಾದಿ. ಈ ಶಬ್ದಾರ್ಥ ವಿಚಾರದಲ್ಲಿ ಸ್ಕಂದಸ್ವಾಮಿ ಮತ್ತು ವೆಂಕಟಮಾಧವರ ಅಭಿಪ್ರಾಯವೂ ಸಾಯಣರಂತೆಯೇ ಇದೆ

**ಅನು—ಪಶ್ಚಾತ್,** ಅನಂತರ, ವರ್ಷಾಕಾಲ ಕಳೆದ ಅನಂತರ. ಸ್ಕಂದಸ್ವಾಮಿಯು ವರ್ಷಾಕಾಲ (೪ ತಿಂಗಳುಗಳು) ಕಳೆದನಂತರ ಮತ್ತೆ ವರ್ಷಾಕಾಲ ಪ್ರಾರಂಭವಾಗುವುದಕ್ಕೆ ಮಧ್ಯದಲ್ಲಿ ಇರುವ ೮ ತಿಂಗಳು

ಗಳು ಎಂದು ಹೇಳುವರು, ಈ ವಿಷಯಸಮರ್ಥನೆಗಾಗಿ—**ವಾರ್ಷಿಕಾಂಶ್ಚತುರೋ ಮಾಸಾನ್ ವರ್ಷಿತ್ವಾ ತದನಂತರಮಷ್ಟೌ ಮಾಸಾಂಸ್ತದುದಕಂ ರಶ್ಮಿಭಿಃ ಪ್ರತ್ಯಾಹೃತ್ಯ ತದಾಗಾಮಿಸಂವತ್ಸರೇ ವರ್ಷಿತುಂ ಪುನರ್ಗರ್ಭಮಾಪಾದಯಂತಿ ಮರುತಃ** ಎಂಬ ವಾಕ್ಯವನ್ನು ಪ್ರಮಾಣವಾಗಿ ಉದಹರಿಸಿರುವರು.

**ಪುನಃ**— ಈ ಶಬ್ದವು ಹಿಂದೆ ಕಳೆದ ವರ್ಷಾಕಾಲವಲ್ಲದೆ, ಮುಂದೆ ಮತ್ತೊಂದು ವರ್ಷಾಕಾಲ ಬರುವುದೆಂದು ಸೂಚಿಸುವುದು.

**ಗರ್ಭತ್ವಂ**— ಮೇಘಮಂಡಲದಲ್ಲಿ ಒಟ್ಟಾಗಿ ಸೇರಿರುವ ಜಲರಾಶಿಗೆ (ಮೇಘದ) ಗರ್ಭವೆಂದು ಇಲ್ಲಿ ಅರ್ಥಮಾಡಬೇಕು

**ದಧಾನಾಃ**— ಸಾಯಣರು ಈ ಶಬ್ದವನ್ನು **ಯಜ್ಞಿಯಂ ನಾಮ**-ಯಜ್ಞಾರ್ಹವಾದ ಹೆಸರನ್ನು ದಧಾನಾಃ ಧರಿಸಿರುವ ಎಂದರ್ಥ ಮಾಡಿರುವರು. ಸ್ಕಂದಸ್ವಾಮಿಯು ನಾಮ-ಉದಕವನ್ನು ದಧಾನಾ-ಧರಿಸಿರುವ ಎಂದೂ, ಸ್ವಧಾಂ-ಸಸ್ಯರೂಪವಾದ ಅನ್ನವನ್ನು **ದಧಾನಾಃ**-ಕೊಡುವವರೆಂದೂ (ದಧಾತಿರ್ದಾನಾರ್ಥಃ) ಎಂದೂ ಅರ್ಥ ಮಾಡಿರುವರು.

**ನಾಮ**— ಹೆಸರು. ಸ್ಕಂದಸ್ವಾಮಿಯು ಈ ನಾಮವೆಂಬ ಶಬ್ದಕ್ಕೆ ಉದಕವೆಂದೂ ಅರ್ಥವಿರುವುದೆಂದು ಹೇಳುವರು. ನಿರುಕ್ತದಲ್ಲಿ **ಅರ್ಣಃ ಕ್ಷೋದಃ** ಮೊದಲಾದ ೧೦೧ ಉದಕನಾಮಗಳ ಮಧ್ಯದಲ್ಲಿ **ನಾಮ** ಎಂಬ ಶಬ್ದವು ಪಠಿತವಾಗಿದೆ (ನಿ. ೨-೨೪) ಇದಲ್ಲದೆ **ನಾಮ**ಶಬ್ದವನ್ನು ಸಂಜ್ಞಾವಾಚಕವೆಂದೂ ಹೇಳಿರುವರು.

**ಯಜ್ಞಿಯಂ**— ಯಜ್ಞಸಂಬಂಧವಾದ ಎಂದರೆ, ಯಜ್ಞದಲ್ಲಿ ಆಹ್ವಾನಾದಿಗಳಿಂದ ಆರಾಧಿಸಲು ಯೋಗ್ಯವಾದ.

ವ್ಯಾಕರಣಪ್ರಕ್ರಿಯಾ

**ಆತ್-ಅಹ**— ನಿಪಾತವಾದ್ದರಿಂದ ಆದ್ಯುದಾತ್ತ. **ಸ್ವಧಾಮ್**— **ಸ್ವಂ ಲೋಕಂ ದಧಾತಿ ಪುಷ್ಣಾತೀತಿ** (ತನ್ನ ಲೋಕವನ್ನು ಪುಷ್ಟಿಗೊಳಿಸುವುದು.)

**ಸ್ವಧಾ**— **ಆತೋಽನುಪಸರ್ಗೇ ಕಃ** (ಪಾ. ಸೂ. ೩-೨-೩) ಉಪಸರ್ಗವಲ್ಲದ ಸುಬಂತವು ಉಪಪದವಾಗಿರುವಾಗ ಆಕಾರಾಂತ ಧಾತುವಿನ ಮುಂದೆ ಕ ಪ್ರತ್ಯಯಬರುವುದು ಎಂಬುವರಿಂದ ಕ ಪ್ರತ್ಯಯ ಬಂದರೆ **ಆತೋಲೋಪ ಇಟಿ ಚ** (೬-೪-೬೪) ಎಂಬುದರಿಂದ ಆಲೋಪ ನಂತರ ಅಜಾದ್ಯತಷ್ಟಾಪ್ (ಪಾ.ಸೂ- ೪-೧-೪) ಎಂಬುದರಿಂದ ಟಾಪ್ ಬರುವುದು. ಟಾಪ್=ಅನುದಾತ್ತ. ಕ ಪ್ರತ್ಯಯ. ಪ್ರತ್ಯಯಸ್ವರದಿಂದ ಉದಾತ್ತ. **ಗತಿಕಾರಕೋಪಪದಾತ್ಕೃತ್** ( ಪಾ. ಸೂ. ೬-೨-೧೩೯ ) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರದಿಂದ ಸ್ವಧಾ ಶಬ್ದ ಅಂತೋದಾತ್ತ ನಂತರ ಟಾ ಪ್ರತ್ಯಯದೊಂದಿಗೆ ಸವರ್ಣ ದೀರ್ಘ ಬಂದರೆ **ಏಕಾದೇಶ ಉದಾತ್ತೇನೋದಾತ್ತಃ** (ಪಾ ಸೂ. ೮-೨-೫) ಎಂಬುದರಿಂದ ಉದಾತ್ತ ಸ್ವರವ ಪಂಚ ಸ್ವಧಾಶಬ್ದವು ಅಂತೋದಾತ್ತ,

**ಅಸು**— ಪುನಃ ಈ ಎರಡು ಶಬ್ದಗಳು ನಿಪಾತವಾದ್ದರಿಂದ ಆದ್ಯುದಾತ್ತಗಳು-

**ಗರ್ಭತ್ವಂ**— **ತಸ್ಯ ಭಾವಸ್ತ್ವತಲೌ** (ಪಾ,ಸೂ. ೫೧-೧೧೯) ಷಷ್ಠ್ಯಂತದ ಮುಂದೆ ಭಾವಾರ್ಥದಲ್ಲಿ ತ್ವತಲ್ ಪ್ರತ್ಯಯಗಳು ಬರುವುವು- ತ್ವ ಪ್ರತ್ಯಯಬಂದರೆ ನಪುಂಸಕಲಿಂಗ ತಲಂತವು ಸ್ತ್ರೀಲಿಂಗ, ಗರ್ಭಸ್ಯ ಭಾವಃ ಎಂದು ವಿಗ್ರಹ ಮಾಡಿದರೆ ತ್ವ ಪ್ರತ್ಯಯ ಬಂದು ಗರ್ಭತ್ವಂ ಎಂದಾಗುತ್ತೆ ತ್ವ ಪ್ರತ್ಯಯ ಸ್ವರದಿಂದ ಉದಾತ್ತ.

**ಏರಿರೇ**—ಅಂತರ್ಭಾವಿತಣಿಚ್ಪ್ರತ್ಯಯಾರ್ಥಕವೂ ಅನುದಾತ್ತೇತ್ತೂ ಆದ 'ಈರ ಗತೌ' ಧಾತುವಿನ ಮುಂದೆ ಲಿಟ್ಪನ್ನಿಟ್ಟರೆ ಪ್ರಥಮಪುರುಷ ಬಹುವಚನದಲ್ಲಿ ಝ ಆದೇಶ ಬರುವುದು. ಝಗೆ **ಲಿಟಸ್ತಝಯೋ-ರೇಶಿರೇಚ್** (ಪಾ. ಸೂ. ೩-೪-೮೧) ಲಿಟ್ಟಿನ ಸ್ಥಾನದಲ್ಲಿ ಬಂದ-ತ-ಝ ಇವುಗಳಿಗೆ ಕ್ರಮವಾಗಿ ಏಶ್-ಇರೇಚ್ ಆದೇಶಗಳು ಬರುವುವು ಎಂಬುದರಿಂದ ಇರೇಚ್ ಆದೇಶ ಬರುವುದು. ಈರಿರೇ ಎಂದಾಗುವುದು. ಪ್ರತ್ಯಯವು ಚಿತ್ತಾದ್ದರಿಂದ **ಚಿತಃ** (ಪಾ ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತ. **ಸಹ ಸುಪಾ** (ಪಾ.ಸೂ. ೨-೧-೪) ಇಲ್ಲಿ ಸಹ ಎಂದು ಸೂತ್ರವನ್ನು ಮಾಡುವರು, ಸಹ ಎಂಬುದಕ್ಕೆ ಸುಬಂತವು ಸಮರ್ಥದೊಂದಿಗೆ ಸಮಾಸವನ್ನು ಹೊಂದುವುದು ಎಂದು ಅರ್ಥ. ಇಲ್ಲಿ ಆ ಎಂಬ ಸುಬಂತಕ್ಕೆ ಸಮರ್ಥವಾದ ಈರಿರೇ ಪದದೊಂದಿಗೆ ಪೂರ್ವೋಕ್ತ ಸೂತ್ರಖಂಡದಿಂದ ಸಮಾಸ ಬರುವುದು ಆ+ಈ ಗಳಿಗೆ ಗುಣಬಂದರೆ ಏರಿರೇ ಎಂದಾಗುವುದು. ಸಮಾಸ ಬಂದ ಮೇಲೆಯೂ **ಸಮಾಸಸ್ಯ** (ಪಾ. ಸೂ. ೬ ೧-೨೨೩) ಎಂಬುದರಿಂದ ಅಂತೋದಾತ್ತವೇ ಆಗುವುದು ಈರ್+ಲಿಟ್ ಎಂದಿರುವಾಗ **ಇಜಾದೇಶ್ಚ ಗುರುಮತೋನೃಚ್ಛಃ** (ಪಾ ಸೂ ೩-೧-೩೬) ಲಿಟ್ ಪರದಲ್ಲಿರುವಾಗ ಇಜಾದಿಯೂ ಗುರುವರ್ಣವುಳ್ಳದ್ದೂ ಋಚ್ಛತಿಭಿನ್ನವೂ ಆದ ಧಾತುವಿನ ಮುಂದೆ ಆಮ್ ಬರುವುದು ಎಂಬುದರಿಂದ ಆಮ್ ಪ್ರತ್ಯಯವು ಪ್ರಾಪ್ತವಾಗುವುದು. ಆದರೂ **ಕಾಸ್ಪ್ರತ್ಯಯಾದಾಮಮಂತ್ರೇಲಿಟಿ** (ಪಾ ಸೂ. ೩-೧-೩೫) ಎಂಬ ಹಿಂದಿನ ಸೂತ್ರದಿಂದ ಅಮಂತ್ರೇ ಎಂಬ ಪದವನ್ನು ಅಲ್ಲಿಗೆ ಅನುವೃತ್ತಿ ಮಾಡಿಕೊಂಡು ಮಂತ್ರದಲ್ಲಿ ಆಮ್ ಪ್ರತ್ಯಯ ಬರುವುದಿಲ್ಲ ಎಂದು ಅರ್ಥವನ್ನು ಉಪಪಾದಿಸಬೇಕು. ಇದು ಮಂತ್ರವಾದ್ದರಿಂದ ಇಲ್ಲಿ ಆಮ್ ಪ್ರತ್ಯಯ ಬರುವುದಿಲ್ಲ. **ತುಪಶ್ಯಪಶ್ಯತಾಹೈಃಪೂಜಾಯಾಮ್** (ಪಾ- ಸೂ. ೮-೧-೩೯) ಪೂಜೆ ತೋರುವಾಗ ಈ ಪದಗಳ ಯೋಗವಿರುವ ತಿಙಂತವು ಅನುದಾತ್ತವಾಗುವುದಿಲ್ಲ ಎಂದು ನಿಷೇಧವಿರುವುದರಿಂದ ಅಹ ಶಬ್ದದ ಯೋಗ ವಿರುವುದರಿಂದ ಈರಿರೇ ಎಂಬಲ್ಲಿ ಅನುದಾತ್ತ ಬರುವುದಿಲ್ಲ

**ದಧಾನಾಃ**—ಧಾ ಧಾತುವಿನ ಮುಂದೆ ಬಂದಿರುವ ಶಾನಚ್ ಪ್ರತ್ಯಯವು ಚಿತ್ತಾದ್ದರಿಂದ **ಚಿತಃ** (ಪಾ. ಸೂ. ೬-೧ ೧೬೩) ಎಂಬುದರಿಂದ ಅಂತೋದಾತ್ತ ಪ್ರಾಪ್ತವಾದರೂ **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತ ಬರುವುದು. ಧಾ ಧಾತುವು ಜುಹೋತ್ಯಾದಿಯಾದ್ದರಿಂದ ಶ್ಲುವಿಕರಣ ಬಂದು **ಶ್ಲೌ** (ಪಾ. ಸೂ. ೬-೧-೧೦) ಎಂಬುದರಿಂದ ದ್ವಿತ್ವ ಬಂದರೆ ದಧಾ ಎಂಬುದಕ್ಕೆ ಉಭೇ ಅಭ್ಯಸ್ತಂ ಎಂಬುದರಿಂದ ಅಭ್ಯಸ್ತಸಂಜ್ಞೆ ಇರುವುದು-

**ಯಜ್ಞಿಯಂ—ಯಜ್ಞರ್ತ್ವಿಗ್ಭ್ಯಾಂ ಘಖಞೌ** (ಪಾ. ಸೂ. ೫-೧-೭೧) ದ್ವಿತೀಯಾನ್ತವಾದ ಯಜ್ಞ ಋತ್ವಿಕ್ ಈ ಶಬ್ದಗಳ ಮುಂದೆ ಕ್ರಮವಾಗಿ ಘ ಖಞ್ ಪ್ರತ್ಯಯಗಳು ಬರುವುವು. ಎಂಬುದರಿಂದ ಯಜ್ಞಶಬ್ದದ ಮುಂದೆ ಘ ಪ್ರತ್ಯಯ ಬಂದರೆ **ಆಯನೇಯೀನೀಯಿಯಃ ಫ ಢ ಖ ಛಘಾಂ ಪ್ರತ್ಯಯಾದೀನಾಂ** (ಪಾ. ಸೂ. ೭-೧-೩) ಪ್ರತ್ಯಯದ ಆದಿಯಲ್ಲಿರುವ ಫ ಢ ಖ ಛ ಘ ಇವುಗಳಿಗೆ ಕ್ರಮವಾಗಿ ಆಯನ್ ಏಯ್ ಈನ್ ಈಯ್ ಇಯ್ ಆದೇಶಗಳು ಬರುವುವು ಎಂಬುದರಿಂದ ಪ್ರತ್ಯಯದ ಆದಿಯಲ್ಲಿರುವ ಘ್ ಎಂಬುದಕ್ಕೆ ಇಯ್ ಆದೇಶ ಬರುವುದು. ಪ್ರತ್ಯಯಸ್ವರದಿಂದ ಇಕಾರ ಉದಾತ್ತ ॥ ೪ ॥

॥ ಸಂಹಿತಾಪಾಠಃ ॥

ವೀಳು ಚಿದಾರುಜತ್ನುಭಿರ್ಗುಹಾ ಚಿದಿಂದ್ರ ವಹ್ನಿಭಿಃ ।
ಅವಿಂದ ಉಸ್ರಿಯಾ ಅನು ॥ ೫ ॥

॥ ಪದಪಾಠಃ ॥

ವೀಳು । ಚಿತ್ । ಆರುಜತ್ನು ಽಭಿಃ । ಗುಹಾ । ಚಿತ್ । ಇಂದ್ರ । ವಹ್ನಿಭಿಃ ॥
ಅವಿಂದಃ । ಉಸ್ರಿಯಾಃ । ಅನು ॥ ೫ ॥

॥ ಸಾಯಣಭಾಷ್ಯಂ ॥

ಅಸ್ತಿ ಕಿಂಚಿದುಪಾಖ್ಯಾನಂ । ಪಣಿಭಿರ್ದೇವಲೋಕಾದ್ಗಾವೋಽಪಹೃತಾ ಅಂಧಕಾರೇ ಪ್ರಕ್ಷಿಪ್ತಾಃ ತಾಶ್ಚೇಂದ್ರೋ ಮರುದ್ಭಿಃ ಸಹಾಜಯದಿತಿ । ಏತಚ್ಚಾನುಕ್ರಮಣಿಕಾಯಾಂ ಸೂಚಿತಂ । ಪಣಿಭಿರಸುರೈರ್ನಿಗೂಳ್ಹಾ ಗಾ ಅನ್ವೇಷ್ಟುಂ ಸರಮಾಂ ದೇವಶುನೀಮಿಂದ್ರೇಣ ಪ್ರಹಿತಾಮಯುಗ್ಭಿಃ ಪಣಯೋ ಮಿತ್ರೀಯಂತಃ ಪ್ರೋಚುಃ। ಅನು. ಋಗ್ವೇ. ೧೦-೧೦೮ । ಇತಿ। ಮಂತ್ರಾಂತರೇ ಚ ದೃಷ್ಟಾಂತತಯಾ ಸೂಚಿತಂ। ನಿರುದ್ಧಾ ಆಪಃ ಪಣಿನೇವ ಗಾವಃ । ಋಗ್ವೇ. ೧-೩೨-೧೧ । ಇತಿ । ತದೇತದುಪಾಖ್ಯಾನಮಭಿಪ್ರೇತ್ಯೋಚ್ಯತೇ ॥ ಹೇ ಇಂದ್ರ ವೀಳು ಚಿದ್ದೃಢಮಪಿ ದುರ್ಗಮಸ್ಥಾನಮಾರುಜತ್ನುಭಿರ್ಭಂಜದ್ಭಿರ್ವಹ್ನಿಭಿರ್ವೋಢೃಭಿರನ್ಯತ್ರ ನೇತುಂ ಸಮರ್ಥೈರ್ಮರುದ್ಭಿಃ ಸಹಿತಸ್ತ್ವಂ ಗುಹಾ ಚಿತ್ ಗುಹಾಯಾಮಪಿ ಸ್ಥಾಪಿತಾ ಉಸ್ರಿಯಾ ಗಾ ಅನ್ವವಿಂದಃ । ಅನ್ವಿಷ್ಯ ಲಬ್ಧವಾನಸಿ । ಓಜಃ ಪಾಜ ಇತ್ಯಾದಿಷ್ವಷ್ಟಾವಿಂಶತಿಸಂಖ್ಯಾಕೇಷು ಬಲನಾಮಸು ದಕ್ಷೋ ವೀಳು ಚ್ಯೌತ್ನಮಿತಿ ಪಠಿತಂ । ನವಸಂಖ್ಯಾಕೇಷು ಗೋನಾಮಸ್ವಘ್ನ್ಯೇಸ್ರೋಸ್ರಿಯೇತಿ ಪಠಿತಂ ॥ ವೀಳು ॥ ಪ್ರಾತಿಪದಿಕಸ್ವರಃ । ಚಿತ್ । ಚಾದಿರನುದಾತ್ತಃ । ಆರುಜತ್ನುಭಿಃ । ರುಜೋ ಭಂಗ ಇತ್ಯೌಣಾದಿಕಃ ಕತ್ನುಚ್ ಪ್ರತ್ಯಯಃ । ಕಿತ್ತ್ವಾದ್ಗುಣಾಭಾವಃ । ಚಿತ್ತ್ವಾದಂತೋದಾತ್ತತ್ವಂ ಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವಂ । ಗುಹಾ । ಸಪ್ತಮ್ಯಾ ಡಾದೇಶಃ । ಗ್ರಾಮಾದೀನಾಂ ಚ । ಫಿ ೨ ೧೫ । ಇತ್ಯಾದ್ಯುದಾತ್ತಃ । ವಹ್ನಿಭಿಃ । ವಹಿಶ್ರಿಶ್ರುಯುದ್ರುಗ್ಲಾಹಾತ್ವರಿಭ್ಯೋ ನಿತ್ । ಉ. ೪-೫೧। ಇತಿ ವಹೇರ್ನಿಪ್ರತ್ಯಯಃ । ನಿತ್ತ್ವಾದಾದ್ಯುದಾತ್ತಃ । ಅವಿಂದಃ । ಶೇ ಮುಚಾದೀನಾಂ । ಪಾ. ೭-೧-೫೯ । ಇತಿ ನುಮಾಗಮಃ । ಲುಙ್ ಲಙ್ ಲೃಙ್ ಕ್ಷ್ವಡುದಾತ್ತಃ । ಪಾ. ೬ ೪-೭೧ । ವಸಂತೀತ್ಯುಸ್ರಿಯಾಃ । ವಸೇಃ ಕರ್ತರಿ ರಿಯಕ್ಪ್ರತ್ಯಯಃ । ಷತ್ವಾಭಾವಶ್ಚ ಬಾಹುಲಕಾದೂಹನೀಯಃ । ಉಕ್ತಂ ಹಿ । ಯನ್ನ ಪದಾರ್ಥವಿಶೇಷಸಮುತ್ಥಂ ಪ್ರತ್ಯಯತಃ ಪ್ರಕೃತೇಶ್ಚ ತದೂಹ್ಯಮಿತಿ । ಇಕಾರಃ ಪ್ರತ್ಯಯಸ್ವರೇಣೋದಾತ್ತಃ ॥೧೧॥

॥ ಪ್ರತಿಪದಾರ್ಥ ॥

(ಹೇ) ಇಂದ್ರ—ಎಲೈ ಇಂದ್ರನೇ । (ತ್ವಂ-ನೀನು) । ವೀಳು ಚಿತ್-ದೃಢವಾದ ಅಥವಾ ಬಲವಾದ ದುರ್ಗಮಸ್ಥಾನವನ್ನೂ ಸಹ । ಆರುಜತ್ನುಭಿಃ-ಒಡೆದುಹಾಕಲು ಸಾಮರ್ಥ್ಯವುಳ್ಳ । ವಹ್ನಿಭಿಃ— ವಹಿಸುವ (ಹೊರುವ) ಸಾಮರ್ಥ್ಯವುಳ್ಳ ಮರುತ್ತಗಳಿಂದ (ಮರುದ್ದೇವತೆಗಳ ಸಹಾಯದಿಂದ) । ಗುಹಾ ಚಿತ್—(ಪಣಿನಾಮಕದೈತ್ಯರಿಂದ ಅಪಹರಿಸಲ್ಪಟ್ಟು) ಗುಹೆಯಲ್ಲಿ ಬಚ್ಚಿಡಲ್ಪಟ್ಟಿದ್ದ । ಉಸ್ರಿಯಾಃ-ಗೋವುಗಳನ್ನು (ಹಸುಗಳನ್ನು) ಅನು ಅವಿಂದಃ—ಹುಡುಕಿ ತಂದಿರುವೆ.

॥ ಭಾವಾರ್ಥ ॥

ಮರುದ್ದೇವತೆಗಳು ಮಹಾಸಾಮರ್ಥ್ಯಶಾಲಿಗಳು. ಎಂತಹ ಬಲವಾದ ಪರ್ವತಾದಿ ದುರ್ಗಮ ಸ್ಥಾನಗಳನ್ನೂ ಒಡೆದು ನಾಶಪಡಿಸಲು ಸಮರ್ಥರು, ಮತ್ತು ಸಮಸ್ತವನ್ನೂ ವಹಿಸುವ ಸಾಮರ್ಥ್ಯವುಳ್ಳವರು. ಎಲೈ ಇಂದ್ರನೇ, ನೀನು ಇಂತಹ ಮರುದ್ದೇವತೆಗಳ ಸಹಾಯದಿಂದ (ಪಣಿ ಎಂಬ ದೈತ್ಯರು ಅಪಹರಿಸಿ) ಗುಹೆಯಲ್ಲಿ ಬಚ್ಚಿಟ್ಟಿದ್ದ ಹಸುಗಳನ್ನು ಹುಡುಕಿ ತಂದಿರುವೆ.

English Translation.

Associated with the conveying Maruts, the traversers of places difficult of access, O Indra, you have found out the cows hidden in the cave.

॥ ವಿಶೇಷವಿಷಯಗಳು ॥

ಭಾಷ್ಯಕಾರರು ಇಲ್ಲಿ ಒಂದು ಉಪಾಖ್ಯಾನವನ್ನು ಉದಹರಿಸಿರುವರು. ಪಣಿ ಎಂಬ ರಾಕ್ಷಸರು ದೇವಲೋಕದಲ್ಲಿದ್ದ ಹಸುಗಳನ್ನು ಅಪಹರಿಸಿ ಅವುಗಳನ್ನು ಒಂದು ಪರ್ವತದ ಗುಹೆಯಲ್ಲಿ ಬಚ್ಚಿಟ್ಟಿದ್ದರು. ಇದನ್ನು ಹುಡುಕುವುದಕ್ಕಾಗಿ ಇಂದ್ರನು ಸರಮಾ ಎಂಬ ದೇವಶುನಿ (ದೇವಲೋಕದ ಹೆಣ್ಣುನಾಯಿ) ಯನ್ನು ಕಳುಹಿಸಿದನು. ಆ ಶುನಿಯು ಪಣಿಗಳ ಬಳಿಗೆ ಹೋಗಿ ಅವರನ್ನು ಒಳ್ಳೆಯ ಮಾತುಗಳಿಂದ ಮಿತ್ರರನ್ನಾಗಿ ಮಾಡಿ ಹಸುಗಳನ್ನು ತರುವುದಕ್ಕೆ ಸಹಾಯಮಾಡಿತು. ಮರುತ್ತುಗಳ ಸಹಾಯದಿಂದ ಇಂದ್ರನು ಆ ಪರ್ವತ ಗುಹೆಯನ್ನು ನಾಶಪಡಿಸಿ ಅಲ್ಲಿದ್ದ ಹಸುಗಳನ್ನು ತಂದನೆಂದು ಈ ಉಪಾಖ್ಯಾನದಲ್ಲಿ ಹೇಳಿದೆ. ಋಗ್ವೇದ ಸಂಹಿತೆಯ ಹತ್ತನೆಯ ಮಂಡಲದ ೧೦೮ನೆಯ ಸೂಕ್ತದಲ್ಲಿ ಈ ವಿಚಾರವಾಗಿ ಸರಮಾ ಎಂಬ ದೇವಶುನಿಗೂ ಪಣಿಗಳೆಂಬ ರಾಕ್ಷಸರಿಗೂ ನಡೆದ ಸಂಭಾಷಣೆಯು ವಿಸ್ತಾರವಾಗಿ ಇರುವುದು. ಈ ವಿಷಯವನ್ನು ಮುಂದೆ ಋ. ೧-೩೨-೧೧ನೆಯ ಋಕ್ಕಿನಲ್ಲಿ **ಪಣಿನೇವ ಗಾವಃ** ಎಂಬ ವಿಷಯವನ್ನು ಹೇಳುವಾಗ ವಿಸ್ತಾರವಾಗಿ ವಿವರಿಸುವೆವು.

**ವೀಳು**— ಓಜಃ ಮೊದಲಾದ ಇಪ್ಪತ್ತೆಂಟು ಬಲಸೂಚಕವಾದ ನಾಮಗಳ ಮಧ್ಯದಲ್ಲಿ ದಕ್ಷಃ, ವೀಳು, ಚ್ಯೌತ್ನಂ ಎಂಬ ಶಬ್ದಗಳು ಪಠಿತವಾಗಿವೆ (ನಿ. ೩-೯) ಈ ಶಬ್ದಕ್ಕೆ ಬಲವಾದ, ಭದ್ರವಾದ, ದೃಢವಾದ, ಅಭೇದ್ಯವಾದ ಎಂದರ್ಥವು.

**ಚಿತ್**—ಎಂದರೆ ಏವ ಅವಧಾರಣಾರ್ಥವು.

**ಆರುಜತ್ನುಭಿಃ—ಭಂಜದ್ಭಿಃ** ಎಂದರೆ ಒಡೆದುಹಾಕಲು, ನಾಶಪಡಿಸಲು ಸಾಮರ್ಥ್ಯವುಳ್ಳ.

**ವಹ್ನಿಭಿಃ--ವೋಢೃಭಿಃ** ವಹಿಸುವ ಅಥವಾ ಹೊರುವ.

**ಗುಹಾ**--ಗುಹೆಯಲ್ಲಿ, ಯಾರಿಗೂ ತಿಳಿಯದ ಏಕಾಂತಸ್ಥಾನದಲ್ಲಿ, ಭದ್ರವಾದ ಪ್ರದೇಶದಲ್ಲಿ ಎಂದರ್ಥವು. ಈ ಶಬ್ದವು ಸಾಧಾರಣವಾಗಿ "ಗುಹೆಯಲ್ಲಿ" ಎಂದು ಸಪ್ತಮೀ ವಿಭಕ್ತ್ಯರ್ಥದಲ್ಲಿ ಉಪಯೋಗಿಸಲ್ಪಡುವುದು. "ಗುಹಾ ಹಿತಂ ಗುಹ್ಯಂ ಗೂಳ್ಹಂ" (ಋ. ಸಂ. ೨-೧೧-೫) ಇತ್ಯಾದಿ.

**ಉಸ್ರಿಯಾಃ--ಅಘ್ನ್ಯಾ** ಮೊದಲಾದ ಒಂಭತ್ತು ಗೋನಾಮಗಳ ಮಧ್ಯದಲ್ಲಿ ಉಸ್ರಿಯಾಃ ಎಂಬ ಶಬ್ದವು ಪಠಿತವಾಗಿದೆ (ನಿ. ೩-೯).

॥ ವ್ಯಾಕರಣಪ್ರಕ್ರಿಯಾ ॥

ವೀಳು—ಪ್ರಾತಿಪದಿಕಸ್ವರದಿಂದ ಅನ್ತೋದಾತ್ತ. ಚಿತ್ ಎಂಬುದು ಚಾದಿಗಣದಲ್ಲಿರುವುದರಿಂದ **ಚಾದಯೋನುದಾತ್ತಾಃ** (ಫಿ ಸೂ ೮೪) ಎಂಬುದರಿಂದ ಅನುದಾತ್ತ.

**ಆರುಜತ್ನುಭಿಃ**—ಆಙ್ ಉಪಸರ್ಗ. ರುಜೋ ಭಂಗೇ ಎಂಬಧಾತುವಿನ ಮುಂದೆ ಔಣಾದಿಕವಾದ ಕುತ್ನುಚ್ ಪ್ರತ್ಯಯ. ಪ್ರತ್ಯಯವು ಕಿತ್ತಾದ್ದರಿಂದ ಲಘೂಪಧಗುಣಬರುವುದಿಲ್ಲ. ಚಿತ್ತಾದ್ದರಿಂದ ಅಂತೋದಾತ್ತವಾಗುವುದು. ಆಙ್‌ನೊಂದಿಗೆ ಸಮಾಸ ಬಂದಾಗ **ಗತಿಕಾರಕೋಪಪದಾತ್ಕೃತ್** (೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುವುದು.

**ಗುಹಾ**—ಸಪ್ತಮೀವಿಭಕ್ತಿ ಏಕವಚನಕ್ಕೆ **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಡಾ ಆದೇಶ. **ಗ್ರಾಮಾದೀನಾಂ ಚ** (ಫಿ. ಸೂ. ೩೮) ಗ್ರಾಮಾದಿ ಶಬ್ದಗಳ ಆದಿಯು ಉದಾತ್ತವಾಗುವುದು ಎಂಬುದರಿಂದ ಗುಹಾ ಎಂಬುದು ಆದ್ಯುದಾತ್ತ.

**ವಹ್ನಿಭಿಃ**—ವಹಿಶ್ರಿಶ್ರುಯುದ್ರುಗ್ಲಾಹಾತ್ವರಿಭ್ಯೋನಿತ್ (ಉ, ಸೂ ೪-೪೯೧) ಈ ಧಾತುಗಳ ಮುಂದೆ ನಿಪ್ರತ್ಯಯ ಬರುವುದು, ಅದು ನಿತ್ತಾಗುವುದು, ಎಂಬುದರಿಂದ ವಹ'ಧಾತುವಿನ ಮುಂದೆ ನಿ ಪ್ರತ್ಯಯ ಬರುವುದು, ಪ್ರತ್ಯಯವು ನಿತ್ತಾದ್ದರಿಂದ ವಹ್ನಿ ಎಂಬುದು ಆದ್ಯುದಾತ್ತ.

**ಅವಿಂದಃ**—ವಿದ್ಲೃ ಲಾಭೇ—ತುದಾದಿ ಇದರ ಮುಂದೆ ಲಙ್ ಮಧ್ಯಮಪುರುಷ ಏಕವಚನ ಸಿಪ್ ತುದಾದಿಭ್ಯಶಃ (ಪಾ ಸೂ. ೩-೧-೭೭) ಎಂಬುದರಿಂದ ಶ ವಿಕರಣ **ಶೇಮುಚಾದೀನಾಂ** (ಪಾ. ಸೂ. ೭-೧-೫೯) ಮುಚಾದಿಯಾದ ಧಾತುಗಳಿಗೆ ಶ ಪ್ರತ್ಯಯ ಪರದಲ್ಲಿರುವಾಗ ನುಮ್ ಬರುವುದು ಎಂಬುದರಿಂದ ನುಮ್ ಬಂದರೆ ವಿನ್‌ದ್+ಅ+ಸ್ **ಲುಙ್‌ಲಙ್‌ಲೃಙ್‌ಕ್ಷ್ವಡುದಾತ್ತಃ** (ಪಾ. ಸೂ. ೬-೪-೭೧) ಎಂಬುದರಿಂದ ಅಡಾಗಮ, ರುತ್ವ ವಿಸರ್ಗಗಳು ಬಂದರೆ ಅವಿನ್ದಃ ಎಂದಾಗುವುದು.

**ಉಸ್ರಿಯಾಃ**—**ವಸನ್ತೀತಿ ಉಸ್ರಿಯಾಃ** ವಸಧಾತುವಿನಮುಂದೆ ಕರ್ತ್ರರ್ಥದಲ್ಲಿ ರಿಯಕ್ ಪ್ರತ್ಯಯವೂ ಶಾಸಿವಸಿಘಸೀನಾಂಚ (ಪಾ. ಸೂ. ೮-೩-೬೦) ಇಣ್ ಕವರ್ಗಗಳ ಮುಂದಿರುವ ಈ ಧಾತುಗಳ ಸಕಾರಕ್ಕೆ ಷಕಾರ ಬರುವುದು ಎಂಬುದರಿಂದ ಪ್ರಾಪ್ತವಾದ ಷತ್ವಕ್ಕೆ ಅಭಾವವೂ ಸಹ **ಉಣಾದಯೋ ಬಹುಲಂ** (೩-೩-೧) ಎಂಬಲ್ಲಿ ಬಹುಲಗ್ರಹಣಮಾಡಿರುವುದರಿಂದ ಊಹಿಸಲ್ಪಡಬೇಕು **ನಾಮಚ ಧಾತುಜಮಾಹ-ನಿರುಕ್ತೇ ವ್ಯಾಕರಣೇ ಶಕಟಸ್ಯ ಚತೋಕಂ ಯನ್ನ ವಿಶೇಷಪದಾರ್ಥಸಮುತ್ಥಂ ಪ್ರತ್ಯಯತಃ ಪ್ರಕೃತೇಶತದೂಹ್ಯಂ** ॥ (ಪಾ ಸೂ. ೩-೩-೧-ಮ ೧) ನಾಮಪದವೂ ಸಹ ಧಾತುವಿನಿಂದ ಹುಟ್ಟುವುದು ಎಂದು ನಿರುಕ್ತಕಾರರು ಹೇಳುವರು, ಶಾಕಟಾಯನರೂಸಹ ಶಾಕಾಟಾಯನವ್ಯಾಕರಣದಲ್ಲಿ (ಧಾತುಜಂ ನಾಮ) ಪ್ರಾತಿಪದಿಕವು ಧಾತುವಿನಿಂದ ಉಂಟಾದುದು ಎಂದು ಹೇಳಿರುವರು. ಪದಂ ಅರ್ಥಃ ಪ್ರಯೋಜನಂ ಯಸ್ಯ ವ್ಯುತ್ಪಾದ್ಯತ್ವೇನ ಸಃ ಪ್ರಕೃತಿ, ಪ್ರತ್ಯಯ, ಎಂದು ಅರ್ಥ. ಪದಾರ್ಥಃ ವಿಶೇಷಶ್ಚಾಸೌ ಪದಾರ್ಥಶ್ಚ ಇತಿ ವಿಗ್ರಹಃ ಪ್ರಕೃತಿಯು ಪ್ರಸಿದ್ಧವಾಗಿದ್ದರೆ ಅನುಗುಣವಾದ ಪ್ರತ್ಯಯವನ್ನೂ, ಪ್ರತ್ಯಯವು ಪ್ರಸಿದ್ಧವಾಗಿದ್ದರೆ ಅನುಗುಣವಾದ ಪ್ರಕೃತಿಯನ್ನೂ ಊಹಿಸಿಕೊಳ್ಳಬೇಕು ಎಂದು ಇದರ ಅರ್ಥ. ಈ ವಚನದಿಂದ ಇಲ್ಲಿ ಪ್ರಕೃತಿಯು ಪ್ರಸಿದ್ಧವಾಗಿರುವುದರಿಂದ ಅನುಗುಣವಾದ ರಿಯಕ್ ಪ್ರತ್ಯಯ-

ವನ್ನು ಊಹಿಸಿಕೊಳ್ಳಬೇಕು. ಪ್ರತ್ಯಯವು ಕಿತ್ತಾದ್ದರಿಂದ **ವಚಿಸ್ವಪಿಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಸಂಪ್ರಸಾರಣ. ವಕಾರಕ್ಕೆ ಉಕಾರವೂ ಸಂಪ್ರಸಾರಣಾಚ್ಚ ಎಂಬುದರಿಂದ ಪೂರ್ವರೂಪವೂ ಬರುವುದು. ಉಸ್ರಿಯ ಪ್ರಥಮಾವಿಭಕ್ತಿ ಬಹುವಚನದಲ್ಲಿ ಉಸ್ರಿಯಾಃ ಎಂದಾಗುವುದು. ಇಕಾರವು ಪ್ರತ್ಯಯಸ್ವರದಿಂದ ಉದಾತ್ತ ॥ ೫ ॥

॥ ಸಂಹಿತಾಪಾಠಃ ॥

ದೇವಯಂತೋ ಯಥಾ ಮತಿಮಚ್ಛಾ ವಿದದ್ವಸುಂ ಗಿರಃ ।
ಮಹಾಮನೂಷತ ಶ್ರುತಂ ॥ ೬ ॥

॥ ಪದಪಾಠಃ ॥

ದೇವಽಯಂತಃ । ಯಥಾ । ಮತಿಂ । ಅಚ್ಛ । ವಿದತ್ಽವಸುಂ । ಗಿರಃ ॥
ಮಹಾಂ । ಅನೂಷತ । ಶ್ರುತಂ ॥ ೬ ॥

॥ ಸಾಯಣಭಾಷ್ಯಂ ॥

ದೇವಯಂತೋ ಮರುತ್ಸಂಜ್ಞಕಾನ್ದೇವಾನಿಚ್ಛಂತೋ ಗಿರಃ ಸ್ತೋತಾರ ಋತ್ವಿಜೋ ಮಹಾಂ ಪ್ರೌಢಂ ಮರುದ್ಗಣಮಚ್ಛ ಪ್ರಾಪ್ತುಮನೂಷತ । ಸ್ತುತವಂತಃ । ಕೀದೃಶಂ ಮರುದ್ಗಣಂ । ವಿದದ್ವಸುಂ । ವೇದಯದ್ಭಿಃ ಸ್ವಮಹಿಮಪ್ರಖ್ಯಾಪಕೈರ್ವಸುಭಿರ್ಧನೈರ್ಯುಕ್ತಂ ಶ್ರುತಂ ವಿಖ್ಯಾತಂ । ಮರುದ್ಗಣಸ್ಯ ದೃಷ್ಟಾಂತಃ । ಯಥಾ ಮತಿಂ । ಮಂತಾರಮಿಂದ್ರಂ ಯಥಾ ಸ್ತುವಂತಿ ತಥೇತ್ಯರ್ಥಃ ॥ ದೇವಯಂತಃ । ದೇವಾನಾತ್ಮನ ಇಚ್ಛಂತಃ । ಸುಪ ಆತ್ಮನಃ ಕ್ಯಚ್ । ಪಾ. ೩-೧-೮ ॥ ಕ್ಯಚಿ ಚ । ಪಾ. ೭-೪-೩೩ । ಇತೀತ್ವಮಕೃತ್ಸಾರ್ವಧಾತುಕಯೋರ್ದೀರ್ಘಃ। ಪಾ ೭-೪-೨೫ । ಇತಿ ದೀರ್ಘತ್ವಂ ಚ ನ ಭವತಿ । ನ ಛಂದಸ್ಯಪುತ್ರಸ್ಯ । ಪಾ. ೭-೪-೩೫ । ಇತ್ಯನೇನ ಕ್ಯಚಿ ಯತ್ಪ್ರಾಪ್ತಮೀತ್ವಂ ದೀರ್ಘತ್ವಂ ವಾ ತಸ್ಯ ಸರ್ವಸ್ಯ ಪ್ರತಿಷೇಧಾತ್ । ಯದ್ಯಪೀತ್ವಮೇವ ಪ್ರಕೃತಂ ತಥಾಪಿ ವ್ಯವಹಿತಸ್ಯಾಪಿ ದೀರ್ಘತ್ವಸ್ಯ ಸ ಪ್ರತಿಷೇಧ ಇತಿ ವಿಜ್ಞಾಯತೇ । ಅಶ್ವಾಯಂತ ಇತ್ಯಾದಾವಶ್ವಾಘಸ್ಯಾತ್ । ಪಾ. ೭-೪-೩೭ । ಇತ್ಯಾತ್ವವಿಧಾನಾದಿತಿ ಹ್ಯುಕ್ತಂ । ಕ್ಯಜಂತಾಚ್ಛತೃಪ್ರತ್ಯಯಃ । ಕ್ಯಚಶ್ಚಿತ್ತ್ವಾಚ್ಚಿತ ಇತ್ಯಂತೋದಾತ್ತತ್ವಂ । ಶಪಃ । ಪಿತ್ತ್ವೇನ ಶತುಶ್ಚ ಲಸಾರ್ವಧಾತುಕಸ್ವರೇಣಾನುದಾತ್ತತ್ವ ಏಕಾದೇಶ ಉದಾತ್ತೇನೋದಾತ್ತ ಇತ್ಯುದಾತ್ತಃ । ಯಥಾ। ಪ್ರಕಾರವಚನೇ ಥಾಲ್ । ಪಾ. ೫-೩-೨೩ । ಲಿತಿ । ಪಾ. ೬-೧-೧೯೩ । ಇತಿ ಪ್ರತ್ಯಯಾತ್ಪೂರ್ವಮುದಾತ್ತತ್ವಂ । ಮತಿಂ । ಮಂತ್ರೇ ವೃಷೇಷಪಚಮನೇತ್ಯಾದಿನಾ । ಪಾ. ೩-೩-೯೬ । ಕ್ತಿನ್ನುದಾತ್ತಃ । ಮತಿ-

ಶಬ್ದೋ ಜ್ಞಾನಪರೋಽಪ್ಯುಪಚಾರಾಜ್ಜ್ಞಾತರೀಂದ್ರೇ ವರ್ತತೇ | ಅಥವಾ ಪದಾಂತರೇ ವಿಶೇಷ್ಯಾನುಪಾದಾನಾದಿಂದ್ರಸ್ಯೈಷಾ ಸಂಜ್ಞಾ | ತತಶ್ಚ ಕ್ತಿಚ್ ಕ್ತೌ ಚ ಸಂಜ್ಞಾಯಾಂ | ಪಾ. ೩-೩-೧೭೪ | ಇತಿ ಮನ್ಯತೇಃ ಕರ್ತರಿ ಕ್ತಿಚ್ | ತಸ್ಯೋಪದೇಶೇಽನುದಾತ್ತತ್ವಾದಿಟ್ಪ್ರತಿಷೇಧಃ | ಪಾ. ೭-೨-೧೦ | ಚಿತ್ತ್ವಾದಂತೋದಾತ್ತತ್ವಂ | ಅಚ್ಛ | ಅಧ್ಯಾಹೃತಗಚ್ಛತ್ಯರ್ಥಯೋಗಾದಚ್ಛ ಗತ್ಯರ್ಥವದೇಷು | ಪಾ. ೧-೪-೬೯ | ಇತಿ ಗತಿಸಂಜ್ಞಯಾ ಸಹ ನಿಪಾತಸಂಜ್ಞಾಯಾ ಅಪಿ ಸಮಾವೇಶಾತ್ | ಪಾ. ೧-೪-೬೦ | ನಿಪಾತಾ ಆದ್ಯುದಾತ್ತಾಃ | ಫಿ. ೪-೧೨ | ಇತ್ಯಾದ್ಯುದಾತ್ತತ್ವಂ | ವಿದದ್ವಸುಂ | ವಿದ ಜ್ಞಾನ ಇತ್ಯಸ್ಮಾದಂತರ್ಭಾವಿತಣ್ಯರ್ಥಾಚ್ಛತೃಪ್ರತ್ಯಯೇ ವಿದಂತ್ಯಾದಾರ್ಯಾತಿಶಯವತ್ತಯಾ ಜ್ಞಾಪಯಂತಿ ವಸೂನಿ ಧನಾನಿ ಯಂ ಸ ವಿದದ್ವಸುಃ | ವಿದೇಃ ಶತೃಪ್ರತ್ಯಯೇಽದಿಪ್ರಭೃತಿಭ್ಯಃ ಶಪಃ | ಪಾ. ೨-೪-೭೨ | ಇತಿ ಶಪೋ ಲುಕಿ ಪ್ರತ್ಯಯಸ್ವರೇಣ ಶತುರುದಾತ್ತತ್ವಂ | ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವೇನ ತದೇವ ಶಿಷ್ಯತೇ | ಗೃಣಂತಿ ಸ್ತುವಂತೀತಿ ಗಿರಃ | ಗೄಣಾತೇಃ ಕ್ವಿಪ್ಯೄತ ಇದ್ಧಾತೋಃ | ಪಾ ೭-೧-೧೦೦ - ಇತೀತ್ವಂ ರಪರತ್ವಂ | ಧಾತುಸ್ವರೇಣೋದಾತ್ತತ್ವಂ | ಮಹಾಂ | ಮಹಾಂತಂ | ನಕಾರತಕಾರಯೋರ್ಲೋಪಶ್ಛಾಂದಸಃ | ಪ್ರಾತಿಪದಿಕಸ್ವರೇಣೋದಾತ್ತತ್ವಂ | ಅನೂಷತ | ಣೂ ಸ್ತುತೌ | ವ್ಯತ್ಯಯೇನಾತ್ಮನೇಪದಂ | ಲುಙಿ ಝಸ್ಯಾದಾದೇಶಃ | ಪಾ. ೭-೧-೫ | ಸಿಚಿ ಕುಟಾದಿತ್ವೇನ | ಪಾ. ೧-೨-೧ | ಙಿತ್ತ್ವಾದ್ಗುಣಾಭಾವಃ | ಇಡಭಾವ ಉಕಾರದೀರ್ಘತ್ವಂ ಚ ಛಾಂದಸಂ | ನಿಘಾತಃ | ಶ್ರುತಂ | ಪ್ರತ್ಯಯಸ್ವರಃ |

|| ಪ್ರತಿಪದಾರ್ಥ ||

ದೇವಯಂತಃ—(ಮರುತ್ಸಂಜ್ಞಕರಾದ ದೇವತೆಗಳನ್ನು) ಸ್ತುತಿಸಲು ಇಚ್ಛಿಸುವ | ಗಿರಃ—ಸ್ತೋತ್ರ ಮಾಡುವ ಋತ್ವಿಕ್ಕುಗಳು | ಮತಿಂ-ಬುದ್ಧಿಪ್ರದನಾದ (ಇಂದ್ರನನ್ನು) | ಯಥಾ-ಯಾವ ಪ್ರಕಾರವಾಗಿ (ಸ್ತುತಿಸುವರೋ ಹಾಗೆ) | ವಿದದ್ವಸುಂ-ತಮ್ಮ ಮಹಿಮೆಯಿಂದ ಧನಾದ್ಯೈಶ್ವರ್ಯಗಳನ್ನು ಅನುಗ್ರಹಿಸಲು ಶಕ್ತರಾದ | ಶ್ರುತಂ-ಪ್ರಸಿದ್ಧರಾದ || ಮಹಾಂ-ದೊಡ್ಡವರಾದ, (ಮಹಾಸಾಮರ್ಥ್ಯಶಾಲಿಗಳಾದ ಮರುದ್ದೇವತೆಗಳ ಸಮೂಹವನ್ನು) | ಅಚ್ಛ—ಹೊಂದುವುದಕ್ಕೆ | ಅನೂಷತ—ಸ್ತೋತ್ರಮಾಡುವರು.

|| ಭಾವಾರ್ಥ ||

ಮರುದ್ದೇವತೆಗಳನ್ನು ಸ್ತೋತ್ರಮಾಡಲು ಇಚ್ಛಿಸುವ ಋತ್ವಿಗಾದಿ ಜನರು ಬುದ್ಧಿಪ್ರದನಾದ ಅಥವಾ ಬುದ್ಧಿವಂತನಾದ ಇಂದ್ರನನ್ನು ಹೇಗೆ ಸ್ತೋತ್ರ ಮಾಡುವರೋ ಅದರಂತೆ ಮರುದ್ದೇವತೆಗಳನ್ನೂ ಸ್ತೋತ್ರಮಾಡುವರು. ಈ ಮರುದ್ದೇವತೆಗಳು ತಮ್ಮ ಮಹಿಮೆಯಿಂದ ಧನಾದ್ಯೈಶ್ವರ್ಯಗಳನ್ನು ಕೊಡಲು ಸಮರ್ಥರು; ಮಹನೀಯರು ಮತ್ತು ಪ್ರಸಿದ್ಧರಾದವರು. ಇಂತಹ ಮರುದ್ದೇವತೆಗಳನ್ನು ಸಮೀಪಿಸಿ ಸ್ತೋತ್ರಮಾಡುವರು.

## English Translation.

The reciters of praises praise the mighty (troop of Maruts) who are celebrated and conscious of the power of bestowing wealth, just as they praise the counseller (Indra),

॥ ವಿಶೇಷ ವಿಷಯಗಳು ॥

ಈ ಋಕ್ಕಿನ ಅರ್ಥವು ಸ್ಪಷ್ಟವಾಗಿಲ್ಲದಿರುವುದರಿಂದ ಸರಿಯಾದ ಅರ್ಥವನ್ನು ಹೊಂದಿಸಲು ಅನೇಕ ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕಾಗಿರುವುದು. ಇದಲ್ಲದೆ ಕೆಲವು ಶಬ್ದಗಳ ಅರ್ಥವನ್ನೇ ಸ್ವಲ್ಪಮಟ್ಟಿಗೆ ವ್ಯತ್ಯಾಸ ಮಾಡಬೇಕಾಗಿರುವುದು.

**ದೇವಯಂತಃ--ದೇವಾನ್ ಮರುತಃ ಇಚ್ಛಂತೋ ದೇವಯಂತಃ**--ಎಂದರೆ ಮರುದ್ದೇವತೆಗಳನ್ನು ಅಪೇಕ್ಷಿಸುವ ಎಂದರೆ ಸ್ತೋತ್ರಮಾಡಲು ಇಚ್ಛಿಸುವ ಎಂದರ್ಥವು. ಸ್ಕಂದಸ್ವಾಮಿಯೂ ಹೀಗೆಯೇ ಅರ್ಥಮಾಡಿರುವರು.

**ಮತಿಂ--ಮಂತಾರಮಿಂದ್ರಂ ಯಥಾ ಸ್ತುವಂತಿ ತಥೇತ್ಯರ್ಥಃ । ಮತಿಶಬ್ದೋ ಜ್ಞಾನಪರೋಽಪ್ಯುಪಚಾರಾಜ್ಜ್ಞಾತರೀಂದ್ರೇ ವರ್ತತೇ । ಅಥವಾ ಪದಾಂತರೇ ವಿಶೇಷ್ಯಾನುಪಾದಾನಾದಿಂದ್ರಸ್ಯೈಷಾ ಸಂಜ್ಞಾ** ಎಂದು ಸಾಯಣರು ಹೇಳಿರುವರು. ಎಂದರೆ ಮತಿಶಬ್ದವು ಜ್ಞಾನಪರವಾದ ಅರ್ಥವನ್ನು ಸೂಚಿಸುವುದು. ಆದುದರಿಂದ ಇಲ್ಲಿ ಜ್ಞಾನವುಳ್ಳ, ಬುದ್ಧಿವಂತನಾದ ಎಂಬ ಅರ್ಥದಲ್ಲಿ ಇಂದ್ರನ ಪರವಾಗಿ ಉಪಯೋಗಿಸಲ್ಪಟ್ಟಿರುವುದು. ಅಥವಾ ಬೇರೆ ಪದಕ್ಕೆ ವಿಶೇಷಣವನ್ನಾಗಿಯಾದರೂ ಭಾವಿಸಬಹುದು. ಅಂತಹ ಸಂದರ್ಭದಲ್ಲಿಯೂ ಈ ಶಬ್ದವು ಇಂದ್ರನನ್ನೇ ನಿರ್ದೇಶಿಸುವುದು. ಸ್ಕಂದಸ್ವಾಮಿಯು ಈ ವಿಷಯದಲ್ಲಿ **ಮನ್ಯತೇ ಸ್ತೂಯತೇಽಸಾವಿತಿ ಮತಿರಿಂದ್ರಃ । ಜ್ಞಾತಾ ವಾ ಮತಿರ್ವಿದ್ವಾನ್ ಬ್ರಾಹ್ಮಣಃ । ಯಥಾ ಸರ್ವಸ್ತುತ್ಯಮಿಂದ್ರಂ ವಿದ್ವಾಂಸಂ ವಾ ಬ್ರಾಹ್ಮಣಂ ತದ್ವತ್**--ಎಂದರೆ ಮನ್ಯತೇ-ಸ್ತೋತ್ರ ಮಾಡಲ್ಪಡುವುದರಿಂದ ಮತಿಃ ಎಂದು ಇಂದ್ರನಿಗೆ ಹೆಸರು ಬಂದಿರುವುದು. ಮತ್ತು ತಿಳುವಳಿಕೆಯುಳ್ಳವನು, ಪ್ರಜ್ಞಾಶಾಲಿಯು, ವಿದ್ವಾಂಸನು, ಬ್ರಾಹ್ಮಣನು ಎಂತಲೂ ಈ ಶಬ್ದದ ಅರ್ಥವಾಗುವುದು. ಆದುದರಿಂದ ಈ **ಮತಿಂ** ಎಂಬ ಶಬ್ದಕ್ಕೆ ಸರ್ವಸ್ತುತ್ಯನೂ ವಿದ್ವಾಂಸನೂ ಆದ ಬ್ರಾಹ್ಮಣನಂತೆ ಇರುವ ಇಂದ್ರನನ್ನು ಎಂದರ್ಥ ಮಾಡಬಹುದೆಂದು ಹೇಳಿರುವರು.

**ಅಚ್ಛ--ಪ್ರಾಪ್ತುಂ**, ಹೊಂದುವುದಕ್ಕೆ ಎಂದು ಭಾಷ್ಯಕಾರರು ಅರ್ಥಮಾಡಿರುವರು. ಈ ವಿಷಯದಲ್ಲಿ **ಅಧ್ಯಾಹೃತಗಚ್ಛತ್ಯರ್ಥಯೋಗಾದಚ್ಛ ಗತ್ಯರ್ಥವದೇಷು** ಎಂಬ ಪಾಣಿನಿ ಸೂತ್ರವನ್ನೂ (ಪಾ ಸೂ ೧-೪-೬೯) ಉದಹರಿಸಿರುವರು. ಈ ಶಬ್ದವು ಸಂಹಿತಾಪಾಠದಲ್ಲಿ ಯಾವಾಗಲೂ ಎಂದರೆ ಋಕ್ಕಿನ ಮಧ್ಯದಲ್ಲಿ ಪಠಿತವಾದಾಗ ದೀರ್ಘಸ್ವರಾಂತವಾಗಿಯೇ ಉಪಯೋಗಿಸಲ್ಪಡುವುದು.

**ವಿದದ್ವಸುಂ--ವಿದ ಜ್ಞಾನ ಇತ್ಯಸ್ಮಾತ್ ವಿದಂತ್ಯೌದಾರ್ಯಾತಿಶಯವತ್ತಯಾ ಜ್ಞಾಪಯಂತಿ ವಸೂನಿ ಧನಾನಿ ಯಂ ಸ ವಿದದ್ವಸುಃ**--ವಿದ ಧಾತುವಿಗೆ ಜ್ಞಾನ ತಿಳುವಳಿಕೆ ಎಂದರ್ಥವು ತಮ್ಮ ಔದಾರ್ಯಾತಿಶಯದಿಂದ ಧನಾದಿಗಳನ್ನು ಕೊಡುವ ವಿಷಯದಲ್ಲಿ ಜ್ಞಾನವುಳ್ಳವರು ಎಂದರ್ಥವು. ಸ್ಕಂದಸ್ವಾಮಿಯು ವಿದ ಧಾತುವಿಗೆ ಹೊಂದು ಎಂದು ಅರ್ಥಮಾಡಿರುವರು. **ವಿಂದತೇರ್ಲಾಭಾರ್ಥಸ್ಯ ವಿದಚ್ಛಬ್ದಃ । ಲಬ್ಧಧನಮಿತ್ಯರ್ಥಃ ।** ಧನವನ್ನು ಹೊಂದಿರುವವರು ಎಂದು ಅಭಿಪ್ರಾಯಪಡುವರು.

**ಗಿರಃ--ಗೃಣಂತಿ ಸ್ತುವಂತೀತಿ ಗಿರಃ**--ಸ್ತೋತ್ರಮಾಡುವವರು.

**ಮಹಾಂ--ಮಹಾಂತಂ**, ಇಲ್ಲಿ ಛಂದಸ್ಸಿನ ಅನುಕೂಲಕ್ಕಾಗಿ ನಕಾರ ತಕಾರಲೋಪವಾಗಿರುವುದು.

|| ವ್ಯಾಕರಣಪ್ರಕ್ರಿಯಾ ||

**ದೇವಯನ್ತಃ**— ದೇವಾನ್ ಆತ್ಮನಃ ಇಚ್ಛಂತಃ (ದೇವತೆಗಳನ್ನು ತಮಗೆ ಇಚ್ಛಿಸತಕ್ಕವರು) ಎಂದು ವಿಗ್ರಹ ಮಾಡಿದಾಗ **ಸುಪಆತ್ಮನಃಕ್ಯಚ್** (ಪಾ- ಸೂ ೩.೧-೮) ಸುಪಃ ಎಂಬಲ್ಲಿ ಪ್ರತ್ಯಯಗ್ರಹಣೇತದನ್ತಸ್ಯ-ಗ್ರಹಣಂ (ಪರಿ. ೨೩) ಎಂಬುದರಿಂದ ಸುಬಂತ ಎಂದು ಅರ್ಥವಾಗುವುದು. **ಧಾತೋಃ ಕರ್ಮಣಸ್ಸಮಾನ ಕರ್ತೃಕಾದಿಚ್ಛಾಯಾಂವಾ** (ಪಾ. ಸೂ. ೩-೧-೭) ಎಂಬುದರಿಂದ ಕರ್ಮಣಃ ಇಚ್ಛಾಯಾಂ ವಾ ಎಂಬ ಮೂರು ಪದಗಳು ಅನುವೃತ್ತವಾಗುವುವು. ಪೂರ್ವ ಸೂತ್ರದ ಪದವನ್ನು ಉತ್ತರ ಸೂತ್ರಕ್ಕೆ ಅರ್ಥಾನುಗುಣವಾಗಿ ಸೇರಿಸಿಕೊಳ್ಳುವುದಕ್ಕೆ ಅನುವೃತ್ತಿ ಎಂದು ಹೆಸರು. ಇದನ್ನೇ ಸಂಸ್ಕೃತದಲ್ಲಿ ಪೂರ್ವಸೂತ್ರಘಟಕತ್ವೇನ ಧೃತಸ್ಯ ಪದಸ್ಯ ಉತ್ತರಸೂತ್ರಘಟಕತ್ವೇನಾನುಸಂಧಾನಂ ಅನುವೃತ್ತಿ ಎಂದು ಹೇಳುವರು. ಕರ್ಮಣಃ ಎಂಬುದು ಪಂಚಮ್ಯಂತ ಕರ್ಮಕಾರಕಾತ್ ಎಂದುಅರ್ಥ. ಇಷಿಧಾತುವು ಉಪಸ್ಥಿತವಾಗಿರುವುದರಿಂದ ಇಷಿಧಾತುವಿನ ಕರ್ಮವೇ ಕರ್ಮಣಃ ಎಂಬುದರಿಂದ ಬೋಧಿತವಾಗುವುದು, ಆತ್ಮಶಬ್ದ ಸ್ವ ಎಂಬ ಅರ್ಥವನ್ನು ಹೇಳುವುದು. ತಾದರ್ಥ್ಯ ಎಂಬ ಅರ್ಥವನ್ನು ಶೇಷತ್ವೇನ ವಿವಕ್ಷೆಮಾಡಿಕೊಂಡು ಷಷ್ಠೀವಿಭಕ್ತಿಯು ಆತ್ಮನಃ ಎಂಬಲ್ಲಿ ಬಂದಿರುವುದು. ಅಂದರೆ ಆತ್ಮನಃ ಎಂಬುದಕ್ಕೆ ಸ್ವಾರ್ಥಂ ತನಗಾಗಿ ಎಂದು ಅರ್ಥ. ಸ್ವ ಪದದಿಂದ ಏಷಿತೃವು ಇಚ್ಛಿಸುವವನು ಗ್ರಹಿಸಲ್ಪಡುವುದು. ತಥಾಚ ಇಚ್ಛಿಸತಕ್ಕವನು ತನ್ನ ಪ್ರಯೋಜನಕ್ಕಾಗಿ ಯಾವ ಕರ್ಮಕಾರಕವನ್ನು ಇಚ್ಛಿಸುತ್ತಾನೆಯೋ ಅಂತಹ ಕರ್ಮವಾಚಕವಾದ ಸುಬಂತದ ಮುಂದೆ ಇಚ್ಛಿಸುತ್ತಾನೆ ಎಂಬ ಅರ್ಥದಲ್ಲಿ ಕ್ಯಚ್ ಪ್ರತ್ಯಯವು ವಿಕಲ್ಪದಿಂದ ಬರುವುದು ಎಂದು ಸೂತ್ರದ ಫಲಿತಾರ್ಥ. ಇದನ್ನೇ ಸಂಸ್ಕೃತದಲ್ಲಿ ಸ್ವಾರ್ಥಂ ಯದಿಷ್ಯತೇ ಕರ್ಮಕಾರಕಂ ತದ್ವೃತ್ತೇಃ ಸುಬಂತಾದಿಚ್ಛಾಯಾಂಕ್ಯಚ್ಸ್ಯಾತ್ ಎಂದು ಹೇಳಿರುವರು, ದೇವಯಂತಃ ಎಂಬಲ್ಲಿ ಇಚ್ಛಿಸತಕ್ಕವರು ಋತ್ವಿಕ್ಕುಗಳು. ಅವರು ತಮ್ಮ ಪ್ರಯೋಜನಕ್ಕಾಗಿ ದೇವತೆಗಳನ್ನು ಇಚ್ಛಿಸುತ್ತಾರೆ ದೇವಾನ್ ಎಂಬುದು ಇಷು ಧಾತುವಿನ ಕರ್ಮವಾಚಕ. ಅದರಮುಂದೆ ಇಚ್ಛತಿ ಎಂಬ ಅರ್ಥದಲ್ಲಿ ಕ್ಯಚ್ ಪ್ರತ್ಯಯಬರುವುದು, ಸನ್ ಕ್ಯಚ್ ಕಾಮ್ಯಚ್ ಕ್ಯಙ್ ಕ್ಯಷೋಽಥಾಚಾರ ಕ್ವಿಬ್ಣಿಜ್ಯಙೌ ತಥಾ | ಯಗಾಯ ಈಯಙ್ ಣಿಙ್ ಚೇತಿ ದ್ವಾದಶಾಮೀ ಸನಾದಯಃ || ಎಂದು ಕ್ಯಚ್ ಪ್ರತ್ಯಯವು ಸನಾದಿಯಲ್ಲಿರುವುದರಿಂದ ಸನಾದ್ಯಂತಾಧಾತವಃ (ಪಾ ಸೂ. ೩-೧-೩೨) ಎಂಬುದರಿಂದ ಧಾತುಸಂಜ್ಞೆ ಬಂದು ಧಾತ್ವವಯವವಾದ ಶಸ್ ವಿಭಕ್ತಿಗೆ **ಸುಪೋಧಾತುಪ್ರಾತಿಪದಿಕಯೋಃ** (ಪಾ.ಸೂ.೨-೪-೭೧) ಎಂಬುದರಿಂದ ಲುಕ್ ಬರುವುದು. ದೇವಯ ಎಂದಿರುವಾಗ **ಕ್ಯಚಿಚ** (ಪಾ. ಸೂ. ೭-೪-೩೩) ಕ್ಯಚ್ ಪ್ರತ್ಯಯವು ಪರದಲ್ಲಿರುವಾಗ ಅಕಾರಕ್ಕೆ ಈಕಾರ ಬರುವುದು ಎಂಬುದರಿಂದ ಈಕಾರವೂ, **ಅಕೃತ್ಸಾರ್ವಧಾತುಕಯೋರ್ದೀರ್ಘಃ** (ಪಾ. ಸೂ. ೭-೪-೨೫) ಕೃತ್ತು ಸಾರ್ವಧಾತುಕಗಳಲ್ಲದ ಯಾದಿಪ್ರತ್ಯಯ ಪರದಲ್ಲಿರುವಾಗ ಅಜಂತವಾದ ಅಂಗಕ್ಕೆ ದೀರ್ಘಬರುವುದು ಎಂಬುದರಿಂದ ದೀರ್ಘವೂ ಪ್ರಾಪ್ತವಾಗುವುವು. ಆದರೂ **ನಛಂದಸ್ಯಪುತ್ರಸ್ಯ** (ಪಾ ಸೂ. ೭-೪-೩೫) ಕ್ಯಚ್‌ಪ್ರತ್ಯಯಪರದಲ್ಲಿರುವಾಗ ಪುತ್ರಶಬ್ದ ಭಿನ್ನವಾದ ಹ್ರಸ್ವಾಕಾರಾಂತ ಶಬ್ದಕ್ಕೆ ಈತ್ವದೀರ್ಘಗಳು ಬರುವುದಿಲ್ಲ ಎಂದು ನಿಷೇಧವಿರುವುದರಿಂದ ಪೂರ್ವೋಕ್ತವಾದ ಈತ್ವವೂ ದೀರ್ಘವೂ ಬರುವುದಿಲ್ಲ. ಯದ್ಯಪಿ ಅನಂತರಸ್ಯವಿಧಿರ್ವಾಭವತಿ ಪ್ರತಿಷೇಧೋವಾ ಎಂಬ ನ್ಯಾಯದಿಂದ ನ ಛಂದಸ್ಯ ಪುತ್ರಸ್ಯ ಎಂಬುದರಿಂದ ತನಗಿಂತಲೂ ಪೂರ್ವದಲ್ಲಿ ಪ್ರಸ್ತುತವಾಗಿರುವ ಇತ್ವಕ್ಕೆ ಮಾತ್ರ ನಿಷೇಧಬರುವುದು, ವ್ಯವಹಿತವಾದ ದೀರ್ಘಕ್ಕೆ ನಿಷೇಧ ಬರುವುದು ಉಚಿತವಲ್ಲ. ಆದರೂ ಈ ಸೂತ್ರವು **ಅಶ್ವಾಘಸ್ಯಾತ್** (ಪಾ. ಸೂ. ೭-೪-೩೭) ಎಂಬ ಜ್ಞಾಪಕದಿಂದ ದೀರ್ಘಕ್ಕೂ ನಿಷೇಧಕವೆಂದು ಇಟ್ಟುಕೊಳ್ಳಬೇಕು. ಹೇಗೆಂದರೆ ಅಶ್ವಾನ್ ಆತ್ಮನಃ ಇಚ್ಛಂತಃ ಎಂದು ವಿವಕ್ಷಿಸಿದಾಗ **ಅಶ್ವಾಯನ್ತಃ** ಎಂಬಲ್ಲಿ ಅಶ್ವ+ಯ ಎಂದಿರುವಾಗ ಅಶ್ವಾ ಎಂದು ದೀರ್ಘಶ್ರವಣವಾಗುವುದಕ್ಕಾಗಿ **ಅಶ್ವಾಘಸ್ಯಾತ್** (ಪಾ. ಸೂ. ೭-೪-೩೭) ಅಶ್ವ ಅಘ ಇವುಗಳಿಗೆ ಕ್ಯಚ್ ಪರದಲ್ಲಿರುವಾಗ

30

ಆತ್ ಬರುವುದು ಎಂದು ಆಕಾರಾದೇಶವು ವಿಧಿಸಲ್ಪಟ್ಟಿರುವುದು ಕ್ಯಚಿಚ್ ಎಂಬುದು ಅನಂತರಸ್ಯ ಎಂಬ ನ್ಯಾಯದಿಂದ ಈತ್ವಕ್ಕೆ ಮಾತ್ರ ನಿಷೇಧಕವೆಂದು ಹೇಳಿದರೆ ಅಕೃತ್ಸಾರ್ವಧಾತುಕಯೋಃ ಎಂಬುದರಿಂದ ದೀರ್ಘ ಬಂದು ಅಶ್ವಾಯ ಎಂದು ಸಿದ್ಧವಾಗುವುದು. ಆದ್ದರಿಂದ ಆತ್ವವಿಧಾನವು ವ್ಯರ್ಥವಾಗುವುದು. ಈ ಆತ್ವ ವಿಧಿಯು ತನ್ನ ಸಾರ್ಥಕ್ಯಕ್ಕಾಗಿ 'ನಛಂದಸ್ಯಪುತ್ರಸ್ಯ' ಎಂಬುದು ಕ್ಯ ಚ್ ಪ್ರತ್ಯಯುಪರದಲ್ಲಿರುವಾಗ ಯಾವ ಯಾವ ಕಾರ್ಯಗಳು ಬರುವುವೋ ಅವೆಲ್ಲಕ್ಕೂ ನಿಷೇಧಕವೆಂದು ಜ್ಞಾಪಿಸುವುದು. ಆದ್ದರಿಂದ ಈ ಸೂತ್ರವು ಈತ್ವ ದೀರ್ಘಗಳಿಗೆ ನಿಷೇಧಕವಾಗುವುದು. ಈಗ ಈ ನಿಷೇಧದಿಂದ ಅಶ್ವಾಯು ಎಂಬಲ್ಲಿ ದೀರ್ಘ ಬರುವುದಿಲ್ಲವಾದ್ದರಿಂದ ಆತ್ವ ವಿಧಿಯು ಸಾರ್ಥಕವಾಗುವುದು. ಆದ್ದರಿಂದ ಪೂರ್ವೋಕ್ತ ರೀತಿಯಲ್ಲಿ ಈತ್ವ ದೀರ್ಘಗಳೆರಡೂ ದೇವಯು ಎಂಬಲ್ಲಿ ಬರುವುದಿಲ್ಲ. ಇದರ ಮುಂದೆ ಲಟ್ಟೂ ಅದಕ್ಕೆ ಶತೃ ಆದೇಶವೂ ಶಪ್ ವಿಕರಣವೂ ಬರುವುವು. ಕ್ಯಚ್ ಪ್ರತ್ಯಯವು ಚಿತ್ತಾದ್ದರಿಂದ ಚಿತಃ (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತ, ಶಪ್ಪು ಪಿತ್ತಾದ್ದರಿಂದಲೂ ಶತೃವು ಅದುಪದೇಶದ ಮುಂದೆ ಇರುವ ಲಸಾರ್ವಧಾತುಕವಾದ್ದರಿಂದಲೂ ಅನು- ದಾತ್ತ, ಅತೋಗುಣೇ ಎಂಬುದರಿಂದ ಬರುವ ಏಕಾದೇಶವು, ಏಕಾದೇಶ ಉದಾತ್ತೇನೋದಾತ್ತಃ (ಪಾ. ಸೂ. ೮-೨-೫) ಎಂಬುದರಿಂದ ಉದಾತ್ತ.

ಯಥಾ— ಪ್ರಕಾರವಚನೇಥಾಲ್ (ಪಾ. ಸೂ. ೫-೩-೨೩) ಸಾಮಾನ್ಯಕ್ಕೆ ಭೇದಕವಾದ ವಿಶೇಷಕ್ಕೆ ಪ್ರಕಾರ ಎನ್ನುವರು ತದುಕ್ತಂ—ಸಾಮಾನ್ಯಸ್ಯಭೇದಕೋವಿಶೇಷಃ ಪ್ರಕಾರ ಇತಿ ಪ್ರಕಾರ ವೃತ್ತಿಯಾದ ಕಿಮಾದಿ ಶಬ್ದಗಳ ಮುಂದೆ ಸ್ವಾರ್ಥದಲ್ಲಿ ಥಾಲ್ ಪ್ರತ್ಯಯ ಬರುವುದು. ಎಂಬುದರಿಂದ ಯಚ್ಛಬ್ದ ಮುಂದೆ ಥಾಲ್ ಪ್ರತ್ಯಯ ಬರುವುದು. ಪ್ರತ್ಯಯವು ಲಿತ್ತಾದ್ದರಿಂದ ಪ್ರತ್ಯಯದ ಹಿಂದಿರುವ ಅಕಾರವು ಲಿತಿ (ಪಾ. ಸೂ. ೬-೧-೧೯೩) ಎಂಬುದರಿಂದ ಉದಾತ್ತ.

ಮತಿಂ—'ಮಂತ್ರೇ ವೃಷೇಷ ಪಚ ಮನ ವಿದ ಭೂವೀರಾ ಉದಾತ್ತಾಃ' (ಪಾ ಸೂ. ೩-೩-೯೬) ಎಂಬುದರಿಂದ ಉದಾತ್ತವಾದ ಕ್ತಿನ್ ಪ್ರತ್ಯಯ, ಪ್ರತ್ಯಯವು ಕಿತ್ತಾದ್ದರಿಂದ ಅನುದಾತ್ತೋಪದೇಶ (ಪಾ. ಸೂ. ೬-೪-೩೭) ಎಂಬುದರಿಂದ ನಲೋಪ, ಮತಿ ಶಬ್ದವು ಸಾಮಾನ್ಯವಾಗಿ ಜ್ಞಾನ ಎಂಬ ಅರ್ಥವನ್ನು ಬೋಧಿಸು ವುದು. ಆದರೂ ಇಲ್ಲಿ ಉಪಚಾರದಿಂದ ಜ್ಞಾನಾಶ್ರಯನಾದ ಇಂದ್ರನನ್ನು ಬೋಧಿಸುವುದು ಅಥವಾ ಬೇರೆ ಪದಗಳಿಂದ ವಿಶೇಷ್ಯವು ಉಪಾತ್ತವಾಗಿಲ್ಲ. ಆದ್ದರಿಂದ ಮತಿ ಎಂಬುದು ಇಂದ್ರನಿಗೆ ಸಂಜ್ಞೆ (ಸಂಕೇತ) ಎಂದು ಹೇಳಬಹುದು. ಈ ಪಕ್ಷದಲ್ಲಿ ಕ್ತಿಚ್‌ಕ್ತೌಚ ಸಂಜ್ಞಾಯಾಂ (ಪಾ. ಸೂ ೩-೩-೧೭೪) ಎಂಬುದರಿಂದ ಮನಜ್ಞಾನೇ ಧಾತುವಿನ ಮುಂದೆ ಕ್ತಿಚ್ ಪ್ರತ್ಯಯ, ಮನಜ್ಞಾನೇ ಎಂಬುದು ಅನುದಾತ್ತವಾದ್ದರಿಂದ ಏಕಾಚ ಉಪದೇಶೇಽನುದಾತ್ತಾತ್ (ಪಾ. ಸೂ. ೭-೨-೧೦) ಉಪದೇಶದಲ್ಲಿ ಏಕಾಚ್ಕವಾಗಿಯೂ ಅನುದಾತ್ತವಾಗಿಯೂ ಇರುವ ಧಾತುವಿನ ಮುಂದೆ ಬರುವ ವಲಾದ್ಯಾರ್ಧಧಾತುಕಕ್ಕೆ ಇಟ್ ಬರುವುದಿಲ್ಲ ಎಂಬುದರಿಂದ, ಇಡಾಗಮಕ್ಕೆ ನಿಷೇಧ

ಅಚ್ಛ— ಅಚ್ಛಗತ್ಯರ್ಥವದೇಷು (ಪಾ. ಸೂ ೧-೪-೬೯) ಗತ್ಯರ್ಥಕ ಧಾತು. ವದ ಧಾತು ಇವುಗಳ ಯೋಗವಿರುವಾಗ ಅಚ್ಛ ಎಂಬ ಅವ್ಯಯವು ಗತಿಸಂಜ್ಞೆಯನ್ನು ಹೊಂದುವುದು. ಅಲ್ಲದೆ ಪ್ರಾಗ್ರೀಶ್ವರಾನ್ನಿ ಪಾತಾಃ (ಪಾ ಸೂ. ೧-೪-೫೬) ಅಧಿರೀಶ್ವರೇಸೂತ್ರಪರ್ಯಂತ (೧-೪-೯೭) ನಿಪಾತಾಃ ಎಂದು ಅಧಿಕಾರ ಬರು ವುದು ಎಂಬುದರಿಂದ ನಿಪಾತಾಃ ಎಂಬುದು ಇಲ್ಲಿ ಸಂಬಂಧಿಸುವುದು. ಆದ್ದರಿಂದ ಅಚ್ಛ ಎಂಬ ಅವ್ಯಯವು ನಿಪಾತ ಸಂಜ್ಞೆಯನ್ನೂ ಹೊಂದುವುದು ಎಂದು ಅರ್ಥವು ಸಿದ್ಧವಾಗುವುದು. ಆದ್ದರಿಂದ ಗತಿಸಂಜ್ಞಾ ನಿಪಾತ

ಸಂಜ್ಞೆಗಳಿಗೆ ಪರಸ್ಪರ ಬಾಧ್ಯಬಾಧಕಭಾವವಿಲ್ಲ. ಸಮಾವೇಶವೇ ಇರುವುದು. ಆದ್ದರಿಂದ ನಿಪಾತಾ ಆದ್ಯುದಾತ್ತಾಃ (ಫಿ. ಸೂ. ೮೦) ಎಂಬುದರಿಂದ ಆದ್ಯುದಾತ್ತ ಬರುವುದು. ಸಂಹಿತಾಕಾಲದಲ್ಲಿ **ನಿಪಾತಸ್ಯಚ** (ಪಾ. ಸೂ. ೬-೩-೧೩೬) ನಿಪಾತಕ್ಕೆ ಮಂತ್ರದಲ್ಲಿ ದೀರ್ಘ ಬರುವುದು ಎಂಬುದರಿಂದ ದೀರ್ಘವೂ ಬರುವುದು

**ವಿದದ್ವಸುಮ್**—ಅಂತರ್ಭಾವಿತ ಣಿಚ್ ಪ್ರತ್ಯಯಾರ್ಥಕವಾದ 'ವಿದಜ್ಞಾನೇ' ಎಂಬ ಧಾತುವಿನ ಮುಂದೆ ಲಟ್ ಪ್ರತ್ಯಯ ಬಂದು ಅದಕ್ಕೆ **ಲಟಶ್ಶತೃಶಾನಚೌ** (ಪಾ. ಸೂ. ೩-೨-೧೨೪) ಎಂಬುದರಿಂದ ಶತೃ ಬರುವುದು. ನಪುಂಸಕಲಿಂಗದಲ್ಲಿ ವಿದತ್-ವಿದತೀ-ವಿದನ್ತಿ, ಎಂದು ಆಗುವುದು. ವಿದನ್ತಿ=ಔದಾರ್ಯಾತಿಶಯವತ್ತಯಾಜ್ಞಾಪಯಂತಿ ವಸೂನಿ-ಧನಾನಿ ಯಂಸಃ=ಎಂದು ವಿಗ್ರಹ-ಯಾವ ಮರುತ್ತುಗಳನ್ನು ಔದಾರ್ಯಾತಿಶಯಶಾಲಿ ಎಂದು ತಿಳಿಯುಪಡಿಸತಕ್ಕ ಧನಗಳು ಹೊಂದಿವೆಯೋ ಅಂತಹ ಮರುತ್ತುಗಳು ವಿದದ್ವಸು ಎಂಬುದರಿಂದ ಬೋಧಿತವಾಗುವುವು. ವಿದ ಧಾತುವಿನ ಮುಂದೆ ಶತೃ ಪ್ರತ್ಯಯವು ಮಾಡಿದಾಗ ಬರುವ ಶಪ್ ವಿಕರಣಕ್ಕೆ **ಅದಿಪ್ರಭೃತಿಭ್ಯಃಶಪಃ** (ಪಾ. ಸೂ. ೨-೪-೭೨) ಎಂಬುದರಿಂದ ಲುಕ್ ಬರುವುದು. ಲುಕ್ ಬಂದಮೇಲೆ ಶತೃ ಪ್ರತ್ಯಯವು ಅದುಪದೇಶಾತ್ಪರವಾಗುವುದಿಲ್ಲ. ಆದ್ದರಿಂದ **ತಾಸ್ಯನುದಾತ್ತೇತ್** (ಪಾ. ಸೂ ೬-೧-೧೮೬) ಎಂಬುರಿಂದ ಲಸಾರ್ವಧಾತುಕಕ್ಕೆ ಅನುದಾತ್ತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಶತೃವು ಉದಾತ್ತವೇ ಆಗುವುದು. ಬಹುವ್ರೀಹಿಸಮಾಸ ಬಂದನಂತರವೂ **ಬಹುವ್ರೀಹೌಪ್ರಕೃತ್ಯಾ ಪೂರ್ವಪದಂ** (ಪಾ. ಸೂ ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬಂದರೆ ಅದೇ ನಿಲ್ಲುವುದು.

ಗಿರಃ—ಗೃಣನ್ತಿ=ಸ್ತುವನ್ತಿ ಇತಿ ಗಿರಃ-ಸ್ತೋತ್ರ ಮಾಡುವವರು. ಎಂದರ್ಥ. ಗೄ ಶಬ್ದೇ ಎಂಬ ಧಾತುವಿನ ಮುಂದೆ ಕ್ವಿಪ್ ಬಂದರೆ **ಋತ ಇದ್ಧಾತೋಃ** (ಪಾ. ಸೂ. ೭-೧-೧೦೦) ಅಂಗ ಸಂಜ್ಞಕವಾದ ಋಕಾರಾಂತ ಧಾತುವಿನ ಕಡೆಯ ವರ್ಣಕ್ಕೆ ಇತ್ವಬರುವುದು ಎಂಬುದರಿಂದ ಬರುವ ಇತ್ವವು **ಉರಣ್ರಪರಃ** (ಪಾ. ಸೂ. ೧-೧-೫೧) ಎಂಬ ಶಾಸ್ತ್ರದಿಂದ ರ ಪರವಾಗಿ ಬರುವುದು. ಗಿರ್ ಎಂದಾಗುವುದು ಪ್ರಥಮಾ ಬಹುವಚನದಲ್ಲಿ ಗಿರಃ-ಗಿರ್ ಎಂಬುದು ಧಾತು ಸ್ವರದಿಂದ ಅಂತೋದಾತ್ತ.

**ಮಹಾಮ್**—ಮಹಾನ್ತಂ ಎಂದು ಅರ್ಥ. ಮಹಾನ್ತಮ್ ಎಂಬುದರ ನಕಾರ ತಕಾರಗಳಿಗೆ ಛಾಂದಸವಾಗಿ ಲೋಪಬರುವುದು. ಪ್ರಾತಿಪದಿಕಸ್ವರದಿಂದ ಇದು ಉದಾತ್ತ.

**ಅನೂಷತ**—ಣು ಸ್ತುತೌ-ಈ ಧಾತುವು ಪರಸ್ಮೈಪದಿ. ಆದರೂ ವ್ಯತ್ಯಯದಿಂದ ಆತ್ಮನೇಪದ ಬರುವುದು. ಣು ಧಾತುವಿನ ಮುಂದೆ ಲುಙ್. ಅದಕ್ಕೆ ಪ್ರಥಮಪುರುಷಬಹುವಚನದಲ್ಲಿ ಝ ಆದೇಶ. ಝುಗೆ **ಆತ್ಮನೇಪದೇಷ್ವನತ್ಸಃ** (ಪಾ. ಸೂ. ೭-೧-೫) ಅಕಾರ ಭಿನ್ನವಾದ ವರ್ಣದ ಮುಂದೆ ಇರುವ ಆತ್ಮನೇಪದದ ಝುಗೆ ಅತ್ ಆದೇಶ ಬರುವುದು ಎಂಬುದರಿಂದ ಅತ್-ಆದೇಶ "ಚ್ಲಿ ಲುಙಿ" (ಪಾ. ಸೂ. ೩-೧-೪೩) ಎಂಬುದರಿಂದ ಧಾತುವಿನ ಮುಂದೆ ಚ್ಲಿಯೂ ಅದಕ್ಕೆ **ಚ್ಲೇಸ್ಸಿಚ್** (ಪಾ. ಸೂ. ೩-೧-೪೪) ಎಂಬುದರಿಂದ ಸಿಚ್ಚೂ ಬರುವುದು. **ಣು+ಸ್+ಅತ ಗಾಙ್ಕುಟಾದಿಭ್ಯೋಽಞ್ಣಿನ್ಙಿತ್** (ಪಾ. ಸೂ. --೨-೧) ಗಾಙ್ ಆದೇಶಕ್ಕಿಂತಲೂ, ಕುಟಾದಿ ಗಣಪಠಿತ ಶಬ್ದಕ್ಕಿಂತಲೂ ಪರದಲ್ಲಿರುವ ಞಿತ್ತು ಣಿತ್ತು ಅಲ್ಲದ ಪ್ರತ್ಯಯಗಳು ಙಿತ್ತಾಗುವುವು ಎಂಬುದರಿಂದ ಸಿಚ್ಚು ಕುಟಾದಿಯಾದ ಣು ಧಾತುವಿನ ಮುಂದೆ ಇರುವುದರಿಂದ **ಙಿತ್ತಾಗುವುದು**. ಅದ್ದರಿಂದ **ಕ್ಙಿತಿಚ** (ಪಾ. ಸೂ. ೧-೧-೫) ಎಂಬ ನಿಷೇಧ ಬರುವುದರಿಂದ **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಗುಣಬರುವುದಿಲ್ಲ. **ಣೋನಃ** (ಪಾ. ಸೂ. ೬-೧-೬೫) ಧಾತ್ವಾದಿಯ

ಣಕಾರಕ್ಕೆ ನ್ ಕಾರಬರುವುದು ಎಂಬುದರಿಂದ ಣು ಧಾತುವಿನ ಣಕಾರಕ್ಕೆ ನಕಾರಬರುವುದು. **ಲುಙ್‌ಲಙ್‌ಲೃಙ್ಕ್ಷ್ವಡುದಾತ್ತಃ** (ಪಾ. ಸೂ ೬-೪-೭೧) ಎಂಬುದರಿಂದ ಅಡಾಗಮ ಸಿಚ್ಚಿಗೆ **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂದು ವಿಹಿತವಾದ ಇಡಾಗಮ ಬರದೆ ಇರುವುದೂ, ನು ಎಂಬಲ್ಲಿಯ ಉಕಾರಕ್ಕೆ ದೀರ್ಘ ಬರುವುದೂ ಸಹ ಛಾಂದಸವು. **ತಿಙ್ಙತಿಙಃ** (ಪಾ ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ.

**ಶ್ರುತಂ**—ಕ್ತ ಪ್ರತ್ಯಯಾಂತ. ಪ್ರತ್ಯಯ ಸ್ವರ ಬರುವುದು ॥ ೬ ॥

॥ ಸಂಹಿತಾಪಾಠಃ ॥

ಇಂದ್ರೇಣ ಸಂ ಹಿ ದೃಕ್ಷಸೇ ಸಂಜಗ್ಮಾನೋ ಅಬಿಭ್ಯುಷಾ ॥
ಮಂದೂ ಸಮಾನವರ್ಚಸಾ ॥ ೭ ॥

॥ ಪದಪಾಠಃ ॥

ಇಂದ್ರೇಣ । ಸಂ । ಹಿ । ದೃಕ್ಷಸೇ । ಸಂಽಜಗ್ಮಾನಃ । ಅಬಿಭ್ಯುಷಾ ॥
ಮಂದೂ ಇತಿ । ಸಮಾನಽವರ್ಚಸಾ ॥ ೭ ॥

॥ ಸಾಯಣಭಾಷ್ಯಂ ॥

**ಹೇ ಮರುದ್ಗಣ ತ್ವಮಿಂದ್ರೇಣ ಸಂಜಗ್ಮಾನಃ ಸಂಗಚ್ಛಮಾನಃ ಸಂ ದೃಕ್ಷಸೇ ಹಿ । ಸಮ್ಯಗ್ದೃಶ್ಯೇಥಾಃ ಖಲು । ಅವಶ್ಯಮಸ್ಮಾಭಿರ್ದ್ರಷ್ಟವ್ಯ ಇತ್ಯರ್ಥಃ । ಕೀದೃಶೇನೇಂದ್ರೇಣ । ಅಭಿಭ್ಯುಷಾ ಭೀತಿರಹಿತೇನ । ಕೀದೃಶಾವಿಂದ್ರಮರುದ್ಗಣೌ । ಮಂದೂ ನಿತ್ಯಪ್ರಮುದಿತೌ ಸಮಾನವರ್ಚಸಾ ತುಲ್ಯದೀಪ್ತೀ - ಪುರಾ ಕದಾಚಿದ್ವೃತ್ರವಧದಶಾಯಾಮಿಂದ್ರಸ್ಯ ಸಖಾಯಃ ಸರ್ವೇ ದೇವಾ ವೃತ್ರಶ್ವಾಸೇನಾಪಸಾರಿತಾಃ । ತದಾನೀಮಿಂದ್ರಸ್ಯ ವೃತ್ರಸಂಬಂಧಿಸಕಲಸೇನಾಜಯಾರ್ಥಂ ಮರುದ್ಭಿಃ ಸಂಗಮೋಽಭೂತ್ । ಸೋಽಯಮರ್ಥೋ ವೃತ್ರಸ್ಯ ತ್ವಾ ಶ್ವಸಥಾತ್ । ಋಗ್ವೇ. ೮-೯೬-೭ । ಇತಿ ಮಂತ್ರೇ ಸಂಗೃಹೀತ ಇಂದ್ರೋ ವೈ ವೃತ್ರಂ ಹನಿಷ್ಯನ್ । ಐ. ಬ್ರಾ ೩-೨೦ । ಇತಿ ಬ್ರಾಹ್ಮಣೇ ಪ್ರಪಂಚಿತಶ್ಚ । ಇಂದ್ರಶಬ್ದಃ ಪರಮೈಶ್ವರ್ಯವಂತಂ ಮರುದ್ಗಣಂ ವಾಭಿಧತ್ತೇ । ತದಾನೀಮಿಂದ್ರಸ್ಯ ಸಂಬೋಧನಂ ಬಹಿರೇವಾಧ್ಯಾಹರ್ತವ್ಯಂ । ತಥಾ ಚೇಯಮೃಗ್ಯಾಸ್ಕೇನ ವ್ಯಾಖ್ಯಾತಾ । ಇಂದ್ರೇಣ ಹಿ ಸಂದೃಶ್ಯಸೇ ಸಂಗಚ್ಛಮಾನೋಽಬಿಭ್ಯುಷಾ ಗಣೇನ ಮಂದೂ ಮದಿಷ್ಣೂ ಯುವಾಂ ಸ್ಥೋಽಪಿ ವಾ ಮಂದುನಾ ತೇನೇತಿ ಸ್ಯಾತ್ಸಮಾನವರ್ಚಸೇತ್ಯೇತೇನ ವ್ಯಾಖ್ಯಾತಂ । ನಿ ೪-೧೨ । ಇತಿ ॥ ಸಂ ದೃಕ್ಷಸೇ । ಸಂಪಶ್ಯೇಥಾಃ । ದೃಶೇಶ್ಚೇತಿ ವಕ್ತವ್ಯಂ । ಪಾ. ೧-೩-೨೯-೨ । ಇತ್ಯಾತ್ಮನೇಪದಂ । ದೃಶೇರ್ಲಿಙರ್ಥೇ ಲೇಟ್ । ಪಾ. ೩-೪-೭ । ಇತಿ ಪ್ರಾರ್ಥನಾಯಾಂ**

ಲೇಟ್ । ಥಾಸಃ ಸೇ । ಪಾ. ೩-೪-೮೦ । ಲೇಟೋಽಡಾಟೌ । ಪಾ. ೩-೪-೯೪ । ಇತ್ಯಡಾಗಮಃ । ಸಿಬ್ಬಹುಲಂ ಲೇಟಿ । ಪಾ. ೩-೧-೩೪ । ಇತಿ ಸಿಪ್ । ಸಂಜ್ಞಾಪೂರ್ವಕೋ ವಿಧಿರನಿತ್ಯ ಇತಿ ಗುಣಾಭಾವಃ । ವ್ರಶ್ಚಾದಿನಾ ಷತ್ವಂ । ಪಾ. ೮-೨-೩೬ । ಷಢೋಃ ಕಃ ಸಿ । ಪಾ ೮-೨-೪೧ । ಇತಿ ಕತ್ವಂ । ಆದೇಶಪ್ರತ್ಯಯಯೋಃ । ಪಾ. ೮-೩-೫೯ । ಇತಿ ಸಿಪಃ ಷತ್ವಂ । ಬಹುಲಗ್ರಹಣಾತ್ಸಿಪಃ ಪರಸ್ತಾಚ್ಛಬಸಿ ಭವತಿ । ಪಾ. ೨-೪-೭೩ । ಸಿಪಾ ವ್ಯವಧಾನಾತ್ಪಶ್ಯಾದೇಶೋ ನ ಭವತಿ । ಪಾ. ೭-೩-೭೮ । ಶಪಃ ಪಿತ್ತ್ವಾದನುದಾತ್ತತ್ವಂ । ಉತ್ತರಸ್ಯ ಲಸಾರ್ವಧಾತುಕಾನುದಾತ್ತತ್ವಂ । ಧಾತುಸ್ವರ ಏವ ಶಿಷ್ಯತೇ । ಹಿಶಬ್ದಯೋಗಾತ್ತಿಙ್ಙತಿಙ ಇತಿ ನಿಘಾತೋ ನ ಭವತಿ । ಹಿ ಚ । ಪಾ. ೮-೧-೩೪ । ಇತಿ ಪ್ರತಿಷೇಧಾತ್ । ಸಂಜಗ್ಮಾನಃ । ಗಮೇಃ ಸಂಪೂರ್ವಾಚ್ಛಂದಸಿ ಲುಙ್ಲಙ್ಲಿಟಃ । ಪಾ. ೩-೪-೬ । ಇತಿ ವರ್ತಮಾನೇ ಲಿಟ್ । ಸಮೋ ಗಮ್ಯೃಚ್ಛಿಭ್ಯಾಂ । ಪಾ ೧ ೩-೨೯ । ಇತ್ಯಾತ್ಮನೇಪದವಿಧಾನಾಲ್ಲಿಟಃ ಕಾನಜಾದೇಶಃ । ಪಾ ೩-೨-೧೦೬ । ದ್ವಿರ್ಭಾವಃ । ಪಾ. ೬-೧-೮ । ಹಲಾದಿಶೇಷಃ ಪಾ. ೭-೪-೬೦ । ಅಭ್ಯಾಸಸ್ಯ ಚುತ್ವಂ ಪಾ ೭-೪-೬೨ । ಗಮಹನೇತ್ಯುಪಧಾಲೋಪಃ । ಪಾ. ೬-೪-೯೮ । ಕಾನಚಶ್ಚಿತ್ತ್ವಾದಂತೋದಾತ್ತತ್ವಂ । ಗತಿಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವಂ । ಅಬಿಭ್ಯುಷಾ । ಞಿಭೀ ಭಯೇ । ಪೂರ್ವವಲ್ಲಿಟ್ । ಶೇಷಾತ್ಕರ್ತರಿ ಪರಸ್ಮೈಪದಂ ॥ ಪಾ. ೧-೩-೭೮ । ಇತಿ ಪರಸ್ಮೈಪದಂ । ಕ್ವಸುಶ್ಚ । ಪಾ. ೩-೨-೧೦೭ । ಇತಿ ಲಿಟಃ ಕ್ವಸುರಾದೇಶಃ । ತಸ್ಯ ಕಿತ್ತ್ವಾದ್ಗುಣಾಭಾವಃ । ದ್ವಿರ್ಭಾವಃ । ಅಭ್ಯಾಸಸ್ಯ ಹ್ರಸ್ವಜಶ್ತ್ವೇ । ಪಾ. ೭-೪-೫೯: ೮-೪-೫೪ । ಕ್ರಾದಿನಿಯಮಾತ್ । ಪಾ. ೭-೨-೧೩ । ಪ್ರಾಪ್ತ ಇಡ್ವಸ್ವೇಕಾಜಾದ್ಘಸಾಂ । ಪಾ. ೭-೨-೬೭ । ಇತಿ ನಿಯಮಾನ್ನಿವರ್ತತೇ । ನಞ್ಸಮಾಸೇ ತೃತೀಯೈಕವಚನೇ ಭತ್ವಾದ್ವಸೋಃ ಸಂಪ್ರಸಾರಣಂ । ಪಾ. ೬-೪-೧೩೧ । ಇತಿ ವಕಾರಸ್ಯೋಕಾರಃ । ಸಂಪ್ರಸಾರಣಾಚ್ಚ । ಪಾ. ೬-೧-೧೦೮ । ಇತಿ ಪೂರ್ವರೂಪತ್ವಂ । ಶಾಸಿವಸಿಘಸೀನಾಂ ಚ । ಪಾ. ೮-೩-೬೦ । ಇತಿ ಷತ್ವಂ । ಇಯಙಾದೇಶಂ ಬಾಧಿತ್ವೈರನೇಕಾಚೋಽಸಂಯೋಗಪೂರ್ವಸ್ಯ । ಪಾ ೬-೪ ೮೨ । ಇತಿ ಯಣಾದೇಶಃ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ । ಪೂರ್ವೇಣ ಸಹ ಸಂಹಿತಾಯಾಮೋಕಾರಸ್ಯೈಙಃ ಪದಾಂತಾದತಿ । ಪಾ. ೬.೧.೧೦೯ । ಇತಿ ಪರಪೂರ್ವತ್ವೇ ಪ್ರಾಪ್ತೇ ಪ್ರಕೃತ್ಯಾಂತಃಪಾದಮವ್ಯಪರೇ । ಪಾ. ೬-೧-೧೧೫ । ಇತಿ ಪ್ರಕೃತಿಭಾವಃ । ಮಂದೂ । ಮದಿ ಸ್ತುತಿಮೋದಮದಸ್ವಪ್ನಕಾಂತಿಗತಿಷು । ಇದಿತೋ ನುಮ್ ಧಾತೋಃ । ಪಾ. ೭-೧-೫೮ । ಇತಿ ನುಮಾಗಮಃ । ಕುರಿತ್ಯನುವೃತ್ತೌ ಖರುಶಂಕುಪೀಯೂನೀಲಂಗುಲಿಗು । ಉ. ೧-೩೭ । ಇತ್ಯತ್ರಾವಿಭಕ್ತಿಕನಿರ್ದೇಶಾದ್ಬಂತೇರ್ಹಿಗುರಿತಿವದ್ಧಾತ್ವಂತರಾದಪಿ ಕುರಿತ್ಯುಕ್ತಂ । ಪ್ರತ್ಯಯಸ್ವರೇಣಾಂತೋದಾತ್ತಃ । ದ್ವಿವಚನಮೌ । ಪಾ. ೪-೧-೨ । ಪ್ರಥಮಯೋಃ ಪೂರ್ವಸವರ್ಣಃ । ಪಾ. ೬-೧-೧೦೨ । ತೃತೀಯೈಕವಚನೇ ಚೇತ್ ಸುಪಾಂ ಸುಲುಗಿತ್ಯಾದಿನಾ ಪೂರ್ವಸವರ್ಣದೀರ್ಘತ್ವಂ । ಸಮಾನವರ್ಚಸಾ । ಸಮಾನಂ ವರ್ಚೋ ಯಯೋರಿತಿ ವಾ ಯಸ್ಯೇತಿ ವಾ ಬಹುವ್ರೀಹಿಃ । ದ್ವಿವಚನೇ ಸುಪಾಂ ಸುಲುಗಿತ್ಯಾದಿನಾಕಾರಾದೇಶಃ । ಸಮಾನಪದಸ್ಯ ಪ್ರಾತಿಪದಿಕಾಂತೋದಾತ್ತತ್ವಂ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರೇಣ ತದೇವಾವಶಿಷ್ಯತೇ ॥

॥ ಪ್ರತಿಪದಾರ್ಥ ॥

(ಹೇಮರುದ್ಗಣ--ಓ ಮರುದ್ಗಣವೇ, ಎಂದರೆ ಮರುದ್ದೇವತೆಗಳ ಸಮೂಹವೇ) । (ನೀವು) । **ಅಬಿಭ್ಯುಷಾ**—ಭಯರಹಿತನಾದ । **ಇಂದ್ರೇಣ**—ಇಂದ್ರನಿಂದ ಸಹಿತವಾಗಿ । **ಸಂಜಗ್ಮಾನಃ**-ಹೋಗುತ್ತಿರುವಂತೆ । **ಸಂ ಹಿ ದೃಕ್ಷಸೇ**—ಕಾಣಲ್ಪಡುವಿರಿ । (ನೀವಿಬ್ಬರೂ) **ಮಂದೂ**---ಯಾವಾಗಲೂ ಸಂತೋಷಯುಕ್ತರಾಗಿಯೂ । **ಸಮಾನವರ್ಚಸಾ**.--ಸಮನಾದ ತೇಜಸ್ಸಿನಿಂದ ಕೂಡಿದವರಾಗಿಯೂ (ಇರುವಿರಿ).

॥ ಭಾವಾರ್ಥ ॥

ಎಲೈ ಮರುದ್ದೇವತೆಗಳೇ, ನೀವು ಭಯರಹಿತನಾದ ಇಂದ್ರನೊಡನೆ ಸಂಚರಿಸುತ್ತಿರುವುದು ಎಲ್ಲರಿಗೂ ಗೋಚರಿಸುತ್ತಿರುವುದು. ನೀವಿಬ್ಬರೂ ಯಾವಾಗಲೂ ಸಂತೋಷಭರಿತರಾಗಿರುವುದಲ್ಲದೆ ನಿಮ್ಮಿಬ್ಬರ ವರ್ಚಸ್ಸು, ಶಕ್ತಿಸಾಮರ್ಥ್ಯಗಳು ಸಮನಾಗಿರುವವು. ಎಂದರೆ ಇಂದ್ರನೂ, ಮರುದ್ದೇವತೆಗಳಾದ ನೀವೂ ಇಬ್ಬರೂ ವರ್ಚಸ್ವಿಗಳು, ಶಕ್ತಿಸಾಮರ್ಥ್ಯಗಳಲ್ಲಿ ಸಮಾನರು.

## English Translation.

You are seen, O Maruts, marching forth together with Indra who is not frightened, (both) rejoicing and of equal splendour.

॥ ವಿಶೇಷವಿಷಯಗಳು ॥

ಭಾಷ್ಯಕಾರರು ಇಲ್ಲಿ ಪೂರ್ವೇತಿಹಾಸವನ್ನು ಸೂಚಿಸಿರುವರು. ಪೂರ್ವದಲ್ಲಿ ಇಂದ್ರನು ವೃತ್ರಾಸುರನನ್ನು ಸಂಹಾರ ಮಾಡಿದಾಗ ನಡೆದ ಯುದ್ಧದಲ್ಲಿ ವೃತ್ರಾಸುರನ ಭಯಂಕರವಾದ ಉಚ್ಛ್ವಾಸನಿಶ್ವಾಸಗಳಿಂದ ಇಂದ್ರನೊಡನಿದ್ದ ದೇವತೆಗಳೆಲ್ಲರೂ ಹೆದರಿ ಓಡಿಹೋದರು. ಆದರೆ ಆಗ ಮರುದ್ದೇವತೆಗಳು ಮಾತ್ರ ಯಾವ ಭಯವೂ ಇಲ್ಲದೆ ಇಂದ್ರನ ಸಹಾಯಾರ್ಥವಾಗಿ ಇಂದ್ರನ ಜೊತೆಯಲ್ಲಿಯೇ ಇದ್ದರು. ಈ ವಿಷಯವು (ಋ.ಸಂ. ೮-೯೬-೭) ನೇಯ ಋಕ್ಕಿನಲ್ಲಿಯೂ ಮತ್ತು (ಐ. ಬ್ರಾ ೩-೨೦) ರಲ್ಲಿಯೂ ವರ್ಣಿಸಲ್ಪಟ್ಟಿದೆ.

ವೃತ್ರಸ್ಯ ತ್ವಾ ಶ್ವಸಥಾದೀಷಮಾಣಾ ವಿಶ್ವೇ ದೇವಾ ಅಜಹುರ್ಯೇ ಸಖಾಯಃ ।
ಮರುದ್ಭಿರಿಂದ್ರ ಸಖ್ಯಂ ತೇ ಅಸ್ತ್ವಥೇಮಾ ವಿಶ್ವಾಃ ಪೃತನಾ ಜಯಾಸಿ ॥
(ಋ. ಸಂ. ೮ ೯೬-೭).

ಇದರ ಅರ್ಥವು---ಎಲೈ ಇಂದ್ರನೇ, ವೃತ್ರಾಸುರನ ಭಯಂಕರವಾದ ನಿಶ್ವಾಸದಿಂದ ನಿನ್ನ ಸ್ನೇಹಿತರಾದ ದೇವತೆಗಳೆಲ್ಲರೂ ಹೆದರಿ ನಿನ್ನ ಸಮೀಪವನ್ನು ಬಿಟ್ಟು ಓಡಿಹೋದರು. ಆದರೆ ಮರುದ್ದೇವತೆಗಳೊಡನೆ ನಿನಗೆ ಸ್ನೇಹವಾಗಲಿ. (ಅವರ ಸಹಾಯದಿಂದ) ನೀನು ಎಲ್ಲಾ ಯುದ್ಧಗಳಲ್ಲಿಯೂ ಜಯಶೀಲನಾಗುವೆ -- "Before the snorting of Vritra, all the gods, your comrades beating a hasty retreat abandoned you. Let your friendship be, O Indra, with the Maruts; then you will conquer all battles." ಈ ಕಾರಣಕ್ಕಾಗಿಯೇ ಮರುದ್ದೇವತೆಗಳು ಇಂದ್ರನ ಜತೆಯಲ್ಲಿ ಹೋಗುತ್ತಿರುವುದನ್ನು ನೋಡಬಹುದು ಎಂದು ಇಲ್ಲಿ ಹೇಳಿರುವುದು. ಎಂದರೆ ಇಂದ್ರನೂ, ಮರುದ್ದೇವತೆಗಳೂ ಸ್ನೇಹಭಾವದಿಂದಿರುವುದರಿಂದ ಯುದ್ಧಾದಿಗಳಲ್ಲಿ ಮರುದ್ದೇವತೆಗಳು ಇಂದ್ರನಿಗೆ ಸಹಾಯ ಮಾಡುವರೆಂದಭಿಪ್ರಾಯವು.

ಇಂದ್ರಶಬ್ದಕ್ಕೆ ಪರಮೈಶ್ವರ್ಯವೆಂದು ಅರ್ಥವನ್ನು ಹೇಳಬಹುದು. ಹಾಗೆ ಹೇಳುವುದಾದರೆ ಇಂದ್ರೇಣ ಎಂಬ ಶಬ್ದವನ್ನು ಅಬಿಭ್ಯುಷಾ ಎಂಬ ಶಬ್ದದೊಡನೆ ಮರುದ್ಗಣಕ್ಕೆ ವಿಶೇಷಣಪದವನ್ನಾಗಿ ಉಪ

ಯೋಗಿಸಬಹುದು. ಆಗ **ಇಂದ್ರೇಣ ಅಬಿಭ್ಯುಷಾ** ಎಂಬ ಶಬ್ದಗಳಿಗೆ ಪರಮೈಶ್ವರ್ಯಯುಕ್ತರೂ, ಭಯರಹಿತರೂ ಆದ ಮರುದ್ದೇವತೆಗಳ ಸಮೂಹದಿಂದ ಎಂದು ಅರ್ಥವು.

ಈ ಋಕ್ಕಿಗೆ ಯಾಸ್ಕಮಹರ್ಷಿಗಳು ತಮ್ಮ ನಿರುಕ್ತದಲ್ಲಿ ಹೀಗೆ ವ್ಯಾಖ್ಯಾನ ಮಾಡಿರುವರು. **ಇಂದ್ರೇಣ ಹಿ ಸಂದೃಶ್ಯಸೇ ಸಂಗಚ್ಛಮಾನೋಽಬಿಭ್ಯುಷಾ ಗಣೇನ ಮಂದೂ ಮದಿಷ್ಣೂ ಯುವಾಂ ಸ್ಥೋಽಪಿ ಮಂದುನಾ ತೇನೇತಿ ಸ್ಯಾತ್ಸಮಾನವರ್ಚಸೇತ್ಯೇತೇನ ವ್ಯಾಖ್ಯಾತಂ** ॥ ಇದು ಭಾಷ್ಯಕಾರರು ಅರ್ಥ ಮಾಡಿರುವಂತೆಯೇ ಇದೆ ಆದರೆ ಇಲ್ಲಿ ಯಾಸ್ಕರು---**ಮಂದೂ, ಸಮಾನ ವರ್ಚಸಾ** ಎಂಬ ಪದಗಳನ್ನು ದ್ವಿವಚನಾಂತ ಪದಗಳಂತೆ ಭಾವಿಸಿ ಇಂದ್ರಮರುತ್ತುಗಳಿಗಿಬ್ಬರಿಗೂ ವಿಶೇಷಣಪದಗಳನ್ನಾಗಿ ಹೇಳಿರುವುದಲ್ಲದೆ ಈ ಶಬ್ದಗಳನ್ನು ತೃತೀಯಾ ವಿಭಕ್ತಿಯಂತೆ ಪರಿಗಣಿಸಿ ಮರುದ್ಗಣಕ್ಕೆ ಮಾತ್ರ ವಿಶೇಷಣಪದಗಳನ್ನಾಗಿ ಉಪಯೋಗಿಸಿರುವರು. ಈ ಸಂದರ್ಭದಲ್ಲಿ **ಇಂದ್ರೇಣ ಅಬಿಭ್ಯುಷಾ ಮಂದೂ ಸಮಾನವರ್ಚಸಾ** ಎಂಬ ನಾಲ್ಕು ಶಬ್ದಗಳೂ ಮರುದ್ಗಣಕ್ಕೇ ವಿಶೇಷಣವು. ಆಗ ಮರುದ್ಗಣಕ್ಕೆ ಬದಲಾಗಿ ಇಂದ್ರನನ್ನೇ ಸಂಬೋಧಿಸಬೇಕಾಗುವುದು--"ಎಲೈ ಇಂದ್ರನೇ, ನೀನು ಪರಮೈಶ್ವರ್ಯಯುಕ್ತರೂ, ಭಯರಹಿತರೂ (ನಿನಗೆ) ಸಮಾನ ತೇಜಸ್ವಿಗಳೂ ಆದ ಮರುದ್ದೇವತೆಗಳೊಡನೆ ಹೋಗುತ್ತಿರುವುದನ್ನು ಕಾಣಬಹುದು" ಎಂದು ಅರ್ಥವನ್ನು ಹೇಳಬೇಕು. ಸ್ಕಂದಸ್ವಾಮಿಯು ಇದೇರೀತಿ ಹೇಳಿರುವರು. ಎರಡು ವಿಧವಾದ ಅರ್ಥಗಳಿಗೂ ಮುಖ್ಯಾಭಿಪ್ರಾಯ ಒಂದೇ ಆಗಿರುವುದರಿಂದ ಹೇಗೆ ಬೇಕಾದರೂ ಹೇಳಬಹುದು.

॥ ವ್ಯಾಕರಣಪ್ರಕ್ರಿಯಾ ॥

**ಸಂದೃಕ್ಷಸೇ**—ಸಂಪಶ್ಯೇಥಾಃ ಎಂದರ್ಥ **ಲಿಙರ್ಥೇಲೇಟ್** (ಪಾ. ಸೂ. ೩-೪-೭) ಎಂಬುದರಿಂದ ಪ್ರಾರ್ಥನಾರ್ಥದಲ್ಲಿ ದೃಶ್ ಧಾತುವಿನ ಮುಂದೆ ಲೇಟ್ ಪ್ರತ್ಯಯ ಬರುವುದು- **ಸಮೋಗಮ್ಯೃಚ್ಛಿಭ್ಯಾಂ** (ಪಾ. ಸೂ., ೧-೩-೨೯) ಎಂಬ ಸೂತ್ರದಲ್ಲಿ **ಅರ್ತಿಶ್ರುದೃಶಿಭ್ಯಶ್ಚೇತಿ ವಕ್ತವ್ಯಂ** ಎಂದು ವಾರ್ತಿಕವು ಪಠಿತವಾಗಿರುವುದು. ಸಂ ಎಂಬ ಉಪಸರ್ಗದ ಮುಂದಿರುವ ಋ ಶ್ರು ದೃಶ್ ಧಾತುಗಳ ಮುಂದಿರುವ ಲಕಾರದ ಸ್ಥಾನದಲ್ಲಿ ಆತ್ಮನೇಪದ ಬರುವುದು ಎಂಬುದರಿಂದ ಆತ್ಮನೇಪದ. ಮಧ್ಯಮಪುರುಷ ಏಕವಚನ ಥಾಸ್ ಬರುವುದು. **ಥಾಸಸ್ಸೇ** (ಪಾ. ಸೂ. ೩-೪-೮೦) ಟಿತ್ತಾದ ಲಕಾರಸ್ಥಾನದಲ್ಲಿ ಬಂದ ಥಾಸ್‌ಗೆ ಸೇ ಆದೇಶ ಬರುವುದು ಎಂಬುದರಿಂದ ಥಾಸ್‌ಗೆ ಸೇ ಎಂಬ ಆದೇಶಬರುವುದು. ದೃಶ್+ಸೇ ಎಂದಾಗುತ್ತೆ **ಲೇಟೋಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಸೇಗೆ ಅಡಾಗಮ. ದೃಶ್+ಅಸೇ **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಲೇಟ್ ಪರದಲ್ಲಿರುವಾಗ ಧಾತುವಿನ ಮುಂದೆ ಬಹುಲವಾಗಿ ಸಿಪ್ ಬರುವುದು. ಎಂಬುದರಿಂದ ಸಿಪ್ ಬರುವುದು. ದೃಶ್+ಸ್+ಅಸೇ—ಈಗ **ಪುಗಂತ ಲಘೂಪಧಸ್ಯ ಚ** ( ಪಾ. ಸೂ ೭-೩-೮೬ ) ಎಂಬದರಿಂದ ಉಪಧಾಗುಣವು ಪ್ರಾಪ್ತವಾಗುವುದು. ಆದರೂ ಅದು ಲಘು ಎಂಬ ಸಂಜ್ಞೆಯನ್ನು ಮುನ್ನಿಟ್ಟುಕೊಂಡು ಬರುವುದರಿಂದ **ಸಂಜ್ಞಾಪೂರ್ವಕೋವಿಧಿರನಿತ್ಯಃ** (ಪರಿಭಾ ೯-೩-೧) ಎಂಬ **ಪರಿಭಾಷೆಯ** ಪ್ರಕಾರ ಅನಿತ್ಯವು. ಆದ್ದರಿಂದ ಇಲ್ಲಿ ಬರುವುದಿಲ್ಲ. **ವ್ರಶ್ಚಭ್ರಸ್ಜಸೃಜ ಮೃಜಯಜರಾಜ ಭ್ರಾಜಚ್ಛಶಾಂ ಷಃ** (ಪಾ ಸೂ. ೮-೨.೩೬) **ಝಲ್** ವರ್ಣಪರದಲ್ಲಿದ್ದರೂ ಪದಾಂತ ವಿಷಯದಲ್ಲಿದ್ದರೂ ವ್ರಶ್ಚಾದಿ ಏಳು ಧಾತುಗಳಿಗೂ ಛಾಂತ ಶಾಂತಗಳಾದ ಶಬ್ದಗಳಿಗೂ ಕೊನೆಯ ವರ್ಣದ ಸ್ಥಾನದಲ್ಲಿ ಷಕಾರಬರುವುದು ಎಂಬುದರಿಂದ ಶಾಂತವಾದ ದೃಶ್ ಧಾತುವಿನ ಶಕಾರಕ್ಕೆ ಸ್ ಎಂಬ ಝಲ್ ಪರದಲ್ಲಿರುವಾಗ ಷ್‌ಕಾರ ಬರುವುದು. ದೃಷ್+ಸ್+ಅಸೇ—**ಷಢೋಃ-**

**ಕಃಸಿ** (ಪಾ ಸೂ. ೮-೨-೪೧) ಸಕಾರ ಪರದಲ್ಲಿರುವಾಗ ಷಕಾರ ಢಕಾರಗಳಿಗೆ ಕಕಾರ ಬರುವುದು ಎಂಬುದರಿಂದ ಷಕಾರಕ್ಕೆ ಕಕಾರ ಬರುವುದು. ದೃಕ್+ಸ್ ಅನೇ **ಆದೇಶಪ್ರತ್ಯಯಯೋಃ** (ಪಾ ಸೂ. ೮-೩-೫೯) ಇಣ್ ಕವರ್ಗಗಳ ಮುಂದಿರುವ ಆದೇಶರೂಪವಾದ ಸಕಾರಕ್ಕೂ ಪ್ರತ್ಯಯಾವಯವವಾದ ಸಕಾರಕ್ಕೂ ಷಕಾರ ಬರುವುದು ಎಂಬುದರಿಂದ ಕಕಾರದ ಮುಂದಿರುವ ಸಕಾರಕ್ಕೆ ಷಕಾರ. **ಬಹುಲಂ ಛಂದಸಿ** (ಪಾ. ಸೂ. ೨-೪-೭೩) ಎಂಬ ಶಪ್ಪಿಗೆ ಲುಗ್ವಿಧಾಯಕವಾದ ಸೂತ್ರದಲ್ಲಿ ಬಹುಲ ಗ್ರಹಣವಿರುವುದರಿಂದ, ಸಿಪ್ಪಿನ ಮುಂದೆ ಶಪ್ ಪ್ರತ್ಯಯವೂ ಬರುವುದು. ದೃಕ್+ಷ್+ಅ+ಅನೇ ಶಪ್ ಬಂದರೂ **ಪಾಘ್ರಾಧ್ಮಾಸ್ಥಾಮ್ನಾದಾಣ್‌ದೃಶ್ಯರ್ತಿಸರ್ತಿಶದಸದಾಂ ಪಿಬಜಿಘ್ರಧಮತಿಷ್ಠಮನಯಚ್ಛಪಶ್ಯರ್ಚ್ಛಧೌಶೀಯಸೀದಾಃ** (ಪಾ ಸೂ. ೭-೩-೭೮) ಇತ್ಸಂಜ್ಞಕ ಶಕಾರಾದಿ ಪ್ರತ್ಯಯಪರದಲ್ಲಿರುವಾಗ ಪಾದಿಧಾತುಗಳಿಗೆ ಪಿಬಾದ್ಯಾದೇಶಗಳು ಬರುವುವು ಎಂಬುದರಿಂದದೃಶ್‌ಗೆಪಶ್ಯಾದೇಶವು ಸಿಪ್ಪಿನಿಂದ ವ್ಯವಧಾನವಿರುವ ಕಾರಣ ಇತ್ಸಂಜ್ಞಕ ಶಕಾರಾದಿ ಪ್ರತ್ಯಯಾನಂತರತ್ವವಿಲ್ಲದುದರಿಂದ ಬರುವುದಿಲ್ಲ ಶಪ್ಪು ಪಿತ್ತಾದ್ದರಿಂದ ಅನುದಾತ್ತೌ ಸುಪ್ಪಿತೌ ಎಂಬುದರಿಂದ ಅನುದಾತ್ತ ಅದರ ಮುಂದಿರುವ ಅನೇ ಎಂಬುದಕ್ಕೆ **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತ ದೃಶ್ ಎಂಬಲ್ಲಿ ಧಾತು ಸ್ವರವೇ ನಿಲ್ಲುವುದು, ಹ್ರಸ್ವಾಕಾರಗಳೆರಡಕ್ಕೂ **ಅತೋಗುಣೇ** (ಪಾ. ಸೂ. ೬-೧-೯೭) ಎಂಬುದರಿಂದ ಪರರೂಪ. ದೃಕ್ಷನೇ ಎಂದಾಗುವುದು. **ಹಿಚ** (ಪಾ ಸೂ. ೮-೧೩೪) ಹಿ ಎಂಬುದರಿಂದ ಯೋಗವಿದ್ದರೆ ತಿಙಂತಕ್ಕೆ ಅನುದಾತ್ತ ಬರುವುದಿಲ್ಲ ಎಂಬುದರಿಂದ ಹಿಯ ಮುಂದೆ ಇರುವ ದೃಕ್ಷನೇ ಎಂಬುದಕ್ಕೆ **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಅನುದಾತ್ತ ಬರುವುದಿಲ್ಲ.

**ಸಂಜಗ್ಮಾನಃ**---ಸಂ ಎಂಬ ಉಪಸರ್ಗಪೂರ್ವಕವಾದ 'ಗಮ್ಲೃಗತೌ' ಎಂಬುದರ ಮುಂದೆ **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಛಂದಸ್ಸಿನಲ್ಲಿ ಧಾತ್ವರ್ಥಗಳ ಸಂಬಂಧ ತೋರುವಾಗ ಕಾಲತ್ರಯದಲ್ಲಿಯೂ ಈ ಪ್ರತ್ಯಯಗಳು ಬರುವುವು. ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್ ಬರುವುದು. **ಸಮೋಗಮ್ಯೃಚ್ಛಿಭ್ಯಾಂ** (ಪಾ. ಸೂ. ೧-೩-೨೯) ಸಂ ಎಂಬುದರ ಮುಂದೆ ಇರುವ ಅಕರ್ಮಕಗಳಾದ ಗಮ್ ಋಚ್ಛ ಧಾತುಗಳ ಮುಂದಿರುವ ಲಕಾರಕ್ಕೆ ಆತ್ಮನೇಪದವು ಬರುವುದು ಎಂದು ಆತ್ಮನೇಪದವನ್ನು ವಿಧಿಸಿರುವುದರಿಂದ **ಲಿಟಃಕಾನಜ್ವಾ,** (ಪಾ. ಸೂ. ೩-೨-೧೦೬) ಎಂಬುದರಿಂದ ಆತ್ಮನೇಪದಸಂಜ್ಞಕವಾದ ಕಾನಚ್ **ಲಿಟಿಧಾತೋರನಭ್ಯಾಸಸ್ಯ** (ಪಾ.ಸೂ ೬-೧-೮) ಎಂಬುದರಿಂದ ದ್ವಿತ್ವ ಗಮ್+ಗಮುಃ ಅನ **ಹಲಾದಿಃ ಶೇಷಃ** (ಪಾ.ಸೂ. ೭-೪-೬೦) ಎಂಬುದರಿಂದ ಅಭ್ಯಾಸದ ಆದಿವರ್ಣಕ್ಕೆ ಶೇಷ ಬರುವುದು. ಶೇಷ ಎಂದರೆ ಸ್ವಸ್ವಜಾತೀಯೇತರನಿವೃತ್ತಿಪೂರ್ವಕಸ್ವಾವಸ್ಥಾನಂ ಏವಂಚ ಅಭ್ಯಾಸದ ಆದಿಯಗ್‌ಗೆ ಶೇಷಬರುವುದು ಎಂದರೆ ಹಲ್ತ್ವೇನಸಜಾತೀಯವೂಗ್ ಎಂಬುದಕ್ಕಿಂತ ಇತರವೂ ಆದ ಮ್‌ಗೆ ನಿ ವೃತ್ತಿಯು ಅರ್ಥಾತ್ ಏರ್ಪಡುವುದು ಗ+ಗಮ್+ಅನ **ಕುಹೋಶ್ಚುಃ** (ಪಾ. ಸೂ. ೭-೪-೬೨) ಅಭ್ಯಾಸದಲ್ಲಿರುವ ಕವರ್ಗ ಹಕಾರಗಳಿಗೆ ಚವರ್ಗ ಬರುವುದು ಎಂಬುದರಿಂದ ಕವರ್ಗದ ಮೂರನೇ ವರ್ಣವಾದ ಗ್ ಗೆ ಚವರ್ಗದ ಮೂರನೇವರ್ಣವಾದ ಜ್ ಬರುವುದು. ಜ+ಗಮ್+ಅನ **ಗಮಹನಜನಖನಘಸಾಂ ಲೋಪಃ ಕ್ಙಿತ್ಯನಙಿ** (ಪಾ. ಸೂ. ೬-೪-೯೮) ಅಙ್ ಭಿನ್ನವಾದ ಅಜಾದಿಯಾದ ಕಿತ್ತು ಙಿತ್ತು ಆದ ಪ್ರತ್ಯಯಗಳು ಪರದಲ್ಲಿರುವಾಗ ಗಮಾದಿಧಾತುಗಳ ಉಪಾಂತ್ಯವರ್ಣಕ್ಕೆ ಲೋಪ. ಜ+ಗ್‌ಮ್+ಅನ= ಜಗ್ಮಾನ. ಸಂ-ಸೇರಿದರೆ ಸಂಜಗ್ಮಾನ. ಕಾನಚ್ಚು ಚಿತ್ತಾದ್ದರಿಂದ **ಚಿತಃ** ಎಂಬುದರಿಂದ ಅಂತೋದಾತ್ತ. **ಕುಗತಿಪ್ರಾದಯಃ** (ಪಾ.ಸೂ. ೨-೨-೧೮) ಎಂಬುದರಿಂದ ಸಂನೊಂದಿಗೆ ಸಮಾಸಮಾಡಿದರೆ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರಬರುವುದು.

**ಅಬಿಭ್ಯುಷಾ**— ಞಿಭೀ ಭಯೇ ಎಂಬ ಧಾತುವಿನ ಮುಂದೆ **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ಲಿಟ್. **ಶೇಷಾತ್ಕರ್ತರಿಪರಸ್ಮೈಪದಮ್**, (ಪಾ. ಸೂ. ೧-೩-೭೮) ಆತ್ಮನೇಪದ ನಿಮಿತ್ತ ಹೀನವಾದ ಧಾತುವಿನ ಮುಂದಿರುವ ಲಕಾರಕ್ಕೆ ಪರಸ್ಮೈಪದ ಬರುವುದು ಎಂದು ಪರಸ್ಮೈಪದ ವಿಹಿತವಾಗಿ ರುವುದರಿಂದ **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಲಿಟ್ಟಿಗೆ ಕ್ವಸು ಆದೇಶ. ಪ್ರತ್ಯಯ ಕಿತ್ತಾ ದ್ದರಿಂದ 'ಸಾರ್ವಧಾತುಕಾರ್ಧಧಾತುಕಯೋಃ' ಎಂಬುದರಿಂದ ಗುಣಬರುವುದಿಲ್ಲ. **ಲಿಟಿಧಾತೋರನಭ್ಯಾಸಸ್ಯ** (ಪಾ. ಸೂ. ೬-೧-೮) ಎಂಬುದರಿಂದ ದ್ವಿತ್ವ, **ಹ್ರಸ್ವಃ** (ಪಾ ಸೂ. ೭-೪-೫೯) ಎಂಬುದರಿಂದ ಅಭ್ಯಾಸಕ್ಕೆ ಹ್ರಸ್ವ. **ಅಭ್ಯಾಸೇಚರ್ಚ** (ಪಾ. ಸೂ. ೮-೪-೫೪) ಎಂಬುದರಿಂದ ಜತ್ವ. ಬಿ+ಭೀ+ವಸ್ **ಕೃ ಸೃ ಭೃ ವೃ ಸ್ತುದ್ರುಶ್ರು ಸ್ರುವೋಲಿಟಿ** (ಪಾ.ಸೂ. ೭-೨-೧೩) ಪ್ರಕೃತಿವಿಶೇಷವನ್ನು ನಿಮಿತ್ತಮಾಡಿಕೊಂಡು ಬರುವ ಇಣ್ನಿಷೇಧವೇ ಆಗಲಿ, ಪ್ರತ್ಯಯವಿಶೇಷವನ್ನು ನಿಮಿತ್ತಮಾಡಿಕೊಂಡು ಬರುವ ಇಣ್ನಿಷೇಧವೇ ಆಗಲಿ ಎಷ್ಟು ಇಣ್ನಿಷೇಧವಿರುವುದೋ ಅದು ಲಿಟ್ಟಿನಲ್ಲಿ ಬರುವಪಕ್ಷಕ್ಕೆ ಕೃ ಸೃ ಮೊದಲಾದ ಎಂಟು ಧಾತುಗಳ ಮುಂದಿರುವ ಲಿಟ್ಟಿಗೆ ಬರುವುದೇ ವಿನಾ ಬಾಕಿ ಧಾತುಗಳ ಮುಂದಿರುವ ಲಿಟ್ಟಿಗೆ ಯಾವ ಇಣ್ನಿಷೇಧವೂ ಬರುವುದಿಲ್ಲ. ಇದೇ ಕ್ರಾದಿನಿಯಮದ ಆಕಾರ. ಈ ನಿಯಮದಿಂದ ಕ್ರಾದ್ಯಷ್ಟಕದಲ್ಲಿ ಸೇರದೇ ಇರುವ ಭೀ ಧಾತುವಿನ ಮುಂದಿರುವ ಲಿಟ್ಟಿಗೆ (ವಸ್‌ಗೆ) ಇಡಾಗಮ ಬರಬೇಕಾಗುವುದು. ಆದರೂ **ವಸ್ವೇಕಾಜಾದ್ಘಸಾಂ** (ಪಾ. ಸೂ. ೭-೨-೬೭) ವಸು ಪ್ರತ್ಯಯಕ್ಕೆ ಇಡಾಗಮ ಬರುವಪಕ್ಷದಲ್ಲಿ, ದ್ವಿತ್ವಬಂದನಂತರ ಏಕಾಚ್ಕವಾದ ಧಾತು, ಆದಂತ ಧಾತು, ಘಸ್ಲೃಧಾತು ಇವುಗಳ ಮುಂದಿರುವ ವಸುವಿಗೆ ಮಾತ್ರ ಇಡಾಗಮ ಬರುವುದೇ ವಿನಾ ಬಾಕಿ ಧಾತುಗಳ ಮುಂದಿರುವ ವಸು ಪ್ರತ್ಯಯಕ್ಕೆ ಇಡಾಗಮ ಬರುವುದಿಲ್ಲ ಎಂಬ ನಿಯಮದಿಂದ ಬಿ ಭೀ ಎಂಬುದರ ಮುಂದಿರುವ ವಸುವಿಗೆ ಇಡಾಗಮ ಬರುವುದಿಲ್ಲ. ಬಿ ಭೀವಸ್ ಎಂಬುದಕ್ಕೆ ನಞ್‌ನೊಂದಿಗೆ ಸಮಾಸ ಬಂದನಂತರ ತೃತೀಯಾವಿಭಕ್ತಿ ಏಕವಚನವನ್ನಿಟ್ಟರೆ ಅಬಿಭೀವಸ್+ಆ. ಈಗ ಭಸಂಜ್ಞೆ ಇರುವುದರಿಂದ **ವಸೋಸ್ಸಂಪ್ರಸಾರಣಂ** (ಪಾ. ಸೂ. ೬-೪-೧೩೧) ಎಂಬು ದರಿಂದ ಸಂಪ್ರಸಾರಣ ವ್‌ಗೆ ಉಕಾರವೂ **ಸಂಪ್ರಸಾರಣಾಚ್ಚ** (ಪಾ. ಸೂ ೬-೧-೧೦) ಉ+ಅಗಳಿಗೆ ಪೂರ್ವ ರೂಪವೂ ಬಂದರೆ ಬಿಭೀ+ಉಸ್+ಆ. **ಅಚಿಶ್ನುಧಾತುಭ್ರುವಾಂಯ್ವೋರಿಯಙ್ಙುವಙೌ** (ಪಾ. ಸೂ. ೬-೪-೭೭) ಎಂಬುದರಿಂದ ಬರುವ ಇಯಙಾದೇಶವನ್ನು ಬಾಧಿಸಿ **ಏರನೇಕಾಚೋಽಸಂಯೋಗಪೂರ್ವಸ್ಯ** (ಪಾ. ಸೂ. ೬-೪-೮೨) ಅಜಾದಿಪ್ರತ್ಯಯ ಪರದಲ್ಲಿರುವಾಗ ಧಾತ್ವವಯವಸಂಯೋಗಪೂರ್ವಕವಲ್ಲದ ಯಾವ ಇಕಾರವಿದೆಯೋ ಆ ಇಕಾರವನ್ನೇ ಕೊನೆಯಲ್ಲಿ ಹೊಂದಿರುವ ಯಾವ ಧಾತುವಿದೆಯೋ ಆ ಧಾತುವನ್ನು ಕೊನೆಯಲ್ಲಿ ಹೊಂದಿರುವ ಅಂಗಕ್ಕೆ ಯಣಾದೇಶ ಬರುವುದು ಎಂಬುದರಿಂದ ಯಣಾದೇಶ ಬರುವುದು. ಹೇಗೆಂದರೆ ಅಬಿಬೀ+ಉಸ್+ಆ ಎಂಬಲ್ಲಿ ಈಕಾರವು ಸಂಯೋಗದ ಮುಂದೆ ಇಲ್ಲವು ಆದ್ದರಿಂದ ಸಂಯೋಗಪೂರ್ವಕವಲ್ಲ ಅಂದಮೇಲೆ ಧಾತ್ವವಯವ-ಸಂಯೋಗಪೂರ್ವಕವು ಸುತರಾಂ ಆಗುವುದಿಲ್ಲ. ಇದನ್ನು ಕೊನೆಯಲ್ಲಿ ಹೊಂದಿರುವ ಧಾತು ಭೀ ಎಂಬುದು. ಆ ಧಾತುವನ್ನು ಕೊನೆಯಲ್ಲಿ ಹೊಂದಿರುವ ಅನೇಕಾಚ್ಕವಾದ ಅಂಗ ಅಬಿಭೀ ಎಂಬುದು. ಅದಕ್ಕೆ ಯಣಾದೇಶಬರುವುದು ಎಂದರೆ **ಅಲೋಂತ್ಯಸ್ಯ** (ಪಾ.ಸೂ. ೧-೧-೫೨) ಎಂಬುದರಿಂದ ಆ ಅಂಗದ ಕೊನೆಯ ಈಕಾರಕ್ಕೆ ಯ್ ಬರುವುದು ಅಬಿಭ್‌ಯ್+ಉಸ್+ಆ. **ಆದೇಶಪ್ರತ್ಯಯಯೋಃ** (ಪಾ. ಸೂ. ೮-೫-೫೧) ಎಂಬುದರಿಂದ ಷತ್ವ ಬಂದರೆ ಅಬಿ-ಭ್ಯುಷಾ ಎಂದಾಗುವುದು **ಶಾಸಿವಸಿಘಸೀನಾಂಚ** (ಪಾ.ಸೂ. ೮-೩-೬೦) ಆದೇಶ ಪ್ರತ್ಯಯತ್ವಾಭಾವದ ಪ್ರಾಪ್ತೇ ವಿಧಿರಯಂ=ಅಂದರೆ-ಶಾಸ್ ಮೊದಲಾದುವುಗಳಲ್ಲಿರುವ ಸಕಾರವು ಆದೇಶರೂಪವೂ ಅಲ್ಲ, ಪ್ರತ್ಯಯಾವಯ ವವೂ ಅಲ್ಲ. ಆದ್ದರಿಂದ 'ಆದೇಶಪ್ರತ್ಯಯಯೋಃ' ಎಂಬುದರಿಂದ ಷತ್ವವು ಅಪ್ರಾಪ್ತವಾದರೆ, **ಶಾಸಿವಸಿಘಸೀನಾಂಚ**, ಎಂಬ ಸೂತ್ರವು ಪ್ರವೃತ್ತವಾಗಿರುವುದು ಎಂದರ್ಥ. ಆದ್ದರಿಂದ ವಸಿ ಎಂಬುದರಿಂದ ವಸ ಧಾತುವಿಗೆ

ಗ್ರಹಣವೇ ವಿನಾ ವಸುಪ್ರತ್ಯಯಕ್ಕೆ ಗ್ರಹಣವಿಲ್ಲ **ಇಕ್ಶ್ತಿಪೌಧಾತುನಿರ್ದೇಶೇ** (ಪಾ ಸೂ. ೩-೩-೧೦೮-೨೦) ಎಂಬುದೂ ಇಲ್ಲಿ ವಸಿ ಎಂದು ಇಕಾ ನಿರ್ದೇಶವಿರುವುದರಿಂದ ಇದು ಧಾತುವೆಂದೇ ಬೋಧಿಸುವುದು ವಾಷವಾಚಾ ರ್ಯರೂ ಸಹ ಇದೇ ಸೂಕ್ತದಲ್ಲಿ ಮೊದಲನೆಯ ಮಂತ್ರದಲ್ಲಿ ತಸ್ಥುಷಃ ಎಂಬುದಕ್ಕೆ ಪ್ರಕ್ರಿಯೆಯನ್ನು ನಿರೂಪಣೆ ಮಾಡುವಾಗ ವಸು ಪ್ರತ್ಯಯಕ್ಕೆ **ಆದೇಶಪ್ರತ್ಯಯಯೋಃ** ಎಂಬುದರಿಂದಲೇ ಷತ್ವವನ್ನು ಉಪಪಾದಿಸಿರುವರು. ಆದ್ದರಿಂದ ಇಲ್ಲಿ ಆದೇಶಪ್ರತ್ಯಯಯೋಃ ಎಂಬುದರಿಂದ ಷತ್ವವನ್ನು ಹೇಳುವುದು ಉಚಿತವಾಗಿರುವುದು. **ತುತ್ಪುರುಷೇತುಲ್ಯಾರ್ಥ** ( ಪಾ. ಸೂ. ೬-೨-೨- ) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುವುದು. ಸಂಹಿತಾಕಾಲದಲ್ಲಿ ಸಂಜಗ್ಮಾನೋ+ಅಬಿಭ್ಯುಷಾ ಎಂಬಲ್ಲಿ **ಏಙಃಪದಾನ್ತಾದತಿ** (ಪಾ. ಸೂ. ೬-೧-೧೦೯) ಪದದ ಕಡೆಯಲ್ಲಿರುವ ಏ ಓಗಳ ಮುಂದೆ ಹ್ರಸ್ವಾಕಾರವಿದ್ದರೆ ಪೂರ್ವಪರಗಳ ಸ್ಥಾನದಲ್ಲಿ ಪೂರ್ವರೂಪವು ಏಕಾದೇಶವಾಗಿ ಬರುವುದು ಎಂಬುದರಿಂದ ವಿಹಿತವಾದ ಪೂರ್ವರೂಪವು ಪ್ರಾಪ್ತವಾದರೆ **ಪ್ರಕೃತ್ಯಾಂತಃ ಪಾದಮವ್ಯಪರೇ** (ಪಾ. ಸೂ. ೬-೧-೧೧೫) ವಕಾರ ಯಕಾರಗಳ ಹಿಂದೆ ಇಲ್ಲದ ಹ್ರಸ್ವಾಕಾರ ಪರದಲ್ಲಿದ್ದರೆ ಋಕ್ಪಾದದ ಮಧ್ಯದಲ್ಲಿ ರುವ ಏ ಓಗಳು ಪ್ರಕೃತಿಭಾವವನ್ನು ಹೊಂದುವುವು ಎಂಬುದರಿಂದ ಪ್ರಕೃತಿಭಾವ ಬರುವುದು.

**ಮನ್ದೂ**—ಮದಿಸ್ತುತಿಮೋದಮದಸ್ವಪ್ನ ಕಾನ್ತಿಗತಿಷು. ಮದಿ ಧಾತುವು ಇದಿತ್ತಾದ್ದರಿಂದ **ಇದಿ-ತೋನುಮ್ಧಾತೋಃ** (ಪಾ.ಸೂ. ೭-೧-೫೮) ಎಂಬುದರಿಂದ ನುಮ್ ಆಗಮ **ಖರು ಶಙ್ಕು ಪೀಯೂ ನೀಲಙ್ಗು ಲಿಗು** (ಉ. ಸೂ. ೧-೩೬) ಈ ಐದು ಶಬ್ದಗಳು ಕು ಪ್ರತ್ಯಯಾಂತವಾಗಿ ನಿಪಾತಿಸಲ್ಪಡುವುವು. ಈ ಸೂತ್ರದಲ್ಲಿ ಅವಿಭಕ್ತ್ಯಯಾಗಿ ನಿರ್ದೇಶವಿರುವುದರಿಂದ, ಹನ ಧಾತುವಿನಿಂದ ಹಿಗು ಆಗುವಂತೆ ಬೇರೆ ಧಾತುಗಳ ಮುಂದೆಯೂ ಕು ಪ್ರತ್ಯಯ ಬರುವುದು ಎಂದಿರುವುದು ಆದ್ದರಿಂದ ಮದಿ ಧಾತುವಿನ ಮುಂದೆಯೂ ಕು ಪ್ರತ್ಯಯಬರುವುದು. ಅಥವಾ **ಮೃಗಯ್ವಾದಯಶ್ಚ** (ಉ ಸೂ. ೧-೩೭) ಮೃಗಯ್ವಾದಿ ಗಣವು ಆಕೃತಿಗಣವಾದ್ದರಿಂದ ಕಂಡುಃ ಪೀಲುಃ ಇತ್ಯಾದಿಗಳಲ್ಲಿ ಕು ಪ್ರತ್ಯಯಬರುವಂತೆ ಮದಿಧಾತುವಿನ ಮುಂದೆಯೂ ಕು ಪ್ರತ್ಯಯ ಬರುವುದು. ಪ್ರತ್ಯಯ ಸ್ವರದಿಂದ ಅಂತೋದಾತ್ತ. ಮನ್ದು ಎಂಬುದರ ಮುಂದೆ ದ್ವಿವಚನವನ್ನಿಟ್ಟರೆ ಮನ್ದು+ಔ ಎಂದಿರುವಾಗ ' ಪ್ರಥಮಯೋಃ ಪೂರ್ವಸವರ್ಣಃ, ' ಅಕ್ ವರ್ಣಗಳಿಗೆ ಪ್ರಥಮಾದ್ವಿತೀಯಾವಿಭಕ್ತಿಗಳ ಸ್ವರ ಪರದಲ್ಲಿದ್ದರೆ ಪೂರ್ವ ಪರಸ್ಥಾನಗಳಲ್ಲಿ ಪೂರ್ವಸವರ್ಣದೀರ್ಘ ಬರುವುದು ಎಂಬುದರಿಂದ ಪೂರ್ವಸವರ್ಣದೀರ್ಘ. ತೃತೀಯಾ ಏಕವಚನ ಎಂಬ ಪಕ್ಷದಲ್ಲಿ **ಸುಪಾಂ ಸುಲುಕ್** (ಪಾ.ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣದೀರ್ಘ.

**ಸಮಾನವರ್ಚಸಾ**—ದ್ವಿವಚನ ಪಕ್ಷದಲ್ಲಿ ಸಮಾನಂ ವರ್ಚಃ ಯಯೋಸ್ತೌ ಎಂದೂ, ತೃತೀಯಾ ಏಕ ವಚನ ಎಂಬ ಪಕ್ಷದಲ್ಲಿ ಸಮಾನಂ ವರ್ಚಃ ಯಸ್ಯ ಸಃ ಎಂದೂ ಬಹುವ್ರೀಹಿ-ದ್ವಿವಚನಪಕ್ಷದಲ್ಲಿ **ಸುಪಾಂಸುಲುಕ್** ಎಂಬುದರಿಂದ ದ್ವಿವಚನಕ್ಕೆ ಆಕಾರದೇಶ. ಸಮಾನಶಬ್ದವು ಪ್ರಾತಿಪದಿಕಸ್ವರದಿಂದ ಅಂತೋದಾತ್ತ. ಬಹುವ್ರೀಹಿ ಸಮಾಸ ಬಂದಮೇಲೂ **ಬಹುವ್ರೀಹೌ ಪ್ರಕೃತ್ಯಾಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಅದೇ ನಿಲ್ಲುವುದು ॥ ೭ ॥

॥ ಸಂಹಿತಾಪಾಠಃ ॥

ಅ॒ನ॒ವ॒ದ್ಯೈರ॒ಭಿದ್ಯು॑ಭಿರ್ಮ॒ಖಃ ಸಹ॑ಸ್ವದರ್ಚತಿ ।
ಗ॒ಣೈರಿಂದ್ರ॑ಸ್ಯ॒ ಕಾಮ್ಯೈಃ॑ ॥ ೮ ॥

॥ ಪದಪಾಠಃ ॥

ಅನವದ್ಯೈಃ । ಅಭಿದ್ಯುऽಭಿಃ । ಮಖಃ । ಸಹಸ್ವತ್ । ಅರ್ಚತಿ ॥
ಗಣೈಃ । ಇಂದ್ರಸ್ಯ । ಕಾಮ್ಯೈಃ ॥ ೮ ॥

॥ ಸಾಯಣಭಾಷ್ಯಂ ॥

ಮಖಃ ಪ್ರವರ್ತಮಾನೋಽಯಂ ಯಜ್ಞೋಽನವದ್ಯೈರ್ದೋಷರಹಿತೈರಭಿದ್ಯುಭಿರ್ದ್ಯುಲೋಕಮಭಿಗತೈಃ ಕಾಮ್ಯೈಃ ಫಲಪ್ರದತ್ವೇನ ಕಾಮಯಿತವ್ಯೈರ್ಗಣೈರ್ಮರುತ್ಸಮೂಹೈಃ ಸಹಿತಮಿಂದ್ರಸ್ಯೇಂದ್ರಂ ಸಹಸ್ವದ್ಬಲೋಪೇತಂ ಯಥಾ ಭವತಿ ತಥಾರ್ಚತಿ । ಪೂಜಯತಿ । ಅಯಂ ಯಜ್ಞೋ ಮರುತ ಇಂದ್ರಂ ಚಾತಿಶಯೇನ ಪ್ರೀಣಯತೀತ್ಯರ್ಥಃ । ಯಜ್ಞ ಇತ್ಯಾದಿಷು ಪಂಚದಶಸು ಯಜ್ಞನಾಮಸು ಮಖೋ. ವಿಷ್ಣುರಿತಿ ಪಠಿತಂ । ಚತುಶ್ಚತ್ವಾರಿಂಶತ್ಸ್ವರ್ಚತಿಕರ್ಮಸ್ವರ್ಚತಿ ಗಾಯತೀತಿ ಪಠಿತಂ ॥ ನ ವಿದ್ಯತೇಽವದ್ಯಂ ಯೇಷಾಂ ತೇಽನವದ್ಯಾಃ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಅಭಿಗತಾ ದ್ಯೌರ್ಯೈಸ್ತೇಽಭಿದ್ಯವಃ । ತೈರಭಿದ್ಯುಭಿಃ । ಅಭಿಶಬ್ದಃ ಪ್ರಾತಿಪದಿಕಸ್ವರೇಣಾಂತೋದಾತ್ತಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರೇಣ ಸ ಏವ ಶಿಷ್ಯತೇ । ಮಖಃ ಪ್ರಾತಿಪದಿಕಸ್ವರಃ । ಸಹೋ ಬಲಮಸ್ಮಿನ್ನರ್ಚನಕರ್ಮಣ್ಯಸ್ತೀತಿ ಸಹಸ್ವತ್ । ತಸೌ ಮತ್ವರ್ಥೇ । ಪಾ. ೧-೪-೧೯ । ಇತಿ ಭಸಂಜ್ಞಯಾ ಪದಸಂಜ್ಞಾಯಾ ಬಾಧಿತತ್ವಾತ್ಸಕಾರಸ್ಯ ರುತ್ವಾಭಾವಃ । ಮಾದುಪಧಾಯಾಶ್ಚ ಮತೋರ್ವೋಽಯವಾದಿಭ್ಯಃ । ಪಾ.೮-೨-೯ । ಇತಿ ಮತುಪೋ ಮಸ್ಯ ವತ್ವಂ । ಸಹಸ್ಶಬ್ದೋ ನಬ್ವಿಷಯಸ್ಯಾನಿಸಂತಸ್ಯೇತ್ಯಾದ್ಯುದಾತ್ತಃ । ಮತುಪಃ ಪಿತ್ತ್ವಾತ್ಸ ಏವ ಶಿಷ್ಯತೇ । ಕಾಮ್ಯೈಃ । ಕಮೇರ್ಣಿಙ್ । ಪಾ. ೩-೧-೩೦ । ಅತ ಉಪಧಾಯಾಃ । ಪಾ-೭-೨-೧೧೬ । ಇತಿ ವೃದ್ಧಿಃ । ಜನೀ ಜೄಷ್ ಕ್ನಸು ರಂಜೋಽಮಂತಾಶ್ಚ । ಧಾ ೧೯, ೬೩-೬೭ । ಇತ್ಯಮಂತತ್ವೇನ ಪ್ರಾಪ್ತಸ್ಯ ಮಿತ್ತ್ವಸ್ಯ ನ ಕಮ್ಯಮಿ ಚಮಾಮಿತಿ ಪ್ರತಿಷೇಧಾತ್ । ಧಾ. ೧೯-೬೯ । ಮಿತಾಂ ಹ್ರಸ್ವಃ । ಪಾ. ೬ ೪-೯೨ । ಇತ್ಯುಪಧಾಹ್ರಸ್ವತ್ವಂ ನ ಭವತಿ । ಣ್ಯಂತಾದಚೋ ಯತ್ । ಪಾ. ೩-೧-೯೭ । ಣೇರ್ಲೋಪಃ । ಪಾ. ೬-೪-೫೧ । ತಿತ್ಸ್ವರಿತಂ । ಪಾ. ೬-೧-೧೮೫ । ಇತಿ ಪ್ರಾಪ್ತೇ ಯತೋಽನಾವಃ । ಪಾ. ೬-೧-೨೧೩ । ಇತ್ಯಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

ಮಖಃ—(ನಾವು ಮಾಡುತ್ತಿರುವ ಈ) ಯಜ್ಞವು । ಅನವದ್ಯೈಃ—ದೋಷರಹಿತನಾದ । ಅಭಿದ್ಯುಭಿಃ—ಸ್ವರ್ಗಲೋಕಪ್ರವರ್ತಕರಾದ । ಕಾಮ್ಯೈಃ—ಫಲಾಪೇಕ್ಷಿಗಳಿಂದ ಅಪೇಕ್ಷಿಸಲ್ಪಡುವ । ಗಣೈಃ-ಮರುದ್ಗಣಗಳಿಂದ (ಸಹಿತನಾದ) । ಇಂದ್ರಸ್ಯ—ಇಂದ್ರನನ್ನು । ಸಹಸ್ವತ್—ಬಲಶಾಲಿಯಾಗುವಂತೆ ಮಾಡುವುದಕ್ಕಾಗಿ । ಅರ್ಚತಿ—ಪೂಜಿಸಲಿ ॥

॥ ಭಾವಾರ್ಥ ॥

ಮರುದ್ಗಣಗಳು ದೋಷರಹಿತರಾದವರು, ಸ್ವರ್ಗಲೋಕಕ್ಕೆ ಹೋಗಲು ಸಮರ್ಥರಾದವರು. ಇಷ್ಟ ಫಲಪ್ರಾಪ್ತಿಗಾಗಿ ಜನರು ಇವರನ್ನು ಅಪೇಕ್ಷಿಸುವರು ಇಂತಹ ಮರುದ್ಗಣಗಳಿಂದ ಸಹಿತನಾದ ಇಂದ್ರನಿಗೆ ನಾವು ಮಾಡುತ್ತಿರುವ ಈ ಯಜ್ಞವು ಪೂಜಾದಿಗಳಿಂದ ತೃಪ್ತಿಪಡಿಸಿ ಅವನನ್ನು ಬಲಶಾಲಿಯಾಗುವಂತೆ ಮಾಡಲಿ.

English Translation

This sacrifice is performed in adoration of Indra so as to make him powerful, along with the irreproachable, heavenward-tending and amiable bands (of the Maruts).

॥ ವಿಶೇಷವಿಷಯಗಳು ॥

ಈ ಋಕ್ಕಿನ ಅಭಿಪ್ರಾಯವು ಸ್ವಲ್ಪ ಕ್ಲಿಷ್ಟವಾಗಿರುವುದು. ಮರುದ್ಗಣಗಳಿಂದ ಸಹಿತನಾದ ಇಂದ್ರನಿಗೆ ನಾವು ಮಾಡುತ್ತಿರುವ ಈ ಯಜ್ಞದಿಂದ ಸಂತೋಷವುಂಟಾಗಿ ಅದರಿಂದ ಅವನು ಬಲಶಾಲಿಯಾಗಿ ಎಂದರೆ ನಮ್ಮ ವಿಷಯದಲ್ಲಿ ಸುಪ್ರೀತನಾಗಿ ಆಗಲಿ ಎಂದು ಈ ಋಕ್ಕಿನ ಅರ್ಥವಿರಬಹುದು. ಮರುದ್ಗಣಗಳ ವಿಷಯದಲ್ಲಿ ಉಪಯೋಗಿಸಿರುವ ಅನವದ್ಯೈಃ, ಅಭಿದ್ಯುಭಿಃ, ಕಾಮ್ಯೈಃ ಎಂಬ ವಿಶೇಷಣಪದಗಳ ಅರ್ಥವು ಸ್ಪಷ್ಟವಾಗಿಯೇ ಇವೆ.

**ಮಖಃ**—ಯಜ್ಞ ಮೊದಲಾದ ಹದಿನೈದು ಯಜ್ಞನಾಮಕಶಬ್ದಗಳ ಮಧ್ಯದಲ್ಲಿ ಮಖಃ ವಿಷ್ಣುಃ ಎಂಬ ಶಬ್ದಗಳು ಪಠಿತವಾಗಿವೆ (ನಿ. ೩-೧೯)-

**ಅರ್ಚತಿ**—ಅರ್ಚತಿ- ಗಾಯತಿ ಮೊದಲಾದ ನಲವತ್ತನಾಲ್ಕು ಅರ್ಚತಿಕರ್ಮನಾಮಗಳ ಮಧ್ಯದಲ್ಲಿ ಅರ್ಚತಿಶಬ್ದವು ಪಠಿತವಾಗಿದೆ (ನಿ. ೩-೧೪).

ವ್ಯಾಕರಣಪ್ರಕ್ರಿಯಾ

**ಅನವದ್ಯೈಃ**—ನ ವಿದ್ಯತೇ ಅವದ್ಯಂ ಯೇಷಾಂ ತೇ ತೈಃ (ದೋಷವಿಲ್ಲದವರು) **ನಞ್ಸುಭ್ಯಾಮ್** (ಪಾ. ಸೂ ೬-೨-೧೭೨) ಎಂಬುದರಿಂದ ಉತ್ತರಪದವು ಅಂತೋದಾತ್ತ.

**ಅಭಿದ್ಯವಃ**—ಅಭಿಗತಾ ದ್ಯೌಃ ಯೈಸ್ತೇ ತೈಃ ಅಭಿದ್ಯುಭಿಃ-ದ್ಯುಲೋಕಕ್ಕೆ ಅಭಿಮುಖವಾಗಿ ಹೊರಟ- ಅಭಿಶಬ್ದವು ಪ್ರಾತಿಪದಿಕಸ್ವರದಿಂದ ಅಂತೋದಾತ್ತ. ಬಹುವ್ರೀಹಿಯಲ್ಲಿ ಪೂರ್ವಪದಪ್ರಕೃತಿಸ್ವರದಿಂದ ಅದೇ ನಿಲ್ಲುವುದು.

**ಮಖಃ**—ಪ್ರಾತಿಪದಿಕಸ್ವರದಿಂದ ಅಂತೋದಾತ್ತ.

**ಸಹಸ್ವತಾ**—ಸಹಃ ಬಲಂ ಅಸ್ಮಿನ್ ಅರ್ಚನಕರ್ಮಣಿ ಅಸ್ತೀತಿ (ಈ ಅರ್ಚನರೂಪವಾದ ಕರ್ಮದಲ್ಲಿ ಬಲವಿರುವುದು) ಎಂದು ವಿಗ್ರಹ ಮಾಡಿದಾಗ **ತದಸ್ಯಾಸ್ತ್ಯಸ್ಮಿನ್ನಿತಿಮತುಪ್** (ಪಾ. ಸೂ. ೫-೨-೯೪) ಎಂಬುದು

ರಿಂದ ಸಹಸ್-ಶಬ್ದದ ಮುಂದೆ ಮತುಪ್ ಪ್ರತ್ಯಯ ಬರುವುದು. **ತಸೌಮತ್ವರ್ಥೇ** (ಪಾ. ಸೂ. ೧-೪-೧ ಮತ್ವರ್ಥ ಪ್ರತ್ಯಯವು ಪರದಲ್ಲಿರುವಾಗ ತಾಂತ ಸಾಂತ ಶಬ್ದಗಳು ಭ ಸಂಜ್ಞೆಯನ್ನು ಹೊಂದುವುವು- ಎಂ ದರಿಂದ ವಿಹಿತವಾದ ಭ ಸಂಜ್ಞೆಯಿಂದ ಪದಸಂಜ್ಞೆಯು ಬಾಧಿಸಲ್ಪಡುವುದರಿಂದ ಸಹಸ್ ಎಂಬುದರ ಸಕಾರ **ಸಸಜುಷೋರುಃ** (ಪಾ. ಸೂ. ೮-೨-೬೯) ಎಂಬುದರಿಂದ ರುತ್ವ ಬರುವುದಿಲ್ಲ. **ಮದುಪಧಾಯಾಶ್ಚ ಮತೋ ರ್ವೋಽಯವಾದಿಭ್ಯಃ** (ಪಾ. ಸೂ. ೮-೨-೯) ಎಂಬುದರಿಂದ ಮತುಪ್ಪಿನ ಮಕಾರಕ್ಕೆ ವಕಾರ. ಸಹಸ್ ಶಬ್ದ **ನಬ್ವಿಷಯಸ್ಯಾನಿಸನ್ತಸ್ಯ** (ಫಿ. ಸೂ- ೨೬) ಎಂಬುದರಿಂದ ಆದ್ಯುದಾತ್ತ. ಮತುಪ್ ಪಿತ್ತಾದ್ದರಿಂದ ಅದ **ಅನುದಾತ್ತೌ ಸುಪ್ಪಿತೌ** (ಪಾ. ಸೂ. ೩-೧,೪) ಎಂಬುದರಿಂದ ಅನುದಾತ್ತ ಬರುವಕಾರಣ ಅದೇ ಸ್ವರ ನಿಲ್ಲುವುದು.

**ಕಾಮ್ಯೈಃ**—' ಕಮೇರ್ಣಿಙ್ ' (ಪಾ. ಸೂ. ೩-೧-೩೫) ಕಮು ಕಾನ್ತೌ ಎಂಬ ಧಾತುವಿನ ಮು ಸ್ವಾರ್ಥದಲ್ಲಿ ಣಿಙ್ ಬರುವುದು ಎಂಬುದರಿಂದ ಣಿಙ್ ಪ್ರತ್ಯಯ. **ಅತ ಉಪಧಾಯಾಃ** (ಪಾ. ಸೂ. ೭-೨-೧ ಞಿತ್ತು ವಾ ಣಿತ್ತು ಆದ ಪ್ರತ್ಯಯ ಪರದಲ್ಲಿರುವಾಗ ಉಪಧಾಭೂತವಾದ ಹ್ರಸ್ವಾಕಾರಕ್ಕೆ ವೃದ್ಧಿ ಬರುವುದು ಎಂ ದರಿಂದ ವೃದ್ಧಿ ಬರುವುದು ಕಾಮಿ ಎಂದಾಗುವುದು. **ಜನೀಜ್ರ್ಯಷ್ ಕ್ನಸುರಞ್ಜೋಽಮನ್ತಾಶ್ಚ** (ಭ್ವಾ. ಗ ಸು ಜನೀಪ್ರಾದುರ್ಭಾವೇ-ಜ್ರ್ಯಷ್ ವಯೋಹಾನೌ, ಕ್ನಸು ಹ್ವರಣದೀಪ್ತ್ಯೋಃ (ಈ ಮೂರು ದಿವಾದಿ ಧಾತುಗ ರಞ್ಜ ರಾಗೇ (ದಿವಾದಿ ಭ್ವಾದಿ ಎರಡರಲ್ಲಿಯೂ ಇರುವುದು.) ಅಮಂತ-ಅಮ್ಮನ್ನು ಕೊನೆಯಲ್ಲಿ ಹೊಂದಿರತಕ್ಕ ಕಮ್-ಗಮ್ ಮೊದಲಾದುವು ಮಿತ್ಸಂಜ್ಞೆಯನ್ನು ಹೊಂದುವುವು ಎಂಬುದರಿಂದ ಕಮ್ ಎಂಬುದು ಮಿತ್ತಾ ರಿಂದ **ಮಿತಾಂಹ್ರಸ್ವಃ** (ಪಾ. ಸೂ. ೬-೪-೯೨) ಣಿ ಪರದಲ್ಲಿರುವಾಗ ಮಿತ್ತಾದ ಧಾತುವಿನ ಉಪಧೆಗೆ ಹ್ರಸ್ವ ಬ ವುದು ಎಂಬುದರಿಂದ ಹ್ರಸ್ವ ಪ್ರಾಪ್ತವಾಗುವುದು. ಆದರೂ **ನಕಮ್ಯಮಿಚಮಾಂ** (ಭ್ವಾ ಗ ಸೂ ) ಅವ ವಾದ್ದರಿಂದ ಬರುವ ಮಿತ್ವವು ಇವುಗಳಿಗೆ ಬರುವುದಿಲ್ಲ ಎಂದು ಮಿತ್ವ ನಿಷೇಧವಿರುವುದರಿಂದ ಉಪಧಾಹ್ರ ಬರುವುದಿಲ್ಲ. ಕಾಮಿ ಎಂಬುದರ ಮುಂದೆ **ಅಚೋಯತ್** (ಪಾ. ಸೂ. ೩-೧-೯೭) ಅಜಂತವಾದ ಧಾತು ಮುಂದೆ ಯತ್ ಪ್ರತ್ಯಯಬರುವುದು ಎಂಬುದರಿಂದ ಯತ್ ಬರುವುದು, **ಕಾಮಿ 'ಯಣೇರನಿಟಿ'** (ಪಾ. ಸ ೭-೪-೫೧) ಅನಿಡಾದಿಯಾದ ಆರ್ಧಧಾತುಕ ಪರದಲ್ಲಿರುವಾಗ ಣಿಗೆ **ಲೋಪ** ಬರುವುದು ಎಂಬುದರಿಂದ **ಲೋಪ** ಕಾಮ್ಯ-ತೃತೀಯಾಬಹುವಚನದಲ್ಲಿ ಕಾಮ್ಯೈಃ **ತಿತ್ಸ್ವರಿತಂ** (ಪಾ ಸೂ. ೭-೧-೧೮೫) ಎಂಬುದರಿ ಸ್ವರಿತವು ಪ್ರಾಪ್ತವಾದರೆ ಅದನ್ನು ಬಾಧಿಸಿ **ಯತೋನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಅ ದಾತ್ತ ಬರುವುದು ॥ ೮ ॥

॥ ಸಂಹಿತಾಪಾಠಃ ॥

ಅತಃ ಪರಿಜ್ಮನ್ನಾ ಗಹಿ ದಿವೋ ವಾ ರೋಚನಾದಧಿ ।
ಸಮಸ್ಮಿನ್ನೃಂಜತೇ ಗಿರಃ ॥ ೯ ॥

॥ ಪದಪಾಠಃ ॥

ಅತಃ । ಪರಿ ಽ ಜ್ಮನ್ । ಆ । ಗಹಿ । ದಿವಃ । ವಾ । ರೋಚನಾತ್ । ಅಧಿ ॥

ಸಂ । ಅಸ್ಮಿನ್ । ಋಂಜತೇ । ಗಿರಃ ॥ ೯ ॥

॥ ಸಾಯಣಭಾಷ್ಯಂ ॥

ಹೇ ಪರಿಜ್ಮನ್ ಪರಿತೋ ವ್ಯಾಪಿನ್ಮರುದ್ಗಣ ಅತೋಽಸ್ಮಾನ್ಮರುದ್ಗಣಸ್ಥಾನಾದಂತರಿಕ್ಷಾದಾ ಗಹಿ । ಅಸ್ಮಿನ್ಕರ್ಮಣ್ಯಾಗಚ್ಛ । ದಿವೋ ವಾ । ದ್ಯುಲೋಕಾದ್ವಾ ಸಮಾಗಚ್ಛ । ರೋಚನಾದಧಿ । ದೀಪ್ಯಮಾನಾದಾದಿತ್ಯಮಂಡಲಾದ್ವಾ ಸಮಾಗಚ್ಛ । ಅಸ್ಮದೀಯಕರ್ಮಕಾಲೇ ಯತ್ರ ಯತ್ರ ತಿಷ್ಠಸಿ ತತಃ ಸರ್ವಸ್ಮಾದಾಗಚ್ಛೇತ್ಯರ್ಥಃ । ಕಿಮರ್ಥಮಾಗಮನಮಿತಿ ತದುಚ್ಯತೇ । ಅಸ್ಮಿನ್ಕರ್ಮಣಿ ವರ್ತಮಾನ ಋತ್ವಿಗ್ಗಿರಃ ಸ್ತುತೀಃ ಸಮೃಂಜತೇ । ಸಮ್ಯಕ್ ಪ್ರಸಾಧಯತಿ । ಋಂಜತಿಃ ಪ್ರಸಾಧನಕರ್ಮಾ । ನಿ ೬-೨೧ । ಇತಿ ಯಾಸ್ಕಃ । ಏತಾಃ ಸ್ತುತೀಃ ಶ್ರೋತುಮಾಗಚ್ಛೇತ್ಯರ್ಥಃ । ಯದ್ಯಪ್ಯೃತ್ವಿಜಾ ಮಂತ್ರಸ್ಯ ಪ್ರಯುಜ್ಯಮಾನತ್ವಾದೃಂಜತಿಧಾತೋರುತ್ತಮಪುರುಷೇಣ ಭವಿತವ್ಯಂ ತಥಾಪಿ ಪರೋಕ್ಷಕೃತತ್ವೇನ ನಿರ್ದೇಶಾತ್ಪ್ರಥಮಪುರುಷಪ್ರಯೋಗಃ । ಪರೋಕ್ಷಕೃತಲಕ್ಷಣಂ ಚ ಯಾಸ್ಕ ಆಹ । ತಾಸ್ತ್ರಿವಿಧಾ ಋಚಃ ಪರೋಕ್ಷಕೃತಾಃ ಪ್ರತ್ಯಕ್ಷಕೃತಾ ಆಧ್ಯಾತ್ಮಿಕ್ಯಶ್ಚ । ತತ್ರ ಪರೋಕ್ಷಕೃತಾಃ ಸರ್ವಾಭಿರ್ನಾಮವಿಭಕ್ತಿಭಿರ್ಯುಜ್ಯಂತೇ । ಪ್ರಥಮಪುರುಷೈಶ್ಚಾಖ್ಯಾತಸ್ಯ । ನಿ ೭-೧ । ಇತಿ ॥ ಅತಃ । ಪಂಚಮ್ಯಾಸ್ತಸಿಲ್ । ಪಾ ೫-೩-೭ । ಏತದೋಽಶ್ । ಪಾ. ೫-೩ ೫ । ಶಿತ್ತ್ವಾತ್ಸರ್ವಾದೇಶಃ । ಪಾ ೧-೧-೫೫ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಪರಿಜ್ಮನ್ । ಅಜ ಗತಿಕ್ಷೇಪಣಯೋಃ । ಅನ್ಯೇಭ್ಯೋಽಪಿ ದೃಶ್ಯಂತೇ । ಪಾ. ೩-೨ ೭೫ । ಇತಿ ಮನಿನ್ । ಅಕಾರಲೋಪಶ್ಛಾಂದಸಃ । ಆಮಂತ್ರಿತನಿಘಾತಃ । ಗಹಿ । ಗಮೇರ್ಬಹುಲಂ ಛಂದಸಿ । ಪಾ. ೨-೪-೭೩ । ಇತಿ ಶಪೋ ಲುಕ್ । ಹೇರ್ಪಿತ್ತ್ವಾತ್ । ಪಾ.೬-೪-೪೭ । ಅನುದಾತ್ತೋಪದೇಶೇತ್ಯಾದಿನಾ । ಪಾ. ೬-೪-೩೭ । ಮಲೋಪಃ । ಅತೋ ಹೇಃ । ಪಾ. ೬-೪-೧೦೫ । ಇತಿ ಹಿಲೋಪೋ ನ ಭವತಿ । ತಸ್ಮಿನ್ಕರ್ತವ್ಯೇಽಸಿದ್ಧವದತ್ರಾಭಾತ್ । ಪಾ ೬-೪ ೨೨ । ಇತಿ ಮಲೋಪಸ್ಯಾಸಿದ್ಧತ್ವೇನಾನಕಾರಾಂತತ್ವಾತ್ । ದಿವಃ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ । ವಾ । ಚಾದಯೋಽನುದಾತ್ತಾಃ । ಫಿ ೪-೧೬ । ಇತ್ಯನುದಾತ್ತಃ । ರೋಚನಾತ್ । ರುಚ ದೀಪ್ತೌ । ಅನುದಾತ್ತೇತಶ್ಚ ಹಲಾದೇಃ । ಪಾ ೩ ೨-೧೪೯ । ಇತಿ ಯುಚ್ । ಯುವೋರನಾಕೌ । ಪಾ. ೭-೧-೧ । ಇತ್ಯನಾದೇಶಃ । ಚಿದಿತ್ಯಂತೋದಾತ್ತಃ । ಅಧಿ । ಅಧಿಪರೀ ಅನರ್ಥಕೌ । ಪಾ ೧-೪-೯೩ । ಇತಿ ಕರ್ಮಪ್ರವಚನೀಯತ್ವೇನ ಸಹ ನಿಪಾತಸಂಜ್ಞಾಯಾಃ ಸಮಾವೇಶಾನ್ನಿಪಾತಾ ಆದ್ಯುದಾತ್ತಾ ಇತ್ಯಾದ್ಯುದಾತ್ತಃ । ಅಸ್ಮಿನ್ । ಪರಿಜ್ಮನ್ನಿತ್ಯಾದಿಷ್ವಸ್ಯ ವಾನಾದೇಶಾದಿದಮೋಽನ್ವಾದೇಶೇಽಶನುದಾತ್ತಸ್ತೃತೀಯಾದೌ । ಪಾ. ೨-೪-೩೨ । ಇತ್ಯಶ್ ಅನುದಾತ್ತಃ ಶಿತ್ತ್ವಾತ್ಸರ್ವಾದೇಶಃ । ವಿಭಕ್ತಿರನುದಾತ್ತೌ ಸುಪ್ಪಿತೌ । ಪಾ. ೩ ೧-೪ । ಇತ್ಯನುದಾತ್ತೇತಿ ಸರ್ವಾನುದಾತ್ತತ್ವಂ । ಋಂಜತೇ । ಋಜಿ ಭೃಜೀ ಭರ್ಜನೇ । ಸಮಿತ್ಯುಪಸರ್ಗಯೋಗಾತ್ಪ್ರಸಾಧನೇ ವರ್ತನೇ । ನಿಘಾತಃ । ಗಿರಃ । ಪ್ರಾತಿಪದಿಕಸ್ವರಃ ॥

॥ ಪ್ರತಿಪದಾರ್ಥ ॥

**ಹೇ ಪರಿಜ್ಮನ್**—ಸುತ್ತಲೂ ವ್ಯಾಪಿಸಿರುವ ಮರುದ್ಗಣ (ವೇ) ಗಳೇ. **ಅತಃ**—ನಿಮ್ಮ ಸ್ವಸ್ಥಾನವಾದ ಅಂತರಿಕ್ಷದಿಂದಲಾಗಲಿ। **ದಿವೋ ವಾ**-ಸ್ವರ್ಗಲೋಕದಿಂದಲಾಗಲಿ । **ರೋಚನಾತ್**-ಪ್ರಕಾಶಮಾನವಾದ ಸೂರ್ಯ ಮಂಡಲದಿಂದಾಗಲಿ । **ಅಸ್ಮಿನ್**—ಈಗ ನಾವು ಮಾಡುತ್ತಿರುವ ಯಜ್ಞದಲ್ಲಿ ಎಂದರೆ ಯಜ್ಞಪ್ರದೇಶಕ್ಕೆ । **ಅಧಿ ಆ ಗಹಿ**—ಬನ್ನಿರಿ । (ಮತ್ತು ಋತ್ವಿಜನು) **ಗಿರಃ**—ಸ್ತೋತ್ರಗಳನ್ನು । **ಸಮೃಂಜತೇ**—ನಿಮ್ಮ ಪ್ರಸಾಧನಕ್ಕಾಗಿ ಪಠಿಸುವನು ॥

॥ ಭಾವಾರ್ಥ ॥

ಎಲೈ ಮರುದ್ದೇವತೆಗಳೇ- ನೀವು ಸರ್ವತ್ರ ವ್ಯಾಪಿಸಿರತಕ್ಕವರು- ನಾವು ಯಜ್ಞ ಮಾಡುತ್ತಿರುವ ಈ ಸಮಯದಲ್ಲಿ ನೀವು ಅಂತರಿಕ್ಷದಲ್ಲಿದ್ದರೆ ಅಲ್ಲಿಂದಲೇ ಬನ್ನಿ.—ಸ್ವರ್ಗಲೋಕದಲ್ಲಿದ್ದರೆ ಅಲ್ಲಿಂದಲೇ ಬನ್ನಿ. ಅಥವಾ ಸೂರ್ಯಮಂಡಲದಲ್ಲಿದ್ದರೆ ಅಲ್ಲಿಂದಲಾದರೂ ಬನ್ನಿ. ನೀವು ಈಗ ಎಲ್ಲಿದ್ದರೂ ಅಲ್ಲಿಂದಲೇ ಬನ್ನಿ ಈಗ ಋತ್ವಿಜನು (ಎಂದರೆ ಮಂತ್ರದ್ರಷ್ಟೃವಾದ ಮಧುಚ್ಛಂದಋಷಿಯು) ನಿಮ್ಮ ಆಗಮನಕ್ಕಾಗಿ ನಿಮ್ಮನ್ನು ಸ್ತೋತ್ರ ಗಳಿಂದ ಸ್ತುತಿಸುವನು.

## English Translation

O pervader-on-all-sides, come hither from the regions (of the Maruts) or from the sky or from the radiant solar sphere. For in the rite (the priest) fully recites your praises.

॥ ವಿಶೇಷವಿಷಯಗಳು ॥

**ಪರಿಜ್ಮನ್**--ಸುತ್ತಲೂ ಇರುವ, ಎಲ್ಲೆಲಿಯೂ ಸಂಚರಿಸುವ. ಎಂದರೆ ಗಾಳಿಯು ಭೂಮಿ, ಅಂತರಿಕ್ಷ ಸ್ವರ್ಗ ಮೊದಲಾದ ಸರ್ವಸ್ಥಳದಲ್ಲಿಯೂ ಸದಾ ಬೀಸುತ್ತಿರುವುದೆಂದರ್ಥವು.

**ದಿವೋ ವಾ ರೋಚನಾದಧಿ**--ಸ್ವರ್ಗದಿಂದಾಗಲಿ ಅಥವಾ ಆದಿತ್ಯಮಂಡಲದಿಂದಾಗಲಿ ಎಂದು ಭಾಷ್ಯ ಕಾರರು ಹೇಳಿರುವರು. ಅಥವಾ ರೋಚನಾತ್ ಎಂಬ ಪದಕ್ಕೆ ಪ್ರಕಾಶಮಾನವಾದ ಎಂದು ಅರ್ಥವನ್ನು ಹೇಳಿ ದಿವಃ ಎಂಬ ಶಬ್ದಕ್ಕೆ ವಿಶೇಷಣಪದವನ್ನಾಗಿ ಬೇಕಾದರೂ ಭಾವಿಸಬಹುದು. ಇಲ್ಲಿ ಅಧಿ ಶಬ್ದವು ಇರುವುದರಿಂದ ಭಾಷ್ಯಕಾರರು ರೋಚನಾತ್ ಎಂದರೆ ಪ್ರಕಾಶಮಾನವಾದ ಸೂರ್ಯಮಂಡಲವೆಂದು ಅರ್ಥಮಾಡಿರುವರು. ಸ್ಕಂದಸ್ವಾಮಿಯು ಅಧಿ ಶಬ್ದವನ್ನು ಆ ಗಹಿ ಎಂಬ ಕ್ರಿಯಾಪದದೊಡನೆ ಸೇರಿಸಿ ಅನ್ವಯಮಾಡಬೇಕೆಂದು ಹೇಳುವರು.

**ಋಂಜತೇ**---ಋಂಜತಿಃ ಪ್ರಸಾಧನಕರ್ಮಾ (ನಿ. ೬-೨೧) ಎಂದು ಯಾಸ್ಕರು ನಿರುಕ್ತದಲ್ಲಿ ಹೇಳಿ ರುವರು. ಇಲ್ಲಿ ಸ್ತೋತ್ರಮಾಡುವ ಋತ್ವಿಜನು ಈ ಮಂತ್ರದ್ರಷ್ಟೃವಾದ ಮಧುಚ್ಛಂದಋಷಿಯೇ ಆಗಿ

॥ ಪದಪಾಠಃ ॥

ಅತಃ । ಪರಿಽಜ್ಮನ್ । ಆ । ಗಹಿ । ದಿವಃ । ವಾ । ರೋಚನಾತ್ । ಅಧಿ ॥

ಸಂ । ಅಸ್ಮಿನ್ । ಋಂಜತೇ । ಗಿರಃ ॥ ೯ ॥

॥ ಸಾಯಣಭಾಷ್ಯಂ ॥

ಹೇ ಪರಿಜ್ಮನ್ ಪರಿತೋ ವ್ಯಾಪಿನ್ಮರುದ್ಗಣ ಅತೋಽಸ್ಥಾನ್ಮರುದ್ಗಣಸ್ಥಾನಾದಂತರಿಕ್ಷಾದಾ ಗಹಿ । ಅಸ್ಮಿನ್ಕರ್ಮಣ್ಯಾಗಚ್ಛ । ದಿವೋ ವಾ । ದ್ಯುಲೋಕಾದ್ವಾ ಸಮಾಗಚ್ಛ । ರೋಚನಾದಧಿ । ದೀಪ್ಯಮಾನಾದಾದಿತ್ಯಮಂಡಲಾದ್ವಾ ಸಮಾಗಚ್ಛ । ಅಸ್ಮದೀಯಕರ್ಮಕಾಲೇ ಯತ್ರ ಯತ್ರ ತಿಷ್ಠಸಿ ತತಃ ಸರ್ವಸ್ಮಾದಾಗಚ್ಛೇತ್ಯರ್ಥಃ । ಕಿಮರ್ಥಮಾಗಮನಮಿತಿ ತದುಚ್ಯತೇ । ಅಸ್ಮಿನ್ಕರ್ಮಣಿ ವರ್ತಮಾನ ಋತ್ವಿಗ್ಗಿರಃ ಸ್ತುತೀಃ ಸಮೃಂಜತೇ । ಸಮೃತ್ ಪ್ರಸಾಧಯತಿ । ಋಂಜತಿಃ ಪ್ರಸಾಧನಕರ್ಮಾ । ನಿ ೬-೨೧ । ಇತಿ ಯಾಸ್ಕಃ । ಏತಾಃ ಸ್ತುತೀಃ ಶ್ರೋತುಮಾಗಚ್ಛೇತ್ಯರ್ಥಃ । ಯದ್ಯಪ್ಯೃತ್ವಿಜಾ ಮಂತ್ರಸ್ಯ ಪ್ರಯುಜ್ಯಮಾನತ್ವಾದೃಂಜತಿಧಾತೋರುತ್ತಮಪುರುಷೇಣ ಭವಿತವ್ಯಂ ತಥಾಪಿ ಪರೋಕ್ಷಕೃತತ್ವೇನ ನಿರ್ದೇಶಾತ್ಪ್ರಥಮಪುರುಷಪ್ರಯೋಗಃ । ಪರೋಕ್ಷಕೃತಲಕ್ಷಣಂ ಚ ಯಾಸ್ಕ ಆಹ । ತಾಸ್ತ್ರಿವಿಧಾ ಋಚಃ ಪರೋಕ್ಷಕೃತಾಃ ಪ್ರತ್ಯಕ್ಷಕೃತಾ ಆಧ್ಯಾತ್ಮಿಕ್ಯಶ್ಚ । ತತ್ರ ಪರೋಕ್ಷಕೃತಾಃ ಸರ್ವಾಭಿರ್ನಾಮವಿಭಕ್ತಿಭಿರ್ಯುಜ್ಯಂತೇ । ಪ್ರಥಮಪುರುಷೈಶ್ಚಾಖ್ಯಾತಸ್ಯ । ನಿ ೭-೧ । ಇತಿ ॥ ಅತಃ । ಪಂಚಮ್ಯಾಸ್ತಸಿಲ್ । ಪಾ ೫-೩-೭ । ಏತದೋಽಶ್ । ಪಾ. ೫-೩ ೫ । ಶಿತ್ತ್ವಾತ್ಸರ್ವಾದೇಶಃ । ಪಾ ೧-೧-೫೫ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಪರಿಜ್ಮನ್ । ಅಜ ಗತಿಕ್ಷೇಪಣಯೋಃ । ಅನ್ಯೇಭ್ಯೋಽಪಿ ದೃಶ್ಯಂತೇ । ಪಾ. ೩-೨ ೭೫ । ಇತಿ ಮನಿನ್ । ಅಕಾರಲೋಪಶ್ಛಾಂದಸಃ । ಆಮಂತ್ರಿತನಿಘಾತಃ । ಗಹಿ । ಗಮೇರ್ಬಹುಲಂ ಛಂದಸಿ । ಪಾ. ೨-೪-೭೩ । ಇತಿ ಶಪೋ ಲುಕ್ । ಹೇರ್ಜಿತ್ವಾತ್ । ಪಾ. ೩-೪-೮೭ । ಅನುದಾತ್ತೋಪದೇಶೇತ್ಯಾದಿನಾ । ಪಾ. ೬-೪-೩೭ । ಮಲೋಪಃ । ಅತೋ ಹೇಃ । ಪಾ ೬-೪ ೧೦೫ । ಇತಿ ಹಿಲೋಪೋ ನ ಭವತಿ । ತಸ್ಮಿನ್ಕರ್ತವ್ಯೇಽಸಿದ್ಧವದತ್ರಾ ಭಾತ್ । ಪಾ ೬-೪ ೨೨ । ಇತಿ ಮಲೋಪಸ್ಯಾಸಿದ್ಧತ್ವೇನಾನಕಾರಾಂತತ್ವಾತ್ । ದಿವಃ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ । ವಾ । ಚಾದಯೋಽನುದಾತ್ತಾಃ । ಫಿ ೪ ೧೬ । ಇತ್ಯನುದಾತ್ತಃ । ರೋಚನಾತ್ । ರುಚ ದೀಪ್ತೌ । ಅನುದಾತ್ತೇತಶ್ಚ ಹಲಾದೇಃ । ಪಾ ೩ ೨-೧೪೯ । ಇತಿ ಯುಚ್ । ಯುವೋರನಾಕೌ । ಪಾ. ೭-೧-೧ । ಇತ್ಯನಾದೇಶಃ । ಚಿದಿತ್ಯಂತೋದಾತ್ತಃ । ಅಧಿ । ಅಧಿಪರೀ ಅನರ್ಥಕೌ । ಪಾ ೧-೪-೯೩ । ಇತಿ ಕರ್ಮಪ್ರವಚನೀಯತ್ವೇನ ಸಹ ನಿಪಾತಸಂಜ್ಞಾಯಾಃ ಸಮಾವೇಶಾನ್ನಿಪಾತಾ ಆದ್ಯುದಾತ್ತಾ ಇತ್ಯಾದ್ಯುದಾತ್ತಃ । ಅಸ್ಮಿನ್ । ಪರಿಜ್ಮನ್ನಿತ್ಯಾದಿಷ್ವಸ್ಯೈವಾನ್ವಾದೇಶಾದಿದಮೋಽನ್ವಾದೇಶೇಽಶನುದಾತ್ತಸ್ತೃತೀಯಾದೌ । ಪಾ. ೨-೪-೩೨ । ಇತ್ಯಶ್ ಅನುದಾತ್ತಃ ಶಿತ್ತ್ವಾತ್ಸರ್ವಾದೇಶಃ । ವಿಭಕ್ತಿರನುದಾತ್ತೌ ಸುಪ್ಪಿತೌ । ಪಾ. ೩ ೧-೪ । ಇತ್ಯನುದಾತ್ತೇತಿ ಸರ್ವಾನುದಾತ್ತತ್ವಂ । ಋಂಜತೇ । ಋಜಿ ಭೃಜೀ ಭರ್ಜನೇ । ಸಮಿತ್ಯುಪಸರ್ಗಯೋಗಾತ್ಪ್ರಸಾಧನೇ ವರ್ತತೇ । ನಿಘಾತಃ । ಗಿರಃ । ಪ್ರಾತಿಪದಿಕಸ್ವರಃ ॥

॥ ಪ್ರತಿಪದಾರ್ಥ ॥

**ಹೇ ಪರಿಜ್ಮನ್**—ಸುತ್ತಲೂ ವ್ಯಾಪಿಸಿರುವ ಮರುದ್ಗಣ (ವೇ) ಗಳೇ, **ಅತಃ**—ನಿಮ್ಮ ಸ್ವಸ್ಥಾನವಾದ ಅಂತರಿಕ್ಷದಿಂದಲಾಗಲಿ| **ದಿವೋ ವಾ**-ಸ್ವರ್ಗಲೋಕದಿಂದಲಾಗಲಿ | **ರೋಚನಾತ್**-ಪ್ರಕಾಶಮಾನವಾದ ಸೂರ್ಯ ಮಂಡಲದಿಂದಾಗಲಿ | **ಅಸ್ಮಿನ್**—ಈಗ ನಾವು ಮಾಡುತ್ತಿರುವ ಯಜ್ಞದಲ್ಲಿ ಎಂದರೆ ಯಜ್ಞಪ್ರದೇಶಕ್ಕೆ | **ಅಧಿ ಆ ಗಹಿ**—ಬನ್ನಿರಿ | (ಮತ್ತು ಋತ್ವಿಜನು) ಗಿರಃ—ಸ್ತೋತ್ರಗಳನ್ನು | **ಸಮೃಂಜತೇ**—ನಿಮ್ಮ ಪ್ರಸಾಧನಕ್ಕಾಗಿ ಪಠಿಸುವನು ||

॥ ಭಾವಾರ್ಥ ॥

ಎಲೈ ಮರುದ್ದೇವತೆಗಳೇ- ನೀವು ಸರ್ವತ್ರ ವ್ಯಾಪಿಸಿರತಕ್ಕವರು- ನಾವು ಯಜ್ಞ ಮಾಡುತ್ತಿರುವ ಈ ಸಮಯದಲ್ಲಿ ನೀವು ಅಂತರಿಕ್ಷದಲ್ಲಿದ್ದರೆ ಅಲ್ಲಿಂದಲೇ ಬನ್ನಿ.—ಸ್ವರ್ಗಲೋಕದಲ್ಲಿದ್ದರೆ ಅಲ್ಲಿಂದಲೇ ಬನ್ನಿ. ಅಥವಾ ಸೂರ್ಯಮಂಡಲದಲ್ಲಿದ್ದರೆ ಅಲ್ಲಿಂದಲಾದರೂ ಬನ್ನಿ. ನೀವು ಈಗ ಎಲ್ಲಿದ್ದರೂ ಅಲ್ಲಿಂದಲೇ ಬನ್ನಿ ಈಗ ಋತ್ವಿಜನು (ಎಂದರೆ ಮಂತ್ರದ್ರಷ್ಟೃವಾದ ಮಧುಚ್ಛಂದಋಷಿಯು) ನಿಮ್ಮ ಆಗಮನಕ್ಕಾಗಿ ನಿಮ್ಮನ್ನು ಸ್ತೋತ್ರ ಗಳಿಂದ ಸ್ತುತಿಸುವನು.

## English Translation

O pervader-on-all-sides, come hither from the regions (of the Maruts) or from the sky or from the radiant solar sphere. For in the rite (the priest) fully recites your praises.

॥ ವಿಶೇಷವಿಷಯಗಳು ॥

**ಪರಿಜ್ಮನ್**--ಸುತ್ತಲೂ ಇರುವ, ಎಲ್ಲೆಲಿಯೂ ಸಂಚರಿಸುವ. ಎಂದರೆ ಗಾಳಿಯು ಭೂಮಿ, ಅಂತರಿಕ್ಷ ಸ್ವರ್ಗ ಮೊದಲಾದ ಸರ್ವಸ್ಥಳದಲ್ಲಿಯೂ ಸದಾ ಬೀಸುತ್ತಿರುವುದೆಂದರ್ಥವು.

**ದಿವೋ ವಾ ರೋಚನಾದಧಿ**--ಸ್ವರ್ಗದಿಂದಾಗಲಿ ಅಥವಾ ಆದಿತ್ಯಮಂಡಲದಿಂದಾಗಲಿ ಎಂದು ಭಾಷ್ಯ ಕಾರರು ಹೇಳಿರುವರು. ಅಥವಾ ರೋಚನಾತ್ ಎಂಬ ಪದಕ್ಕೆ ಪ್ರಕಾಶಮಾನವಾದ ಎಂದು ಅರ್ಥವನ್ನು ಹೇಳಿ ದಿವಃ ಎಂಬ ಶಬ್ದಕ್ಕೆ ವಿಶೇಷಣಪದವನ್ನಾಗಿ ಬೇಕಾದರೂ ಭಾವಿಸಬಹುದು. ಇಲ್ಲಿ ಅಧಿ ಶಬ್ದವು ಇರುವುದರಿಂದ ಭಾಷ್ಯಕಾರರು ರೋಚನಾತ್ ಎಂದರೆ ಪ್ರಕಾಶಮಾನವಾದ ಸೂರ್ಯಮಂಡಲವೆಂದು ಅರ್ಥಮಾಡಿರುವರು. ಸ್ಕಂದಸ್ವಾಮಿಯು ಅಧಿ ಶಬ್ದವನ್ನು ಆ ಗಹಿ ಎಂಬ ಕ್ರಿಯಾಪದದೊಡನೆ ಸೇರಿಸಿ ಅನ್ವಯಮಾಡಬೇಕೆಂದು ಹೇಳುವರು.

**ಋಂಜತೇ**---ಋಂಜತಿಃ ಪ್ರಸಾಧನಕರ್ಮಾ (ನಿ. ೬-೨೧) ಎಂದು ಯಾಸ್ಕರು ನಿರುಕ್ತದಲ್ಲಿ ಹೇಳಿ ರುವರು. ಇಲ್ಲಿ ಸ್ತೋತ್ರಮಾಡುವ ಋತ್ವಿಜನು ಈ ಮಂತ್ರದ್ರಷ್ಟೃವಾದ ಮಧುಚ್ಛಂದಋಷಿಯೇ ಆಗಿ

ದ್ದರೂ ಉತ್ತಮಪುರುಷಪ್ರಯೋಗವನ್ನು ಮಾಡದೆ ಪ್ರಥಮಪುರುಷಕ್ರಿಯಾಪದವನ್ನು ಉಪಯೋಗಿಸಿರುವರು. ಏಕೆಂದರೆ ಸ್ತುತಿಸಲ್ಪಡುವ ಮರುದ್ದೇವತೆಗಳು ಎದುರಿಗೆ ಇಲ್ಲದಿರುವುದರಿಂದ ಪರೋಕ್ಷನಾಗಿ (ಪ್ರತ್ಯಕ್ಷನಲ್ಲದ) ಸ್ತುತಿಸಿರುವರು. ಇಂತಹ ಸಂದರ್ಭದಲ್ಲಿಯೂ- ದೇವತೆಗಳನ್ನು ಸಂಬೋಧನೆ ಮಾಡದೆ ಅವರ ಸಂಬಂಧವಾದ ಪ್ರಶಂಸೆಯನ್ನು ಅಥವಾ ಯಾವುದಾದರೊಂದು ವಿಷಯವನ್ನು ಮಾತ್ರ ಹೇಳುವ ಋಕ್ಕುಗಳು ಪ್ರಥಮಪುರುಷ ಕರ್ತೃಕ್ರಿಯೆಗಳಿಂದ ಕೂಡಿದ್ದರೆ **ಪರೋಕ್ಷಕೃತ** ಎಂಬ ಋಕ್ಕುಗಳ ಗುಂಪಿಗೆ ಸೇರುವವು. ಋಕ್ಕಗಳಲ್ಲಿ **ಪರೋಕ್ಷ-ಕೃತ, ಪ್ರತ್ಯಕ್ಷಕೃತ, ಆಧ್ಯಾತ್ಮಿಕ** ಎಂದು ಮೂರು ವಿಧವು. ಯಾಸ್ಕರು ಹೇಳಿರುವ ಈ ವಿಷಯವನ್ನು ನಾವು ಹಿಂದೆಯೇ (ಪೇಜು ೨೦೫) ವಿವರಿಸಿದೇನೆ.

॥ ವ್ಯಾಕರಣಪ್ರಕ್ರಿಯಾ ॥

**ಅತಃ ಪಂಚಮ್ಯಾಸ್ತಸಿಲ್**, (೫-೭-೩) ದ್ವ್ಯಾದಿಗಳನ್ನು ಬಿಟ್ಟು ಪಂಚಮ್ಯಂತಗಳಾದ ಕಿಂ ಸರ್ವ-ನಾಮ ಬಹುಶಬ್ದಗಳ ಮುಂದೆ ವಿಕಲ್ಪವಾಗಿ ತಸಿಲ್ ಪ್ರತ್ಯಯ ಬರುವುದು ಎಂಬುದರಿಂದ ಏತದ್+ಜಸ್ ಎಂಬುದರ ಮುಂದೆ ಏತಸ್ಮಾತ್ ಎಂದು ವಿಗ್ರಹಮಾಡಿದಾಗ ತಸಿಲ್ ಪ್ರತ್ಯಯ ಬರುವುದು. **ಸುಪೊಧಾತುಪ್ರಾತಿಪದಿ-ಕಯೋಃ** (ಪಾ.ಸೂ. ೨-೪-೭೧) ಎಂಬುದರಿಂದ ತದ್ಧಿತಾಂತವಾದ್ದರಿಂದ ಪ್ರಾತಿಪದಿಕವಾದ ಏತದ್ ಜಸ್ ತಸಿಲ್ ಎಂಬುದರ ಜಸ್‌ಗೆ ಲುಕ್ ಬರುವುದು. **ಏತದೋಽನ್** (ಪಾ.ಸೂ. ೫-೩-೫) ಈ ಸೂತ್ರವನ್ನು ಏತದಃ ಎಂದೂ ಅನ್ ಎಂದೂ ಎರಡಾಗಿ ಭಾಗ ಮಾಡುವರು- ಮೊದಲನೆಯದಕ್ಕೆ ರೇಫಾದಿಯಾದ ಪಾ-ಥಕಾರಾದಿಯಾದ ಪ್ರಾಗ್ದಿಶೀಯಪ್ರತ್ಯಯ ಪರದಲ್ಲಿರುವಾಗ ಏತಚ್ಛಬ್ದಕ್ಕೆ ಏತ ಇತ ಎಂಬ ಆದೇಶಗಳು ಬರುವುವು ಎಂದರ್ಥ. ಎರಡನೆಯದಕ್ಕೆ ಪ್ರಾಗ್ದಿಶೀಯಪ್ರತ್ಯಯವು ಪರದಲ್ಲಿರುವಾಗ ಏತದ್ ಶಬ್ದಕ್ಕೆ ಅನ್ ಬರುವುದು ಎಂದರ್ಥ. ಪ್ರಕೃತದಲ್ಲಿ ಏತದ್+ ತಸಿಲ್ ಎಂದಿರುವಾಗ ಎರಡನೆಯದರಿಂದ ಅನ್ ಆದೇಶ ಬರುವುದು. ನಿತ್ಸ್ವರವು ಪ್ರತ್ಯಯವಿಷಯದಲ್ಲಿ ಬರುವುದರಿಂದ ಅನ್‌ನ ನಕಾರಕ್ಕೆ ಇತ್ಸಂಜ್ಞೆಯಿಂದ ಪ್ರಯೋಜನವಿಲ್ಲ. ಆದ್ದರಿಂದ ನಕಾರಕ್ಕೆ ಇತ್ಸಂಜ್ಞೆ ಬರುವುದಿಲ್ಲ. ಅನ್ ಎಂಬುದು ಅನೇಕಾಲ್ ಆದ್ದರಿಂದ **ಅನೇಕಾಲ್‌ಶಿತ್ಸರಸ್ಯ** ( ಪಾ. ಸೂ. ೧-೧-೫೫ ) ಅನೇಕಾಲ್ ಆದೇಶವೂ ಶಕಾರೇತ್ಸಂಜ್ಞಕವಾದ ಆದೇಶವೂ ಷಷ್ಠ್ಯಂತಪದಬೋಧ್ಯವಾದ ಸಂಪೂರ್ಣಶಬ್ದದ ಸ್ಥಾನದಲ್ಲಿ ಬರುವುದು ಎಂಬುದರಿಂದ ಏತದ್ ಎಂಬ ಸಂಪೂರ್ಣಸ್ಥಾನದಲ್ಲಿ ಅನ್ ಬರುವುದು. ಅನ್+ತಸಿಲ್ ಎಂದಾಗುವುದು. **ಸ್ವಾದಿಷ್ವಸರ್ವನಾಮಸ್ಥಾನೇ** (ಪಾ. ಸೂ. ೪-೧-೧೭) ಕ ಪ್ರತ್ಯಯಾವಧಿಕ ಅಸರ್ವನಾಮಸ್ಥಾನ ಸ್ವಾದಿಪ್ರತ್ಯಯದ ಹಿಂದಿರುವುದು ಪದಸಂಜ್ಞೆಯನ್ನು ಹೊಂದುವುದು ಎಂಬುದರಿಂದ ತಸಿಲ್ ಪ್ರತ್ಯಯದ ಹಿಂದಿರುವ ಅನ್ ಗೆ ಪದಸಂಜ್ಞೆ ಬರುವುದು **ಲೋಪಃ ಪ್ರಾತಿಪದಿಕಾಂತಸ್ಯ** (ಪಾ. ಸೂ. ೮-೨-೭) ಎಂಬುದರಿಂದ ನಲೋಪ ಪ್ರತ್ಯಯದ ಇಲ್‌ಗಳಿಗೆ ಇತ್ಸಂಜ್ಞೆಲೋಪ. ಅತಸ್ ರುತ್ವವಿಸರ್ಗಗಳು ಬಂದರೆ ಅತಃ ಎಂದಾಗುವುದು. ಕಾಶಿಕೆಯಲ್ಲಿ ಏತದೋನ್ ಎಂಬ ಸೂತ್ರವನ್ನು ಏತದೋಽಶ್ ಎಂದು ಪಠಿಸಿರುವರು. ಅಶ್ ಶಿತ್ತಾದ್ದರಿಂದ ಸರ್ವಾದೇಶವಾಗಿ ಬರುವುದು. ಸೂತ್ರಾರ್ಥಕ್ರಮವು ಮೊದಲಿನಂತೆಯೇ. ಈ ಪಾಠವನ್ನನುಸರಿಸಿ ಮಾಧವಾಚಾರ್ಯರು ಏತದೋಽಶ್ ಎಂಬುದರಿಂದ ಅಶಾದೇಶವನ್ನು ಹೇಳಿರುವರು. ತಸಿಲ್ ಪ್ರತ್ಯಯವು ಲಿತ್ತಾದ್ದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಹಿಂದೆ ಇರುವ ವರ್ಣವು ಉದಾತ್ತ.

**ಪರಿಜ್ಮನ್**—ಅಜಗತಿಕ್ಷೇಪಣಯೋಃ **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ. ಸೂ ೩-೨-೭೫) ಮನಿನ ಕ್ವನಿಪ್, ವನಿಪ್ ವಿಚ್ ಈಪ್ರತ್ಯಯಗಳು ಧಾತುಪಿನ ಮುಂದೆ ಬರುವುವು ಎಂಬುದರಿಂದ ಅಜಧಾತುವಿನಮುಂದೆ

ಮನಿನ್ ಪ್ರತ್ಯಯ, ಅಜಧಾತುವಿನ ಅಕಾರಕ್ಕೆ ಛಾಂದಸವಾಗಿ ಲೋಪಬರುವುದು. **ಪರಿಜ್ಮಾನಂ ಸುಖಂ ರಥಂ** (ಋ. ಸಂ. ೧-೨-೩) ರಲ್ಲಿ ಬೇರೆ ವಿಧವಾಗಿ ಪರಿಜ್ಮ ಎಂದು ವ್ಯುತ್ಪಾದಿತವಾಗಿದೆ. **ಆಮನ್ತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ಅನುದಾತ್ತ.

**ಗಹಿ**—ಗಮ್ಲೃಗತೌ ಧಾತುವಿನ ಮುಂದೆ ಲೋಟ್ ಮಧ್ಯಮಪುರುಷ ಏಕವಚನ ಸಿಪ್ಪನ್ನು ಇಟ್ಟರೆ **ಸೇರ್ಹ್ಯಪಿಚ್ಚ** (ಪಾ. ಸೂ. ೩-೪-೮೭) ಲೋಟ್ ಸ್ಥಾನದಲ್ಲಿ ಬಂದ ಸಿಗೆ ಹಿ ಆದೇಶ ಬರುವುದು. ಅದು ಅಪಿತ್ತೂ ಆಗುವುದು ಎಂಬುದರಿಂದ ಸಿಪ್ ಗೆ ಹಿ ಬಂದರೆ ಗಮ್+ಹಿ. ಹಿಯು ಅಪಿತ್ತಾದ್ದರಿಂದ **ಸಾರ್ವಧಾತುಕಮಪಿತ್** (ಪಾ ಸೂ. ೧-೨-೪) ಅಪಿತ್ತಾದ ಸಾರ್ವಧಾತುಕವು ಙಿತ್ತಾಗುವುದು ಎಂಬುದರಿಂದ ಙಿತ್ತು ಆದ್ದರಿಂದ **ಅನುದಾತ್ತೋಪದೇಶವನತಿತನೋತ್ಯಾದೀನಾಮನುನಾಸಿಕಲೋಪೋ ಝಲಿಕ್ಙಿತಿ** (ಪಾ. ಸೂ. ೬-೩-೩೭) ಝಲಾದಿಯಾಗಿಕಿತ್ತು ಅಥವಾ ಙಿತ್ತು ಆದ ಪ್ರತ್ಯಯಗಳು ಪರದಲ್ಲಿರುವಾಗ ಅನುನಾಸಿಕಾಂತವಾದ ಅನುದಾತ್ತೋಪದೇಶ ಧಾತುಗಳು ಅನುನಾಸಿಕಾಂತವಾದ ತನೋತ್ಯಾದಿ ಧಾತುಗಳು, ವನ ಧಾತು ಇವುಗಳ ಕೊನೆಯಲ್ಲಿರುವ ಅನುನಾಸಿಕಕ್ಕೆ ಲೋಪ ಬರುವುದು ಎಂಬುದರಿಂದ ಗಮ್ ಧಾತುವಿನ ಮಕಾರಕ್ಕೆ ಲೋಪ ಬರುವುದು. ಈ ಅನುನಾಸಿಕ ಲೋಪವು **ಅಸಿದ್ಧವದತ್ರಾಭಾತ್** (ಪಾ. ಸೂ. ೬-೪-೨೨) ಈ ಸೂತ್ರವನ್ನಾರಂಭಿಸಿ ಈ ಪಾದ ಮುಗಿಯುವ ಪರ್ಯಂತಕ್ಕೆ (ಪೂರ್ತಾ) ಅಭೀಯವೆಂದು ಹೆಸರು. ಸಮಾನಾಶ್ರಯವಾದ ಅಭೀಯವನ್ನು ಮಾಡುವಾಗ ಅಭೀಯಶಾಸ್ತ್ರವು ಅಸಿದ್ಧವಾಗುವುದು. ಆಗ ಗಮ್ ಎಂಬುದು ಮ ಲೋಪವನ್ನು ಹೊಂದಿದ್ದರೂ, ಅದು ಅಸಿದ್ಧವಾಗುವುದರಿಂದ ಮಕಾರಾಂತದಂತೆ ಆಗುವುದೇ ವಿನಾ ಅಕಾರಾಂತವಾಗುವುದಿಲ್ಲ. ಆದ್ದರಿಂದ **ಅತೋಹೇಃ** (ಪಾ. ಸೂ. ೬-೪-೧೦೫) ಅತಃಪರವಾದ ಹಿ ಗೆ ಲುಕ್ ಬರುವುದು. (ಅತಃ ಎಂಬುದಕ್ಕೆ ಹ್ರಸ್ವಾಕಾರಕ್ಕಿಂತಲೂ ಎಂದರ್ಥ) ಎಂಬುದರಿಂದ ಲುಕ್ ಬರುವುದಿಲ್ಲ.

**ದಿವಃ**—**ಊಡಿದಂ ಪದಾದ್ಯಪ್ಪುಸ್ರೈದ್ಯುಭ್ಯಃ** (ಪಾ.ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಯು ಉದಾತ್ತ. ವಾ-ಇದು ಚಾದಿಗಣದಲ್ಲಿರುವುದರಿಂದ **ಚಾದಯೋನುದಾತ್ತಾಃ** (ಫಿ. ಸೂ. ೮೪) ಎಂಬುದರಿಂದ ಅನುದಾತ್ತ.

**ರೋಚನಾತ್**—**ಅನುದಾತ್ತೇತಶ್ಚ ಹಲಾದೇಃ** (ಪಾ.ಸೂ. ೩-೨-೧೪೯) ಅಕರ್ಮಕವೂ ಹಲಾದಿಯೂ ಆದ ಅನುದಾತ್ತೇತ್ಸಂಜ್ಞಕವಾದ ಧಾತುವಿನ ಮುಂದೆ ಯುಚ್ ಬರುವುದು ಎಂಬುದರಿಂದ ಯುಚ್ ಪ್ರತ್ಯಯ ಬಂದರೆ ರುಚ್+ಯು ಎಂದಿರುವುದು. **ಯುವೋರನಾಕೌ** (ಪಾ. ಸೂ. ೭-೧-೧) ಅನುನಾಸಿಕಗಳಾದ ಯು ವು ಇವುಗಳಿಗೆ ಕ್ರಮವಾಗಿ ಅನ, ಅಕ ಈ ಆದೇಶಗಳು ಬರುವುವು ಎಂಬುದರಿಂದ ಯು ಗೆ ಅನ ಆದೇಶ. ರುಚ್+ಅನ ಲಘೂಪಧಗುಣ ಬಂದರೆ ರೋಚನ. ಪಂಚಮೀ ವಿಭಕ್ತಿ ಏಕವಚನದಲ್ಲಿ ರೋಚನಾತ್ ಎಂದಾಗುವುದು. ಪ್ರತ್ಯಯವು ಚಕಾರೇತ್ಸಂಜ್ಞಕವಾದ್ದರಿಂದ **ಚಿತಃ** (ಪಾ. ಸೂ. ೬-೧-೧೬೩) **ಚಿತಸ್ಸಪ್ರಕೃತೇರ್ಬಹ್ವಕಜರ್ಥಂ** (ಪಾ. ಸೂ. ೬-೧-೧೬೩ ವಾ. ೧) ಚಕಾರೇತ್ಸಂಜ್ಞಕವಾದ ಪ್ರತ್ಯಯವು ಬಂದಿರುವ ಕಡೆಯಲ್ಲಿ ಪ್ರಕೃತಿಪ್ರತ್ಯಯ ಸಮುದಾಯದ ಅಂತ್ಯವು ಉದಾತ್ತವಾಗುವುದು ಎಂದು ಹೇಳಬೇಕು. ಇಲ್ಲದಿದ್ದರೆ ಬಹುಚ್ ಪ್ರತ್ಯಯ ಮತ್ತು ಅಕಚ್ ಪ್ರತ್ಯಯ ಬಂದ ಸ್ಥಳಗಳಲ್ಲಿ ಇಷ್ಟಸಿದ್ಧಿಯಾಗುವುದಿಲ್ಲ. **ವಿಭಾಷಾಸುಪೋಬಹುಚ್‌ಪುರಸ್ತಾತ್** (ಪಾ. ಸೂ. ೫-೩-೬೮) ಎಂಬ ಸೂತ್ರದಿಂದ ಪ್ರಕೃತಿಯ ಪೂರ್ವಕ್ಕೆ ಬಹುಚ್ ಪ್ರತ್ಯಯ ಬರುವುದು. ಈಷದೂನಃ ಪಟುಃ ಬಹುಪಟುಃ ಎಂದು ಉದಾಹರಣೆ. **ಅವ್ಯಯಸರ್ವನಾಮ್ನಾಮಕಚ್‌ಪ್ರಾಕ್ಟೇಃ** (ಪಾ.ಸೂ. ೫-೩-೭೧) ಎಂಬುದ

ರಿಂದ ಬರುವ ಆಕಚ್ ಪ್ರತ್ಯಯವು ಟಿಯ ಹಿಂದೆ ಬರುವುದು ಅನ್ಯಕೇ ಎಂದು ಉದಾಹರಣೆ. ಚಿತಃ ಎಂಬಲ್ಲಿ ವಾರ್ತಿಕಾನುಸಾರ ಅರ್ಥವನ್ನಿಟ್ಟುಕೊಳ್ಳದೇ ಇದ್ದರೆ ತೋರಿಸಿರುವ ಈ ಎರಡು ಉದಾಹರಣೆಗಳಲ್ಲಿ ಕೊನೆಯ ವರ್ಣವು ಉದಾತ್ತವಾಗಲಾರದು. ರೋಚನ ಎಂಬಲ್ಲಿ ಪ್ರಕೃತಿ ಪ್ರತ್ಯಯ ಸಮುದಾಯದ ಅಂತ್ಯಕ್ಕೆ ಉದಾತ್ತ ಬರುವುದು.

**ಅಧಿ—ಅಧಿಪರೀ ಅನರ್ಥಕೌ** (ಪಾ. ಸೂ. ೧-೪-೯೩) ವಿಶೇಷವಾದ ಅರ್ಥವನ್ನು ಬೋಧಿಸದೇ ಇರುವ ಅಧಿ, ಪರಿ ಇವುಗಳು ಕರ್ಮಪ್ರವಚನೀಯಸಂಜ್ಞೆಯನ್ನೂ ನಿಪಾತಸಂಜ್ಞೆಯನ್ನೂ ಹೊಂದುವುವು ಎಂಬುದರಿಂದ ಅಧಿ ಎಂಬುದಕ್ಕೆ ಕರ್ಮಪ್ರವಚನೀಯಸಂಜ್ಞೆಯೊಂದಿಗೆ ನಿಪಾತಸಂಜ್ಞೆಯು ಇರುವುದರಿಂದ **ನಿಪಾತಾ ಆದ್ಯುದಾತ್ತಾಃ** (ಫಿ ಸೂ. ೮೦) ಎಂಬದರಿಂದ ಆದ್ಯುದಾತ್ತ ಬರುವುದು.

**ಅಸ್ಮಿನ್**—ಇದಮ್ ಶಬ್ದಕ್ಕೆ ಸಪ್ತಮೀವಿಭಕ್ತಿ ಪರದಲ್ಲಿರುವಾಗ **ತ್ಯದಾದೀನಾಮಃ** (ಪಾ. ಸೂ. ೭-೨-೧೦೨) ತ್ಯದಾದಿಗಣದಲ್ಲಿರುವ ಶಬ್ದಗಳ ಕೊನೆಯ ವರ್ಣಕ್ಕೆ ಅಕಾರಾದೇಶ ಬರುವುದು ಎಂಬುದರಿಂದ ಅಕಾರಾದೇಶವೂ **ಅತೋಗುಣೇ** (ಪಾ. ಸೂ. ೬-೧-೯೭) ಪದಾಂತವಲ್ಲದ ಹ್ರಸ್ವಾಕಾರದ ಮುಂದೆ ಗುಣ (ಅ, ಏ, ಓ) ವರ್ಣಗಳು ಇದ್ದರೆ ಪರರೂಪ ಬರುವುದು ಎಂಬುದರಿಂದಪರರೂಪವೂ ಬಂದರೆ ಇದ+ಙಿ ಎಂದಿರುವುದು. ಈಗ ಪರಿಜ್ಮನ್ ಶಬ್ದದಿಂದ ಬೋಧಿತವಾದ ಮರುದ್ಗಣಕ್ಕೆ ಅಸ್ಮಿನ್ ಶಬ್ದದಿಂದ ಪರಾಮರ್ಶವಾಗುವುದರಿಂದ ' ಕಿಂಚಿತ್ಕಾರ್ಯಂ ವಿಧಾತುಮುಪಾತ್ತಸ್ಯಕಾರ್ಯಾಂತರಂ ವಿಧಾತುಂ ಪುನರುಪಾದಾನಮನ್ವಾದೇಶಃ ' ಎಂಬ ಲಕ್ಷಣವನ್ನು ಅನುಸರಿಸಿ ಇದು ಅನ್ವಾದೇಶವಿಷಯದಲ್ಲಿರುವುದು. ಆದ್ದರಿಂದ **ಇದಮೋಽನ್ವಾದೇಶೇಽಶನುದಾತ್ತಸ್ತೃತೀಯಾದೌ** (ಪಾ.ಸೂ. ೨-೪-೩೨) ತೃತೀಯಾದಿ ವಿಭಕ್ತಿಪರದಲ್ಲಿರುವಾಗ ಅನ್ವಾದೇಶವಿಷಯವಾದ ಇದಮ್ ಶಬ್ದಕ್ಕೆ ಅನುದಾತ್ತವಾದ ಅಶ್ ಬರುವುದು ಎಂಬುದರಿಂದ ಅಶ್ ಆದೇಶವು ಶಿತ್ತಾದ್ದರಿಂದ ಇದಂ ಶಬ್ದದ ಸಂಪೂರ್ಣ ಸ್ಥಾನದಲ್ಲಿ ಅನುದಾತ್ತವಾದ ಅಶ್ ಆದೇಶ ಬರುವುದು. ಙಿ ಎಂಬುದಕ್ಕೆ **ಙಸಿಙ್ಯೋಃಸ್ಮಾತ್‌ಸ್ಮಿನೌ** (ಪಾ.ಸೂ. ೭-೧-೧೫) ಅಕಾರಾಂತ ಸರ್ವನಾಮಶಬ್ದದ ಮುಂದಿರುವ ಪಂಚಮೀವಿಭಕ್ತಿಯ ಙಸ್ ಸಪ್ತಮೀವಿಭಕ್ತಿಯ ಙಿ ಇವುಗಳಿಗೆ ಕ್ರಮವಾಗಿ ಸ್ಮಾತ್ ಸ್ಮಿನ್ ಆದೇಶಗಳು ಬರುವುವು ಎಂಬುದರಿಂದ ಸ್ಮಿನ್ ಆದೇಶ ಬಂದರೆ ಅಸ್ಮಿನ್ ಎಂದಾಗುವುದು. ಸ್ಮಿನ್ ಎಂಬ ವಿಭಕ್ತಿಯು **ಅನುದಾತ್ತೌಸುಪ್ಪಿತೌ** ( ಪಾ ಸೂ. ೩-೧-೪ ) ಎಂಬುದರಿಂದ ಅನುದಾತ್ತ. ಈ ರೀತಿಯಲ್ಲಿ ಅಸ್ಮಿನ್ ಎಂಬುದು ಸರ್ವಾನುದಾತ್ತವು.

**ಋಞ್ಜತೇ**—ಋಜಿ ಭೃಜೀ ಭರ್ಜನೇ. ಋಜಿಧಾತುವು ಇದಿತ್ತಾದ್ದರಿಂದ **ಇದಿತೋನುಮ್‌ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮ್ ಆಗಮ ಬರುವುದು. ನಂತರ **ಅನುಸ್ವಾರ** (ಪಾ.ಸೂ. ೮-೩-೨೪) **ಪರಸವರ್ಣ** (ಪಾ. ಸೂ. ೮-೪-೫೮) ಗಳು ಬಂದರೆ ಋಞ್ಜ ಎಂದಾಗುವುದು. ಲಟ್ ಆತ್ಮನೇಪದ ಪ್ರಥಮ ಪುರುಷ ಏಕವಚನದಲ್ಲಿ **ಋಞ್ಜತೇ** ಎಂದಾಗುವುದು. **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಅನುದಾತ್ತ. **ಉಪಸರ್ಗೇಣ ಧಾತ್ವರ್ಥೋಽಬಲಾದನ್ಯತ್ರನೀಯತೇ । ಪ್ರಹಾರಾಹಾರಸಂಹಾರವಿಹಾರಪರಿಹಾರವತ್** ಹಲಙ್ ಧಾತುವಿಗೆ ಹರಣವೆಂದರ್ಥ. ಆದರೂ ಪ್ರ ಉಪಸರ್ಗ ಸೇರಿದರೆ ಪ್ರಹಾರ ಪೆಟ್ಟು ಎಂದರ್ಥವಾಗುವುದು. ಆಙ್ ಉಪಸರ್ಗ ಸೇರಿದರೆ ಆಹಾರ, ತಿನ್ನತಕ್ಕದ್ದು ಎಂದೂ ಸಂ ಉಪಸರ್ಗ ಸೇರಿದರೆ ಸಂಹಾರ ಕೊಲ್ಲುವುದು ಎಂದೂ ವಿ ಉಪಸರ್ಗ ಸೇರಿದರೆ ವಿಹಾರ, ಆಡುವಿಕೆ ಎಂದೂ ಪರಿ ಶೇರಿದರೆ ಪರಿಹಾರ ಬಿಡುಗಡೆ

ಎಂದೂ ನಾನಾವಿಧವಾದ ಅರ್ಥಗಳು ಉಪಸರ್ಗಬಲದಿಂದ ತೋರುವುವು. ಇದೇ ರೀತಿಯಲ್ಲಿ ಮಿಕ್ಕ ಕಡೆಗಳಲ್ಲಿ ಉಪಸರ್ಗ ಬಲದಿಂದ ಧಾತುಗಳಿಗೆ ಬೇರೆ ಬೇರೆ ಅರ್ಥವು ಏರ್ಪಡುವುದು ಎಂದು ಶ್ಲೋಕದ ಅರ್ಥ. ಇಲ್ಲಿ ಭರ್ಜನಾರ್ಥದಲ್ಲಿ ಋಜಿ ಧಾತುವನ್ನು ಪಠಿಸಿದ್ದರೂ ಸಂ ಎಂಬ ಉಪಸರ್ಗವು ಸೇರಿರುವುದರಿಂದ ಅಲಂಕಾರ ಎಂಬ ಅರ್ಥವನ್ನು ಋಜಿಧಾತುವು ಬೋಧಿಸುವುದು. ಗಿರಃ—ಪ್ರಾತಿಪದಿಕ ಸ್ವರ ಬರುವುದು. ॥ ೯ ॥

॥ ಸಂಹಿತಾಪಾಠಃ ॥

ಇತೋ ವಾ ಸಾತಿಮೀಮಹೇ ದಿವೋ ವಾ ಪಾರ್ಥಿವಾದಧಿ ।
ಇಂದ್ರಂ ಮಹೋ ವಾ ರಜಸಃ ॥ ೧೦ ॥

॥ ಪದಪಾಠಃ ॥

ಇತಃ । ವಾ । ಸಾತಿಂ । ಈಮಹೇ । ದಿವಃ । ವಾ । ಪಾರ್ಥಿವಾತ್ । ಅಧಿ ॥
ಇಂದ್ರಂ । ಮಹಃ । ವಾ । ರಜಸಃ ॥ ೧೦ ॥

॥ ಸಾಯಣಭಾಷ್ಯಂ ॥

ಇಂದ್ರಂ ದೇವಂ ಪ್ರತಿ ಸಾತಿಂ ಧನದಾನಮಧೀಮಹೇ । ಆಧಿಕ್ಯೇನ ಯಾಚಾಮಹೇ । ಕಸ್ಮಾಲ್ಲೋಕಾದಿತಿ ತದುಚ್ಯತೇ । ಇತೋಽಸ್ಮಾದಭಿದೃಶ್ಯಮಾನಾತ್ಪಾರ್ಥಿವಾತ್ಪೃಥಿವೀಲೋಕಾದ್ವಾ ದಿವೋ ವಾ ದ್ಯುಲೋಕಾದ್ವಾ ಮಹೋ ಮಹತಃ ಪ್ರೌಢಾದ್ರಜಸೋ ವಾ ಪಕ್ಷ್ಯಾದೀನಾಂ ರಂಜಕಾದಂತರಿಕ್ಷಲೋಕಾದ್ವಾ । ಅಯಮಿಂದ್ರೋ ಯತಃಕುತಶ್ಚಿದಾನೀಯಾಸ್ಮಭ್ಯಂ ಧನಂ ಪ್ರಯಚ್ಛತ್ವಿತ್ಯರ್ಥಃ । ಸಪ್ತದಶಸು ಯಾಚ್ಞಾಕರ್ಮಸ್ವೀಮಹೇ ಯಾಮೀತಿ ಪಠಿತಂ ॥ ಇತಃ । ಇತಃ । ಇದಂಶಬ್ದಾತ್ಪಂಚಮ್ಯಾಸ್ತಸಿಲ್ । ಇದಮ ಇಶ್ । ಪಾ. ೫-೩-೩ । ಇತೀಶ್ । ಶಿತ್ತ್ವಾತ್ಸರ್ವಾದೇಶಃ । ಅತ್ರೋಽಡಿದಮಿತ್ಯಸ್ಯಾವಕಾಶಃ । ಪಾ. ೬-೧-೧೭೧ । ಆಭ್ಯಾಂ ಏಭಿಃ । ಲಿತೀತ್ಯಸ್ಯಾವಕಾಶಃ । ಪಾ. ೬-೧-೧೯೩ । ಪಚನಂ ಪಾಚಕಃ । ಉಭಾವಪಿ ನಿತ್ಯೌ । ತತ್ರ ಪರತ್ವಾದ್ವಿಪ್ರತಿಷೇಧೇ ಪರಂ ಕಾರ್ಯಂ । ಪಾ. ೧-೪-೨ । ಇತಿ ಲಿತೀತೀಕಾರಸ್ಯೋದಾತ್ತತ್ವಂ । ಪಶ್ಚಾತ್ತಸೇಃ ಪ್ರಾಗ್ದಿಶೋ ವಿಭಕ್ತಿಃ । ಪಾ ೫-೩-೧ । ಇತಿ ವಿಭಕ್ತಿಸಂಜ್ಞಕತ್ವಾದೂಡಿದಮಿತ್ಯಾದಿನಾಸರ್ವನಾಮಸ್ಥಾನವಿಭಕ್ತೇರುಚ್ಯಮಾನಮುದಾತ್ತತ್ವಂ ಭವತಿ । ಸಕೃದ್ಗತೌ ವಿಪ್ರತಿಷೇಧೇ ಯದ್ಬಾಧಿತಂ ತದ್ಬಾಧಿತಮೇವ । ಪರಿ. ४೦ । ಇತ್ಯೂಡಿದಮಿತ್ಯಸ್ಯ ಪುನರಪ್ರವೃತ್ತಿರೇವೇತಿ ಚೇನ್ನ । ಲಕ್ಷ್ಯಾನುರೋಧೇನ ಪುನಃ ಪ್ರಸಂಗವಿಜ್ಞಾನಂ ಚೇತಿ ಸ್ವೀಕಾರಾತ್ । ನನ್ವೇವಂ ಯತಸ್ತತ ಇತ್ಯಾದಾವಪಿ ಪರೇಣ ಲಿತ್ಸ್ವರೇಣ ಬಾಧಿತಮಪಿ ಸಾವೇಕಾಚ ಇತಿ ತಸಿಲ ಉದಾತ್ತತ್ವಂ

ಸ್ಯಾದಿತಿ ಚೇನ್ನ । ಯತ್ತಚ್ಛಬ್ದಯೋಃ ಸಾವವರ್ಣಾಂತತ್ವೇ ನ ಗೋಶ್ವನ್ಸಾವವರ್ಣೇತಿ । ಪಾ. ೬-೧-೧೮೨। ನಿಷೇಧಾತ್ । ನ ಚ ಪುನಃ ಪ್ರಸಂಗವಿಜ್ಞಾನಂ ಚೇತ್ಯೇತತ್ಸಾರ್ವತ್ರಿಕಂ ಲಕ್ಷ್ಯಾನುರೋಧೇನ ಕ್ವಚಿದೇವ ತದಾಶ್ರಯಣಾದಿತಿ । ಸಾತಿಂ । ಷಣು ದಾನೇ । ಧಾತ್ವಾದೇಃ ಷಃ ಸಃ । ಪಾ ೬-೧-೬೪ । ಭಾವೇ ಕ್ತಿನ್ । ಜನಸನಖನಾಂ ಸಜ್ಝಲೋಃ । ಪಾ. ೬-೪-೪೨ । ಇತಿ ನಕಾರಸ್ಯಾತ್ವಂ । ತಿತುತ್ರತಥಸಿಸುಸರಕಸೇಷು ಚ । ಪಾ. ೭-೨-೯ । ಇತಿ ನಿಷೇಧಾದಿಣ್ನ ಭವತಿ । ನಿತ್ಸರ್ವೇ ಪ್ರಾಪ್ತ ಉದಾತ್ತ ಇತ್ಯನುವೃತ್ತಾವೂತಿಯೂತಿ-ಜೂತಿಸಾತಿಹೇತಿಕೀರ್ತಯಶ್ಚ । ಪಾ ೩-೩-೯೭ । ಇತಿ ನಿಪಾತನಾದಂತೋದಾತ್ತತ್ವಂ । ಈಮಹೇ । ಈಙ್ ಗತೌ । ಶ್ಯನೋಽಪಿ ಬಹುಲಂ ಛಂದಸೀತಿ ಲುಕ್ । ಅಸ್ಯ ಧಾತೋರ್ಙಿತ್ತ್ವಾತ್ತಾಸ್ಯನುದಾತ್ತೇ-ನ್ಙಿದದುಪದೇಶಾತ್। ಪಾ. ೬-೧-೧೮೬। ಇತಿ ಲಸಾರ್ವಧಾತುಕಸ್ಯಾನುದಾತ್ತತ್ವೇ ಧಾತುಸ್ವರ ಏವ ಶಿಷ್ಯತೇ। ನ ಚ ತಿಙ್ಙತಿಙ ಇತಿ ನಿಘಾತಃ । ಚವಾಯೋಗೇ ಪ್ರಥಮಾ । ಪಾ. ೮-೧-೫೯ । ಇತಿ ನಿಷೇಧಾತ್ । ಉತ್ತ-ರವಾಕ್ಯಯೋರಪಿ ಹಿ ವಾಶಬ್ದಯೋಗಾದನ್ಯಥಾ ವಾಕ್ಯಾಪರಿಪೂರ್ತೇಸ್ತಿಙ್ವಿಭಕ್ತೇರವಶ್ಯಮಧ್ಯಾಹಾರಾತ್ತ-ದಪೇಕ್ಷಯೈಷಾ ಪ್ರಥಮಾ ತಿಙ್ವಿಭಕ್ತಿರಿತಿ । ದಿವಃ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ । ಪಾರ್ಥಿವಾತ್ । ಪ್ರಥ ಪ್ರಖ್ಯಾನೇ । ಪ್ರಥತ ಇತಿ ಪೃಥಿವೀ । ಪ್ರಥೇಃ ಷಿವನ್ಸಂಪ್ರಸಾರಣಂ ಚ । ಉ. ೧-೧೫೦ । ಇತಿ ಷಿವನ್ಪ್ರತ್ಯಯಃ । ಷಿದ್ಗೌರಾದಿಭ್ಯಶ್ಚ । ಪಾ. ೪-೧-೪೧ । ಇತಿ ಙೀಷ್ । ಪ್ರತ್ಯಯಸ್ವರೇ-ಣೋದಾತ್ತಃ । ಶೇಷನಿಘಾತೇನಾನುದಾತ್ತಾದಿಃ ಪೃಥಿವೀಶಬ್ದಃ । ಪೃಥಿವ್ಯಾ ವಿಕಾರ ಇತ್ಯರ್ಥೇ ಓರಞಿತ್ಯ-ನುವೃತ್ತಾವನುದಾತ್ತಾದೇಶ್ಚ। ಪಾ. ೪-೩-೧೪೦ । ಇತ್ಯಞ್ । ಯಸ್ಯೇತಿ ಚ । ಪಾ. ೬-೪-೧೪೮ । ಇತೀಕಾ-ರಲೋಪಃ । ತದ್ಧಿತೇಷ್ವಚಾಮಾದೇಃ । ಪಾ. ೭-೨-೧೧೭ । ಇತ್ಯಾದಿವೃದ್ಧಿಃ । ರಪರತ್ವಂ । ಪಾ. ೧-೧-೫೧ । ಞ್ನಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತಃ । ಅಧಿ । ನಿಪಾತತ್ವಾದಾದ್ಯುದಾತ್ತಃ । ಇಂದ್ರಂ । ರನ್ಪ್ರತ್ಯಯಾಂತ ಆದ್ಯುದಾತ್ತಃ । ಮಹಃ । ಮಹತ ಇತ್ಯಸ್ಯಾಕಾರತಕಾರಯೋರ್ಲೋಪಶ್ಛಾಂದಸಃ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ರಜಸಃ । ನಬ್ವಿಷಯಸ್ಯಾನಿಸಂತಸ್ಯೇತ್ಯಾದ್ಯುದಾತ್ತತ್ವಂ ॥ ೧೨ ॥

॥ ಪ್ರತಿಪದಾರ್ಥ ॥

(ವಯಂ-ನಾವು) ಇಂದ್ರಂ-ಇಂದ್ರನನ್ನು । ಇತಃ ಪಾರ್ಥಿವಾದ್ವಾ—(ನಮ್ಮ ಕಣ್ಣಿಗೆ ಕಾಣುತ್ತಿರುವ) ಈ ಪೃಥಿವೀಲೋಕದಿಂದಲಾಗಲಿ । ದಿವೋ ವಾ-ಸ್ವರ್ಗಲೋಕದಿಂದಲಾಗಲಿ । ಮಹಃ—ದೊಡ್ಡದಾದ । ರಜ-ಸೋ ವಾ (ಪಕ್ಷ್ಯಾದಿಗಳಿಗೆ ಆಶ್ರಯಭೂತವಾದ) ಅಂತರಿಕ್ಷ ಲೋಕದಿಂದಲಾಗಲಿ । ಸಾತಿಂ—ಧನಪ್ರಾಪ್ತಿಗಾಗಿ । ಅಧೀಮಹೇ— ಪ್ರಾರ್ಥಿಸುತ್ತೇವೆ.

॥ ಭಾವಾರ್ಥ ॥

ಈಗ ನಮ್ಮ ಕಣ್ಣೆದುರಿಗೆ ಕಾಣುತ್ತಿರುವ ಈ ಭೂಲೋಕದಿಂದಲಾಗಲಿ, ಸ್ವರ್ಗಲೋಕದಿಂದಲಾಗಲಿ, ಅಂತರಿಕ್ಷಲೋಕದಿಂದಾಗಲಿ ನಮಗೆ ಧನವನ್ನು ತಂದುಕೊಡಬೇಕೆಂದು ಇಂದ್ರನನ್ನು ಪ್ರಾರ್ಥಿಸುತ್ತೇವೆ.

English Translation.

We pray to Indra for riches either from this earth, heaven, or from the vast intermediate region.

|| ವಿಶೇಷವಿಷಯಗಳು ||

**ಸಾತಿಂ**— **ಷಣು ದಾನೇ** ಎಂಬ ಧಾತುವಿನಿಂದ ಉತ್ಪನ್ನವಾದ ಈ ಶಬ್ದಕ್ಕೆ ದಾನ, ಕೊಡುವುದು ಎಂದರ್ಥವು. ಏನನ್ನು ಕೊಡುವುದು ಎಂದರೆ ಧನಾದ್ಯೈಶ್ವರ್ಯವು ಅಥವಾ ನಮಗೆ ಬೇಕಾದ ಇತರ ವಸ್ತುಗಳು.

**ಈಮಹೇ**— ಪ್ರಾರ್ಥಿಸುವೆವು, ಯಾಚನೆ ಮಾಡುವೆವು. ಈಮಹೇ, ಯಾಮಿ ಮೊದಲಾದ ಹದಿನೇಳು ಯಾಚ್ಞಾಕರ್ಮವಾಚಕ ಧಾತುಗಳ ಮಧ್ಯದಲ್ಲಿ ಈಮಹೇ ಎಂಬ ಶಬ್ದವು ಪಠಿತವಾಗಿದೆ.

**ಪಾರ್ಥಿವಾತ್**— ಪೃಥಿವೀವಿಕಾರಃ ಪಾರ್ಥಿವಃ ತಸ್ಮಾತ್-ಪೃಥಿವೀವಿಕಾರವಾದ ಎಂದರೆ ಭೂಲೋಕವೆಂದರ್ಥವು.

**ರಜಸಃ**— ಪಕ್ಷ್ಯಾದೀನಾಂ ರಂಜಕಾತ್ ಅಂತರಿಕ್ಷಲೋಕಾತ್ ಎಂದು ಭಾಷ್ಯಕಾರರು ಹೇಳಿರುವರು ಎಂದರೆ ಪಕ್ಷ್ಯಾದಿಗಳಿಗೆ ಸಂತೋಷವನ್ನುಂಟುಮಾಡುವ, ಎಂದರೆ ಆಶ್ರಯಭೂತವಾದ, ಮುಖ್ಯ ಸಂಚಾರಮಾಡಲು ಅವಕಾಶವುಳ್ಳ ಎಂದರ್ಥವು

ವ್ಯಾಕರಣಪ್ರಕ್ರಿಯಾ

**ಇತಃ**— ಪಂಚಮ್ಯಂತ್ಯವಾದ ಇದಮ್ ಶಬ್ದದ ಮುಂದೆ **ಪಂಚಮ್ಯಾಸ್ತಸಿಲ್** (ಪಾ. ಸೂ. ೫.೩-೭) ಎಂಬುದರಿಂದ ತಸಿಲ್ ಪ್ರತ್ಯಯ ಪಂಚಮೀವಿಭಕ್ತಿಗೆ ಲುಕ್. ಇದಮ್+ತಸಿಲ್ **ಇದಮಇಶ್** (ಪಾ. ಸೂ. ೫-೩-೩) ಪ್ರಾಗ್ದಿಶೀಯ ಪ್ರತ್ಯಯವು ಪರದಲ್ಲಿರುವಾಗ ಇದಮ್ ಶಬ್ದಕ್ಕೆ ಇಶ್ ಆದೇಶ ಬರುವುದು. ಇಶ್ ಶಿತ್ತಾದ್ದರಿಂದ **ಅನೇಕಾಲ್ ಶಿತ್ಸರ್ವಸ್ಯ** (ಪಾ. ಸೂ. ೧-೧-೫೫) ಎಂಬ ಪರಿಭಾಷೆಯಿಂದ ಇದಮ್‌ಶಬ್ದದ ಸಂಪೂರ್ಣಸ್ಥಾನದಲ್ಲಿ ಬರುವುದು ಇ+ತಸ್ ರುತ್ವ ವಿಸರ್ಗಗಳು ಬಂದರೆ ಇತಃ ಎಂದಾಗುವುದು. ಇಲ್ಲಿ **ಊಡಿದಂ ಪದಾದ್ಯಪ್ಪುಮ್ರೈದ್ಯುಭ್ಯಃ** (ಪಾ. ಸೂ. ೬-೧-೧೭೧) ಊಠ್ ಎಂಬ ಆದೇಶ-ಇದಮ್ ಶಬ್ದ-**ಪದ್ದನ್ನೋಮಾಸ್‌ಹಲನ್ನಿಶಸನ್** (ಪಾ. ಸೂ. ೬-೧-೬೩) ಎಂದು ವಿಹಿತವಾದ ಆರು ಪದಾದ್ಯಾದೇಶಗಳು ಅಪ್, ಪುಮ್, ರೈ, ದಿವ್ ಶಬ್ದಗಳು ಏಕಾಚ್ಕವಾಗಿಯೂ ಅಂತೋದಾತ್ತವಾಗಿಯೂ ಇರುವ ಈ ಶಬ್ದಗಳ ಮುಂದಿರುವ ಅಸರ್ವನಾಮ ಸ್ಥಾನ ವಿಭಕ್ತಿಯು ಉದಾತ್ತವಾಗುವುದು ಎಂಬ ಸೂತ್ರವು **ಲಿತಿ** (ಪಾ. ಸೂ. ೬-೧-೧೯೩) ಎಂಬ ಸೂತ್ರವು ಪ್ರವೃತ್ತಿಸದೇ ಇರತಕ್ಕ ಸ್ಥಳದಲ್ಲಿ ಅಭ್ಯಾಂ ಅಭಿಃ ಎಂಬಲ್ಲಿ ಸಾವಕಾಶವಾಗಿರುವುದು. **ಲಿತಿ** (ಪಾ. ಸೂ-೬-೧-೧೯೩) ಲಕಾರೇತ್ಸಂಜ್ಞಕ ಪ್ರತ್ಯಯದ ಹಿಂದಿರುವುದು ಉದಾತ್ತವಾಗುವುದು ಎಂಬ ಸೂತ್ರವು **ಊಡಿದಂ. ಪದಾದ್ಯಪ್ಪುಮ್ರೈದ್ಯುಭ್ಯಃ** (ಪಾ. ಸೂ. ೬-೧-೧೭೧) ಎಂಬ ಸೂತ್ರವು ಬರದೇ ಇರತಕ್ಕ ಸ್ಥಳದಲ್ಲಿ ಲ್ಯು ಪ್ರತ್ಯಯಾಂತವಾದ ಪಚನಂ ಎಂಬಲ್ಲಿಯೂ ಣ್ವುಲ್ ಪ್ರತ್ಯಯಾಂತವಾದ ಪಾಚಕಃ ಎಂಬಲ್ಲಿಯೂ ಸಾವಕಾಶವಾಗಿರುವುದು. ಈ ಎರಡರಲ್ಲಿ ಒಂದನ್ನು ಮಾತ್ರ ನಿತ್ಯವೆಂದು ಹೇಳಲಾಗುವುದಿಲ್ಲ. 'ಕೃತಾಕೃತಪ್ರಸಂಗಿತ್ವಂ ನಿತ್ಯತ್ವಂ' ಅಂದರೆ ಒಂದು ಶಾಸ್ತ್ರ ಮಾಡಿದರೂ, ಮಾಡದೇ ಇದ್ದರೂ ಯಾವ ಶಾಸ್ತ್ರಕ್ಕೆ ಪ್ರವೃತ್ತಿ ಇದೆಯೋ ಅದು ನಿತ್ಯ ಎಂದರ್ಥ. ಇಲ್ಲಿ **ಊಡಿದಂ** (ಪಾ. ಸೂ. ೬-೧-೧೭೧) ಎಂಬ ಶಾಸ್ತ್ರವನ್ನು ಮಾಡಿದರೂ ಮಾಡದೇ ಇದ್ದರೂ **ಲಿತಿ** (ಪಾ. ಸೂ. ೬-೧-೧೯೩) ಎಂಬುದಕ್ಕೆ ಪ್ರಸಕ್ತಿ ಇರುವುದು. **ಲಿತಿ** (ಪಾ. ಸೂ. ೬-೧-೧೯೩) ಎಂಬುದನ್ನು ಮಾಡಿದರೂ ಮಾಡದೇ ಇದ್ದರೂ **ಊಡಿದಮ್** (ಪಾ. ಸೂ. ೬-೧-೧೭೧) ಎಂಬುದಕ್ಕೆ ಪ್ರಸಕ್ತಿ ಇರುವುದು. ಆದ್ದರಿಂದ ಎರಡೂ ನಿತ್ಯಗಳೇ ಆಗುವುವು. ಆದ್ದರಿಂದ ನಿತ್ಯಶಾಸ್ತ್ರವೆಂದು ಒಂದಕ್ಕೆ ಪ್ರಾಬಲ್ಯವನ್ನು ಹೇಳಲಾಗು

ವುದಿಲ್ಲ. ಈ ಎರಡು ಶಾಸ್ತ್ರಗಳೂ ಇತಃ ಎಂಬಲ್ಲಿ ಪ್ರಾಪ್ತವಾಗುವುವು. ಇಲ್ಲಿ ಯಾವ ಶಾಸ್ತ್ರ ಬರುವುದು ಎಂದು ವಿಚಾರಮಾಡಿದರೆ **ವಿಪ್ರತಿಷೇಧೇ ಪರಂಕಾರ್ಯಂ** (ಪಾ. ಸೂ. ೧-೪-೨) **ಅನ್ಯತ್ರ ಚರಿತಾರ್ಥಯೋಃಶ್ಶಾಸ್ತ್ರಯೋಃ ಏಕತ್ರ ಯುಗಪತ್ಸಮಾವೇಶಃ ವಿಪ್ರತಿಷೇಧಃ** ಅಂದರೆ **ಪೂರ್ವಶಾಸ್ತ್ರವು ಪ್ರವೃತ್ತಿಸದೇ ಇರುವ ಸ್ಥಳದಲ್ಲಿ ಪರ** ಶಾಸ್ತ್ರಕ್ಕೂ, ಪರಶಾಸ್ತ್ರವು ಪ್ರವೃತ್ತಿಸದೇ ಇರುವ ಸ್ಥಳದಲ್ಲಿ ಪೂರ್ವಶಾಸ್ತ್ರಕ್ಕೂ ಪ್ರವೃತ್ತಿ ಇದ್ದು ಪೂರ್ವಪರಶಾಸ್ತ್ರ ಗಳೆರಡೂ ಒಂದೇ ಕಾಲದಲ್ಲಿ ಒಂದು ಲಕ್ಷ್ಯದಲ್ಲಿ ಪ್ರವೃತ್ತಿಸುವುದಕ್ಕೆ ವಿಪ್ರತಿಷೇಧ ಎಂದು ಹೆಸರು. ಪ್ರಸಕ್ತವಾದ ಎರಡು ಶಾಸ್ತ್ರಗಳಿಗೂ ಇಂತಹ ವಿಪ್ರತಿಷೇಧವು ಇರುವುದೆಂದು ಹಿಂದೆ ಉಪಪಾದಿಸಿರುವೆವು. ಇಂತಹ ವಿಪ್ರತಿ ಷೇಧವಿರುವಾಗ ಯಾವುದು ಪರಶಾಸ್ತ್ರವೋ ಅದೇ ಬರುವುದು ಎಂದು ವಿಪ್ರತಿಷೇಧೇ ಪರಂಕಾರ್ಯಂ ಎಂಬ ಸೂತ್ರವು ಹೇಳುವುದು. ಆದ್ದರಿಂದ ಪರವಾದ 'ಲಿತಿ' ಎಂಬುದರಿಂದ ಇಕಾರವು ಉದಾತ್ತವಾಗುವುದು, ನಂತರ, **ಪ್ರಾಗ್ದಿಶೋ ವಿಭಕ್ತಿಃ** (ಪಾ ಸೂ. ೫-೩-೧) ಈ ಸೂತ್ರದಿಂದ ಆರಂಭಿಸಿ **ದಿಕ್‌ಶಬ್ದೇಭ್ಯಃ** (ಪಾ. ಸೂ. ೫-೩-೨೭) ಎಂಬ ಸೂತ್ರದವರೆಗೆ ವಿಧಿಸಿರುವ ಪ್ರತ್ಯಯಗಳು ವಿಭಕ್ತಿ ಸಂಜ್ಞೆಯನ್ನು ಹೊಂದುವುವು ಎಂಬುದರಿಂದ ತಸಿಲ್ ಪ್ರತ್ಯ ಯಕ್ಕೆ ವಿಭಕ್ತಿ ಸಂಜ್ಞೆ ಇರುವುದು ಆದ್ದರಿಂದ **ಊಡಿದಮ್** (ಪಾ. ಸೂ ೬೧೭೧) ಎಂಬುದರಿಂದ ಇದಂ ಶಬ್ದದ ಮುಂದಿರುವ ಅಸರ್ವನಾಮಸ್ಥಾನ ವಿಭಕ್ತಿಯಾದ ತಸಿಲ್ ಪ್ರತ್ಯಯಕ್ಕೆ ಉದಾತ್ತಸ್ವರ ಬರುವುದು ಆದರೆ **ಸಕೃದ್ಗತೌ ವಿಪ್ರತಿಷೇಧೇನಯದ್ಬಾಧಿತಂ ತದ್ಬಾಧಿತಮೇವ** (ಪರಿಭಾಷಾ ೪೦) ಎಂದರೆ ಎರಡು ಶಾಸ್ತ್ರಗಳಿಗೆ ಒಂದು ಲಕ್ಷ್ಯದಲ್ಲ ಒಂದೇಕಾಲದಲ್ಲಿ ಪ್ರವೃತ್ತಿ ಬಂದಾಗ **ವಿಪ್ರತಿಷೇಧೇಪರಂಕಾರ್ಯಂ** (ಪಾ ಸೂ. ೧-೪-೨) ಎಂಬುದರಿಂದ ಯಾವ ಶಾಸ್ತ್ರವು ಬಾಧಿಸಲ್ಪಡುವುದೋ ಅದು ಬಾಧಿತವಾದುದೇ. ಅದಕ್ಕೆ ಪುನಃ ಪ್ರವೃತ್ತಿ ಬರುವು ದಿಲ್ಲ ಎಂದರ್ಥ, ವಿಪ್ರತಿಷೇಧೇಪರಂ—ಎಂಬಲ್ಲಿ ಪರಮೇವ–ಎಂದು ಅವಧಾರಣೆಯನ್ನು ವಿವಕ್ಷಿಸಿ ಪರಶಾಸ್ತ್ರವೇ ಬರುವುದು. ಪೂರ್ವಶಾಸ್ತ್ರ ಬರುವುದಿಲ್ಲ ಎಂದು ಅರ್ಥವರ್ಣನೆಮಾಡಿದರೆ ಸಕೃದ್ಗತೌಪರಿಭಾಷೆಯು ಸಿದ್ಧವಾಗು ವುದು. ಈ ಪರಿಭಾಷೆಯಿಂದ 'ವಿಪ್ರತಿಷೇಧೇ' ಎಂಬುದರಿಂದ ಬಾಧಿತವಾದ 'ಊಡಿದಮ್' ಎಂಬ ಶಾಸ್ತ್ರಕ್ಕೆ ಪುನಃ ಪ್ರವೃತ್ತಿ ಬರುವುದಿಲ್ಲ ಎಂದು ಹೇಳಬಹುದು. ಆದರೂ **ಪುನಃಪ್ರಸಂಗವಿಜ್ಞಾನಾತ್ಸಿದ್ಧಮ್** (ಪರಿಭಾ. ೩೯) ವಿಪ್ರತಿಷೇಧ ವಿದ್ದಾಗ ಪರಶಾಸ್ತ್ರವು ಪ್ರವೃತ್ತಿಸುವುದು, ಎಂದು 'ವಿಪ್ರತಿಷೇಧೇಪರಂ' ಎಂಬ ಸೂತ್ರಕ್ಕೆ ಅರ್ಥವರ್ಣನೆ ಮಾಡುವುದರಿಂದ ತಿರುಗಿಯೂ ಪ್ರಸಕ್ತಇರುವಲ್ಲಿ ಬಾಧಿತಶಾಸ್ತ್ರಪ್ರವೃತ್ತಿಪರಿಜ್ಞಾನವಿರುವುದರಿಂದ ಅದು ಪ್ರವೃತ್ತವಾದ ಮೇಲೆ ಪೂರ್ವ ಶಾಸ್ತ್ರಕ್ಕೆ ಪ್ರವೃತ್ತಿಇದ್ದರ ಅದೂ ಪ್ರವೃತ್ತಿಸುವುದು, ಬಾಧಿತ ವಾದ ಶಾಸ್ತ್ರಕ್ಕೂ ಪುನಃ ಪ್ರವೃತ್ತಿಗೆ ದ್ವಾರ (ಉಪಾಯ)ವು ಸಿದ್ಧವಾಯಿತು ಎಂದು ಪರಿಭಾಷೆಯ ಅರ್ಥ. ಈ ವಚನದಿಂದ ವಿಪ್ರತಿಷೇಧ ಶಾಸ್ತ್ರದಿಂದ ಬಾಧಿತವಾಗಿದ್ದಾಗ್ಯೂ, 'ಊಡಿದಮ್' ಎಂಬುದು ಪುನಃ ಪ್ರವೃತ್ತಿಸುವುದು. 'ಸಕೃದ್ಗತೌ' ಪುನಃ ಪ್ರಸಂಗ, ಈ ಎರಡು ಪರಿಭಾಷೆಗಳಿಗೂ ಬಾಧ್ಯಬಾಧಕ ಭಾವವಿಲ್ಲ ಲಕ್ಷ್ಯಾ ನುರೋಧವಾಗಿ ಎರಡೂ ಪ್ರವರ್ತಿಸುವುವು ಇಲ್ಲಿ ಲಕ್ಷ್ಯಾನುರೋಧದಿಂದ ಪುನಃ ಪ್ರಸಂಗ ಎಂಬ ಪರಿಭಾಷೆಯೇ ವ್ಯವ ಸ್ಥಾಪಕವಾದುದು ಹಾಗಾದರ ಯತಃ, ತತಃ, ಇತ್ಯಾದಿ ಲಕ್ಷ್ಯಗಳಲ್ಲಿ **ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ** (ಪಾ ಸೂ. ೬-೧-೧೬೮) ಸಪ್ತಮೀ ಬಹುವಚನ ಸು ಪ್ರತ್ಯಯಪರದಲ್ಲಿರುವಾಗ ಯಾವ ಶಬ್ದವು ಏಕಾಚ್ಕವಾಗಿ ದೆಯೋ (ಒಂದೇ ಅಚ್ಚನ್ನು ಹೊಂದಿದೆಯೋ) ಅದರ ಮುಂದೆ ಇರುವ ತೃತೀಯಾದಿ ವಿಭಕ್ತಿಯು ಉದಾತ್ತವಾಗು ವುದು ಎಂಬುದೂ, **ಲಿತಿ** (ಪಾ. ಸೂ. ೬-೧-೧೯೩) ಎಂಬದೂ ಪ್ರವೃತ್ತವಾದರೆ ಪರವಾದ್ದರಿಂದ **ವಿಪ್ರತಿಷೇಧೇಪರಂ ಕಾರ್ಯಂ** (ಪಾ.ಸೂ ೧-೪-೨) ಎಂಬ ಪರಿಭಾಷಾನುಸಾರ 'ಲಿತಿ' ಎಂಬುದರಿಂದ **'ಸಾವೇಕಾಚಃ'** ಎಂಬ ಪೂರ್ವ ಶಾಸ್ತ್ರವು ಬಾಧಿತವಾಗುವುದು, ಆದರೂ **ಪುನಃಪ್ರಸಂಗವಿಜ್ಞಾನಾತ್ಸಿದ್ಧಂ** (ಪರಿಭಾ ೩೯) ಎಂಬುದರಿಂದ ತಿರು ಗಿಯೂ 'ಸಾವೇಕಾಚಃ' ಎಂಬುದು ಬಂದು ಯತಃ. ತತಃ ಎಂಬಲ್ಲಿ ತಸಿಲ್ ಪ್ರತ್ಯಯ ಉದಾತ್ತವಾಗಲಿ ಎನ್ನಬಹುದು. ಇಲ್ಲಿ ಪ್ರಥಮೈಕವಚನದ ಸುಪ್ರತ್ಯಯ ಪರದಲ್ಲಿರುವಾಗ ಯತ್, ತತ್ ಶಬ್ದಗಳು ಅಕಾರಾಂತವಾಂತ

ವಾಗಿರುವವು ಆದ್ದರಿಂದ ' ನಗೋಶ್ವನ್ಸಾವವರ್ಣರಾಡಙ್ಕ್ರುಙ್ಕೃದ್ಭ್ಯಃ ' ಇವುಗಳ ಮುಂದೆ ಇರುವುದಕ್ಕೆ (ಪ್ರಾಪ್ತಿಕವಾದ) ಉದಾತ್ತ ಬರುವುದಿಲ್ಲ ಎಂದು ನಿಷೇಧವಿರುವುದರಿಂದ, ' ಸಾವೇಕಾಚಃ ' ಎಂಬುದರಿಂದ, ತಸಿಲ್‌ಗೆ, ಉದಾತ್ತ ಬರುವುದಿಲ್ಲ, ಅಥವಾ ಲಕ್ಷ್ಯಾನುಸಾರವಾಗಿ ಇಲ್ಲಿ ಸಕೃದ್ಗತೌ ಎಂಬ ಪರಿಭಾಷೆಯೇ ವ್ಯವಸ್ಥಾಪಕವಾಗುವುದು ' ಪುನಃಪ್ರಸಂಗವಿಜ್ಞಾನಾತ್ಸಿದ್ಧಂ ' ಎಂಬುದು ಎಲ್ಲ ಕಡೆಗಳಲ್ಲಿ ನಿಯಮೇನ ಪ್ರವರ್ತಿಸುವುದು ಎಂಬ ನಿಯಮವಿಲ್ಲ. ಲಕ್ಷ್ಯಾನುಸಾರವಾಗಿ ಇದು ಕೆಲವು ಕಡೆಯಲ್ಲಿ ಮಾತ್ರವೇ ಪ್ರವೃತ್ತಿಸುವುದು. ಆದ್ದರಿಂದ ಇಲ್ಲಿ ಈ ನ್ಯಾಯವು ಪ್ರವೃತ್ತಿಸುವುದಿಲ್ಲ ಎಂದು ಹೇಳಬಹುದು. ಈಗ ಬಾಧಿತವಾದ ' ಸಾವೇಕಾಚ ' ಎಂಬುದಕ್ಕೆ ಪುನಃ ಪ್ರವೃತ್ತಿ ಬರುವುದಿಲ್ಲ. ಆದ್ದರಿಂದ, ಯತಃ, ತತಃ, ಇವು ಆದ್ಯುದಾತ್ತಗಳೇ.

**ಸಾತಿಮ್**—ಷಣು ದಾನೇ, ' ಧಾತ್ವಾದೇಃಷಃಸಃ ' ಧಾತುವಿನ ಆದಿಯಲ್ಲಿರುವ ಷಕಾರಕ್ಕೆ ಸಕಾರ ಬರುವುದು ಎಂಬುದರಿಂದ ಷಕಾರಕ್ಕೆ ಸಕಾರ ಈರೀತಿ ಷಕಾರನಿವೃತ್ತವಾದರೆ ತನ್ನಿಮಿತ್ತಕವಾದ ಣ ಎಂಬುದರ ಸ್ಥಾನದಲ್ಲಿ ಬಂದಿದ್ದ, ಣಕಾರವು ನಿವೃತ್ತವಾಗಿ ನಕಾರವೇ ಇರುವುದು. ಏವಂಚ ಸನ್ ಎಂದಾಯಿತು. ಇದರ ಮುಂದೆ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯವನ್ನು ಹಚ್ಚುವುದು. **ಜನಸನಖನಾಂಸನ್‌ಝಲೋಃ** (ಪಾ. ಸೂ. ೬-೪-೪೨) ಝಲಾದಿಯಾದ ಸನ್ಪ್ರತ್ಯಯ ಅಥವಾ ಕಿತ್ತು ಙಿತ್ತು ಆದ ಝಲಾದಿ ಪ್ರತ್ಯಯ ಪರದಲ್ಲಿದ್ದರೆ ಜನ್, ಸನ್, ಖನ್ ಧಾತುಗಳ ಕೊನೆಯ ವರ್ಣಕ್ಕೆ ಆಕಾರಬರುವುದು ಎಂಬುದರಿಂದ ನಕಾರಕ್ಕೆ ಆಕಾರ ಬಂದರೆ ಸ+ಆ+ತಿ ಸವರ್ಣ ದೀರ್ಘ, ಸಾತಿ ಎಂದಾಗುವುದು. ಈಗ **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂಬುದರಿಂದ ಇಡಾಗಮ ಪ್ರಾಪ್ತವಾದರೆ ಆದಕ್ಕೆ **ತಿ, ತು, ತ್ರ, ತ, ಥ, ಸಿ, ಸು, ಸರ, ಕ, ಸೇ ಷು ಚ** (ಪಾ. ಸೂ. ೭-೨-೯) ಈ ಹತ್ತು ಕೃತ್ಪ್ರತ್ಯಯಗಳಿಗೆ ಇಡಾಗಮ ಬರುವುದಿಲ್ಲ ಎಂಬುದರಿಂದ ಇಡಾಗಮ ಬರುವುದಿಲ್ಲ. ಕ್ತಿನ್ ಪ್ರತ್ಯಯವು ನಿತ್ತಾಗಿದ್ದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಪ್ರತ್ಯಯಾಂತ ಶಬ್ದದ ಆದಿಗೆ ಉದಾತ್ತ ಪ್ರಾಪ್ತವಾದರೆ **ಊತಿ ಯೂತಿ ಜೂತಿ ಸಾತಿ ಹೇತಿ ಕೀರ್ತಯಶ್ಚ** (ಪಾ. ಸೂ. ೩-೩-೯೭) ಕ್ತಿನ್ನಂತವಾದ ಈ ಶಬ್ದಗಳು ಅಂತೋದಾತ್ತವಾಗಿ ನಿಪಾತಿಸಲ್ಪಡುವವು ಎಂಬುದರಿಂದ ಅಂತೋದಾತ್ತವಾಗಿ ನಿಪಾತಿಸಲ್ಪಟ್ಟಿರುವುದರಿಂದ ಅಂತೋದಾತ್ತವೇ ಬರುವುದು.

**ಈಮಹೇ**— ಈಙ್ ಗತೌ—ಎಂಬ ಧಾತುವಿನ ಮುಂದೆ ಲಟ್ ಉತ್ತಮಪುರುಷ ಬಹುವಚನ ಮಹಿಙ್ ಪ್ರತ್ಯಯ **ಟಿತ ಆತ್ಮನೇ ಪದಾನಾಂಟೇರೇ** (ಪಾ ಸೂ. ೩-೪-೭೯) ಎಂಬದರಿಂದ ಪ್ರತ್ಯಯದ ಇಕಾರಕ್ಕೆ ಏಕಾರ **ದಿವಾದಿಭ್ಯಃಶ್ಯನ್** (ಪಾ. ಸೂ ೩-೧-೬೯) ಎಂಬುದರಿಂದ ಬಂದ ಶ್ಯನ್ ವಿಕರಣಕ್ಕೆ **ಬಹುಲಂ ಛಂದಸಿ** (ಪಾ. ಸೂ. ೨-೪-೭೩) ಎಂಬುದರಿಂದ ಲುಕ್ ಬರುವುದು. ಈ ಸೂತ್ರವು ಶಪ್ಪಿಗೆ ಲುಗ್ವಿಧಾಯಕವಾದರೂ ಬಹುಲಗ್ರಹಣವಿರುವುದರಿಂದ ಶ್ಯನ್ನಿಗೂ ಲುಕ್ ಬರುವುದು. ಈಮಹೇ ಎಂದಾಗುವುದು ಈಙ್ ಧಾತುವು ಙಿತಾದ್ದರಿಂದ **ತಾಸ್ಯನುದಾತ್ತೇನ್ಙಿದದುಪದೇಶಾತ್** (ಪಾ. ಸೂ. ೬-೧-೧೮೬) ಲಸ್ಥಾನಿಕ ಸಾರ್ವಧಾತುಕವಾದ ಮಹೇ ಎಂಬುದಕ್ಕೆ ಅನುದಾತ್ತ ಬಂದರೆ ಈ ಎಂಬಲ್ಲಿ **ಧಾತೋಃ** (ಪಾ. ಸೂ. ೬-೧-೧೬೨) ಎಂದು ವಿಹಿತವಾದ ಅಂತೋದಾತ್ತವೇ ನಿಲ್ಲುವುದು **ತಿಙ್ಙತಿಙಃ** (ಪಾ ಸೂ. ೮-೧-೨೮) ತಿಙಂತವಲ್ಲದ ಶಬ್ದದ ಮುಂದೆ ಇರುವ ತಿಙಂತವು ಅನುದಾತ್ತವಾಗುವುದು ಎಂಬುದರಿಂದ ತಿಙಂತ ಶಬ್ದಕ್ಕೆ ಅನುದಾತ್ತ ಪ್ರಾಪ್ತವಾದರೂ **ಚವಾಯೋಗೇ ಪ್ರಥಮಾ** (ಪಾ. ಸೂ. ೮-೧-೫೯) ಚ ವಾ ಎಂಬ ಶಬ್ದಗಳ ಯೋಗವಿರುವಾಗ ಮೊದಲು ಉಚ್ಚರಿತವಾದ ತಿಙಂತವು ಅನುದಾತ್ತವಾಗುವುದಿಲ್ಲ ಎಂದು ನಿಷೇಧವಿರುವುದರಿಂದ ಸರ್ವಾನುದಾತ್ತ ಬರುವುದಿಲ್ಲ. ಆದರೆ

ಈ ಮಂತ್ರದಲ್ಲಿ ಒಂದೇಒಂದು ತಿಜಂತವಿರುವುದರಿಂದ ಇದು ಹೇಗೆ ಪ್ರಥಮೋಚ್ಚರಿತ ತಿಜಂತವಾಗುವುದು ಎಂದು ಸಂಶಯುಬರಬಹುದು. ಇಲ್ಲಿ ಇತಃ ಪಾರ್ಥಿವಾತ್ ಲೋಕಾದ್ವಾ ಇಂದ್ರಂ ಪ್ರತಿ ಸಾತಿಂ ಅಧಿ ಈಮಹೇ, ಇಂದ್ರಂ ಪ್ರತಿ ಸಾತಿಂ ದಿವೋ ವಾ ಅಧಿ ಈಮಹೇ ರಜಸಃ ( ಅಂತರಿಕ್ಷಲೋಕಾದ್ವಾ ) ಇಂದ್ರಂ ಪ್ರತಿ ಸಾತಿಂ ಅಧಿ ಈ ಮಹೇ ಎಂದು ಮೂರು ವಾಕ್ಯಗಳು ಇರುವುವು. ಎರಡು ಮೂರನೇ ವಾಕ್ಯಗಳಲ್ಲಿ ಸಂಬಂಧಿಸಿದ ಈಮಹೇ ಎಂಬುದನ್ನು ಅಪೇಕ್ಷಿಸಿ ಮೊದಲನೇ ವಾಕ್ಯದಲ್ಲಿರುವ ಈಮಹೇ ಎಂಬುದು ಪ್ರಥಮೋಚ್ಚರಿತವಾದ್ದರಿಂದ, ‘ ಚವಾ ಯೋಗೆ. ಎಂಬ ನಿಷೇಧವು ಇಲ್ಲಿ ಬಂದೇಬರುವುದು- ಉತ್ತರ ವಾಕ್ಯಗಳಲ್ಲಿ ವಾಶಬ್ದವಿರುವುದರಿಂದ ‘ ಈಮಹೇ’ ಎಂಬುದಕ್ಕೆ ಸಂಬಂಧವನ್ನು ಹೇಳಲೇಬೇಕು. ಇಲ್ಲದಿದ್ದರೆ ವಾಕ್ಯವು ಪೂರ್ಣವಾದ ಅರ್ಥವನ್ನು ಕೊಡುವುದಿಲ್ಲ.

ದಿವಃ, ‘ ಊಡಿದಮ್ ’ (ಪಾ. ಸೂ. ೬-೧೭೧) ಎಂಬುದರಿಂದ ವಿಭಕ್ತಿಯು ಉದಾತ್ತವಾಗುವುದು.

ಪಾರ್ಥಿವಾತ್—ಪ್ರಥತೇ ಇತಿ ಪೃಥಿವೀ—ಪ್ರಥ ಪ್ರಖ್ಯಾನೇ ಎಂಬ ಧಾತುವಿನ ಮುಂದೆ ಪ್ರಥೇಃಷಿವನ್ ಸಂಪ್ರಸಾರಣಂಚ, (ಉ. ಸೂ. ೧-೧೪೯) ಪ್ರಥಧಾತುವಿನ ಮುಂದೆ ಷಿವನ್ ಪ್ರತ್ಯಯ ಬರುವುದು ಸಂಪ್ರಸಾರ ಣವೂ ಬರುವುದು ಎಂಬುದರಿಂದ ಷಿವನ್ ಪ್ರತ್ಯಯ ಬಂದರೆ ಪ್ರಥ್+ಇವ್ ಎಂದಿರುವಾಗ. ಇದರಿಂದಲೇ ಸಂಪ್ರ ಸಾರಣ. ರೇಫಕ್ಕೆ ಋಕಾರ ಬಂದರೆ ಪೃಥ್ ಇವ್, ಪ್ರತ್ಯಯವು ಷಿತ್ತಾದ್ದರಿಂದ ಷಿದ್ಗೌರಾಧಿಭ್ಯಶ್ಚ (ಪಾ.ಸೂ. ೪- ೧-೪೧) ಷಿತ್ತಾದ ಪ್ರಾತಿಪದಿಕದ ಮುಂದೆಯೂ, ಗೌರಾದಿಗಣದಲ್ಲಿರುವ ಪ್ರಾತಿಪದಿಕದ ಮುಂದೆಯೂ ಸ್ತ್ರೀತ್ವ ತೋರುವಾಗ ಙೀಷ್ ಬರುವುದು. ಅವಯವೇ ಅಚರಿತಾರ್ಥಂ ಲಿಂಗಂ ಸಮುದಾಯೋಪಕಾರಕಂಭವತಿ ಎಂಬ ನ್ಯಾಯದಿಂದ ಪ್ರತ್ಯಯದಲ್ಲಿ ಷಿತ್ವಕ್ಕೆ ಪ್ರಯೋಜನವಿಲ್ಲದೇ ಇರುವುದರಿಂದ ಆ ಷಿತ್ವವು ಪ್ರಾತಿಪದಿಕಕ್ಕೆ ವಿಶೇಷಣ ವಾಗುವುದು. ಙೀಷ್ ಎಂಬಪ್ರತ್ಯಯದ ಈಕಾರವು ಪ್ರತ್ಯಯ ಸ್ವರದಿಂದ ಅಂದರೆ ಆದ್ಯುದಾತ್ತಶ್ಚ (ಪಾ. ಸೂ ೩- ೧-೩) ಎಂಬುದರಿಂದ ಉದಾತ್ತ ಮಿಕ್ಕವುಗಳಿಗೆ ಅನುದಾತ್ತಂಪದಮೇಕವರ್ಜಂ (ಪಾ. ಸೂ. ೬-೧-೧೫೮) ಎಂಬ ಶೇಷನಿಘಾತ ಸ್ವರದಿಂದ ಅನುದಾತ್ತ, ಅಂತು ಪೃಥಿವೀ ಶಬ್ದವು ಅನುದಾತ್ತಾದಿ ಎಂದು ಏರ್ಪಟ್ಟಿತು. ಪೃಥಿವ್ಯಾಃ ವಿಕಾರಃ ಎಂದು ಅರ್ಥವಿವಕ್ಷೆ ಮಾಡಿದರೆ ಅನುದಾತ್ತಾದೇಶಃ (ಪಾ.ಸೂ. ೪-೩-೧೪೦) ಇಲ್ಲಿ ಓರಞ್ (ಪಾ ಸೂ. ೪-೩-೧೩೯) ಎಂಬುದರಿಂದ ‘ಅಞ್ ಎಂಬ ಪದವು ಅನುವೃತ್ತವಾಗುವುದು, ಅನುದಾತ್ತಾದಿ ಶಬ್ದ ಪ್ರಕೃತಿಕವಾದ ಷಷ್ಠ್ಯಂತದ ಮುಂದೆ ವಿಕಾರಾರ್ಥದಲ್ಲಿಯೂ ಅವಯವಾರ್ಥದಲ್ಲಿಯೂ ಅಞ್ ಪ್ರತ್ಯಯ ಬರುವುದು ಎಂಬುದರಿಂದ ಅಞ್ ಪ್ರತ್ಯಯ ಬಂದರೆ ತದ್ಧಿತಾಂತವಾದ್ದರಿಂದ ಕೃತ್ತದ್ಧಿತಸಮಾಸಾಶ್ಚ (ಪಾ. ಸೂ ೧-೨-೪೬) ಎಂಬುದರಿಂದ ಪ್ರಾತಿಪದಿಕ ಸಂಜ್ಞೆ ಬಂದರೆ ಸುಪೋಧಾತು ಪ್ರಾತಿಪದಿಕಯೋಃ (ಪಾ. ಸೂ. ೨-೪-೭೧) ಧಾತು, ಪ್ರಾತಿ ಪದಿಕ ಇವುಗಳ ಅವಯವವಾದ ಸುಪ್ಪಿಗೆ ಲುಕ್ ಬರುವುದು ಎಂಬುದರಿಂದ ಪೃಥಿವೀ+ಜಸ್+ಅ ಎಂಬಲ್ಲಿರುವ ಜಸ್ಸಿಗೆ ಲುಕ್ ಬರುವುದು. ಯಸ್ಯೇತಿಚ (ಪಾ. ಸೂ. ೬-೪-೧೪೮) ಈಕಾರ ತದ್ಧಿತಗಳು ಪರದಲ್ಲಿರುವಾಗ ಭ ಸಂಜ್ಞಕಾಂಗಾವಯವವಾದ ಇವರ್ಣ ಅವರ್ಣಗಳಿಗೆ ಲೋಪಬರುವುದು ಎಂಬುದರಿಂದ ಈಕಾರಕ್ಕೆ ಲೋಪ ತದ್ಧಿತೇಷ್ವಚಾಮಾದೇಃ (ಪಾ. ಸೂ. ೭-೨-೧೧೭) ಞಿತ್ತು ಣಿತ್ತು ಆದ ತದ್ಧಿತ ಪ್ರತ್ಯಯ ಪರದಲ್ಲಿದ್ದರೆ ಅಚ್ಸ ಮುದಾಯದಲ್ಲಿ ಮೊದಲನೆಯ ಅಚ್ಚಿಗೆ ವೃದ್ಧಿಬರುವುದು ಎಂಬುದರಿಂದ, ಆದಿಭೂತವಾದ ಋಕಾರಕ್ಕೆ ವೃದ್ಧಿ ಪ್ರಸಕ್ತವಾದರೆ ಉರಣ್ರಪರಃ ( ಪಾ. ಸೂ. ೧-೧-೫೧ ) ಎಂಬ ಶಾಸ್ತ್ರಾನುಸಾರ ರೇಫಶಿರಸ್ಕವಾಗಿಬರುವುದು. ಪಾರ್ಥಿವ ಎಂದಾಗುವುದು. ಈಗ ಞ್ನಿತ್ಯಾದಿರ್ನಿತ್ಯಂ ( ಪಾ. ಸೂ. ೬-೧-೧೯೭ ) ಞಕಾರೇತ್ಸಂಜ್ಞಕಪ್ರತ್ಯ ಯಾಂತದ, ಮತ್ತು ನಕಾರೇತ್ಸಂಜ್ಞಕ ಪ್ರತ್ಯಯಾಂತದ ಆದಿಯು ಉದಾತ್ತವಾಗುವುದು ಎಂಬುದರಿಂದ ಪಾರ್ಥಿವ ಶಬ್ದ ಆದ್ಯುದಾತ್ತ.

ಅಧಿ—ನಿಪಾತಾ ಆದ್ಯುದಾತ್ತಾಃ (ಪಾ. ಸೂ. ೮೦) ಎಂಬುದರಿಂದ ಆದ್ಯುದಾತ್ತ.

ಇಂದ್ರಂ—ಋಜ್ರೇಂದ್ರಾಗ್ರ-(ಉ. ಸೂ. ೨-೧೮೬) ಎಂಬುದರಿಂದ ರನ್ ಪ್ರತ್ಯಯಾಂತ ಆದ್ಯುದಾತ್ತ.

ಮಹಃ—ಮಹತಃ ಎಂಬ ಶಬ್ದದ ಅಕಾರ ತಕಾರ (ಅತ್) ಗಳಿಗೆ ಛಾಂದಸವಾಗಿ ಲೋಪ. ಸಾವೇ-ಕಾಚಸ್ತೃತೀಯಾದಿರ್ವಿಭಕ್ತಿಃ (ಪಾ. ಸೂ ೬-೧-೧೬೮) ಎಂಬುದರಿಂದ ವಿಭಕ್ತಿಯು ಉದಾತ್ತ.

ರಜಸಃ—ನಬ್ವಿಷಯಸ್ಯಾನಿ ಸಂತಸ್ಯ—(ಫಿ. ಸೂ. ೨೬) ಎಂಬುದರಿಂದ ಉದಾತ್ತ ॥ ೧೦ ॥

---

ಇಲ್ಲಿಗೆ ಪ್ರಥಮ ಮಂಡಲದಲ್ಲಿ ಆರನೆಯ ಸೂಕ್ತವು ಮುಗಿದುದು.
ಪ್ರಥಮಾಷ್ಟಕದ ಪ್ರಥಮಾಧ್ಯಾಯದಲ್ಲಿ ಎಂಟನೆಯ ವರ್ಗವು ಸಮಾಪ್ತವು.

॥ ಓಂ ॥

---

# ಏಳನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಇಂದ್ರಮಿತ್ಯಾದಿಕಂ ದಶರ್ಚಂ ಯತ್ಸೂಕ್ತಂ ತತ್ಸುರೂಪಕೃತ್ನುಮಿತ್ಯಾದಿಷು ಚತುರ್ಥಂ ಋಷಿಚ್ಛಂದೋದೇವತಾ ವಿನಿಯೋಗಶ್ಚ ಪೂರ್ವವತ್ । ವಿಶೇಷವಿನಿಯೋಗಸ್ತೂಚ್ಯತೇ । ಮಹಾವ್ರತೇ ನಿಷ್ಕೇವಲ್ಯಶಸ್ತ್ರ ಇಂದ್ರಮಿದ್ಗಾಥಿನ ಇತಿ ಸೂಕ್ತಂ । ತಥಾ ಚ ಪಂಚಮಾರಣ್ಯಕೇ ಸೂತ್ರಿತಂ । ಶಿರೋ ಗಾಯತ್ರಮಿಂದ್ರಮಿದ್ಗಾಥಿನಃ । ಐ. ಆ. ೫-೨-೧ । ಇತಿ ತಥಾ ಚತುರ್ವಿಂಶೇಽಹನಿ ಬ್ರಾಹ್ಮಣಾಚ್ಛಂಸಿನಃ ಶಸ್ತ್ರ ಇಂದ್ರಮಿದ್ಗಾಥಿನ ಇತಿ ಷಳಹಸ್ತೋತ್ರಿಯಸ್ತೃಚಃ । ಚತುರ್ವಿಂಶೇ ಹೋತಾಜನಿಷ್ಟೇತ್ಯುಪಕ್ರಮ್ಯಾ ಯಾಹಿ ಸುಷುಮಾ ಹಿ ತ ಇಂದ್ರಮಿದ್ಗಾಥಿನೋ ಬೃಹತ್ । ಆ. ೭-೨ । ಇತಿ ಸೂತ್ರಿತತ್ವಾತ್ । ಅತಿರಾತ್ರೇ ಪ್ರಥಮೇ ಪರ್ಯಾಯೇಽಚ್ಛಾವಾಕಶಸ್ತ್ರೇಽಯಮೇವ ತೃಚೋಽನುರೂಪಃ । ಸೂತ್ರಿತಂ ಚ । ಇಂದ್ರಾಯ ಮದ್ವನೇ ಸುತಮಿಂದ್ರಮಿದ್ಗಾಥಿನೋ ಬೃಹತ್ । ಆ ೬-೪ । ಇತಿ ॥

ಅನುವಾದವು—ಇಂದ್ರಮಿದ್ಗಾಥಿನೋ ಬೃಹತ್ ಎಂಬ ಈ ಸೂಕ್ತವು ಸುರೂಪಕೃತ್ನುಮೂತಯೇ ಎಂದು ಪ್ರಾರಂಭವಾಗುವ ಎರಡನೆಯ ಅನುವಾಕದ ನಾಲ್ಕನೆಯ (ಕೊನೆಯ) ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿವೆ. ಇದರ ಋಷಿದೇವತಾ ಛಂದಸ್ಸುಗಳೂ ವಿನಿಯೋಗವೂ ಹಿಂದಿನ ಸೂಕ್ತದಂತೆಯೇ. ಆದರೆ ಇದಕ್ಕೆ ವಿಶೇಷ ವಿನಿಯೋಗವಿರುವುದು. ಮಹಾವ್ರತವೆಂಬ ಯಾಗದಲ್ಲಿ ಇಂದ್ರಮಿದ್ಗಾಥಿನ ಎಂಬ ಸೂಕ್ತವನ್ನು ನಿಷ್ಕೇವಲ್ಯಶಸ್ತ್ರಮಂತ್ರವನ್ನಾಗಿ ಪಠಿಸುವರು. ಈ ವಿಷಯವು-ಶಿರೋಗಾಯತ್ರಮಿಂದ್ರಮಿದ್ಗಾಥಿನಃ ಎಂದು ಐತರೇಯ ಆರಣ್ಯಕದಲ್ಲಿ (ಪಂಚಮಾರಣ್ಯಕ) ಹೇಳಿರುವುದು, ಮತ್ತು ಇಪ್ಪತ್ತನಾಲ್ಕನೆಯ ದಿನದಲ್ಲಿ ಬ್ರಾಹ್ಮ-

ಶಾಚ್ಛಂಸಿಯೆಂಬ ಹೋತೃವರ್ಗದ ಋತ್ವಿಜನು ಷಳಹಸ್ತೋತ್ರಿಯವೆಂಬ ತೃಚವನ್ನು ಪಠಿಸುವಾಗ ಇಂದ್ರಮಿದ್ಗಾಥಿನ ಎಂಬ ಋಕ್ಕನ್ನು ಪಠಿಸಬೇಕೆಂದು—**ಚತುರ್ವಿಂಶೇ ಹೋತಾಜನಿಷ್ಟೇತ್ಯುಪಕ್ರಮ್ಯಾಯಾಹಿ ಸುಷುಮಾ ಹಿ ತ ಇಂದ್ರಮಿದ್ಗಾಥಿನೋ ಬೃಹತ್** ಎಂದು ಆಶ್ವಲಾಯನ ಸೂತ್ರದಲ್ಲಿ (ಆ. ಸು. ೭-೨) ಹೇಳಿರುವುದು. ಎಂದರೆ, ಆಶ್ವಲಾಯನ ಶ್ರೌತ ಸೂತ್ರದಲ್ಲಿ **ಹೋತಾಜನಿಷ್ಟ** ಎಂಬ ಖಂಡದಲ್ಲಿ **ಆ ಯಾಹಿ ಸುಷುಮಾಹಿತೇ** (ಋ. ಸಂ. ೮-೧೭-೧) ಎಂಬ ಋಕ್ಕನ್ನೂ **ಇಂದ್ರಮಿದ್ಗಾಥಿನೋ ಬೃಹತ್** (ಋ. ಸಂ. ೧-೭-೧) ಎಂಬ ಋಕ್ಕನ್ನೂ ಇಪ್ಪತ್ತನಾಲ್ಕನೆಯ ದಿನದಲ್ಲಿ ಷಳಹಸ್ತೋತ್ರಿಯವೆಂಬ ತೃಚದಲ್ಲಿ ಪಠಿಸಬೇಕು. ಮತ್ತು ಆರಣ್ಯಕದಲ್ಲಿಯೂ-**ಇಂದ್ರಾಯ ಮದ್ವನೇ ಸುತಮಿಂದ್ರಮಿದ್ಗಾಥಿನೋ ಬೃಹತ್** (ಆ. ೬-೪) ಎಂದರೆ **ಇಂದ್ರಾಯ ಮದ್ವನೇ ಸುತಂ** (ಋ. ಸಂ. ೮-೯೨-೧೯) ಎಂಬ ಋಕ್ಕನ್ನು **ಇಂದ್ರಮಿದ್ಗಾಥಿನೋ ಬೃಹತ್** ಎಂಬ ಋಕ್ಕನ್ನು ಮೇಲೆ ಹೇಳಿದ ತೃಚದಲ್ಲಿ ಪಠಿಸಬೇಕೆಂದು ಸೂತ್ರವಿರುವುದು.

## ಸೂಕ್ತ—೭

॥ ಮಂಡಲ—೧ ॥ ಅನುವಾಕ—೨ ॥ ಸೂಕ್ತ—೭ ॥

॥ ಅಷ್ಟಕ —೧ ॥ ಅಧ್ಯಾಯ—೧ ॥ ವರ್ಗ—೧೩, ೧೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೧–೧೦ ॥

॥ ಋಷಿಃ—ಮಧುಚ್ಛಂದಾ ವೈಶ್ವಾಮಿತ್ರಃ ॥

॥ ದೇವತಾ—ಇಂದ್ರಃ ॥

॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಇಂದ್ರಮಿದ್ಗಾಥಿನೋ ಬೃಹದಿಂದ್ರಮರ್ಕೇಭಿರರ್ಕಿಣಃ ॥
ಇಂದ್ರಂ ವಾಣೀರನೂಷತ ॥ ೧ ॥

॥ ಪದಪಾಠಃ ॥

ಇಂದ್ರಂ । ಇತ್ । ಗಾಥಿನಃ । ಬೃಹತ್ । ಇಂದ್ರಂ । ಅರ್ಕೇಭಿಃ । ಅರ್ಕಿಣಃ ॥
ಇಂದ್ರಂ । ವಾಣೀಃ । ಅನೂಷತ ॥ ೧ ॥

॥ ಸಾಯಣಭಾಷ್ಯಂ ॥

ಗಾಥಿನೋ ಗೀಯಮಾನಸಾಮಯುಕ್ತಾ ಉದ್ಗಾತಾರ ಇಂದ್ರಮಿದಿಂದ್ರಮೇವ ಬೃಹತ್ ತ್ವಾಮಿದ್ಧಿ ಹವಾಮಹೇ । ಋಗ್ವೇ ೬-೪೬-೧ । ಇತ್ಯಸ್ಯಾಮೃಚ್ಯುತ್ಪನ್ನೇನ ಬೃಹನ್ನಾಮಕೇನ ಸಾಮ್ನಾನೂಷತ । ಸ್ತುತವಂತಃ । ಅರ್ಕಿಣೋಽರ್ಚನಹೇತುಮಂತ್ರೋಪೇತಾ ಹೋತಾರೋಽರ್ಕೇಭಿರ್ಋಗ್ರೂಪೈರ್ಮಂತ್ರೈರಿಂದ್ರಮೇವಾನೂಷತ । ಯೇ ತ್ವವಶಿಷ್ಟಾ ಅಧ್ವರ್ಯವಸ್ತೇ ವಾಣೀರ್ವಾಗ್ಭಿರ್ಯಜೂರೂಪಾಭಿರಿಂದ್ರಮೇವಾನೂಷತ । ಅರ್ಕಶಬ್ದಸ್ಯ ಮಂತ್ರಪರತ್ವಂ ಯಾಸ್ಕೇನೋಕ್ತಂ । ಅರ್ಕೋ ಮಂತ್ರೋ ಭವತಿ ಯದೇನೇನಾರ್ಚಂತಿ । ನಿ, ೫-೪ । ಇತಿ । ಶ್ಲೋಕ ಇತ್ಯಾದಿಷು ಸಪ್ತಪಂಚಾಶತ್ಸು ವಾಙ್ನಾಮಸು ವಾಶೀ ವಾಣೀತಿ ಪಠಿತಂ ॥ ಗಾಥಿನಃ । ಉಷಿಕುಷಿಗಾರ್ತಿಭ್ಯಃ ಸ್ಥನ್ । ಉ. ೨-೪ । ಇತಿ ಗಾಯತೇಃ ಸ್ಥನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತಃ । ಗಾಥಾ ಏಷಾಂ ಸಂತೀತಿ ಗಾಥಿನಃ । ವ್ರೀಹ್ಯಾದಿಭ್ಯಶ್ಚ । ಪಾ. ೫-೨-೧೧೬ । ಇತೀನಿಃ । ಪ್ರತ್ಯಯಸ್ವರೇಣೇಕಾರ ಉದಾತ್ತಃ । ಸ ಚ ಸತಿ ಶಿಷ್ಟಃ । ಬೃಹತ್ । ಬೃಹತಾ । ತೃತೀಯೈಕವಚನಸ್ಯ ಸುಪಾಂ ಸುಲುಗಿತಿ ಲುಕ್ । ಪೃಷದ್ಬೃಹನ್ಮಹಜ್ಜಗಚ್ಛತೃವಚ್ಚ । ಉ. ೨. ೮೪ । ಇತ್ಯಂತೋದಾತ್ತೋ ನಿಪಾತಿತಃ । ಅರ್ಕೇಭಿಃ । ಅರ್ಚ ಪೂಜಾಯಾಂ । ಅರ್ಚ್ಯಂತೆ ಏಭಿರಿತ್ಯರ್ಕಾ ಮಂತ್ರಾಃ । ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ । ಪಾ. ೩-೩-೧೧೮ । ಇತಿ ಘಃ । ಚಜೋಃ ಕು ಘಿಣ್ಯತೋಃ । ಪಾ. ೭-೩-೫೨ । ಇತಿ ಕುತ್ವಂ । ಪ್ರತ್ಯಯಸ್ವರೇಣಾಂತೋದಾತ್ತಃ । ಬಹುಲಂ ಛಂದಸಿ । ಪಾ ೭-೧-೧೦ । ಇತಿ ಭಿಸ ಐಸಾದೇಶೋ ನ ಭವತಿ । ಅರ್ಕಾಃ ಸ್ತುತಿಸಾಧನಭೂತಾ ಮಂತ್ರಾ ಏಷಾಂ ಸಂತೀತ್ಯರ್ಕಿಣಃ । ವಾಣೀಃ । ವೃಷಾದೀನಾಂ ಚ । ಪಾ. ೬-೧-೨೦೩ । ಇತ್ಯಾದ್ಯುದಾತ್ತಃ । ದೀರ್ಘಾಜ್ಜಸಿ ಚ । ಪಾ. ೬-೧-೧೦೫ । ಇತಿ ಪೂರ್ವಸವರ್ಣದೀರ್ಘನಿಷೇಧಸ್ಯ ವಾ ಛಂದಸಿ । ಪಾ. ೬-೧-೧೦೬ । ಇತಿ ವಿಕಲ್ಪಿತತ್ವಾದ್ದೀರ್ಘತ್ವಂ । ತೃತೀಯಾರ್ಥೇ ಪ್ರಥಮಾ । ಅನೂಷತ । ಣು ಸ್ತುತೌ । ಣೋ ನಃ । ಪಾ. ೬-೧-೬೫ । ಇತಿ ನತ್ವಂ । ಲುಙಿ ವ್ಯತ್ಯಯೇನಾತ್ಮನೇಪದಂ । ಝಸ್ಯಾದಾದೇಶಃ । ಪಾ. ೭-೧-೫ । ಸಿಚಿ ಇಡಭಾವ ಉಕಾರಸ್ಯ ದೀರ್ಘತ್ವಂ ಚ ಛಾಂದಸಂ । ಧಾತೋಃ ಕುಟಾದಿತ್ವಾತ್ । ಪಾ. ೧-೨-೧ । ಸಿಚೋ ಙಿತ್ವೇನ । ಪಾ. ೧-೧-೫ । ಗುಣಾಭಾವಃ ॥

॥ ಪ್ರತಿಪದಾರ್ಥ ॥

ಗಾಥಿನಃ--ಗಾನಮಾಡುವವರು ಎಂದರೆ ಉದ್ಗಾತೃವೇ ಮೊದಲಾದ ಸಾಮಗಾಯಕರು । ಇಂದ್ರಮಿತ್—ಇಂದ್ರನನ್ನೇ । ಬೃಹತ್—ಬೃಹತ್ಸಾಮವೆಂಬ ಸಾಮಮಂತ್ರದಿಂದ ಅನೂಷತ—ಸ್ತೋತ್ರಮಾಡುವರು ಎಂದರೆ ಗಾನಮಾಡುವರು ॥ ಅರ್ಕಿಣಃ--ಅರ್ಚನ ಮಂತ್ರವನ್ನು (ಆಹ್ವಾನಮಂತ್ರವನ್ನು) ಪಠಿಸುವ ಹೋತೃ ಮೊದಲಾದ ಋತ್ವಿಜರು । ಇಂದ್ರಂ—ಇಂದ್ರನನ್ನು । ಅರ್ಕೇಭಿಃ—ಋಙ್ಮಂತ್ರಗಳಿಂದ । (ಅನೂಷತ—ಸ್ತೋತ್ರ ಮಾಡುವರು) । (ಅಧ್ವರ್ಯು ಮೊದಲಾದ ಇತರ ಋತ್ವಿಜರು) ಇಂದ್ರಂ—ಇಂದ್ರನನ್ನು । ವಾಣೀಃ—ವಾಕ್ಯ ರೂಪದಿಂದಿರುವ ಯಜುರ್ವೇದ ಮಂತ್ರಗಳಿಂದ । (ಅನೂಷತ—ಸ್ತೋತ್ರಮಾಡುವರು).

॥ ಭಾವಾರ್ಥ ॥

ಯಜ್ಞಮಾಡುವ ಸಮಯದಲ್ಲಿ ಋತ್ವಿಕ್ಕುಗಳು ಇಂದ್ರನನ್ನು ವಿಧವಿಧವಾಗಿ ಸ್ತೋತ್ರಮಾಡುವರು ಎಂದರೆ ಉದ್ಗಾತೃ ಮೊದಲಾದ ಸಾಮಗಾಯಕರು ತಮ್ಮ ಸಾಮವೇದದಲ್ಲಿರುವ ಬೃಹತ್ಸಾಮವೆಂಬ (ಈ ಮಂತ್ರವು

ಋಗ್ವೇದದಲ್ಲಿ ೬-೪೬-೧ ಋಕ್ಕಿನಲ್ಲಿರುವುದು) ಮಂತ್ರದಿಂದ ಗಾನಮಾಡುವರು; ಹೋತೃವರ್ಗದವರು ತಮ್ಮ ಋಗ್ವೇದದ ಶಸ್ತ್ರರೂಪವಾದ ಋಕ್ಕುಗಳಿಂದ ಸ್ತೋತ್ರಮಾಡುವರು; ಅಧ್ವರ್ಯು ಮೊದಲಾದ ಇತರ ಋತ್ವಿಕ್ಕುಗಳು ತಮ್ಮ ವೇದವಾದ ಯಜುರ್ವೇದದ ವಾಕ್ಯರೂಪವಾದ ಮಂತ್ರಗಳಿಂದ ಇಂದ್ರನನ್ನು ಸ್ತೋತ್ರಮಾಡುವರು ಎಂದರೆ ಋತ್ವಿಕ್ಕುಗಳು ಇಂದ್ರನನ್ನು ಋಗ್ಯಜುಸ್ಸಾಮವೆಂಬ ಮೂರು ವಿಧವಾದ ವೇದಮಂತ್ರಗಳಿಂದಲೂ ಸ್ತೋತ್ರಮಾಡುವರು.

## English Translation

The chanters ( of the Sama hymns ) praise only Indra with ( a Saman called ) Brihat; the recetirs of mantras ( Rics ) praise Indra with the Ric-Verses; ( and the remaning priest Adhvaryus ) praise Indra with prose-like Sentences ( of Yajus ).

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಋಗ್ಯಜುಸ್ಸಾಮಗಳೆಂಬ ವೇದಗಳ ಹೆಸರು ನಿರ್ದಿಷ್ಟವಾಗಿ ಸೂಚಿಸಲ್ಪಡದಿದ್ದರೂ ಭಾಷ್ಯಕಾರರು **ಬೃಹತ್, ಅರ್ಕೇಭಿಃ ವಾಣೀಃ** ಎಂಬ ಶಬ್ದಗಳು ಸಾಮವೇದ, ಋಗ್ವೇದ, ಯಜುರ್ವೇದ ಎಂಬ ಮೂರು ವೇದಗಳ ಮಂತ್ರಗಳನ್ನು ಸೂಚಿಸುವುದೆಂದು ಅಭಿಪ್ರಾಯಪಡುವರು. ಪಾಶ್ಚಾತ್ಯಪಂಡಿತರು ಈ ವಾದವನ್ನು ಒಪ್ಪುವುದಿಲ್ಲ. ಅವರು ಋಗ್ವೇದವೇ ಇತರ ವೇದಗಳಿಗಿಂತ ಪ್ರಾಚೀನವಾದುದೆಂತಲೂ ಆದುದರಿಂದ ಋಗ್ವೇದದಲ್ಲಿ ಈಚಿನ ವೇದಗಳಾದ ಯಜುರ್ವೇದ ಸಾಮವೇದಗಳು ಸೂಚಿಸಲ್ಪಡಲು ಕಾರಣವಿಲ್ಲವೆಂತಲೂ ಹೇಳುವರು. ಈ ವಾದವನ್ನು ತಿರಸ್ಕರಿಸಲು ಸಾಧ್ಯವಿಲ್ಲವಾದರೂ ಋಗ್ವೇದದ ಪುರುಷಸೂಕ್ತದಲ್ಲಿ (ಋ. ಸಂ. ೧೦-೯೦-೯) ಯಜುಸ್ಸಾಮಶಬ್ದಗಳು ಸ್ಪಷ್ಟವಾಗಿ ಹೇಳಲ್ಪಟ್ಟಿವೆ. ಇದಲ್ಲದೆ ಸಾಮವೇದದ ಬಹುಭಾಗಮಂತ್ರಗಳು ಋಗ್ವೇದಮಂತ್ರಗಳೇ ಆಗಿರುವುದರಿಂದಲೂ, ಋಗ್ವೇದ ಕಾಲದಲ್ಲಿಯೂ ಋಗ್ವೇದದ ಅನೇಕ ಋಕ್ಕುಗಳನ್ನು ಗಾನರೂಪವಾಗಿ ಪಠಿಸುವುದು ರೂಢಿಯಾಗಿದ್ದುದರಿಂದಲೂ ಇಲ್ಲಿ ಸಾಮಮಂತ್ರವನ್ನು ನಿರ್ದೇಶಿಸಿರುವುದು ಅಸಂಭವವೇನೂ ಅಲ್ಲ. ಮತ್ತು ಯಜುರ್ವೇದವು ಋಗ್ವೇದ ಸಾಮವೇದಗಳಿಗಿಂತ ಈಚಿನದೆಂದು ಎಲ್ಲರೂ ಒಪ್ಪಬೇಕಾದ ವಿಷಯ ಆದರೆ ಈಗಿನ ಯಜುರ್ವೇದವು ಕ್ರಮಪಡಿಸಲ್ಪಟ್ಟಿರುವಂತೆ ಆ ಕಾಲದಲ್ಲಿ ಇಲ್ಲದಿದ್ದರೂ ಅನೇಕ ಯಜುರ್ವೇದ ಮಂತ್ರಗಳು ಮುಖ್ಯವಾಗಿ ಯಜ್ಞದಲ್ಲಿ ಉಪಯೋಗಿಸುವ ಕೆಲವು ವಾಕ್ಯಗಳು ಆಗ ವಿಶೇಷವಾಗಿ ಬಳಕೆಯಲ್ಲಿತ್ತೆಂದು ಧಾರಾಳವಾಗಿ ಹೇಳಬಹುದು. ಅಂತಹ ಅನೇಕ ವಾಕ್ಯಗಳೂ, ಯಜ್ಞಮಾಡುವ ಕ್ರಮ, ವಿಧಾನಗಳೂ ಒಟ್ಟುಗೂಡಿ ಈಗಿರುವ ಯಜುರ್ವೇದವಾಗಿ ರೂಪುಗೊಂಡಿರಬಹುದು. ಇದಲ್ಲದೆ ಋಗ್ವೇದದಲ್ಲಿ ಅನೇಕ ಕಡೆ ಯಜುರ್ವೇದದ ಮುಖ್ಯ ಋತ್ವಿಜನಾದ ಅಧ್ವರ್ಯುವಿನ ಹೆಸರು ಸ್ಪಷ್ಟವಾಗಿ ಉಕ್ತವಾಗಿದೆ. ಮತ್ತು ಈ ಋಕ್ಕಿನಲ್ಲಿ ವಾಣೀಃ ಎಂಬ ಶಬ್ದಪ್ರಯೋಗವಿರುವುದರಿಂದ ಛಂದೋಬದ್ಧವಲ್ಲದ ಯಜುರ್ವೇದ ವಾಕ್ಯಗಳೆಂದು ಊಹಿಸುವುದಕ್ಕೂ ಸಾಕಾದಷ್ಟು ಅವಕಾಶವಿದೆ. ಈ ಕಾರಣಗಳಿಂದ ಭಾಷ್ಯಕಾರರು ಋಗ್ಯಜುಸ್ಸಾಮವೇದಮಂತ್ರಗಳೆಂದು ಅರ್ಥಮಾಡಿರುವ ಅಂಶವನ್ನೂ ತಿರಸ್ಕರಿಸುವಹಾಗಿಲ್ಲ.

**ಗಾಥಿನಃ—ಗಾಥಾ ವಿಷಾಂ ಸಂತೀತಿ ಗಾಥಿನಃ**—ಸಾಮವೇದಮಂತ್ರಗಳಿಗೆ **ಗಾಥಾ** ಎಂದು ಹೇಳುವುದೂ ಉಂಟು. ಈ ಗಾಥೆಗಳನ್ನು ಎಂದರೆ ಸಾಮಮಂತ್ರಗಳನ್ನು ಗಾನಮಾಡುವವರಿಗೆ **ಗಾಥಿನಃ** ಎಂದು ಹೇಳುವರು.

**ಬೃಹತ್**— ಬೃಹತ್ ಎಂದರೆ ದೊಡ್ಡದು ಎಂದು ಈ ಶಬ್ದದ ಸಾಧಾರಣಾರ್ಥವು. ಆದರೆ ಸಾಮವೇದದಲ್ಲಿ ಬೃಹತ್ಸಾಮವೆಂಬ ಯಜ್ಞಗಳಲ್ಲಿ ಗಾನಮಾಡುವ ಮುಖ್ಯವಾದ ಸಾಮಮಂತ್ರವಿರುವುದು ಇದು ಋಗ್ವೇದದಲ್ಲಿ—

**ತ್ವಾಮಿದ್ಧಿ ಹವಾಮಹೇ ಸಾತಾ ವಾಜಸ್ಯ ಕಾರವಃ ।**
**ತ್ವಾಂ ವೃತ್ರೇಷ್ವಿಂದ್ರ ಸತ್ಪತಿಂ ನರಸ್ತ್ವಾಂ ಕಾಷ್ಠಾಸ್ವರ್ವತಃ ॥**
(ಋ. ಸಂ. ೬-೪೬-೧)

ಈ ಮಂತ್ರವು ಸಾಮವೇದದಲ್ಲಿ ೨೩೪; ೮೦೯, ಅಥರ್ವವೇದ ೨೦-೯೮-೧, ವಾಜಸನೇಯಿ ಸಂಹಿತಾ (ಶು. ಯಜುರ್ವೇದ) ೨೭-೩೭, ತೈತ್ತಿರೀಯ ಸಂಹಿತಾ (ಕೃಷ್ಣಯಜುರ್ವೇದ) ೨-೪-೧೪-೩; ಮೈತ್ರಾಯಣೀಯ ಸಂಹಿತಾ ೭-೨-೬ ಮೊದಲಾದ ಸ್ಥಳಗಳಲ್ಲಿ ಪಠಿತವಾಗಿದೆ. ಈ ಬೃಹತ್ಸಾಮವು ಸಾಮವೇದದಲ್ಲಿ ಒಂದು ಮುಖ್ಯ ಮಂತ್ರವಾಗಿದೆ. ಯಜುರ್ವೇದದಲ್ಲಿ ಅನೇಕ ಕಡೆ ಇದರ ವಿವರಣೆ ಇದೆ

**ಅರ್ಕೇಭಿಃ**— ಅರ್ಕೋ ಮಂತ್ರೋ ಭವತಿ ಯದೇನೇನಾರ್ಚಂತಿ (ನಿ. ೫-೪) ಎಂದು ಯಾಸ್ಕರು ನಿರುಕ್ತದಲ್ಲಿ ಅರ್ಕಶಬ್ದದ ಅರ್ಥವನ್ನು ಹೇಳಿರುವರು. **ಅರ್ಚ-ಪೂಜಾಯಾಂ**— ಪೂಜಿಸುವುದರಿಂದ ಇದಕ್ಕೆ ಅರ್ಕಃ= ಮಂತ್ರವು ಎಂದು ಹೆಸರು.

**ಅರ್ಕಿಣಃ— ಅರ್ಕಾಃ ಸ್ತುತಿಸಾಧನಭೂತಾ ಮಂತ್ರಾ ಯೇಷಾಂ ಸಂತೀತ್ಯರ್ಕಿಣಃ**-ಎಂದರೆ ಸ್ತುತಿ ಸಾಧನಭೂತವಾದ ಮಂತ್ರಗಳಿಂದ (ಅರ್ಕಗಳಿಂದ) ಸ್ತೋತ್ರಮಾಡುವವರು.

**ವಾಣೀಃ**— ಶ್ಲೋಕಃ, ಧಾರಾ ಮೊದಲಾದ ಐವತ್ತೇಳು ವಾಙ್ನಾಮಸೂಚಕ ಶಬ್ದಗಳ ಮಧ್ಯದಲ್ಲಿ ವಾಣೀ ಎಂಬ ಶಬ್ದವು ಪಠಿತವಾಗಿದೆ. ( ನಿ. ೨-೨೩) ಇಲ್ಲಿ ವಾಣೀಃ— ಎಂದರೆ ಯಜುರ್ವೇದವಾಕ್ಯಗಳೆಂದು ಭಾಷ್ಯಕಾರರು ಹೇಳಿರುವರು. ಯಜುರ್ವೇದದಲ್ಲಿ ಛಂದೋಬದ್ಧವಾದ ಮಂತ್ರಗಳು ವಿಶೇಷವಾಗಿ ಇಲ್ಲದಿರುವುದ ರಿಂದ ಈ ವೇದದ ಮಂತ್ರಗಳಿಗೆ ವಾಕ್ಯಗಳೆಂದು ಹೇಳುವ ರೂಢಿ ಇರುವುದು. ಈ ಋಕ್ಕಿನಲ್ಲಿ **ವಾಣೀಃ** ಎಂಬ ಪ್ರಥಮಾವಿಭಕ್ತಿಶಬ್ದವು ತೃತೀಯಾವಿಭಕ್ತ್ಯರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದು.

**ಅನೂಷತ**— ಣು ಸ್ತುತೌ ಎಂಬ ಧಾತುವಿನ ಲುಙ್‌ರೂಪವು. ಇದು ಪರಸ್ಮೈಪದಧಾತುವಾದರೂ ವ್ಯತ್ಯಯದಿಂದ ಆತ್ಮನೇಪದಧಾತುವಿನಂತೆ ಉಪಯೋಗಿಸಲ್ಪಟ್ಟಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಗಾಥಿನಃ— ಉಷಿಕುಷಿಗಾರ್ತಿಭ್ಯಸ್ಥನ್** (ಉ. ಸೂ ೨-೧೬೧) ಉಷ ದಾಹೇ, ಕುಷ ನಿಷ್ಕರ್ಷೇ, ಗೈ ಶಬ್ದೇ, ಋ ಗತೌ ಈ ಧಾತುಗಳ ಮುಂದೆ ಥನ್ ಪ್ರತ್ಯಯ ಬರುವುದು ಎಂಬುದರಿಂದ ಗೈ ಧಾತುವಿನ ಮುಂದೆ ಥನ್ ಬರುವುದು. ಗೈ+ಥನ್ **ಆದೇಚ ಉಪದೇಶೇಽಶಿತಿ** (ಪಾ. ಸೂ. ೬-೧-೪೫) ಶಕಾರೇತ್ಸಂಜ್ಞಕಪ್ರತ್ಯ ಯವು ಪರದಲ್ಲಿ ಇಲ್ಲದೇ ಇದ್ದರೆ ಉಪದೇಶದಲ್ಲಿ ಏ ಓ ಐ ಔ ಗಳನ್ನು ಕೊನೆಯಲ್ಲಿ ಹೊಂದಿರುವ ಧಾತುಗಳ ಕೊನೆಯ ವರ್ಣಕ್ಕೆ ಆಕಾರಾದೇಶ ಬರುವುದು ಎಂಬುದರಿಂದ ಗೈನ ಐಕಾರಕ್ಕೆ ಆಕಾರ ಬಂದರೆ ಗಾಥ ನಿತ್ಸ್ವರ ದಿಂದ ಗಾಥ ಎಂಬುದು ಆದ್ಯುದಾತ್ತ. ಗಾಥಾ ಏಷಾಂ ಸನ್ತಿ ಇತಿ ಗಾಥಿನಃ **ವ್ರೀಹ್ಯಾದಿಭ್ಯಶ್ಚ** (ಪಾ. ಸೂ.

೫-೨-೧೧೬) ವ್ರೀಹ್ಯಾದಿಗಣಪಠಿತವಾದ ಶಬ್ದಗಳ ಮುಂದೆ ಮತ್ವರ್ಥದಲ್ಲಿ ಇನಿ-ಠನ್ ಪ್ರತ್ಯಯಗಳು ಬರುವುವು ಎಂಬುದರಿಂದ ಇನಿ ಪ್ರತ್ಯಯ **ಯಸ್ಯೇತಿಚ** (ಪಾ. ಸೂ. ೬-೪- ) ಎಂಬುದರಿಂದ ಅಕಾರಲೋಪ. ಪ್ರತ್ಯಯ ಸ್ವರದಿಂದ ಇಕಾರ ಉದಾತ್ತ, ಸತಿಶಿಷ್ಟಸ್ವರದಿಂದ ಅಕಾರ ಅನುದಾತ್ತ. ಅನುದಾತ್ತವಾದ ಜಸ್ ವಿಭಕ್ತಿಯ ಅಕಾರವು **ಉದಾತ್ತಾದನುದಾತ್ತಸ್ಯಸ್ವರಿತಃ** (ಪಾ. ಸೂ. ೮-೪-೬೬) ಎಂಬುದರಿಂದ ಸ್ವರಿತ.

**ಬೃಹತ್**—ಬೃಹತಾ ಎಂದರ್ಥ. ಬೃಹತ್ ಶಬ್ದದ ಮುಂದೆ ಬಂದ ತೃತೀಯಾ ಏಕವಚನಕ್ಕೆ **ಸುಪಾಂಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಲುಕ್ ಬರುವುದು. **ವರ್ತಮಾನೇ ಪೃಷದ್ಬೃಹನ್ಮಹಜ್ಜಗಚ್ಛತೃವಚ್ಚ** (ಉ. ಸೂ. ೨-೨೪೧) ವರ್ತಮಾನಾರ್ಥದಲ್ಲಿ ಅತಿ ಪ್ರತ್ಯಯಾಂತವಾಗಿ ಇವು ನಿಪಾತಿಸಲ್ಪಡುವುವು. ಶತೃ ಪ್ರತ್ಯಯವಿದ್ದರೆ ಯಾವ ಕಾರ್ಯಗಳು ಬರುವುವೋ ಆ ಕಾರ್ಯಗಳು ಅತಿ ಪ್ರತ್ಯಯವಿರುವಾಗಲೂ ಬರುವುವು ಎಂಬುದರಿಂದ ಬೃಹತ್ ಶಬ್ದವು ಅತಿಪ್ರತ್ಯಯಾಂತವಾಗಿ ನಿಪಾತಿತವಾಗಿರುವುದು. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುವುದು.

**ಅರ್ಕೇಭಿಃ**—ಅರ್ಚ ಪೂಜಾಯಾಂ ಧಾತು. ಅರ್ಚ್ಯಂತೇ ಏಭಿರಿತಿ ಅರ್ಕಾಃ—ಮಂತ್ರಗಳು ಎಂದರ್ಥ. **ಪುಂಸಿಸಂಜ್ಞಾಯಾಂ ಘಃಪ್ರಾಯೇಣ** (ಪಾ ಸೂ. ೩-೩-೧೧೮) ಪುಲ್ಲಿಂಗದಲ್ಲಿ ಧಾತುವಿನ ಮುಂದೆ ಕರಣ ವಾ ಅಧಿಕರಣ ಎಂಬ ಅರ್ಥದಲ್ಲಿ ಸಂಜ್ಞೆ ತೋರುವಾಗ ಪ್ರಾಯಶಃ ಘ ಪ್ರತ್ಯಯ ಬರುವುದು ಎಂಬುದರಿಂದ ಘ ಪ್ರತ್ಯಯ. ಘ್ ಗೆ **ಲಶಕ್ವತದ್ಧಿತೇ** (ಪಾ. ಸೂ. ೧-೩-೮) ಎಂಬುದರಿಂದ ಇತ್ಸಂಜ್ಞೆ ಬಂದು **ತಸ್ಯಲೋಪಃ** (ಪಾ. ಸೂ. ೧-೩-೯) ಎಂಬುದರಿಂದ ಲೋಪ ಅರ್ಚ್+ಅ **ಚಜೋಃಕುಘಿಣ್ಣ್ಯತೋಃ** (ಪಾ. ಸೂ. ೭-೩-೫೨) ಘಕಾರೇತ್ಸಂಜ್ಞಕ ಪ್ರತ್ಯಯ ಪರದಲ್ಲಿರುವಾಗಲೂ ಣ್ಯತ್ ಪ್ರತ್ಯಯ ಪರದಲ್ಲಿರುವಾಗಲೂ ಚಕಾರ ಜಕಾರಗಳಿಗೆ ಕುತ್ವ (ಕವರ್ಗ) ಬರುವುದು ಎಂಬುದರಿಂದ ಚ್ ಗೆ ಕ್ ಬಂದರೆ ಅರ್ಕ ಎಂದಾಗುವುದು. ಇದರ ಮುಂದೆ ತೃತೀಯಾ ಬಹುವಚನ ಭಿಸ್ ಪ್ರತ್ಯಯವನ್ನಿಟ್ಟರೆ **ಅತೋಭಿಸ ಐಸ್** (ಪಾ. ಸೂ. ೭-೧-೯) ಎಂಬುದರಿಂದ ಐಸಾದೇಶ ಪ್ರಾಪ್ತವಾಗುವುದು. ಆದರೂ **ಬಹುಲಂ ಛಂದಸಿ** (ಪಾ. ಸೂ. ೭-೧-೧೦) ಎಂಬುದರಿಂದ ಐಸಾದೇಶ ಬರುವುದಿಲ್ಲ. **ಬಹುವಚನೇಝಲ್ಯೇತ್** (ಪಾ. ಸೂ. ೭-೩-೧೦೩) ಎಂಬುದರಿಂದ ಪ್ರತ್ಯಯದ ಹಿಂದಿನ ಅಕಾರಕ್ಕೆ ಏತ್ವ ಬಂದರೆ ಅರ್ಕೇಭಿಃ ಎಂದಾಗುವುದು.

**ಅರ್ಕಿಣಃ**—ಅರ್ಕಾಃ ಸ್ತುತಿಸಾಧನವಾದ ಮಂತ್ರಗಳು ಏಷಾಂ ಸನ್ತಿ ಎಂದು ವಿಗ್ರಹಮಾಡಿದಾಗ **ಅತಇನಿಠನೌ** (ಪಾ. ಸೂ. ೫-೨-೧೧೫) ಎಂಬುದರಿಂದ ಇನಿ ಪ್ರತ್ಯಯ ಪ್ರಥಮಾಬಹುವಚನದಲ್ಲಿ ಅರ್ಕಿಣಃ ಎಂದಾಗುವುದು.

**ವಾಣೀಃ**—**ವೃಷಾದೀನಾಂ ಚ** (ಪಾ. ಸೂ. ೬-೧-೧೦೩) ಎಂಬುದರಿಂದ ಆದ್ಯುದಾತ್ತ. ವಾಣೀ ಶಬ್ದದ ಮುಂದೆ ಜಸ್ಸನ್ನಿಟ್ಟರೆ ವಾಣೀ+ಅಸ್ ಎಂದಿರುವಾಗ **ಪ್ರಥಮಯೋಃ ಪೂರ್ವಸವರ್ಣಃ** (ಪಾ. ಸೂ. ೬-೧-೧೦೨) ಅಗ್ವರ್ಣದ ಮುಂದೆ ಪ್ರಥಮಾ ದ್ವಿತೀಯಾ ವಿಭಕ್ತಿಗಳಲ್ಲಿರುವ ಅಚ್ ಇದ್ದರೆ ಪೂರ್ವಪರಸ್ಥಾನಗಳಲ್ಲಿ ಪೂರ್ವಸವರ್ಣದೀರ್ಘ ಬರುವುದು ಎಂದು ವಿಹಿತವಾದ ಪೂರ್ವಸವರ್ಣದೀರ್ಘಕ್ಕೆ **ದೀರ್ಘಾಜ್ಜಸಿಚ** (ಪಾ. ಸೂ. ೬-೧-೧೦೫) ದೀರ್ಘದ ಮುಂದೆ ಜಸ್ ಅಥವಾ ಇಚ್ಪ್ರತ್ಯಾಹಾರದ ವರ್ಣಗಳು ಇದ್ದರೆ ಪೂರ್ವಸವರ್ಣದೀರ್ಘ ಬರುವುದಿಲ್ಲ ಎಂಬುದರಿಂದ ನಿಷೇಧವು ಯದ್ಯಪಿ ಬರುವುದು. ಆದರೂ **ವಾಛಂದಸಿ** (ಪಾ. ಸೂ. ೬-೧-೧೦೬) ಛಂದಸ್ಸಿನಲ್ಲಿ ದೀರ್ಘದ ಮುಂದೆ ಜಸ್ಸು ಇಚ್ಚು ಪರದಲ್ಲಿದ್ದರೆ ಪೂರ್ವಸವರ್ಣದೀರ್ಘವು ವಿಕಲ್ಪವಾಗಿ ಬರುವುದಿಲ್ಲ

ಎಂದು ನಿಷೇಧವು ವಿಕಲ್ಪಿತವಾಗಿರುವುದರಿಂದ ನಿಷೇಧವು ಬರದೇ ಇರುವ ಪಕ್ಷದಲ್ಲಿ **ಪ್ರಥಮಯೋಃ ಪೂರ್ವಸವರ್ಣಃ** (ಪಾ. ಸೂ. ೬-೧-೧೦೨) ಎಂಬುದರಿಂದ ಪೂರ್ವಸವರ್ಣದೀರ್ಘ ಬರುವುದು, ವಾಣೀಃ ಎಂದಾಗುವುದು. ತೃತೀಯಾವಿಭಕ್ತಿಯ ಅರ್ಥದಲ್ಲಿ ಪ್ರಥಮಾವಿಭಕ್ತಿ ಬಂದಿರುವುದು.

**ಅನೂಷತ**— ಣು ಸ್ತುತೌ ಧಾತು. **ಣೋನಃ** (ಪಾ. ಸೂ. ೬-೧-೬೫) ಧಾತುವಿನ ಆದಿಯಲ್ಲಿರುವ ಣಕಾರಕ್ಕೆ ನಕಾರ ಬರುವುದು ಎಂಬುದರಿಂದ ಣಕಾರಕ್ಕೆ ನಕಾರ. ನು ಎಂಬುದರ ಮುಂದೆ ಲುಙ್ಞನ್ನು ಇಟ್ಟರೆ ವ್ಯತ್ಯಯದಿಂದ ಆತ್ಮನೇಪದಪ್ರತ್ಯಯ ಬರುವುದು. ಪ್ರಥಮಪುರುಷ ಬಹುವಚನ ಝ ಬಂದರೆ ಅದಕ್ಕೆ **ಆತ್ಮನೇ ಪದೇಷ್ವನತಃ** (ಪಾ. ಸೂ. ೭-೧-೫) ಅಕಾರವನ್ನುಳಿದ ವರ್ಣದ ಮುಂದೆ ಇರುವ ಆತ್ಮನೇ ಪದ ಪ್ರತ್ಯಯಸಂಬಂಧಿಯಾದ ಝ ಗೆ ಅತ್ ಆದೇಶ ಬರುವುದು ಎಂಬುದರಿಂದ ಅತ್ ಆದೇಶ ನು+ಅತ **ಚ್ಲಿ ಲುಙಿ** (ಪಾ. ಸೂ. ೩-೧-೪೩) ಎಂಬುದರಿಂದ ಧಾತುವಿನ ಮುಂದೆ ಚ್ಲಿಯೂ ಅದಕ್ಕೆ **ಚ್ಲೇಃ ಸಿಚ್** (ಪಾ. ಸೂ. ೩-೧-೪೪) ಎಂಬುದರಿಂದ ಸಿಚ್ಚೂ ಬರುವುದು. **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂದು ವಿಹಿತವಾದ ಇಡಾಗಮ ಬರದೇ ಇರುವುದೂ ನು ಎಂಬುದಕ್ಕೆ ದೀರ್ಘಬರುವುದೂ ಛಾಂದಸ. ಣು ಧಾತುವು ಕುಟಾದಿಗಣದಲ್ಲಿರುವುದರಿಂದ **ಗಾಙ್ಕುಟಾದಿಭ್ಯೋಽಞ್ಣಿನ್ಙಿತ್** (ಪಾ. ಸೂ. ೧-೨-೧) ಎಂಬುದರಿಂದ ಸಿಚ್ ಪ್ರತ್ಯಯ ಙಿತ್ತಾಗುವುದು ಆದ್ದರಿಂದ **ಕ್ಙಿತಿಚ** (ಪಾ. ಸೂ. ೧-೧-೫) ಎಂದು ನಿಷೇಧ ಬರುವುದರಿಂದ **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಪ್ರಾಪ್ತವಾಗುವ ಗುಣ ಬರುವುದಿಲ್ಲ ॥ ೧ ॥

॥ ಸಂಹಿತಾಪಾಠಃ ॥

ಇಂದ್ರ ಇದ್ಧರ್ಯೋಃ ಸಚಾ ಸಂಮಿಶ್ಲ ಆ ವಚೋಯುಜಾ ।
ಇಂದ್ರೋ ವಜ್ರೀ ಹಿರಣ್ಯಯಃ ॥ ೨ ॥

॥ ಪದಪಾಠಃ ॥

ಇಂದ್ರಃ । ಇತ್ । ಹರ್ಯೋಃ । ಸಚಾ । ಸಂಽಮಿಶ್ಲಃ । ಆ । ವಚಃಽಯುಜಾ ।
ಇಂದ್ರಃ । ವಜ್ರೀ । ಹಿರಣ್ಯಯಃ ॥ ೨ ॥

॥ ಸಾಯಣಭಾಷ್ಯಂ ॥

ಇಂದ್ರ ಇದಿಂದ್ರ ಏವ ಹರ್ಯೋರ್ಹರಿನಾಮಕಯೋರಶ್ವಯೋಃ ಸಚಾ ಸಹ ಯುಗಪದಾ ಸಂಮಿಶ್ಲಃ ಸರ್ವತಃ ಸಮ್ಯಗ್ಮಿಶ್ರಯಿತಾ । ಕೀದೃಶಯೋರ್ಹರ್ಯೋಃ । ವಚೋಯುಜಾ । ಇಂದ್ರಸ್ಯ ವಚನಮಾತ್ರೇಣ ರಥೇ ಯುಜ್ಯಮಾನಯೋಃ ಸುಶಿಕ್ಷಿತಯೋರಿತ್ಯರ್ಥಃ । ಅಯಮಿಂದ್ರೋ ವಜ್ರೀ ವಜ್ರ-

ಯುಕ್ತೋ ಹಿರಣ್ಯಯೋ ಹಿರಣ್ಯಮಯಃ । ಸರ್ವಾಭರಣಭೂಷಿತ ಇತ್ಯರ್ಥಃ ॥ ಹರ್ಯೋಃ । ಹರತ ಇತಿ ಹರೀ । ಇನ್ । ನಿತ್ತ್ವಾದಾದ್ಯುದಾತ್ತಃ । ಸಚಾ ಸಹೇತ್ಯುಕ್ತಂ । ನಿ. ೫-೫ । ಸಂಮಿಶ್ಲಃ । ಮಿಶ್ರಣಂ ಮಿಶ್ರಃ । ಮಿಶ್ರಯತೇರ್ಘಞ್ । ಪಾ. ೩-೩-೧೮ । ಸಮ್ಯಕ್ ಮಿಶ್ರೋ ಯಸ್ಯಾಸೌ ಸಂಮಿಶ್ರಃ । ಲತ್ವಂ ಛಾಂದಸಂ । ಸಮ್ಯಕ್ ಮಿಶ್ರಯಿತೇತ್ಯರ್ಥಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ವಚೋಯುಜಾ । ವಚಸಾ ಯುಜ್ಯೇತೇ ಇತಿ ವಚೋಯುಜೌ । ತಯೋಃ । ಷಷ್ಠೀದ್ವಿವಚನಸ್ಯ ಸುಪಾಂ ಸುಲುಗಿತ್ಯಾಕಾರಾದೇಶಃ । ಯುಜ್‌ಶಬ್ದೋ ಧಾತುಸ್ವರೇಣಾಂತೋದಾತ್ತಃ । ಕೃದುತ್ತರಪದಪ್ರಕೃತಿಸ್ವರೇಣ ಸ ಏವ ಶಿಷ್ಯತೇ । ವಜ್ರೀ । ವಜ್ರಮಸ್ಯಾಸ್ತಿ । ಅತ ಇನಿಠನೌ । ಪಾ. ೫. ೨-೧೧೫ । ಪ್ರತ್ಯಯಸ್ವರಃ । ಹಿರಣ್ಯಯಃ । ಋತ್ವ್ಯವಾಸ್ತ್ವ್ಯವಾಸ್ತ್ವಮಾಧ್ವೀಹಿರಣ್ಯಯಾನಿ ಛಂದಸಿ । ಪಾ. ೬-೪-೧೭೫ । ಇತಿ ಹಿರಣ್ಯಮಯಶಬ್ದಸ್ಯ ಮಕಾರಲೋಪೋ ನಿಪಾತ್ಯತೇ । ಅಕಾರಃ ಪ್ರತ್ಯಯಸ್ವರೇಣೋದಾತ್ತಃ । ಪೂರ್ವೇಣಾನುದಾತ್ತೇನ ಸಹೈಕಾದೇಶ ಉದಾತ್ತೇನೋದಾತ್ತ ಇತ್ಯುದಾತ್ತಃ ॥

॥ ಪ್ರತಿಪದಾರ್ಥ ॥

**ಸಂಮಿಶ್ಲಃ**—ಎಲ್ಲವನ್ನೂ ಚೆನ್ನಾಗಿ ಮಿಶ್ರವಮಾಡುವ । **ಇಂದ್ರ ಇತ್**-ಇಂದ್ರನೇ । **ವಚೋಯುಜಾ**-ಇಂದ್ರನ ವಚನಮಾತ್ರದಿಂದ ರಥದಲ್ಲಿ ಕಟ್ಟಲ್ಪಡುವ । **ಹರ್ಯೋಃ**—ಹರೀ ಎಂಬ (ಇಂದ್ರನ) ಕುದುರೆಗಳಿಂದ । **ಸಚಾ**—ಸಹಿತವಾಗಿ । **ಆ (ಯಾತಿ)**—ಇಲ್ಲಿಗೆ ಬರುವನು ; । **ಇಂದ್ರಃ**—ಇಂದ್ರನು । **ವಜ್ರೀ**—ವಜ್ರಾಯುಧವನ್ನು ಧರಿಸಿರುವವನು , । **ಹಿರಣ್ಯಯಃ**—ಹಿರಣ್ಮಯನು ಎಂದರೆ ಸುವರ್ಣಾಭರಣಭೂಷಿತನು.

॥ ಭಾವಾರ್ಥ ॥

ಎಲ್ಲವನ್ನೂ ಮಿಶ್ರಮಾಡುವ ಇಂದ್ರನು ಇಲ್ಲಿಗೆ ಬರುತ್ತಿರುವನು. ಅವನ ವಚನ ಮಾತ್ರದಿಂದ ಕುದುರೆಗಳು ರಥಕ್ಕೆ ಕಟ್ಟಲ್ಪಡುವವು. ಇಂತಹ ಕುದುರೆಗಳು ಕಟ್ಟಿದ (ರಥದಲ್ಲಿ ಕುಳಿತು) ಇಲ್ಲಿಗೆ ಬರುವನು. ಆ ಇಂದ್ರನು ಚಿನ್ನದ ಆಭರಣಗಳಿಂದ ಅಲಂಕೃತನಾಗಿ ವಜ್ರಾಯುಧವನ್ನು ಧರಿಸಿರುವನು.

## English Translation.

Indra, the good mixer of all things comes verily with his horses that are harnessed at his word ; Indra, the richly-decorated (with gold), the wielder of the thunderbolt.

॥ ವಿಶೇಷವಿಷಯಗಳು ॥

**ಸಚಾ**—ಸಹ, ಕೂಡಿ, ಸಹಿತವಾಗಿ.

**ಸಂಮಿಶ್ಲಃ**—ಈ ಶಬ್ದಕ್ಕೆ ಭಾಷ್ಯಕಾರರು—**ಸಂಮಿಶ್ಲಃ ಸರ್ವತಃ ಸಮ್ಯಗ್ಮಿಶ್ರಯಿತಾ**—ಚೆನ್ನಾಗಿ ಮಿಶ್ರಮಾಡುವವನು ಎಂದು ಅರ್ಥಮಾಡಿರುವರು. ಇದನ್ನನುಸರಿಸಿ Wilson ಮೊದಲಾದ **ಪಾಶ್ಚಾತ್ಯ ಪಂಡಿ**

ತರು ಈ ಶಬ್ದಕ್ಕೆ Blender, mixer, mixing oneself very much with, attached to, ಮೊದಲಾದ ಅರ್ಥವಿವರಣೆಯನ್ನು ಕೊಟ್ಟಿರುವರು. ಈ ಶಬ್ದಕ್ಕೆ ಅವಯವಾರ್ಥವು—**ಸಂಮಿಶ್ಲಃ । ಮಿಶ್ರಣಂ ಮಿಶ್ರಃ । ಮಿಶ್ರಯತೇರ್ಘಞ್ । ಪಾ. ಸೂ. ೩-೩-೧೮ । ಸಮ್ಯಕ್ ಮಿಶ್ರೋ ಯಸ್ಯಾಸೌ ಸಂಮಿಶ್ರಃ । ಲತ್ವಂ ಛಾಂದಸಂ । ಸಮ್ಯಕ್ ಮಿಶ್ರಯಿತೇತ್ಯರ್ಥಃ** ॥ ಎಂದಿರುವುದು. ಈ ವಿಧವಾದ ಅರ್ಥವು ಈ ಶಬ್ದಕ್ಕೆ ಸರಿಯಾಗಿರುವುದಾದರೂ ಈ ಋಕ್ಕಿನಲ್ಲಿ ಸಂಮಿಶ್ಲಶಬ್ದಕ್ಕೆ ಈ ಅರ್ಥವು ಹೊಂದುವುದಿಲ್ಲ. **ಸಂಮಿಶ್ಲಃ** ಎಂದರೆ ಸಂಯುಕ್ತಃ ಅಥವಾ ಸಹಿತಃ ಎಂದು ಅರ್ಥಮಾಡಿದರೆ ಸರಿಹೋಗುವುದು. ಭಾಷ್ಯಕಾರರೂ

**ವಿಶ್ವೇ ದೇವಾಸೋ ರಯಿಭಿಃ ಸಮೋಕಸಃ ಸಂಮಿಶ್ಲಾಸಸ್ತವಿಷೀಭಿರ್ವಿರಪ್ಶಿನಃ ॥**

(ಋ. ಸಂ. ೧-೬೪-೧೦)

ಎಂಬ ಋಕ್ಕಿನಲ್ಲಿರುವ **ಸಂಮಿಶ್ಲಾಸಃ** ಎಂಬ ಪದಕ್ಕೆ ಸಂಮಿಶ್ರಾಃ ಸಂಯುಕ್ತಾ ಇತ್ಯರ್ಥಃ ಎಂದು ವಿವರಿಸಿರುವರು. ಈ ಶಬ್ದವಿರುವ ಋಕ್ಕುಗಳನ್ನು ಉದಾಹರಣೆಗಾಗಿ ಇಲ್ಲಿ ಕೊಡಲಾಗುವುದು.

**ಯಃ ಸಂಮಿಶ್ಲೋ ಹರ್ಯೋರ್ಯಃ ಸುತೇ ಸಚಾ ವಜ್ರೀ ರಥೋ ಹಿರಣ್ಯಯಃ ॥**

(ಋ. ಸಂ. ೮-೩೩-೪)

ಈ ಋಕ್ಕಿನಲ್ಲಿಯೂ ಪ್ರಸಕ್ತವಾದ ಋಕ್ಕಿನ ಪದಗಳೂ ಅರ್ಥವೂ ವಿಶೇಷ ವ್ಯತ್ಯಾಸವಿಲ್ಲದೆ ಇರುವವು.

**ಪ್ರಭಂಗೀ ಶೂರೋ ಮಘವಾ ತುವೀಮಘಃ ಸಂಮಿಶ್ಲೋ ವೀರ್ಯಾಯ ಕಂ ॥**

**(ಋ. ಸಂ. ೮-೬೧-೧೮)**

**ಸಂಮಿಶ್ಲೋ ಅರುಷೋ ಭವ ಸೂಪಸ್ಥಾಭಿರ್ನ ಧೇನುಭಿಃ ॥**

**(ಋ. ಸಂ. ೯-೬೧-೨೧)**

**ಮಂದ್ರೋ ಹೋತಾ ಸ ಜುಹ್ವಾ ಯಜಿಷ್ಠಃ ಸಂಮಿಶ್ಲೋ ಅಗ್ನಿರಾ ಜಿಘರ್ತಿ ದೇವಾನ್ ॥**

**(ಋ. ಸಂ. ೧೦-೬-೪)**

**ಮಂದ್ರಾಃ ಸುಜಿಹ್ವಾಃ ಸ್ವರಿತಾರ ಆಸಭಿಃ ಸಂಮಿಶ್ಲಾ ಇಂದ್ರೇ ಮರುತಃ ಪರಿಷ್ಟುಭಃ ॥**

**(ಋ. ಸಂ. ೧-೧೬೬-೧೧)**

**ಯಜ್ಞೈಃ ಸಂಮಿಶ್ಲಾಃ ಪೃಷತೀಭಿರ್ಋಷ್ಟಿಭಿರ್ಯಾಮಞ್ಛುಭ್ರಾಸೋ ಅಂಜಿಷು ಪ್ರಿಯಾ ಉತ ॥**

**(ಋ. ಸಂ. ೨-೩೬-೨)**

**ಪ್ರ ಯಂತು ವಾಜಾಸ್ತವಿಷೀಭಿರಗ್ನಯಃ ಶುಭೇ ಸಂಮಿಶ್ಲಾಃ ಪೃಷತೀರಯುಕ್ಷತ ॥**

**(ಋ. ಸಂ. ೩-೨೬-೪)**

**ಯಾಮಂ ಯೇಷ್ಠಾಃ ಶುಭಾ ಶೋಭಿಷ್ಠಾಃ ಶ್ರಿಯಾ ಸಂಮಿಶ್ಲಾ ಓಜೋಭಿರುಗ್ರಾಃ ॥**

**(ಋ. ಸಂ. ೭-೫೬-೬ (೩) )**

ಈ ಋಕ್ಕುಗಳಲ್ಲೆಲ್ಲಾ ಇರುವ ಸಂಮಿಶ್ಲಶಬ್ದಕ್ಕೆ ಯುಕ್ತ, ಸಹಿತ ಎಂಬ ಅರ್ಥವೇ ಸರಿಯಾಗಿ ಹೊಂದುವುದು. ಈ ಶಬ್ದವು ಮೇಲೆ ಹೇಳಿದ ಋಕ್ಕುಗಳಲ್ಲಲ್ಲದೆ ಋಗ್ವೇದದಲ್ಲಿ ಮತ್ತೆಲ್ಲಿಯೂ ಇಲ್ಲ.

**ವಚೋಯುಜಾ—ಇಂದ್ರಸ್ಯ ವಚನಮಾತ್ರೇಣ ರಥೇ ಯುಜ್ಯಮಾನಯೋಃ ಸುಶಿಕ್ಷಿತಯೋರಿತ್ಯರ್ಥಃ** ॥ ಎಂದರೆ ಇಂದ್ರನು ಮಾತನಾಡಿದ ಮಾತ್ರಕ್ಕೆ ರಥಕ್ಕೆ ಕಟ್ಟಲ್ಪಡುವುದಕ್ಕೆ ಸಿದ್ಧವಾಗಿ ಬರುವವು

ಎಂದರೆ ಚೆನ್ನಾಗಿ ಪಳಗಿದ ಕುದುರೆಗಳೆಂದರ್ಥವು. ಕೆಲವು ಪಾಶ್ಚಾತ್ಯಪಂಡಿತರು ಈ ಶಬ್ದಕ್ಕೆ horses which harness themselves ಎಂದು ಅರ್ಥಮಾಡಿರುವರು. ಆದರೆ ಕುದುರೆಗಳು ತಾವೇ ಹೇಗೆ ಸಾರಥಿಮೊದಲಾದವರ ಸಹಾಯವಿಲ್ಲದೆ ರಥಕ್ಕೆ ಕಟ್ಟಿಕೊಳ್ಳುವವು ? ಇದು ಸಾಧ್ಯವೇ ಎಂದು ವಿಚಾರಮಾಡಿಲ್ಲ. ಆದುದರಿಂದ ಭಾಷ್ಯಕಾರರು ಮಾಡಿರುವ-ಇಂದ್ರನ ಮಾನಂತೆ, ಅಥವಾ ಆಜ್ಞೆಯಂತೆ (ರಥಕ್ಕೆ) ಕಟ್ಟಲ್ಪಟ್ಟಿರುವ ಎಂಬ ಅರ್ಥವೇ ಯುಕ್ತವಾಗಿರುವುದು.

**ವಜ್ರೀ**—ವಜ್ರಮಸ್ಯಾಸ್ತೀತಿ **ವಜ್ರೀ**—ವಜ್ರಾಯುಧವನ್ನು ಧರಿಸಿರುವವನು ಇಂದ್ರನ ಆಯುಧವು ವಜ್ರಾಯುಧ (Thunderbolt) ಎಂದು ಪ್ರಸಿದ್ಧವಾಗಿರುವುದು. ಋಗ್ವೇದದಲ್ಲಿ ಅನೇಕಕಡೆ ಇದರ ವಿಷಯವು ಪ್ರಸ್ತಾಪಿಸಲ್ಪಟ್ಟಿದೆ.—

**ಮಹ್ಯಂ ತ್ವಷ್ಟಾ ವಜ್ರಮತಕ್ಷದಾಯಸಂ ಮಯಿ ದೇವಾಸೋಽವೃಜನ್ನಪಿ ಕ್ರತುಂ ॥**

**( ಋ. ಸಂ. ೧೦-೪೮-೩)**

ಈ ಋಕ್ಕಿನಲ್ಲಿ "ದೇವಶಿಲ್ಪಿಯಾದ ತ್ವಷ್ಟೃವು ನನಗೆ ಕಬ್ಬಿಣದಿಂದ ವಜ್ರಾಯುಧವನ್ನು ಮಾಡಿಕೊಟ್ಟನು" ಎಂದು ಇಂದ್ರನೇ ಹೇಳಿದಾನೆ-

**ಹಿರಣ್ಯಯಃ**—**ಹಿರಣ್ಮಯಃ**—ಸುವರ್ಣಮಯ ಎಂದರೆ ಸುವರ್ಣಾಭರಣಗಳಿಂದ ಅಲಂಕೃತನಾದ ಎಂದು ಹಿರಣ್ಮಯಶಬ್ದಕ್ಕೆ ಬದಲಾಗಿ ಹಿರಣ್ಯಯ ಎಂಬ ಶಬ್ದವೇ ಆಗ ರೂಢಿಯಲ್ಲಿತ್ತೆಂದು ಹೇಳಬಹುದು.— **ಹಿರಣ್ಯಯೇನ ಸವಿತಾ ರಥೇನ** ಮೊದಲಾದ ಹಿರಣ್ಯಯಶಬ್ದಗಳಿಂದ ಸಹಿತವಾದ ಋಕ್ಕುಗಳು ಬೇಕಾದಷ್ಟಿವೆ.

ವ್ಯಾಕರಣಪ್ರಕ್ರಿಯಾ

**ಹರ್ಯೋಃ**—ಹರತಃ ರಥಮಿತಿ ಹರೀ ತಯೋಃ । **ಹೃಪಿಷಿರುಹಿವೃತಿವಿದಿಛಿದಿಕೀರ್ತಿಭ್ಯಶ್ಚ** (ಉ ಸೂ. ೪-೫೧೮) ಎಂಬುದರಿಂದ ಹೃಧಾತುವಿನ ಮುಂದೆ ಇನ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ ೭-೩-೮೪) ಎಂಬುದರಿಂದ ಬರುವ ಗುಣ **ಉರಣ್ರಪರಃ** (ಪಾ ಸೂ. ೧-೧-೫೧) ಎಂಬ ಶಾಸ್ತ್ರ ಪರ್ಯಾಲೋಚನೆಯಿಂದ ರ ಪರವಾಗಿ ಬರುವುದು.

**ಸಚಾ-ಸಹ**—(ನಿರುಕ್ತ ೫-೫) ಎಂದು ಯಾಸ್ಕರು ಪಠಿಸಿರುವುದರಿಂದ ಸಚಾ ಎಂಬುದಕ್ಕೆ ಸಹ-ಒಂದೇ ಕಾಲದಲ್ಲಿ ಎಂದು ಅರ್ಥವು.

**ಸಂ ಮಿಶ್ಲಃ**—**ಮಿಶ್ರಸಂಪರ್ಕೇ** ಎಂಬುದು ಚುರಾದಿ (೧೦ನೇ ಗಣದ) ಧಾತು, ಆದ್ದರಿಂದ-**ಚುರಾದಿಭ್ಯೋಣಿಚ್** (ಪಾ. ಸೂ. ೩-೧-೨೫) ಎಂಬುದರಿಂದ ಣಿಚ್ ಬರುವುದು. ಅದರ ಮುಂದೆ **ಭಾವೇ** (ಪಾ. ಸೂ. ೩-೩-೧೮) ಸಿದ್ಧಾವಸ್ಥಾಪನ್ನ, ಸಾಧ್ಯಾವಸ್ಥಾಪನ್ನ ಎಂದು ಧಾತ್ವರ್ಥವು ಇಬ್ಬಗೆಯಾಗಿರುವುದು ಪಚತಿ ಇತ್ಯಾದಿ ಸ್ಥಳಗಳಲ್ಲಿ ಸಾಧ್ಯಾವಸ್ಥಾಪನ್ನಾರ್ಥಕ್ಕೆ ಪ್ರತೀತಿ ಇರುವುದು ಸಿದ್ಧಾವಸ್ಥಾಪನ್ನವಾದ ಧಾತ್ವರ್ಥಕ್ಕೆ ಭಾವ ಎಂದು ಹೆಸರು, ಇಂತಹ ಭಾವಾರ್ಥದಲ್ಲಿ, ಧಾತುವಿನ ಮುಂದೆ ಘಞ್ ಪ್ರತ್ಯಯ ಬರುವುದು ಎಂಬುದರಿಂದ ಘಞ್ ಬಂದರೆ **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿ ಲೋಪ ಮಿಶ್ರ ಎಂದಿರುವುದು ಸಂ ಉಪಸರ್ಗದೊಂದಿಗೆ ಸಮ್ಯಕ್ ಮಿಶ್ರಣಂ ಯಸ್ಯ ಸಃ ಸಂಮಿಶ್ರಃ ಎಂದು ಬಹುವ್ರೀಹಿ ಸಮಾಸ. ರೇಫಕ್ಕೆ ಲಕಾರವು ಛಾಂದಸ

ವಾಗಿ ಬರುವುದು. ಸಂಮಿಶ್ಲಃ ಎಂಬುದಕ್ಕೆ ಸಂಮಿಶ್ರಯಿತಾ ಎಂದು ಅರ್ಥ, **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುವುದು.

**ವಚೋಯುಜಾ, ವಚಸಾ ಯುಜ್ಯೇತೇ ಇತಿ ವಚೋಯುಜಾ,** (ಇಂದ್ರನ ವಚನಮಾತ್ರದಿಂದ ಎಳೆಯುವದಕ್ಕಾಗಿ ರಥದಲ್ಲಿ ತಾವಾಗಿಯೇ ಸೇರಿಕೊಳ್ಳತಕ್ಕವು) **ತಯೋಃ,** ಷಷ್ಠೀವಿಭಕ್ತಿ ದ್ವಿವಚನಕ್ಕೆ **ಸುಪಾಂಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಆಕಾರಾದೇಶ ಯುಜ್ ಎಂಬುದು **ಧಾತೋಃ** (ಪಾ. ಸೂ) ೬-೧-೧೬೨) ಧಾತುವಿನ ಕೊನೆಯ ವರ್ಣವು ಉದಾತ್ತವಾಗುವುದು ಎಂಬುದರಿಂದ ಉದಾತ್ತ. ಸನಾಪಾನಂತರ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂದು ವಿಹಿತವಾದ ಕೃದುತ್ತರಪದಪ್ರಕೃತಿಸ್ವರದಿಂದ ಆದೇ ಸ್ವರವೇ ನಿಲ್ಲುವುದು. **ವಜ್ರೀ**-ವಜ್ರಮಸ್ಯಾಸ್ತೀತಿ. ವಜ್ರೀ **ಅತ ಇನಿಠನೌ** (ಪಾ. ಸೂ. ೫-೨-೧೧೫. ಹ್ರಸ್ವಾಕಾರಾಂತವಾದ ಪ್ರಾತಿಪದಿಕದ ಮುಂದೆ ಮತ್ವರ್ಥದಲ್ಲಿ ಇನಿ-ಠನ್ ಎಂಬ ಪ್ರತ್ಯಯಗಳು ಬರುವುವು, ಎಂಬುದರಿಂದ ವಜ್ರ ಶಬ್ದದ ಮುಂದೆ ಇನಿ ಪ್ರತ್ಯಯ. **ಯಸ್ಯೇತಿಚ** (ಪಾ ಸೂ ೬-೪-೧೪೮) ಈಕಾರ ಅಥವಾ ತದ್ಧಿತಪರವಾಗಿರುವಾಗ ಭಸಂಜ್ಞಕಾಂಗಾವಯವವಾದ ಇವರ್ಣ ಅವರ್ಣಗಳಿಗೆ ಲೋಪಬರುವುದು ಎಂಬುದರಿಂದ ಪ್ರತ್ಯಯದ ಹಿಂದಿರುವ ಅಕಾರಕ್ಕೆ ಲೋಪ, ಪ್ರಥಮಾ ವಿಭಕ್ತಿ ಏಕವಚನ ಸು ಪ್ರತ್ಯಯವನ್ನಿಟ್ಟರೆ, **ಸರ್ವನಾಮಸ್ಥಾನೇಚಾಸಂಬುದ್ಧೌ** (ಪಾ. ಸೂ. ೬-೪-೮) ಸಂಬುದ್ಧಿ ಭಿನ್ನವಾದ ಸರ್ವನಾಮಸ್ಥಾನ ಪ್ರತ್ಯಯ ಪರದಲ್ಲಿರುವಾಗ ನಾಂತವಾದ ಅಂಗದ ಉಪಾಂತ್ಯ ವರ್ಣಕ್ಕೆ ದೀರ್ಘಬರುವುದು ಎಂಬುದರಿಂದ ದೀರ್ಘ ಬರುವುದು. ವಜ್ರೀನ್+ಸು ಈಗ **ಹಲ್ಙ್ಯಾಭ್ಯೋ ದೀರ್ಘಾತ್ಸುತಿಸ್ಯಪೃಕ್ತಂಹಲ್** (ಪಾ ಸೂ. ೬-೧-೬೮) ವ್ಯಂಜನಾಂತವಾದ ಶಬ್ದದ ಮುಂದೆ ಇರತಕ್ಕದ್ದೂ, ದೀರ್ಘವಾದ ಙೀ, ಆಪ್ ಪ್ರತ್ಯಯಗಳನ್ನು ಕೊನೆಯಲ್ಲಿ ಹೊಂದಿರುವ ಶಬ್ದದ ಮುಂದೆ ಇರತಕ್ಕದ್ದೂ ಆದ ಸುತಿಸಿರೂಪವಾದ ಅಪೃಕ್ತ ವ್ಯಂಜನಕ್ಕೆ ಲೋಪಬರುವುದು. **ಅಪೃಕ್ತ ಏಕಾಲ್ ಪ್ರತ್ಯಯಃ** (ಪಾ ಸೂ. ೧-೨-೪೧) ಒಂದೇ ಒಂದು ವರ್ಣರೂಪವಾದ ಪ್ರತ್ಯಯಕ್ಕೆ ಅಪೃಕ್ತ ಎಂದು ಹೆಸರು (ಏಕಶ್ಚಾಸೌ ಅಲ್ ಚ ಏಕಾಲ್ ಎಂದು ಕರ್ಮಧಾರಯಸಮಾಸ) ಸು ಎಂಬುದರ ಉಕಾರಕ್ಕೆ ಲೋಪಾನಂತರ ಅದು ಅಪೃಕ್ತವಾಗುವುದು. ಭೂತಪೂರ್ವಗತಿಯಿಂದ ಸುರೂಪವೂ ಆಗಿರುವುದು. ಅದು ವಜ್ರೀನ್ ಎಂಬ ವ್ಯಂಜನಾಂತ ಶಬ್ದದ ಮುಂದೆ ಇರುವುದು. ಆದ್ದರಿಂದ ಅದಕ್ಕೆ ಲೋಪ ಬರುವುದು **ನ ಲೋಪಃ ಪ್ರಾತಿಪದಿಕಾಂತಸ್ಯ** (ಪಾ ಸೂ. ೮-೨-೭) ಎಂಬುದರಿಂದ ನಕಾರಕ್ಕೆ ಲೋಪ ವಜ್ರೀ ಎಂದಾಗುವುದು, ಪ್ರತ್ಯಯಸ್ವರ ಬರುವುದು.

**ಹಿರಣ್ಯಯಃ**— ಹರಗತಿಕಾಂತ್ಯೋಃ ಧಾತು. ಇದರ ಮುಂದೆ ಹರ್ಯತೇಃ ಕನ್ಯನ್ ಹಿರಚ್ (ಉ. ಸು. ೫-೭೨೨) ಹರ್ಯಧಾತುವಿನ ಮುಂದೆ ಕನ್ಯನ್ ಪ್ರತ್ಯಯ ಬರುವುದು. 'ಹರ್ಯ' ಎಂಬುದಕ್ಕೆ 'ಹಿರಚ್' ಎಂಬ ಆದೇಶಬರುವುದು ಕನ್ಯನ್ ಪ್ರತ್ಯಯವು ನಿತ್ತು ಆದ್ದರಿಂದ ನಿತ್ಸ್ವರ ಆದ್ಯುದಾತ್ತ ಬಂದರೆ ಶೇಷನಿಘಾತದಿಂದ ಕೊನೆಯ ಎರಡು ಅಕಾರಗಳೂ ಅನುದಾತ್ತಗಳು. **ಹಿರಣ್ಯಪಾಣಿಮೂತಯೇ** (ಋ. ಸಂ. ೧-೧೬-೫) ಎಂಬಲ್ಲಿ **ನಬ್ವಿಷಯಸ್ಯಾನಿಸಂತಸ್ಯ** (ಫಿ. ಸೂ.) ಎಂಬುದರಿಂದ ಹಿರಣ್ಯ ಶಬ್ದವು ಆದ್ಯುದಾತ್ತವೆಂದು ನಿರೂಪಿತವಾಗಿದೆ. ಹಿರಣ್ಯಸ್ಯ ವಿಕಾರಃ ಎಂಬ ಅರ್ಥದಲ್ಲಿ **ಮಯಡ್ವೈತಯೋರ್ಭಾಷಾಯಾಮ ಭಕ್ಷ್ಯಾಚ್ಛಾದನಯೋಃ** (ಪಾ ಸೂ. ೪-೩-೪೩) ಭಕ್ಷ್ಯ ಆಚ್ಛಾದನ ಎಂಬ ಅರ್ಥತೋರದೇ ಇರುವಾಗ ಎಲ್ಲಾ ಪ್ರಕೃತಿಗಳ ಮುಂದೆಯೂ ವಿಕಾರ, ಅವಯವ ಎಂಬ ಅರ್ಥಗಳಲ್ಲಿ ಮಯಟ್ ಪ್ರತ್ಯಯ ಬರುವುದು ಎಂಬುದರಿಂದ ಮಯಟ್ ಪ್ರತ್ಯಯ ಬರುವುದು ಹಿರಣ್ಮಯ ಎಂದಿದ್ದರ **ಋತ್ವ್ಯವಾಸ್ತ್ವ್ಯವಾಸ್ತ್ವಮಾಧ್ವೀಹಿರಣ್ಯಯಾನಿ ಛಂದಸಿ** (ಪಾ. ಸೂ. ೬-೪-೧೭೫) ಋತು ಶಬ್ದದ ಮುಂದೆ ಯತ್ ಪ್ರತ್ಯಯವಿರುವಾಗ ಮತ್ತು ವಾಸ್ತು ಶಬ್ದದ ಮುಂದೆ ಯತ್ ಪ್ರತ್ಯಯ

**ಅಕ್** ಪ್ರತ್ಯಯಗಳಿರುವಾಗ ಯಣಾದೇಶವೂ, ಮಧು ಶಬ್ದದ ಮುಂದೆ ಅಕ್ ಪ್ರತ್ಯಯ ಬಂದರೆ ಸ್ತ್ರೀಲಿಂಗದಲ್ಲಿ ಯಣಾದೇಶವೂ ಹಿರಣ್ಯಶಬ್ದದ ಮುಂದಿರುವ ಮಯಟ್ಟಿನ ಮ ಶಬ್ದಕ್ಕೆ ಲೋಪವೂ ಸಹ ನಿಪಾತಿಸಲ್ಪಡುವುದು ಎಂಬುದರಿಂದ ಮ ಶಬ್ದಕ್ಕೆ ಲೋಪಬರುವುದು, ಹಿರಣ್ಯಯ ಎಂದಾಗುವುದು. ಪ್ರತ್ಯಯಸ್ವರ ಬರಬೇಕಾಗುವುದು ಮಕಾರಕ್ಕೆ ಲೋಪ ನಿಪಾತಿತವಾಗುವುದು ಎಂದು ವ್ಯಾಖ್ಯಾನ ಮಾಡಿದರೆ, ಹಿರಣ್ಯ+ಅಯ ಎಂದಿರುವಾಗ **ಅತೋ ಗುಣೇ** (ಪಾ. ಸೂ ೬-೧-೯೭) ಎಂಬುದರಿಂದ ಪರರೂಪವು ಏಕಾದೇಶವಾಗಿ ಬರುವುದು. ಅಯ ಎಂಬಲ್ಲಿಯ ಆದಿಯ ಅಕಾರವು ಪ್ರತ್ಯಯ ಸ್ವರದಿಂದ ಉದಾತ್ತ, ಶೇಷ ನಿಘಾತದಿಂದ ಹಿರಣ್ಯ ಶಬ್ದದ ಕೊನೆಯ ಅಕಾರವು ಅನುದಾತ್ತ. ಇವೆರಡಕ್ಕೂ ಬಂದ ಏಕಾದೇಶವು **ಏಕಾದೇಶ ಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಎಂಬುದರಿಂದ ಉದಾತ್ತ, ಏವಂಚ ಹಿರಣ್ಯಯಃ, ಎಂಬಲ್ಲಿ ಹಿ, ರ, ಎರಡೂ ಅನುದಾತ್ತ, ಣ್ಯ ಉದಾತ್ತ, ಯಃ **ಉದಾತ್ತಾದನುದಾತ್ತಸ್ಯ ಸ್ವರಿತಃ** (ಪಾ. ಸೂ ೮-೪-೬೬) ಎಂಬುದರಿಂದ ಸ್ವರಿತ ಎಂದು ಮಾಧವಾಚಾರ್ಯರು ಉಪಪಾದಿಸಿರುವರು.

ಮಕಾರ ಲೋಪಪಕ್ಷದಲ್ಲಿ **ಯಸ್ಯೇತಿ ಚ** (ಪಾ. ಸೂ. ೬-೪-೧೪೮) ಎಂಬುದರಿಂದ ಹಿರಣ್ಯಶಬ್ದದ ಅಕಾರಕ್ಕೆ ಲೋಪಬರುವುದು. ಪ್ರತ್ಯಯದ ಅಕಾರಕ್ಕೆ ಶ್ರವಣ ಬರುವುದು ವಿವಕ್ಷಿತ ಸ್ವರವೂ ಸಿದ್ಧಿಸುವುದು ಎಂದು ಕೆಲವರ ಮತ.

ಮ ಶಬ್ದಕ್ಕೆ ಲೋಪಪಕ್ಷದಲ್ಲಿ ಯಸ್ಯೇತಿ ಚ ಎಂಬ ಲೋಪವನ್ನು ಮಾಡುವಾಗ **ಅಸಿದ್ಧವದತ್ರಾಭಾತ್** (ಪಾ. ಸೂ. ೬-೪-೨೨) ಎಂಬುದರಿಂದ ಮಶಬ್ದ ಲೋಪ ಅಸಿದ್ಧವಾದರೆ ಯಾದಿ ಪ್ರತ್ಯಯ ಪರದಲ್ಲಿಲ್ಲದ ಕಾರಣ ಭ ಸಂಜ್ಞೆ ಬರುವುದಿಲ್ಲವಾದ್ದರಿಂದ ಯಸ್ಯೇತಿ ಚ ಎಂಬುದರಿಂದ ಅಕಾರ ಲೋಪಬರುವುದಿಲ್ಲ. **ಅಕೃತ್ಸಾರ್ವಧಾತುಕಯೋಃ** (ಪಾ. ಸೂ ೭-೪-೨) ಕೃತ್ತು ಸಾರ್ವಧಾತುಕಭಿನ್ನವಾದ ಯಾದಿ ಪ್ರತ್ಯಯ ಪರದಲ್ಲಿರುವಾಗ ಅಜಂತವಾದ ಅಂಗಕ್ಕೆ ದೀರ್ಘಬರುವುದು ಎಂಬುದರಿಂದ ದೀರ್ಘ ಪ್ರಾಪ್ತವಾಗುವುದು, ಅಕೃತ್ಸಾರ್ವಧಾತುಕಯೋಃ ಎಂಬುದು ಭಾಧಿಕಾರದಲ್ಲಿಲ್ಲ. ಆದ್ದರಿಂದ **ಅಸಿದ್ಧವದತ್ರಾಭಾತ್** (ಪಾ. ಸೂ. ೬-೪-೨೨) ಎಂಬುದರಿಂದ ಮಲೋಪಕ್ಕೆ ಅಸಿದ್ಧಿಯನ್ನು ಹೇಳಲಾಗುವುದಿಲ್ಲ. ಅದರೂ **ಅಂಗವೃತ್ತೇಪುನರ್ವೃತ್ತಾವವಿಧಿಃ** ( ಪಾರಿಭಾ. ೯೨ ) ಎಂಬುದರಿಂದ ಅಂಗಾಧಿಕಾರದಲ್ಲಿರುವ ಒಂದು ಶಾಸ್ತ್ರಕ್ಕೆ ಪ್ರವೃತ್ತಿಬಂದಮೇಲೆ ಮತ್ತೊಂದು ಅಂಗಾಧಿಕಾರಶಾಸ್ತ್ರ ಬರುವುದಿಲ್ಲ ಎಂಬುದರಿಂದ, ಅಂಗಾಧಿಕಾರಪಠಿತವಾದ ಸೂತ್ರದಿಂದ ಮಲೋಪ ಬಂದಮೇಲೆ ಅಂಗಾಧಿಕಾರಪಠಿತವಾದ ಅಕೃತ್ಸಾರ್ವ ಎಂಬುದರಿಂದ ದೀರ್ಘಬರುವುದಿಲ್ಲ ಎಂದು ದೀರ್ಘವಾರಣೆ ಮಾಡಬೇಕು. ವಿವಕ್ಷಿತಸ್ವರವೂ ಸಿದ್ಧಿಸುವುದಿಲ್ಲ ಮವರ್ಣ ಲೋಪಪಕ್ಷದಲ್ಲಿ **ಅಸಿದ್ಧವದತ್ರಾಭಾತ್** (ಪಾ. ಸೂ ೬-೪-೨೨) ಎಂಬುದರಿಂದ ಮಲೋಪವು ಅಸಿದ್ಧವಾಗುವುದರಿಂದ **ಯಸ್ಯೇತಿಚ** (ಪಾ. ಸೂ. ೬-೪-೧೪೮) ಎಂಬುದರಿಂದ ಲೋಪ ಬರಲಾರದು ಶಬ್ದ ಲೋಪಪಕ್ಷದಲ್ಲಿ ಹಿರಣ್ಯಯಶಬ್ದವು ಅಂತೋದಾತ್ತವಾಗಬೇಕಾಗುವುದು. ಆದ್ದರಿಂದ ವೇದಭಾಷ್ಯದಲ್ಲಿ ಹೇಳಿರುವಂತೆ ವರ್ಣಲೋಪವನ್ನೇ ಒಪ್ಪಿಕೊಂಡು ಪರರೂಪವನ್ನು ಹೇಳಿ **ಏಕಾದೇಶಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಎಂಬುದರಿಂದ ಏಕಾದೇಶವು ಉದಾತ್ತವಾಗುವುದು ಎಂದು ವರ್ಣಿಸುವುದು ಯುಕ್ತವಾಗಿರುವುದು ‖ ೨ ‖

‖ ಸಂಹಿತಾಪಾಠಃ ‖

ಇಂದ್ರೋ ದೀರ್ಘಾಯ ಚಕ್ಷಸ ಆ ಸೂರ್ಯಂ ರೋಹಯದ್ದಿವಿ ‖
ವಿ ಗೋಭಿರದ್ರಿಮೈರಯತ್ ‖ ೩ ‖

॥ ಪದಪಾಠಃ ॥

ಇಂದ್ರಃ । ದೀರ್ಘಾಯ । ಚಕ್ಷಸೇ । ಆ । ಸೂರ್ಯಂ । ರೋಹಯತ್ । ದಿವಿ ॥ ವಿ । ಗೋಭಿಃ । ಅದ್ರಿಂ । ಐರಯತ್ ॥ ೩ ॥

॥ ಸಾಯಣಭಾಷ್ಯಂ ॥

ಅಯಮಿಂದ್ರೋ ದೀರ್ಘಾಯ ಪ್ರೌಢಾಯ ನಿರಂತರಾಯ ಚಕ್ಷಸೇ ದರ್ಶನಾಯ ದಿವಿ ದ್ಯುಲೋಕೇ ಸೂರ್ಯಮಾ ರೋಹಯತ್ । ಪುರಾ ವೃತ್ರಾಸುರೇಣ ಜಗತಿ ಯದಾಪಾತ್ರಿತಂ ತಮಸ್ತನ್ನಿವಾರಣೇನ ಪ್ರಾಣಿನಾಂ ದೃಷ್ಟಿಸಿದ್ಧ್ಯರ್ಥಮಾದಿತ್ಯಂ ದ್ಯುಲೋಕೇ ಸ್ಥಾಪಿತವಾನಿತ್ಯರ್ಥಃ । ಸ ಚ ಸೂರ್ಯೋ ಗೋಭಿಃ ಸ್ವಕೀಯರಶ್ಮಿಭಿರದ್ರಿಂ ಪರ್ವತಪ್ರಮುಖಂ ಸರ್ವಂ ಜಗದ್ವ್ಯೈರಯತ್ । ವಿಶೇಷೇಣ ದರ್ಶನಾರ್ಥಂ ಪ್ರೇರಿತವಾನ್ । ಪ್ರಕಾಶಿತವಾನಿತ್ಯರ್ಥಃ । ಅಥವಾ ಇಂದ್ರ ಏವ ಗೋಭಿರ್ಜಲೈರ್ನಿಮಿತ್ತಭೂತೈರದ್ರಿಂ ಮೇಘಂ ವ್ಯೈರಯತ್ । ವಿಶೇಷೇಣ ಪ್ರೇರಿತವಾನ್ । ಪಂಚದಶಸಂಖ್ಯಾಕೇಷು ರಶ್ಮಿನಾಮಸು ಖೇದಯಃ ಕಿರಣಾ ಗಾವ ಇತಿ ಪಠಿತಂ । ತ್ರಿಂಶತ್ಸಂಖ್ಯಾಕೇಷು ಮೇಘನಾಮಸ್ವದ್ರಿರ್ಗ್ರಾವೇತಿ ಪಠಿತಂ ॥ ದೀರ್ಘಾಯ । ಪ್ರಾತಿಪದಿಕಸ್ವರೇಣಾಂತೋದಾತ್ತಃ । ಚಕ್ಷಸೇ । ಚಕ್ಷೇಃ ಸರ್ವಧಾತುಭ್ಯೋಽಸುನ್ । ಉ. ೪-೧೮೮ । ಇತ್ಯಸುನ್ । ಬಹುಲಗ್ರಹಣಾತ್ಖ್ಯಾಞಾದೇಶಾಭಾವಃ । ನಿತ್ತ್ವಾದಾದ್ಯುದಾತ್ತಃ । ಸೂರ್ಯಂ । ಸುವತಿ ಪ್ರೇರಯತೀತಿ ಸೂರ್ಯಃ । ಷೂ ಪ್ರೇರಣೇ । ಧಾತ್ವಾದೇಃ ಷಃ ಸಃ । ರಾಜಸೂಯಸೂರ್ಯೇತ್ಯಾದಿನಾ । ಪಾ. ೩-೧-೧೧೪ । ಕ್ಯಪ್ಪ್ರತ್ಯಯಃ । ತಸ್ಯ ರುಡಾಗಮಶ್ಚ ನಿಪಾತ್ಯತೇ । ಕ್ಯಪಃ ಕಿತ್ತ್ವಾದ್ಗುಣಾಭಾವಃ । ಪಿತ್ತ್ವಾದನುದಾತ್ತತ್ವಂ । ಧಾತುಸ್ವರ ಏವ ಶಿಷ್ಯತೇ । ರೋಹಯತ್ । ರುಹೇರ್ಣ್ಯಂತಾಲ್ಲಙಿ ಬಹುಲಂ ಛಂದಸ್ಯಮಾಙ್ಯೋಗೇಽಪಿ । ಪಾ. ೬-೪-೭೫ । ಇತ್ಯಡಭಾವೋ ನಿಘಾತಶ್ಚ । ದಿವಿ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ । ಅದ್ರಿಂ । ಅದಿಶದಿಭೂಶುಭಿಭ್ಯಃ ಕ್ರಿನ್ । ಉ ೪-೬೫ । ಇತಿ ಕ್ರಿನ್ಪ್ರತ್ಯಯಃ । ಅದಂತಿ ಪತವಸ್ತೃಣಾದಿಕಮತ್ರೇತ್ಯದ್ರಿಃ । ನಿತ್ತ್ವಾದಾದ್ಯುದಾತ್ತತ್ವಂ । ಐರಯತ್ । ಈರ ಗತೌ । ಣ್ಯಂತಾಲ್ಲಙ್ । ನಿಘಾತಃ ॥

॥ ಪ್ರತಿಪದಾರ್ಥ ॥

ಇಂದ್ರಃ— ಇಂದ್ರನು । ದೀರ್ಘಾಯ ಚಕ್ಷಸೇ—ನಿರಂತರವಾಗಿ ಎಂದರೆ ಯಾವಾಗಲೂ ದರ್ಶನವಮಾಡುವುದಕ್ಕಾಗಿ (ನೋಡುವುದಕ್ಕಾಗಿ, ಬೆಳಕಿಗಾಗಿ) । ಸೂರ್ಯಂ—ಸೂರ್ಯನನ್ನು । ದಿವಿ—ಸ್ವರ್ಗಲೋಕದಲ್ಲಿ (ಅಂತರಿಕ್ಷದಲ್ಲಿ) ಆ ರೋಹಯತ್—ಸ್ಥಾಪಿಸಿದನು (ಏರಿಸಿದನು) । (ಆ ಸೂರ್ಯನು) ಗೋಭಿಃ—ತನ್ನ ಕಿರಣಗಳಿಂದ । ಅದ್ರಿಂ—ಪರ್ವತವನ್ನು (ಎಂದರೆ ಪರ್ವತ ಮೊದಲಾದ ಸಮಸ್ತ ಜಗತ್ತನ್ನು) । ವಿ ಐರಯತ್—ವಿಶೇಷವಾಗಿ ಪ್ರೇರಿಸಿದನು ಎಂದರೆ ಪ್ರಕಾಶಪಡಿಸಿದನು.

ಅಥವಾ

**ಇಂದ್ರಃ**— ಇಂದ್ರನು | **ಗೋಭಿಃ**— ವೃಷ್ಟಿಕರ್ಮಕ್ಕೆ ನಿಮಿತ್ತಭೂತವಾದ ಉದಕಗಳಿಂದ | **ಅದ್ರಿಂ**— ಮೇಘವನ್ನು | **ವಿ ಐರಯತ್**— ವಿಶೇಷವಾಗಿ ಪ್ರೇರಿಸಿದನು.

॥ ಭಾವಾರ್ಥ ॥

ಹಿಂದೆ ವೃತ್ರಾಸುರನು ಜಗತ್ತನ್ನು ಅಂಧಕಾರದಿಂದ ಆವರಿಸುವಂತೆ ಮಾಡಲು ಇಂದ್ರನು ವೃತ್ರನನ್ನು ಸಂಹರಿಸಿ ಜಗತ್ತನ್ನು ಪ್ರಳಯಕಾಲದವರೆಗೂ ಬೆಳಗುವುದಕ್ಕಾಗಿ ಸೂರ್ಯನನ್ನು ಅಂತರಿಕ್ಷದಲ್ಲಿ (ಸ್ವರ್ಗದಲ್ಲಿ ಸ್ಥಾಪಿಸಿದನು. ಸೂರ್ಯನೂ ಸಹ ಪರ್ವತಕಾನನಾದಿಗಳಿಂದ ಕೂಡಿದ ಸಮಸ್ತಜಗತ್ತನ್ನೂ ತನ್ನ ಕಿರಣಗಳಿಂ ಪ್ರಕಾಶಪಡಿಸಿ ಜಗತ್ತಿನಲ್ಲಿ ಕತ್ತಲೆಯಿಂದ ಯಾವ ಕೆಲಸಕಾರ್ಯಗಳನ್ನೂ ಮಾಡಲು ಅಸಮರ್ಥವಾಗಿದ್ದ ಸಮಸ್ತ ಪ್ರಾಣಿಗಳನ್ನೂ ಅವುಗಳ ಕೆಲಸಕಾರ್ಯಗಳಲ್ಲಿ ತೊಡಗುವಂತೆ ಮಾಡಿದನು ಅಥವಾ ಇಂದ್ರನು ಸೂರ್ಯನನ್ನು ಅಂತರಿಕ್ಷದಲ್ಲಿ ಸ್ಥಾಪಿಸಿದ ಮೇಲೆ ಜನರಿಗೆ (ಅಥವಾ ಪ್ರಾಣಿಗಳಿಗೆ) ಸಸ್ಯರೂಪವಾದ ಆಹಾರೋತ್ಪತ್ತಿಗಾಗಿ ಜ ದಿಂದ ಮಳೆಸುರಿಯುವಂತೆ ಮೇಘವನ್ನು ಪ್ರೇರಿಸಿದನು.

English Translation

Indra established the sun in the heaven to render all things visible. He illuminated the mountain (*i e.* the world) with his rays or Indra charged the clouds with water

॥ ವಿಶೇಷವಿಷಯಗಳು ॥

ಭಾಷ್ಯಕಾರರೂ ಸ್ಕಂದಸ್ವಾಮಿಯೂ ಇಲ್ಲಿ ಒಂದು ಪೂರ್ವೇತಿಹಾಸವನ್ನೂ ಹೇಳಿರುವರು. ಪೂರ್ವದಲ್ಲಿ ವೃತ್ರಾಸುರನು ಲೋಕವನ್ನೆಲ್ಲಾ ಅಂಧಕಾರಮಯವಾಗುವಂತೆ ಮಾಡಿದನು ಜನರೂ, ಪ್ರಾಣಿಗಳೂ ಬೆಳಕಿಲ್ಲದ್ದರಿಂದ ತಮ್ಮ ತಮ್ಮ ಕೆಲಸಕಾರ್ಯಗಳನ್ನೂ ಮಾಡಲಸಮರ್ಥರಾದರು. ಇದನ್ನು ನೋಡಿ ಇಂದ್ರನು ವೃತ್ರಾಸುರನನ್ನು ಸಂಹಾರಮಾಡಿ ಲೋಕದಲ್ಲಿ ಬೆಳಕುಂಟಾಗುವಂತೆ ಸೂರ್ಯನನ್ನು ಆಕಾಶದಲ್ಲಿ ಸ್ಥಾಪಿಸಿದನು ಎಂದು ಇದನ್ನನು ಸರಿಸಿ ಈ ಋಕ್ಕಿನಲ್ಲಿ ಇಂದ್ರನು ಸೂರ್ಯನನ್ನು ಅಂತರಿಕ್ಷದಲ್ಲಿ ಸ್ಥಾಪಿಸಿದನೆಂದು ಹೇಳಿದೆ

**ದೀರ್ಘಾಯ**— ನಿರಂತರಾಯ, **ಪ್ರಲಯಪರ್ಯಂತಂ**— ಯಾವಾಗಲೂ, ಪ್ರಲಯಕಾಲದವರೆಗೂ ಜಗತ್ತು ಇರುವವರೆಗೂ

**ಚಕ್ಷಸೇ**— ದರ್ಶನ, ಬೆಳಕು ಪ್ರಕಾಶ ಇತ್ಯಾದಿ ಸೂರ್ಯನಿಲ್ಲದಿದ್ದರೆ ಬೆಳಕಾಗಲಿ, ಪ್ರಾಣಿಗಳಿಗೆ ಶಕ್ತಿ ಸಾಮರ್ಥ್ಯಗಳಾಗಲಿ ಇರುವುದಿಲ್ಲ ಲೋಕವ್ಯವಹಾರವೇ ನಡೆಯುವುದಿಲ್ಲ. ಆದುದರಿಂದಲೇ **ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ (ಋ. ಸಂ.** ೧-೧೧೫-೧) ಸೂರ್ಯನೇ ಚರಾಚರಾತ್ಮಕವಾದ ಸಮಸ್ತಜಗತ್ತಿಗೂ ಆತ್ಮಭೂತ (ಪ್ರಾಣಸ್ವರೂಪ ಎಂದರೆ ದೇಹಕ್ಕೆ ಪ್ರಾಣವು ಮುಖ್ಯವಾಗಿರುವಂತೆ) ನಾಗಿರುವನು ಎಂದು ಹೇಳಿದೆ.

**ವಿಗೋಭಿರದ್ರಿಮೈರಯೆತ್**— ಈ ವಾಕ್ಯದ ಅರ್ಥವು ಸ್ಪಷ್ಟವಾಗಿಲ್ಲ. ಸೂರ್ಯನು ಉದಯಿಸಿದಾಗ ಅವನ ಕಿರಣಗಳು ಮೊದಲು ಎತ್ತರವಾದ ಪರ್ವತದ ಮೇಲೆ ಬೀಳುವುದರಿಂದ ಈ ರೀತಿ ಕವಿಯು ವರ್ಣನೆಮಾಡಿರಬಹುದು. ಇದಲ್ಲದೆ ಇಂದ್ರನು ಮೋಘವನ್ನು ಜಲಕ್ಕಾಗಿ ಎಂದರೆ ವೃಷ್ಟಿಕರ್ಮಕ್ಕಾಗಿ ಪ್ರೇರಿಸಿದನು ಎಂಬ ಅರ್ಥವೂ ಯುಕ್ತವಾಗಿರುವುದು.

**ಗೋಭಿಃ**— ಕಿರಣಗಳಿಂದ, ಜಲದಿಂದ. ಖೇದಯಃ ಮೊದಲಾದ ಹದಿನೈದು ರಶ್ಮಿವಾಚಕಪದಗಳ ಮಧ್ಯದಲ್ಲಿ **ಕಿರಣಾಃ ಗಾವಃ** ಎಂಬ ಶಬ್ದಗಳು ಪಠಿತವಾಗಿವೆ

**ಅದ್ರಿಂ**— ಪರ್ವತ, ಮೇಘ. ಅದ್ರಿಃ ಗ್ರಾವಾ ಮೊದಲಾದ ಮೂವತ್ತು ಮೇಘವಾಚಕ ಶಬ್ದಗಳ ಮಧ್ಯದಲ್ಲಿ ಅದ್ರಿಶಬ್ದವು ಪಠಿತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ದೀರ್ಘಾಯ**— ಪ್ರಾತಿಪದಿಕಸ್ವರದಿಂದ ದೀರ್ಘಶಬ್ದ ಅಂತೋದಾತ್ತ.

**ಚಕ್ಷಸೇ**— ಚಕ್ಷಿಙ್ ವ್ಯಕ್ತಾಯಾಂ ವಾಚಿ ಧಾತು. ಇದರ ಮುಂದೆ **ಸರ್ವಧಾತುಭ್ಯೋಽಸುನ್** (ಉ. ಸೂ. ೪-೬೨೮) ಎಂಬುದರಿಂದ ಅಸುನ್ ಎಂದು ಅನುವೃತ್ತವಾಗಲು **ಚಕ್ಷೇರ್ಬಹುಲಂಶಿಚ್ಚ** (ಉ. ಸೂ. ೪-೬-೭೨) ಚಕ್ಷಿಙ್ ಧಾತುವಿನ ಮುಂದೆ ಅಸುನ್ ಬರುವುದು. ಅದು ಬಹುಲವಾಗಿ ಶಿತ್ತಾಗುವುದು ಎಂಬುದರಿಂದ ಅಸುನ್ ಪ್ರತ್ಯಯ ಬರುವುದು. ಚಕ್ಷ್+ಅಸ್ ಎಂದಿರುವಾಗ **ಚಕ್ಷಿಙಃಖ್ಯಾಞ್** (ಪಾ.ಸೂ. ೨-೪-೫೪) ಆರ್ಧಧಾತುಕ ಪ್ರತ್ಯಯವು ಪರದಲ್ಲಿರುವಾಗ ಚಕ್ಷಿಙ್ ಧಾತುವಿಗೆ ಖ್ಯಾಞ್ ಆದೇಶ ಪ್ರಾಪ್ತವಾದರೆ ಬಹುಲವಾಗಿ ಶಿತ್ತಾಗುವುದು ಎಂದಿರುವುದರಿಂದ ಇಲ್ಲಿ ಅಸುನ್ ಪ್ರತ್ಯಯವು **ತಿಙ್ ಶಿತ್ಸಾರ್ವಧಾತುಕಂ** ಎಂಬುದರಿಂದ ಸಾರ್ವಧಾತುಕವಾಗುವುದು ಆರ್ಧಧಾತುಕವಾಗುವುದಿಲ್ಲ. ಆದ್ದರಿಂದ ಅಸುನ್ ಪ್ರತ್ಯಯದ ಹಿಂದಿರುವ ಚಕ್ಷಿಙ್ ಧಾತುವಿಗೆ ಖ್ಯಾಞ್ ಆದೇಶ ಬರುವುಲ್ಲ. ನಿತ್ಸ್ವರದಿಂದ ಪ್ರತ್ಯಯಾಂತವು ಆದ್ಯುದಾತ್ತ.

**ಸೂರ್ಯಂ**— ಸುವತಿ ಪ್ರೇರಯತಿ (ಪ್ರೇರಿಸುತ್ತಾನೆ) ಇತಿ ಸೂರ್ಯಃ ಷೂ ಪ್ರೇರಣೇ ಧಾತು **ಧಾತ್ವಾದೇಃ ಷಃ ಸಃ** (ಪಾ. ಸೂ. ೬-೧-೬೪) ಎಂಬುದರಿಂದ ಧಾತುವಿನ ಆದಿಯಲ್ಲಿರುವ ಷಕಾರಕ್ಕೆ ಸಕಾರ ಬರುವುದು. **ರಾಜಸೂಯ, ಸೂರ್ಯ, ಮೃಷೋದ್ಯ, ರುಚ್ಯ, ಕುಪ್ಯ, ಕೃಷ್ಟಪಚ್ಯಾವ್ಯಥ್ಯಾಃ** (ಪಾ. ಸೂ ೩-೧-೧೧೪) ಈ ಏಳು ಶಬ್ದಗಳು ಕ್ಯಪ್ ಪ್ರತ್ಯಯಾನ್ತವಾಗಿ ನಿಪಾತಿಸಲ್ಪಡುವುವು. ಎಂಬುದು ಕ್ಯಪ್ ಪ್ರತ್ಯಯವೂ ಕ್ಯಪ್ ಪ್ರತ್ಯಯಕ್ಕೆ ರುಟ್ ಎಂಬ ಆಗಮವೂ ಬಂದರೆ ಸೂರ್ಯ ಎಂದಾಗುವುದು ಸೂರ್ಯಶಬ್ದದಲ್ಲಿ ಮಾತ್ರ ರುಡಾಗಮವನ್ನೂ ನಿಪಾತನಸಿದ್ಧವೆಂದು ಒಪ್ಪಬೇಕು. ಅಥವಾ ಸೃಗತೌ ಧಾತು ಸರತಿ ಗಚ್ಛತಿ ಆಕಾಶೇ (ಆಕಾಶದಲ್ಲಿ ಸಂಚರಿಸುವನು) ಎಂಬ ಧಾತುವಿನ ಮುಂದೆ ಕ್ಯಪ್ ಬಂದರೆ ಸೃ+ಯ ಎಂದಿರುವಾಗ ನಿಪಾತನದಿಂದ ಸೃಧಾತುವಿಗೆ ಉಕಾರ ಬರುವುದು. **ಉರಣ್ರಪರಃ** (ಪಾ. ಸೂ ೧-೧-೫೧) ಎಂಬುದರಿಂದ ರ ಪರವಾಗಿ ಬಂದರೆ ಸುರ್+ಯ ಎಂದಿರುವಾಗ **ಹಲಿಚ** (ಪಾ.ಸೂ. ೮-೨-೭೭) ಹಲ್ ವರ್ಣ ಪರದಲ್ಲಿರುವಾಗ ರೇಫಾಂತ ವಕಾರಾಂತ ಧಾತುವಿನ ಉಪಧಾಭೂತವಾದ ಇಕ್ಕಿಗೆ ದೀರ್ಘಬರುವುದು ಎಂಬುದರಿಂದ ದೀರ್ಘ ಬಂದರೆ ಸೂರ್ಯ ಎಂದಾಗುವುದು. ಮೊದಲನೆಯ ಪಕ್ಷದಲ್ಲಿ ಕ್ಯಪ್ ಪ್ರತ್ಯಯವು ಕಿತ್ತಾದ್ದರಿಂದ ಗುಣಬರುವುದಿಲ್ಲ. ಕ್ಯಪ್ ಪ್ರತ್ಯಯವು ಪಿತ್ತಾದ್ದರಿಂದ **ಅನುದಾತ್ತೌಸುಪ್ಪಿತೌ** (೩-೧-೪) ಎಂಬುದರಿಂದ ಅನುದಾತ್ತ ಧಾತುಸ್ವರ ನಿಲ್ಲುವುದು.

**ರೋಹಯೇತ್**—ರುಹ ಬೀಜಜನ್ಮನಿ ಪ್ರಾದುರ್ಭಾವೇ ಚ ಎಂಬ ಧಾತುವಿನ ಮುಂದೆ ಣಿಚ್ಪ್ರತ್ಯಯವನ್ನಿಟ್ಟು ಣಿಜಂತದ ಮುಂದೆ ಲಙ್ ಪ್ರತ್ಯಯವನ್ನಿಡುವುದು **ಬಹುಲಂ ಛಂದಸ್ಯಮಾಙ್ಯೋಗೇಽಪಿ** (ಪಾ. ಸೂ. ೬-೪-೭೫) ಮಾಙ್ಯೋಗವಿದ್ದರೂ ಇಲ್ಲದೇ ಇದ್ದರೂ ಛಂದಸ್ಸಿನಲ್ಲಿ ಅಟ್ ಆಟ್ ಆಗಮಗಳು ಬಹುಲವಾಗಿ ಬರುವುದಿಲ್ಲ ಎಂಬುದರಿಂದ ಅಡಾಗಮ ಬರುವುದಿಲ್ಲ. **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಅನುದಾತ್ತ ಬರುವುದು.

**ದಿವಿ--ಊಡಿದಂಪದಾದ್ಯಪ್ಪುಮ್ರೈದ್ಯುಭ್ಯಃ** (ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಯು ಉದಾತ್ತ.

**ಅದ್ರಿಂ—ಅದಿಶದಿಭೂಶುಭಿಭ್ಯಃ ಕ್ರಿನ್** (ಉ. ಸೂ. ೪-೫೦೫) ಅದಭಕ್ಷಣೇ, ಶದ್ಲೃಶಾತನೇ ಭೂ ಸತ್ತಾಯಾಂ, ಶುಭಶೋಭಾರ್ಥೇ ಈ ಧಾತುಗಳ ಮುಂದೆ ಕ್ರಿನ್ ಪ್ರತ್ಯಯ ಬರುವುದು ಎಂಬುದರಿಂದ ಆದ್ ಧಾತುವಿನ ಮುಂದೆ ಕ್ರಿನ್ ಪ್ರತ್ಯಯ, ಕ್ ನ್ ಗಳಿಗೆ ಇತ್ಸಂಜ್ಞೆ ಲೋಪಗಳು ಬರುವುವು. ಅದನ್ತಿ ಪಶವಸ್ತೃಣಾದಿಕಮತ್ರ ಇತಿ (ಇಲ್ಲಿ ಪಶುಗಳು ಹಲ್ಲು ಮೊದಲಾದುವನ್ನು ತಿನ್ನುವುವು) ಅದ್ರಿಃ. ಪ್ರತ್ಯಯವು ನಿತ್ತಾದ್ದರಿಂದ ನಿತ್ಪ್ರತ್ಯಯಾಂತದ ಆದಿಯು ಉದಾತ್ತ.

**ಐರಯತ್**—ಈರ ಗತೌ ಧಾತುವಿನ ಮುಂದೆ ಣಿಚ್ ಪ್ರತ್ಯಯ. ಣಿಜಂತದ ಮುಂದೆ **ಲಙ್**. ಆದಕ್ಕೆ ಪರಸ್ಮೈಪದ ಪ್ರಥಮಪುರುಷ ಏಕವಚನದಲ್ಲಿ ಐರಯತ್ ಎಂದಾಗುವುದು. **ತಿಙ್ಙತಿಙಃ** ಎಂಬುದರಿಂದ ಅನುದಾತ್ತ ಬರುವುದು ॥ ೩ ॥

॥ ಸಂಹಿತಾಪಾಠಃ ॥

ಇಂದ್ರ ವಾಜೇಷು ನೋಽವ ಸಹಸ್ರಪ್ರಧನೇಷು ಚ ।
ಉಗ್ರ ಉಗ್ರಾಭಿರೂತಿಭಿಃ ॥ ೪ ॥

॥ ಪದಪಾಠಃ ॥

ಇಂದ್ರ । ವಾಜೇಷು । ನಃ । ಅವ । ಸಹಸ್ರಽಪ್ರಧನೇಷು । ಚ ॥
ಉಗ್ರಃ । ಉಗ್ರಾಭಿಃ । ಊತಿಽಭಿಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಉಗ್ರಃ ಶತ್ರುಭಿರಪ್ರಧೃಷ್ಯಸ್ತ್ವಮುಗ್ರಾಭಿರಪ್ರಧೃಷ್ಯಾಭಿರೂತಿಭಿರಸ್ಮದ್ವಿಷಯರಕ್ಷಾಭಿರ್ವಾಜೇಷು ಯುದ್ಧೇಷು ನೋಽಸ್ಮಾನವ । ರಕ್ಷ । ತಥಾ ಸಹಸ್ರಪ್ರಧನೇಷು ಚ । ಸಹಸ್ರಸಂಖ್ಯಾಕಗಜಾಶ್ವಾದಿಲಾಭಯುಕ್ತೇಷು ಮಹಾಯುದ್ಧೇಷ್ವಪಿ ರಕ್ಷ ॥ ವಾಜೇಷು । ವೃಷಾದೀನಾಂ ಚ । ಪಾ. ೬-

೧-೨೦೩ । ಇತ್ಯಾದ್ಯುದಾತ್ತತ್ವಂ । ನೋऽವ । ನಸಃ ಸಕಾರಸ್ಯ ರುತ್ವೋತ್ವಗುಣೇಷು ಪ್ರಕೃತ್ಯಾಂತಃಪಾದ. ಮಿತಿ ಪ್ರಕೃತಿಭಾವೋ ನ ಭವತಿ । ಅವ್ಯಪರ ಇತಿ ನಿಷೇಧಾತ್ । ಪಾ. ೬-೧-೧೧೫ । ಅವ । ಅವ ರಕ್ಷಣೇ । ತಿಙ್ಙತಿಙ ಇತಿ ನಿಘಾತಃ । ಯದ್ಯಪಿ ಸಹಸ್ರಪ್ರಧನೇಷು ಚಾವೇತ್ಯಧ್ಯಾಹೃತಾಂ ಕ್ರಿಯಾಮಪೇಕ್ಷ್ಯ ಪ್ರಥಮಾಯಾಃ ಶ್ರೂಯಮಾಣಾಯಾ ಅವೇತಿ ಕ್ರಿಯಾಯಾಶ್ಚವಾಯೋಗೇ ಪ್ರಥಮಾ । ಪಾ. ೮-೧-೫೯ । ಇತಿ ನಿಘಾತನಿಷೇಧಃ ಪ್ರಾಪ್ತಸ್ತಥಾಪಿ ವಾಜೇಷ್ವಿತ್ಯತ್ರ ಚಕಾರಸ್ಯ ಲುಪ್ತತ್ವಾಚ್ಚಾದಿಲೋಪೇ ವಿಭಾಷಾ । ಪಾ. ೮-೧-೬೩ । ಇತಿ ನಿಷೇಧಸ್ಯ ವಿಕಲ್ಪಿತತ್ವಾದತ್ರ ನಿಘಾತಃ ಪ್ರವರ್ತತೇ । ಸಹಸ್ರಶಬ್ದಃ ಕರ್ದಮಾದೀನಾಂ ಚ । ಫಿ. ೩-೧೦ । ಇತಿ ಮಧ್ಯೋದಾತ್ತಃ । ಸಹಸ್ರಪ್ರಧನೇಷು ವಾಜೇಷು । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಉಗ್ರಃ । ಉಚ ಸಮವಾಯೇ । ಚಸ್ಯ ಗಃ । ಋಜ್ರೇಂದ್ರೇತಿ ರನ್ । ವ್ಯತ್ಯಯೇನಾಂತೋದಾತ್ತಃ । ಊತಿಭಿಃ । ಊತಿಯೂತೀತ್ಯಾದಿನಾ ಕ್ತಿನ್ನುದಾತ್ತಃ ॥

॥ ಪ್ರತಿಪದಾರ್ಥ ॥

(ಹೇ) ಇಂದ್ರ—ಎಲೈ ಇಂದ್ರನೇ । (ತ್ವಂ-ನೀನು) । ಉಗ್ರಃ—ಶತ್ರುಗಳಿಂದ ಜಯಿಸಲಸಾಧ್ಯನು । (ಇಂತಹ ನೀನು) ಉಗ್ರಾಭಿಃ—ಶತ್ರುಗಳಿಂದ ಸಹಿಸಲಶಕ್ಯವಾದ । ಊತಿಭಿಃ—ರಕ್ಷಣೆಗಳಿಂದ। ನಃ—ನಮ್ಮನ್ನು ವಾಜೇಷು—ಯುದ್ಧಗಳಲ್ಲಿಯೂ । ಸಹಸ್ರಪ್ರಧನೇಷು—ಅಪರಮಿತವಾದ ಗಜಾಶ್ವಧನಾದಿಗಳು ದೊರೆಯುವ ಮಹಾಯುದ್ಧಗಳಲ್ಲಿಯೂ । ಅವ—ರಕ್ಷಿಸು ।

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಅಪ್ರಧೃಷ್ಯನು- ಎಂದರೆ ಶತ್ರುಗಳು ನಿನ್ನನ್ನು ಜಯಿಸಲಾರರು. ಇಂತಹ ನೀನು ಅಸದೃಶವಾದ ನಿನ್ನ ರಕ್ಷಣೆಗಳಿಂದ (ಸಹಾಯಗಳಿಂದ) ನಾವು ನಮ್ಮ ಶತ್ರುಗಳೊಡನೆ ಗಜಾಶ್ವಧನಾದಿಗಳ ಲಾಭಕ್ಕಾಗಿ ಮಾಡುವ ಮಹಾಯುದ್ಧಗಳಲ್ಲಿ ನಮ್ಮನ್ನು ಕಾಪಾಡು.

## English Translation.

O Indra, you are invincible; protect us with insuperable aids in battles where thousand-fold spoils are gained.

॥ ವಿಶೇಷ ವಿಷಯಗಳು ॥

ಸಹಸ್ರಪ್ರಧನೇಷು—ಪ್ರಧನ ಅಥವಾ ಮಹಾಧನ ಎಂದರೆ ಯುದ್ಧವು (ಮಹಾಧನಶಬ್ದವು ರಣ ಮೊದಲಾದ ನಲವತ್ತಾರು ಸಂಗ್ರಾಮವಾಚಕಶಬ್ದಗಳ ಮಧ್ಯದಲ್ಲಿ ಪಠಿತವಾಗಿದೆ—ನಿ. ೩-೯.) ಈಋಕ್ಕಿನಲ್ಲಿ ವಾಜೇಷು ಎಂಬ ಯುದ್ಧವಾಚಕವಾದ ಮತ್ತೊಂದು ಶಬ್ದವೂ ಇರುವುದರಿಂದ ಸಹಸ್ರಪ್ರಧನೇಷು ಎಂಬ ಪದದಲ್ಲಿರುವ ಪ್ರಧನೇಷು ಶಬ್ದಕ್ಕೆ ಯುದ್ಧವೆಂದು ಅರ್ಥಮಾಡಿದರೆ ದ್ವಿರುಕ್ತಿದೋಷವುಂಟಾಗುವುದಲ್ಲದೆ ಅರ್ಥವೂ ಸರಿಯಾಗಿ ಹೊಂದುವುದಿಲ್ಲ. ಆದುದರಿಂದ ಭಾಷ್ಯಕಾರರು ಮಾಡಿರುವ ಅವಯವಾರ್ಥವೇ ಸರಿಯಾಗಿರುವುದು. ಸಹಸ್ರಶ

ಈ ಶಬ್ದಕ್ಕೆ ಯುದ್ಧಮಾಡಿ ಶತ್ರುಗಳನ್ನು ಜಯಿಸಿದಾಗ ಆ ಶತ್ರುಗಳ ಬಳಿ ಇದ್ದ ಆನೆ, ಕುದುರೆ, ಆಯುಧ, ಧನ ಕನಕವಾಹನಾದಿ ಸಮಸ್ತಸಂಪತ್ತುಗಳೂ ಗೆದ್ದವರ ವಶವಾಗುವುದು ಸಹಜವಷ್ಟೆ. ಅವರಂತೆ ಸಾವಿರಾರು ಯುದ್ಧಗಳಲ್ಲಿ ನಾವು ಶತ್ರುಗಳನ್ನು ಜಯಿಸಿ ಅವರ ಸಕಲಸಂಪತ್ತನ್ನೂ ವಶಮಾಡಿಕೊಳ್ಳಲು ಅನುಕೂಲವಾಗುವಂತೆ ನಮಗೆ ತಕ್ಕ ಸಹಾಯಗಳನ್ನು ಒದಗಿಸಿಕೊಟ್ಟು ನಮಗೆ ಶತ್ರುಗಳಿಂದ ಪ್ರಾಣಭಯವಿಲ್ಲದಂತೆ ನಮ್ಮನ್ನು ಕಾಪಾಡಬೇಕೆಂದು ಇಂದ್ರನನ್ನು ಪ್ರಾರ್ಥನೆಮಾಡಲಾಗಿರುವುದು.

**ಉಗ್ರಃ**—ಅಪ್ರಧೃಷ್ಯ, ಅಜೇಯ, ಸಹಿಸಲಶಕ್ಯ, ಪರಾಕ್ರಮಿ, ಕ್ರೂರ ಇತ್ಯಾದಿ ಅರ್ಥಗಳನ್ನು ಹೇಳಬಹುದು,

॥ ವ್ಯಾಕರಣಪ್ರಕ್ರಿಯಾ ॥

**ವಾಜೇ—ವೃಷಾದೀನಾಂ ಚ** (ಪಾ. ಸೂ. ೬-೧-೨೦೩) ವೃಷಾದಿಗಣಪಠಿತಶಬ್ದದ ಆದಿಯು ಉದಾತ್ತವಾಗುವುದು ಎಂಬುದರಿಂದ ಆದ್ಯುದಾತ್ತ. ವೃಷಾದಿಯು ಆಕೃತಿಗಣವಾದ್ದರಿಂದ ವಾಜ ಎಂಬುದನ್ನು ವೃಷಾದಿಯಲ್ಲಿ ಸೇರಿಸಿಕೊಳ್ಳಬೇಕು.

**ನೋಽವ—ಬಹುವಚನಸ್ಯವಸ್ನಸೌ** (ಪಾ. ಸೂ. ೮-೧-೨೧) ಪದದ ಮುಂದೆ ಇರುವುದೂ, ಪಾದದ ಆದಿಯಲ್ಲಿ ಇಲ್ಲದೇ ಇರತಕ್ಕದ್ದೂ ಆದ ಷಷ್ಠೀ ಚತುರ್ಥೀ ದ್ವಿತೀಯಾ ಬಹುವಚನಾಂತಗಳಾದ ಯುಷ್ಮದಸ್ಮಚ್ಛಬ್ದಗಳಿಗೆ ಕ್ರಮವಾಗಿ ಅನುದಾತ್ತಗಳಾದ ವಸ್ ನಸ್ ಆದೇಶಗಳು ಬರುವುವು ಎಂಬುದರಿಂದ ಯುಷ್ಮಾನ್ ಎಂಬ ದ್ವಿತೀಯಾಬಹುವಚನಾಂತಕ್ಕೆ ಅನುದಾತ್ತವಾದ ನಸ್ ಬರುವುದು. **ಸಸಜುಷೋರುಃ** (ಪಾ. ಸೂ. ೯-೨-೬೬) ಪದದ ಕೊನೆಯಲ್ಲಿರುವ ಸಕಾರಕ್ಕೂ ಸಜುಷ್ ಎಂಬುದಕ್ಕೂ ರು ಆದೇಶ ಬರುವುದು ಎಂಬುದರಿಂದ ರು ಆದೇಶ ಬಂದರೆ ನರ್+ಅವ ಎಂದಿರುವಾಗ **ಅತೋ ರೋರಪ್ಲುತಾದಪ್ಲುತೇ** (ಪಾ.ಸೂ. ೬-೧-೧೧೩) ಅಪ್ಲುತವಾದ ಹ್ರಸ್ವಾಕಾರ ಪರದಲ್ಲಿರುವಾಗ ಪ್ಲುತಭಿನ್ನವಾದ ಹ್ರಸ್ವಾಕಾರದ ಮುಂದೆ ಇರುವ ರುಗೆ ಉ ಆದೇಶ ಬರುವುದು ಎಂಬುದರಿಂದ ಉ ಆದೇಶ ಬಂದರೆ ನ+ಉ+ಅವ **ಆದ್ಗುಣಃ** (ಪಾ. ಸೂ. ೬-೧-೮೭) ಎಂಬುದರಿಂದ ಗುಣ ಬಂದರೆ ನೋ+ಅವ ಎಂದಿರುವುದು. ಈಗ **ಪ್ರಕೃತ್ಯಾಂತಃಪಾದಮವ್ಯಪರೇ** (ಪಾ. ಸೂ. ೬-೧-೧೧೫) ಹ್ರಸ್ವಾಕಾರ ಪರದಲ್ಲಿರುವಾಗ ಋಕ್ಪಾದದ ಮಧ್ಯದಲ್ಲಿರುವ ಏ ಓ ಗಳು ಪ್ರಕೃತಿಭಾವವನ್ನು ಹೊಂದುವುವು ಎಂಬುದರಿಂದ ಪ್ರಕೃತಿಭಾವ ಬರುವುದಿಲ್ಲ. ಏಕೆಂದರೆ ಇದೇ ಸೂತ್ರದಲ್ಲಿ ಅವ್ಯಪರೇ ಎಂದಿರುವುದು. ವಕಾರ ಅಥವಾ ಯಕಾರ ಪರಕವಾದ ಹ್ರಸ್ವಾಕಾರ ಪರದಲ್ಲಿದ್ದರೆ ಋಕ್ಪಾದಮಧ್ಯದಲ್ಲಿರುವ ಏ ಓ ಕಾರಗಳು ಪ್ರಕೃತಿಭಾವವನ್ನು ಹೊಂದಲಾರವು ಎಂದು ನಿಷೇಧವಿರುವುದು ನೋ+ಅವ ಎಂಬಲ್ಲಿ ಓಕಾರವು ವಕಾರಪರಕವಾದ ಹ್ರಸ್ವಾಕಾರವನ್ನು ಪರದಲ್ಲಿ ಹೊಂದಿರುವುದರಿಂದ ಪ್ರಕೃತಿಭಾವಕ್ಕೆ ನಿಷೇಧ ಬರುವುದು. **ಏಙಃಪದಾಂತಾದತಿ** (ಪಾ. ಸೂ. ೬-೧-೧೦೯) ಎಂಬುದರಿಂದ ಪೂರ್ವರೂಪ ಬಂದರೆ ನೋಽವ ಎಂದಾಗುವುದು.

**ಅವ**—ಅವರಕ್ಷಣೇ ಧಾತು **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಅನುದಾತ್ತ. ಯದ್ಯಪಿ ಇಲ್ಲಿ ಇಂದ್ರವಾಜೇಷು ನೋಽವ ಎಂದೂ ಸಹಸ್ರಪ್ರಧನೇಷು ಚ ನೋವ ಎಂದೂ ಎರಡುವಾಕ್ಯಗಳಿರುವುವು. ಎರಡನೇ ವಾಕ್ಯದಲ್ಲಿ ಅಧ್ಯಾಹೃತವಾದ ಅವ ಎಂಬ ತಿಙಂತಕ್ಕಿಂತಲೂ ಪ್ರಥಮವಾಕ್ಯದಲ್ಲಿರುವ ತಿಙಂತವು ಪ್ರಥಮೋಚ್ಚರಿತವಾಗುವುದು. ಆದ್ದರಿಂದ **ಚವಾಯೋಗೇಪ್ರಥಮಾ** (ಪಾ. ಸೂ. ೮-೧-೫೯) ಚ ವಾ ಇವು

ಗಳಿಂದ ಯೋಗವಿದ್ದರೆ ಪ್ರಥಮೋಚ್ಚರಿತವಾದ ತಿಙಂತವು ಅನುದಾತ್ತವಾಗುವುದಿಲ್ಲ ಎಂಬ ನಿಷೇಧವು ಪ್ರಾಪ್ತವಾಗುವುದು. ಆದರೂ **ಚಾದಿಲೋಪೇವಿಭಾಷಾ** (ಪಾ. ಸೂ. ೮-೧-೬೩) ಚ ವಾ ಹ ಅಹ ಏವ ಇವುಗಳಿಗೆ ಲೋಪಬಂದಿದ್ದರೆ ವಿಕಲ್ಪವಾಗಿ ಅನುದಾತ್ತ ನಿಷೇಧ ಬರುವುದು. ಇಲ್ಲಿ ಲೋಪವೆಂದರೆ ಪ್ರಯೋಗಿಸ (ಉಚ್ಚರಿಸ)ದೇ ಇರುವಿಕೆ ಎಂದು ಅರ್ಥ. ಏಕೆಂದರೆ ಶಾಸ್ತ್ರದಿಂದ ಲೋಪವು ಸಂಭವಿಸುವುದಿಲ್ಲ. ಇಲ್ಲಿ ಮೊದಲನೇ ವಾಕ್ಯವಾದ ಇಂದ್ರವಾಜೇಷುನೋಽವ ಎಂಬಲ್ಲಿ ಚ ಎಂಬುದಕ್ಕೆ ಪ್ರಯೋಗವಿಲ್ಲದೇ ಇರುವುದರಿಂದ ಚಾದಿಲೋಪವಿರುವುದು. ಆದ್ದರಿಂದ ಅನುದಾತ್ತ ನಿಷೇಧವಿಕಲ್ಪಶಾಸ್ತ್ರವು ಪ್ರವರ್ತಿಸುವುದು. ವಿಕಲ್ಪವೆಂದರೆ ಒಂದು ಪಕ್ಷ ಬರುವುದು—ಒಂದು ಪಕ್ಷ ಬರುವುದಿಲ್ಲ ಎಂದರ್ಥ. ಆದ್ದರಿಂದ ಅನುದಾತ್ತ ನಿಷೇಧ ಬರದೇ ಇದ್ದರೆ ಅನುದಾತ್ತ ಬರುವುದು **ಸಹಸ್ರಪ್ರಧನೇಷು—ಕರ್ದಮಾದೀನಾಂ ಚ** (ಫಿ. ಸೂ. ೫೯) ಈಗಣ ಪಠಿತಶಬ್ದಗಳ ಮೊದಲನೆಯದು ಅಥವಾ ಎರಡನೆಯದು ಉದಾತ್ತವಾಗುವುದು ಎಂಬುದರಿಂದ ಸಹಸ್ರ ಎಂಬಲ್ಲಿ ಎರಡನೇ ಹಕಾರಕ್ಕೆ ಉದಾತ್ತಬರುವುದು. ಆದ್ದರಿಂದ ಸಹಸ್ರಶಬ್ದವು ಮಧ್ಯೋದಾತ್ತ. ಸಹಸ್ರಪ್ರಧನೇಷು ಎಂಬುದು ಬಹುವ್ರೀಹಿಯಾದ್ದರಿಂದ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುವುದು.

**ಉಗ್ರಃ — ಉಚಸಮವಾಯೇಧಾತು, ಋಜ್ರೇಂದ್ರಾಗ್ರವಜ್ರವಿಪ್ರಕುಬ್ರಚುಬ್ರಕ್ಷುರ ಖುರಭದ್ರೋಗ್ರ ಭೇರಭೇಲ ಶುಕ್ರ ಶುಕ್ಲ ಗೌರವಸ್ರೇರ ಮಾಲಾಃ** (ಉ. ಸೂ. ೨-೧೮೬) ಈ ಹತ್ತೊಂಭತ್ತು ಶಬ್ದಗಳ ಮುಂದೆ ರನ್ ಪ್ರತ್ಯಯ ಬರುವುದು ಎಂಬುದರಿಂದ ಉಚ್ ಧಾತುವಿನ ಮುಂದೆ ರನ್ ಪ್ರತ್ಯಯಬರುವುದು. ಈ ಸೂತ್ರದಲ್ಲಿ ಉಗ್ರ ಎಂದು ನಿಪಾತನಮಾಡಿರುವುದರಿಂದ ಚಕಾರಕ್ಕೆ ಗಕಾರ ಬರುವುದು. ಪ್ರತ್ಯಯವು ನಿತ್ತಾದರೂ ವ್ಯತ್ಯಯದಿಂದ ಉಗ್ರಶಬ್ದವು ಅಂತೋದಾತ್ತವೇ ಆಗುವುದು.

**ಊತಿಭಿಃ—ಊತಿಯೂತಿಜೂತಿಸಾತಿಹೇತಿಕೀರ್ತಯಶ್ಚ** (ಪಾ. ಸೂ. ೩-೩-೯೭) ಈ ಶಬ್ದಗಳು ಸ್ತ್ರೀಲಿಂಗದಲ್ಲಿ ಕ್ತಿನ್ ಪ್ರತ್ಯಯಾಂತಗಳಾಗಿಯೂ ಅಂತೋದಾತ್ತಗಳಾಗಿಯೂ ನಿಪಾತಿಸಲ್ಪಡುವುವು ಎಂಬುದರಿಂದ ಊತಿ ಎಂಬಲ್ಲಿ ಉದಾತ್ತವಾದ ಕ್ತಿನ್ ಪ್ರತ್ಯಯಬರುವುದು ॥ ೪ ॥

॥ ಸಂಹಿತಾಪಾಠಃ ॥

ಇಂದ್ರಂ ವಯಂ ಮಹಾಧನ ಇಂದ್ರಮರ್ಭೇ ಹವಾಮಹೇ ।
ಯುಜಂ ವೃತ್ರೇಷು ವಜ್ರಿಣಂ ॥ ೫ ॥

॥ ಪದಪಾಠಃ ॥

ಇಂದ್ರಂ । ವಯಂ । ಮಹಾಽಧನೇ । ಇಂದ್ರಂ । ಅರ್ಭೇ । ಹವಾಮಹೇ ।
ಯುಜಂ । ವೃತ್ರೇಷು । ವಜ್ರಿಣಂ ॥ ೫ ॥

ವಯಮನುಷ್ಠಾತಾರೋ ಮಹಾಧನೇ ಪ್ರಭೂತಧನನಿಮಿತ್ತಮಿಂದ್ರಂ ಹವಾಮಹೇ । ಆಹ್ವಯಾಮಃ । ಅರ್ಭೇಽರ್ಭಕೇ ಸ್ವಲ್ಪೇಽಪಿ ಧನೇ ನಿಮಿತ್ತಭೂತೇ ಸತೀಂದ್ರಂ ಹವಾಮಹೇ । ಕೀದೃಶಮಿಂದ್ರಂ । ಯುಜಂ ಸಹಕಾರಿಣಂ ಸಮಾಹಿತಂ ವಾ ವೃತ್ರೇಷು ಶತ್ರುಷು ಧನಲಾಭವಿರೋಧಿಷು ಪ್ರಾಪ್ತೇಷು ತನ್ನಿವಾರಣಾಯ ವಜ್ರಿಣಂ ವಜ್ರೋಪೇತಂ ॥ ಮಹಾಧನಶಬ್ದೋ ಯದ್ಯಪಿ ಸಂಗ್ರಾಮನಾಮಸು ಪಠಿತಸ್ತಥಾಪಿ ಮಹದ್ಧನಮತ್ರ ಸಂಗ್ರಾಮ ಇತಿ ಬಹುವ್ರೀಹಿತ್ವೇ ಸತ್ಯಂತೋದಾತ್ತತ್ವಾಸಿದ್ಧೇರ್ನಾತ್ರ ತದ್ಗೃಹೀತಂ । ಮಹಾಧನೇ ಮಹಚ್ಚ ತದ್ಧನಂ ಚೇತಿ ಸಮಾಸಸ್ಯೇತ್ಯಂತೋದಾತ್ತಃ । ಅರ್ಭೇ । ಅರ್ತಿಗೃಭ್ಯಾಂ ಭನ್ । ಉ. ೩-೧೫೨ । ನಿತ್ತ್ವಾದಾದ್ಯುದಾತ್ತಃ । ಹವಾಮಹೇ । ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ । ಞಿತ್ತ್ವಾತ್ಕರ್ತ್ರಭಿಪ್ರಾಯೇ । ಪಾ. ೧-೩-೭೨ । ಆತ್ಮನೇಪದಂ । ಲಟಃ ಸ್ಥಾನೇ ಮಹಿಙ್ । ಪಾ. ೩-೪-೭೮ । ಟಿತ ಆತ್ಮನೇಪದಾನಾಂ । ಪಾ. ೩-೪-೭೯ । ಇತಿ ಟೇರೇತ್ವಂ । ಕರ್ತರಿ ಶಪ್ । ಪಾ. ೩-೧-೬೮ । ಹ್ವಃ ಸಂಪ್ರಸಾರಣಂ । ಪಾ. ೬-೧-೩೨ । ಇತ್ಯನುವೃತ್ತೌ ಬಹುಲಂ ಛಂದಸಿ । ಪಾ. ೬-೧-೩೪ । ಇತಿ ಸಂಪ್ರಸಾರಣಂ ವಕಾರಸ್ಯೋಕಾರಃ । ಪರಪೂರ್ವತ್ವಂ । ಗುಣಾವಾದೇಶೌ । ಅತೋ ದೀರ್ಘೋ ಯಞಿ । ಪಾ. ೭-೩-೧೦೧ । ಇತಿ ದೀರ್ಘತ್ವಂ । ತಿಙ್ಙತಿಙ ಇತಿ ನಿಘಾತಃ । ಯುಜಂ । ಯುಜ ಸಮಾಧಾವಿತ್ಯಸ್ಯ ಕ್ವಿಪ್ । ಯುಜೇರಸಮಾಸೇ । ಪಾ. ೭-೧-೭೧ । ಇತಿ ನುಮ್ ನ ಭವತಿ । ಸ ಹಿ ಯುಜೇರಿತಿ ನಿರ್ದೇಶಾದಿಕಾರರಹಿತಸ್ಯ ನ ಭವತಿ । ಅನಿತ್ಯಮಾಗಮಶಾಸನಮಿತಿ ವಾ ಯುಜಿಯೋರ್ಗ ಇತ್ಯಸ್ಯಾಪಿ ನುಮ್ ನ ಭವತಿ । ವೃತ್ರೇಷು । ವೃತು ವರ್ತನೇ । ಪ್ರತಿಕೂಲತಯಾ ವರ್ತಂತ ಇತಿ ವೃತ್ರಾಣಿ ಶತ್ರುಕುಲಾನಿ । ಸ್ಫಾಯಿತಂಚೀತ್ಯಾದಿನಾ ರಕ್ಪ್ರತ್ಯಯಃ । ಉ. ೨-೧೩ । ಕಿತ್ತ್ವಾದ್ಗುಣಾಭಾವಃ । ಪ್ರತ್ಯಯಸ್ವರಃ । ವಜ್ರಿಣಂ । ಅತ ಇನಿಠನಾವಿತೀನಿಃ । ಪ್ರತ್ಯಯಸ್ವರಃ ॥ ೧೩ ॥

॥ ಪ್ರತಿಪದಾರ್ಥ ॥

**ವಯಂ**—ನಾವು । **ಇಂದ್ರಂ**—ಇಂದ್ರನನ್ನು । **ಮಹಾಧನೇ**—ವಿಪುಲವಾದ ಧನಪ್ರಾಪ್ತಿಗಾಗಿ **ಹವಾಮಹೇ**—ಆಹ್ವಾನಮಾಡುವೆವು (ಕರೆಯುವೆವು) । **ಅರ್ಭಕೇ**—ಸ್ವಲ್ಪ ಧನಪ್ರಾಪ್ತಿಗಾದರೂ । **ಇಂದ್ರಂ**—ಇಂದ್ರನನ್ನು (ಹವಾಮಹೆ ಆಹ್ವಾನಮಾಡುವೆವು.) । **ಯುಜಂ**—ನಮಗೆ ಸಹಾಯಭೂತನಾದ (ಮತ್ತು) । **ವೃತ್ರೇಷು**—(ನಮ್ಮ ಧನಲಾಭವಿರೋಧಿಗಳಾದ) ಶತ್ರುಗಳು ಬಂದಾಗ ಅವರ ನಿಗ್ರಹಾರ್ಥವಾಗಿ । **ವಜ್ರಿಣಂ**-ವಜ್ರಾಯುಧವನ್ನು ಹಿಡಿದಿರುವ । (ಇಂದ್ರಂ-ಇಂದ್ರನನ್ನು । ಹವಾಮಹೇ-ಆಹ್ವಾನಮಾಡುವೆವು )

॥ ಭಾವಾರ್ಥ ॥

ನಮಗೆ ಸ್ವಲ್ಪ ಧನ ಬೇಕಾಗಲಿ, ಹೆಚ್ಚಾಗಿ ಬೇಕಾಗಲಿ ನಾವು ಆ ಧನಪ್ರಾಪ್ತಿಗಾಗಿ ಇಂದ್ರನನ್ನೇ ಆಹ್ವಾಮಾಡುವೆವು. ಇದಲ್ಲದೆ ಆ ಇಂದ್ರನು ನಮಗೆ ನಮ್ಮ ಕಾರ್ಯಗಳಲ್ಲಿ ಸಹಾಯಮಾಡುವುದಲ್ಲದೆ ನಮ್ಮ ವಿರೋಧಿಗಳಾದ ಶತ್ರುಗಳು ಬಂದಾಗ ಅವರನ್ನು ನಿಗ್ರಹಿಸುವುದಕ್ಕಾಗಿ ಇಂದ್ರನು ತನ್ನ ವಜ್ರಾಯುಧವನ್ನು ಉಪಯೋಗಿಸಲು ಸಿದ್ಧನಾಗಿರುವನು. ಇಂತಹ ಇಂದ್ರನನ್ನು ಆಹ್ವಾನಮಾಡುವೆವು.

English Translation.

We invoke Indra for great wealth ; Indra for (even) little weath ; Indra as our ally and weilder of the thunderbolt against enemies

‖ ವಿಶೇಷವಿಷಯಗಳು ‖

ಈ ಋಕ್ಕಿನ ಅರ್ಥವಿಚಾರದಲ್ಲಿ ಭಾಷ್ಯಕಾರರು ಮಾಡಿರುವ ಅರ್ಥವಿವರಣೆಗಿಂತಲೂ ಸ್ಕಂದಸ್ವಾಮಿಯ ವಿವರಣೆಯು ಹೆಚ್ಚು ಪರಿಗ್ರಾಹ್ಯವಾಗಿರುವುದು. ಅದನ್ನು ಕೆಳಗೆ ಕೊಟ್ಟಿದೇವೆ.

ಸ್ಕಂದಸ್ವಾಮಿಭಾಷ್ಯಂ—ಮಹಾಧನೇ । ಸಂಗ್ರಾಮನಾಮೈತತ್ । ಮಹತಿ ಸಂಗ್ರಾಮೇ । ಇಂದ್ರಮೇವ ಅರ್ಭೇ । ಅಲ್ಪನಾಮೈತತ್ । ಅಲ್ಪೇ । ಕ್ವ । ಪೂರ್ವತ್ರ ನಿರ್ದೇಶಾತ್ ಸಂಗ್ರಾಮ ಏವ । ಹವಾಮಹೇ ಆಹ್ವಯಾಮಃ । ಯುಜಂ ಯುಜ್ಯತೇಽಸಾವಿತಿ ಯುಕ್ ಸಹಾಯಃ ತಂ । ವೃತ್ರೇಷು ಸಂಗ್ರಾಮವ್ಯತಿರಿಕ್ತೇಷ್ವಪಿ ಚ ಶತ್ರುಷು ಇಂದ್ರಮೇವ ಸಮಾಹ್ವಯಾಮಃ ವಜ್ರಿಣಂ ‖

ಅನುವಾದವು—ಮಹಾಧನವೆಂದರೆ ಯುದ್ಧವು, ದೊಡ್ಡಯುದ್ಧವೆಂದರ್ಥವು. ಅರ್ಭೇ ಎಂದರೆ ಅಲ್ಪವಾದ, ಸಣ್ಣದಾದ ಯುದ್ಧವು । ಆದುದರಿಂದ ಯುದ್ಧವು ಸಣ್ಣದಾಗಿರಲಿ ಅಥವಾ ದೊಡ್ಡದಾಗಿರಲಿ ನಾವು ನಮ್ಮ ಸಹಾಯಕ್ಕಾಗಿ ಇಂದ್ರನನ್ನೇ ಆಹ್ವಾನಮಾಡುವೆವು. ಮತ್ತು ಯುದ್ಧ ವಿಚಾರದಲ್ಲಿ ಅಲ್ಲದೆ ಇತರ ವಿಚಾರಗಳಲ್ಲಿ ಸಹ ನಮ್ಮ ವಿರೋಧಿಗಳಾದ ಶತ್ರುಗಳ ನಿವಾರಣೆಗಾಗಿ ವಜ್ರಾಯುಧಧರನಾದ ಇಂದ್ರನನ್ನೇ ಆಹ್ವಾನಮಾಡುವೆವು,

ಹಿಂದಿನ ಋಕ್ಕಿನಲ್ಲಿ ಯುದ್ಧವಿಷಯವು ಪ್ರಸ್ತಾಪಿಸಲ್ಪಟ್ಟಿರುವುದರಿಂದ ಈ ಋಕ್ಕಿನಲ್ಲಿರುವ ಸಣ್ಣ ಅಥವಾ ದೊಡ್ಡ ಯುದ್ಧಗಳೆರಡರಲ್ಲಿಯೂ ನಾವು ಇಂದ್ರನ ಸಹಾಯವನ್ನೇ ಅಪೇಕ್ಷಿಸುವೆವು ಎಂಬ ಅರ್ಥವೇ ಸಮಂಜಸವಾಗಿರುವುದು. ಆದುದರಿಂದ ಮಹಾಧನೇ ಎಂಬ ಶಬ್ದಕ್ಕೆ ಬಹು ಧನಪ್ರಾಪ್ತಿಗಾಗಿ ಎಂದು ಹೇಳುವುದಕ್ಕೆ ಬದಲಾಗಿ ದೊಡ್ಡಯುದ್ಧದಲ್ಲಿ ಎಂದು ಅರ್ಥಮಾಡುವುದೇ ಯುಕ್ತವಾಗಿರುವುದು. ಇದಲ್ಲದೆ ಹಿಂದಿನ ಋಕ್ಕಿನಲ್ಲಿ **ಊತಯೇ**= ನಮ್ಮ ರಕ್ಷಣೆಗಾಗಿ ಎಂಬ ಶಬ್ದವೂ ಈ ಋಕ್ಕಿನಲ್ಲಿ **ವಜ್ರಿಣಂ**= ವಜ್ರಾಯುಧೋಪೇತನಾದ ಎಂಬ ಶಬ್ದವೂ ಯುದ್ಧಕ್ಕೆ ಸಂಬಧಪಟ್ಟ ರಕ್ಷಣಾದಿಗಳನ್ನೂ ಶತ್ರುನಿಗ್ರಹವನ್ನೂ ಸೂಚಿಸುವುದರಿಂದ ಸ್ಕಂದಸ್ವಾಮಿಯ ಅರ್ಥವಿವರಣೆಯೇ ಇಲ್ಲಿ ಪರಿಗ್ರಾಹ್ಯವಾಗಿರುವುದೆಂದು ಅಭಿಪ್ರಾಯವು.

‖ ವ್ಯಾಕರಣಪ್ರಕ್ರಿಯಾ ‖

**ಮಹಾಧನೇ**—ಯದ್ಯಪಿ ಯಾಸ್ಕರು ಸ್ರಂಗ್ರಾಮ (ಯುದ್ಧ) ನಾಮಗಳಲ್ಲಿ ಮಹಾಧನ ಶಬ್ದವನ್ನು ಪಠಿಸಿರುವರು. ಆದರೂ ಅದನ್ನು ಇಲ್ಲಿ ತೆಗೆದುಕೊಂಡರೆ ಮಹತ್‌ಧನಂ ಅತ್ರಸಂಗ್ರಾಮೇ ಎಂದು ಬಹುವ್ರೀಹಿ ಬರುವುದರಿಂದ ಪೂರ್ವಪದಪ್ರಕೃತಿಸ್ವರ ಬರುವುದು. ಆದ್ದರಿಂದ ಅಂತೋದಾತ್ತ ಸ್ವರ ಸಿದ್ಧವಾಗುವುದಿಲ್ಲ. ಆದ್ದರಿಂದ ಅದನ್ನು ಇಲ್ಲಿ ತೆಗೆದುಕೊಳ್ಳುವುದಿಲ್ಲ. ಮಹಚ್ಚ ತತ್ ಧನಂ ಚ ಎಂದು ಕರ್ಮಧಾರಯ ಸಮಾಸದಿಂದ ಸಿದ್ಧವಾದ ಶಬ್ದವನ್ನೇ ಇಲ್ಲಿ ತೆಗೆದುಕೊಳ್ಳುವೆವು. ಈಗ **ಸಮಾಸಸ್ಯ** (ಪಾ. ಸೂ. ೬-೧-೨೨೩) ಸಮಾಸದ ಅಂತವು ಉದಾತ್ತವಾಗುವುದು ಎಂಬುದರಿಂದ ಅಂತೋದಾತ್ತಸಿದ್ಧವಾಗುವುದು. **ಆನ್ಮಹತಸ್ಸಮಾನಾಧಿಕರಣಜಾತೀಯದೇಶೀಯಯೋಃ** (ಪಾ. ಸೂ. ೬-೩-೪೬) ಎಂಬುದರಿಂದ ಮಹಚ್ಛಬ್ದಕ್ಕೆ ಆತ್ವ ಬಂದಿದೆ.

**ಅರ್ಭೇ**—**ಅರ್ತಿಗೃಭ್ಯಾಂಭನ್** (ಉ. ಸೂ. ೩-೪೦೨) ಎಂಬುದರಿಂದ ಋ ಧಾತುವಿನ ಮುಂದೆ ಭನ್ ಪ್ರತ್ಯಯ ಗುಣ ಸಪ್ತಮ್ಯೇಕವಚನ. ನಿತ್ತಾದ್ದರಿಂದ ಆದ್ಯುದಾತ್ತ.

**ಹವಾಮಹೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಈ ಧಾತುವು ಞಿತ್ತು ಆದ್ದರಿಂದ ಕ್ರಿಯಾಫಲವು ಕರ್ತೃವಿಗೆ ಸೇರುವಾಗ **ಸ್ವರಿತಞಿತಃಕರ್ತ್ರಭಿಪ್ರಾಯೇಕ್ರಿಯಾಫಲೇ** (ಪಾ. ಸೂ. ೧-೩-೭೨) ಕ್ರಿಯಾಫಲವು

ಕರ್ತೃವಿಗೆ ಸೇರುವಾಗ **ಸ್ವರಿತೇತ್ತು** ಅಥವಾ ಞಿತ್ತು ಆದ ಧಾತುಗಳ ಮುಂದೆ ಇರುವ ಲಕಾರದ ಸ್ಥಾನದ **ಆತ್ಮನೇ ಪದ** ಬರುವುದು ಎಂಬುದರಿಂದ ಹ್ವೇಞ್ ಧಾತುವಿನ ಮುಂದೆ ಬಂದ ಲಟ್ಟಿನ ಸ್ಥಾನದಲ್ಲಿ ಉತ್ತಮ ಪುರುಷ ಬಹುವಚನ **ಮಹಿಙ್-ತಿಪ್‌ತಸ್‌ಝಿ** (ಪಾ. ಸೂ. ೩-೪-೭೮) ಎಂಬುದರಿಂದ ಬರುವುದು. **ಟಿತಆತ್ಮನೇಪದಾನಾಂ ಟೇರೇ** (ಪಾ ಸೂ. ೩-೪-೭೯) ಟಕಾರೇತ್ಸಂಜ್ಞಕವಾದ ಲಕಾರಸ್ಥಾನದಲ್ಲಿ ಬಂದ ಆತ್ಮನೇಪ ಪ್ರತ್ಯಯದ ಟಿ ಗೆ ಏ ಬರುವುದು ಎಂಬುದರಿಂದ ಮಹಿ ಎಂಬುದರ ಇಕಾರಕ್ಕೆ ಏ ಬರುವುದು ಮಹೇ ಎಂದಾಗುವುದು **ಕರ್ತರಿಶಪ್** (ಪಾ.ಸೂ. ೩-೧-೬೮) ಕರ್ತ್ರರ್ಥಕವಾದ ಸಾರ್ವಧಾತುಕ ಪ್ರತ್ಯಯ ಪರದಲ್ಲಿರುವಾಗ ಧಾತುವಿನ ಮುಂ ಶಪ್‌ಬರುವುದು ಎಂಬುದರಿಂದ ಶಪ್ ವಿಕರಣ ಬರುವುದು. ಹ್ವೇ ಅ+ಮಹೇ **ಬಹುಲಂ ಛಂದಸಿ** (ಪಾ ಸೂ. ೬-೧-೩೪ ಇಲ್ಲಿ **ಹ್ವಃಸಂಪ್ರಸಾರಣಮ್** (ಪಾ. ಸೂ. ೬-೧-೩೨) ಎಂಬ **ಸೂತ್ರವು** ಅನುವೃತ್ತವಾಗುವುದು. ಛಂದಸ್ಸಿನ **ಹ್ವೇಞ್**‌ಧಾತುವಿಗೆ ಸಂಪ್ರಸಾರಣವು ಬಹುಲವಾಗಿ ಬರುವುದು ಎಂಬುದರಿಂದ ಧಾತುವಿನ ವಕಾರಕ್ಕೆ ಉಕಾ ಬಂದರೆ ಹು+ಏ+ಅ+ಮಹೇ **ಸಂಪ್ರಸಾರಣಾಚ್ಚ** (ಪಾ. ಸೂ- ೬-೧-೧೦೮) ಸಂಪ್ರಸಾರಣದ ಮುಂದೆ ಅಜ್ವಣ ಇದ್ದರೆ ಪೂರ್ವಪರಸ್ಥಾನಗಳಲ್ಲಿ ಪೂರ್ವರೂಪ ಬರುವುದು ಎಂಬುದರಿಂದ ಪೂರ್ವರೂಪ ಬಂದರೆ ಹು+ಅ+ಮಹೆ **ಸಾರ್ವಧಾತುಕಾರ್ಧಧಾತುಕಯೋಃ** (ಪಾ ಸೂ. ೭-೩-೮೪) ಎಂಬುದರಿಂದ ಗುಣ. ಉಕಾರಕ್ಕೆ ಓಕಾರ. **ಏಚೋಯವಾಯಾವಃ** (ಪಾ ಸೂ. ೬-೧-೭೮) ಎಂಬುದರಿಂದ ಓಕಾರಕ್ಕೆ ಅವ್ ಬಂದರೆ ಹವ್+ಅ+ಮಹೇ **ಅತೋದೀರ್ಘೋಯಞಿ** (ಪಾ. ಸೂ. ೭-೩-೧೦೧) ಯಞಾದಿಯಾದ ಸಾರ್ವಧಾತುಕಪ್ರತ್ಯಯ ಪರವಲ್ಲಿರುವಾ ಹ್ರಸ್ವಾಕಾರಾಂತವಾದ ಅಂಗಕ್ಕೆ ದೀರ್ಘಬರುವುದು ಎಂಬುದರಿಂದ ಮಹೇ ಎಂಬುದು ಪರದಲ್ಲಿರುವಾಗ ಅಕಾರಕ ದೀರ್ಘ ಬಂದರೆ ಹವಾಮಹೇ ಎಂದಾಗುವುದು. **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಅನುದಾತ್ತ

**ಯುಜಂ**—ಯುಜಸಮಾಧೌ ಎಂಬ ಧಾತುವಿನ ಮುಂದೆ ಕ್ವಿಪ್ ಪ್ರತ್ಯಯವನ್ನು ಹಚ್ಚುವುದು ಪಕಾರಕ್ಕೆ **ಹಲನ್ತ್ಯಂ** (ಪಾ. ಸೂ. ೧-೩-೩) ಎಂಬುದರಿಂದ 'ಇಕಾರಕ್ಕೆ **ಉಪದೇಶೇಽಜನುನಾಸಿಕಇತ್** (ಪಾ ಸೂ. ೧-೩-೨) ಎಂಬುದರಿಂದಲೂ ಕಕಾರಕ್ಕೆ **ಲಶಕ್ವತದ್ಧಿತೇ** (ಪಾ. ಸೂ. ೧-೩-೮) ಎಂಬುದರಿಂದಲ ಇತ್ಸಂಜ್ಞೆ ಬರುವುದು. **ತಸ್ಯಲೋಪಃ** (ಪಾ. ಸೂ. ೧-೩-೯) ಎಂಬುದರಿಂದ ಲೋಪ. ವಕಾರಕ್ಕೆ **ವೇರಪೃಕ್ತಸ್ಯ** (ಪಾ. ಸೂ. ೬-೧-೬೭) ಅಪೃಕ್ತವಾದ (ಒಂದೇ ವರ್ಣಾತ್ಮಕಪ್ರತ್ಯಯವಾದ) ವಕಾರಕ್ಕೆ ಲೋಪ ಬರುವುದು ಎಂಬುದರಿಂದ **ಲೋಪ**. ಅಂತುಕ್ವಿಪ್ ಪ್ರತ್ಯಯದಲ್ಲಿ ಎಲ್ಲಾ ವರ್ಣಗಳಿಗೂ ಲೋಪ ಬರುವುದು. ಇದರ ಮುಂ ದ್ವಿತೀಯಾ ಏಕವಚನ ಅಮ್ ಪ್ರತ್ಯಯವನ್ನು ಹಚ್ಚಿದರೆ ಯುಜ್+ಅಮ್ ಎಂದಿರುವಾಗ **ಯುಜೇರಸಮಾಸೇ** (ಪಾ. ಸೂ. ೭-೧.೭೧) ಸಮಾಸದಲ್ಲಿ ಶೇರದೇ ಇರುವ ಯುಜ್ ಎಂಬುದಕ್ಕೆ ಸರ್ವನಾಮಸ್ಥಾನ ಪರದಲ್ಲಿರುವಾ ನುಮ್ ಆಗಮ ಬರುವುದು ಎಂಬುದರಿಂದ ನುಮಾಗಮ ಪ್ರಾಪ್ತವಾಗುವುದು. ಆದರೆ **ಸೂತ್ರದಲ್ಲಿ** ಯುಜೇ ಎಂದು ಇಕಾರವಿರುವ ಯುಜ ಧಾತುವನ್ನು ನಿರ್ದೇಶಮಾಡಿರುವುದರಿಂದ ಯುಜಿರ್‌ಯೋಗೇ ಎಂಬುದಕ್ಕೆ ನುಮ ಆಗಮ ಬರುವುದೇ ವಿನಾ ಇಕಾರವಿಲ್ಲದೇಇರುವ ಯುಜಸಮಾಧೌ ಎಂಬುದಕ್ಕೆ ನುಮಾಗಮಬರುವುದಿಲ್ಲ ಯುಜಿರ್ ಯೋಗೇ ಎಂಬುದನ್ನೇ ಇಲ್ಲಿ ತೆಗೆದುಕೊಂಡರೆ ಅನಿತ್ಯಮಾಗಮಶಾಸನಮ್ (ಪರಿಭಾ. ೯೩-೨) ಆಗಮವನ್ನು ವಿಧಿಸುವ ಶಾಸ್ತ್ರವು ಅನಿತ್ಯವು ಎಂಬುದರಿಂದ ಯುಜೇರಸಮಾಸೇ ಎಂಬ ನುಮ್ ಆಗಮವಿಧಾಯಕಶಾಸ್ತ್ರ ಅನಿತ್ಯವಾದ್ದರಿಂದ ನುಮಾಗಮ ಬರುವುದಿಲ್ಲ ಎಂದಾದರೂ ನುಮಾಗಮವನ್ನು ವಾರಣೆಮಾಡಬೇಕು.

**ವೃತ್ರೇಷು**-**ವೃತುವರ್ತನೇ ಧಾತು**. ಪ್ರತಿಕೂಲತಯಾ ವರ್ತಂತೇ ಇತಿ (ಪ್ರತಿಕೂಲವಾಗಿ ಇರುವರು ವೃತ್ರಾಣಿ--ಶತ್ರುಗಳ ಸಮೂಹವೆಂದು ಅರ್ಥ. **ಸ್ಫಾಯಿತಞ್ಚಿವಞ್ಚಿಶಕಿಕ್ಷಿಪಿಕ್ಷುದಿಸೃಪಿದೃಪಿವನ್ದ್ಯುನ್ದಿಶ್ವಿತಿವೃ**

ತ್ಯಜಿನೀಪದಮದಿಮುದಿ ಖಿದಿ ಛಿದಿ ಭಿದಿ ಮನ್ದಿ ಚನ್ದಿ ದಹಿ ದಸಿ ದಂಭಿ ವಸಿ ವಾಶಿ ಶೀಙ್ ಹಸಿ ಸಿಧಿ ಶುಭಿ ಯೋರಕ್ (ಉ.ಸೂ. ೨-೧೭೦) ಸ್ಫಾಯಿತಾವೃದ್ಧೌ ತಞ್ಚು ಸಂಕೋಚನೇ ವಞ್ಚು ಪ್ರಲಂಭನೇ ಶಕ್ಲೃ ಶಕ್ತೌ ಕ್ಷಿಪ ಪ್ರೇರಣೇ ಕ್ಷುದಿರ್ ಸಂಪೇಷಣೇ ಸೃಪ್ಲೃಗತೌ ತೃಪಪ್ರೀಣನೇ ದೃಪ ಹರ್ಷಮೋಚನಯೋಃ ವದಿ ಅಭಿವಾದನಸ್ತುತ್ಯೋಃ ಉನ್ದೀ ಕ್ಲೇದನೇ ಶ್ವಿತಾವರ್ಣೇ ವೃತುವರ್ತನೇ ಅಜಗತಿಕ್ಷೇಪಣಯೋಃ ಣೀಞ್ ಪ್ರಾಪಣೇ ಪದಗತೌ ಮದೀಹರ್ಷೇ ಮುದಹರ್ಷೇ ಖಿದದೈನ್ಯೇ ಛಿದಿರ್ ದ್ವೈಧೀಕರಣೇ ಭಿದಿರ್ ವಿದಾರಣೇ ಮದಿಸ್ತುತೌ ಚದಿ ಆಹ್ಲಾದನೇ ದಹಭಸ್ಮೀಕರಣೇ ದಸುಉಪಕ್ಷೇಪೇ ದಮ್ಭುದಮ್ಭನೇ ವಸನಿವಾಸೇ ವಾಶೃಶಬ್ದೇ ಶೀಙ್ಸ್ವಪ್ನೇ ಹಸಿಹಸನೇ ಷಿಧಗತ್ಯಾಂ ಶುಭದೀಪ್ತೌ ಈ ೩೨ ಧಾತುಗಳ ಮುಂದೆ ರಕ್ ಪ್ರತ್ಯಯ ಬರುವುದು ಎಂಬುದರಿಂದ ವೃತುವರ್ತನೇ ಎಂಬುದರ ಮುಂದೆ ರಕ್ ಬಂದರೆ ವೃತ್+ರ ಪ್ರತ್ಯಯವು ಕಿತ್ತಾದ್ದರಿಂದ ಗುಣಬರುವುದಿಲ್ಲ. ಸಪ್ತಮೀಬಹುವಚನದಲ್ಲಿ ವೃತ್ರೇಷು ಎಂದಾಗುವುದು. ಪ್ರತ್ಯಯಸ್ವರದಿಂದ ಅಂತೋದಾತ್ತ ವೃತ್ರಶಬ್ದ.

ವಜ್ರಿಣಂ—ಅತಇನಿಠನೌ (ಪಾ. ಸೂ. ೫-೨-೧೧೫) ಎಂಬುದರಿಂದ ಇನಿಪ್ರತ್ಯಯ. ಪ್ರತ್ಯಯಸ್ವರ ಬರುವುದು. ‖ ೫ ‖

‖ ಸಂಹಿತಾಪಾಠಃ ‖

ಸ ನೋ ವೃಷನ್ನಮುಂ ಚರುಂ ಸತ್ರಾದಾವನ್ನಪಾ ವೃಧಿ ।
ಅಸ್ಮಭ್ಯಮಪ್ರತಿಷ್ಕುತಃ ‖ ೬ ‖

‖ ಪದಪಾಠಃ ‖

ಸಃ । ನಃ । ವೃಷನ್ । ಅಮುಂ । ಚರುಂ । ಸತ್ರಾऽದಾವನ್ । ಅಪ । ವೃಧಿ ‖
ಅಸ್ಮಭ್ಯಂ । ಅಪ್ರತಿऽಸ್ಕುತಃ ‖ ೬ ‖

‖ ಸಾಯಣಭಾಷ್ಯಂ ‖

ಹೇ ಸತ್ರಾದಾವನ್ ಅಸ್ಮದಭೀಪ್ಸಾನಾಂ ಸರ್ವೇಷಾಂ ಫಲಾನಾಂ ಸಹ ಪ್ರದಾತಃ ಅತೋ ವ್ರೀಹ್ಯಾದಿನಿಷ್ಪತ್ತ್ಯರ್ಥಂ ಹೇ ವೃಷನ್ ವೃಷ್ಟಿಪ್ರದೇಂದ್ರ ನೋಽಸ್ಮದರ್ಥಮಮುಂ ದೃಶ್ಯಮಾನಂ ಚರುಂ ಮೇಘಮಪಾ ವೃಧಿ । ಉದ್ಘಾಟಯ । ತಥೈವಾಸ್ಮಭ್ಯಮಸ್ಮದರ್ಥಮಪ್ರತಿಷ್ಕುತಃ ಪ್ರತಿಶಬ್ದರಹಿತಃ । ಯದ್ಯದಸ್ಮಾಭಿರ್ಯಾಚ್ಯತೇ ತತ್ರ ಸರ್ವತ್ರ ನೇತಿ ಪ್ರತಿಶಬ್ದಂ ನೋಚ್ಚಾರಯತಿ । ಅತೋಽಸ್ಮದ್ವಿಷಯೇ ಕದಾಚಿದಪ್ಯಪ್ರತಿಸ್ಖಲಿತಃ । ಏತದೇವಾಭಿಪ್ರೇತ್ಯ ಯಾಸ್ಕ ಆಹ । ಅಪ್ರತಿಷ್ಕುತೋಽಪ್ರತಿಷ್ಕೃತೋಽ

ಪ್ರತಿಸ್ಖಲಿತೋ ವಾ। ನಿ ೬-೧೬ । ಇತಿ ॥ ವೃಷನ್ । ಆಮಂತ್ರಿತನಿಘಾತಃ । ಅಮುಂ । ಪ್ರಾತಿಪದಿಕಸ್ವ। ರೇಣಾಂತೋದಾತ್ತಃ ! ಚರುಂ । ಚರತೀತಿ ಚರುಃ । ಭೃಮೃಶೀತೃಚರಿತ್ಸರಿತನಿಧನಿಮಿಮಸ್ಜಿಭ್ಯ ಉಃ - ಉ. ೧-೭ । ಇತ್ಯುಪ್ರತ್ಯಯಃ । ಪ್ರತ್ಯಯಸ್ವರೇಣಾಂತೋದಾತ್ತಃ । ಸತ್ರಾದಾವನ್ । ಸತ್ರಾಶಬ್ದಃ ಸಹಾರ್ಥೇ । ಅಭಿಮತಫಲಜಾತಂ ಸಕಲಂ ಸಹ ದದಾತೀತಿ ಸತ್ರಾದಾವಾ । ಆತೋಮನಿನ್ಕ್ವನಿಬ್ವನಿ- ಪಶ್ಚ । ಪಾ. ೩-೨-೭೪। ಇತಿ ವನಿಪ್ । ಆಮಂತ್ರಿತಸ್ಯ ಚೇತ್ಯಾದ್ಯುದಾತ್ತತ್ವಂ । ಪಾದಾದಿತ್ವಾನ್ನ ನಿಘಾತಃ। ಅಪ । ನಿಪಾತಸ್ಯ ಚ-। ಪಾ. ೬-೩-೧೩೬ । ಇತಿ ದೀರ್ಘಃ । ನಿಪಾತ ಆದ್ಯುದಾತ್ತಃ । ವೃಧಿ । ವೃಞ್ ವರಣೇ । ಲೋಟಃ ಸಿಪ್ । ತಸ್ಯ ಸೇರ್ಹ್ಯಪಿಚ್ಚ । ಪಾ ೩-೪-೮೭ । ಇತಿ ಹಿಃ । ಸ್ವಾದಿಭ್ಯಃ ಶ್ನುಃ । ಪಾ. ೩-೧-೭೩ । ತಸ್ಯ ಬಹುಲಂ ಛಂದಸೀತಿ ಲುಕ್ । ಶ್ರುಶೃಣುಪೄಕೃವೃಭ್ಯಶ್ಛಂದಸಿ । ಪಾ. ೬-೪ ೧೦೨ । ಇತಿಹೇರ್ಧಿರಾದೇಶಃ । ತಸ್ಯ ಙಿತ್ವಾತ್ಸ್ವತ್ಪೂರ್ವಸ್ಯ ಗುಣಾಭಾವಃ । ನಿಘಾತಃ । ಅಸ್ಮಭ್ಯಂ । ಅಸ್ಮಚ್ಛಬ್ದಾ- ಚ್ಭ್ಯಸೋ ಭ್ಯಂ । ಪಾ ೭-೧-೩೦ । ಇತಿ ಭ್ಯಮಾದೇಶಃ । ಶೇಷೇ ಲೋಪಃ । ಪಾ.೭-೨-೯೦ । ಇತಿ ದಕಾರ। ಲೋಪಃ । ಬಹುವಚನೇ ಝಲ್ಯೇತ್ । ಪಾ. ೭-೩-೧೦೩ । ಇತ್ಯೇವಂ ನ ಭವತಿ । ಅಂಗವೃತ್ತೇ ಪುನರ್ವೃ- ತ್ತಾವವಿಧಿರ್ನಿಷ್ಠಿತಸ್ಯೇತ್ಯುಕ್ತಂ। ಮ. ೭-೧-೩೦। ಪ್ರಾತಿಪದಿಕಸ್ವರೇಣ ಸ್ಮೇತ್ಯಕಾರ ಉದಾತ್ತಃ। ಭ್ಯಸೋಽಭ್ಯ- ಮಿತ್ಯಭ್ಯಮಾದೇಶಪಕ್ಷೇ ಶೇಷೇ ಲೋಪ ಇತಿ ಮಪರ್ಯಂತ ಶೇಷಸ್ಯಾದ್‌ಶಬ್ದಸ್ಯ ಲೋಪಃ । ತದೋದಾತ್ತ ನಿವೃತ್ತಿಸ್ವರೇಣಾಭ್ಯಮ ಆದೇರಕಾರಸ್ಯೋದಾತ್ತತ್ವಂ । ಪಾ- ೬ ೧-೧೬೧। ಅಪ್ರತಿಷ್ಕುತಃ । ಕೇನಚಿದಪ್ರತಿ- ಶಬ್ದಿತಃ ।ಕುಙ್ ಶಬ್ದೇ । ನಿಷ್ಠಾ । ಪಾ. ೩-೨-೧೦೨ । ಇತಿ ಕರ್ಮಣಿ ಕ್ತಪ್ರತ್ಯಯಃ । ಪ್ರತೇಃ। ಪ್ರಾಕ್ಪ್ರ- ಯೋಗಃ ಪಾರಸ್ಕರಾದೇರಾಕೃತಿಗಣತ್ವಾತ್ಸುಡಾಗಮಃ । ಪಾ- ೬-೧-೧೫೭ । ಸುಷಾಮಾದೇರಾಕೃತಿಗಣ- ತ್ವಾತ್ಷತ್ವಂ ಪಾ. ೮-೩-೯೮ । ನಞ್‌ಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

ಸತ್ರಾದಾವನ್—ನಮ್ಮ ಸಮಸ್ತ ಅಭೀಷ್ಟಗಳನ್ನೂ ಕೊಡುವವನಾದ । (ಆದಕಾರಣದಿಂದಲೇ) । ವೃಷನ್—ವೃಷ್ಟಿಪ್ರದನಾದ ಎಲೈ ಇಂದ್ರನೇ । ಸಃ (ತ್ವಂ)—ಇಂತಹ ನೀನು। ನಃ—ನಮಗೆ। ಅಮುಂ--ನಮ್ಮ ಕಣ್ಣಿಗೆ ಕಾಣಿಸುತ್ತಿರುವ ಈ । ಚರುಂ—ಮೇಘವನ್ನು ।ಅಪಾವೃಧಿ—ಮಳೆಹುಯ್ಯುವಂತೆ ಮಾಡು । (ಏಕೆಂದರೆ ನೀನು) ಅಸ್ಮಭ್ಯಂ—ನಮಗಾಗಿ ಅಥವಾ ನಮ್ಮ ವಿಷಯದಲ್ಲಿ । ಅಪ್ರತಿಷ್ಕುತಃ—ವಿಮುಖನಾಗಿಲ್ಲ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ನಮ್ಮ ಸಮಸ್ತ ಅಭೀಷ್ಟಗಳನ್ನೂ ನೆರವೇರಿಸಿಕೊಡತಕ್ಕವನು. ಆದುದರಿಂದಲೇ ಈಗ ಅಂತರಿಕ್ಷದಲ್ಲಿ ನಮ್ಮ ಕಣ್ಣಿಗೆ ಕಾಣಿಸುತ್ತಿರುವ ಮೇಘವನ್ನು ಮಳೆಹುಯ್ಯುವಂತೆ ಮಾಡು. ನೀನು ಯಾವಾ ಗಲೂ ನಮ್ಮ ಪ್ರಾರ್ಥನೆಯನ್ನು ತಿರಸ್ಕರಿಸಿದವನಲ್ಲ.

॥ ವಿಶೇಷವಿಷಯಗಳು ॥

ವೃಷನ್—ವೃಷ್ಟಿಪ್ರದ, ಮಳೆಯನ್ನು ಉಂಟುಮಾಡುವ. ವೃಷಶಬ್ದಕ್ಕೆ ಆಧುನಿಕಸಂಸ್ಕೃತದಲ್ಲಿ ವೃಷಭ, ಹೋರಿ, ಶ್ರೇಷ್ಠ, ಪೌರುಷಯುಕ್ತವಾದ ಎಂಬ ನಾನಾರ್ಥಗಳಿವೆ. ಋಗ್ವೇದದಲ್ಲಿ ಈ ಶಬ್ದವು ಇಂದ್ರನ ಪರವಾಗಿ ಅನೇಕ ಕಡೆಗಳಲ್ಲಿ ಉಪಯೋಗಿಸಲ್ಪಟ್ಟಿರುವುದು.

ಚರುಂ—ಅಂತರಿಕ್ಷೇ ಚರತೀತಿ ಚರುಃ—ಅಂತರಿಕ್ಷದಲ್ಲಿ ಸಂಚರಿಸುವುದರಿಂದ ಮೇಘಕ್ಕೆ ಚರುವೆಂದು ಹೆಸರು ಅದ್ರಿಃ ಮೊದಲಾದ ಮೂವತ್ತು ಮೇಘನಾಮಗಳಲ್ಲಿ ಚರುಃ ಎಂಬ ಶಬ್ದವು ಪಠಿತವಾಗಿದೆ (ನಿ.೨-೨೧)

ಸತ್ರಾದಾವನ್—ಸತ್ರಶಬ್ದಕ್ಕೆ ಸಹ ಎಂದು ಭಾಷ್ಯಕಾರರು ಅರ್ಥಮಾಡಿರುವರು ಎಂದರೆ ಸಕಲವನ್ನು ಸಹ ಕೊಡುವವನು ಎಂದರ್ಥವು ಆದರೆ ನಿರುಕ್ತದಲ್ಲಿ ಬಟ್ ಮೊದಲಾದ ಆರು ಸತ್ಯವಾಚಕಶಬ್ದಗಳ ಮಧ್ಯದಲ್ಲಿ ಸತ್ರಾ ಎಂಬ ಶಬ್ದವು ಪಠಿತವಾಗಿದೆ. (ನಿ. ೩-೧೩) ಆದುದರಿಂದ ಸತ್ರಾದಾವನ್ ಶಬ್ದಕ್ಕೆ ಸತ್ಯವಾಗಿಯೂ (ಅಭೀಷ್ಟಗಳನ್ನು) ಕೊಡುವವನು ಎಂದರ್ಥವನ್ನು ಹೇಳಬಹುದು.

ಅಪೆ—ಛಂದಸ್ಸಿನ ಅನುಕೂಲಕ್ಕಾಗಿ ಈ ಶಬ್ದದ ಪಕಾರವು ಸಂಹಿತಾಪಾಠದಲ್ಲಿ ದೀರ್ಘವಾಗಿರುವುದು.

ಅಪ್ರತಿಷ್ಕುತಃ—ಈ ಶಬ್ದಕ್ಕೆ ಯಾಸ್ಕರು ತಮ್ಮ ನಿರುಕ್ತದಲ್ಲಿ ಅಪ್ರತಿಷ್ಕುತೋಽಪ್ರತಿಷ್ಕೃತೋಽಪ್ರತಿ ಸ್ಖಲಿತೋ ವಾ ಎಂದು ಅರ್ಥವಿವರಣೆ ಮಾಡಿರುವರು. ಎಂದರೆ (ನಮ್ಮ ಪ್ರಾರ್ಥನೆಯನ್ನು) ತಿರಸ್ಕರಿಸುವವನಲ್ಲದ ಮಾತಿಗೆ ತಪ್ಪದ, ಎಂದರ್ಥವು.

## ವ್ಯಾಕರಣಪ್ರಕ್ರಿಯಾ

ವೃಷನ್—ಆಮಂತ್ರಿತಸ್ಯಚ (ಪಾ. ಸೂ. ೮-೧-೧೯) ಎಂಬುದರಿಂದ ಅನುದಾತ್ತ. ಅಮುನ್ನು ಪ್ರಾತಿ ಪದಿಕ ಸ್ವರದಿಂದ ಅಂತೋದಾತ್ತ. ಚರುಂ—ಚರತೀತಿ ಚರುಃ ಭೃ ಮೃ ಶೀತ್ಸ್ವಾ ಚರಿತ್ಸರಿ ತನಿ ಧನಿ ಮಿ ಮಸ್ಜಿ ಭ್ಯಉಃ (ಉ- ಸೂ. ೧-೭) ಭೃಞ್‌ಭರಣೇ ಮೃಙ್‌ಪ್ರಾಣತ್ಯಾಗೇ ಶೀಙ್‌ಸ್ವಪ್ನೇ ತ್ಸರ ಪ್ಲವನತರಣಯೋಃ ಚರಗತಿ ಭಕ್ಷಣಯೋಃ ತ್ಸರಛದ್ಮಗತೌ ತನುವಿಸ್ತಾರೇ ಧನಧಾನ್ಯೇ ಡುಮಿಞ್‌ಪ್ರಕ್ಷೇಪಣೇ ಟುಮಸ್ಜೋಶುದ್ಧೌ ಈಧಾತು ಗಳ ಮುಂದೆ ಉಪ್ರತ್ಯಯಬರುವುದು. ಎಂಬುದರಿಂದ ಚರಧಾತುವಿನಮುಂದೆ ಉಪ್ರತ್ಯಯಬಂದರೆ ಚರು ಎಂದಾ ಗುವುದು. ಪ್ರತ್ಯಯಸ್ವರದಿಂದ ಅಂತೋದಾತ್ತ. ದ್ವಿತೀಯಾ ಏಕವಚನದಲ್ಲಿ ಚರುಂ ಎಂದಾಗುವುದು.

ಸತ್ರಾದಾವ—ಸತ್ರಾ ಶಬ್ದಕ್ಕೆ ಸಹ (ಒಟ್ಟಿಗೆ=ಒಂದೇಕಾಲದಲ್ಲಿ) ಎಂದರ್ಥ. ಸತ್ರಾ (ಅಭಿಮತಫಲ ಜಾತಂ ಸಕಲಂಸಹ) ಇಷ್ಟವಾದ ಫಲಗಳನ್ನೆಲ್ಲಾ ಒಂದೇ ಕಾಲದಲ್ಲಿ ದದಾತಿ=ಕೊಡುತ್ತಾನೆ ಇತಿ ಸತ್ರಾದಾವಾ ಎಂದು ವಿಗ್ರಹ. ಸತ್ರಾಶಬ್ದೋಪಪದಕವಾದ ದಾಧಾತುವಿಗೆ ಆತೋಮನಿನ್‌ಕ್ವನಿಬ್ವನಿಪಶ್ಚ (ಪಾ. ಸೂ. ೩-೨-೭೪) ಎಂಬುದರಿಂದ ವನಿಪ್ ಪ್ರತ್ಯಯ ಬರುವುದು, ಎರಡನೇ ಪಾದದ ಆದಿಯಲ್ಲಿರುವುದರಿಂದ ಅಷ್ಟಮಿಕಾನುದಾತ್ತ ಬರುವುದಿಲ್ಲ. ಆಮಂತ್ರಿತಸ್ಯಚ (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತ ಬರುವುದು.

ಅಪೆ—ನಿಪಾತಸ್ಯಚ (ಪಾ. ಸೂ. ೬-೩-೧೩೬) ಮಂತ್ರದಲ್ಲಿರುವ ನಿಪಾತಕ್ಕೆ ದೀರ್ಘಬರುವುದು. ಎಂಬುದರಿಂದ ದೀರ್ಘಬರುವುದು. ನಿಪಾತಾಆದ್ಯುದಾತ್ತಾಃ (ಫಿ. ಸೂ. ೮೦) ಎಂಬುದರಿಂದ ಆದ್ಯುದಾತ್ತ.

ವೃಧಿ—ವೃಞ್‌ವರಣೇ. ಇದರ ಮುಂದೆ ಲೋಟ್ ಅದಕ್ಕೆ ಪರಸ್ಮೈಪದ ಮಧ್ಯಮಪುರುಷ ಏಕವಚನ ಪ್ರತ್ಯಯಸಿಪ್ ವೃ+ಸಿ ಸೇರ್ಹ್ಯಪಿಚ್ಚ (ಪಾ. ಸೂ. ೩-೪-೮೭) ಲೋಟ್‌ಸ್ಥಾನದಲ್ಲಿ ಬಂದ ಸಿ ಗೆ ಹಿ ಆದೇಶ ಬರು ವುದು ಎಂಬುದರಿಂದ ಹಿ ಆದೇಶ. ಸ್ವಾದಿಭ್ಯಃಶ್ನುಃ (ಪಾ. ಸೂ. ೩-೧-೭೩) ಕರ್ತ್ರರ್ಥಕ ಸಾರ್ವಧಾತುಕ ಪರ ದಲ್ಲಿರುವಾಗ ಸ್ವಾದಿಗಣಪಠಿತ ಧಾತುವಿನ ಮುಂದೆ ಶ್ನುವಿಕರಣಬರುವುದು ಎಂಬುದರಿಂದ ಶ್ನುಪ್ರತ್ಯಯ. ಅದಕ್ಕೆ ಬಹುಲಂಛಂದಸಿ (ಪಾ. ಸೂ. ೨-೪-೭೩) ಎಂಬಲ್ಲಿ ಬಹುಲಗ್ರಹಣದಿಂದ ಶ್ನುಪ್ರತ್ಯಯಕ್ಕೂ ಕ್ವಚಿತ್‌ಲುಕ್

ಬರುವುದು. ಎಂಬುದರಿಂದ ಶ್ನುಪ್ರತ್ಯಯಕ್ಕೆ ಲುಕ್. **ಶ್ರು ಶೃ ಣು ಪ್ಲ ಕೃ ವೃ ಭ್ಯಶ್ಛಂದಸಿ** (ಪಾ.ಸೂ. ೬-೪-೧೯) ಈ ಧಾತುಗಳ ಮುಂದೆ ಇರುವ ಹಿಗೆ ಧಿ ಆದೇಶ ಬರುವುದು ಎಂಬುದರಿಂದ ಧಿ ಆದೇಶ. ಹಿ ಎಂಬುದು **ಸಾರ್ವಧಾತುಕಮಪಿತ್** (ಪಾ. ಸೂ. ೧-೨-೪) ಎಂಬುದರಿಂದ ಙಿತ್ತು. ಆದಕಾರಣ **ಕ್ಙಿತಿಚ** (ಪಾ. ಸೂ. ೧-೧-೫) ಎಂದು ನಿಷೇಧ ಬರುವುದರಿಂದ **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಗುಣಬರುವುದಿಲ್ಲ. **ತಿಙ್ಙತಿಙಃ** (ಪಾ. ಸೂ. ೧೮-೧-೨೮) ಎಂಬುದರಿಂದ ಅನುದಾತ್ತ ಬರುವುದು.

**ಅಸ್ಮಭ್ಯಮ್**—ಅಸ್ಮದ್ ಶಬ್ದದ ಮುಂದೆ ಚತುರ್ಥೀ ಬಹುವಚನಸಂಜ್ಞಕವಾದ ಭ್ಯಸ್ ಪ್ರತ್ಯಯವನ್ನಿಟ್ಟರೆ **ಭ್ಯಸೋ ಭ್ಯಮ್** (ಪಾ. ಸೂ. ೭-೧-೩೦) ಯುಷ್ಮದ್ ಅಸ್ಮದ್ ಶಬ್ದಗಳ ಮುಂದೆ ಇರುವ ಚತುರ್ಥೀ ವಿಭಕ್ತಿಯ ಭ್ಯಸ್ಸಿಗೆ ಭ್ಯಮ್ ಆದೇಶ ಬರುವುದು ಎಂಬುದರಿಂದ ಭ್ಯಮಾದೇಶ ಬಂದರೆ, ಅಸ್ಮದ್+ಭ್ಯಮ್ **ಶೇಷೇ ಲೋಪಃ** (ಪಾ. ಸೂ. ೭-೨-೯೦) **ಅಷ್ಟನ ಆವಿಭಕ್ತೌ** (ಪಾ ಸೂ. ೭.೨-೮೪) ಎಂಬುದರಿಂದ **ವಿಭಕ್ತೌ** ಎಂಬುದು ಅನುವೃತ್ತವಾಗುವುದು. ಶೇಷೇ ಎಂಬುದು ಅದಕ್ಕೆ ವಿಶೇಷಣ, ಆತ್ವ ಯತ್ವಗಳಿಗೆ ನಿಮಿತ್ತವಾಗದೇ ಇರುವ ವಿಭಕ್ತಿಯು ಪರದಲ್ಲಿರುವಾಗ ಯುಷ್ಮದ್ ಅಸ್ಮದ್ ಶಬ್ದಗಳ ಕೊನೆಯ ವರ್ಣಕ್ಕೆ ಲೋಪ ಬರುವುದು ಎಂಬುದರಿಂದ ದ್‌ಗೆ ಲೋಪ. ಅಸ್ಮ+ಭ್ಯಮ್ ಎಂದಿರುವಾಗ **ಬಹುವಚನೇ ಝಲ್ಯೇತ್** (ಪಾ.ಸೂ. ೭-೩-೧೦೩) ಝಲಾದಿಯಾದ ಬಹುವಚನಪರದಲ್ಲಿರುವಾಗ ಹ್ರಸ್ವಾಕಾರಾಂತವಾದ ಅಂಗಕ್ಕೆ ಏತ್ವ ಬರುವುದು ಎಂಬುದರಿಂದ ಏತ್ವ ಪ್ರಾಪ್ತವಾಗುವುದು. ಆದರೂ **ಅಂಗವೃತ್ತೇ ಪುನರ್ವೃತ್ತಾವವಿಧಿರ್ನಿಷ್ಠಿತಸ್ಯ** (ಪಾ ಪ. ೭-೧-೩೦) ಅಂಗಾಧಿಕಾರಪಠಿತವಾದ ಒಂದು ಶಾಸ್ತ್ರವು ಪ್ರವೃತ್ತಿಸಿದ ಮೇಲೆ ಲಕ್ಷ್ಯವು ಪರಿನಿಷ್ಠಿತವಾದರೆ ತಿರುಗಿ ಅಂಗಾಧಿಕಾರಪಠಿತವಾದ ಮತ್ತೊಂದು ಶಾಸ್ತ್ರವು ಪ್ರವೃತ್ತಿಸುವುದಿಲ್ಲ ಎಂಬುದರಿಂದ **ಶೇಷೇ ಲೋಪಃ** (ಪಾ ಸೂ. ೭-೨-೯೦) ಎಂಬ ಅಂಗಾಧಿಕಾರಶಾಸ್ತ್ರ ಪ್ರವೃತ್ತಿಸಿದ ಮೇಲೆ ಲಕ್ಷ್ಯವು ಪರಿನಿಷ್ಠಿತವಾಗುವುದರಿಂದ ಬಹುವಚನೇ ಝಲ್ಯೇತ್ ಎಂಬ ಅಂಗಾಧಿಕಾರಪಠಿತವಾದ ಮತ್ತೊಂದು ಶಾಸ್ತ್ರವು ಪ್ರವೃತ್ತಿಸುವುದಿಲ್ಲ. ಇದೇ ರೀತಿಯಲ್ಲಿ **ಸುಪಿಚ** (ಪಾ ಸೂ. ೭-೩-೧೦೨) ಯಞಾದಿಯಾದ ಸುಬ್ವಿಭಕ್ತಿ ಪರದಲ್ಲಿರುವಾಗ ಹ್ರಸ್ವಾಕಾರಾಂತವಾದ ಅಂಗಕ್ಕೆ ದೀರ್ಘಬರುವುದು ಎಂಬುದರಿಂದ ದೀರ್ಘವೂ ಬರುವುದಿಲ್ಲ ಎಂದು ಹೇಳಿಕೊಳ್ಳಬೇಕು. ಅಸ್ಮ ಎಂಬಲ್ಲಿ **ಫಿಷಃ** (ಫಿ. ಸೂ. ೧) ಪ್ರಾತಿಪದಿಕದ ಕೊನೆಯ ವರ್ಣವು ಉದಾತ್ತವಾಗುವುದು ಎಂಬುದರಿಂದ ಸ್ಮ ಎಂಬುದು ಉದಾತ್ತ **ಅನುದಾತ್ತೌ ಸುಪ್ಪಿತೌ** (೩-೧-೪) ಎಂಬುದರಿಂದ ಭ್ಯಮ್ ಅನುದಾತ್ತವಾಗಿ ಉದಾತ್ತಾದನುದಾತ್ತಸ್ಯ ಸ್ವರಿತಃ ಎಂಬುದರಿಂದ ಸ್ವರಿತ. ಮೊದಲನೇ ಅಕಾರವು ಶೇಷನಿಘಾತದಿಂದ ಅನುದಾತ್ತ. ಅಥವಾ **ಭ್ಯಸೋಽಭ್ಯಮ್** (ಪಾ. ಸೂ. ೭-೧-೩೦) ಇಲ್ಲಿ ಅಭ್ಯಮ್ ಎಂದು ಪದಚ್ಛೇದ ಯುಷ್ಮದ್, ಅಸ್ಮದ್ ಶಬ್ದಗಳ ಮುಂದಿರುವ ಚತುರ್ಥೀವಿಭಕ್ತಿಯ ಭ್ಯಸ್ಸಿಗೆ ಅಭ್ಯಮ್ ಆದೇಶ ಬರುವುದು ಎಂದರ್ಥ ಇದರಿಂದ ಅಭ್ಯಮಾದೇಶಬಂದರೆ ಅಸ್ಮದ್+ಅಭ್ಯಮ್ **ಶೇಷೇ ಲೋಪಃ** (ಪಾ. ಸೂ. ೭-೨-೯೦) ಶೇಷೇ ಇಲ್ಲಿ ಸ್ಥಾನಿನಃ ಅಧಿಕರಣತ್ವ ವಿವಕ್ಷಯಾ ಸಪ್ತಮೀ. ಶಿಷ್ಟಸ್ಯ ಎಂದರ್ಥ. ವಿಭಕ್ತಿ ಪರದಲ್ಲಿರುವಾಗ ಯುಷ್ಮದ್ ಅಸ್ಮದ್ ಶಬ್ದಗಳ ಮ ಪರ್ಯಂತಕ್ಕಿಂತಲೂ ಮುಂದೆ ಉಳಿದಿರುವ ಅದ್ ಎಂಬುದಕ್ಕೆ ಲೋಪ ಬರುವುದು ಎಂದು ಸೂತ್ರಾರ್ಥ. ಇದರಿಂದ ಅದ್‌ಗೆ ಲೋಪ ಬಂದರೆ ಅಸ್ಮ್+ಅಭ್ಯಮ್ ಎಂದಾಗುವುದು. ಈಗ ಏತ್ವಕ್ಕೂ ದೀರ್ಘಕ್ಕೂ ಪ್ರಾಪ್ತಿಯೇ ಇರುವುದಿಲ್ಲ. ಅಭ್ಯಮ್‌ನ ಅನುದಾತ್ತಾಕಾರಪರವಾಗಿರುವಾಗ ಅಸ್ಮದ್ ಎಂಬುದರ ಉದಾತ್ತಾಕಾರಕ್ಕೆ ಲೋಪಬಂದಿರುವುದು. ಆದ್ದರಿಂದ **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ** (ಪಾ ಸೂ. ೬-೧-೧೬೧) ಯಾವ ಅನುದಾತ್ತ ಪರದಲ್ಲಿರುವಾಗ ಉದಾತ್ತಕ್ಕೆ ಲೋಪ ಬರುವುದೋ ಆ ಅನುದಾತ್ತವು ಉದಾತ್ತವಾಗುವುದು ಎಂಬುದರಿಂದ

ಅಭ್ಯಮ್‌ನ ಆದಿಯ ಅಕಾರ ಉದಾತ್ತವಾಗುವುದು. ಅಭ್ಯಮ್ ಎಂದು ಭೇದವಮಾಡಿದಾಗ **ಶೇಷೇ ಲೋಪಃ** ಎಂಬುದಕ್ಕೆ ಮೊದಲು ಅರ್ಥ ಹೇಳಿದಂತೆ ಅರ್ಥವನ್ನು ಇಟ್ಟುಕೊಂಡರೆ, ಅಸ್ಮದ್ ಎಂಬುದರ ದ ಕಾರಕ್ಕೆ ಮಾತ್ರ ಲೋಪಬರುವುದು. ಅಸ್ಮ+ಅಭ್ಯಮ್ ಎಂದಿರುವುದು. ಏತ್ವ ದೀರ್ಘಗಳಿಗೆ ಈಗಲೂ ಪ್ರಾಪ್ತಿ ಇಲ್ಲ. **ಅತೋ ಗುಣೇ** (ಪಾ. ಸೂ. ೬-೧-೯೭) ಎಂಬುದರಿಂದ ಪರರೂಪ ಬಂದರೆ **ಏಕಾದೇಶ ಉದಾತ್ತೇನೋದಾತ್ತಃ** ಎಂಬುದರಿಂದ ಸ್ಮ ಎಂಬುದು ಉದಾತ್ತವಾಗುವುದು.

**ಅಪ್ರತಿಷ್ಕುತಃ**—ಕೇನಚಿದಪ್ರತಿಶಬ್ದಿತಃ ಯಾವ ಕಾರಣದಿಂದಲೂ ಇಲ್ಲವೆಂಬ ಪ್ರತಿಶಬ್ದವನ್ನು ಹೇಳದೇ ಇರತಕ್ಕವನು. ಕುಙ್‌ಶಬ್ದೇ ಧಾತು ಇದರ ಮುಂದೆ ನಿಷ್ಠಾ (ಪಾ. ಸೂ ೩-೨-೧೦೨) ಭೂತಾರ್ಥ ದಲ್ಲಿರುವ ಧಾತುವಿನ ಮುಂದೆ ಕ್ತ-ಕ್ತವತು ಪ್ರತ್ಯಯಗಳು ಬರುವುವು ಎಂಬುದರಿಂದ ಕ್ತ ಪ್ರತ್ಯಯ ಕು+ತ, ಪ್ರತಿ ಎಂಬುದನ್ನು ಇದರ ಹಿಂದೆ ಸೇರಿಸುವುದು, ಪ್ರತಿಕು+ತ ಎಂದಿರುವಾಗ **ಪಾರಸ್ಕರಪ್ರಭೃತೀನಿ ಚ ಸಂಜ್ಞಾಯಾಮ್** (ಪಾ. ಸೂ. ೬-೧-೧೫೭) ಸಂಜ್ಞೆತೋರುವಾಗ ಪಾರಸ್ಕರಾದಿಗಣಪಠಿತವಾದ ಶಬ್ದಗಳು ಸುಡಾಗಮವುಳ್ಳವು ಗಳಾಗಿ ನಿಪಾತಿಸಲ್ಪಡುವುವು. ಪಾರಸ್ಕರಾದಿಯು ಆಕೃತಿಗಣವಾದ್ದರಿಂದ ಈ ಸೂತ್ರದಿಂದ ಧಾತುವಿಗೆ ಸುಡಾ ಗಮ ಬಂದರೆ ಪ್ರತಿ+ಸ್ಕು+ತ ಎಂದಾಗುವುದು. **ಸುಷಾಮಾದಿಷು ಚ** (ಪಾ. ಸೂ. ೮-೩-೯೮) ಈ ಗಣದ ಶಬ್ದಗಳ ಸ ಕಾರಕ್ಕೆ ಷಕಾರ ಬರುವುದು. ಇದೂ ಆಕೃತಿಗಣ ಆದ್ದರಿಂದ ಈ ಸೂತ್ರದಿಂದ ಸಕಾರಕ್ಕೆ ಷಕಾರ ಬಂದರೆ ಪ್ರತಿಷ್ಕುತಃ. ನಪ್ರತಿಷ್ಕುತಃ ಎಂದು ನಞ್ ಸಮಾಸಮಾಡಿದರೆ ಅಪ್ರತಿಷ್ಕುತಃ ಎಂದಾಗುವುದು. **ತತ್ಪುರುಷೇತುಲ್ಯಾರ್ಥಃ** (ಪಾ.ಸೂ. ೬-೨-೨) ಎಂಬುದರಿಂದ ಅವ್ಯಯ ಪೂರ್ವಪದಪ್ರಕೃತಿ ಸ್ವರ ಬರುವುದು ||೬||

|| ಸಂಹಿತಾಪಾಠಃ ||

ತುಂಜೇತುಂಜೇ ಯ ಉತ್ತರೇ ಸ್ತೋಮಾ ಇಂದ್ರಸ್ಯ ವಜ್ರಿಣಃ |
ನ ವಿಂಧೇ ಅಸ್ಯ ಸುಷ್ಟುತಿಂ || ೭ ||

|| ಪದಪಾಠಃ ||

ತುಂಜೇಽ ತುಂಜೇ | ಯೇ | ಉತ್ ಽ ತರೇ | ಸ್ತೋಮಾಃ | ಇಂದ್ರಸ್ಯ | ವಜ್ರಿಣಃ ||
ನ | ವಿಂಧೇ | ಅಸ್ಯ | ಸುಽ ಸ್ತುತಿಂ || ೭ ||

|| ಸಾಯಣಭಾಷ್ಯಂ ||

ತುಂಜೇ ತುಂಜೇ ತಸ್ಮಿಂಸ್ತಸ್ಮಿನ್ಫಲದಾತರಿ ದೇವಾಂತರೇ ಯೇ ಸೋಮಾಃ ಸ್ತೋತ್ರವಿಶೇಷಾ ಉತ್ತರ ಉತ್ಕೃಷ್ಟಾಃ ಸಂತಿ ತೈಃ ಸ್ತೋಮ್ಯೈಃ ಸರ್ವೈರಪಿ ವಜ್ರಿಣೋ ವಜ್ರಯುಕ್ತಸ್ಯಾಸ್ಯೇಂದ್ರಸ್ಯ ಸುಷ್ಟುತಿಂ ಯೋಗ್ಯಾಂ ಶೋಭನಸ್ತುತಿಂ ನ ವಿಂಧೇ | ನ ವಿಂದಾಮಿ | ಇಂದ್ರಸ್ಯಾತ್ಯಂತಗುಣಬಾಹು- ಲ್ಯೇನ ದೇವಾಂತರೇಷೂತ್ತಮತ್ವೇನ ಪ್ರಸಿದ್ಧಾನ್ಯಪಿ ಸ್ತೋತ್ರಾಣಿ ನ ಪರ್ಯಾಪ್ತಾನೀತ್ಯರ್ಥಃ| ಏತಾಮ್ಯಚಂ

ಯೊಸ್ಕ ಏವಂ ವ್ಯಾಚಷ್ಟೇ। ತುಂಜಸ್ತುಂಜತೇರ್ದಾನಕರ್ಮಣಃ । ದಾನೇ ದಾನೇ ಯ ಉತ್ತರೇ ಸ್ತೋಮಾ-ಇಂದ್ರಸ್ಯ ವಜ್ರಿಣೋ ನಾಸ್ಯ ತೈರ್ವಿಂದಾಮಿ ಸಮಾಪ್ತಿಂ ಸ್ತುತೇಃ । ನಿ. ೬-೧೮ । ಇತಿ ॥ ತುಂಜೇ ತುಂಜೇ । ತುಂಜತಿರ್ದಾನಕರ್ಮೇತ್ಯುಕ್ತಂ । ತತಃ ಕರ್ತರಿ ಪಚಾದ್ಯಚ್ । ಪಾ. ೩-೧-೧೩೪ । ಚಿತ ಇತ್ಯಂತೋದಾತ್ತತ್ವಂ । ನಿತ್ಯವೀಪ್ಸಯೋಃ । ಪಾ. ೮-೧-೪ । ಇತಿ ದ್ವಿರ್ಭಾವಃ । ತಸ್ಯ ಪರಮಾಮ್ರೇಡಿತಂ । ಪಾ. ೮-೧-೨ । ಇತಿ ದ್ವಿತೀಯಸ್ಯಾಮ್ರೇಡಿತಸಂಜ್ಞಾ । ಅನುದಾತ್ತಂ ಚ । ಪಾ. ೮-೧-೩ । ಇತ್ಯನುದಾತ್ತತ್ವಂ । ದಾತರಿ ದಾತರೀತ್ಯರ್ಥಃ । ನಿರುಕ್ತೇ ತು ದಾನೇ ದಾನ ಇತ್ಯರ್ಥತೋ ವ್ಯಾಖ್ಯಾನಂ । ಉತ್ತರೇ ತ್ಯಾ ಪ್ಲವನತರಣಯೋಃ । ಭಾವೇ ಋದೋರಪ್ । ಪಾ. ೩-೩-೫೭ । ಉಚ್ಛಬ್ದ ಉತ್ಕೃಷ್ಟವಚನಃ । ಉತ್ಕೃಷ್ಟಸ್ತರೋ ಯಸ್ಯೇತಿ ಬಹುವ್ರೀಹಿಃ । ಉಚ್ಛಬ್ದೋ ನಿಪಾತಾ ಆದ್ಯುದಾತ್ತಾ ಇತ್ಯಾದ್ಯುದಾತ್ತಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಸ್ತೋಮಾಃ । ಅರ್ತಿಸ್ತುಸ್ಸಿತ್ಯಾದಿನಾ । ಉ. ೧-೧೩೯ । ಸ್ತೋಮಶಬ್ದೋ ಮನಂತೋ ನಿತ್ತ್ವಾದಾದ್ಯುದಾತ್ತಃ । ವಿಂಧೇ । ವಿದ್ಲೃ ಲಾಭೇ । ಲಟ್ । ಸ್ವರಿತೇತ್ತ್ವಾದಾತ್ಮನೇಪದಂ । ಉತ್ತಮೈಕವಚನಮಿಟ್ ಪಾ. ೩-೪-೭೮ । ತುದಾದಿಭ್ಯಃ ಶಃ । ಪಾ. ೩-೧-೭೭ । ಶೇ ಮುಚಾದೀನಾಮಿತಿ ನುಮ್ । ಪಾ. ೭-೧-೫೯ । ದಕಾರಸ್ಯ ವ್ಯತ್ಯಯೇನ ಧಕಾರಃ । ಅಸ್ಯ । ಪ್ರಕೃತಸ್ಯೇಂದ್ರಸ್ಯ ಪರಾಮರ್ಶಾದನ್ವಾದೇಶ ಇದಮೋಽಶ್ । ಪಾ. ೨-೪-೩೨ । ಶಿತ್ತ್ವಾತ್ಸರ್ವಾದೇಶೋಽನುದಾತ್ತಃ । ಸುಷ್ಟುತಿಂ । ಷ್ಟುಞ್ ಸ್ತುತೌ । ಧಾತ್ವಾದೇಃ ಷಃ ಸಃ । ಪಾ.೬-೧-೬೪ । ಇತಿ ಸತ್ವಂ । ಸ್ತ್ರಿಯಾಂ ಕ್ತಿನ್। ಪಾ ೩-೩-೯೪ । ಇತಿ ಭಾವೇ ಕ್ತಿನ್ । ಸ್ವಿತ್ಯುದಾತ್ತೇನೋಪಸರ್ಗೇಣ ಪ್ರಾದಿಸಮಾಸಃ । ಪಾ. ೨-೨-೧೮ । ಉಪಸರ್ಗಾತ್ಸುನೋತೀತ್ಯಾದಿನಾ ಷತ್ವಂ । ಪಾ. ೮ ೩-೬೫ । ಅತ್ರಾವ್ಯಯಪೂರ್ವಪದಪ್ರಕೃತಿಸ್ವರತ್ವೇನ ಸೋಃ ಪ್ರಾಪ್ತಮುದಾತ್ತತ್ವಂ ಬಾಧಿತ್ವಾ ಗತಿಕಾರಕೋಪಪದಾತ್ಕೃತ್ । ಪಾ. ೬-೨-೧೩೯ । ಇತ್ಯುತ್ತರಪದಪ್ರಕೃತಿಸ್ವರೇಣ ಧಾತೋರುದಾತ್ತತ್ವೇ ಪ್ರಾಪ್ತೇ ತದಪವಾದತ್ವೇನ ತಾದೌ ಚ ನಿತಿ ಕೃತ್ಯತೌ । ಪಾ. ೬-೨-೫೦ । ಇತ್ಯನಂತರಸ್ಯ ಗತಿಸಂಜ್ಞಕಸ್ಯ ಸೋರೇವೋದಾತ್ತತ್ವೇನ ಭವಿತವ್ಯಂ । ತತ್ತು ಮನ್। ಕ್ತಿವ್ಯಾಖ್ಯಾನಶಯನಾಸನಸ್ಥಾನಯಾಜಕಾದಿಕ್ರೀತಾಃ । ಪಾ. ೬-೨-೧೫೧ । ಇತ್ಯುತ್ತರಪದಾಂತೋದಾತ್ತತ್ವೇನ ಬಾಧ್ಯತೇ । ತಥಾ ಚ ಸುಹವಾಂ ಸುಷ್ಟುತೀ ಹುವೇ । ಋಗ್ವೇ ೨-೩೨-೪ । ವೃಷ್ಣೇ ಚೋದಸ್ವ ಸುಷ್ಟುತಿಂ । ಋಗ್ವೇ ೮-೭೫-೬ । ಯಾಸ್ತೇ ರಾಕೇ ಸುಮತಯಃ । ಋಗ್ವೇ. ೨-೩೨-೫ । ಇತ್ಯಾದಾವಂತೋದಾತ್ತತ್ವಮಿತ್ಯಾಹುಃ । ಯಥಾ ತು ಮನ್ಕ್ತಿನ್ನಿತ್ಯಾದೌ ವೃತ್ತಾವುಕ್ತಂ ತಥೈವ ತನ್ನ ಘಟತ ಇತಿ ಲಕ್ಷ್ಯತೇ । ತತ್ರ ಹಿ ಕಾರಕಾದ್ದತ್ತಶ್ರುತಯೋರೇವಾಶಿಷಿ । ಪಾ. ೬-೨-೧೪೮ । ಇತ್ಯತಃ ಕಾರಕಾದಿತ್ಯನುವೃತ್ತೇಃ ಪಾಣಿನಿಕೃತಿರಿತ್ಯಾದಾವೇವ ಮನ್ಕ್ತಿನ್ನಿತ್ಯಾದಿಸೂತ್ರಮಿತ್ಯುಕ್ತಂ ಕಾರಕಾದಿತ್ಯೇವ ಪ್ರಕೃತಿಃ ಪ್ರಹೃತಿರಿತಿ ಚ ಪ್ರತ್ಯುದಾಹೃತಂ । ಸ್ಯಾದೇತತ್ । ಸ್ತೂಯತೇಽನಯೇತಿ ಸ್ತುತಿರಿತಿ ಕ್ತಿನಾ ಕರಣಭೂತಿರ್ಗಭಿಧೀಯತೇ । ಸುಶಬ್ದೇನ ಚ ಕರಣಮೇವ ವಿಶೇಷ್ಯತೇ ನ ಧಾತ್ವರ್ಥಃ । ತಥಾ ಚ ಸುಷ್ಟುತಿರಿತ್ಯತ್ರ ಸುಶಬ್ದಃ ಕಾರಕಪರ ಏವ ಭವಿಷ್ಯತಿ । ಪ್ರಕೃತಿಃ ಪ್ರಹೃತಿರಿತ್ಯಾದೌ ತು ಪ್ರಶಬ್ದೋ ಧಾತ್ವರ್ಥೇ ವಿಶೇಷಣಮೇವೇತಿ ತತ್ಪ್ರತ್ಯುದಾಹರಣೋಪಪತ್ತಿರಿತಿ । ನ । ಏವಂ ಸತಿ ಸುಶಬ್ದಸ್ಯ ಕ್ರಿಯಾಯೋಗಾಭಾವಾದುಪಸರ್ಗಾಃ ಕ್ರಿಯಾಯೋಗೇ । ಪಾ. ೧-೪-೫೯ । ಇತ್ಯುಕ್ತಾ ಉಪಸರ್ಗಸಂಜ್ಞಾ ನ ಸ್ಯಾತ್ । ತಥಾ ಚೋಪಸರ್ಗಾತ್ಸುನೋತಿಸುವತೀತ್ಯಾದಿನಾ ಷತ್ವಂ ನ ಸ್ಯಾತ್ । ನನು ಕ್ತಿನಾ ಕರಣಮಭಿಧೀಯತೇ । ಕ್ರಿಯಾಸಾಧನಂ ಚ ಕರಣಂ । ತಥಾ ಚ ಕರಣವಿಶೇಷಣಸ್ಯಾಪಿ ಸುಶಬ್ದಸ್ಯ ಕರಣಾಂತರ್ಗತಕ್ರಿಯಾಯೋಗಾದುಪಸರ್ಗತಾ ಭವಿಷ್ಯತೀತಿ । ನ । ತಥಾ ಸತಿ ಯತ್ಕ್ರಿಯಾಯುಕ್ತಾಸ್ತಂ ಪ್ರತ್ಯುಪ-

ಸರ್ಗಸಂಜ್ಞಕಾ ಇತಿ ಕರೋತ್ಯರ್ಥಮೇವ ಪ್ರತಿ ಸೋರುಪಸರ್ಗತಾ ನ ತು ಸ್ತುಧಾತ್ವರ್ಥಂ ಪ್ರತೀತ್ಯಸ್ಯ ಷತ್ವಂ ನ ಸ್ಯಾದೇವ । ನನು ಸ್ತುಧಾತ್ವರ್ಥದ್ವಾರೈವ ತತ್ಕರಣಸ್ಯ ಸುಶಬ್ದೋ ವಿಶೇಷಣಂ ಭವಿಷ್ಯತಿ । ಯಾ ಹಿ ಶೋಭನಾ ಸ್ತುತಿಸ್ತತ್ಕರಣಮಪಿ ಶೋಭನಮೇವೇತಿ । ಏವಂ ಚ ಸ್ತುಧಾತ್ವರ್ಥಸಂಬಂಧಾತ್ತಂ ಪ್ರತ್ಯುಪಸರ್ಗತ್ವೇನ ಷತ್ವಮಪಿ ಭವಿಷ್ಯತಿ । ತದ್ದ್ವಾರಾ ಕರಣವಿಶೇಷಣತ್ವಾತ್ ಕಾರಕವಚನೋಽಪಿ ಸುಶಬ್ದೋ ಭವಿಷ್ಯತೀತಿ । ವೃತ್ತ್ಯವಿರೋಧೇನೈವ ಮನ್ಕ್ತಿನಾದಿಸೂತ್ರಸ್ಯ ಸುಷ್ಟುತಿಶಬ್ದೋ ವಿಷಯೋ ಭವಿಷ್ಯತಿ । ಪ್ರಕೃತಿಃ ಪ್ರಹೃತಿರಿತ್ಯತ್ರ ಭಾವೇ ಕ್ತಿನ್ ಪ್ರತ್ಯುದಾಹೃತೇತಿ । ನ ತತ್ರ ಪ್ರಶಬ್ದಸ್ಯ ಕರಣ ಪರತ್ವಂ । ಕರಣೇ ಕ್ತಿನುದಾಹರಣೇಽಪಿ ಧಾತ್ವರ್ಥಮಾತ್ರವಿಶೇಷಣತ್ವೈವ ವಿವಕ್ಷಿತಾ ನ ತದ್ದ್ವಾರಾ ಪ್ರತ್ಯಯಾರ್ಥವಿಶೇಷಣತಾಪೀತಿ ತತ್ಪ್ರತ್ಯುದಾಹರಣೋಪಪತ್ತಿರಿತಿ । ಸುಷ್ಟುತಿರಿತ್ಯತ್ರ ಪುನಃ ಕ್ತಿನಭಿ-ಧೇಯಕರಣಪರ್ಯಂತಂ ಸುಶಬ್ದಸ್ಯ ವ್ಯಾಪಾರ ಇತ್ಯುದಾಹರಣತೈವ ನ ಪ್ರತ್ಯುದಾಹರಣತೇತಿ । ನ । ಕಿಮತ್ರಸುಶಬ್ದಃ ಶ್ರುತ್ಯೈವ ಪ್ರಕೃತಿಪ್ರತ್ಯಯಾರ್ಥೋಭಯವಿಶೇಷಣಪರಃ । ಉತ ಶ್ರುತ್ಯೈಕಂ ವಿಶಿನಷ್ಟಿ ಅರ್ಥಾದಿತರದಿತಿ । ಯದಾಪ್ಯುಭಯಪರತ್ವಂ ತದಾಪಿ ಕಿಂ ಯೌಗಪದ್ಯೇನ ಉತ ಕ್ರಮೇಣೇತಿ । ಆದ್ಯೇ ಪ್ರತಿ ವಿಶೇಷ್ಯಂ ವಿಶೇಷಣಪದಾವೃತ್ತಿರಿತಿ ಪ್ರಸಂಗಃ । ದ್ವಿತೀಯೇ ವಿರಮ್ಯ ವ್ಯಾಪಾರಾಪಾತಃ ನ ಚ ಶಬ್ದಬುದ್ಧಿಕರ್ಮಣಾಂ ವಿರಮ್ಯ ವ್ಯಾಪಾರಃ ಕಸ್ಯಚಿದ್ದೃಷ್ಟ ಇಷ್ಟೋ ವಾ । ಅತೋ ನ ಶ್ರುತ್ಯೋ-ಭಯಪರತ್ವಂ । ಅಥೈಕತ್ರ ಶ್ರುತ್ಯಾ ತಾತ್ಪರ್ಯಂ । ಅಪರತ್ರ ತ್ವರ್ಥಾದಿತಿ । ತತ್ರ ಧಾತ್ವರ್ಥಸಂಬಂಧ-ಸ್ಯಾರ್ಥಿಕತ್ವೇ ಷತ್ವಾಸಿದ್ಧಿಃ । ಪ್ರತ್ಯಯಾರ್ಥಸಂಬಂಧಸ್ಯಾರ್ಥಿಕತ್ವೇ ಮನ್ಕ್ತಿನ್ನಿತ್ಯಾದಿಸ್ವರಾಸಿದ್ಧಿಃ । ಆರ್ಥಿಕೇನಾಪಿ ಕಾರಕಸಂಬಂಧೇನೋದಾಹರಣತ್ವಾಭಿಧಾನೇ ಪ್ರಕೃತಿಃ ಪ್ರಹೃತಿರಿತ್ಯಾದಿಪ್ರತ್ಯುದಾಹರಣಂ ನ ಸ್ಯಾತ್ । ಶ್ರುತ್ಯಾ ಧಾತ್ವರ್ಥಮಾತ್ರಸಂಬಂಧಸ್ಯಾಪಿ ಪ್ರಶಬ್ದಸ್ಯಾರ್ಥಾತ್ತತ್ಕರಣಸಂಬಂಧಃ ಕೇನ ವಾರ-ಯಿತುಂ ಶಕ್ಯತ ಇತ್ಯೇಷಾ ದಿಕ್ । ಅತ ಇಹ ಪ್ರತ್ಯಯಾರ್ಥಮಾತ್ರಸಂಬಂಧಪರತ್ವಾಂಗೀಕಾರೇಣ ಸ್ವರಃ ಸಿದ್ಧ್ಯತು ಷತ್ವಂ ತು ಛಾಂದಸಮಸ್ತು । ಶೋಭನಾ ಸ್ತುತಿರ್ಯಸ್ಯಾಮಿತಿ ಬಹುವ್ರೀಹಿರ್ವಾ ಭವತು । ಏವಂ ಚ ನಞ್ಸುಭ್ಯಾಂ । ಪಾ. ೬-೨-೧೭೨ । ಇತ್ಯಂತೋದಾತ್ತಂ ಭವಿಷ್ಯತಿ । ಅಥವಾ ಸುಷ್ಠು ಸ್ತುವಂತೀತಿ ಸುಷ್ಟುತಯ ಇತಿ ಕರಣಭೂತಾ ಋಚಃ ಸ್ತುತಿಶಬ್ದೇನೋಚ್ಯಂತೇ । ಕ್ತಿಚ್ಕ್ತೌ ಚ ಸಂಜ್ಞಾಯಾಂ । ಪಾ ೩- -೧೭೪ । ಇತಿ ಕ್ತಿಚ್ಪ್ರತ್ಯಯೇ ಸತಿ ಚಿತ್ತ್ವಾದಂತೋದಾತ್ತತಾ ಭವಿಷ್ಯತಿ । ನ ಚ ಕರಣೀಭೂತಾನಾಮೃಚಾಂ ಕರ್ತೃಪ್ರತ್ಯಯೇನ ಕ್ತಿಚಾ ಕಥಮಭಿಧಾನಮಿತಿ ವಾಚ್ಯಂ । ಕಾಷ್ಠಾನಿ ಪಚಂತೀತಿವತ್ತಾಸಾಮಪಿ ಸ್ವವ್ಯಾಪಾರಪ್ರಾಧಾನ್ಯವಿವಕ್ಷಯಾ ಕರಣತ್ವೋಪಪತ್ತೇರಿತಿ ॥

॥ ಪ್ರತಿಪದಾರ್ಥ ॥

ತುಂಜೇ ತುಂಜೇ—(ಫಲವನ್ನು) ಕೊಡುವ ಇತರ ದೇವತೆಗಳಲ್ಲಿ (ಮಾಡುವ) । ಉತ್ತರೇ—ಉತ್ಕೃಷ್ಟವಾದ । ಯೇ ಸ್ತೋಮಾಃ—ಯಾವ ಸ್ತೋತ್ರಗಳುಂಟೋ (ಅವುಗಳಿಂದ) । ವಜ್ರಿಣಃ—ವಜ್ರಾಯುಧವುಳ್ಳ । ಅಸ್ಯ ಇಂದ್ರಸ್ಯ—ಈ ಇಂದ್ರನ (ವಿಷಯದಲ್ಲಿ) । ಸುಷ್ಟುತಿಂ—ಉತ್ತಮವಾದ ಸ್ತೋತ್ರವನ್ನು । ನ ವಿಂಧೇ—ಹೊಂದಲಾಗುವುದಿಲ್ಲ (ಮಾಡಲಾಗುವುದಿಲ್ಲ)

॥ ಭಾವಾರ್ಥ ॥

ನಮಗೆ ಅನೇಕ ಫಲಗಳನ್ನು ಕೊಡುವ ಇತರ ದೇವತೆಗಳಿಗೆ ನಾವು ಮಾಡುವ ಸ್ತೋತ್ರಗಳು ಎಷ್ಟು ಉತ್ತಮವಾಗಿದ್ದರೂ ಅಂತಹ ಸ್ತೋತ್ರಗಳಿಂದ ವಜ್ರಾಯುಧೋಪೇತನಾದ ಇಂದ್ರನ ಸ್ತುತಿಯನ್ನು ಚೆನ್ನಾಗಿ

ಮಾಡಿದಂತಾಗುವುದಿಲ್ಲ ಎಂದರೆ ಇತರ ದೇವತೆಗಳ ವಿಷಯದಲ್ಲಿ ನಾವು ಮಾಡುವ ಸ್ತೋತ್ರಗಳು ಬಹಳ ಉತ್ಕೃಷ್ಟವಾಗಿರಬಹುದು. ಆದರೆ ಇಂದ್ರನ ವಿಷಯದಲ್ಲಿ ಆ ಸ್ತೋತ್ರಗಳು ಇಂದ್ರನ ಗುಣಾತಿಶಯಗಳನ್ನು ವರ್ಣಿಸಲು ಸಮರ್ಥವಾಗಿರುವುದಿಲ್ಲವಾದ್ದರಿಂದ ಆ ಸ್ತೋತ್ರಗಳು ಉತ್ತಮವೆನಿಸುವುದಿಲ್ಲ. ಇಂದ್ರನನ್ನು ಸ್ತೋತ್ರಮಾಡುವುದಕ್ಕೆ ಇತರ ದೇವತೆಗಳ ಸ್ತೋತ್ರಗಳಿಗಿಂತಲೂ ಎಷ್ಟೋ ಉತ್ತಮವಾದ ಸ್ತೋತ್ರಗಳು ಬೇಕಾಗುವುವೆಂದು ಅಭಿಪ್ರಾಯವು.

## English Translation.

Whatever praise-hymns are excellent for rewarding (other deity) I cannot find (even with these hymns) a hymn good enough to Lard Indra, the weilder of thunderbolt.

|| ವಿಶೇಷವಿಷಯಗಳು ||

**ತುಂಜೇತುಂಜೇ**— ಈ ಋಕ್ಕಿಗೆ ಯಾಸ್ಕರು ನಿರುಕ್ತದಲ್ಲಿ ವಿವರಣೆಯನ್ನು ಈರೀತಿ ಕೊಟ್ಟಿರುವರು— **ತುಂಜಸ್ತುಂಜತೇರ್ದಾನಕರ್ಮಣಃ । ದಾನೇ ದಾನೇ ಯ ಉತ್ತರೇ ಸ್ತೋಮಾ ಇಂದ್ರಸ್ಯ ವಜ್ರಿಣೋ ನಾಸ್ಯ ತೈರ್ವಿಂದಾಮಿ ಸಮಾಪ್ತಿಂ ಸ್ತುತೇಃ** ಎಂದರೆ ತುಂಜಶಬ್ದಕ್ಕೆ ದಾನಮಾಡುವುದು, ಕೊಡುವುದು ಎಂದರ್ಥವು. ಈ ಋಕ್ಕಿನಲ್ಲಿರುವ ತುಂಜೆತುಂಜೇ ಎಂಬ ಶಬ್ದಕ್ಕೆ ಕೊಡುವ ಎಂದರೆ ಫಲಗಳನ್ನು ಕೊಡುವ ದೇವತೆಯ ವಿಷಯದಲ್ಲಿ ಎಂದರ್ಥವು. ತುಂಜೆ ಎಂಬ ಶಬ್ದವು ಎರಡಾವರ್ತಿ ಪಠಿತವಾಗಿರುವುದರಿಂದ ಪ್ರತಿ ದೇವತೆಯ ವಿಷಯದಲ್ಲಿಯೂ ಎಂದರೆ ಎಲ್ಲಾ ದೇವತೆಗಳ ವಿಷಯದಲ್ಲಿಯೂ ಎಂದರ್ಥವು. ಇಂತಹ ಇತರ (ಇಂದ್ರನ ಹೊರತು ಇತರ) ದೇವತೆಗಳ ವಿಷಯದಲ್ಲಿ ಉಪಯೋಗಿಸುವ ಸ್ತೋತ್ರಗಳು ಎಷ್ಟೇ ಉತ್ಕೃಷ್ಟವಾಗಿದ್ದರೂ ಇಂದ್ರನ ವಿಷಯದಲ್ಲಿ ಅವು ಸಾಲದು, ಇನ್ನೂ ಹೆಚ್ಚಾಗಿರಬೇಕು. ಇಂದ್ರನ ಸ್ತೋತ್ರಕ್ಕೆ ಇವು ಸಾಕು, ಇಲ್ಲಿಗೆ ಸಮಾಪ್ತಿಯಾಯಿತು ಎಂದು ಹೇಳುವಂತಿಲ್ಲ. ಎಷ್ಟು ಸ್ತೋತ್ರಮಾಡಿದರೂ ಅಷ್ಟೂ ಇಂದ್ರನ ಗುಣಗಳಿರುವವು. ಇವಕ್ಕೆ ಸಮಾಪ್ತಿ ಇಲ್ಲ ಎಂದಭಿಪ್ರಾಯ.

**ಉತ್ತರೇ**— ಈ ಶಬ್ದದಲ್ಲಿ ಉತ್+ತರೇ ಎಂಬ ಎರಡು ಪ್ರತ್ಯೇಕ ಪದಗಳಿರುವವು. ಭಾಷ್ಯಕಾರರು ಇದನ್ನು ಹೀಗೆ ವಿವರಿಸಿರುವರು— **ಉತ್ತರೇ । ತೄಪ್ಲವನತರಣಯೋಃ । ಭಾವೇ ಋದೋರಪ್ । ಪಾ. ೩-೩-೫೭ । ಉಚ್ಛಬ್ದ ಉತ್ಕೃಷ್ಟವಚನಃ । ಉತ್ಕೃಷ್ಟಸ್ತರೋ ಯಸ್ಯೇತಿ ಬಹುವ್ರೀಹಿಃ ॥** ತರ ಎಂಬ ಶಬ್ದವು ತೄ ಎಂಬ ಧಾತುವಿನಿಂದ ಉಂಟಾಗಿರುವುದು. ಉತ್ ಎಂದರೆ ಉತ್ಕೃಷ್ಟವಾದ. ಆದುದರಿಂದ ಉತ್+ತರ ಉತ್ತರ ಎಂಬ ಶಬ್ದಕ್ಕೆ ಹೆಚ್ಚು ಉತ್ಕೃಷ್ಟವಾದ (more excellent) ಎಂದರ್ಥವು,

**ಸುಷ್ಟುತಿಂ ಅಥವಾ ಸುಽಸ್ತುತಿಂ— ಷ್ಟೂಯತೇऽನಯೇತಿ ಸ್ತುತಿಃ । ಸುಶಬ್ದೇನ ಕರಣಮೇವ ವಿಶೇಷ್ಯತೇ ನ ಧಾತ್ವರ್ಥಃ । ಅಥವಾ ಸುಷ್ಟು ಸ್ತುವಂತೀತಿ ಸುಷ್ಟುತಯ ಇತಿ ಕರಣಭೂತಾ ಋಚಃ ಸ್ತುತಿಶಬ್ದೇನೋಚ್ಯತೇ ॥** ಎಂದು ಸ್ತುತಿಶಬ್ದಾರ್ಥವನ್ನು ಹೇಳಿರುವರು. ಸ್ತೋತ್ರಮಾಡುವುದಕ್ಕೆ ಸ್ತುತಿಯೆಂದು ಹೆಸರು. ಸುಷ್ಟುತಿ ಎಂದರೆ ಚೆನ್ನಾಗಿ ಸ್ತೋತ್ರಮಾಡುವುದು ಎಂದು, ಅಥವಾ ಚೆನ್ನಾಗಿ ಸ್ತೋತ್ರಮಾಡುವುದರಿಂದ ಅಂತಹ ಮಂತ್ರಗಳಿಗೆ ಅಥವಾ ಋಕ್ಕುಗಳಿಗೆ ಸ್ತುತಿಯೆಂದು ಹೇಳುವ ರೂಢಿಯಿರುವುದು ಎಂದಭಿಪ್ರಾಯವು.

|| ವ್ಯಾಕರಣಪ್ರಕ್ರಿಯಾ ||

**ತುಞ್ಜೇತುಞ್ಜೇ—ತುಞ್ಜಸ್ತುಞ್ಜತೇರ್ದಾನಕರ್ಮಣಃ** (ನಿರು. ೬-೧೭-೧೪) ಎಂಬ ನಿರುಕ್ತದಲ್ಲಿ ಯಾಸ್ಕರು ತುಞ್ಜಧಾತುವು ದಾನಕ್ರಿಯೆಯನ್ನು ಹೇಳುವುದು ಎಂದು ವ್ಯಾಖ್ಯಾನಮಾಡಿರುವರು. ಈ ಪಚಾದಿ ಗಣಕ್ಕೆ ಸೇರಿದ ತುಞ್ಜಧಾತುವಿನ ಮುಂದೆ **ನಂದಿಗ್ರಹಿಪಚಾದಿಭ್ಯೋಲ್ಯುಣಿನ್ಯಚಃ** (ಪಾ. ಸೂ. ೩-೧-೧೩೪) ಎಂಬುದರಿಂದ ಕರ್ತ್ರರ್ಥದಲ್ಲಿ ಅಚ್ ಪ್ರತ್ಯಯ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತ. ಸಪ್ತಮ್ಯೇಕವಚನದಲ್ಲಿ ತುಞ್ಜೇ ಎಂದಾಗುವುದು. **ನಿತ್ಯವೀಪ್ಸಯೋಃ** (ಪಾ. ಸೂ. ೮-೧-೪) ಎಂಬುದರಿಂದ ದ್ವಿತ್ವ ಬರುವುದು. ತುಞ್ಜೇತುಞ್ಜೇ ಎಂದಾಗುವುದು. **ತಸ್ಯಪರಮಾಮ್ರೇಡಿತಂ** (ಪಾ. ಸೂ. ೮-೧-೨) ದ್ವಿತ್ವವನ್ನು ಹೊಂದಿದ ಶಬ್ದದ ಎರಡನೇ ಭಾಗವು ಆಮ್ರೇಡಿತಸಂಜ್ಞೆಯನ್ನು ಹೊಂದುವುದು ಎಂಬುದರಿಂದ ಎರಡನೆಯದಕ್ಕೆ ಆಮ್ರೇಡಿತಸಂಜ್ಞೆ ಬರುವುದು. **ಅನುದಾತ್ತಂಚ** (ಪಾ. ಸೂ. ೮-೧-೩) ಆಮ್ರೇಡಿತವು ಎಂದರೆ ದ್ವಿತ್ವವನ್ನು ಹೊಂದಿದ ಶಬ್ದದ ಎರಡನೇ ರೂಪವು ಅನುದಾತ್ತವಾಗುವುದು ಎಂಬುದರಿಂದ ಎರಡನೆಯದು ಅನುದಾತ್ತ. ದಾತರಿ ದಾತರಿ ಇತ್ಯರ್ಥಃ ಪ್ರತಿಯೊಬ್ಬ ಫಲಕೊಡತಕ್ಕವನಲ್ಲಿಯೂ ಎಂದು ಅರ್ಥವು. ನಿರುಕ್ತದಲ್ಲಿ ದಾನೇ ದಾನೇ ಎಂದು ವ್ಯಾಖ್ಯಾನವಿರುವುದು. ಪ್ರತ್ಯಯಾರ್ಥವನ್ನು ಬಿಟ್ಟು ಪ್ರಕೃತ್ಯರ್ಥವನ್ನು ಪುರಸ್ಕರಿಸಿ ಆವ ನ್ಮಾತ್ರಕ್ಕೆ ವ್ಯಾಖ್ಯಾನವೆಂದು ಇಟ್ಟುಕೊಳ್ಳಬೇಕು.

**ಉತ್ತರೇ**--ತೄಪ್ಲವನತರಣಯೋಃ ಧಾತು. **ಋದೋರಪ್** (ಪಾ.ಸೂ. ೩-೩-೫೭) ಋವರ್ಣಾಂತ ಉವರ್ಣಾಂತ ಧಾತುಗಳ ಮುಂದೆ ಭಾವಾರ್ಥ ಕರ್ತೃಭಿನ್ನಕಾರಕಾರ್ಥಗಳಲ್ಲಿ ಅಪ್ ಪ್ರತ್ಯಯ ಬರುವುದು ಎಂಬುದರಿಂದ ಭಾವ ಎಂಬ ಅರ್ಥದಲ್ಲಿ ಅಪ್ ಪ್ರತ್ಯಯ ಬರುವುದು. ಉತ್ ಶಬ್ದವು ಉತ್ಕೃಷ್ಟ ಎಂಬ ಅರ್ಥವನ್ನು ಹೇಳುವುದು. ಉತ್ಕೃಷ್ಟಃ ತರಃ ಯಸ್ಯ ಸಃ ಎಂದು ಬಹುವ್ರೀಹಿಸಮಾಸ. ಉತ್ ನಿಪಾತವಾದ್ದರಿಂದ **ನಿಪಾತಾ ಆದ್ಯುದಾತ್ತಾಃ** (ಫಿ ಸೂ. ೮೦) ಎಂಬುದರಿಂದ ಆದ್ಯುದಾತ್ತ. **ಬಹುವ್ರೀಹೌಪ್ರಕೃತ್ಯಾಪೂರ್ವಪದಂ** (ಪಾ, ಸೂ ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರದಿಂದ ಅದೇ ನಿಲ್ಲುವುದು.

**ಸ್ತೋಮಾಃ**—**ಅರ್ತಿಸ್ತುಸು**— (ಉ. ಸೂ. ೧-೧೩೭) ಎಂಬುದರಿಂದ ಸ್ತೋಮಶಬ್ದವು ಮನ್ ಪ್ರತ್ಯಯಾಂತ. ನಿತ್ತಾದ್ದರಿಂದ ಆದ್ಯುದಾತ್ತ. **ವಿಂಧೇ**—ವಿದ್ಲೃ ಲಾಭೇ ಧಾತುವಿನ ಮುಂದೆ ಲಟ್. ಧಾತುವು ಸ್ವರಿತೇತ್ತಾದ್ದರಿಂದ **ಸ್ವರಿತಞಿತಃ ಕರ್ತ್ರಭಿಪ್ರಾಯೇಕ್ರಿಯಾಫಲೇ** (ಪಾ. ಸೂ. ೧-೩-೭೨) ಎಂಬುದರಿಂದ ಆತ್ಮನೇಪದ **ತಿಪ್‌ತಸ್‌ಝಿ** (ಪಾ ಸೂ. ೩-೪-೭೮) ಎಂಬುದರಿಂದ ಉತ್ತಮಪುರುಷ ಏಕವಚನ ಇಟ್ ಬಂದರೆ ವಿದ್+ಇ **ತುದಾದಿಭ್ಯಃಶಃ** (ಪಾ. ಸೂ ೩-೧-೭೭) ಕರ್ತ್ರರ್ಥ ಸಾರ್ವಧಾತುಕ ಪರದಲ್ಲಿರುವಾಗ ತುದಾದಿ ಧಾತುಗಳ ಮುಂದೆ ಶ ಬರುವುದು ಎಂಬುದರಿಂದ ಶ ವಿಕರಣ ಬಂದರೆ ವಿದ್+ಅ+ಇ **ಶೇಮುಚಾದೀನಾಂ** (ಪಾ. ಸೂ. ೭-೧-೫೯) ಶವಿಕರಣ ಪರದಲ್ಲಿರುವಾಗ ಮುಚಾದಿ ಧಾತುಗಳ ಕೊನೆಯ ಸ್ವರದ ಮುಂದೆ ನುಮ್ ಬರುವುದು ಎಂಬುದರಿಂದ ನುಮ್ ಬಂದರೆ ವಿನ್ದ್+ಅ+ಇ ವ್ಯತ್ಯಯದಿಂದ ದಕಾರಕ್ಕೆ ಧಕಾರ. **ಆದ್ಗುಣಃ** (ಪಾ. ಸೂ. ೬-೧-೮೭) ಎಂಬುದರಿಂದ ಗುಣ, ವಿನ್ದೇ ಎಂದಾಗುವುದು.

**ಅಸ್ಯ**—ಪ್ರಕೃತನಾದ ಇಂದ್ರನನ್ನೇ ಇದಂ ಶಬ್ದ ಪರಾಮರ್ಶಿಸುವುದು. ಆದ್ದರಿಂದ ಅನ್ವಾದೇಶವಾಗುವುದು. **ಇದಮೋಽನ್ವಾದೇಶೇಽಶನುದಾತ್ತಸ್ತೃತೀಯಾದೌ** ಎಂಬುದರಿಂದ ಇದಮ್ ಶಬ್ದಕ್ಕೆ ಅಶ್ ಆದೇಶ ಬರುವುದು. ಅಶ್ ಶಿತ್ತಾದ್ದರಿಂದ **ಅನೇಕಾಲ್‌ಶಿತ್ಸರ್ವಸ್ಯ** (ಪಾ. ಸೂ. ೧-೧-೫೫) ಎಂಬುದರಿಂದ ಸಂಪೂರ್ಣಶಬ್ದದ ಸ್ಥಾನದಲ್ಲಿ ಬರುವುದು.

**ಸುಷ್ಟುತಿಮ್**—ಷ್ಟು ಞ್ ಸ್ತುತೌ ಧಾತು. **ಧಾತ್ವಾದೇಃಷಃಸಃ** (ಪಾ.ಸೂ. ೬-೧-೬೪) ಎಂಬುದರಿಂದ ಷಕಾರಕ್ಕೆ ಸಕಾರ. ಷಕಾರನಿಮಿತ್ತಕವಾದ ಟಕಾರ ನಿವೃತ್ತವಾಗುವುದು ಸ್ತು ಎಂದಿರುವುದು. **ಸ್ತ್ರಿಯಾಂಕ್ತಿನ್** (ಪಾ. ಸೂ. ೩-೩-೯೪) ಧಾತುಗಳ ಮುಂದೆ ಸ್ತ್ರೀಲಿಂಗದಲ್ಲಿ ಭಾವಾದ್ಯರ್ಥದಲ್ಲಿ ಕ್ತಿನ್ ಬರುವುದು ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್. ಸು ಎಂಬ ಉದಾತ್ತವಾದ ಉಪಸರ್ಗದೊಂದಿಗೆ **ಕುಗತಿಪ್ರಾದಯಃ** (ಪಾ.ಸೂ. ೨-೨-೧೮) ಎಂಬುದರಿಂದ ಪ್ರಾದಿಸಮಾಸ. ಸುಸ್ತುತಿ ಎಂದಿರುವಾಗ **ಉಪಸರ್ಗಾತ್ಸುನೋತಿಸುವತಿಸ್ಯತಿಸ್ತೌತಿಸ್ತೋಭತಿ-ಸ್ಥಾಸೇನಯ ಸೇಧಸಿಚ ಸಂಜಸ್ವಞ್ಜಾಮ್** (ಪಾ. ಸೂ. ೮-೩-೬೫) ಉಪಸರ್ಗದಲ್ಲಿರುವ ಇಣ್ಣಿನ ಮುಂದೆ ಇರುವ ಈ ಶಬ್ದಗಳ ಸಕಾರಕ್ಕೆ ಷಕಾರ ಬರುವುದು ಎಂಬುದರಿಂದ ಸಕಾರಕ್ಕೆ ಷಕಾರ. **ಷ್ಟುನಾಷ್ಟುಃ** (ಪಾ. ಸೂ. ೮-೪-೪೧) ಷಕಾರ ಟವರ್ಗಗಳ ಯೋಗವಿರುವಾಗ ಸಕಾರ ತವರ್ಗಗಳಿಗೆ ಷಕಾರ ಟವರ್ಗಗಳು ಕ್ರಮವಾಗಿ ಬರುವುವು ಎಂಬುದರಿಂದ ತಕಾರಕ್ಕೆ ಟಕಾರ ಸುಷ್ಟುತಿ. ದ್ವಿತೀಯಾ ಏಕವಚನದಲ್ಲಿ ಸುಷ್ಟುತಿಮ್ ಎಂದಾಗುವುದು ಇಲ್ಲಿ **ತುತ್ಪುರುಷೇ ತುಲ್ಯಾರ್ಥಃ** —(ಪಾ. ಸೂ. ೬-೨-೨) ಎಂಬುದರಿಂದ ವಿಹಿತವಾದ ಅವ್ಯಯಪೂರ್ವಪದ ಪ್ರಕೃತಿಸ್ವರದಿಂದ ಸು ಗೆ ಉದಾತ್ತಸ್ವರ ಪ್ರಾಪ್ತವಾದರೆ ಅದನ್ನು ಬಾಧಿಸಿ **ಗತಿಕಾರಕೋಪಪದಾತ್ಕೃತ್** (ಪಾ.ಸೂ. ೬-೨-೧೩೯) ತತ್ಪುರುಷ ಸಮಾಸದಲ್ಲಿ ಗತಿ ಕಾರಕ ಉಪಪದ ಇವುಗಳ ಮುಂದೆ ಇರುವ ಕೃದಂತವು ಪ್ರಕೃತಿಸ್ವರ ವನ್ನು ಹೊಂದುವುದು ಎಂಬುದರಿಂದ ವಿಹಿತವಾದ ಕೃದುತ್ತರ ಪದ ಪ್ರಕೃತಿಸ್ವರದಿಂದ ಧಾತುವಿಗೆ ಉದಾತ್ತಸ್ವರ ಪ್ರಾಪ್ತವಾದರೆ ಇದಕ್ಕೂ ಅಪವಾದವಾದ **ತಾದೌಚನಿತಿಕೃತ್ಯತೌ** (ಪಾ.ಸೂ. ೬-೨-೫೦) ತಕಾರಾದಿಯಾಗಿಯೂ ನಕಾರೇತ್ಸಂಜ್ಞಕವೂ ಆಗಿರುವ ತು ಎಂಬುದನ್ನುಳಿದ ಕೃತ್ಪ್ರತ್ಯಯವನ್ನು ಕೊನೆಯಲ್ಲಿ ಹೊಂದಿರುವ ಶಬ್ದವು ಪರದಲ್ಲಿದ್ದರೆ ಅವ್ಯವಹಿತವಾದ ಗತಿಸಂಜ್ಞಕವು ಪ್ರಕೃತಿಸ್ವರವನ್ನು ಹೊಂದುವುದು ಎಂಬುದರಿಂದ ಗತಿಸಂಜ್ಞಕ ವಾದ ಸು ಎಂಬುದಕ್ಕೆ ಉದಾತ್ತವೇ ಬರಬೇಕು. 'ಆದರೂ ಮನ್‌ಕ್ತಿನ್' ವ್ಯಾಖ್ಯಾನ ಶಯನಾಸನಸ್ಥಾನ ಯಾಜಕಾದಿಕ್ರೀತಾಃ (ಪಾ. ಸೂ. ೬-೨-೧೫೧) ತತ್ಪುರುಷದಲ್ಲಿ ಉತ್ತರಪದಗಳಾದ ಈ ಶಬ್ದಗಳು ಅಂತೋದಾತ್ತ ಗಳಾಗುವುವು ಎಂಬುದರಿಂದ ತಾದೌಚ ಎಂಬ ಸೂತ್ರವಿಹಿತಸ್ವರವು ಬಾಧಿಸಲ್ಪಡುವುದು. ಆದ್ದರಿಂದ ಸುಷ್ಟುತಿಮ್ ಎಂಬುದು ಅಂತೋದಾತ್ತ. ಆದ್ದರಿಂದಲೇ **ಸುಹವಾಂ ಸುಷ್ಟುತೀಹುವೇ** (ಋ.ಸಂ. ೨-೩೨-೪) ಎಂಬಲ್ಲಿ ಸುಷ್ಟುತೀ ಎಂಬುದೂ **ವೃಷ್ಣೇಚೋದಸ್ವಸುಷ್ಟುತಿಮ್** (ಋ. ಸಂ. ೮-೭೫-೬) ಎಂಬಲ್ಲಿ ಸುಷ್ಟುತಿ ಎಂಬುದೂ **ಯಾಸ್ತೇ ರಾಕೇಸುಮತಯಃ** (ಋ. ಸಂ. ೨-೩೨-೫) ಎಂಬಲ್ಲಿ ಸುಮತಿ ಎಂಬುದೂ ಅಂತೋದಾತ್ತವಾಗಿಯೇ ಇರುವುದು ಎಂದು ತತ್ವವನ್ನು ತಿಳಿದವರು ಹೇಳುವರು.

ಕಾಶಿಕಾಕಾರರು **ಮನ್‌ಕ್ತಿನ್** ಎಂಬಲ್ಲಿ **ಕಾರಕಾದ್ದತ್ತಶ್ರುತಯೋರೇವಾಶಿಷಿ** (ಪಾ. ಸೂ ೬-೨-೧೪೮) ಎಂಬುದರಿಂದ **ಕಾರಕಾತ್** ಎಂಬ ಪದವು ಅನುವೃತ್ತವಾಗುವುದು ಎಂದಿರುವರು. ಆದ್ದರಿಂದ ಆ ಪಕ್ಷದಲ್ಲಿ ತತ್ಪುರುಷಸಮಾಸದಲ್ಲಿ ಕಾರಕದ ಮುಂದಿರುವ ಉತ್ತರಪದಗಳಾದ ಮನ್ನಂತಾದಿಶಬ್ದಗಳು ಅಂತೋದಾತ್ತಗಳಾಗು ವುವು ಎಂದು **ಮನ್‌ಕ್ತಿನ್** ಎಂಬುದಕ್ಕೆ ಅರ್ಥವಾಗುವುದು. ಪಾಣಿನಿಕೃತಿಃ ಇತ್ಯಾದಿಗಳೇ ಈ ಸೂತ್ರಕ್ಕೆ ಉದಾಹರಣೆ. ಪ್ರಕೃತಿಃ ಪ್ರಹೃತಿಃ ಎಂಬಲ್ಲಿ ಉತ್ತರಪದವು ಕಾರಕದ ಮುಂದಿಲ್ಲವಾದ್ದರಿಂದ ಅವು ಇದಕ್ಕೆ ಪ್ರತ್ಯುದಾಹರಣೆ. **ಕಾರಕಾದಿತ್ಯೇವ, ಪ್ರಕೃತಿಃ, ಪ್ರಹೃತಿಃ,** (ಕಾ. ೬-೨-೧೫೧) ಎಂದು ಕಾಶಿಕೆಯಲ್ಲಿರುವುದು ಈ ಪಕ್ಷದಲ್ಲಿ ಸುಷ್ಟು ತಿಮ್ ಎಂಬಲ್ಲಿ ಸು ಎಂಬುದು ಗತಿಸಂಜ್ಞಕವಾದ್ದರಿಂದ ಕಾರಕಾತ್ಪರದಲ್ಲಿರುವ ಉತ್ತರಪದವಿರುವುದಿಲ್ಲ. ಆದ್ದರಿಂದ ಮನ್‌ಕ್ತಿನ್ ಎಂಬುದರಿಂದ ಅಂತೋದಾತ್ತ ಸಿದ್ಧವಾಗುವುದಿಲ್ಲ. ಇದು ಮುಂದೆ ಹೇಳುವ ರೀತಿಯಲ್ಲಿ ಸರಿ ಹೋಗಬಹುದೋ? ನೋಡುವ. ಸ್ತೂಯತೇ ಅನಯಾ ಇತಿ ಸ್ತುತಿಃ (ಕರಣಭೂತವಾದ ಋಕ್ಕಿನಿಂದ ಸ್ತೋತ್ರಮಾಡು

ವುದರಿಂದ ಸ್ತುತಿಎಂದು ಹೇಳಲ್ಪಡುವುದು) ಸ್ತುತಿಃ ಸ್ತೋತ್ರಕರಣವಾದ ಋಕ್ಕು ಎಂದು ಅರ್ಥ. ಸು ಎಂಬುದು ಪ್ರತ್ಯಯಾರ್ಥವಾದ ಕರಣಕ್ಕೆ ವಿಶೇಷಣವು. ಧಾತ್ವರ್ಥಕ್ಕೆ ವಿಶೇಷಣವಲ್ಲವು. ಆದ್ದರಿಂದ ಸುಷ್ಟುತಿಮ್ ಎಂಬಲ್ಲಿ ಸುಶಬ್ದವು ಕಪರವೇ ಆಗುವುದು. ಪ್ರಕೃತಿಃ ಪ್ರಹೃತಿಃ ಇತ್ಯಾದಿ ಸ್ಥಳಗಳಲ್ಲಿ ಪ್ರ ಶಬ್ದವು ಧಾತ್ವರ್ಥಕ್ಕೇ ವಿಶೇಷಣವು. ಏನಂಟ ಅದು ಕಾರಕವಾಗುವುದಿಲ್ಲವಾದ್ದರಿಂದ ಪ್ರತ್ಯುದಾಹರಣವಾಗುವುದು ಆದ್ದರಿಂದ ಕಾರಕಾತ್ ಎಂಬುದನ್ನು ಅನುವೃತ್ತಿಸಿದರೂ ದೋಷವಿಲ್ಲ ಎನ್ನಬಹುದು. ಆದರೆ ಹೀಗೆ ಹೇಳುವ ಪಕ್ಷಕ್ಕೆ ಸು ಎಂಬುದಕ್ಕೆ ಕ್ರಿಯೆಯೊಂದಿಗೆ ಯೋಗವಿಲ್ಲದೇ ಇರುವುದರಿಂದ **ಉಪಸರ್ಗಾಃಕ್ರಿಯಾಯೋಗೇ** (ಪಾ. ಸೂ. ೧-೪.೫೯) ಕ್ರಿಯಾಯೋಗವಿದ್ದರೆ ಪ್ರಾದಿಗಳು ಉಪಸರ್ಗಸಂಜ್ಞೆಯನ್ನು ಹೊಂದುವುವು ಎಂದು ಹೇಳಿರುವ ಉಪಸರ್ಗಸಂಜ್ಞೆಯು ಬರದೇ ಹೋಗುವುದು. ಆದ್ದರಿಂದ ಉಪಸರ್ಗಾತ್ಸುನೋತಿಸುವತಿ ಎಂಬುದರಿಂದ ಸಕಾರಕ್ಕೆ ಷಕಾರ ಬರಲಾರದು. ಆದರೆ ಕ್ತಿನ್ ಪ್ರತ್ಯಯಕ್ಕೆ ಕರಣ ಎಂದರ್ಥ. ಕರಣವೆಂದರೆ ಕ್ರಿಯೆಗೆ ಸಾಧನವಾದುದು. ಆದ್ದರಿಂದ ಕ್ತಿನ್ ಪ್ರತ್ಯಯಾರ್ಥ ಕರಣಕ್ಕೆ ವಿಶೇಷಣವಾದಾಗ್ಯೂ ಸುಶಬ್ದಕ್ಕೆ ಕರಣಾಂತರ್ಗತವಾದ ಕ್ರಿಯೆಯೊಂದಿಗೆ ಯೋಗವಿರುವುದು. ಆದ್ದರಿಂದ ಉಸರ್ಗಸಂಜ್ಞೆ ಬರುತ್ತದೆ ಎಂದು ಹೇಳುವೆವು ಎಂದರೆ ಹೀಗೆ ಹೇಳಲಾಗುವುದಿಲ್ಲ. ಹೀಗಾದ ಪಕ್ಷದಲ್ಲಿ ಯತ್ಕ್ರಿಯಾಯುಕ್ತಾಃ ಪ್ರಾದಯಸ್ತಂಪತ್ಯೇವ ಗತ್ಯುಪಸರ್ಗಸಂಜ್ಞಕಾಃ ಪ್ರಾದಿಗಳು ಯಾವ ಕ್ರಿಯೆಯೊಂದಿಗೆ ಸೇರುವುವೋ ಆ ಕ್ರಿಯೆಯನ್ನು ಕುರಿತು ಉಪಸರ್ಗಸಂಜ್ಞೆ ಗತಿಸಂಜ್ಞೆಗಳನ್ನು ಹೊಂದುವುವು ಎಂಬುದರಿಂದ ಕರಣಾಂತರ್ಗತವಾದ ಕೃಞ್ ಧಾತ್ವರ್ಥವನ್ನು ಕುರಿತು ಉಪಸರ್ಗಸಂಜ್ಞೆ ಇದ್ದರೂ ಸ್ತುಞ್ ಧಾತ್ವರ್ಥವನ್ನು ಕುರಿತು ಉಪಸರ್ಗ ಸಂಜ್ಞೆ ಇಲ್ಲವಾದ್ದರಿಂದ ಸ್ತುಧಾತುವಿನ ಸಕಾರಕ್ಕೆ ಷಕಾರ ಬರಲಾರದು. ಆದರೆ ಸುಶಬ್ದವು ಸಾಕ್ಷಾತ್ತಾಗಿ ಕ್ತಿನ್ಪ್ರತ್ಯಯಾರ್ಥಕರಣಕ್ಕೆ ವಿಶೇಷಣವಲ್ಲವು. ಸ್ತುಧಾತ್ವರ್ಥದ್ವಾರಾ ಕರಣದಲ್ಲಿ ವಿಶೇಷಣವೆಂದು ಹೇಳುವೆವು. ಸ್ತುತಿಯು ಶೋಭನವಾಗಿದ್ದರೆ ಅದರ ಕರಣವೂ ಶೋಭನವಾಗಿಯೇ ಇರುವುದು. ಈರೀತಿ ಹೇಳಿದರೆ ಸ್ತುಧಾತ್ವರ್ಥ ಸಂಬಂಧವಿರುವುದರಿಂದ ಸ್ತುಧಾತ್ವರ್ಥವನ್ನು ಕುರಿತು ಉಪಸರ್ಗಸಂಜ್ಞೆ ಇರುವುದರಿಂದ ಷತ್ವಸಿದ್ಧವಾಗುವುದು. ಸ್ತುಧಾತ್ವರ್ಥದ್ವಾರಾ ಪ್ರತ್ಯಯಾರ್ಥಕರಣಕ್ಕೆ ವಿಶೇಷಣವಾದದ್ದರಿಂದ ಸುಶಬ್ದವು ಕಾರಕವೂ ಆಗುವುದು. ಆದ್ದರಿಂದ ವೃತ್ತಿಕಾರರು ಹೇಳಿರುವ ಅರ್ಥಕ್ಕೆ ವಿರೋಧವಿಲ್ಲದಂತೆಯೇ ಸುಷ್ಟುತಿಶಬ್ದವು ಮನ್ಕ್ತಿನ್ ಎಂಬ ಸೂತ್ರಕ್ಕೆ ಉದಾಹರಣೆಯಾಗುವುದು. ಪ್ರತ್ಯುದಾಹರಣೆಯಲ್ಲಿ ಭಾವಾರ್ಥಕವಾದ ಕ್ತಿನ್ ಪ್ರತ್ಯಯಾಂತವಾದ ಪ್ರಕೃತಿಃ ಪ್ರಹೃತಿಃ ಎಂಬುದನ್ನು ಕೊಟ್ಟಿರುವುದರಿಂದ ಅಲ್ಲಿ ಪ್ರಶಬ್ದವು ಕಾರಕವಾಗುವುದಿಲ್ಲ. ಪ್ರತ್ಯುದಾಹರಣದಲ್ಲಿಯೂ ಕರಣಾರ್ಥಕ ಕ್ತಿನ್ ಪ್ರತ್ಯಯಾಂತವೇ ಎಂದಿಟ್ಟುಕೊಂಡರೂ ಪ್ರಶಬ್ದವು ಧಾತ್ವರ್ಥದಲ್ಲಿ ಮಾತ್ರವೇ ವಿಶೇಷಣವೆಂದು ವಿವಕ್ಷಿತವು. ಧಾತ್ವರ್ಥದ್ವಾರಾ ಪ್ರತ್ಯಯಾರ್ಥದಲ್ಲಿ ವಿಶೇಷಣವಾಗುವಿಕೆಯು ವಿವಕ್ಷಿತವಲ್ಲ ಆದ್ದರಿಂದ ಅದನ್ನು ಪ್ರತ್ಯುದಾಹರಣೆಯಾಗಿ ಕೊಟ್ಟಿರುವುದು ಯುಕ್ತವಾಗಿಯೇ ಇರುವುದು. ಸುಷ್ಟುತಿಂ ಎಂಬಲ್ಲಾದರೋ ಕ್ತಿನ್ ಪ್ರತ್ಯಯಾರ್ಥವಾದ ಕರಣಪರ್ಯಂತರವೂ ಸುಶಬ್ದಕ್ಕೆ ವ್ಯಾಪಾರವಿರುವುದರಿಂದ ಅದು ಉದಾಹರಣವೇ ಆಗುವುದು ಪ್ರತ್ಯುದಾಹರಣವಾಗುವುದಿಲ್ಲ ಎಂದು ಹೇಳುತ್ತೇವೆ ಎಂದರೆ ಇದೂಸರಿಯಲ್ಲ. ಈ ಪಕ್ಷದಲ್ಲಿ ಸುಶಬ್ದವು ಶಬ್ದ ಶಕ್ತಿಯಿಂದಲೇ ಪ್ರತ್ಯಯಾರ್ಥ ಪ್ರಕೃತ್ಯರ್ಥಗಳೆರಡರಲ್ಲಿಯೂ ವಿಶೇಷಣವೆಂದು ವಿವಕ್ಷಿತವೋ ? ಅಥವಾ ಶಾಬ್ದವಾಗಿ ಒಂದರಲ್ಲಿ ಆರ್ಥಿಕವಾಗಿ ಮತ್ತೊಂದರಲ್ಲಿ ವಿಶೇಷಣವೆಂದು ವಿವಕ್ಷಿತವೋ ? ಯಾವಾಗ ಎರಡರಲ್ಲಿಯೂ ವಿಶೇಷಣವಾಗುವುದು ವಿವಕ್ಷಿತವೋ ಆಗಲೂ ಎರಡರಲ್ಲಿಯೂ ಏಕಕಾಲದಲ್ಲಿ ವಿಶೇಷಣವಾಗುವುದೋ ಅಥವಾ ಕ್ರಮವಾಗಿ ವಿಶೇಷಣವಾಗುವುವೋ ? ಎಂದು ಶಂಕೆ ಬರುವುದು. ಏಕಕಾಲದಲ್ಲಿ ಎರಡರಲ್ಲಿಯೂ ವಿಶೇಷಣವಾಗಿ ಅನ್ವಯಿಸುವುದು ಎಂಬ ಪಕ್ಷದಲ್ಲಿ ವಿಶೇಷ್ಯವು ಎಷ್ಟು ಇದೆಯೋ ಅಷ್ಟಾವೃತ್ತಿ ವಿಶೇಷಣ ಪದಕ್ಕೆ ಆವೃತ್ತಿಮಾಡಬೇಕಾಗುವುದು. ಕ್ರಮಪಕ್ಷದಲ್ಲಿ ಧಾತ್ವರ್ಥದಲ್ಲಿ ಅನ್ವಯಿಸಿದರೆ ಪ್ರತ್ಯಯಾರ್ಥವು

ತನ್ನಲ್ಲಿ ವಿಶೇಷಣಾನ್ವಯ ಪರ್ಯಂತ ಕಾಯುತ್ತಿರಬೇಕು. ಪ್ರತ್ಯಯಾರ್ಥದಲ್ಲಿ ಅನ್ವಯಿಸಿದರೆ ಧಾತ್ವರ್ಥವು ತನ್ನಲ್ಲಿ ವಿಶೇಷಣಾನ್ವಯ ಪರ್ಯಂತಕಾಯುತ್ತಿರಬೇಕು. ಈರೀತಿಯಲ್ಲಿ ವಿರವ್ಯವ್ಯಾಪಾರವು ಪ್ರಸಕ್ತವಾಗುವುದು. ಶಬ್ದಾರ್ಥಕ ಬುಧ್ಯರ್ಥಕಗಳಿಗೆ ಈ ವಿರವ್ಯವ್ಯಾಪಾರವನ್ನು ಯಾವ ಪ್ರಕಾರದಿಂದಲೂ ಯಾರೂ ನೋಡಿಲ್ಲ. ಯಾರೂ ಒಪ್ಪುವುದೂ ಇಲ್ಲ. ಆದ್ದರಿಂದ ಶಬ್ದಶಕ್ತಿಯಿಂದಲೇ ಪ್ರಕೃತಿ ಪ್ರತ್ಯಯಾರ್ಥಗಳಲ್ಲಿ ಸುಶಬ್ದವು ಅನ್ವಯಿಸುವುದು ಎಂಬುದು ಸರಿಯಲ್ಲ. ಇನ್ನು ಒಂದರಲ್ಲಿ ಶಾಬ್ದವಾಗಿಯೂ ಮತ್ತೊಂದರಲ್ಲಿ ಆರ್ಥವಾಗಿಯೂ ಅನ್ವಯಿಸುವುದು ಎಂಬ ಪಕ್ಷದಲ್ಲಿ ಧಾತ್ವರ್ಥದಲ್ಲಿ ಆರ್ಥಿಕವಾಗಿ ಅನ್ವಯಿಸುವುದು ಎಂದು ಹೇಳಿದರೆ ಷತ್ವಸಿದ್ಧವಾಗುವುದಿಲ್ಲ. ಪ್ರತ್ಯಯದಲ್ಲಿ ಆರ್ಥಿಕವಾಗಿ ಅನ್ವಯಿಸುವುದು ಎಂದರೆ ಮನ್‌ಕ್ತಿನ್ ಎಂಬ ಸ್ವರವು ಸಿದ್ಧವಾಗುವುದಿಲ್ಲ. ಆರ್ಥಿಕವಾದ ಕಾರಕಸಂಬಂಧಮಾತ್ರವಿದ್ದರೂ ಮನ್‌ಕ್ತಿನ್ ಎಂಬುದಕ್ಕೆ ಸುಷ್ಟುತಿಶಬ್ದವು ಉದಾಹಣವಾಗುವುದು. ಎಂದರೆ ಪ್ರಕೃತಿಃ ಪ್ರಕೃತಿಃ ಎಂಬುದು ಪ್ರತ್ಯುದಾಹರಣವಾಗಲಾರದು, ಧಾತ್ವರ್ಥದಲ್ಲಿ ಮಾತ್ರ ಶಾಬ್ದವಾಗಿ ಅನ್ವಯಿಸಿದರೂ ಪ್ರತ್ಯಯೋಪಾತ್ತಧಾತ್ವರ್ಥಕರಣದಲ್ಲಿ ಪ್ರಶಬ್ದಕ್ಕೆ ಆರ್ಥಿಕವಾದ ಅನ್ವಯುವನ್ನು ತಡೆಯಲು ಯಾರುತಾನೇ ಶಕ್ತರಾಗಿರುರು? ಯಾರೂ ಶಕ್ತರಾಗುವುದಿಲ್ಲ ಆದ್ದರಿಂದ ಅದು ಪ್ರತ್ಯುದಾಹರಣವಾಗಲಾರದು ಆದ್ದರಿಂದ ಆರ್ಥಿಕಕಾರಕಸಂಬಂಧಮಾತ್ರದಿಂದ ಸುಷ್ಟುತಿಂ ಎಂಬಲ್ಲಿ ಸ್ವರವು ಸಿದ್ಧವಾಗುವುದಿಲ್ಲ. ಆದ್ದರಿಂದ ಈ ಪಕ್ಷದಲ್ಲಿ ಸುಶಬ್ದವು ಪ್ರತ್ಯಯಾರ್ಥದಲ್ಲಿ ಮಾತ್ರ ಅನ್ವಯಿಸುವುದು ಎಂದು ಒಪ್ಪಿಕೊಳ್ಳುವುದರಿಂದ ಮನ್‌ಕ್ತಿನ್ ಸ್ವರವು ಸಿದ್ಧಿಸಲಿ ಷತ್ವವು ಛಾಂದಸವಾಗಿ ಬರಲಿ. ಅಥವಾ ಶೋಭನಾ ಮತಿಃ ಯಸ್ಯಾಂ ಎಂದು ಬಹುವ್ರೀಹಿಸಮಾಸವನ್ನೇ ಇಲ್ಲಿ ವಿವಕ್ಷಿಸೋಣ. ಆಗ **ನಞ್‌ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಅಂತೋದಾತ್ತಸಿದ್ಧವಾಗುವುದು ಅಥವಾ ಸುಷ್ಟು ಸ್ತುವನ್ತೀತಿ ಸುಷ್ಟುತಯಃ ಈ ವಿಗ್ರಹದಲ್ಲಿ ಸೋತ್ರಕರಣಗಳಾದ ಋಕ್ಕುಗಳನ್ನು ಸ್ತುತಿಶಬ್ದವು ಬೋಧಿಸುವುದು. ಕ್ತಿಚ್‌ಕ್ತೌಚಸಂಜ್ಞಾಯಾಂ (ಪಾ ಸೂ. ೧೩-೩-೧೭೪) ಎಂಬುದರಿಂದ ಕರ್ತ್ರರ್ಥದಲ್ಲಿ ಕ್ತಿಚ್ಪ್ರತ್ಯಯ ಬರುವುದು ಕ್ತಿಚ್ ಪ್ರತ್ಯಯವು ಚಿತ್ತಾದ್ದರಿಂದ ಚಿತಃ (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತ ಸಿದ್ಧವಾಗುವುದು. ಆದರೆ ಕರ್ತರಿಕ್ತಿಚ್ ಪ್ರತ್ಯಯುವನ್ನು ಹೇಳಿದರೆ ಇದು ಸ್ತೋತ್ರಕರಣಗಳಾದ ಋಕ್ಕುಗಳನ್ನು ಹೇಗೆ ಬೋಧಿಸುವುದು ಎಂದು (ಶಂಕೆ ಬರುವುದು) ಕೇಳಿದರೆ ಕಾಷ್ಠಾನಿ ಪಚಂತಿ (ಸೌದೆಗಳು ಅಡಿಗೆಮಾಡುವುವು) ಎಂಬಲ್ಲಿ ಕಾಷ್ಠವು ಪಚನಕ್ರಿಯೆಯಲ್ಲಿ ಕರಣವಾಗಿದ್ದರೂ ಕಾಷ್ಠದಲ್ಲಿರುವ ವ್ಯಾಪಾರದಲ್ಲಿ ಅದಕ್ಕೆ ಸ್ವಾತಂತ್ರ್ಯವನ್ನು ವಿವಕ್ಷೆಮಾಡಿ **ಸ್ವತಂತ್ರಃಕರ್ತಾ** (ಪಾ. ಸೂ. ೧-೪-೫೪) ಕ್ರಿಯೆಯಲ್ಲಿ ಸ್ವಾತಂತ್ರ್ಯದಿಂದ ವಿವಕ್ಷಿತವಾದ ಅರ್ಥವು ಕರ್ತೃ ಸಂಜ್ಞೆಯನ್ನು ಹೊಂದುವುದು ಎಂಬುದರಿಂದ ಕರ್ತೃಸಂಜ್ಞೆಯನ್ನು ಒಪ್ಪಿರುವರೋ ಅದೇ ರೀತಿಯಲ್ಲಿ ಕರಣಗಳಾದ ಋಕ್ಕುಗಳ ವ್ಯಾಪಾರವನ್ನೇ ಪ್ರಧಾನವಾಗಿ ಇಟ್ಟುಕೊಂಡು ಕರ್ತರಿ ಪ್ರತ್ಯಯ ಬಂದರೂ ಋಕ್ಕುಗಳಿಗೆ ಕರಣತ್ವವು ಉಪಪನ್ನವಾಗಿಯೇ ಆಗುವುದು. ೭ ||

|| ಸಂಹಿತಾಪಾಠಃ ||

ವೃಷಾ ಯೂಥೇವ ವಂಸಗಃ ಕೃಷ್ಟೀರಿಯರ್ತ್ಯೋಜಸಾ ।
ಈಶಾನೋ ಅಪ್ರತಿಷ್ಕುತಃ ॥ ೮ ॥

॥ ಪದಪಾಠಃ ॥

**ವೃಷಾ । ಯೂಥಾಽಇವ । ವಂಸಗಃ । ಕೃಷ್ಟೀಃ । ಇಯರ್ತಿ । ಓಜಸಾ ।**
**ಈಶಾನಃ । ಅಪ್ರತಿಽಸ್ಕುತಃ ॥ ೮ ॥**

॥ ಸಾಯಣಭಾಷ್ಯಂ ॥

ವೃಷಾ ಕಾಮಾನಾಂ ವರ್ಷಿತೇಂದ್ರ ಓಜಸಾ ಸ್ವಕೀಯೆಬಲೇನಾನುಗ್ರಹೀತುಂ ಕೃಷ್ಟೀರ್ಮನು-ಷ್ಯಾನಿಯರ್ತಿ । ಪ್ರಾಪ್ನೋತಿ । ಕೀದೃಶ ಇಂದ್ರಃ । ಈಶಾನಃ ಸಮರ್ಥೋಽಪ್ರತಿಷ್ಕುತಃ ಪ್ರತಿಶಬ್ದರಹಿತಃ। ಯಾಚ್ಯಮಾನಂ ನ ಪರಿಹರತೀತ್ಯರ್ಥಃ । ಇಂದ್ರಸ್ಯ ದೃಷ್ಟಾಂತಃ । ವಂಸಗೋ ವನನೀಯಗತಿರ್ವೃಷಭೋ ಯೂಥೇವ ಗೋಯೂಥಾನಿ ಯಥಾ ಪ್ರಾಪ್ನೋತಿ ತದ್ವತ್ ॥ ವೃಷಾ । ಕನಿನ್ಯುವೃಷಿತಕ್ಷಿರಾಜಿಧ-ನ್ವಿದ್ಯುಪ್ರತಿದಿವಃ । ಉ. ೧-೧೫೬ । ಇತಿ ವರ್ಷತೇಃ ಕನಿನ್ಪ್ರತ್ಯಯಃ । ಕಿತ್ತ್ವಾದ್ಗುಣಾಭಾವಃ । ನಿತ್ತ್ವಾದಾದ್ಯು-ದಾತ್ತಃ । ಯೂಥಾ ಇವ । ಯುವಂತಿ ಮಿಶ್ರೀಭವಂತೀತಿ ಯೂಥಾನಿ । ಯು ಮಿಶ್ರಣಾಮಿಶ್ರಣಯೋಃ । ತಿಥಪೃಷ್ಠಗೂಥಯೂಥಪ್ರೋಥಾಃ । ಉ ೨-೧೨ ॥ ಇತಿ ಥಕ್ಪ್ರತ್ಯಯಾಂತೋ ನಿಪಾತಿತಃ । ನಿಪಾತ-ನಾದ್ದೀರ್ಘತ್ವಂ । ಪ್ರತ್ಯಯಸ್ವರೇಣಾಕಾರ ಉದಾತ್ತಃ । ಶೇಶ್ಛಂದಸಿ ಬಹುಲಂ । ಪಾ. ೬-೧-೭೦ । ಇತಿ ಲುಕ್ । ಇವೇನ ವಿಭಕ್ತ್ಯಲೋಪಃ । ಪೂರ್ವಪದಪ್ರಕೃತಿಸ್ವರತ್ವಂ ಚ ವಕ್ತವ್ಯಂ । ಪಾ. ೨-೧-೪-೨ । ಇತಿ ಸಮಾಸೇಽಪಿ ಸ ಏವ ಸ್ವರಃ । ವಂಸಗಃ । ಪೃಷೋದರಾದಿತ್ವಾದಭಿಮತರೂಪಸ್ವರಸಿದ್ಧಿಃ । ಪಾ. ೬-೩-೧೦೯ । ಕರ್ಷಂತೀತಿ ಕೃಷ್ಟಯಃ । ಕ್ತಿಚ್ಕ್ತೌ ಚ ಸಂಜ್ಞಾಯಾಮಿತಿ ಕ್ತಿಚ್ । ಚಿತ್ತ್ವಾದಾಂತೋ-ದಾತ್ತಃ । ಇಯರ್ತಿ । ಋ ಸೃ ಗತೌ । ತಿಪ್ । ಶಪಃ ಶ್ಲುಃ ಶ್ಲೌ । ಪಾ. ೬-೧-೧೦ । ಇತಿ ದ್ವಿರ್ಭಾವಃ । ಅಭ್ಯಾಸಸ್ಯೋರದತ್ವಹಲಾದಿಶೇಷೌ । ಪಾ. ೭-೪-೫೯-೬೦ । ಅರ್ತಿಪಿಪರ್ತ್ಯೋಶ್ಚ ಪಾ ೭-೪ ೭೭ । ಇತ್ಯ-ಕಾರಸ್ಯ ಇಕಾರಃ । ಅಭ್ಯಾಸಸ್ಯಾಸವರ್ಣೇ । ಪಾ. ೬-೪-೭೮ । ಇತೀಯಙಾದೇಶಃ । ಅಂಗಸ್ಯ ಗುಣೋ ರಪರತ್ವಂ । ಓಜಸಾ । ಉಬ್ಜೇರ್ಬಲೋಪಶ್ಚ । ಉ. ೪-೧೯೧ । ಇತ್ಯಸುನ್ ತತ್ಸನ್ನಿಯೋಗೇನ ಬಕಾರ ಲೋಪಃ । ಲಘೂಪಧಗುಣಃ । ಪಾ. ೭-೩-೮೬ । ನಿತ್ತ್ವಾದಾದ್ಯುದಾತ್ತಃ । ಈಶಾನಃ । ಈಶ ಐಶ್ವರ್ಯೇ ಲಟಃ ಶಾನಚ್ । ಅದಿಪ್ರಭೃತಿಭ್ಯಃ ಶಪ ಇತಿ ಶಪೋ ಲುಕ್ । ಚಿತ ಇತ್ಯಂತೋದಾತ್ತಂ ಬಾಧಿತ್ವಾನು-ದಾತ್ತೇತ್ತ್ವಾಲ್ಲಸಾರ್ವಧಾತುಕಾನುದಾತ್ತತ್ವೇನ ಧಾತುಸ್ವರ ಏವ ಶಿಷ್ಯತೇ। ಅಪ್ರತಿಷ್ಕುತಃ। ಅಪ್ರತಿಶಬ್ದಿತಃ। ಕು ಶಬ್ದೇ । ಕರ್ಮಣಿ ಕ್ತಃ । ಪಾರಸ್ಕರಾದಿತ್ವಾತ್ಸುಡಾಗಮಃ । ಸುಷಾಮಾದಿತ್ವಾತ್ಷತ್ವಂ । ನಞ್ಸಮಾಸಃ ಅವ್ಯಯಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ವೃಷಾ**— ಇಷ್ಟಪ್ರದನಾದ । **ಈಶಾನಃ**— ಸಮರ್ಥನಾದ । **ಅಪ್ರತಿಷ್ಕುತಃ**— ತನಗೆ ಎದುರಿಲ್ಲದ (ಇಂದ್ರನು) । **ವಂಸಗಃ**— (ಗೋವುಗಳ ಹಿಂಡಿಗೆ ನಾಯಕನಾದ) ವೃಷಭವು । **ಯೂಥೇವ** — ತನ್ನ (ಗೋವುಗಳ) ಮುಂದೆಯ ಸಮೀಪಕ್ಕೆ ಹೋಗುವಂತೆ । **ಕೃಷ್ಟೀಃ** — ಮನುಷ್ಯರನ್ನು । **ಓಜಸಾ** — ತನ್ನ ಶಕ್ತಿಸಾಮರ್ಥ್ಯಗಳಿಂದ । **ಇಯರ್ತಿ**— ಹೊಂದುವನು (ಎಂದರೆ ಮನುಷ್ಯರ ಸಮೀಪಕ್ಕೆ ಬರುವನು).

॥ ಭಾವಾರ್ಥ ॥

ಇಂದ್ರನು ಮನುಷ್ಯರ ಇಷ್ಟಗಳನ್ನು ನೆರವೇರಿಸುವವನು; ಸರ್ವಸಮರ್ಥನು; ತನಗೆ ಎದುರಿಲ್ಲದವನು, ಅಪ್ರತಿಹತನು. ಇಂತಹ ಇಂದ್ರನು ಗೋವುಗಳ ಗುಂಪಿಗೆ ಮುಖಂಡನೆನಿಸಿದ ಹೋರಿಯು ತನ್ನ ಹಿಂಡಿನ ಸಮೀಪಕ್ಕೆ ಹೋಗುವಂತೆ ಮನುಷ್ಯರ ಸಮೀಪಕ್ಕೆ ಹೋಗುವನು (ಬರುವನು).

English Translation

Indra, granter of all desires, the lord unopposed and the mighty approaches men with his strength like a bull walking towards his herds.

॥ ವಿಶೇಷವಿಷಯಗಳು ॥

ಮುಖ್ಯಾಭಿಪ್ರಾಯವೇನೆಂದರೆ— ಇಂದ್ರನು ಸ್ವಾಮಿಯು, ಸರ್ವಸಮರ್ಥನು, ಅವನ ಮಾತಿಗೆ ಎದುರಿಲ್ಲ. ಇಂತಹ ಇಂದ್ರನು ತನಗೆ ಇರುವ ಶಕ್ತಿಸಾಮರ್ಥ್ಯಗಳಿಂದ ಜನರ ಇಷ್ಟಾರ್ಥಗಳನ್ನು ಕೊಡುವುದಕ್ಕಾಗಿ ಮನುಷ್ಯರ ಸಮೀಪಕ್ಕೆ ಬರುವನು. ಹೇಗೆಂದರೆ ತನ್ನ ಹಿಂಡಿನ ಯೋಗಕ್ಷೇಮದಲ್ಲಿ ಆಸಕ್ತವಾದ ಒಂದು ವೃಷಭವು ತನ್ನ ಹಿಂಡನ್ನು ಕಾಪಾಡುವುದಕ್ಕಾಗಿ ಅದರ ಸಮೀಪಕ್ಕೆ ಹೋಗುವಂತೆ ಇಂದ್ರನು ನಮ್ಮ ಯೋಗಕ್ಷೇಮದಲ್ಲಿ ಆಸಕ್ತನಾಗಿರುವುದರಿಂದ ನಮ್ಮ ಸಮೀಪಕ್ಕೆ ಬರುವನು ಎಂದಭಿಪ್ರಾಯವು.

**ವೃಷಾ--ಕಾಮಾನಾಂ ವರ್ಷಿತಾ**—ವರ್ಷಿತಾ ಎಂದರೆ ಮಳೆಕರೆಯುವವನು. ಎಂದರೆ ಜನರ ಇಷ್ಟಗಳೆಂಬ ಮಳೆಯನ್ನು ಕರೆಯುವವನು, ಇಷ್ಟಪ್ರದನು.

**ಯೂಥೇವ**—ಇಲ್ಲಿ **ಯೂಥಾಽಇವ** ಎಂದು ಪದಚ್ಛೇದವು. ಋಗ್ವೇದದಲ್ಲಿ ಇವ ಎಂಬ ಶಬ್ದವು ಪ್ರತ್ಯೇಕವಾದ ಪದವೆಂದು ಪರಿಗಣಿಸಲ್ಪಡದೆ ಅದಕ್ಕೆ ಸಂಬಂಧಪಟ್ಟ ಪದದೊಡನೆ ಪಠಿಸಲ್ಪಡುವುದು ರೂಢಿಯಾಗಿರುವುದು. ಇದರಿಂದ **ವಿಭಕ್ತ್ಯಲೋಪಃ** ಎಂದು ಭಾಷ್ಯಕಾರರು ಹೇಳಿರುವಂತೆ ಮುಖ್ಯಪದದ ವಿಭಕ್ತಿಗೆ ಯಾವ ವಿಧವಾದ ಬಾಧಕವೂ ಉಂಟಾಗುವುದಿಲ್ಲ ಎಂದರೆ **ಯೂಥಾ, ಇವ** ಎಂಬ ಎರಡು ಶಬ್ದಗಳಿದ್ದರೆ ಯಾವ ಅರ್ಥವಿರುವುದೋ ಎರಡು ಪದಗಳೂ ಸೇರಿದ ಒಂದೇ ಶಬ್ದಕ್ಕೂ ಅದೇ ಅರ್ಥವಿರುವುದು. ಉದಾ.--ಅಗ್ನೇರಿವ (ಅಗ್ನೇಃಇವ); ಅಜೇವ (ಅಜಾಽಇವ), ಅಂಜಸೇವ (ಅಂಜಸಾಽಇವ); ಅಪ್ರಶಸ್ತಾ ಇವ (ಅಪ್ರಶಸ್ತಾಃಽಇವ) ಅಭ್ರಮಿವ (ಅಭ್ರಂಽಇವ), ಅಮೃತಾದಿವ (ಅಮೃತಾತ್ಽಇವ) ಇತ್ಯಾದಿ. **ಯೂಥಾ** ಎಂಬ ಶಬ್ದವು **ಯು ಮಿಶ್ರಣಾಮಿಶ್ರಣಯೋಃ** ಎಂಬ ಧಾತುವಿನಿಂದ ಉಂಟಾಗಿದೆ. ಯುವಂತಿ ಮಿಶ್ರೀಭವಂತೀತಿ ಯೂಥಾನಿ. ಛಂದಸ್ಸಿನಲ್ಲಿ ಕಡೆಯ ನಿ ಎಂಬ ಅಕ್ಷರವು ಲೋಪವಾಗಿರುವುದರಿಂದ ಯೂಥಾ ಎಂದಿರುವುದು.

**ವಂಸಗಃ**--ವನನೀಯಗತಿರ್ವೃಷಭಃ ಹಿಂಡಿಗೆ ನಾಯಕ, ಮುಖ್ಯಸ್ಥ; leader, protector.

**ಕೃಷ್ಟೀಃ**--**ಕರ್ಷಂತೀತಿ ಕೃಷ್ಟಯಃ** (ಭೂಮಿಯನ್ನು ನೇಗಿಲಿನಿಂದ ಸೀಳಿ ಅಥವಾ ಉತ್ತು) ವ್ಯವಸಾಯಮಾಡುವವರು. ಈ ಶಬ್ದವು ದ್ವಿತೀಯಾ ಬಹುವಚನವು.

**ಈಶಾನಃ**--**ಈಶ ಐಶ್ವರ್ಯೇ** ಎಂಬ ಧಾತುವಿನ ರೂಪವು; ಸ್ವಾಮಿಯು, ಸರ್ವಸಮರ್ಥನು ಎಂದರ್ಥವು

**ಅಪ್ರತಿಷ್ಕುತಃ—ಅಪ್ರತಿಶಬ್ದಿತಃ । ಕು ಶಬ್ದೇ । ಕರ್ಮಣಿಕ್ತಃ ॥** ಎಂದರೆ ಕು ಎಂಬ ಧಾತುವಿಗೆ ಶಬ್ದಮಾಡುವುದು ಎಂದರ್ಥವು. ಈ ಧಾತುವಿನಿಂದ ಉಂಟಾದ **ಅಪ್ರತಿಷ್ಕುತಃ** ಎಂಬ ಶಬ್ದಕ್ಕೆ **ಅಪ್ರತಿಶಬ್ದಿತಃ** ಎಂದರೆ ಅವನ ಮಾತಿಗೆ ಎದುರಿಲ್ಲದ, ಪ್ರತಿಇಲ್ಲದ, ಅಪ್ರತಿಹತನಾದ ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ವೃಷಾ—ಕನಿರ್ಯುವೃಷಿತಕ್ಷಿರಾಜಿಧನ್ವಿದ್ಯುಪ್ರತಿದಿವಃ** (ಉ. ಸೂ. ೧-೧೫೪) **ಯುಮಿಶ್ರಣೇ ವೃಷು ಸೇಚನೇ-ತಕ್ಷೂತನೂಕರಣೇ-ರಾಜೃದೀಪ್ತೌ-ಧನ್ವಿಗತೌ-ದ್ಯುಅಭಿಗಮನೇ ದಿವುಕ್ರೀಡಾದೌ** ಈ ಧಾತುಗಳ ಮುಂದೆ ಕನಿನ್ ಪ್ರತ್ಯಯ ಬರುವುದು ಎಂಬುದರಿಂದ ವೃಷುಧಾತುವಿನ ಮುಂದೆ ಕನಿನ್ ಪ್ರತ್ಯಯ ಬಂದರೆ ಪ್ರತ್ಯಯವು ಕಿತ್ತಾದ್ದರಿಂದ ಲಘೂಪಧ ಗುಣಬರುವುದಿಲ್ಲ ನಿತ್ಸ್ವರದಿಂದ ಪ್ರತ್ಯಯಾಂತದ ಆದಿಯು ಉದಾತ್ತ.

**ಯೂಥಾ ಇವ**—ಯು ಮಿಶ್ರಣಾಮಿಶ್ರಣಯೋಃ ಧಾತು. **ತಿಥಪೃಷ್ಠಗೂಥಯೂಥಪ್ರೋಥಾಃ** (ಉ. ಸೂ. ೨-೧೬೯) ಎಂಬುದರಿಂದ ಥಕ್ ಪ್ರತ್ಯಯಾಂತವಾಗಿ ನಿಪಾತಿತವಾಗಿರುವುದು- ಈ ನಿಪಾತನದಿಂದಲೇ ಯೂಥ ಶಬ್ದಕ್ಕೆ ದೀರ್ಘಬರುವುದು, ಯೂಥಾ ಎಂಬಲ್ಲಿ ಆಕಾರವು ಪ್ರತ್ಯಯಸ್ವರದಿಂದ ಉದಾತ್ತ. **ಜಶ್ಶಸೋಶ್ಶಿಃ** (ಪಾ. ಸೂ. ೭-೧-೨೦) ಎಂಬುದರಿಂದ ಜಸ್ಸಿನಸ್ಥಾನದಲ್ಲಿ ಬಂದ ಶಿಗೆ **ಶೇಶ್ಛಂದಸಿಬಹುಲಂ** (ಪಾ ಸೂ. ೬-೧-೭೦) ಛಂದಸ್ಸಿನಲ್ಲಿ ಶಿ ಗೆ ಬಹುಲವಾಗಿ ಲೋಪಬರುವುದು ಎಂಬುದರಿಂದ ಲೋಪ. **ಲೋಪೋವ್ಯೋರ್ವಲಿ** (ಪಾ ಸೂ. ೬-೧-೬೬) ಎಂಬುದರಿಂದ ಲೋಪಃ ಎಂಬ ಪದವು ಅನುವೃತ್ತವಾಗುವುದರಿಂದಲೂ ಲುಕ್ ಪದಕ್ಕೆ ಅನುವೃತ್ತಿ ಇಲ್ಲದೇ ಇರುವುದರಿಂದಲೂ ಈ ಸೂತ್ರಕ್ಕೆ ಲುಕ್ ಬರುವುದು ಎಂದು ವ್ಯಾಖ್ಯಾನ ಮಾಡುವುದು ಯುಕ್ತವಲ್ಲವು. ಇವೇನ ಸಮಾಸಃ ವಿಭಕ್ತ್ಯಲೋಪಃ **ಪೂರ್ವಪದಪ್ರಕೃತಿಸ್ವರತ್ವಂಚವಕ್ತವ್ಯಮ್** (ಪಾ. ಸೂ. ೨-೧-೪ ವಾ. ೨) ಎಂಬುದರಿಂದ ಸಮಾಸ ಬಂದಮೇಲೂ ಅದೇ ಸ್ವರನಿಲ್ಲುವುದು.

**ವಂಸಗಃ—ಪೃಷೋದರಾದೀನಿ ಯಥೋಪದಿಷ್ಟಂ** (ಪಾ. ಸೂ. ೬-೩-೧೦೯) ವಂಸಗ ಎಂಬ ವಿವಕ್ಷಿತ ರೂಪವೂ ವಿವಕ್ಷಿತಸ್ವರವೂ ಸಿದ್ಧಿಸುವುದು.

**ಕೃಷ್ಟೀಃ—ಕರ್ಷನ್ತೀತಿ ಕೃಷ್ಟಯಃ ತಾಃ । ಕ್ತಿಚ್‌ಕ್ತೌಚಸಂಜ್ಞಾಯಾಂ** (ಪಾ. ಸೂ. ೩-೩-೧೭೪) ಎಂಬುದರಿಂದ ಕ್ತಿಚ್‌ಪ್ರತ್ಯಯ ಚಿತ್ತಾದ್ದರಿಂದ ಚಿತಃ (ಪಾ ಸೂ. ೬-೧-೧೬೩) ಎಂಬುದರಿಂದ **ಅಂತೋದಾತ್ತ.**

ಇಯರ್ತಿ—**ಋಸೃಗತೌ** ಎಂಬ ಋಧಾತುವಿನ ಮುಂದೆ ಲಟ್. ಅದಕ್ಕೆ ಪ್ರಥಮ ಪುರುಷ ಏಕವಚನ ತಿಪ್ ಕರ್ತರಿ ಶಪ್ ಎಂಬುದರಿಂದ ಶಪ್ ವಿಕರಣ ಅದಕ್ಕೆ **ಜುಹೋತ್ಯಾದಿಭ್ಯಃಶ್ಲುಃ** (ಪಾ. ಸೂ. ೨-೪-೭೫) ಎಂಬುದರಿಂದ ಶ್ಲು (ಲೋಪ) ಬರುವುದು. **ಶ್ಲೌ** (ಪಾ. ಸೂ. ೬-೧-೧೦) ಎಂಬುದರಿಂದ ದ್ವಿತ್ವ ಬಂದರೆ ಋ-ಋ= ತಿ **ಉರತ್** (ಪಾ. ಸೂ. ೭-೪-೬೬) ಅಭ್ಯಾಸದಲ್ಲಿರುವ ಋಕಾರಕ್ಕೆ ಪ್ರತ್ಯಯ ಪರದಲ್ಲಿರುವಾಗ ಅಕಾರ ಬರುವುದು ಎಂಬುದರಿಂದ ಬರುವ ಅಕಾರವು **ಉರಣ್ರಪರಃ** (ಪಾ. ಸೂ. ೧-೧-೫೧) ಎಂಬುದರಿಂದ ರಪರವಾಗಿ ಬರುವುದು ಅರ್ ಋ-ತಿ ಎಂದಿರುವಾಗ **ಹಲಾದಿಶೇಷಃ** (ಪಾ. ಸೂ. ೭-೪-೬೦) ಎಂಬಲ್ಲಿ ಜಾತಿ **ಪಕ್ಷಾಶ್ರಯಣಮಾಡಿ** ಅಭ್ಯಾಸಸಾಮಾನ್ಯದ ಆದಿವ್ಯಂಜನ ನಿಲ್ಲುವದು. ಮಿಕ್ಕವ್ಯಂಜನವು ಲುಪ್ತವಾಗುವುದು ಎಂಬುದರಿಂದ ರೇಫಕ್ಕೆ **ಲೋಪ.** ಅಥವಾ ಅಷ್ಟಾಧ್ಯಾಯಿಾ ಸಂಹಿತಾಪಾಠದಲ್ಲಿ **ಹ್ರಸ್ವೋಽಹಲಾದಿಶ್ಶೇಷಃ** ಎಂಬಲ್ಲಿ **ಹ್ರಸ್ವಃ** (ಪಾ. ಸೂ. ೭-೪-೫೯) **ಅಹಲ್** (ಪಾ. ಸೂ. ೭-೪-೫೯) **ಆದಿಶ್ಶೇಷಃ** (೭ ೪-೫೯) ಎಂದು ವಿಭಾಗ ಮಾಡುವುದು. ಇಲ್ಲಿ ಎರಡ

ನೆಯದಕ್ಕೆಅಭ್ಯಾಸಕ್ಕೆ ಅಹಲ್ ವ್ಯಂಜನ ವಿಲ್ಲದಿರುವಿಕೆಯು ಬರುವುದು ಎಂದರ್ಥ. ಮೂರನೆಯದಕ್ಕೆ ಆದಿಯಾದ ವ್ಯಂಜನವು ನಿಲ್ಲುವುದು ಎಂದರ್ಥ. ಪ್ರಕೃತದಲ್ಲಿ ಅಹಲ್ ಎಂಬುದರಿಂದ ರೇಫಕ್ಕೆ ಲೋಪಬರುವುದು. **ಅರ್ತಿಪಿಪ-ರ್ತ್ಯೋಶ್ಚ** (ಪಾ. ಸೂ. ೭-೪-೭೭) ಶ್ಲು ಪರದಲ್ಲಿರುವಾಗ ಋ-ಪ್ಯಾ ಧಾತುಗಳ ಅಭ್ಯಾಸಕ್ಕೆ ಇಕಾರವು ಅಂತಾದೇಶ ವಾಗಿ ಬರುವುದು. ಎಂಬುದರಿಂದ ಅಕಾರಕ್ಕೆ ಇಕಾರ ಬಂದರೆ ಇ+ಋ+ತಿ **ಅಭ್ಯಾಸಸ್ಯಾಸವರ್ಣೇ** (ಪಾ. ಸೂ. ೬-೪-೭೮) ಸವರ್ಣವಲ್ಲದ ಸ್ವರಪರದಲ್ಲಿರುವಾಗ ಅಭ್ಯಾಸದಲ್ಲಿರುವ ಇ-ಉ ವರ್ಣಗಳಿಗೆ ಕ್ರಮವಾಗಿ ಇಯಙ್ ಉವಙ್ ಆದೇಶಗಳು ಬರುವುವು ಎಂಬುದರಿಂದ ಇಯಙ್ ಆದೇಶ ಬಂದರೆ ಇಯ್+ಋ+ತಿ **ಸಾರ್ವಧಾತು ಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಋಗೆ ಗುಣವು ರಪರವಾಗಿ ಬರುವುದು, ಇಯರ್ತಿ ಎಂದಾಗುವುದು. ಇಲ್ಲಿ **ಉರತ್** (ಪಾ. ಸೂ. ೭-೪-೬೬) ಎಂಬುದನ್ನು ಬಾಧಿಸಿ **ಅರ್ತಿಪಿಪರ್ತ್ಯೋಶ್ಚ** (ಪಾ. ಸೂ. ೭-೪-೭೭) ಎಂಬುದರಿಂದ ಅಭ್ಯಾಸಕ್ಕೆ ಪ್ರಥಮದಲ್ಲಿಯೇ ಇತ್ವವನ್ನು ಹೇಳುವುದು ಯುಕ್ತವಾಗಿರುವುದು ಎಂದು ಬಾಲಮನೋರಮಾಕಾರರ ಅಭಿಪ್ರಾಯ. **ಅಭ್ಯಾಸವಿಕಾರೇಷು ಬಾಧ್ಯಬಾಧಕಭಾವೋ ನಾಸ್ತಿ** (ಪರಿಭಾ ೬೫) ಎಂಬ ಪರಿಭಾಷಾನುಸಾರವಾಗಿ ಕೈಯಟಕಾರರು ಅರ್ತಿಪಿಪರ್ತ್ಯೋಶ್ಚ ಎಂಬ ಸೂತ್ರದಲ್ಲಿ ಇಯರ್ತಿ-ತಿಪ್‌ಶಪ್ | ಶಪಃ ಶ್ಲುಃ | ದ್ವಿರ್ವಚನಂ | ಉರದಿತ್ಸತ್ವಂ | ಇತ್ವಂ | ಅಭ್ಯಾಸಸ್ಯಾಸವರ್ಣೇ ಇತಿ ಇಯಙ್ | ಗುಣರಪರತ್ವೇ ಎಂದು ಹೇಳಿರುವುದರಿಂದ ವೇದಭಾಷ್ಯವನ್ನನುಸರಿಸಿ ಮೊದಲು ಹೇಳಿರುವ ಪ್ರಕ್ರಿಯೆಯು ಯುಕ್ತವಾಗಿದೆ

ಓಜಸಾ ಉಬ್ಜ ಆರ್ಜವೇ ಧಾತು. **ಉಬ್ಜೇ** (ಬಲೇ) **ಬಲೋಪಶ್ಚ** (ಉ ಸೂ. ೪-೬೩೧) ಬಲ ಎಂಬ ಅರ್ಥವು ಅಭಿಹಿತವಾಗುವಾಗ ಉಬ್ಜಧಾತುವಿನ ಮುಂದೆ ಅಸುನ್ ಪ್ರತ್ಯಯು ಬರುವುದು ಬಕಾರಕ್ಕೆ ಲೋಪ ವೂ ಬರುವುದು ಎಂಬುದರಿಂದ ಅಸುನ್ ಪ್ರತ್ಯಯುವೂ ಬಕಾರಕ್ಕೆ ಲೋಪವೂ ಬಂದರೆ ಉಜ್+ಅಸ್ ಪುಗಂತ ಲಘೂಪಧಸ್ಯಚ (ಪಾ. ಸೂ. ೭-೩-೮೬) ಎಂಬುದರಿಂದ ಲಘೂಪಧಗುಣ ಎಂದರೆ ತೃತೀಯಾ ಏಕವಚನಲ್ಲಿ ಓಜಸಾ ಎಂದಾಗುವುದು. ನಿತ್ತ್ವಾದ್ದರಿಂದ ಪ್ರತ್ಯಯಾಂತವು ಆದ್ಯುದಾತ್ತ.

**ಈಶಾನಃ**— ಈಶ ಐಶ್ವರ್ಯೇ, ಧಾತು. ಇದರ ಮುಂದೆ ಲಟ್+ಅದಕ್ಕೆ **ಲಟಶ್ಶತೃಶಾನಚಾ** (ಪಾ ಸೂ. ೩-೨-೧೨೪) ಎಂಬುದರಿಂದ ಶಾನಚಾದೇಶ. **ಅದಿಪ್ರಭೃತಿಭ್ಯಃಶಪಃ** (ಪಾ. ಸೂ. ೨-೪-೭೨) ಎಂಬುದರಿಂದ ಶಪ್ ವಿಕರಣಕ್ಕೆ ಲುಕ್ ಬರುವುದು. ಇಲ್ಲಿ ಪ್ರತ್ಯಯುವು ಚಿತ್ತ್ವಾದ್ದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತ ಪ್ರಾಪ್ತವಾದರೆ ಈಶಧಾತುವು ಅನುದಾತ್ತೇತ್ತವಾದ್ದರಿಂದ ಅದರ ಮುಂದೆ ಇರುವ ಲಸ್ಥಾನಿಕಸಾರ್ವಧಾತುಕವಾದ ಶಾನಚ್ಚಿಗೆ **ತಾಸ್ಯನುದಾತ್ತೇತ್**— (ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತ ಬರುವುದು, ಧಾತುಸ್ವರವೇ ನಿಲ್ಲುವುದು.

**ಅಪ್ರತಿಷ್ಕುತಃ**— ಪ್ರತಿಶಬ್ದವಿಲ್ಲದವನಾಗಿ ಎಂದರ್ಥ. ಕು ಶಬ್ದೇ ಎಂಬ ಧಾತುವಿನ ಮುಂದೆ ಕರ್ಮಾರ್ಥ ದಲ್ಲಿ ಕ್ತ ಪ್ರತ್ಯಯು ಬರುವುದು. ಪ್ರತಿ ಎಂಬುದನ್ನು ಇದರ ಹಿಂದೆ ಸೇರಿಸುವುದು. **ಪಾರಸ್ಕರಾದೀನಿ ಚ ಸಂಜ್ಞಾಯಾಂ** (ಪಾ. ಸೂ ೬-೧-೧೫೭) ಪಾರಸ್ಕರಾದಿಯು ಆಕೃತಿಗಣ. ಆಕೃತ್ಯಾ ಅವಯವವಿಶೇಷೇಣ ಗಣ್ಯತೇ ಪರಿಗಣ್ಯತೇ ಇತ್ಯಾಕೃತಿಗಣಃ ಅವಯುವಸನ್ನಿವೇಶವನ್ನು ನೋಡಿ ಇದು ಈ ಗಣಕ್ಕೆ ಸೇರಿರುವುದು ಎಂಬುದಾಗಿ ಪರಿಗಣಿಸಬೇಕು ಎಂದು ಅರ್ಥ. ಪ್ರತಿಷ್ಕುತ ಎಂಬುದು ಈ ಗಣದಲ್ಲಿ ಸೇರಿರುವುದರಿಂದ ಈ ಸೂತ್ರ ದಿಂದ ಧಾತುವಿಗೆ ಸುಡಾಗಮ **ಸುಷಾಮಾದಿಷುಚ** (ಪಾ. ಸೂ. ೮-೩-೯೮) ಇದೂ ಆಕೃತಿಗಣ. ಇದರಿಂದ ಸಕಾರಕ್ಕೆ ಷಕಾರ ಪ್ರತಿಷ್ಕುತಃ, ನ ಪ್ರತಿಷ್ಕುತಃ, ಅಪ್ರತಿಷ್ಕುತಃ ಎಂದು ನಞ್ ಸಮಾಸ. **ತತ್ಪುರುಷೇ ತುಲ್ಯಾರ್ಥಂ** (ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರಬರುವುದು || ೮ ||

॥ ಸಂಹಿತಾಪಾಠಃ ॥

ಯ ಏಕಶ್ಚರ್ಷಣೀನಾಂ ವಸೂನಾಮಿರಜ್ಯತಿ ।
ಇಂದ್ರಃ ಪಂಚ ಕ್ಷಿತೀನಾಂ ॥ ೯ ॥

॥ ಪದಪಾಠಃ ॥

ಯಃ । ಏಕಃ । ಚರ್ಷಣೀನಾಂ । ವಸೂನಾಂ । ಇರಜ್ಯತಿ ॥
ಇಂದ್ರಃ । ಪಂಚ । ಕ್ಷಿತೀನಾಂ ॥ ೯ ॥

॥ ಸಾಯಣಭಾಷ್ಯಂ ॥

ಯ ಇಂದ್ರಃ ಸ್ವಯಮೇಕ ಏವ ಚರ್ಷಣೀನಾಂ ಮನುಷ್ಯಾಣಾಮಿರಜ್ಯತಿ ಈಷ್ಟೇ ತಥಾ ವಸೂನಾಂ ಧನಾನಾಮಿರಜ್ಯತಿ ಸ ಇಂದ್ರಃ ಪಂಚ ನಿಷಾದಪಂಚಮಾನಾಂ ಕ್ಷಿತೀನಾಂ ನಿವಾಸಾರ್ಹಾಣಾಂ ವರ್ಣಾನಾಮನುಗ್ರಹೀತೇತಿ ಶೇಷಃ ॥ ಏಕಃ । ಇಣ್ ಗತೌ । ಇಣ್ಭೀಕಾಪಾಶಲ್ಯತಿಮರ್ಚಿಭ್ಯಃ ಕನ್ । ಉ. ೩-೪೩ । ಇತಿ ಕನ್ । ಬಾಹುಲಕಾತ್ಕಲೋಪಾಭಾವಃ ನಿತ್ತ್ವಾದಾದ್ಯುದಾತ್ತತ್ವಂ । ಚರ್ಷಣೀನಾಂ । ಪ್ರಾತಿಪದಿಕಸ್ವರೇಣಾಂತೋದಾತ್ತಃ । ಅಂತೋದಾತ್ತಾದಿತ್ಯನುವೃತ್ತೌ ನಾಮನ್ಯತರಸ್ಯಾಮಿತಿ ವಿಭಕ್ತೇ-ರುದಾತ್ತತ್ವಂ । ವಸೂನಾಂ । ನಿದಿತ್ಯನುವೃತ್ತೌ ಶೃಸ್ವೃಸ್ನಿಹಿತ್ರಪ್ಯಸಿವಸಿಹನಿಕ್ಲಿದಿಬಂಧಿಮನಿಭ್ಯಶ್ಚ । ಉ. ೧-೧೧ । ಇತ್ಯುಪ್ರತ್ಯಯಃ । ನಿತ್ತ್ವಾದಾದ್ಯುದಾತ್ತಃ । ಇರಜ್ಯತಿ । ಕಂಡ್ವಾದಿಷ್ವಿರಜ್ ಈರ್ಷ್ಯಾಯಾಂ । ಅತ್ರೈಶ್ವರ್ಯಾರ್ಥಃ। ಕಂಡ್ವಾದಿಭ್ಯೋ ಯಕ್ । ಪಾ. ೩-೧-೨೭। ಪ್ರತ್ಯಯಸ್ವರೇಣೋದಾತ್ತಃ । ಪಂಚ ಪಚಿ ವ್ಯಕ್ತೀಕರಣೇ । ಪಂಚೇಶ್ಚೇತಿ ಕನಿನ್ । ನಿತ್ತ್ವಾದಾದ್ಯುದಾತ್ತಃ । ಕ್ಷಿತೀನಾಂ ಪ್ರಾತಿಪದಿಕಸ್ವರೇ-ಣಾಂತೋದಾತ್ತಃ । ನಾಮನ್ಯತರಸ್ಯಾಮಿತಿ ವಿಭಕ್ತೇರುದಾತ್ತತ್ವಂ ॥

॥ ಪ್ರತಿಪದಾರ್ಥ ॥

ಯ ಇಂದ್ರಃ—ಯಾವ ಇಂದ್ರನು । ಚರ್ಷಣೀನಾಂ—ಮನುಷ್ಯರಿಗೂ । ವಸೂನಾಂ—ಧನಗಳಿಗೂ ಇರಜ್ಯತಿ—ಸ್ವಾಮಿಯಾಗಿರುವನೋ । (ಸ) ಇಂದ್ರಃ ಏಕಃ—ಆ ಇಂದ್ರನು ಮಾತ್ರವೇ । ಪಂಚ ಕ್ಷಿತೀನಾಂ—(ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರ ನಿಷಾದರೆಂಬ) ಐದು ವಿಧ ಪಂಗಡದ ಜನಗಳಿಗೆ (ಅನುಗ್ರಹಮಾಡುವವನು) ॥

॥ ಭಾವಾರ್ಥ ॥

ಇಂದ್ರನು ಮನುಷ್ಯರಿಗೆಲ್ಲರಿಗೂ, ಧನಾದ್ಯೈಶ್ವರ್ಯಗಳಿಗೂ ಸ್ವಾಮಿಮಾತ್ರವೇ ಆಗಿರುವುದಲ್ಲದೆ ಮನುಷ್ಯರಲ್ಲಿರುವ ಐದು ಪಂಗಡದ ಜನಗಳಿಗೂ ಅನುಗ್ರಹಮಾಡುವವನಾಗಿರುವನು.

English Translation.

That Indra who alone rules over men, over riches (favours) the five classes of men (tribes).

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಮುಖ್ಯವಾದ ವಾಕ್ಯಕ್ಕೆ ಕ್ರಿಯಾಪದವು ಇಲ್ಲದಿರುವುದರಿಂದ ಭಾಷ್ಯಕಾರರು **ಅನುಗ್ರಹೀತಾ** ಅನುಗ್ರಹಮಾಡುವವನು ಎಂಬ ಶಬ್ದವನ್ನು ಅಧ್ಯಾಹಾರಮಾಡಿರುವರು ಆದರೆ ಈ ಋಕ್ಕಿನಲ್ಲಿ ಹೇಳಿರುವ ವಿಷಯಗಳು ಮುಂದಿನ ಋಕ್ಕಿನಲ್ಲಿಯೂ ಮುಂದುವರಿದಿರುವುದರಿಂದ ಈ ಎರಡು ಋಕ್ಕುಗಳನ್ನೂ ಒಟ್ಟಿಗೆ ಸೇರಿಸಿ ಅರ್ಥಮಾಡಿದಲ್ಲಿ ಅರ್ಥವು ಹೊಂದುವುದು. ಈಗ ಈ ಋಕ್ಕಿನಲ್ಲಿ ಹೇಳಿರುವ ಗುಣವಿಶಿಷ್ಟನಾದ ಇಂದ್ರನನ್ನು ಆಹ್ವಾನಮಾಡುವೆವು ಎಂದು ಅಭಿಪ್ರಾಯವು ಸ್ಪಷ್ಟವಾಗಿರುವುದು. ಭಾಷ್ಯಕಾರರು ಹೇಳಿರುವಂತೆ **ಅನುಗ್ರಹೀತಾ** ಎಂಬ ಪದವನ್ನು ಅಧ್ಯಾಹಾರಮಾಡಿಕೊಳ್ಳುವುದರಿಂದ ಬಾಧಕವೇನೂ ಇಲ್ಲ.

**ಏಕಃ**— ಒಬ್ಬನೇ, ಒಬ್ಬನು ಮಾತ್ರವೇ, ಇತರರಿಗೆ ಆ ಸಾಮರ್ಥ್ಯವಿಲ್ಲ ಎಂದರ್ಥವು.

**ಚರ್ಷಣೀನಾಂ**— ಮನುಷ್ಯರಿಗೆ, ಜನರಿಗೆ; Folk, people, race ಇತ್ಯಾದಿ.

**ವಸೂನಾಂ**— ಧನಗಳಿಗೆ, ಐಶ್ವರ್ಯಗಳಿಗೆ.

**ಇರಜ್ಯತಿ**— ಅಧಿಕಾರಿಯು, ಸ್ವಾಮಿಯು ಆಗಿರುವನು. ಋ ಸಂ. ೮ ೪೭-೧೬ರಲ್ಲಿ **ವಿಶ್ವೇಷಾಮಿರಜ್ಯಂತಂ ವಸೂನಾಂ** ಎಂದು ಹೇಳಿರುವುದು. ಅಲ್ಲಿಯೂ ಸಮಸ್ತಧನಾದ್ಯೈಶ್ವರ್ಯಕ್ಕೂ ಸ್ವಾಮಿಯಾಗಿರುವನು ಎಂಬ ಅರ್ಥವಿರುವುದರಿಂದ **ಇರಜ್ಯತಿ** ಎಂಬ ಶಬ್ದಕ್ಕೆ ಸ್ವಾಮಿಯಾಗಿರುವನು to order, to rule over ಎಂದೇ ಅಭಿಪ್ರಾಯವು.

**ಪಂಚ ಕ್ಷಿತೀನಾಂ**— **ಕ್ಷಿತಯಃ** ಎಂಬ ಶಬ್ದವು ಮನುಷ್ಯಾಃ ನರಾಃ ಮೊದಲಾದ ಇಪ್ಪತ್ತೈದು ಮನುಷ್ಯವಾಚಕನಾಮಗಳ ಮಧ್ಯದಲ್ಲಿ ಪಠಿತವಾಗಿದೆ (ನಿ. ೩-೭) **ಪಂಚ ಕ್ಷಿತೀನಾಂ** ಎಂದರೆ **ಪಂಚ ಜನಾನಾಂ** ಎಂದರ್ಥವು. ಇದಕ್ಕೆ ಭಾಷ್ಯಕಾರರು **ನಿಷಾದಪಂಚಮಾನಾಂ** ಎಂದೂ, ಸ್ಕಂದಸ್ವಾಮಿಯು **ಕ್ಷಿತೀನಾಂ ಮನುಷ್ಯಜಾತೀನಾಂ ಗಂಧರ್ವಾಃ ಪಿತರೋ ದೇವಾ ಇತ್ಯೇತಾಸಾಂ** ಎಂದೂ ವೆಂಕಟಮಾಧವರು— **ಮನುಷ್ಯಾಣಾಂ ಪಂಚಾನಾಂ ಕ್ಷಿತೀನಾಂ ನಿವಸತಾಂ ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸೀತಿ ಪಂಚತ್ವಂ** ಎಂದೂ ಅರ್ಥವಿವರಣೆಮಾಡಿದಾರೆ. ಸಾಯಣರ ಅಭಿಪ್ರಾಯದಂತೆ **ಕ್ಷಿತೀನಾಂ** ಎಂದರೆ ಭೂಮಿಯಲ್ಲಿ ವಾಸಮಾಡಲು ಯೋಗ್ಯರಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ನಿಷಾದ ಎಂಬ ಐದು ಜಾತಿಯ ಜನರೆಂದು ಅರ್ಥವಾಗುವುದು. ನಿಷಾದರೆಂದರೆ ಬ್ರಾಹ್ಮಣಾದಿ ನಾಲ್ಕು ವರ್ಣಗಳಲ್ಲಿ ಸೇರದಿರುವ ಮತ್ತು ಮೃಗಗಳ ಬೇಟೆಯಿಂದಲೇ ಜೀವಿಸುವ ಜನರೆಂದರ್ಥವು. ಈ ದೇಶದ ಪೂರ್ವನಿವಾಸಿಗಳಾದ ಗೊಂಡರು,

ಕೋಲರು, ಭಿಲ್ಲರು ಮೊದಲಾದವರು ಈ ಜಾತಿಗೆ ಸೇರಿದವರು. ಇವರು ಮಧ್ಯಪ್ರಾಂತ್ಯ ಮೊದಲಾದ ಕೆಲವು ಸ್ಥಳಗಳಲ್ಲಿ ಮಾತ್ರ ಈಗಲೂ ಬಹು ಅಲ್ಪಸಂಖ್ಯೆಯಲ್ಲಿ ವಾಸಿಸುತ್ತಿರುವರು. ಪಂಚ ಜನಾಃ ಮತ್ತು ಪಂಚಕೃಷ್ಟೀಃ ಎಂಬ ಶಬ್ದಗಳು ಋಗ್ವೇದದಲ್ಲಿ ಅನೇಕಕಡೆ ಇವೆ—

**ತದದ್ಯ ವಾಚಃ ಪ್ರಥಮಂ ಮಸೀಯ ಯೇನಾಸುರಾ್ ಅಭಿ ದೇವಾ ಅಸಾಮ ।**
**ಊರ್ಜಾದ ಉತ ಯಜ್ಞಿಯಾಸಃ ಪಂಚ ಜನಾ ಮಮ ಹೋತ್ರಂ ಜುಷಧ್ವಂ ॥**

(ಋ. ಸಂ ೧೦-೫೩-೪)

**ಪಂಚ ಜನಾ ಮಮ ಹೋತ್ರಂ ಜುಷಂತಾಂ ಗೋಜಾತಾ ಉತಯೇ ಯಜ್ಞಿಯಾಸಃ ॥**

(ಋ. ಸಂ. ೧೦-೫೩-೫)

**ಸದ್ಯಶ್ಚಿದ್ಯಃ ಶವಸಾ ಪಂಚಕೃಷ್ಟೀಃ ಸೂರ್ಯ ಇವ ಜ್ಯೋತಿಷಾಪಸ್ತತಾನ ॥**

(ಋ. ಸಂ. ೧೦-೧೭೮-೩)

ಈ ಋಕ್ಕುಗಳಲ್ಲಿರುವ ಪಂಚಜನಾಃ ಮತ್ತು ಪಂಚಕೃಷ್ಟೀಃ ಎಂಬ ಶಬ್ದಗಳಿಗೆ ಯಾಸ್ಕರು ತಮ್ಮ ನಿರುಕ್ತದಲ್ಲಿ ಈರೀತಿ ವಿವರಣೆಮಾಡಿರುವರು—

**ಪಂಚ ಜನಾ ಮಮ ಹೋತ್ರಂ ಜುಷಧ್ವಂ ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸೀತ್ಯೇಕೇ । ಚತ್ವಾರೋ ವರ್ಣಾ ನಿಷಾದಃ ಪಂಚಮ ಇತ್ಯೌಪಮನ್ಯವಃ । ನಿಷಾದಃ ಕಸ್ಮಾನ್ನಿಷದನೋ ಭವತಿ ನಿಷಣ್ಣಮಸ್ಮಿನ್ ಪಾಪಕಮಿತಿ ನೈರುಕ್ತಾಃ ॥ ಇತಿ ॥**

ಎಂದರೆ, ಪಂಚಜನರೆಂದರೆ, ಗಂಧರ್ವರು, ಪಿತೃಗಳು, ದೇವತೆಗಳು, ಅಸುರರು, ರಾಕ್ಷಸರು ಎಂದು ಐದು ವಿಧ ಜನರೆಂದು ಕೆಲವರು ಹೇಳುವರು. ಬ್ರಾಹ್ಮಣಾದಿ ನಾಲ್ಕುವರ್ಣದವರೂ ನಿಷಾದ ಎಂಬ ಬೇಡರ ಜಾತಿಗೆ ಸೇರಿದ ಜನರೂ ಸೇರಿ ಐದು ವಿಧ ಜನರೆಂದು ಉಪಮನ್ಯು ಮುಂತಾದವರ ಮತವು. (ಇದನ್ನೇ ಸಾಯಣರು ಅನುಮೋದಿಸಿರುವರು). ನಿಷಾದರೆಂದರೆ ಪ್ರಾಣಿಗಳನ್ನು ಕೊಲ್ಲುವವರು ಅಥವಾ ಇವರಲ್ಲಿ ಪಾಪವು ತುಂಬಿರುವುದರಿಂದ ಇವರಿಗೆ ನಿಷಾದರೆಂದು ನೈರುಕ್ತಕಾರರು ಹೇಳುವರು. ಇದಲ್ಲದೆ ಆ ಕಾಲದಲ್ಲಿ ಐದು ಮುಖ್ಯವಾದ ಪಂಗಡಗಳು (tribes) ಇದ್ದಿರಬಹುದು. ಕವಿಯು ಈ ಅಭಿಪ್ರಾಯವನ್ನೇ ಇಟ್ಟುಕೊಂಡು **ಪಂಚ ಕ್ಷಿತೀನಾಂ** ಎಂದು ಹೇಳಿರಬಹುದು. ಹೇಗಾದರೂ ಈ ವಿಚಾರದಲ್ಲಿ ನಿರುಕ್ತಕಾರರಾದ ಯಾಸ್ಕರ ಕಾಲದಲ್ಲಿಯೂ ಸಹ ಅಭಿಪ್ರಾಯಭೇದವಿದ್ದಿತೆಂಬುವುದು ಸ್ಪಷ್ಟವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಏಕಃ**—**ಇಣ್ ಭೀಕಾಪಾಶಲ್ಯತಿಮರ್ಚಿಭ್ಯಃ ಕನ್** (ಉ. ಸೂ. ೩-೩೨೩) **ಇಣ್ ಗತೌ, ಞಿಭೀ ಭಯೇ, ಕೈ ಶಬ್ದೇ, ಪಾ ಪಾನೇ, ಶಲ ಗತೌ, ಅತ ಸಾತತ್ಯಗಮನೇ, ಮರ್ಚ ಶಬ್ದೇ,** ಈ ಧಾತುಗಳ ಮುಂದೆ ಕನ್ ಪ್ರತ್ಯಯ ಬರುವುದು ಎಂಬುದರಿಂದ ಇಣ್‌ಧಾತುವಿನ ಮುಂದೆ ಕನ್ ಪ್ರತ್ಯಯ ಬಂದರೆ ಇ+ಕ. ಬಹುಲಗ್ರಹಣವಿರುವುದರಿಂದ **ಲ ಶಕ್ವತದ್ಧಿತೇ** (ಪಾ. ಸೂ. ೧-೩-೮) ಎಂಬುದರಿಂದ ಕಕಾರಕ್ಕೆ ಇತ್ಸಂಜ್ಞಾ

ಬರುವುದಿಲ್ಲ. **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಗುಣಬಂದರೆ ಏಕ ಎಂದಾಗುವುದು. ಪ್ರತ್ಯಯ ನಿತ್ತಾದ್ದರಿಂದ ನಿತ್ಸ್ವರ ಆದ್ಯುದಾತ್ತ ಬರುವುದು.

**ಚರ್ಷಣೀನಾಂ**--ಚರ್ಷಣಿ ಎಂಬುದು ಮನುಷ್ಯ ಎಂಬ ಅರ್ಥವನ್ನು ಕೊಡುವ ಪ್ರಾತಿಪದಿಕ. ಫಿಷಃ (ಫಿ. ಸೂ. ೧) ಎಂಬ ಪ್ರಾತಿಪದಿಕಸ್ವರದಿಂದ ಅಂತೋದಾತ್ತ. ಇದರ ಮುಂದೆ ಷಷ್ಠೀವಿಭಕ್ತಿ ಆಮ್ ಪ್ರತ್ಯಯವನ್ನಿಟ್ಟರೆ **ಹ್ರಸ್ವನದ್ಯಾಪೋನುಟ್** (ಪಾ. ಸೂ. ೭-೧-೫೪) ಹ್ರಸ್ವಾಂತವಾದ ಅಂಗದ ಮುಂದೆಯೂ, ನದ್ಯಂತವಾದ ಅಂಗದ ಮುಂದೆಯೂ ಆಬಂತವಾದ ಅಂಗದ ಮುಂದೆಯೂ ಇರುವ ಆಮ್‌ಗೆ ನುಟ್ ಆಗಮ ಬರುವುದು ಎಂಬುದರಿಂದ ನುಡಾಗಮ ಬಂದರೆ **ನಾಮಿ** (ಪಾ. ಸೂ. ೬-೪-೩) ನಾಮ್ ಪರದಲ್ಲಿರುವಾಗ ಅಜಂತ ವಾದ ಅಂಗಕ್ಕೆ ದೀರ್ಘಬರುವುದು ಎಂದು ದೀರ್ಘ ಬಂದರೆ ಚರ್ಷಣೀನಾಂ ಎಂದಾಗುವುದು. **ನಾಮನ್ಯತರಸ್ಯಾಂ** (ಪಾ. ಸೂ. ೬-೧-೧೭೭) ಮತುಪ್ ಪ್ರತ್ಯಯ ಪರದಲ್ಲಿರುವಾಗ ಯಾವ ಹ್ರಸ್ವವಿರುವುದೋ ಅದನ್ನೇ ಕೊನೆಯಲ್ಲಿ ಹೊಂದಿರುವುದೂ ಅಂತೋದಾತ್ತವೂ ಆಗಿರುವ ಶಬ್ದದ ಮುಂದೆ ಇರುವ ನಾಮ್ ಎಂಬುದು ವಿಕಲ್ಪವಾಗಿ ಉದಾತ್ತವಾಗುವುದು ಎಂಬುದರಿಂದ ವಿಭಕ್ತಿಯು ಉದಾತ್ತ.

**ವಸೂನಾಂ**—**ಶೃಸ್ವೃಸ್ನಿಹಿತ್ರಪ್ಯಸಿವಸಿಹನಿಕ್ಲಿದಿಬನ್ಧಿಮನಿಭ್ಯಶ್ಚ** (ಉ ಸೂ. ೧-೧೦) **ಶೄ ಹಿಂಸಾಯಾಂ, ಸ್ವೃ ಶಬ್ದೋಪತಾಪಯೋಃ, ಷ್ಣಿಹ ಉಪತಾಪೇ, ತ್ರಪೂಷ್ ಲಜ್ಜಾಯಾಂ, ಅಸು ಕ್ಷೇಪಣೇ, ವಸ ನಿವಾಸೇ, ಹನ ಹಿಂಸಾಗತ್ಯೋಃ, ಕ್ಲಿದೂ ಆರ್ದ್ರೀಭಾವೇ, ಬಂಧ ಬಂಧನೇ, ಮನ ಜ್ಞಾನೇ** ಈ ಧಾತುಗಳ ಮುಂದೆ ಉ ಪ್ರತ್ಯಯ ಬರುವುದು. ಅದು ನಿತ್ತಾಗುವುದು ಎಂಬುದರಿಂದ ವಸಧಾತುವಿನ ಮುಂದೆ ಉ ಪ್ರತ್ಯಯ ಬರುವುದು. ಪ್ರತ್ಯಯವು ನಿತ್ತಾದ್ದರಿಂದ ನಿತ್ಸ್ವರ ಆದ್ಯುದಾತ್ತ ಬರುವುದು.

ಇರಜ್ಯತಿ—ಇರಜ್ **ಈರ್ಷ್ಯಾಯಾಂ** ಎಂದು ಕಂಡ್ವಾದಿಯಲ್ಲಿ ಪಠಿತವಾಗಿರುವುದು. ಆದರೂ ಧಾತು ಗಳಿಗೆ ಅನೇಕಾರ್ಥಗಳಿರುವುದರಿಂದ ಇಲ್ಲಿ ಇರಜ್‌ಧಾತುವು ಐಶ್ವರ್ಯ ಎಂಬ ಅರ್ಥವನ್ನು ಹೇಳುವುದು. **ಕಂಡ್ವಾದಿಭ್ಯೋ ಯಕ್** (ಪಾ. ಸೂ. ೩-೧ ೧೭). ಈ ಗಣಪಠಿತವಾದ ಧಾತುಗಳ ಮುಂದೆ ಸ್ವಾರ್ಥದಲ್ಲಿ ನಿತ್ಯವಾಗಿ ಯಕ್ ಬರುವುದು ಎಂಬುದರಿಂದ ಯಕ್ ಪ್ರತ್ಯಯ ಬರುವುದು **ಸನಾದ್ಯಂತಾ ಧಾತವಃ** (ಪಾ.ಸೂ. ೩-೧-೩೨) ಎಂಬುದರಿಂದ ಧಾತುಸಂಜ್ಞೆ ಬರಲು ಲಟ್ ಪ್ರಥಮಪುರುಷೈಕವಚನ ತಿಪ್ ಬಂದರೆ ಇರಜ್ಯತಿ ಎಂದಾಗುವುದು. ಇರಜ್ಯತಿ ಎಂಬುದು ಪ್ರತ್ಯಯಸ್ವರದಿಂದ ಅಂತೋದಾತ್ತ.

**ಪಂಚ**—**ಪಚಿ ವ್ಯಕ್ತೀಕರಣೇ.** ಪಚ್ ಧಾತುವು ಇದಿತ್ತಾದ್ದರಿಂದ **ಇದಿತೋನುಮ್‌ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. ಅನುಸ್ವಾರಪರಸವರ್ಣಗಳು ಬಂದರೆ ಪಞ್ಚ್. ಇದರ ಮುಂದೆ **ಪಚೇಶ್ಚ** ಎಂಬುದರಿಂದ ಕನಿನ್ ಪ್ರತ್ಯಯ ಬಂದರೆ ಪಂಚನ್ ಎಂದಾಗುವುದು. ನಿತ್ಸ್ವರದಿಂದ ಆದ್ಯುದಾತ್ತ. **ಷಡ್ಭ್ಯೋಲುಕ್** (ಪಾ. ಸೂ. ೭-೧-೨೨) ಎಂಬುದರಿಂದ ಜಸ್ಸಿಗೆ ಲುಕ್ ಬಂದರೆ **ನ ಲೋಪಃ ಪ್ರಾತಿಪದಿಕಾಂತಸ್ಯ** (ಪಾ. ಸೂ. ೮-೨-೭) ಎಂಬುದರಿಂದ ನ ಲೋಪ, ಪಂಚ ಎಂದಾಗುವುದು.

ಕ್ಷಿತೀನಾಂ—ಫಿಷಃ (ಫಿ. ಸೂ. ೧) ಎಂಬ ಪ್ರಾತಿಪದಿಕಸ್ವರದಿಂದ ಕ್ಷಿತಿಶಬ್ದ ಅಂತೋದಾಂತ. ಅದರ ಮುಂದೆ ಇರುವ ವಿಭಕ್ತಿಯು **ನಾಮನ್ಯತರಸ್ಯಾಂ** (ಪಾ. ಸೂ. ೬-೧-೧೭೭) ಎಂಬುದರಿಂದ ಉದಾತ್ತ ॥ ೯ ॥

॥ ಸಂಹಿತಾಪಾಠಃ ॥

ಇಂದ್ರಂ ವೋ ವಿಶ್ವತಸ್ಪರಿ ಹವಾಮಹೇ ಜನೇಭ್ಯಃ ॥
ಅಸ್ಮಾಕಮಸ್ತು ಕೇವಲಃ ॥ ೧೦ ॥

॥ ಪದಪಾಠಃ ॥

ಇಂದ್ರಂ । ವಃ । ವಿಶ್ವತಃ । ಪರಿ । ಹವಾಮಹೇ । ಜನೇಭ್ಯಃ ।
ಅಸ್ಮಾಕಂ । ಅಸ್ತು । ಕೇವಲಃ ॥ ೧೦ ॥

॥ ಸಾಯಣಭಾಷ್ಯಂ ॥

ಆಶ್ವಿನಂ ಶಂಸಿಷ್ಯನ್ನಿಂದ್ರಂ ವೋ ವಿಶ್ವತಸ್ಪರೀತಿ ಜುಹುಯಾತ್ । ಸಂಸ್ಥಿತೇಷ್ವಾಶ್ವಿನಾಯ ಸ್ತುವತ ಇತಿ ಖಂಡೇ ಬಣ್ಮಹಾ ಅಸಿ ಸೂರ್ಯೇತಿ ದ್ವಾಭ್ಯಾಮಿಂದ್ರಂ ವೋ ವಿಶ್ವತಸ್ಪರಿ । ಆ. ೬-೫ । ಇತಿ ಸೂತ್ರಿತಂ ॥ ಚತುರ್ವಿಂಶೇಽಹನಿ ಪ್ರಾತಃಸವನೇ ಬ್ರಾಹ್ಮಣಾಚ್ಛಂಸಿನ ಇಂದ್ರಂ ವೋ ವಿಶ್ವತಸ್ಪರೀ-ತ್ಯಾರಂಭಣೀಯಾ । ಚತುರ್ವಿಂಶ ಇತ್ಯುಪಕ್ರಮ್ಯ ಋಜುನೀತೀ ನೋ ವರುಣ ಇಂದ್ರಂ ವೋ ವಿಶ್ವತಸ್ಪರಿ ಆ. ೭-೨ । ಇತಿ ಸೂತ್ರಿತಂ ॥

ಹೇ ಋತ್ವಿಗ್ಯಜಮಾನಾ ವಿಶ್ವತಃ ಸರ್ವೇಭ್ಯೋ ಜನೇಭ್ಯಃ ಪರಿ ಉಪರ್ಯವಸ್ಥಿತಮಿಂದ್ರಂ ವೋ ಯುಷ್ಮದರ್ಥಂ ಹವಾಮಹೇ । ಆಹ್ವಯಾಮಃ । ಅತಃ ಸ ಇಂದ್ರೋಽಸ್ಮಾಕಂ ಕೇವಲೋಽಸಾಧಾರಣೋಽಸ್ತು । ಇತರೇಭ್ಯೋಽಪ್ಯಧಿಕಮನುಗ್ರಹಮಸ್ಮಾಸು ಕರೋತ್ವಿತ್ಯರ್ಥಃ ॥ ಇಂದ್ರಂ । ರನ್ಪ್ರ-ತ್ಯಯಾಂತೋ ನಿತ್ತ್ವಾದಾದ್ಯುದಾತ್ತಃ । ವಃ । ಅನುದಾತ್ತಂ ಸರ್ವಮಿತ್ಯನುವೃತ್ತೌ ಬಹುವಚನಸ್ಯ ವಸ್ನಸೌ । ಪಾ. ೮-೧-೨೧ । ಇತಿ ವಸ್ । ವಿಶ್ವತಃ । ಲಿತೀತಿ ಪ್ರತ್ಯಯಾತ್ಪೂರ್ವಮುದಾತ್ತಂ । ಪರಿ । ನಿಪಾತತ್ವಾದಾದ್ಯುದಾತ್ತಃ । ಸಂಹಿತಾಯಾಂ ಪಂಚಮ್ಯಾಃ ಪರಾವಧ್ಯರ್ಥೇ । ಪಾ. ೮-೩-೫೧ । ಇತಿ ವಿಸರ್ಜನೀಯಸ್ಯ ಸತ್ವಂ । ಹವಾಮಹೇ । ಹ್ವೇಞಃ ಶಪಿ ಬಹುಲಂ ಛಂದಸೀತಿ ಸಂಪ್ರಸಾರಣಪರ-ಪೂರ್ವತ್ವೇ । ಗುಣಾವಾದೇಶೌ । ಜನೇಭ್ಯಃ । ಜನ್ಯಂತ ಇತಿ ಜನಾಃ । ಜನಯತೇಃ ಕರ್ಮಣಿ ಘಞ್ । ಜನಿವಧ್ಯೋಶ್ಚ । ಪಾ. ೭-೩-೩೫ । ಇತ್ಯುಪಧಾಯಾ ವೃದ್ಧ್ಯಭಾವಃ ಞಿತ್ತ್ವಾದಾದ್ಯುದಾತ್ತತ್ವಂ । ಅಸ್ಮಾಕಂ । ಅಸ್ಮಚ್ಛಬ್ದೋಽಂತೋದಾತ್ತಃ । ಶೇಷೇ ಲೋಪಃ । ಪಾ. ೭-೨-೯೦ । ಇತ್ಯಂತಲೋಪಪಕ್ಷೇ ಸಾಮ ಆಕಂ । ಪಾ. ೭-೧-೩೩ । ಇತ್ಯಾಕಾರೇಣೈಕಾದೇಶ ಉದಾತ್ತಃ । ಟಿಲೋಪಪಕ್ಷ ಉದಾತ್ತನಿವೃತ್ತಿ-ಸ್ವರೇಣಾಕಾರ ಉದಾತ್ತಃ । ಕೇವಲಃ । ವೃಷಾದೇರಾಕೃತಿಗಣತ್ವಾದಾದ್ಯುದಾತ್ತಃ ॥ ೧೪ ॥ ॥ ೨ ॥

ಪ್ರತಿಪದಾರ್ಥ

(ಎಲೈ ಋತ್ವಿಗ್ಯಜಮಾನರಾದ ಜನರೇ, **ವಿಶ್ವತಃ ಜನೇಭ್ಯಃ**—ಸಮಸ್ತ ಜನರಿಗಿಂತಲೂ | **ಪರಿ**—ಹೆಚ್ಚಾದ | **ಇಂದ್ರಂ**—ಇಂದ್ರನನ್ನು | **ವಃ**—ನಿಮಗಾಗಿ (ನಿಮ್ಮ ಪರವಾಗಿ) | **ಹವಾಮಹೇ**—ಆಹ್ವಾನ ಮಾಡುವೆವು | (ಆ ಇಂದ್ರನು) **ಅಸ್ಮಾಕಂ**—ನಮಗೆ | **ಕೇವಲಃ**—ಹೆಚ್ಚಾದ ಅನುಗ್ರಹಮಾಡುವವನಾಗಿ (ಮುಖ್ಯ ಪ್ರೀತಿಪಾತ್ರನಾಗಿ) | **ಅಸ್ತು**—ಆಗಲಿ ||

|| ಭಾವಾರ್ಥ ||

ಎಲೈ ಋತ್ವಿಗ್ಯಜಮಾನರಾದಿಯಾದ ಜನರೇ, ಇಂದ್ರನು ಸಮಸ್ತಜನರಿಗಿಂತಲೂ ಹೆಚ್ಚಾದವನು ಅಥವಾ ಎಲ್ಲೆಲ್ಲಿಯೂ ಇರುವವನು. ಇಂತಹ ಇಂದ್ರನನ್ನು ನಿಮ್ಮ ಪರವಾಗಿ (ಇಲ್ಲಿಗೆ ಎಂದರೆ ಈ ಯಜ್ಞಭೂಮಿಗೆ) ಆಹ್ವಾನಮಾಡುವೆವು. ಆ ಇಂದ್ರನು ನಮಗೆ ಮುಖ್ಯಾನುಗ್ರಾಹಕನಾಗಿರಲಿ ಅಥವಾ ನಮಗೆ ಬೇಕಾದವನಾಗಿರಲಿ.

English Translation.

We invoke for you Indra (who is) above all men. May he be exclusively our own.

|| ವಿಶೇಷವಿಷಯಗಳು ||

ಈ ಋಕ್ಕು ಸಾಮವೇದ ೧೬೨೦; ಅಥರ್ವವೇದ ೨೦-೩೯-೧; ೨೦-೭೦-೧೬; ತೈತ್ತಿರೀಯಸಂಹಿತಾ ೧-೬-೧೨-೧; ಮೈತ್ರಾಯಣೀಯ ಸಂಹಿತಾ ೪-೧೧-೪ ಈ ಸ್ಥಳಗಳಲ್ಲಿ ಪಠಿತವಾಗಿದೆ. ಹಿಂದಿನ ಋಕ್ಕಿನೊಡನೆ ಸೇರಿಸಿ ಅರ್ಥಮಾಡಿದಲ್ಲಿ ಅಭಿಪ್ರಾಯವು ಸರಿಯಾಗಿ ಹೊಂದುವುದು. ಗೃಹ್ಯಕರ್ಮೋಕ್ತವಾದ ನವಗ್ರಹಾರಾಧನೆ ಮೊದಲಾದ ಕರ್ಮಗಳಲ್ಲಿ ಅಷ್ಟದಿಕ್ಪಾಲಕರನ್ನು ಆಹ್ವಾನಮಾಡುವ ಸಂದರ್ಭದಲ್ಲಿಯೂ ಇತರ ಸಂದರ್ಭಗಳಲ್ಲಿಯೂ ಇಂದ್ರನನ್ನು ಆಹ್ವಾನಮಾಡುವುದಕ್ಕಾಗಿ ಈ ಮಂತ್ರವನ್ನು ಉಪಯೋಗಿಸುವರು.

|| ವ್ಯಾಕರಣಪ್ರಕ್ರಿಯಾ ||

**ಇಂದ್ರಂ**—ಇದಿಪರಮೈಶ್ವರ್ಯೇ ಧಾತುವಿನ ಮುಂದೆ **ಋಜ್ರೇಂದ್ರಾಗ್ರ** (ಉ ಸೂ. ೨-೧೮೬) ಎಂಬುದರಿಂದ ರನ್ ಪ್ರತ್ಯಯ ಬರುವುದು. ನಿತ್ಸ್ವರದಿಂದ ಆದ್ಯುದಾತ್ತ.

**ವಃ—ಅನುದಾತ್ತಂಸರ್ವಮಪಾದಾದೌ** (ಪಾ. ಸೂ. ೮-೧-೧೮) ಎಂಬುದು ಅನುವೃತ್ತವಾಗಲು **ಬಹುವಚನಸ್ಯ ವಸ್ನಸೌ** (ಪಾ.ಸೂ. ೮-೧-೨೧) ಪದದ ಮುಂದೆ ಇರುವವುಗಳೂ ಪಾದದ ಆದಿಯಲ್ಲಿಲ್ಲದವುಗಳೂ ಷಷ್ಠೀ ಚತುರ್ಥೀ ದ್ವಿತೀಯಾ ಬಹುವಚನಾಂತಗಳೂ ಆದ ಯುಷ್ಮದ್ ಅಸ್ಮದ್ ಶಬ್ದಗಳಿಗೆ ಕ್ರಮವಾಗಿ ವಸ್ ನಸ್ ಆದೇಶಗಳು ಬರುವುವು. ಅವು ಅನುದಾತ್ತಗಳೂ ಆಗುವುವು ಎಂಬುದರಿಂದ ಯುಷ್ಮಭ್ಯಮ್ ಎಂಬುದಕ್ಕೆ ಅನುದಾತ್ತವಾದ ವಸ್ ಆದೇಶ ಬರುವುದು.

**ವಿಶ್ವತಃ—ಪಞ್ಚಮ್ಯಾಸ್ತಸಿಲ್** (ಪಾ. ಸೂ. ೫-೩ ೭) ಎಂಬುದರಿಂದ ತಸಿಲ್ ಬಂದಿರುವುದು. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ತಸಿಲಿನ **ಪೂರ್ವವರ್ಣವು** ಉದಾತ್ತ.

**ಪರಿ**—ನಿಪಾತವಾದ್ದರಿಂದ ಆದ್ಯುದಾತ್ತ. ವಿಶ್ವತಃ ಪರಿ ಈ ಎರಡರ ಸಂಹಿತಾಕಾಲದಲ್ಲಿ **ಪಂಚಮ್ಯಾಃ ಪರಾವಧ್ಯರ್ಥೇ** (ಪಾ. ಸೂ. ೮-೩-೫೧) ಉಪರಿ ಎಂಬ ಅರ್ಥದಲ್ಲಿರುವ ಪರಿಶಬ್ದವು ಪರದಲ್ಲಿರುವಾಗ ಪಂಚಮೀ ವಿಭಕ್ತಿಯ ವಿಸರ್ಗಕ್ಕೆ ಸಕಾರ ಬರುವುದು ಎಂಬುದರಿಂದ ವಿಶ್ವತಃ ಎಂಬಲ್ಲಿರುವ ವಿಸರ್ಗಕ್ಕೆ ಸಕಾರ ಬಂದರೆ ವಿಶ್ವತಸ್ಪರಿ ಎಂದಾಗುವುದು

**ಹವಾಮಹೇ**—ಹ್ವೇಞ್ ಧಾತುವಿನ ಮುಂದೆ ಲಟ್ ಉತ್ತಮಪುರುಷ ಬಹುವಚನ ಮಹಿಙ್ ಪ್ರತ್ಯಯ ಶಪ್. ಹ್ವೇ+ಅ+ಮಹಿ **ಬಹುಲಂಛಂದಸಿ** (ಪಾ. ಸೂ. ೬-೧-೩೪) ಎಂಬುದರಿಂದ ಸಂಪ್ರಸಾರಣ, **ಸಂಪ್ರಸಾರಣಾಚ್ಚ** (ಪಾ. ಸೂ. ೬-೧-೧೦೮) ಎಂಬುದರಿಂದ ಪೂರ್ವರೂಪ, ಗುಣಾವಾದೇಶದೀರ್ಘಗಳು. ಪ್ರತ್ಯಯದ ಟಿಗೆ ಏತ್ವ ಬಂದರೆ ಹವಾಮಹೇ ಎಂದಾಗುವುದು.

**ಜನೇಭ್ಯಃ** ಜನ್ಯಂತೇ (ಹುಟ್ಟುತ್ತಾರೆ) **ಇತಿ** ಜನಾಃ, ಜನ ಧಾತುವಿನ ಮುಂದೆ ಣಿಚ್. ಣಿಜಂತದ ಮುಂದೆ ಕರ್ಮಣಿ ಘಞ್ **ಣೇರನಿಟಿ** (ಪಾ ಸೂ. ೬-೪-೫೧) ಎಂಬುದರಿಂದ ಣಿ ಲೋಪ. ಣಿಜ್ಞನ್ನು ನಿಮಿತ್ತ ಮಾಡಿಕೊಂಡು **ಅತ ಉಪಧಾಯಾಃ** (ಪಾ. ಸೂ ೭-೨-೧೧೬) ಎಂಬುದರಿಂದ ವೃದ್ಧಿಪ್ರಾಪ್ತವಾದರೆ **ಜನಿವಧ್ಯೋಶ್ಚ** (ಪಾ. ಸೂ. ೭-೩-೩೫) ಚಿಣ್, ಞಿತ್ತು ಣಿತ್ತು ಆದ ಕೃತ್ ಪ್ರತ್ಯಯ ಇವುಗಳು ಪರದಲ್ಲಿರುವಾಗ ಜನ್ ವಧ್ ಧಾತುಗಳ ಉಪಧೆಗೆ ವೃದ್ಧಿ ಬರುವುದಿಲ್ಲ ಎಂಬುದರಿಂದ ಅದಕ್ಕೆ ನಿಷೇಧಬರುವುದು. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಪ್ರತ್ಯಯಾಂತ ಶಬ್ದವು ಆದ್ಯುದಾತ್ತ,

**ಅಸ್ಮಾಕಮ್**—ಅಸ್ಮದ್ ಶಬ್ದದ ಮುಂದೆ ಷಷ್ಠೀ ಬಹುವಚನ ಆಮ್. ಅಸ್ಮದ್+ಆಮ್ ಎಂದಿರುವಾಗ **ಸಾಮ ಆಕಮ್** (ಪಾ. ಸೂ. ೭-೧-೩೩) ಯುಷ್ಮದ್, ಅಸ್ಮದ್ ಶಬ್ದಗಳ ಮುಂದೆ ಇರುವ ಸಾಮ್‌ಗೆ ಆಕಮ್ ಆದೇಶ ಬರುವುದು ಎಂಬುದರಿಂದ ಆಕಮ್ ಆದೇಶವು ಆಮ್‌ನ್ನೇ ಸಾಮ್ ಎಂದು ಭಾವಿಸಿಕೊಂಡು ವಿಭಕ್ತಿಗೆ ಬರುವುದು; ಅಸ್ಮದ್ ಶಬ್ದ ಅಂತೋದಾತ್ತ. **ಶೇಷೇ ಲೋಪಃ** (ಪಾ. ಸೂ. ೭-೨-೯೦) ಎಂಬುದರಿಂದ ಅಸ್ಮದ್ ಶಬ್ದದ ಕೊನೆಯ ವರ್ಣಕ್ಕೆ ಲೋಪ ಎಂದಿಟ್ಟುಕೊಂಡರೆ ಅಸ್ಮ+ಆಕಮ್. ಸವರ್ಣದೀರ್ಘ. **ಏಕಾದೇಶ ಉದಾತ್ತೇನೋದಾತ್ತಃ** (ಪಾ.ಸೂ. ೮-೨-೫) ಎಂಬುದರಿಂದ ಆಕಾರ ಉದಾತ್ತ. **ಶೇಷೇ ಲೋಪಃ** (ಪಾ.ಸೂ. ೭-೨-೯೦) ಎಂಬುದರಿಂದ ಟಿ ಲೋಪಬರುವುದು ಎಂಬ ಪಕ್ಷದಲ್ಲಿ **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಎಂಬುದರಿಂದ ಆಕಾರ ಉದಾತ್ತ ॥ ೧೦ ॥



*

# ಎಂಟನೆಯ ಸೂಕ್ತವು

**ತೃತೀಯೇಽನುವಾಕೇ ಚತ್ವಾರಿ ಸೂಕ್ತಾನಿ | ತತ್ರೈಂದ್ರ ಸಾನಸಿಮಿತ್ಯಾದಿಕಂ ಪ್ರಥಮಂ ದಶರ್ಚಂ ಸೂಕ್ತಂ ಸುರೂಪಕೃತ್ನುಮಿತ್ಯಾದಿಷು ಷಟ್ಸು ಪಂಚಮಂ | ಋಷ್ಯಾದಯಸ್ತು ಪೂರ್ವವತ್ | ವಿಶೇಷ-ವಿನಿಯೋಗಸ್ತು | ಮಹಾವ್ರತೇ ನಿಷ್ಕೇವಲ್ಯ ಔಷ್ಣಿಹತೃಚಾಶೀತಾವೇಂದ್ರ ಸಾನಸಿಂ ರಯಿಮಿತ್ಯಾದಿಕೇ ದ್ವೇ ಸೂಕ್ತೇ | ಪಂಚಮಾರಣ್ಯಕೇ ಔಷ್ಣಿಹೀ ತೃಚಾಶೀತಿರಿತಿ ಖಂಡೇ ಶೌನಕೇನ ಸೂತ್ರಿತಂ | ಸುರೂಪಕೃತ್ನು-ಮೂತಯ ಇತಿ ತ್ರೀಣ್ಯೈಂದ್ರ ಸಾನಸಿಂ ರಯಿಮಿತಿ ಸೂಕ್ತೇ | ಐ. ಆ. ೫-೨-೫ || ಇತಿ || ಅತಿರಾತ್ರೇ ಪ್ರಥಮಪರ್ಯಾಯೇಽಚ್ಛಾವಾಕಶಸ್ತ್ರ ಐಂದ್ರ ಸಾನಸಿಮಿತಿ ಸೂಕ್ತಂ | ಸೂತ್ರಿತಂ ಚ | ಇಂದ್ರಮಿದ್ಗಾ-ಥಿನೋ ಬೃಹದೇಂದ್ರ ಸಾನಸಿಂ | ಆ. ೬-೪ | ಇತಿ || ದರ್ಶಯಾಗ ಇಂದ್ರಯಾಜಿನಃ ಸಾಂನಾಯ್ಯಸ್ಯಾನು-ವಾಕ್ಯೈಂದ್ರ ಸಾನಸಿಂ ರಯಿಮಿತಿ | ಉಕ್ತಾ ದೇವತಾ ಇತ್ಯಸ್ಮಿನ್‌ಖಂಡ ಐಂದ್ರ ಸಾನಸಿಂ ರಯಿಂ ಪ್ರ ಸಸಾಹಿಷೇ ಪುರುಹೂತ ಶತ್ರೂನ್ | ಆ ೧-೬ | ಇತಿ ಸೂತ್ರಿತಂ ||**

ಅನುವಾದವು— **ಐಂದ್ರ ಸಾನಸಿಂ** ಎಂಬ ಸೂಕ್ತದಿಂದ ಮೂರನೆಯ ಅನುವಾಕವು ಪ್ರಾರಂಭವಾಗುವುದು. ಈ ಅನುವಾಕದಲ್ಲಿ ನಾಲ್ಕು ಸೂಕ್ತಗಳಿರುವವು. ಅವುಗಳಲ್ಲಿ ಮೊದಲನೆಯ **ಐಂದ್ರ ಸಾನಸಿಂ** ಎಂಬ ಸೂಕ್ತದಲ್ಲಿ ಹತ್ತು ಋಕ್ಕುಗಳಿರುವವು. **ಸುರೂಪಕೃತ್ನು** ಎಂದು ಮೊದಲಾಗುವ ಸೂಕ್ತಗಳಲ್ಲಿ ಇದು ಐದನೆಯದು. ಋಷಿದೇವತಾಛಂದಸ್ಸುಗಳು ಹಿಂದಿನಂತೆಯೇ ಇದರ ವಿಶೇಷವಿನಿಯೋಗವು— ಮಹಾವ್ರತದಲ್ಲಿ ನಿಷ್ಕೇವಲ್ಯ ಶಸ್ತ್ರಮಂತ್ರಪಠನಮಾಡುವಾಗ ಎಂಭತ್ತು ಔಷ್ಣಿಹತೃಚಗಳಲ್ಲಿ **ಐಂದ್ರ ಸಾನಸಿಂ ರಯಿಂ** ಎಂದು ಮೊದಲಾಗುವ ಎರಡು ಸೂಕ್ತಗಳನ್ನು ಪಠಿಸುವರು. ಐದನೆಯ ಆರಣ್ಯಕದಲ್ಲಿ (ಐತರೇಯ ಆರಣ್ಯಕ ೫) **ಔಷ್ಣಿಹೀ ತೃಚಾಶೀತಿಃ** ಎಂಬ ಖಂಡದಲ್ಲಿ ಈ ವಿಷಯವು ಹೇಳಲ್ಪಟ್ಟಿರುವುದೆಂದು ಶೌನಕರು ತಮ್ಮ ಸೂಕ್ತಾನುಕ್ರಮಣಿಯಲ್ಲಿ ಹೇಳಿರುವರು. ಐತರೇಯ ಬ್ರಾಹ್ಮಣದಲ್ಲಿಯೂ ಸಹ **ಸುರೂಪಕೃತ್ನುಮೂತಯೇ** ಎಂದು ಮೊದಲಾದ ಮೂರು ಸೂಕ್ತಗಳೂ, **ಐಂದ್ರ ಸಾನಸಿಂ ರಯಿಂ** ಎಂದು ಮೊದಲಾದ ಎರಡು ಸೂಕ್ತಗಳೂ ಔಷ್ಣಿಹತೃಚಾಶೀತಿಯಲ್ಲಿ ಸೇರಿರುವುವೆಂದು ಹೇಳಲ್ಪಟ್ಟಿರುವುದು (ಐ. ಆ. ೫-೨-೫) ಇದಲ್ಲದೆ ಅತಿರಾತ್ರಕ್ರತುವಿನಲ್ಲಿ ಪ್ರಥಮಪರ್ಯಾಯದಲ್ಲಿ ಅಚ್ಛಾವಾಕ ಎಂಬ ಋತ್ವಿಜನು ಶಸ್ತ್ರಮಂತ್ರವನ್ನು ಪಠಿಸುವಾಗ **ಐಂದ್ರ ಸಾನಸಿಂ** ಎಂಬ ಸೂಕ್ತವನ್ನು ಪಠಿಸಬೇಕೆಂದ ಆಶ್ವಲಾಯನರು ತಮ್ಮ ಶ್ರೌತಸೂತ್ರದಲ್ಲಿ (ಆ. ೬-೪) **ಇಂದ್ರಮಿದ್ಗಾಥಿನೋ ಬೃಹದೇಂದ್ರ ಸಾನಸಿಂ** ಎಂಬ ಸೂತ್ರದಲ್ಲಿ ಹೇಳಿರುವರು ಮತ್ತು ದರ್ಶಯಾಗದಲ್ಲಿ ಇಂದ್ರಯಾಜಿಗಳು (ಯಜಮಾನರು) ಸಾಂನಾಯ್ಯಾನುವಾಕ ಪಠನೆಗಾಗಿ **ಐಂದ್ರಸಾನಸಿಂ ರಯಿಂ** ಎಂಬ ಸೂಕ್ತವನ್ನು ಪಠಿಸುವರು. ಈ ವಿಷಯವನ್ನು ಆಶ್ವಲಾಯನರು ತಮ್ಮ ಶ್ರೌತಸೂತ್ರದಲ್ಲಿ (ಆ. ೧-೬) **ಉಕ್ತಾ ದೇವತಾ** ಎಂಬ ಖಂಡದಲ್ಲಿ **ಐಂದ್ರ ಸಾನಸಿ ರಯಿಂ ಪ್ರಸಸಾಹಿಷೇ ಪುರುಹೂತ ಶತ್ರೂನ್** ಎಂಬ ಸೂಕ್ತಗಳನ್ನು ಪಠಿಸಬೇಕೆಂದು ಹೇಳಿರುವರು. ಇದು ಈ ಸೂಕ್ತದ ವಿನಿಯೋಗಕ್ರಮವು.

॥ ಓಂ ॥

## ಸೂಕ್ತ—೮

॥ ಮಂಡಲ—೧ ॥ ಅನುವಾಕ—೩ ॥ ಸೂಕ್ತ—೮ ॥

॥ ಅಷ್ಟಕ —೧ ॥ ಅಧ್ಯಾಯ—೧ ॥ ವರ್ಗ—೧೫, ೧೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೧–೧೦ ॥

॥ ಋಷಿಃ—ಮಧುಚ್ಛಂದಾ ವೈಶ್ವಾಮಿತ್ರಃ ॥

॥ ದೇವತಾ—ಇಂದ್ರಃ ॥

॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಏಂದ್ರ ಸಾನಸಿಂ ರಯಿಂ ಸಜಿತ್ವಾನಂ ಸದಾಸಹಂ ॥
ವರ್ಷಿಷ್ಠಮೂತಯೇ ಭರ ॥ ೧ ॥

॥ ಪದಪಾಠಃ ॥

ಆ । ಇಂದ್ರ । ಸಾನಸಿಂ । ರಯಿಂ । ಸಽಜಿತ್ವಾನಂ । ಸದಾಽಸಹಂ ॥
ವರ್ಷಿಷ್ಠಂ । ಊತಯೇ । ಭರ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಊತಯೇಽಸ್ಮದ್ರಕ್ಷಾರ್ಥಂ ರಯಿಂ ಧನಮಾ ಭರ । ಆಹರ । ಕೀದೃಶಂ ರಯಿಂ - ಸಾನಸಿಂ ಸಂಭಜನೀಯಂ ಸಜಿತ್ವಾನಂ ಸಮಾನಶತ್ರುಜಯಶೀಲಂ । ಧನೇನ ಹಿ ಶೂರಾನ್ಭೃತ್ಯಾನ್ಸಂಪಾದ್ಯ ಶತ್ರವೋ ಜೀಯಂತೇ । ಸದಾಸಹಂ ಸರ್ವದಾ ಶತ್ರೂಣಾಮಭಿಭವಹೇತುಂ ವರ್ಷಿಷ್ಠಂ ಅತಿಶಯೇನ ವೃದ್ಧಂ । ಪ್ರಭೂತಮಿತ್ಯರ್ಥಃ ॥ ಸಾನಸಿಂ । ವನ ಷಣ ಸಂಭಕ್ತಾವಿತ್ಯಸ್ಮಾದಸಿಪ್ರತ್ಯಯೋ

ವೃದ್ಧಿರಂತೋದಾತ್ತತ್ವಂ ಚ ಸಾನಸಿಧರ್ಣಸೀತ್ಯಾದಿನಾ । ಉ. ೪-೧೦೭ । ನಿಪಾತ್ಯತೇ । ರಯಿಂ । ಪ್ರಾತಿ। ಪದಿಕಸ್ವರೇಣಾಂತೋದಾತ್ತಃ । ಸಜಿತ್ವಾನಂ । ಸಮಾನಾನರೀಞ್ಜೇತುಂ ಶೀಲಮಸ್ಯ । ಅನ್ಯೇಭ್ಯೋಽಪಿ-ದೃಶ್ಯಂತೇ । ಪಾ. ೩-೨ ೭೫ । ಇತಿ ಕ್ವನಿಪ್ । ಉಪಪದಸಮಾಸಃ । ಸಮಾನಸ್ಯ ಛಂದಸ್ಯಮೂರ್ಧಪ್ರ-ಭೃತ್ಯುದರ್ಕೇಷು । ಪಾ. ೬-೩-೮೪ । ಇತಿ ಸಮಾನಸ್ಯ ಸಭಾವಃ । ಕೃದುತ್ತರಪದಪ್ರಕೃತಿಸ್ವರೇಣ ಧಾತು-ಸ್ವರ ಏವ ಶಿಷ್ಯತೇ । ವರ್ಷಿಷ್ಠಂ । ವೃದ್ಧಶಬ್ದಾದತಿಶಾಯನೇ ತಮಬಿಷ್ಠನೌ । ಪಾ. ೫-೩-೫೫ । ಇತೀಷ್ಠನ್ ಪ್ರಿಯಸ್ಥಿರೇತ್ಯಾದಿನಾ । ಪಾ. ೬-೪-೧೫೭ । ವೃದ್ಧಶಬ್ದಸ್ಯ ವರ್ಷಾದೇಶಃ । ಇಷ್ಠನೋ ನಿತ್ತ್ವಾದಾದ್ಯು-ದಾತ್ತತ್ವಂ । ಊತಯೇ । ಉದಾತ್ತ ಇತ್ಯನುವೃತ್ತಾವೂತಿಯೂತಿಜೂತಿಸಾತೀತ್ಯಾದಿನಾ ಕ್ತಿನ್ನುದಾತ್ತೋ ನಿಪಾತಿತಃ । ಭರ । ಹೃಗ್ರಹೋರ್ಭಶ್ಛಂದಸಿ । ಪಾ. ೮-೨-೩೨-೧ । ಇತಿ ಹಕಾರಸ್ಯ ಭಕಾರಃ । ತೇ ಪ್ರಾಗ್ಧಾತೋಃ । ಪಾ. ೧-೪-೮೦ । ಇತಿ ಧಾತೋಃ ಪ್ರಾಕ್ಪ್ರಯೋಕ್ತವ್ಯಸ್ಯಾಙೋ ವ್ಯವಹಿತಾಶ್ಚ । ಪಾ. ೧-೪-೮೨ । ಇತಿ ಛಂದಸಿ ವ್ಯವಹಿತಪ್ರಯೋಗಃ ॥

॥ ಪ್ರತಿಪದಾರ್ಥ ॥

(ಹೇ) ಇಂದ್ರ— ಎಲೈ ಇಂದ್ರನೇ । ಊತಯೇ— ನಮ್ಮ ರಕ್ಷಣೆಗಾಗಿ । ಸಾನಸಿಂ— ಅನುಭವಿಸಲು ಯೋಗ್ಯವಾದ । ಸಜಿತ್ವಾನಂ— ಶತ್ರುಗಳನ್ನು ಜಯಿಸಲು ಸಹಾಯಕವಾದ । ಸದಾಸಹಂ— ಶತ್ರುಗಳ ಪರಾ ಭವಕ್ಕೆ ಕಾರಣವಾದ । ವರ್ಷಿಷ್ಠಂ— ವಿಪುಲವಾದ । ರಯಿಂ— ಧನವನ್ನು । ಆ ಭರ— ತಂದುಕೊಡು ॥

॥ ಭಾವಾರ್ಥ ॥

ಎಲೈ ಇಂದ್ರನೇ ನೀನು ನಮ್ಮ ಸಂರಕ್ಷಣೆಗಾಗಿ ಬಹಳವಾದ ಧನವನ್ನು ತಂದುಕೊಡು. ಆ ಧನದಿಂದ ನಾವು ಸುಖಾನುಭವವನ್ನು ಮಾಡಬಹುದು ; ಧನಸಹಾಯದಿಂದ ಶೂರರಾದ ಯೋಧರನ್ನು ಸಂಗ್ರಹಿಸಿ ಯುದ್ಧ ದಲ್ಲಿ ಶತ್ರುಗಳನ್ನು ಗೆಲ್ಲಬಹುದು, ನಮ್ಮಲ್ಲಿ ಧನವಿದ್ದರೆ ಶತ್ರುಗಳನ್ನು ಸುಲಭವಾಗಿ ಸೋಲಿಸಬಹುದು. ಈ ಕಾರ್ಯಗಳಿಗಾಗಿ ನಮಗೆ ಹೆಚ್ಚಾದ ಧನವನ್ನು ತಂದು ಕೊಟ್ಟು ನಮ್ಮನ್ನು ಕಾಪಾಡು.

English Translation.

O Indra, bring for our protection riches, most abundent, enjoyable, the source of victory and ever defeating our foes.

॥ ವಿಶೇಷವಿಷಯಗಳು ॥

ಸಾನಸಿಂ— ಸಂಭಜನೀಯಂ-ಸುಖಾನುಭವಸಾಧನವಾದ, enjoyable.

ಸಜಿತ್ವಾನಂ— ಧನೇನ ಹಿ ಶೂರಾನ್ ಭೃತ್ಯಾನ್ ಸಂಪಾದ್ಯ ಶತ್ರವೋ ಜೀಯಂತೇ ಎಂದರೆ ಧನ ಸಹಾಯದಿಂದ ವೀರಯೋಧರನ್ನು ಸಂಗ್ರಹಿಸಿ ಶತ್ರುಗಳನ್ನು ಗೆಲ್ಲಬಹುದು ಎಂದು ಭಾಷ್ಯಕಾರರು ಅರ್ಥ ಮಾಡಿರುವರು.

ರಯಿಂ—ಧನ. ಧನವೆಂದರೆ ದ್ರವ್ಯವೆಂದು ಅರ್ಥಮಾತ್ರವಲ್ಲ. ಸುಖಸಾಧನೆಗೆ ಬೇಕಾಗುವ ದ್ರವ್ಯ, ಪುತ್ರಪೌತ್ರಾದಿಗಳು, ಭೃತ್ಯಾದಿಗಳು, ಗೋವು ಮುಂತಾದ ಪಶುಗಳು, ಗೃಹಾದಿಗಳು ಮೊದಲಾದವು.

ವ್ಯಾಕರಣಪ್ರಕ್ರಿಯಾ

ಸಾನಸಿಮ್—ವನಷಣ ಸಂಭಕ್ತೌ, ಎಂಬಲ್ಲಿರುವ ಸನಧಾತುವಿನ ಮುಂದೆ **ಸಾನಸಿ (ಧರ್ಣಸಿ) ವರ್ಣಸಿ ಪರ್ಣಸಿ ತಣ್ಡುಲಾಂಕುಶ ಚಷಾಲೇಲ್ವಲ ಪಲ್ವಲ ಧಿಷ್ಣ್ಯಶಲ್ಯಾಃ** (ಉ. ಸೂ. ೪-೫೪೭) ಎಂಬುದರಿಂದ ಅಸಿ ಪ್ರತ್ಯಯವೂ ಧಾತುವಿಗೆ ಉಪಧಾವೃದ್ಧಿಯೂ ಅಂತೋದಾತ್ತವೂ ಸಹ ನಿಪಾತಿಸಲ್ಪಡುವುದು. ಯದ್ಯಪಿ ಈಗ ಕೌಮುದೀ ಪಾಠದಲ್ಲಿ 'ಧರ್ಣಸಿ' ಎಂಬುದು ಕಾಣಿಸುವುದಿಲ್ಲ. ಆದರೂ ದಶಪಾದೀ ಪಾಠವನ್ನನುಸರಿಸಿ ವೇದಭಾಷ್ಯದಲ್ಲಿ ಧರ್ಣಸಿಯು ಉಪಾತ್ತವಾಗಿರುವುದು.

ರಯಿಂ—ಪ್ರಾತಿಪದಿಕ ಸ್ವರದಿಂದ ಅಂತೋದಾತ್ತ.

**ಸಜಿತ್ವಾನಮ್—ಸಮಾನಾನ್ ಅರೀನ್ ಜೇತುಂಶೀಲಮಸ್ಯ** ಎಲ್ಲಾ ಶತ್ರುಗಳನ್ನೂ ಜಯಿಸುವುದೇ ಸ್ವಭಾವವಾಗಿ ಉಳ್ಳವನು. **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ. ಸೂ. ೩-೪-೭೫) ಎಂಬುದರಿಂದ ಸಮಾನಶಬ್ದೋಪಪದಕವಾದ ಜಿ ಧಾತುವಿನ ಮುಂದೆ ಕ್ವನಿಪ್ ಪ್ರತ್ಯಯ. **ಹ್ರಸ್ವಸ್ಯಪಿತಿಕೃತಿತುಕ್** (ಪಾ. ಸೂ. ೬-೧-೭೧) ಪಿತ್ತಾದ ಕೃತ್ಪ್ರತ್ಯಯ ಪರದಲ್ಲಿರುವಾಗ ಹ್ರಸ್ವಾಂತಶಬ್ದಕ್ಕೆ ತುಕ್ ಆಗಮುಬರುವುದು ಎಂಬುದರಿಂದ ತುಗಾಗಮ. ಉಪಪದ ಸಮಾಸ ಸಮಾನ ಜಿತ್ವನ್ **ಸಮಾನಸ್ಯಛಂದಸ್ಯಮೂರ್ಧಪ್ರಭೃತ್ಯುದರ್ಕೇಷು** (ಪಾ. ಸೂ. ೬-೩-೮೪) ಎಂಬುದರಿಂದ ಸಮಾನ ಶಬ್ದಕ್ಕೆ ಸ ಆದೇಶಬರುವುದು. **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದಂತವಾದ ಉತ್ತರಪದಕ್ಕೆ ಪ್ರಕೃತಿಸ್ವರ ಬಂದರೆ ಧಾತುಸ್ವರವೇ ನಿಲ್ಲುವುದು.

**ವರ್ಷಿಷ್ಠಮ್—ಅತಿಶಾಯನೇತಮಬಿಷ್ಠನೌ** (ಪಾ. ಸೂ. ೫-೩-೫೫) ಎಂಬುದರಿಂದ ವೃದ್ಧ ಶಬ್ದದ ಮುಂದೆ ಇಷ್ಠನ್ ಪ್ರತ್ಯಯ. **ಪ್ರಿಯಸ್ಥಿರಸ್ಫಿರೋರು ಬಹುಲಗುರುವೃದ್ಧತೃಪ್ರದೀರ್ಘವೃಂದಾರಕಾಣಾಂ ಪ್ರಸ್ಥಸ್ಫವರ್ಬಂಹಿ ಗರ್ವರ್ಷಿತ್ರಪ್ದ್ರಾಘಿ ಬೃಂದಾಃ** (ಪಾ. ಸೂ. ೬-೪-೧೫೭) ಇಷ್ಠನಾದಿ ಪ್ರತ್ಯಯಗಳು ಪರದಲ್ಲಿರುವಾಗ ಪ್ರಿಯಾದಿ ಶಬ್ದಗಳಿಗೆ ಪ್ರಾದ್ಯಾದೇಶಗಳು ಬರುವುವು ಎಂಬುದರಿಂದ ವೃದ್ಧ ಶಬ್ದಕ್ಕೆ ವರ್ಷ್ ಆದೇಶ, ನಿತ್ಸ್ವರ ಆದ್ಯುದಾತ್ತ ಬರುವುದು.

**ಊತಯೇ-ಊತಿಯೂತಿ**—(ಪಾ. ಸೂ. ೩-೩-೯೭) ಇತ್ಯಾದಿ ಸೂತ್ರದಿಂದ ಕ್ತಿನ್ ಪ್ರತ್ಯಯವು ಉದಾತ್ತವಾಗಿ ನಿಪಾತಿತವಾಗಿರುವುದು.

ಭರ—ಹೃಞ್ ಹರಣೇ ಧಾತುವಿಗೆ ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಹರ ಎಂದಾಗುವುದು. **ಹೃಗ್ರಹೋರ್ಭಶ್ಛಂದಸಿ** (ಪಾ. ಸೂ. ೮-೨-೩೨-ವಾ-೨) ಛಂದಸ್ಸಿನಲ್ಲಿ ಈ ಧಾತುಗಳ ಹಕಾರಕ್ಕೆ ಭಕಾರ ಬರುವುದು ಎಂಬುದರಿಂದ ಭಕಾರ ಬಂದರೆ ಭರ ಎಂದಾಗುವುದು. **ತೇಪ್ರಾಗ್ಧಾತೋಃ** (ಪಾ. ಸೂ. ೧-೪-೮೦) ಗತ್ಯುಪಸರ್ಗಗಳು ಧಾತುವಿಗೆ ಅವ್ಯವಹಿತ ಪೂರ್ವದಲ್ಲಿಯೇ ಪ್ರಯೋಗಿಸಲ್ಪಡಬೇಕು ಎಂದಿದ್ದರೂ ಆಙ್ ಎಂಬ ಉಪಸರ್ಗಕ್ಕೆ **ವ್ಯವಹಿತಾಶ್ಚ** (ಪಾ. ಸೂ. ೧-೪-೮೨) ಛಂದಸ್ಸಿನಲ್ಲಿ ವ್ಯವಹಿತವಾಗಿಯೂ ಪ್ರಯೋಗಿಸಲ್ಪಡುವುವು ಎಂಬುದರಿಂದ ವ್ಯವಹಿತವಾಗಿ ಪ್ರಯೋಗವಿರುವುದು. || ೧ ||

॥ ಸಂಹಿತಾಪಾಠಃ ॥

ನಿ ಯೇನ ಮುಷ್ಟಿಹತ್ಯಯಾ ನಿ ವೃತ್ರಾ ರುಣಧಾಮಹೈ ॥
ತ್ವೋತಾಸೋ ನ್ಯರ್ವತಾ ॥ ೨ ॥

॥ ಪದಪಾಠಃ ॥

ನಿ । ಯೇನ । ಮುಷ್ಟಿಽಹತ್ಯಯಾ । ನಿ । ವೃತ್ರಾ । ರುಣಧಾಮಹೈ ॥
ತ್ವಾಽಊತಾಸಃ । ನಿ । ಅರ್ವತಾ ॥ ೨ ॥

॥ ಸಾಯಣಭಾಷ್ಯಂ ॥

ಯೇನ ಧನೇನ ಸಂಪಾದಿತಾನಾಂ ಭಟಾನಾಂ ನಿ ಮುಷ್ಟಿಹತ್ಯಯಾ ನಿತರಾಂ ಮುಷ್ಟಿಪ್ರಹಾರೇಣ ವೃತ್ರಾ ಶತ್ರೂನ್ನಿ ರುಣಧಾಮಹೈ ನಿರುದ್ಧಾನ್ಕರವಾಮ ತಾದೃಶಂ ಧನಮಾಹರೇತ್ಯರ್ಥಃ। ತ್ವೋತಾಸಸ್ತ್ವಯಾ ರಕ್ಷಿತಾ ವಯಮರ್ವತಾಸ್ಮದೀಯೇನಾಶ್ವೇನ ನಿ ರುಣಧಾಮಹಾ ಇತ್ಯನುಷಂಗಃ । ಪದಾತಿಯುದ್ಧೇನಾಶ್ವಯುದ್ಧೇನ ಚ ಶತ್ರೂನ್ನಿನಾಶಯಾಮೇತ್ಯರ್ಥಃ॥ ಮುಷ್ಟಿಹತ್ಯಯಾ। ಹನಸ್ತ ಚ । ಪಾ ೩-೧-೧೦೮ । ಇತಿಸುಬಂತಉಪಪದೇ ಕ್ಯಪ್ । ತತ್ಸಂನಿಯೋಗೇನ ನಕಾರಸ್ಯ ತಕಾರಃ । ಕೃದುತ್ತರಪದಪ್ರಕೃತಿಸ್ವರೇ ಪ್ರಾಪ್ತೇ ಪರಾದಿಶ್ಛಂದಸಿ ಬಹುಲಂ ॥ ಪಾ. ೬-೨-೧೯೯ । ಇತಿ ಬಹುಲಗ್ರಹಣೇನ ತ್ರಿಚಕ್ರಾದೀನಾಂ ಛಂದಸ್ಯಂತೋದಾತ್ತತ್ವಾಭಿಧಾನಾತ್ । ಪಾ. ೬-೨-೧೯೯-೧ । ಅಂತೋದಾತ್ತತ್ವಂ । ನಿ । ಆಖ್ಯಾತಸಂಬಂಧಸ್ಯಾಪಿ ನೇರುಪಸರ್ಗಸ್ಯ ವ್ಯವಹಿತಾಶ್ಚೇತಿ ವ್ಯವಹಿತಪ್ರಯೋಗಃ । ವೃತ್ರಾ । ಶೇಶ್ಛಂದಸಿ ಬಹುಲಂ । ಪಾ. ೬-೧-೭೦ ಇತಿ ಶೇರ್ಲೋಪಃ । ನಲೋಪಃ । ರುಣಧಾಮಹೈ । ಆಟ್‌ಸಂಯೋಗೇನ ಪಿತ್ತ್ವಾತ್ । ಪಾ. ೩-೪-೯೨ . ಶ್ನಸೋರಲ್ಲೋಪಃ । ಪಾ. ೬-೪-೧೧೧ । ಇತ್ಯಕಾರಲೋಪೋ ನ ಭವತಿ । ಪಿತ್ತ್ವಾದೇವ ಚಾಖ್ಯಾತಸ್ಯಾನುದಾತ್ತತ್ವೇನ ವಿಕರಣಸ್ಯ ಶ್ನಮ ಏವೋದಾತ್ತತ್ವಂ ಶಿಷ್ಯತೇ । ನನು ತಿಙ್ಙತಿಙ ಇತಿ ನಿಘಾತೇನ ಭವಿತವ್ಯಂ। ನ । ದ್ವೇ ಹ್ಯತ್ರ ತಿಙ್ವಿಭಕ್ತೀ। ನಿವಿಡಯಾ ಮುಷ್ಟ್ಯಾ ನಿರುಣಧಾಮಹಾ ಇತ್ಯತ್ರ ಶ್ರುತೈಕಾ । ಅರ್ವತಾ । ನಿರುಣಧಾಮಹಾ ಇತ್ಯತ್ರಾನುಷಕ್ತಾ ದ್ವಿತೀಯಾ । ತಯೋಃ ಸಮುಚ್ಚಯಾರ್ಥಶ್ಚಕಾರೋ ಲುಪ್ಯತೇ । ತೇನ ಚಾದಿಲೋಪೇ ವಿಭಾಷಾ । ಪಾ- ೮-೧-೬೩ । ಇತಿ ಪ್ರಥಮೇಯಂ ತಿಙ್ವಿಭಕ್ತಿರ್ನ ನಿಹನ್ಯತೇ । ಯಥಾ ನಾತ್ಮನಾ ತೃಪ್ಯತಿ ನಾನ್ಯಸ್ಮೈ ದದಾತಿ । ತೈ. ಸಂ- ೨-೫-೪-೩ । ಇತ್ಯತ್ರ ಹಿ ಸಮುಚ್ಚಯಾರ್ಥಸ್ಯ ಚಶಬ್ದಸ್ಯ ಲೋಪಾತ್ತೃಪ್ಯತೀತಿ ಪ್ರಥಮಾ ತಿಙ್ವಿಭಕ್ತಿರ್ನ ನಿಹನ್ಯತೇ ದದಾತೀತಿ ದ್ವಿತೀಯಾ ತು ನಿಹನ್ಯತ ಏವ । ನನು ತತ್ರ ದ್ವೇ ತಿಙ್ವಿಭಕ್ತೀ ಶ್ರೂಯೇತೇ । ಇಹ ಪುನರೇಕೈವ ಶ್ರುತಾ । ಸೈವೋತ್ತರತ್ರಾನುಷಜ್ಯತೇ ನಾನ್ಯಾ ಶ್ರೂಯತ ಇತಿ ದ್ವಿತೀಯಾಭಾವಾತ್ಕಥಮಿಯಂ ಪ್ರಥಮಾ । ನ । ಅನುಷಂಗ-

ಲಬ್ಧದ್ವಿತೀಯಾಪೇಕ್ಷಮಪಿ ಪ್ರಾಥಮ್ಯಮುಪಜೀವ್ಯ ನಿಘಾತನಿಷೇಧದರ್ಶನಾತ್ । ಪುರೋಡಾಶಂ ಚಾಧಿಶ್ರಯೆತ್ಯಾಜ್ಯಂ ಚ । ತೈ. ಸಂ. ೧-೭-೯-೩ । ಪ್ರೋಕ್ಷಣೀಶ್ಚಾ ಸಾದಯೆತ್ಯಾಜ್ಯಂ ಚ । ತೈ. ಸಂ. ೧-೬-೯-೪। ಇತ್ಯತ್ರ ಹ್ಯಧಿಶ್ರಯೆತ್ಯಾಸಾದಯೆತೀತ್ಯಾಖ್ಯಾತಯೋಃ ಪ್ರಥಮವಾಕ್ಯದ್ವಯಶ್ರುತಯೋರುತ್ತರವಾಕ್ಯದ್ವಯೇಽನುಷಂಗಮಪೇಕ್ಷ್ಯೈವ ಪ್ರಾಥಮ್ಯಸ್ವೀಕಾರೇಣ ಚವಾಯೋಗೇ ಪ್ರಥಮಾ । ಪಾ. ೮-೧-೫೯ । ಇತಿ ನಿಘಾತನಿಷೇಧೋ ದೃಷ್ಟ ಇತಿ । ತ್ವಯೋತಾ ರಕ್ಷಿತಾಸ್ತ್ವೋತಾಸಃ । ಪ್ರತ್ಯಯೋತ್ತರಪದಯೋಶ್ಚ । ಪಾ. ೭-೨-೯೮ । ಇತಿ ಮಪರ್ಯಂತಸ್ಯ ತ್ವಾದೇಶೇ ದಕಾರಲೋಪಶ್ಛಾಂದಸಃ । ಅವತೇರ್ನಿಷ್ಠಾಯಾಮಿಡಭಾವಶ್ಚ । ಜ್ವರತ್ವರಸ್ರಿವ್ಯವಿಮವಾಮುಪಧಾಯಾಶ್ಚ । ಪಾ. ೬-೪-೨೦ । ಇತ್ಯೂಟ್ । ಏತ್ಯೇಧತ್ಯೂಟ್ಸು । ಪಾ. ೬-೧-೫೯ । ಇತಿ ವೃದ್ಧ್ಯಭಾವಶ್ಛಾಂದಸಃ । ತೃತೀಯಾ ಕರ್ಮಣಿ । ಪಾ. ೬-೨-೪೮ । ಇತಿ ಪೂರ್ವಪದಪ್ರಕೃತಿಸ್ವರೇಣಾಕಾರ ಉದಾತ್ತಃ । ಏಕಾದೇಶ ಉದಾತ್ತೇನೋದಾತ್ತ ಇತ್ಯುದಾತ್ತ ಓಕಾರಃ । ಅರ್ವತಾ । ಅರ್ವತಿ ಗಚ್ಛತೀತ್ಯರ್ವಾ । ಅರ್ವ ಗತೌ । ಅನ್ಯೇಭ್ಯೋಽಪಿ ದೃಶ್ಯಂತೆ ಇತಿ ವನಿಪ್ಪ್ರತ್ಯಯಃ । ನೇಡ್ವಶಿ ಕೃತಿ । ಪಾ. ೭-೨-೮ । ಇತೀಟ್ ಪ್ರತಿಷೇಧಃ । ಲೋಪೋ ವ್ಯೋರ್ವಲಿ । ಪಾ. ೬-೧-೬೬ । ಇತಿ ವಕಾರಲೋಪಃ । ಅರ್ವಣಸ್ತ್ರಸಾವನಞಃ । ಪಾ. ೬-೪-೧೨೭ । ಇತಿ ತಕಾರಃ । ವನಿಪಃ ಪಿತ್ತ್ವಾದ್ಧಾತುಸ್ವರ ಏವ ॥

॥ ಪ್ರತಿಪದಾರ್ಥ ॥

**ಯೇನ**— ಯಾವ ಧನಸಹಾಯದಿಂದ ಸಂಪಾದಿಸಲ್ಪಟ್ಟ ಯುದ್ಧಭಟರ । **ನಿ ಮುಷ್ಟಿಹತ್ಯಯಾ**— ವಿಶೇಷವಾದ ಮುಷ್ಟಿಪ್ರಹಾರದಿಂದ । **ವೃತ್ರಾ**— ಶತ್ರುಗಳನ್ನು । **ನಿ ರುಣಧಾಮಹೈ**—(ಮುಂದೆನುಗ್ಗಿ ಬರದಂತೆ) ತಡೆದು ನಿಲ್ಲಿಸುವೆವೋ। **ತ್ವೋತಾಸಃ**— ನಿನ್ನಿಂದ (ಇಂದ್ರನಿಂದ) ರಕ್ಷಿತರಾದ ನಾವು। **ಅರ್ವತಾ**— ಅಶ್ವಗಳಿಂದಲೂ **ನಿ** (ರುಣಧಾಮಹೈ)— ಶತ್ರುಗಳನ್ನು ತಡೆದುನಿಲ್ಲಿಸುವೆವೋ (ಅಂತಹ ಧನವನ್ನು ಕೊಡು.)

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಕೊಡುವ ಧನಸಹಾಯದಿಂದ ಸಂಗ್ರಹಿಸಿದ ಯುದ್ಧಭಟರ ಮುಷ್ಟಿಪ್ರಹಾರಗಳಿಂದ ಎಂದರೆ ಯುದ್ಧಭಟರು ಕೈ ಕೈ ಕಲೆತು ಯುದ್ಧಮಾಡುವುದರಿಂದಲೂ, ಕುದುರೆಗಳ ಸಹಾಯದಿಂದಲೂ ನಮ್ಮ ಶತ್ರುಗಳನ್ನು ಮುಂದೆ ನುಗ್ಗಿ ಬರದಂತೆ ತಡೆದು ನಿಲ್ಲಿಸುವೆವು. ಏಕೆಂದರೆ ನಮಗೆ ನಿನ್ನ ರಕ್ಷಣೆಯು ಇದ್ದೇ ಇದೆ.

## English Translation.

By which we repel our enemies crushing them down with our fists or with our horses.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಯೇನ ಎಂಬ ಯಚ್ಛಬ್ದವಿರುವುದರಿಂದ ಇದರ ಅರ್ಥವನ್ನು ಹಿಂದಿನ ಋಕ್ಕಿನ ಪದಗಳೊಡನೆ ಅನ್ವಯಮಾಡಿಕೊಳ್ಳಬೇಕು. ಎಂದರೆ, ಹಿಂದಿನ ಋಕ್ಕಿನಲ್ಲಿ ಇಂದ್ರನನ್ನು ಧನಸಹಾಯಕ್ಕಾಗಿ

ಪ್ರಾರ್ಥಿಸಲಾಗಿದೆ. ಆದುದರಿಂದ ಈ ಋಕ್ಕಿನಲ್ಲಿರುವ **ಯೇನ** ಮುಷ್ಟಿಹತ್ಯಯಾ ಎಂಬ ಶಬ್ದಗಳಿಗೆ ಯಾವ ಧನಸಹಾಯದಿಂದ ಲಬ್ಧರಾದ ಭಟರ ಮುಷ್ಟಿಪ್ರಹಾರದಿಂದ ಎಂದರ್ಥವು. ಯುದ್ಧಮಾಡುವಾಗ ಭಟರು ಕೈ ಕೈ ಕಲೆತು ಯುದ್ಧಮಾಡುವುದು ಸ್ವಭಾವವಷ್ಟೆ. ಅದರಂತೆ ಇಲ್ಲಿ ಮುಷ್ಟಿಹತ್ಯಯಾ ಎಂದರೆ ಮುಷ್ಟಿಪ್ರಹಾರವೆಂದು ಹೇಳಿರುವುದು. ಕುದುರೆಗಳ ಮೇಲೆ ಕುಳಿತು ಯುದ್ಧಮಾಡುವುದೂ ಹಿಂದಿನಿಂದಲೂ ರೂಢಿಯಾಗಿರುವುದು. ಆದುದರಿಂದ ಈ ಎರಡು ವಿಧವಾದ ಯುದ್ಧಕ್ರಮಗಳಿಂದಲೂ ಶತ್ರುಗಳನ್ನು ಮುಂದುವರಿಯದಂತೆ ನಿನ್ನ ಸಹಾಯದಿಂದ ತಡೆದು ನಿಲ್ಲಿಸುವೆವು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಮುಷ್ಟಿಹತ್ಯಯಾ—ಹನಸ್ತ ಚ** (ಪಾ. ಸೂ. ೩-೧-೧೦೮) ಉಪಸರ್ಗಭಿನ್ನವಾದ ಸುಬಂತವು ಉಪಪದವಾಗಿರುವಾಗ ಹನಧಾತುವಿನ ಮುಂದೆ ಭಾವಾರ್ಥದಲ್ಲಿ ಕ್ಯಪ್ ಪ್ರತ್ಯಯಬರುವುದು, ಹನ್ ಧಾತುವಿನ ನಕಾರಕ್ಕೆ ತಕಾರವೂ ಬರುವುದು ಎಂಬುದರಿಂದ 'ಹನ ಹಿಂಸಾಗತ್ಯೋಃ, ಎಂಬ ಧಾತುವಿನ ಮುಂದೆ ಕ್ಯಪ್ ಪ್ರತ್ಯಯವೂ ನಕಾರಕ್ಕೆ ತಕಾರವೂ ಬಂದರೆ ಹತ್+ಯ, ಮುಷ್ಟ್ಯಾ ಹನನಂ, ಮುಷ್ಟಿಹತ್ಯಾ ಎಂದಾಗುವುದು. **ಗತಿಕಾರಕೋಪಪದಾತ್ಕೃತ್** (ಪಾ.ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಪ್ರಾಪ್ತವಾದರೆ **ಪರಾದಿಶ್ಛಂದಸಿಬಹುಲಂ** (ಪಾ. ಸೂ. ೬-೨-೧೯೯) ಎಂಬಲ್ಲಿ ಬಹುಲಗ್ರಹಣವಿರುವುದರಿಂದ **ಅಂತೋದಾತ್ತ-ಪ್ರಕರಣೇತ್ರಿಚಕ್ರಾದೀನಾಂ ಛಂದಸ್ಯುಪಸಂಖ್ಯಾನಂ** (ಪಾ. ಸೂ. ೯-೨-೧೯೯-ವಾ. ೧) ಎಂದು ಹೇಳಿರುವುದರಿಂದ ಅಂತೋದಾತ್ತಸ್ವರವೇ ಬರುವುದು.

ನಿ— ನಿ ಎಂಬ ಉಪಸರ್ಗವು ತಿಙಂತದಲ್ಲಿ ಅನ್ವಯಿಸುವುದು. ಆದರೂ **ವ್ಯವಹಿತಾಶ್ಚ** (ಪಾ. ಸೂ. ೧-೪-೮೨) ಎಂಬುದರಿಂದ ವ್ಯವಹಿತವಾಗಿ ಪ್ರಯುಕ್ತವಾಗಿರುವುದು.

**ವೃತ್ರಾ**—ವೃತ್ರ ಶಬ್ದದ ಮುಂದೆ ಜಸ್ಸನ್ನಿಟ್ಟರೆ ಅದಕ್ಕೆ ಶಿ ಬರುವುದು. **ಶೇಶ್ಛಂದಸಿಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಅದಕ್ಕೆ ಲೋಪಬರುವುದು. **ನಪುಂಸಕಸ್ಯಝಲಚಃ** (ಪಾ. ಸೂ. ೭-೧-೭೨) ಸರ್ವನಾಮಸ್ಥಾನ ಪರದಲ್ಲಿರುವಾಗ ಝಲಂತವಾದ ಅಥವಾ ಅಜಂತವಾದ ನಪುಂಸಕಲಿಂಗದ ಅಂಗಕ್ಕೆ ನುಮ್ ಆಗಮ ಬರುವುದು, ಎಂಬುದರಿಂದ ಬಂದ ನುಮಾಗಮದ ನಕಾರಕ್ಕೆ **ನಲೋಪಃಪ್ರಾತಿಪದಿಕಾಂತಸ್ಯ** (ಪಾ. ಸೂ, ೮-೨-೭) ಎಂಬುದರಿಂದ ಲೋಪಬರುವುದು.

**ರುಣಧಾಮಹೈ**—ರುಧಿರ್ ಆವರಣೇ ಲೋಟ್ ಆತ್ಮನೇಪದ ಉತ್ತಮಪುರುಷ ಬಹುವಚನ ಮಹಿಙ್ ಬಂದರೆ, ರುಧ್+ಮಹಿ **ಟಿತಆತ್ಮನೇಪದಾನಾಂಟೇರೇ** (ಪಾ ಸೂ ೩-೪-೭೯) ಇಗೆ ಏಕಾರ, **ಏತಐ** (ಪಾ.ಸೂ. ೩-೪-೯೦) ಲೋಟ್ಟಿನ ಉತ್ತಮಪುರುಷದ ಏಕಾರಕ್ಕೆ ಐ ಬರುವುದು ಎಂಬುದರಿಂದ ಐ—ಆದೇಶವು ಏಗೆ ಬರುವುದು, ಮಹೈ ಎಂದಾಗುವುದು. **ರುಧಾದಿಭ್ಯಃಶ್ನಮ್** (ಪಾ. ಸೂ ೩-೧-೭೮) ಎಂಬುದರಿಂದ ಉಕಾರದ ಮುಂದೆ ಶ್ನಮ್ ವಿಕರಣ ಬರುವುದು. ರುನಧಾ+ಮಹೈ **ಆಡುತ್ತಮಸ್ಯಪಿಚ್ಚ** (ಪಾ. ಸೂ. ೩-೪-೯೨) ಲೋಟ್ಟಿನ ಉತ್ತಮಪುರುಷಕ್ಕೆ ಆಡಾಗಮ ಬರುವುದು ಅದು ಪಿತ್ತಾಗುವುದು ಎಂಬುದರಿಂದ ಆಡಾಗಮ ಬರುವುದು, ರುನಧ್+ಆಮಹೈ ಈಗ **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಶ್ನಮ್ ಪ್ರತ್ಯಯ ಅಸ್ ಧಾತು ಇವುಗಳ ಅಕಾರಕ್ಕೆ ಕಿತ್ತು ಅಥವಾ ಙಿತ್ತು ಆದ ಸಾರ್ವಧಾತುಕ ಪರವಾಗಿರುವಾಗ ಲೋಪಬರುವುದು ಎಂಬುದರಿಂದ

ವಿಹಿತವಾದ ಲೋಪವು, ಆಮುಹ್ಯೆ ಎಂಬ ಸಾರ್ವಧಾತುಕವು ಪಿತ್ತಾದ್ದರಿಂದ, ಙಿತ್ತಾಗುವುದಿಲ್ಲವಾದಕಾರಣ ಙಿತ್ತಾದ ಸಾರ್ವಧಾತುಕ ಪದದಲ್ಲಿಲ್ಲವಾದ್ದರಿಂದ ಬರುವುದಿಲ್ಲ. 'ರಷಾಭ್ಯಾಂ' (ಪಾ. ಸೂ. ೮-೪೧) ಅನುವೃತ್ತವಾಗಲು **ಅಟ್ಕುಪ್ವಾಙ್ನುಮ್ವ್ಯವಾಯೇऽಪಿ**(ಪಾ.ಸೂ. ೮-೪-೨) ಎಂಬುದರಿಂದ ನಕಾರಕ್ಕೆ ಣಕಾರ. ಆಮುಹ್ಯೆ ಎಂಬುದು ಪಿತ್ತಾದ್ದರಿಂದ **ಅನುದಾತ್ತೌಸುಪ್ಪಿತೌ** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತ, ಶ್ನಮ್ಮಿನ **ಉದಾತ್ತ ಸ್ವರ** ನಿಲ್ಲುವುದು. ಇಲ್ಲಿ ರುಣಧಾಮುಹ್ಯೆ ಎಂಬುದು ಜಂತವಾದ್ದರಿಂದ **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ ಬರಬೇಕಾಗುವುದು. ಅಲ್ಲವೇ ? ಎಂದರೆ ಇಲ್ಲ. ಇಲ್ಲಿ ಎರಡು **ತಿಙಂತ ಪದಗಳಿ**ರುವುವು. ಯೇನ ನಿಮುಷ್ಟಿಹತ್ಯಯಾ **ವೃತ್ರಾ** ನಿರುಣಧಾಮುಹ್ಯೆ ಎಂಬಲ್ಲಿ ಶ್ರುತವಾಗಿರುವುದು ಒಂದು, ತ್ವೋತಾಸಃ ಅರ್ವತಾ ನಿರುಣಧಾಮುಹ್ಯೆ ಎಂದು ಅನುಷಕ್ತವಾದುದು ಮತ್ತೊಂದು. ಇವೆರಡಕ್ಕೂ ಸಮುಚ್ಚಯ ವನ್ನು ಹೇಳುವ ಚಕಾರಕ್ಕೆ ಪ್ರಯೋಗವಿಲ್ಲ. ಆದ್ದರಿಂದ **ಚಾದಿಲೋಪೇವಿಭಾಷಾ** (ಪಾ. ಸೂ. ೮-೧-೬೩) ಲೋಪ ಶಬ್ದಕ್ಕೆ ಅಪ್ರಯೋಗ ಎಂದು ಅರ್ಥ. ಈ ಸೂತ್ರದಿಂದ ಪಾಕ್ಷಿಕ ನಿಷೇಧ ಬರುವುದರಿಂದ ಅನುದಾತ್ತ ಬರುವುದಿಲ್ಲ. ಉದಾಹರಣೆ—**ನಾತ್ಮನಾ ತೃಪ್ಯತಿ ನಾನ್ಯಸ್ಮೈ ದದಾತಿ** (ತೈ. ಸಂ. ೨-೫-೪-೧) ಇಲ್ಲಿ ಸಮುಚ್ಚಯಾರ್ಥಕವಾದ ಚ ಶಬ್ದಕ್ಕೆ ಪ್ರಯೋಗವಿಲ್ಲದೇ ಇರುವುದರಿಂದ 'ತೃಪ್ಯತಿ' ಎಂಬ ತಿಙಂತವು ಅನುದಾತ್ತವಾಗುವುದಿಲ್ಲ. ದದಾತಿ ಎಂಬ ಎರಡನೇ ತಿಙಂತವಾದರೋ ಅನುದಾತ್ತವೇ ಆಗುವುದು. ಆದರೆ ಈ ಉದಾಹರಣೆಯಲ್ಲಿ ತೃಪ್ಯತಿ, ದದಾತಿ, ಎಂದು ಎರಡು ತಿಙಂತಪದಗಳು ಉಪಾತ್ತವಾಗಿರುವುವು. ಇಲ್ಲಾದರೋ ರುಣಧಾಮುಹ್ಯೆ ಎಂಬ ತಿಙಂತವು ಒಂದೇ ಇರುವುದು. ಇದೇ ಎರಡನೆಯ ವಾಕ್ಯದಲ್ಲಿಯೂ ಸಂಬಂಧಿಸುವುದು. ಇಷ್ಟೇ ಅಲ್ಲದೆ ಎರಡನೆಯದಾದ ತಿಙಂತವು ಇಲ್ಲಿ ಉಪಾತ್ತವಾಗಿಲ್ಲ ಆದ್ದರಿಂದ ಎರಡನೆಯ ತಿಙಂತವಿಲ್ಲದೇ ಇರುವುದರಿಂದ ಇದು ಹೇಗೆ ಪ್ರಥಮ ತಿಙಂತವಾಗುವುದು ಎಂದರೆ **ಚವಾಯೋಗೇಪ್ರಥಮಾ** ಎಂಬ ಸೂತ್ರವು ಪ್ರವೃತ್ತಿಸಲು ಉಪಾತ್ತವಾದ ತಿಙಂತ ದ್ವಯವಿರಬೇಕೆಂಬ ನಿಯಮವಿಲ್ಲ, ಒಂದು ತಿಙಂತ ಶ್ರುತವಾಗಿದ್ದು ಅದಕ್ಕೇ ಉತ್ತರ ವಾಕ್ಯದಲ್ಲಿ ಸಂಬಂಧವಿದ್ದರೂ (ಅನುಷಕ್ತ) ಸಂಬಂಧಿಸಿಕೊಂಡ ತಿಙಂತವನ್ನಪೇಕ್ಷಿಸಿ ಉಪಾತ್ತವಾದ ತಿಙಂತವು ಪ್ರಥಮವಾಗುವುದರಿಂದ, ಚವಾಯೋಗೇ ಎಂಬ ನಿಷೇಧ ಬಂದೇಬರುವುದು ಆದ್ದರಿಂದಲೇ **ಪುರೋಡಾಶಂಚಾಧಿಶ್ರಯತ್ಯಾಜ್ಯಂಚ**(ತೈಸಂ. ೧-೬-೯-೩-೪) **ಪ್ರೋಕ್ಷಣೀಶ್ಚಾಸಾದಯತ್ಯಾಜ್ಯಂಚ** (ತೈಸಂ. ೧-೬-೯-೪) ಎಂಬೀ ಎರಡು ಶ್ರುತಿವಾಕ್ಯಗಳಲ್ಲಿ ಅಧಿಶ್ರಯತಿ, ಆಸಾದಯತಿ, ಎಂಬ ತಿಙಂತಗಳು ಪ್ರಥಮವಾಕ್ಯದಲ್ಲಿ ಉಪಾತ್ತವಾಗಿರುವುವು. ಇವುಗಳಿಗೇ ಆಜ್ಯಂಚ ಎಂಬ ಉತ್ತರವಾಕ್ಯದಲ್ಲಿಯೂ ಸಂಬಂಧವಿರುವುದು. ಆದರೂ ಸಂಬಂಧಿಸಿಕೊಂಡ ತಿಙಂತವನ್ನಪೇಕ್ಷಿಸಿ ಉದಾತ್ತವಾದ ತಿಙಂತವು ಪ್ರಥಮವಾಗುವುದು ಎಂದು ಇಟ್ಟುಕೊಂಡು **ಚವಾಯೋಗೇ ಪ್ರಥಮಾ** (ಪಾ. ಸೂ. ೮-೧-೫೯) ಎಂಬುದರಿಂದ ಅನುದಾತ್ತನಿಷೇಧವು ದೃಷ್ಟವಾಗಿರುವುದು. ಆದ್ದರಿಂದ ಇಲ್ಲಿಯೂ ಪಾಕ್ಷಿಕಾನುದಾತ್ತನಿಷೇಧ ಬರುವುದರಿಂದ ಅನುದಾತ್ತ ಬರುವುದಿಲ್ಲ.

**ತ್ವಯಾ ಊತಾಃ ತ್ವೋತಾಸಃ** (ನಿನ್ನಿಂದ ರಕ್ಷಿಸಲ್ಪಟ್ಟವರು) ತೃತೀಯಾ ತತ್ಪುರುಷ ಸಮಾಸದಲ್ಲಿ ಪೂರ್ವೋತ್ತರಪದಗಳ ಸುಬ್ವಿಭಕ್ತಿಗೆ **ಸುಪೋಧಾತುಪ್ರಾತಿಪದಿಕಯೋಃ** ಎಂಬುದರಿಂದ ಲುಕ್‌ಬಂದರೆ ಯುಷ್ಮದ್+ ಊತ ಎಂದಿರುವುದು. ಈಗ **ಪ್ರತ್ಯಯೋತ್ತರಪದಯೋಶ್ಚ** (ಪಾ.ಸೂ. ೭-೨-೯೮) ಪ್ರತ್ಯಯ ಅಥವಾ ಉತ್ತರಪದ ಪರವಾಗಿರುವಾಗ ಯುಷ್ಮದ್ ಅಸ್ಮದ್ ಶಬ್ದಗಳ ಮಪರ್ಯಂತಕ್ಕೆ ತ್ವ ಮ ಎಂಬ ಆದೇಶಗಳು ಕ್ರಮವಾಗಿ ಬರುವುವು. ಎಂಬುದರಿಂದ ಯುಷ್ಮ್ ಎಂಬುದಕ್ಕೆ ತ್ವ ಆದೇಶ ಬಂದರೆ ಪರರೂಪ ಬಂದು ತ್ವದ್ ಎಂದಿರುವಾಗ ದಕಾರಕ್ಕೆ ಛಾಂದಸವಾಗಿ ಲೋಪಬರುವುದು. ಊತಾಃ ಎಂಬಲ್ಲಿ ಅವ ಧಾತುವಿನ ಮುಂದೆ ಕ್ತ ಪ್ರತ್ಯಯ ಬಂದರೆ ಅದಕ್ಕೆ ಇಡಾಗಮವೂ ಛಾಂದಸವಾಗಿ ಬರುವುದಿಲ್ಲ. **ಜ್ವರತ್ವರಸ್ರಿವ್ಯವಿಮವಾಮುಪಧಾಯಾಶ್ಚ** (ಪಾ. ಸೂ. ೬-೪-೨೦)

ಎಂಬುದರಿಂದ ಅಕಾರ ವಕಾರಗಳಿಗೆ ಊಠ್ ಬರುವುದು. ತ್ವ+ಊತ ಎಂಬಲ್ಲಿ **ಏತ್ಯೇಧತ್ಯೂಠ್ಸು** (ಪಾ. ಸೂ. ೬-೧-೮೯) ಅವರ್ಣದ ಮುಂದೆ ಏಕಾರಾದಿಯಾದ ಏತಿ ಏಧತಿ ಧಾತುಗಳೂ ಊಠ್ ಎಂಬುದೂ ಪರದಲ್ಲಿದ್ದರೆ ಪೂರ್ವಪರಸ್ಥಾನಗಳಲ್ಲಿ ವೃದ್ಧಿ ಬರುವುದು ಎಂಬುದರಿಂದ ವಿಹಿತವಾದ ವೃದ್ಧಿಯು ಛಾಂದಸವಾಗಿ ಬರುವುದಿಲ್ಲ. **ತೃತೀಯಾಕರ್ಮಣಿ** (ಪಾ. ಸೂ. ೬-೨-೪೮) ಕರ್ಮಣಿ ಕ್ತ ಪ್ರತ್ಯಯಾಂತ ಶಬ್ದವು ಪರದಲ್ಲಿರುವಾಗ ತೃತೀಯಾ ವಿಭಕ್ತ್ಯಂತವು ಪ್ರಕೃತಿಸ್ವರವನ್ನು ಹೊಂದುವುದು ಎಂಬುದರಿಂದ ವಿಹಿತವಾದ ಪೂರ್ವಪದಪ್ರಕೃತಿಸ್ವರದಿಂದ ತ್ವ ಎಂಬುದರ ಅಕಾರವು ಉದಾತ್ತ. ತ್ವ+ಊತ ಎಂಬಲ್ಲಿ **ಆದ್ಗುಣಃ** (ಪಾ. ಸೂ. ೬-೧-೮೭) ಎಂಬುದರಿಂದ ಏಕಾದೇಶವಾಗಿ ಬಂದ ಓಕಾರವು **ಏಕಾದೇಶ ಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಎಂಬುದರಿಂದ ರಿಂದ ಉದಾತ್ತ.

**ಅರ್ವತಾ**—ಅರ್ವ ಗತೌ ಎಂಬ ಧಾತುವಿನ ಮುಂದೆ **ಅನ್ಯೇಭ್ಯೋಽಪಿದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ವನಿಪ್ ಪ್ರತ್ಯಯ. **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂಬುದರಿಂದ ವಿಹಿತವಾದ ಇಟ್ ಆಗಮಕ್ಕೆ **ನೇಡ್ವಶಿಕೃತಿ** (ಪಾ. ಸೂ. ೭-೨-೮) ವಶಾದಿಯಾದ ಕೃತ್ತಿಗೆ ಇಡಾಗಮವು ಬರುವುದಿಲ್ಲ ಎಂದು ನಿಷೇಧವಿರುವುದರಿಂದ ಅದು ಬರುವುದಿಲ್ಲ. ಅರ್ವ್+ವನ್ **ಲೋಪೋವ್ಯೋರ್ವಲಿ** (ಪಾ. ಸೂ. ೬-೧-೬೬) ವಲ್ ವರ್ಣಪರದಲ್ಲಿರುವಾಗ ಯಕಾರ ವಕಾರಗಳಿಗೆ ಲೋಪಬರುವುದು ಎಂಬುದರಿಂದ ವಕಾರಕ್ಕೆ ಲೋಪ. ಅರ್+ವನ್ ಅರ್ವನ್ ಶಬ್ದದ ಮುಂದೆ ತೃತೀಯಾ ಏಕವಚನ ಟಾ ಪ್ರತ್ಯಯವನ್ನಿಟ್ಟರೆ **ಅರ್ವಣಸ್ತ್ರಸಾವನಞಃ** (ಪಾ. ಸೂ. ೬-೪-೧೨೭) ಸು ಪ್ರತ್ಯಯ ಪರದಲ್ಲಿಲ್ಲದಿದ್ದರೆ ನಞ್ನ ಮುಂದಿಲ್ಲದ ಅರ್ವನ್ ಶಬ್ದಾಂತವಾದ ಅಂಗಕ್ಕೆ ತೃ ಆದೇಶ ಬರುವುದು ಎಂಬುದರಿಂದ ಅರ್ವನ್ ಶಬ್ದದ ನಕಾರಕ್ಕೆ ತಕಾರ ಬಂದರೆ ಅರ್ವತಾ ಎಂದಾಗುವುದು. ವನಿಪ್ಪು ಪಿತ್ತು. ಆದ್ದರಿಂದ ಅನುದಾತ್ತವಾಗುವುದು. ಮೊದಲಿನ ಅಕಾರಕ್ಕೆ **ಧಾತೋಃ** (ಪಾ. ಸೂ. ೬-೧-೧೬) ಧಾತುವಿನ ಕೊನೆಯ ವರ್ಣವು ಉದಾತ್ತವಾಗುವುದು ಎಂಬುದರಿಂದ ಉದಾತ್ತ ಬರುವುದು ॥ ೨ ॥

॥ ಸಂಹಿತಾಪಾಠಃ ॥

ಇಂದ್ರ ತ್ವೋತಾಸ ಆ ವಯಂ ವಜ್ರಂ ಘನಾ ದದೀಮಹಿ ।
ಜಯೇಮ ಸಂ ಯುಧಿ ಸ್ಪೃಧಃ ॥ ೩ ॥

॥ ಪದಪಾಠಃ ॥

**ಇಂದ್ರ । ತ್ವಾಽಊತಾಸಃ । ಆ । ವಯಂ । ವಜ್ರಂ । ಘನಾ । ದದೀಮಹಿ ॥**
**ಜಯೇಮ । ಸಂ । ಯುಧಿ । ಸ್ಪೃಧಃ ॥ ೩ ॥**

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವೋತಾಸಸ್ತ್ವಯೊ ಪಾಲಿತಾ ವಯಂ ಘನಾ ಘನಂ ಶತ್ರುಪ್ರಹರಣಾಯಾತ್ಯಂತಃ ದೃಢಂ ವಜ್ರಮಾಯುಧಮಾ ದದೀಮಹಿ । ಸ್ವೀಕುರ್ಮಃ । ತೇನ ಚ ವಜ್ರೇಣ ಯುಧಿ ಯುದ್ಧೇ ಸ್ಪೃಧಃ ಸ್ಪರ್ಧಮಾನಾಂಛತ್ರೂನ್ಸಂ ಜಯೇಮ ॥ ತ್ವೋತಾಸಃ । ಉಕ್ತಂ । ವಜ್ರಂ । ವಜ ವ್ರಜ ಗತೌ । ಋಜ್ರೇಂದ್ರಾಗ್ರೇತ್ಯಾದಿನಾ ರನ್ಪ್ರತ್ಯಯಾಂತೋ ನಿಪಾತಃ । ಘನಾ । ಘನಃ ಕಾಠಿನ್ಯಂ । ತದಸ್ಯಾಸ್ತೀತ್ಯರ್ಶ ಆದಿತ್ವಾದಚ್ । ಪಾ. ೫-೨-೧೨೭ । ಚಿತ್ವಾದಂತೋದಾತ್ತಃ । ಸುಪಾಂ ಸುಲುಗಿತಿ ಡಾದೇಶಃ । ದದೀಮಹಿ ಡುದಾಞ್ ದಾನೇ ಪ್ರಾರ್ಥನಾಯಾಂ ಲಿಙ್ । ಕ್ರಿಯಾಫಲಸ್ಯ ಕರ್ತೃಗಾಮಿತ್ವಾತ್ಸ್ವರಿತಞಿತಃ । ಪಾ. ೧-೩-೭೨। ಇತ್ಯಾತ್ಮನೇಪದಮುತ್ತಮಪುರುಷಬಹುವಚನಂ ಮಹಿಙ್। ಜುಹೋತ್ಯಾದಿತ್ವಾಚ್ಛಪಃ ಶ್ಲುಃ ಪಾ. ೨-೪-೭೫। ಶ್ಲೌ । ಪಾ. ೬-೧-೧೦ ಇತಿ ದ್ವಿರ್ಭಾವಃ । ಲಿಙಃ ಸಲೋಪೋಽನಂತ್ಯಸ್ಯ । ಪಾ. ೭-೨-೭೯। ಇತಿ ಸಲೋಪಃ । ಶ್ನಾಭ್ಯಸ್ತಯೋರಾತಃ । ಪಾ. ೬-೪-೧೧೨ । ಇತ್ಯಾಕಾರಲೋಪಃ । ಜಯೇಮ । ಶಪಃ ಪಿತ್ವಾದನುದಾತ್ತತ್ವಂ । ತಿಙಶ್ಚ ಲಸಾರ್ವಧಾತುಕಸ್ವರಾದ್ಧಾತುಸ್ವರ ಏವ ಶಿಷ್ಯತೇ । ಛಂದಸಿ ಪರೇಽಪಿ । ಪಾ ೧-೪-೮೧ । ಇತಿ ಸಮಃ ಪರಃ ಪ್ರಯೋಗಃ । ಯುಧಿ । ಯುಧ ಸಂಪ್ರಹಾರೇ । ಸಂಪದಾದಿತ್ವಾದ್ಭಾವೇ ಕ್ವಿಪ್ । ಪಾ. ೩-೩-೧೦೮-೯ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಸ್ಪರ್ಧಂತ ಇತಿ ಸ್ಪೃಧಃ । ಸ್ಪರ್ಧ ಸಂಘರ್ಷೇ । ಕ್ವಿಪ್ಚ । ಪಾ. ೩-೨-೭೬ । ಇತಿ ಕ್ವಿಪ್ । ಬಹುಲಂ ಛಂದಸೀತಿ ರೇಫಸ್ಯ ಸಂಪ್ರಸಾರಣಮೃಕಾರಃ । ಅಕಾರಲೋಪಶ್ಚ ॥

॥ ಪ್ರತಿಪದಾರ್ಥ ॥

(ಹೇ) ಇಂದ್ರ—ಎಲೈ ಇಂದ್ರನೇ । ತ್ವೋತಾಸಃ—ನಿನ್ನಿಂದ ಪಾಲಿತರಾದ । ವಯಂ—ನಾವು । ಘನಾ—(ಶತ್ರುಗಳನ್ನು ಪ್ರಹರಿಸುವುದರಲ್ಲಿ) ಅತ್ಯಂತ ದೃಢವಾದ । ವಜ್ರಂ—ಆಯುಧವನ್ನು । ಆ ದದೀಮಹಿ —ಸ್ವೀಕರಿಸುವೆವು । (ಆ ವಜ್ರಾಯುಧದಿಂದ) ಯುಧಿ—ಯುದ್ಧದಲ್ಲಿ । ಸ್ಪೃಧಃ—ನಮ್ಮೊಡನೆ ಹೋರಾಡುವ ಶತ್ರುಗಳನ್ನು । ಸಂ ಜಯೇಮ—ಜಯಿಸುವೆವು.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನಿಂದ ರಕ್ಷಿತರಾದ ನಾವು ಶತ್ರುಗಳನ್ನು ಸಂಹಾರಮಾಡುವುದರಲ್ಲಿ ಬಹು ದೃಢವಾದ ವಜ್ರಾಯುಧವನ್ನು ತೆಗೆದುಕೊಂಡು ನಮ್ಮೊಡನೆ ಯುದ್ಧದಲ್ಲಿ ಹೋರಾಡುವ ಶತ್ರುಗಳನ್ನು ಗೆಲ್ಲುವೆವು.

## English Translation.

Protected by you, O Indra, we posses a ponderous weapon (thunderbolt) wherewith we may entirely conquer our enemies in a battle.

**ಯುಧಿ**—ಯುಧ ಸಂಪ್ರಹಾರೇ ಎಂಬ ಧಾತುವಿನ ಮುಂದೆ **ಸಂಪದಾದಿಭ್ಯಃಕ್ವಿಪ್** (ಪಾ. ಸೂ. ೩-೩-೧೦೮-೯) ಎಂಬುದರಿಂದ ಭಾವಾರ್ಥದಲ್ಲಿ ಕ್ವಿಪ್ ಪ್ರತ್ಯಯ ಬರುವುದು. ಕ್ವಿಪ್ಪಿಗೆ ಸಂಪೂರ್ಣಕ್ಕೂ ಲೋಪ ಬರುವುದು. ಸಪ್ತಮ್ಯೇಕವಚನವು **ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ** (ಪಾ. ಸೂ. ೬-೩-೧೬೮) ಎಂಬುದ ರಿಂದ ಉದಾತ್ತವಾಗುವುದು.

**ಸ್ಪೃಧಃ**—ಸ್ಪರ್ಧಂತೇ ಇತಿಸ್ಪೃಧಃ, ಸ್ಪರ್ಧಸಂಘರ್ಷೇ ಧಾತು, ಕ್ವಿಪ್ಚ (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ ಬಹುಲಂಛಂದಸಿ ಎಂಬುದರಿಂದ ರೇಫಕ್ಕೆ ಸಂಪ್ರಸಾರಣ ಋಕಾರವೂ ಸ್ಪ ಎಂಬ ಲ್ಲಿರುವ ಅಕಾರಕ್ಕೆ ಲೋಪವೂ ಬರುವುದು. ದ್ವಿತೀಯಾ ಬಹುವಚನದಲ್ಲಿ ಸ್ಪೃಧಃ ಎಂದಾಗುವುದು. ॥ ೩ ॥

॥ ಸಂಹಿತಾಪಾಠಃ ॥

ವಯಂ ಶೂರೇಭಿರಸ್ತೃಭಿರಿಂದ್ರ ತ್ವಯಾ ಯುಜಾ ವಯಂ ॥
ಸಾಸಹ್ಯಾಮ ಪೃತನ್ಯತಃ ॥ ೪ ॥

॥ ಪದಪಾಠಃ ॥

ವಯಂ । ಶೂರೇಭಿಃ । ಅಸ್ತೃ ऽ ಭಿಃ । ಇಂದ್ರ । ತ್ವಯಾ । ಯುಜಾ । ವಯಂ ॥
ಸಸಹ್ಯಾಮ । ಪೃತನ್ಯತಃ ॥ ೪ ।

॥ ಸಾಯಣಭಾಷ್ಯಂ ॥

ವಯಂ ಕರ್ಮಾನುಷ್ಠಾತಾರಃ ಶೂರೇಭಿಃ ಶೌರ್ಯಯುಕ್ತೈರಸ್ತೃಭಿರಾಯುಧಾನಾಂ ಪ್ರಕ್ಷೇಪ್ತೃಭಿರ್ಭಟೈಃ ಸಂಯುಜ್ಯೇಮಹೀತಿ ಶೇಷಃ । ಹೇ ಇಂದ್ರ ತಾದೃಶಾ ಭಟಸಹಿತಾ ವಯಂ ಯುಜಾ ಸಹಾಯಭೂತೇನ ತ್ವಯಾ ಪೃತನ್ಯತಃ ಸೇನಾಮಿಚ್ಛತಃ ಶತ್ರೂನ್ಸಾಸಹ್ಯಾಮ । ಅತಿಶಯೇನಾಭಿಭವೇಮ ॥ ಶೂರೇಭಿಃ। ಶು ಶ್ರು ಗತೌ । ಕ್ರನ್ನಿತ್ಯನುವೃತ್ತೌ ಶುಷಿಚಿಮಿನಾಂ ದೀರ್ಘಶ್ಚ । ಉ.೨-೨೫ । ಇತಿ ಕ್ರನ್ । ಕಿತ್ತ್ವಾದ್ಗುಣಾಭಾವಃ । ನಿತ್ತ್ವಾದಾದ್ಯುದಾತ್ತತ್ವಂ। ಬಹುಲಂ ಛಂದಸೀತ್ಯೈಸೋ ನಿಷಿದ್ಧತ್ವಾದ್ಬಹುವಚನೇ ಝಲ್ಯೇದಿತ್ಯೇವಂ । ಸಹಯೋಗೇ ತೃತೀಯಾಬಲಾದ್ವಯಮಿತ್ಯಸ್ಯತ್ಪದಸಮಭಿವ್ಯಾಹಾರಾಚ್ಚ ವಯಂ ಸಂಯುಜ್ಯೇಮಹೀತಿ ಗಮ್ಯಂ । ವಿನಾಪಿ ಸಹಶಬ್ದೇನ ವೃದ್ಧೋ ಯೂನಾ । ಪಾ. ೧-೨-೬೫ । ಇತಿ ನಿಪಾತನಾದಿತಿ ಹ್ಯುಕ್ತಂ । ಪಾ. ೨-೩-೧೯ । ಅಸ್ತೃಭಿಃ । ಶಸ್ತ್ರಾಸ್ತ್ರಪ್ರಕ್ಷೇಪಣಶೀಲೈಃ। ತದ್ಧರ್ಮಭಿಸ್ತತ್ಸಾಧುಕಾರಿಭಿರ್ವಾ । ಅಸು ಕ್ಷೇಪಣೇ । ತೃನ್ । ಪಾ. ೩-೨-೧೩೫ । ಇತಿ ತಾಚ್ಛೀಲ್ಯಾದಿಷು ತೃನ್ । ನಿತ್ತ್ವಾ-

ಶಪ್ ವಿಕರಣ ಬಂದರೆ **ಜುಹೋತ್ಯಾದಿಭ್ಯಃಶ್ಲುಃ** ( ಪಾ. ಸೂ ೨-೪-೭೫ ) ಜುಹೋತ್ಯಾದಿ ಧಾತುಗಳ ಮುಂದೆ ಬಂದ ಶಪ್ಪಿಗೆ ಶ್ಲು (ಲೋಪ) ಬರುವುದು ಎಂಬುದರಿಂದ ಶ್ಲು ಬಂದರೆ **ಶ್ಲೌ** (ಪಾ. ಸೂ. ೬-೧-೧೦) ಎಂಬುದರಿಂದ ದ್ವಿತ್ವ ಬಂದರೆ ದಾದಾ+ಮಹಿ **ಹ್ರಸ್ವಃ** (ಪಾ.ಸೂ. ೭-೪-೫೯) ಎಂಬುದರಿಂದ ಅಭ್ಯಾಸಕ್ಕೆ ಹ್ರಸ್ವ ಬಂದರೆ ದದಾ+ಮಹಿ, **ಲಿಙಸ್ಸೀಯುಟ್** (ಪಾ. ಸೂ. ೩-೪-೧೦೨) ಆತ್ಮನೇಪದಿಧಾತುವಿನ ಮುಂದೆ ಇರುವ ಲಿಙ್ಗಿಗೆ ಸೀಯುಟ್ (ಸೀಯ್) ಆಗಮ ಬರುವುದು ಎಂಬುದರಿಂದ ಸೀಯುಟ್ ಬಂದರೆ ದದಾ+ಸೀಯ್+ಮಹಿ. ಈಗ **ಲಿಙಸ್ಸಲೋಪೋಽನಂತ್ಯಸ್ಯ** (ಪಾ. ಸೂ ೭-೨-೭೯) ಸಾರ್ವಧಾತುಕ ಪ್ರತ್ಯಯ ಸಂಬಂಧಿಯಾದ ಕಡೆಯುಲ್ಲಿಲ್ಲದ ಸಕಾರಕ್ಕೆ ಲೋಪ ಬರುವುದು ಎಂಬುದರಿಂದ ಸಕಾರಕ್ಕೆ ಲೋಪ, ದದಾ+ಈಯ್ ಮಹಿ ಎಂದಿರುವಾಗ **ಲೋಪೋವ್ಯೋರ್ವಲಿ** (ಪಾ. ಸೂ. ೬-೧-೬೬) ವಲ್ ವರ್ಣ ಪರದಲ್ಲಿರುವಾಗ ಯಕಾರವಕಾರಗಳಿಗೆ ಲೋಪ ಬರುವುದು ಎಂಬುದರಿಂದ ಯಕಾರಕ್ಕೆ ಲೋಪ ದದಾ-ಈಮಹಿ **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಕಿತ್ತು ಅಥವಾ ಙಿತ್ತು ಆದ ಸಾರ್ವಧಾತುಕ ಪ್ರತ್ಯಯ ಪರದಲ್ಲಿರುವಾಗ ಶ್ನಾಪ್ರತ್ಯಯ ಅಭ್ಯಸ್ತ ಇವುಗಳ ದೀರ್ಘಾಕಾರಕ್ಕೆ ಲೋಪಬರುವುದು ಎಂಬುದರಿಂದ **ಉಭೇ ಅಭ್ಯಸ್ತಂ** (ಪಾ. ಸೂ. ೬-೧-೫) ಎಂಬ ಸೂತ್ರಾನುಸಾರ ಅಭ್ಯಸ್ತಸಂಜ್ಞಕವಾದ ಧಾತುವಿನ ಆಕಾರಕ್ಕೆ ಲೋಪ ಬಂದರೆ ದದೀಮಹಿ, ಎಂದಾಗುವುದು. **ತಿಙ್ಙತಿಙಃ** (ಪಾ. ಸೂ. ೮-೧-೨೮) ತಿಙಂತವಲ್ಲದ ಪದದ ಮುಂದಿರುವ ತಿಙಂತವು ಅನುದಾತ್ತವಾಗುವುದು ಎಂಬುದರಿಂದ ಸರ್ವಾನುದಾತ್ತ.

**ಜಯೇಮ**—ಜಿಜಯೇ ಧಾತುವಿನ ಮುಂದೆ ವಿಧಿಲಿಙ್ ಪರಸ್ಮೈಪದ ಉತ್ತಮಪುರುಷ ಬಹುವಚನ ಮಸ್, ಜಿ+ಮಸ್ **ನಿತ್ಯಂಙಿತಃ** ( ಪಾ. ಸೂ. ೩-೪-೯೯ ) ಙಕಾರೇತ್ಸಂಜ್ಞಕ ಲಕಾರಸ್ಥಾನದಲ್ಲಿ ಬಂದ ಸಕಾರಾಂತವಾದ ಉತ್ತಮಪುರುಷ ಪ್ರತ್ಯಯದ ಕೊನೆಯ ವರ್ಣಕ್ಕೆ ಲೋಪಬರುವುದು ಎಂಬುದರಿಂದ ಸಕಾರಕ್ಕೆ ಲೋಪ. **ಕರ್ತರಿಶಪ್** (ಪಾ.ಸೂ. ೩-೧-೬೮) ಎಂಬುದರಿಂದ ಶಪ್ವಿಕರಣ **ಸಾರ್ವಧಾತುಕಾರ್ಧಧಾತುಕಯೋಃ** (ಪಾ.ಸೂ. ೭-೩-೮೪) ಎಂಬುದರಿಂದ ಗುಣ, ಜಿ ಎಂಬುದರ ಇಕಾರಕ್ಕೆ ಏ ಆದೇಶ. **ಏಚೋಽಯವಾಯಾವಃ** (ಪಾ.ಸೂ. ೬-೧-೭೮) ಎಂಬುದರಿಂದ ಅಯಾದೇಶ. ಜಯ+ಮ **ಯಾಸುಟ್‌ಪರಸ್ಮೈಪದೇಷೂದಾತ್ತೋಙಿಚ್ಚ** (ಪಾ.ಸೂ. ೩-೪-೧೦೩) ಎಂಬುದರಿಂದ ಮ ಎಂಬುದಕ್ಕೆ ಯಾಸುಟ್ ಆಗಮ. **ಲಿಙಸ್ಸಲೋಪೋಽನಂತ್ಯಸ್ಯ** (ಪಾ. ಸೂ. ೭-೨-೭೯) ಎಂಬುದರಿಂದ ಸಕಾರಕ್ಕೆ ಲೋಪ. **ಅತೋಯೇಯಃ** (ಪಾ. ಸೂ. ೭-೨-೮೦) ಎಂಬುದರಿಂದ ಯಾಗೆ ಇಯ್ಆದೇಶ. ಯಕಾರಕ್ಕೆ **ಲೋಪೋವ್ಯೋರ್ವಲಿ** (ಪಾ.ಸೂ. ೬-೧-೬೬) ಎಂಬುದರಿಂದ ಲೋಪ ಜಯ+ಇಮ **ಆದ್ಗುಣಃ** (ಪಾ.ಸೂ. ೬-೧-೮೭) ಎಂಬುದರಿಂದ ಗುಣ- ಜಯೇಮ ಎಂದಾಗುವುದು. ಇಲ್ಲಿ ಶಪ್ಪು ಪಿತ್ತಾದ್ದರಿಂದ ಅನುದಾತ್ತ. **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಇಮ ಎಂಬ ತಿಙ್ ಪ್ರತ್ಯಯವು ಅನುದಾತ್ತ. ಅನುದಾತ್ತಗಳಾದ ಅಕಾರ ಇಕಾರಗಳಿಗೆ ಬಂದ ಏಕಾರವು ಸ್ಥಾನಸಾಮ್ಯದಿಂದ ಅನುದಾತ್ತ. ಅಂತು ಏಮ ಎಂಬ ಎರಡೂ ಅನುದಾತ್ತ. ಜಕಾರ ಧಾತುಸ್ವರದಿಂದ ಉದಾತ್ತ. ಈ ಉದಾತ್ತದ ಮುಂದಿರುವ ಏ ಎಂಬ ಅನುದಾತ್ತವು **ಉದಾತ್ತಾದನುದಾತ್ತಸ್ಯಸ್ವರಿತಃ** (ಪಾ. ಸೂ. ೮-೪-೬೬) ಎಂಬುದರಿಂದ ಸ್ವರಿತ. ಸ್ವರಿತದ ಮುಂದೆ ಇರುವ ಮ ಎಂಬ ಅನುದಾತ್ತವು **ಸ್ವರಿತಾತ್ಸಂಹಿತಾಯಾಮನುದಾತ್ತಾನಾಂ** (ಪಾ. ಸೂ. ೧-೨-೩೯) ಎಂಬುದರಿಂದ ಪ್ರಚಯ. ಆದರೆ ಸಂಹಿತಾಕಾಲದಲ್ಲಿ ಸಂ ಎಂಬ ಉದಾತ್ತ ಪರದಲ್ಲಿರುವುದರಿಂದ **ಉದಾತ್ತಸ್ವರಿತಪರಸ್ಯ ಸನ್ನತರಃ** (ಪಾ. ಸೂ. ೧-೨-೪೦) ಎಂಬುದರಿಂದ ಅನುದಾತ್ತತರವಾಗುವುದು.

**ಸಂ** ಎಂಬ ಉಪಸರ್ಗವು ಯದ್ಯಪಿ ಪೂರ್ವದಲ್ಲಿ ಪ್ರಯೋಗಿಸಲ್ಪಡಬೇಕು. ಆದರೂ **ಛಂದಸಿ ಪರೇಽಪಿ** (ಪಾ. ಸೂ. ೧-೪-೮೧) ಎಂಬುದರಿಂದ ಧಾತುವಿನ ಪರದಲ್ಲಿ ಪ್ರಯುಕ್ತವಾಗಿರುವುದು.

**ಯುಧಿ**—ಯುಧ ಸಂಪ್ರಹಾರೇ ಎಂಬ ಧಾತುವಿನ ಮುಂದೆ **ಸಂಪದಾದಿಭ್ಯಃಕ್ವಿಪ್** (ಪಾ. ಸೂ. ೩-೩-೧೦೮-೯) ಎಂಬುದರಿಂದ ಭಾವಾರ್ಥದಲ್ಲಿ ಕ್ವಿಪ್ ಪ್ರತ್ಯಯ ಬರುವುದು. ಕ್ವಿಪ್ಪಿಗೆ ಸಂಪೂರ್ಣಕ್ಕೂ ಲೋಪ ಬರುವುದು. ಸಪ್ತಮ್ಯೇಕವಚನವು **ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ** (ಪಾ. ಸೂ. ೬-೩-೧೬೮) ಎಂಬುದರಿಂದ ಉದಾತ್ತವಾಗುವುದು.

**ಸ್ಪೃಧಃ**—ಸ್ಪರ್ಧಂತೇ ಇತಿಸ್ಪೃಧಃ, ಸ್ಪರ್ಧಸಂಘರ್ಷೇ ಧಾತು, ಕ್ವಿಪ್ಚ (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ ಬಹುಲಂಛಂದಸಿ ಎಂಬುದರಿಂದ ರೇಫಕ್ಕೆ ಸಂಪ್ರಸಾರಣ ಋಕಾರವೂ ಸ್ಪ ಎಂಬಲ್ಲಿರುವ ಅಕಾರಕ್ಕೆ ಲೋಪವೂ ಬರುವುದು. ದ್ವಿತೀಯಾ ಬಹುವಚನದಲ್ಲಿ ಸ್ಪೃಧಃ ಎಂದಾಗುವುದು. ॥ ೩ ॥

॥ ಸಂಹಿತಾಪಾಠಃ ॥

ವಯಂ ಶೂರೇಭಿರಸ್ತೃಭಿರಿಂದ್ರ ತ್ವಯಾ ಯುಜಾ ವಯಂ ॥
ಸಾಸಹ್ಯಾಮ ಪೃತನ್ಯತಃ ॥ ೪ ॥

॥ ಪದಪಾಠಃ ॥

ವಯಂ । ಶೂರೇಭಿಃ । ಅಸ್ತೃಽಭಿಃ । ಇಂದ್ರ । ತ್ವಯಾ । ಯುಜಾ । ವಯಂ ॥
ಸಸಹ್ಯಾಮ । ಪೃತನ್ಯತಃ ॥ ೪ ॥

॥ ಸಾಯಣಭಾಷ್ಯಂ ॥

ವಯಂ ಕರ್ಮಾನುಷ್ಠಾತಾರಃ ಶೂರೇಭಿಃ ಶೌರ್ಯಯುಕ್ತೈರಸ್ತೃಭಿರಾಯುಧಾನಾಂ ಪ್ರಕ್ಷೇಪ್ತೃಭಿರ್ಭಟೈಃ ಸಂಯುಜ್ಯೇಮಹೀತಿ ಶೇಷಃ । ಹೇ ಇಂದ್ರ ತಾದೃಶಾ ಭಟಸಹಿತಾ ವಯಂ ಯುಜಾ ಸಹಾಯಭೂತೇನ ತ್ವಯಾ ಪೃತನ್ಯತಃ ಸೇನಾಮಿಚ್ಛತಃ ಶತ್ರೂನ್ಸಾಸಹ್ಯಾಮ । ಅತಿಶಯೇನಾಭಿಭವೇಮ ॥ ಶೂರೇಭಿಃ। ಶು ಶ್ರು ಗತೌ । ಕ್ರನ್ನಿತ್ಯನುವೃತ್ತೌ ಶುಷಿಚಿಮಿನಾಂ ದೀರ್ಘಶ್ಚ । ಉ.೨-೨೫ । ಇತಿ ಕ್ರನ್ । ಕಿತ್ತ್ವಾದ್ಗುಣಾಭಾವಃ । ನಿತ್ತ್ವಾದಾದ್ಯುದಾತ್ತತ್ವಂ। ಬಹುಲಂ ಛಂದಸೀತ್ಯೈಸೋ ನಿಷಿದ್ಧತ್ವಾದ್ಬಹುವಚನೇ ಝಲ್ಯೇದಿತ್ಯೇವಂ । ಸಹಯೋಗೇ ತೃತೀಯಾಬಲಾದ್ವಯಮಿತ್ಯಸ್ಯತ್ಪದಸಮಭಿವ್ಯಾಹಾರಾಚ್ಚ ವಯಂ ಸಂಯುಜ್ಯೇಮಹೀತಿ ಗಮ್ಯಂ । ವಿನಾಪಿ ಸಹಶಬ್ದೇನ ವೃದ್ಧೋ ಯೂನಾ । ಪಾ. ೧-೨-೬೫ । ಇತಿ ನಿಪಾತನಾದಿತಿ ಹ್ಯುಕ್ತಂ । ಪಾ. ೨-೩-೧೯ । ಅಸ್ತೃಭಿಃ । ಶಸ್ತ್ರಾಸ್ತ್ರಪ್ರಕ್ಷೇಪಣಶೀಲೈಃ। ತದ್ಧರ್ಮಭಿಸ್ತತ್ಸಾಧುಕಾರಿಭಿರ್ವಾ । ಅಸು ಕ್ಷೇಪಣೇ । ತೃನ್ । ಪಾ. ೩-೨-೧೩೫ । ಇತಿ ತಾಚ್ಛೀಲ್ಯಾದಿಷು ತೃನ್ । ನಿತ್ತ್ವಾ-

ದಾದ್ಯುದಾತ್ತಃ । ರಧಾದಿಭ್ಯಶ್ಚ । ಪಾ. ೭-೨-೪೫ । ಇತಿ ವಿಕಲ್ಪವಿಧಾನಾದಯಂ ಪಕ್ಷೇ ಇಡಭಾವಃ । ತ್ವಯಾ । ಯುಷ್ಮತ್ಸಿಭ್ಯಾಂ ಮದಿಕ್ । ಉ. ೧-೧೩೮ । ಕಿತ್ತ್ವಾದ್ಗುಣಾಭಾವಃ । ಯುಷ್ಮದಃ ಪ್ರತ್ಯಯಸ್ವರೇಣಾಕಾರ ಉದಾತ್ತಃ । ತೃತೀಯೈಕವಚನಂ ಟಾ । ಪಾ. ೪-೧-೨ । ತ್ವಮಾವೇಕವಚನೇ । ಪಾ. ೭-೨-೯೭ । ಇತಿ ಮಪರ್ಯಂತಸ್ಯ ತ್ವಾದೇಶಃ । ಅತೋ ಗುಣೇ । ಪಾ. ೬-೧-೯೭ । ಇತಿ ಪರರೂಪತ್ವಂ । ಏಕಾದೇಶ ಉದಾತ್ತೇನೋದಾತ್ತ ಇತ್ಯುದಾತ್ತಃ । ಯುಜಾ । ಅಂಚುಯುಜಿಕ್ರುಂಚಾಂ ಚ । ಪಾ. ೩-೨-೫೯ । ಇತಿ ಕ್ವಿನ್ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಸಾಸಹ್ಯಾಮ । ಭೃಶಂ ಪುನಃ ಪುನಃ ಸಹೇಮಹಿ । ಷಹ ಮರ್ಷಣೇ । ಧಾತ್ವಾದೇಃ ಷಃ ಸಃ । ಧಾತೋರೇಕಾಚೋ ಹಲಾದೇಃ ಕ್ರಿಯಾಸಮಭಿಹಾರೇ ಯಙ್ । ಪಾ. ೩-೧-೨೨ । ಯಙೋಽಚಿ ಚ । ಪಾ ೨-೪-೭೪ । ಇತಿ ಲುಕ್ . ಸನ್ಯಙೋಃ । ಪಾ. ೬-೧-೯ । ಇತಿ ದ್ವಿರ್ಭಾವಃ । ಹಲಾದಿಃ ಶೇಷಃ । ಪಾ. ೭-೪-೬೦ । ದೀರ್ಘೋಽಕಿತಃ। ಪಾ. ೭-೪-೮೩ । ಇತಿ ದೀರ್ಘಃ । ಪ್ರಾರ್ಥನಾಯಾಂ ಲಿಙ್ । ಚರ್ಕರೀತಂ ಪರಸ್ಮೈಪದಮುದಾದಿವಚ್ಚೇ ದ್ರಷ್ಟವ್ಯಮಿತಿ ಪರಸ್ಮೈಪದೋತ್ತಮಪುರುಷಬಹುವಚನಂ ಮಸ್। ಕರ್ತರಿ ಶಪ್। ಅದಾದಿವದ್ಭಾವಾಲ್ಲುಕ್। ನಿತ್ಯಂ ಙಿತಃ । ಪಾ. ೩-೪-೯೯ । ಇತ್ಯಂತ್ಯಸಕಾರಲೋಪಃ । ಯಾಸುಟ್ ಪರಸ್ಮೈಪದೇಷೂದಾತ್ತೋ ಙಿಚ್ಚ । ಪಾ. ೩-೪.೧೦೩ । ಇತಿ ಯಾಸುಟ್ । ಲಿಙಃ ಸಲೋಪೋಽನಂತ್ಯಸ್ಯ । ಪಾ. ೭-೨-೭೯ । ಇತಿ ಸಕಾರಲೋಪಃ । ಸತಿ ಶಿಷ್ಟತ್ವಾದ್ಯಾಸುಟ ಏವೋದಾತ್ತತ್ವಂ ಶಿಷ್ಯತೇ । ಪಾದಾದಿತ್ವಾನ್ನ ನಿಘಾತಃ । ಪೃತನ್ಯತಃ । ಯೋದ್ಧುಂ ಪೃತನಾಮಾತ್ಮನ ಇಚ್ಛತಃ । ಸುಪ ಆತ್ಮನಃ ಕ್ಯಚಿತಿ ಕ್ಯಚ್ । ಸನಾದ್ಯಂತಾ ಧಾತವಃ । ಪಾ. ೩-೧-೩೨ । ಇತಿ ಧಾತುಸಂಜ್ಞಾಯಾಂ ಸುಪೋ ಧಾತುಪ್ರಾತಿಪದಿಕಯೋಃ । ಪಾ। ೨-೪-೭೧ । ಇತಿ ಸುಪೋ ಲುಕ್ । ಕ್ಯಚಿ ಚ । ಪಾ. ೭-೪-೩೩ । ಇತ್ಯನುವೃತ್ತೌ ಕವ್ಯಧ್ವರಪೃತನಸ್ಯರ್ಚಿ ಲೋಪಃ । ಪಾ. ೭-೪-೩೯ । ಇತ್ಯಾಕಾರಲೋಪಃ । ಪೃತನ್ಯಧಾತುಶ್ಚಿತ್ತ್ವಾದಂತೋದಾತ್ತಃ । ಉಪರಿ ಲಟಃ ಶತ್ರಾದೇಶಃ । ಕರ್ತರಿ ಶಪ್ । ಪಿತ್ತ್ವಾದನುದಾತ್ತತ್ವಂ । ಶತುಶ್ಚ ಲಸಾರ್ವಧಾತುಕಸ್ವರೇಣೋದಾತ್ತೇನ ಸಹೈಕಾದೇಶ ಉದಾತ್ತೇನೋದಾತ್ತ ಇತಿ ಪೃತನ್ಯಚ್ಛಬ್ದೋಽಂತೋದಾತ್ತಃ । ಶಸಃ ಸುಪ್ಸ್ವರೇಣಾನುದಾತ್ತಸ್ಯಾಂತೋದಾತ್ತಾದಿತ್ಯನುವೃತ್ತೌ ಶತುರನುಮೋ ನದ್ಯಜಾದೀ । ಪಾ. ೬-೧-೧೭೩ । ಇತ್ಯುದಾತ್ತತ್ತ್ವಂ ॥

॥ ಪ್ರತಿಪದಾರ್ಥ ॥

ವಯಂ—ನಾವು । ಶೂರೇಭಿಃ—ಪರಾಕ್ರಮಯುಕ್ತರಾದ । ಅಸ್ತೃಭಿಃ—ಆಯುಧಗಳಿಂದ ಹೊಡೆದಾಡುವ ಯುದ್ಧಭಟರಿಂದ (ಸಹಿತರಾಗಿರುವೆವು) । ಹೇ ಇಂದ್ರ—ಎಲೈ ಇಂದ್ರನೇ । ವಯಂ—ನಾವು । ಯುಜಾ—ನಮಗೆ ಸಹಾಯಭೂತನಾದ । ತ್ವಯಾ—ನಿನ್ನಿಂದ ಕೂಡಿ । ಪೃತನ್ಯತಃ--ಸೇನಾಯುಕ್ತರಾದ ಶತ್ರುಗಳನ್ನು । ಸಾಸಹ್ಯಾಮ--ಗೆಲ್ಲುವೆವು ॥

॥ ಭಾವಾರ್ಥ ॥

ಎಲೈ ಇಂದ್ರನೇ ನಮಗೆ ಆಯುಧಪ್ರಯೋಗದಲ್ಲಿ ನಿಪುಣರಾದ ಮತ್ತು ಶೂರರಾದ ಯುದ್ಧಭಟರ ಸಹಾಯವೂ, ನಿನ್ನ ಸಹಾಯವೂ ಇರುವುದರಿಂದ ನಮ್ಮ ಶತ್ರುಗಳು ಸೇನಾಸಹಿತರಾಗಿದ್ದರೂ ಅವರನ್ನು ಜಯಿಸುವೆವು.

## English Translation

With the help of the brave missile throwing heroes and with you as our comrade we will overcome our assailants.

॥ ವಿಶೇಷವಿಷಯಗಳು ॥

**ಅಸ್ತೃಭಿಃ**—ಅಸು ಕ್ಷೇಪಣೆ ಎಂಬ ಧಾತುವಿನ ರೂಪವು. **ಶಸ್ತ್ರಾಸ್ತ್ರಪ್ರಕ್ಷೇಪಣಶೀಲೈಃ** ಎಂದರೆ ಶಸ್ತ್ರಾಸ್ತ್ರಗಳನ್ನು ಅಥವಾ ಆಯುಧಗಳನ್ನು ಶತ್ರುಗಳ ಮೇಲೆ ಎಸೆಯುವವರು.

**ಸಾಸಹ್ಯಾಮ**—ಮತ್ತೆ ಮತ್ತೆ ಜಯಿಸುವೆವು ಎಂದರೆ ಯುದ್ಧದಲ್ಲಿ ಅನೇಕ ತೊಂದರೆಗಳುಂಟಾದರೂ ಅವುಗಳನ್ನು ಲಕ್ಷ್ಯಮಾಡದೆ ನಿಶ್ಚಯವಾಗಿ ಗೆಲ್ಲುವೆವು. ಛಂದಸ್ಸಿನ ಅನುಕೂಲಕ್ಕಾಗಿ ಸಕಾರವು ಸಂಹಿತಾಪಾಠದಲ್ಲಿ ದೀರ್ಘವಾಗಿರುವುದು.

**ಪೃತನ್ಯತಃ**—ಪೃತನಾ ಎಂದರೆ ಸೇನೆಯು. **ಪೃತನಾಮಾತ್ಮನ ಇಚ್ಛಂತಃ** ಎಂದರೆ ಸೇನೆಯ ಸಹಾಯವನ್ನು ಅಪೇಕ್ಷಿಸುವ, ಸೇನೆಯಿಂದ ಸಹಿತರಾದ (ಶತ್ರುಗಳು) ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಶೂರೇಭಿಃ**—ಶುಶ್ರುಗತೌ ಧಾತು. **ಶುಸಿ ಚಿ ಮೀನಾಂ ದೀರ್ಘಶ್ಚ** (ಉ. ಸೂ- ೨-೧೨೩) ಶುಗತೌ ಷಿಞ್ ಬಂಧನೇ, ಚಿಞ್ ಚಯನೇ, ಡುಮಿಞ್ ಪ್ರಕ್ಷೇಪಣೇ, ಈ ಧಾತುಗಳ ಮುಂದೆ ಕ್ರನ್ ಪ್ರತ್ಯಯವೂ. ಈ ಧಾತುಗಳಿಗೆ ದೀರ್ಘವೂ ಸಹ ಬರುವುದು ಎಂಬುದರಿಂದ ಶು ಧಾತುವಿನ ಮುಂದೆ ಕ್ರನ್ ಬಂದರೆ ಶು+ರ ದೀರ್ಘಬಂದರೆ ಶೂರ, ಪ್ರತ್ಯಯವು ಕಿತ್ತಾದ್ದರಿಂದ ಗುಣ ಬರುವುದಿಲ್ಲ. ನಿತ್ಸ್ವರ ಆದ್ಯುದಾತ್ತ ಬರುವುದು. ಶೂರ ಎಂಬುದರ ಮುಂದೆ ಭಿಸ್ ಪ್ರತ್ಯಯವನ್ನಿಟ್ಟರೆ **ಅತೋಭಿಸಐಸ್** (ಪಾ.. ಸೂ. ೭-೧-೯) ಎಂಬುದರಿಂದ ಐಸಾದೇಶವು ಪ್ರಾಪ್ತವಾಗುವುದು. ಆದರೂ **ಬಹುಲಂ ಛಂದಸಿ** (ಪಾ. ಸೂ. ೭-೧-೧೦) ಎಂಬುದರಿಂದ ಐಸ್ ಬರುವುದಿಲ್ಲ. **ಬಹುವಚನೇ ಝಲ್ಯೇತ್** (ಪಾ ಸೂ. ೭-೩-೧೦೩) ಝಲಾದಿಯಾದ ಬಹುವಚನ ಪರದಲ್ಲಿದ್ದರೆ ಅದಂತವಾದ ಅಂಗಕ್ಕೆ ಏ ಬರುವುದು ಎಂಬುದರಿಂದ ಏತ್ವ ಬಂದರೆ ರುತ್ವವಿಸರ್ಗಗಳು ಬಂದು ಶೂರೇಭಿಃ ಎಂದಾಗುವುದು. **ಸಹಯುಕ್ತೇ ಅಪ್ರಧಾನೇ** (ಪಾ. ಸೂ. ೨-೩-೧೯) ಸಹ (ಒಂದಿಗೆ) ಶಬ್ದದ ಅರ್ಥವನ್ನು ಬೋಧಿಸುವ ಶಬ್ದಗಳ ಯೋಗವಿದ್ದರೆ ಅಪ್ರಧಾನೀಭೂತ ಅರ್ಥಪ್ರತಿಪಾದಕವಾದ ಶಬ್ದದ ಮುಂದೆ ತೃತೀಯಾ ವಿಭಕ್ತಿ ಬರುವುದು ಎಂಬುದರಿಂದ ಶೂರ ಶಬ್ದದ ಮುಂದೆ ತೃತೀಯಾ ವಿಭಕ್ತಿ ಬಂದಿದೆ. ಆದರೆ ಇಲ್ಲಿ ಸಹಾರ್ಥಕವಾದ ಶಬ್ದಗಳು ಯಾವುವೂ ಪ್ರಯುಕ್ತಗಳಾಗಿಲ್ಲ. ಆದರೂ **ವೃದ್ಧೋಯೂನಾ ತಲ್ಲಕ್ಷಣಶ್ಚೇದೇವ ವಿಶೇಷಃ** (ಪಾ. ಸೂ. ೧-೨-೬೫) ಎಂಬ ಸೂತ್ರದಲ್ಲಿ ಯೂನಾ ಎಂದು ಸಹ ಯೋಗೇ ತೃತೀಯಾ ವಿಭಕ್ತಿಯನ್ನು ಪಾಣಿನ್ಯಾಚಾರ್ಯರು ಪ್ರಯೋಗಿಸಿರುವರು. ಇಲ್ಲಿಯೂ ಸಹಾರ್ಥಕ ಶಬ್ದಗಳು ಯಾವುವೂ ಇಲ್ಲ. ಆದ್ದರಿಂದ ಆ ಸಹಾರ್ಥಕ ಶಬ್ದ ಪ್ರಯೋಗವಿಲ್ಲದಿದ್ದರೂ **ಸಹಯುಕ್ತೇ**-(ಪಾ. ಸೂ. ೨-೩-೧೯) ಎಂಬುದರಿಂದ ತೃತೀಯಾ ವಿಭಕ್ತಿ ಬರುವುದು ಎಂದು ಜ್ಞಾಪಿತವಾಗುವುದು. ಆದ್ದರಿಂದ ಇಲ್ಲಿ ಸಹಾರ್ಥಕ ಶಬ್ದಯೋಗವಿಲ್ಲದಿದ್ದರೂ ತೃತೀಯಾ ವಿಭಕ್ತಿ ಬರಲು ತಡೆಯಿಲ್ಲ. ಈ ಸಹಾರ್ಥ ತೃತೀಯಾ ಬಲದಿಂದಲೂ, ವಯಂ ಎಂಬ ಅಸ್ಮಚ್ಛಬ್ದ ಸಮಭಿ

ವ್ಯಾಹಾರದಿಂದಲೂ ಸಂಯುಜ್ಯೇಮಹಿ, ಎಂಬ ಕ್ರಿಯೆಯು ಗಮ್ಯವಾಗುವುದು ' ವಯಂ ಶೂರೇಭಿಃ ' ಎಂಬಲ್ಲಿ ಪೂರ್ಣಾರ್ಥ ತೋರುವುದಿಲ್ಲ ' ವಯಂ ಶೂರೇಭಿಃ ಸಂಯುಜ್ಯೇಮಹಿ ' ಎಂದು ಹೇಳಿದರೆ ಪೂರ್ಣಾರ್ಥ ತೋರುವುದು.

ಅಸ್ತೃಭಿಃ— ' ಅಸುಕ್ಷೇಪಣೇ ಧಾತು. ತೃನ್ (ಪಾ. ಸೂ. ೩-೨-೧೩೫) ಧಾತುಗಳ ಮುಂದೆ ತಚ್ಛೀಲ, ತದ್ಧರ್ಮ, ತತ್ಸಾಧುಕಾರಿಗಳು ಕರ್ತೃಗಳಾಗಿದ್ದರೆ ತೃನ್ ಪ್ರತ್ಯಯ ಬರುವುದು ಎಂಬುದರಿಂದ ತೃನ್ ಪ್ರತ್ಯಯ ಬರುವುದು ಅಸ್ತೃನ್ ಎಂದಿರುವುದು. ಭಿಸ್ಪ್ರತ್ಯಯ ಬಂದರೆ ನಲೋಪಾದಿಗಳು ಬಂದು ಅಸ್ತೃಭಿಃ ಎಂದಾಗುವುದು. ಶಸ್ತ್ರಾಸ್ತ್ರಗಳ ಪ್ರಕ್ಷೇಪಣವೇ ಸ್ವಭಾವವಾಗಿ ಉಳ್ಳವರು, ಶಾಸ್ತ್ರಾಸ್ತ್ರಪ್ರಕ್ಷೇಪಣವೇ ಧರ್ಮವಾಗಿ ಉಳ್ಳವರು, ಶಸ್ತ್ರಾಸ್ತ್ರಪಕ್ಷೇಪಣೆಯನ್ನು ಚೆನ್ನಾಗಿ ಮಾಡುವವರು ( ಶಸ್ತ್ರಾಸ್ತ್ರಪ್ರಕ್ಷೇಪಣಶೀಲೈಃ ತದ್ಧರ್ಮಿಭಿಃ, ತತ್ಸಾಧುಕಾರಿಭಿರ್ವಾ, ಎಂದು ಭಾಷ್ಯದಲ್ಲಿರುವುದು) ತೃನ್ ಪ್ರತ್ಯಯ ನಿತ್ತಾದ್ದರಿಂದ ನಿತ್ಸ್ವರ ಆದ್ಯುದಾತ್ತ ಬರುವುದು ರಧಾದಿಭ್ಯಶ್ಚ (ಪಾ, ಸೂ ೭. ೨-೪೫) ರಧ್, ನಶ್, ತೃಪ್, ದ್ರುಹ್, ಮುಹ್, ಷ್ಣುಹ್' ಷ್ಣಿಹ್ ಈ ಧಾತುಗಳ ಮುಂದೆ ಇರುವ ವಲಾದಿಯಾದ ಆರ್ಧಧಾತುಕಕ್ಕೆ ಇಟ್ ಆಗಮ ವಿಕಲ್ಪವಾಗಿ ಬರುವುದು ಎಂದು ಈ ಸೂತ್ರಕ್ಕೆ ಅರ್ಥ. ಷ್ಣಿಹ್ ಧಾತುವಿನ ಮುಂದೆ, ವೃತ್ ಎಂದಿರುವುದರಿಂದ ಇಲ್ಲಿಗೆ ರಧಾದಿಯು ಮುಗಿಯುವುದು. ನಂತರ 'ಶಮು ಉಪಶಮೇ' ಎಂದಾರಂಭಿಸಿ ಎಂಟು ಧಾತುಗಳು ಶಮಾದಿ ಧಾತುಗಳು. ನಂತರ ಅಸುಕ್ಷೇಪಣೇ ಎಂಬ ಧಾತುವಿರುವುದು. ಆದ್ದರಿಂದ ಅಸುಧಾತುವು ರಧಾದಿಯಲ್ಲಿ ಸೇರುವುದಿಲ್ಲ. ಆದಕಾರಣ, ರದಾದಿಭ್ಯಶ್ಚ ಎಂಬುದು ಇಲ್ಲಿ ಪ್ರವೃತ್ತವಾಗುವುದಿಲ್ಲ. ತೃನ್‌ತೃಚೌ ಶಂಸಿಕ್ಷದಾದಿಭ್ಯಸ್ಸಂಜ್ಞಾಯಾಂ ಚಾನಿಟೌ (ಉ. ಸೂ. ೨-೨೫೧) ಸಂಜ್ಞೆತೋರುವಾಗ ಶಂಸು ಧಾತುವಿನ ಮುಂದೆ ತೃನ್ ಪ್ರತ್ಯಯವೂ ಕ್ಷದಾದಿ ಧಾತುಗಳ ಮುಂದೆ ತೃಚ್ ಪ್ರತ್ಯಯವೂ ಬರುವುದು. ತೃನ್ ತೃಚ್‌ಗಳಿಗೆ ಇಡಾಗಮವೂ ಬರುವುದಿಲ್ಲ. ಶಂಸುಸ್ತುತೌ ಧಾತು, ಕ್ಷದ ಶಕಲೀಕರಣೇ ಭಕ್ಷಣೇಚ ಇದು ಸೌತ್ರಧಾತು. ಈ ಸೂತ್ರದಿಂದ ಅನಿಟ್ಟಾದ ತೃನ್ ಪ್ರತ್ಯಯ ಬರುವುದು ಎಂದು ಕೆಲವರು ಅಭಿಪ್ರಾಯಪಡುವರು. ಈ ಪಕ್ಷದಲ್ಲಿ ತಚ್ಛೀಲಾದ್ಯರ್ಥಗಳು ತೋರುವುದಿಲ್ಲ. ತಚ್ಛೀಲಾದ್ಯರ್ಥಪ್ರತೀತಿಯು ನಿಯಮೇನ ಅಪೇಕ್ಷಿತವಾದರೆ ಇಡಭಾವವು ಛಾಂದಸವೆಂದು ಇಟ್ಟುಕೊಳ್ಳುವುದು ಯುಕ್ತವು. ಅಂದರೆ 'ಸರ್ವೇವಿಧಯಶ್ಛಂದಸಿ ವಿಕಲ್ಪ್ಯಂತೇ' ಎಂಬುದರಿಂದ ಇಡ್ವಿಧಿಯೂ ಛಂದಸ್ಸಿನಲ್ಲಿ ವೈಕಲ್ಪಿಕವಾದ್ದರಿಂದ ಇಲ್ಲಿ ಪ್ರವರ್ತಿಸುವುದಿಲ್ಲ ಎಂದು ಭಾವ.

ತ್ವಯಾ—ಯುಷ್ಯಸಿಭ್ಯಾಂಮದಿಕ್ (ಉ. ಸೂ. ೧.೧-೩೭) ಯುಷ್ ಎಂಬುದು ಸೌತ್ರ ಧಾತು. ಅಸುಕ್ಷೇಪಣೇ ಈ ಧಾತುಗಳ ಮುಂದೆ ಮದಿಕ್ ಪ್ರತ್ಯಯ ಬರುವುದು ಎಂಬುದರಿಂದ ಯುಷ್ ಧಾತುವಿನ ಮುಂದೆ ಮದಿಕ್ ಪ್ರತ್ಯಯ. ಪ್ರತ್ಯಯವು ಕಿತ್ತಾದ್ದರಿಂದ ಲಘೂಪಧಗುಣ ಬರುವುದಿಲ್ಲ. ಯುಷ್ಮತ್ ಎಂದಾಗುವುದು. ಪ್ರತ್ಯಯಸ್ವರದಿಂದ ಅಕಾರ ಉದಾತ್ತ. ಸ್ವೌಜಸಮೌಟ್ ಛಷ್ಟಾಭ್ಯಾಮ್ಭಿಸ್ ಙೇಭ್ಯಾಂಭ್ಯಸ್ ಙಸಿಭ್ಯಾಂಭ್ಯಸ್ ಙಸೋಸಾಮ್ ಙ್ಯೋಸ್ಸುಪ್ (ಪಾ. ಸೂ. ೪-೧-೨) ಎಂಬುದರಿಂದ ತೃತೀಯಾ ಏಕವಚನ ಟಾ ಪ್ರತ್ಯಯ. ತ್ವಮಾವೇಕವಚನೇ (ಪಾ. ಸೂ. ೭-೨-೯೭) ವಿಭಕ್ತಿಪರದಲ್ಲಿರುವಾಗ ಏಕತ್ವವಿಶಿಷ್ಟಾರ್ಥಪ್ರತಿಪಾದಕಗಳಾದ ಯುಷ್ಮದಸ್ಮಚ್ಛಬ್ದಗಳ ಮಪರ್ಯಂತಕ್ಕೆ ತ್ವ ಮ ಎಂಬ ಆದೇಶಗಳು ಕ್ರಮವಾಗಿ ಬರುವುವು ಎಂಬುದರಿಂದ ಯುಷ್ಮ್ ಎಂಬುದಕ್ಕೆ ತ್ವ ಆದೇಶ ಬಂದರೆ ತ್ವ+ಅದ್+ಆ ಅತೋಗುಣೇ (ಪಾ.ಸೂ. ೬-೧-೯೭) ಪದಾಂತವಲ್ಲದ ಅಹ್ರಸ್ವಾಕಾರದ ಮುಂದೆ ಗುಣಸಂಜ್ಞಕವರ್ಣ (ಅ ಎ ಓ) ಗಳಿದ್ದರೆ ಪೂರ್ವಪರಸ್ಥಾನಗಳಲ್ಲಿ ಪರರೂಪವು ಏಕಾದೇಶವಾಗಿ ಬರುವುದು ಎಂಬುದರಿಂದ ಪರರೂಪ ಬಂದರೆ ತ್ವದ್+ಆ. ಈ ಏಕಾದೇಶದಿಂದ ಬಂದ

ಅಕಾರವು ಏಕಾದೇಶ **ಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಎಂಬುದರಿಂದ ಉದಾತ್ತ. **ಯೋಽಚಿ** (ಪಾ. ಸೂ. ೭-೨-೮೯) ಆದೇಶವನ್ನು ಹೊಂದದೇ ಇರುವ ಅಜಾದಿಯಾದ ವಿಭಕ್ತಿ ಪರದಲ್ಲಿರುವಾಗ ಯುಷ್ಮದ್ ಅಸ್ಮದ್ ಶಬ್ದಗಳ ಕೊನೆಯ ವರ್ಣಕ್ಕೆ ಯಾದೇಶ ಬರುವುದು ಎಂಬುದರಿಂದ ದಕಾರಕ್ಕೆ ಯಾದೇಶ ಬಂದರೆ ತ್ವಯಾ ಎಂದಾಗುವುದು.

**ಯುಜಾ**--**ಋತ್ವಿಗ್ದಧೃಕ್ಸ್ರಗ್ದಿಗುಷ್ಣಿಗಞ್ಚುಯುಜಿಕ್ರುಞ್ಚಾಂಚ** (ಪಾ. ಸೂ. ೩-೨-೫೯) ಎಂಬುದರಿಂದ ಕ್ವಿನ್ ಪ್ರತ್ಯಯ. **ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಯು ಉದಾತ್ತ.

**ಸಾಸಹ್ಯಾಮ**—ಹೆಚ್ಚಾಗಿ ಸಹಿಸುವೆವು, ಪುನಃ ಪುನಃ ಸಹಿಸುವೆವು ಎಂದಾಗಲೀ ಅರ್ಥ. ಷಹಮರ್ಷಣೇ ಧಾತು. **ಧಾತ್ವಾದೇಃಷಃಸಃ** (ಪಾ ಸೂ. ೬-೧-೬೪) ಎಂಬುದರಿಂದ ಷಕಾರಕ್ಕೆ ಸಕಾರ **ಧಾತೋರೇಕಾಚೋ ಹಲಾದೇಃ ಕ್ರಿಯಾಸಮಭಿಹಾರೇಯಙ್** (ಪಾ.ಸೂ. ೩-೧-೨೨) ಪೌನಃಪುನ್ಯ ಅಥವಾ ಭೃಶಾರ್ಥದ್ಯೋತಿತವಾಗುವಾಗ ಹಲಾದಿಯಾಗಿಯೂ ಏಕಾಚ್ಕವಾಗಿಯೂ ಇರುವ ಧಾತುವಿನ ಮುಂದೆ ಯಙ್ ಬರುವುದು ಎಂಬುದರಿಂದ ಯಙ್ ಬರುವುದು. **ಯಙೋಽಚಿಚ** (ಪಾ. ಸೂ. ೨-೪-೭೪) ಅಚ್ ಪ್ರತ್ಯಯ ಪರದಲ್ಲಿದ್ದರೂ ಪರದಲ್ಲಿಲ್ಲದಿದ್ದರೂ ಯಙ್ಗೆ ಲುಕ್ ಬರುವುದು ಎಂಬುದರಿಂದ ಯಙ್ ಪ್ರತ್ಯಯಕ್ಕೆ ಲುಕ್= ಲೋಪ ಬರುವುದು. **ಸನ್ಯಙೋಃ** (ಪಾ ಸೂ. ೬ ೧-೯) ಸನ್ ಪ್ರತ್ಯಯಾಂತ ಮತ್ತು ಯಙ್ ಪ್ರತ್ಯಯಾಂತ ಧಾತುಗಳ ಮೊದಲನೇ ಏಕಾಚ್ಗೆ ದ್ವಿತ್ವ ಬರುವುದು. ಅಜಾದಿ ಧಾತುವಾಗಿದ್ದರೆ ದ್ವಿತೀಯವಾದ ಏಕಾಚ್ಗೆ ದ್ವಿತ್ವ ಬರುವುದು ಎಂಬುದರಿಂದ ದ್ವಿತ್ವ, ಸಹ್ ಸಹ್ ಎಂದಾಗುವುದು. **ಹಲಾದಿಃ ಶೇಷಃ** (ಪಾ. ಸೂ. ೭-೪-೬೦) ಎಂಬುದರಿಂದ ಮೊದಲನೆಯ ಸಹ್ ಎಂಬುದರ ಹಕಾರಕ್ಕೆ ಲೋಪ ಸಸಹ್ **ದೀರ್ಘೋಽಕಿತಃ** (ಪಾ. ಸೂ. ೭-೪-೮೩) ಯಙ್ ಪ್ರತ್ಯಯ ಪರದಲ್ಲಿದ್ದರೂ ಯಙ್ಗೆ ಲುಕ್ ಬಂದಿದ್ದರೂ ಕಿತ್ತಲ್ಲದ ಅಭ್ಯಾಸಕ್ಕೆ ದೀರ್ಘ ಬರುವುದು ಎಂಬುದರಿಂದ ದೀರ್ಘ ಸಾಸಹ್. ಇದರ ಮುಂದೆ ಪ್ರಾರ್ಥನೆ ಎಂಬ ಅರ್ಥವನ್ನು ವಿವಕ್ಷಿಸಿದಾಗ ಲಿಙ್ ಬರುವುದು. **ಚರ್ಕ-ರೀತಂ ಪರಸ್ಮೈಪದಂ ಅದಾದಿವಚ್ಚ ದ್ರಷ್ಟವ್ಯಂ** ಯಙ್ಲುಗಂತವು ಪರಸ್ಮೈಪದವಾಗಿಯೂ ಅದಾದಿಯಂತೆಯೂ ಆಗುವುದು ಎಂದು ಹೇಳಿರುವುದರಿಂದ ಯಙ್ ಲುಗಂತದ ಮುಂದಿರುವ ಲಕಾರದ ಸ್ಥಾನದಲ್ಲಿ ಪರಸ್ಮೈಪದ ಪ್ರತ್ಯಯ ಬರುವುದು. ಉತ್ತಮಪುರುಷ ಬಹುತ್ವವನ್ನು ವಿವಕ್ಷಿಸಿದಾಗ ಬಹುವಚನ ಮಸ್ ಬರುವುದು **ಕರ್ತರಿಶಪ್** (ಪಾ. ಸೂ. ೩-೧-೬೮) ಎಂಬುದರಿಂದ ಬಂದ ಶಪ್ ವಿಕರಣಕ್ಕೆ **ಅದಿಪ್ರಭೃತಿಭ್ಯಃಶಪಃ** (ಪಾ. ಸೂ. ೨-೪-೭೨) ಎಂಬುದರಿಂದ ಲುಕ್ ಬರುವುದು **ನಿತ್ಯಂಙಿತಃ** (ಪಾ. ಸೂ. ೩-೪-೯೯) ಙಿತ್ತಾದ ಲಕಾರಸ್ಥಾನದಲ್ಲಿ ಬಂದ ಸಕಾರಾಂತವಾದ ಉತ್ತಮಪುರುಷದ ಕೊನೆಯ ವರ್ಣಕ್ಕೆ ಲೋಪವು ನಿತ್ಯವಾಗಿ ಬರುವುದು ಎಂಬುದರಿಂದ ಮಸ್ಸಿನ ಸಕಾರಕ್ಕೆ ಲೋಪ. **ಯಾಸುಟ್ ಪರಸ್ಮೈಪದೇಷೂದಾತ್ತೋಙಿಚ್ಚ** (ಪಾ. ಸೂ. ೩-೪-೧೦೩) ಎಂಬುದರಿಂದ ಮ ಎಂಬುದಕ್ಕೆ ಯಾಸುಡಾಗಮ. **ಲಿಙಸ್ಸಲೋಪೋಽನಂತ್ಯಸ್ಯ** ( ಪಾ. ಸೂ. ೭-೨-೭೯ ) ಎಂಬುದರಿಂದ ಯಾಸುಟ್ಟಿನ ಸಕಾರಕ್ಕೆ ಲೋಪ. ಸಾಸಹ್ಯಾಮ ಎಂದಾಗುವುದು. ಸತಿಶಿಷ್ಟವಾದ್ದರಿಂದ ಯಾಸುಟ್ಟಿನ ಉದಾತ್ತಸ್ವರವೇ ನಿಲ್ಲುವುದು. ಪಾದದ ಆದಿಯಲ್ಲಿರುವುದರಿಂದ **ತಿಙ್ಙತಿಙಃ** (ಪಾ ಸೂ. ೮-೧-೨೮) ಎಂಬುದರಿಂದ ಅನುದಾತ್ತ ಬರುವುದಿಲ್ಲ.

**ಪೃತನ್ಯತಃ**—**ಯೋದ್ಧುಂ ಪೃತನಾಂ ಆತ್ಮನ ಇಚ್ಛಂತಃ** ಯುದ್ಧಮಾಡಲು ಸೈನ್ಯವನ್ನು ತಮಗೆ ಅಪೇಕ್ಷಿಸುವವರು **ಸುಪಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಪೃತನಾಮ್ ಎಂಬುದರ ಮುಂದೆ

ಕ್ಯಚ್ ಬರುವುದು **ಸನಾದ್ಯಂತಾಧಾತವಃ** (ಪಾ. ಸೂ. ೩.೧-೩೨) ಎಂಬುದರಿಂದ ಧಾತುಸಂಜ್ಞೆ ಬಂದರೆ **ಸುಪೋಧಾತುಪ್ರಾತಿಪದಿಕಯೋಃ** (ಪಾ. ಸೂ. ೨-೪-೭೧) ಧಾತು ಪ್ರಾತಿಪದಿಕಗಳ ಅವಯುವವಾದ ಸುಪ್ಪಿಗೆ ಲುಕ್ ಬರುವುದು ಎಂಬುದರಿಂದ ಧಾತ್ವವಯುವವಾದ ಅಮ್ ಎಂಬ ಸುಪ್ಪಿಗೆ ಲುಕ್ ಬರುವುದು. ಪೃತನಾ+ಯ ಎಂದಿರುವುದು. ಈಗ **ಕವ್ಯಧ್ವರಪೃತನಸ್ಯರ್ಚಿಲೋಪಃ** (ಪಾ. ಸೂ. ೭-೪-೩೯) **ಕ್ಯಚಿಚ** (ಪಾ. ಸೂ. ೭-೪-೩೩) ಎಂಬ ಸೂತ್ರವು ಈ ಸೂತ್ರದಲ್ಲಿ ಸಂಬಂಧಿಸುವುದು. ಋಕ್ಕಿನಲ್ಲಿ ಕ್ಯಚ್ ಪ್ರತ್ಯಯ ಪರದಲ್ಲಿರುವಾಗ ಕವಿ, ಅಧ್ವರ ಪೃತನಾ ಶಬ್ದಗಳ ಕೊನೆಯ ವರ್ಣಕ್ಕೆ ಲೋಪಬರುವುದು ಎಂಬುದರಿಂದ ಪೃತನಾ ಶಬ್ದದ ಆಕಾರಕ್ಕೆ ಲೋಪ. ಪೃತನ್ಯ. ಇದು ಚಿತಃ ಎಂಬುದರಿಂದ ಅಂತೋದಾತ್ತ. ಪೃತನ್ಯ ಎಂಬ ಧಾತುವಿನ ಮುಂದೆ ಲಟ್ಟನ್ನಿಟ್ಟರೆ **ಲಟಶ್ಶತೃಶಾನಚೌ** (ಪಾ. ಸೂ. ೩-೨-೧೨೪) ಎಂಬುದರಿಂದ ಲಟ್ಟಿಗೆ ಶತೃ ಆದೇಶ ಬರುವುದು. **ಕರ್ತರಿಶಪ್** (ಪಾ. ಸೂ. ೩-೧-೬೮) ಎಂಬುದರಿಂದ ವಿಕರಣ ಶಪ್ ಬರುವುದು. ಶಪ್ಪು ಪಿತ್ತಾದ್ದರಿಂದ ಅನುದಾತ್ತ, ಶತೃ ಪ್ರತ್ಯಯವು **ತಾಸ್ಯನುದಾತೇತ್** (ಪಾ. ಸೂ. ೬-೧-೧೮೬) ಎಂಬ ಸೂತ್ರಾನುಸಾರ ಅದುಪದೇಶದ ಮುಂದೆ ಇರುವುದರಿಂದ ಅನುದಾತ್ತ. ಪೃತನ್ಯ+ಅ+ಅತ್ ಎಂದಿದ್ದರೆ **ಅತೋಗುಣೇ** (ಪಾ. ಸೂ. ೬-೧-೯೭) ಎಂಬುದರಿಂದ ಎರಡಾವರ್ತಿ ಪರರೂಪ ಬರುವುದು. ಏಕಾದೇಶವು **ಏಕಾದೇಶ ಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಎಂಬುದರಿಂದ ಉದಾತ್ತ. ಈರೀತಿಯಲ್ಲಿ ಪೃತನ್ಯತ್ ಎಂಬುದು ಅಂತೋದಾತ್ತ. ಇದರ ಮುಂದೆ ದ್ವಿತೀಯಾ ಬಹುವಚನ ಶಸ್ ಪ್ರತ್ಯಯವನ್ನಿಟ್ಟರೆ ಅದು **ಅನುದಾತ್ತೌಸುಪ್ಪಿತೌ** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತ. ಅದಕ್ಕೆ **ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭೩) **ಅನ್ತೋದಾತ್ತಾದುತ್ತರಪದಾದನ್ಯತರಸ್ಯಾಮನಿತ್ಯಸಮಾಸೇ** (ಪಾ. ಸೂ. ೬-೧-೧೬೯) ಎಂಬುದರಿಂದ ಅಂತೋದಾತ್ತಾತ್ ಎಂಬ ಪದವು ಅನುವೃತ್ತವಾಗುವುದು. ನುಮಾಗಮವನ್ನು ಹೊಂದದೇ ಇರುವ ಯಾವ ಶತೃ ಪ್ರತ್ಯಯವಿದೆಯೋ ಅದನ್ನು ಕೊನೆಯಲ್ಲಿ ಹೊಂದಿರುವ ಅಂತೋದಾತ್ತವಾದ ಶಬ್ದದ ಮುಂದಿರುವ ನದೀಸಂಜ್ಞಕವರ್ಣವೂ ಅಜಾದಿಯಾದ ಶಸಾದಿ ವಿಭಕ್ತಿಯೂ ಸಹ ಉದಾತ್ತವಾಗುವುದು ಎಂಬುದರಿಂದ ಶಸ್ ಪ್ರತ್ಯಯವು ಉದಾತ್ತವಾಗುವದು ॥ ೪ ॥

॥ ಸಂಹಿತಾಪಾಠಃ ॥

ಮ॒ಹಾँ ಇಂದ್ರಃ॑ ಪ॒ರಶ್ಚ॒ ನು ಮ॑ಹಿ॒ತ್ವಮ॑ಸ್ತು ವ॒ಜ್ರಿಣೇ॑ ।
ದ್ಯೌರ್ನ ಪ್ರ॑ಥಿ॒ನಾ ಶವಃ॑ ॥ ೫ ॥

॥ ಪದಪಾಠಃ ॥

ಮ॒ಹಾನ್ । ಇಂದ್ರಃ॑ । ಪ॒ರಃ । ಚ॒ । ನು । ಮ॒ಹಿ॒ऽತ್ವಂ । ಅ॒ಸ್ತು॒ । ವ॒ಜ್ರಿಣೇ॑ ॥
ದ್ಯೌಃ । ನ । ಪ್ರ॒ಥಿ॒ನಾ । ಶವಃ॑ ॥ ೫ ॥

|| ಸಾಯಣಭಾಷ್ಯಂ ||

ಅಯಮಿಂದ್ರೋ ಮಹಾನ್ ಶರೀರೇಣ ಪ್ರೌಢಃ ಪರಶ್ಚ ಗುಣೈರುತ್ಕೃಷ್ಟೋಽಪಿ । ನು ಕಿಂಚ ವಜ್ರಿಣೇ ವಜ್ರಯುಕ್ತಾಯೇಂದ್ರಾಯ ಮಹಿತ್ವಂ ಪೂರ್ವೋಕ್ತಂ ದ್ವಿವಿಧಮಾಧಿಕ್ಯಂ ಸರ್ವದಾಸ್ತು । ಸ್ವಭಾವಸಿದ್ಧಸ್ಯಾಪಿ ಭಕ್ತ್ಯಾ ಪ್ರಾರ್ಥನಮೇತತ್ । ಕಿಂಚ । ದ್ಯೌರ್ನ ದ್ಯುಲೋಕ ಇವ ಶವೋ ಬಲಮಿಂದ್ರಸ್ಯ ಸೇನಾರೂಪಂ ಪ್ರಥಿನಾ ಪ್ರಥಿಮ್ನಾ ಪೃಥುತ್ವೇನ ಯುಜ್ಯತಾಮಿತಿ ಶೇಷಃ । ಯಥಾ ದ್ಯುಲೋಕಃ ಪ್ರಭೂತ ಏವಮಸ್ಯ ಸೇನಾ ಪ್ರಭೂತಾ । ನುಶಬ್ದೋ ಯದ್ಯಪಿ ಕ್ಷಿಪ್ರನಾಮಸು ನು ಮಕ್ಷ್ವಿತಿ ಪಠಿತಸ್ತಥಾಪ್ಯತ್ರ ತಸ್ಯಾನ್ವಯಾಭಾವಾನ್ನಿಪಾತತ್ವೇನಾನೇಕಾರ್ಥತ್ವಸಂಭವಾಚ್ಚ ಸಮುಚ್ಚಯಾರ್ಥೋಽತ್ರ ಗೃಹೀತಃ । ನುಶಬ್ದೋ ಲೋಕೇ ಪ್ರತಿಷೇಧಾರ್ಥ ಏವ । ಸ್ವಾಧ್ಯಾಯೇ ತು ಪ್ರತಿಷೇಧಾರ್ಥ ಉಪಮಾನಾರ್ಥಶ್ಚೇತಿ ದ್ವಿವಿಧಃ । ಯೇನ ಪದೇನಾನ್ವೀಯತೇ ತಸ್ಮಾತ್ಪೂರ್ವಂ ಪ್ರಯುಜ್ಯಮಾನಃ ಪ್ರತಿಷೇಧಾರ್ಥ ಉಪರಿಷ್ಟಾತ್ಪ್ರಯುಜ್ಯಮಾನ ಉಪಮಾರ್ಥಃ । ತಥಾ ಚ ಯಾಸ್ಕ ಉದಾಹರತಿ । ಉಭಯಮನ್ವಧ್ಯಾಯಂ ನೇಂದ್ರಂ ದೇವಮಮಂಸತೇತಿ ಪ್ರತಿಷೇಧಾರ್ಥೀಯಃ ಪುರಸ್ತಾದುಪಾಚಾರಸ್ತಸ್ಯ ಯತ್ಪ್ರತಿಷೇಧತಿ । ದುರ್ಮದಾಸೋ ನ ಸುರಾಯಾಮಿತ್ಯುಪಮಾರ್ಥೀಯ ಉಪರಿಷ್ಟಾದುಪಾಚಾರಸ್ತಸ್ಯ ಯೇನೋಪಮಿಮೀತೇ । ನಿ. ೧-೪ । ಇತಿ । ಅತ್ರೋಪಮೇಯವಾಚಿನೋ ದ್ಯುಶಬ್ದಸ್ಯಾಪಿ ಪ್ರಯುಕ್ತತ್ವಾದುಪಮಾರ್ಥಃ ಸ್ವೀಕೃತಃ । ಅಷ್ಟಾವಿಂಶತಿಸಂಖ್ಯಾಕೇಷು ಬಲನಾಮಸ್ವೋಜಃ ಪಾಜಃ ಶವ ಇತಿ ಪಠಿತಂ । ಮಹಾನಿತಿ ನಕಾರಸ್ಯ ಸಂಹಿತಾಯಾಂ ದೀರ್ಘಾದಟಿ ಸಮಾನಪಾದೇ । ಪಾ. ೮-೩-೯ । ಇತಿ ರುತ್ವಂ । ಆತೋಽಟಿ ನಿತ್ಯಂ । ಪಾ. ೮-೩-೩ । ಇತಿ ಪೂರ್ವಸ್ಯಾಕಾರಸ್ಯಾನುನಾಸಿಕಃ । ಭೋಭಗೋಅಘೋಅಪೂರ್ವಸ್ಯ ಯೋಽಶಿ । ಪಾ. ೮- -೧೭ । ಇತಿ ಯಕಾರಃ । ತಸ್ಯ ಲೋಪಃ । ಪಾ. ೮-೩-೧೯ । ತಸ್ಯಾಸಿದ್ಧತ್ವಾತ್ । ಪಾ. ೮-೨-೧ । ಸ್ವರಸಂಧಿರ್ನ ಭವತಿ । ಮಹೇರಿನ್ । ಉ. ೪-೧೧೭ । ಇತ್ಯೌಣಾದಿಕ ಇನ್ । ಮಹೇರ್ಭಾವೋ ಮಹಿತ್ವಂ । ತ್ವ ಇತಿ ಪ್ರತ್ಯಯಸ್ವರೇಣೋದಾತ್ತಃ । ಸ ಏವ ಶಿಷ್ಯತೇ । ವಜ್ರಿಣೇ । ಇಕಾರಃ ಪ್ರತ್ಯಯಸ್ವರೇಣೋದಾತ್ತಃ । ದ್ಯೌಃ । ದ್ಯೋಶಬ್ದಃ ಪ್ರಾತಿಪದಿಕಸ್ವರೇಣಾಂತೋದಾತ್ತಃ । ಗೋತೋ ಣಿತ್ । ಪಾ. ೭-೧-೯೦ । ಇತಿ ವಿಭಕ್ತೇರ್ಣಿತ್ತ್ವಾದಚೋ ಞ್ಣಿತಿ । ಪಾ ೭-೨-೧೧೫ । ಇತಿ ವೃದ್ಧಿರಾಂತರತಮ್ಯಾದುದಾತ್ತೈವ ಭವತಿ । ಪ್ರಥಿನಾ । ಪ್ರಥಿಮ್ನಾ । ಪೃಥೋರ್ಭಾವ ಇತ್ಯರ್ಥೇ ಪೃಥ್ವಾದಿಭ್ಯ ಇಮನಿಜ್ವಾ । ಪಾ. ೫-೧-೧೨೨ । ಇತೀಮನಿಚ್ । ರ ಋತೋ ಹಲಾದೇರ್ಲಘೋಃ । ಪಾ. ೬-೪-೧೬೧ । ಇತಿ ಋಕಾರಸ್ಯ ರಭಾವಃ । ತುರಿಷ್ಠೇಮೇಯಃಸು । ಪಾ. ೬-೪-೧೫೪ । ಇತ್ಯನುವೃತ್ತೌ ಟೇಃ । ಪಾ. ೬-೪-೧೫೫ । ಇತಿ ಟಿಲೋಪಃ । ಪ್ರಥಿಮನ್ಶಬ್ದಶ್ಚಿತ್ತ್ವಾದಂತೋದಾತ್ತಃ । ತೃತೀಯೈಕವಚನೇ ಭತ್ವಾದಲ್ಲೋಪೋಽನಃ । ಪಾ. ೬-೪ ೧೩೪ । ಇತ್ಯಕಾರಲೋಪಃ । ಛಾಂದಸೋ ಮಕಾರಲೋಪಃ । ಅನುದಾತ್ತಸ್ಯ ಚ ಯತ್ರೋದಾತ್ತಲೋಪ ಇತಿ ವಿಭಕ್ತೇರುದಾತ್ತತ್ವಂ । ಶವಃ । ನಬ್ವಿಷಯಸ್ಯಾನಿಸಂತಸ್ಯೇತ್ಯಾದ್ಯುದಾತ್ತತ್ವಂ ।। ೫ ।।

|| ಪ್ರತಿಪದಾರ್ಥ ||

ಇಂದ್ರಃ—ಇಂದ್ರನು । ಮಹಾನ್—ದೊಡ್ಡವನು । ಪರಶ್ಚ—ಗುಣಗಳಿಂದ ಉತ್ಕೃಷ್ಟನು । ನು—ಮತ್ತು । ವಜ್ರಿಣೇ—ವಜ್ರಾಯುಧಸಹಿತನಾದ ಇಂದ್ರನಿಗೆ । ಮಹಿತ್ವಂ—(ಈ ಎರಡು ವಿಧವಾದ) ಗುಣಾಧಿಕ್ಯವು । ಅಸ್ತು—ಆಗಲಿ (ಇರಲಿ) । (ಏಕಂದರೆ) ಶವಃ—ಇಂದ್ರನ (ಸೇನಾರೂಪವಾದ) ಬಲವು । ದ್ಯೌರ್ನ—ಸ್ವರ್ಗಲೋಕದಂತೆ । ಪ್ರಥಿನಾ—ಅತಿವಿಸ್ತಾರವಾಗಿರುವುದು (ಬಹು ಹೆಚ್ಚಾಗಿರುವುದು) ।।

॥ ಭಾವಾರ್ಥ ॥

ಇಂದ್ರನು ಶರೀರದಲ್ಲಿ (ಗಾತ್ರದಲ್ಲಿ) ಮಾತ್ರವೇ ದೊಡ್ಡವನಲ್ಲ, ಗುಣದಲ್ಲಿಯೂ ಶ್ರೇಷ್ಠನು. ಇಂತಹ ಗುಣಾಧಿಕ್ಯವು ವಜ್ರಾಯುಧೋಪೇತನಾದ ಇಂದ್ರನಿಗೆ ಸಹಜವಾಗಿ ಸಲ್ಲುವುದು. ಏಕೆಂದರೆ ಇಂದ್ರನ ಸೇನಾರೂಪವಾದ ಬಲವು (ಅಥವಾ ಸಾಮರ್ಥ್ಯವು) ಸ್ವರ್ಗಲೋಕದಂತೆ ಎಂದರೆ ವಿಶಾಲವಾದ ಅಂತರಿಕ್ಷದಂತೆ (ಆಕಾಶದಂತೆ) ಬಹು ಹೆಚ್ಚಾಗಿರುವುದು.

## English Translation

Great is Indra and Supreme. May greatness be ever for the weilder of the thunderbolt ; May his strength (of the army) be ever vast as the heavens.

॥ ವಿಶೇಷವಿಷಯಗಳು ॥

ನು--ನುಶಬ್ದೋ ಯದ್ಯಪಿ ಕ್ಷಿಪ್ರನಾಮಸು ಪಠಿತಸ್ತಥಾಪ್ಯತ್ರ ತಸ್ಯಾನ್ವಯಾಭಾವಾನ್ನಿಪಾತತ್ವೇನಾನೇಕಾರ್ಥತ್ವಸಂಭವಾಚ್ಚ ಸಮುಚ್ಚಯಾರ್ಥೋऽತ್ರ ಗೃಹೀತಃ--ಎಂದರೆ ನುಶಬ್ದವು ಕ್ಷಿಪ್ರ (ಶೀಘ್ರ) ಮೊದಲಾದ ಶಬ್ದಗಳ ಮಧ್ಯದಲ್ಲಿ ಪಠಿತವಾಗಿ ಇದಕ್ಕೆ ಜಾಗ್ರತೆಯಾಗಿ ಎಂಬರ್ಥವಿದ್ದರೂ ಇಲ್ಲಿ ಆ ಅರ್ಥವು ಹೊಂದುವುದಿಲ್ಲವಾದ್ದರಿಂದಲೂ ಅವ್ಯಯಗಳಿಗೆ ಅನೇಕಾರ್ಥವಿರುವುದರಿಂದಲೂ ಇಲ್ಲಿ ನು ಶಬ್ದಕ್ಕೆ ಸಮುಚ್ಚಯಾರ್ಥ ಎಂದರೆ ಮತ್ತು ಎಂಬ ಅರ್ಥವನ್ನು ಹೇಳುವುದು ಯುಕ್ತವೆಂದು ಭಾಷ್ಯಕಾರರು ಅಭಿಪ್ರಾಯಪಡುವರು.

ಮಹಿತ್ವಮಸ್ತು ವಜ್ರಿಣೇ--ಇಂದ್ರನ ಗುಣಗಳು ಸ್ವಭಾವಸಿದ್ಧವಾಗಿ ಅತಿಶಯವಾಗಿದ್ದರೂ ಅವನ ಗುಣಗಳು ಹೆಚ್ಚು ಮಹಿಮೆಯಿಂದ ಪ್ರಕಾಶಿಸಲಿ ಎಂದು ಕವಿಯು ಹೇಳಿರುವುದು ಭಕ್ತಿಯಿಂದ ಮಾಡಿದ ಪ್ರಾರ್ಥನಾರೂಪವಾಗಿರುವುದು.

ದ್ಯೌಃ--ದ್ಯೌಃ ಎಂದರೆ ಸ್ವರ್ಗವು, ಅಂತರಿಕ್ಷಲೋಕವು. ಅಂತರಿಕ್ಷವು (ಆಕಾಶವು) ನಮ್ಮ ಕಣ್ಣಿಗೆ ಕಾಣುವವರೆಗೂ ಅಲ್ಲಿಂದ ಮುಂದಕ್ಕೂ ಅತಿ ವಿಸ್ತಾರವಾಗಿ ಪ್ರಸರಿಸಿರುವುದೆಂದು ಎಲ್ಲರಿಗೂ ತಿಳಿದಿರುವುದು. ಆದುದರಿಂದಲೇ ಅತಿ ದೊಡ್ಡದಾದ ವಸ್ತುವಿನ ಹೋಲಿಕೆಯನ್ನು ಕೊಡುವಾಗ ಕವಿಯು ಅಂತರಿಕ್ಷ (ಆಕಾಶ)ದ ಉಪಮಾನವನ್ನು ಕೊಟ್ಟಿರುವನು.

ನ—ಆಧುನಿಕಸಂಸ್ಕೃತದಲ್ಲಿ ನ ಎಂಬ ಶಬ್ದವು ಪ್ರತಿಷೇಧಾರ್ಥಕವಾಚಕವಾಗಿದ್ದರೂ (ನ=ಇಲ್ಲ) ಋಗ್ವೇದದಲ್ಲಿ ಸ್ವಾಧ್ಯಾಯೇ ತು ಪ್ರತಿಷೇಧಾರ್ಥ ಉಪಮಾನಾರ್ಥಶ್ಚೇತಿ ದ್ವಿವಿಧಃ—ಪ್ರತಿಷೇಧಾರ್ಥ ಮತ್ತು ಉಪಮಾನಾರ್ಥ ಇವೆರಡರಲ್ಲಿಯೂ ನ ಎಂಬ ಶಬ್ದಪ್ರಯೋಗವಿರುವುದು. ನ ಎಂದರೆ ಇವ, ದ್ಯೌರ್ನ=ಆಕಾಶದಂತೆ. ಇಂತಹ ಪ್ರಯೋಗಗಳು ಋಗ್ವೇದದಲ್ಲಿ ಬೇಕಾದಷ್ಟಿವೆ. ಈ ಪದಪ್ರಯೋಗದಲ್ಲಿ ಒಂದು ವಿಶೇಷವುಂಟು. ಯೇನ ಪದೇನಾನ್ವೀಯತೇ ತಸ್ಮಾತ್ಪೂರ್ವಂ ಪ್ರಯುಜ್ಯಮಾನಃ ಪ್ರತಿಷೇಧಾರ್ಥ ಉಪರಿಷ್ಟಾತ್ಪ್ರಯುಜ್ಯಮಾನ ಉಪಮಾರ್ಥಃ ಎಂದು ಭಾಷ್ಯಕಾರರು ಹೇಳಿರುವರು. ಎಂದರೆ ಸಂಬಂಧಪಟ್ಟ ಪದಕ್ಕೆ ಪೂರ್ವಭಾವಿಯಾಗಿ ನ ಶಬ್ದದ ಪ್ರಯೋಗವಿದ್ದರೆ ಅಲ್ಲಿ ಪ್ರತಿಷೇಧಾರ್ಥವಾಚಕವೆಂದೂ ಸಂಬಂಧಪಟ್ಟ ಪದದ

ಅನಂತರ ಎಂದರೆ ಪದದ ಮುಂದೆ ನ ಶಬ್ದಪ್ರಯೋಗವಿದ್ದರೆ ಅಲ್ಲಿ ಉಪಮಾರ್ಥವಾಚಕವೆಂದೂ ತಿಳಿಯಬೇಕು ಉದಾಹರಣೆ—

**ನ ಯಸ್ಯ ದ್ಯಾವಾಪೃಥಿವೀ ಅನು ವ್ಯಚೋ ನ ಸಿಂಧವೋ ರಜಸೋ ಅಂತಮಾನಶುಃ ।**

(ಋ ಸಂ. ೧-೫೨-೧೪)

ಇಲ್ಲಿ ನ ಎಂಬ ಶಬ್ದವು ಸಂಬಂಧಪಟ್ಟ **ದ್ಯಾವಾಪೃಥಿವೀ** ಮತ್ತು **ಸಿಂಧವಃ** ಎಂಬ ಶಬ್ದಗಳ **ಪೂರ್ವಭಾವಿಯಾಗಿ** ಪಠಿತವಾಗಿರುವುದರಿಂದ ನ ಶಬ್ದವು ಪ್ರತಿಷೇಧಾರ್ಥವಾಚಕವಾಗಿರುವುದು.

**ನ ಸ ಸಖಾ ಯೋ ನ ದದಾತಿ ಸಖ್ಯೇ ಸಚಾಭುವೇ ಸಚಮಾನಾಯ ಪಿತ್ವಃ ॥**

(ಋ. ಸಂ, ೧೦-೧೧೭-೪)

ಇಲ್ಲಿ ಸಂಬಂಧಪಟ್ಟ ಸಖಾ ಮತ್ತು ದದಾತಿ ಎಂಬ ಪದಗಳಿಗೆ ನ ಶಬ್ದವು ಪೂರ್ವಭಾವಿಯಾಗಿ ಪ್ರಯೋಗಿಲ್ಪಟ್ಟಿರುವುದರಿಂದ ನಶಬ್ದವು ಪ್ರತಿಷೇಧಾರ್ಥವಾಚಕವು

**ಮಾ ವೋ ಮೃಗೋ ನ ಯವಸೇ ಜರಿತಾ ಭೂದಜೋಷ್ಯಃ ॥**

(ಋ. ಸಂ. ೧-೩೮-೫)

**ವಾಶ್ರೇವ ವಿದ್ಯುನ್ಮಿಮಾತಿ ವತ್ಸಂ ನ ಮಾತಾ ಸಿಷಕ್ತಿ ॥**

(ಋ. ಸಂ. ೧-೩೮-೮)

ಈ ಋಕ್ಕುಗಳಲ್ಲಿ ನ ಎಂಬ ಶಬ್ದವು ಸಂಬಂಧಪಟ್ಟ ಮೃಗಃ ಮತ್ತು ವತ್ಸಂ ಎಂಬ ಶಬ್ದಗಳ ಅನಂತರ (ಮುಂದೆ) ಇರುವುದರಿಂದ ನ ಶಬ್ದಕ್ಕೆ ಇಲ್ಲಿ ಉಪಮಾರ್ಥವಿರುವುದು.

**ಶವಃ**— ಈ ಶಬ್ದವು ಅಣಃ ಕ್ಷೋದಃ ಮೊದಲಾದ ಉದಕವಾಚಕಪದಗಳ ಮಧ್ಯದಲ್ಲಿ ಪಠಿತವಾಗಿ ಉದಕವೆಂಬ ಅರ್ಥವಿದ್ದರೂ (ನಿ. ೨-೨೪) ಓಜಃ ಪಾಜ ಮೊದಲಾದ ಇಪ್ಪತ್ತೆಂಟು ಬಲವಾಚಕಪದಗಳ ಮಧ್ಯದಲ್ಲಿ ಶವಃ ಶಬ್ದವು ಪಠಿತವಾಗಿರುವುದರಿಂದ (ನಿ. ೩-೯) ಈ ಋಕ್ಕಿನಲ್ಲಿ ಈ ಅರ್ಥವನ್ನೇ ಹೇಳಬೇಕು.

॥ ವ್ಯಾಕರಣಪ್ರಕ್ರಿಯಾ ॥

**ಮಹಾನ್**— ಈ ಶಬ್ದದ ನಕಾರಕ್ಕೆ ಸಂಹಿತಾಕಾಲದಲ್ಲಿ **ದೀರ್ಘಾದಟಿಸಮಾನಪಾದೇ** (ಪಾ ಸೂ. ೮-೩-೯) ನಕಾರ-ಅಟ್ಪ್ರತ್ಯಾಹಾರದಲ್ಲಿರುವ ವರ್ಣ ಇವುಗಳು ಒಂದೇ ಪಾದದಲ್ಲಿದ್ದರೆ, ಆ ಅಟ್ಟಿನ ಹಿಂದಿರುವುದಾಗಿಯೂ ದೀರ್ಘದ ಮುಂದಿರುವದಾಗಿಯೂ ಇರುವ ಆ ನಕಾರಕ್ಕೆ ರು ಆದೇಶ ಬರುವದು ಎಂಬುದರಿಂದ ರು ಆದೇಶ ಬಂದರೆ ಮಹಾ+ರು+ಇಂದ್ರ **ಅತೋಽಟಿನಿತ್ಯಂ** (ಪಾ.ಸೂ. ೮-೩-೩) ಅಟ್ವರ್ಣದ ಹಿಂದಿರುವ ರು ವಿನ ಹಿಂದೆ ಇರುವ ದೀರ್ಘಾಕಾರಕ್ಕೆ ಅನುನಾಸಿಕವು ನಿತ್ಯವಾಗಿಬರುವದು ಎಂಬುದರಿಂದ ಅನುನಾಸಿಕ ಬಂದರೆ, ಮಹಾँ+ರು+ಇನ್ದ್ರ **ಭೋಭಗೋ ಅಘೋ ಅಪೂರ್ವಸ್ಯಯೋಽಶಿ** (ಪಾ. ಸೂ. ೮-೩-೧೭) ಭೋ, ಭಗೋ ಅಘೋ, ಅವರ್ಣ ಇವುಗಳ ಮುಂದೆ ಇರುವ ರುಗೆ ಅಶ್ವರ್ಣ ಪರದಲ್ಲಿದ್ದರೆ ಯಾದೇಶ ಬರುವದು ಎಂಬುದರಿಂದ ಯಾದೇಶ ಬಂದರೆ ಮಹಾಯ್ ಇಂದ್ರಃ **ಲೋಪಶ್ಶಾಕಲ್ಯಸ್ಯ** (ಪಾ. ಸೂ. ೮-೩-೧೯) ಅವರ್ಣಪೂರ್ವಕವಾದ ಪದದ ಕೊನೆಯಲ್ಲಿರುವ ಯಕಾರವಕಾರಗಳಿಗೆ ಅಶ್ ವರ್ಣ ಪರದಲ್ಲಿದ್ದರೆ ವಿಕಲ್ಪವಾಗಿ ಲೋಪಬರುವದು ಎಂಬುದ

ರಿಂದಯಕಾರಕ್ಕೆ ಲೋಪ ಬಂದರೆ ಮಹಾ ಇನ್ದ್ರಃ. ಈಗ **ಆದ್ಗುಣಃ** (ಪಾ ಸೂ. ೬-೧-೮೭) ಅವರ್ಣದ ಮುಂದೆ ಇ, ಉ, ಋ, ಲೃ, ಇವುಗಳು ಪರದಲ್ಲಿದ್ದರೆ ಪೂರ್ವಪರಸ್ಥಾನಗಳಲ್ಲಿ ಗುಣವು ಏಕಾದೇಶವಾಗಿ ಬರುವದು ಎಂಬುದರಿಂದ ಗುಣಸಂಧಿಯು ಯದ್ಯಪಿ ಪ್ರಾಪ್ತವಾಗುವದು ಆದರೂ **ಪೂರ್ವತ್ರಾಸಿದ್ಧಮ್** (ಪಾ ಸೂ. ೮-೨-೧) ಸಪಾದಸಪ್ತಾಧ್ಯಾಯದಲ್ಲಿರುವ (ಏಳು ಅಧ್ಯಾಯ ೧ ಪಾದ) ಕಾರ್ಯವನ್ನು ಮಾಡುವಾಗ (ಮೂರು ಪಾದದಲ್ಲಿ) ತ್ರಿಪಾದಿಯಲ್ಲಿ ವಿಹಿತವಾದ ಕಾರ್ಯವು (ಶಾಸ್ತ್ರ) ಅಸಿದ್ಧವಾಗುವದು ಎಂಬುದರಿಂದ ಆರನೇ ಅಧ್ಯಾಯದಲ್ಲಿ ವಿಹಿತವಾದ **ಆದ್ಗುಣಃ** (ಪಾ. ಸೂ. ೬-೧-೮೭) ಎಂಬುದರಿಂದ ಗುಣವನ್ನು ಮಾಡುವಾಗ ತ್ರಿಪಾದಿಯಲ್ಲಿರುವ **ಲೋಪಶ್ಶಾಕಲ್ಯಸ್ಯ** (ಪಾ. ಸೂ. ೮-೩-೧೯) ಎಂಬುದರಿಂದ ಬಂದ ಯ ಲೋಪವು ಅಸಿದ್ಧವಾಗುವದು. ಆದ್ದರಿಂದ ಯಕಾರದಿಂದ ವ್ಯವಧಾನ ಬರುವದು ಆದಕಾರಣ ಸ್ವರಸಂಧಿಗೆ ಸೇರಿದ ಗುಣಸಂಧಿ ಬರುವದಿಲ್ಲ.

**ಮಹಿತ್ವಂ**— ಮಹ ಪೂಜಾಯಾಂ ಎಂಬ ಧಾತುವಿನ ಮುಂದೆ **ಇನ್** (ಉ ಸೂ ೩-೫೩೭) ಎಂಬ ಉಣಾದಿಸೂತ್ರದಿಂದ ಇನ್ ಪ್ರತ್ಯಯ **ತಸ್ಯಭಾವಸ್ತ್ವತಲೌ** (ಪಾ. ಸೂ. ೫-೧-೧೧೯) ಎಂಬುದರಿಂದ ತ್ವ ಪ್ರತ್ಯಯ ಬಂದರೆ ಮಹಿತ್ವಂ ಎಂದಾಗುವದು. ತ್ವ ಎಂಬುದು ಪ್ರತ್ಯಯಸ್ವರದಿಂದ ಅಂತೋದಾತ್ತ. ಅದೇ ನಿಲ್ಲುವುದು.

**ವಜ್ರಿಣೇ**— ವಜ್ರಂ ಅಸ್ಯ ಅಸ್ತಿ ಇತಿ ವಜ್ರೀ ತಸ್ಮೈ ಎಂದು ವಿಗ್ರಹ. **ಅತಇನಿಠನೌ** (ಪಾ. ಸೂ. ೫-೨-೧೧೫) ಎಂಬುದರಿಂದ ಇನಿ ಪ್ರತ್ಯಯ ಇಕಾರವು ಪ್ರತ್ಯಯಸ್ವರದಿಂದ ಅಂತೋದಾತ್ತ.

ದ್ಯೌಃ— ದ್ಯೋ ಶಬ್ದವು 'ಫಿಷಃ' (ಫಿ. ಸೂ. ೧) ಎಂಬುದರಿಂದ ಅಂತೋದಾತ್ತ, ದ್ಯೋ ಶಬ್ದದ ಮುಂದೆ ಪ್ರಥಮಾ ಏಕವಚನ ಸು ಪ್ರತ್ಯಯವನ್ನಿಟ್ಟರೆ **ಗೋತೋಣಿತ್** (ಪಾ. ಸೂ. ೭-೧-೯೦) ಗೋ ಶಬ್ದದ ಮುಂದೆ ಇರುವ ಸರ್ವನಾಮಸ್ಥಾನ ಪ್ರತ್ಯಯವು ಣಿತ್ತಿನಂತೆ ಆಗುವುದು. ಇಲ್ಲಿ **ಓತೋಣಿದಿತಿವಾಚ್ಯಮ್** ಎಂದು ವಾರ್ತಿಕವಿರುವುದು. ಓಕಾರಾಂತವಾದ ಶಬ್ದದ ಮುಂದೆ ವಿಹಿತವಾಗಿರುವ ಸರ್ವನಾಮಸ್ಥಾನವು ಣಿತ್ತಿನಂತೆ ಆಗುವುದು ಎಂದು ಇದರ ಅರ್ಥ. ಗೋತೋಣಿತ್ ಎಂಬಲ್ಲಿ ಗೋತಃ ಎಂಬುದನ್ನು ತೆಗೆದುಹಾಕಿ ಓತಃ ಎಂಬುದನ್ನು ಸೇರಿಸಿ, ಓತೋಣಿತ್ ಎಂದು ಹೇಳಬೇಕು ಎಂದು ವಾರ್ತಿಕದ ವಾಚ್ಯಾರ್ಥ. ದ್ಯೋಶಬ್ದವು ಓಕಾರಾಂತವಾದ್ದರಿಂದ ಅದರ ಮುಂದಿರುವ ಸುವು ಣಿತ್ತಿನಂತೆ ಆಗುವುದು **ಅಚೋಞ್ಣಿತಿ** (ಪಾ. ಸೂ. ೭-೨-೧೧೫) ಞಿತ್ತು ಣಿತ್ತು ಆದ ಪ್ರತ್ಯಯಗಳು ಪರದಲ್ಲಿರುವಾಗ ಅಜಂತವಾದ ಅಂಗಕ್ಕೆ ವೃದ್ಧಿ ಬರುವುದು ಎಂಬುದರಿಂದ ವೃದ್ಧಿ ಬಂದರೆ **ಸ್ಥಾನೇಽನ್ತರತಮಃ** (ಪಾ. ಸೂ. ೧-೧-೫೦) ಒಂದು ಸ್ಥಾನಿಗೆ ಅನೇಕವಾದ ಆದೇಶಗಳು ಪ್ರಸಕ್ತವಾದರೆ ಸ್ಥಾನ, ಅರ್ಥ, ಗುಣ, ಪ್ರಮಾಣ ಇವುಗಳಿಂದ ಅತ್ಯಂತ ಸದೃಶವಾದ ಆದೇಶಬರುವುದು ಎಂಬುದರಿಂದ ಗುಣಸಾಮ್ಯದಿಂದ ಉದಾತ್ತಗುಣಕವಾದ ಓಕಾರದ ಸ್ಥಾನದಲ್ಲಿ ಉದಾತ್ತವಾದ ಔಕಾರ ಬರುವುದು, **ದ್ಯೌಃ** ಎಂದಾಗುವುದು.

**ಪ್ರಥಿನಾ**— ಪ್ರಥಿಮ್ನಾ ಎಂದರ್ಥ. ಪೃಥೋರ್ಭಾವಃ ಎಂದು ವಿವಕ್ಷಿಸಿದಾಗ **ಪೃಥ್ವಾದಿಭ್ಯ ಇಮನಿಜ್ವಾ** (ಪಾ. ಸೂ. ೫-೧-೧೨೨) ಪೃಥ್ವಾದಿಗಣಪಠಿತ ಶಬ್ದಪ್ರಕೃತಿಕಷಷ್ಠ್ಯಂತದ ಮುಂದೆ ಭಾವ ಎಂಬ ಅರ್ಥದಲ್ಲಿ ಇಮನಿಚ್ ಪ್ರತ್ಯಯವು ವಿಕಲ್ಪವಾಗಿ ಬರುವುದು ಎಂಬುದರಿಂದ ಇಮನಿಚ್ ಪ್ರತ್ಯಯ. **ರಋತೋಹಲಾದೇರ್ಲಘೋಃ** (ಪಾ. ಸೂ. ೬-೪-೧೬೧) ಇಷ್ಠನ್, ಇಮನಿಚ್ ಈಯಸುನ್ ಪ್ರತ್ಯಯಗಳು ಪರದಲ್ಲಿರುವಾಗ ವ್ಯಂಜನದ ಮುಂದಿರುವ ಲಘುವಾದ ಋಕಾರಕ್ಕೆ ರೇಫಾದೇಶ ಬರುವುದು ಎಂಬುದರಿಂದ ರೇಫಾದೇಶ ಬಂದರೆ ಪ್ರಥು+ಇಮನ್, **ಟೇಃ** (ಪಾ. ಸೂ. ೬-೪-೧೫೫) ಇಷ್ಠನ್, ಇಮನಿಚ್ ಈಯಸುನ್ ಪ್ರತ್ಯಯಗಳು ಪರದಲ್ಲಿರೆ

ವಾಗ ಭ ಸಂಜ್ಞಕಾಂಗಾವಯವವಾದ ಟಿಗೆ ಲೋಪ ಬರುವುದು ಎಂಬುದರಿಂದ ಉಕಾರಕ್ಕೆ ಲೋಪ ಬಂದರೆ ಪ್ರಥಿಮನ್ ಎಂದಾಗುವುದು. ಇದರ ಮುಂದೆ ತೃತೀಯಾ ವಿಭಕ್ತಿ ಏಕವಚನ ಟಾ ಪ್ರತ್ಯಯವನ್ನಿಟ್ಟರೆ **ಯಚಿ ಭಮ್** (ಪಾ. ಸೂ. ೧-೪-೧೮) ಎಂಬುದರಿಂದ ಭ ಸಂಜ್ಞೆ ಇರುವುದರಿಂದ **ಅಲ್ಲೋಪೋಽನಃ** (ಪಾ. ಸೂ. ೬-೪-೧೩೪) ಅಸರ್ವನಾಮಸ್ಥಾನ ಯಾದ್ಯಜಾದಿಸ್ವಾದಿ ಪ್ರತ್ಯಯದ ಹಿಂದಿರುವ ಅಂಗಾವಯವವಾದ ಅನ್ ಎಂಬುದರ ಹ್ರಸ್ವಾಕಾರಕ್ಕೆ ಲೋಪಬರುವುದು ಎಂಬುದರಿಂದ ಅಕಾರಕ್ಕೆ ಲೋಪ ಮಲೋಪ, ಛಾಂದಸ, ಏವಂಚ ಪ್ರಥಿನಾ ಎಂದಾಗುವುದು. ಇಮನಿಚ್ ಚಿತ್ತ್ವಾದ್ದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಪ್ರಥಿಮನ್ ಎಂಬುದು ಅಂತೋದಾತ್ತ, ಟಾ ಪ್ರತ್ಯಯದ ಅನುದಾತ್ತ ಅಕಾರ ಪರದಲ್ಲಿರುವಾಗ ಉದಾತ್ತವಾದ ಅಕಾರಕ್ಕೆ ಲೋಪ ಬರುವುದು. ಆದ್ದರಿಂದ **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಯಾವ ಅನುದಾತ್ತವು ಪರದಲ್ಲಿರುವಾಗ ಉದಾತ್ತಕ್ಕೆ ಲೋಪ ಬರುವುದೋ ಆ ಅನುದಾತ್ತಕ್ಕೆ ಉದಾತ್ತ ಬರುವುದು ಎಂಬುದರಿಂದ ಆ ಎಂಬುದು ಉದಾತ್ತವಾಗುವುದು.

ಶವಃ—**ನಬ್ವಿಷಯಸ್ಯಾನಿಸಂತಸ್ಯ** (ಪಿ. ಸೂ. ೨೬) ಇಸನ್ತವಲ್ಲದ ನಿತ್ಯನಪುಂಸಕಲಿಂಗವಾದ ಶಬ್ದದ ಆದಿಯು ಉದಾತ್ತವಾಗುವುದು ಎಂಬುದರಿಂದ ಆದ್ಯುದಾತ್ತ ॥ ೫ ॥

॥ ಸಂಹಿತಾಪಾಠಃ ॥

ಸಮೋಹೇ ವಾ ಯ ಆಶತ ನರಸ್ತೋಕಸ್ಯ ಸನಿತೌ ।
ವಿಪ್ರಾಸೋ ವಾ ಧಿಯಾಯವಃ ॥ ೬ ॥

॥ ಪದಪಾಠಃ ॥

ಸಂ ऽ ಓಹೇ । ವಾ । ಯೇ । ಆಶತ । ನರಃ । ತೋಕಸ್ಯ । ಸನಿತೌ ॥
ವಿಪ್ರಾಸಃ । ವಾ । ಧಿಯಾऽಯವಃ ॥ ೬ ॥

॥ ಸಾಯಣಭಾಷ್ಯಂ ॥

ಯೇ ನರಃ ಪುರುಷಾಃ ಸಮೋಹೇ ಸಂಗ್ರಾಮೇ ತೋಕಸ್ಯಾಪತ್ಯಸ್ಯ ಸನಿತೌ ವಾ ಲಾಭೇ ವಾಶತ । ವ್ಯಾಪ್ತವಂತಃ । ಇಂದ್ರಂ ಸ್ತುತ್ಯೇತಿ ಶೇಷಃ । ವಾ ಅಥವಾ ವಿಪ್ರಾಸೋ ಮೇಧಾವಿನೋ ಧಿಯಾಯವಃ ಪ್ರಜ್ಞಾಕಾಮಾಃ ಸಂತ ಆಶತ ತೇ ಸರ್ವೇ ಲಭಂತ ಇತ್ಯಧ್ಯಾಹಾರಃ । ರಣ ಇತ್ಯಾದಿಷು ಷಟ್ಚತ್ವಾರಿಂಶತ್ಸಂಗ್ರಾಮನಾಮಸು ಸಮೋಹೇ ಸಮಿಥೆ ಇತಿ ಪಠಿತಂ । ಪಂಚದಶಸ್ವಪತ್ಯನಾಮಸು ತುಕ್

ತೋಕಮಿತಿ ಪಠಿತಂ ॥ ಸಮೋಹೇ । ಪ್ರಾತಿಪದಿಕಾಂತೋದಾತ್ತತ್ವಂ । ವಾ ಚಾದಯೋಽನುದಾತ್ತಾ ಇತ್ಯನುದಾತ್ತಃ । ಆಶತ । ಅಶೂ ವ್ಯಾಪ್ತೌ । ಛಾಂದಸಶ್ಶ್ಲೋರ್ಲೋಪಃ । ಅಡಾಗಮ ಉದಾತ್ತಃ । ಪಾ. ೬-೪-೭೨ । ಸತಿ ಶಿಷ್ಟತ್ವೇನ ಸ ಏವ ಶಿಷ್ಯತೇ । ನರಃ । ಪ್ರಾತಿಪದಿಕಸ್ವರಃ । ಸನಿತೌ । ಸ್ತ್ರಿಯಾಂ ಕ್ತಿನ್ । ತಿತುತ್ರೇಷ್ವಗ್ರಹಾದೀನಾಮಿತಿ ವಚನಾತ್ । ಪಾ. ೭-೨-೯-೧ । ನಿಗೃಹೀತಿರ್ನಿಪಠಿತಿರಿತಿವದಿಡಾಗಮಃ । ವಿಪ್ರಾಸಃ । ಋಜ್ರೇಂದ್ರೇತ್ಯಾದಿನಾ ವಿಪ್ರಶಬ್ದೋ ರನ್ಪ್ರತ್ಯಯಾಂತೋ ನಿಪಾತಿತಃ । ಧಿಯಾಯವಃ ! ಧಿ ಧಾರಣೇ । ಧೀಯತೇ ಧಾರ್ಯತೇಽವಬುಧ್ಯತೇ ಶ್ರುತಮರ್ಥಜಾತಮನಯೇತಿ ಧಿಯಾ ಪ್ರಜ್ಞಾ । ತಾಮಾತ್ಮನ ಇಚ್ಛಂತೀತಿ ಕ್ಯಚ್ । ಕ್ಯಾಚ್ಛಂದಸಿ । ಪಾ. ೩-೨-೧೭೦ । ಇತ್ಯುಪ್ರತ್ಯಯಃ । ಅತೋ ಲೋಪಃ । ಪ್ರತ್ಯಯಸ್ವರೇಣಾಂತೋದಾತ್ತಃ ॥

॥ ಪ್ರತಿಪದಾರ್ಥ ॥

ಯೇ ನರಃ—ಯಾವ ಮನುಷ್ಯರು (ಇಂದ್ರನನ್ನು ಸ್ತೋತ್ರಮಾಡುವರೋ ಅವರು) । ಸಮೋಹೇ-ಯುದ್ಧದಲ್ಲಿ (ಜಯಪ್ರಾಪ್ತಿಗಾಗಿಯೂ) । ವಾ-ಅಥವಾ (ಮತ್ತು) । ತೋಕಸ್ಯ-ಪುತ್ರಾದಿಸಂತಾನದ । ಸನಿತೌ-ಲಾಭಕ್ಕಾಗಿಯೂ । ಆಶತ-ಇಂದ್ರನನ್ನು ಹೊಂದುವರು । ವಾ-ಅಥವಾ । ವಿಪ್ರಾಸಃ—ಬುದ್ಧಿವಂತರಾದ ಜನರು । ಧಿಯಾಯವಃ—ಪ್ರಜ್ಞೆಯನ್ನು ಅಥವಾ ಜ್ಞಾನವನ್ನು ಅಪೇಕ್ಷಿಸುವವರೂ (ಸಹ) ಆಶತ-ಇಂದ್ರನನ್ನೇ ಹೊಂದುವರು.)

॥ ಭಾವಾರ್ಥ ॥

ಯಾವ ಮನುಷ್ಯರು ಯುದ್ಧದಲ್ಲಿ ಜಯವನ್ನೂ ಪುತ್ರಪೌತ್ರಾದಿ ಸಂತಾನಗಳನ್ನೂ ಬಯಸುವರೋ ಅವರು ಇಂದ್ರನನ್ನು ಸ್ತೋತ್ರಮಾಡುವುದರಿಂದ ತಮ್ಮ ಅಭೀಷ್ಟಗಳನ್ನು ಹೊಂದುವರು. ಮತ್ತು ಬುದ್ಧಿವಂತರಾದವರೂ ಪ್ರಜ್ಞಾಪೇಕ್ಷಿಗಳೂ ಸಹ ಇಂದ್ರನಿಂದಲೇ ತಮ್ಮ ಅಭೀಷ್ಟಗಳನ್ನು ಪಡೆಯುವರು.

English Translation.

Whatever men have recourse to Indra, in battle or for the acquirement of offspring, and the wise who are desirous of understanding (obtain their desires).

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವನ್ನು ಸರಿಯಾಗಿ ಊಹಿಸಬಹುದಾದರೂ ಕೆಲವು ಮುಖ್ಯ ಪದಗಳನ್ನು ಅಧ್ಯಾಹಾರಮಾಡಿಕೊಳ್ಳಬೇಕಾಗಿರುವುದು. ಹಿಂದಿನ ಋಕ್ಕಿನಲ್ಲಿ ಇಂದ್ರನ ಮಹಿಮೆ ಅಥವಾ ಶಕ್ತಿಸಾಮರ್ಥ್ಯಗಳು ಅಪಾರವಾಗಿರುವುವೆಂದು ಹೇಳಲ್ಪಟ್ಟಿರುವುದರಿಂದ ಆ ಅಭಿಪ್ರಾಯಕ್ಕೆ ಸಂಬಂಧಪಟ್ಟಿರುವಂತೆ ಈ ಋಕ್ಕಿನಲ್ಲಿ ಜನರು ತಾವು ಅಪೇಕ್ಷಿಸುವ ಯುದ್ಧದಲ್ಲಿ ಜಯ, ಸಂತಾನಪ್ರಾಪ್ತಿ, ತಿಳವಳಿಕೆ ಇವುಗಳ ಪ್ರಾಪ್ತಿಗಾಗಿ ಇಂದ್ರನನ್ನು ಆಶ್ರಯಿಸುವರು ಮತ್ತು ಸ್ತೋತ್ರಾದಿಗಳಿಂದ ಅವನನ್ನು ಸ್ತುತಿಸಿ ತಮ್ಮ ಅಭೀಷ್ಟಗಳನ್ನು ಪಡೆಯುವರೆಂದು ಮುಖ್ಯಾಭಿಪ್ರಾಯವು.

**ಸಮೋಹೇ**—ರಣ ಮೊದಲಾದ ನಲವತ್ತಾರು ಯುದ್ಧವಾಚಕನಾಮಗಳ ಮಧ್ಯದಲ್ಲಿ ಸಮೋಹೇ ಎಂಬ ಶಬ್ದವು ಪಠಿತವಾಗಿದೆ (ನಿ ೩-೯).

**ತೋಕಸ್ಯ**—ತುಕ್ ಮೊದಲಾದ ಹದಿನೈದು ಅಪತ್ಯವಾಚಕ ಶಬ್ದಗಳ ಮಧ್ಯದಲ್ಲಿ ತೋಕಂ ಎಂಬ ಶಬ್ದವು ಪಠಿತವಾಗಿದೆ (ನಿ. ೩-೨)

ಆಶತ ಅಶೂ ವ್ಯಾಪ್ತೌ ಎಂಬ ಧಾತುವಿನ ರೂಪ. ಇಂದ್ರನನ್ನು ಹೊಂದುವುದು ಎಂದರೆ ಸ್ತೋತ್ರಾದಿಗಳಿಂದ ಇಂದ್ರನನ್ನು ಪ್ರಾರ್ಥಿಸುವುದು.

ನರಃ—ಋಕಾರಾಂತನೃಶಬ್ದದ ಪ್ರಥಮಾ ಬಹುವಚನವು. ಈ ಶಬ್ದವು ಅಕಾರಾಂತವಾಗಿಯೂ ಉಪಯೋಗಿಸಲ್ಪಡುವುದು. ಆಗ ನರಃ ಎಂಬುದು ಪ್ರಥಮೈಕವಚನವು.

ವಿಪ್ರಾಸಃ=ವಿಪ್ರಾಃ ಎಂಬುದರ ಪ್ರಾಚೀನ ಪ್ರಯೋಗವು.

**ಧಿಯಾಯವಃ**—ಧಿ ಧಾರಣೇ । ಧೀಯತೇ ಧಾರ್ಯತೇಽವಬುಧ್ಯತೇ ಶ್ರುತಮರ್ಥಜಾತಮನಯೇತಿ ಧಿಯಾ ಪ್ರಜ್ಞಾ । ತಾಮಾತ್ಮನ ಇಚ್ಛಂತೀತಿ ಧಿಯಾಯವಃ ॥ ಧಿ ಎಂಬ ಧಾತುವಿಗೆ ಧರಿಸು ಅಥವಾ ತಿಳಿ ಎಂದರ್ಥವು ಕೇಳಿದ ಅಥವಾ ನೋಡಿದ ವಿಷಯಗಳನ್ನು ತಿಳಿದುಕೊಳ್ಳುವುದರಿಂದ ಧಿಯಾ ಎಂಬ ಶಬ್ದವುಂಟಾಗಿರುವುದು. ತಿಳಿವಳಿಕೆಯನ್ನು ಅಥವಾ ಪ್ರಜ್ಞೆಯನ್ನು ಅಪೇಕ್ಷಿಸುವವರಿಗೆ ಧಿಯಾಯವಃ ಎಂದು ಹೆಸರು

॥ ವ್ಯಾಕರಣಪ್ರಕ್ರಿಯಾ ॥

**ಸಮೋಹೇ**—**ಫಿಷಃ** (ಫಿ. ಸೂ. ೧) ಎಂಬುದರಿಂದ ಪ್ರಾತಿಪದಿಕಸ್ವರ ಅಂತೋದಾತ್ತ ಬರುವುದು. **ವಾ ಚಾದಯೋಽನುದಾತ್ತಾಃ** (ಫಿ ಸೂ. ೧೮೪) ಎಂಬುದರಿಂದ ಅನುದಾತ್ತ

**ಆಶತ**-**ಅಶೂವ್ಯಾಪ್ತೌ** ಧಾತುವಿನ ಮುಂದೆ ಲುಙ್. **ಚ್ಲಿ ಲುಙಿ** (ಪಾ.ಸೂ. ೩-೧-೪೩) ಎಂಬುದರಿಂದ ಲುಙ್ಙಿನ ಹಿಂದೆ ಚ್ಲಿ ಬರುವುದು. ಛಾಂದಸವಾಗಿ ಚ್ಲಿಗೆ ಲೋಪಬರುವುದು. **ಆಡಜಾದೀನಾಮ್** (ಪಾ. ಸೂ. ೬-೪-೭೨) ಲುಙ್ ಲಙ್ ಲೃಙ್ ಇವು ಪರವಾಗಿದ್ದರೆ ಅಜಾದಿ ಧಾತುಗಳಿಗೆ ಆಟ್ ಆಗಮ ಬರುವುದು. ಅದು ಉದಾತ್ತವೂ ಆಗುವುದುಎಂಬುದರಿಂದ ಆಡಾಗಮ. ಸತಿಶಿಷ್ಟಸ್ವರವಾದ್ದರಿಂದ ಇದೇ ನಿಲ್ಲುವುದು. ಧಾತ್ವಕಾರವು ಶೇಷಾನುದಾತ್ತಸ್ವರದಿಂದ ಅನುದಾತ್ತ. ಇವೆರಡಕ್ಕೂ **ಆಟಶ್ಚ** (ಪಾ. ಸೂ. ೬-೧-೯೦) ಆಟ್‌ಗೆ ಸ್ವರ ಪರದಲ್ಲಿದ್ದರೆ ವೃದ್ಧಿ ಬರುವುದುಎಂಬುದರಿಂದ ವೃದ್ಧಿಯು ಏಕಾದೇಶವಾಗಿ ಬರುವುದು. **ಏಕಾದೇಶಉದಾತ್ತೇನೋದಾತ್ತಃ** (ಪಾ.ಸೂ. ೮-೨-೫) ಎಂಬುದರಿಂದ ಆಕಾರ ಉದಾತ್ತ. ಲುಙ್ಙಿಗೆ ಆತ್ಮನೇಪದ ಪ್ರಥಮಪುರುಷಬಹುವಚನ ಝ-ಪ್ರತ್ಯಯ ಬಂದರೆ **ಆತ್ಮನೇಪದೇಷ್ವನತಃ** (ಪಾ. ಸೂ ೭-೧-೫) ಎಂಬುದರಿಂದ ಝಗೆ **ಅತ್** ಆದೇಶ ಬಂದು ಆಶತ ಎಂದಾಗುವುದು.

**ನರಃ**—ಪ್ರಾತಿಪದಿಕಸ್ವರದಿಂದ ಅಂತೋದಾತ್ತ.

**ಸನಿತೌ**—ಸನ ಧಾತುವಿನ ಮುಂದೆ **ಸ್ತ್ರಿಯಾಂಕ್ತಿನ್** (ಪಾ. ಸೂ. ೩-೩-೯೪) ಎಂಬುದರಿಂದ **ಕ್ತಿನ್** ಪ್ರತ್ಯಯ. **ತಿ, ತು, ತ್ರ, ತ, ಥ, ಸಿ, ಸು, ಸರ, ಕ, ಸೇಷುಚ** (ಪಾ. ಸೂ. ೭-೨-೯) ಎಂಬುದರಿಂದ ಯದ್ಯಪಿ

ಇಲ್ಲಿ ಇಡಾಗಮಕ್ಕೆ ಪ್ರತಿಷೇಧ ಬರುವುದು. ಆದರೂ **ತಿತುತ್ರೇಷ್ವಗ್ರಹಾದೀನಾಮ್** (ಪಾ ಸೂ. ೭-೨-೯, ಭಾವಾ. ೧) ಗ್ರಹಾದಿಗಳ ಮುಂದಿರುವ ತಿ ತು ತ್ರ ಇವುಗಳಿಗೆ ಇಡಾಗಮ ನಿಷೇಧ ಬರುವುದಿಲ್ಲ. ಗ್ರಹಾದಿಯು ಆಕೃತಿಗಣ. ಈ ನಿಷೇಧದಿಂದ ಇಲ್ಲಿ ಇಡಾಗಮನಿಷೇಧ ಬರುವುದಿಲ್ಲ. ನಿಗೃಹೀತಿಃ, ನಿಪಠಿತಿಃ ಇತ್ಯಾದಿ ಕಡೆಗಳಲ್ಲೂ ಇದರಿಂದ ಇಡಾಗಮಕ್ಕೆ ನಿಷೇಧಬರುವುದಿಲ್ಲ. ಇದರಂತೆ ಪ್ರಕೃತದಲ್ಲಿ ಇಟ್ಟುಕೊಳ್ಳುವುದು.

**ವಿಪ್ರಾಸಃ—ಋಜ್ರೇನ್ದ್ರಾಗ್ರವಿಪ್ರ**—(ಉ. ಸೂ. ೨-೧೮೬) ಎಂಬುದರಿಂದ ವಿಪ್ರ ಶಬ್ದವು ರನ್ಪ್ರತ್ಯಯಾಂತವಾಗಿ ನಿಪಾತಿತವಾಗಿರುವುದು. ಆದ್ದರಿಂದ ನಿತ್ಸ್ವರ ಬಂದು ಆದ್ಯುದಾತ್ತವಾಗುವುದು ಇದರ ಮುಂದೆ ಜಸ್ ಪ್ರತ್ಯಯವನ್ನಿಟ್ಟರೆ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅಸುಕ್ ಆಗಮ ಬರುವುದು.

**ಧಿಯಾಯವಃ—ಧಿ ಧಾರಣೇ ಧಾತು. ಧೀಯತೇ ಧಾರ್ಯತೇ ಅವಬುದ್ಧ್ಯತೇ ಶ್ರುತಮರ್ಥಜಾತಂ ಸರ್ವಂ ಅನಯಾ ಇತಿ ಧಿಯಾ**= ಪ್ರಜ್ಞಾ. ಯಾವುದರಿಂದ ಕೇಳಿದ ಅರ್ಥಗಳೆಲ್ಲವೂ ಧರಿಸಲ್ಪಡುವುವೋ ಅಂತಹ ಪ್ರಜ್ಞೆಗೆ ಧಿಯಾ ಎಂದು ಹೆಸರು. ಧಿಯಂ ಆತ್ಮನ ಇಚ್ಛತಿ ಎಂದು ವಿವಕ್ಷಿಸಿದಾಗ **ಸುಪಆತ್ಮನಃಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. **ಕ್ಯಾಚ್ಛಂದಸಿ** (ಪಾ.ಸೂ. ೩-೨-೧೭೦) ಕ್ಯಚ್, ಕ್ಯಷ್, ಕ್ಯಙ್ ಕಂಡ್ವಾದಿಯಕ್ ಇವುಗಳನ್ನು ಕೊನೆಯಲ್ಲಿ ಹೊಂದಿರುವ ಧಾತುವಿನ ಮುಂದೆ ತಚ್ಛೀಲಾದ್ಯರ್ಥಗಳಲ್ಲಿ ಉ ಪ್ರತ್ಯಯ ಬರುವುದು ಎಂಬುದರಿಂದ ಉ ಪ್ರತ್ಯಯ ಬರುವುದು. **ಅತೋಲೋಪಃ** (ಪಾ. ಸೂ. ೬-೪-೪೮) ಆರ್ಧಧಾತುಕ ಪ್ರತ್ಯಯ ಪರದಲ್ಲಿರುವಾಗ ಆರ್ಧಧಾತುಕದ ಉಪದೇಶಕಾಲದಲ್ಲಿ ಅದಂತವಾಗಿರುವ ಶಬ್ದದ ಅಕಾರಕ್ಕೆ ಲೋಪ ಬರುವುದು ಎಂಬುದರಿಂದ ಅಕಾರಕ್ಕೆ ಲೋಪ ಬಂದರೆ ಧಿಯಾಯು ಎಂದಾಗುವುದು ಪ್ರತ್ಯಯ ಸ್ವರದಿಂದ ಇದು ಅಂತೋದಾತ್ತ. ಪ್ರಥಮಾವಿಭಕ್ತಿ ಬಹುವಚನದಲ್ಲಿ ಧಿಯಾಯವಃ ಎಂದಾಗುವುದು ॥ ೬ ॥

॥ ಸಂಹಿತಾಪಾಠಃ ॥

ಯಃ ಕುಕ್ಷಿಃ ಸೋಮಪಾತಮಃ ಸಮುದ್ರ ಇವ ಪಿನ್ವತೇ ।
ಉರ್ವೀರಾಪೋ ನ ಕಾಕುದಃ ॥ ೭ ॥

॥ ಪದಪಾಠಃ ॥

ಯಃ । ಕುಕ್ಷಿಃ । ಸೋಮಽಪಾತಮಃ । ಸಮುದ್ರಃಽಇವ । ಪಿನ್ವತೇ ॥
ಉರ್ವೀಃ । ಆಪಃ । ನ । ಕಾಕುದಃ ॥ ೭ ॥

॥ ಸಾಯಣಭಾಷ್ಯಂ ॥

ಯಃ ಕುಕ್ಷಿರಸ್ಯೇಂದ್ರಸ್ಯೋದರಪ್ರದೇಶಃ ಸೋಮಪಾತಮೋಽತಿಶಯೇನ ಸೋಮಸ್ಯ ಪಾತಾ ಸ ಕುಕ್ಷಿಃ ಸಮುದ್ರ ಇವ ಪಿನ್ವತೇ । ವರ್ಧತೇ । ಸೇಚನಾರ್ಥೋ ಧಾತುರೌಚಿತ್ಯೇನ ವೃದ್ಧಿಂ ಲಕ್ಷಯತಿ । ಕಾಕುದೋ ಮುಖಸಂಬಂಧಿನ್ಯ ಉರ್ವೀರ್ಬಹ್ವ್ಯ ಆಪೋ ನ ಜಲಾನೀವ । ಜಿಹ್ವಾಸಂಬಂಧಮಾಸ್ಯೋದಕಂ ಯಥಾ ಕದಾಚಿದಪಿ ನ ಶುಷ್ಯತಿ ತಥೇಂದ್ರಸ್ಯ ಕುಕ್ಷಿಃ ಸೋಮಪೂರಿತೋ ನ ಶುಷ್ಯತೀತ್ಯರ್ಥಃ । ಯದ್ಯಪಿ ಶ್ಲೋಕ ಇತ್ಯಾದಿಷು ಸಪ್ತಪಂಚಾಶತ್ಸು ವಾಙ್ನಾಮಸು ಕಾಕುಜ್ಜಿಹ್ವೇತಿ ಪಠಿತಂ ತಥಾಪ್ಯುದಕ ಸಂಬಂಧಸಿದ್ಧ್ಯರ್ಥಮತ್ರ ಕಾಕುಚ್ಛಬ್ದೇನ ಮುಖಮುಪಲಕ್ಷ್ಯತೇ । ಸಂಬಂಧವಾಚಿನಸ್ತದ್ಧಿತಸ್ಯಾತ್ರ ಛಾಂದಸೋ ಲೋಪೋ ದ್ರಷ್ಟವ್ಯಃ ॥ ಸೋಮಪಾತಮಃ । ಸೋಮಂ ಪಿಬತೀತಿ ಸೋಮಪಾಃ । ಆಕಾರೋ ಧಾತುಸ್ವರೇಣೋದಾತ್ತಃ । ಕೃದುತ್ತರಪದಪ್ರಕೃತಿಸ್ವರೇಣ ಸ ಏವ ಶಿಷ್ಯತೇ । ತಮಪಃ ಪಿತ್ತ್ವಾದನುದಾತ್ತತ್ವಂ । ಸಮುದ್ರಶಬ್ದಃ ಪ್ರಾತಿಪದಿಕತ್ವಾದಂತೋದಾತ್ತಃ । ಇವೇನ ವಿಭಕ್ತ್ಯಲೋಪಃ ಪೂರ್ವಪದಪ್ರಕೃತಿಸ್ವರತ್ವಂ ಚ । ಪಾ. ೨-೧-೪-೨ । ಇತಿ ಪ್ರಕೃತಿಸ್ವರಃ । ಪಿನ್ವತೇ । ಪಿವಿ ಸೇಚನೇ । ಇದಿತೋ ನುಮ್ ಧಾತೋರಿತಿ ನುಮಾಗಮಃ । ಶಪಃ ಪಿತ್ತ್ವೇನಾನುದಾತ್ತತ್ವಂ । ತಿಙಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರ ಏವ ಶಿಷ್ಯತೇ । ಉರ್ವೀಃ । ಉರುಶಬ್ದೋಽಂತೋದಾತ್ತಃ । ವೋತೋ ಗುಣವಚನಾತ್ । ಪಾ. ೪-೧-೪೪ । ಇತಿ ಙೀಷ್ । ಯಣಾದೇಶಃ । ಉದಾತ್ತಯಣೋ ಹಲ್ಪೂರ್ವಾತ್ । ಪಾ. ೬-೧-೧೭೪ । ಇತೀಕಾರ ಉದಾತ್ತಃ । ಜಸಾ ಸಹೈಕಾದೇಶ ಉದಾತ್ತೇನೋದಾತ್ತ ಇತ್ಯೇಕಾದೇಶ ಉದಾತ್ತಃ । ಆಪಃ । ಪ್ರಾತಿಪದಿಕಸ್ವರಃ । ಕಾಕುದಃ । ಪ್ರಾತಿಪದಿಕಸ್ವರೇಣಾಂತೋದಾತ್ತಃ ॥

॥ ಪ್ರತಿಪದಾರ್ಥ ॥

ಯಃ ಕುಕ್ಷಿಃ—ಇಂದ್ರನ ಯಾವ ಉದರವು । ಸೋಮಪಾತಮಃ—ಸೋಮಪಾನ ಮಾಡುವುದೋ (ಆ ಉದರವು)। ಸಮುದ್ರ ಇವ-ಸಮುದ್ರದಂತೆ । ಪಿನ್ವತೇ-ಉಬ್ಬಿ ದೊಡ್ಡದಾಗುವುದು । (ಮತ್ತು) ಕಾಕುದಃ—ಮುಖಸಂಬಂಧವಾದ (ಎಂದರೆ ಬಾಯಿಯೊಳಗೆ ಇರುವ ನಾಲಗೆಯು) ಉರ್ವೀಃ—ಬಹಳವಾದ । ಆಪೋ ನ—ನೀರಿನಂತೆ (ಯಾವಾಗಲೂ ಒಣಗದೆ ಒದ್ದೆಯಾಗಿರುವುದು )

॥ ಭಾವಾರ್ಥ ॥

ಅತಿಶಯವಾಗಿ ಸೋಮಪಾನಮಾಡುವುದರಿಂದ ಇಂದ್ರನ ಉದರವು ಸಮುದ್ರದಂತೆ ದೊಡ್ಡದಾಗಿ ಉಬ್ಬಿರುವುದಲ್ಲದೆ ಬಾಯಿಯಲ್ಲಿರುವ ನಾಲಗೆಯು ಸದಾ ನೀರಿನಿಂದ ಒದ್ದೆಯಾಗಿರುವಂತೆ ಆರ್ದ್ರೀಭೂತ ವಾಗಿರುವುದು.

English Translation

The belly of Indra which drinks soma-juice most abundantly swells like ocean and like the ample fluids of the palate.

‖ ವಿಶೇಷವಿಷಯಗಳು ‖

ಇಲ್ಲಿ ಇಂದ್ರನು ಸೋಮಪಾನ ಮಾಡುವುದನ್ನು ಉತ್ಪ್ರೇಕ್ಷೆಯಿಂದ ವರ್ಣಿಸಲಾಗಿದೆ. ಎಂದರೆ ಇಂದ್ರನು ಬಹಳವಾಗಿ (ನಾವು ಅರ್ಪಿಸುವ) ಸೋಮರಸವನ್ನು ಪಾನಮಾಡುವನು. ಅದರಿಂದ ಅವನ ಹೊಟ್ಟೆಯು ಸಮುದ್ರದಂತೆ ಉಬ್ಬುವುದು. ಮತ್ತು ಅತಿಶಯವಾಗಿ ಆಗಾಗ ಸೋಮಪಾನ ಮಾಡುವುದರಿಂದ ಅವನ ನಾಲಿಗೆಯು ಯಾವಾಗಲೂ ಸೋಮದಿಂದ ಒದ್ದೆಯಾಗಿಯೇ ಇರುವುದು. ಮನುಷ್ಯರ ಬಾಯಿಯ ನಾಲಗೆಯಿಂದ ಜಿನುಗುತ್ತಿರುವ ದ್ರವದಿಂದ ಯಾವಾಗಲೂ ಒದ್ದೆಯಾಗಿರುವಂತೆ ಇಂದ್ರನ ಉದರವೂ ಸಹ ಅತಿಶಯ ಸೋಮಪಾನದಿಂದ ಯಾವಾಗಲೂ ಆರ್ದ್ರವಾಗಿಯೇ ಇರುವುದು. ಎಂದಿಗೂ ಒಣಗುವುದಿಲ್ಲ ಎಂದಭಿಪ್ರಾಯವು.

**ಕಾಕುದಃ**—ಕಕುತ್ ಎಂದರೆ ತಾಲು palate ಅದರ ಸಂಬಂಧವಾದ ಎಂದರ್ಥವು. ಅಥವಾ ಶ್ಲೋಕ ಮೊದಲಾದ ಐವತ್ತೇಳು ವಾಙ್ನಾಮಗಳಲ್ಲಿ ಕಾಕುತ್ ಜಿಹ್ವಾ ಎಂಬ ಶಬ್ದಗಳು ಪಠಿತವಾಗಿರುವುದರಿಂದ (ನಿ. ೨-೨೩) ಇದಕ್ಕೆ ನಾಲಗೆಯೆಂದೂ ಅರ್ಥವಾಗುವುದು. ನಾಲಗೆಯು, ಮುಖವು (ಬಾಯಿಯು) ಯಾವಾಗಲೂ ಒದ್ದೆಯಾಗಿರುವ ವಿಷಯವು ಸಕಲರಿಗೂ ತಿಳಿದೇ ಇದೆ. ಆ ಉಪಮಾನವನ್ನೇ ಕವಿಯು ಇಲ್ಲಿ ವರ್ಣಿಸಿರುವನು. ಇದಲ್ಲದೆ **ಕಾಕುದಂ ತಾಲ್ವಿತ್ಯಾಚಕ್ಷತೇ** (ನಿ. ೫-೨೬) ಎಂದು ನಿರುಕ್ತವಚನವಿರುವುದಲ್ಲದೆ ಈ ಶಬ್ದಕ್ಕೆ ಪರ್ವತಶಿಖರವೆಂದೂ ಅರ್ಥವಿರುವುದು. ಈ ಸಂದರ್ಭದಲ್ಲಿ ಬೆಟ್ಟದ ತುದಿಯಿಂದ ಕೆಳಕ್ಕೆ ಹರಿದು ಬರುತ್ತಿರುವ ಝರಿಗಳು ಬೆಟ್ಟವನ್ನು ಯಾವಾಗಲೂ ಒದ್ದೆಯಾಗಿರುವಂತೆ ಮಾಡುವುದು. ಅದರಂತೆ ಎಂತಲೂ ಅರ್ಥಮಾಡಬಹುದು.

ವ್ಯಾಕರಣಪ್ರಕ್ರಿಯಾ

**ಸೋಮಪಾತಮಃ**—ಸೋಮಂ ಪಿಬತಿ ಇತಿ ಸೋಮಪಾಃ. **ಆತೋಽನುಪಸರ್ಗೇಕಃ** (ಪಾ. ಸೂ. ೩-೨-೩) ಎಂದು ವಿಹಿತವಾದ ಕ ಪ್ರತ್ಯಯವನ್ನು ಬಾಧಿಸಿ **ಆತೋಮನಿನ್ಕ್ವನಿಬ್ವನಿಪಶ್ಚ** (ಪಾ.ಸೂ. ೩-೨-೭೪) ಎಂಬಲ್ಲಿ ಚ ಗ್ರಹಣವಿರುವುದರಿಂದ ವಿಚ್ ಪ್ರತ್ಯಯ ಬರುವುದು. ಪಾ ಎಂಬುದು **ಧಾತೋಃ** (ಪಾ. ಸೂ. ೬-೧-೧೬೨) ಎಂಬುದರಿಂದ ಅಂತೋದಾತ್ತ. **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂದು ವಿಹಿತವಾದ ಕೃದುತ್ತರಪದಪ್ರಕೃತಿಸ್ವರದಿಂದ ಸೋಮಪಾ, ಶಬ್ದವೂ ಅಂತೋದಾತ್ತ. ಇದರ ಮುಂದೆ ಅತಿಶಯ ಎಂಬ ಅರ್ಥದಲ್ಲಿ **ಅತಿಶಾಯನೇತಮಬಿಷ್ಠನೌ** (ಪಾ. ಸೂ. ೫-೩-೫೫) ಎಂಬುದರಿಂದ ತಮಪ್ ಪ್ರತ್ಯಯ. ತಮಪ್ಪು ಪಿತ್ತಾದ್ದರಿಂದ **ಅನುದಾತ್ತೌಸುಪ್ಪಿತೌ** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತ.

**ಸಮುದ್ರ**—ಶಬ್ದವು ಪ್ರಾತಿಪದಿಕಸ್ವರದಿಂದ ಅಂತೋದಾತ್ತ. **ಇವೇನವಿಭಕ್ತ್ಯಲೋಪಃ ಪೂರ್ವಪದ ಪ್ರಕೃತಿಸ್ವರತ್ವಂಚ** (ಪಾ. ಸೂ. ೨-೧-೪, ವಾ. ೨) ಎಂಬುದರಿಂದ ಸಮಾಸವೂ ಪೂರ್ವಪದಪ್ರಕೃತಿಸ್ವರವೂ ಬಂದರೆ ಅದೇ ಸ್ವರವೇ ನಿಲ್ಲುವುದು.

**ಪಿನ್ವತೇ**—ಪಿವಿ-ಸೇಚನೇ ಧಾತು. **ಇದಿತೋನುಮ್‌ಧಾತೋಃ** (ಪಾ.ಸೂ. ೭-೧-೫೮) ಎಂಬುದರಿಂದ ನುಮ್ ಆಗಮ. ಲಟ್ ಆತ್ಮನೇಪದ ಪ್ರಥಮಪುರುಷ ಏಕವಚನ ತ ಬರುವುದು. **ಟಿತ ಆತ್ಮನೇಪದಾನಾಂ ಟೇರೇ** (ಪಾ. ಸೂ. ೩-೪-೭೯) ಎಂಬುದರಿಂದ ತ ಗೆ ಏತ್ವ. ಶಪ್ ವಿಕರಣ ಬಂದರೆ ಪಿನ್ವತೇ ಎಂದಾಗುವುದು. ಶಪ್ಪು ಪಿತ್ತಾದ್ದರಿಂದ ಅನುದಾತ್ತ. ತೇ ಎಂಬುದು ಅದುಪದೇಶದ ಮುಂದೆ ಇರುವುದರಿಂದ **ತಾಸ್ಯನುದಾತ್ತೇನ್ಙಿದ**

**ಮುಪದೇಶಾತ್** (ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತ. **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಯಾವಪದದಲ್ಲಿ ಯಚ್ಛಬ್ದವಿದೆಯೋ ಅದರ ಮುಂದಿರುವ ತಿಙಂತವು ಅನುದಾತ್ತವಾಗುವುದಿಲ್ಲ ಎಂದು ನಿಷೇಧವಿರುವುದರಿಂದ **ತಿಙ್ಙತಿಙಃ** ಎಂಬುದರಿಂದ ಅನುದಾತ್ತ ಬರುವುದಿಲ್ಲ.

**ಉರ್ವೀಃ**—ಉರು ಶಬ್ದವು ಅಂತೋದಾತ್ತ, **ವೋತೋಗುಣವಚನಾತ್** (ಪಾ. ಸೂ. ೪-೧-೪೪) ಹ್ರಸ್ವವಾದ ಉಕಾರವನ್ನು ಕೊನೆಯಲ್ಲಿ ಹೊಂದಿರುವ ಗುಣವಾಚಕದ ಮುಂದೆ ಸ್ತ್ರೀಲಿಂಗದಲ್ಲಿ ಙೀಷ್ ಪ್ರತ್ಯಯವು ವಿಕಲ್ಪವಾಗಿ ಬರುವುದು ಎಂಬುದರಿಂದ ಙೀಷ್ ಬರುವುದು. ಯಣಾದೇಶ ಬಂದರೆ ಉರ್ವೀ ಎಂದಾಗುವುದು. **ಉದಾತ್ತಯಣೋಹಲ್ಪೂರ್ವಾತ್** (ಪಾ. ಸೂ. ೬-೧-೧೭೪) ವ್ಯಂಜನದ ಮುಂದೆ ಇರುವ ಉದಾತ್ತಸ್ಥಾನದಲ್ಲಿ ಬಂದ ಯ, ವ, ರ, ಲ ಗಳ ಮುಂದೆ ಇರುವ ನದೀಸಂಜ್ಞಕ ವರ್ಣವೂ, ಶಸಾದಿಯಾದ ವಿಭಕ್ತಿಯೂ ಸಹ ಉದಾತ್ತವಾಗುವುದು ಎಂಬುದರಿಂದ ನದೀಸಂಜ್ಞಕವಾದ ಙೀಷ್ ಪ್ರತ್ಯಯದ ಈಕಾರವು ಉದಾತ್ತವಾಗುವುದು. ಉರ್ವೀಶಬ್ದದ ಮುಂದೆ ಜಸ್ಸನ್ನಿಟ್ಟರೆ ಉರ್ವೀ+ಅಸ್ ಎಂದಿರುವಾಗ **ಪ್ರಥಮಯೋಃ ಪೂರ್ವಸವರ್ಣಃ** (ಪಾ. ಸೂ. ೬-೧-೧೦೨) ಎಂಬುದರಿಂದ ಪೂರ್ವಸವರ್ಣದೀರ್ಘ ಬರುವುದು. ಪೂರ್ವಸವರ್ಣ ದೀರ್ಘದಿಂದ ಬಂದ ಈಕಾರವು **ಏಕಾದೇಶಉದಾತ್ತೇನೋದಾತ್ತಃ** ( ಪಾ. ಸೂ. ೮-೨-೫ ) ಎಂಬುದರಿಂದ ಉದಾತ್ತ.

**ಆಪಃ**—ಪ್ರಾತಿಪದಿಕಸ್ವರ ಬರುವುದು.

**ಕಾಕುದಃ**—**ಕಾಕುತ್ ಜಿಹ್ವಾ** (ನಿರು. ೧-೧೧-೨೫) ಎಂದು ನಿರುಕ್ತದಲ್ಲಿ 'ಶ್ಲೋಕಃ' ಎಂದು ಆರಂಭಿಸಿ ಪಠಿತವಾದ ಐವತ್ತೇಳು ವಾಙ್ನಾಮಗಳ ಮಧ್ಯದಲ್ಲಿ ಕಾಕುತ್ ಶಬ್ದವನ್ನು ಯಾಸ್ಕರು ಪಠಿಸಿರುವರು. ಆ ಅರ್ಥ ವನ್ನು ತೆಗೆದುಕೊಂಡರೆ ಆಪಃ ಎಂಬ ಶಬ್ದದಿಂದ ಬೋಧಿತವಾದ ಜಲರೂಪವಾದ ಅರ್ಥದೊಂದಿಗೆ ಅನ್ವಯ ಬರುವುದಿಲ್ಲ. ಆದ್ದರಿಂದ ಕಾಕುತ್ ಎಂಬುದರಿಂದ ಮುಖವು ಉಪಲಕ್ಷಿತವಾಗುವುದು. **ಭೂಮನಿಂದಾಪ್ರಶಂಸಾಸು ನಿತ್ಯಯೋಗೇತಿಶಾಯನೇ ಸಂಬಂಧೇಽಸ್ತಿವಿವಕ್ಷಾಯಾಂ ಭವಂತಿ ಮತುಪಾದಯಃ** (ಪಾ. ಸೂ. ೫-೨-೯೪ ಮಭಾ) ಎಂದು ಮಹಾಭಾಷ್ಯಕಾರರು ಹೇಳಿರುವುದರಿಂದ ಸಂಬಂಧಾರ್ಥದಲ್ಲಿ ಮತುಪ್ ಪ್ರತ್ಯಯ ಬರುವುದು. ಅದಕ್ಕೆ ಛಾಂದಸವಾಗಿ ಲೋಪ ಬರುವುದು. ಏವಂಚ ಕಾಕುದಃ ಎಂಬುದಕ್ಕೆ ಮುಖಸಂಬಂಧಿ ಯಾದ ಎಂದು ಅರ್ಥ. ಕಾಕುದಃ—ಇದು ಪ್ರಾತಿಪದಿಕಸ್ವರದಿಂದ ಅಂತೋದಾತ್ತವಾಗುವುದು ॥ ೭ ॥

॥ ಸಂಹಿತಾಪಾಠಃ ॥

ಏವಾ ಹ್ಯಸ್ಯ ಸೂನೃತಾ ವಿರಪ್ಶೀ ಗೋಮತೀ ಮಹೀ ।
ಪಕ್ವಾ ಶಾಖಾ ನ ದಾಶುಷೇ ॥ ೮ ॥

॥ ಪದಪಾಠಃ ॥

ಏವ । ಹಿ । ಅಸ್ಯ । ಸೂನೃತಾ । ವಿऽರಪ್ಶೀ । ಗೋऽಮತೀ । ಮಹೀ ॥
ಪಕ್ವಾ । ಶಾಖಾ । ನ । ದಾಶುಷೇ ॥ ೮ ॥

॥ ಸಾಯಣಭಾಷ್ಯಂ ॥

ಅಭಿಪ್ಲವಷಡಹಗತೇಷೂಕ್ಥ್ಯೇಷು ತೃತೀಯಸವನೇ ಬ್ರಾಹ್ಮಣಾಚ್ಛಂಸಿನ ಏವಾ ಹ್ಯಸ್ಯ ಸೂನೃತೇತ್ಯನುರೂಪಸ್ತೃಚಃ । ಏಹ್ಯೂಷು ಬ್ರವಾಣಿ ತ ಇತಿ ಖಂಡೇ ಅಥ ಬ್ರಾಹ್ಮಣಾಚ್ಛಂಸಿನ ಇತ್ಯುಪಕ್ರಮ್ಯ ಏವಾ ಹ್ಯಸಿ ವೀರಯುರೇವಾ ಹ್ಯಸ್ಯ ಸೂನೃತಾ । ಅ. ೭-೮ । ಇತಿ ಸೂತ್ರಿತಂ ॥

ಅಸ್ಯೇಂದ್ರಸ್ಯ ಸೂನೃತಾ ಪ್ರಿಯಸತ್ಯರೂಪಾ ವಾಗ್ದಾಶುಷೇ ಹವಿರ್ದತ್ತವತೇ ಯಜಮಾನಾಯ ತದರ್ಥಮೇವಾ ಹಿ ಏವಂ ಖಲು । ಅನಂತರಪದವಕ್ಷ್ಯಮಾಣಗುಣೋಪೇತಾ ಭವತೀತ್ಯರ್ಥಃ । ಕೀದೃಶೀ । ವಿರಪ್ಶೀ ವಿವಿಧರಪಣೋಪೇತವಾಕ್ಯಯುಕ್ತಾ । ಬಹುವಿಧೋಪಚಾರವಾದಿನೀತ್ಯರ್ಥಃ । ಗೋಮತೀ ಬಹ್ವೀಭಿರ್ಗೋಭಿರುಪೇತಾ । ಗೋಪ್ರದೇತ್ಯರ್ಥಃ । ಅತ ಏವ ಮಹೀ ಮಹತೀ ಪೂಜ್ಯಾ । ಯಥೋಕ್ತವಾಚೋ ದೃಷ್ಟಾಂತಃ । ಪಕ್ವಾ ಶಾಖಾ ನ । ಯಥಾ ಬಹುಭಿಃ ಪಕ್ವೈಃ ಫಲೈರುಪೇತಾ ಪನಸವೃಕ್ಷಾದಿಶಾಖಾ ಪ್ರೀತಿಹೇತುಸ್ತದ್ವತ್ । ಯದ್ಯಪಿ ಮಹನ್ನಾಮಸು ವ್ರಾಧನ್ ವಿರಪ್ಶೀತಿ ಪಠಿತಂ ತಥಾಪ್ಯತ್ರ ಮಹೀತ್ಯನೇನ ಪುನರುಕ್ತಿಪ್ರಸಂಗಾದವಯವಾರ್ಥೋ ಗೃಹೀತಃ ॥ ಏವ ಏವಮಾದೀನಾಮಂತ ಇತ್ಯಂತೋದಾತ್ತಃ ಸಂಹಿತಾಯಾಂ ನಿಪಾತಸ್ಯ ಚೇತಿ ದೀರ್ಘಃ । ಹಿ । ನಿಪಾತ ಆದ್ಯುದಾತ್ತಃ । ಅಸ್ಯ । ಪ್ರಕೃತಸ್ಯೇಂದ್ರಸ್ಯ ಪರಾಮರ್ಶಾದಿದಮೋಽನ್ವಾದೇಶ ಇತ್ಯಾದಿನಾಶಾದೇಶೋಽನುದಾತ್ತ ಇತಿ ಸರ್ವಾನುದಾತ್ತಃ । ಸೂನೃತಾ । ಊನ ಪರಿಹಾಣೇ । ಸುತರಾಮೂನಯತ್ಯಪ್ರಿಯಮಿತಿ ಸೂನ್ । ಸಾ ಚಾಸಾವೃತಾ ಸತ್ಯಾ ಚೇತಿ ಸೂನೃತಾ ಪ್ರಿಯಸತ್ಯಾ ವಾಕ್ । ಪರಾದಿಶ್ಛಂದಸಿ ಬಹುಲಮಿತ್ಯೃಕಾರ ಉದಾತ್ತಃ । ವಿರಪ್ಶೀ । ವಿಚಿತ್ರಂ ರಪಣಂ ವಿರಪ್ । ರಪ ಲಪ ವ್ಯಕ್ತಾಯಾಂ ವಾಚಿ । ಸಂಪದಾದಿತ್ವಾದ್ಭಾವೇ ಕ್ವಿಪ್ । ತದೇಷಾಮಸ್ತೀತಿ ವಿರಪ್ಸಾನಿ ವಾಕ್ಯಾನಿ । ತಾನಿ ಯಸ್ಯಾಂ ವಾಚಿ ಸಂತಿ ಸಾ ವಾಗ್ವಿರಪ್ಶಿನೀ । ಅತ ಇನಿಠನಾವಿತೀನಿಃ । ಯಸ್ಯೇತಿ ಚ । ಪಾ. ೬-೪-೧೪೮ । ಇತ್ಯಕಾರಲೋಪಃ । ಅನ್ನೇಭ್ಯೋ ಙೀಪ್ । ಪಾ. ೪-೧-೫ । ಇತಿ ಙೀಪ್ । ಇಕಾರಃ ಪ್ರತ್ಯಯಸ್ವರೇಣೋದಾತ್ತಃ । ನಕಾರಲೋಪಶ್ಛಾಂದಸಃ । ಸವರ್ಣದೀರ್ಘ ಏಕಾದೇಶ ಉದಾತ್ತೇನೋದಾತ್ತ ಇತ್ಯುದಾತ್ತಃ । ಗಾವೋಽಸ್ಯಾಂ ಸಂತೀತಿ ಗೋಮತೀ। ಮತುಬ್ಙೀಪೌ ಪಿತ್ತ್ವಾದನುದಾತ್ತೌ । ಪ್ರಾತಿಪದಿಕಸ್ವರ ಏವ ಶಿಷ್ಯತೇ । ಮಹೀ । ಮಹತೀ । ಉಗಿತಶ್ಚ । ಪಾ. ೪-೧-೬ । ಇತಿ ಙೀಪ್ । ತಸ್ಯ ಪಿತ್ತ್ವಾದನುದಾತ್ತತ್ವೇ ಪ್ರಾಪ್ತೇ ಶತುರನುಮೋ ನದ್ಯಜಾದೀ ಇತ್ಯತ್ರ ಬೃಹನ್ಮಹತೋರುಪಸಂಖ್ಯಾನಂ । ಪಾ. ೬-೧-೧೭೩-೧ । ಇತ್ಯುದಾತ್ತತ್ವಂ । ಅಚ್ಛಬ್ದಲೋಪಶ್ಛಾಂದಸಃ । ಪಕ್ವಾ । ಡುಪಚಷ್ ಪಾಕೇ । ನಿಷ್ಠಾ । ಪಾ. ೩-೨-೧೦೨ । ಇತಿ ಕ್ತಪ್ರತ್ಯಯಃ । ಪಚೋ ವಃ । ಪಾ. ೮-೨-೫೨ । ಇತಿ ವತ್ವಂ । ಚೋಃ ಕುಃ । ಪಾ. ೮-೨-೩೦ । ಇತಿ ಕುತ್ವಂ । ಪ್ರತ್ಯಯಸ್ವರೇಣಾಂತೋದಾತ್ತಃ । ಟಾಪಾ ಸಹ ಸವರ್ಣದೀರ್ಘ ಏಕಾದೇಶ ಉದಾತ್ತೇನೋದಾತ್ತ ಇತ್ಯುದಾತ್ತಃ । ಶಾಖಾ । ಶಾಖೃ ಶ್ಲಾಖೃ ವ್ಯಾಪ್ತೌ । ಪಚಾದ್ಯಚ್ । ಚಿತ್ತ್ವಾದಂತೋದಾತ್ತೇ ಪ್ರಾಪ್ತೇ ವೃಷಾದೇರಾಕೃತಿಗಣತ್ವಾದ್ವೃಷಾದಿತ್ವಾದಾದ್ಯುದಾತ್ತತ್ವಂ । ದಾಶುಷೇ । ದಾಶೃ ದಾನೇ । ದಾಶ್ವಾನ್ಸಾಹ್ವಾನ್ಮೀಢ್ವಾಂಶ್ಚ । ಪಾ. ೬-೧-೧೨ । ಇತಿ ನಿಪಾತನಾತ್ಕ್ವಸಾವಿಡಭಾವೋ ದ್ವಿರ್ವಚನಾಭಾವಶ್ಚ । ಚತುರ್ಥ್ಯೇಕವಚನೇ ಯಚಿ ಭಂ। ಪಾ. ೧-೪-೧೮ । ಇತಿ ಭಸಂಜ್ಞಾಯಾಂ ವಸೋಃ ಸಂಪ್ರಸಾರಣಂ । ಪಾ. ೬-೪-೧೩೧ । ಇತಿ ಸಂಪ್ರಸಾರಣಂ ವಕಾರಸ್ಯೋಕಾರಃ । ಪರಪೂರ್ವತ್ವಂ । ಶಾಸಿವಸಿಘಸೀನಾಂ ಚ । ಪಾ. ೮-೩-೬೦ । ಇತಿ ಷತ್ವಂ । ಪ್ರತ್ಯಯಸ್ವರೇಣೋಕಾರ ಉದಾತ್ತಃ ॥

॥ ಪ್ರತಿಪದಾರ್ಥ ॥

**ಅಸ್ಯ**—ಇಂದ್ರನ | **ಸೂನೃತಾ**—ಪ್ರಿಯವೂ ಸತ್ಯವೂ ಆದ (ವಾಕ್ಯವು) | **ದಾಶುಷೇ**—ಹವಿಸ್ಸನ್ನಿರ್ಪಿಸುವ ಯಜಮಾನನಿಗೆ | **ಪಕ್ವಾ**—ಪಕ್ವಫಲೋಪೇತವಾದ | **ಶಾಖಾ ನ**—ಕೊಂಬೆಯಂತೆ | **ವಿರಪ್ಶೀ**—ಬಹುವಿಧ (ಇಷ್ಟಪ್ರದವೂ) | **ಗೋಮತೀ**—ಗೋವುಗಳನ್ನು ಕೊಡುವುದೂ | **ಮಹೀ ಏವಾ ಹಿ**—ಪೂಜ್ಯವೂ (ಆಗಿಯೇ ಇರುವುದು)

॥ ಭಾವಾರ್ಥ ॥

ಹವಿಸ್ಸನ್ನು ಕೊಡುವ ಯಜಮಾನ ವಿಷಯದಲ್ಲಿ ಇಂದ್ರನ ಮಾತು ಸತ್ಯವಾಗಿಯೂ ಅನೇಕ ಇಷ್ಟಗಳನ್ನು ಕೊಡುವುದಾಗಿಯೂ ಇರುವುದು. ಅಲ್ಲದೆ ಆ ಇಂದ್ರನ ವಾಕ್ಯವು ಪಕ್ವಫಲಗಳಿಂದ ತುಂಬಿದ ಕೊಂಬೆಯಂತೆ ಯಜಮಾನನಿಗೆ ಅವನ ಬಹುವಿಧ ಇಷ್ಟಗಳನ್ನು ಕೊಡುವುದಲ್ಲದೆ ಗೋವುಗಳನ್ನೂ ಕೊಡುವುದು. ಇಂದ್ರನ ಮಾತು ಯಾವಾಗಲೂ ಪೂಜ್ಯವಾದುದರಿಂದ ಗೌರವಾರ್ಹವು. ಅದು ಎಂದಿಗೂ ಸುಳ್ಳಾಗುವುದಿಲ್ಲ.

ವಿಶೇಷವಿಷಯಗಳು

ಅಭಿಪ್ಲವಷಡಹವೆಂಬ ಯಾಗದ ಉಕ್ಥಮಂತ್ರಪಠನಕಾಲದಲ್ಲಿ ತೃತೀಯಸವನದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಏವಾಹ್ಯಸ್ಯ ಸೂನೃತಾ ಎಂಬ ತೃಚವನ್ನು ಪಠಿಸಬೇಕು. ಈ ವಿಷಯವನ್ನು ಆಶ್ವಲಾಯನರು ತಮ್ಮ ಶ್ರೌತಸೂತ್ರದಲ್ಲಿ (ಆ. ೭-೮) ಏಹ್ಯೂಷು ಬ್ರವಾಣಿ ತೇ ಎಂಬ ಖಂಡದಲ್ಲಿ ಅಥ ಬ್ರಾಹ್ಮಣಾಚ್ಛಂಸಿನೆ ಎಂದು ಪ್ರಾರಂಭಿಸಿ ಏವಾಹ್ಯಸಿ ವೀರಯುಃ (ಋ. ಸಂ. ೮-೯೨-೨೮) ಮತ್ತು ಏವಾಹ್ಯಸ್ಯ ಸೂನೃತಾ (ಋ. ಸಂ. ೧-೮-೮) ಎಂಬ ಋಕ್ಕುಗಳನ್ನು ಪಠಿಸಬೇಕೆಂದು ಹೇಳಿರುವರು.

ಈ ಋಕ್ಕಿನ ಅರ್ಥವು ಸ್ವಲ್ಪ ತೊಡಕಾಗಿರುವುದು. ಇಂದ್ರನು ಯಾವಾಗಲೂ ತನ್ನನ್ನು ಆರಾಧಿಸುವವರಿಗೆ ಅವರವರ ಇಷ್ಟಗಳನ್ನು ಕೊಡುವನು. ಅವನ ಮಾತು ಪ್ರಿಯವೂ ಸತ್ಯವೂ ಆಗಿರುವುದು, ಅದು ಸುಳ್ಳಾಗುವುದಿಲ್ಲ ಮತ್ತು ಚೆನ್ನಾಗಿ ಪಕ್ವವಾದ ಹಣ್ಣುಗಳಿಂದ ಜಗಿಯುತ್ತಿರುವ ವೃಕ್ಷದ ಕೊಂಬೆಯು ಜನರಿಗೆ ಹೇಗೆ ಸಂತೋಷವನ್ನುಂಟುಮಾಡುವುದೋ ಇಂದ್ರನ ಮಾತೂ ಹಾಗೆಯೇ ಜನರಿಗೆ ಪ್ರಿಯವಾಗಿರುವುದು. ಏಕೆಂದರೆ ಇಂದ್ರನು ತನಗೆ ಹವಿಸ್ಸನ್ನು ಕೊಡುವ ಯಜಮಾನನೇ ಮೊದಲಾದವರಿಗೆ ಅವರವರಿಗೆ ಬೇಕಾದ ಗೋವುಗಳೇ ಮೊದಲಾದ ಅನೇಕವಿಧವಾದ ಇಷ್ಟಗಳನ್ನು ಕೊಡುವನು. ಆದುದರಿಂದ ಅವನ ವಾಕ್ಯವು ಪೂಜ್ಯವೂ ಗೌರವಾರ್ಹವೂ ಆದುದು. ಅದು ಎಂದಿಗೂ ಸುಳ್ಳಾಗಲಾರದು ಎಂದು ಮುಖ್ಯಾಭಿಪ್ರಾಯವು.

**ಸೂನೃತಾ**—**ಊನ ಪರಿಹಾಣೇ | ಸುತರಾಮೂನಯತ್ಯಪ್ರಿಯಮಿತಿ ಸೂನ್ | ಸಾ ಚಾಸಾವೃತಾ ಸತ್ಯಾ ಚೇತಿ ಸೂನೃತಾ ಪ್ರಿಯಸತ್ಯಾ ವಾಕ್** | ಊನಧಾತುವಿಗೆ ಪರಿಹರಿಸುವುದು ಎಂದರ್ಥವು. ಅಪ್ರಿಯ ಎಂದರೆ ಕೆಡಕನ್ನು ಚೆನ್ನಾಗಿ ಪರಿಹರಿಸುವುದರಿಂದ ಸೂನ್ ಎಂದು ಹೆಸರು. ಋತ ಎಂದರೆ ಸತ್ಯವು ಆದುದರಿಂದ ಸೂನೃತಾಶಬ್ದಕ್ಕೆ ಅಪ್ರಿಯವಲ್ಲದ ಎಂದರೆ ಪ್ರಿಯವಾದ ಮತ್ತು ಸತ್ಯವಾದ ವಾಕ್ಯವು ಎಂದರ್ಥವು. ಸ್ಕಂದಸ್ವಾಮಿಯು ವಿರಪ್ಶೀ ಎಂಬ ಶಬ್ದಕ್ಕೆ **ಸರ್ವಕಾಮಧುಕ್** ಎಂದರೆ ಸಮಸ್ತ ಇಷ್ಟಗಳನ್ನು ಕೊಡುವ ಎಂಬ ಅರ್ಥವನ್ನಲ್ಲದೆ ಇನ್ನೊಂದು ಅರ್ಥವನ್ನು ಹೇಳಿರುವರು—**ಸೂನೃತಾ ಗರ್ಜಿತಲಕ್ಷಣಾ ವಾಕ್ | ಗೋಮತೀ**

**ಅಪೋಽತ್ರ ಗಾವ ಉಚ್ಯಂತೇ ||** ಎಂದರೆ ಇಲ್ಲಿ **ಗೋ** ಶಬ್ದಕ್ಕೆ ನೀರು, ಉದಕ ಎಂದು ಅರ್ಥವಾಡಬೇಕು. **ಸೂನೃತಾ** ಎಂದರೆ ಗರ್ಜನಯುಕ್ತವಾದ ವಾಕ್ ಅಥವಾ ಶಬ್ದಎಂದು. ಆದುದರಿಂದ **ಸೂನೃತಾ ಗೋಮತೀ** ಎಂಬ ಶಬ್ದಗಳಿಗೆ ಶಬ್ದಯುಕ್ತವಾದ ಉದಕಗಳು ಎಂದರೆ ಮೇಘಗರ್ಜನೆಯಿಂದ ಕೂಡಿದ ಮಳೆಯು ಎಂದರ್ಥ ಮಾಡಿಧಾರೆ

**ವಿರಪ್ಶೀ—ವಿವಿಧರಪಣೋಪೇತವಾಕ್ಯಯುತಾ | ಬಹುವಿಧೋಪಚಾರವಾದಿನೀ | ರಪ ಲಪ ವ್ಯಕ್ತಾಯಾಂ ವಾಚಿ | ವಿಚಿತ್ರಂ ರಪಣಂ ಯಸ್ಯಾಂ ವಾಚಿ ಅಸ್ತೀತಿ ಸಾ ವಿರಪ್ಶೀ ||** ರಪ ಧಾತುವಿಗೆ ಶಬ್ದ ಮಾಡು, ಮಾತನಾಡು ಎಂದರ್ಥವು, ವಿಶೇಷವಾಗಿ ಅಥವಾ ವಿಚಿತ್ರವಾಗಿ ಅಥವಾ ವಿಧವಿಧವಾಗಿ ಮಾತನಾಡು ವುದಕ್ಕೆ ವಿರಪಣ ಎಂದು. ಇಂತಹ ಶಬ್ದಗಳಿರುವ ವಾಕ್ಯಕ್ಕೆ ವಿರಪ್ಶೀ ಎಂದರೆ ಬಹುವಿಧವಾದ ಉಪಚಾರಶಬ್ದ ಗಳನ್ನೊಳಗೊಂಡಿರುವ ವಾಕ್ಯವೆಂದರ್ಥವು. ಎಂದರೆ ಇಂದ್ರನ ವಾಕ್ಯವು ಬಹುವಿಧವಾದ ಇಷ್ಟಗಳನ್ನು ಕೊಡುವು ದೆಂದರ್ಥವು. ವಿರಪ್ಶೀ ಎಂಬ ಶಬ್ದಕ್ಕೆ ಮಹತ್, ದೊಡ್ಡದು ಎಂಬರ್ಥವು ರೂಢಿಯಲ್ಲಿದ್ದರೂ ಈ ಋಕ್ಕಿನಲ್ಲಿ ಆ ಅರ್ಥವನ್ನೇ ಹೇಳುವ ಮಹೀ ಎಂಬ ಶಬ್ದವಿರುವುದರಿಂದ ದ್ವಿರುಕ್ತಿದೋಷವುಂಟಾಗುವುದೆಂದು ಈ ಶಬ್ದಕ್ಕೆ ಮಹತ್ ಎಂಬ ಅರ್ಥವನ್ನು ಹೇಳದೆ ಅವಯವಾರ್ಥವನ್ನು ಕಲ್ಪಿಸಿರುವುದೆಂದು ಭಾಷ್ಯಕಾರರು ಹೇಳಿರುವರು.

**ಏವ**—ಛಂದಸ್ಸಿನ ಅನುಕೂಲಕ್ಕಾಗಿ ವಕಾರವು ದೀರ್ಘವಾಗಿರುವುದು.

**ಗೋಮತೀ—ಬಹ್ವೀಭಿರ್ಗೋಭಿರುಪೇತಾ | ಗೋಪ್ರದೇತ್ಯರ್ಥಃ ||** ಗೋವುಗಳಿಂದ ಯುಕ್ತವಾದ ಎಂದರೆ ಗೋವುಗಳನ್ನು ಕೊಡುವ ಎಂದರ್ಥವು.

**ಪಕ್ವಾ ಶಾಖಾ**—ಇಲ್ಲಿ ಪಕ್ವಾ ಶಾಖಾ ಎಂದರೆ ಪಕ್ವವಾದ ಶಾಖೆಯೆಂದರ್ಥವಲ್ಲ, ಪಕ್ವಫಲಗಳಿಂದ ಜಗಿಯುತ್ತಿರುವ ಶಾಖೆಯೆಂದರ್ಥವು. ಇಂತಹ ಫಲಗಳು ಎಲ್ಲರಿಗೂ ಬೇಕಾಗಿರುವುದರಿಂದ ಕವಿಯು ಈ ಉಪ ಮಾನವನ್ನು ಕೊಟ್ಟಿರುವನು. ಇಲ್ಲಿ ನ ಎಂದರೆ ಇವ ಎಂದು ಉಪಮಾನಾರ್ಥವು.

|| ವ್ಯಾಕರಣಪ್ರಕ್ರಿಯಾ ||

**ಏವ—ಏವಾದೀನಾಮಂತಃ** (ಫಿ. ಸೂ. ೮೨) ಏವಾದಿಗಳ ಕೊನೆಯ ವರ್ಣವು ಉದಾತ್ತವಾಗುವುದು ಎಂಬುದರಿಂದ ಏವ ಎಂಬುದು ಅಂತೋದಾತ್ತ. ಸಂಹಿತಾಕಾಲದಲ್ಲಿ **ನಿಪಾತಸ್ಯ ಚ** (ಪಾ. ಸೂ. ೬-೩-೧-೩೬) ಮಂತ್ರದಲ್ಲಿ ನಿಪಾತಕ್ಕೆ ದೀರ್ಘ ಬರುವುದು ಎಂಬುದರಿಂದ ದೀರ್ಘ ಬರುವುದು.

**ಹಿ— ನಿಪಾತಾಆದ್ಯುದಾತ್ತಾಃ**(ಫಿ. ಸೂ. ೮೦) ನಿಪಾತಗಳು ಆದ್ಯುದಾತ್ತಗಳಾಗುವುವು ಎಂಬುದರಿಂದ ಆದ್ಯುದಾತ್ತ.

**ಅಸ್ಯ**—ಪೂರ್ವದಲ್ಲಿ ಪ್ರಸ್ತುತನಾದ ಇಂದ್ರನಿಗೇ ಅಸ್ಯ ಎಂಬುದರಿಂದ ಪರಾಮರ್ಶವಾಗುವುದು. ಆದ್ದರಿಂದ **ಇದಮೋಽನ್ವಾದೇಶೇಽಶನುದಾತ್ತಸ್ತೃತೀಯಾದೌ** (ಪಾ. ಸೂ. ೨-೪-೩೨) ತೃತೀಯಾದಿ ವಿಭಕ್ತಿ ಪರದಲ್ಲಿರುವಾಗ ಅನ್ವಾದೇಶವಿಷಯಕವಾದ ಇದಮ್ ಶಬ್ದದ ಸ್ಥಾನದಲ್ಲಿ ಅನುದಾತ್ತವಾದ ಅಶ್ ಬರುವುದು. ಅಶ್ ಆದೇಶವು ಶಿತ್ತಾದ್ದರಿಂದ ಇದಮ್ ಶಬ್ದದ ಸಂಪೂರ್ಣಸ್ಥಾನದಲ್ಲಿ ಬರುವುದು. ಈ ರೀತಿಯಲ್ಲಿ ಅ ಎಂಬು ವುದು ಅನುದಾತ್ತ, **ಅನುದಾತ್ತೌಸುಪ್ಪಿತೌ** (ಪಾ. ಸೂ, ೩೭೧-೪) ಎಂಬುದರಿಂದ ಸ್ಯ ಅನುದಾತ್ತ. ಅಂತು ಅಸ್ಯ ಎಂಬುದು ಸರ್ವಾನುದಾತ್ತ.

**ಸೂನೃತಾ— ಊನಪರಿಹಾಣೇ** ಧಾತು. ಸುತರಾಂ ಊನಯತಿ ಅಪ್ರಿಯಂ, ಅಪ್ರಿಯವನ್ನು ಚೆನ್ನಾಗಿ (ನಿಶ್ಶೇಷವಾಗಿ) ಪರಿಹರಿಸುವುದು ಇತಿ, ಸೂನ್, ಋತಾ ಎಂದರೆ ಸತ್ಯವಾದುದು ಎಂದರ್ಥ. ಸೂನ್ ಚ ಸಾ ಋತಾ ಚ, ಸೂನೃತಾ ಪ್ರಿಯವೂ ಸತ್ಯವೂ ಆಗಿರುವ ಮಾತು, **ಪರಾದಿಶ್ಛಂದಸಿ ಬಹುಲಮ್** (ಪಾ. ಸೂ. ೬-೨-೧೯೯) ಇಲ್ಲಿ **ಸಕ್ಥಂಚಾಕ್ರಾನ್ತಾತ್** (ಪಾ. ಸೂ. ೬-೨-೧೯೮) ಎಂಬುದರಿಂದ ಸಕ್ಥಂ ಎಂಬ ಪದವು ಅನುವೃತ್ತವಾಗುವುದು. ಏವಂಚ ಛಂದಸ್ಸಿನಲ್ಲಿ ಪರಪದವಾದ ಸಕ್ಥಶಬ್ದದ ಆದಿಯು ಬಹುಲವಾಗಿ ಉದಾತ್ತವಾಗುವುದು ಎಂದು ಅರ್ಥವು ಯದ್ಯಪಿ ಏರ್ಪಡುವುದು. **ವಿಭಾಷೋತ್ಪುಚ್ಛೇ** (ಪಾ.ಸೂ. ೬-೨-೯೬) ಎಂಬುದರಿಂದ **ವಿಭಾಷಾ** ಎಂಬ ಪದವು ಅನುವೃತ್ತವಾಗುವುದು. ಹೀಗಿರುವಲ್ಲಿ ಇಲ್ಲಿ ಬಹುಲಗ್ರಹಣವು ವಿಕಲ್ಪವೆಂದು ಇಷ್ಟುಮಾತ್ರವನ್ನು ಬೋಧಿಸಲಿಕ್ಕಾಗಿ ಉಪಾತ್ತವಾಗಿಲ್ಲ. ಬಹೂನರ್ಥಾನ್ ಲಾತಿ ಇತಿ ಬಹುಲಂ ಎಂಬ ವ್ಯುತ್ಪತ್ತಿಯಿಂದ ಬಹುವಿಧವಾದ ಅರ್ಥವನ್ನು ಬೋಧಿಸುವುದಕ್ಕಾಯೇ ಇಲ್ಲಿ ಬಹುಲಗ್ರಹಣವನ್ನು ಮಾಡಿರುವರು. ಇದರ ಅರ್ಥವನ್ನು ವಾರ್ತಿಕಕಾರರು ಹೇಳಿರುವರು ' ಪರಾದಿಶ್ಚ ಪರಾಂತಶ್ಚ ಪೂರ್ವಾಂತಶ್ಚಾಪಿದೃಶ್ಯತೇ ' ಪೂರ್ವಾದಯಶ್ಚ ದೃಶ್ಯಂತೇ ವ್ಯತ್ಯಯೋ ಬಹುಲಂಯತಃ ‖ ಎಂಬುದೇ ವಾರ್ತಿಕವು. ಆದ್ದರಿಂದ ಸಕ್ಥ ಶಬ್ದವಿಲ್ಲದೇ ಇದ್ದರೂ ಈ ಸ್ವರ ಬರುವುದು. ಏವಂಚ ಸೂನೃತಾ ಎಂಬಲ್ಲಿ ಋಕಾರವು ಉದಾತ್ತ.

**ವಿರಪ್ಶೀ— ವಿಚಿತ್ರಂ ರಪಣಂ ವಿರಪ್ ರಪ, ಲಪ. ವ್ಯಕ್ತಾಯಾಂ ವಾಚಿ.** ವಿ ಉಪಸರ್ಗಪೂರ್ವಕವಾದ ರಪ್ ಧಾತುವಿನ ಮುಂದೆ **ಸಂಪದಾದಿಭ್ಯಃಕ್ವಿಪ್** (ಪಾ. ಸೂ. ೩-೩-೧೦೮ ವಾ ೯) ಎಂಬುದರಿಂದ ಕ್ವಿಪ್ ಪ್ರತ್ಯಯ, ಕ್ವಿಪ್ಪಿನಲ್ಲಿ ಎಲ್ಲಾ ವರ್ಣಗಳಿಗೂ ಲೋಪಬರುವುದು. ವಿರಪ್= ವಿಚಿತ್ರವಾದ ಮಾತು, ವಿರಪ್ ಏಷಾಂವಾಕ್ಯಾನಾಂ ಅಸ್ತಿ ಇತಿ ವಿರಪ್ಶಾನಿ, ವಿಚಿತ್ರವಾದ ಮಾತುಗಳುಳ್ಳ ವಾಕ್ಯಗಳು ; ವಿರಪ್ಶಗಳು. ಈ ವಾಕ್ಯಗಳು ಯಾವ ವಾಕ್ಕಿನಲ್ಲಿದೆಯೋ ಅದಕ್ಕೆ ವಿರಪ್ಶಿನೀ ಎನ್ನುವರು. ವಿರಪ್ಶಾನಿ ಅಸ್ಯಾಂ ಸನ್ತಿ ಎಂದು ವಿಗ್ರಹಮಾಡಿದಾಗ **ಅತಇನಿಠನೌ** (ಪಾ. ಸೂ. ೫-೨-೧೧೫) ಹ್ರಸ್ವಾಕಾರಾಂತ ಪ್ರಾತಿಪದಿಕದ ಮುಂದೆ ಪ್ರಥಮಾವಿಭಕ್ತಿ ಬಂದಿದ್ದರೆ ಅದರ ಮುಂದೆ ಮತುಪ್ ಪ್ರತ್ಯಯದ ಅರ್ಥವನ್ನು ವಿವಕ್ಷಿಸಿದಾಗ ಇನ್, ಠನ್ ಪ್ರತ್ಯಯಗಳು ಬರುವುವು. ಎಂಬುದರಿಂದ ' ಇನಿ ' ಪ್ರತ್ಯಯ ಬಂದರೆ ವಿರಪ್ಶ+ಇನ್, **ಯಸ್ಯೇತಿಚ** (ಪಾ. ಸೂ. ೬-೪-೧೪೮) ಈಕಾರ ಅಥವಾ ತದ್ಧಿತ ಪ್ರತ್ಯಯ ಪರದಲ್ಲಿದ್ದರೆ ಭಸಂಜ್ಞಕಾಂಗಾವಯವವಾದ ಇವರ್ಣ ಅವರ್ಣಗಳಿಗೆ ಲೋಪ ಬರುವುದು ಎಂಬುದರಿಂದ ಅಕಾರಕ್ಕೆ ಲೋಪ. ವಿರಪ್ಶ್‌ ' ಇನ್= ವಿರಪ್ಶಿನ್ **ಋನ್ನೇಭ್ಯೋಙೀಪ್** (ಪಾ. ಸೂ, ೪-೧-೫) ಋದಂತ ಅಥವಾ ನಕಾರಾಂತವಾದ ಪ್ರಾತಿಪದಿಕದ ಮುಂದೆ ಸ್ತ್ರೀಲಿಂಗದಲ್ಲಿ ಙೀಪ್ ಬರುವುದು ಎಂಬುದರಿಂದ ಙೀಪ್ ಬಂದರೆ ವಿರಪ್ಶಿನ್+ಈ. ಇಕಾರವು ಪ್ರತ್ಯಯ ಸ್ವರದಿಂದ ಉದಾತ್ತ. ನಕಾರಕ್ಕೆ ಛಾಂದಸವಾಗಿ ಲೋಪ. **ಅಕಸ್ಸವರ್ಣೇದೀರ್ಘಃ** (ಪಾ.ಸೂ. ೬-೧-೬-೧-೧೦೧) ಎಂಬುದರಿಂದ ಸವರ್ಣ ದೀರ್ಘ ಬಂದರೆ ವಿರಪ್ಶೀ ಎಂದಾಗುವುದು. ಉದಾತ್ತ ಅನುದಾತ್ತಗಳಾದ ಇ+ಈಗಳಿಗೆ ಬಂದ ಏಕಾದೇಶವು **ಏಕಾದೇಶ ಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಎಂಬುದರಿಂದ ಉದಾತ್ತ.

**ಗೋಮತೀ— ಗಾವಃ ಅಸ್ಯಾಂ ಸನ್ತಿ** ಎಂದು ವಿಗ್ರಹ ಮಾಡಿದಾಗ **ತದಸ್ಯಾಸ್ತ್ಯಸ್ಮಿನ್ನಿತಿಮತುಪ್** (ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ. **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಙೀಪ್, ಮತುಪ್, ಙೀಪ್, ಎರಡೂ ಪಿತ್ತಾದ್ದರಿಂದ ಅನುದಾತ್ತ. ಗೋ ಎಂಬಲ್ಲಿ ಪ್ರಾತಿಪದಿಕ ಸ್ವರವೇ ನಿಲ್ಲುವುದು.

**ಮಹೀ**—ಮಹತೀ ಎಂದು ಅರ್ಥ, ಮಹತ್ ಶಬ್ದದ ಮುಂದೆ **ಉಗಿತಶ್ಚ** (ಪಾ. ಸೂ. ೪-೧-೬) ಉಗಿತ್ತಾದ ಪ್ರಾತಿಪದಿಕದ ಮುಂದೆ ಸ್ತ್ರೀಲಿಂಗದಲ್ಲಿ ಙೀಪ್ ಬರುವುದು ಎಂಬುದರಿಂದ ಙೀಪ್ ಬರುವುದು, ಙೀಪ್ಪು ಪಿತ್ತಾದ್ದರಿಂದ ಅನುದಾತ್ತ ಪ್ರಾಪ್ತವಾದರೆ **ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬಲ್ಲಿ ಪಠಿತವಾಗಿರುವ **ಬೃಹನ್ಮಹತೋರುಪಸಂಖ್ಯಾನಂ** (ಪಾ. ಸೂ, ೬-೧-೧೭೩-೧) ಬೃಹತ್ ಮಹತ್ ಶಬ್ದಗಳ ಮುಂದೆ ಇರುವ, ನದೀಸಂಜ್ಞಕ ಪ್ರತ್ಯಯ ಪೂಜಾದಿ ಶಸಾದಿ ಪ್ರತ್ಯಯ ಇವುಗಳು ಉದಾತ್ತಗಳಾಗುವುವು ಎಂಬುದರಿಂದ ಉದಾತ್ತ ಸ್ವರಬರುವುದು. ಮಹತ್ ಎಂಬುದರ ಅತ್ ಎಂಬುದಕ್ಕೆ ಛಾಂದಸವಾಗಿ ಲೋಪ ಬರುವುದು.

**ಪಕ್ವಾ**—ಡುಪಚಷ್ ಪಾಕೇ, ಧಾತು. **ನಿಷ್ಠಾ** (ಪಾ. ಸೂ. ೩-೨-೧೦೨) ಭೂತಾರ್ಥದಲ್ಲಿರುವ ಧಾತುಗಳ ಮುಂದೆ ಕ್ತ, ಕ್ತವತು ಎಂಬ ಪ್ರತ್ಯಯಗಳು ಬರುವುವು ಎಂಬುದರಿಂದ ಕ್ತ ಪ್ರತ್ಯಯ **ಪಚೋವಃ** (ಪಾ. ಸೂ. ೮-೨-೫೨) ಪಚ ಧಾತುವಿನ ಮುಂದೆ ಇರುವ ಕ್ತ ಕ್ತವತು ಪ್ರತ್ಯಯಗಳ ತಕಾರಕ್ಕೆ ವಕಾರ ಬರುವುದು ಎಂಬುದರಿಂದ ತಕಾರಕ್ಕೆ ವಕಾರಾದೇಶ. **ಚೋಃಕುಃ** (ಪಾ. ಸೂಃ ೮-೨-೩೦) ಪದದ ಕೊನೆಯಲ್ಲಿರುವ ಚವರ್ಗಕ್ಕೂ ಝುಲ್ಲಿನ ಹಿಂದಿರುವ ಚವರ್ಗಕ್ಕೂ ಕವರ್ಗಬರುವುದು ಎಂಬುದರಿಂದ ಚಕಾರಕ್ಕೆ ಕಕಾರ ಪ್ರತ್ಯಯ ಸ್ವರದಿಂದ ಪಕ್ವ ಎಂಬುದು ಅಂತೋದಾತ್ತ. **ಅಜಾದ್ಯತಷ್ಟಾಪ್** (ಪಾ. ಸೂ. ೪-೧-೪) (ಸ್ತ್ರೀಲಿಂಗದಲ್ಲಿ) ಅಜಾದಿಗಣಪಠಿತವಾದ ಶಬ್ದಗಳ ಮುಂದೆಯೂ ಅಕಾರಾಂತವಾದ ಶಬ್ದದ ಮುಂದೆಯೂ ಇವುಗಳಲ್ಲಿರುವ ಸ್ತ್ರೀತ್ವ ತೋರುವಾಗ ಟಾಪ್ ಬರುವುದು ಎಂಬುದರಿಂದ ಟಾಪ್ ಪ್ರತ್ಯಯ. **ಅಕಸ್ಸವರ್ಣೇದೀರ್ಘಃ** (ಪಾ. ಸೂ. ೬-೧-೧೦೧) ಎಂಬುದರಿಂದ ಸವರ್ಣದೀರ್ಘ, ಪಕ್ವಾ ಎಂದಾಗುವುದು. ಟಾಪ್ ಪ್ರತ್ಯಯವು ಪಿತ್ತಾದ್ದರಿಂದ ಅನುದಾತ್ತ. ಏಕಾದೇಶ **ಉದಾತ್ತೇನೋದಾತ್ತಃ** (ಪಾ. ಸೂ ೮-೨-೫) ಎಂಬುದರಿಂದ ಸವರ್ಣ ದೀರ್ಘದಿಂದ ಬಂದ ಆಕಾರವು ಉದಾತ್ತ

**ಶಾಖಾ**—ಶಾಖೃ ಶ್ಲಾಖೃ ವ್ಯಾಪ್ತೌ **ಧಾತು** ಶಾಖೃಧಾತುವು ಪಚಾದಿಯಾದ್ದರಿಂದ **ನನ್ದಿಗ್ರಹಿಪಚಾದಿಭ್ಯೋಲ್ಯುಣಿನ್ಯಚಃ** (ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ ಬರುವುದು. ಅಚ್ ಪ್ರತ್ಯಯವು ಚಿತ್ತಾದ್ದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತ ಪ್ರಾಪ್ತವಾದರೆ ಅದನ್ನು ಬಾಧಿಸಿ ವೃಷಾದಿಯು ಆಕೃತಿಗಣವಾದ್ದರಿಂದ ವೃಷಾದಿಯಲ್ಲಿ ಸೇರಿದ ಶಾಖ ಎಂಬುದು **ವೃಷಾದೀನಾಂಚ** (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತ. ಟಾಪ್ ಸವರ್ಣದೀರ್ಘಗಳು ಬಂದರೆ **ಸ್ಥಾನೇಽನ್ತರತಮಃ** (ಪಾ. ಸೂ. ೧-೧-೫೦) ಎಂಬುದರಿಂದ ಆಕಾರ ಅನುದಾತ್ತ. ನಂತರ **ಉದಾತ್ತಾದನುದಾತ್ತಸ್ಯಸ್ವರಿತಃ** (ಪಾ. ಸೂ. ೮-೪-೬೬) ಎಂಬುದರಿಂದ ಆಕಾರ ಸ್ವರಿತವಾಗುವುದು.

**ದಾಶುಷೇ**—**ದಾಶ್ವಾನ್ ಸಾಹ್ವಾನ್ ಮೀಢ್ವಾಂಶ್ಚ** (ಪಾ. ಸೂ. ೬-೧-೧೨) ಎಂದು ನಿಪಾತನಮಾಡಿರುವುದರಿಂದ ದಾಶೃದಾನೇ ಎಂಬಧಾತುವಿನ ಮುಂದೆ ಕ್ವಸು ಪ್ರತ್ಯಯವನ್ನಿಟ್ಟರೆ ಇಡಾಗಮ ದ್ವಿತ್ವಗಳು ಬರುವುದಿಲ್ಲ. ದಾಶ್ವಸ್ ಎಂಬುದರ ಮುಂದೆ ಚತುರ್ಥೀ ಏಕವಚನ ಙೇ ಪ್ರತ್ಯಯವನ್ನಿಟ್ಟರೆ ದಾಶ್ವಸ್+ಏ ಎಂದಿರುವಾಗ **ಯಚಿಭಮ್** (ಪಾ. ಸೂ. ೧-೪-೧೮) ಪ್ರತ್ಯಯಾವಧಿಕವಾದ ಯಕಾರಾದಿ ಅಥವಾ ಅಜಾದಿಯಾದ ಸ್ವಾದಿ ಪ್ರತ್ಯಯಗಳ ಹಿಂದೆ ಇರುವುದು ಭ ಸಂಜ್ಞೆಯನ್ನು ಹೊಂದುವುದು ಎಂಬುದರಿಂದ ದಾಶ್ವಸ್ ಎಂಬುದಕ್ಕೆ ಭ ಸಂಜ್ಞೆ ಬಂದರೆ **ವಸೋಸ್ಸಂಪ್ರಸಾರಣಮ್** (ಪಾ. ಸೂ. ೬-೪-೧೩೧) ಭ ಸಂಜ್ಞೆಯನ್ನು ಹೊಂದಿರುವ ವಸ್ಸು ಪ್ರತ್ಯಯಾಂತಕ್ಕೆ ಸಂಪ್ರಸಾರಣ ಬರುವುದು ಎಂಬುದರಿಂದ ಸಂಪ್ರಸಾರಣ ಬರುವುದು. ಅಂದರೆ ವ್‌ಗೆ ಉಕಾರ

ಬರುವುದು. ನಂತರ **ಸಂಪ್ರಸಾರಣಾಚ್ಚ** (ಪಾ, ಸೂ. ೬-೧-೧೦೮) ಸಂಪ್ರಸಾರಣದ ಮುಂದೆ ಸ್ವರ ಪರದಲ್ಲಿದ್ದರೆ ಪೂರ್ವಪರಗಳ ಸ್ಥಾನದಲ್ಲಿ ಪೂರ್ವರೂಪ ಬರುವುದು ಎಂಬುದರಿಂದ ಪೂರ್ವರೂಪ ಬಂದರೆ ದಾಶುಸ್+ಏ **ಆದೇಶಪ್ರತ್ಯಯಯೋಃ** (ಪಾ. ಸೂ. ೮-೩-೫೧) ಇಣ್ ಕವರ್ಗಗಳ ಮುಂದೆ ಇರುವ ಆದೇಶರೂಪವಾದ ಸಕಾರಕ್ಕೂ ಪ್ರತ್ಯಯಾವಯವಾದ ಸಕಾರಕ್ಕೂ ಷತ್ವ ಬರುವುದು ಎಂಬುದರಿಂದ ವಸುಪ್ರತ್ಯಯಾವಯವವಾದ ಸಕಾರಕ್ಕೆ ಷಕಾರ ಬರುವುದು ದಾಶುಷೇ ಎಂದಾಗುವುದು. **ಶಾಸಿ ವಸಿ ಘಸೀನಾಂಚ** (ಪಾ. ಸೂ. ೮-೩-೬೦) ಎಂಬ ಸೂತ್ರದಲ್ಲಿ ವಸು ಎಂಬುದರಿಂದ ವಸ ನಿವಾಸೇ ಎಂಬ ಧಾತುವಿಗೇ ಗ್ರಹಣ. ವಸು ಪ್ರತ್ಯಯಕ್ಕೆ ಗ್ರಹಣವಿಲ್ಲ. ಆದ್ದರಿಂದ ಈ ಸೂತ್ರದಿಂದ ಇಲ್ಲಿ ಷತ್ವ ಬರುವುದಿಲ್ಲ. ಇದನ್ನು ಹಿಂದೆಯೇ (ಋ. ಸಂ. ೧-೬-೭) ನಿರೂಪಿಸಿರುವೆವು. ಪ್ರತ್ಯಯಸ್ವರದಿಂದ ಉಕಾರವು ಉದಾತ್ತ ‖ ೮ ‖

‖ ಸಂಹಿತಾಪಾಠಃ ‖

ಏವಾ ಹಿ ತೇ ವಿಭೂತಯ ಊತಯ ಇಂದ್ರ ಮಾವತೇ ‖
ಸದ್ಯಶ್ಚಿತ್ಸಂತಿ ದಾಶುಷೇ ‖ ೯ ‖

‖ ಪದಪಾಠಃ ‖

ಏವ । ಹಿ । ತೇ । ವಿऽಭೂತಯಃ । ಊತಯಃ । ಇಂದ್ರ । ಮಾऽವತೇ ‖
ಸದ್ಯಃ । ಚಿತ್ । ಸಂತಿ । ದಾಶುಷೇ ‖ ೯ ‖

‖ ಸಾಯಣಭಾಷ್ಯಂ ‖

ಹೇ ಇಂದ್ರ ತೇ ತವ ವಿಭೂತಯ ಐಶ್ವರ್ಯವಿಶೇಷಾ ಏವಾ ಹಿ ಏವಂ ವಿಧಾಃ ಖಲು । ಕಿಂ ವಿಧಾ ಇತಿ ತದುಚ್ಯತೇ । ಮಾವತೇ ಮತ್ಸದೃಶಾಯ ದಾಶುಷೇ ಹವಿರ್ದತ್ತವತೇ ಯಜಮಾನಾಯೋತ-ಯಸ್ತ್ವದೀಯರಕ್ಷಾರೂಪಾಃ ಸದ್ಯಶ್ಚಿತ್ಸಂತಿ । ಯದಾ ಕರ್ಮಾನುಷ್ಠಿತಂ ತದೈವ ಭವಂತಿ ‖ ಮಾವತೇ । ಮತ್ಸದೃಶಾಯ । ವತುಪ್ಪ್ರಕರಣೇ ಯುಷ್ಮದಸ್ಮದ್ಭ್ಯಾಂ ಛಂದಸಿ ಸಾದೃಶ್ಯ ಉಪಸಂಖ್ಯಾನಂ । ಪಾ. ೫-೨-೩೯-೧ । ಇತ್ಯಸ್ಮಚ್ಛಬ್ದಾದ್ವತುಪ್ । ಮಪರ್ಯಂತಸ್ಯ ಪ್ರತ್ಯಯೋತ್ತರಪದಯೋಶ್ಚ । ಪಾ. ೭-೨-೯೮ ಇತಿ ಮಾದೇಶಃ । ಅದ್ ಶಬ್ದೇನ ಸಹಾತೋ ಗುಣೇ । ಪಾ. ೬-೧-೯೭ । ಇತಿ ಪರರೂಪತ್ವಂ । ದೃಗ್ದೃಶ ವತುಷು । ಪಾ. ೬-೩-೮೯ । ಇತ್ಯನುವೃತ್ತಾವಾ ಸರ್ವನಾಮ್ನಃ । ಪಾ. ೬-೩-೯೧ । ಇತಿ ದಕಾರಸ್ಯಾಕಾರಃ। ಸವರ್ಣದೀರ್ಘತ್ವಂ। ವತುಪಃ ಪಿತ್ತ್ವಾತ್ಪ್ರಾತಿಪದಿಕಸ್ವರ ಏವ ಶಿಷ್ಯತೇ। ಸದ್ಯಃ । ಸಮಾನೇ ದ್ಯವೀತ್ಯರ್ಥೇ

ಸದ್ಯಃ ಪರುತ್ಪರಾರ್ಯ್ಯೈಷಮಃ । ಪಾ. ೫-೩-೨೨ । ಇತ್ಯಾದಿನಾ ನಿಪಾತಿತಂ । ಪ್ರತ್ಯಯಸ್ವರೇಣಾಂತೋದಾತ್ತತ್ವಂ । ಚಿತ್ । ಚಾದಯೋಽನುದಾತ್ತಾ ಇತ್ಯನುದಾತ್ತಃ । ಸಂತಿ । ಅಸ ಭುವಿ । ಲಟಃ ಸ್ಥಾನೇ ಝಿ । ಝೋಽಂತಃ । ಪಾ. ೭-೧-೩ । ಅದಿಪ್ರಭೃತಿಭ್ಯಃ ಶಪ ಇತಿ ಶಪೋ ಲುಕ್ । ತಿಙಃ ಪ್ರತ್ಯಯಾದ್ಯುದಾತ್ತತ್ವಂ । ಪ್ರತ್ಯಯಲೋಪೇ ಪ್ರತ್ಯಯಲಕ್ಷಣಂ । ಪಾ. ೧-೧-೬೨ । ಇತಿ ಶಬಕಾರಮಾಶ್ರಿತ್ಯ ಲಸಾರ್ವಧಾತುಕಾನುದಾತ್ತತ್ವಂ ನ ಭವತಿ । ವರ್ಣಾಶ್ರಯವಿಧೌ ಪ್ರತ್ಯಯಲಕ್ಷಣಂ ನಾಸ್ತಿ । ಪರಿ. ೨೧ । ಇತಿ ನಿಷೇಧಾತ್ । ದಾಶುಷೇ । ಗತಮಂತ್ರೇ ಗತಂ ॥

॥ ಪ್ರತಿಪದಾರ್ಥ ॥

(ಹೇ) ಇಂದ್ರ—ಎಲೈ ಇಂದ್ರನೇ । ತೇ—ನಿನ್ನ । ವಿಭೂತಯಃ—ಐಶ್ವರ್ಯವಿಶೇಷಗಳು । ಏವಾ ಹಿ—ಈ ವಿಧವಾಗಿರುವವು । (ಎಂದರೆ) ಮಾವತೇ—ನನ್ನಂತಿರುವ । ದಾಶುಷೇ—ಹವಿಸ್ಸನ್ನರ್ಪಿಸುವ ಯಜಮಾನನಿಗೆ (ನಿನ್ನ ಮಹಿಮೆಗಳು) ಊತಯಃ—ರಕ್ಷಣಾರೂಪವಾಗಿ । ಸದ್ಯಶ್ಚಿತ್ಸಂತಿ—ತಕ್ಷಣವೇ ಆಗಿರುವವು ॥

॥ ಭಾವಾರ್ಥ ॥

ಎಲೈ ಇಂದ್ರನೇ, ಹವಿಸ್ಸನ್ನು ಅರ್ಪಿಸುವ ನನ್ನಂತಹ ಯಜಮಾನನಿಗೆ (ಅಥವಾ ನನಗೆ) ನೀನು ಕೊಡುವ ರಕ್ಷಣೆಗಳು ಈ ವಿಧವಾದ ಮಹಿಮೆಯಿಂದ ಯುಕ್ತವಾಗಿರುವವು. ಹೇಗೆಂದರೆ ಆ ರಕ್ಷಣೆಗಳು ನಾವು ಮಾಡುತ್ತಿರುವ ಕರ್ಮಾನುಷ್ಠಾನಕಾಲದಲ್ಲಿಯೇ ಒದಗುವವು. ಈ ವಿಧವಾದ ಮಹಿಮೆಯೇ ನಿನ್ನ ಐಶ್ವರ್ಯ ವಿಶೇಷವು.

English Translation.

Verily, Indra, your glories are at all times (at once) the protectors of every such worshipper as I am.

॥ ವಿಶೇಷ ವಿಷಯಗಳು ॥

ಎಲೈ ಇಂದ್ರನೇ, ನೀನು ನಮ್ಮಂತವರನ್ನು ಯಾವಾಗಲೂ ರಕ್ಷಿಸುವೆ. ಅದರಲ್ಲಿಯೂ ಹವಿಸ್ಸನ್ನರ್ಪಿಸುವ ಯಜಮಾನನಿಗೆ ಯಜ್ಞಮಾಡುತ್ತಿರುವ ಕಾಲದಲ್ಲಿ ತಕ್ಷಣವೇ ನಿನ್ನ ರಕ್ಷಣೆಯು ದೊರೆಯುವುದು. ಇದಲ್ಲವೇ ನಿನ್ನ ಮಹಿಮೆಯು? ಎಂದು ಮುಖ್ಯಾಭಿಪ್ರಾಯವು.

ಏವ—ಛಂದಸ್ಸಿನ ಅನುಕೂಲಕ್ಕಾಗಿ ಏವಾ ಎಂದು ವಕಾರವು ದೀರ್ಘವಾಗಿರುವುದು.

ಮಾವತೇ—ಮತ್ಸದೃಶಾಯ-ನನಗೆ ಸಮಾನನಾದ, ನನ್ನಂತಿರುವ.

ಸದ್ಯಶ್ಚಿತ್—ತಕ್ಷಣವೇ, ಕೂಡಲೇ, ಆಗಲೇ, ಸಾವಕಾಶವಿಲ್ಲದೆ.

|| ವ್ಯಾಕರಣಪ್ರಕ್ರಿಯಾ ||

**ಮಾವತೇ**—**ಮತ್ಸದೃಶಾಯ** ನನಗೆ ಸಮಾನವಾದ ಎಂದರ್ಥವು. **ಯತ್ತದೇತೇಭ್ಯಃ ಪರಿಮಾಣೇವತುಪ್** (ಪಾ.ಸೂ. ೫-೨-೯) ಎಂಬ ಸೂತ್ರದಲ್ಲಿ **ವತುಪ್ಪ್ರಕರಣೇಯುಷ್ಮದಸ್ಮದ್ಭ್ಯಾಂ ಛಂದಸಿ ಸಾದೃಶ್ಯ ಉಪಸಂಖ್ಯಾನಂ** (ಪಾ. ಸೂ. ೫-೨-೩೯-೧) ಎಂದು ವಾರ್ತಿಕವಿರುವುದು. ವತುಪ್ ಪ್ರತ್ಯಯವನ್ನು ವಿಧಿಸುವ ಪ್ರಕರಣದಲ್ಲಿ 'ಯುಷ್ಮದಸ್ಮದ್ಭ್ಯಾಂ ಛಂದಸಿಸ್ಯಾದೃಶ್ಯೇ' ಎಂದು ವಚನವನ್ನು ಪಠಿಸಬೇಕು ಎಂದು ವಾರ್ತಿಕಾರ್ಥ. ಅಂದರೆ ಯುಷ್ಮದ್, ಅಸ್ಮದ್ ಶಬ್ದಗಳ ಮುಂದೆ ಸಾದೃಶ್ಯ ಎಂಬ ಅರ್ಥದಲ್ಲಿ ವೇದದಲ್ಲಿ ವತುಪ್ ಪ್ರತ್ಯಯ ಬರುವುದು ಎಂದು ಭಾವ. ಇದರಿಂದ ಅಸ್ಮದ್ ಶಬ್ದದ ಮುಂದೆ ವತುಪ್ ಬಂದರೆ ಅಸ್ಮದ್+ವತುಪ್, **ಪ್ರತ್ಯಯೋತ್ತರಪದಯೋಶ್ಚ** (ಪಾ.ಸೂ. ೭-೨-೯೮) ಪ್ರತ್ಯಯ ಅಥವಾ ಉತ್ತರಪದ ಪರದಲ್ಲಿದ್ದರೆ ಯುಷ್ಮದ್ ಅಸ್ಮದ್ ಶಬ್ದಗಳ ಮ ಪರ್ಯಂತಕ್ಕೆ ಅಂದರೆ ಯುಷ್ಮ್ ಅಸ್ಮ್ ಇವುಗಳಿಗೆ ಕ್ರಮವಾಗಿ ತ್ವ, ಮ, ಎಂಬ ಆದೇಶಗಳು ಬರುವುವು ಎಂಬುದರಿಂದ ಅಸ್ಮ್ ಎಂಬುದಕ್ಕೆ ಮ ಆದೇಶಬಂದು ಮ+ಅದ್+ವತುಪ್. ಈಗ **ಅತೋಗುಣೇ** (ಪಾ. ಸೂ. ೬-೧-೯೭)ಪದದ ಕೊನೆಯಲ್ಲಿಲ್ಲದ ಹ್ರಸ್ವಾಕಾರಕ್ಕೆ ಗುಣಸಂಜ್ಞಕವಾದ ವರ್ಣಗಳು ಪರದಲ್ಲಿರುವಾಗ ಪೂರ್ವಪರಸ್ಥಾನದಲ್ಲಿ ಪರರೂಪ ಬರುವುದು ಎಂಬುದರಿಂದ ಪರರೂಪ ಬಂದರೆ ಮದ್+ವತುಪ್ **ಆಸರ್ವನಾಮ್ನಃ** (ಪಾ.ಸೂ. ೬-೩-೯೧) ಇಲ್ಲಿ **ದೃಗ್‌ದೃಶವತುಷು** (ಪಾ. ಸೂ. ೬-೩-೮೯) ಎಂಬ ಸೂತ್ರವು ಅನುವೃತ್ತವಾಗುವುದು. ದೃಕ್, ದೃಶ, ವತು ಇವುಗಳು ಪರದಲ್ಲಿರುವಾಗ ಸರ್ವನಾಮ ಶಬ್ದಗಳ ಕೊನೆಯ ವರ್ಣಕ್ಕೆ ಆಕಾರಾದೇಶ ಬರುವುದು ಎಂಬುದರಿಂದ ದಕಾರಕ್ಕೆ ಆಕಾರಾದೇಶ ಬಂದರೆ ಮ+ಆ+ವತ್ ಎಂದಿರುವುದು. **ಅಕಸ್ಸವರ್ಣೇದೀರ್ಘಃ** (ಪಾ. ಸೂ. ೬-೧-೧೦೧) ಎಂಬುದರಿಂದ ಸವರ್ಣದೀರ್ಘ, ಮಾವತ್, ಚತುರ್ಥೀ ಏಕವಚನ ಙೇ ಪ್ರತ್ಯಯವನ್ನಿಟ್ಟರೆ ಮಾವತೇ ಎಂದಾಗುವುದು ವತುಪ್‌ಪ್ರತ್ಯಯವು ಪಿತ್ತಾದ್ದರಿಂದಲೂ ಙೇ ಎಂಬುದು ಸುಪ್ಪಾದ್ದರಿಂದಲೂ ಎರಡೂ **ಅನುದಾತ್ತೌಸುಪ್ಪಿತೌ** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತ. ಮಾ ಎಂಬುದು ಪ್ರಾತಿಪದಿಕ ಸ್ವರದಿಂದ ಅಂತೋದಾತ್ತವಾಗಿಯೇ ನಿಲ್ಲುವುದು

**ಸದ್ಯಃ**— ಸಮಾನೇ ಅಹನಿ ಎಂದು ವಿಗ್ರಹಮಾಡಿದಾಗ **ಸದ್ಯಃ ಪರುತ್ಪರಾರ್ಯೈಷಮಃ** (ಪಾ. ಸೂ. ೫-೩-೨೨) ಎಂಬುದರಿಂದ ಸಮಾನಶಬ್ದಕ್ಕೆ ಸ ಆದೇಶವೂ ಅಹರ್ವೃತ್ತಿಯಾದ ಸಪ್ತಮ್ಯಂತ ಸಮಾನ ಶಬ್ದದ ಮುಂದೆ ದ್ಯಸ್ ಪ್ರತ್ಯಯವೂ ನಿಪಾತಿತವಾಗಿರುವುದು. ಇದೇ ಅಂಶವನ್ನು ಮಹಾಭಾಷ್ಯಕಾರರು ಸಮಾನಸ್ಯ ಸಭಾವೋ ದ್ಯಸ್ ಚಾಹನಿ ಎಂಬ ವಾಕ್ಯದಿಂದ ಸ್ಪಷ್ಟಪಡಿಸಿರುವರು. **ಸದ್ಯಃ** ಎಂಬುದು ಪ್ರತ್ಯಯಸ್ವರದಿಂದ ಅಂತೋದಾತ್ತ.

**ಚಿತ್**—**ಚಾದಯೋಽನುದಾತ್ತಾಃ** (ಫಿ.ಸೂ. ೮-೪) ಎಂಬುದರಿಂದ ಅನುದಾತ್ತ.

**ಸನ್ತಿ**—ಅಸ್ ಧಾತುವಿನ ಮುಂದೆ ಲಟ್ ಅದರ ಸ್ಥಾನದಲ್ಲಿ ಪರಸ್ಮೈಪದ ಪ್ರಥಮಪುರುಷ ಬಹುವಚನ ಝಿ ಪ್ರತ್ಯಯ **ಝೋನ್ತಃ** (ಪಾ. ಸೂ. ೭-೨-೩) ಪ್ರತ್ಯಯಾವಯವವಾದ ಝ್ ಗೆ ಅನ್ತ್ ಆದೇಶ ಬರುವುದು ಎಂಬುದರಿಂದ ಅನ್ತಾದೇಶ ಬಂದರೆ ಅಸ್+ಅನ್ತಿ **ಕರ್ತರಿಶಪ್** (ಪಾ. ಸೂ ೩-೧-೬೮) ಎಂಬುದರಿಂದ ಬಂದ ವಿಕರಣವಾದ ಶಪ್ ಪ್ರತ್ಯಯಕ್ಕೆ **ಅದಿಪ್ರಭೃತಿಭ್ಯಃ ಶಪಃ** (ಪಾ. ಸೂ. ೨-೪-೭೨) ಎಂಬುದರಿಂದ ಲುಕ್ ಬರುವುದು. **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಕಿತ್ತು ಅಥವಾ ಙಿತ್ತು ಆದ ಸಾರ್ವಧಾತುಕ ಪ್ರತ್ಯಯ ಪರದಲ್ಲಿರುವಾಗ ಶ್ನಮ್, ಅಸ್ ಇವುಗಳ ಅಕಾರಕ್ಕೆ ಲೋಪಬರುವುದು ಎಂಬುದರಿಂದ ಅಕಾರ ಲೋಪ. ಸನ್ತಿ ಎಂದಾಗುವುದು. ಇಲ್ಲಿ ಅನ್ತಿ ಎಂಬ ತಿಙ್ ಪ್ರತ್ಯಯವು **ಆದ್ಯುದಾತ್ತಶ್ಚ** (ಪಾ. ಸೂ. ೩-೧-೩) ಪ್ರತ್ಯಯದ

ಆದಿಯು ಉದಾತ್ತವಾಗುವುದು ಎಂಬುದರಿಂದ ಆದ್ಯುದಾತ್ತ. ವಿಕರಣವಾದ ಶಪ್ಪಿಗೆ ಲುಕ್ ಬಂದಿರುವುದರಿಂದ ಅದುಪದೇಶದ ಮುಂದೆ ಇಲ್ಲವಾದ್ದರಿಂದ **ತಾಸ್ಯನುದಾತ್ತೇನ್ಙಿದದುಪದೇಶಾತ್** (ಪಾ. ಸೂ. ೬-೧-೧೮೬) ಎಂಬು ದರಿಂದ ಲಸ್ಥಾನಿಕ ಸಾರ್ವಧಾತುಕವಾದ ಅಸ್ತಿ ಗೆ ಅನುದಾತ್ತ ಬರುವುದಿಲ್ಲ. ಆದರೆ ಶಪ್ಪಿಗೆ ಲುಕ್ ಬಂದಿದ್ದರೂ **ಪ್ರತ್ಯಯಲೋಪೇಪ್ರತ್ಯಯಲಕ್ಷಣಮ್** (ಪಾ ಸೂ. ೧-೧-೬೨) ಪ್ರತ್ಯಯಕ್ಕೆ ಲೋಪ ಬಂದಿದ್ದರೂ ಪ್ರತ್ಯಯ ನಿಮಿತ್ತಕವಾದ ಕಾರ್ಯವು ಬರುವುದು ಎಂಬುದರಿಂದ ಪ್ರತ್ಯಯ ಲಕ್ಷಣ ಬರುವುದು. **ನಲುಮತಾಂಗಸ್ಯ** (ಪಾ. ಸೂ. ೧ ೧-೬೩) ಲುಮತ್ತಾದಶಬ್ದ (ಲುಕ್, ಶ್ಲು, ಲು) ವನ್ನುಚ್ಚರಿಸಿ ಲೋಪಬಂದಿದ್ದರೆ ಲುಪ್ತ ಪ್ರತ್ಯಯನಿಮಿತ್ತ ಕವಾದ ಅಂಗೋದ್ದೇಶ್ಯಕವಾದ ಕಾರ್ಯವು ಬರುವುದಿಲ್ಲ ಎಂಬುದರಿಂದ ಪ್ರತ್ಯಯಲಕ್ಷಣಕ್ಕೆ ನಿಷೇಧವು ಬರಲಿ ಎಂದರೆ ಇಲ್ಲಿ ಲುಕ್ ಶಬ್ದವನ್ನುಉಚ್ಚರಿಸಿ ಲೋಪ ಬಂದಿದ್ದರೂ ಸ್ವರವು ಲಸ್ಥಾನಿಕ ಸಾರ್ವಧಾತುಕಪ್ರತ್ಯಯವನ್ನು ಉದ್ದೇಶಿಸಿಕೊಂಡು ಬರುವ ಕಾರ್ಯ, ಅಂಗೋದ್ದೇಶ್ಯಕ ಕಾರ್ಯವಲ್ಲ, ಆದ್ದರಿಂದ ಬರುವುದಿಲ್ಲ ಅಂದಮೇಲೆ ಪ್ರತ್ಯಯ ಲಕ್ಷಣದಿಂದ ಅದುಪದೇಶನಿಮಿತ್ತಕವಾದ ಅನುದಾತ್ತ ಬರಲಿ ಎಂದು ಹೇಳಬಹುದು. ಇದು ಸರಿಯಲ್ಲ. ಏಕೆಂದರೆ ಅದುಪದೇಶವೆಂದರೆ ಉಪದೇಶಕಾಲದಲ್ಲಿ ಹ್ರಸ್ವವಾದ ಅಕಾರವನ್ನು ಹೊಂದಿರುವುದು ಎಂದರ್ಥ. ಇಂತಹದು ಶಪ್ ಎಂದು ಹೇಳಬೇಕು. ಅಂದರೆ ಶಪ್ಪಿನ ಅಕಾರವನ್ನು ಆಶ್ರಯಿಸಿಕೊಂಡು ಅನುದಾತ್ತವನ್ನು ಉಪಪಾದಿಸ ಬೇಕು. ಈಗ **ವರ್ಣಾಶ್ರಯೇನಾಸ್ತಿಪ್ರತ್ಯಯಲಕ್ಷಣಮ್** (ಪರಿ. ಭಾ. ೨೧) ವರ್ಣವನ್ನು ಆಶ್ರಯಿಸಿ ಕಾರ್ಯ ವನ್ನು ಮಾಡುವಾಗ ಪ್ರತ್ಯಯಲಕ್ಷಣ ಬರುವುದಿಲ್ಲ ಎಂದು ಪ್ರತ್ಯಯಲಕ್ಷಣಕ್ಕೆ ನಿಷೇಧ ಬರುವುದು. ಆದ್ದರಿಂದ ಸಾರ್ವಧಾತುಕವು ಅದುಪದೇಶದ ಮುಂದೆ ಇರತಕ್ಕದ್ದಾಗುವುದಿಲ್ಲ. ಆದಕಾರಣ ಅನುದಾತ್ತ ಬರುವುದಿಲ್ಲ.

**ದಾಶುಷೇ**—ಪೂರ್ವ ಮಂತ್ರದಲ್ಲಿ ಇದರ ಪ್ರಕ್ರಿಯೆಯನ್ನು ವರ್ಣಿಸಲಾಗಿರುವುದು ॥ ೯ ॥

॥ ಸಂಹಿತಾಪಾಠಃ ॥

ಏವಾ ಹ್ಯಸ್ಯ ಕಾಮ್ಯಾ ಸ್ತೋಮ ಉಕ್ಥಂ ಚ ಶಂಸ್ಯಾ ॥
ಇಂದ್ರಾಯ ಸೋಮಪೀತಯೇ ॥ ೧೦ ॥

॥ ಪದಪಾಠಃ ॥

ಏವ । ಹಿ । ಅಸ್ಯ । ಕಾಮ್ಯಾ । ಸ್ತೋಮಃ । ಉಕ್ಥಂ । ಚ । ಶಂಸ್ಯಾ ॥
ಇಂದ್ರಾಯ । ಸೋಮಽಪೀತಯೇ ॥ ೧೦ ॥

॥ ಸಾಯಣಭಾಷ್ಯಂ ॥

ಅಸ್ಯೇಂದ್ರಸ್ಯ ಸ್ತೋಮಃ ಸಾಮಸಾಧ್ಯಂ ಸ್ತೋತ್ರಮುಕ್ಥಂ ಚರ್ಕ್ಸಾಧ್ಯಂ ಶಸ್ತ್ರಮುಭ್ಯೇವಾ ಹ್ಯೇತೇ ಉಭೇ ಏವಂವಿಧೇ ಖಲು । ಕಿಂವಿಧೇ ಇತಿ ತದುಚ್ಯತೇ । ಕಾಮ್ಯಾ ಕಾಮಯಿತವ್ಯೇ ಶಂಸ್ಯಾ ಋತ್ವಿಗ್ಭಿಃ ಶಂಸನೀಯೇ । ಕಿಮರ್ಥಂ ಶಂಸನಮಿತಿ ತದುಚ್ಯತೇ । ಇಂದ್ರಾಯ ಸೋಮಪೀತಯೇ ।

ಇಂದ್ರಸ್ಯ ಸೋಮಪಾನಾರ್ಥಂ ॥ ಏವಾ ಹ್ಯಸ್ಯ । ವ್ಯವಹಿತಮಂತ್ರೇ ಗತಂ । ಕಾಮ್ಯಾ । ಕಮೇರ್ಣಿಜಂತಾದಚೋ ಯತ್ । ಪಾ. ೩-೧-೯೭ । ಣೇರನಿಟಿ । ಪಾ. ೬-೪-೫೧ । ಇತಿ ಣಿಲೋಪಃ । ತಿತ್ಸ್ವರಿತಮಿತಿ ಸ್ವರಿತೇ ಪ್ರಾಪ್ತೇ ಯತೋಽನಾವಃ । ಪಾ. ೬-೧-೨೧೩ । ಇತ್ಯಾದ್ಯುದಾತ್ತತ್ವಂ । ಸುಪೋ ಡಾದೇಶಃ । ಸ್ತೋಮಃ । ಅರ್ತಿಸ್ತುಸ್ವಿತ್ಯಾದಿನಾ । ಉ. ೧-೧೩೯ । ಮನ್ಪ್ರತ್ಯಯಃ ಉಕ್ಥಂ । ವಚ ಪರಿಭಾಷಣೇ । ಪಾತೃತುದಿವಚಿರಿಚಿಸಿಚಿಭ್ಯಸ್ಥಕ್ । ಉ. ೨-೭ । ಇತಿ ಥಕ್ । ಕಿತ್ತ್ವಾತ್ಸಂಪ್ರಸಾರಣಂ । ಪರಪೂರ್ವತ್ವ-ಗುಣಾಭಾವೌ । ಶಂಸ್ಯಾ । ಶಂಸು ಸ್ತುತೌ । ಣ್ಯಂತಾದಚೋ ಯತ್ । ಯತೋಽನಾವ ಇತ್ಯಾದ್ಯು-ದಾತ್ತತ್ವಂ । ಸುಪೋ ಡಾದೇಶಃ । ಸೋಮಸ್ಯ ಪೀತಿಃ ಸೋಮಪೀತಿಃ । ಕೃದುತ್ತರಪದಪ್ರಕೃತಿಸ್ವರೇ ಪ್ರಾಪ್ತೇ ವ್ಯತ್ಯಯೇನಾದ್ಯುದಾತ್ತತ್ವಂ । ಅಥವಾ ಸೋಮಸ್ಯ ಪೀತಿರ್ಯಸ್ಯೇಂದ್ರಸ್ಯೇತಿ ಸೋಮಪೀತಿ-ರಿಂದ್ರಃ । ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ । ಪಾ. ೬-೨-೧ । ಇತಿ ಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

ಅಸ್ಯ—ಈ ಇಂದ್ರನ (ಇಂದ್ರನ ವಿಷಯವಾಗಿ ಮಾಡಲ್ಪಡುವ) । ಸ್ತೋಮಃ—ಸಾಮಗಾನರೂಪವಾದ ಸ್ತೋತ್ರವೂ । ಉಕ್ಥಂ ಚ—ಋಕ್ಕುಗಳಿಂದ ಶಸ್ತ್ರರೂಪವಾಗಿ ಪಠಿಸುವ ಸ್ತೋತ್ರವೂ (ಈ ಎರಡುವಿಧವೂ) । ಕಾಮ್ಯಾ ಏವ ಹಿ—ಇಷ್ಟಪ್ರದವಾದವುಗಳೇ ಆಗಿರುವವು । ಈ ಸ್ತೋತ್ರಗಳು ಇಂದ್ರಾಯ ಸೋಮಪೀತಯೇ-ಇಂದ್ರನ ಸೋಮಪಾನಾರ್ಥವಾಗಿ । ಶಂಸ್ಯಾ—ಋತ್ವಿಜರಿಂದ ಸ್ತುತಿಸಲ್ಪಡುವವು.

॥ ಭಾವಾರ್ಥ ॥

ಇಂದ್ರನನ್ನು ಸೋಮಪಾನಕ್ಕಾಗಿ ಋತ್ವಿಜರು ಆಹ್ವಾನಮಾಡುವ ಸಾಮಗಾನರೂಪವಾದ ಸ್ತೋತ್ರಗಳೂ, ಋಙ್ಮಂತ್ರಗಳಿಂದ ಶಸ್ತ್ರರೂಪವಾಗಿ ಪಠಿಸಲ್ಪಡುವ ಋಕ್ಕುಗಳೂ ಈ ಎರಡು ವಿಧಸ್ತೋತ್ರಗಳೂ ಇಂದ್ರನನ್ನು ಆರಾಧಿಸುವ ಯಜಮಾನರಾದಿಯಾದ ಜನರಿಗೆ ಇಷ್ಟವಾಗಿಯೇ ಇರುವವು.

English Translation.

Verily his chanted and recited praises are to be desired and repeated to Indra, that he may drink the Soma-juice.

॥ ವಿಶೇಷವಿಷಯಗಳು ॥

ಸ್ತೋಮಃ । ಉಕ್ಥಂ—ಸ್ತೋಮವೆಂದರೆ ಗಾನರೂಪವಾಗಿ ಹಾಡಲ್ಪಡುವ ಸಾಮವೇದಮಂತ್ರಗಳು. ಉಕ್ಥಂ ಎಂದರೆ ಶಸ್ತ್ರರೂಪವಾಗಿ ಎಂದರೆ ಗಾನದಂತಲ್ಲದೆ (ರಾಗವಿಲ್ಲದೆ) ಸುಮ್ಮನೆ ಋಗ್ವೇದಮಂತ್ರಗಳನ್ನು ಪಠಿಸುವುದು ಎಂದರ್ಥವು. ಈ ವಿಷಯವನ್ನು ನಾವು ಹಿಂದೆಯೇ ವಿವರಿಸಿದೇವೆ.

॥ ವ್ಯಾಕರಣಪ್ರಕ್ರಿಯಾ ॥

ಏವಾ, ಹಿ, ಅಸ್ಯ ಇವುಗಳ ಪ್ರಕ್ರಿಯೆಯು ಇದೇ ಸೂಕ್ತದ ೮ ನೇ ಮಂತ್ರದಲ್ಲಿ ವರ್ಣಿತವಾಗಿರುವುದು.

**ಕಾಮ್ಯಾ**—ಕಮುಕಾನ್ತೌ ಧಾತು, ಕಾಂತಿ ಎಂದರೆ ಇಚ್ಛೆ. **ಕಮೇರ್ಣಿಙ್** (ಪಾ. ಸೂ. ೩-೧-೩೦) ಕಮ್' ಧಾತುವಿನ ಮುಂದೆ ಸ್ವಾರ್ಥದಲ್ಲಿ ಣಿಙ್ ಪ್ರತ್ಯಯ ಬರುವುದು ಎಂಬುದರಿಂದ ಣಿಙ್ ಪ್ರತ್ಯಯ **ಅತ ಉಪಧಾಯಾಃ** (ಪಾ.ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ ಕಾಮಿ ಎಂದಾಗುವುದು. ಇದರ ಮುಂದೆ **ಅಚೋಯತ್** (ಪಾ. ಸೂ. ೩-೧-೯೭) ಅಜಂತವಾದ ಧಾತುವಿನ ಮುಂದೆ ಯತ್ ಪ್ರತ್ಯಯ ಬರುವುದು ಎಂಬುದರಿಂದ ಯತ್ ಪ್ರತ್ಯಯ **ಣೇರನಿಟಿ** (ಪಾ. ಸೂ. ೬-೪-೫೧) ಇಡಾದಿಯಲ್ಲದ ಆರ್ಧಧಾತುಕ ಪ್ರತ್ಯಯ ಪರದಲ್ಲಿರುವಾಗ ಣಿಗೆ ಲೋಪಬರುವುದು ಎಂಬುದರಿಂದ ಣಿಗೆ ಲೋಪ. ಯತ್ ಪ್ರತ್ಯಯವು ತಕಾರೇತ್ಸಂಜ್ಞಕ ವಾದ್ದರಿಂದ **ತಿತ್ಸ್ವರಿತಮ್** (ಪಾ. ಸೂ. ೬-೧-೧೮೫) ತಕಾರೇತ್ಸಂಜ್ಞಕವಾದ ಪ್ರತ್ಯಯವು ಸ್ವರಿತವಾಗುವುದು ಎಂಬುದರಿಂದ ಸ್ವರಿತಸ್ವರವು ಪ್ರಾಪ್ತವಾಪರೆ ಅದನ್ನು ಬಾಧಿಸಿ **ಯತೋನಾವಃ** (ಪಾ. ಸೂ. ೬-೧-೨೧೩) **ನಿಷ್ಠಾಚದ್ವ್ಯಜನಾತ್** (ಪಾ. ಸೂ. ೬-೧-೨೦೫) ಎಂಬುದರಿಂದ ದ್ವ್ಯಚ್ ಪದವು ಅನುವೃತ್ತವಾಗುತ್ತೆ. ನೌ ಶಬ್ದಭಿನ್ನ ಶಬ್ದದ ಮುಂದೆ ವಿಹಿತವಾದ ಯಾವ ಯತ್ ಪ್ರತ್ಯಯವಿದೆಯೋ ತದನ್ತವಾದ ಎರಡು ಸ್ವರಗಳನ್ನು ಹೊಂದಿರುವ ಶಬ್ದದ ಆದಿಯು ಉದಾತ್ತವಾಗುವುದು ಎಂಬುದರಿಂದ ಆದ್ಯುದಾತ್ತ ಸ್ವರ ಬರುವುದು. ಕಾಮ್ಯ ಎಂಬುದರ ಮುಂದೆ ಬಂದ ಪ್ರಥಮಾದ್ವಿವಚನ ಔ ಪ್ರತ್ಯಯಕ್ಕೆ **ಸುಪಾಂಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಡಾ ಆದೇಶ.

**ಸ್ತೋಮಃ**—**ಅರ್ತಿಸ್ತು ಸುಹುಸೃಧೃಕ್ಷಿಕ್ಷುಭಾಯಾ ವಾ ಪದಿಯಕ್ಷಿನೀಭ್ಯೋಮನ್** (ಉ. ಸೂ. ೧-೧೩೭) ಎಂಬುದರಿಂದ ಷ್ಟುಞ್ ಸ್ತುತೌ ಎಂಬ ಸ್ತು ಧಾತುವಿನ ಮುಂದೆ ಮನ್ ಪ್ರತ್ಯಯ **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಗುಣ. ಸ್ತೋಮ ಎಂದಾಗುವುದು.

**ಉಕ್ಥಮ್**—ವಚ ಪರಿಭಾಷಣೇ ಧಾತು **ಪಾ, ತ್ರಾ, ತುದಿ, ವಚಿ, ರಿಚಿ, ಸಿಚಿಭ್ಯಸ್ಥಕ್** (ಉ. ಸೂ. ೨-೧೬೪) ಎಂಬುದರಿಂದ ಥಕ್ ಪ್ರತ್ಯಯವು ವಚ್ ಧಾತುವಿನ ಮುಂದೆ ಬರುವುದು. ಪ್ರತ್ಯಯವು ಕಿತ್, ಆದ್ದರಿಂದ **ವಚಿಸ್ವಪಿಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಸಂಪ್ರಸಾರಣ =ವಕಾರಕ್ಕೆ ಉಕಾರ. **ಸಂಪ್ರಸಾರಣಾಚ್ಚ** (ಪಾ. ಸೂ. ೬-೧-೧೦೮) ಎಂಬುದರಿಂದ ಪೂರ್ವರೂಪ. ಉಚ್+ಥ ಪ್ರತ್ಯಯವು ಕಿತ್ತಾದ್ದರಿಂದ ಲಘೂಪಧ ಗುಣ ಬರುವುದಿಲ್ಲ. **ಚೋಃಕುಃ** (ಪಾ. ಸೂ. ೮-೨-೩೦) ಎಂಬುದರಿಂದ ಚಕಾರಕ್ಕೆ ಕಕಾರ, ಉಕ್ಥ ಎಂದಾಗುವುದು.

ಶಂಸ್ಯಾ—ಶಂಸು ಸ್ತುತೌ ಇದರ ಮುಂದೆ ಣಿಚ್ ಪ್ರತ್ಯಯ. **ಅಚೋಯತ್** ಎಂಬುದರಿಂದ ಯತ್ ಪ್ರತ್ಯಯ **ಣೇರನಿಟಿ** ಎಂಬುದರಿಂದ ಣಿ ಲೋಪ. **ಯತೋನಾವಃ** ಎಂಬುದರಿಂದ ಆದ್ಯುದಾತ್ತ. ಪ್ರಥಮಾ ದ್ವಿವಚನ ಔ ಗೆ **ಸುಪಾಂಸುಲುಕ್** ಎಂಬುದರಿಂದ ಡಾ ಆದೇಶ. ಶಂಸ್ಯಾ ಎಂದಾಗುವುದು.

**ಸೋಮಪೀತಯೇ, ಸೋಮಸ್ಯ ಪೀತಿಃ ಸೋಮಪೀತಿಃ, ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಪ್ರಾಪ್ತವಾದರೆ ವ್ಯತ್ಯಯದಿಂದ ಆದ್ಯುದಾತ್ತ ಬರುವುದು. ಹೀಗೆ ತತ್ಪುರುಷಮಾಡಿದರೆ ಸೋಮಪೀತಯೇ—ಸೋಮರಸದ ಪಾನಕ್ಕಾಗಿ ಎಂದು ಅರ್ಥವಾಗುವುದು ಅಥವಾ ಸೋಮಸ್ಯ ಪೀತಿರ್ಯಸ್ಯ ಸಃ ಸೋಮಪೀತಿಃ ಸೋಮಪಾನವುಳ್ಳ ಇಂದ್ರನಿಗೆ ಎಂದರ್ಥ. ಈ ಪಕ್ಷದಲ್ಲಿ **ಬಹುವ್ರೀಹೌಪ್ರಕೃತ್ಯಾಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರಬರುವುದು ||೧೦||

# ಒಂಭತ್ತನೆಯ ಸೂಕ್ತವು

**ಇಂದ್ರೇಹೀತ್ಯಾದಿಕಂ ದಶರ್ಚಂ ಸೂಕ್ತಂ ಸುರೂಪಕೃತ್ನುಮಿತ್ಯಾದಿಷು ಷಷ್ಠಂ । ಋಷ್ಯಾದಯಸ್ತಸ್ಯ ಪೂರ್ವವತ್ । ವಿಶೇಷಸ್ತ್ವತಿರಾತ್ರೇ ದ್ವಿತೀಯೇಪರ್ಯಾಯೇಽಚ್ಛಾವಾಕಶಸ್ತ್ರ ಇಂದ್ರೇಹೀತ್ಯನುರೂಪಸ್ತೃಚಃ । ಅತಿರಾತ್ರೇ ಪರ್ಯಾಯಾಣಾಮಿತಿ ಖಂಡ ಇದಂ ವಸೋ ಸುತಮಂಧ ಇಂದ್ರೇಹಿ ಮತ್ಸ್ಯಂಧಸಃ । ಆ. ೬-೪ । ಇತಿ ಸೂತ್ರಿತಂ ।।**

**ಅನುವಾದವು**—ಇಂದ್ರೇಹಿ ಎಂಬ ಈ ಸೂಕ್ತದಲ್ಲಿ ಹತ್ತು ಋಕ್ಕುಗಳಿರುವವು. ಇದು ಸುರೂಪ ಕೃತ್ನು ಎಂದು ಮೊದಲಾದ ಸೂಕ್ತಗಳಲ್ಲಿ ಆರನೆಯದು. ಋಷಿದೇವತಾಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. **ವಿಶೇಷವಿನಿಯೋಗವು**—ಅತಿರಾತ್ರಕ್ರತುವಿನಲ್ಲಿ ದ್ವಿತೀಯಪರ್ಯಾಯದಲ್ಲಿ ಅಚ್ಛಾವಾಕನೆಂಬ ಹೋತೃವರ್ಗದ ಋತ್ವಿಜನು ಇಂದ್ರೇಹಿ ಎಂಬ ತೃಚವನ್ನು ಪಠಿಸಬೇಕು ಈ ವಿಷಯವು—**ಅತಿರಾತ್ರೇ ಪರ್ಯಾಯಾಣಾಂ** ಎಂಬ ಖಂಡದಲ್ಲಿ ಇದಂ ವಸೋ ಸುತಮಂಧಃ (ಋ. ಸಂ. ೮-೨-೧) ಮತ್ತು ಇಂದ್ರೇಹಿ ಮತ್ಸ್ಯಂಧಸಃ (ಋ.ಸಂ. ೧-೯-೧) ಎಂಬ ಋಕ್ಕಗಳನ್ನು ಅತಿರಾತ್ರಕ್ರತುವಿನಲ್ಲಿ (ಪ್ರಥಮ ದ್ವಿತೀಯ) ಪರ್ಯಾಯಗಳಲ್ಲಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದಲ್ಲಿ ಹೇಳಿರುವುದು (ಆ. ಸೂ. ೬-೪).

॥ ಓಂ ॥

## ಸೂಕ್ತ—೯

॥ ಮಂಡಲ—೧ ॥ ಅನುವಾಕ—೩ ॥ ಸೂಕ್ತ—೯ ॥
॥ ಅಷ್ಟಕ —೧ ॥ ಅಧ್ಯಾಯ—೧ ॥ ವರ್ಗ—೧೭, ೧೮ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೧—೧೦ ॥
॥ ಋಷಿಃ—ಮಧುಚ್ಛಂದಾ ವೈಶ್ವಾಮಿತ್ರಃ ॥
॥ ದೇವತಾ—ಇಂದ್ರಃ ॥
॥ ಛಂದಃ— ಗಾಯತ್ರೀ ॥

॥ ಸಂಹಿತಾಪಾಠಃ ॥

ಇಂದ್ರೇಹಿ ಮತ್ಸ್ಯಂಧಸೋ ವಿಶ್ವೇಭಿಃ ಸೋಮಪರ್ವಭಿಃ ।
ಮಹಾಁ ಅಭಿಷ್ಟಿರೋಜಸಾ ॥ ೧ ॥

॥ ಪದಪಾಠಃ ॥

ಇಂದ್ರ । ಆ । ಇಹಿ । ಮತ್ಸಿ । ಅಂಧಸಃ । ವಿಶ್ವೇಭಿಃ । ಸೋಮಪರ್ವಭಿಃ ॥
ಮಹಾನ್ । ಅಭಿಷ್ಟಿಃ । ಓಜಸಾ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಏಹಿ । ಅಸ್ಮಿನ್ಕರ್ಮಣ್ಯಾಗಚ್ಛ । ಆಗತ್ಯ ಚ ವಿಶ್ವೇಭಿಃ ಸರ್ವೈಃ ಸೋಮಪರ್ವಭಿಃ ಸೋಮರಸರೂಪೈರಂಧಸೋಽಂಧೋಭಿರನ್ನೈರ್ಮತ್ಸಿ । ಮಾದ್ಯ । ಹೃಷ್ಟೋ ಭವ । ತತ ಊರ್ಧ್ವಮೋಜಸಾ ಬಲೇನ ಮಹಾನ್ಭೂತ್ವಾಭಿಷ್ಟಿಃ ಶತ್ರೂಣಾಮಭಿಭವಿತಾ ಭವೇತಿ ಶೇಷಃ । ಅಷ್ಟಾವಿಂಶತಿಸಂಖ್ಯಾಕೇಷು ಬಲಾನಾಮಸ್ವೋಜಃ ಪಾಜ ಇತಿ ಪಠಿತಂ ॥ ಆ ಇಹಿ । ಆದ್ಗುಣಃ । ಪಾ ೬-೧-೮೭ । ಇಂದ್ರ ಏಹಿ। ಯೋ ಹ್ಯುಭಯೋಃ । ಸ್ಥಾನೇ ಲಭತೇಽಸಾವನ್ಯತರವ್ಯಪದೇಶಮಿತ್ಯಾಙ್ಯ್ಗಾಙಿಕೋರೇಕಾದೇಶಸ್ಯಾಙ್ ವ್ಯಪದೇಶಾದೋಮಾಙೋಶ್ಚ । ಪಾ. ೬-೧-೯೫ । ಇತಿ ಪರರೂಪಂ । ಮತ್ಸಿ । ಮಾದ್ಯ । ಮದೀ ಹರ್ಷಗ್ಲಪನಯೋಃ । ಲೋಟಃ ಸಿಪ್ । ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತ ಇತಿ ಸೇರ್ಹಿರಾದೇಶಃ । ಪಾ. ೩-೪-೮೭ । ನ ಭವತಿ । ದಿವಾದಿಭ್ಯಃ ಶ್ಯನ್ । ಪಾ. ೩-೧-೬೯ । ಇತಿ ಶ್ಯನ್ । ಬಹುಲಂ ಛಂದಸೀತಿ ಶ್ಯನೋ ಲುಕ್ । ನ ಲುಮತಾಂಗಸ್ಯ । ಪಾ. ೧-೧-೬೩ । ಇತಿ ಪ್ರತ್ಯಯಲಕ್ಷಣಪ್ರತಿಷೇಧಾಚ್ಛಮಾಮಷ್ಟಾನಾಂ ದೀರ್ಘಃ ಶ್ಯನಿ । ಪಾ. ೭- -೭೪ । ಇತ್ಯುಪಧಾದೀರ್ಘೋ ನ ಭವತಿ । ಸಿಪಃ ಪಿತ್ತ್ವಾದ್ಧಾತುಸ್ವರ ಏವ । ಅಂಧಸಃ । ಅದೇರ್ನುಮ್ ಧಶ್ಚ । ಉ. ೪-೨೦೫ । ಇತ್ಯಸುನ್ । ವ್ಯತ್ಯಯೇನ ತೃತೀಯಾಬಹುವಚನಂ ಕರ್ತವ್ಯಂ । ನಿತ್ತ್ವಾದಾದ್ಯುದಾತ್ತಃ । ವಿಶ್ವೇಭಿಃ । ಅಶಿಪ್ರುಷೀತ್ಯಾದಿನಾ । ಉ. ೧-೧೫೧ । ಕ್ವನ್ । ನಿತ್ತ್ವಾದಾದ್ಯುದಾತ್ತತ್ವಂ । ಐಸಾದೇಶೋ ಬಹುಲಂ ಛಂದಸೀತಿ ನ ಭವತಿ । ಸೋಮಪರ್ವಭಿಃ । ಲತಾರೂಪಂ ಸೋಮಂ ಪೃಣಂತಿ ಪೂರಯಂತೀತಿ ಸೋಮಪರ್ವಾಣಃ ಸೋಮರಸಾಃ । ಪೄ ಪಾಲನಪೂರಣಯೋಃ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ವನಿಪ್ । ಗುಣೋ ರಪರತ್ವಂ । ವನಿಪಃ ಪಿತ್ತ್ವಾದ್ಧಾತುಸ್ವರ ಏವ । ಉಪಪದಸಮಾಸೇ ಕೃದುತ್ತರಪದಪ್ರಕೃತಿಸ್ವರೇಣ ಪುನಃ ಸ ಏವ ಭವತಿ । ಅಭಿಷ್ಟಿರಭಿಗಂತಾ । ಇಷ ಗತೌ । ಮಂತ್ರೇ ವೃಷೇತ್ಯಾದಿನಾ । ಪಾ. ೩-೩-೯೬ । ಕ್ತಿನ್ನುದಾತ್ತಃ । ಸ ಹಿ ಭಾವಪರೋಽಪಿ ಭವಿತಾರಂ ಲಕ್ಷಯತಿ । ಕಿತ್ತ್ವಾಲ್ಲಘೂಪಧಗುಣಾಭಾವಃ । ತಿತುತ್ರತಥಸಿಸುಸರಕಸೇಷು । ಚ । ಪಾ. ೭-೨-೯ । ಇತೀಡಾಗಮೋ ನ ಭವತಿ । ಅಭಿಶಬ್ದಸ್ಯೇಕಾರ ಏಮನಾದಿಷು ಪರರೂಪಂ ವಕ್ತವ್ಯಂ । ಪಾ. ೬-೧-೯೪-೬ । ಇತಿ ಪರರೂಪತ್ವಂ । ಪ್ರಾದಿಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವಂ । ಓಜಸಾ । ಉಬ್ಜೇರ್ಬಲೋಪಶ್ಚ । ಉ. ೪-೧೯೧ । ಇತ್ಯಸುನ್ । ನಿತ್ತ್ವಾದಾದ್ಯುದಾತ್ತಃ ॥

॥ ಪ್ರತಿಪದಾರ್ಥ ॥

(ಹೇ) ಇಂದ್ರ—ಎಲೈ ಇಂದ್ರನೇ । ಏಹಿ—(ನಾವು ಮಾಡುತ್ತಿರುವ ಈ ಯಜ್ಞಭೂಮಿಗೆ) ಬಾ । (ಬಂದು) ವಿಶ್ವೇಭಿಃ—ಸಮಸ್ತವಾದ । ಸೋಮಪರ್ವಭಿಃ—ಸೋಮರಸರೂಪವಾದ । ಅಂಧಸಃ—ಅನ್ನಗಳಿಂದ

(ಆಹಾರಗಳಿಂದ) | ಮತ್ಸ್ವ—ತೃಪ್ತನಾಗು | (ಅನಂತರ) ಓಜಸಾ—ಬಲದಿಂದ | ಮಹಾನ್—ಅಧಿಕನಾಗಿ | ಅಭಿಷ್ಟಿಃ—(ಶತ್ರುಗಳಿಗೆ) ಪರಾಭವವನ್ನುಂಟುಮಾಡುವವನಾಗು ||

|| ಭಾವಾರ್ಥ ||

ಎಲೈ ಇಂದ್ರನೇ, ನೀನು ಇಲ್ಲಿಗೆ ಬಂದು ನಾವು ಸಿದ್ಧಪಡಿಸಿರುವ ಸೋಮರೂಪವಾದ ಅನ್ನದಿಂದ ತೃಪ್ತನಾಗಿ ಎಂದರೆ ಸೋಮಪಾನಮಾಡಿ ಅದರಿಂದ ಅಧಿಕವಾಗಿ ಬಲಗೊಂಡು ಶತ್ರುಗಳನ್ನು ಪರಾಭವಗೊಳಿಸು.

English Translation

Come, O Indra, and regale yourself with Soma-libations and with all viands and mighty in strength be victorious (over your enemies).

|| ವಿಶೇಷವಿಷಯಗಳು ||

**ಮತ್ಸ್ವ—ಮದೀ ಹರ್ಷಗ್ಲಪನಯೋಃ** ಎಂಬ ಧಾತುವಿನ ಲೋಟ್ ರೂಪದ ಮಧ್ಯಮಪುರುಷೈಕವಚನವು. ಸಂತೋಷಪಡು, ತೃಪ್ತಿಯನ್ನು ಹೊಂದು ಎಂದರ್ಥವು

**ಅಂಧಸಃ—** ಅಂಧಃ ವಾಜಃ ಮೊದಲಾದ ಇಪ್ಪತ್ತೆಂಟು ಅನ್ನವಾಚಕಶಬ್ದಗಳ ಮಧ್ಯದಲ್ಲಿ ಅಂಧಃ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩. ೯) ಅಂಧಸಃ ಎಂಬ ಶಬ್ದಕ್ಕೆ ಅನ್ನದಿಂದ ಎಂದರ್ಥವು.

**ಸೋಮಪರ್ವಭಿಃ—ಲತಾರೂಪಂ ಸೋಮಂ ಪೃಣಂತಿ ಪೂರಯಂತೀತಿ ಸೋಮಪರ್ವಾಣಃ ಸೋಮರಸಾಃ**—ಎಂದರೆ ಸೋಮಲತೆಯನ್ನು ಹಿಂಡಿ ಪಾತ್ರೆಯಲ್ಲಿ ತುಂಬುವುದರಿಂದ ಅದಕ್ಕೆ ಸೋಮರಸವೆಂದು ಹೆಸರು.

ಸ್ಕಂದಸ್ವಾಮಿಯು ಈ ಸೋಮಪರ್ವಭಿಃ ಎಂಬ ಪದಕ್ಕೆ ಈ ಅರ್ಥದ ಜತೆಗೆ ದೇವತೆಗಳಿಂದೂ ಅರ್ಥ ಮಾಡಿರುವರು, **ಸೋಮಮಯಾನಿ ಪರ್ವಾಣಿ ಯೇಷಾಂ ತೇ ಸೋಮಪರ್ವಾಣಃ ದೇವಾಃ | ಯೋ ಹಿ ಯದಾಹಾರೋ ಭವತಿ ತಸ್ಯ ತನ್ಮಯಾನಿ ಪರ್ವಾಣಿ ಭವಂತಿ | ಸೋಮಾಹಾರಾಶ್ಚ ದೇವಾಃ** || ದೇವತೆಗಳೂ ಸಹ ಸೋಮರೂಪವಾದ ಆಹಾರವನ್ನು ಸೇವಿಸುವುದರಿಂದ ಅವರಿಗೆ ಸೋಮಪರ್ವಾಣಃ ಎಂದು ಹೆಸರು. ಆದುದರಿಂದ ಈ ಋಕ್ಕಿನಲ್ಲಿರುವ (ಹೇ) ಇಂದ್ರ ವಿಶ್ವೇಭಿಃ **ಸೋಮಪರ್ವಭಿಃ** ಏಹಿ ಎಂಬ ವಾಕ್ಯಕ್ಕೆ ಎಲೈ ಇಂದ್ರನೇ ನೀನು ಸಮಸ್ತ ದೇವತೆಗಳಿಂದ ಸಹಿತನಾಗಿ ಇಲ್ಲಿಗೆ ಬರುವವನಾಗು ಎಂದರ್ಥ ಮಾಡಬೇಕು.

**ಅಭಿಷ್ಟಿಃ—ಅಭಿಗಂತಾ**—ಶತ್ರುಗಳಿಗೆ ಪರಾಭವವನ್ನುಂಟುಮಾಡುವವನು, ಶತ್ರುಗಳನ್ನು ಜಯಿಸುವವನು.

ಓಜಸಾ—ಬಲದಿಂದ, **ಸಾಮರ್ಥ್ಯದಿಂದ**—ಓಜಃ **ಪಾಜಃ** ಮೊದಲಾದ ಇಪ್ಪತ್ತೆಂಟು ಬಲವಾಚಕನಾಮಗಳ **ಮಧ್ಯದಲ್ಲಿ ಓಜಃ ಎಂಬ ಶಬ್ದವು ಪಠಿತವಾಗಿದೆ.** (ನಿ. ೩-೯)

॥ ವ್ಯಾಕರಣಪ್ರಕ್ರಿಯಾ ॥

**ಆ ಇಹಿ** ಎಂದಿರುವಾಗ **ಅದ್ಗುಣಃ** (ಪಾ. ಸೂ. ೬-೧-೮೭) ಅಕಾರದ ಮುಂದೆ ಇ, ಉ, ಋ, ಲೃಗಳು ಇದ್ದರೆ ಪೂರ್ವಪರಸ್ಥಾನಗಳಲ್ಲಿ ಗುಣವು ಏಕಾದೇಶವಾಗಿ ಬರುವುದು ಎಂಬುದರಿಂದ ಗುಣ ಬಂದರೆ ಏಹಿ ಎಂದಾಗುವುದು. **ಅಂತಾದಿವಚ್ಚ** (ಪಾ. ಸೂ. ೬-೧-೮೫) **ಏಕಃಪೂರ್ವಪರಯೋಃ** ಎಂಬ ಸೂತ್ರವು ಅನುವೃತ್ತವಾಗುವುದು. ಪೂರ್ವಶಬ್ದಕ್ಕೆ ಪೂರ್ವಘಟಿತಸಮುದಾಯ ಎಂದೂ ಪರಶಬ್ದಕ್ಕೆ ಪರಘಟಿತಸಮುದಾಯ ಎಂದೂ ಅರ್ಥ. ಏಕಾದೇಶಕ್ಕೆ ಸ್ಥಾನಿಯಾದ ವರ್ಣಗಳು ಎರಡು. ಅವುಗಳಲ್ಲಿ ಪೂರ್ವವರ್ಣದಿಂದ ಕೂಡಿರುವ ಶಬ್ದದ ಕೊನೆಯ ವರ್ಣವೂ, ಪರವರ್ಣದಿಂದ ಕೂಡಿದ ಶಬ್ದದ ಮೊದಲನೆಯ ವರ್ಣವೂ ಬೇರೆ ಬೇರೆ ಇದ್ದರೆ ಯಾವ ಯಾವ ವ್ಯವಹಾರಗಳು ಬರುವುವೋ (ಪ್ರಾತಿಪದಿಕ ಪ್ರತ್ಯಯ ಉಪಸರ್ಗ ಅಜ್ ಮೊದಲಾದ ವ್ಯವಹಾರಗಳು) ಅವು ಏಕಾದೇಶ ಬಂದಮೇಲೆಯೂ ಬರುವುವು ಎಂದು ಸೂತ್ರದ ನಿಷ್ಕೃಷ್ಟವಾದ ಅರ್ಥ. ಈಗ ಏಕಾದೇಶ ಬರುವುದಕ್ಕಿಂತ ಮುಂಚೆ ಆ ಎಂಬಲ್ಲಿ ಅಜ್ ಎಂಬ ವ್ಯವಹಾರವಿತ್ತು. ಏಕಾದೇಶಬಂದಮೇಲೆಯೂ ಪೂರ್ವಾಂತವದ್ಭಾವದಿಂದ ಏ ಎಂಬಲ್ಲಿ ಆ ವ್ಯವಹಾರವು ಇದ್ದೇ ಇರುವುದು ಎಂದು ಏರ್ಪಟ್ಟಿತು. ಇದೇ ಅಂಶವನ್ನು "ಯೋಹ್ಯುಭಯೋಃಸ್ಥಾನೇ, ಲಭತೇಸಾವನ್ಯತರತೋವ್ಯಪದೇಶಮ್'' ಎಂದು ಭಾಷ್ಯದಲ್ಲಿ ಹೇಳಿರುವರು. ಇನ್ದ್ರ+ಏಹಿ ಎಂದಿರುವಾಗ ಏ ಎಂಬುದು ಹಿಂದೆ ಹೇಳಿದಂತೆ ಅಜ್ಞು. ಆದ್ದರಿಂದ **ಓಮಾಙೋಶ್ಚ** (ಪಾ.ಸೂ. ೬-೧-೯೫) ಅವರ್ಣದ ಮುಂದೆ ಓಮ್, ಆಙ್ ಇವು ಇದ್ದರೆ ಪೂರ್ವಪರಸ್ಥಾನಗಳಲ್ಲಿ ಪರರೂಪವು ಏಕಾದೇಶವಾಗಿ ಬರುವುದು ಎಂಬುದರಿಂದ ಪರರೂಪ ಬಂದರೆ ಇನ್ದ್ರೇಹಿ ಎಂದಾಗುವುದು.

**ಮತ್ಸಿ**—ಮಾದ್ಯ=ಹೃಷ್ಟನಾಗು ಎಂದು ಅರ್ಥ. **ಮದೀಹರ್ಷಗ್ಲಪನಯೋಃ** ಧಾತುವಿನ ಮುಂದೆ ಲೋಟ್ ಅದಕ್ಕೆ ಮಧ್ಯಮಪುರುಷ ಏಕವಚನ ಸಿಪ್ ಬರುವುದು. ಮದ್+ಸಿ **ಸೇರ್ಹ್ಯಪಿಚ್ಚ** (ಪಾ. ಸೂ. ೩-೪-೮೭) ಲೋಟ್ಟಿನ ಸ್ಥಾನದಲ್ಲಿ ಬಂದ ಸಿಗೆ ಹಿ ಆದೇಶ ಬರುವುದು. ಅದು ಅಪಿತ್ತೂ ಆಗುವುದು ಎಂಬುದರಿಂದ ಹಿ ಆದೇಶವು ಯದ್ಯಪಿ ಪ್ರಾಪ್ತವಾಗುವುದು. ಆದರೂ **ಸರ್ವೇ ವಿಧಯಶ್ಛಂದಸಿವಿಕಲ್ಪ್ಯಂತೇ** (ಪರಿಭಾ. ೩೫) ಎಂಬುದರಿಂದ ಇದೂ ವಿಕಲ್ಪವಾದ್ದರಿಂದ ಇಲ್ಲಿ ಬರುವುದಿಲ್ಲ. **ದಿವಾದಿಭ್ಯಃಶ್ಯನ್** (ಪಾ. ಸೂ. ೩-೧-೬೯) ಎಂಬುದರಿಂದ ಬಂದ ಶ್ಯನ್ ವಿಕರಣಪ್ರತ್ಯಯಕ್ಕೆ **ಬಹುಲಂಛಂದಸಿ** (ಪಾ. ಸೂ. ೨-೪-೭೩) ಎಂಬುದರಿಂದ ಲುಕ್ (ಲೋಪ) ಬರುವುದು. ಈಗ **ಪ್ರತ್ಯಯಲೋಪೇ ಪ್ರತ್ಯಯಲಕ್ಷಣಂ** (ಪಾ. ಸೂ. ೧-೧-೬೨) ಪ್ರತ್ಯಯಕ್ಕೆ ಲೋಪ ಬಂದಿದ್ದರೂ ಲುಪ್ತ ಪ್ರತ್ಯಯನಿಮಿತ್ತಕವಾದ ಕಾರ್ಯ ಬರುವುದು ಎಂಬುದರಿಂದ ಪ್ರತ್ಯಯಲಕ್ಷಣ ಬರುವುದರಿಂದ **ಶಮಾಮಷ್ಟಾನಾಂದೀರ್ಘಃಶ್ಯನಿ** (ಪಾ. ಸೂ. ೭-೩-೭೪) ಶ್ಯನ್ ಪ್ರತ್ಯಯ ಪರದಲ್ಲಿರುವಾಗ ಶಮು ಧಾತು ಮೊದಲಾಗಿ ಎಂಟು ಧಾತುಗಳ ಅಚ್ಚಿಗೆ ದೀರ್ಘ ಬರುವುದು ಎಂಬುದರಿಂದ ದೀರ್ಘವು ಪ್ರಾಪ್ತವಾಗುವುದು ಆದರೂ **ನ ಲುಮತಾಂಗಸ್ಯ** (ಪಾ. ಸೂ. ೧-೧-೬೩) ಲು ಎಂಬುದನ್ನು ಹೊಂದಿರುವ ಪದವನ್ನು ಲುಕ್, ಶ್ಲು, ಲುಪ್ ಉಚ್ಚರಿಸಿ ಎಲ್ಲಿ ಲೋಪ ಬಂದಿದೆಯೋ ಅಲ್ಲಿ ಲುಪ್ತಪ್ರತ್ಯಯ ನಿಮಿತ್ತಕವಾದ ಅಂಗೋದ್ದೇಶ್ಯಕಕಾರ್ಯ ಬರುವುದಿಲ್ಲ ಎಂಬುದರಿಂದ ಶಮ್ ಎಂಬ ಅಂಗವನ್ನುಉದ್ದೇಶಿಸಿ ದೀರ್ಘವನ್ನು ಮಾಡುವಾಗ ಪ್ರತ್ಯಯಲಕ್ಷಣ ಬರುವುದಿಲ್ಲ. ಏವಂಚ ಶ್ಯ ಪ್ರತ್ಯಯ ಪರದಲ್ಲಿ ಇಲ್ಲದುದರಿಂದ ದೀರ್ಘ ಬರುವುದಿಲ್ಲ. ಸಿಪ್ಪು ಪಿತ್ತಾದ್ದರಿಂದ ಅನುದಾತ್ತ ಧಾತುಸ್ವರನಿಲ್ಲುವುದು. ಮದ್+ಸಿ ಎಂದಿರುವಾಗ **ಖರಿಚ** (ಪಾ. ಸೂ. ೮-೪-೫೫) ಖರ್ ವರ್ಣಪರದಲ್ಲಿದ್ದರೆ ಝಲ್ ವರ್ಣಗಳಿಗೆ ಚರ್ ವರ್ಣಗಳು ಬರುವುವು ಎಂಬುದರಿಂದ ದಕಾರಕ್ಕೆ ತಕಾರ ಬಂದರೆ ಮತ್ಸಿ ಎಂದಾಗುವುದು.

**ಅನ್ಧಸಃ ಅದೇರ್ನುಮ್ ಧೌಚ**(ಉ.ಸೂ. ೪-೬೪೫) ಅದ ಧಾತುವಿನ ಮುಂದೆ ಅಸುನ್ ಪ್ರತ್ಯಯವೂ ಅಕಾರದ ಮುಂದೆ ನಕಾರಾಗಮವೂ ದಕಾರಕ್ಕೆ ಧಕಾರವೂ ಬರುವುದು ಎಂಬುದರಿಂದ ಅದಭಕ್ಷಣೇ ಎಂಬ ಅದ

ಧಾತುವಿನ ಮುಂದೆ ಅಸುನ್ ಪ್ರತ್ಯಯವೇ ಮೊದಲಾದುವು ಬಂದರೆ ಅನ್ಧಸ್. ಪ್ರಥಮಾಬಹುವಚನದಲ್ಲಿ ಅನ್ಧಸಃ ಎಂದಾಗುವುದು. ಅರ್ಥ ಹೇಳುವಾಗ ತೃತೀಯಾ ಬಹುವಚನಾಂತವನ್ನಾಗಿ ಮಾಡಿಕೊಳ್ಳಬೇಕು, ಪ್ರತ್ಯಯವು ನಿತ್ತಾದ್ದರಿಂದ ಪ್ರತ್ಯಯಾಂತಕ್ಕೆ ನಿತ್ಸ್ವರ ಆದ್ಯುದಾತ್ತ ಬರುವುದು.

**ವಿಶ್ವೇಭಿಃ**— **ಅಶೂಪ್ರುಷಿಲಟಿಕಣಿಖಟಿವಿಶಿಭ್ಯಃ ಕ್ವನ್** (ಉ. ಸೂ. ೧-೧೪೯) **ಅಶೂವ್ಯಾಪ್ತೌ, ಪ್ರುಷಸ್ನೇಹನಾದೌ, ಲಟಬಾಲ್ಯೇ, ಕಣನಿಮೀಲನೇ, ಖಟಿಕಾಂಕ್ಷಾಯಾಂ ವಿಶಪ್ರವೇಶನೇ** ಈ ಧಾತುಗಳ ಮುಂದೆ ಕ್ವನ್ ಪ್ರತ್ಯಯ ಬರುವುದು ಎಂಬುದರಿಂದ ವಿಶ್ ಧಾತುವಿನ ಮುಂದೆ ಕ್ವನ್ ಪ್ರತ್ಯಯ ಬಂದರೆ ವಿಶ್+ಕ್ವನ್=ವ, ಪ್ರತ್ಯಯವು ನಿತ್ತಾದ್ದರಿಂದ ಪ್ರತ್ಯಯಾಂಶವು ಆದ್ಯುದಾತ್ತ. ವಿಶ್ವಶಬ್ದದ ಮುಂದೆ ತೃತೀಯಾ ಬಹುವಚನ ಭಿಸ್ ಪ್ರತ್ಯಯವನ್ನಿಟ್ಟರೆ **ಬಹುಲಂಛಂದಸಿ** (ಪಾ. ಸೂ. ೭-೧-೧೦) ಎಂಬುದರಿಂದ ಐಸ್ ಆದೇಶವು ಭಿಸ್ಸಿಗೆ ಬರುವುದಿಲ್ಲ.

**ಸೋಮಪರ್ವಭಿಃ**— **ಲತಾರೂಪಂ ಸೋಮಂ ಪೃಣನ್ತಿ ಪೂರಯನ್ತಿ ಇತಿ ಸೋಮಪರ್ವಾಣಃ ಸೋಮರಸಾಃ** ಸೋಮಲತೆಯನ್ನು ಪೂರಣಮಾಡುವುದರಿಂದ ಸೋಮಪರ್ವಶಬ್ದದಿಂದ ಸೋಮರಸವು ಹೇಳಲ್ಪಡುವುದು. ಪೃ ಪಾಲನಪೂರಣಯೋಃ ಧಾತು. **ಅನ್ಯೇಭ್ಯೋಽಪಿದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ಪೃ ಧಾತುವಿನ ಮುಂದೆ ವನಿಪ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಪೃ ಎಂಬುದಕ್ಕೆ ಗುಣ. ಗುಣವು **ಉರಣ್ರಪರಃ** (ಪಾ. ಸೂ. ೧-೧-೫೧) ಎಂಬುದರಿಂದ ರಪರವಾಗಿ ಬರುವುದು ಸೋಮಪರ್ವನ್ ಎಂದಾಗುವುದು. ವನಿಪ್ಪು ಪಿತ್ತಾದ್ದರಿಂದ ಅನುದಾತ್ತ. ಧಾತುಸ್ವರವೇ ನಿಲ್ಲುವುದು. ಸೋಮಶಬ್ದದೊಂದಿಗೆ **ಉಪಪದಮತಿಙ್** (ಪಾ. ಸೂ. ೨-೨-೧೯) ಉಪಪದವಾಗಿರುವ ಸುಬಂತವು ಸಮರ್ಥವಾದ ತಿಙಂತಭಿನ್ನ ಶಬ್ದದೊಂದಿಗೆ ನಿತ್ಯವಾಗಿ ಸಮಾಸವನ್ನು ಹೊಂದುವುದು ಎಂಬುದರಿಂದ ಉಪಪದ ಸಮಾಸ ಬಂದರೆ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬಂದು ಅದೇ ಸ್ವರವೇ ನಿಲ್ಲುವುದು. ತೃತೀಯಾವಿಭಕ್ತಿ ಬಹುವಚನದಲ್ಲಿ **ನಲೋಪಃಪ್ರಾತಿಪದಿಕಾಂತಸ್ಯ** (ಪಾ. ಸೂ. ೮-೨-೭) ಎಂಬುದರಿಂದ ನಕಾರಕ್ಕೆ ಲೋಪಬಂದರೆ ರುತ್ವವಿಸರ್ಗಗಳು ಬಂದು ಸೋಮಪರ್ವಭಿಃ ಎಂದಾಗುವುದು.

**ಅಭಿಷ್ಟಿಃ**— **ಅಭಿಗನ್ತಾ, ಇಷಗತೌ** ಎಂಬ ಧಾತುವಿನ ಮುಂದೆ **ಮಂತ್ರೇ ವೃಷೇಷಪಚಮನವಿದಭೂವೀರಾ ಉದಾತ್ತಃ** (ಪಾ. ಸೂ. ೩-೩-೯೬) ವೃಷ ಮೊದಲಾದ ಧಾತುಗಳಿಗೆ ಕ್ತಿನ್ ಬರುವುದು. ಅದು ಉದಾತ್ತವೂ ಆಗುವುದು ಎಂಬುದರಿಂದ ಇಷಧಾತುವಿನ ಮುಂದೆ ಉದಾತ್ತವಾದ ಕ್ತಿನ್ ಬರುವುದು, ಕ್ತಿನ್ ಪ್ರತ್ಯಯವು ಭಾವಾರ್ಥದಲ್ಲಿ ಬಂದರೂ ಲಕ್ಷಣೆಯಿಂದ ಭವಿತೃವನ್ನು ಹೇಳುವುದು **ತಿ, ತು, ತ್ರ, ತ, ಥ, ಸಿ, ಸು, ಸರ, ಕ, ಸೇ, ಷು ಚ** (ಪಾ. ಸೂ. ೭-೨-೯) ಈ ಹತ್ತು ಕೃತ್ಪ್ರತ್ಯಯಗಳಿಗೆ ಇಡಾಗಮ ಬರುವುದಿಲ್ಲ ಎಂದು ನಿಷೇಧವಿರುವುದರಿಂದ ತಿ ಎಂಬುದಕ್ಕೆ **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂಬುದರಿಂದ ಇಡಾಗಮ ಬರುವುದಿಲ್ಲ. ಅಭಿ+ಇಷ್+ತಿ ಎಂದಿರುವಾಗ **ಏಮನ್ನಾದಿಷುಪರರೂಪಂ ವಕ್ತವ್ಯಮ್** (ಪಾ. ಸೂ. ೬-೧-೯೪-೬) ಎಂಬುದರಿಂದ ಅಭಿ+ಇಷ್ ಎಂಬಲ್ಲಿ ಸವರ್ಣದೀರ್ಘಸಂಧಿಗೆ ಅಪವಾದವಾಗಿ ಪರರೂಪ ಬರುವುದು. ಅಭಿಷ್+ತಿ **ಷ್ಟುನಾಷ್ಟುಃ** (ಪಾ. ಸೂ. ೮-೪-೪೧) ಎಂಬ ಷ್ಟುತ್ವಸಂಧಿಯಿಂದ ತಕಾರಕ್ಕೆ ಟಕಾರ ಬಂದರೆ ಅಭಿಷ್ಟಿ ಎಂದಾಗುವುದು. ಅಭಿ ಎಂಬುದಕ್ಕೆ ಇಷ್ಟಿ ಎಂಬುದರೊಡನೆ **ಕುಗತಿಪ್ರಾದಯಃ** (ಪಾ. ಸೂ. ೨-೨-೧೮) ಎಂಬುದರಿಂದ ಪ್ರಾದಿಸಮಾಸ ಬಂದರೆ ಕೃದುತ್ತರಪದಪ್ರಕೃತಿಸ್ವರವೇ ಬರುವುದು.

ಓಜಸಾ—ಉಬ್ಜೇರ್ಬಲೋಪಶ್ಚ (ಉ. ಸೂ. ೪-೬೩೧) ಎಂಬುದರಿಂದ ಉಬ್ಜ ಆರ್ಜವೇ ಧಾತುವಿನ ಮುಂದೆ ಅಸುನ್ ಪ್ರತ್ಯಯವೂ ಧಾತುವಿನ ಬಕಾರಕ್ಕೆ ಲೋಪವೂ ಬರುವುದು. ಲಘೂಪಧಗುಣ ಬಂದರೆ ಓಜಸ್ ತೃತೀಯಾ ಏಕವಚನ ಓಜಸಾ. ನಿತ್ತಾದ್ದರಿಂದ ಆದ್ಯುದಾತ್ತ ಬರುವುದು ॥ ೧ ॥

॥ ಸಂಹಿತಾಪಾಠಃ ॥

ಏಮೇನಂ ಸೃಜತಾ ಸುತೇ ಮಂದಿಮಿಂದ್ರಾಯ ಮಂದಿನೇ ।
ಚಕ್ರಿಂ ವಿಶ್ವಾನಿ ಚಕ್ರಯೇ ॥ ೨ ॥

॥ ಪದಪಾಠಃ ॥

ಆ । ಈಂ । ಏನಂ । ಸೃಜತ । ಸುತೇ । ಮಂದಿಂ । ಇಂದ್ರಾಯ । ಮಂದಿನೇ ॥
ಚಕ್ರಿಂ । ವಿಶ್ವಾನಿ । ಚಕ್ರಯೇ ॥ ೨ ॥

॥ ಸಾಯಣಭಾಷ್ಯಂ ॥

ಈಮಿತ್ಯನರ್ಥಕಃ ಪಾದಪೂರಣಾಯ ಪ್ರಯುಕ್ತಃ । ಹೇ ಅಧ್ವರ್ಯವಃ ಸುತೇಽಭಿಷುತೇ ಚಮಸಸ್ಥೇ ಸೋಮ ಏನಂ ಸೋಮಮಿಂದ್ರಾಯೇಂದ್ರಾರ್ಥಮಾಸೃಜತ । ಪುನರಭ್ಯುನ್ನಯತ । ಶುಕ್ರಾಮಂಥಿಚಮಸಗಣೇ ಪುನರಭ್ಯುನ್ನಯನಮಾಪಸ್ತಂಬೇನೋಕ್ತಂ । ಹೋತ್ರಕಾಣಾಂ ಚಮಸಾಧ್ವರ್ಯವಃ ಸಕೃತ್ಸಕೃದ್ಧುತ್ವಾ ಶುಕ್ರಸ್ಯಾಭ್ಯುನ್ನೀಯೋಪಾವರ್ತಧ್ವಮಿತಿ । ಆಪ. ೧೨-೨೩-೪ । ಇತಿ । ಕೀದೃಶಮೇನಂ. ಮಂದಿಂ ಹರ್ಷಹೇತುಂ ಚಕ್ರಿಂ ಸಾಧುಕರಣಶೀಲಂ । ಕೀದೃಶಾಯೇಂದ್ರಾಯ । ಮಂದಿನೇ ಹರ್ಷಯುಕ್ತಾಯ ವಿಶ್ವಾನಿ ಸರ್ವಾಣಿ ಕರ್ಮಾಣಿ ಚಕ್ರಯೇ ಕೃತವತೇ । ಸರ್ವಕರ್ಮನಿಷ್ಪಾದನಶೀಲಾಯೇತ್ಯರ್ಥಃ । ಈಮಿತ್ಯಸ್ಯ ಪಾದಪೂರಣಾರ್ಥತ್ವಂ ಯಾಸ್ಕ ಆಹ । ಅಥ ಯೇ ಪ್ರವೃತ್ತೇಽರ್ಥೇಽಮಿತಾಕ್ಷರೇಷು ಗ್ರಂಥೇಷು ವಾಕ್ಯಪೂರಣಾ ಆಗಚ್ಛಂತಿ ಪದಪೂರಣಾಸ್ತೇ ಮಿತಾಕ್ಷರೇಷ್ವನರ್ಥಕಾಃ ಕಮೀಮಿದ್ವಿತಿ । ನಿ. ೧-೯ । ಇತಿ । ಅಸ್ಯಾಯಮರ್ಥಃ । ಅನ್ಯೈರೇವ ಪದೈರ್ವಿವಕ್ಷಿತೇಽರ್ಥೇ ಸಮಾಪ್ತೇ ಸತಿ ಯೇ ಶಬ್ದಾ ಈಮಿತ್ಯಾದಯಃ ಪ್ರಯುಕ್ತಾಸ್ತೇ ಶಬ್ದಾ ಅಮಿತಾಕ್ಷರೇಷು ಛಂದೋರಾಹಿತ್ಯೇನ ಪರಿಮಿತಾಕ್ಷರರಹಿತೇಷು ಬ್ರಾಹ್ಮಣಾದಿವಾಕ್ಯೇಷು ವಾಕ್ಯಪೂರಣಾರ್ಥಾ ದ್ರಷ್ಟವ್ಯಾಃ । ಮಿತಾಕ್ಷರೇಷು ಛಂದೋಯುಕ್ತೇಷು ಗ್ರಂಥೇಷು ಪಾದಪೂರಣಾರ್ಥಾಃ । ತೇ ಚ ಕಮೀಮಿತ್ಯಾದಯ ಇತಿ । ಈಮಿತ್ಯಸ್ಯ ಶಬ್ದಸ್ಯಾನರ್ಥಕ್ಯಾಯೈತಾಮ್ಬುಚಮುದಾಜಹಾರ । ಏಮೇನಂ ಸೃಜತಾ ಸುತೇ । ಆಸೃಜತೈನಂ ಸುತೇ । ನಿ. ೧-೧೦ । ಇತಿ ॥ ಏನಂ । ಇದಮೋ ದ್ವಿತೀಯಾಯಾಂ ದ್ವಿತೀಯಾಟೌಃ ಸ್ವೇನಃ । ಪಾ. ೨-೪-೩೪ ।

ಇತ್ಯೇನಾದೇಶೋಽನುದಾತ್ತ ಇತ್ಯನುವೃತ್ತೇಃ ಸರ್ವಾನುದಾತ್ತಃ । ಸೃಜತ । ಸಂಹಿತಾಯಾಮನ್ಯೇಷಾಮಪಿ ದೃಶ್ಯತೇ । ಪಾ. ೬-೩-೧೩೭ । ಇತಿ ದೀರ್ಘಃ । ಮಂದಿಂ । ಪ್ರಮೋದಹೇತುಂ । ಮದಿ ಸ್ತುತಿಮೋದ-ಮದಸ್ವಪ್ನಕಾಂತಿಗತಿಷು । ಇದಿತೋ ನುಮ್ । ಧಾತೋರಿತಿ ನುಮ್ । ಮಂದಮಾನಂ ಪ್ರಯುಂಕ್ತೆ ಇತ್ಯರ್ಥೇ ಹೇತುಮತಿ ಚ । ಪಾ. ೩-೧-೨೬ । ಇತಿ ಣಿಚ್ । ಣ್ಯಂತಸ್ಮಾಜಂತತ್ವಾದಚ ಇಃ । ಉ-೪-೧೩೮ । ಇತೀಕಾರಪ್ರತ್ಯಯಃ । ಣೇರನಿಟೀತಿ ಣಿಲೋಪಃ । ಪ್ರತ್ಯಯಸ್ವರೇಣಾಂತೋದಾತ್ತತ್ವಂ . ಮಂದಿನೇ । ಮಂದೇಃ ಪೂರ್ವವತ್ । ಚತುರ್ಥ್ಯೇಕವಚನೇಽನಪುಂಸಕಸ್ಯಾಪಿ । ಪಾ. ೭-೧-೭೩ । ವ್ಯತ್ಯ। ಯೇನ ನುಮಾಗಮಃ । ಚಕ್ರಿಂ । ಡುಕೃಞ್ ಕರಣೇ । ಆದೃಗಮಹನಜನಃ ಕಿಕಿನೌ ಲಿಟ್ ಚ . ಪಾ. ೩-೨ ೧೭೧ । ಇತಿ ತಚ್ಛೀಲತದ್ಧರ್ಮತತ್ಸಾಧುಕಾರಿಷು ಕರ್ತೃಷು ಕಿನ್ಪ್ರತ್ಯಯಃ । ತಸ್ಯ ಕಿತ್ತ್ವಾ-ದ್ಗುಣಾಭಾವಃ । ಯಣಾದೇಶಃ । ಲಿಡ್ವದ್ಭಾವಾದ್ದ್ವಿರ್ವಚನಂ । ದ್ವಿರ್ವಚನೇಽಚಿ । ಪಾ. ೧-೧ ೫೯ । ಇತಿ ಯಣಾದೇಶಸ್ಯ ಸ್ಥಾನಿವದ್ಭಾವಾತ್ಕೃಶಬ್ದೋ ದ್ವಿರುಚ್ಯತೇ । ಅಭ್ಯಾಸಸ್ಯೋರತ್ವರಪರತ್ವಶ್ಚುತ್ವಹಲಾದಿಶೇಷಾಃ। ಕಿನೋ ನಿತ್ತ್ವಾದಾದ್ಯುದಾತ್ತಃ । ವಿಶ್ವಾನಿ । ವಿಶೇಃ ಕ್ವನ್ । ನಿತ್ತ್ವಾದಾದ್ಯುದಾತ್ತಃ । ಅಸ್ಯ ಚಕ್ರಯೆ ಇತಿ ಕೃದಂತೇನ ಯೋಗೇಽಪಿ ಕರ್ತೃಕರ್ಮಣೋಃ ಕೃತಿ । ಪಾ. ೨-೩-೬೫ । ಇತಿ ಷಷ್ಠೀ ನ ಭವತಿ । ಕಿಕಿನೌ ಲಿಟ್ ಚೇತಿ ಕಿನೋ ಲಿಡ್ವದ್ಭಾವೇನ ನ ಲೋಕಾವ್ಯಯನಿಷ್ಠಾಖಲರ್ಥತೃನಾಂ। ಪಾ. ೨-೩-೬೯ । ಇತಿ ನಿಷೇಧಾತ್ ॥

॥ ಪ್ರತಿಪದಾರ್ಥ ॥

(ಹೇ ಅಧ್ವರ್ಯವಃ—ಎಲೈ ಅಧ್ವರ್ಯು ಮೊದಲಾದ ಋತ್ವಿಜರೇ,) ಸುತೇ—ಸೋಮರಸವು ಹಿಂಡಿ ಸಿದ್ಧಪಡಿಸಿರಲಾಗಿ । ಮಂದಿನೇ—ಹರ್ಷಯುಕ್ತನಾದ । ವಿಶ್ವಾನಿ—ಸಮಸ್ತ ಕಾರ್ಯಗಳನ್ನೂ । ಚಕ್ರಯೇ—ಮಾಡುವವನಾದ । ಇಂದ್ರಾಯ—ಇಂದ್ರನಿಗಾಗಿ । ಮಂದಿಂ—ಸಂತೋಷವನ್ನುಂಡುಮಾಡುವ । ಚಕ್ರಿಂ—ಒಳ್ಳೆಯ ಕಾರ್ಯಗಳನ್ನು ಮಾಡಲು ಸಾಧನವಾದ । ಏನಂ—ಈ ಸೋಮರಸವನ್ನು । ಆ ಸೃಜತ—ಅರ್ಪಿಸಿರಿ (ಕೊಡಿ) ॥

॥ ಭಾವಾರ್ಥ ॥

ಎಲೈ ಅಧ್ವರ್ಯು ಮೊದಲಾದ ಋತ್ವಿಜರೇ, ಈಗ ಸೋಮರಸವು ಲತೆಯಿಂದ ಹಿಂಡಿ ಪಾನಯೋಗ್ಯವಾಗುವಂತೆ ಸಿದ್ಧಪಡಿಸಲ್ಪಟ್ಟಿರುವುದು. ಈ ಸೋಮರಸವು ಪಾನಮಾಡುವವರಿಗೆ ಹರ್ಷವನ್ನುಂಟುಮಾಡುವುದು ; ಒಳ್ಳೆಯ ಕರ್ಮಗಳನ್ನು ಮಾಡಲು ಕಾರಣಭೂತವಾಗಿರುವುದು , ಇಂತಹ ಈ ಸೋಮರಸವನ್ನು ಹರ್ಷಯುಕ್ತನೂ, ಸಮಸ್ತ ಕಾರ್ಯಗಳನ್ನು ಮಾಡುವವನೂ ಆದ ಇಂದ್ರನಿಗೆ ಅರ್ಪಿಸಿರಿ.

## English Translation.

The soma being extracted, present this exhilarating and efficacious draught to the rejoicing Indra, the accomplisher of all things.

॥ ವಿಶೇಷವಿಷಯಗಳು ॥

**ಈಂ**— ಈಂ ಎಂಬ ಶಬ್ದಕ್ಕೆ ಅರ್ಥವಿಲ್ಲವೆಂದೂ ಪಾದವನ್ನು ಪೂರ್ಣಗೊಳಿಸುವುದಕ್ಕಾಗಿ ಉಪಯೋಗಿಸಲ್ಪಟ್ಟಿರುವುದೆಂದೂ ಭಾಷ್ಯಕಾರರೂ, ಸ್ಕಂದಸ್ವಾಮಿಯೂ ಹೇಳಿರುವರು. ಯಾಸ್ಕರೂ ಸಹ ಈ ವಿಚಾರವಾಗಿ ನಿರುಕ್ತದಲ್ಲಿ (ನಿ. ೧-೯) ಈರೀತಿ ಹೇಳಿರುವರು---

**ಅಥ ಯೇ ಪ್ರವೃತ್ತೇಽರ್ಥೇಽಮಿತಾಕ್ಷರೇಷು ಗ್ರಂಥೇಷು ವಾಕ್ಯಪೂರಣಾ ಆಗಚ್ಛಂತಿ ಪದಪೂರಣಾಸ್ತೇ ಮಿತಾಕ್ಷರೇಷ್ವನರ್ಥಕಾಃ ಕಮೀಮಿದ್ವಿತಿ ॥** (ನಿ. ೧-೯)

ಇದಕ್ಕೆ ಭಾಷ್ಯಕಾರರು ಹೀಗೆ ವ್ಯಾಖ್ಯಾನ ಮಾಡಿರುವರು---

**ಅನ್ಯೈರೇವ ಪದೈರ್ವಿವಕ್ಷಿತೇಽರ್ಥೇ ಸಮಾಪ್ತೇ ಸತಿ ಯೇ ಶಬ್ದಾ ಈಮಿತ್ಯಾದಯಃ ಪ್ರಯುಕ್ತಾಸ್ತೇ ಶಬ್ದಾ ಅಮಿತಾಕ್ಷರೇಷು ಛಂದೋರಾಹಿತ್ಯೇನ ಪರಿಮಿತಾಕ್ಷರರಹಿತೇಷು ಬ್ರಾಹ್ಮಣಾದಿವಾಕ್ಯೇಷು ವಾಕ್ಯಪೂರಣಾರ್ಥಾ ದ್ರಷ್ಟವ್ಯಾಃ । ಮಿತಾಕ್ಷರೇಷು ಛಂದೋಯುಕ್ತೇಷು ಗ್ರಂಥೇಷು ಪಾದಪೂರಣಾರ್ಥಾಃ । ತೇ ಚ ಕಮೀಮಿತ್ಯಾದಯ ಇತಿ । ಈಮಿತ್ಯಸ್ಯ ಶಬ್ದಸ್ಯಾನರ್ಥಕ್ಯಾಯೈತಾಮೃಚಮುದಾಜಹಾರ । ಏಮೇನಂ ಸೃಜತಾ ಸುತೇ । ಆಸೃಜತೈನಂ ಸುತೇ ಇತಿ ॥**

ಎಂದರೆ— ಈಂ ಶಬ್ದಕ್ಕೆ ಅರ್ಥವಿಲ್ಲ. ಪಾದಪೂರಣ ಮಾಡುವುದಕ್ಕಾಗಿ ಉಪಯೋಗಿಸಲ್ಪಟ್ಟಿರುವುದು. ಛಂದೋಬದ್ಧವಲ್ಲದ ಮತ್ತು ಇಷ್ಟೇ ಅಕ್ಷರಗಳಿರಬೇಕೆಂಬ ನಿಯಮವಿಲ್ಲದ ಬ್ರಾಹ್ಮಣಾದಿ ವಾಕ್ಯಗಳಲ್ಲಿ ಈಂ ಮೊದಲಾದ ಶಬ್ದಗಳು ವಾಕ್ಯಪೂರಣ ಮಾಡುವುದಕ್ಕಾಗಿ ಉಪಯೋಗಿಸಲ್ಪಡುವುದು. ಅದರಂತೆ ಛಂದೋಬದ್ಧವಾದ ಮತ್ತು ಕ್ಲೃಪ್ತಸಂಖ್ಯೆಯ ಅಕ್ಷರಗಳಿಂದ ಕೂಡಿದ ಋಕ್ಕು ಮೊದಲಾದ ಮಂತ್ರಗಳಲ್ಲಿ ಈ ಶಬ್ದಗಳು ಪಾದಪೂರಣಕ್ಕಾಗಿ ಉಪಯೋಗಿಸಲ್ಪಡುವವು. ಈ ವಿಷಯದಲ್ಲಿ ಉದಾಹರಣೆಗಾಗಿ ಯಾಸ್ಕರು ಏಮೇನಂ ಸೃಜತ ಎಂಬ ಋಕ್ಕನ್ನೇ ಉಪಯೋಗಿಸಿರುವರು. ಈ ಋಕ್ಕಿನಲ್ಲಿ ಈಂ ಎಂಬ ಶಬ್ದಕ್ಕೆ ಈ ಮಂತ್ರದ ಅರ್ಥ ವಿಚಾರದಲ್ಲಿ ಯಾವ ವಿಧವಾದ ಉಪಯೋಗವೂ ಇಲ್ಲದೆ ಕೇವಲ ಪಾದಪೂರಣಕ್ಕಾಗಿ ಎಂದರೆ ಛಂದೋನಿಯಮ ಪ್ರಕಾರ ಗಾಯತ್ರೀ ಛಂದಸ್ಸಿನಲ್ಲಿರಬೇಕಾದ ಎಂಟು ಅಕ್ಷರಗಳನ್ನು ಹೊಂದಿಸುವುದಕ್ಕಾಗಿ ಉಪಯೋಗಿಸಲ್ಪಟ್ಟಿರುವುದು. ಮತ್ತು—

**ಕ್ರಿಯಾವಾಚಕಮಾಖ್ಯಾತಮುಪಸರ್ಗೋ ವಿಶೇಷಕೃತ್ ।**
**ಸತ್ತ್ವಾಭಿಧಾಯಕಂ ನಾಮ ನಿಪಾತಃ ಪಾದಪೂರಣಃ ।' ಇತಿ ॥**

**ಕಮೀಮಿದ್ವಿತಿ ॥ ಏತೇ ಚತ್ವಾರಃ ಕಂ, ಈಂ ಇತ್, ಉ ಇತಿ ॥** ಎಂದರೆ **ಕಂ, ಈಂ ಇತ್, ಉ** ಎಂಬ ನಾಲ್ಕು ಶಬ್ದಗಳು (ನಿಪಾತಗಳು) ಛಂದೋಬದ್ಧವಾದ ಋಕ್ಕಿನ ಪಾದದಲ್ಲಿರಬೇಕಾದ ಕ್ಲೃಪ್ತ ಸಂಖ್ಯೆಯ ಅಕ್ಷರಗಳನ್ನು ಪೂರಯಿಸುವುದಕ್ಕಾಗಿ ಉಪಯೋಗಿಸಲ್ಪಡುವವು. ಇವುಗಳಿಗೆ ಅಂತಹ ಸಂದರ್ಭದಲ್ಲಿ ಯಾವ ನಿರ್ದಿಷ್ಟಾರ್ಥವೂ ಇರುವುದಿಲ್ಲ. ಮತ್ತು **ಇವ, ನ- ಚಿತ್, ನು** ಎಂಬ ಶಬ್ದಗಳೂ ಸಹ ಪಾದಪೂರಣಕ್ಕಾಗಿ ಉಪಯೋಗಿಸಲ್ಪಡುವುದಾದರೂ ಕೆಲವು ಸಂದರ್ಭಗಳಲ್ಲಿ ಇವುಗಳಿಗೆ ಒಂದು ವಿಧವಾದ ಅರ್ಥವಿರುವುದು. ಆದುದರಿಂದ **ಇವ, ನ, ಚಿತ್, ನು** ಎಂಬ ಶಬ್ದಗಳು ಅರ್ಥರಹಿತವಾಗಿಯೂ ಅರ್ಥಸಹಿತವಾಗಿಯೂ ಎಂದರೆ ಎರಡು ವಿಧವಾಗಿಯೂ ಉಪಯೋಗಿಸಲ್ಪಡುವವು.

**ಸೃಜತ**— ಛಂದಸ್ಸಿನ ಅನುಕೂಲಕ್ಕಾಗಿ ತಕಾರವು ಸಂಹಿತಾಪಾಠದಲ್ಲಿ ದೀರ್ಘವಾಗಿರುವುದು.

**ಮಂದಿಂ**—ಪ್ರಮೋದಹೇತುಂ । ಮದಿ ಸ್ತುತಿಮೋದಮದಸ್ವಪ್ನಕಾಂತಿಗತಿಷು ॥ ಈ ಶಬ್ದವು ಮದಿ ಎಂಬ ಧಾತುವಿನ ರೂಪಾಂತರವು. ಸಂತೋಷವನ್ನುಂಟುಮಾಡುವ, ಹರ್ಷಪ್ರದವಾದ ಎಂದರ್ಥವು.

**ಮಂದಿನೇ**—ಮಂದಿಂ ಎಂಬ ಶಬ್ದಕ್ಕೆ ಹೇಳಿರುವ ವಿಷಯವೇ ಈ ಶಬ್ದಕ್ಕೂ ಅನ್ವಯಿಸುವುದು. ಇದು ಚತುರ್ಥ್ಯೇಕವಚನವು.

**ಚಕ್ರಿಂ** ಮತ್ತು **ಚಕ್ರಯೇ**—ಈ ಶಬ್ದಗಳು **ಡುಕೃಞ್ ಕರಣೇ** ಎಂಬ ಧಾತುವಿನಿಂದ ವ್ಯುತ್ಪನ್ನವಾದ ಶಬ್ದಗಳು. ಇವುಗಳ ನಿಷ್ಪತ್ತಿಗಾಗಿ ವ್ಯಾಕರಣಭಾಗವನ್ನು ನೋಡಿ.

॥ ವ್ಯಾಕರಣಪ್ರಕ್ರಿಯಾ ॥

**ಏನಮ್**—ಇದಮ್ ಶಬ್ದದ ಮುಂದೆ ದ್ವಿತೀಯಾವಿಭಕ್ತಿ ಏಕವಚನ ಅಮ್ ಪ್ರತ್ಯಯವನ್ನು ಇಟ್ಟರೆ ಇದಮ್+ಅಮ್ ಎಂದಿರುವಾಗ **ದ್ವಿತಿಯೌಟೌಸ್ಸ್ವೇನಃ** (ಪಾ.ಸೂ. ೨-೪-೩೪) ಅನ್ವಾದೇಶ ವಿಷಯದಲ್ಲಿ ದ್ವಿತೀಯಾ ವಿಭಕ್ತಿ, ತೃತೀಯಾ ಏಕವಚನ ಟಾ ಪ್ರತ್ಯಯ ಷಷ್ಠೀ ಸಪ್ತಮೀವಿಭಕ್ತಿಗಳ ಓಸ್ ಇವು ಪರದಲ್ಲಿದ್ದರೆ ಇದಮ್ ಏತದ್, ಶಬ್ದಗಳಿಗೆ ಏನ ಎಂಬ ಆದೇಶ ಬರುವುದು ಎಂಬುದರಿಂದ ಇದಮ್ ಎಂಬುದಕ್ಕೆ ಏನ ಆದೇಶ ಬಂದರೆ ಏನ+ಅಮ್ **ಅಮಿಪೂರ್ವಃ** (ಪಾ. ಸೂ. ೬-೧-೧೦) ಎಂಬುದರಿಂದ **ಪೂರ್ವ**ರೂಪ ಬಂದರೆ ಏನಮ್ ಎಂದಾಗುವುದು. ದ್ವಿತೀಯಾಟೌಸ್ಸ್ವೇನಃ ಎಂಬ ಸೂತ್ರಕ್ಕೆ **ಇದಮೋऽನ್ವಾದೇಶೇಶನುದಾತ್ತಸ್ತೃತೀಯಾದೌ** (ಪಾ.ಸೂ. ೨-೪-೩೨) ಎಂಬುದರಿಂದ ಅನುದಾತ್ತಃ ಎಂಬ ಪದವೂ ಸಂಬಂಧಿಸುವುದು. ಆದ್ದರಿಂದ ಅನುದಾತ್ತವಾದ ಏನ ಎಂಬ ಆದೇಶ ಬರುವುದು ಎಂದು ಅರ್ಥವಾಗುವುದು. ಆದ್ದರಿಂದ ಏನಮ್ ಎಂಬುದು ಸರ್ವಾನುದಾತ್ತ.

**ಸೃಜತ**—**ಅನ್ಯೇಷಾಮಪಿದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ಸಂಹಿತಾಕಾಲದಲ್ಲಿ ದೀರ್ಘ ಬರುವುದು ಸೃಜತಾ ಎಂದಾಗುವುದು.

**ಮನ್ದಿಮ್**—ಹರ್ಷಕ್ಕೆ ಕಾರಣಭೂತವಾದ, ಮದಿಸ್ತುತಿಮೋದಮದಸ್ವಪ್ನಕಾನ್ತಿಗತಿಷು ಧಾತು, ಮದಿ ಧಾತುವು ಇದಿತ್ತಾದ್ದರಿಂದ **ಇದಿತೋನುಮ್‌ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ ಬರುವುದು ಮನ್ದ್ ಎಂದಾಗುವುದು. ನಂತರ ಮನ್ದಮಾನಂ ಪ್ರಯುಙ್‌ಕ್ತೇ, ಎಂದು ಅರ್ಥವನ್ನು ವಿವಕ್ಷೆ ಮಾಡಿದರೆ **ಹೇತುಮತಿಚ** (ಪಾ. ಸೂ. ೩-೧-೨೬) **ತತ್‌ಪ್ರಯೋಜಕೋಹೇತುಶ್ಚ** (ಪಾ. ಸೂ. ೧-೪-೫೫) ಕರ್ತೃವನ್ನು ಪ್ರೇರಿಸುವವನು, ಹೇತು ಸಂಜ್ಞೆಯನ್ನೂ, ಕರ್ತೃಸಂಜ್ಞೆಯನ್ನೂ ಹೊಂದುವನು ಎಂದು ಎರಡನೇ ಸೂತ್ರದ ಅರ್ಥ, ಇಂತಹ ಹೇತು ಸಂಜ್ಞೆವುಳ್ಳವನಲ್ಲಿರತಕ್ಕ ವ್ಯಾಪಾರವನ್ನು ಅಂದರೆ ಪ್ರೇಷಣಾ, ಅನುಮತಿ, ಉಪದೇಶಾದಿಗಳನ್ನು ವಿವಕ್ಷೆ ಮಾಡಿದರೆ ಧಾತುವಿನ ಮುಂದೆ ಣಿಚ್ ಪ್ರತ್ಯಯಬರುವುದು ಎಂದು ಪ್ರಥಮ ಸೂತ್ರಾರ್ಥ, ಪ್ರೇಷಣಾ ಅಂದರೆ ಆಜ್ಞೆ. ಸಮಾನವಾದ ಅಧಿಕಾರವನ್ನು ಹೊಂದಿರುವ ಮಿತ್ರನೇ ಮೊದಲಾದವರನ್ನು ಪ್ರವರ್ತನೆ ಮಾಡುವುದಕ್ಕೆ ಅಧ್ಯೇಷಣಾ ಎಂದು ಹೆಸರು. ಅನುಮತಿ, ಎಂದರೆ ರಾಜಾದಿಗಳ ಸಂಮತಿ, ಉಪದೇಶ ಎಂದರೆ ರೋಗಿಗೆ ಹಿತಬೋಧನೆ ಮಾಡಿ ಔಷಧಿ ಸೇವನೆಯಲ್ಲಿ ಪ್ರವರ್ತನೆಮಾಡುವುದು. ಇಲ್ಲಿ ಪ್ರೇರಣಾರ್ಥದಲ್ಲಿ ಣಿಚ್ ಪ್ರತ್ಯಯ ಬರುವುದು. ಎಂದರೆ ಮನ್ದ್+ಇ. ಈಗ ಇದು ಅಜಂತವಾದ್ದರಿಂದ, **ಅಚಇಃ** (ಉ. ಸೂ. ೪-೫೭೮) ಅಜನ್ತವಾದ ಧಾತುವಿನ ಮುಂದೆ ಇ ಪ್ರತ್ಯಯ ಬರುವುದು ಎಂಬುದರಿಂದ

ಣಾ ಪ್ರತ್ಯಯ ಬಂದರೆ ಮದ್+ಇ+ಇ ಣೇರನಿಟಿ (ಪಾ. ಸೂ. ೬-೪-೫೧) ಇಡಾದಿಯಲ್ಲದ ಆರ್ಧಧಾತುಕ ಪರ ದಲ್ಲಿರುವಾಗ ಣಿಗೆ ಲೋಪಬರುವುದು ಎಂಬುದರಿಂದ ಣಿಚ್ಚಿನ ಇಕಾರಕ್ಕೆ ಲೋಪ ಬರುವುದು. ಮನ್ದಿ ಎಂಬುದು ಪ್ರತ್ಯಯ ಸ್ವರದಿಂದ ಅಂತೋದಾತ್ತ. ದ್ವಿತೀಯಾ ಏಕವಚನದಲ್ಲಿ ಮನ್ದಿಮ್ ಎಂದಾಗುವುದು.

ಮನ್ದಿನೇ—ಮನ್ದಿ, ಎಂಬಲ್ಲಿ ಮೊದಲಿನಂತೆಯೇ ಪ್ರಕ್ರಿಯೆಯನ್ನು ಉಪಪಾದಿಸಿಕೊಳ್ಳಬೇಕು. ಮಂದಿ ಶಬ್ದದ ಮುಂದೆ ಚತುರ್ಥೀವಿಭಕ್ತಿ ಏಕವಚನ ಙೇ ಪ್ರತ್ಯಯವನ್ನಿಟ್ಟರೆ ಮನ್ದಿ+ಏ ಎಂದಿರುವಾಗ ಇಕೋಽಚಿ ವಿಭಕ್ತೌ (ಪಾ. ಸೂ. ೭-೧-೭೩) ಅಜಾದಿ ವಿಭಕ್ತಿ ಪರದಲ್ಲಿರುವಾಗ ಇ ಉ ಋ ಇವುಗಳನ್ನು ಕೊನೆಯಲ್ಲಿ ಹೊಂದಿರುವ ನಪುಂಸಕಲಿಂಗ ಶಬ್ದದ ಮುಂದೆ ನುಮ್ (ನಕಾರಾಗಮ) ಬರುವುದು ಎಂಬುದರಿಂದ ನುಮ್ ಬಂದರೆ ಮಂದಿನೇ ಎಂದಾಗುವುದು. ಆದರೆ ಇಲ್ಲಿ ಮನ್ದಿನೇ ಎಂಬುದು ಇಂದ್ರನಿಗೆ ವಿಶೇಷಣ ಪುಲ್ಲಿಂಗ. ಆದರೂ ಛಂದಸ್ಸಾದ್ದರಿಂದ ಪುಲ್ಲಿಂಗದಲ್ಲಿಯೂ ವ್ಯತ್ಯಯದಿಂದ ನುಮಾಗಮ ಬರುವುದು.

ಚಕ್ರಿಮ್—ಡುಕೃಞ್ ಕರಣೇ ಧಾತು. ಈ ಕೃ ಧಾತುವಿನ ಮುಂದೆ ಆದೃಗಮಹನಃಕಿಕಿನೌಲಿಟ್ಚ (ಪಾ- ಸೂ. ೩-೨-೧೭೧) ಆಕಾರಾಂತ ಧಾತು, ಋಕಾರಾಂತ ಧಾತು, ಗಮ್, ಹನ್ ಈ ಧಾತುಗಳು ಇವುಗಳ ಮುಂದೆ ತಚ್ಛೀಲ, ತದ್ಧರ್ಮ, ತತ್ಸಾಧುಕಾರಿ ಎಂಬ ಅರ್ಥಗಳಲ್ಲಿ ಛಂದಸ್ಸಿನಲ್ಲಿ ಕಿ, ಕಿನ್ ಎಂಬ ಪ್ರತ್ಯಯಗಳು ಬರುವುವು. ಅವು ಲಿಟ್ಟಿನಂತೆಯೂ ಆಗುವುವು ಎಂಬುದರಿಂದ ಕಿನ್ ಪ್ರತ್ಯಯ ಬರುವುದು ಕೃ+ಇ ಎಂದಿರುವುದು ಈಗ ದ್ವಿರ್ವಚನೇಽಚಿ (ಪಾ.ಸೂ. ೧-೧-೫೯) ದ್ವಿತ್ವಕ್ಕೆ ನಿಮಿತ್ತವಾದ ಅಜ್ವರ್ಣವು ಪರದಲ್ಲಿದ್ದರೆ ಅದರ ಪೂರ್ವದ ಅಚ್ಚಿಗೆ ದ್ವಿತ್ವವನ್ನು ಮಾಡುವಾಗ ಯಾವ ಆದೇಶವೂ ಬರುವುದಿಲ್ಲ ಎಂದು ಈ ಸೂತ್ರಕ್ಕೆ ಅರ್ಥವಾದಾಗ ಇ ಎಂಬುದು ಲಿಟ್ಟ ಎಂಬ ಅತಿದೇಶದಿಂದ ಲಿಟ್ಟಾದ್ದರಿಂದ ದ್ವಿತ್ವಕ್ಕೆ ನಿಮಿತ್ತವಾದ ಅಚ್ಚಾಗುವುದರಿಂದ ಲಿಟಿಧಾತೋಃ (ಪಾ. ಸೂ. ೬-೧-೮) ಎಂಬುದರಿಂದ ದ್ವಿತ್ವ ಮಾಡುವಾಗ ಇಕೋಯಣಚಿ (ಪಾ. ಸೂ. ೬-೧-೭೭) ಎಂಬುದರಿಂದ ಯಣಾದೇಶ ಬಗುವುದಿಲ್ಲ. ಕೃ ಎಂಬುದಕ್ಕೆ ದ್ವಿತ್ವ ಬರುವುದು. ಕೃ ಕೃ+ಇ ಎಂದಾದಾಗ ಎರಡನೇ ಕೃವಿನ ಋಕಾರಕ್ಕೆ ಯಣಾದೇಶದಿಂದ ರೇಫ ಬರುವುದು. ದ್ವಿರ್ವಚನೇಽಚಿ (ಪಾ. ಸೂ. ೧-೧-೫೯) ದ್ವಿತ್ವನಿಮಿತ್ತವಾದ ಅಜ್ವರ್ಣ ಪರದಲ್ಲಿದ್ದರೆ ದ್ವಿತ್ವವನ್ನು ಮಾಡುವಾಗ ಪರನಿಮಿತ್ತಕವೂ ಅಚ್ಚಿನ ಸ್ಥಾನದಲ್ಲಿ ಬಂದುದೂ ಆದ ಆದೇಶವು ಸ್ಥಾನಿನಿಷ್ಠವಾದ ಧರ್ಮವನ್ನು ಹೊಂದುವುದು ಎಂದು ವೃತ್ತಿಕಾರಾದಿಗಳು ಅರ್ಥವರ್ಣನೆ ಮಾಡುವರು. ಈ ಪಕ್ಷದಲ್ಲಿ ಕೃ+ಇ ಎಂದಿರುವಾಗ ಮೊದಲು ಯಣಾದೇಶ ಬರುವುದು. ಕ್ರ್+ಇ ಎಂದು ಇರುವಾಗ ಪರದಲ್ಲಿರುವ ಇಯನ್ನು ನಿಮಿತ್ತಮಾಡಿಕೊಂಡು ಋಕಾರರೂಪವಾದ ಅಚ್ಚಿನ ಸ್ಥಾನದಲ್ಲಿ ಬಂದ ರೇಫವು ಸ್ಥಾನಿಯ ರೂಪವನ್ನು ಹೊಂದುವುದರಿಂದ ದ್ವಿತ್ವಮಾಡುವಾಗ ಋಕಾರದ ರೂಪವನ್ನು ಹೊಂದುವುದು. ಅಂದರೆ ಕೃಗೆ ಲಿಟಿಧಾತೋಃ ಎಂಬುದರಿಂದ ದ್ವಿತ್ವ ಬರುವುದು. ಕೃಕ್ರ್+ಇ ಎಂದಾಗುವುದು. ಈ ಎರಡು ಪಕ್ಷಗಳಿಗೂ ಫಲಭೇದವಿರುವುದಿಲ್ಲ. ಎರಡನೇ ಪಕ್ಷವನ್ನು ಅನುಸರಿಸಿ ವೇದಭಾಷ್ಯದಲ್ಲಿ ದ್ವಿರ್ವಚನೇಽಚೀತಿ ಯಣಾದೇಶಸ್ಯ ಸ್ಥಾನಿವದ್ಭಾವಾತ್ಕೃಶಬ್ದೋದ್ವಿರುಚ್ಯತೇ ಎಂದು ವರ್ಣಿಸಿರುವರು. ಈಗ ಅಭ್ಯಾಸದ ಋಕಾರಕ್ಕೆ ಉರತ್ (ಪಾ. ಸೂ. ೭-೪-೬೬) ಎಂಬುದರಿಂದ ಬರುವ ಅಕಾರಾದೇಶವು ಉರಣ್ರಪರಃ (ಪಾ. ಸೂ. ೧-೧-೫೧) ಎಂಬ ಶಾಸ್ತ್ರಾನುಸಾರ ರೇಫ ಶಿರಸ್ಕವಾಗಿ ಬರುವುದು. ಕ್ರ್+ಕರ್+ಇ ಎಂದಾಗುವುದು. ಹಲಾದಿಃಶೇಷಃ (ಪಾ.ಸೂ. ೭-೪-೬೦) ಎಂಬುದರಿಂದ ಅಭ್ಯಾಸದಲ್ಲಿ ಮೊದಲನೇ ವ್ಯಂಜನಮಾತ್ರ ನಿಲ್ಲುವುದು. ಎರಡನೆಯ ವ್ಯಂಜನವಾದ ರ್ ಎಂಬುದು ನಿವೃತ್ತವಾಗುವುದು. ಕ+ಕ್ರ್+ಇ ಕುಹೋಶ್ಚುಃ (ಪಾ. ಸೂ. ೭-೪-೬೨) ಎಂಬುದರಿಂದ

ಅಭ್ಯಾಸದಲ್ಲಿರುವ ಕಕಾರಕ್ಕೆ ಚಕಾರ ಬಂದರೆ ಚಕ್ರಿ ಎಂದಾಗುವುದು. ಕಿನ್ ಪ್ರತ್ಯಯವು ನಿತ್ತಾದ್ದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಪ್ರತ್ಯಯಾಂತವು ಆದ್ಯುದಾತ್ತವಾಗುವುದು.

**ವಿಶ್ವಾನಿ**— ವಿಶ್ ಧಾತುವಿನ ಮುಂದೆ **ಅಶೂಪ್ರುಷಿ** (ಉ. ಸೂ. ೧-೧೫೧) ಎಂಬುದರಿಂದ ಕ್ವಿನ್ ಪ್ರತ್ಯಯ ಬರುವುದು. ಪ್ರತ್ಯಯವು ನಿತ್ತಾದ್ದರಿಂದ ಆದ್ಯುದಾತ್ತ. ದ್ವಿತೀಯಾಬಹುವಚನಾಂತದಲ್ಲಿ ವಿಶ್ವಾನಿ ಎಂದಾಗುವುದು. ವಿಶ್ವನ್ ಎಂಬುದಕ್ಕೆ ಚಕ್ರಿಯೇ ಎಂಬ ಕೃದಂತದ ಯೋಗವಿರುವುದು. ಆದ್ದರಿಂದ **ಕರ್ತೃಕರ್ಮಣೋಃಕೃತಿ** (ಪಾ. ಸೂ. ೨-೩-೬೫) ಕೃತ್ಪ್ರತ್ಯಯಾರ್ಥ ಕ್ರಿಯಾನಿರೂಪಿತ ಕರ್ತೃ ಕರ್ಮಾನ್ಯತರ ವಾಚಕವಾದ ಪ್ರಾತಿಪದಿಕದ ಮುಂದೆ ಷಷ್ಠೀ ವಿಭಕ್ತಿ ಬರುವುದು ಎಂಬುದರಿಂದ ಷಷ್ಠೀವಿಭಕ್ತಿಯು ಯದ್ಯಪಿ ಪ್ರಾಪ್ತವಾಗುವುದು. ಆದರೂ ಕಿನ್ ಪ್ರತ್ಯಯಕ್ಕೆ ಕಿಕಿನೌಲಿಟ್ಟ ಎಂದು ಲಿಡ್ವದ್ಭಾವಾತಿದೇಶವಿರುವುದರಿಂದ ಕಿನ್ ಪ್ರತ್ಯಯವು ಲಕಾರದಂತೆ ಆಗುವುದು. ಆದ್ದರಿಂದ **ನ ಲೋಕಾವ್ಯಯನಿಷ್ಠಾಖಲರ್ಥತೃನಾಮ್** (ಪಾ. ಸೂ. ೨-೩-೬೯) ಲ ಉ ಉಕ ಅವ್ಯಯ ನಿಷ್ಠಾ, ಖಲರ್ಥ, ತೃನ್ ಇವುಗಳಿಗೆ ಪ್ರಯೋಗವಿದ್ದರೆ ಷಷ್ಠೀ ವಿಭಕ್ತಿ ಬರುವುದಿಲ್ಲ ಎಂಬುದರಿಂದ ಷಷ್ಠೀವಿಭಕ್ತಿಗೆ ನಿಷೇಧ ಬರುವುದು. ಆದ್ದರಿಂದ **ಕರ್ಮಣಿದ್ವಿತೀಯಾ** (ಪಾ. ಸೂ. ೨-೩-೨) ಎಂಬುದರಿಂದ ದ್ವಿತೀಯಾ ವಿಭಕ್ತಿಯೇ ಬರುವುದು ॥ ೨ ॥

॥ ಸಂಹಿತಾಪಾಠಃ ॥

ಮತ್ಸ್ವಾ ಸುಶಿಪ್ರ ಮಂದಿಭಿಃ ಸ್ತೋಮೇಭಿರ್ವಿಶ್ವಚರ್ಷಣೇ ।
ಸಚೈಷು ಸವನೇಷ್ವಾ ॥ ೩ ॥

॥ ಪದಪಾಠಃ ॥

ಮತ್ಸ್ವ । ಸುಽಶಿಪ್ರ । ಮಂದಿಽಭಿಃ । ಸ್ತೋಮೇಭಿಃ । ವಿಶ್ವಽಚರ್ಷಣೇ ॥
ಸಚಾ । ಏಷು । ಸವನೇಷು । ಆ ॥ ೩ ॥

॥ ಸಾಯಣಭಾಷ್ಯಂ ॥

ಹೇ ಸುಶಿಪ್ರ ಹೇ ಶೋಭನಹನೋ ಶೋಭನನಾಸಿಕ ವಾ । ಶಿಪ್ರೇ ಹನೂ ನಾಸಿಕೇ ವಾ । ನಿ. ೬-೧೭ । ಇತಿ ಯಾಸ್ಕೇನೋಕ್ತತ್ವಾತ್ । ತಾದೃಶ ಹೇ ಇಂದ್ರ ಮಂದಿಭಿರ್ಹರ್ಷಹೇತುಭಿಃ ಸ್ತೋಮೇಭಿಃ ಸ್ತೋತ್ರೈರ್ಮತ್ಸ್ವ । ಹೃಷ್ಟೋ ಭವ । ಹೇ ವಿಶ್ವಚರ್ಷಣೇ ಸರ್ವಮನುಷ್ಯಯುಕ್ತ । ಸರ್ವೈರ್ಯಜಮಾನೈಃ ಪೂಜ್ಯೇತ್ಯರ್ಥಃ । ತಾದೃಶೇಂದ್ರ ತ್ವಮೇಷು ಯಾಗಗತೇಷು ತ್ರಿಷು ಸವನೇಷು ಸಚಾ ದೇವೈರನ್ಯೈಃ ಸಹಾ ಗಚ್ಛೇತಿ ಶೇಷಃ ॥ ಮದಿ ಸ್ತುತೀತ್ಯಸ್ಯ ಲೋಟ್ಯನಿತ್ಯಮಾಗಮಶಾಸನಮಿತಿ ಕೃತ್ವೇದಿತೋ

ನುಮ್ ಧಾತೋರಿತಿ ನುಮ್ ನ ಭವತಿ । ಅನುದಾತ್ತೇತ್ತ್ವಾತ್ಸ್ಯನುದಾತ್ತೇನ್ನಿದದುಪದೇಶಾತ್ । ಪಾ. ೬-೧-೧೮೬ । ಇತಿ ಲಸಾರ್ವಧಾತುಕಾನುದಾತ್ತತ್ವಂ । ಧಾತುಸ್ವರ ಏವ । ಸಂಹಿತಾಯಾಂ ದ್ವ್ಯಚೋಽತಸ್ತಿಙಃ । ಪಾ. ೬-೩-೧೩೫ । ಇತಿ ದೀರ್ಘತ್ವಂ । ಸುಶಿಪ್ರೇತ್ಯಾಮಂತ್ರಿತನಿಘಾತಃ । ಮಂದಿಭಿಃ । ಗತಮಂತ್ರೇ ವ್ಯಾಖ್ಯಾತಂ। ಸ್ತೋಮೇಭಿಃ । ಮನ್ಪ್ರತ್ಯಯಸ್ಯ ನಿತ್ತ್ವಾದಾದ್ಯುದಾತ್ತತ್ವಂ । ಬಹುಲಂ ಛಂದಸೀತಿ ಭಿಸ ಐಸಾದೇಶೋ ನ ಭವತಿ । ವಿಶ್ವಚರ್ಷಣೇ । ನಿಘಾತಃ । ಸಚಾ । ಉಕ್ತಂ । ಏಷು । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ ॥

॥ ಪ್ರತಿಪದಾರ್ಥ ॥

(ಹೇ) **ಸುಶಿಪ್ರ**—ಸುಂದರವಾದ ಗಲ್ಲವುಳ್ಳ (ಅಥವಾ ನಾಸಿಕವುಳ್ಳ) ಎಲೈ ಇಂದ್ರನೇ । **ಮಂದಿಭಿಃ**—ಸಂತೋಷವನ್ನುಂಟುಮಾಡುವ । **ಸ್ತೋಮೇಭಿಃ**—(ನಾವು ಮಾಡುವ) ಸ್ತೋತ್ರಗಳಿಂದ । **ಮತ್ಸ್ವ**—ಸಂತೋಷಪಡು (ಹರ್ಷವುಳ್ಳವನಾಗು) । (ಹೇ) **ವಿಶ್ವಚರ್ಷಣೇ**—ಸಮಸ್ತ ಮನುಷ್ಯರಿಂದ ಯುಕ್ತನಾದ ಅಥವಾ ಸಮಸ್ತ ಯಜಮಾನರಿಂದ ಪೂಜ್ಯನಾದ ಎಲೈ ಇಂದ್ರನೇ । (ತ್ವಂ-ನೀನು) **ಏಷು ಸವನೇಷು**—(ಪ್ರಾತಸ್ಸವನ, ಮಾಧ್ಯಂದಿನಸವನ, ತೃತೀಯಸವನಗಳೆಂಬ) ಮೂರು ಸವನಗಳಲ್ಲಿಯೂ । **ಸಚಾ**—(ಇತರ ದೇವತೆಗಳಿಂದ) ಸಹಿತನಾಗಿ । ಆ (ಗಚ್ಛ)—ಬರುವವನಾಗು ॥

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಗಲ್ಲವು ಅಥವಾ ನಾಸಿಕವು ಬಹು ಮನೋಹರವಾಗಿರುವುದು. ಇಂತಹ ನೀನು ನಾವು ಮಾಡುವ ಸ್ತೋತ್ರಗಳಿಂದ ಸಂತುಷ್ಟನಾಗು, ಸಮಸ್ತ ಯಜಮಾನರಾದಿಯಾದ ಜನರಿಂದಲೂ ಪೂಜ್ಯನಾದ ನೀನು ಇತರ ದೇವತೆಗಳೊಡಗೂಡಿ ಯಜ್ಞದ ಪ್ರಾತಸ್ಸವನ, ಮಾಧ್ಯಂದಿನ ಸವನ, ತೃತೀಯ ಸವನಗಳೆಂಬ ಮೂರು ಸವನಗಳಲ್ಲಿಯೂ (ಸವನವೆಂದರೆ, ಸೋಮರಸವನ್ನು ಹಿಂಡಿ ತೆಗೆದು ಸಿದ್ಧಪಡಿಸುವ ಕರ್ಮವಿಶೇಷವು) ನಾವು ಮಾಡುತ್ತಿರುವ ಈ ಯಜ್ಞಭೂಮಿಗೆ ಬರುವವನಾಗು.

## English Translation

O Indra, with the handsome chin (or nose) be pleased with these pleasing praises; you who are honoured by all men come to these rites (with the gods).

॥ ವಿಶೇಷವಿಷಯಗಳು ॥

**ಮತ್ಸ್ವ**—ಛಂದಸ್ಸಿನ ಅನುಕೂಲಕ್ಕಾಗಿ ತ್ಸ್ವ ದೀರ್ಘವಾಗಿರುವುದು.

**ಸುಶಿಪ್ರ**—ಈ ಶಬ್ದಕ್ಕೆ ಯಾಸ್ಕರು—**ಸುಶಿಪ್ರಮೇತೇನ ವ್ಯಾಖ್ಯಾತಂ। ವಾಜೇ ಸುಶಿಪ್ರ ಗೋಮತಿ** (ಋ. ಸಂ. ೮-೨೧-೮) **ಇತ್ಯಪಿ ನಿಗಮೋ ಭವತಿ । ಶಿಪ್ರೇ ಹನೂ ನಾಸಿಕೇ ವಾ । ಹನುರ್ಹಂತೇಃ ।**

**ನಾಸಿಕಾ ನಸತೇಃ । ವಿಷ್ಯಸ್ವ ಶಿಪ್ರೆ ವಿಸೃಜಸ್ವ ಧೇನೇ** (ಋ. ಸಂ. ೧-೧೦೧-೧೦) **ಇತ್ಯಪಿ ನಿಗಮೋ ಭವತಿ ॥** (ನಿ. ೬-೧೭) ಎಂದು ಶಿಪ್ರವೆಂದರೆ ಹನೂ (ಗಲ್ಲ) ಅಥವಾ ನಾಸಿಕೇ (ಮೂಗು) ಎಂದರ್ಥಮಾಡಿ ಋಗ್ವೇದದ ಎರಡು ಋಕ್ಕುಗಳನ್ನು ಉದಾಹರಿಸಿರುವರು. ನಿರುಕ್ತದ ಭಾಷ್ಯಕಾರರೂ ಸಹ **ಶಿಪ್ರೇ-ಹನೂ ನಾಸಿಕೇ ವಾ । ತೇ ಯಸ್ಯ ಪ್ರಶಸ್ತೇ ಸ ಶಿಪ್ರಃ ॥** ಎಂದರೆ ಶಿಪ್ರಶಬ್ದಕ್ಕೆ ಹನು ಅಥವಾ ನಾಸಿಕವೆಂದರ್ಥವು. ಅವುಗಳನ್ನುಳ್ಳವನಿಗೆ ಶಿಪ್ರಿನ್ ಎಂದು ಹೆಸರು ಎಂದು ಹೇಳಿರುವರು. ಋ. ಸಂ. ೧-೨೭-೨ನೇ ಋಕ್ಕಿನಲ್ಲಿ—

**ಶಿಪ್ರಿನ್ವಾಜಾನಾಂ ಪತೇ ಶಚೀವಸ್ತವ ದಂಸನಾ ॥**

(ಋ. ಸಂ. ೧-೨೭-೨)

ಭಾಷ್ಯಕಾರರು ಇದೇ ಅರ್ಥವನ್ನೇ ಹೇಳಿರುವರು. ಯಾಸ್ಕರೇ ಈ ಶಬ್ದಕ್ಕೆ ಸ್ಪಷ್ಟವಾಗಿ ವ್ಯಾಖ್ಯಾನ ಮಾಡಿರುವುದರಿಂದ ಈ ಶಬ್ದದ ಅರ್ಥವಿಚಾರದಲ್ಲಿ ಸಂಶಯಕ್ಕೆ ಕಾರಣವಿಲ್ಲ.

ಸುಶಿಪ್ರ ಎಂಬ ಶಬ್ದವು ಈ ಋಕ್ಕಿನಲ್ಲಲ್ಲದೆ ಋ. ಸಂ ೧-೧೦೧-೧೦ , ೩-೩೨-೩ , ೩-೫೦-೨ ; ೫-೨೨-೪ , ೫-೩೬-೫ ; ೬-೪೬-೫ , ೭-೨೪-೪ , ೮-೨೧-೮ , ೮-೬೯-೧೬ ; ೮-೯೩-೧೨; ೮-೯೯-೭ ಈ ಋಕ್ಕುಗಳಲ್ಲಿಯೂ ಪಠಿತವಾಗಿದೆ. ಮತ್ತು ಈ ಶಬ್ದದ ಬೇರೆ ವಚನ ವಿಭಕ್ತಿರೂಪಗಳಾದ ಸುಶಿಪ್ರಃ ಎಂಬ ಶಬ್ದವು ಋ. ಸಂ. ೨-೩-೫ , ೩-೩೦-೩ ; ೨-೧೨-೬ ; ೮-೬೬-೪ , ೧೦-೯೬-೩ ಎಂಬ ಋಕ್ಕುಗಳಲ್ಲಿಯೂ, ಸುಶಿಪ್ರಾಃ ಎಂಬ ಶಬ್ದವು ಋ. ಸಂ. ೭-೩೭-೧ರಲ್ಲಿಯೂ, ಸುಶಿಪ್ರಂ ಎಂಬ ಶಬ್ದವು ಋ. ಸಂ. ೮-೩೨-೪ , ೮-೬೬-೨ರಲ್ಲಿಯೂ ಪಠಿತವಾಗಿದೆ.

**ವಿಶ್ವಚರ್ಷಣೇ—ಸರ್ವಮನುಷ್ಯಯುಕ್ತ । ಸರ್ವೈರ್ಯಜಮಾನೈಃ ಪೂಜ್ಯೇತ್ಯರ್ಥಃ॥ ಚರ್ಷಣೀ** ಶಬ್ದಕ್ಕೆ ಮನುಷ್ಯರೆಂದು ಅರ್ಥವಿರುವುದರಿಂದ ವಿಶ್ವಚರ್ಷಣೇ, ಎಂದರೆ ಸಮಸ್ತ ಮನುಷ್ಯರಿಂದ ಕೂಡಿದ ಅಥವಾ ಸಮಸ್ತ (ಯಜಮಾನರಾದಿಯಾದ) ಮನುಷ್ಯರಿಂದ ಪೂಜ್ಯನಾದ ಎಂದು ಭಾಷ್ಯಕಾರರು ಈ ಶಬ್ದಾರ್ಥವನ್ನು ಹೇಳಿರುವರು. ಸ್ಕಂದಸ್ವಾಮಿಯು ಚರ್ಷಣೀ ಶಬ್ದಕ್ಕೆ ಪಶ್ಯತಿಕರ್ಮವೆಂದು ಹೇಳಿ ಸಮಸ್ತ ಮನುಷ್ಯರಿಂದ ನೋಡಲ್ಪಡುವವನು ಎಂದರ್ಥಮಾಡಿರುವರು. ವಿಶ್ವಚರ್ಷಣೇ ಎಂಬ ಶಬ್ದವು ಋ. ಸಂ. ೧-೯-೩ ; ೫.೩೮-೧ ; ೮-೨೩-೨; ೯-೬೬-೧ , ೧೦-೫೦-೪ ಎಂಬ ಋಕ್ಕುಗಳಲ್ಲಿಯೂ ವಿಶ್ವಚರ್ಷಣಿ ಎಂಬ ಶಬ್ದವು. ಋ.ಸಂ. ೧೦-೯೩-೧೦ ರಲ್ಲಿಯೂ, ವಿಶ್ವಚರ್ಷಣಿಃ ಎಂಬ ಶಬ್ದವು ಋ. ಸಂ. ೧-೨೭-೯ ; ೨-೩೧-೩ ; ೫-೬-೩ ; ೫-೨೩-೪ ; ೬-೨-೨ ; ೯-೧-೨ , ೧೦-೮೩-೪ , ಎಂಬ ಋಕ್ಕುಗಳಲ್ಲಿಯೂ, ವಿಶ್ವಚರ್ಷಣಿಂ ಎಂಬ ಶಬ್ದವು ಋ. ಸು. ೧-೬೪-೧೪ ; ೩-೨-೧೫ ; ೫-೧೪-೬ , ೬-೪೪-೪ , ೮-೫೩-೬ ಎಂಬ ಋಕ್ಕುಗಳಲ್ಲಿಯೂ ಉಪಯೋಗಿಸಲ್ಪಟ್ಟಿರುವುದು.

**ಆ**—ಋಕ್ಕಿನಲ್ಲಿ ಆ ಎಂಬ ಉಪಸರ್ಗಮಾತ್ರವಿರುವುದು. ಇದರ ಜತೆಗೆ ಗಚ್ಛ ಎಂಬ ಕ್ರಿಯಾಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು ಭಾಷ್ಯಕಾರರು ಹೇಳಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಮತ್ಸ್ವ**—ಮದಿಸ್ತುತಿಮೋದಮದಸ್ವಪ್ನಕಾಂತಿಗತಿಷು ಎಂಬ ಧಾತುವಿನ ಮುಂದೆ ಲೋಟ್ ಆತ್ಮನೇಪದ ಮಧ್ಯಮಪುರುಷ ಏಕವಚನ ಥಾಸ್ ಪ್ರತ್ಯಯವನ್ನಿಟ್ಟರೆ ಮದ್+ಥಾಸ್ ಧಾತುವು ಇದಿತ್ತಾದರೂ **ಆಗಮಶಾಸ್ತ್ರಮನಿತ್ಯಮ್ (ಅನಿತ್ಯಮಾಗಮಶಾಸನಮ್)** (ಪರಿ. ಭಾ. ೯೩-೨) ಆಗಮಶಾಸ್ತ್ರವು ಅನಿತ್ಯವು ಎಂದು

ಹೇಳಿರುವುದರಿಂದ **ಇದಿತೋನುಮ್‌ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮ್ ಆಗಮ ಬರುವುದಿಲ್ಲ. ಶಪ್ ವಿಕರಣಕ್ಕೆ ಬಹುಲಂಛಂದಸಿ (ಪಾ. ಸೂ. ೨-೪-೭೩) ಎಂಬುದರಿಂದ ಲುಕ್ **ಥಾಸಃಸೇ** (ಪಾ. ಸೂ. ೩-೪-೮೦) ಎಂಬುದರಿಂದ ಥಾಸ್ ಎಂಬುದರ ಸ್ಥಾನದಲ್ಲಿ ಸೇ ಬರುವುದು. **ಸವಾಭ್ಯಾಂ ವಾಮೌ** (ಪಾ. ಸೂ. ೩-೪-೯೧) ಸ್‌ವ್ ಇವುಗಳ ಮುಂದೆ ಇರುವ ಲೋಟ್ ಪ್ರತ್ಯಯಸಂಬಂಧಿಯಾದ ಏಕಾರಕ್ಕೆ ಕ್ರಮವಾಗಿ ವ, ಅಮ್ ಎಂಬ ಆದೇಶಗಳು ಬರುವುವು ಎಂಬುದರಿಂದ ಸಕಾರದ ಮುಂದೆ ಇರುವ ಏಕಾರಕ್ಕೆ ವ ಆದೇಶಬಂದರೆ ಮದ್+ಸ್ವ ದಕಾರಕ್ಕೆ **ಖರಿಚ** (ಪಾ. ಸೂ. ೮-೪-೫೫) ಎಂಬುದರಿಂದ ಚರ್ತ್ವ ಬಂದರೆ ಮತ್ಸ್ವ ಎಂದಾಗುವುದು. ಮದಿ ಧಾತುವು ಅನುದಾತ್ತೇತ್ತು. ಆದ್ದರಿಂದ **ತಾಸ್ಯನುದಾತ್ತೇನ್ಙಿದದುಪದೇಶಾತ್** (ಪಾ. ಸೂ. ೬-೧-೧೮೬) **ಲ**ಸ್ಥಾನಿಕಸಾರ್ವಧಾತುಕವಾದ ಸ್ವ ಎಂಬುದಕ್ಕೆ ಅನುದಾತ್ತ ಬರುವುದು. ಮದ್ ಎಂಬುದು **ಧಾತೋಃ** (ಪಾ. ಸೂ. ೬-೧-೧೬೨) ಎಂಬುದರಿಂದ ಅಂತೋದಾತ್ತ. ನಂತರ **ಉದಾತ್ತಾದನುದಾತ್ತಸ್ಯಸ್ವರಿತಃ** (ಪಾ. ಸೂ. ೮-೪-೬೬) ಎಂಬುದರಿಂದ ಮದ್ ಎಂಬ ಉದಾತ್ತದ ಮುಂದೆ ಇರುವ ಸ್ವ ಎಂಬ ಅನುದಾತ್ತವು ಸ್ವರಿತವಾಗುವುದು. ಸಂಹಿತಾಕಾಲದಲ್ಲಿ **ದ್ವ್ಯಚೋತಸ್ತಿಙಃ** (ಪಾ. ಸೂ ೬-೩-೧೩೫) ಮಂತ್ರದಲ್ಲಿ ಎರಡು ಅಚ್ಚನ್ನು ಹೊಂದಿರುವ ತಿಙಂತದ ಕೊನೆಯ ಹ್ರಸ್ವಾಕಾರಕ್ಕೆ ದೀರ್ಘ ಬರುವುದು ಎಂಬುದರಿಂದ ದೀರ್ಘ ಬಂದರೆ ಮತ್ಸ್ವಾ ಎಂದಾಗುವುದು.

**ಸುಶಿಪ್ರ**—**ಆಮಂತ್ರಿತಸ್ಯ ಚ** (ಪಾ. ಸೂ ೮-೧-೧೯) ಎಂಬುದರಿಂದ ಸರ್ವಾನುದಾತ್ತ.

**ಮನ್ದಿಭಿಃ**—ಪೂರ್ವಮಂತ್ರದಲ್ಲಿ ವ್ಯಾಖ್ಯಾತವಾಗಿರುವುದು.

**ಸ್ತೋಮೇಭಿಃ**—**ಅರ್ತಿಸ್ತುಸು** (ಉ. ಸೂ. ೧-೧೩೭) ಎಂಬುದರಿಂದ ಸ್ತು ಧಾತುವಿನ ಮುಂದೆ ಮನ್ ಪ್ರತ್ಯಯ, ಪ್ರತ್ಯಯವು ನಿತ್ತು. ಆದ್ದರಿಂದ ಆದ್ಯುದಾತ್ತ. ಇದರ ಮುಂದೆ ಇರುವ ತೃತೀಯಾ ಬಹುವಚನ ಭಿಸ್ಸಿಗೆ **ಬಹುಲಂಛಂದಸಿ** (ಪಾ. ಸೂ. ೭-೧-೧೦) ಎಂಬುದರಿಂದ ಐಸ್ ಆದೇಶ ಬರುವುದಿಲ್ಲ.

**ವಿಶ್ವಚರ್ಷಣೇ**—ಎಂಟನೇ ಅಧ್ಯಾಯದಲ್ಲಿರುವ ಸೂತ್ರದಿಂದ ಈ ಆಮಂತ್ರಿತಕ್ಕೆ ಅನುದಾತ್ತ ಬರುವುದು.

**ಸಚಾ**—೫ನೇ ಸೂಕ್ತದ ೨ನೇ ಮಂತ್ರದಲ್ಲಿ ಇದರ ಪ್ರಕ್ರಿಯೆಯು ವಿವೃತವಾಗಿರುವುದು.

**ಏಷು**—ಇದಮ್ ಶಬ್ದದ ಮುಂದೆ ಇರುವ ಸು ಎಂಬ ಸಪ್ತಮೀವಿಭಕ್ತಿಯು **ಊಡಿದಮ್‌ಪದಾದ್ಯಪ್ಪುಮ್ರೈದ್ಯುಭ್ಯಃ** (ಪಾ. ಸೂ. ೬-೧-೧೭೧) ಎಂಬುದರಿಂದ ಉದಾತ್ತವಾಗುವುದು ॥ ೩ ॥

॥ ಸಂಹಿತಾಪಾಠಃ ॥

ಅಸೃಗ್ರಮಿಂದ್ರ ತೇ ಗಿರಃ ಪ್ರತಿ ತ್ವಾಮುದಹಾಸತ ।

ಅಜೋಷಾ ವೃಷಭಂ ಪತಿಂ ॥ ೪ ॥

॥ ಪದಪಾಠಃ ॥

**ಅಸೃಗ್ರಂ । ಇಂದ್ರ । ತೇ । ಗಿರಃ । ಪ್ರತಿ । ತ್ವಾಂ । ಉತ್ । ಅಹಾಸತ ॥**
**ಅಜೋಷಾಃ । ವೃಷಭಂ । ಪತಿಂ ॥ ೪ ॥**

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ಗಿರಸ್ತ್ವದೀಯಾಃ ಸ್ತುತೀರಸೃಗ್ರಂ । ಸೃಷ್ಟವಾನಸ್ಮಿ । ತಾಶ್ಚ ಗಿರಃ ಸ್ವರ್ಗೇಽವಸ್ಥಿತಂ ತ್ವಾಂ ಪ್ರತ್ಯುದಹಾಸತ । ಉದ್ಗತ್ಯ ಪ್ರಾಪ್ನುವನ್ । ತಾದೃಶೀರ್ಗಿರಸ್ತ್ವಮಜೋಷಾಃ । ಸೇವಿತವಾನಸಿ । ಕೀದೃಶಂ ತ್ವಾಂ । ವೃಷಭಂ ಕಾಮಾನಾಂ ವರ್ಷಿತಾರಂ ಪತಿಂ ಸೋಮಸ್ಯ ಪಾತಾರಂ ಯಜಮಾನಾನಾಂ ಪಾಲಯಿತಾರಂ ವಾ । ಪಾತಾ ವಾ ಪಾಲಯಿತಾ ವಾ । ನಿ. ೪-೨೬ । ಇತಿ ಯಾಸ್ಕೇನೋಕ್ತತ್ವಾತ್ ॥ ಅಸೃಗ್ರಂ । ಅಸೃಜಂ । ಸೃಜ ವಿಸರ್ಗೇ । ಲಙೋ ಮಿಪ್ । ತುದಾದಿಭ್ಯಃಶಃ । ಪಾ. ೩-೧-೭೭। ಬಹುಲಂ ಛಂದಸಿ । ಪಾ. ೭-೧-೮ । ಇತ್ಯತ್ರ ವಿಕರಣಸ್ಯ ರುಡಾಗಮಃ । ಜಕಾರಸ್ಯ ಗಕಾರಃ । ಲುಙ್ಲಙ್ಲೃಙ್ಕ್ಷ್ವಡುದಾತ್ತ ಇತ್ಯಡಾಗಮ ಉದಾತ್ತಃ । ಸತಿ ಶಿಷ್ಟತ್ವಾತ್ಸ ಏವ ಶಿಷ್ಯತೇ । ಗಿರಃ । ಪ್ರಾತಿಪದಿಕಸ್ವರಃ । ಅಹಾಸತ । ಓಹಾಙ್ ಗತೌ । ಲುಙ್ । ಝಸ್ಯಾದಾದೇಶಃ । ಪಾ. ೭-೧-೫ । ಚ್ಲೇಃ ಸಿಚ್ । ಪಾ. ೩-೧-೪೪ । ಅಡಾಗಮೋ ನಿಘಾತಶ್ಚ । ಅಜೋಷಾಃ । ಜುಷೀ ಪ್ರೀತಿಸೇವನಯೋಃ । ಲಙಸ್ಥಾಸ್ । ತುದಾದಿಭ್ಯಃ ಶಃ । ತಸ್ಯ ಛಂದಸ್ಯುಭಯಥಾ । ಪಾ. ೩-೪-೧೧೭ । ಇತ್ಯಾರ್ಧಧಾತುಕತ್ವೇನ ಙಿತ್ತ್ವಾಭಾವಾಲ್ಲಘೂಪಧಗುಣಃ । ಥಾಸಸ್ಥಕಾರಲೋಪಶ್ಛಾಂದಸಃ । ಸವರ್ಣದೀರ್ಘಃ । ಅಡಾಗಮಃ । ಸತಿ ಶಿಷ್ಟತ್ವಾದುದಾತ್ತಃ । ಶಿಷ್ಯತೇ । ವೃಷಭಂ । ಋಷು ವೃಷು ಮೃಷು ಸೇಚನೇ । ಅಭಿಜಿತ್ಯನುವೃತ್ತೌ ವೃಷಿವೃಷಿಭ್ಯಾಂ ಕಿತ್ । ಉ. ೩-೧೨೩ । ಇತ್ಯಭಚ್‌ಪ್ರತ್ಯಯಃ । ಕಿತ್ತ್ವಾದ್ಗುಣಾಭಾವಃ । ಚಿತ್ತ್ವಾದಂತೋದಾತ್ತಃ । ಪತಿಂ । ಪಾ ರಕ್ಷಣೇ । ಪಾತೇರ್ಡತಿಃ । ಉ. ೪-೫೭ । ಡಿತ್ವಾಟ್ಟಿಲೋಪಃ । ಪ್ರತ್ಯಯಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

(ಹೇ) ಇಂದ್ರ—ಎಲೈ ಇಂದ್ರನೇ । ತೇ—ನಿನ್ನ-ಅಥವಾ ನಿನಗಾಗಿ (ನಿನ್ನ ವಿಷಯವಾಗಿ) । ಗಿರಃ—ಸ್ತೋತ್ರರೂಪವಾದ ವಾಕ್ಯಗಳನ್ನು। ಅಸೃಗ್ರಂ—(ಸೃಷ್ಟಿಸಿರುವೆನು) ರಚಿಸಿರುವೆನು। (ಆ ಸ್ತುತಿಗಳು) ವೃಷಭಂ—ಕಾಮಗಳೆಂಬ ವೃಷ್ಟಿಪ್ರದನಾದ । ಪತಿಂ—ಸೋಮಪಾನಮಾಡುವ ಅಥವಾ ಯಜಮಾನರಾದಿಯಾದ ಜನರನ್ನು ರಕ್ಷಿಸುವ । ತ್ವಾಂ ಪ್ರತಿ—(ಸ್ವರ್ಗದಲ್ಲಿರುವ) ನಿನ್ನನ್ನು (ಕುರಿತು)। ಉದಹಾಸತ—(ಮೇಲೆ) ಹೋಗಿ ಮುಟ್ಟಲಿ। (ಮತ್ತು ಆ ಸ್ತೋತ್ರಗಳಿಂದ) ಅಜೋಷಾಃ—ಪ್ರೀತನಾಗು ॥

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ವಿಷಯವಾಗಿ ನಾನು ಸ್ತೋತ್ರಗಳನ್ನು ರಚಿಸಿ ಗಾನಮಾಡಿರುವೆನು. ಆ ಸ್ತೋತ್ರಗಳು ಸ್ವರ್ಗದಲ್ಲಿರುವ, ಸಮಸ್ತ ಇಷ್ಟಾರ್ಥಗಳನ್ನು ಕೊಡುವ ಮತ್ತು ಎಲ್ಲರನ್ನೂ ರಕ್ಷಿಸುವ ನಿನ್ನನ್ನು ಸೇರಿ ನಿನಗೆ ಸಂತೋಷವನ್ನುಂಟುಮಾಡಲಿ.

## English Translation.

O Indra, I have (composed) praises in your honour; may these praises reach you (in heaven) the showerer of blessings, and the protector of your worshippers and you are pleased with their praises.

॥ ವಿಶೇಷವಿಷಯಗಳು ॥

**ಅಸೃಗ್ರಂ**— ಸೃಷ್ಟಿಸಿರುವೆನು ಎಂದರೆ ರಚಿಸಿರುವೆನು ಎಂದರ್ಥವು.

**ಉತ್ ಅಹಾಸತ**— ಉತ್ ಎಂದರೆ ಮೇಲೆ. ಇಂದ್ರನ ಸ್ಥಾನವು ಮೇಲೆ (ಅಂತರಿಕ್ಷದಲ್ಲಿ) ಸ್ವರ್ಗದಲ್ಲಿರುವುದರಿಂದ ಕವಿಯು ಉದಹಾಸತ— ಮೇಲಿರುವ ನಿನ್ನನ್ನು ಮುಟ್ಟಲಿ ಎಂದು ಸ್ತೋತ್ರ ಮಾಡಿರುವನು.

**ಅಜೋಷಾಃ**— ಜುಷೀ ಪ್ರೀತಿಸೇವನಯೋಃ— ಸ್ತೋತ್ರಗಳು ನಿನ್ನನ್ನು ಸೇವಿಸಲಿ ಎಂದರೆ ಸ್ತೋತ್ರಗಳಿಂದ ನೀನು ಸಂತುಷ್ಟನಾಗು ಎಂದರ್ಥವು.

**ಪತಿಂ**— ಸೋಮಸ್ಯ ಪಾತಾರಂ, ಯಜಮಾನಾನಾಂ ಪಾಲಯಿತಾರಂ ವಾ ಎಂದರೆ ಪಾ-ಎಂಬ ಧಾತುವಿಗೆ ಪಾನಮಾಡು ಅಥವಾ ರಕ್ಷಿಸು ಎಂದರ್ಥವಿರುವುದರಿಂದ ಪತಿಂ ಎಂದರೆ ಸೋಮಪಾನ ಮಾಡುವ ಅಥವಾ ಯಜಮಾನರನ್ನು ರಕ್ಷಿಸುವ ಎಂದರ್ಥ ಹೇಳಬಹುದು. **ಪಾತಾ ವಾ ಪಾಲಯಿತಾ ವಾ** (ನಿ. ೪-೨-೬) ಎಂದು ಯಾಸ್ಕರು ಅರ್ಥವಿವರಣೆ ಮಾಡಿರುವರು. ವೇದಾರ್ಥಯತ್ನಕಾರರು ಪತಿಂ ಎಂದರೆ husband (ಗಂಡ) ಎಂದು ಅರ್ಥಮಾಡಿರುವರು. ಈ ಅರ್ಥವು ಇಲ್ಲಿ ಸರಿಯಾಗಿಲ್ಲ. ಪತಿಂ ಎಂದರೆ ಸ್ವಾಮಿ ಎಂದು ಹೇಳಬಹುದು.

ವ್ಯಾಕರಣಪ್ರಕ್ರಿಯಾ

**ಅಸೃಗ್ರಮ್**— ಸೃಜ ವಿಸರ್ಗೇ ಧಾತುವಿನ ಮುಂದೆ ಲಙ್ ಪರಸ್ಮೈಪದ ಉತ್ತಮಪುರುಷಬಹುವಚನ ಮಿಪ್ ಬರುವುದು. ಅದಕ್ಕೆ **ತಸ್ಥಸ್ಥಮಿಪಾಂತಾಂತಂತಾಮಃ** (ಪಾ. ಸೂ. ೩-೪-೧೦೧) ಎಂಬುದರಿಂದ ಅಮ್ ಬರುವುದು. **ತುದಾದಿಭ್ಯಃಶಃ** (ಪಾ. ಸೂ. ೩-೧-೭೭) ಎಂಬುದರಿಂದ ಶವಿಕರಣ ಬರುವುದು. ಸೃಜ್+ಅ+ಅಮ್ ಅದಕ್ಕೆ **ಬಹುಲಂ ಛಂದಸಿ** (ಪಾ. ೭-೧೮) ಎಂಬುದರಿಂದ ರುಟ್ ಆಗಮ. ಸೃಜ್+ರ+ಅಮ್ **ಚೋಃಕುಃ** (ಪಾ. ಸೂ. ೮-೨-೩೦) ಎಂಬುದರಿಂದ ಜಕಾರಕ್ಕೆ ಗಕಾರ. ಸೃಗ್+ರ+ಅಮ್ **ಲುಙ್ ಲಙ್ ಲೃಙ್‌ಕ್ಷ್ವಡುದಾತ್ತಃ** (ಪಾ. ಸೂ. ೬-೪-೭೧) ಎಂಬುದರಿಂದ ಉದಾತ್ತವಾದ ಅಟ್ ಆಗಮವು ಧಾತುವಿಗೆ ಬರುವುದು ಅಸೃಗ್+ರ+ಅಮ್ ಪೂರ್ವರೂಪಬಂದರೆ ಅಸೃಗ್ರಮ್ ಎಂದಾಗುವುದು. ಸತಿಶಿಷ್ಟವಾದ್ದರಿಂದ ಅಟ್ ಆಗಮದ ಉದಾತ್ತಸ್ವರವೇ ನಿಲ್ಲುವುದು.

**ಗಿರಃ**— ಪ್ರಾತಿಪದಿಕಸ್ವರ ಬರುವುದು.

**ಅಹಾಸತ**— ಓಹಾಙ್ ಗತೌ ಧಾತು. ಇದರಮುಂದೆ ಲುಙ್. ಅದಕ್ಕೆ ಆತ್ಮನೇಪದ ಪ್ರಥಮಪುರುಷ ಬಹುವಚನದಲ್ಲಿ ಝ ಆದೇಶ ಬರುವುದು. **ಆತ್ಮನೇಪದೇಷ್ವನತಃ** (ಪಾ.ಸೂ. ೭-೧-೫) ಎಂಬುದರಿಂದ ಝ-

ಕಾರಕ್ಕೆ ಅತ್ ಆದೇಶ. ಚ್ಲಿಲುಙಿ (ಪಾ. ಸೂ. ೩-೧-೪೪) ಎಂಬುದರಿಂದ ಧಾತುವಿನ ಮುಂದೆ ಚ್ಲಿ ಬರುತ್ತೆ. ಅದಕ್ಕೆ ಚ್ಲೇಃಸಿಚ್ (ಪಾ ಸೂ. ೩-೧-೪) ಎಂಬುದರಿಂದ ಸಿಚ್ ಆದೇಶ. ಅಡಾಗಮ. ಅಹಾಸತ ಎಂದಾಗುವುದು. ತಿಙ್ಙತಿಙಃ (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ ಬರುವುದು.

**ಅಜೋಷಾಃ**—ಜುಷೀಪ್ರೀತಿಸೇವನಯೋಃ ಎಂಬ ಧಾತುವಿನ ಮುಂದೆ ಲಙ್. ಅದಕ್ಕೆ ಆತ್ಮನೇಪದ ಮಧ್ಯಮಪುರುಷ ಏಕವಚನ ಥಾಸ್. **ತುದಾದಿಭ್ಯಶ್ಶಃ** ಎಂಬುದರಿಂದ ಶವಿಕರಣ ಬರುವುದು. ಈ ವಿಕರಣಕ್ಕೆ **ಛಂದಸ್ಯುಭಯಥಾ** (ಪಾ. ಸೂ, ೩-೪-೧೧೭) ಎಂಬುದರಿಂದ ಆರ್ಧಧಾತುಕಸಂಜ್ಞೆ ಬರುವುದು. ಆದ್ದರಿಂದ ಅದು ಙಿತ್ತಾಗುವುದಿಲ್ಲ. **ಕ್ಙಿತಿಚ** (ಪಾ. ಸೂ. ೧-೧-೫) ಎಂಬುದರಿಂದ ಗುಣನಿಷೇಧ ಬರುವುದಿಲ್ಲ. **ಪುಗಂತಲಘೂಪಧಸ್ಯಚ** (ಪಾ. ಸೂ. ೭,೩-೮೬) ಎಂಬುದರಿಂದ ಲಘೂಪಧಗುಣ ಬರುವುದು. ಥಾಸ್ ನ ಥಕಾರಕ್ಕೆ ಛಾಂದಸವಾಗಿ ಲೋಪ ಬರುವುದು. ಜೋಷ+ಆಸ್ ಎಂದಿರುವಾಗ **ಅಕಸ್ಸವರ್ಣೇದೀರ್ಘಃ** (ಪಾ.ಸೂ. ೬-೧-೧೦೧ ಎಂಬುದರಿಂದ ಸವರ್ಣದೀರ್ಘ. ಜೋಷಾಸ್ ಎಂದಾಗುವುದು. ಅಡಾಗಮ. ಆಗಮದ ಉದಾತ್ತವು ಸತಿಶಿಷ್ಟವಾದ್ದರಿಂದ ಅದೇ ನಿಲ್ಲುವುದು, ಅಜೋಷಾಸ್ ರುತ್ವ ವಿಸರ್ಗಗಳು ಬಂದರೆ ಅಜೋಷಾಃ ಎಂದಾಗುವುದು

**ವೃಷಭಮ್-ಋಷಿ ವೃಷಿಭ್ಯಾಂಕಿತ್** (ಉ. ಸೂ. ೩-೪೦೩) ಕೃ, ಶೃ, ಶಲಿ, ಕಲಿ, **ಗರ್ದಿಭ್ಯೋಽಭಚ್** (ಉ. ಸೂ. ೩-೪೦೨) ಎಂಬ ಹಿಂದಿನ ಸೂತ್ರದಿಂದ 'ಅಭಚ್' ಎಂಬ ಪದವು ಅನುವೃತ್ತವಾಗುವುದು. ಋಷಿ, ವೃಷಿ ಧಾತುಗಳ ಮುಂದೆ ಅಭಚ್ ಪ್ರತ್ಯಯ ಬರುವುದು. ಅದು ಕಿತ್ತಾಗುವುದು ಎಂದು ಸೂತ್ರಾರ್ಥ. ಈ ಸೂತ್ರದಿಂದ ವೃಷ್ ಧಾತುವಿನ ಮುಂದೆ ಅಭಚ್ ಬಂದರೆ ವೃಷ್+ಅಭ, ಪ್ರತ್ಯಯವು ಕಿತ್ತು. ಆದ್ದರಿಂದ ಲಘೂಪಧಗುಣ ಬರುವುದಿಲ್ಲ, ವೃಷಭ, ಎಂದಾಗುವುದು. ಪ್ರತ್ಯಯವು ಚಿತ್ತಾದ್ದರಿಂದ **ಚಿತಃ** (ಪಾ. ಸೂ. ೬,೧-೧೬೩) ಎಂಬುದರಿಂದ ಅಂತೋದಾತ್ತ.

**ಪತಿಮ್**—ಪಾ ರಕ್ಷಣೇ ಧಾತು. ಇದರ ಮುಂದೆ **ಪಾತೇರ್ಡತಿಃ** (ಉ ಸೂ ೯-೪೯೭) ರಕ್ಷಣಾರ್ಥವಾದ ಪಾ ಧಾತುವಿನ ಮುಂದೆ ಡತಿ ಪ್ರತ್ಯಯ ಬರುವುದು. ಎಂಬುದರಿಂದ ಡತಿ ಪ್ರತ್ಯಯ ಬಂದರೆ ಪಾ+ಅತಿ, ಪ್ರತ್ಯಯವು ಡಿತ್ತು. ಡಿತ್ಕರಣ ಸಾಮರ್ಥ್ಯದಿಂದ ಪಾ ಧಾತುವಿನ ಟಿಗೆ(ಆಕಾರಕ್ಕೆ) ಲೋಪ ಬರುವುದು. ಪ್ರತ್ಯಯ ಸ್ವರದಿಂದ ಆದ್ಯುದಾತ್ತ ‖ ೪ ‖

‖ ಸಂಹಿತಾಪಾಠಃ ‖

ಸಂ ಚೋದಯ ಚಿತ್ರಮರ್ವಾಗ್ರಾಧ ಇಂದ್ರ ವರೇಣ್ಯಂ ‖
ಅಸದಿತ್ತೇ ವಿಭು ಪ್ರಭು ‖ ೫ ‖

॥ ಪದಪಾಠಃ ॥

ಸಂ । ಚೋದಯ । ಚಿತ್ರಂ । ಅರ್ವಾಕ್ । ರಾಧಃ । ಇಂದ್ರ । ವರೇಣ್ಯಂ ॥
ಅಸತ್ । ಇತ್ । ತೇ । ವಿऽಭು । ಪ್ರऽಭು ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ವರೇಣ್ಯಂ ಶ್ರೇಷ್ಠಂ ರಾಧೋ ಧನಂ ಚಿತ್ರಂ ಮಣಿಮುಕ್ತಾದಿರೂಪೇಣ ಬಹುವಿಧಮರ್ವಾಗಸ್ಮದಭಿಮುಖಂ ಯಥಾ ಭವತಿ ತಥಾ ಸಂಚೋದಯ । ಸಮ್ಯಕ್ ಪ್ರೇರಯ । ಭೋಗಾಯ ಯಾವತ್ಪರ್ಯಾಪ್ತಂ ತಾವದ್ವಿಭುಶಬ್ದೇನೋಚ್ಯತೇ । ತತೋಽಪ್ಯಧಿಕಂ ಪ್ರಭುಶಬ್ದೇನ । ತಾದೃಶಂ ಧನಂ ತೇ ತವೈವಾಸದಿತ್ । ಅಸ್ತ್ಯೇವ । ತಸ್ಮಾದಸ್ಮಭ್ಯಂ ಪ್ರಯಚ್ಛೇತ್ಯರ್ಥಃ । ಮಘಮಿತ್ಯಾದಿಷ್ವಷ್ಟಾವಿಂಶತಿಧನನಾಮಸು ರಾಯೋ ರಾಧ ಇತಿ ಪಠಿತಂ ॥ ಚೋದಯ । ಚುದ ಪ್ರೇರಣೇ । ಣ್ಯಂತಾಲ್ಲೋಟ್ । ತಿಙ್ಙತಿಙ ಇತಿ ನಿಘಾತಃ । ರಾಧಃ । ರಾಧ್ನುವಂತ್ಯನೇನೇತಿ ರಾಧೋ ಧನಂ । ಸರ್ವಧಾತುಭ್ಯೋಽಸುನ್ ಉ. ೪-೧೮೮ । ನಿತ್ತ್ವಾದಾದ್ಯುದಾತ್ತಃ । ವರೇಣ್ಯಂ । ವೃಞ ಏಣ್ಯಃ । ವೃಷಾದಿತ್ವಾದಾದ್ಯುದಾತ್ತಃ । ಅಸತ್ । ಅಸ ಭುವಿ । ಲೇಟ್ । ತಿಪ್ । ಇತಶ್ಚ ಲೋಪಃ । ಪಾ. ೩-೪-೯೭ । ಇತೀಕಾರಲೋಪಃ । ಲೇಟೋಽಡಾಟಾವಿತ್ಯಡಾಗಮಃ । ಅದಿಪ್ರಭೃತಿಭ್ಯಃ ಶಪ ಇತಿ ಶಪೋ ಲುಕ್ । ಆಗಮಾ ಅನುದಾತ್ತಾ ಇತ್ಯಟೋಽನುದಾತ್ತತ್ವಾದ್ಧಾತುಸ್ವರ ಏವ । ವಿಭು । ವಿಭವತೀತಿ ವಿಭು । ಭುವ ಇತ್ಯನುವೃತ್ತೌ ವಿಪ್ರಸಂಭ್ಯೋ ಡ್ವಸಂಜ್ಞಾಯಾಂ । ಪಾ. ೩-೨ ೧೮೦ । ಇತಿ ಡುಪ್ರತ್ಯಯಃ । ಡಿತ್ತ್ವಾಟ್ಟಿಲೋಪಃ । ಪ್ರತ್ಯಯಸ್ವರೇಣೋಕಾರ ಉದಾತ್ತಃ । ಕೃದುತ್ತರಪದಪ್ರಕೃತಿಸ್ವರೇಣ ಸ ಏವ ಶಿಷ್ಯತೇ ಏವಂ ಪ್ರಭು ॥

॥ ಪ್ರತಿಪದಾರ್ಥ ॥

(ಹೇ) ಇಂದ್ರ—ಎಲೈ ಇಂದ್ರನೇ । ವರೇಣ್ಯಂ—ಶ್ರೇಷ್ಠವಾದ । ಚಿತ್ರಂ—ನಾನಾವಿಧವಾದ । ರಾಧಃ—ಧನವನ್ನು । ಅರ್ವಾಕ್—(ನಮ್ಮ) ಮುಂದೆ (ನಮ್ಮ ಬಳಿ ಇರುವಂತೆ) ಸಂ ಚೋದಯ—ಪ್ರೇರಿಸು (ಎಂದರೆ ಕೊಡು) । (ಏಕೆಂದರೆ) ತೇ—ನಿನಗೆ । ವಿಭು—(ಭೋಗಸಾಧನೆಗೆ) ಸಾಕಾಗುವಷ್ಟು । (ಮತ್ತು) ಪ್ರಭು—ಅದಕಿಂತಲೂ ಹೆಚ್ಚಾಗಿಯೇ । ಅಸತ್ ಇತ್—ಧನವಿದ್ದೇ ಇರುವುದು ॥

॥ ಭಾವಾರ್ಥ ॥

ಎಲೈ ಇಂದ್ರನೇ, ಶ್ರೇಷ್ಠವಾದ ಮತ್ತು ವಿಧವಿಧವಾದ ಧನಾದಿಗಳನ್ನು ನಮಗೆ ದೊರೆಯುವಂತೆ ಮಾಡು. ಏಕೆಂದರೆ ನಿನ್ನ ಹತ್ತಿರ ಭೋಗಸಾಧನೆಗಾಗಿ ಎಲ್ಲರಿಗೂ ಕೊಡುವಷ್ಟು ಧನವಿರುವುದಲ್ಲದೆ ಅದಕಿಂತಲೂ ಎಷ್ಟೋ ಹೆಚ್ಚಾಗಿಯೂ ಇರುವುದು.

## English Translation.

Place before us, O Indra, precious and different kinds of riches, for you have riches enough and more than enough.

॥ ವಿಶೇಷ ವಿಷಯಗಳು ॥

**ಸಂ ಚೋದಯ**—ಧನವನ್ನು ಪ್ರೇರಿಸು ಎಂದರೆ ಧನವು ನಮ್ಮ ಬಳಿಗೆ ಬರುವಂತೆ ಅನುಗ್ರಹಿಸು. ಎಂದರೆ ಧನವನ್ನು ಕೊಡು ಎಂದರ್ಥವು.

**ಚಿತ್ರಂ**—ವಿಧವಿಧವಾದ, ಎಂದರೆ ಧನದಲ್ಲಿ ದ್ರವ್ಯ, ಗೋವುಗಳು, ಪಶುಗಳು, ಗೃಹ, ಪುತ್ರಾದಿಗಳು ಮೊದಲಾದ ಅನೇಕ ವಿಧಗಳಿರುವವು ಎಂದರ್ಥವು.

**ಅರ್ವಾಕ್**—ಎದುರಿಗೆ, ನಮ್ಮ ಎದುರಿಗೆ ಎಂದರೆ ನಮಗೆ ಲಭಿಸುವಂತೆ ನಮಗೆ ಸುಲಭವಾಗಿ ದೊರೆಯುವಂತೆ ಎಂದರ್ಥವು

**ರಾಧಃ**—ಮಘಂ ಮೊದಲಾದ ಇಪ್ಪತ್ತೆಂಟು ಧನವಾಚಕ ಶಬ್ದಗಳ ಮಧ್ಯದಲ್ಲಿ ರಾಯಃ ರಾಧಃ ಎಂಬ ಶಬ್ದಗಳು ಪಠಿತವಾಗಿವೆ. (ನಿ. ೩-೯) ಆದುದರಿಂದ ರಾಧಃ ಎಂದರೆ ಧನವು.

**ವರೇಣ್ಯಂ**—ಶ್ರೇಷ್ಠವಾದ, ಉತ್ತಮವಾದ, ಬಹು ಬೆಲೆಬಾಳುವ.

**ಅಸತ್ ಇತ್**—ಇತ್ ಎಂದರೆ ಏವ ಎಂದು. ಎಂದರೆ ಇದ್ದೇ ಇರುವುದು. ಧನವಿರುವ ವಿಷಯದಲ್ಲಿ ಅನುಮಾನವೇ ಇಲ್ಲ ಎಂದರ್ಥವು.

**ವಿಭು, ಪ್ರಭು**—**ಭೋಗಾಯ ಯಾವತ್ಪರ್ಯಾಪ್ತಂ ತಾವದ್ವಿಭುಶಬ್ದೇನೋಚ್ಯತೇ ।** ಎಂದರೆ ಭೋಗಸಾಧನೆಗೆ ಸಾಕಾಗುವಷ್ಟು ಎಂದು ವಿಭುಶಬ್ದಕ್ಕೆ ಅರ್ಥವು. ಪ್ರಭುವೆಂದರೆ ಸಾಕಾಗುವಷ್ಟು ಧನಕ್ಕಿಂತಲೂ ಎಷ್ಟೋ ಹೆಚ್ಚಾಗಿರುವುದೆಂದರ್ಥವು. ಸ್ಕಂದಸ್ವಾಮಿಯು-ಪ್ರಭುಶಬ್ದಕ್ಕೆ ಪ್ರಭೂತಂ ಎಂದರೆ ಬಹಳವಾದ, ಅತಿ ಹೆಚ್ಚಾದ ಎಂದರ್ಥ ಹೇಳಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಚೋದಯ**—ಚುದ ಪ್ರೇರಣೇ ಧಾತುವಿನ ಮುಂದೆ **ಹೇತುಮತಿಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್ಪ್ರತ್ಯಯ. ಣಿಜಂತಧಾತುವಿನ ಮುಂದೆ ಲೋಟ್ ಪರಸ್ಮೈಪದ ಮಧ್ಯಮಪುರುಷೈಕವಚನ ಸಿಪ್ ಪ್ರತ್ಯಯ- **ಕರ್ತರಿ ಶಪ್** (ಪಾ. ಸೂ. ೩-೧-೬೮) ಎಂಬುದರಿಂದ ಶಪ್, ಚುದ್+ಇ+ಅ-ಸಿ, ಣಿಚ್ಚನ್ನು ನಿಮಿತ್ತವಾಗಿ ಮಾಡಿಕೊಂಡು ಲಘೂಪಧಗುಣ, ಶಪ್ ನಿಮಿತ್ತಕವಾಗಿ **ಸಾರ್ವಧಾತುಕಾರ್ಧಧಾತುಕಯೋಃ** (ಪಾ, ಸೂ. ೭-೩-೮೪) ಎಂಬುದರಿಂದ ಗುಣ ಚೋದೇ+ಅ+ಸಿ. ಏಗೆ ಆಯಾದೇಶ, **ಸೇರ್ಹ್ಯಪಿಚ್ಚ** (ಪಾ. ಸೂ. ೧-೪-೮೭) ಎಂಬುದರಿಂದ ಸಿಗೆ ಹಿ ಆದೇಶ. ಚೋದಯ+ಹಿ **ಅತೋಹೇಃ** (ಪಾ. ಸೂ. ೬-೪-೧೦೫) ಎಂಬುದರಿಂದ ಹಿಗೆ ಲುಕ್, **ತಿಜ್ಙತಿಜಃ** (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ ಬರುವುದು.

ರಾಧಃ 'ರಾಧ್ನುವನ್ತಿ ಅನೇನ ಇತಿರಾಧಃ ಧನಮ್ ಎಂದು ವಿಗ್ರಹ **ಸರ್ವಧಾತುಭ್ಯೋಽಸುನ್** (ಉ. ಸೂ. ೪-೬೨೮) ಎಂಬುದರಿಂದ ರಾಧ್ನ ಧಾತುವಿನ ಮುಂದೆ ಅಸುನ್ ಪ್ರತ್ಯಯ. ಅಸುನ್ ಪ್ರತ್ಯಯ ನಿತ್ತು. ಆದ್ದರಿಂದ ಆದ್ಯುದಾತ್ತ.

**ವರೇಣ್ಯಮ್**—ವೃಞ್ ಧಾತುವಿನ ಮುಂದೆ **ವೃಞ್ ಏಣ್ಯಃ** (ಉ. ಸೂ. ೩-೩೭೮) ವೃಞ್ ವರಣೇ ಎಂಬ ಧಾತುವಿನ ಮುಂದೆ ಏಣ್ಯ ಪ್ರತ್ಯಯ ಬರುವುದು ಎಂಬುದರಿಂದ ಏಣ್ಯ ಪ್ರತ್ಯಯ ಬರುವುದು. **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಗುಣ ಬಂದರೆ ವರೇಣ್ಯ ಎಂದಾಗುವುದು. ವೃಷಾದಿಯಾದ್ದರಿಂದ **ವೃಷಾದೀನಾಂಚ** (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತ.

**ಅಸತ್**—ಅಸಭುವಿ ಧಾತು. ಇದರ ಮುಂದೆ ಲೇಟ್ ಪ್ರತ್ಯಯ, ಇದರ ಸ್ಥಾನದಲ್ಲಿ ತಿಪ್ ಆದೇಶ, **ಇತಶ್ಚ ಲೋಪಃ ಪರಸ್ಮೈಪದೇಷು** (ಪಾ. ಸೂ. ೩-೪-೯೭) ಎಂಬುದರಿಂದ ತಿ ಪ್ರತ್ಯಯದ ಇಕಾರಕ್ಕೆ ಲೋಪ **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ತ್‌ಗೆ ಅಡಾಗಮ ಅಸ್+ಅತ್=ಅಸತ್, ಎಂದಾಗುವುದು ಶಪ್ ಎಂಬ ವಿಕರಣಕ್ಕೆ **ಅದಿಪ್ರಭೃತಿಭ್ಯಃ ಶಪಃ** (ಪಾ. ಸೂ. ೨-೪-೭೨) ಅದ್ ಮೊದಲಾದ ಧಾತುವಿನ ಮುಂದೆ ಬರುವ ಶಪ್ ವಿಕರಣಕ್ಕೆ ಲುಕ್ ಬರುವುದು ಎಂಬುದರಿಂದ ಲುಕ್ ಬರುವುದು. **ಆಗಮಾ ಅನುದಾತ್ತಾಃ** (ಪಾ. ಮ. ೩-೧-೩-೭) ಎಂಬುದರಿಂದ ಆಟ್ ಎಂಬ ಆಗಮವು ಅನುದಾತ್ತ. ಅಸ್ ಎಂಬಲ್ಲಿ **ಧಾತೋಃ** (ಪಾ. ಸೂ. ೬-೧-೧೬೨) ಎಂಬುದರಿಂದ ಅಂತೋದಾತ್ತ ಸ್ವರ ಬಂದು ಅದೇ ನಿಲ್ಲುವುದು.

ವಿಭು-ವಿಭವತೀತಿ ವಿಭು. **ವಿಪ್ರಸಂಭ್ಯೋಡ್ವಸಂಜ್ಞಾಯಾಮ್** (ಪಾ. ಸೂ. ೩-೨-೧೮೦) **ಭುವಃ-ಸಂಜ್ಞಾನ್ತರಯೋಃ** (ಪಾ. ಸೂ. ೩-೨-೧೭೯) ಎಂಬ ಹಿಂದಿನ ಸೂತ್ರದಿಂದ, ಭುವಃ, ಎಂಬುದು ಅನುವೃತ್ತವಾಗುವುದು. ಸಂಜ್ಞೆ ತೋರದೇ ಇರುವಾಗ ವಿ, ಪ್ರ, ಸಂ, ಎಂಬ ಉಪಸರ್ಗಗಳ ಮುಂದೆ ಇರುವ ಭೂಧಾತುವಿನ ಮುಂದೆ ಡು ಪ್ರತ್ಯಯ ಬರುವುದು ಎಂಬುದರಿಂದ ವಿ, ಪೂರ್ವಕವಾದ ಭೂ, ಧಾತುವಿನ ಮುಂದೆ ಡು ಪ್ರತ್ಯಯ ಬರುವುದು. ಡಕಾರಕ್ಕೆ **ಚುಟೂ** (ಪಾ. ಸೂ. ೧-೦-೭) ಎಂಬುದರಿಂದ ಇತ್ಸಂಜ್ಞೆ ಬಂದರೆ ಪ್ರತ್ಯಯದಲ್ಲಿ ಉಕಾರ ನಿಲ್ಲುವುದು. ಡಿತ್ಕರಣ ಸಾಮರ್ಥ್ಯದಿಂದ ಭೂ ಎಂಬುದರ ಊಕಾರ ರೂಪವಾದ ಟಿಗೆ ಲೋಪ, ಎವಂಚ ವಿಭು ಎಂದಾಗುವುದು. **ಆದ್ಯುದಾತ್ತಶ್ಚ** (ಪಾ. ಸೂ- ೩-೧-೩) ಎಂಬ ಪ್ರತ್ಯಯ ಸ್ವರದಿಂದ ಉಕಾರ ಉದಾತ್ತ. **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂದು ವಿಹಿತವಾದ ಕೃದುತ್ತರಪದಪ್ರಕೃತಿ ಸ್ವರದಿಂದ ವಿಭು ಎಂಬ ಸಮಾಸದಲ್ಲಿ ಅದೇ ಸ್ವರವೇ ನಿಲ್ಲುವುದು. ಇದೇ ರೀತಿಯಲ್ಲಿ ಪ್ರಭು, ಎಂಬಲ್ಲಿಯೂ ಪ್ರಕ್ರಿಯೆಯು ಬರುವುದು ॥ ೫ ॥

॥ ಸಂಹಿತಾಪಾಠಃ ॥

ಅಸ್ಮಾನ್ತ್ಸು ತತ್ರ ಚೋದಯೇಂದ್ರ ರಾಯೇ ರಭಸ್ವತಃ ॥
ತುವಿದ್ಯುಮ್ನ ಯಶಸ್ವತಃ ॥ ೬ ॥

॥ ಪದಪಾಠಃ ॥

ಅಸ್ಮಾನ್ । ಸು । ತತ್ರ । ಚೋದಯ । ಇಂದ್ರ । ರಾಯೇ । ರಭಸ್ವತಃ ॥
ತುವಿಽದ್ಯುಮ್ನ । ಯಶಸ್ವತಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ತುವಿದ್ಯುಮ್ನ ಪ್ರಭೂತಧನೇಂದ್ರ ರಾಯೇ ಧನಸಿದ್ಧ್ಯರ್ಥಮಸ್ಮಾನನುಷ್ಠಾತೄನ್ ತತ್ರ ಕರ್ಮಣಿ ಸು ಚೋದಯ । ಸುಷ್ಠು ಪ್ರೇರಯ । ಕೀದೃಶಾನಸ್ಮಾನ್ । ರಭಸ್ವತ ಉದ್ಯೋಗವತೋ ಯಶಸ್ವತಃ ಕೀರ್ತಿಮತಃ ॥ ತತ್ರ ತಚ್ಛಬ್ದಾತ್ಸಪ್ತಮ್ಯಾಸ್ತ್ರಲ್ । ಪಾ ೫-೩-೧೦ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಇಂದ್ರ । ಆಮಂತ್ರಿತಾದ್ಯುದಾತ್ತತ್ವಂ । ಪಾದಾದಿತ್ವಾನ್ನ ನಿಘಾತಃ । ರಾಯೇ । ಊಡಿದಮಿತ್ಯಾದಿನಾ । ವಿಭಕ್ತೇರುದಾತ್ತತ್ವಂ । ರಭಸ್ವತಃ । ರಭ ರಾಭಸ್ಯೇ । ರಾಭಸ್ಯಂ ಕಾರ್ಯೋಪಕ್ರಮಃ । ಸರ್ವಧಾತುಭ್ಯೋಽಸುನ್। ನಿತ್ತ್ವಾದಾದ್ಯುದಾತ್ತಃ । ಮತುಪಃ ಪಿತ್ತ್ವಾದನುದಾತ್ತತ್ವಂ । ಸ್ವಾದಿಷ್ವಸರ್ವನಾಮಸ್ಥಾನೇ । ಪಾ. ೧-೪-೧೭ । ಇತಿ ನ ಪದತ್ವಂ ತಸೌ ಮತ್ವರ್ಥೇ । ಪಾ. ೧-೪-೧೯ । ಇತಿ ಭಸಂಜ್ಞಯಾ ಬಾಧಿತತ್ವಾತ್ । ಆ ಕಡಾರಾದೇಕಾ ಸಂಜ್ಞಾ । ಪಾ. ೧-೪-೧ । ಇತಿ ನಿಯಮಾತ್ ತುವಿದ್ಯುಮ್ನ । ತುವಿ ಬಹು ದ್ಯುಮ್ನಂ ಧನಂ ಯಸ್ಯ । ಷಾಷ್ಠಿಕಮಾಮಂತ್ರಿತಾದ್ಯುದಾತ್ತತ್ವಂ । ಯಶಸ್ವತಃ । ಯಶೋಸ್ಯಾಸ್ತೀತಿ ಮತುಪ್ । ಅಸ್ಮಾಯಾಮೇಧಾಸ್ರಜೋ ವಿನಿಃ । ಪಾ. ೫-೨-೧೨೧ । ಇತಿ ವಿನಿನಾ ನ ಬಾಧ್ಯತೇ ಮತುಪಃ ಸರ್ವತ್ರ ಸಮುಚ್ಚಯಾತ್ । ಯಶಸ್ಯಬ್ದೋ ನಬ್ವಿಷಯಸ್ಯಾನಿಸಂತಸ್ಯೇತ್ಯಾದ್ಯುದಾತ್ತಃ । ಮತುಪಃ ಪಿತ್ತ್ವಾತ್ಸ ಏವ ಶಿಷ್ಯತೇ ॥

॥ ಪ್ರತಿಪದಾರ್ಥ ॥

ತುವಿದ್ಯುಮ್ನ—ಬಹುಧನೋಪೇತನಾದ |(ಹೇ) ಇಂದ್ರ—ಎಲೈ ಇಂದ್ರನೇ । ರಭಸ್ವತಃ—ಉದ್ಯೋಗಶೀಲರಾದ (ಯಜ್ಞಾದಿ ಕರ್ಮಗಳಲ್ಲಿ ಪ್ರವೃತ್ತರಾದ) । ಯಶಸ್ವತಃ—ಕೀರ್ತಿಭಾಜನರಾದ । ಅಸ್ಮಾನ್—ನಮ್ಮನ್ನು । ರಾಯೇ-ಧನಪಾಪ್ತಿಗಾಗಿ । ತತ್ರ—ಆ ಕರ್ಮದಲ್ಲಿ । ಸು ಚೋದಯ—(ಚೆನ್ನಾಗಿ) ಪ್ರೇರಿಸು ॥

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಬಹುಧನಯುಕ್ತನು ಎಂದರೆ ನಿನ್ನಲ್ಲಿ ಬಹಳವಾದ ಧನವಿರುವುದು. ಆದುದರಿಂದ ಯಾವಾಗಲೂ ಯಜ್ಞಾದಿಕಾರ್ಯಗಳಲ್ಲಿ ತೊಡಗಿರುವ ಮತ್ತು ಕೀರ್ತಿವಂತರಾದ ನಮ್ಮನ್ನು ಧನಪ್ರಾಪ್ತಿಗಾಗಿ ಯಜ್ಞಾದಿಕರ್ಮಗಳಲ್ಲಿ ಆಸಕ್ತರಾಗುವಂತೆ ಪ್ರೇರಿಸುವವನಾಗು.

## English Translation.

Indra, you are very rich ; encourage us in this rite for the acquirement of wealth, for we are deligent and renowned.

॥ ವಿಶೇಷವಿಷಯಗಳು ॥

**ಅಸ್ಮಾನ್+ಸು=ಅಸ್ಮಾನ್ತ್ಸು.** ನಕಾರದ ಮುಂದೆ ಅದರಲ್ಲೂ ವಿಶೇಷವಾಗಿ ದ್ವಿತೀಯಾಬಹುವಚನಾಂತ್ಯವಾದ ನಕಾರದ ಮುಂದೆ ಸಕಾರವು ಬಂದರೆ ಸಂಹಿತಾಪಾಠದಲ್ಲಿ ಅದನ್ನು ಸಂಧಿಮಾಡಿ ಉಚ್ಚರಿಸುವಾಗ ನಕಾರಸಕಾರಗಳ ಮಧ್ಯದಲ್ಲಿ ತಕಾರವನ್ನು ಸೇರಿಸಿ ನ್ತ್ಸು ಎಂದು ಪಠಿಸುವುದು ರೂಢಿಯಾಗಿದೆ. ಈ ವಿಷಯದಲ್ಲಿ—

**ಸ ಗಾ ಅವಿಂದತ್ಸೋ ಅವಿಂದದಶ್ವಾನ್ತ್ಸ ಓಷಧೀಃ ಸೋ ಅಪಃ ಸವನಾನಿ ॥**

(ಋ. ಸಂ. ೧-೧೦೩-೫)

**ಕವಿರ್ಗೀರ್ಭಿಃ ಕಾವ್ಯೇನಾ ಕವಿಃ ಸನ್ತ್ಸೋಮಃ ಪವಿತ್ರಮತ್ಯೇತಿ ರೇಭನ್ ॥**

(ಋ. ಸಂ. ೯-೯೬-೧೭)

ಇತ್ಯಾದಿ ಅನೇಕ ಉದಾಹರಣೆಗಳನ್ನು ಕೊಡಬಹುದು.

**ರಭಸ್ವತಃ**— ರಭ ರಾಭಸ್ಯೇ । ರಾಭಸ್ಯಂ ಕಾರ್ಯೋಪಕ್ರಮಃ ॥ ರಭ ಧಾತುವಿನಿಂದ ರಾಭಸ್ಯ ಎಂಬ ಶಬ್ದವು ಉತ್ಪನ್ನವಾಗಿರುವುದು. ರಾಭಸ್ಯವೆಂದರೆ ಕಾರ್ಯೋಪಕ್ರಮ, ಉದ್ಯೋಗಶೀಲತೆ ಎಂದರ್ಥವು. ರಭಸ್ವತಃ—ರಭಸ್ವಾನ್ ಎಂಬ ಶಬ್ದದ ದ್ವಿತೀಯಾ ಬಹುವಚನ.

**ತುವಿದ್ಯುಮ್ನ-ಪ್ರಭೂತಧನ** । ತುವಿ ಎಂದರೆ ಬಹು. ದ್ಯುಮ್ನಂ ಎಂದರೆ ಧನವು. ಆದುದರಿಂದ ತುವಿ ದ್ಯುಮ್ನಂ ಯಸ್ಯ ಸಃ ಎಂದು ವಿಗ್ರಹವು. ಬಹುಧನವುಳ್ಳ ಎಂದರ್ಥವು.

**ಯಶಸ್ವತಃ—ಯಶೋಽಸ್ಯಾಸ್ತೀತಿ ಯಶಸ್ವಾನ್, ತಾನ್** ॥ ಕೀರ್ತಿಯುಳ್ಳ ಎಂದರ್ಥವು. **ರಭಸ್ವತಃ** ಮತ್ತು **ಯಶಸ್ವತಃ** ಎಂಬ ಎರಡು ಶಬ್ದಗಳೂ **ಅಸ್ಮಾನ್** ಎಂಬ ಶಬ್ದಕ್ಕೆ ವಿಶೇಷಣಗಳು.

ವ್ಯಾಕರಣಪ್ರಕ್ರಿಯಾ

**ತತ್ರ—ಸಪ್ತಮ್ಯಾಸ್ತ್ರಲ್** (ಪಾ. ಸೂ. ೫-೩-೧೦) ದ್ವಿ ಮೊದಲಾದುವುಗಳನ್ನುಳಿದು ಸಪ್ತಮ್ಯಂತಗಳಾದ ಕಿಮ್, ಸರ್ವನಾಮಸಂಜ್ಞಕ ಶಬ್ದಗಳು, ಬಹು. ಇವುಗಳ ಮುಂದೆ ತ್ರಲ್ ಪ್ರತ್ಯಯ ಬರುವುದು ಎಂಬುದರಿಂದ ತದ್+ಙಿ, ಎಂಬುದರ ಮುಂದೆ ತ್ರಲ್ ಪ್ರತ್ಯಯ ಬಂದರೆ ತದ್ಧಿತಾಂತವಾದ್ದರಿಂದ ಪ್ರಾತಿಪದಿಕ ಸಂಜ್ಞೆ ಬರಲು **ಸುಪೋಧಾತುಪ್ರಾತಿಪದಿಕಯೋಃ** (ಪಾ. ಸೂ. ೨-೪-೭೧) ಎಂಬುದರಿಂದ ಙಿಗೆ ಲುಕ್ **ತ್ಯದಾದೀನಾಮಃ** (ಪಾ. ಸೂ. ೭-೨-೧೦೨) ಎಂಬುದರಿಂದ ದಕಾರಕ್ಕೆ ಅಕಾರ, **ಅತೋಗುಣೇ,** (ಪಾ. ಸೂ. ೬-೧-೯೭) ಎಂಬುದರಿಂದ ಪರರೂಪ, ತತ್ರ ಎಂದಾಗುವುದು **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಹಿಂದೆ ಇರುವ ವರ್ಣವು ಉದಾತ್ತವಾಗುವುದು.

ಇನ್ದ್ರ—ಎರಡನೇ ಪಾದದ ಆದಿಯಲ್ಲಿರುವುದು. ಆದ್ದರಿಂದ **ಅಪಾದಾದೌ** ಎಂಬ ನಿಷೇಧ ಬರುವ ಕಾರಣ ಅಷ್ಟಮಿಕಾನುದಾತ್ತ ಬರುವುದಿಲ್ಲ. **ಆಮಂತ್ರಿತಸ್ಯ ಚ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯು ದಾತ್ತಸ್ವರ ಬರುವುದು.

**ರಾಯೇ—ಊಡಿದಯ್‌ಪದಾದ್ಯಪ್ಪುಮ್‌ರೈದ್ಯುಭ್ಯಃ** (ಪಾ. ಸೂ. ೬-೧-೧೭೧) ಎಂಬುದರಿಂದ ರೈ ಶಬ್ದದ ಮುಂದೆ ಇರುವ ಚತುರ್ಥೀ ವಿಭಕ್ತಿಯು ಉದಾತ್ತವಾಗುವುದು.

**ರಭಸ್ವತಃ—ರಭ ರಾಭಸ್ಯೇ**—ರಾಭಸ್ಯ ಎಂದರೆ ಕಾರ್ಯಾರಂಭ ಎಂದರ್ಥ. **ಸರ್ವಧಾತುಭ್ಯೋಽಸುನ್** (ಉ. ಸೂ. ೪-೬೨೮) ಎಂಬುದರಿಂದ ಅಸುನ್ ಪ್ರತ್ಯಯ ರಭಸ್ ಎಂದಾಗುವುದು. ಪ್ರತ್ಯಯವು ನಿತ್ತಾದ್ದರಿಂದ ಆದ್ಯುದಾತ್ತ. **ರಭಃ ಅಸ್ಯ ಅಸ್ತಿ** ಎಂದ ವಿಗ್ರಹ ಮಾಡಿದರೆ **ತದಸ್ಯಾಸ್ತ್ಯಸ್ಮಿನ್ನಿತಿಮತುಪ್** (ಪಾ.ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ, ರಭಸ್ ಎಂಬುದು ಅದುಪಧ-ಆದ್ದರಿಂದ **ಮಾದುಪಧಾಯಾಶ್ಚ ಮತೋ ರ್ವೋಽಯವಾದಿಭ್ಯಃ** (ಪಾ. ಸೂ. ೮-೨-೯) ಎಂಬುದರಿಂದ ಮಕಾರಕ್ಕೆ ವಕಾರ. **ಸ್ವಾದಿಷ್ವಸರ್ವನಾಮಸ್ಥಾನೇ** (ಪಾ. ಸೂ. ೧-೪-೧೭) ಕ ಪ್ರತ್ಯಯಾವಧಿಕಾಸರ್ವನಾಮಸ್ಥಾನ ಸ್ವಾದಿಪ್ರತ್ಯಯಾವ್ಯವಹಿತ ಪೂರ್ವದಲ್ಲಿರುವುದು ಪದ ಸಂಜ್ಞೆಯನ್ನು ಹೊಂದುವುದು ಎಂದು ವಿಹಿತವಾದ ಪದಸಂಜ್ಞೆಯು **ತಸೌಮತ್ವರ್ಥೇ** (ಪಾ.ಸೂ. ೧-೪-೧೯) ಮತ್ವರ್ಥ ಪ್ರತ್ಯಯಪರದಲ್ಲಿರುವಾಗ ತಕಾರಾಂತ ಸಕಾರಾಂತ ಶಬ್ದಗಳು ಭ ಸಂಜ್ಞೆಯನ್ನು ಹೊಂದುವುವು ಎಂದು ವಿಹಿತವಾದ ಭ ಸಂಜ್ಞೆಯಿಂದ ಬಾಧಿತವಾಗುವುದು. ಆದರೆ ಎರಡು ಸಂಜ್ಞೆಗಳಿಗೂ ಬಾಧ್ಯಬಾಧಕಭಾವ ಬೇಡ, ಸಮಾವೇಶವೇ ಇರಲಿ ಎನ್ನಲಾಗುವುದಿಲ್ಲ. ಏಕೆಂದರೆ **ಆಕಡಾರಾದೇಕಾಸಂಜ್ಞಾ** (ಪಾ. ಸೂ- ೧-೪-೧) ಇಲ್ಲಿಂದ ಆರಂಭಿಸಿ **ಕಡಾರಾಃಕರ್ಮಧಾರಯೇ** (ಪಾ. ಸೂ. ೨-೨-೩೮) ಎಂಬ ಸೂತ್ರದವರೆಗೆ ವಿಹಿತವಾದ ಸಂಜ್ಞೆ ಗಳಲ್ಲಿ ಪರವಾದುದೂ ಅನವಕಾಶವಾದುದೂ ಆದ ಒಂದೇ ಸಂಜ್ಞೆ ಬರುವುದು ಎಂಬುದರಿಂದ ಪರವಾದ ಭ ಸಂಜ್ಞೆಯಿಂದ ಪದಸಂಜ್ಞೆಗೆ ಬಾಧವು ಬರುವುದು. ಹೀಗೆ ಪದಸಂಜ್ಞೆ ಇಲ್ಲದೇ ಇರುವುದರಿಂದ ಪದಸಂಜ್ಞಾನಿ ಮಿತ್ತಕವಾದ ರುತ್ವಾದಿ ಕಾರ್ಯಗಳು ಬರುವುದಿಲ್ಲ.

**ತುವಿದ್ಯುಮ್ನ**—ತುವಿ-(ಹೆಚ್ಚಾದ) ದ್ಯುಮ್ನಂ (**ಧನವು**) ಯಸ್ಯಸಃ (**ಯಾರಿಗೆ ಇದೆಯೋ ಅವನು**) ಎಂದು ಬಹುವ್ರೀಹಿಸಮಾಸ, ಇದು ಆಮಂತ್ರಿತವಾದ್ದರಿಂದ ಆರನೇ ಅಧ್ಯಾಯಗತ ಸೂತ್ರದಿಂದ ಆಮಂತ್ರಿತನಿಮಿ ತ್ತಕವಾದ ಆದ್ಯುದಾತ್ತ ಬರುವುದು.

**ಯಶಸ್ವತಃ**—ಯಶಃ ಅಸ್ಯ ಅಸ್ತಿ ಎಂದು ವಿಗ್ರಹಮಾಡಿದಾಗ ಮತಪ್ ಪ್ರತ್ಯಯ, ಮಕಾರಕ್ಕೆ ವಕಾರ ಇವು ರಭಸ್ವತಃ ಎಂಬಲ್ಲಿ ಹೇಳಿದಂತೆ ಬರುವುವು. ಯಶಸ್ ಎಂಬುದರ ಕೊನೆಯಲ್ಲಿ ಅಸ್ ಇರುವುದು ಆದ್ದರಿಂದ **ಅಸ್‌ಮಾಯಾ ಮೇಧಾಸ್ರಜೋಽವಿನಿಃ** ( ಪಾ. ಸೂ. ೫-೨-೧೨೧) ಅಸಂತವಾದ ಶಬ್ದ, ಮಾಯಾ, ಮೇಧಾ, ಸ್ರಜ್ ಶಬ್ದಗಳು ಇವುಗಳ ಮುಂದೆ ವಿನ್ ಪ್ರತ್ಯಯ ಬರುವುದು ಎಂದು ವಿಶೇಷವಿಹಿತ ವಾದ ವಿ, ವಿಧಿಯಿಂದ ಮತುಪ್ ವಿಧಿಗೆ ಸಾಮಾನ್ಯಸ್ಯ ವಿಶೇಷಣ ಬಾಧಃ, ಸಾಮಾನ್ಯ ಶಾಸ್ತ್ರಕ್ಕೆ ವಿಶೇಷ ಶಾಸ್ತ್ರ ದಿಂದ ಬಾಧವು ಉಂಟು ಎಂಬುದರಿಂದ ಬಾಧ ಬರಲಿ ಎಂದು ಶಂಕೆಗೆ ಅವಕಾಶ ಉಂಟು. ಆದರೆ ಈ ಸೂತ್ರ ದಲ್ಲಿ **ಕೇಶಾದ್ವೋಽನ್ಯತರಸ್ಯಾಮ್** (**ಪಾ. ಸೂ.** ೫-೨-೧೦೯) ಎಂಬ ಸೂತ್ರದಿಂದ ' ಅನ್ಯತರಸ್ಯಾಮ್ ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಅನ್ಯತರಸ್ಯಾಮ್, ಎಂಬುದಕ್ಕೆ ವಿಕಲ್ಪ ಎಂದು ಅರ್ಥ. ಏವಂಚ ಅಸ್ಮಾಯಾ, ಇತ್ಯಾದಿ ಸೂತ್ರಕ್ಕೆ ವಿಕಲ್ಪದಿಂದ ವಿ ಬರುವುದು ಎಂದು ಅರ್ಥವೇರ್ಪಡುವುದು, ವಿನ್ವಿಧಿಯು ವಿಕ

ಪ್ಪವಾದ್ದರಿಂದ ವಿನ್ ಬರದೇ ಇರುವಪಕ್ಷದಲ್ಲಿ ಮತುಪ್ ಬರುವುದು. ಆದ್ದರಿಂದ ವಿನ್ ಪ್ರತ್ಯಯವು ಮತುಪ್ಪಿಗೆ ಬಾಧಕವಾಗುವುದಿಲ್ಲ. ಆದರೆ **ಏಕಗೋಪೂರ್ವಾಟ್ಠಞ್ನಿತ್ಯಮ್** (ಪಾ. ಸೂ. ೫-೨-೧೧೮) ಎಂಬ ಸೂತ್ರದಲ್ಲಿ ನಿತ್ಯಮ್ ಎಂದು ಇರುವುದರಿಂದ ಅನ್ಯತರಸ್ಯಾಂ ಎಂಬುದಕ್ಕೆ ಅನುವೃತ್ತಿವಿಚ್ಛೇದ ಬರುವುದು. ಆದರೂ **ತಸೌಮತ್ವರ್ಥೇ** (ಪಾ. ಸೂ. ೧-೪-೧೯) ಎಂಬ ಸೂತ್ರದಲ್ಲಿ ಯಶಸ್ವೀ ಯಶಸ್ವಾನ್ ಎಂದು ಮಹಾಭಾಷ್ಯಕಾರರು ಮಹಾಭಾಷ್ಯದಲ್ಲಿ ಉದಹರಿಸಿರುವರು. ಅನ್ಯತರಸ್ಯಾಂ ಎಂಬುದಕ್ಕೆ ಅನುವೃತ್ತಿ ಇಲ್ಲದೇ ಇದ್ದರೆ ಈ ಎರಡು ರೂಪಗಳು ಸಿದ್ಧವಾಗಲಾರವು. ಆದ್ದರಿಂದ ವಿಚ್ಛಿನ್ನವಾದಾಗ್ಯೂ ಅನ್ಯತರಸ್ಯಾಂ ಎಂಬುದು ಅನುವೃತ್ತವಾಗುವುದು ಎಂದು ಇಟ್ಟುಕೊಳ್ಳಬೇಕು. ಇದೇಪ್ರಕಾರ ಎಲ್ಲೆಡೆಗಳಲ್ಲಿ ಅರ್ಥವಾಗುವುದರಿಂದ ಮತುಪ್ಪಿಗೆ ಯಾವ ಪ್ರತ್ಯಯವೂ ಬಾಧಕವಾಗುವುದಿಲ್ಲ. ವಿಶೇಷ ವಿಹಿತವಾದ ಪ್ರತ್ಯಯವೂ. ಅದು ಬಾರದ ಪಕ್ಷದಲ್ಲಿ ಮತುಪ್ಪೂ ಸಹ ಬರುವುದು. ಈ ಅಂಶವನ್ನು ಮತುಪಸ್ಸರ್ವತ್ರ ಸಮುಚ್ಚಯಾತ್ ಎಂದು ವೇದಭಾಷ್ಯದಲ್ಲಿ ಸಂಗ್ರಹವಾಗಿ ಹೇಳಿರುವರು. ತತ್ತ್ವಬೋಧಿನೀಕಾರರು ಅಸ್ಮಾಯಾ ಎಂಬ ಸೂತ್ರದಲ್ಲಿ **ಹೃದಯಾಚ್ಚಾಲುಜನ್ಯತರಸ್ಯಾಮ್** ಎಂಬ ವಾರ್ತಿಕ ವ್ಯಾಖ್ಯಾನಕಾಲದಲ್ಲಿ **ಮತುಪ್ ಸರ್ವತ್ರ ಸಮುಚ್ಚೀಯತ ಏವ** ಎಂದಿರುವರು. **ಕೇಶಾದ್ವೋಽನ್ಯತರಸ್ಯಾಮ್** (ಪಾ.ಸೂ. ೫-೩-೧೦೯) ಎಂಬ ಸೂತ್ರದಲ್ಲಿ **ಛಂದಸೀವನಿಪೌಚ, ಛಂದಸೀ ವನಿಪೌ ಚ ವಕ್ತವ್ಯೌ ವಕ್ಷ್ಯ ಮತುಪ್‌ಚ** ಎಂಬ ಮಹಾಭಾಷ್ಯ ವ್ಯಾಖ್ಯಾನ ಕಾಲದಲ್ಲಿ **ಅನ್ಯತರಸ್ಯಾಂಗ್ರಹಣಸ್ಯ ಸರ್ವತ್ರಸಂಬಂಧಾನ್ಮತುಬಪಿ ಭವತೀತಿ ಮತ್ವಾಹ ವಕ್ಷ್ಯಮತುಪ್ಚೇತಿ** ಎಂದು ಕೈಯಟಕಾರರು ಸ್ಪಷ್ಟಪಡಿಸಿರುವರು. ಆದ್ದರಿಂದ ಯಶಸ್ ಎಂಬುದರ ಮುಂದೆ ಮತುಪ್ ಪ್ರತ್ಯಯ ಬರಲು ಯಾವ ಬಾಧಕವೂ ಇರುವುದಿಲ್ಲ. ಯಶಸ್ ಶಬ್ದವು ನಪುಂಸಕಲಿಂಗ. ಆದ್ದರಿಂದ **ನಬ್ವಿಷಯಸ್ಯಾನಿಸಂತಸ್ಯ** (ಫಿ ಸೂ. ೨೬) ಎಂಬುದರಿಂದ ಆದ್ಯುದಾತ್ತ. **ಮತುಪ್** ಪ್ರತ್ಯಯವು ಪಿತ್ತಾದ್ದರಿಂದ ಅನುದಾತ್ತ. ಆದ್ದರಿಂದ ಯಸಸ್ ಎಂಬಲ್ಲಿ ಆದ್ಯುದಾತ್ತವೇ ನಿಲ್ಲುವುದು ॥ ೬ ॥

॥ ಸಂಹಿತಾಪಾಠಃ ॥

ಸಂ ಗೋಮದಿಂದ್ರ ವಾಜವದಸ್ಮೇ ಪೃಥು ಶ್ರವೋ ಬೃಹತ್ ॥
ವಿಶ್ವಾಯುರ್ಧೇಹ್ಯಕ್ಷಿತಂ ॥ ೭ ॥

॥ ಪದಪಾಠಃ ॥

ಸಂ । ಗೋಽಮತ್ । ಇಂದ್ರ । ವಾಜಽವತ್ । ಅಸ್ಮೇ ಇತಿ । ಪೃಥು ।
ಶ್ರವಃ । ಬೃಹತ್ ॥
ವಿಶ್ವಽಆಯುಃ । ಧೇಹಿ । ಅಕ್ಷಿತಂ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಶ್ರವೋ ಧನಮಸ್ಮೇ ಸಂ ಧೇಹಿ । ಅಸ್ಮಭ್ಯಂ ಸಮ್ಯಕ್ ಪ್ರಯಚ್ಛ । ಕೀದೃಶಂ ಶ್ರವಃ । ಗೋಮತ್ ಬಹ್ವೀಭಿರ್ಗೋಭಿರುಪೇತಂ ವಾಜವತ್ ಪ್ರಭೂತೇನಾನ್ನೇನೋಪೇತಂ ಪೃಥು ಪರಿಮಾಣೇನಾಧಿಕಂ ಬೃಹತ್ ಗುಣೈರಧಿಕಂ ವಿಶ್ವಾಯುಃ ಕೃತ್ಸ್ನಸ್ಯಾಯುಷ್ಯಕಾರಣಂ ಅಕ್ಷಿತಂ ವಿನಾಶರಹಿತಂ ಗೋಮತ್ । ವಾಜವತ್ । ಉಭಯತ್ರ ಮತುಪೋಽನುದಾತ್ತತ್ವಾತ್ಪ್ರಾತಿಪದಿಕಸ್ವರ ಏವ । ವಾಜಶಬ್ದೋ ವೃಷಾದಿರಾದ್ಯುದಾತ್ತಃ । ಅಸ್ಮೇ । ಅಸ್ಮಚ್ಛಬ್ದಾಚ್ಚತುರ್ಥೀಬಹುವಚನಸ್ಯ ಸುಪಾಂ ಸುಲುಗಿತ್ಯಾದಿನಾ ಶೇ ಆದೇಶಃ । ಶಿತ್ತ್ವಾತ್ಸರ್ವಾದೇಶಃ । ಪ್ರಾತಿಪದಿಕಸ್ವರೇಣಾಂತೋದಾತ್ತತ್ವಂ । ಶೇಷೇ ಲೋಪಷ್ಟಿಲೋಪ ಇತಿ ಪಕ್ಷೇ । ಪಾ. ೭-೨-೯೦ । ಉದಾತ್ತನಿವೃತ್ತಿಸ್ವರೇಣ ವಿಭಕ್ತೇರುದಾತ್ತತ್ವಂ । ಅಂತ್ಯಲೋಪಪಕ್ಷೇಽತೋ ಗುಣ ಇತಿ ಪರರೂಪ ಏಕಾದೇಶ ಉದಾತ್ತೇನೋದಾತ್ತ ಇತ್ಯುದಾತ್ತತ್ವಂ । ಪೃಥು । ಪ್ರಥ ಪ್ರಖ್ಯಾನೇ । ಪ್ರಥಿಮ್ರದಿಭ್ರಸ್ಜಾಂ ಸಂಪ್ರಸಾರಣಂ ಸಲೋಪಶ್ಚ । ಉ. ೧-೨೮ । ಇತಿ ಕುಪ್ರತ್ಯಯಃ । ರೇಫಸ್ಯ ಸಂಪ್ರಸಾರಣಮೃಕಾರಃ । ಪರಪೂರ್ವತ್ವಂ । ಕೋಃ ಕಿತ್ತ್ವಾನ್ನ ಲಘೂಪಧಗುಣಃ । ಶ್ರೂಯತ ಇತಿ ಶ್ರವೋ ಧನಂ । ಅಸುನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತಃ । ಬೃಹತ್ । ಪ್ರಾತಿಪದಿಕಸ್ವರಃ । ವಿಶ್ವಾಯುಃ । ವಿಶ್ವಮಾಯುರ್ಯಸ್ಮಿನ್ಸನೇ । ವಿಶ್ವಶಬ್ದಃ ಕ್ವನ್ಪ್ರತ್ಯಯಾಂತಃ । ತಸ್ಯ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವೇ ಪ್ರಾಪ್ತೇ ಪರಾದಿಶ್ಛಂದಸಿ ಬಹುಲಮಿತಿ ಪೂರ್ವಪದಾಂತೋದಾತ್ತತ್ವಂ । ಏಕಾದೇಶ ಉದಾತ್ತೇನೋದಾತ್ತ ಇತ್ಯುದಾತ್ತಃ । ಅಕ್ಷಿತಂ । ಕ್ಷಿ ಕ್ಷಯ ಇತ್ಯಸ್ಮಾದಂತರ್ಣೀತಣ್ಯರ್ಥಾತ್ಕರ್ಮಣಿ ನಿಷ್ಠಾ । ತೇನ ಸ್ಯದರ್ಥತ್ವಾನ್ನಿಷ್ಠಾಯಾಮಣ್ಯದರ್ಥೇ । ಪಾ. ೬-೪-೬೦ । ಇತಿ ನ ದೀರ್ಘತ್ವಂ । ಅತ ಏವ ಕ್ಷಿಯೋ ದೀರ್ಘಾತ್ । ಪಾ. ೮-೨-೪೬ । ಇತಿ ನ ನಿಷ್ಠಾನತ್ವಂ । ನಞ್ಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

(ಹೇ)ಇಂದ್ರ—ಎಲೈ ಇಂದ್ರನೇ । ಅಸ್ಮೇ—ನಮಗೆ । ಪೃಥು—ಬಹಳವಾದ । ಬೃಹತ್—ಗುಣದಲ್ಲಿ ಉತ್ತಮವಾದ । ಗೋಮತ್—ಗೋವುಗಳಿಂದ ಸಹಿತವಾದ (ಗೋರೂಪವಾದ) । ವಾಜವತ್—ಅನ್ನಸಹಿತವಾದ (ಅನ್ನರೂಪವಾದ, ಆಹಾರರೂಪವಾದ) । ವಿಶ್ವಾಯುಃ—ದೀರ್ಘಾಯುಸ್ಸಿಗೆ ಕಾರಣವಾದ । ಅಕ್ಷಿತಂ—ನಾಶರಹಿತವಾದ । ಶ್ರವಃ—ಧನವನ್ನು । ಧೇಹಿ—ಕೊಡುವವನಾಗು ॥

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ನಮಗೆ ಬಹಳ ಧನವನ್ನು ಕೊಡು. ಆ ಧನವು ಉತ್ತಮವಾಗಿಯೂ ಗೋವುಗಳು ಅಶ್ವಗಳು ಮೊದಲಾದ ಪಶುಸಂಪತ್ತಿನ ರೂಪದಲ್ಲಿಯೂ, ಅನ್ನಾಹಾರ ರೂಪದಲ್ಲಿಯೂ ಇರಬೇಕಲ್ಲದೆ ನಾವು ಬಹುಕಾಲ ಜೀವಿಸಿರುವುದಕ್ಕೆ ಸಾಧನಭೂತವಾಗಿಯೂ, ನಾಶರಹಿತನಾಗಿಯೂ ಇರಬೇಕು. ಇಂತಹ ಧನವನ್ನು ನಮಗೆ ಬಹು ಹೆಚ್ಚಾಗಿ ಕೊಡು.

English Translation

Grant us, Indra, wealth beyond measure or calculation, inexhaustible the source of cattle, of food, of all life.

॥ ವಿಶೇಷವಿಷಯಗಳು ॥

**ಗೋಮತ್**—ಬಹ್ವೀಭಿರ್ಗೋಭಿರುಪೇತಂ । ಅಥವಾ ಗಾವೋ ಯಸ್ಮಿನ್ ಸಂತಿ ತತ್, ಗೋಮತ್ ಬಹುವಾದ ಗೋವುಗಳಿಂದ ಕೂಡಿದ ಎಂದರೆ ಗೋರೂಪವಾದ ಪಶುಸಂಪತ್ತು ಎಂದರ್ಥವು.

**ವಾಜವತಃ**—ಅನ್ನ ಮೊದಲಾದ ಆಹಾರ ರೂಪದಲ್ಲಿರುವ.

**ಅಸ್ಮೇ**—ಎಂದರೆ **ಅಸ್ಮಭ್ಯಂ** ಎಂದರ್ಥವು. ಋಗ್ವೇದದಲ್ಲಿ ಅನೇಕ ಕಡೆ **ಅಸ್ಮಭ್ಯಂ** ಎಂಬ ಶಬ್ದಕ್ಕೆ ಬದಲಾಗಿ **ಅಸ್ಮೇ** ಎಂಬ ಶಬ್ದಪ್ರಯೋಗವಿರುವುದು.

**ಶ್ರವಃ**—ಮಘಂ ಮೊದಲಾದ ಇಪ್ಪತ್ತೆಂಟು ಧನನಾಮಗಳ ಮಧ್ಯದಲ್ಲಿ ಶ್ರವಃ ಶಬ್ದವು ಪಠಿತವಾಗಿದೆ. (ನಿ. ೩-೯). **ಬೃಹತ್**—ಶ್ರೇಷ್ಠವಾದ, ಸಾರಯುಕ್ತವಾದ, ಗುಣದಲ್ಲಿ ಉತ್ತಮವಾದ.

**ವಿಶ್ವಾಯುಃ**—**ಕೃತ್ಸ್ನಾಯುಷ್ಯಕಾರಣಂ** ಎಂದರೆ ಬಹುಕಾಲಪರ್ಯಂತರವರೆಗೆ ಜೀವಿಸಲು ಸಾಧನಭೂತವಾದ ದ್ರವ್ಯವು ಎಂದು ಭಾಷ್ಯಕಾರರು ಅರ್ಥಮಾಡಿರುವರು. ಹೀಗೆ ಅರ್ಥಮಾಡುವುದಕ್ಕಿಂತಲೂ ಎಂದರೆ **ವಿಶ್ವಾಯುಃ** ಎಂಬ ಶಬ್ದವನ್ನು **ಶ್ರವಃ** (ಧನವು) ಎಂಬ ಶಬ್ದಕ್ಕೆ ವಿಶೇಷಣವನ್ನಾಗಿ ಉಪಯೋಗಿಸುವುದಕಿಂತಲೂ **ವಿಶ್ವಾಯುಃ**—ದೀರ್ಘಾಯುಸ್ಸನ್ನು, ಬಹುಕಾಲ ಜೀವಿಸಿರುವುದನ್ನು ಎಂಬ ಅರ್ಥದಲ್ಲಿ ವಿಶೇಷ್ಯಪದವನ್ನಾಗಿಯೇ ಉಪಯೋಗಿಸುವುದೇ ಯುಕ್ತವಾಗಿರುವುದು. ಸ್ಕಂದಸ್ವಾಮಿಯ ಅಭಿಪ್ರಾಯವೂ ಇದೇರೀತಿ ಇರುವುದು.

**ಅಕ್ಷಿತಂ**—ನಾಶರಹಿತವಾದ, ಎಂದರೆ ಬಹು ಹೆಚ್ಚಾದ, inexhaustible ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಗೋಮತ್, ವಾಜವತ್**—ಗೌಃ ಅಸ್ಯಾಸ್ತೀತಿ ಗೋಮತ್. ವಾಜಃ ಅಸ್ಯ ಅಸ್ತೀತಿ ವಾಜವತ್, ಈ ಎರಡು ಸ್ಥಳದಲ್ಲಿ ಮತುಪ್ ಪಿತ್ತಾದ್ದರಿಂದ ಅನುದಾತ್ತವಾಗುವ ಕಾರಣ ಪ್ರಾತಿಪದಿಕಸ್ವರವೇ ನಿಲ್ಲುವುದು. ವಾಜ ಶಬ್ದವು ವೃಷಾದಿಯಲ್ಲಿರುವುದರಿಂದ **ವೃಷಾದೀನಾಂ ಚ** (೬-೧-೨೦೩) ಎಂಬುದರಿಂದ ಆದ್ಯುದಾತ್ತ.

**ಅಸ್ಮೇ**—ಅಸ್ಮದ್ ಶಬ್ದದಮುಂದೆ ಚತುರ್ಥೀಬಹುವಚನ ಭ್ಯಸ್ ಪ್ರತ್ಯಯ. ಅದಕ್ಕೆ **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಇತ್ಯಾದಿ ಸೂತ್ರದಿಂದ ಶೇ ಆದೇಶ. ಶೇ ಎಂಬಲ್ಲಿ ಶ್‌ಗೆ **ಲಶಕ್ವತದ್ಧಿತೇ** (ಪಾ. ಸೂ. ೧-೩-೮) ಎಂಬುದರಿಂದ ಇತ್ಸಂಜ್ಞೆ. ಶೇ ಎಂಬುದು ಶಿತ್ತು. ಆದ್ದರಿಂದ **ಅನೇಕಾಲ್ ಶಿತ್ಸರ್ವಸ್ಯ** (ಪಾ. ಸೂ. ೧-೧-೫೫) ಎಂಬುದರಿಂದ ಭ್ಯಸ್ ಎಂಬುದರ ಪೂರ್ಣಸ್ಥಾನದಲ್ಲಿ ಬರುವುದು. **ಅಸ್ಮದ್** ಎಂಬುದು ಪ್ರಾತಿಪದಿಕಸ್ವರದಿಂದ ಅಂತೋದಾತ್ತ. **ಶೇಷೇ ಲೋಪಃ** (ಪಾ. ಸೂ. ೭-೨-೯೦) ಈ ಸೂತ್ರಕ್ಕೆ ಟಿ ಲೋಪ ಬರುವುದು ಎಂದು ಅರ್ಥವಾದಾಗ ಅಸ್ಮದ್ ಎಂಬುದರ ಅದ್ ಗೆ ಲೋಪ. ಈಗ **ಅನುದಾತ್ತಸ್ಯ ಚ ಯತ್ರೋ**

**ದಾತ್ತಲೋಪಃ** (ಪಾ ಸೂ. ೬-೧-೧೬೧) ಎಂಬ ಉದಾತ್ತನಿವೃತ್ತಿಸ್ವರದಿಂದ ಏ ಎಂಬುದು ಉದಾತ್ತ. **ಶೇಷೇ-ಲೋಪಃ** ಈ ಸೂತ್ರಕ್ಕೆ ಕೊನೆಯ ವರ್ಣಕ್ಕೆ ಲೋಪ ಬರುವುದು ಎಂದು ಅರ್ಥವಾದಾಗ ಅಸ್ಮದ್ ಎಂಬಲ್ಲಿ ದ-ಕಾರಕ್ಕೆ ಲೋಪ. ಅಸ್ಮ+ಏ ಎಂದಿರುವಾಗ **ಅತೋಗುಣೇ** (ಪಾ. ಸೂ. ೬-೧-೯೭) ಎಂಬುದರಿಂದ ಪರರೂಪವು ಏಕಾದೇಶವಾಗಿ ಬರುವುದು. ಈ ಏಕಾದೇಶವು **ಏಕಾದೇಶ ಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಎಂಬುದರಿಂದ ಉದಾತ್ತ.

**ಪೃಥು ಪ್ರಥಪ್ರಖ್ಯಾನೇ**— ಧಾತು. **ಪ್ರಥಿಮ್ರದಿಭ್ರಸ್ಜಾಂ ಸಂಪ್ರಸಾರಣಂ ಸಲೋಪಶ್ಚ** (ಉ. ಸೂ. ೧-೨೮) ಪ್ರಥಪ್ರಖ್ಯಾನೇ, ಮ್ರದಮರ್ದನೇ, ಭ್ರಸ್ಜಪಾಕೇ ಈ ಮೂರು ಧಾತುಗಳ ಮುಂದೆ ಕು ಪ್ರತ್ಯಯ ಬರುವುದು. ಈ ಮೂರು ಧಾತುಗಳಿಗೆ ಸಂಪ್ರಸಾರಣವೂ, ಭ್ರಸ್ಜಧಾತುವಿನ ಸಕಾರಕ್ಕೆ ಲೋಪವೂ ಸಹ ಬರುವುದು ಎಂಬುದರಿಂದ ಪ್ರಥ್ ಧಾತುವಿಗೆ ಸಂಪ್ರಸಾರಣದಿಂದ ರೇಫಕ್ಕೆ ಋಕಾರ ಕು ಪ್ರತ್ಯಯಗಳು ಬಂದರೆ ಪೃ+ಥ್+ಉ **ಸಂಪ್ರಸಾರಣಾಚ್ಚ** (ಪಾ. ಸೂ. ೬-೧-೧೦೮) ಎಂಬುದರಿಂದ ಪೂರ್ವರೂಪ ಬಂದರೆ ಪೃಥು ಎಂದಾಗುವುದು. ಕು ಪ್ರತ್ಯಯವು ಕಿತ್ತು. ಆದ್ದರಿಂದ **ಪುಗಂತ ಲಘೂಪಧಸ್ಯ ಚ** (ಪಾ. ಸೂ. ೭-೩-೮೬) ಎಂಬುದರಿಂದ ಲಘೂಪಧಗುಣ ಬರುವುದಿಲ್ಲ.

**ಶ್ರವಃ**—ಶ್ರೂಯತೇ ಇತಿ ಶ್ರವಃ, ಧನ ಎಂದರ್ಥ. ಶ್ರು ಧಾತುವಿನ ಮುಂದೆ **ಸರ್ವಧಾತುಭ್ಯೋಽಸುನ್** ಎಂಬುದರಿಂದ ಅಸುನ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಶ್ರುವಿನ ಉಕಾರಕ್ಕೆ ಗುಣ ಓಕಾರ. **ಏಚೋಽಯವಾಯಾವಃ** (ಪಾ. ಸೂ. ೬-೧-೭೮) ಎಂಬುದರಿಂದ ಅವ್ ಆದೇಶ ಶ್ರವಸ್. ಇದರ ಮುಂದೆ ಬರುವ ದ್ವಿತೀಯಾ ಏಕವಚನ ಅಮ್ ಪ್ರತ್ಯಯಕ್ಕೆ **ಸ್ವ-ಮೋರ್ನಪುಂಸಕಾತ್** (ಪಾ. ಸೂ. ೭-೧-೨೩) ನಪುಂಸಕಲಿಂಗದ ಶಬ್ದದ ಮುಂದೆ ಇರುವ ಸು ಅಮ್ ಇವುಗಳಿಗೆ ಲುಕ್ ಬರುವುದು ಎಂಬುದರಿಂದ ಲುಕ್ (ಲೋಪ) ರುತ್ವವಿಸರ್ಗಗಳು, ಶ್ರವಃ ಎಂದಾಗುವುದು. ಪ್ರತ್ಯಯವು ನಿತ್ತಾದ್ದರಿಂದ ಆದ್ಯುದಾತ್ತ.

**ಬೃಹತ್**--ಪ್ರಾತಿಪದಿಕಸ್ವರ.

**ವಿಶ್ವಾಯುಃ**—ವಿಶ್ವಂ ಆಯುರ್ಯಸ್ಮಿನ್ ಧನೇ ತತ್ ವಿಶ್ವಶಬ್ದವು **ಅಶೂಪ್ರುಷಿ** (ಉ. ಸೂ. ೧-೧೪೯) ಇತ್ಯಾದಿ ಸೂತ್ರದಿಂದ **ಕ್ವನ್** ಪ್ರತ್ಯಯಾಂತ. ಪ್ರತ್ಯಯವು ನಿತ್ತಾದ್ದರಿಂದ ವಿಶ್ವ ಎಂಬುದು ಆದ್ಯುದಾತ್ತ. ಬಹುವ್ರೀಹಿಸಮಾಸದಲ್ಲಿ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಪ್ರಾಪ್ತವಾದರೆ **ಪರಾದಿಶ್ಛಂದಸಿ ಬಹುಲಂ** (ಪಾ. ಸೂ ೬-೨-೧೯೯) ಎಂಬುದರಿಂದ ಪೂರ್ವಪದಕ್ಕೆ ಅಂತೋದಾತ್ತ ಸ್ವರ ಬರುವುದು. ವಿಶ್ವ+ಆಯುಃ ಎಂಬಲ್ಲಿ ಸವರ್ಣದೀರ್ಘದಿಂದ ಏಕಾದೇಶವಾಗಿ ಬಂದ ಆ ಎಂಬುದು **ಏಕಾದೇಶ ಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಎಂಬುದರಿಂದ ಉದಾತ್ತ.

**ಅಕ್ಷಿತಂ**—**ಕ್ಷಿ ಕ್ಷಯೇ** ಎಂಬ ಅಂತರ್ಭಾವಿತಣಿಚ್‌ಪ್ರತ್ಯಯಾರ್ಥಕವಾದ ಧಾತುವಿನ ಮುಂದೆ ಕರ್ಮಣಿ **ಕ್ತ** ಪ್ರತ್ಯಯ. ಕರ್ಮಾರ್ಥವು ಣಿಚ್‌ಪ್ರತ್ಯಯದ ಅರ್ಥ. ಆದ್ದರಿಂದ **ನಿಷ್ಠಾಯಾಮಣ್ಯದರ್ಥೇ** (ಪಾ. ಸೂ. ೬-೪-೬೦) ಎಂಬಲ್ಲಿ ಅಣ್ಯದರ್ಥೇ ಎಂದು ನಿಷೇಧವಿರುವುದರಿಂದ ದೀರ್ಘ ಬರುವುದಿಲ್ಲ. ದೀರ್ಘ ಬರದೇ ಇರುವುದರಿಂದಲೇ **ಕ್ಷಿಯೋದೀರ್ಘಾತ್** (ಪಾ. ಸೂ. ೮-೨-೪೬) ಎಂಬುದರಿಂದ ಕ್ತ ಪ್ರತ್ಯಯದ ತಕಾರಕ್ಕೆ ನಕಾರ ಬರುವುದಿಲ್ಲ. ನಞ್ ನೊಂದಿಗೆ ನಞ್‌ಸಮಾಸ ಬಂದರೆ **ತತ್ಪುರುಷೇ ತುಲ್ಯಾರ್ಥ** (ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುವುದು. ॥ ೭ ॥

॥ ಸಂಹಿತಾಪಾಠಃ ॥

ಅಸ್ಮೇ ಧೇಹಿ ಶ್ರವೋ ಬೃಹದ್ದ್ಯುಮ್ನಂ ಸಹಸ್ರಸಾತಮಂ ।
ಇಂದ್ರ ತಾ ರಥಿನೀರಿಷಃ ॥ ೮ ॥

॥ ಪದಪಾಠಃ ॥

ಅಸ್ಮೇ ಇತಿ । ಧೇಹಿ । ಶ್ರವಃ । ಬೃಹತ್ । ದ್ಯುಮ್ನಂ । ಸಹಸ್ರಽಸಾತಮಂ ॥
ಇಂದ್ರ । ತಾಃ । ರಥಿನೀಃ । ಇಷಃ ॥ ೮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಬೃಹಚ್ಛ್ರವೋ ಮಹತೀಂ ಕೀರ್ತಿಮಸ್ಮೇ ಧೇಹಿ । ಅಸ್ಮಭ್ಯಂ ಪ್ರಯಚ್ಛ । ತಥಾ ಸಹಸ್ರಸಾತಮಮತಿಶಯೇನ ಸಹಸ್ರಸಂಖ್ಯಾದಾನೋಪೇತಂ ದ್ಯುಮ್ನಂ ಧನಮಸ್ಮೇ ಧೇಹಿ । ತಥಾ ತಾ ವ್ರೀಹಿಯವಾದಿರೂಪೇಣ ಪ್ರಸಿದ್ಧಾ ರಥಿನೀರ್ಬಹುರಥೋಪೇತಾ ಇಷೋಽನ್ನಾನ್ಯಸ್ಮೇ ಧೇಹಿ ॥ ಅಸ್ಮೇ ಸುಪಾಂ ಸುಲುಗಿತ್ಯಾದಿನಾ ಶೇ ಆದೇಶಃ । ಧೇಹಿ । ಘ್ವಸೋರೇದ್ಧಾವಭ್ಯಾಸಲೋಪಶ್ಚ । ಪಾ. ೬-೪-೧೧೯ ಇತ್ಯೇತ್ವಾಭ್ಯಾಸಲೋಪೌ । ಶ್ರೂಯತ ಇತಿ ಶ್ರವಃ । ಅಸುನೋ ನಿತ್ತ್ವಾದಾದ್ಯುದಾತ್ತತ್ವಂ । ಸಹಸ್ರಂ ಸುನುತೇ ದದಾತೀತಿ ಸಹಸ್ರಸಾಃ । ಷಣು ದಾನೇ । ಜನಸನಖನಕ್ರಮಗಮೋ ವಿಟ್ । ಪಾ. ೩-೨-೬೭ । ವಿಡ್ವನೋರನುನಾಸಿಕಸ್ಯಾತ್ । ಪಾ. ೬-೪-೪೧ । ಇತ್ಯಾಕಾರಾದೇಶಃ । ಧಾತುಸ್ವರೇಣಾಂತೋದಾತ್ತಃ । ಪುನಃ ಕೃದುತ್ತರಪದಪ್ರಕೃತಿಸ್ವರೇಣ ಸ ಏವ ಶಿಷ್ಯತೇ । ರಥಾ ಆಸಾಂ ಸಂತೀತಿ ರಥಿನ್ಯ ಇತಿ ಪ್ರತ್ಯಯಸ್ಯಾದ್ಯುದಾತ್ತತ್ವಂ । ಋನ್ನೇಭ್ಯೋ ಙೀಪ್ । ಪಾ. ೪-೧-೫ । ಸ ಚ ಪಿತ್ತ್ವಾದನುದಾತ್ತಃ । ಇಷೋ ಯೌಗಿಕತ್ವೇ ಧಾತುಸ್ವರಃ । ರೂಢತ್ವೇ ಪ್ರಾತಿಪದಿಕಸ್ವರಃ ॥

॥ ಪ್ರತಿಪದಾರ್ಥ ॥

(ಹೇ) ಇಂದ್ರ—ಎಲೈ ಇಂದ್ರನೇ । ಅಸ್ಮೇ—ನಮಗೆ । ಬೃಹತ್—ಬಹಳವಾದ । ಶ್ರವಃ—ಕೀರ್ತಿಯನ್ನೂ । ಸಹಸ್ರಸಾತಮಂ—ಸಾವಿರಾರು ಪಾಲು ಹೆಚ್ಚಾಗಿರುವ (ಅತಿಶಯವಾದ) । ದ್ಯುಮ್ನಂ—ಧನವನ್ನೂ । ರಥಿನೀಃ—ರಥ ಅಥವಾ ಗಾಡಿಗಳಲ್ಲಿ ತರಲ್ಪಡುವ । ತಾಃ—ವ್ರೀಹಿ, ಯವ ಮೊದಲಾದ ಧಾನ್ಯರೂಪದಿಂದಿರುವ । ಇಷಃ--ಅನ್ನವನ್ನೂ । ಧೇಹಿ--ಕೊಡು.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ನಮಗೆ ಅತಿಶಯವಾದ ಕೀರ್ತಿಯನ್ನೂ, ಸಾವಿರಗಟ್ಟಲೆ ಧನವನ್ನೂ, ಗಾಡಿಗಳ (ರಥಗಳ) ತುಂಬ ಧಾನ್ಯ ಮೊದಲಾದ ಆಹಾರವನ್ನೂ ಕೊಡು.

## English Translation

O Indra, grant us great fame, and wealth acquired in a thousand ways and those (articles) of food (which are brought from the field) in carts.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು ಸುಲಭವಾಗಿ ತಿಳಿಯುವಂತೆ ಇದೆ. ವಿಶೇಷವಾದ ತೊಡಕುಗಳೇನೂ ಇಲ್ಲ.

ಶ್ರವಃ— ಈ ಶಬ್ದಕ್ಕೆ ಯಾಸ್ಕರು ತಮ್ಮ ನಿರುಕ್ತದಲ್ಲಿ ಎರಡು ಮೂರು ವಿಧವಾದ ಅರ್ಥವನ್ನು ಕೊಟ್ಟಿರುವರು. ಮಘಂ ರೇಕ್ಣಃ ಮೊದಲಾದ ಇಪ್ಪತ್ತೆಂಟು ಧನನಾಮಗಳ ಮಧ್ಯದಲ್ಲಿ ಶ್ರವಃ ಎಂಬ ಶಬ್ದವು ಪಠಿತವಾಗಿರುವುದರಿಂದ ಇದಕ್ಕೆ ಧನವೆಂಬ ಅರ್ಥವೂ ಆಗುವುದು. (ನಿ ೩-೯) ಉತ ಸ್ಮೈನಂ (ಋ. ಸಂ. ೪-೩೮-೫) ಎಂಬ ಋಕ್ಕಿನ ಅರ್ಥವಿವರಣೆ ಮಾಡುವಾಗ ಶ್ರವಶ್ಚಾಪಿ ಪಶುಮಚ್ಚ ಯೂಥಂ ಪ್ರಶಂಸಾಂ ಚ ಯೂಥಂ ಧನಂ ಚ ಯೂಥಂ ಚೇತಿ ವಾ— ಎಂದರೆ ಶ್ರವಶಬ್ದಕ್ಕೆ ಪ್ರಶಂಸೆ (ಕೀರ್ತಿ) ಅಥವಾ ಧನವೆಂದೂ, (ನಿ ೪-೨೪) ಅಮನ್ನಾಸ್ತ್ರೋಣೀವಾನ್ (ಋ. ಸಂ. ೧-೧೨೬-೧) ಎಂಬ ಋಕ್ಕಿನ ನಿರುಕ್ತದಲ್ಲಿ ಶ್ರವ ಇಚ್ಛಮಾನಃ ಎಂಬ ಶಬ್ದಗಳಿಗೆ ಪ್ರಸಂಸಾಮಿಚ್ಛಮಾನಃ ಎಂದೂ (ನಿ ೯-೧೧). ಶ್ರವೋ ಮಹೇ ವಂದಮಾನಾಯ (ಋ. ಸಂ. ೧೦-೫೦-೧) ಎಂಬ ಋಕ್ಕಿನ ಅರ್ಥವಿವರಣೆಯಲ್ಲಿ ಶ್ರವಃ ಎಂಬ ಶಬ್ದಕ್ಕೆ ಮಹಚ್ಛ ಶ್ರವಣೀಯಂ ಯಶಃ ಎಂದೂ ಅರ್ಥ ಮಾಡಿದಾರೆ (ನಿ. ೧೧-೧೦) ಇವಲ್ಲದೆ ಪ್ರಸಕ್ತವಾದ ಈ ಋಕ್ಕಿನಲ್ಲಿ ದ್ಯುಮ್ನಂ ಎಂಬ ಧನವಾಚಕಶಬ್ದದ ಪ್ರಯೋಗವಿರುವುದರಿಂದ ಶ್ರವಃ ಎಂಬ ಶಬ್ದಕ್ಕೆ ಧನವೆಂಬ ಅರ್ಥವನ್ನು ಹೇಳಿದಲ್ಲಿ ದ್ವಿರುಕ್ತಿದೋಷವುಂಟಾಗುವುದೆಂದು ಕೀರ್ತಿ ಎಂಬ ಅರ್ಥವನ್ನು ಹೇಳಿರುವುದು ಯುಕ್ತವಾಗಿಯೇ ಇದೆ.

ಸಹಸ್ರಸಾತಮಂ— ಸಹಸ್ರಂ ಸನುತೇ ದದಾತೀತಿ ಸಹಸ್ರಸಾಃ । ಷಣು ದಾನೇ । ಎಂಬರೆ ಷಣು ಧಾತುವಿಗೆ ಕೊಡುವುದು ಎಂದರ್ಥವು. ಆದುದರಿಂದ ಸಹಸ್ರಸಾತಮಂ ಎಂಬ ಶಬ್ದಕ್ಕೆ ಸಾವಿರಗಟ್ಟಲೆ ಎಂದರೆ ಅತಿಶಯವಾಗಿ, ಬಹಳವಾಗಿ ಕೊಡುವ ಎಂದರ್ಥವು.

ತಾಃ— ಸ್ತ್ರೀಲಿಂಗ ತಚ್ಛಬ್ದದ ದ್ವಿತೀಯಾಬಹುವಚನಾಂತವಾದ ಈ ಶಬ್ದವು ಇಷಃ ಎಂಬ ಶಬ್ದಕ್ಕೆ ವಿಶೇಷಣವು. ಈ ಋಕ್ಕಿನಲ್ಲಿ ಈ ಶಬ್ದದ ಅವಶ್ಯಕತೆಯೇನೂ ಕಂಡುಬರುವುದಿಲ್ಲ. ಪ್ರಾಯಶಃ ಪಾದಪೂರಣಕ್ಕಾಗಿ ಉಪಯೋಗಿಸಿರಬಹುದು.

ರಥಿನೀಃ--ರಥಾ ಆಸಾಂ ಸಂತೀತಿ ರಥಿನ್ಯಃ--ರಥಸಂಬಂಧವಾದ, ರಥಗಳಲ್ಲಿ ಅಥವಾ ಗಾಡಿಗಳಲ್ಲಿ ತುಂಬಿ ತರುವಷ್ಟು ಎಂದರೆ ಬಹು ಹೆಚ್ಚಾದ ಎಂದರ್ಥವು. ಒಬ್ಬ ಮನುಷ್ಯನು ತಲೆಯಮೇಲೆ ಹೊತ್ತುತರುವ ಧಾನ್ಯವು ಅಷ್ಟೇನೂ ಹೆಚ್ಚಾಗಿರುವುದಿಲ್ಲ. ಗಾಡಿಯಲ್ಲಿ ಇನ್ನೂ ಹೆಚ್ಚಾಗಿ ಎಂದರೆ ಎಷ್ಟೋ ಜನರು ಹೊರುವಷ್ಟು ಧಾನ್ಯವನ್ನು ತುಂಬಬಹುದು. ಆದುದರಿಂದ ಗಾಡಿಯಲ್ಲಿ ತುಂಬುವಷ್ಟು ಧಾನ್ಯವೆಂದರೆ ಬಹು ಹೆಚ್ಚಾದ ಧಾನ್ಯವು.

**ಇಷಃ**—ಈ ಶಬ್ದಕ್ಕೆ ಅನ್ನವೆಂದು ಅರ್ಥವಾದರೂ ಇಲ್ಲಿ ಸಾಮಾನ್ಯವಾದ ಆಹಾರ ಅಥವಾ ಧಾನ್ಯ ವೆಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದು. ರಥಿನೀಃ ಎಂಬ ಇದರ ವಿಶೇಷಣಪದವು ಈ ಅರ್ಥವನ್ನು ಸಮರ್ಥಿಸುವುದು.

|| ವ್ಯಾಕರಣಪ್ರಕ್ರಿಯಾ ||

**ಅಸ್ಮೇ**—ಅಸ್ಮದ್ ಶಬ್ದದ ಮುಂದೆ ಇರುವ ಚತುರ್ಥೀಬಹುವಚನಕ್ಕೆ **ಸುಪಾಂ ಸುಲುಕ್** (ಪಾ.ಸೂ ೭-೧-೩೯) ಎಂಬುದರಿಂದ ಶೇ ಆದೇಶ.

**ಧೇಹಿ**—ಡುಧಾಞ್ ಧಾರಣಪೋಷಣಯೋಃ ಧಾತು. ಇದರ ಮುಂದೆ ಲೋಟ್ ಪರಸ್ಮೈಪದ ಮಧ್ಯಮಪುರುಷ ಏಕವಚನ ಸಿಪ್, **ಸೇರ್ಹ್ಯಪಿಚ್ಚ** (ಪಾ. ಸೂ. ೩-೪-೮೭) ಎಂಬುದರಿಂದ ಸಿ ಗೆ ಹಿ ಆದೇಶ. ಶಪ್ ವಿಕರಣ. ಅದಕ್ಕೆ **ಜುಹೋತ್ಯಾದಿಭ್ಯಃಶ್ಲುಃ** (ಪಾ. ಸೂ. ೨-೪-೭೫) ಎಂಬುದರಿಂದ ಶ್ಲು (ಲೋಪ). **ಶ್ಲೌ**—(ಪಾ.ಸೂ. ೬-೧-೧೦) ಎಂಬುದರಿಂದ ಧಾತುವಿಗೆ ದ್ವಿತ್ವ. ಧಾ ಧಾ+ಹಿ **ಘ್ವಸೋರೇದ್ಧಾವಭ್ಯಾಸಲೋಪಶ್ಚ** (ಪಾ ಸೂ. ೬-೪-೧೧೯) ಹಿ ಪರದಲ್ಲಿರುವಾಗ ಘು ಸಂಜ್ಞಕವಾದ ಧಾತು, ಅಸ್ ಧಾತು ಇವುಗಳಿಗೆ ಏತ್ವ ಬರುವುದು, ಅಭ್ಯಾಸಕ್ಕೆ ಲೋಪವೂ ಬರುವುದು ಎಂಬುದರಿಂದ ಅಭ್ಯಾಸವಾದ ಮೊದಲನೆಯ ಧಾ ಗೆ ಲೋಪ ಎರಡನೆಯದರ ಆಕಾರಕ್ಕೆ ಏತ್ವ ಬಂದರೆ ಧೇಹಿ ಎಂದಾಗುವುದು. **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಅನುದಾತ್ತ.

**ಶ್ರವಃ**—ಅಸುನ್ ಪ್ರತ್ಯಯಾಂತ. ನಿತ್ಸ್ವರದಿಂದ ಆದ್ಯುದಾತ್ತ.

**ಸಹಸ್ರಸಾತಮಂ**—ಸಹಸ್ರಂ ಸನುತೇ ದದಾತಿ ಇತಿ ಸಹಸ್ರಸಾಃ, ಷಣುದಾನೇ ಧಾತು. **ಧಾತ್ವಾದೇಃ ಷಃಸಃ** ಎಂಬುದರಿಂದ ಷಕಾರಕ್ಕೆ ಸಕಾರ. **ಜನಸನಖನಕ್ರಮಗಮೋವಿಟ್** (ಪಾ. ಸೂ. ೩-೨-೬೭) ಈ ಧಾತುಗಳ ಮುಂದೆ ಛಂದಸ್ಸಿನಲ್ಲಿ ವಿಟ್ ಪ್ರತ್ಯಯ ಬರುವುದು ಎಂಬುದರಿಂದ ವಿಟ್ ಪ್ರತ್ಯಯ. **ವಿಡ್ವನೋರನುನಾಸಿಕಸ್ಯಾತ್** (ಪಾ. ಸೂ. ೬-೪-೪೧) ವಿಟ್ ವನ್ ಈ ಪ್ರತ್ಯಯಗಳು ಪರದಲ್ಲಿರುವಾಗ ಅನುನಾಸಿಕಕ್ಕೆ ಆಕಾರಾದೇಶ ಬರುವುದು. ವಿಟ್ ಪ್ರತ್ಯಯದ ಎಲ್ಲ ವರ್ಣಗಳಿಗೂ ಲೋಪ. ಆಕಾರಾದೇಶ ಬಂದರೆ ಸಹಸ್ರಸಾ ಎಂದಾಗುವುದು. ಸಾ ಎಂಬುದು ಧಾತುಸ್ವರದಿಂದ ಅಂತೋದಾತ್ತ. ಸಮಾಸ ಬಂದನಂತರವೂ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬ ಕೃದುತ್ತರಪದಪ್ರಕೃತಿಸ್ವರದಿಂದ ಅದೇ ನಿಲ್ಲುವುದು. ಅತಿಶಯೇನ ಸಹಸಸ್ರಾಃ ಎಂದು ವಿವಕ್ಷೆ ಮಾಡಿದಾಗ **ಅತಿಶಾಯನೇ ತಮಬಿಷ್ಠನೌ** (ಪಾ. ಸೂ. ೫-೩-೫೫) ಎಂಬುದರಿಂದ ತಮಪ್. ಅದು ಪಿತ್ತಾದ್ದರಿಂದ ಅನುದಾತ್ತ.

**ರಥಿನೀಃ**—ರಥಾಃ ಆಸಾಂ ಸಂತಿ ಇತಿ ರಥಿನ್ಯಃ **ಅತಇನಿಠನೌ** (ಪಾ.ಸೂ. ೫-೨-೧೧೫) ಎಂಬುದರಿಂದ ಇನಿ ಪ್ರತ್ಯಯ, **ಯಸ್ಯೇತಿ ಚ** (ಪಾ. ಸೂ. ೬-೪-೧೪೮) ಎಂಬುದರಿಂದ ರಥಶಬ್ದದ ಅಕಾರಕ್ಕೆ ಲೋಪ. ರಥಿನ್ ಪ್ರತ್ಯಯಸ್ವರದಿಂದ ಇನ್ ಪ್ರತ್ಯಯವು ಆದ್ಯುದಾತ್ತ. ರಥಿನ್ ಎಂಬುದು ನಕಾರಾಂತ. ಆದ್ದರಿಂದ **ಋನ್ನೇಭ್ಯೋಙೀಪ್** (ಪಾ. ಸೂ. ೪-೧-೫) ಸ್ತ್ರೀತ್ವ ತೋರುವಾಗ ಋಕಾರಾಂತ, ನಕಾರಾಂತ ಶಬ್ದಗಳ ಮುಂದೆ ಙೀಪ್ ಬರುವುದು ಎಂಬುದರಿಂದ ಙೀಪ್ ಬರುವುದು. ಅದು ಪಿತ್ತಾದ್ದರಿಂದ ಅನುದಾತ್ತ.

**ಇಷಃ**—ಯೌಗಿಕ ಎಂದು ಇಟ್ಟುಕೊಂಡರೆ ಧಾತುಸ್ವರದಿಂದ ಇ ಉದಾತ್ತ. ರೂಢವೆಂದು ಇಟ್ಟುಕೊಂಡರೆ ಪ್ರಾತಿಪದಿಕಸ್ವರದಿಂದ ಉದಾತ್ತ. || ೮ ||

॥ ಸಂಹಿತಾಪಾಠಃ ॥

ವಸೋರಿಂದ್ರಂ ವಸುಪತಿಂ ಗೀರ್ಭಿರ್ಗೃಣಂತ ಋಗ್ಮಿಯಂ ॥
ಹೋಮ ಗಂತಾರಮೂತಯೇ ॥ ೯ ॥

॥ ಪದಪಾಠಃ ॥

ವಸೋಃ । ಇಂದ್ರಂ । ವಸುಽಪತಿಂ । ಗೀಃಽಭಿಃ । ಗೃಣಂತಃ । ಋಗ್ಮಿಯಂ ॥
ಹೋಮ । ಗಂತಾರಂ । ಊತಯೇ ॥ ೯ ॥

॥ ಸಾಯಣಭಾಷ್ಯಂ ॥

ವಸೋರ್ವಸುನೋಽಸ್ಮದೀಯಸ್ಯ ಧನಸ್ಯೋತಯೇ ರಕ್ಷಾರ್ಥಮಿಂದ್ರಂ ಹೋಮ । ವಯಮಾಹ್ವಯಾಮಃ । ಕಿಂ ಕುರ್ವಂತಃ । ಗೀರ್ಭಿಃ ಸ್ತುತಿಭಿರ್ಗೃಣಂತಃ ಸ್ತುವಂತಃ । ಕೀದೃಶಮಿಂದ್ರಂ । ವಸುಪತಿಂ ಧನಪಾಲಕಂ ಋಗ್ಮಿಯಂ ಋಚಾಂ ಮಾತಾರಂ ಗಂತಾರಂ ಯಾಗದೇಶೇ ಗಮನಶೀಲಂ ॥ ವಸೋಃ। ವಸ ನಿವಾಸೇ। ಶೄಸ್ವೃಸ್ನಿಹೀತ್ಯಾದಿನಾ। ಉ ೧-೧೧ । ಉಪ್ರತ್ಯಯಃ । ನಿದಿತ್ಯನುವೃತ್ತೇರ್ನಿತ್ತ್ವಾದಾದ್ಯುದಾತ್ತಃ । ವಸುಪತಿಂ । ಸಮಾಸಾಂತೋದಾತ್ತತ್ವೇ ಪ್ರಾಪ್ತೇ ಪತ್ಯಾವೈಶ್ವರ್ಯೇ । ಪಾ. ೬-೨-೧೮ । ಇತಿ ಪೂರ್ವಪದಪ್ರಕೃತಿಸ್ವರತ್ವಂ । ಗೀರ್ಭಿಃ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಗೃಣಂತಃ । ಗೄ ಶಬ್ದೇ । ಲಟಃ ಶತೃ । ಕ್ರ್ಯಾದಿಭ್ಯಃ ಶ್ನಾ । ಪಾ. ೩-೧-೮೧ । ಶತುಃ ಸಾರ್ವಧಾತುಕಮಪಿದಿತಿ ಙಿತ್ತ್ವಾತ್ ಶ್ನಾಭ್ಯಸ್ತಯೋರಾತಃ । ಪಾ. ೬-೪-೧೧೨ । ಇತ್ಯಾಕಾರಲೋಪಃ । ಶತುರಕಾರಸ್ಯ ಪ್ರತ್ಯಯಸ್ವರೇಣೋದಾತ್ತತ್ವಂ । ಋಗ್ಮಿಯಂ । ಋಚೋ ಮಿಮೀತ ಇತ್ಯೃಗ್ಮೀಃ । ತಮೃಗ್ಮಿಯಂ । ಮಾಙ್ ಮಾನೇ ಶಬ್ದೇ ಚ । ಕ್ವಿಪ್ಚೇತಿ ಕ್ವಿಪ್ । ಘುಮಾಸ್ಥೇತ್ಯಾದಿನಾ । ಪಾ. ೬-೪-೬೬ । ಈತ್ವಂ । ಚಕಾರಸ್ಯ ಚೋಃ ಕುಃ । ಝಲಾಂ ಜಶೋಂತೇ । ಪಾ- ೮ ೨-೩೯ । ಇತಿ ಜಶ್ತ್ವಂ । ಗಕಾರಃ ದ್ವಿತೀಯೈಕವಚನೇಽಚಿ ಶ್ನುಧಾತ್ವಿತ್ಯಾದಿನಾ । ಪಾ. ೬-೪-೭೭ । ಇಯಙಾದೇಶಃ । ಏರನೇಕಾಚ ಇತಿ ಯಣಾದೇಶಃ ।ಪಾ. ೬-೪-೮೨ । ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತ ಇತಿ ನ ಭವತಿ । ಕೃದುತ್ತರಪದಪ್ರಕೃತಿಸ್ವರೇಣೇಕಾರ ಉದಾತ್ತಃ । ಹೋಮ । ಆಹ್ವಯಾಮಃ । ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ । ಲಟ್ । ತಸ್ಯಾಸ್ಮದೋ ಬಹುತ್ವೇಽಪಿ ವ್ಯತ್ಯಯೇನ ಮಿಪ್ । ಇಕಾರಸ್ಯ ವ್ಯತ್ಯಯೇನಾಕಾರಃ । ಶಪೋ ಬಹುಲಂ ಛಂದಸೀತಿ ಲುಕ್ । ಬಹುಲಂ ಛಂದಸಿ । ಪಾ. ೬-೧-೩೪ । ಇತಿ ಹ್ವಃ ಸಂಪ್ರಸಾರಣಂ ಪರಪೂರ್ವತ್ವಂ ಗುಣಃ । ಧಾತೋಃ । ಪಾ. ೬-೧-೧೬೨ । ಇತ್ಯೋಕಾರ ಉದಾತ್ತಃ । ಮಿಪಃ ಪಿತ್ಸ್ವರೇಣಾನುದಾತ್ತತ್ವಂ । ಗಂತಾರಂ। ಗಮ್ಲೃ ಸೃಪ್ಲೃ ಗತೌ । ತಾಚ್ಛೀಲ್ಯೇ ತೃನ್ । ನಿತ್ತ್ವಾದಾದ್ಯುದಾತ್ತಃ। ಊತಯೇ । ಊತಿಯೂತೀತ್ಯಾದಿನಾ ಕ್ತಿನ್ನುದಾತ್ತೋ ನಿಪಾತಿತಃ ॥

॥ ಪ್ರತಿಪದಾರ್ಥ ॥

**ವಸೋಃ**—(ನಮ್ಮ) ಧನದ । **ಊತಯೇ**—ರಕ್ಷಣೆಗಾಗಿ । **ವಸುಪತಿಂ**—ಧನಾದ್ಯೈಶ್ವರ್ಯಗಳಿಗೆ ಸ್ವಾಮಿಯಾದ । **ಋಗ್ಮಿಯಂ**—ಋಕ್ಕುಗಳಿಂದ ಸ್ತುತಿಸಲ್ಪಡಲು ಯೋಗ್ಯನಾದ । **ಗಂತಾರಂ**—ಯಜ್ಞಭೂಮಿಗೆ (ಯಜಮಾನನ ರಕ್ಷಣಾರ್ಥವಾಗಿ) ಹೋಗುವವನಾದ । **ಇಂದ್ರಂ**—ಇಂದ್ರನನ್ನು । **ಗೀರ್ಭಿಃ**—ವಾಕ್ಯರೂಪವಾದ ಸ್ತುತಿಗಳಿಂದ । **ಗೃಣಂತಃ**—ಸ್ತೋತ್ರಮಾಡುತ್ತಾ । **ಹೋಮ**—ಆಹ್ವಾನಮಾಡುವೆವು ॥

॥ ಭಾವಾರ್ಥ ॥

ಇಂದ್ರನು ಧನಾದ್ಯೈಶ್ವರ್ಯಗಳಿಗೆ ಸ್ವಾಮಿಯು ; ಋಕ್ಕುಗಳಿಂದ (ವೇದಮಂತ್ರಗಳಿಂದ) ಸ್ತುತಿಸಲ್ಪಡಲು ಯೋಗ್ಯನು; ಯಜ್ಞಭೂಮಿಗೆ ಹೋಗಿ ಯಜಮಾನರಾದಿಯಾದ ಜನರನ್ನು ಕಾಪಾಡುವವನು. ಇಂತಹ ಇಂದ್ರನನ್ನು ನಮ್ಮ ಧನದ ಸಂರಕ್ಷಣೆಗಾಗಿ ಸ್ತೋತ್ರಗಳಿಂದ ಅಹ್ವಾನಮಾಡುವೆವು.

English Translation

Praising with songs we invoke Indra, the lord of riches, who deserves to be praised and who goes (to protect his worshipper).

॥ ವಿಶೇಷವಿಷಯಗಳು ॥

**ವಸುಪತಿಂ**—ವಸು ಎಂದರೆ ಧನ, ಪತಿ ಎಂದರೆ ಸ್ವಾಮಿ, ಧನಕ್ಕೆ ಸ್ವಾಮಿ, ಅಧಿಪತಿ ಎಂದರ್ಥವು. ಈ ಋಕ್ಕಿನಲ್ಲಿ ವಸೋಃ ಎಂಬ ಶಬ್ದವಿದ್ದರೂ ಪುನಃ ವಸುಪತಿಂ ಎಂಬ ಶಬ್ದಪ್ರಯೋಗವಿರುವುದರಿಂದ ದ್ವಿರುಕ್ತಿ ದೋಷವುಂಟಾಗುವುದಿಲ್ಲವೇ ಎಂದರೆ ಇಂತಹ ಕೆಲವು ಪ್ರಯೋಗಗಳು ಋಗ್ವೇದದಲ್ಲಿ ವಿಶೇಷವಾಗಿ ಬಳಕೆಯಲ್ಲಿರುವವು. ಬಳಕೆಯಲ್ಲಿರುವ (ರೂಢಿಯಲ್ಲಿರುವ) ಶಬ್ದಸಮೂಹವನ್ನು ಉಪಯೋಗಿಸುವಾಗ ಅದು ದ್ವಿರುಕ್ತಿದೋಷ ಸಹಿತವಾಗಿರುವುದೇ ಅಥವಾ ವ್ಯಾಕರಣ ನಿಯಮಗಳಿಗೆ ವಿರುದ್ಧವಾಗಿರುವುದೇ ಎಂಬ ಅಂಶವನ್ನು ಗಮನಿಸಬೇಕಾಗಿಲ್ಲ. ರೂಢಿಯಲ್ಲಿದ್ದು ಎಲ್ಲರೂ ಅದನ್ನು ಬಳಸುವುದರಿಂದಲೇ ಅದರ ಪ್ರಯೋಗವು ಯುಕ್ತವೆಂದು ಭಾವಿಸಲ್ಪಡುವುದು. ಏಕೆಂದರೆ ವ್ಯಾಕರಣಾದಿ ನಿಯಮಗಳು ಬಳಕೆಯಲ್ಲಿರುವ ಭಾಷಾಸಂಪ್ರದಾಯವನ್ನನುಸರಿಸಿಯೇ ರಚಿತವಾಗಿವೆ. ವ್ಯಾಕರಣಕ್ಕೆ ಮೂಲವು ಭಾಷೆಯೇ ಹೊರತು ಭಾಷೆಗೆ ಮೂಲ ವ್ಯಾಕರಣವಲ್ಲ. ಇಂತಹ ದ್ವಿರುಕ್ತಿಸಹಿತವಾದ ಪ್ರಯೋಗಗಳು ಋಗ್ವೇದದಲ್ಲಿ ಬೇಕಾದಷ್ಟಿವೆ. ಒಂದೆರಡು ಉದಾಹರಣೆಗಳನ್ನು ಕೊಡುತ್ತೇನೆ—

**ಊರ್ವ ಇವ ಪಪ್ರಥೇ ಕಾಮೋ ಅಸ್ಮೇ ತಮಾ ಪೃಣ ವಸುಪತೇ ವಸೂನಾಂ ॥**

(ಋ. ಸಂ. ೩-೩೦-೧೯)

**ಆ ತೂ ಭರ ಮಾಕಿರೇತತ್ಪರಿಷ್ಠಾದ್ವಿದ್ಮಾ ಹಿತ್ವಾ ವಸುಪತಿಂ ವಸೂನಾಂ ॥**

(ಋ. ಸಂ. ೩-೩೬-೯)

**ಸತ್ರಾಭವೋ ವಸುಪತಿರ್ವಸೂನಾಂ ದತ್ರೇ ವಿಶ್ವಾ ಅಧಿಥಾ ಇಂದ್ರ ಕೃಷ್ಟೀಃ ॥**
(ಋ. ಸಂ. ४-೧೭-೬)

ಇತ್ಯಾದಿ. ಈ ಋಕ್ಕುಗಳೆಲ್ಲವೂ ಇಂದ್ರನ ಪರವಾಗಿಯೇ ಇರುವವು. ಆದುದರಿಂದ ಇಂದ್ರನನ್ನು ವಸುಪತಿ ಎಂದು ಕರೆಯುವುದು ರೂಢಿಯಲ್ಲಿತ್ತೆಂದು ಹೇಳಬಹುದು.

**ಋಗ್ಮಿಯಂ**—ಋಚೋ ಮಿಮಾತ ಇತ್ಯೃಗ್ಮೀಃ । ಋಚಾಂ ಮಾತರಂ—ಋಕ್ಕುಗಳಿಂದ ಅಳೆಯಲ್ಪಡುವವನು ಎಂದರೆ ಸ್ತೋತ್ರಮಾಡಲ್ಪಡುವವನು ಎಂದು ಭಾಷ್ಯಕಾರರು ಅರ್ಥಮಾಡಿರುವರು. ಸ್ಕಂದಸ್ವಾಮಿ—**ಋಗ್ಮಿಯಂ। ಋಚ ಸ್ತುತೌ । ಅರ್ಚನಾ ಋಕ್ । ಸಂಪದಾದಿತ್ವಾತ್ ಕ್ವಿಪ್ । ತದ್ವಂತಂ ಸ್ತುತಿಯೋಗ್ಯಮಿತ್ಯರ್ಥಃ**—ಋಚ ಧಾತುವಿಗೆ ಸ್ತೋತ್ರಮಾಡು ಎಂದರ್ಥವು. ಆದುದರಿಂದ ಋಗ್ಮಿಯಂ ಎಂಬ ಶಬ್ದಕ್ಕೆ ಸ್ತುತಿಸಲ್ಪಡಲು ಯೋಗ್ಯನಾದ ಎಂದು ಹೇಳಿರುವರು. ವೆಂಕಟಮಾಧವರು **ಋಗರ್ಹಂ** ಎಂದರೆ ಋಕ್ಕುಗಳಿಂದ ಸ್ತುತಿಸಲ್ಪಡಲು ಅರ್ಹನಾದ ಎಂದು ಹೇಳಿರುವರು

**ಹೋಮ**—ಆಹ್ವಯಾಮಃ, ಆಹ್ವಾನ ಮಾಡುವೆವು, ಕರೆಯುವೆವು. **ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ** ಎಂಬ ಧಾತುವಿನ ಲಟ್ ರೂಪದ ಉತ್ತಮಪುರುಷಬಹುವಚನವು. ಇದರ ರೂಪಸಿದ್ಧಿಗಾಗಿ ವ್ಯಾಕರಣಭಾಗವನ್ನು ನೋಡಿ.

**ಗಂತಾರಂ**—ಋಕಾರಾಂತ ಗಂತೃಶಬ್ದದ ದ್ವಿತೀಯೈಕವಚನವು. ಹೋಗುವವನು ಎಂದು ಇದರ ಅರ್ಥವು. ಎಲ್ಲಿಗೆ ಹೋಗುವವನು ಎಂದರೆ ಯಜ್ಞಮಾಡುವ ಯಜಮಾನನನ್ನು ರಕ್ಷಿಸುವುದಕ್ಕಾಗಿ ಯಜ್ಞಭೂಮಿಗೆ ಹೋಗುವವನು ಎಂದು ಅರ್ಥವು ಹೊಂದುವಂತೆ **ಯಾಗದೇಶೇ ಗಮನಶೀಲಂ** ಎಂಬ ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು ಭಾಷ್ಯಕಾರರು ಹೇಳಿರುವರು.

॥ ವ್ಯಾಕರಣಪ್ರಕ್ರಿಯಾ ॥

**ವಸೋಃ**—**ವಸ ನಿವಾಸೇ** ಧಾತು. ಇದರಮುಂದೆ **ಶೃ ಸ್ವೃ ಸ್ನಿಹಿ ತ್ರಪ್ಯಸಿ ವಸಿ ಹನಿ ಕ್ಲಿದಿ ಬಂಧಿ ಮನಿಭ್ಯಶ್ಚ** (ಉ ಸೂ. ೧-೧೦) ಶೃ ಹಿಂಸಾಯಾಂ, ಸ್ವೃ ಶಬ್ದೋಪತಾಪಯೋಃ, ಷ್ಣಿಹ ಉಪತಾಪೇ ತ್ರಪೂಷ್ ಲಜ್ಜಾಯಾಂ, ಅಸು ಕ್ಷೇಪಣೇ, ವಸ ನಿವಾಸೇ- ಹನ ಹಿಂಸಾಗತ್ಯೋಃ, ಕ್ಲಿದೂ ಆರ್ದ್ರೀಭಾವೇ, ಬಂಧ ಬಂಧನೇ, ಮನ ಜ್ಞಾನೇ ಈ ಧಾತುಗಳ ಮುಂದೆ ಉ ಪ್ರತ್ಯಯ ಬರುವುದು ಅದು ನಿತ್ತೂ ಆಗುವುದು ಎಂಬುದರಿಂದ ಉ ಪ್ರತ್ಯಯ ಬಂದರೆ ವಸು ಎಂದಾಗುವುದು. ಇದು ನಿತ್ಸ್ವರದಿಂದ ಆದ್ಯುದಾತ್ತ.

**ವಸುಪತಿಂ**—ಸಮಾಸಸ್ಯ (ಪಾ, ಸೂ. ೬-೧ ೨೨೩) ಎಂಬುದರಿಂದ ಅಂತೋದಾತ್ತ ಪ್ರಾಪ್ತವಾದರೆ ಅದನ್ನು ಬಾಧಿಸಿ **ಪತ್ಯಾವೈಶ್ವರ್ಯೇ** (ಪಾ: ಸೂ. ೬-೧-೧೮) ಐಶ್ವರ್ಯಾರ್ಥಕವಾದ ಪತಿಶಬ್ದ ಪರದಲ್ಲಿದ್ದರೆ ಪೂರ್ವಪದವು ಪ್ರಕೃತಿಸ್ವರವನ್ನು ಹೊಂದುವುದು ಎಂಬುದರಿಂದ **ಪೂರ್ವಪದಪ್ರಕೃತಿಸ್ವರ** ಬರುವುದು.

**ಗೀರ್ಭಿಃ**— **ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಯು ಉದಾತ್ತ.

**ಗೃಣನ್ತಃ**—ಗೄಶಬ್ದೇ ಎಂಬ ಧಾತುವಿನ ಮುಂದೆ ಲಟ್. ಅದರ ಸ್ಥಾನದಲ್ಲಿ **ಲಟಶ್ಶತೃಶಾನಚೌ** (ಪಾ. ಸೂ. ೩-೨-೧೨೪) ಎಂಬುದರಿಂದ ಶತೃ **ಕ್ರ್ಯಾದಿಭ್ಯಶ್ಶ್ನಾ** (ಪಾ. ಸೂ. ೩-೧-೮೧) ಎಂಬದರಿಂದ ಶ್ನಾ ವಿಕರಣ. ಗೄ+ನಾ+ಅತ್ **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಶಕಾರೇತ್ಸಂಜ್ಞಕಪ್ರತ್ಯಯವು ಪರದಲ್ಲಿರುವಾಗ ಪೂಞ್ ಪವನೇ ಮೊದಲಾದ ಧಾತುಗಳಿಗೆ ಹ್ರಸ್ವ ಬರುವುದು ಎಂಬುದರಿಂದ ಗೄ ಎಂಬುದಕ್ಕೆ ಹ್ರಸ್ವ ಶತೃಪ್ರತ್ಯಯವು ಅಪಿತ್ತಾದ (ಪಿತ್ತಲ್ಲದ) ಸಾರ್ವಧಾತುಕ, ಆದ್ದರಿಂದ **ಸಾರ್ವಧಾತುಕಮಪಿತ್** (ಪಾ. ಸೂ. ೧-೨-೪) ಅಪಿತ್ತಾದ ಸಾರ್ವಧಾತುಕವು ಙಿತ್ತಾಗುವುದು ಎಂಬುದರಿಂದ ಙಿತ್ತಾಗುವುದು. **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಕಿತ್ತು ಅಥವಾ ಙಿತ್ತು ಆದ ಸಾರ್ವಧಾತುಕಪರದಲ್ಲಿದ್ದರೆ ಶ್ನಾ ಪ್ರತ್ಯಯ, ಅಭ್ಯಸ್ತ ಇವುಗಳ ಆಕಾರಕ್ಕೆ ಲೋಪ ಬರುವುದು ಎಂಬುದರಿಂದ ಶ್ನಾ ಪ್ರತ್ಯಯದ ಆಕಾರಕ್ಕೆ ಲೋಪ. ಗೃ-ನ್ ಅತ್ **ಋವರ್ಣಾನ್ನಸ್ಯ ಣತ್ವಂ ವಾಚ್ಯಂ** (ವಾರ್ತಿಕ. ೮-೪-೧) ಎಂಬುದರಿಂದ ನಕಾರಕ್ಕೆ ಣಕಾರ. ಗೃಣತ್, ಇದರಮುಂದೆ ಜಸ್ ಪ್ರತ್ಯಯವನ್ನಿಟ್ಟರೆ ಉಗಿದಚಾಂ ಸರ್ವನಾಮಸ್ಥಾನೇಽಧಾತೋಃ (ಪಾ. ಸೂ. ೭-೧-೭೦) ಎಂಬುದರಿಂದ ನುಮ್ ಆಗಮ. ರುತ್ವ ವಿಸರ್ಗಗಳು ಗೃಣನ್ತಃ ಎಂದಾಗುವುದು. ಶತೃಪ್ರತ್ಯಯದ ಅಕಾರವು ಪ್ರತ್ಯಯಸ್ವರದಿಂದ ಉದಾತ್ತ.

**ಋಗ್ಮಿಯಮ್**—ಋಚಃ ಮಿಮೀತೇ ಇತಿ ಋಗ್ಮೀಃ, ತಂ ಋಗ್ಮಿಯಂ ಎಂದು ವಿಗ್ರಹ, ಮಾಙ್ ಮಾನೇ ಶಬ್ದೇಚ, ಧಾತು. **ಕ್ವಿಪ್ ಚ** (ಪಾ, ಸೂ. ೩-೨-೭೬) ಎಲ್ಲಾ ಧಾತುಗಳ ಮುಂದೆಯೂ ಕ್ವಿಪ್ ಪ್ರತ್ಯಯ ಬರುವುದು ಎಂಬುದರಿಂದ ಋಚ್ ಶಬ್ದೋಪಪದಕವಾದ ಮಾ ಧಾತುವಿನಮುಂದೆ ಕ್ವಿಪ್ಪ್ರತ್ಯಯ ಪ್ರತ್ಯಯದಲ್ಲಿರುವ ಕಕಾರ, ಇಕಾರ ಪಕಾರಗಳಿಗೆ ಇತ್ಸಂಜ್ಞೆ ಲೋಪ. ಋಚ್+ಮಾ+ವ್. **ಘುಮಾಸ್ಥಾ ಗಾಪಾ ಜಹಾತಿ ಸಾಂ ಹಲಿ** (ಪಾ. ಸೂ. ೬-೪-೬೬) ಹಲಾದಿಯಾದ ಕಿತ್ತು ಙಿತ್ತು ಆದ ಆರ್ಧಧಾತುಕ ಪ್ರತ್ಯಯಪರದಲ್ಲಿರುವಾಗ ಈ ಧಾತುಗಳ ಆಕಾರಕ್ಕೆ ಈಕಾರದೇಶ ಬರುವುದು ಎಂಬುದರಿಂದ ಈ ಆದೇಶ ಋಚ್+ಮೀ-ವ್. **ವೇರಪೃಕ್ತಸ್ಯ** (ಪಾ. ಸೂ. ೬-೧-೬೭) ಏಕವರ್ಣ ಪ್ರತ್ಯಯವಾದ ವಕಾರಕ್ಕೆ ಲೋಪಬರುವುದು ಎಂಬುದರಿಂದ ವ್‌ಗೆ ಲೋಪ, ಯದ್ಯಪಿ ಪರನಿಮಿತ್ತಕವಲ್ಲದೇ ಇರುವುದರಿಂದ ವೇರಪೃಕ್ತಲೋಪವು ಅಂತರಂಗ, ಈತ್ವವು ಪರನಿಮಿತ್ತಕವಾದ್ದರಿಂದ ಬಹಿರಂಗ. ಆದ್ದರಿಂದ **ಅಸಿದ್ಧಂ ಬಹಿರಂಗಮಂತರಂಗೇ** (ಪರಿಭಾ. ೫೦) ಎಂಬುದರಿಂದ **ವೇರಪೃಕ್ತಲೋಪವೇ** ಮೊದಲು ಬರಬೇಕು. ಅದು ಮೊದಲು ಬಂದರೆ **ಸ್ಥಾನಿವದಾದೇಶೋಽನಲ್ವಿಧೌ** (ಪಾ. ಸೂ. ೧-೧-೫೬) ಎಂಬದರಿಂದ ಅಲಾಶ್ರಯಕಾರ್ಯ ಮಾಡುವ ಸ್ಥಾನಿವದ್ಭಾವಪ್ರತಿಷೇಧವಿರುವುದರಿಂದಲೂ **ವರ್ಣಾಶ್ರಯೋನಾಸ್ತಿ ಪ್ರತ್ಯಯಲಕ್ಷಣಂ** (ಪರಿಭಾ. ೨೧) ಅಲಾಶ್ರಯಕಾರ್ಯವನ್ನು ಮಾಡುವಾಗ ಪ್ರತ್ಯಯಲಕ್ಷಣಕ್ಕೆ ಪ್ರತಿಷೇಧ ಬರುವುದು ಎಂದು ನಿಷೇಧವಿರುವುದರಿಂದಲೂ ಹಲಾದಿಕಿದಾರ್ಧಧಾತುಕ ಪರಕತ್ವವು ಸಂಭವಿಸುವುದಿಲ್ಲ. ಆದ್ದರಿಂದ ಛಾಂದಸವಾದ್ದರಿಂದ ಅಂತರಂಗವಾದಾಗ್ಯೂ ವೇರಪೃಕ್ತಲೋಪ ಬರುವುದಿಲ್ಲ ಎಂದು ಇಟ್ಟುಕೊಳ್ಳಬೇಕು. ಅಥವಾ, ವೇರಪೃಕ್ತಲೋಪವನ್ನು ಮೊದಲು ಹೇಳಿ, ಛಾಂದಸವಾದ್ದರಿಂದ ಅಲ್ವಿಧಿಯಲ್ಲಿಯೂ ಕ್ವಚಿತ್ ಸ್ಥಾನಿವದ್ಭಾವ ಬರುವುದು ಎಂದು ವರ್ಣಿಸಬೇಕು. ಚಕಾರಕ್ಕೆ **ಚೋಃ ಕುಃ** (ಪಾ. ಸೂ. ೮-೨-೩೦. ಚವರ್ಗಕ್ಕೆ ಕವರ್ಗವು. ಝಲ್ ಪರದಲ್ಲಿದ್ದರೂ ಪದಾಂತವಿಷಯದಲ್ಲೂ ಬರುವುದು ಎಂಬುದರಿಂದ ಚಕಾರಕ್ಕೆ ಕಕಾರ, **ಝಲಾಂ ಜಶೋಽನ್ತೇ** (ಪಾ. ಸೂ. ೮-೨-೩೯) ಪದದ ಕೊನೆಯಲ್ಲಿರುವ ಝಲ್ ವರ್ಣಗಳಿಗೆ ಜಶ್ ವರ್ಣಗಳು ಬರುವುವು ಎಂಬುದರಿಂದ ಕಕಾರಕ್ಕೆ ಗಕಾರ, ಋಗ್ಮೀ ಶಬ್ದದ ಮುಂದೆ ದ್ವಿತೀಯಾ ವಿಭಕ್ತಿ ಏಕವಚನ ಅಮ್ ಪ್ರತ್ಯಯವನ್ನಿಟ್ಟರೆ ಅಚಿ ಶ್ನು ಧಾತು **ಭ್ರುವಾಂಯ್ವೋರಿಯಙುವಙೌ** (ಪಾ. ಸೂ. ೬-೪-೭೭) ಅಜಾದಿ

ಪ್ರತ್ಯಯ ಪರದಲ್ಲಿರುವಾಗ ಶ್ನು ಪ್ರತ್ಯಯವನ್ನು ಕೊನೆಯಲ್ಲಿ ಹೊಂದಿರುವ ಇವರ್ಣ ಉವರ್ಣಾಂತ ಧಾತುರೂಪವಾದ ಮತ್ತು ಭ್ರೂಶಬ್ದರೂಪವಾದ ಅಂಗಕ್ಕೆ ಇಯಙ್ ಉವಙ್ ಆದೇಶಗಳು ಬರುವುವು. ಇವರ್ಣಕ್ಕೆ ಇಯಙ್, ಉವರ್ಣಕ್ಕೆ ಉವಙ್ ಎಂದು ವಿಭಾಗ, ಅಜಿಶ್ನುಧಾತು ಭ್ರುವಾಂ ಎಂಬುದು ಅಂಗಕ್ಕೆ ವಿಶೇಷಣವಾದ್ದರಿಂದ ತದಂತಲಾಭ ಒಂದರೆ, ಶ್ನು ಪ್ರತ್ಯಯಾಂತಾಂತವಾದ ಅಂಗಕ್ಕೂ, ಇವರ್ಣೋವರ್ಣಾಂತ ಧಾತ್ವಂತಾಂಗಕ್ಕೂ, ಭ್ರೂಶಬ್ದಾಂತಾಂಗಕ್ಕೂ ಇಯಙ್ ಉವಙ್ ಆದೇಶಗಳು ಅಜಾದಿ ಪ್ರತ್ಯಯ ಪರದಲ್ಲಿರುವಾಗ ಬರುವುವು ಎಂದು ಸಿಷ್ಕೃಷ್ಟವಾದ ಸೂತ್ರಾರ್ಥ. ಇದರಿಂದ ಇಯಙಾದೇಶ ಬಂದರೆ ಋಗ್ಮಿಯಮ್ ಎಂದಾಗುವುದು. ಯದ್ಯಪಿ ಇಲ್ಲಿ ಇದಕ್ಕೆ ಅಪವಾದವಾದ **ಏರನೇಕಾಚೋಽಸಂಯೋಗಪೂರ್ವಸ್ಯ** (ಪಾ. ಸೂ. ೬-೪-೮೨) ಧಾತ್ವವಯವ ಮಾತ್ರಾರಬ್ಧ ಸಂಯೋಗಪೂರ್ವಕವಲ್ಲದ ಯಾವ ಇಕಾರವಿದೆಯೋ ಅದನ್ನು ಕೊನೆಯಲ್ಲಿ ಹೊಂದಿರುವ ಯಾವ ಧಾತುವಿದೆಯೋ ಆ ಧಾತುವನ್ನು ಕೊನೆಯಲ್ಲಿ ಹೊಂದಿರುವ ಅನೇಕಾಚ್ಕವಾದ ಅಂಗಕ್ಕೆ ಯಣಾದೇಶಬರುವುದು ಎಂಬುದರಿಂದ ಯಣಾದೇಶಕ್ಕೆ ಪ್ರಾಪ್ತಿ ಇರುವುದು. ಆದರೂ **ಸರ್ವೇವಿಧಯಶ್ಛಂದಸಿ ವಿಕಲ್ಪ್ಯಂತೇ** (ಪರಿಭಾ. ೩೫) ಎಂಬ ಪರಿಭಾಷೆಯಿಂದ ಯಣ್ವಿಧಿಯೂ ಛಂದಸ್ಸಿನಲ್ಲಿ ವಿಕಲ್ಪವಾದ್ದರಿಂದ ಇಲ್ಲಿ ಬರುವುದಿಲ್ಲ. **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬ ಕೃದುತ್ತರಪದ ಪ್ರಕೃತಿಸ್ವರದಿಂದ ಇಕಾರವು ಉದಾತ್ತ.

**ಹೋಮ—** ಆಹ್ವಯಾಮಃ ಎಂದು ಅರ್ಥ 'ಹ್ವೇಞ್ ಸ್ಪರ್ಧಾಯಾಂ ಶಬ್ದೇಚ' ಧಾತು. ಇದರ ಮುಂದೆ ಲಟ್, ಇದರ ಸ್ಥಾನದಲ್ಲಿ ಪರಸ್ಮೈಪದ ಉತ್ತಮಪುರುಷ ಏಕವಚನ ಮಿಪ್. ಇಲ್ಲಿ ಗೃಣನ್ತಃ ಎಂದು ಇರುವುದರಿಂದ ಅಸ್ಮದ್ ಶಬ್ದದ ಬಹುವಚನವಾದ ವಯಂ ಎಂಬುದು ಕರ್ತೃಪದವಾಗುವುದು, ಆದ್ದರಿಂದ ಬಹುವಚನವಾದ ಮಸ್ ಆದೇಶಬರುವುದು ಉಚಿತ. ಆದರೂ ವ್ಯತ್ಯಯದಿಂದ ಏಕವಚನ ಮಿಪ್ ಬಂದಿರುವುದು. ಮಿಯ ಇಕಾರಕ್ಕೆ ವ್ಯತ್ಯಯದಿಂದ ಅಕಾರ. ಶಪ್ ವಿಕರಣಕ್ಕೆ **ಬಹುಲಂಛಂದಸಿ** ( ಪಾ. ಸೂ. ೨-೪-೭೩ ) ಎಂಬುದರಿಂದ ಲುಕ್ ಹ್ವೇ+ಮ **ಹ್ವಸ್ಸಂಪ್ರಸಾರಣಮ್** (ಪಾ. ಸೂ. ೬-೧-೩೨) ಎಂಬಲ್ಲಿರುವ 'ಬಹುಲಂ ಛಂದಸಿ (ಪಾ. ಸೂ. ೬-೧-೩೪) ಎಂಬುದರಿಂದ ಸಂಪ್ರಸಾರಣ=ವಕಾರಕ್ಕೆ ಉಕಾರ **ಸಂಪ್ರಸಾರಣಾಚ್ಚ** (ಪಾ. ಸೂ. ೬-೧-೧೦೮) ಎಂಬುದರಿಂದ ಉ+ಏಗಳ ಸ್ಥಾನದಲ್ಲಿ ಪೂರ್ವರೂಪ ಏಕಾದೇಶ ಹು+ಮ **ಸಾರ್ವಧಾತುಕಾರ್ಧಧಾತುಕಯೋಃ—**(ಪಾ. ಸೂ. ೭-೩-೮೪) ಎಂಬುದರಿಂದ ಗುಣ. ಹೋಮ ಎಂದಾಗುವುದು. ಓಕಾರವು **ಧಾತೋಃ** (ಪಾ. ಸೂ. ೬-೧-೧೬೨) ಎಂಬುದರಿಂದ ಉದಾತ್ತ. ಮಿಪ್ಪು ಪಿತ್ತಾದ್ದರಿಂದ ಮಕಾರ ಅನುದಾತ್ತ.

**ಗನ್ತಾರಂ—** ಗಮ್ಲೃ ಸೃಪ್ಲೃ ಗತೌ ಧಾತು. ಇದರ ಮುಂದೆ **ತೃನ್** (ಪಾ. ಸೂ. ೩-೨-೧೩೫) ಎಂಬುದರಿಂದ ತಚ್ಛೀಲ ಎಂಬ ಅರ್ಥದಲ್ಲಿ ತೃನ್ ಪ್ರತ್ಯಯ- ಪ್ರತ್ಯಯವು ನಿತ್ತಾದ್ದರಿಂದ ಪ್ರತ್ಯಯಾಂತವು ಆದ್ಯುದಾತ್ತ.

**ಊತಯೇ—** ಇಲ್ಲಿ **ಊತಿಯೂತಿಜೂತಿಸಾತಿ** (ಪಾ. ಸೂ. ೩-೩-೯೭) ಎಂಬುದರಿಂದ ಉದಾತ್ತವಾದ ಕ್ತಿನ್‌ಪ್ರತ್ಯಯವು ನಿಪಾತಿತವಾಗಿರುವುದು. ॥ ೯ ॥

॥ ಸಂಹಿತಾಪಾಠಃ ॥

ಸುತೇಸುತೇ ನ್ಯೋಕಸೇ ಬೃಹದ್ಬೃಹತ ಏದರಿಃ ॥
ಇಂದ್ರಾಯ ಶೂಷಮರ್ಚತಿ ॥ ೧೦ ॥

॥ ಪದಪಾಠಃ ॥

ಸುತೇಽಸುತೇ । ನಿಽಓಕಸೇ । ಬೃಹತ್ । ಬೃಹತೇ । ಆ । ಇತ್ । ಅರಿಃ ॥
ಇಂದ್ರಾಯ । ಶೂಷಂ । ಅರ್ಚತಿ ॥ ೧೦ ॥

॥ ಸಾಯಣಭಾಷ್ಯಂ ॥

ಆಕಾರ ಇಚ್ಛಬ್ದಶ್ಚ ಪಾದಪೂರಣೌ । ಯದ್ವಾ । ವ್ಯಾಪ್ತಿವಚನ ಆಕಾರಃ । ಆಙೀಷದರ್ಥೇಽಭಿವ್ಯಾಪ್ತೌ । ಅಮ. ೩-೪-೩೨ । ಇತ್ಯಭಿಧಾನಾತ್ । ಇಚ್ಛಬ್ದೋಽಪಿಶಬ್ದಾರ್ಥಃ । ಇಯರ್ತಿ ಗಚ್ಛತ್ಯನುಷ್ಠೇಯಂ ಕರ್ಮ ಪ್ರಾಪ್ನೋತೀತ್ಯರಿರ್ಯಜಮಾನಃ । ಏದರಿಃ ಸರ್ವೋಽಪಿ ಯಜಮಾನ ಇಂದ್ರಾಯ ಸುತೇ ಸುತ ಇಂದ್ರಾರ್ಥಮಭಿಷುತೇ ತತ್ತತ್ಸೋಮೇ ಶೂಷಂ ಬಲಮರ್ಚತಿ ಸ್ತೌತಿ । ಇಂದ್ರಸ್ಯ ಪರಾಕ್ರಮಂ ಪ್ರಶಂಸತೀತ್ಯರ್ಥಃ । ಕೀದೃಶಂ ಶೂಷಂ । ಬೃಹತ್ ಪ್ರೌಢಂ। ಕೀದೃಶಾಯೇಂದ್ರಾಯ । ನ್ಯೋಕಸೇ ನಿಯತಸ್ಥಾನಾಯ ಬೃಹತೇ ಪ್ರೌಢಾಯ ॥ ಸುತೇ ಸುತೇ । ಷುಞ್ ಅಭಿಷವೇ । ಕ್ತಪ್ರತ್ಯಯಃ ಪ್ರತ್ಯಯಸ್ವರೇಣೋದಾತ್ತಃ । ನಿತ್ಯವೀಪ್ಸಯೋರಿತಿ ವೀಪ್ಸಾಯಾಂ ದ್ವಿರ್ಭಾವಃ । ತಸ್ಯ ಪರಮಾಮ್ರೇಡಿತಮಿತಿ ದ್ವಿತೀಯಸ್ಯಾಮ್ರೇಡಿತತ್ವೇನಾನುದಾತ್ತಂ ಚ । ಪಾ. ೮-೧-೩ । ಇತ್ಯನುದಾತ್ತತ್ವಂ । ನ್ಯೋಕಸೇ । ನಿಯತಮೋಕೋ ಯಸ್ಯ ತಸ್ಮೈ । ನಿಪಾತಾ ಆದ್ಯುದಾತ್ತಾ ಇತ್ಯುದಾತ್ತಃ । ತಸ್ಯ ಯಣಾದೇಶ ಉದಾತ್ತಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ । ಪಾ. ೮-೨-೪ । ಇತ್ಯೋಕಾರಃ ಸ್ವರಿತಃ । ಬೃಹತೇ । ಬೃಹನ್ಮಹತೋರುಪಸಂಖ್ಯಾನಂ । ಪಾ- ೬-೧ ೧೭೩-೧ । ಇತ್ಯಜಾದಿವಿಭಕ್ತೇರುದಾತ್ತತ್ವಂ । ಅರಿಃ । ಋ ಗತೌ । ಅಚ ಇಃ । ಉ ೪-೧೩೮ । ಇತೀಕಾರಪ್ರತ್ಯಯಃ । ಗುಣೋ ರಪರತ್ವಂ । ಪ್ರತ್ಯಯಸ್ವರೇಣೇಕಾರ ಉದಾತ್ತಃ । ಇಂದ್ರಾಯ । ಋಜ್ರೇಂದ್ರೇತ್ಯಾದಿನಾ ರನ್ಪ್ರತ್ಯಯ ಇಕಾರ ಉದಾತ್ತಃ। ಶೂಷಂ । ಪ್ರಾತಿಪದಿಕಸ್ವರಃ । ಅರ್ಚತಿ । ನಿಘಾತಸ್ವರಃ ॥ ೧೮ ॥

॥ ಪ್ರತಿಪದಾರ್ಥ ॥

ಅರಿಃ—ಯಜ್ಞಮಾಡುವ ಅಥವಾ ಸ್ತೋತ್ರಮಾಡುವ ಯಜಮಾನನು । **ನ್ಯೋಕಸೇ**—ತನ್ನ ನಿಯತ ಸ್ವಸ್ಥಾನದಲ್ಲಿರುವ । **ಬೃಹತೇ**—ಪ್ರೌಢನಾದ ಅಥವಾ ಹೆಚ್ಚಾದ ಸಾಮರ್ಥ್ಯವುಳ್ಳ । **ಇಂದ್ರಾಯ**—ಇಂದ್ರನಿಗಾಗಿ। **ಸುತೇಸುತೇ**—ಇಂದ್ರನಿಗಾಗಿ ಸೋಮರಸವನ್ನು ಸಿದ್ಧಪಡಿಸುವ ಪ್ರತಿಸವನದಲ್ಲಿಯೂ । **ಬೃಹತ್**—ಹೆಚ್ಚಾದ । **ಶೂಷಂ**—(ಇಂದ್ರನ) ಬಲವನ್ನು (ಶಕ್ತಿಸಾಮರ್ಥ್ಯಗಳನ್ನು) । **ಆ ಅರ್ಚತಿ ಇತ್**—ಸ್ತೋತ್ರವನ್ನು ಅಥವಾ ಪ್ರಶಂಸೆಯನ್ನು ಮಾಡಿಯೇ ಮಾಡುವನು ॥

॥ ಭಾವಾರ್ಥ ॥

ಇಂದ್ರನ ಬಲವು ಅಥವಾ ಸಾಮರ್ಥ್ಯವು ಅತಿಶಯವಾದುದು. ಇಂತಹ ಇಂದ್ರನನ್ನು ಯಜ್ಞಮಾಡುವ ಯಜಮಾನನು ಸೋಮರಸವನ್ನು ಹಿಂಡಿ ಸಿದ್ಧಪಡಿಸುವ ಪ್ರತಿಸವನಕರ್ಮದಲ್ಲಿಯೂ (ಪ್ರಾತಸ್ಸವನಾದಿ ಮೂರು ಸವನಗಳಲ್ಲಿಯೂ) ಸ್ತೋತ್ರಾದಿಗಳಿಂದ ಇಂದ್ರನ ಶಕ್ತಿಸಾಮರ್ಥ್ಯಗಳನ್ನು ಪ್ರಶಂಸಿಸುತ್ತಾ ಆಹ್ವಾನ ಮಾಡುವನು.

## English Translation.

The sacrificer glorifies the vast prowess of Indra, the mighty, the dweller in his permanent abode in every rite where soma is prepared.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಯಜಮಾನನು ಇಂದ್ರನನ್ನು ಸ್ತೋತ್ರಮಾಡುವನು ಎಂದು ಪ್ರಥಮಪುರುಷ ಪ್ರಯೋಗವಿದ್ದರೂ " ನಾನು ಇಂದ್ರನನ್ನು ಸ್ತೋತ್ರಮಾಡುವೆನು " ಎಂಬ ಉತ್ತಮಪುರುಷಪ್ರಯೋಗಾರ್ಥವನ್ನು ಪರೋಕ್ಷವಾಗಿ ಕವಿಯು ಹೇಳಿರುವನು.

**ಸುತೇ ಸುತೇ**—ಪ್ರತಿಸವನದಲ್ಲಿಯೂ. **ನಿತ್ಯವೀಪ್ಸಯೋರಿತಿ ವೀಪ್ಸಾಯಾಂ ದ್ವಿರ್ಭಾವಃ** | ಪ್ರತಿಯೊಂದು ಎಂಬುದನ್ನು ಸೂಚಿಸುವುದಕ್ಕಾಗಿ ಒಂದೇ ಪದವನ್ನು ಎರಡಾವರ್ತಿ ಉಪಯೋಗಿಸುವುದು ಋಗ್ವೇದದಲ್ಲಿಯೂ ಇತರ ಗ್ರಂಥಗಳಲ್ಲಿಯೂ ರೂಢಿಯಾಗಿದೆ. **ಭರೇಭರೇ, ಹವೇಹವೇ, ಅಹರಹಃ** ಇತ್ಯಾದಿ. **ಸುತೇ-ಸುತೇ** ಎಂದರೆ ಪ್ರತಿಸವನ ಕರ್ಮದಲ್ಲಿಯೂ, ಸೋಮರಸವನ್ನು ಹಿಂಡಿ ತೆಗೆಯುವ ಪ್ರತಿಯೊಂದು ಕರ್ಮದಲ್ಲಿಯೂ ಎಂದರ್ಥವು.

**ನ್ಯೋಕಸೇ**—ನಿ+ಓಕಸೇ. ಇಲ್ಲಿ ನಿ ಎಂಬುದು ಉಪಸರ್ಗ. ಓಕಾಃ ಎಂಬ ಸಕಾರಾಂತಶಬ್ದಕ್ಕೆ ನಿವಾಸಸ್ಥಾನ, ಯಾವಾಗಲೂ ವಾಸಮಾಡುವ ಸ್ವಸ್ಥಾನ, permanent dwelling, abode etc., ಎಂದರ್ಥವು. ದಿವೌಕಸಃ ಎಂಬ ಶಬ್ದಕ್ಕೆ ಸ್ವರ್ಗವೇ ಸ್ವಸ್ಥಾನವಾಗಿ ಉಳ್ಳವರು ಎಂದರೆ ದೇವತೆಗಳು ಎಂದರ್ಥ. ಅದರಂತೆ ನಿ+ಓಕಸೇ= **ನ್ಯೋಕಸೇ** ಎಂಬ ಶಬ್ದದಲ್ಲಿ ನಿ ಎಂಬುವುದು ನಿಪಾತ (ಉಪಸರ್ಗ). ಇದಕ್ಕೆ ನಿಯತವಾದ ಎಂದರ್ಥವು. ಆದುದರಿಂದ ನ್ಯೋಕ್ಯಸೇ ಎಂಬ ಶಬ್ದಕ್ಕೆ ನಿಯತಸ್ಥಾನವುಳ್ಳ ಎಂದರ್ಥವು.

**ಆ ಇತ್**—ಈ ಶಬ್ದಗಳಿಗೆ ಈ ಋಕ್ಕಿನಲ್ಲಿ ಅವಶ್ಯಕವಾದ ಅರ್ಥವೇನೂ ಇಲ್ಲ. ಪಾದಪೂರಣಕ್ಕಾಗಿ ಉಪಯೋಗಿಸಲ್ಪಟ್ಟಿರುವವು. ಅಥವಾ ಆ ಎಂಬ ಶಬ್ದಕ್ಕೆ ಅಪಿ ಶಬ್ದಾರ್ಥವನ್ನೂ ಹೇಳಬಹುದು ಎಂದು ಭಾಷ್ಯಕಾರರ ಅಭಿಪ್ರಾಯವು.

**ಬೃಹತೇ**—ಮಹತೇ, **ಮಹತಃ ಶರೀರೇಣ ವೀರ್ಯೇಣ ವಾ** ಎಂದರೆ ಶರಿರದ ಆಕಾರದಲ್ಲಿಯೂ ಪರಾಕ್ರಮದಲ್ಲಿಯೂ ದೊಡ್ಡವನು ಎಂದರ್ಥವು.

**ಅರಿಃ**--**ಋ ಗತೌ । ಇಯರ್ತಿ ಗಚ್ಛತೀತ್ಯನುಷ್ಠೇಯಂ ಕರ್ಮ ಪ್ರಾಪ್ನೋತೀತ್ಯರಿರ್ಯಜಮಾನಃ ।** ಋ ಎಂಬ ಧಾತುವಿಗೆ ಹೋಗು, ಹೊಂದು ಎಂದರ್ಥವು. ಕರ್ಮವನ್ನು ಹೊಂದುವನು ಎಂದರೆ ಮಾಡುವವನು, ಯಜಮಾನನು, ಎಂದರ್ಥವು.

**ಶೂಷಂ**—ಬಲವು, ಸಾಮರ್ಥ್ಯವು. ಓಜಃ ಪಾಜಃ ಮೊದಲಾದ ಇಪ್ಪತ್ತೆಂಟು ಬಲನಾಮಗಳ ಮಧ್ಯದಲ್ಲಿ ಶೂಷಶಬ್ದವು ಪಠಿತವಾಗಿದೆ(ನಿ. ೩-೯). ಇಂದ್ರನ ಶಕ್ತಿಸಾಮರ್ಥ್ಯಗಳು, ಪರಾಕ್ರಮವು, ಮಹಿಮೆಯು ಇತ್ಯಾದಿ. ಶೂಷಬ್ದಕ್ಕೆ ಈ ಅರ್ಥವಿದ್ದರೂ ಇಂದ್ರನ ಪರವಾಗಿ ಈ ಶಬ್ದಪ್ರಯೋಗವಿರುವಾಗ ಸಾಧಾರಣವಾಗಿ ಸ್ತೋತ್ರವೆಂಬ ಅರ್ಥವೇ ಸರಿಯಾಗಿ ಹೊಂದುವುದು. ಈ ವಿಷಯದಲ್ಲಿ ಕೆಲವು ಉದಾಹರಣೆಗಳನ್ನು ಕೊಟ್ಟಿರುತ್ತೇವೆ—

**ಪ್ರ ಮನ್ಮಹೇ ಶವಸಾನಾಯ ಶೂಷಮಾಂಗೂಷಂ ಗಿರ್ವಣಸೇ ಅಂಗಿರಸ್ವತ್.**
(ಋ. ಸಂ. ೧-೬೨-೧)

**ಇಮಂ ಮಹೇ ವಿದಥ್ಯಾಯ ಶೂಷಂ ಶಶ್ವತ್ಕೃತ್ವ ಈಡ್ಯಾಯ ಪ್ರ ಜಭ್ರುಃ ।**
(ಋ. ಸಂ. ೩-೫೪-೧)

**ಉಪ ವ ಏಷೇ ವಂದ್ಯೇಭಿಃ ಶೂಷೈಃ ಪ್ರ ಯಹ್ವೀ ದಿವಶ್ಚಿತಯದ್ಭಿರರ್ಕೈಃ ॥**
(ಋ. ಸಂ. ೫-೪೧-೬)

**ಆ ಯಂ ಪೃಣಂತಿ ಹರಿಭಿರ್ನ ಧೇನವ ಇಂದ್ರಾಯ ಶೂಷಂ ಹರಿವಂತಮರ್ಚತ ॥**
(ಋ. ಸಂ. ೧೦-೯೬-೨)

**ಇತ್ಯಾದಿ ಅನೇಕ ಉದಾಹರಣೆಗಳಿವೆ.**

**ಅರ್ಚತಿ**—ಅರ್ಚತಿ, ಗಾಯತಿ ಮೊದಲಾದ ನಲವತ್ತನಾಲ್ಕು ಅರ್ಚತ್ಯರ್ಥವಾಚಕಗಳಾದ ' ಧಾತುಗಳ ಮಧ್ಯದಲ್ಲಿ ಅರ್ಚತಿ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೧೯) ಅರ್ಚತಿಶಬ್ದಕ್ಕೆ ಗಾಯತಿ, ನೌತಿ ಎಂದರೆ ಸ್ತೋತ್ರಮಾಡುವನು, ಪ್ರಶಂಸೆ ಮಾಡುವನು ಎಂದರ್ಥವು.

ವ್ಯಾಕರಣಪ್ರಕ್ರಿಯಾ

**ಸುತೇಸುತೇ**—ಷುಞ್ ಅಭಿಷವೇ ಧಾತುವಿನಮುಂದೆ ಕ್ತ ಪ್ರತ್ಯಯ. ಇದು ಪ್ರತ್ಯಯ ಸ್ವರದಿಂದ ಉದಾತ್ತ. ಸಪ್ತಮೀ ಏಕವಚನಾಂತ ಸುತೇ—**ನಿತ್ಯವೀಪ್ಸಯೋಃ** (ಪಾ.ಸೂ. ೮-೧-೪) ಎಂಬುದರಿಂದ ದ್ವಿತ್ವ ಬಂದರೆ, ಸುತೇ ಸುತೇ ಎಂದಾಗುವುದು. ಇಲ್ಲಿ ಎರಡನೇ ಸುತೇ ಎಂಬುದಕ್ಕೆ **ತಸ್ಯಪರಮಾಮ್ರೇಡಿತಂ** (ಪಾ.ಸೂ. ೮-೧-೨) ದ್ವಿತ್ವವನ್ನು ಹೊಂದಿದುದರ ಎರಡನೆಯ ರೂಪಕ್ಕೆ ಆಮ್ರೇಡಿತಸಂಜ್ಞೆ ಬರುವುದು ಎಂಬುದರಿಂದ ಆಮ್ರೇಡಿತಸಂಜ್ಞೆ ಬಂದರೆ **ಅನುದಾತ್ತಂಚ** (ಪ.ಸೂ. ೮-೧-೩) ಆಮ್ರೇಡಿತವು ಅನುದಾತ್ತವಾಗುವುದು ಎಂಬುದರಿಂದ ಅನುದಾತ್ತಸ್ವರ ಬರುವುದು.

**ನ್ಯೋಕಸೇ**—ನಿಯತಂ ಓಕಃ ಯಸ್ಯ ಸಃ ನ್ಯೋಕಃ ತಸ್ಮೈ ನ್ಯೋಕಸೇ. ನಿ, ಎಂಬುದು **ನಿಪಾತಾ ಆದ್ಯುದಾತ್ತಾಃ** (ಫಿ.ಸೂ. ೮೦) ಎಂಬುದರಿಂದ ಆದ್ಯುದಾತ್ತ. ಉದಾತ್ತವಾದ ಇಯ ಸ್ಥಾನದಲ್ಲಿ **ಇಕೋಯಣಚಿ** (ಪಾ. ಸೂ. ೬-೪-೭೭) ಎಂಬುದರಿಂದ ಯಣಾದೇಶ, ಈ ಉದಾತ್ತ ಇಕಾರಸ್ಥಾನದಲ್ಲಿ ಬಂದ ಯಕಾರದ ಮುಂದೆ ಇರುವ ಓಕಾರವು **ಉದಾತ್ತಸ್ವರಿತಯೋರ್ಯಣಸ್ವರಿತೋಽನುದಾತ್ತಸ್ಯ** (ಪಾ. ಸೂ, ೮-೨-೪) ಉದಾತ್ತ ಅಥವಾ ಸ್ವರಿತ ಇವುಗಳ ಸ್ಥಾನದಲ್ಲಿ ಬಂದ ಯಣ್ವರ್ಣದ ಮುಂದೆ ಇರುವ ಅನುದಾತ್ತಕ್ಕೆ ಸ್ವರಿತಸ್ವರ ಬರುವುದು ಎಂಬುದರಿಂದ ಸ್ವರಿತಬರುವುದು.

**ಬೃಹತೇ**— **ಬೃಹನ್ಮಹತೋರುಪಸಂಖ್ಯಾನಮ್** (ಪಾ. ಸೂ. ೬-೧-೧೭೩-೧) ಬೃಹತ್, ಮಹತ್ ಶಬ್ದಗಳ ಮುಂದೆ ಇರುವ ನದೀಸಂಜ್ಞಕವೂ ಅಜಾದಿಯಾದ ವಿಭಕ್ತಿಯೂ ಸಹ ಉದಾತ್ತವಾಗುವುದು ಎಂದು ವಾರ್ತಿಕಾರ್ಥ. ಇದರಿಂದ ಬೃಹತೇ ಎಂಬಲ್ಲಿ ಏ ಎಂಬ ಅಜಾದಿ ವಿಭಕ್ತಿಯು ಉದಾತ್ತ. ಯದ್ಯಪಿ **ವರ್ತಮಾನೇ ಪೃಷನ್ಮಹದ್ಬೃಹಜ್ಜಗಚ್ಛತೃವಚ್ಚ** (ಉ. ಸೂ. ೨-೨-೪೨) ಎಂಬ ಸೂತ್ರದಲ್ಲಿ **ಶತೃವಚ್ಚ** ಎಂದು ಅತಿದೇಶವಿರು

ವುದರಿಂದ **ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭३) ಎಂಬುದರಿಂದಲೇ ಇಲ್ಲಿ ಉದಾತ್ತಸ್ವರವು ಸಿದ್ಧ ವಾಗುವುದು ಆದರೂ, ನಿಯಮಾರ್ಥವಾಗಿ ವಾರ್ತಿಕವು ಆವಶ್ಯಕವು, ಶತೃವದ್ಭಾವದಿಂದ ನದ್ಯಜಾದಿ ಶಸಾದಿ ವಿಭಕ್ತಿ ಗಳಿಗೆ ಉದಾತ್ತಬರುವ ಪಕ್ಷದಲ್ಲಿ ಬೃಹತ್ ಮಹತ್ ಶಬ್ದಗಳ ಮುಂದೆ ಇರುವ ನದ್ಯಜಾದಿಶಸಾದಿ ವಿಭಕ್ತಿಗಳಿಗೇ ಬರುವುದು ಎಂದು ನಿಯಮಶರೀರ. ಇದರಿಂದ ಪೃಷತ್, ಜಗತ್ ಇವುಗಳ ಮುಂದೆ ಇರುವುದಕ್ಕೆ ಬರುವುದಿಲ್ಲ ಎಂದು ಏರ್ಪಡುವುದು. ಆದ್ದರಿಂದ **ಬೃಹನ್ಮಹತೋರುಪಸಂಖ್ಯಾನಂ** ಎಂಬ ವಾರ್ತಿಕವು ಅವಶ್ಯಕವು.

ಅರಿಃ--ಋ ಗತೌ ಧಾತು. ಇದರಮುಂದೆ **ಅಚಇಃ** (ಉ. ಸೂ, ೪-೫೭೮) ಎಂಬುದರಿಂದ ಇಕಾರ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** (ಪಾ ಸೂ ೭-३-೮೪) ಎಂಬುದರಿಂದ ಗುಣ. **ಉರಣ್ರಪರ** (ಪಾ. ಸೂ. ೧-೧-೫೧) ಎಂಬುದರಿಂದ ರಪರವಾಗಿ ಬರುವುದು. ಅರಿ ಎಂದಾಗುವುದು. ಪ್ರತ್ಯಯ ಸ್ವರದಿಂದ ಇಕಾರ ಉದಾತ್ತ.

ಇಂದ್ರಾಯ-**ಋಜ್ರೇಂದ್ರಾಗ್ರ**—(ಉ. ಸೂ. ೨-೧೮೬) ಎಂಬುದರಿಂದ ರನ್ ಪ್ರತ್ಯಯ. ಪ್ರತ್ಯಯವು ನಿತ್ತು. ಅದ್ದರಿಂದ ಪ್ರತ್ಯಯಾಂತದ ಆದಿವರ್ಣವಾದ ಇಕಾರವು ಉದಾತ್ತವಾಗುವುದು.

ಶೂಷಮ್—**ಫಿಷಃ**—(ಫಿ. ಸೂ. ೧) ಎಂಬುದರಿಂದ ಪ್ರಾತಿಪದಿಕಸ್ವರಬರುವುದು.

ಅರ್ಚತಿ—**ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ ಬರುವುದು ॥ ೧೦ ॥

ಇತಿ ನವಮಂ ಸೂಕ್ತಂ ಸಮಾಪ್ತಮ್.

॥ ಓಂ ॥

# ಹತ್ತನೆಯ ಸೂಕ್ತವು

**ಗಾಯಂತ್ರೀತಿ ಸೂಕ್ತಸ್ಯ ಮಂತ್ರಸಂಖ್ಯಾ ಛಂದೋವಿಶೇಷಶ್ಚೈವಮನುಕ್ರಮ್ಯತೇ । ಗಾಯಂತಿ ದ್ವಾದಶಾನುಷ್ಟುಭಂ ತ್ವಿತಿ । ತುಹಿಹವೇತ್ಯಾದಿಪರಿಭಾಷಾಯಾಂ । ಅನು ೧೨-३ । ತುಶಬ್ದಸ್ಯ ಸೂಕ್ತ-ದ್ವಯೇ ಪರಿಭಾಷಿತತ್ವಾದಸ್ಯ ಸೂಕ್ತಸ್ಯ ವಕ್ಷ್ಯಮಾಣಸ್ಯ ಚಾನುಷ್ಟುಭತ್ವಂ ದ್ರಷ್ಟವ್ಯಂ । ಋಷಿದೇವತೇ ಪೂರ್ವವತ್ ಅಭಿಪ್ಲವಷಡಹಸ್ಯೋಕ್ಥ್ಯೇಷು ತೃತೀಯಸವನೇಽಚ್ಛಾವಾಕಸ್ಯ ಗಾಯಂತೀತಿ ಸ್ತೋತ್ರಿ-ಯಸ್ತೃಚಃ । ಏಹ್ಯೂಷ್ವಿತಿ ಖಂಡೇ ಗಾಯಂತಿ ತ್ವಾ ಗಾಯತ್ರಿಣ ಆ ತ್ವಾ ಗಿರೋ ರಥೀರಿವ । ಆ. ೭-೮ । ಇತಿ ಸೂತ್ರಿತಂ ॥**

ಅನುವಾದವು—**ಗಾಯಂತಿ ತ್ವಾ** ಎಂಬ ಸೂಕ್ತದ ಮಂತ್ರಸಂಖ್ಯಾ ಮತ್ತು ಛಂದೋ ವಿಶೇಷವು **ಗಾಯಂತಿ ದ್ವಾದಶಾನುಷ್ಟುಭಂ ತ್ವಿತಿ** ಎಂದು ಸೂಕ್ತಾನುಕ್ರಮಣಿಕೆಯಲ್ಲಿ ಹೇಳಿರುವುದು. (ಅನು. ೧೨-३) ಇಲ್ಲಿ ತು ಎಂಬ ಶಬ್ದವು ಈ ಸೂಕ್ತ ಮತ್ತು ಮುಂದಿನ ಸೂಕ್ತ ಇವೆರಡರ ಛಂದಸ್ಸೂ ಸಹ ಅನುಷ್ಟುಪ್ ಛಂದ ಸ್ಸೆಂದು ತಿಳಿಸುವುದಕ್ಕಾಗಿ ಪಾರಿಭಾಷಿಕವಾಗಿ ಉಪಯೋಗಿಸಲ್ಪಟ್ಟಿರುವುದು. ಈ ಸೂಕ್ತದ ಋಷಿ ಮತ್ತು ದೇವತೆಯು ಹಿಂದಿನ ಸೂಕ್ತದಂತೆಯೇ. ವಿನಿಯೋಗವು-ಅಭಿಪ್ಲವಷಡಹವೆಂಬ ಯಾಗದ ತೃತೀಯಸವನದಲ್ಲಿ ಉಕ್ಥಮಂತ್ರಗಳನ್ನು ಪಠಿಸುವಾಗ ಅಚ್ಛಾವಾಕನೆಂಬ ಋತ್ವಿಜನು **ಗಾಯಂತಿ** ಎಂಬ ತೃಚವನ್ನು ಸ್ತೋತ್ರಿಯ

ಶಸ್ತ್ರಮಂತ್ರವನ್ನಾಗಿ ಪಠಿಸುವನು. ಈ ವಿಷಯವು ಆಶ್ವಲಾಯನ ಶ್ರೌತಸೂತ್ರದಲ್ಲಿ **ವಿಹ್ಯೋಃಷು** ಎಂಬ ಖಂಡದಲ್ಲಿ (ಆ. ಸೂ. ೭-೮) **ಗಾಯಂತಿ ತ್ವಾ ಗಾಯತ್ರಿಣ** (ಋ. ಸಂ. ೧-೧೦-೧ ; ಸಾಮ ೩೪೨ ; ೧೩೪೪) ಮತ್ತು **ಆ ತ್ವಾ ಗಿರೋ ರಥೀರಿವ** (ಋ. ಸಂ. ೮-೯೫-೧ ; ಸಾಮ ೩೪೯) ಎಂಬ ಋಕ್ಕುಗಳನ್ನು ಪಠಿಸಬೇಕೆಂದು ಹೇಳಿರುವುದು.

## ಸೂಕ್ತ—೧೦

॥ ಮಂಡಲ—೧ ॥ ಅನುವಾಕ—೩ ॥ ಸೂಕ್ತ—೧೦ ॥

॥ ಅಷ್ಟಕ —೧ ॥ ಅಧ್ಯಾಯ—೧ ॥ ವರ್ಗ—೧೯, ೨೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೧-೧೨ ॥

॥ ಋಷಿಃ—ಮಧುಚ್ಛಂದಾ ವೈಶ್ವಾಮಿತ್ರಃ ॥

॥ ದೇವತಾ—ಇಂದ್ರಃ ॥

॥ ಛಂದಃ—ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಗಾಯಂತಿ ತ್ವಾ ಗಾಯತ್ರಿಣೋಽರ್ಚಂತ್ಯರ್ಕಮರ್ಕಿಣಃ ।
ಬ್ರಹ್ಮಾಣಸ್ತ್ವಾ ಶತಕ್ರತ ಉದ್ವಂಶಮಿವ ಯೇಮಿರೇ ॥ ೧ ॥

॥ ಪದಪಾಠಃ ॥

**ಗಾಯಂತಿ । ತ್ವಾ । ಗಾಯತ್ರಿಣಃ । ಅರ್ಚಂತಿ । ಅರ್ಕಂ । ಅರ್ಕಿಣಃ ॥**
**ಬ್ರಹ್ಮಾಣಃ । ತ್ವಾ । ಶತಕ್ರತೋ ಇತಿ ಶತಽಕ್ರತೋ । ಉತ್ । ವಂಶಂಽಇವ ।**
**ಯೇಮಿರೇ ॥ ೧ ॥**

॥ ಸಾಯಣಭಾಷ್ಯಂ ॥

**ಹೇ ಶತಕ್ರತೋ ಬಹುಕರ್ಮನ್ಬಹುಪ್ರಜ್ಞ ವೇಂದ್ರ ತ್ವಾಂ ಗಾಯತ್ರಿಣ ಉದ್ಗಾತಾರೋ ಗಾಯಂತಿ। ಸ್ತುವಂತಿ । ಅರ್ಕಿಣೋಽರ್ಚನಹೇತುಮಂತ್ರಯುಕ್ತಾ ಹೋತಾರೋಽರ್ಕಮರ್ಚನೀಯಮಿಂದ್ರಮರ್ಚಂತಿ । ಶಸ್ತ್ರಗತೈರ್ಮಂತ್ರೈಃ ಪ್ರಶಂಸಂತಿ । ಬ್ರಹ್ಮಾಣೋ ಬ್ರಹ್ಮಪ್ರಭೃತಯ ಇತರೇ ಬ್ರಾಹ್ಮಣಾಸ್ತ್ವಾಮುದ್ಯೇಮಿರೇ । ಉನ್ನತಿಂ ಪ್ರಾಪಯಂತಿ । ತತ್ರ ದೃಷ್ಟಾಂತಃ । ವಂಶಮಿವ । ಯಥಾ ವಂಶಾಗ್ರೇ**

ನೃತ್ಯಂತಃ ಶಿಲ್ಪಿನಃ ಪ್ರೌಢಂ ವಂಶಮುತ್ಪನ್ನಂ ಕುರ್ವಂತಿ । ಯಥಾ ವಾ ಸನ್ಮಾರ್ಗವರ್ತಿನಃ ಸ್ವಕೀಯಂ ಕುಲಮುನ್ನತಂ ಕುರ್ವಂತಿ । ತದ್ವತ್ । ಏತಾಮೃಚಂ ಯಾಸ್ಕ ಏವಂ ವ್ಯಾಚಷ್ಟ । ಗಾಯಂತಿ ತ್ವಾ ಗಾಯತ್ರಿಣಃ ಪ್ರಾರ್ಚಂತಿ ತೇಽರ್ಕಮರ್ಕಿಣೋ ಬ್ರಹ್ಮಾಣಸ್ತ್ವಾ ಶತಕ್ರತ ಉದ್ಯೇಮಿರೇ ವಂಶಮಿವ । ವಂಶೋ ವನಶಯೋ ಭವತಿ ವನನಾಚ್ಛ್ರೂಯತ ಇತಿ ವಾ । ನಿ. ೫-೫ । ಅರ್ಕಶಬ್ದಂ ಚ ಬಹುಧಾ ವ್ಯಾಚಷ್ಟೇ। ಅರ್ಕೋ ದೇವೋ ಭವತಿ ಯದೇನಮರ್ಚಂತ್ಯರ್ಕೋ ಮಂತ್ರೋ ಭವತಿ ಯದೇನೇನಾರ್ಚಂತ್ಯರ್ಕಮನ್ನಂ ಭವತ್ಯರ್ಚತಿ ಭೂತಾನ್ಯರ್ಕೋ ವೃಕ್ಷೋ ಭವತಿ ಸ ವೃತಃ ಕಟುಕಿಮ್ನಾ । ನಿ. ೫-೪ । ಇತಿ॥ ಗಾಯಂತಿ । ಶಪ್ತಿಙೌ । ಪಿತ್ತ್ವಲ್ಲಸಾರ್ವಧಾತುಕತ್ವಾಚ್ಚಾನುದಾತ್ತೌ । ಧಾತುರುದಾತ್ತಃ । ಗಾಯತ್ರಿಣಃ । ಗಾಯತ್ರಂ ಸಾಮ ಯೇಷಾಮುದ್ಗಾತೄಣಾಮಸ್ತಿ ತೇ । ಅತ ಇನಠನೌ । ಪ್ರತ್ಯಯಸ್ವರೇಣೇಕಾರ ಉದಾತ್ತಃ । ಅರ್ಚಂತಿ । ಅರ್ಚ ಪೂಜಾಯಾಂ । ಭೌವಾದಿಕಃ । ಶಪ್ತಿಙಾವನುದಾತ್ತೌ! ಧಾತುಸ್ವರ ಏವ ಪಾದಾದಿತ್ವಾನ್ನನಿಘಾತಃ । ಅರ್ಕಂ । ಅರ್ಚಂತ್ಯೇಭಿರಿತ್ಯರ್ಕಾ ಮಂತ್ರಾಃ । ತೈರರ್ಚನೀಯತಯಾ ತದಾತ್ಮಕ ಇಂದ್ರೋಽಪಿ ಲಕ್ಷಣಯಾರ್ಕಃ । ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ । ಪಾ. ೩-೩ ೧೧೮ । ಇತಿ ಕರಣೇ ಘಃ । ಚಜೋಃ ಕು ಘಿಣ್ಯತೋಃ । ಪಾ. ೭-೩-೫೨ । ಇತಿ ಚಕಾರಸ್ಯ ಕುತ್ವಂ । ಕಕಾರಃ। ಪ್ರತ್ಯಯಸ್ವರೇಣಾಂತೋದಾತ್ತಃ । ಅರ್ಕಾ ಮಂತ್ರಾ ಏಷಾಂ ಸಂತೀತ್ಯರ್ಕಿಣೋ ಹೋತಾರಃ । ಏಕಾಕ್ಷ। ರಾತ್ಪೂತೋ ಜಾತೇಃ ಸಪ್ತಮ್ಯಾಂ ಚ ನ ತೌ ಸ್ಮೃತೌ । ಪಾ. ೫-೨-೧೧೫-೨ । ಇತಿ ಕೃದಂತಾದಿನಿಠನೌ ಯದ್ಯಪಿ ಪ್ರತಿಷಿದ್ಧೌ ತಥಾಪ್ಯತ್ರ ವ್ಯತ್ಯಯಾದಿನಿಃ । ಪ್ರತ್ಯಯಸ್ವರೇಣೇಕಾರ ಉದಾತ್ತಃ। ಬ್ರಹ್ಮಾಣಃ - ಪ್ರಾತಿಪದಿಕಸ್ವರೇಣಾಂತೋದಾತ್ತಃ। ಶತಕ್ರತೋ । ನಿಘಾತಃ । ಸಂಹಿತಾಯಾಮುವಾದೇಶೇ ಲೋಪಃ ಶಾಕಲ್ಯಸ್ಯ । ಪಾ. ೮-೩-೧೯ । ಇತಿ ವಕಾರಲೋಪಃ । ವಂಶಶಬ್ದಃ ಪ್ರಾತಿಪದಿಕಸ್ವರೇಣಾಂತೋದಾತ್ತಃ । ಇವೇನ ವಿಭಕ್ತ್ಯಲೋಪಃ ಪೂರ್ವಪದಪ್ರಕೃತಿಸ್ವರತ್ವಂ ಚ । ಪಾ. ೨-೧-೪-೨ । ಇತಿ ಸ ಏವ ಶಿಷ್ಯತೇ । ಯೇಮಿರೇ । ಯಮು ಉಪರಮೇ । ತಿಙ್ಙತಿಙ ಇತಿ ನಿಘಾತಃ ॥

॥ ಪ್ರತಿಪದಾರ್ಥ ॥

(ಹೇ) **ಶತಕ್ರತೋ**— ಬಹಳವಾದ ಸಾಹಸ ಕರ್ಮಗಳನ್ನೆಸಗುವ ಅಥವಾ ಬಹುಪ್ರಜ್ಞಾಶಾಲಿಯಾದ ಎಲೈ ಇಂದ್ರನೇ । **ತ್ವಾಂ**— ನಿನ್ನನ್ನು । **ಗಾಯತ್ರಿಣಃ**— ಸಾಮವೇದಗಾನ ಮಾಡುವ ಉದ್ಗಾತೃಗಳೆಂಬ ಋತ್ವಿಜರು । **ಗಾಯಂತಿ**— ಸಾಮವೇದಮಂತ್ರಗಳಿಂದ ಗಾನರೂಪವಾಗಿ ಸ್ತೋತ್ರಮಾಡುವರು । **ಅರ್ಕಿಣಃ**— ಋಗ್ವೇದಸಂಬಂಧವಾದ ಋಕ್ಕುಗಳಿಂದ ಸ್ತುತಿಸುವ ಹೋತೃಗಳೆಂಬ ಋತ್ವಿಜರು । **ಅರ್ಕಂ**— **ಪೂಜಿಸಲು** ಅಥವಾ ಸ್ತುತಿಸಲ್ಪಡಲು ಯೋಗ್ಯನಾದ ಇಂದ್ರನನ್ನು । **ಅರ್ಚಂತಿ**— ಶಸ್ತ್ರಮಂತ್ರಪಠನದಿಂದ ಪ್ರಶಂಸೆಮಾಡುವರು । **ಬ್ರಹ್ಮಾಣಃ**-- ಬ್ರಹ್ಮನೇ ಮೊದಲಾದ ಋತ್ವಿಜರಾದಿಯಾದ ಇತರ ಬ್ರಾಹ್ಮಣರು । **ತ್ವಾಂ**- ನಿನ್ನನ್ನು । **ವಂಶಮಿವ**- ಬೊಂಬಿನಂತೆ । **ಉತ್ ಯೇಮಿರೇ**— ಮೇಲಕ್ಕೆತ್ತುವರು (ವಿಶೇಷವಾಗಿ ಹೊಗಳುವರು).

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಬಹು ಸಾಹಸಕೃತ್ಯಗಳನ್ನು ಮಾಡುವವನು ಅಥವಾ ಬಹು ಪ್ರಜ್ಞಾಶಾಲಿಯು. ಇಂತಹ ನಿನ್ನನ್ನು ಯಜ್ಞಾದಿ ಕರ್ಮಗಳಲ್ಲಿ ಉದ್ಗಾತೃಗಳೆಂಬ ಋತ್ವಿಜರು ಸಾಮಗಾನಗಳಿಂದ ನಿನ್ನ

ಪರಾಕ್ರಮವನ್ನು ಗಾನಮಾಡಿ ಹೊಗಳುವರು; ಹೋತೃಗಳೆಂಬ ಋತ್ವಿಜರು ತಮ್ಮ ವೇದವಾದ ಋಗ್ವೇದ ಮಂತ್ರಗಳಿಂದ ಪೂಜಿಸಲ್ಪಡಲು ಯೋಗ್ಯನಾದ ನಿನ್ನನ್ನು ಸ್ತುತಿಸುವರು. ಬ್ರಹ್ಮನೇ ಮೊದಲಾದಿಯಾದ ಇತರ ಬ್ರಾಹ್ಮಣರು ನಿನ್ನನ್ನು ಬೊಂಬನ್ನು ಮೇಲಕ್ಕೆತ್ತುವಂತೆ ಸ್ತೋತ್ರಾದಿಗಳಿಂದ ಹೊಗಳಿ ನಿನ್ನ ಕೀರ್ತಿಯನ್ನು ಹೆಚ್ಚುಮಾಡುವರು (ಅಭಿವೃದ್ಧಿಪಡಿಸುವರು).

## English Translation.

O Indra, with many daring deeds or great knowledge, the chanters of the Sama sing about you, the reciters of the Riks praise you who are worthy of praise, and the (priests called) Brahmanas raise you aloft like a bamboo pole.

### ॥ ವಿಶೇಷ ವಿಷಯಗಳು ॥

ಈ ಋಕ್ಕು ಈ ಸೂಕ್ತದಲ್ಲಲ್ಲದೆ ತೈ. ಸಂ. ೧-೬-೧೨-೨ ; ಸಾಮ. ೩೪೨ ; ೧೩೪೪; ನಿ. ೫-೫ ರಲ್ಲಿಯೂ ಪಠಿತವಾಗಿದೆ. ಇದರ ಅರ್ಥವು ಅಥವಾ ಇದರಲ್ಲಿ ಹೇಳಿರುವ ವಿಷಯವು ೭ನೇ ಸೂಕ್ತದ ೧ನೇ ಋಕ್ಕಿನ ಅರ್ಥವನ್ನೇ ಬಹುಮಟ್ಟಿಗೆ ಹೋಲುವುದು. ಈ ಋಕ್ಕಿನ ಪೂರ್ವಾರ್ಧದ ಎಂದರೆ ೧ ಮತ್ತು ೨ನೇ ಪಾದಗಳ ಅರ್ಥವು ವಿಶದವಾಗಿದ್ದರೂ ಮೂರನೇ ಪಾದದಲ್ಲಿ ಹೇಳಿರುವ ವಿಷಯವು ಸ್ವಲ್ಪ ತೊಡಕಾಗಿರುವುದು. ಇಲ್ಲಿ ಬ್ರಹ್ಮಾಣಃ ಎಂಬ ಶಬ್ದದ ಅರ್ಥವು ಸರಿಯಾಗಿ ಹೊಂದುವುದಿಲ್ಲ. ಯಜ್ಞಕರ್ಮದಲ್ಲಿ ಹೋತೃ, ಅಧ್ವರ್ಯು, ಉದ್ಗಾತೃ ಎಂಬ ಮೂರು ಋತ್ವಿಗ್ವರ್ಗದವರ ಕಾರ್ಯಕಲಾಪಗಳನ್ನು ಸರಿಯಾಗಿ ನಡೆಯುವಂತೆ ನೋಡಿಕೊಳ್ಳುವುದಕ್ಕಾಗಿ ಬ್ರಹ್ಮನೆಂಬ ಒಬ್ಬ ಋತ್ವಿಜನಿರುವನು. ಇವನು ಮೂರು ವೇದಗಳನ್ನೂ ಯಜ್ಞಾನುಷ್ಠಾನ ಕ್ರಮವನ್ನು ಚೆನ್ನಾಗಿ ತಿಳಿದವನಾಗಿರಬೇಕು. ಇವನು ಯಜ್ಞದ ಕಾರ್ಯಕಲಾಪಗಳಲ್ಲಿ ವಿಶೇಷವಾಗಿ ಭಾಗವಹಿಸುವುದಿಲ್ಲವಾದರೂ ಯಜ್ಞವು ಸರಿಯಾಗಿ ನಡೆಯುವಂತೆ ನೋಡಿಕೊಳ್ಳುತ್ತಾ ಇತರ ಋತ್ವಿಜರಿಗೆ ಅವಶ್ಯಕವಾದ ಕಾರ್ಯಾನುಷ್ಠಾನಗಳಲ್ಲಿ ಅನುಜ್ಞೆಯನ್ನು ಕೊಡುತ್ತಾ ಯಜ್ಞವು ಸಾಂಗವಾಗಿ ನಡೆಯುವುದಕ್ಕೆ ಜವಾಬ್ದಾರನಾಗಿರುವನು. ಈ ವಿಧವಾದ ಬ್ರಹ್ಮವರ್ಗಕ್ಕೆ ಸೇರಿದ ಋತ್ವಿಜರಿಂದೂ ಇತರ ಬ್ರಾಹ್ಮಣರಿಂದೂ ಭಾಷ್ಯಕಾರರು ಬ್ರಹ್ಮಾಣಃ ಎಂಬ ಶಬ್ದಕ್ಕೆ ಅರ್ಥಮಾಡಿರುವರು. ಅಥವಾ ಬ್ರಹ್ಮವೆಂದರೆ ಸ್ತೋತ್ರವೆಂದು ಅರ್ಥವಿರುವುದು. ಆದುದರಿಂದ ಬ್ರಹ್ಮಾಣಃ ಎಂಬ ಶಬ್ದಕ್ಕೆ ಸ್ತೋತ್ರಮಾಡುವವರು ಎಂಬ ಅರ್ಥವನ್ನಾದರೂ ಹೇಳಬಹುದು. ಮೂರನೆಯ ಪಾದದಲ್ಲಿ ಉಪಮಾನಾರ್ಥವಾಗಿ ಹೇಳಿರುವ ವಂಶಮಿವ ಎಂಬ ಶಬ್ದಗಳ ಪ್ರಯೋಗವು ತೊಡಕಾಗಿಯೇ ಇರುವುದು. ವಂಶವೆಂದರೆ ಬಿದಿರು, ಬೊಂಬು ಎಂಬ ವೃಕ್ಷವಿಶೇಷವು. ಬೊಂಬನ್ನು ಮೇಲಕ್ಕೆತ್ತುವಂತೆ (ಅಥವಾ ಎತ್ತಿ ನೆಡುವಂತೆ ? ) ಎಂಬ ಉಪಮಾನವು ಚೆನ್ನಾಗಿ ಹೊಂದುವುದಿಲ್ಲ. ಬೊಂಬನ್ನು ಎತ್ತುವಂತೆ ನಿನ್ನನ್ನು ಎತ್ತುವರು ಎಂದರೆ ನಿನ್ನನ್ನು ಪ್ರಶಂಸೆಮಾಡಿ ನಿನ್ನ ಕೀರ್ತಿಪ್ರತಿಷ್ಠೆಗಳನ್ನು ಹೆಚ್ಚಿಸುವರು, ನಿನ್ನ ಗುಣಗಾನ ಮಾಡುವುದರಿಂದ ನಿನಗೆ ಉನ್ನತಸ್ಥಾನವನ್ನು ಕಲ್ಪಿಸುವರು ಎಂದು ಕವಿಯ ಅಭಿಪ್ರಾಯವಿರಬಹುದು. ಅಥವಾ ವಂಶಶಬ್ದಕ್ಕೆ ಕುಲ, ಗೋತ್ರ ಮನೆತನ ಎಂಬ ಇನ್ನೊಂದರ್ಥವಿರುವುದರಿಂದ ಅದರಂತೆ ಹೇಳುವುದಾದರೆ—ಸತ್ಕರ್ಮಾಚರಣೆಯಿಂದ ಅಥವಾ ವಿಶೇಷ ಸಾಹಸಕೃತ್ಯಗಳಿಂದ ಕುಲದ ಗೌರವ ಅಥವಾ ಪ್ರತಿಷ್ಠೆಯನ್ನು ಹೆಚ್ಚಿಸುವಂತೆ ಎಂಬ ಅರ್ಥವನ್ನು ಹೇಳಬಹುದು. ಈ ಎರಡು ವಿಧವಾದ ಅರ್ಥವನ್ನೂ ಭಾಷ್ಯಕಾರರು ಹೇಳಿರುವರು.

**ಗಾಯತ್ರಿಣಃ—ಗಾಯತ್ರಂ ಸಾಮ ಯೇಷಾಮುದ್ಗಾತ್ರ್ಯಾಣಾಮಸ್ತಿ ತೇ** ಗಾಯತ್ರವೆಂಬ ಸಾಮ ಮಂತ್ರವನ್ನು ಗಾನಮಾಡುವವರು ಎಂದರ್ಥವು ಅಥವಾ ಸಾಮವೇದದಲ್ಲಿ ಗಾನಮಾಡಲ್ಪಡುವ ಅನೇಕ ಮಂತ್ರಗಳು ಗಾಯತ್ರೀ ಛಂದಸ್ಸಿನ ಋಗ್ವೇದಮಂತ್ರಗಳಾಗಿರುವುದರಿಂದ ಇವುಗಳನ್ನು ಗಾನಮಾಡುವ ಉದ್ಗಾತೃ ಮೊದಲಾದ ಋತ್ವಿಜರಿಗೆ **ಗಾಯತ್ರಿಣಃ**—ಗಾಯತ್ರೀ ಛಂದಸ್ಸಿನ ಋಕ್ಕುಗಳನ್ನು ಗಾನಮಾಡುವವರು ಎಂದು ಹೇಳುವುದು ರೂಢಿಯಾಗಿರಬಹುದು.

**ಅರ್ಚಂತಿ— ಅರ್ಚ ಪೂಜಾಯಾಂ**—ಅರ್ಚ ಎಂಬ ಧಾತುವಿಗೆ ಪೂಜೆಮಾಡು ಎಂದರೆ ಸ್ತುತಿಸು ಎಂದರ್ಥವು.

**ಅರ್ಕಂ— ಅರ್ಚಂತ್ಯೇಭಿರಿತ್ಯರ್ಕಾಃ ಮಂತ್ರಾಃ** || ಸ್ತೋತ್ರಮಾಡಲು ಉಪಯೋಗಿಸುವುದರಿಂದ ಮಂತ್ರಗಳಿಗೆ ಅರ್ಕಗಳೆಂದು ಹೆಸರು. ಇಲ್ಲಿ ಅರ್ಕಂ ಎಂದರೆ ಇಂತಹ ಅರ್ಕಗಳಿಂದ ಅಥವಾ ಮಂತ್ರಗಳಿಂದ ಸ್ತುತಿಸಲ್ಪಡುವ ಇಂದ್ರನನ್ನು ಎಂದರ್ಥವು.

ಈ ಋಕ್ಕಿಗೆ ಯಾಸ್ಕಮಹರ್ಷಿಯು ತಮ್ಮ ನಿರುಕ್ತದಲ್ಲಿ ಈ ರೀತಿ ಅರ್ಥವಿವರಣೆ ಮಾಡಿರುವರು—

ಅರ್ಕಃ || **ಅರ್ಕೋ ದೇವೋ ಭವತಿ ಯದೇನಮರ್ಚತಿ** ||
**ಅರ್ಕೋ ಮಂತ್ರೋ ಭವತಿ ಯದನೇನಾರ್ಚಂತಿ** ||
**ಅರ್ಕಮನ್ನಂ ಭವತ್ಯರ್ಚತಿ ಭೂತಾನಿ** ||
**ಅರ್ಕೋ ವೃಕ್ಷೋ ಭವತಿ ಸಂವೃತ್ತಃ ಕಟುಕಿಮ್ನಾ** ||

ಅರ್ಕ ಶಬ್ದಕ್ಕೆ ನಾಲ್ಕು ವಿಧವಾದ ಅರ್ಥವನ್ನು ಹೇಳಿರುವರು—

**ದೇವಃ—ತಾವತ್ಸರ್ವ ಏವಾರ್ಕ ಇತ್ಯುಚ್ಯತೇ ಯತ್-ಯಸ್ಮಾತ್** ಏನಂ-ದೇವಂ **ಅರ್ಚಂತಿ ಸ್ತೋತಾರಃ**—ಅರ್ಕ ಎಂದರೆ ದೇವತೆಯು. ಏಕೆಂದರೆ ಇದರಿಂದ ಭಕ್ತರು ಯಾರನ್ನು ಪೂಜಿಸುವುದಕ್ಕೆ ಉಪಯೋಗಿಸುವರೋ ಅಂತಹ ವ್ಯಕ್ತಿ ಅಥವಾ ದೇವನು. ಎಂದರೆ ಭಕ್ತರು ಪೂಜಿಸುವ ವಸ್ತುವಿಗೆ(ದೇವತೆಗೆ)ಅರ್ಕವೆಂದು ಹೆಸರು.

**ಅರ್ಕೋ ಮಂತ್ರೋ ಭವತಿ-ಯತ್-ಯಸ್ಮಾತ್, ಅನೇನ-ಮಂತ್ರೇಣ, ಅರ್ಚಂತಿ ಸ್ತೋತಾರಃ ತಸ್ಮಾದರ್ಕಃ**—ಅರ್ಕವೆಂದರೆ ಮಂತ್ರವೆಂದೂ ಅರ್ಥವಾಗುವುದು. ಏಕೆಂದರೆ ಸ್ತೋತ್ರಮಾಡುವವರು ಇದರಿಂದ (ಅರ್ಕದಿಂದ ಅಥವಾ ಮಂತ್ರದಿಂದ) ದೇವತೆಯನ್ನು ಅರ್ಚಿಸುವರು. ಆದುದರಿಂದ ಅರ್ಕಶಬ್ದಕ್ಕೆ ಮಂತ್ರವೆಂದೂ ಹೆಸರು.

**ಅರ್ಕಮನ್ನಂ ಭವತಿ—ತದ್ಧಿ ಅರ್ಚತಿ ಭೂತಾನಿ, ಯೋ ಹಿ ಪೂಜ್ಯಃ ತಸ್ಯಾನ್ನಮಪಿ ಸಂಸ್ಕಾರವಿಶೇಷೇಣ ಸಂಸ್ಕೃತಂ ಪೂಜಾಯಾಂ ಕ್ರಿಯತೇ, ಪೂಜ್ಯಂ ಚ ಸರ್ವಸ್ಯೈವಾನ್ನಂ**—ಅರ್ಕವೆಂದರೆ ಅನ್ನವೆಂದೂ ಅರ್ಥವಾಗುವುದು. ಅನ್ನವು (ಆಹಾರವು) ಸಮಸ್ತ ಪ್ರಾಣಿಗಳಿಗೂ ಅವಶ್ಯಕವಾಗಿರುವುದರಿಂದ ಅನ್ನವನ್ನು ಎಲ್ಲರೂ ಆದರಿಂದ ಗೌರವಿಸಿ ಅಪೇಕ್ಷಿಸುವರು. ಎಂದರೆ ಎಲ್ಲರೂ ಪ್ರೀತ್ಯಾದರಗಳಿಂದ ಗೌರವಿಸಿ ಬಯಸುವುದರಿಂದ ಅರ್ಕಶಬ್ದಕ್ಕೆ ಅನ್ನವೆಂದೂ ಅರ್ಥವಾಗುವುದು.

**ಅರ್ಕೋ ವೃಕ್ಷೋ ಭವತಿ ಯ ಏಷ ಪ್ರಸಿದ್ಧಃ | ಸಂವೃತ್ತಃ ಹಿ ಸಂಗತಃ ಸಂವ್ಯಾಪ್ತಃ ಕಟುಕಿಮ್ನಾ ಕಟುಕಭಾವೇನ ಭವತಿ**—ಇನ್ನು ಅರ್ಕಶಬ್ದಕ್ಕೆ ವೃಕ್ಷವೆಂಬ ಹೆಸರು ಪ್ರಸಿದ್ಧವಾಗಿಯೇ ಇದೆ. ಅರ್ಕ

ವೃಕ್ಷವೆಂದರೆ ಎಕ್ಕದಗಿಡವೆಂದು ಕರ್ನಾಟಕ ಭಾಷೆಯಲ್ಲಿ ಹೇಳುವರು. ಇದರ ಸಮಿತ್ತುಗಳನ್ನು ಹೋಮಗಳಲ್ಲಿ ಉಪಯೋಗಿಸುವುದರಿಂದಲೂ ಇದನ್ನು ಔಷಧಾದಿಗಳಲ್ಲಿ ಬಳಸುವ ರೂಢಿಯಿರುವುದರಿಂದಲೂ ಅರ್ಕವೃಕ್ಷವು ಎಲ್ಲರಿಗೂ ತಿಳಿದ ವಸ್ತುವಾಗಿದೆ. ಇದು ಕಹಿಯಾಗಿರುವುದರಿಂದ ಕಟುಕಿವೃಕ್ಷ ಎಂದು ಹೇಳುವರು.

ಅರ್ಕಶಬ್ದದ ವಿವರಣೆಯ ಉದಾಹರಣೆಗಾಗಿ ಯಾಸ್ಕರು ಪ್ರಶಸ್ತವಾದ ಈ **ಗಾಯಂತಿ ತ್ವಾ ಗಾಯತ್ರಿಣಃ** ಎಂಬ ಋಕ್ಕನ್ನೇ ತೆಗೆದುಕೊಂಡು ಇದರಲ್ಲಿರುವ ವಂಶಶಬ್ದದ ಅರ್ಥವಿವರಣೆಯನ್ನೂ ಮಾಡಿರುವರು—

**ಗಾಯಂತಿ ತ್ವಾ ಗಾಯತ್ರಿಣಃ ಪ್ರಾರ್ಚಂತಿ ತೇಽರ್ಕಮರ್ಕಿಣೋ ಬ್ರಾಹ್ಮಣಾಸ್ತ್ವಾ ಶತಕ್ರತೋ ಉದ್ವೇಮಿರೇ ವಂಶಮಿವ ವಂಶೋ ವನಶಯೋ ಭವತಿ ವನನಾಚ್ಛ್ರೂಯತ ಇತಿ ವಾ ||**

(ನಿ. ೫-೪)

ಇದಕ್ಕೆ ದುರ್ಗಾಚಾರ್ಯರ ವ್ಯಾಖ್ಯಾನವು ಈರೀತಿ ಇರುವುದು—

**ಗಾಯಂತಿ ತ್ವಾ ಗಾಯತ್ರಿಣಃ**—ಸ್ತುವಂತಿ ತ್ವಾಂ ಸಾಮಗಾಃ ಸಾಮಭಿಃ | **ಅರ್ಚಂತ್ಯರ್ಕಮರ್ಕಿಣಃ**--ಪೂಜಯಂತಿ ತ್ವಾಂ ಋಗ್ಭಿಃ ಹೋತಾರೋ ಮಂತ್ರಿಣಃ | ಏವಮನೇನ ಪ್ರಕಾರೇಣ ಸರ್ವ ಏತೇ ಬ್ರಾಹ್ಮಣಾಃ ಯಾಜ್ಞೇ ಕರ್ಮಣಿ ಹೇ **ಶತಕ್ರತೋ ಉದ್ವಂಶಮಿವ ಯೇಮಿರೆ-ಉದ್ವೇಮಿರೇ ವಂಶಮಿವ** ತ್ವಾಂ ಸ್ತುತಿಭಿಃ ಹವಿರ್ಭಿಶ್ಚ ಯಜ್ಞೇಷು ತವೈವ ಮಹಿಮಾನಂ ವರ್ಧಯಂತೀತ್ಯರ್ಥಃ | **ವಂಶೋ ವನಶಯೋ ಭವತಿ** ವನೇ ಶಯಿತ ಇವಾಸ್ತೇ, **ವನನಾಚ್ಛ್ರೂಯತ ಇತಿ ವಾ** ಸಂಭಜನಾದ್ವಾ ವಲ್ಲಿಭಿಃ || ಏವಮತ್ರ ದೇವಃ ಅರ್ಕಶಬ್ದೇನೋಚ್ಯತೇ ಮಂತ್ರಸ್ಯಾರ್ಕಶಬ್ದವಾಚ್ಯತ್ವೇ **ಅರ್ಚಂತ್ಯರ್ಕಮರ್ಕಿಣಃ** ಇತ್ಯೇಷ ಏವ ನಿಗಮಃ | **ಅರ್ಕಿಣೋ ಹಿ** ಮಂತ್ರಿಣ ಏವಾಭಿಪ್ರೇತಾಃ | ವೃಕ್ಷಸ್ತು ಪ್ರಸಿದ್ಧ ಏವ | ತೇನ ನಿಗಮಸ್ತದಭಿಧಾಯಕೋ ನೈವಾಸ್ತಿ ||

ಇಲ್ಲಿ ಯಾಸ್ಕರು **ಬ್ರಹ್ಮಾಣಃ** ಎಂಬ ಶಬ್ದಕ್ಕೆ ಬ್ರಾಹ್ಮಣಾಃ ಎಂದರ್ಥ ಹೇಳಿರುವರು ಬ್ರಾಹ್ಮಣರೆಂದರೆ ಬ್ರಾಹ್ಮಣವರ್ಣದವರೂ ಮತ್ತು ಯಜ್ಞಯಾಗಾದಿಗಳಲ್ಲಿ ಭಾಗವಹಿಸುವ ಬ್ರಹ್ಮನೇ ಮೊದಲಾದ ಋತ್ವಿಜರೂ ಎಂದಾಗುವುದು. ವಂಶಶಬ್ದಕ್ಕೆ--**ವಂಶೋ ವನಶಯೋ ಭವತಿ ವನನಾಚ್ಛ್ರೂಯತ ಇತಿ ವಾ** ಎಂದರ್ಥ ಹೇಳಿರುವರು. ಎಂದರೆ ವನದಲ್ಲಿ ಇರುವುದರಿಂದ ಇದಕ್ಕೆ ವಂಶವೆಂದು ಹೆಸರು ಅಥವಾ ಬಿದಿರು ಮೆಳೆಗಳು ಗಾಳಿಯ ಹೊಡೆತದಿಂದ ಒಂದಕ್ಕೊಂದು ತಿಕ್ಕುವಾಗ ಶಬ್ದಮಾಡುವುದರಿಂದ ಇದಕ್ಕೆ ವಂಶವೆಂದು ಹೆಸರು ಅಥವಾ ಬಳ್ಳಿಗಳಿಂದ ಸುತ್ತುವರಿಯಲ್ಪಡುವುದರಿಂದ ಇದಕ್ಕೆ ವಂಶವೆಂದು ಹೆಸರು ಎಂದು ಹೇಳಿರುವರು.

**ಅರ್ಕಿಣಃ— ಅರ್ಚನಹೇತುಮಂತ್ರಯುಕ್ತಾ ಹೋತಾರಃ | ಅರ್ಕಾ ಮಂತ್ರಾ ಏಷಾಂ ಸಂತೀತ್ಯರ್ಕಿಣಃ ಹೋತಾರಃ** || ಅರ್ಕ ಶಬ್ದಕ್ಕೆ (ಋಕ್ಕು) ಮಂತ್ರವೆಂಬ ಅರ್ಥವಿವರಣೆಯಿರುವುದರಿಂದ ಆ ಮಂತ್ರಗಳಿಂದ ಸ್ತುತಿಸುವವರಿಗೆ ಅರ್ಕಿಣಃ ಎಂದು ಹೆಸರು ಎಂದರೆ ಶಸ್ತ್ರರೂಪವಾದ ಋಕ್ಕುಗಳನ್ನು ಪಠಿಸುವ ಹೋತೃವರ್ಗದ ಋತ್ವಿಜರು ಎಂದರ್ಥವು.

ಬ್ರಹ್ಮಾಣಃ—ಈ ಶಬ್ದಕ್ಕೆ ಭಾಷ್ಯಕಾರರು ಬ್ರಹ್ಮನೆಂಬ ಋತ್ವಿಜನೇ ಮೊದಲಾದ ಬ್ರಾಹ್ಮಣರು ಎಂದರ್ಥ ಹೇಳಿರುವರು. ಯಾಸ್ಕರು ಸಾಮಾನ್ಯವಾಗಿ ಬ್ರಾಹ್ಮಣರೆಂದೇ ಅರ್ಥವಿವರಣೆ ಮಾಡಿರುವರು.

**ಶತಕ್ರತೋ**—ಈ ಶಬ್ದಾರ್ಥವಿವರಣೆಯನ್ನು ಹಿಂದೆಯೇ ಹೇಳಿರುವೆವು.

**ವಂಶಮಿವ**—ಈ ಶಬ್ದದ ವಿವರಣೆಯೂ ಯಾಸ್ಕರ ಈ ಅರ್ಥಾನುವಾದದಲ್ಲಿಯೇ ಇರುವುದು.

॥ ವ್ಯಾಕರಣಪ್ರಕ್ರಿಯಾ ॥

**ಗಾಯನ್ತಿ**—ಗೈಶಬ್ದೇ ಲಟ್ ಪರಸ್ಮೈಪದ ಪ್ರಥಮಪುರುಷ ಬಹುವಚನ ಝಿಪ್ರತ್ಯಯ. **ಝೋಽನ್ತಃ** (ಪಾ.ಸೂ. ೭-೧-೩) ಎಂಬುದರಿಂದ ಝ್ ಗೆ ಅನ್ತ್ ಆದೇಶ, ಶಪ್‌ವಿಕರಣ, ಶಿತ್ತ್ವಾದಪ್ರತ್ಯಯಪರದಲ್ಲಿರುವುದರಿಂದ **ಆದೇಚ ಉಪದೇಶೇಽಶಿತಿ** (ಪಾ. ಸೂ. ೬-೧-೪೫) ಎಂಬುದರಿಂದ ಐಗೆ ಆಕಾರಬರುವುದಿಲ್ಲ. **ಏಚೋಽಯವಾ ಯಾವಃ** (ಪಾ.ಸೂ. ೬-೧-೭೮) ಎಂಬುದರಿಂದ ಆಯ್ ಆದೇಶ, ಗಾಯನ್ತಿ ಎಂದಾಗುವುದು. ಶಪ್ಪು ಪಿತ್ತ್ವಾದ್ದರಿಂದ ಅನುದಾತ್ತ. ಅನ್ತಿ ಎಂಬ ಲಸ್ಥಾನಿಕವಾದ ಸಾರ್ವಧಾತುಕವು ಶಪ್ ಎಂಬ ಅದುಪದೇಶದ ಮುಂದೆ ಇರುವುದರಿಂದ **ತಾಸ್ಯನುದಾತ್ತೇನ್ಙಿದದುಪದೇಶಾತ್**—(ಪಾ ಸೂ. ೬-೧-೧೮೬) ಎಂಬುದರಿಂದ ಅನುದಾತ್ತ. ಗಾ ಎಂಬಲ್ಲಿ ಆಕಾರವು ಧಾತುಸ್ವರದಿಂದ ಉದಾತ್ತ.

**ಗಾಯತ್ರಿಣಃ**—ಗಾಯತ್ರ ಎಂದು ಸಾಮಕ್ಕೆ ಹೆಸರು. ಗಾಯತ್ರಂ ಸಾಮ ಯೇಷಾಂ ಉದ್ಗಾತೄಣಾಂ ಅಸ್ತಿ ತೇ (ಯಾವ ಉದ್ಗಾತೃಗಳಿಗೆ ಗಾಯತ್ರಸಾಮವಿದೆಯೋ ಅವರು) ಎಂದು ವಿಗ್ರಹವಾದಾಗ **ಅತಇನಿಠನೌ** (ಪಾ. ಸೂ- ೫-೨-೧೧೫) ಎಂಬುದರಿಂದ ಇನಿ ಪ್ರತ್ಯಯ. **ಯಸ್ಯೇತಿಚ** (ಪಾ. ಸೂ ೬-೪-೧೪೮) ಎಂಬುದರಿಂದ ಪ್ರತ್ಯಯದ ಹಿಂದಿರುವ ಅಕಾರಕ್ಕೆ ಲೋಪ. ಪ್ರಥಮಾ ಬಹುವಚನ ಗಾಯತ್ರಿಣಃ. ಪ್ರತ್ಯಯಸ್ವರದಿಂದ ಇಕಾರ ಉದಾತ್ತ.

**ಅರ್ಚನ್ತಿ**—ಅರ್ಚಪೂಜಾಯಾಂ, ಭ್ವಾದಿಯಲ್ಲಿರುವ (೧ನೇ ಗಣ) ಧಾತು, ಶಪ್ಪು ಪಿತ್ತ್ವಾದ್ದರಿಂದಲೂ ಅನ್ತಿ ಎಂಬುದು ಅದುಪದೇಶದ ಮುಂದಿರುವ ಲಸಾರ್ವಧಾತುಕವಾದ್ದರಿಂದಲೂ ಅನುದಾತ್ತ. ಧಾತುಸ್ವರ ನಿಲ್ಲುವುದು. ಪಾದದ ಆದಿಯಲ್ಲಿ ಇರುವುದರಿಂದ **ತಿಙ್ಙತಿಙಃ** (ಪಾ. ಸು. ೮-೧-೨೮) ಎಂಬುದರಿಂದ ಅನುದಾತ್ತ ಬರುವುದಿಲ್ಲ:

**ಅರ್ಕಮ್**—ಅರ್ಚನ್ತಿ ಏಭಿಃ ಇತಿ, ಅರ್ಕಾಃ, ಮಂತ್ರಾಃ (ಯಾವ ಮಂತ್ರಗಳಿಂದ ಪೂಜಿಸುತ್ತಾರೆ ಯೋ ಆ ಮಂತ್ರಗಳಿಗೆ ಅರ್ಕಗಳು ಎನ್ನುವರು) ಆ ಮಂತ್ರಗಳಿಂದ ಪೂಜಿಸಲ್ಪಡುವುದರಿಂದ ಮಂತ್ರಾತ್ಮಕನಾದ ಇಂದ್ರನೂ ಸಹ ಲಕ್ಷಣೆಯಿಂದ ಅರ್ಕಪದದಿಂದ ಬೋಧಿಸಲ್ಪಡುವನು. **ಪುಂಸಿಸಂಜ್ಞಾಯಾಂಘಃ ಪ್ರಾಯೇಣ** (ಪಾ. ಸೂ. ೩-೩೧೧೮) ಪುಲ್ಲಿಂಗದಲ್ಲಿ ಸಂಜ್ಞೆತೋರುವಾಗ ಧಾತುಗಳಮುಂದೆ ಕರಣ, ಅಧಿಕರಣ ಎಂಬ ಅರ್ಥಗ ಳಲ್ಲಿ ಪ್ರಾಯಃ ಘ ಪ್ರತ್ಯಯ ಬರುವುದು ಎಂಬುದರಿಂದ ಅರ್ಚ ಧಾತುವಿನ ಮುಂದೆ ಘ ಪ್ರತ್ಯಯ ಬಂದರೆ ಅರ್ಚ್ ಅ, ಪ್ರತ್ಯಯವು ಘಿತ್ತು (ಘಕಾರೇತ್ಸಂಜ್ಞಕ)ಆದ್ದರಿಂದ **ಚಜೋಃಕುಘಿಣ್ಯತೋಃ** (ಪಾ.ಸೂ. ೭-೩-೫೨) ಘಿತ್ಪ್ರತ್ಯಯ, ಣ್ಯತ್ಪ್ರತ್ಯಯಗಳು ಪರದಲ್ಲಿರುವಾಗ ಚಕಾರ ಜಕಾರಗಳಿಗೆ ಕವರ್ಗ ಬರುವುದು. ಅಂದರೆ ಚಕಾರಕ್ಕೆ ಕಕಾರ ಜಕಾರಕ್ಕೆ ಗಕಾರ ಎಂದು ಅರ್ಥ, ಈ ಸೂತ್ರದಿಂದ ಚಕಾರಕ್ಕೆ ಕಕಾರಬಂದರೆ ಅರ್ಕ ಎಂದಾಗುವುದು. ಪ್ರತ್ಯಯಸ್ವರದಿಂದ ಅಂತೋದಾತ್ತ.

**ಅರ್ಕಿಣಃ**—ಅರ್ಕಾಃ ಮಂತ್ರಾಃ ಏಷಾಂ ಸನ್ತೀತ್ಯರ್ಕಿಣಃ, ಹೋತೃಗಳು ಎಂದರ್ಥ. **ಅತಇನಿಠನೌ** (ಪಾ. ಸೂ. ೫-೨-೧೧೫) ಎಂಬುದರಿಂದ ಇನಿಪ್ರತ್ಯಯ, ಯದ್ಯಪಿ ಅರ್ಕಶಬ್ದವು ಕೃದಂತ. ಆದ್ದರಿಂದ **ಏಕಾಕ್ಷ ರಾತ್ಕೃತೋಜಾತೇಸ್ಸಪ್ತಮ್ಯಾಂಚನ ತೌಸ್ಮೃತೌ** (ಪಾ. ಮ. ೫-೨-೧೧೫-೧) ಏಕಾಕ್ಷರ ಶಬ್ದ, ಕೃದಂತ ಶಬ್ದ, ಜಾತಿವಾಚಕ ಇವುಗಳ ಮುಂದೆಯೂ ಸಪ್ತಮ್ಯರ್ಥದಲ್ಲಿಯೂ ಸಹ ಇನಿ ಠನ್‌ಗಳು ಬರುವುದಿಲ್ಲ, ಎಂಬ ಮಹಾ

ಭಾಷ್ಯವಚನದಂತೆ ಅರ್ಕಶಬ್ದದ ಮುಂದೆ ಇನಿ ಪ್ರತ್ಯಯ ಬರುವುದು ಉಚಿತವಲ್ಲ. ಆದರೂ ಇಲ್ಲಿ ವ್ಯತ್ಯಯದಿಂದ ಇನಿಪ್ರತ್ಯಯ ಬರುವುದು. ಪ್ರತ್ಯಯ ಸ್ವರದಿಂದ ಇಕಾರ ಉದಾತ್ತ.

**ಬ್ರಹ್ಮಾಣಃ**—ಪ್ರಾತಿಪದಕ ಸ್ವರದಿಂದ ಅಂತೋದಾತ್ತ.

**ಶತಕ್ರತೋ—ಆಮನ್ತ್ರಿತಸ್ಯ ಚ** (೮-೧-೧೯)ಎಂಬುದರಿಂದ ಅನುದಾತ್ತ. ಸಂಹಿತಾಕಾಲದಲ್ಲಿ ಉವರ್ಣ ಪರದಲ್ಲಿರುವಾಗ **ಏಚೋಽಯವಾಯಾವಃ** (ಪಾ. ಸೂ. ೬-೧-೭೮) ಎಂಬುದರಿಂದ ಓಗೆ ಅವ್ ಆದೇಶ. ನಂತರ **ಲೋಪಶ್ಶಾಕಲ್ಯಸ್ಯ**, (ಪಾ. ಸೂ. ೮-೩-೧೯) ಎಂಬುದರಿಂದ ವಕಾರಕ್ಕೆ ಲೋಪ. **ಪೂರ್ವತ್ರಾಸಿದ್ಧಂ** (ಪಾ. ಸೂ. ೮-೨-೧) ಎಂಬುವುರಿಂದ ವ ಲೋಪವು ಅಸಿದ್ಧವಾಗುವುದರಿಂದ **ಆದ್ಗುಣಃ** (ಪಾ. ಸೂ. ೬-೧-೮೭) ಎಂಬುದರಿಂದ ಗುಣ ಬರುವುದಿಲ್ಲ.

**ವಂಶಮಿವ**—ವಂಶಶಬ್ದವು ಪ್ರಾತಿಪದಿಕಸ್ವರದಿಂದ ಅಂತೋದಾತ್ತ. ಇದಕ್ಕೆ ಇವ ಶಬ್ದದೊಂದಿಗೆ ಸಮಾಸ ಬಂದಮೇಲೆಯೂ **ಇವೇನ ವಿಭಕ್ತ್ಯಲೋಪಃ ಪೂರ್ವಪದಪ್ರಕೃತಿಸ್ವರತ್ವಂ ಚ** (ಪಾ. ಸೂ. ೨-೧-೪) ಎಂಬುದರಿಂದ ಅದೇ ನಿಲ್ಲುವುದು.

**ಯೇಮಿರೇ**—ಯಮುಉಪರಮೇ ಧಾತು ಲಿಟ್ ಆತ್ಮನೇಪದಿ ಪ್ರ-ಪು-ಬಹುವಚನ ಝ. **ಲಿಟಸ್ತಝಯೋರೇಶಿರೇಚ್** (ಪಾ. ಸದ. ೩-೯-೮೧) ಎಂಬುದರಿಂದ ಇರೇಚ್ ಆದೇಶ. **ಲಿಟಿಧಾತೋರನಭ್ಯಾಸಸ್ಯ** (ಪಾ.ಸೂ. ೬-೧-೮)ಎಂಬುದರಿಂದ ದ್ವಿತ್ವ. ಯಮ್, ಯಮ್+ಇರೇ ಎಂದಿರುವಾಗ **ಅತ ಏಕ ಹಲ್ಮಧ್ಯೇಽನಾದೇಶಾದೇರ್ಲಿಟಿ** (ಪಾ. ಸೂ. ೬-೪-೧-೨೦) ಕಿತ್ತ್ವಾದಲಿಟ್ಪ್ರ ಪರದಲ್ಲಿರುವಾಗ, ಲಿಣ್ನಿಮಿತ್ತಾದೇಶಾದ್ಯವಯವಕ ಭಿನ್ನಾಂಗ ಸಂಬಂಧಿಯಾದ ಅಸಂಯುಕ್ತವರ್ಣ ಮಧ್ಯದಲ್ಲಿರುವ ಹ್ರಸ್ವಾಕಾರಕ್ಕೆ ಏತ್ವವೂ, ಅಭ್ಯಾಸಕ್ಕೆ ಲೋಪವೂ ಸಹ ಬರುವುದು ಎಂಬುದರಿಂದ ಏತ್ವಾಭ್ಯಾಸಲೋಪಗಳು ಬಂದರೆ ಯೇಮಿರೇ ಎಂದಾಗುವುದು. ಯಮು ಉಪರಮೇ ಎಂಬಧಾತುವು ಭ್ವಾದಿಯಲ್ಲಿ ಪರಸ್ಮೈಪದವಾಗಿರುವುದು. ಆದರೂ ಇಲ್ಲಿ ವ್ಯತ್ಯಯದಿಂದ ಆತ್ಮನೇಪದ ಬಂದಿರುವುದು. **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ ಬರುವುದು ॥ ೧ ॥

॥ ಸಂಹಿತಾಪಾಠಃ ॥

ಯತ್ಸಾನೋಃ ಸಾನುಮಾರುಹದ್ಭೂರ್ಯಸ್ಪಷ್ಟ ಕರ್ತ್ವಂ ।
ತದಿಂದ್ರೋ ಅರ್ಥಂ ಚೇತತಿ ಯೂಥೇನ ವೃಷ್ಣಿರೇಜತಿ ॥ ೨ ॥

॥ ಪದಪಾಠಃ ॥

ಯತ್ । ಸಾನೋಃ । ಸಾನುಂ । ಆ । ಅರುಹತ್ । ಭೂರಿ । ಅಸ್ಪಷ್ಟ । ಕರ್ತ್ವಂ ॥
ತತ್ । ಇಂದ್ರಃ । ಅರ್ಥಂ । ಚೇತತಿ । ಯೂಥೇನ । ವೃಷ್ಣಿಃ । ಏಜತಿ ॥ ೨ ॥

॥ ಸಾಯಣಭಾಷ್ಯಂ ॥

ಯದ್ಯದಾ ಸಾನೋಃ ಸಾನುಮಾರುಹತ್ ಯಜಮಾನಃ ಸೋಮವಲ್ಲೀಸಮಿದಾದ್ಯಾಹರಣಾಯೈಕಸ್ಮಾತ್ಪರ್ವತಭಾಗಾದಪರಂ ಪರ್ವತಭಾಗಮಾರೂಢವಾನ್ । ತಥಾ ಭೂರಿಸ್ಪ್ರಭೂತಂ ಕರ್ತ್ವಂ ಕರ್ಮ ಸೋಮಯಾಗರೂಪಮಸ್ಪಷ್ಟ ಸ್ಪೃಷ್ಟವಾನ್। ಉಪಕ್ರಾಂತವಾನಿತ್ಯರ್ಥಃ । ತತ್ತದಾನೀಮಿಂದ್ರೋಽರ್ಥಂ ಯಜಮಾನಸ್ಯ ಪ್ರಯೋಜನಂ ಚೇತತಿ । ಜಾನಾತಿ । ಜ್ಞಾತ್ವಾ ಚ ವೃಷ್ಣಿಃ ಕಾಮಾನಾಂ ವರ್ಷಿತಾ ಸನ್ ಯೂಥೇನ ಮರುದ್ಗಣೇನ ಸಹೈಜತಿ । ಕಂಪತೇ । ಸ್ವಸ್ಥಾನಾದ್ಯಜ್ಞಭೂಮಿಮಾಗಂತುಮುದ್ಯುಙ್ಕ್ತ ಇತ್ಯರ್ಥಃ ॥ ಸಾನೋಃ । ಷಣು ದಾನೇ । ಸನೋತಿ ದದಾತಿ ನಿವಸತಾಮವಕಾಶಮಿತಿ ಸಾನುಃ । ದೃಸನಿಜನಿಚರಿಚಟಿರಹಿಭ್ಯೋ ಞುಣ್ । ಉ.೧-೩ । ಣಿತ್ತ್ವಾದುಪಧಾಯಾ ವೃದ್ಧಿಃ । ಞಿತ್ತ್ವಾದಾದ್ಯುದಾತ್ತತ್ವಂ ಚ । ಅರುಹತ್ । ರುಹೇರ್ಲಙಿ ತಿಪಿ ಶಪಿ ಸಂಜ್ಞಾಪೂರ್ವಕೋ ವಿಧಿರನಿತ್ಯಃ । ಪರಿ ೯೩-೧ । ಇತಿ ಲಘೂಪಧಗುಣೋ ನ ಭವತಿ । ಲುಙ್ಲಙ್ಲೃಙ್ಕ್ಷ್ವಡುದಾತ್ತಃ । ಸತಿ ಶಿಷ್ಟತ್ವಾತ್ಸ ಏವ ಶಿಷ್ಯತೇ । ನಿಪಾತೈರ್ಯದ್ಯದಿಹಂತೇತಿ । ಪಾ ೮-೧-೩೦ । ನಿಷೇಧಾನ್ನಿಘಾತೋ ನ ಭವತಿ । ಭೂರಿ । ಆದಿಶದಿಭೂಶುಭಿಭ್ಯಃ ಕ್ರಿನ್ । ಉ ೪-೬೫ । ಕಿತ್ತ್ವಾದ್ಗುಣಾಭಾವಃ । ನಿತ್ತ್ವಾದಾದ್ಯುದಾತ್ತಃ । ಅಸ್ಪಷ್ಟ । ಸ್ಪಶ ಬಾಧನಸ್ಪರ್ಶನಯೋಃ । ಸ್ವರಿತಞಿತ ಇತ್ಯಾತ್ಮನೇಪದಂ । ಲಙಃ ಪ್ರಥಮಪುರುಷೈಕವಚನಂ ತ । ಬಹುಲಂ ಛಂದಸೀತಿ ಶಪೋ ಲುಕ್ । ವ್ರಶ್ಚಾದಿಷತ್ವಷ್ಟುತ್ವೇ । ಪಾ ೮-೨-೩೬, ೮-೪-೪೧ । ಲುಙ್ಲಙ್ಲೃಙ್ಕ್ಷ್ವಡುದಾತ್ತ ಇತ್ಯಡಾಗಮ ಉದಾತ್ತಃ । ಸ ಏವ ಶಿಷ್ಯತೇ । ಅನುಷಂಗೇಣ ಯಚ್ಛಬ್ದಯೋಗಾನ್ನಿಘಾತಾಭಾವಃ ಕರ್ತ್ವಂ । ಡುಕೃಞ್ ಕರಣೇ । ಅನ್ಯೇಭ್ಯೋಽಪಿ ದೃಶ್ಯಂತೇ । ಪಾ. ೩-೨-೭೫ । ಇತಿ ವಿಚ್ । ಗುಣೋ ರಪರತ್ವಂ । ವಿಚಃ ಸರ್ವಾಪಹಾರೀ ಲೋಪಃ । ಕರೋ ಭಾವಃ ಕರ್ತ್ವಂ। ಅರ್ಥಂ । ಅರ್ತೇರುಷಿಕುಷಿಗಾರ್ತಿಭ್ಯಸ್ಥನ್ । ಉ. ೨-೪ । ನಿತ್ತ್ವಾದಾದ್ಯುದಾತ್ತಃ । ಯೂಥೇನ । ತಿಥಪೃಷ್ಠಗೂಥಯೂಥಪ್ರೋಥಾಃ । ಉ. ೨-೧೨ । ಇತಿ ಥಕ್ಪ್ರತ್ಯಯಾಂತೋ ನಿಪಾತಿತಃ । ವೃಷ್ಣಿಃ । ನಿರಿತ್ಯನುವೃತ್ತೌ ಸೃವೃಷಿಭ್ಯಾಂ ಕಿತ್ । ಉ. ೪-೪೯ । ಇತಿ ನಿಪ್ರತ್ಯಯಾಂತಃ । ಕಿತ್ತ್ವಾದ್ಗುಣಾಭಾವಃ । ಪ್ರತ್ಯಯಸ್ವರೇಣಾಂತೋದಾತ್ತಃ । ಏಜತಿ ಏಜೃ ಕಂಪನೇ । ತಿಙ್ಙತಿಙ ಇತಿ ನಿಘಾತಃ ॥

॥ ಪ್ರತಿಪದಾರ್ಥ ॥

ಯತ್—ಯಾವಾಗ । (ಯಜಮಾನನು ಸೋಮಲತಾ ಮತ್ತು ಸಮಿತ್ಸಂಗ್ರಹಣಾರ್ಥವಾಗಿ) ಸಾನೋಃ—ಒಂದು ಗಿರಿಶಿಖರದಿಂದ । ಸಾನುಂ— ಮತ್ತೊಂದು ಶಿಖರವನ್ನು। ಆ ಅರುಹತ್– ಹತ್ತುವನೋ । (ಮತ್ತು) ಭೂರಿ—ಬಹಳವಾದ । ಕರ್ತ್ವಂ—(ಸೋಮಯಾಗರೂಪವಾದ) ಕರ್ಮವನ್ನು । ಅಸ್ಪಷ್ಟ—ಪ್ರಾರಂಭ ಮಾಡಿದನೋ । ತತ್ —ಆಗ । ಇಂದ್ರಃ—ಇಂದ್ರನು । ಅರ್ಥಂ—ಯಜಮಾನನ ಇಷ್ಟವನ್ನು । ಚೇತತಿ— ತಿಳಿಯುವನು । (ತಿಳಿದಬಳಿಕ) ವೃಷ್ಣಿಃ—ಕಾಮವೃಷ್ಟಿಪ್ರದನಾದ ಇಂದ್ರನು । ಯೂಥೇನ—ಮರುದ್ಗಣಸಹಿತನಾಗಿ । ಏಜತಿ--(ತನ್ನ ನಿವಾಸದಿಂದ ಕದಲಿ ಎಂದರೆ ಹೊರಟು) ಯಜಮಾನನ ಸಮೀಪಕ್ಕೆ ಬರಲು ಉದ್ಯುಕ್ತನಾಗುವನು.

॥ ಭಾವಾರ್ಥ ॥

ಬೆಟ್ಟದ ಮೇಲೆ ಬೆಳೆದಿರುವ ಸೋಮಲತೆಯನ್ನೂ ಯಜ್ಞಕ್ಕೆ ಬೇಕಾಗುವ ಸಮಿತ್ತುಗಳನ್ನೂ ತರುವುದಕ್ಕಾಗಿ ಯಜ್ಞಮಾಡುವ ಯಜಮಾನನು ಪರ್ವತಕ್ಕೆ ಹೋಗಿ ಅಲ್ಲಿ ಒಂದು ತುದಿಯಿಂದ ಮತ್ತೊಂದು ತುದಿಗೆ

ಹೋಗುತ್ತಾ ಸೋಮಲತೆಯನ್ನು ಹುಡುಕಿ ತಂದು ಯಜ್ಞಾರಂಭವನ್ನು ಮಾಡುವನು. ಅದನ್ನು ತಿಳಿದ ಇಂದ್ರನು ಯಜಮಾನನ ಇಷ್ಟಾರ್ಥಗಳನ್ನು ಕೊಡುವವನಾದುದರಿಂದ ಅದಕ್ಕಾಗಿ ಯಜ್ಞಭೂಮಿಗೆ ತನ್ನ ಸ್ನೇಹಿತರಾದ ಮರುದ್ಗಣಗಳೊಡಗೂಡಿ ತನ್ನ ಸ್ವಸ್ಥಾನದಿಂದ ಹೊರಟುಬರುವನು.

## English Translation.

When Indra the showerer of blessings knows the object of the worshipper who has wandered from one ridge of the mountain to the other in quest of soma plant and who has just begun the sacrifice, he (Indra) approaches the sacrificial place with the troop of (Maruts).

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವನ್ನು ಹೊಂದಿಸುವುದಕ್ಕಾಗಿ ಅನೇಕ ಶಬ್ದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕಾಗಿರುವುದು. **ಸಾನೋಃ ಸಾನುಮಾರುಹತ್**--ಬೆಟ್ಟದ ಒಂದು ತುದಿಯಿಂದ (ಶಿಖರ ಅಥವಾ ತಪ್ಪಲು ಪ್ರದೇಶ) ಮತ್ತೊಂದು ತುದಿಯನ್ನು ಏರುವನು ಎಂದರೆ, ಯಾರು ಏರುವನು ಮತ್ತು ಏತಕ್ಕಾಗಿ ಏರುವನು ಎಂಬ ಪ್ರಶ್ನೆಯು ಉದ್ಭವಿಸುವುದು. ಇಲ್ಲಿ ಅರ್ಥವನ್ನು ಹೊಂದಿಸುವುದಕ್ಕಾಗಿ ಭಾಷ್ಯಕಾರರು--ಯಜಮಾನನು ಸೋಮಲತೆಯನ್ನೂ ಸಮಿದಾದಿ ಯಜ್ಞಸಾಧನಗಳನ್ನೂ ತರುವುದಕ್ಕಾಗಿ ಎಂಬ ಶಬ್ದಗಳನ್ನು ಅಧ್ಯಾಹಾರ ಮಾಡಿರುವರು. ಮತ್ತು ಯೂಥಶಬ್ದಗೆ ಹಿಂಡು ಸಮೂಹ, ಗಣ ಎಂಬರ್ಥವಿರುವುದರಿಂದ, ಯಾವ ಸಮೂಹವೆಂಬ ಪ್ರಶ್ನೆಗೆ ಮರುತ್ತುಗಳ ಸಮೂಹ ಎಂದು ಮರುತ್ ಶಬ್ದವನ್ನೂ ಅಧ್ಯಾಹಾರ ಮಾಡಿರುವರು. ಇದಲ್ಲದೆ ವೃಷ್ಣಿ ಶಬ್ದಕ್ಕೆ ವರ್ಷಿತಾ ಎಂದರೆ ವೃಷ್ಟಿಪ್ರದನು, ಮಳೆಯನ್ನು ಉಂಟುಮಾಡುವವನು ಎಂದರ್ಥವಿರುವುದರಿಂದ ವೃಷ್ಟಿಗೆ ಸಹಾಯಕವಾಗಿ ಮರುದ್ಗಣಗಳೊಡನೆ ಬರುವನು ಎಂಬ ಅರ್ಥವು ಸರಿಹೋಗುವುದಾದರೂ ಭಾಷ್ಯಕಾರರು ವೃಷ್ಣಿಶಬ್ದಕ್ಕೆ ಕಾಮನಾಂ ವರ್ಷಿತಾ—ಇಷ್ಟಾರ್ಥಗಳೆಂಬ ಮಳೆಯನ್ನು ಕೊಡುವವನು ಎಂದು ಅರ್ಥ ಹೇಳಿರುವುದರಿಂದ ಮಳೆಯಲ್ಲದ ಇತರ ಇಷ್ಟಾರ್ಥಗಳನ್ನು ಕೊಡುವುದಕ್ಕೆ ಮರುದ್ಗಣಗಳ ಸಹಾಯವು ಅವಶ್ಯಕವೇ ಎಂಬ ಸಂದೇಹಕ್ಕೆ ಅವಕಾಶವಿರುವುದು. ಆದುದರಿಂದ ಈ ಋಕ್ಕಿನಲ್ಲಿರುವ **ಯೂಥೇನ** ಎಂಬ ಶಬ್ದಕ್ಕೆ **ಮರುದ್ಗಣದಿಂದ** ಎಂಬ ಅರ್ಥವೇ ಕವಿಯ ಅಭಿಪ್ರಾಯವಾಗಿತ್ತೆಂಬುದು ಸಂದೇಹಾಸ್ಪದವಾಗಿದೆ. ವೆಂಕಟಮಾಧವರು ವಸುಸಮೂಹೇನ ಎಂಬ ಅರ್ಥವನ್ನು ಹೇಳಿರುವರು. ಆದುದರಿಂದ ದೇವತೆಗಳ ಸಮೂಹದೊಡನೆ ಎಂದು ಅರ್ಥ ಹೇಳುವುದೇ ಯುಕ್ತವಾಗಿ ತೋರುವುದು.

**ಯತ್, ತತ್**—ಇಲ್ಲಿ ಈ ಶಬ್ದಗಳು ಯಚ್ಛಬ್ದತಚ್ಛಬ್ದಗಳ ಯಾವ ವಿಭಕ್ತಿವಚನಗಳೂ ಅಲ್ಲ, ಅವ್ಯಯಗಳು. ಇವುಗಳಿಗೆ **ಯದಾ ತದಾ** ಯಾವಾಗ, ಆಗ ಎಂಬ ಅರ್ಥವನ್ನು ಹೇಳಬೇಕು.

**ಸಾನೋಃ, ಸಾನುಂ**—ಗಿರಿಶಿಖರ ಅಥವಾ ಬೆಟ್ಟದ ತಪ್ಪಲು. ಸೋಮಲತೆಯು ವಿಶೇಷವಾಗಿ ಬೆಟ್ಟ ಪ್ರದೇಶಗಳಲ್ಲಿ ಬೆಳೆಯುವುದರಿಂದಲೂ, ಮೈದಾನದ ಸಮಭೂಮಿಯಲ್ಲಿ ಬೆಳೆಯುವ ಲತೆಗಿಂತಲೂ ಬೆಟ್ಟದ ಹೆಚ್ಚು ಹೆಚ್ಚು ಎತ್ತರ ಪ್ರದೇಶಗಳಲ್ಲಿ ಬೆಳೆಯುವ ಸೋಮಲತೆಯಲ್ಲಿ ಹೆಚ್ಚಾದ ಮತ್ತು ಉತ್ತಮವಾದ ರಸವು ದೊರೆ

ಯುವುದರಿಂದಲೂ ಸೋಮಲತೆಗಳನ್ನು ತರುವುದಕ್ಕಾಗಿ ಎತ್ತರವಾದ ಬೆಟ್ಟಗಳಿಗೆ ಹೋಗುವುದು ಆ ಕಾಲದಲ್ಲಿ ರೂಢಿಯಾಗಿತ್ತು. ಈ ವಿಷಯವು ಋಗ್ವೇದದ ಅನೇಕ ಕಡೆಗಳಲ್ಲಿ ಪ್ರಸ್ತಾಪಿಸಲ್ಪಟ್ಟಿದೆ.

**ಅಸ್ಪೃಷ್ಟ—ಸ್ಪೃಶ ಬಾಧನಸ್ಪರ್ಶನಯೋಃ** ॥ ಸ್ಪರ್ಶಮಾಡಿದನು ಎಂದರೆ ಉಪಕ್ರಮ ಮಾಡಿದನು ಎಂದರ್ಥವು.

**ಕರ್ತ್ವಂ**—ಎಂದರೆ ಕರ್ಮ. ಅಪಃ ಅಪ್ನಃ ಮೊದಲಾದ ಇಪ್ಪತ್ತಾರು ಕರ್ಮವಾಚಕ ಶಬ್ದಗಳ ಮಧ್ಯದಲ್ಲಿ ಕರ್ತ್ವಂ ಎಂಬ ಶಬ್ದವು ಪಠಿತವಾಗಿದೆ (ನಿ. ೩-೨).

**ವೃಷ್ಣಿಃ—ಕಾಮಾನಾಂ ವರ್ಷಿತಾ ಅಥವಾ ವರ್ಷಿತಾ** ॥ ವೃಷ್ಟಿಪ್ರದನು, ಮಳೆಯನ್ನು ಕೊಡುವವನು. ವೃಷ್ಣಿಶಬ್ದವು ಋಗ್ವೇದದಲ್ಲಿ ಅನೇಕ ಕಡೆ ಇಂದ್ರನಪರವಾಗಿ ಎಂದರೆ ಇಂದ್ರನ ಗುಣಗಳನ್ನು ಹೇಳುವ ಸಂದರ್ಭಗಳಲ್ಲಿ ಉಪಯೋಗಿಸಲ್ಪಟ್ಟಿದೆ.

**ಏಜತಿ**—ಏಜೃ ಕಂಪನೇ, ಏಜೃ ಧಾತುವಿಗೆ ಕಂಪಿಸುವುದು, ಚಲಿಸುವುದು ಎಂದರ್ಥ. ಇಲ್ಲಿ ಏಜತಿ-ಚಲಿಸುವನು ಎಂದರೆ ಸ್ವಸ್ಥಾನದಿಂದ ಯಜಮಾನ ಸಮೀಪಕ್ಕೆ ಬರುವುದಕ್ಕಾಗಿ ಹೊರಡುವನು.

॥ ವ್ಯಾಕರಣಪ್ರಕ್ರಿಯಾ ॥

**ಸಾನೋಃ**—ಷಣು ದಾನೇ ಧಾತು. ಸನೋತಿ = ದದಾತಿ ನಿವಸತಾಂ ಅವಕಾಶಂ ಇತಿ ಸಾನುಃ (ವಾಸಮಾಡುವವರಿಗೆ ಅವಕಾಶವನ್ನು ಸನೋತಿ = ಕೊಡುವುದು. ಆದ್ದರಿಂದ ಸಾನು=ಬೆಟ್ಟದ ತಪ್ಪಲು ಪ್ರದೇಶ) **ದೃಸನಿ ಜನಿ ಚರಿಚಟಿ (ರಹಿ) ಭ್ಯೋ ಞುಣ್** (ಉ. ಸೂ, ೧-೩) ದೃ ವಿದಾರಣೇ, ಷಣು ದಾನೇ, ಜನಜನನೇ ಚರಗತೌ, ಚಟಭೇದನೇ (ರಹತ್ಯಾಗೇ) ಎಂಬ ಧಾತುಗಳ ಮುಂದೆ ಞುಣ್ ಪ್ರತ್ಯಯ ಬರುವುದು ಎಂಬುದರಿಂದ ಞುಣ್ ಪ್ರತ್ಯಯ. **ಧಾತ್ವಾದೇಃಷಃಸಃ** (ಪಾ. ಸೂ. ೬-೧-೬೪) ಷಕಾರಕ್ಕೆ ಸಕಾರ, ಷಕಾರ ನಿವೃತ್ತಿಯಾದರೆ ತನ್ನಿಮಿತ್ತಕವಾದ ಣಕಾರಕ್ಕೂ ನಿವೃತ್ತಿ. **ಅತಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ. ಸಾನು ಎಂದಾಗುವುದು. ಪ್ರತ್ಯಯವು ಞಿತ್ತು ಆದ್ದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ ಸೂ. ೬-೧-೧೯೭) ಎಂಬುದರಿಂದ ಪ್ರತ್ಯಯಾಂತದ ಆದಿಯು ಉದಾತ್ತ.

**ಅರುಹತ್**-ರುಹ ಬೀಜಜನ್ಮನಿ ಪ್ರಾದುರ್ಭಾವೇಚ, ಧಾತುವಿನ ಮುಂದೆ ಲಙ್ ಅದರಸ್ಥಾನದಲ್ಲಿ ತಿಪ್ **ಕರ್ತರಿಶಪ್** (ಪಾ. ಸೂ. ೩-೧-೬೮) ಎಂಬುದರಿಂದ ಶಪ್ ವಿಕರಣ **ಸಂಜ್ಞಾಪೂರ್ವಕೋವಿಧಿರನಿತ್ಯಃ** (ಪರಿಭಾ ೯೩-೧) ಎಂಬುದರಿಂದ ಅನಿತ್ಯವಾದ್ದರಿಂದ **ಪುಗಂತಲಘೂಪಧಸ್ಯಚ** (ಪಾ.ಸೂ. ೭-೩-೮೬) ಎಂಬುದರಿಂದ ಲಘೂಪಧಗುಣಬರುವುದಿಲ್ಲ. **ಇತಶ್ಚ** (ಪಾ ಸೂ. ೩-೪-೧೦೦) ಎಂಬುದರಿಂದ ಇಕಾರಲೋಪ **ಲುಙ್ ಲಙ್ ಲೃಙ್ಕ್ಷ್ವಡುದಾತ್ತಃ** (ಪಾ. ಸೂ. ೬-೪-೭೧) ಎಂಬುದರಿಂದ ಉದಾತ್ತವಾದ ಅಟ್ ಆಗಮ ಬರುವುದು. ಸತಿಶಿಷ್ಟವಾದ್ದರಿಂದ ಅದೇ ನಿಲ್ಲುವುದು. **ತಿಙ್ಙತಿಙಃ** (ಪಾ. ಸೂ ೮-೧-೨೮) ಎಂಬುದರಿಂದ ಅನುದಾತ್ತವು ಪ್ರಾಪ್ತವಾದರೆ **ನಿಪಾತೈರ್ಯದ್ಯದಿಹನ್ತಕುವಿನ್ನೇಚ್ಚೇಚ್ಚಣ್ಕಚ್ಚಿದ್ಯತ್ರಯುಕ್ತಮ್** (ಪಾ. ಸೂ. ೮-೧-೩೦) ಯತ್-ಯದಿ, ಹನ್ತ, ಕುವಿತ್, ನೇತ್ ಚೇತ್ ಚಣ್ ಕಚ್ಚಿತ್, ಯತ್ರ ಈ ನಿಪಾತಗಳ ಯೋಗವಿದ್ದರೆ ಅನುದಾತ್ತ ಬರುವುದಿಲ್ಲ ಎಂದು ನಿಷೇಧ ಬರುವುದರಿಂದ ಅನುದಾತ್ತ ಬರುವುದಿಲ್ಲ.

**ಭೂರಿ** ಅದಿಶದಿಭೂಶುಭಿಭ್ಯಃಕ್ರಿನ್ (ಉ. ಸೂ. ೪-೫೦೫) ಅದ ಭಕ್ಷಣೇ, ಶದ್ಲೃಶಾತನೇ ಭೂಸತ್ತಾಯಾಂ, ಶುಭ ಶುಮ್ಭ ಶೋಭಾರ್ಥೇ ಈ ಧಾತುಗಳ ಮುಂದೆ ಕ್ರಿನ್ ಪ್ರತ್ಯಯ ಬರುವುದು ಎಂಬುದರಿಂದ ಕ್ರಿನ್ ಪ್ರತ್ಯಯವು ಭೂಧಾತುವಿನ ಮುಂದೆ ಬರುವುದು. **ಭೂರಿ**--ಪ್ರತ್ಯಯವು ಕಿತ್ತಾದ್ದರಿಂದ **ಕ್ಜಿತಿಚ** (ಪಾ. ಸೂ. ೧-೧-೫) ಎಂದು ನಿಷೇಧ ಬರುವುದರಿಂದ **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಗುಣ ಬರುವುದಿಲ್ಲ. ಪ್ರತ್ಯಯವು ನಿತ್ತು. ಅದ್ದರಿಂದ ಭೂರಿ ಎಂಬುದು ಆದ್ಯುದಾತ್ತವಾಗುವುದು.

**ಅಸ್ಪೃಷ್ಟ**--ಸ್ಪೃಶ ಬಾಧನಸ್ಪರ್ಶನಯೋಃ, ಧಾತು. ಇದು ಸ್ವರಿತೇತ್ತು ಅದ್ದರಿಂದ **ಸ್ವರಿತಞಿತಃ ಕರ್ತ್ರಭಿಪ್ರಾಯೇಕ್ರಿಯಾಫಲೇ** (ಪಾ. ಸೂ. ೧-೩-೭೨) ಕ್ರಿಯಾಫಲವು ಕರ್ತೃವಿಗೆಸೇರುವ ಪಕ್ಷದಲ್ಲಿ ಸ್ವರಿತೇತ್ತು ಅಥವಾ ಞಿತ್ತು ಆದ ಧಾತುವಿನ ಮುಂದೆ ಆತ್ಮನೇಪದ ಬರುವುದು ಎಂಬುದರಿಂದ ಆತ್ಮನೇ ಪದಪ್ರತ್ಯಯ ಬರುವುದು. ಸ್ಪೃಶ್ ಧಾತುವಿನ ಮುಂದೆ ಲಙ್ ಅದರ ಸ್ಥಾನದಲ್ಲಿ ಪ್ರಥಮ ಪುರುಷ ಏಕವಚನ ತ ಬರುವುದು. ಸ್ಪೃಶ್....ತ, ಶಪ್ ವಿಕರಣಕ್ಕೆ **ಬಹುಲಂಛಂದಸಿ** (ಪಾ. ಸೂ. ೨-೪-೭೩) ಎಂಬುದರಿಂದ **ಲುಕ್** ಬರುವುದು. **ವ್ರಶ್ಚಭ್ರಸ್ಜಸೃಜಮೃಜಯಜರಾಜಭ್ರಾಜಛಶಾಂ ಷಃ** (ಪಾ.ಸೂ. ೮-೨-೩೬) ಎಂಬುದರಿಂದ ಷತ್ವ. **ಷ್ಟುನಾಷ್ಟುಃ** (ಪಾ. ಸೂ. ೮-೪-೪೧) ಎಂಬುದರಿಂದ ಷ್ಟುತ್ವ **ಲುಙ್‌ಲಙ್‌ಲೃಙ್ಕ್ಷ್ವಡುದಾತ್ತಃ** ( ಪಾ ಸೂ. ೬-೪-೭೧ ) ಎಂಬುದರಿಂದ ಉದಾತ್ತವಾದ ಅಡಾಗಮ, ಆಗಮಕ್ಕೆ ಬಂದ ಉದಾತ್ತ ಸ್ವರವೇ ನಿಲ್ಲುವುದು. ಆಕರ್ಷಿಸಿಕೊಂಡ ಯಚ್ಛಬ್ದದ ಯೋಗವಿರುವುದರಿಂದ **ನಿಪಾತೈರ್ಯದ್ಯದಿ** (ಪಾ. ಸೂ. ೮-೧-೩೦) ಎಂಬುದರಿಂದ ಅನುದಾತ್ತಕ್ಕೆ ನಿಷೇಧ ಬರುವುದು.

**ಕರ್ತ್ವಮ್**—'ಡುಕೃಞ್ ಕರಣೇ, ಧಾತು. **ಅನ್ಯೇಭ್ಯೋಽಪಿದೃಶ್ಯನ್ತೇ** (ಪಾ. ಸೂ. ೩-೨-೭೫) ಎಂಬುದರಿಂದ ವಿಚ್ ಪ್ರತ್ಯಯ. ಸಾರ್ವಧಾತುಕಾರ್ಧಧಾತುಕಯೋಃ (ಪಾ. ಸೂ. ೭-೩-೮೪) ಎಂಬುದರಿಂದ ಗುಣ. **ಉರಣ್ರಪರಃ** (ಪಾ. ಸೂ. ೧-೧-೫೧) ಎಂಬುದರಿಂದ ರಪರವಾಗಿ ಬರುವುದು ವಿಚ್ ಪ್ರತ್ಯಯದಲ್ಲಿ ಎಲ್ಲಾ ವರ್ಣಗಳಿಗೂ ಲೋಪಬರುವುದು, ಕರ್ ಎಂದಾಗುವುದು. ಕರೋಭಾವಃ ಎಂದು ವಿವಕ್ಷಿಸಿದಾಗ **ತಸ್ಯ ಭಾವಸ್ತ್ವತಲೌ** (ಪಾಸೂ ೫-೧-೧೧೯) ಎಂಬುದರಿಂದ ತ್ವ ಪ್ರತ್ಯಯ ಬರುವುದು, ಕರ್ತ್ವಮ್ ಎಂದಾಗುವುದು.

**ಅರ್ಥಮ್**—'ಋಗತೌ' ಧಾತು. ಇದರ ಮುಂದೆ **ಉಷಿಕುಷಿಗಾರ್ತಿಭ್ಯಸ್ಥನ್** (ಪಾ.ಸೂ. ೨-೧೬೧) ಉಷದಾಹೇ, ಕುಷನಿಷ್ಕರ್ಷೇ, ಗೈ ಶಬ್ದೇ ಋಗತೌ, ಈ ಧಾತುಗಳ ಮುಂದೆ ಥನ್ ಪ್ರತ್ಯಯ ಬರುವುದು ಎಂಬುದರಿಂದ ಥ ಪ್ರತ್ಯಯ, ಗುಣ ರಪರತ್ವ ಅರ್ಥ ಎಂದಾಗುವುದು. ನಿತ್ತಾದ್ದರಿಂದ ಆದ್ಯುದಾತ್ತ.

**ಯೂಥೇನ**—**ತಿತ ಪೃಷ್ಠ ಗೂಥಯೂಥಪ್ರೋಥಾಃ** (ಪಾ. ಸೂ. ೨-೧೬೯) ಎಂಬುದರಿಂದ ಥನ್ ಪ್ರತ್ಯಯಾಂತವಾಗಿ ನಿಪಾತಿತವಾಗಿರುವುದು.

**ಪೃಷ್ಣಿಃ**—ಸೃವೃಷಣ್ಯಾಂ ಕಿತ್ (ಉ. ಸೂ. ೪-೪೮೬) ಸೃಗತೌ, ವೃಷು ಸೇಚನೇ ಎಂಬ ಧಾತುಗಳ ಮುಂದೆ ನಿ ಪ್ರತ್ಯಯ ಬರುವುದು. ಅದು ಕಿತ್ತೂ ಆಗುವುದು ಎಂಬುದರಿಂದ ವೃಷ್ ಧಾತುವಿನ ಮುಂದೆ ನಿ ಪ್ರತ್ಯಯ ಕಿತ್ತಾದ್ದರಿಂದ ಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತ.

ಏಜತಿ ಏಜೃಕಂಪನೇ, ದಾತು **ತಿಙ್ಙತಿಙಃ** (ಪಾ.ಸೂ. ೮-೧-೨೮) ಎಂಬುದರಿಂದ ಅನುದಾತ್ತ ॥ ೨ ॥

॥ ಸಂಹಿತಾಪಾಠಃ ॥

ಯು॒ಕ್ಷ್ವಾ ಹಿ ಕೇ॒ಶಿನಾ॒ ಹರೀ॒ ವೃಷ॑ಣಾ ಕಕ್ಷ್ಯ॒ಪ್ರಾ ।
ಅಥಾ॑ ನ ಇಂದ್ರ ಸೋಮಪಾ ಗಿ॒ರಾಮುಪ॑ಶ್ರುತಿಂ ಚರ ॥ ೩ ॥

॥ ಪದಪಾಠಃ ॥

ಯು॒ಕ್ಷ್ವ । ಹಿ । ಕೇ॒ಶಿನಾ॑ । ಹರೀ॒ ಇತಿ॑ । ವೃಷ॑ಣಾ । ಕ॒ಕ್ಷ್ಯ॒ಽಪ್ರಾ ॥
ಅಥ॑ । ನಃ॒ । ಇ॒ಂದ್ರ॒ । ಸೋ॒ಮ॒ಽಪಾ॒ಃ । ಗಿ॒ರಾಂ । ಉಪ॑ಽಶ್ರುತಿಂ । ಚ॒ರ॒ ॥ ೩ ॥

॥ ಸಾಯಣಭಾಷ್ಯಂ ॥

ಹೇ ಸೋಮಪಾಃ ಸೋಮಪಾನಯುಕ್ತೇಂದ್ರ ಹರೀ ತ್ವದಿಯಾವಶ್ವೌ ಯುಕ್ಷ್ವ ಹಿ। ಸರ್ವಥಾ ಸಂಯೋಜಯ । ಅಥಾನಂತರಂ ನೋಽಸ್ಮದೀಯಾನಾಂ ಗಿರಾಂ ಸ್ತುತೀನಾಮುಪಶ್ರುತಿಂ ಸಮೀಪೇ ಶ್ರವಣಮುದ್ದಿಶ್ಯ ಚರ । ತತ್ಪ್ರದೇಶಂ ಗಚ್ಛ । ಕೀದೃಶೌ ಹರೀ । ಕೇಶಿನಾ ಸ್ಕಂಧಪ್ರದೇಶೇ ಲಂಬಮಾನಕೇಶಯುಕ್ತೌ ವೃಷಣಾ ಸೇಚನಸಮರ್ಥೌ ಯುವಾನೌ ಕಕ್ಷ್ಯಪ್ರಾ । ಅಶ್ವಸ್ಯೋದರಬಂಧನರಜ್ಜುಃ ಕಕ್ಷ್ಯಾ ತಸ್ಯಾಃ ಪೂರಕೌ । ಪುಷ್ಟಾಂಗಾವಿತ್ಯರ್ಥಃ । ಯುಕ್ಷ್ವ । ಶ್ನಮೋ ಲೋಪಶ್ಛಾಂದಸಃ । ಸತಿ ಶಿಷ್ಟತ್ವೇನ ಪ್ರತ್ಯಯಸ್ವರಃ ಶಿಷ್ಯತೇ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘತ್ವಂ । ಕೇಶಿನಾ । ಪ್ರಶಸ್ತಾಃ ಕೇಶಾ ಅನಯೋಃ ಸಂತೀತಿ ಮತ್ವರ್ಥೀಯ ಇನಿಃ । ಪ್ರತ್ಯಯಸ್ವರಃ । ಸುಪಾಂ ಸುಲುಗಿತ್ಯಾದಿನಾ ದ್ವಿವಚನಸ್ಯಾಕಾರಾದೇಶಃ । ವೃಷಣಾ । ವೃಷು ವೃಷು ಮೃಷು ಸೇಚನೇ । ಕನಿನ್ಯುವೃಷಿತಕ್ಷಿರಾಜಿಧನ್ವಿದ್ಯುಪ್ರತಿದಿವಃ । ಉ. ೧-೧೫೬ । ಇತಿ ಕನಿನ್ । ಞ್ನಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತಃ । ವಾ ಷಪೂರ್ವಸ್ಯ ನಿಗಮೇ । ಪಾ. ೬-೪-೯ । ಇತ್ಯುಪಧಾಯಾಃ ಪಕ್ಷೇ ದೀರ್ಘಾಭಾವಃ । ಪೂರ್ವವದಾಕಾರಃ । ಕಕ್ಷ್ಯಪ್ರಾ । ಕಕ್ಷ್ಯಯೋರ್ಭವಂ ಕಕ್ಷ್ಯಂ ಸೂತ್ರಂ । ತತ್ಪ್ರಾತಃ ಪೂರಯತಃ ಪುಷ್ಟತ್ವಾದಿತಿ ಕಕ್ಷ್ಯಪ್ರೌ । ಪ್ರಾ ಪೂರಣೇ । ಆತೋಽನುಪಸರ್ಗೇ ಕಃ । ಪಾ. ೩-೨-೩ । ಇತಿ ಕಪ್ರತ್ಯಯಃ । ಕೃದುತ್ತರಪದಪ್ರಕೃತಿಸ್ವರೇಣಾಂತೋದಾತ್ತತ್ವಂ । ಆಕಾರಃ ಪೂರ್ವವತ್ । ಅಥ । ನಿಪಾತಸ್ಯೇತಿ ಸಂಹಿತಾಯಾಂ ದೀರ್ಘಃ। ನಃ ಅನುದಾತ್ತಂ ಸರ್ವಮಪಾದಾದಾವಿತ್ಯನುವೃತ್ತೌ ಬಹುವಚನಸ್ಯ ವಸ್ನಸೌ । ಪಾ. ೮ ೧ ೨೧ । ಇತಿ ನಸಾದೇಶೋಽನುದಾತ್ತಃ । ಇಂದ್ರ ಸೋಮಪಾ । ಉಭಾವಾಮಂತ್ರಿತಸ್ಯ ಚೇತಿ ಸರ್ವಾನುದಾತ್ತೌ । ಗಿರಾಂ । ಸಾವೇಕಾಚಸ್ತೃತೀಯಾದಿರ್ವಿಭಕ್ತಿರಿತಿ ವಿಭಕ್ತಿರುದಾತ್ತಾ । ಉಪಶಬ್ದೋ ನಿಪಾತತ್ವಾದಾದ್ಯುದಾತ್ತಃ । ಶ್ರುತಿಶಬ್ದೇನ ಪ್ರಾದಿಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವೇ ಪ್ರಾಪ್ತೇ ತಾದೌ ಚ ನಿತಿ ಕೃತ್ಯತೌ । ಪಾ. ೬ ೨ ೫೦ । ಇತಿ ತುವರ್ಜಿತತಾದಿಪರತ್ವಾದ್ಗತೇಃ ಪ್ರಕೃತಿಸ್ವರಃ । ಚರ । ನಿಘಾತಃ ॥

॥ ಪ್ರತಿಪದಾರ್ಥ ॥

**ಸೋಮಪಾಃ**— ಸೋಮಪಾನ ಮಾಡುವ । (ಹೇ) **ಇಂದ್ರ**— ಎಲೈ ಇಂದ್ರನೇ । **ಕೇಶಿನಾ**— ಕೇಸರ ಯುಕ್ತವಾದ (ಕತ್ತಿನಲ್ಲಿ ಉದ್ದವಾಗಿ ಬೆಳದಿರುವ ಕೂದಲುಗಳುಳ್ಳ) । **ವೃಷಣಾ**— ಸೇಚನಸಮರ್ಥವಾದ ಎಂದರೆ ಒಳ್ಳೆಯ ಪ್ರಾಯದಿಂದಿರುವ । **ಕಕ್ಷ್ಯಪ್ರಾ**— ಕಕ್ಷೆಯಲ್ಲಿ (ಉದರದಲ್ಲಿ) ಕಟ್ಟುವ ಹಗ್ಗವು ಬಿಗಿಯಾಗುವಂತೆ ಪುಷ್ಟವಾದ ಶರೀರವುಳ್ಳ । **ಹರೀ**— ನಿನ್ನ (ಎರಡು) ಕುದುರೆಗಳನ್ನು । **ಯುಕ್ಷ್ವಾ ಹಿ** (ರಥಕ್ಕೆ) ಕಟ್ಟು । **ಅಥ**— ಅನಂತರ । **ನಃ**— ನಮ್ಮ । **ಗಿರಾಂ**-- ಸ್ತುತಿರೂಪವಾದ ವಾಕ್ಯಗಳ । **ಉಪಶ್ರುತಿಂ**— ಶ್ರವಣಾರ್ಥವಾಗಿ (ಕೇಳುವುದಕ್ಕಾಗಿ) ಸಮೀಪಕ್ಕೆ । **ಚರ**— ಬರುವವನಾಗು ॥

॥ ಭಾವಾರ್ಥ ॥

ಎಲೈ ಸೋಮಪಾನದಲ್ಲಿ ಆಸಕ್ತನಾದ ಇಂದ್ರನೇ, ನಿನ್ನ ಕುದುರೆಗಳು ಕೇಸರಯುಕ್ತವಾದವು, ಯೌವನದಿಂದ ಚೆನ್ನಾಗಿ ಬೆಳೆದು ಉದರದಲ್ಲಿ ಕಟ್ಟುವ ಹಗ್ಗವು ಬಿಗಿಯಾಗುವಂತೆ ಪುಷ್ಟವಾದ ಶರೀರವುಳ್ಳವುಗಳು. ಇಂತಹ ಕುದುರೆಗಳನ್ನು ನಿನ್ನ ರಥಕ್ಕೆ ಕಟ್ಟಿ ನಮ್ಮ ಸ್ತೋತ್ರರೂಪವಾದ ವಾಕ್ಯಗಳನ್ನು ಸಮೀಪದಲ್ಲಿದ್ದು ಕೇಳುವುದಕ್ಕಾಗಿ ನಮ್ಮ ಬಳಿಗೆ ಬರುವವನಾಗು.

English Translation.

India, drinker of soma, harness your pair of long-maned youthful and well-conditioned horses and then come to hear our praises.

॥ ವಿಶೇಷವಿಷಯಗಳು ॥

**ಯುಕ್ಷ್ವ**--ಛಂದಸ್ಸಿನ ಅನುಕೂಲಕ್ಕಾಗಿ ಸಂಹಿತಾಪಾಠದಲ್ಲಿ ಅಂತ್ಯದ ಅಕಾರವು ದೀರ್ಘವಾಗಿರುವುದು. ಈ ಶಬ್ದಕ್ಕೆ ಸಂಯೋಜಯ-ಸೇರಿಸು, ರಥಕ್ಕೆ ಕಟ್ಟು, ಹೂಡು ಎಂದರ್ಥವು

**ಕೇಶಿನಾ— ಸ್ಕಂಧಪ್ರದೇಶೇ ಲಂಬಮಾನಕೇಶಯುಕ್ತೌ, ಪ್ರಲಂಬಕೇಸರೌ** ಎಂದರೆ ಕತ್ತಿನ ಮೇಲೆ ಉದ್ದವಾಗಿ ಬೆಳದಿರುವ ಕೇಸರಗಳುಳ್ಳ, long-maned.

**ವೃಷಣಾ— ರೇತಸ್ಸೇಚನಸಮರ್ಥೌ** । ರೇತಸ್ಸೇಚನಸಮರ್ಥವಾದ ಎಂದರೆ ಪ್ರಾಯದ, ಯೌವನ ದೆಶೆಯಲ್ಲಿರುವ-

**ಕಕ್ಷ್ಯಪ್ರಾ— ಕಕ್ಷ್ಯಪ್ರಾ ಅಶ್ವಸ್ಯೋದರಬಂಧನರಜ್ಜುಃ ಕಕ್ಷ್ಯಾ । ತಸ್ಯಾಃ ಪೂರಕೌ । ಪುಷ್ಟಾಂಗಾವಿತ್ಯರ್ಥಃ** ॥ ಕಕ್ಷ್ಯಾ ಎಂದರೆ ಕುದುರೆಯನ್ನು ರಥಕ್ಕೆ ಕಟ್ಟುವಾಗ ಅದರ ಉದರದ ಸುತ್ತಲೂ ಸೇರಿಸಿ ಕಟ್ಟುವ ಹಗ್ಗವು. ಆ ಹಗ್ಗವು ಬಿಗಿಯಾಗುವಂತೆ (filling out their girth) ಪುಷ್ಟವಾಗಿ ಬೆಳೆದಿರುವ ಕುದುರೆಗಳು ಎಂದರ್ಥವು.

**ಸೋಮಪಾಃ— ಸೋಮಸ್ಯ ಪಾತಃ**, ಇದು ಸಂಬೋಧನ ಪ್ರಥಮೈಕವಚನವು, ಇಂದ್ರಶಬ್ದಕ್ಕೆ ವಿಶೇಷಣಪದವು,

ಗಿರಾಂ— ಗೀಃ ಎಂಬ ಶಬ್ದದ ಷಷ್ಠೀಬಹುವಚನವು. ಋಗ್ವೇದದಲ್ಲಿ ಸೂಕ್ತಗಳು, ಸ್ತೋತ್ರಗಳು, ಪ್ರಶಂಸೆಗಳು ಎಂಬ ಅರ್ಥದಲ್ಲಿ ಗಿರಃ ಗಿರಾಂ, ಗೀರ್ಭಿಃ ಮೊದಲಾದ ಶಬ್ದಗಳನ್ನು ಉಪಯೋಗಿಸುವುದು ರೂಢಿಯಾಗಿದೆ. ಆದುದರಿಂದ ನಃ ಗಿರಾಂ ಎಂದರೆ ಅಸ್ಮತ್ಕೃತಸ್ತೋತ್ರಾಣಾಂ ನಾವು ಮಾಡುವ ಸ್ತೋತ್ರಗಳ ಎಂದರ್ಥವು.

ಉಪಶ್ರುತಂ— ಸಮೀಪೇ ಶ್ರವಣಮುದ್ದಿಶ್ಯ। ಶ್ರುತೇಃ ಸಮೀಪಂ । ಕೇಳುವುದಕ್ಕಾಗಿ ಸಮೀಪಕ್ಕೆ, ಸಮೀಪದಲ್ಲಿ ನಿಂತು ಕೇಳುವುದಕ್ಕಾಗಿ ಎಂದರ್ಥವು.

ಚರ— ಆಗಚ್ಛ, ಬರುವವನಾಗು.

॥ ವ್ಯಾಕರಣಪ್ರಕ್ರಿಯಾ ॥

ಯುಕ್ಷ್ವ— ಯುಜಿರ್ ಯೋಗೇ ಧಾತು. ಉಭಯಪದಿ, ಇದರ ಮುಂದೆ ಲೋಟ್ ಆತ್ಮನೇಪದ ಮಧ್ಯಮಪುರುಷ ಏಕವಚನ ಥಾಸ್. ಥಾಸಸ್ಸೇ (ಪಾ. ಸೂ. ೩-೪-೮೦) ಎಂಬುದರಿಂದ ಥಾಸ್ಸಿಗೆ ಸೇ ಆದೇಶ. ಸವಾಭ್ಯಾಂ ವಾಮೌ (ಪಾ. ಸೂ. ೩-೪-೯೧) ಏಕಾರಕ್ಕೆ ವಕಾರಾದೇಶ, ಯುಜ್+ಸ್ವ, ಶ್ನಮ್ ವಿಕರಣ ಪ್ರತ್ಯಯಕ್ಕೆ ಬಹುಲಂ ಛಂದಸಿ (ಪಾ. ಸೂ. ೨-೪-೭೩) ಎಂಬುದರಿಂದ ಲುಕ್. ಯದ್ಯಪಿ ಈ ಸೂತ್ರವು ಶಪ್ಪಿಗೆ ಲುಕ್ ಬರುವುದು ಎಂದು ವಿಧಿಸುವುದು. ಆದರೂ (ಋ. ಸಂ. ಅ. ೧, ಸೂ. ೯. ಮಂ. ೧) ರಲ್ಲಿ ಮತ್ಸಿ ಎಂಬಲ್ಲಿ ಇದೇ ಸೂತ್ರದಿಂದ ಶ್ಯನ್ನಿಗೆ ಲುಕ್ಕನ್ನು ಭಾಷ್ಯಕಾರರು ಹೇಳಿರುವರು. ಅದರಂತೆ ಇಲ್ಲಿ ಶ್ನಮ್‌ಗೂ ಲುಕ್ಕನ್ನು ಹೇಳಬಹುದು ಈ ಅಂಶವು ಬಹುಲಗ್ರಹಣದಿಂದ ಏರ್ಪಡುವುದು. ಬಹುಲಶಬ್ದದ ಅರ್ಥವನ್ನು ಹಿಂದೆಯೇ ಹೇಳಿರುವೆವು. ಚೋಃಕುಃ (ಪಾ. ಸೂ. ೮-೨-೩೦) ಎಂಬುದರಿಂದ ಕುತ್ವ, ಜಕಾರಕ್ಕೆ ಗಕಾರ, ಖರಿಚ (ಪಾ. ಸೂ. ೮-೪-೫೫) ಎಂಬುದರಿಂದ ಚರ್ತ್ವ, ಗಕಾರಕ್ಕೆ ಕಕಾರ, ಆದೇಶಪ್ರತ್ಯಯಯೋಃ (ಪಾ.ಸೂ. ೮-೩-೫೯) ಎಂಬುದರಿಂದ ಸಕಾರಕ್ಕೆ ಷಕಾರ. ಯುಕ್ಷ್ವ ಎಂದಾಗುವುದು. ಸತಿಶಿಷ್ಟವಾದ್ದರಿಂದ ಪ್ರತ್ಯಯಸ್ವರವೇ ನಿಲ್ಲುವುದು. ಸಂಹಿತಾಕಾಲದಲ್ಲಿ ದ್ವ್ಯಚೋಽತಸ್ತಿಙಃ (ಪಾ.ಸೂ. ೬-೩-೧೩೫) ಎಂಬುದರಿಂದ ಯುಕ್ಷ್ವ ಎಂಬುದಕ್ಕೆ ದೀರ್ಘ ಬರುವುದು.

ಕೇಶಿನಾ— ಪ್ರಶಸ್ತಾಃ ಕೇಶಾಃ ಅನಯೋಸ್ಸನ್ತಿ ಎಂದು ವಿಗ್ರಹ ಮಾಡಿದಾಗ ಅತ ಇನಿಠನೌ (ಪಾ. ಸೂ. ೫-೨-೧೧೫) ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ ಬರುವುದು. ಕೇಶ+ಇನ್ ಎಂದಿರುವಾಗ ಯಸ್ಯೇತಿಚ (೬-೪-೧೪೮) ಎಂಬುದರಿಂದ ಅಕಾರಲೋಪ. ಪ್ರತ್ಯಯಸ್ವರ ಬರುವುದು. ಕೇಶಿನ್ ಎಂಬುದರ ಮುಂದೆ ಬರುವ ದ್ವಿತೀಯಾ ದ್ವಿವಚನ ಔ ಪ್ರತ್ಯಯಕ್ಕೆ ಸುಪಾಂಸುಲುಕ್— (ಪಾ. ಸೂ. ೭-೧-೩೯) ಎಂಬುದರಿಂದ ಆಕಾರಾದೇಶ.

ವೃಷಣಾ— ಪೃಷು, ವೃಷು, ಮೃಷು ಸೇಚನೇ ಧಾತು. ವೃಷ್ ಧಾತುವಿನ ಮುಂದೆ ಕನಿನ್ಯುವೃಷಿತಕ್ಷಿರಾಜಿಧನ್ವಿದ್ಯುಪ್ರತಿದಿವಃ (ಉ. ಸೂ. ೧-೧೫೪) ಎಂಬುದರಿಂದ ಕನಿನ್ ಪ್ರತ್ಯಯ. ಞ್ನಿತ್ಯಾದಿರ್ನಿತ್ಯಮ್ (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತ. ವಾ ಷಪೂರ್ವಸ್ಯ ನಿಗಮೇ (ಪಾ.ಸೂ. ೬-೪-೯) ಸಂಬುದ್ಧಿಯನ್ನುಳಿದ ಸರ್ವನಾಮಸ್ಥಾನ ಪ್ರತ್ಯಯ ಪರದಲ್ಲಿರುವಾಗ ಷಕಾರದ ಮುಂದೆ ಇರುವ ಉಪಧಾಭೂತವಾದ

ಅಚ್ಚಿಗೆ ದೀರ್ಘವು ವಿಕಲ್ಪವಾಗಿ ಬರುವುದು ಎಂಬುದರಿಂದ ವಿಧಿಸಿರುವ ಉಪಧಾ ದೀರ್ಘವು ವಿಕಲ್ಪವಾದ್ದರಿಂದ ಇಲ್ಲಿ ಬರುವುದಿಲ್ಲ. ದ್ವಿತೀಯಾದ್ವಿವಚನಕ್ಕೆ **ಸುಪಾಂಸುಲುಕ್**—(ಪಾ. ಸೂ ೭-೧-೩೯) ಎಂಬುದರಿಂದ ಆಕಾರ.

**ಕಕ್ಷ್ಯಪ್ರಾ**--ಕಕ್ಷಯೋಃ ಭವಂ ಕಕ್ಷ್ಯಮ್. ಕುದುರೆಯ ಹೊಟ್ಟೆಗೆ ಕಟ್ಟುವ ಹಗ್ಗ. ಅದನ್ನು ಪ್ರಾತಃ ಪುಷ್ಟವಾಗಿರುವುದರಿಂದ ತುಂಬಿಸುವುವು ಎಂದು ವಿಗ್ರಹ ಮಾಡಿದರೆ ಕಕ್ಷ್ಯಶಬ್ದೋಪಪದಕವಾದ ಪ್ರಾ ಧಾತುವಿನ ಮುಂದೆ **ಆತೋನುಪಸರ್ಗೇಕಃ** (ಪಾ. ಸೂ. ೩-೨-೩) ಉಪಸರ್ಗವಲ್ಲದ ಸುಬಂತವು ಉಪಪದವಾಗಿರುವಾಗ ಆಕಾರಾಂತ ಧಾತುವಿನ ಮುಂದೆ ಕ ಪ್ರತ್ಯಯ ಬರುವುದು ಎಂಬುದರಿಂದ ಕ ಪ್ರತ್ಯಯ ಬಂದರೆ **ಆತೋಲೋಪ ಇಟಿಚ** (ಪಾ.ಸೂ. ೬-೪-೧೩೯) ಎಂಬುದರಿಂದ ಆಕಾರಕ್ಕೆ ಲೋಪ. **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬಂದು ಅಂತೋದಾತ್ತವಾಗುವುದು. ಇದರ ಮುಂದೆ ಅಸ್ಮಾಕಂ ಎಂಬುದಕ್ಕೆ ಬರುವ ದ್ವಿತೀಯಾದ್ವಿವಚನಕ್ಕೆ ಮೊದಲಿನಂತೆ ಆಕಾರದೇಶ.

**ಅಥ— ನಿಪಾತಸ್ಯಚ** (ಪಾ.ಸೂ. ೬-೩-೧೩೬) ಎಂಬುದರಿಂದ ಸಂಹಿತಾಕಾಲದಲ್ಲಿ ದೀರ್ಘ.

**ನಃ-ಬಹುವಚನಸ್ಯವಸ್ನಸೌ** (ಪಾ. ಸೂ. ೮-೧ ೨೧) **ಅನುದಾತ್ತಂ ಸರ್ವಮಪಾದಾದೌ** (ಪಾ.ಸೂ. ೮-೧-೧೮) ಎಂಬ ಸೂತ್ರವು ಅನುವೃತ್ತವಾಗುವುದು. ಪದದ ಮುಂದೆ ಇರತಕ್ಕವುಗಳೂ ಪಾದದ ಆದಿಯಲ್ಲಿ, ಇಲ್ಲದವುಗಳೂ ಆದ ಷಷ್ಠೀಚತುರ್ಥೀ ದ್ವಿತೀಯಾ ಬಹುವಚನಾಂತಯುಷ್ಮದಸ್ಮಚ್ಛಬ್ದಗಳಿಗೆ ಕ್ರಮವಾಗಿ ಅನುದಾತ್ತಗಳಾದ ವಸ್, ನಸ್ ಆದೇಶಗಳು ಬರುವುವು ಎಂಬುದರಿಂದ ಅಸ್ಮಚ್ಛಬ್ದ ಷಷ್ಠೀ ಬಹುವಚನಾಂತವಾದ ಅನುದಾತ್ತವಾದ ನಸ್ ಆದೇಶಬರುವುದು.

**ಇನ್ದ್ರ, ಸೋಮಪಾಃ** ಇವೆರಡೂ ಆಮಂತ್ರಿತಗಳಾದ್ದರಿಂದ **ಆಮಂತ್ರಿಸ್ಯಚ** (ಪಾ. ಸೂ. ೮-೧ ೧೯) ಎಂಬುದರಿಂದ ಎರಡೂ ಸರ್ವಾನುದಾತ್ತಗಳಾಗುವುವು.

**ಗಿರಾಮ್**—ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ (ಪಾ. ಸೂ. ೬-೧.೧೬೮) ಸಪ್ತಮೀ ಬಹುವಚನ ಸು ಪ್ರತ್ಯಯ ಪರದಲ್ಲಿರುವಾಗ ಯಾವ ಶಬ್ದವು ಒಂದೇ ಸ್ವರವನ್ನು (ಅಚ್ಚನ್ನು) ಹೊಂದಿರುವುದೋ ಅದರ ಮುಂದೆ ಇರುವ ತೃತೀಯಾದಿ ವಿಭಕ್ತಿಯು ಉದಾತ್ತವಾಗುವುದು ಎಂಬುದರಿಂದ ಗಿರಾ ಎಂಬಲ್ಲಿರುವ ತೃತೀಯಾ ವಿಭಕ್ತಿಯು ಉದಾತ್ತವಾಗುವುದು.

**ಉಪ**--ಈ ಶಬ್ದವು ನಿಪಾತ. ಆದ್ದರಿಂದ **ನಿಪಾತಾ ಆದ್ಯುದಾತ್ತಾಃ** (ಫಿ.ಸೂ. ೮೦) ಎಂಬುದರಿಂದ ಆದ್ಯುದಾತ್ತ. ಇದಕ್ಕೆ ಶ್ರುತ ಶಬ್ದದೊಂದಿಗೆ **ಕುಗತಿಪ್ರಾದಯಃ** (ಪಾ, ಸೂ. ೨-೨-೧೮) ಎಂಬುದರಿಂದ ಪ್ರಾದಿ ಸಮಾಸ ಬರುವುದು. ನಂತರ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಪ್ರಾಪ್ತವಾದರೆ ಅದನ್ನು ಬಾಧಿಸಿ **ತಾದೌಚನಿತಿಕೃತ್ಯತೌ** (೬-೨-೫೦) ತು ಶಬ್ದವನ್ನು ಬಿಟ್ಟು ತಕಾರಾದಿಯಾದ ಕೃತ್ಪ್ರತ್ಯಯ ಪರದಲ್ಲಿರುವಾಗ ಅನಂತರವಾದ ಗತಿಯು ಪ್ರಕೃತಿಸ್ವರವನ್ನು ಹೊಂದುವುದು ಎಂಬುದರಿಂದ ಉಪ ಎಂಬ ಗತಿಸಂಜ್ಞಕವು ಪ್ರಕೃತಿಸ್ವರವನ್ನು ಹೊಂದುವುದು.

**ಚರ— ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ || ೩ ||

॥ ಸಂಹಿತಾಪಾಠಃ ॥

ಏಹಿ ಸ್ತೋಮಾಁ ಅಭಿ ಸ್ವರಾಭಿ ಗೃಣೀಹ್ಯಾ ರುವ ।
ಬ್ರಹ್ಮ ಚ ನೋ ವಸೋ ಸಚೇಂದ್ರ ಯಜ್ಞಂ ಚ ವರ್ಧಯ ॥೪॥

॥ ಪದಪಾಠಃ ॥

ಆ । ಇಹಿ । ಸ್ತೋಮಾನ್ । ಅಭಿ । ಸ್ವರ । ಅಭಿ । ಗೃಣೀಹಿ । ಆ । ರುವ ॥
ಬ್ರಹ್ಮ । ಚ । ನಃ । ವಸೋ ಇತಿ । ಸಚಾ । ಇಂದ್ರ । ಯಜ್ಞಂ । ಚ ।
ವರ್ಧಯ ॥ ೪ ॥

॥ ಸಾಯಣಭಾಷ್ಯಂ ॥

ವಿಶೇಷವಿನಿಯೋಗಸ್ತು ಯತ್ರ ಪ್ರೋಕ್ತೋ ನ ಸೂತ್ರಿತಃ । ಸ್ಮಾರ್ತಂ ತತ್ರ ವಿಜಾನೀಯಾದ್ಗೃಹ್ಯ-ವಿಧಾನಾದಿಸೂತ್ರತಃ ॥ ಏಹಿ ಸ್ತೋಮಾನಿತ್ಯೃಗೇಷಾ ಸೂತ್ರೇ ವಿಶೇಷಾಕಾರೇಣ ನ ವಿನಿಯುಕ್ತಾ । ಸಾಧಾ-ರಣವಿನಿಯೋಗಸ್ತು ಬ್ರಹ್ಮಯಜ್ಞಾದೌ ಸರ್ವತ್ರಾನುಸಂಧೇಯಃ ॥

ಹೇ ವಸೋ ನಿವಾಸಕಾರಣಭೂತೇಂದ್ರ ಏಹಿ । ಅಸ್ಮಿನ್ಕರ್ಮಣ್ಯಾಗಚ್ಛ । ಆಗತ್ಯ ಚ ಸ್ತೋ-ಮಾನುದ್ಗಾತೃಪ್ರಯುಕ್ತಾನಿ ಸ್ತೋತ್ರಾಣ್ಯಭಿ ಸ್ವರ । ಅಭಿಲಕ್ಷ್ಯ ಪ್ರಶಂಸಾರೂಪಂ ಶಬ್ದಂ ಕುರು । ತಥಾ-ಧ್ವರ್ಯುರ್ಜಪಮಭಿಲಕ್ಷ್ಯ ಗೃಣೀಹಿ । ಶಬ್ದಂ ಕುರು । ತಥಾ ಹೋತೃಪ್ರಯುಕ್ತಾನಿ ಶಸ್ತ್ರಾಣ್ಯಾಲಕ್ಷ್ಯ ರುವ । ಶಬ್ದಂ ಕುರು । ಪರಿತೋಷೇಣ ಸರ್ವಾನೃತ್ವಿಜಃ ಪ್ರಶಂಸೇತ್ಯರ್ಥಃ । ತತ ಊರ್ಧ್ವಂ ನೋಽಸ್ಮಾಕಂ ಬ್ರಹ್ಮ ಚಾನ್ನಂ ಚ ಯಜ್ಞಂ ಚಾನುಷ್ಠೀಯಮಾನಂ ಕರ್ಮ ಚ ಸಚಾ ಸಹ ವರ್ಧಯ । ಸಾಂಗತ್ವಸಂಪಾದನೇನ ಯಜ್ಞಂ ವರ್ಧಯಿತ್ವಾ ತತ್ಫಲಮನ್ನಂ ಚ ಪ್ರವೃದ್ಧಂ ಕುರು । ಅಂಧಃ ಇತ್ಯಾದಿಷ್ವಷ್ಟಾವಿಂಶತ್ಯನ್ನನಾಮಸು ಬ್ರಹ್ಮ ವರ್ಚ ಇತಿ ಪಠಿತಂ ॥ ಇಹಿ । ಇಣ್ ಗತೌ । ಸೇರ್ಹಿಃ । ಹೇರಪಿತ್ತ್ವೇನ ಙಿತ್ತ್ವಾದ್ಗುಣಾಭಾವಃ । ನಿಘಾತಃ । ಆಙಾ ಸಹ ಗುಣ ಏಕಾದೇಶ ಉದಾತ್ತೇನೋದಾತ್ತ ಇತ್ಯುದಾತ್ತಃ । ಸ್ತೋಮಾನ್ । ಅರ್ತಿ-ಸ್ತುಸ್ವಿತ್ಯಾದಿನಾ ಮನ್ । ನಿತ್ತ್ವಾದಾದ್ಯುದಾತ್ತಃ । ಉತ್ತರಪದೇನ ಸಂಹಿತಾಯಾಂ ನಕಾರಸ್ಯ ದೀರ್ಘಾ-ದಟಿ ಸಮಾನಪಾದ ಇತಿ ರುತ್ವಂ । ಆತೋಽಟಿ ನಿತ್ಯಮಿತ್ಯಾಕಾರಸ್ಯಾನುನಾಸಿಕಃ । ಭೋಭಗೋಅಘೋ ಅಪೂರ್ವಸ್ಯ ಯೋಽಶೀತಿ ಯತ್ವಂ । ತಸ್ಯ ಲೋಪಃ ಶಾಕಲ್ಯಸ್ಯೇತಿ ಲೋಪಃ । ತಸ್ಯಾಸಿದ್ಧತ್ವಾತ್ಸ್ವರಸಂ-ಧಿರ್ನ ಭವತಿ । ಅಭಿ । ಏವಮಾದೀನಾಮಂತ ಇತ್ಯಂತೋದಾತ್ತಃ । ಸ್ವರ । ಸ್ವೃ ಶಬ್ದೋಪತಾಪಯೋಃ । ನಿಘಾತಃ । ಅಭಿ । ಗತಂ । ಗೃಣೀಹಿ । ಗೄ ಶಬ್ದೇ । ಸೇರ್ಹ್ಯಪಿಚ್ಚೇತಿ ಹಿಃ । ಕ್ರ್ಯಾದಿಭ್ಯಃ ಶ್ನಾ । ಈ ಹಲ್ಯಘೋಃ । ಪಾ. ೬-೪-೧೧೩ । ಇತೀತ್ವಂ । ಪ್ವಾದೀನಾಂ ಹ್ರಸ್ವಃ । ಪಾ. ೭-೩-೮೦ । ಇತ್ಯೄಕಾರಸ್ಯ ಋಕಾರಃ । ಋವರ್ಣಾಚ್ಚೇತಿ ವಕ್ತವ್ಯಂ । ಕಾ ೮-೪-೧-೧ । ಇತಿ ಣತ್ವಂ । ತಿಙ್ಙತಿಙ ಇತಿ ನಿಘಾತಃ ।

ರುವ । ರು ಶಬ್ದೇ । ಸೇಹ್ಯರ್ಪಿಚ್ಚ । ಶಪಿ ಪ್ರಾಪ್ತೇ ವ್ಯತ್ಯಯೇನ ಶಃ । ತಸ್ಯ ಙಿತ್ತ್ವೇನ ಗುಣಾಭಾವಾದುವಙಾದೇಶಃ । ಅತೋ ಹೇರಿತಿ ಹೇರ್ಲುಕ್ । ತಿಙ್ಙತಿಙ ಇತಿ ನಿಘಾತಃ । ಬ್ರಹ್ಮ । ಬೃಹಿ ವೃಹಿ ವೃದ್ಧೌ । ಮನಿನ್ನಿತ್ಯನುವೃತ್ತೌ ಬೃಂಹೇರಮ್ ನ ಲೋಪಶ್ಚ । ಉ. ೪-೧೪೫ । ಇತಿ ಮನಿನ್ । ತತ್ಸಂನಿಯೋಗೇನ ನಲೋಪಃ । ಆಮಾಗಮಶ್ಚ । ಮಿದಚೋಽಂತ್ಯಾತ್ಪರಃ । ಪಾ. ೧-೧-೪೭ । ಇತ್ಯೃಕಾರಾತ್ಪರಃ । ಯಣಾದೇಶಃ । ಮನಿನೋ ನಿತ್ತ್ವಾದಾದ್ಯುದಾತ್ತತ್ವಂ । ವಸೋ । ಆಮಂತ್ರಿತನಿಘಾತಃ । ಯಜ್ಞಂ । ಯಜಯಾಚೇತ್ಯಾದಿನಾ । ಪಾ. ೩-೩-೯೦ । ನಙ್ । ಪ್ರತ್ಯಯಸ್ವರಃ । ವರ್ಧಯ । ನಿಘಾತಃ । ಅತ್ರ ಚಕಾರದ್ವಯಶ್ರವಣಾದಿಯಮೇವ ತಿಙ್ವಿಭಕ್ತಿಃ ಪೂರ್ವವಾಕ್ಯೇಷ್ವನುಷಜ್ಯತೇ । ಅತೋಽನುಷಕ್ತ್ಯೈವ ಪ್ರಥಮಾ ನ ಶ್ರುತೇತ್ಯಶ್ರುತಾಯಾಶ್ಚಾಯೋಗೇ ಪ್ರಥಮಾ । ಪಾ. ೮-೧-೫೯ । ಇತಿ ನಿಘಾತನಿಷೇಧೋ ನ ಭವತಿ ॥

॥ ಪ್ರತಿಪದಾರ್ಥ ॥

**ವಸೋ**--ಶ್ರೇಷ್ಠನಾದ (ಅಥವಾ ನಿವಾಸಸ್ಥಾನಕ್ಕೆ ಕಾರಣಭೂತನಾದ) । (ಹೇ) **ಇಂದ್ರ**—ಎಲೈ ಇಂದ್ರನೇ! **ಆ ಇಹಿ**—(ನಾವು ಮಾಡುತ್ತಿರುವ ಈ ಯಜ್ಞಭೂಮಿಗೆ ಬಾ । (ಬಂದು) **ಸ್ತೋಮಾನ್**—ಉದ್ಗಾತೃ ಮೊದಲಾದ ಸಾಮಗಾನಮಾಡುವ ಋತ್ವಿಜರು ಪಠಿಸುವ ಅಥವಾ ಗಾನಮಾಡುವ) ಸ್ತೋತ್ರಗಳನ್ನು । **ಅಭಿಸ್ವರ**—(ಗಮನವಿಟ್ಟು ಕೇಳಿ) ಪ್ರಶಂಸೆ ಮಾಡು (ಎಂದರೆ ಮೆಚ್ಚು) । ಮತ್ತು) **ಅಭಿಗೃಣೀಹಿ**—(ಅಧ್ವರ್ಯುವು ಮಾಡುವ ಕರ್ಮಗಳನ್ನೂ) ಪ್ರಶಂಸಿಸು । (ಮತ್ತು) **ರುವ**--ಹೋತೃವರ್ಗದ ಋತ್ವಿಜರು ಪಠಿಸುವ ಶಸ್ತ್ರಮಂತ್ರಗಳನ್ನು ಕೇಳಿ ನಿನ್ನ ಮೆಚ್ಚಿಗೆಯನ್ನು ಸೂಚಿಸು । (ಅನಂತರ) **ನಃ**—ನಮಗೆ । **ಬ್ರಹ್ಮ ಚ**—ಅನ್ನವನ್ನೂ (ಆಹಾರವನ್ನೂ) । **ಯಜ್ಞಂ ಚ**—ನಾವು ಮಾಡುತ್ತಿರುವ ಯಜ್ಞವನ್ನೂ । **ಸಚಾ**—ಸಹಿತನಾಗಿ ಎಂದರೆ ನೀನು ಇಲ್ಲಿದ್ದುಕೊಂಡು । **ವರ್ಧಯ**-ವೃದ್ಧಿಪಡಿಸು (ಎಂದರೆ ಯಜ್ಞವನ್ನು ಸಾಂಗವಾಗುವಂತೆ ಸಮಾಪ್ತಿಗೊಳಿಸಿ ಅದರ ಫಲಭೂತವಾದ ಅನ್ನಾದ್ಯಾಹಾರಗಳನ್ನು ನಮಗೆ ಅನುಗ್ರಹಿಸು).

॥ ಭಾವಾರ್ಥ ॥

ಎಲೈ ಇಂದ್ರನೇ, ನಾವು ವಾಸಮಾಡುವ ನಿವಾಸಸ್ಥಾನಗಳನ್ನು ನೀನೇ ನಮಗೆ ಕೊಡುವುದರಿಂದ ಅವುಗಳಿಗೆ ನೀನೇ ಕಾರಣಭೂತನು. ಇಂತಹ ಶ್ರೇಷ್ಠಗುಣಯುಕ್ತನಾದ ಎಲೈ ಇಂದ್ರನೇ, ನೀನು ಇಲ್ಲಿಗೆ ಎಂದರೆ ನಾವು ಮಾಡುತ್ತಿರುವ ಯಜ್ಞಕ್ಕೆ ಬಂದು ಸಾಮರೂಪಸ್ತೋತ್ರಗಳಿಂದ ಗಾನಮಾಡುವ ಉದ್ಗಾತೃಗಳೆಂಬ ಋತ್ವಿಜರನ್ನೂ, ಅಧ್ವರ್ಯುವನ್ನೂ ಶಸ್ತ್ರಮಂತ್ರಪಠನ ಮಾಡುತ್ತಿರುವ ಹೋತೃವರ್ಗದ ಋತ್ವಿಜರನ್ನೂ ಅವರವರು ಮಾಡುವ ಸ್ತೋತ್ರಗಳನ್ನೂ ಲಕ್ಷ್ಯವಿಟ್ಟು ಕೇಳಿ ಅವುಗಳಿಗೆ ನಿನ್ನ ಪ್ರಶಂಸಾರೂಪವಾದ ಮೆಚ್ಚಿಗೆಯನ್ನು ಶಬ್ದಮೂಲಕ ಸೂಚಿಸು. ಬಳಿಕ ನಮ್ಮ ಯಜ್ಞಕರ್ಮವು ಬೆಳೆದು ಪೂರ್ಣವಾಗುವಂತೆ ಮಾಡಿ ನಮಗೆಅನ್ನಾದ್ಯಾಹಾರಗಳನ್ನು ಅನುಗ್ರಹಿಸು.

## English Translation

Come hither, O good Indra, applaud our prayers, praise them, receive them approvingly. O Indra, bless our sacrifice and bestow upon us abundant food.

॥ ವಿಶೇಷವಿಷಯಗಳು ॥

ಭಾಷ್ಯಕಾರರು ಈ ಋಕ್ಕಿನ ವಿಶೇಷವಿನಿಯೋಗದ ವಿಷಯವಾಗಿ--

**ವಿಶೇಷವಿನಿಯೋಗಸ್ತು ಯತ್ರ ಶ್ರೌತೋ ನ ಸೂತ್ರಿತಃ ।**
**ಸ್ಮಾರ್ತಂ ತತ್ರ ವಿಜಾನೀಯಾದೃಗ್ವಿಧಾನಾದಿಸೂತ್ರತಃ ॥**

ಎಂಬ ವಿಧಿವಾಕ್ಯವನ್ನನುಸರಿಸಿ—ಯಾವುದಾದರೂ ಮಂತ್ರಕ್ಕೆ ವಿಶೇಷವಿನಿಯೋಗವು ಶ್ರೌತಸೂತ್ರದಲ್ಲಿ ಹೇಳಲ್ಪಡದಿರುವ ಸಂದರ್ಭದಲ್ಲಿ ಸ್ಮಾರ್ತಕರ್ಮಾನುಷ್ಠಾನದಲ್ಲಿ ಆ ಮಂತ್ರದ ವಿನಿಯೋಗವನ್ನು ಋಗ್ವಿಧಾನ ಮೊದಲಾದ ಸೂತ್ರಗ್ರಂಥಗಳನ್ನು ನೋಡಿ ತಿಳಿದುಕೊಳ್ಳಬೇಕೆಂದೂ, ಪ್ರಸಕ್ತವಾದ **ಏಹಿ ಸ್ತೋಮಾನ್** ಎಂಬ ಋಕ್ಕಿಗೆ ಶ್ರೌತಸೂತ್ರದಲ್ಲಿ ವಿಶೇಷ ವಿನಿಯೋಗವು ಹೇಳದೆ ಇರುವುದರಿಂದ ಬಹ್ವೃಯಜ್ಞಾದಿ ಕರ್ಮಗಳಲ್ಲಿ ಇದರ ಸಾಧಾರಣ ವಿನಿಯೋಗವಿರುವುದೆಂದೂ ಹೇಳಿರುವರು.

ಈ ಋಕ್ಕಿನಲ್ಲಿ ಸ್ವರ, ಗೃಣೀಹಿ, ರುವ ಎಂಬ ಮೂರು ಕ್ರಿಯಾಪದಗಳಿರುವುವು. ಸ್ವರ-**ಸ್ವೃ ಶಬ್ದೋಪತಾಪಯೋಃ । ಗೃಣೀಹಿ-ಗೄ ಶಬ್ದೇ । ರುವ-ರು ಶಬ್ದೇ ।** ಎಂದು ಧಾತುಪಾಠವಿರುವುದರಿಂದ ಈ ಮೂರು ಧಾತುಗಳಿಗೂ ಶಬ್ದಮಾಡು ಎಂದು ಒಂದೇ ಅರ್ಥವಿರುವುದು, ಇದಕ್ಕೆ **ಅಭಿ**-**ಅಭಿಲಕ್ಷ್ಯ** ಎಂಬ ಉಪಸರ್ಗವನ್ನು ಸೇರಿಸಿ ಅರ್ಥಮಾಡುವಾಗ ಪ್ರಶಂಸಾರೂಪವಾದ ಶಬ್ದವನ್ನು ಮಾಡು ಎಂದರೆ ಪ್ರಶಂಸೆಮಾಡು, ಶಬ್ದದ ಮೂಲಕ (ಅಥವಾ ಮಾತನಾಡುವುದರ ಮೂಲಕ) ನಿನ್ನ ಮೆಚ್ಚಿಗೆಯನ್ನು ಸೂಚಿಸು ಎಂದರ್ಥಮಾಡಿರುವರು ಸ್ಕಂದಸ್ವಾಮಿ ಮತ್ತು ವೆಂಕಟಮಾಧವರೂ ಇದೇ ಅರ್ಥವನ್ನೇ ಅನುಮೋದಿಸಿರುವುದರಿಂದ ಇದನ್ನೇ ಸ್ವೀಕರಿಸ ಬೇಕಾಗಿರುವುದು.

**ವಸೋ**-ನಿವಾಸಕಾರಣಭೂತೇಂದ್ರ, ನಿವಾಸ ಸ್ಥಾನಗಳಿಗೆ ಕಾರಣಭೂತನಾದ ಎಂದು ಭಾಷ್ಯಕಾರರ ಅರ್ಥವು. ಸ್ಕಂದಸ್ವಾಮಿಯು—**ವಸೋ । ಶತಪಥೇ ವಸಿಷ್ಠ ಇತಿ ವಸುಶಬ್ದಸ್ಯಾತಿಶಯಿತಪ್ರತ್ಯಯಾಂತಸ್ಯ " ಯದ್ವೈನಃ ಶ್ರೇಷ್ಠಸ್ತೇನ ವಸಿಷ್ಠ " ಇತಿ ಪ್ರಶಸ್ಯತಮೇನ ವಚನೇನ ಶ್ರೇಷ್ಠಶಬ್ದೇನಾರ್ಥವಿವರಣದರ್ಶನಾತ್ ವಸುಶಬ್ದಃ ಪ್ರಶಸ್ಯನಾಮ ॥** ಎಂದರೆ ಶುಕ್ಲ ಯಜುರ್ವೇದದ ಶತಪಥಬ್ರಾಹ್ಮಣದಲ್ಲಿ ಹೇಳಿರುವಂತೆ ವಸುಶಬ್ದಕ್ಕೆ ಶ್ರೇಷ್ಠ, ಪ್ರಶಸ್ಯ ಎಂದು ಅರ್ಥವಿವರಣೆಯಿರುವುದರಿಂದ ವಸುಶಬ್ದಕ್ಕೆ ಪ್ರಶಸ್ಯ ಎಂದರ್ಥಮಾಡಿರುವರು. ಅಥವಾ ವಸುಶಬ್ದಕ್ಕೆ ಧನವೆಂದೂ ಅರ್ಥವಾಗುವುದರಿಂದ ವಸೋ ಎಂದರೆ ಧನವಂತನಾದ ಎಲೈ ಇಂದ್ರನೇ ಎಂಬ ಅರ್ಥವನ್ನು ಬೇಕಾದರೂ ಹೇಳಬಹುದು.

ಬ್ರಹ್ಮ—ಅಂಧಃ, ವಾಜಃ ಮೊದಲಾದ ಇಪ್ಪತ್ತೆಂಟು ಅನ್ನವಾಚಕ ಶಬ್ದಗಳ ಮಧ್ಯದಲ್ಲಿ ಬ್ರಹ್ಮ ಶಬ್ದವು ಪಠಿತವಾಗಿರುವುದರಿಂದ ಬ್ರಹ್ಮಶಬ್ದಕ್ಕೆ ಅನ್ನವೆಂದು ಅರ್ಥವು. (ನಿ. ೩-೯) ಆಹಾರಯೋಗ್ಯವಾದ ಯಾವ ವಸ್ತುವಿಗಾದರೂ ಅನ್ನವೆಂದು ಹೇಳುವ ರೂಢಿ ಇದೆ. ಇದಲ್ಲದೆ ಯಾಸ್ಕರು—**ಅನ್ನಂ ಕಸ್ಮಾದಾನತಂ ಭೂತೇಭ್ಯೋಽತ್ತೇರ್ವಾ ಅಭಿಮುಖ್ಯೇನ ಹ್ಯೇತತ್ ನತಂ ಪ್ರಹ್ವೀಭೂತಂ ಭವತಿ ಭೋಜನಾಯ ಭೂತಾನಾಂ । ಅತ್ತೇರ್ವಾ ।** ಎಂದು ಹೇಳಿ **ಅದ್ಯತೇಽತ್ತಿ ಚ ಭೂತಾನಿ । ತಸ್ಮಾದನ್ನಂ ತದುಚ್ಯತ ಇತಿ** ಎಂದು ಉಪನಿಷದ್ವಾಕ್ಯವನ್ನು ಉದಹರಿಸಿರುವರು.

**ಸಚಾ**—ಸಹಿತವಾಗಿ. ಈ ಋಕ್ಕಿನಲ್ಲಿ ಈ ಶಬ್ದಕ್ಕೆ ಯಾವ ಉಪಯೋಗವೂ ಇದ್ದಂತೆ ಕಂಡುಬರುವುದಿಲ್ಲ. ಸಹಿತವಾಗಿ ಎಂದರೆ ನೀನೇ ಪ್ರತ್ಯಕ್ಷವಾಗಿ ಎಂದು ಅರ್ಥವನ್ನು ಹೇಳಬಹುದು.

**ವರ್ಧಯ**—ವೃದ್ಧಿಪಡಿಸು, ಸಮಾಪ್ತಿಗೊಳಿಸು, ನಿರ್ವಿಘ್ನವಾಗಿ ನೆರವೇರಿಸು. ಈ ಧಾತುವಿನ ಪ್ರಯೋಗವು ಋಗ್ವೇದದಲ್ಲಿ ವಿಶೇಷವಾಗಿದೆ. ಇದಕ್ಕೆ ವೃದ್ಧಿಪಡಿಸು ಎಂಬ ಸಾಮಾನ್ಯಾರ್ಥವಲ್ಲದೆ ಅನೇಕ ಸಂದರ್ಭಗಳಲ್ಲಿ ಭಾವಾರ್ಥವನ್ನೂ ಹೇಳಬೇಕಾಗುವುದು. ಉದಾಹರಣೆಗಾಗಿ **ತ್ವಾಂ ವರ್ಧಂತು ನೋ ಗಿರಃ**—ಎಂಬ ವಾಕ್ಯದಲ್ಲಿ ವರ್ಧಂತು ಎಂಬ ಶಬ್ದಕ್ಕೆ ಪ್ರಶಂಸೆಮಾಡಲಿ ಎಂಬ ಅರ್ಥವು ಹೊಂದುವುದು. ಪ್ರಸಕ್ತವಾದ ಋಕ್ಕಿನಲ್ಲಿ **ಬ್ರಹ್ಮ ಚ ವರ್ಧಯ**—ಅನ್ನವನ್ನು ವೃದ್ಧಿಪಡಿಸು ಎಂದರೆ ಅನ್ನವನ್ನುಬಹು ಹೆಚ್ಚಾಗಿ ಕೊಡು ಎಂದರ್ಥವು. ಅದರಂತೆಯೇ **ಯಜ್ಞಂ ಚ ವರ್ಧಯ** ಯಜ್ಞವನ್ನು ವೃದ್ಧಿಪಡಿಸು ಎಂದರೆ ಯಜ್ಞವು ನಿರ್ವಿಘ್ನವಾಗಿ ನೆರವೇರುವಂತೆ ಅನುಗ್ರಹಿಸು ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಇಹಿ**—ಇಣ್ ಗತೌ ಧಾತು. ಅದರ ಮುಂದೆ ಲೋಟ್ ಮಧ್ಯಮಪುರುಷ ಏಕವಚನ ಸಿಪ್ ಸೇರ್ಹ್ಯಪಿಚ್ಚ (ಪಾ ಸೂ. ೩-೪-೮೭) ಎಂಬುದರಿಂದ ಸಿಗೆ ಹಿ ಆದೇಶ, ಶಪ್ ವಿಕರಣಕ್ಕೆ **ಅದಿಪ್ರಭೃತಿಭ್ಯಃ ಶಪಃ** (ಪಾ. ಸೂ. ೭-೪-೭೨) ಎಂಬುದರಿಂದ ಲುಕ್ ಬರುವುದು. ಹಿಯು ಅಪಿತ್ತು. ಅದ್ದರಿಂದ **ಸಾರ್ವಧಾತುಕಮಪಿತ್** (ಪಾ. ಸೂ. ೧-೭-೪) ಎಂಬುದರಿಂದ ಙಿತ್ತಾಗುವುದು. ಆದಕಾರಣ **ಕ್ಙಿತಿಚ** (ಪಾ. ಸೂ. ೧-೧-೫) ಎಂಬುದರಿಂದ ಗುಣನಿಷೇಧ ಬರುವುದು. **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಅನುದಾತ್ತ. ಆ ಉಪಸರ್ಗವನ್ನು ಸೇರಿಸಿದರೆ, ಗುಣವು ಏಕಾದೇಶವಾಗಿ ಬಂದು 'ಏಹಿ' ಎಂದಾಗುವುದು. ಆ ಎಂಬುದು ನಿಪಾತವಾದ್ದರಿಂದ ಉದಾತ್ತ. ಏಕಾದೇಶ **ಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಎಂಬುದರಿಂದ ಏಕಾದೇಶದಿಂದ ಬಂದ ಏಕಾರವು ಉದಾತ್ತ.

**ಸ್ತೋಮಾನ್-ಅರ್ತಿಸ್ತುಸು**--(ಉ. ಸೂ. ೧-೧೩೭) ಎಂಬುದರಿಂದ ಸ್ತು ಧಾತುವಿನ ಮುಂದೆ ಮನ್ ಪ್ರತ್ಯಯು ಬರುವುದು. **ಸಾರ್ವಧಾತುಕಾರ್ಧಧಾತುಕಯೋಃ** (ಪಾ ಸೂ. ೭-೩-೮೪) ಎಂಬುದರಿಂದ ಗುಣ, ದ್ವಿತೀಯಾ ಬಹುವಚನದಲ್ಲಿ ಸ್ತೋಮಾನ್ ಎಂದಾಗುವುದು. ಉತ್ತರಪದದೊಂದಿಗೆ ಸಂಹಿತಾಕಾಲದಲ್ಲಿ **ದೀರ್ಘಾದಟಿ ಸಮಾನಪಾದೇ** (ಪಾ. ಸೂ. ೮-೩-೯) ದೀರ್ಘದ ಮುಂದೆ ಇರುವ ನಕಾರಕ್ಕೆ ಅಟ್ವರ್ಣಪರದಲ್ಲಿರುವಾಗ ರು ಆದೇಶಬರುವುದು. ಆದರೆ ಆ ನಕಾರ ಅಟ್ವರ್ಣಗಳು ಒಂದೇ ಪಾದದಲ್ಲಿ, ಇರಬೇಕು. ಎಂಬುದರಿಂದ ನಕಾರಕ್ಕೆ ರು ಆದೇಶ ಬರುವುದು. ಸ್ತೋಮಾರ್+ಅಭಿ **ಆತೋಟಿನಿತ್ಯಮ್** (ಪಾ ಸೂ. ೮-೩-೩) ಅಟ್ವರ್ಣದ ಹಿಂದೆ ಇರುವ ರು ವಿನ ಹಿಂದೆ ಇರುವ ದೀರ್ಘಾಕಾರಕ್ಕೆ ನಿತ್ಯವಾಗಿ ಅನುನಾಸಿಕ ಬರುವುದು ಎಂಬುದರಿಂದ ಅನುನಾಸಿಕ ಬಂದರೆ ಸ್ತೋಮಾँ **ಭೋಭಗೋಅಘೋಅಪೂರ್ವಸ್ಯಯೋಽಶಿ** (ಪಾ. ಸೂ. ೮-೩-೧೭) ಅಶ್ ವರ್ಣಪರದಲ್ಲಿರುವಾಗ ಭೋ- ಭಗೋ-ಅಘೋ ಮತ್ತು ಅವರ್ಣ ಇವುಗಳ ಮುಂದೆ ಇರುವ ರುಗೆ ಯ್ ಆದೇಶ ಬರುವುದು ಎಂಬುದರಿಂದ ಯ್ ಆದೇಶ. **ಲೋಪಃ ಶಾಕಲ್ಯಸ್ಯ** ( ಪಾ. ಸೂ. ೮-೩-೧೯) ಪದದ ಕೊನೆಯಲ್ಲಿರುವ ಅವರ್ಣಪೂರ್ವಕವಾದ ಯಕಾರ ವಕಾರಗಳಿಗೆ ಅಶ್ ವರ್ಣ ಪರದಲ್ಲಿರುವಾಗ ಲೋಪಬರುವುದು ಎಂಬುದರಿಂದ ಯಕಾರಕ್ಕೆ ಲೋಪ. ಸ್ತೋಮಾ+ಅಭಿ ಈಗ **ಅಕಸ್ಸವರ್ಣೇದೀರ್ಘಃ,**

(ಪಾ. ಸೂ. ೬-೧-೧೦೧) ಎಂಬುದರಿಂದ ಸವರ್ಣ ದೀರ್ಘವು ಪ್ರಾಪ್ತವಾಗುವುದು. ಆದರೆ **ಪೂರ್ವತ್ರಾಸಿದ್ಧಮ್** (ಪಾ. ಸೂ. ೮-೨-೧) ಎಂಬುದರಿಂದ ಆರನೇ ಅಧ್ಯಾಯದಲ್ಲಿನ ಸೂತ್ರದಿಂದ ಸವರ್ಣ ದೀರ್ಘವನ್ನು ಮಾಡು ವಾಗ, ತ್ರಿಪಾದಿಯಲ್ಲಿನ ಸೂತ್ರದಿಂದ ಬಂದ ಯ ಲೋಪವು ಅಸಿದ್ಧವಾಗುವುದು. ಆದ್ದರಿಂದ ಅ+ಅ ಇವುಗಳ ಮಧ್ಯೆ ಯಕಾರವಿದ್ದಂತೆ ಆಗುವುದು. ಅ ಎಂಬುದಕ್ಕೆ ಸವರ್ಣಸ್ವರ ಪರವಾಗುವುದಿಲ್ಲ. ಆದ್ದರಿಂದ ಸವರ್ಣ ದೀರ್ಘ ಬರುವುದಿಲ್ಲ.

**ಅಭಿ-ಏವಾದೀನಾಮನ್ತಃ** (ಫಿ. ಸೂ. ೮೨) ಎಂಬುದರಿಂದ ಅಂತೋದಾತ್ತ.

ಸ್ವರ—ಸ್ವೃ ಶಬ್ದೋಪತಾಪಯೋಃ, ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತ, ಅನು ದಾತ್ತ ಸ್ವರಬರುವುದು.

**ಅಭಿ**—ಅಂತೋದಾತ್ತ.

**ಗೃಣೀಹಿ**—'ಗೄ ಶಬ್ದೇ, ಧಾತು' ಇದರ ಮುಂದೆ ಲೋಟ್ ಪರಸ್ಮೈಪದ ಮಧ್ಯಮಪುರುಷ ಏಕವಚನ ಸಿಪ್ **ಸೇರ್ಹ್ಯಪಿಚ್ಚ** (ಪಾ. ಸೂ. ೩-೪-೮೭) ಎಂಬುದರಿಂದ ಸಿಗೆ 'ಹಿ, ಆದೇಶ' **ಕ್ರ್ಯಾದಿಭ್ಯಃಶ್ನಾ** (ಪಾ. ಸೂ. ೩-೧-೮೧) ಎಂಬುದರಿಂದ ಶ್ನಾವಿಕರಣಪ್ರತ್ಯಯ. **ಈಹಲ್ಯಘೋಃ** (ಪಾ. ಸೂ. ೬-೪-೧೧೩) ಶ್ನಾ ಪ್ರತ್ಯಯ, ಘುಸಂಜ್ಞೆಯನ್ನು ಹೊಂದದನೇ ಇರುವ ಅಭ್ಯಸ್ತ ಸಂಜ್ಞೆಯುಳ್ಳ ಧಾತು. ಇವುಗಳ ಆಕಾರಕ್ಕೆ ಕಿತ್ತು, ಅಥವಾ ಙಿತ್ತು ಆದ ಹಲಾದಿಯಾದ ಪ್ರತ್ಯಯಗಳು ಪರದಲ್ಲಿದ್ದರೆ ಈಕಾರಾದೇಶ ಬರುವುದು ಎಂಬುದ ರಿಂದ ಶ್ನಾ ಪ್ರತ್ಯಯದ ಆಕಾರಕ್ಕೆ ಈಕಾರ ಬಂದರೆ ಗೄ ನೀ+ಹಿ, ಎಂದಾಗುವುದು. ಈಗ **ಪ್ವಾದೀನಾಂಹ್ರಸ್ವಃ** (ಪಾ. ಸೂ. ೭-೩-೮೦) ಶಕಾರೇತ್ಸಂಜ್ಞಕ ಪ್ರತ್ಯಯವು ಪರದಲ್ಲಿರುವಾಗ ಪೂಞ್ ಪವನೇ ಮೊದಲಾದ ಧಾತುಗಳಿಗೆ ಹ್ರಸ್ವ ಬರುವುದು ಎಂಬುದರಿಂದ ಹ್ರಸ್ವವು ಗೄ ಧಾತುವಿನ ಋಕಾರಕ್ಕೆ ಬಂದರೆ ಗೃ+ನೀಹಿ ಎಂದಾಗುವುದು. **ರಷಾಭ್ಯಾಂನೋಣಸ್ಸಮಾನಪದೇ** (ಪಾ.ಸೂ. ೮-೪-೧) ಎಂಬ ಸೂತ್ರದಲ್ಲಿ ರಷಾಭ್ಯಾಂಣತ್ವೇ ಋಕಾರ ಗ್ರಹಣಂ, ಎಂದು ವಾರ್ತ್ತಿಕ. ರಷಾಭ್ಯಾಂಣತ್ವೇ ಋಕಾರಗ್ರಹಣಂ ಕರ್ತವ್ಯಂ ರಷಾಭ್ಯಾಂ ನೋಣಸ್ಸಮಾನಪದೇ ಋಕಾರಾ ಚ್ಚೇತಿ ವಕ್ತವ್ಯಮ್, ಎಂದು ಮಹಾಭಾಷ್ಯಕಾರರು ವಾರ್ತ್ತಿಕಕ್ಕೆ ವಿವರಣೆ ಮಾಡಿರುವರು. ಋಕಾರಕ್ಕೆ ಣಕಾರವನ್ನು ವಿಧಿಸುವ ರಷಾಭ್ಯಾಂ ಎಂಬ ಸೂತ್ರದಲ್ಲಿ ಋಕಾರಾಚ್ಚ ಎಂಬುದನ್ನು ಸೇರಿಸಿಕೊಳ್ಳಬೇಕು. ಋಕಾರದ ಮುಂದೆ ಇರುವ ನಕಾರಕ್ಕೆ ಣಕಾರ ಬರುವುದು ಎಂದು ಇದಕ್ಕೆ ಅರ್ಥ, ಇದರಿಂದ ಪ್ರಕೃತದಲ್ಲಿ ನಕಾರಕ್ಕೆ ಣಕಾರ ಬರು ವುದು. ಈ ವಾರ್ತ್ತಿಕವನ್ನು ಪ್ರತ್ಯಾಖ್ಯಾನ ಮಾಡುವ ಪಕ್ಷದಲ್ಲಿ **ಛಂದಸ್ಯೃದವಗ್ರಹಾತ್** (ಪಾ. ಸೂ. ೮-೪-೨೬) ಎಂಬಲ್ಲಿ ಋತಃ ಎಂದೂ ಛಂದಸ್ಯವಗ್ರಹಾತ್ ಎಂದೂ ಮಹಾಭಾಷ್ಯಕಾರರು ಸೂತ್ರವಿಭಾಗ ಮಾಡುವರು. ಋತಃ ಎಂಬುದಕ್ಕೆ ಋಕಾರದ ಮುಂದೆ ಇರುವ ನಕಾರಕ್ಕೆ ಣಕಾರ ಬರುವುದು ಎಂದು ಅರ್ಥ. **ಛಂದಸ್ಯವ-ಗ್ರಹಾತ್** (ಪಾ. ಸೂ. ೮-೪-೨೬) ಇಲ್ಲಿ ಋತಃ ಎಂಬ ಪದವು ಅನುವೃತ್ತವಾಗುವುದು. ಛಂದಸ್ಸಿನಲ್ಲಿ ಋಕಾ ರಾಂತವಾದ ಅವಗ್ರಹದ ಮುಂದೆ ಇರುವ ನಕಾರಕ್ಕೆ ಣಕಾರ ಬರುವುದು ಎಂದು ಅರ್ಥ. ಇಲ್ಲಿ ಋತಃ ಎಂಬ ಮೊದಲನೆಯ ಅಂಶದಿಂದ ನಕಾರಕ್ಕೆ ಣಕಾರಬರುವುದು. ಗೃಣೀಹಿ ಎಂದಾಗುವುದು. **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಅನುದಾತ್ತ.

**ರುವ**—ರು ಶಬ್ದೇ, ಧಾತು. ಲೋಟ್, ಮ. ಪು. ಏ ಸಿಪ್ ಅದಕ್ಕೆ ಸೇರ್ಹ್ಯಪಿಚ್ಚ ಎಂಬುದರಿಂದ ಹಿ. (ಅದಾದಿ ಎರಡನೇಗಣ) ಆದ್ದರಿಂದ ವಿಕರಣ ಶಪ್ ಬಂದು ಅದಕ್ಕೆ **ಅದಿಪ್ರಭೃತಿಭ್ಯಃಶಪಃ** (ಪಾ.ಸೂ. ೨-೪-೭೨) ಎಂಬುದರಿಂದ ನ್ಯಾಯವಾಗಿ ಲುಕ್ಕು ಬರಬೇಕು. ಆದರೂ ಇಲ್ಲಿ, ವ್ಯತ್ಯಯದಿಂದ ಶ ವಿಕರಣ ಪ್ರತ್ಯಯ

ಬರುವುದು ರು+ಅ+ಹಿ ಸಾರ್ವಧಾತುಕಮಪಿತ್ (ಪಾ. ಸೂ. ೧-೨-೪) ಎಂಬುದರಿಂದ ಶ ಪ್ರತ್ಯಯ. ಙಿತ್ತು ಆದ್ದರಿಂದ ಗುಣಬರವುದಿಲ್ಲ. ಅಚಿಶ್ನುಧಾತುಭ್ರುವಾಂಯ್ವೋರಿಯಙುವಙೌ (ಪಾ. ಸೂ. ೬-೪-೭೭) ಎಂಬುದರಿಂದ ಉವಙ್ ಆದೇಶ ಬರುವುದು. ರುವ್+ಅಹಿ ಅತೋಹೇಃ (ಪಾ.ಸೂ. ೬-೪-೧೦೫) ಎಂಬುದರಿಂದ ಹೀಗೆ ಲುಕ್ ಬರುವುದು ರುವ ಎಂದಾಗುವುದು. ತಿಙ್ಙತಿಙಃ (ಪಾ. ಸೂ. ೮-೧-೨೮) ಎಂಬುದರಿಂದ ಅನುದಾತ್ತ.

ಬ್ರಹ್ಮ-ಬೃಹ,ಬೃಹಿವೃದ್ಧೌ, ಧಾತು. ಬೃಹಿ ಧಾತುವು ಇದಿತ್ತು. ಆದ್ದರಿಂದ ಇದಿತೋನುಮ್ ಧಾತೋಃ (ಪಾ. ಸೂ, ೭-೧-೫೮) ಎಂಬುದರಿಂದ ನುಮಾಗಮ ಬೃನ್ ಹ್ ಎಂದಿರುವುದು, ಈಗ ಬೃಹೇರ-ಮ್ನಲೋಪಶ್ಚ (ಉ. ಸೂ. ೩-೫೮೫) ಬೃಹಿ ಧಾತುವಿನ ಮುಂದೆ ಮನಿನ್ ಪ್ರತ್ಯಯಬರುವುದು, ಧಾತುವಿಗೆ ಅಮ್ ಆಗಮ ಬರುವುದು. ನುಮಾಗದಿಂದ ಬಂದ ನಕಾರಕ್ಕೆಲೋಪ ಎಂದು ಇದರ ಅರ್ಥ. ಇಲ್ಲಿ ಸರ್ವಧಾತುಭ್ಯೋ ಮನಿನ್ ಎಂಬ ಹಿಂದಿನ ಸೂತ್ರದಿಂದ ಮನಿನ್ ಎಂಬ ಪದವು ಅನುವೃತ್ತವಾಗಿರುವುದು. ಈ ಉಣಾದಿ ಸೂತ್ರದಿಂದ ಬೃನ್ಹ್ ಎಂಬುದರ ಮುಂದೆ ಮನಿನ್ ಪ್ರತ್ಯಯವೂ, ಬೃನ್ಹ್ ಎಂಬುದರ ನಕಾರಕ್ಕೆ ಲೋಪವೂ ಬರುವುದು. ಅಲ್ಲದೆ ಅಮಾಗಮವು ಮಿದಚೋಂತ್ಯಾತ್ಪರಃ ( ಪಾ. ಸೂ. ೧-೧-೪೭) ಯಾವ ಸಮುದಾಯಕ್ಕೆ ಮಿತ್ತಾದ ಆಗಮವನ್ನು ವಿಧಿಸಿರುವರೋ ಆ ಸಮುದಾಯದ ಅಚ್ ಸಮುದಾಯಮಧ್ಯದಲ್ಲಿ ಯಾವುದು ಕೊನೆಯ ಅಜ್ಞೋ ಅದರ ಮುಂದೆ ಆ ಸಮುದಾಯಕ್ಕೆ ಅಂತಾವಯವವಾಗಿ ಮಕಾರೇತ್ಸಂಜ್ಞಕವಾದ ಆಗಮವು ಬರುವುದು ಎಂಬುದರಿಂದ, ಬೃವಿನ ಮುಂದೆ ಅಮ್ ಆಗಮ ಬರುವುದು. ಬೃ-ಅಹ್+ಮನ್ ಇಕೋಯಣಚಿ (ಪಾ.ಸೂ. ೬-೧-೭೭) ಎಂಬುದರಿಂದ ಋಕಾರಕ್ಕೆ ರೇಫ ಬ್ರಹ್ಮನ್ ಎಂದಾಗುವುದು. ಇಲ್ಲಿ ಬೃಂಹೇರ್ನೋಽಚ್ಚ (ಉ. ಸೂ. ೪-೫೮೫) ಎಂದು ಸೂತ್ರಪಾಠವನ್ನು ಕೆಲವರು ಮಾಡಿರುವರು. ಬೃಹಿ ಧಾತುವಿನ ಮುಂದೆ ಮನಿನ್ ಪ್ರತ್ಯಯ ಬರುವುದು. ನುಮಾಗಮದಿಂದ ಬಂದ ನಕಾರಕ್ಕೆ ಅಕಾರ ಬರುವುದು ಎಂದು ಸೂತ್ರಾರ್ಥ. ಇದರಿಂದ ಬೃನ್+ಹ್ ಎಂಬುದರ ಮುಂದೆ ಮನಿನ್ ಪ್ರತ್ಯಯವೂ, ನಕಾರಕ್ಕೆ ಅಕಾರವೂ ಬಂದರೆ ಋಗೆಂಣ್ ಬಂದು ಬ್ರಹ್ಮನ್ ಎಂದಾಗುವುದು. ಮನಿನ್ ಪ್ರತ್ಯಯವು ನಿತ್ತಾದ್ದರಿಂದ ಬ್ರಹ್ಮ ಎಂಬುದು ಆದ್ಯುದಾತ್ತ.

ವಸೋಃ—ಆಮಂತ್ರಿತಸ್ಯಚ (ಪಾ. ಸೂ. ೮-೧.೧೯) ಎಂಬುದರಿಂದ ಅನುದಾತ್ತ.

ಯಜ್ಞಮ್—ಯಜಯಾಚಯತ ವಿಚ್ಛಪ್ರಚ್ಛರಕ್ಷೋನಙ್ (ಪಾ. ಸೂ ೩-೩-೯೦) ಎಂಬ ಸೂತ್ರದಿಂದ ಯಜ್ ಧಾತುವಿನ ಮುಂದೆ ನಙ್ ಪ್ರತ್ಯಯ. ಯಜ್ನ ಸ್ತೋಃಶ್ಚುನಾಶ್ಚುಃ (ಪಾ. ಸೂ. ೮-೪-೪೦) ಎಂಬ ಶ್ಚುತ್ವದಿಂದ ತವರ್ಗದ ಐದನೆಯ ನ್‌ಗೆ ಚವರ್ಗ ಐದನೆಯದಾದ ಞ್ ಬರುವುದು.

ವರ್ಧಯ—ತಿಙ್ಙತಿಙಃ (ಪಾ. ಸೂ. ೮-೧-೨೮) ಎಂಬುದರಿಂದ ಅನುದಾತ್ತ. ಈ ಮಂತ್ರದಲ್ಲಿ ಬ್ರಹ್ಮಚವರ್ಧಯ, ಯಜ್ಞಂಚವರ್ಧಯ ಎಂದು ಎರಡು ಚಕಾರವು ಶ್ರುತವಾಗಿರುವುದರಿಂದ, ಈ ತಿಙ್ ವಿಭಕ್ತಿಗೆ ಪೂರ್ವ ವಾಕ್ಯದಲ್ಲಿಯೂ ಸಂಬಂಧವು ಏರ್ಪಡುವುದು. ಅಹಿದರೆ ಬ್ರಹ್ಮಚ ವರ್ಧಯ, ಯಜ್ಞಂ ಚ ವರ್ಧಯ ಎಂದಾಗುವುದು. ಆದ್ದರಿಂದ ಪೂರ್ವವಾಕ್ಯದಲ್ಲಿ ಸಂಬಂಧಿಸಿದ ವರ್ಧಯ ಎಂಬುದೇ ಪ್ರಥಮ ತಿಙ್ ವಿಭಕ್ತಿಯಾಗುವುದು. ಮಂತ್ರದಲ್ಲಿ ಉಪಾತ್ತವಾಗಿ ಶ್ರುತವಾದ ವರ್ಧಯ ಎಂಬುದು ಪ್ರಥಮ ತಿಙ್ ವಿಭಕ್ತಿಯಾಗುವುದಿಲ್ಲ. ಪ್ರಥಮ ತಿಙ್ ವಿಭಕ್ತಿಯಾಗಿ ಅಶ್ರುತವಾದ ವರ್ಧಯ ಎಂಬದಕ್ಕೆ ಚವಾಯೋಗೇ ಪ್ರಥಮಾ (ಪಾ. ಸೂ. ೮-೧-೫೯) ಚ ವಾ ಎಂಬ ಶಬ್ದಗಳ ಯೋಗವಿರುವಾಗ ಪ್ರಥಮ ತಿಙ್ ವಿಭಕ್ತಿಯು ಅನುದಾತ್ತವನ್ನು ಹೊಂದುವುದಿಲ್ಲ ಎಂಬುದರಿಂದ ಅನುದಾತ್ತ ನಿಷೇಧ ಬರುವುದಿಲ್ಲ. ॥ ೪ ॥

॥ ಸಂಹಿತಾಪಾಠಃ ॥

ಉಕ್ಥಮಿಂದ್ರಾಯ ಶಂಸ್ಯಂ ವರ್ಧನಂ ಪುರುನಿಷ್ಷಿಧೇ ।
ಶಕ್ರೋ ಯಥಾ ಸುತೇಷು ಣೋ ರಾರಣತ್ಸಖ್ಯೇಷು ಚ ॥ ೫ ॥

॥ ಪದಪಾಠಃ ॥

ಉಕ್ಥಂ । ಇಂದ್ರಾಯ । ಶಂಸ್ಯಂ । ವರ್ಧನಂ । ಪುರುನಿಃಽಸಿಧೇ ।
ಶಕ್ರಃ । ಯಥಾ । ಸುತೇಷು । ನಃ । ರರಣತ್ । ಸಖ್ಯೇಷು । ಚ ॥ ೫ ॥

॥ ಸಾಯಣಭಾಷ್ಯಂ ॥

ಅಭಿಪ್ಲವಷಡಹಗತೋಕ್ಥ್ಯೇಷ್ವಚ್ಛಾವಾಕಸ್ಯ ತೃತೀಯಸವನ ಉಕ್ಥಮಿಂದ್ರಾಯ ಶಂಸ್ಯಮಿತ್ಯನುರೂಪಸ್ತೃಚಃ । ಏಹ್ಯೂ ಷ್ವಿತಿ ಖಂಡ ಇಂದ್ರಂ ವಿಶ್ವಾ ಅವೀವೃಧನ್ನುಕ್ಥಮಿಂದ್ರಾಯ ಶಂಸ್ಯಂ । ಆ. ೭-೮ । ಇತಿ ಸೂತ್ರಿತಂ ॥

ಇಂದ್ರಾಯೇಂದ್ರಾರ್ಥಂ ವರ್ಧನಂ ವೃದ್ಧಿಸಾಧನಮುಕ್ಥಂ ಶಸ್ತ್ರಂ ಶಂಸ್ಯಂ । ಅಸ್ಮಾಭಿಃ ಶಂಸನೀಯಂ । ಕೀದೃಶಾಯೇಂದ್ರಾಯ । ಪುರುನಿಷ್ಷಿಧೇ ಬಹೂನಾಂ ಶತ್ರೂಣಾಂ ನಿಷೇಧಕಾರಿಣೇ । ಶಕ್ರ ಇಂದ್ರೋ ನೋಽಸ್ಮದೀಯೇಷು ಸುತೇಷು ಪುತ್ರೇಷು ಸಖ್ಯೇಷು ಚ ಸಖಿತ್ವೇಷ್ವಪಿ ಯಥಾ ಯೇನ ಪ್ರಕಾರೇಣ ರಾರಣತ್ ಅತಿಶಯೇನ ಶಬ್ದಂ ಕುರ್ಯಾತ್ತಥಾ ಶಂಸ್ಯಮಿತಿ ಪೂರ್ವತ್ರಾನ್ವಯಃ । ಅಸ್ಮದೀಯೇನ ಶಸ್ತ್ರೇಣ ಪರಿತುಷ್ಟ ಇಂದ್ರೋಽಸ್ಮಾಕಂ ಪುತ್ರಾನಸ್ಮತ್ಸಖ್ಯಾನಿ ಚ ಬಹುಧಾ ಪ್ರಶಂಸತ್ವಿತ್ಯರ್ಥಃ ॥ ಉಕ್ಥಂ । ವಚೇಸ್ಥಕ್ಪ್ರತ್ಯಯ ಉಕ್ತಃ । ಉ. ೨-೭ । ಪ್ರತ್ಯಯಸ್ವರಃ । ಶಂಸ್ಯಂ । ಶಂಸು ಸ್ತುತೌ । ಣ್ಯಂತಾದಚೋ ಯತ್ । ಣೇರನಿಟೀತಿ ಣಿಲೋಪಃ । ತಿತ್ಸ್ವರಿತೇ ಪ್ರಾಪ್ತೇ ಯತೋಽನಾವ ಇತ್ಯಾದ್ಯುದಾತ್ತತ್ವಂ । ವರ್ಧನಂ । ಕರಣಾಧಿಕರಣಯೋಶ್ಚ । ಪಾ. ೩-೩-೧೧೭ । ಇತಿ ಕರಣೇ ಲ್ಯುಟ್ । ಲಿತೀತಿ ಪ್ರತ್ಯಯಪೂರ್ವಸ್ಯೋದಾತ್ತತ್ವಂ । ಪುರುನಿಷ್ಷಿಧೇ । ಬಹೂನಾಂ ಶತ್ರೂಣಾಂ ನಿಷೇಧಕಾಯ । ಷಿಧ ಗತ್ಯಾಂ । ಧಾತ್ವಾದೇಃ ಷಃ ಸಃ । ಅತ್ರ ನಿರಿತ್ಯುಪಸರ್ಗಸ್ಯ ನಿಶಬ್ದಸಮಾನಾರ್ಥಸ್ಯ ಪ್ರಾಕ್ಪ್ರಯೋಗಃ । ಕ್ವಿಪ್ಚೇತಿ ಕ್ವಿಪ್ । ಕ್ವಿಪಃ ಸರ್ವಾಪಹಾರೀ ಲೋಪಃ । ಕುಗತಿಪ್ರಾದಯಃ । ಪಾ. ೨-೨-೧೮ । ಇತಿ ಸಮಾಸಃ । ನಿಸಃ ಸಕಾರೇಣೇಣೋ ವ್ಯವಧಾನಂ ಛಾಂದಸತ್ವಾದನಾದೃತ್ಯೋಪಸರ್ಗಾತ್ಸುನೋತೀತ್ಯಾದಿನಾ । ಪಾ. ೮-೩-೬೫ । ಧಾತುಸಕಾರಸ್ಯ ಷತ್ವಂ । ನಿಸಃ ಸಕಾರಸ್ಯ ಷ್ಟುನಾ ಷ್ಟುಃ । ಪಾ. ೮-೪-೪೧ । ಇತಿ ಷತ್ವಂ । ಪುರುಶಬ್ದೇನ ಕರ್ಮಣಿ ಷಷ್ಠ್ಯಂತೇನ ಸಮಾಸಃ । ಷಿಧೋ ಧಾತುಸ್ವರೇಣೋದಾತ್ತತ್ವಂ ।

ನಿಷ್ಷಿಧ ಇತಿ ಪ್ರಾದಿಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವಂ । ಕೃದ್ಗ್ರಹಣೇ ಗತಿಕಾರಕಪೂರ್ವಸ್ಯಾಪಿ ಗ್ರಹಣಾತ್ಪುನಃ ಕಾರಕಸಮಾಸೇಽಪಿ ಸ ಏವ ಸ್ವರಃ । ಶಕ್ನೋತೀತಿ ಶಕ್ರಃ । ಸ್ಫಾಯಿತಂಚಿವಂಚಿಶಕೀ-ತ್ಯಾದಿನಾ । ಉ ೨.೧೩ । ರಕ್ । ಪ್ರತ್ಯಯಸ್ವರಃ । ಯಥಾ । ಪ್ರಕಾರವಚನೇ ಥಾಲ್ । ಪಾ. ೫-೩-೨೩ । ಲಿತ್ಸ್ವರೇಣ ಪ್ರತ್ಯಯಾತ್ಪೂರ್ವೋಽಕಾರ ಉದಾತ್ತಃ । ಸುತೇಷು । ಕ್ತಃ ಪ್ರತ್ಯಯಸ್ವರೇಣೋದಾತ್ತಃ । ನಸೋ ನಕಾರಸ್ಯ ನಶ್ಚ ಧಾತುಸ್ಥೋರುಷುಭ್ಯಃ । ಪಾ. ೮-೪-೨೭ । ಇತಿ ಸಂಹಿತಾಯಾಂ ಣತ್ವಂ । ರಾರ-ಣಾತ್ । ರಣ ಶಬ್ದಾರ್ಥಃ । ಧಾತೋರೇಕಾಚಃ । ಪಾ. ೩-೧-೨೨ । ಇತಿ ಯಙ್ । ಯಙೋಽಚಿ ಚ । ಪಾ. ೨-೪-೭೪ । ಇತಿ ಲುಕ್ । ಪ್ರತ್ಯಯಲಕ್ಷಣೇನ । ಪಾ. ೬-೧-೯ । ದ್ವಿರ್ಭಾವೋ ಹಲಾದಿಶೇಷಃ । ದೀರ್ಘೋಽಕಿತಃ । ಪಾ. ೭-೪-೮೩ । ಇತಿ ದೀರ್ಘಃ । ಪ್ರತ್ಯಯಲಕ್ಷಣೇನ ಸನಾದ್ಯಂತಾ ಧಾತವಃ । ಪಾ, ೩ ೧-೩೨ । ಇತಿ ಧಾತುಸಂಜ್ಞಾಯಾಂ ಲಿಙರ್ಥೇ ಲೇಟ್ । ಪಾ. ೩-೪-೭ । ಇತಿ ಹೇತುಹೇತುಮ-ದ್ಭಾವಲಕ್ಷಣೇ । ಪಾ. ೩ ೩-೧೫೬ । ಲಿಙರ್ಥೇ ಲೇಟ್ । ಅತ್ರ ಹೀಂದ್ರಕರ್ತೃಕಂ ರಾರಣನಮುಕ್ಥಶಂಸ-ನಸ್ಯ ಕರ್ತವ್ಯತ್ವೇ ಹೇತುಃ । ಲೇಟಸ್ತಿಪ್ । ಇತಶ್ಚ ಲೋಪಃ ಪರಸ್ಮೈಪದೇಷ್ವಿತೀಕಾರಲೋಪಃ । ಲೇಟೋಽಡಾಟಾವಿತ್ಯಡಾಗಮಃ। ಕರ್ತರಿ ಶಪ್। ತಸ್ಯ ಚರ್ಕರೀತಂ ಪರಸ್ಮೈಪದಮುದಾದಿವಚ್ಚ ದ್ರಷ್ಟವ್ಯ-ಮಿತ್ಯದಾದಿವದ್ಭಾವಾದದಿಪ್ರಭೃತಿಭ್ಯಃ ಶಪ ಇತಿ ಪ್ರಾಪ್ತೋ ಲುಗ್ಬಹುಲಂ ಛಂದಸೀತಿ ನಿಷಿಧ್ಯತೇ। ಶಪೋಽ-ನುದಾತ್ತತ್ವಾದಭ್ಯಸ್ತಾದ್ಧಾತೋರಂತೋದಾತ್ತ ಏವ ಶಿಷ್ಯತೇ । ಶಪಾ ಲಸಾರ್ವಧಾತುಕಸ್ಯ ವ್ಯವಧಾನಾತ್ತತ್ರ ಪರತೋ ವಿಧೀಯಮಾನಮಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ನ ಭವತಿ । ನ ಚ ತಿಙ್ಙತಿಙ ಇತಿ ನಿಘಾತಃ । ಅತ್ರ ಯಥಾಶಬ್ದಯೋಗೇನ ಯಾವದ್ಯಥಾಭ್ಯಾಂ । ಪಾ ೮-೧-೩೬। ಇತಿ ನಿಷೇಧಾತ್ । ಚವಾ-ಯೋಗೇ ಪ್ರಥಮೇತಿ ನಾತ್ರ ನಿಘಾತೋ ನ ಭವಿಷ್ಯತಿ। ಅತ್ರ ಹ್ಯುತ್ತರವಾಕ್ಯೇ ಸಖ್ಯೇಷು ಚೇತಿ ಚಾನು-ಕೃಷ್ಟವಿಭಕ್ತ್ಯಪೇಕ್ಷಯೇಯಂ ಪ್ರಥಮಾ ತಿಙ್ವಿಭಕ್ತಿಃ । ಸಖ್ಯೇಷು । ಸಖ್ಯುಃ ಕರ್ಮಾಣಿ ಸಖ್ಯಾನಿ । ತೇಷು । ಕರ್ಮಣಿ ಚೇತ್ಯನುವೃತ್ತೌ ಸಖ್ಯುರ್ಯಃ । ಪಾ. ೫-೧-೧೨೬ । ಇತಿ ಸಖಿಶಬ್ದಾದ್ಯಪ್ರತ್ಯಯಃ । ತತ್ರ ಭಸಂಜ್ಞಾಯಾಂ ಯಸ್ಯೇತಿ ಚ । ಪಾ. ೬-೪-೧೪೮ । ಇತೀಕಾರಲೋಪಃ । ಪ್ರತ್ಯಯಸ್ವರಃ ॥

॥ ಪ್ರತಿಪದಾರ್ಥ ॥

**ಪುರುನಿಷ್ಷಿಧೇ**—ಅನೇಕ ಶತ್ರುಗಳನ್ನು ನಾಶಮಾಡುವ । **ಇಂದ್ರಾಯ**—ಇಂದ್ರನಿಗೋಸ್ಕರ । **ವರ್ಧನಂ**—ವೃದ್ಧಿಗೆ ಸಾಧನಭೂತವಾದ । **ಉಕ್ಥಂ**—ಶಸ್ತ್ರರೂಪವಾದ ಮಂತ್ರವು ಅಥವಾ ಸ್ತೋತ್ರವು । **ಶಂಸ್ಯಂ**--(ನಮ್ಮಿಂದ) ಸ್ತುತಿಸಲ್ಪಡಬೇಕು । **ಯಥಾ**—(ಯಾವ ಪ್ರಕಾರದಿಂದ) ಹಾಗೆ ಮಾಡುವ ಸ್ತೋತ್ರ ದಿಂದ । **ಶಕ್ರಃ**—ಬಲಶಾಲಿಯಾದ ಇಂದ್ರನು । **ನಃ**—ನಮ್ಮ । **ಸುತೇಷು**—ಪುತ್ರರಲ್ಲಿಯೂ । **ಸಖ್ಯೆಷು ಚ**—ನಮ್ಮಲ್ಲಿ ಸ್ನೇಹಭಾವದಿಂದಿರುವವರಲ್ಲಿಯೂ । **ರಾರಣತ್**-ಶಬ್ದಮೂಲಕ ತನ್ನ ಮೆಚ್ಚಿಗೆಯನ್ನು ಸೂಚಿಸುವನು ॥

॥ ಭಾವಾರ್ಥ ॥

ಇಂದ್ರನು ಅನೇಕ ಶತ್ರುಗಳನ್ನು ನಾಶಮಾಡುವವನು ಇಂತಹ ಇಂದ್ರನ ತೃಪ್ತಿಗಾಗಿ ನಾವು ಶಸ್ತ್ರ ಮಂತ್ರಗಳನ್ನು ಸೋತ್ರಮಾಡಿ ಪಠಿಸಬೇಕು. ಅಥವಾ ಶಸ್ತ್ರಮಂತ್ರಗಳಿಂದ ಇಂದ್ರನ ಗುಣಗಾನ ಮಾಡಬೇಕು. ಹಾಗೆ ಇಂದ್ರನನ್ನು ಪ್ರಶಂಸೆ ಮಾಡುವುದರಿಂದ ಇಂದ್ರನು ಸಂತೋಷಗೊಂಡು, ನಮ್ಮಲ್ಲಿಯೂ ನಮ್ಮ ಪುತ್ರ ರಲ್ಲಿಯೂ, ನಮ್ಮ ಸ್ನೇಹಿತರಾದಿಯಾದ ಹಿತೈಷಿಗಳಲ್ಲಿಯೂ ತನ್ನ ಮೆಚ್ಚಿಗೆಯನ್ನು ಸೂಚಿಸುವನು.

## English Translation

An agreeable hymn is to be sung to Indra, the destroyer of many enemies, so that the mighty Indra may speak with kindness to our sons and to our friends.

॥ ವಿಶೇಷವಿಷಯಗಳು ॥

ಅಭಿಪ್ಲವಷಡಹವೆಂಬ ಯಾಗದ ತೃತೀಯ ಸವನದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಉಕ್ಥಮಂತ್ರ ಪಠನಮಾಡುವಾಗ **ಉಕ್ಥಮಿಂದ್ರಾಯ ಶಂಸ್ಯಂ** ಎಂಬ ತೃಚವನ್ನು (ಮೂರು ಋಕ್ಕನ್ನು) ಪಠಿಸಬೇಕೆಂದು ವಿಶೇಷ ವಿನಿಯೋಗವು ಆಶ್ವಲಾಯನ ಶ್ರೌತಸೂತ್ರದ ವಿಹ್ಯೋಷು ಎಂಬ ಖಂಡದಲ್ಲಿ (ಆಶ್ವ.ಸೂ. ೭-೮) **ಇಂದ್ರಂ ವಿಶ್ವಾ ಅವೀವೃಧನ್ನುಕ್ಥಮಿಂದ್ರಾಯ ಶಂಸ್ಯಂ** ಎಂಬ ಸೂತ್ರದಲ್ಲಿ ಹೇಳಲ್ಪಟ್ಟಿರುವುದು.

**ವರ್ಧನಂ—ವೃದ್ಧಿಸಾಧನಂ**—ವೃದ್ಧಿಗೆ ಸಾಧನಭೂತವಾದ ಎಂದರೆ ಇಂದ್ರನನ್ನು ಸ್ತೋತ್ರ ಮಾಡುವು ದರಿಂದ ನಮಗೆ ಅಭಿವೃದ್ಧಿಯುಂಟಾಗುವುದೆಂದರ್ಥವು. ಅಥವಾ ಋಗ್ವೇದದಲ್ಲಿ ಉಪಯೋಗಿಸಿರುವ ವೃಧ ಧಾತು ವಿನ ಅರ್ಥವು—ವೃದ್ಧಿಪಡಿಸು ಎಂದರೆ ಪ್ರಶಂಸೆ ಮಾಡು, ತೃಪ್ತಿಯನ್ನುಂಟುಮಾಡು ಎಂದಿರುವುದರಿಂದ ಇಲ್ಲಿ ವರ್ಧನಂ ಎಂಬ ಶಬ್ದಕ್ಕೆ ಇಂದ್ರನಿಗೆ ತೃಪ್ತಿಯನ್ನುಂಟುಮಾಡುವ ಎಂಬರ್ಥವನ್ನು ಹೇಳಬಹುದು.

**ಪುರುನಿಷ್ಷಿಧೇ—ಬಹೂನಾಂ ಶತ್ರೂಣಾಂ ನಿಷೇಧಕಾರಿಣೇ** ಎಂದು ಭಾಷ್ಯಕಾರರು ಈ ಶಬ್ದಕ್ಕೆ ಅರ್ಥವಿವರಣೆ ಮಾಡಿರುವರು. ಈ ಶಬ್ದದಲ್ಲಿ ಇರುವ **ಪುರು**=**ಬಹು** ಎಂಬ ಶಬ್ದಕ್ಕೆ ಅನೇಕರು ಎಂದು ಮಾತ್ರ ಅರ್ಥವಾಗುವುದು. ಶತ್ರುಶಬ್ದವನ್ನು ಅಧ್ಯಾಹಾರ ಮಾಡಿರುವರು.

**ಶಕ್ರಃ—ಶಕ್ತಿಮಾನ್** ಸಾಮರ್ಥ್ಯವುಳ್ಳ, ಬಲವುಳ್ಳ ಎಂದರ್ಥವು. ಆಧುನಿಕ ಸಂಸ್ಕೃತದಲ್ಲಿಯೂ, ವೇದಗಳಲ್ಲಿಯೂ ಶಕ್ರ ಶಬ್ದಕ್ಕೆ ಇಂದ್ರನೆಂಬರ್ಥವು ವಿಶೇಷ ರೂಢಿಯಲ್ಲಿರುವುದು.

**ಯಥಾ**—ಈ ಋಕ್ಕಿನಲ್ಲಿ ಯಥಾ ಎಂಬ ಶಬ್ದವು ಮಾತ್ರವಿರುವುದರಿಂದ ತಥಾ ಎಂಬ ಶಬ್ದವನ್ನು ಅಧ್ಯಾಹಾರಮಾಡಿಕೊಳ್ಳಬೇಕು. ಉತ್ತರಾರ್ಧದ **ಶಕ್ರೋ ಯಥಾ ರಾರಣತ್ಸಖ್ಯೇಷು ಚ** ಎಂಬ ವಾಕ್ಯವು ಪೂರ್ವಾರ್ಧದ ಉಕ್ಥಮಿಂದ್ರಾಯ ಎಂಬ ವಾಕ್ಯಕ್ಕೆ ಅಧೀನವಾಕ್ಯವು.

**ರಾರಣತ್**—ಈ ಶಬ್ದಕ್ಕೆ ಅಥವಾ ಈ ಶಬ್ದಕ್ಕೆ ಮೂಲವಾದ ರಣ ಎಂಬ ಧಾತುವಿಗೆ ಶಬ್ದಮಾಡು ಎಂದರ್ಥವಿರುವುದು. ಪುತ್ರರಲ್ಲಿಯೂ ಸ್ನೇಹಿತರಲ್ಲಿಯೂ ಶಬ್ದಮಾಡುವನು ಎಂದು ಹೇಳಿದರೆ ಯಾವ ನಿರ್ದಿಷ್ಟಾರ್ಥವೂ ಹೊಂದುವುದಿಲ್ಲವಾದ್ದರಿಂದ ಶಬ್ದರೂಪವಾದ ಮೆಚ್ಚಿಗೆಯನ್ನು (approve) ಸೂಚಿಸುವನು ಎಂದು ಅರ್ಥಮಾಡಿರುವರು. ಕೆಲವು ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳದಿದ್ದರೆ ಈ ಋಕ್ಕಿಗೆ ಸರಿಯಾಗಿ ಅರ್ಥ ವಿವರಣೆಮಾಡುವುದಕ್ಕಾಗುವುದಿಲ್ಲ.

**ಸುತೇಷು**—ಸುತಶಬ್ದದ ನಾನಾ ರೂಪಗಳಿಗೆ ಋಗ್ವೇದದಲ್ಲಿ ಸಾಮಾನ್ಯವಾಗಿ " ಸೋಮಲತೆಯನ್ನು ಜಜ್ಜಿ ರಸವನ್ನು ಹಿಂಡಿದ " ಎಂಬರ್ಥವೇ ರೂಢಿಯಲ್ಲಿದ್ದರೂ ಕೆಲವು ಸಂದರ್ಭಗಳಲ್ಲಿ ಅಪರೂಪವಾಗಿ ಸುತ ಶಬ್ದಕ್ಕೆ ಪುತ್ರಶಬ್ದವೆಂದೂ ಅರ್ಥವಿರುವುದು ಈ ವಿಷಯದಲ್ಲಿ.

**ಪ್ರ ನು ವೋಚಾ ಸುತೇಷು ವಾಂ ವೀರ್ಯಾ೩ ಯಾನಿ ಚಕ್ರಥುಃ ॥**

(ಋ. ಸಂ. ೬-೫೯-೧)

ಮೊದಲಾದ ಉದಾಹರಣೆಗಳನ್ನು ಕೊಡಬಹುದು.

॥ ವ್ಯಾಕರಣಪ್ರಕ್ರಿಯಾ ॥

**ಉಕ್ಥಮ್**—ವಚ ಪರಿಭಾಷಣೇ, ಧಾತು. **ಪಾತೃ ತುದಿ ವಚಿ ರಿಚಿ ಸಿಚಿಭ್ಯಸ್ಥಕ್** (ಉ. ಸೂ. ೨-೧೬೪) ಎಂಬುದರಿಂದ ವಚ್ ಧಾತುವಿನ ಮುಂದೆ ಥಕ್ ಪ್ರತ್ಯಯ, **ವಚಿಸ್ವಪಿಯಜಾದೀನಾಂಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಸಂಪ್ರಸಾರಣ, ವಕಾರಕ್ಕೆ ಉಕಾರ ಸಂಪ್ರಸಾಂಣಾಚ್ಚ ಎಂಬುದರಿಂದ ಪೂರ್ವರೂಪ, ಚಕಾರಕ್ಕೆ **ಚೋಃಕುಃ** (ಪಾ. ಸೂ. ೮-೨-೩೦) ಎಂಬುದರಿಂದ ಕಕಾರ, ಉಕ್ಥಮ್ ಎಂದಾಗುವುದು. ಪ್ರತ್ಯಯ ಸ್ವರ ಬರುವುದು.

**ಶಂಸ್ಯಮ್**—ಶಂಸು ಸ್ತುತೌ ಧಾತು. ಇದರ ಮುಂದೆ ಣಿಚ್ ಪ್ರತ್ಯಯ. ಶಂಸ್+ಇ—**ಅಚೋಯತ್** (ಪಾ. ಸೂ. ೩-೧-೯೭) ಅಜಂತವಾದ ಧಾತುವಿನ ಮುಂದೆ ಯತ್ ಪ್ರತ್ಯಯ ಬರುವುದು ಎಂಬುದರಿಂದ ಯತ್ ಪ್ರತ್ಯಯ. ಶಂಸ್+ಇ+ಯ. **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಗೆ ಲೋಪ. ಶಂಸ್ಯ ಎಂದಾಗುವುದು. **ತಿತ್ಸ್ವರಿತಂ** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತ ಪ್ರಾಪ್ತವಾದರೆ ಅದನ್ನು ಬಾಧಿಸಿ **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುವುದು.

**ವರ್ಧನಮ್-ಕರಣಾಧಿಕರಣಯೋಶ್ಚ** (ಪಾ. ಸೂ. ೩-೩-೧೧೭) ಲ್ಯುಟ್ ಪ್ರತ್ಯಯ. ಯುಗೆ **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅನ ಆದೇಶ ಲಘೂಪಧಗುಣ, **ಲಿತಿ** (ಪಾ. ಸೂ. ೬-೧-೧೯೩ ಎಂಬುದರಿಂದ ಪ್ರತ್ಯಯದ ಹಿಂದೆ ಇರುವ ಅಚ್ಚು ಉದಾತ್ತವಾಗುವುದು.

**ಪುರುನಿಷ್ಷಿಧೇ**—ಬಹು ಸಂಖ್ಯಾಕರಾದ ಶತ್ರುಗಳಿಗೆ ನಿಷೇಧಮಾಡತಕ್ಕ ಎಂದು ಅರ್ಥ, ಷಿಧಗತ್ಯಾಂ, ಧಾತು. **ಧಾತ್ವಾದೇಃಷಃಸಃ** (ಪಾ. ಸೂ. ೬-೧-೬೪) ಎಂಬುದರಿಂದ ಷಕಾರಕ್ಕೆ ಸಕಾರ, ಇಲ್ಲಿ 'ನಿ' ಎಂಬ ಉಪಸರ್ಗದ ಅರ್ಥಕ್ಕೆ ಸಮಾನವಾದ ಅರ್ಥವನ್ನು ಬೋಧಿಸುವ 'ನಿಸ್' ಎಂಬ ಉಪಸರ್ಗಕ್ಕೆ ಪೂರ್ವದಲ್ಲಿ ಪ್ರಯೋಗ, ನಿಸ್+ಸಿಧ್ ಇದರ ಮುಂದೆ **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಕ್ವಿಪ್ ಪ್ರತ್ಯಯದಲ್ಲಿ ಸಕಲ ವರ್ಣಗಳಿಗೂ ಲೋಪ. **ಕುಗತಿಪ್ರಾದಯಃ** (ಪಾ. ಸೂ. ೨-೨-೧೮) ಎಂಬುದರಿಂದ ಪ್ರಾದಿ ಸಮಾಸ ಬರುವುದು. ಇಲ್ಲಿ ನಿಸ್ ಉಪಸರ್ಗದ ಇಕಾರಕ್ಕೂ ಸಿಧ್ ಧಾತುವಿನ ಸಕಾರಕ್ಕೂ ಮಧ್ಯೆ ಉಪಸರ್ಗದ ಸಕಾರದಿಂದ ವ್ಯವಧಾನವಿರುವುದು. ಆದರೂ, ಇದು ಛಂದಸ್ಸಾದ್ದರಿಂದ ಆ ವ್ಯವಧಾನವನ್ನು ಅನಾದರಿಸಿ **ಉಪಸರ್ಗಾತ್ಸುನೋತಿ, ಸುವತಿ, ಸ್ಯತಿ, ಸ್ತೋಭತಿ, ಸ್ಥಾ, ಸೇನಯ, ಸೇಧ, ಸಿಚ, ಸಜ, ಸ್ವಂಜಾಮ್** (ಪಾ. ಸೂ. ೮-೩-೬೫) ಉಪಸರ್ಗದಲ್ಲಿರುವ ಇಣ್ ವರ್ಣದ ಮುಂದೆ ಇರುವ ಇವುಗಳ ಸಂಬಂಧಿಯಾದ ಸಕಾರಕ್ಕೆ ಷತ್ವಬರುವುದು ಎಂಬುದರಿಂದ ಧಾತು ಸಕಾರಕ್ಕೆ ಷಕಾರ. **ಸಹೇಸ್ಸಾಡಃಸಃ** (ಪಾ. ಸೂ. ೮-೩-೫೬) ಎಂಬುದರಿಂದ ಸಃ ಎಂಬ ಪ್ರಥಮಾಂತವು ಅನುವೃತ್ತವಾಗಿ ಷಷ್ಠ್ಯಂತವಾಗಿ ವಿಪರಿಣತವಾಗುವುದು. **ಅಪದಾಂತಸ್ಯಮೂರ್ಧನ್ಯಃ** (ಪಾ. ಸೂ. ೮-೩-೫೫) **ಇಣ್ಕೋಃ** (ಪಾ. ಸೂ. ೮-೩-೫೭) ಎರಡು ಸೂತ್ರಗಳೂ

ಅಧಿಕಾರದಿಂದ ಬರುವುವು. ಪಾಣಿನ್ಯಾಚಾರ್ಯರು ಉಪದೇಶಿಸಿರುವ ದೇಶದಲ್ಲಿ ಸಾಕ್ಷಾತ್ತಾಗಿ ಲಕ್ಷ್ಯ ಸಂಸ್ಕಾರೋಪ ಯುಕ್ತ ವಾಕ್ಯಾರ್ಥವನ್ನು ಬೋಧಿಸದೇ ತನಗಿಂತಲೂ ಉತ್ತರದಲ್ಲಿರುವ ಸೂತ್ರಗಳೊಂದಿಗೆ ಏಕವಾಕ್ಯತಯಾ ವಾಕ್ಯಾರ್ಥ ಬೋಧವನ್ನು ಉಂಟುಮಾಡುವದಕ್ಕೆ ಅಧಿಕಾರವೆಂದು ಹೆಸರು. ಕೋಃ ಎಂಬುದು ಅಧಿಕಾರದಿಂದ ಪ್ರಾಪ್ತವಾದರೂ ಉಪಸರ್ಗಗಳಲ್ಲಿ ಕವರ್ಗವಿಲ್ಲದೇ ಇರುವುದರಿಂದ ಅಸಂಭವದೋಷ ಬರುವಕಾರಣ ಇಲ್ಲಿ ಸಂಬ ದ್ಧವಾಗುವುದಿಲ್ಲ. ಪ್ರಕೃತದಲ್ಲಿ ವ್ಯಾವೃತ್ತಿ ಇಲ್ಲದಕಾರಣ ಅಪದಾಂತಸ್ಯ ಎಂಬುದಕ್ಕೂ ಸಂಬಂಧವಿಲ್ಲ ಮುಂಡೂ ಕಾನುವೃತ್ತಿ ಪರಿಕ್ಲೇಶ ಪರಿಹಾರಕ್ಕಾಗಿ ಅನುವೃತ್ತಿ ಮಾಡಿದರೂ ಬಾಧಕವಿಲ್ಲ. ಇಣಃ ಎಂಬುದು ಉಪಸರ್ಗಾ ತ್ ಎಂಬುದಕ್ಕೆ ವಿಶೇಷಣವೆಂದು ಇಟ್ಟುಕೊಂಡರೆ **ಯೇನವಿಧಿಸ್ತದಂತಸ್ಯ** (ಪಾ. ಸೂ. ೧-೧-೭೨) ಎಂಬುದ ರಿಂದ ತದಂತಲಾಭ ಬಂದರೆ 'ಇಣ್ಣಂತಾದುಪಸರ್ಗಾತ್' ಇಣ್ ವರ್ಣವನ್ನು ಕೊನೆಯಲ್ಲಿ ಹೊಂದಿರುವ ಉಪ ಸರ್ಗದ ಮುಂದೆ ಇರುವ ಸುನೋತ್ಯಾದಿಗಳ ಸಕಾರಕ್ಕೆ ಮೂರ್ಧನ್ಯಾದೇಶ ಬರುವುದು ಎಂದು ಅರ್ಥವಾಗುವುದು. ಈಪಕ್ಷದಲ್ಲಿ ಸುನೋತ್ಯಾದಿಗಳು ನಿ ಅಭಿ ಮೊದಲಾದ ಉಪಸರ್ಗಗಳ ಮುಂದೆ ಇರುವಾಗ ಷತ್ವ ಬರುವುದು. ನಿಸ್ ಎಂಬುದರ ಮುಂದೆ ಇರುವ ಸುಸೋತ್ಯಾದಿಗಳಿಗೆ ಷತ್ವ ಬರಲಾರದು. ಉದಾಹರಣೆ ನಿಷ್ಷುಣೋತಿ, ನಿಷ್ಷೇಧತಿ, ನಿಃಷಿಂಚತಿ. ಇವಕ್ಕಾಗಿ **ಉಪಸರ್ಗಾತ್ ಷತ್ವೇ ನಿಸ ಉಪಸಂಖ್ಯಾನಮನಿಣಂತತ್ವಾತ್** (ಪಾ. ಸೂ ೮-೩-೬೫ ೧) ಎಂಬ ವಚನವು ಹುಟ್ಟಿತು. ನಂತರ **ನವಾ ವರ್ಣಾಶ್ರಯತ್ವಾತ್** (ಪಾ. ಸೂ. ೮-೩-೬೫-೨) ಎಂಬುದರಿಂದ ಮೊದಲನೆ ವಚನಕ್ಕೆ ಅಕರ್ತವ್ಯತೆಯನ್ನು ಹೇಳಿರುವರು. ಈಪಕ್ಷದಲ್ಲಿ ಇಣ್ಣಿನ ಮುಂದೆ ಇರುವ ಸಕಾರಕ್ಕೆ ಷಕಾರ ಬರುವುದು, ಇಣ್ಣು ಉಪಸರ್ಗ ಸಂಬಂಧಿಯಾಗಿಯೂ, ಸಕಾರವು ಸುನೋ ತ್ಯಾದಿಗಳ ಸಂಬಂಧಿಯಾಗಿಯೂ ಇರುವಪಕ್ಷದಲ್ಲಿ ಎಂದು ಅರ್ಥವಾಗುವುದು. ಈಗ ನಿಷ್ಷುಣೋತಿ ಎಂಬಲ್ಲಿ ಧಾತು ಸಕಾರವು ಉಪಸರ್ಗದ ಇಕಾರದ ಮುಂದೆ ಇರುವುದರಿಂದ ಷತ್ವ ಬರುವುದು. ಆದರೆ ಮಧ್ಯೇ ಸಕಾರ ದಿಂದ ವ್ಯವಧಾನವಿರುವುದು. ಆದರೂ **ನುಮ್ವಿಸರ್ಜನೀಯಶರ್ವ್ಯವಾಯೇಽಪಿ** (ಪಾ. ಸೂ. ೮-೩-೫೮) ನುಮಾಗಮ, ಶ, ಷ, ಸ ವಿಸರ್ಗ ಇವುಗಳಿಂದ ವ್ಯವಧಾನವಿದ್ದರೂ ಷತ್ವ ಬರುವುದು. ಈ ಸೂತ್ರವು ಷತ್ವ ವಿಧಾಯಕ ಸೂತ್ರಗಳಲ್ಲಿ ಅಧಿಕೃತವಾಗುವುದು. ಆದ್ದರಿಂದ ಸಕಾರದಿಂದ ವ್ಯವಧಾನವಿದ್ದರೂ ಷತ್ವಬರಲು ತಡೆಯಿಲ್ಲ. ಇದೇ ಅಂಶವನ್ನು ಮಹಾಭಾಷ್ಯದಲ್ಲಿ **ತತ್ರ ಶರ್ವ್ಯವಾಯೇ ಇತ್ಯೇವಸಿದ್ಧಮ್** ಎಂದು ಹೇಳಿರುವರು. ಏವಂಚ ಪ್ರಕೃತದಲ್ಲಿ ನಿಸ್ ಸಿಧೇ ಎಂಬಲ್ಲಿ ಸಕಾರದಿಂದ ವ್ಯವಧಾನವಿದ್ದರೂ ಶರ್ವ್ಯವಾಯೇ ಎಂದು ಹೇಳಿರುವುದ ರಿಂದ ಷತ್ವವು ನಿರ್ವಿಘ್ನವಾಗಿ (ತಡೆಇಲ್ಲದೆ) ಬರುವುದು. ಆದ್ದರಿಂದ ನಿಷಸ್ಸಕಾರೇಣ ಇಣೋ ವ್ಯವಧಾನಂ ಛಾಂದ ಸತ್ವಾದನಾದೃತ್ಯ ಎಂದು ವೇದಭಾಷ್ಯದಲ್ಲಿ ಛಂದಸ್ಸಾದ್ದರಿಂದ ವ್ಯವಧಾನವು ಅನಾದೃತವಾಗಿರುವುದೆಂದು ವರ್ಣಿಸಿ ರುವುದು ವೃಥಾ ಪ್ರಯಾಸವೆಂದು ತೋರುವುದು. ನಿಸ್ ಎಂಬ ಉಪಸರ್ಗದ ಸಕಾರಕ್ಕೆ ಷಿಧ್ ಎಂಬಲ್ಲಿನ ಷಕಾರದ ಯೋಗವಿರುವುದರಿಂದ ಷ್ಟುನಾಷ್ಟುಃ (ಪಾ. ಸೂ. ೮-೪-೪೧) ಎಂಬುದರಿಂದ ಷ್ಟುತ್ವ ಬಂದು ಷಕಾರ ಬರುವುದು ನಿಷ್ಷಿಧ್ ಎಂದಾಗುವುದು. ಇದರೊಂದಿಗೆ ಪುರೂಣಾಂ ಎಂಬ ಕರ್ಮಣಿಷಷ್ಠ್ಯಂತವಾದ ಪದವು ಸಮಾ ಸವನ್ನು ಹೊಂದುವುದು. ಪುರುನಿಷ್ಷಿಧ್ ಎಂಬ ಪ್ರಾದಿ ಸಮಾಸವು **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರ ಪದಪ್ರಕೃತಿ ಸ್ವರವನ್ನು ಹೊಂದುವುದು. ಕೃದಂತ ಎಂದರೆ ಯಾವ ಪ್ರಕೃತಿಯ ಮುಂದೆ ಯಾವ ಕೃತ್ಪ್ರತ್ಯಯವನ್ನು ವಿಧಿಸಲಾಗುವುದೋ ಆ ಪ್ರಕೃತ್ಯಾದ್ಯವಯವಕವೂ ಆ ಪ್ರತ್ಯಯ ಚರ ಮಾವಯವಕವೂ ಆದ ಸಮುದಾಯ ಎಂದು ಅರ್ಥ. ಇದನ್ನೇ ಸಂಸ್ಕೃದಲ್ಲಿ ತತ್ಪ್ರತ್ಯಯಪ್ರಕೃತ್ಯಾದ್ಯವಯವಕ-ತತ್ಪ್ರತ್ಯಯಚರಮಾವಯವಕತ್ವಂ ತತ್ಪ್ರತ್ಯಯಾಂತತ್ವಂ ಎಂದು ಸಾಮಾನ್ಯವಾಗಿ ಹೇಳುವರು. ಇಲ್ಲಿ ಷಿಧ್

ಎಂಬುದರ ಮುಂದೆ ಕ್ವಿಪ್ ಬಂದಿರುವುದರಿಂದ ಷಿಧ್+ಕ್ವಿಪ್ ಎಂಬುದು ಕೃದಂತ, ಪ್ರತ್ಯಯವು ಲುಪ್ತವಾದರೂ ಪ್ರತ್ಯಯಲೋಪೇ ಪ್ರತ್ಯಯ ಲಕ್ಷಣಂ ಎಂಬುದರಿಂದ ಆ ಪ್ರತ್ಯಯವು ಇದ್ದೇ ಇರುವುದು. ಆದ್ದರಿಂದ ಷಿಧ್ ಎಂಬುದು ಕೃದಂತ ಎಂದು ಸಿದ್ಧವಾಯಿತು. ನಿಷ್ಷಿಧ್ ಎಂಬುದರಲ್ಲಿ ಷಿಧ್ ಎಂಬ ಉತ್ತರಪದವು ಕೃದಂತವಾದ್ದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುವುದು. ಇನ್ನು ಕರ್ಮಷಷ್ಠ್ಯಂತ ಪುರುಶಬ್ದ ನಿಷ್ಷಿಧ್ ಎಂಬಿವುಗಳಿಗೆ ಸಮಾಸ ಬಂದರೂ, ಕೃದುತ್ತರಪದಪ್ರಕೃತಿಸ್ವರವೇ ಬರುವುದು. ಆದರೆ ನಿಷ್ಷಿಧ್ ಎಂಬುದರ ಮುಂದೆ ಕ್ವಿ ಪ್ರತ್ಯಯ ಬರಲಿಲ್ಲ ಕ್ವಿಪ್‌ಚ ಎಂಬಲ್ಲಿ **ಧಾತೋಃ** (ಪಾ. ಸೂ. ೩-೧-೯೧) ಎಂದು ಅಧಿಕಾರವಿರುವುದರಿಂದ ಧಾತುವಿನ ಮುಂದೆಯೇ ಕ್ವಿಪ್ ಬಂದಿರುವುದು. ಆದ್ದರಿಂದ ಷಿಧ್ ಎಂಬುದು ಕ್ವಿಬಂತರೂಪ ಕೃದಂತವಾಗುವುದೇ ವಿನಾ ನಿಷ್ಷಿಧ್ ಎಂಬುದು ಕೃದಂತವಾಗುವುದಿಲ್ಲ. ಆದ್ದರಿಂದ ಹೇಗೆ ಕೃದುತ್ತರಪದಪ್ರಕೃತಿಸ್ವರ ಬರುವುದು ಎಂದು ಸಂದೇಹ ತೋರುವುದು. ಆದರೆ **ಕೃದ್ಗ್ರಹಣೇಗತಿಕಾರಕಪೂರ್ವಸ್ಯಾಪಿಗ್ರಹಣಂ** (ಪರಿಭಾಷಾ ೨೮) ಕೃತ್ವ, ತದ್ವ್ಯಾಪ್ಯ ಅನ್ಯತರಧರ್ಮ ಪುರಸ್ಕಾರವಾಗಿ ಎಲ್ಲಿ ಕೃತ್ತಿಗೆ ಉಪಾದಾನವಿದೆಯೋ ಅಲ್ಲಿ ಗತಿಯ ಮುಂದೆ ಇರುವ ಕೃತ್ತಿಗೂ (ಗತಿಪೂರ್ವಕಕ್ಕೂ) ಕಾರಕಪೂರ್ವಕಕ್ಕೂ ಗ್ರಹಣ ಬರುವುದು ಎಂದು ಈ ಪರಿಭಾಷೆಯ ಅರ್ಥ, ಕೃತ್ವರೂಪ ಸಾಮಾನ್ಯ ಧರ್ಮಪುರಸ್ಕಾರವಾಗಿ ‘ ಗತಿಕಾರಕೋಪಪದಾತ್ಕೃತ್ ’ ಎಂಬಲ್ಲಿ ಕೃತ್ತಿಗೆ ಗ್ರಹಣವಿರುವುದು. ಆದ್ದರಿಂದ **ಪೂರ್ವೋಕ್ತ**ಪರಿಭಾಷೆಯು ಇಲ್ಲಿ ಸಂಚರಿಸುವುದು. ಈಗ ಸೂತ್ರಾರ್ಥವು ಹೀಗೆ ನಿಷ್ಕರ್ಷವಾಗುವುದು. ತತ್ಪುರುಷ ಸಮಾಸದಲ್ಲಿ ಗತಿ, ಕಾರಕ, ಇವುಗಳ ಮುಂದೆ ಇರುವ ಕೃದಂತವೂ ಗತಿಪೂರ್ವಕವಾದ ಕೃದಂತವೂ ಸಹ ಪ್ರಕೃತಿ ಸ್ವರವನ್ನು ಹೊಂದುವುದು ಎಂದು ಇಲ್ಲಿ ಪುರು ಎಂಬುದು ಕರ್ಮಕಾರಕ. ಇದರ ಮುಂದೆ ಇರುವ ಗತಿಪೂರ್ವಕ ಕೃದಂತ ನಿಷಿಧ್. ಆದಕ್ಕೆ ಪ್ರಕೃತಿಸ್ವರ ಬಂದರೆ ಧಾತುಸ್ವರವೇ ನಿಲ್ಲುವುದು. ಮಿಕ್ಕವುಗಳಿಗೆ **ಅನುದಾತ್ತಂ ಪದಮೇಕವರ್ಜಂ** (ಪಾ. ಸೂ. ೬-೧-೧೫೮) ಎಂಬುದರಿಂದ ಅನುದಾತ್ತ ಬರುವುದು. ಪುರುನಿಷ್ಷಿಧ್ ಎಂಬುದರ ಮುಂದೆ ಬರುವ ಚತುರ್ಥೀ ಏಕವಚನ ಙೇಪ್ರತ್ಯಯದ ಏಕಾರವು **ಅನುದಾತ್ತೌಸುಪ್ಪಿತೌ** ( ಪಾ. ಸೂ. ೩-೧-೪ ) ಎಂಬುದರಿಂದ ಅನುದಾತ್ತವಾಗಿ **ಉದಾತ್ತಾದನುದಾತ್ತಸ್ಯ ಸ್ವರಿತಃ** (ಪಾ. ರೂ. ೮-೪-೬೬) ಎಂಬುದರಿಂದ ಸ್ವರಿತವಾಗುವುದು.

**ಶಕ್ರಃ—ಸ್ಫಾಯಿತಞ್ಚಿ ವಞ್ಚಿಶಕಿ** (ಉ. ಸೂ. ೨-೧೭೦) ಎಂಬುದರಿಂದ ಶಕ್ಲೃಶಕ್ತೌ ಎಂಬ ಧಾತುವಿನ ಮುಂದೆ ರಕ್ ಪ್ರತ್ಯಯ. ಪ್ರತ್ಯಯಸ್ವರ ಬರುವುದು.

**ಯಥಾ—ಪ್ರಕಾರವಚನೇಥಾಲ್** (ಪಾ. ಸೂ. ೫-೩-೨೩) ಎಂಬುದರಿಂದ ಥಾಲ್ ಪ್ರತ್ಯಯ. ಪ್ರತ್ಯಯವು ಲಿತ್, ಆದ್ದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ; ಹಿಂದೆ ಇರುವ ಅಕಾರವು ಉದಾತ್ತವಾಗುವುದು.

**ಸುತೇಷು**—ಷುಞ್ ಧಾತುವಿನ ಮುಂದೆ ಕ್ತ ಪ್ರತ್ಯಯ. ಪ್ರತ್ಯಯಸ್ವರದಿಂದ ಉದಾತ್ತ.

**ನಃ**—ಅಸ್ಮಾಕಂ ಎಂಬ ಅಸ್ಮದ್ ಶಬ್ದದ ಷಷ್ಠೀಬಹುವಚನಾಂತಕ್ಕೆ **ಬಹುವಚನಸ್ಯ ವಸ್ನಸೌ** (ಪಾ. ಸೂ. ೮-೧-೨೧) ಎಂಬುದರಿಂದ ಅನುದಾತ್ತವಾದ ನಸ್ ಆದೇಶ. ಸಂಹಿತಾಕಾಲದಲ್ಲಿ ನಸ್ ಎಂಬುದರ ನಕಾರಕ್ಕೆ **ನಶ್ಚಧಾತುಸ್ಥೋರುಷುಭ್ಯಃ** (ಪಾ. ಸೂ. ೮-೪ ೨೭) ವೇದದಲ್ಲಿ ಧಾತುವಿನಲ್ಲಿರತಕ್ಕಸಿಮಿತ್ತ- ಉರು ಶಬ್ದ ಷು ಶಬ್ದ ಇವುಗಳ ಮುಂದೆ ಇರುವ ಅಸ್ಮಚ್ಛಬ್ದಕ್ಕೆ ಆದೇಶವಾಗಿ ಬಂದ ನಸ್ ಎಂಬುದರ ನಕಾರಕ್ಕೆ ಣಕಾರ

ಬರುವುದು. ಎಂಬುದರಿಂದ ಸುತೇಷು ಎಂಬಲ್ಲಿನ ಷು ಶಬ್ದದ ಮುಂದೆ ಇರುವ ನಸ್ ನ ಕಾರಕ್ಕೆ ಣತ್ವ ಬರುವುದು, ಸುತೇಷುಣಃ ಎಂದಾಗುವುದು. ಷು ಎಂಬುದರಿಂದ ಷಕಾರಾದೇಶವನ್ನು ಹೊಂದಿದ ಸುಞ್ ಧಾತುವಿನ ಷು ಎಂಬುದಕ್ಕೆ ಅನುಕರಣವೆಂದು ಶೇಖರಕಾರರು ಅಭಿಪ್ರಾಯಪಡುವರು. **ಷುಇತಿಕೃತಷತ್ವಸ್ಯಸುಞೋನುಕರಣಂ** (ಶೇ. ಪಾ.ಸೂ. ೮-೪-೨೭) ಅದ್ದರಿಂದಲೇ ಗೃ(ಗ್ರ) ಹೇಷುನಃ ಎಂಬಲ್ಲಿ ಣತ್ವ ಬರುವುದಿಲ್ಲ ಎಂದು ಉಪಪಾದಿಸಿರುವರು. ಸುಬೋಧಿನೀಕಾರರೂ ಇದೇ ರೀತಿ ಹೇಳಿರುವರು. ಭಟ್ಟೋಜಿದೀಕ್ಷಿತರೂ ಕೌಮುದಿಯಲ್ಲಿ ಈ ಅರ್ಥವನ್ನೇ ಇಟ್ಟುಕೊಂಡು ಅಭೀಷುಣಃ ಮೊದಲಾದ ಉದಾಹರಣೆಗಳನ್ನಿತ್ತಿರುವರು. ಹೀಗೆಹೇಳುವ ಪಕ್ಷದಲ್ಲಿ ಪ್ರಕೃತದಲ್ಲಿ ಣತ್ವಕ್ಕೆ ಪ್ರವೃತ್ತಿ ಹೇಗೆ ಎಂಬುದು ಚಿಂತನೀಯವು.

**ರಾರಣತ್**—ರಣ ಶಬ್ದಾರ್ಥಃ, ಧಾತು. ಇದರ ಮುಂದೆ **ಧಾತೋರೇಕಾಚೋಹಲಾದೇಃಕ್ರಿಯಾಸಮಭಿಹಾರೇಯಙ್** (ಪಾ. ಸೂ. ೩-೧-೨೨) ಎಂಬುದರಿಂದ ಯಙ್ ಪ್ರತ್ಯಯ, **ಯಙೋಽಚಿಚ** (ಪಾ. ಸೂ. ೨-೪-೭೪) ಎಂಬುದರಿಂದ ಯಙ್ಞಿಗೆ **ಲುಕ್**, **ಪ್ರತ್ಯಯಲೋಪೇಪ್ರತ್ಯಯಲಕ್ಷಣಮ್** (ಪಾ. ಸೂ. ೧-೧-೬೨) ಎಂಬ ಪ್ರತ್ಯಯಲಕ್ಷಣದಿಂದ ಯಙ್ಞಿಗೆ ಲುಕ್ ಬಂದರೂ ರಣ್ ಎಂಬುದು ಯಙಂತವಾಗುವುದು. ಅದ್ದರಿಂದ **ಸನ್ಯಙೋಃ** (ಪಾ. ಸೂ. ೬-೧-೯) ಎಂಬುದರಿಂದ ದ್ವಿತ್ವ 'ರಣ್ ರಣ್ ಎಂದಾಗುವುದು. **ಹಲಾದಿಃಶೇಷಃ** (ಪಾ. ಸೂ. ೭-೪-೬೦) ಎಂಬುದರಿಂದ ಅಭ್ಯಾಸದ ಣಕಾರಕ್ಕೆ ಲೋಪ. **ದೀರ್ಘೋಽಕಿತಃ** (ಪಾ. ಸೂ. ೭-೪-೮೩) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ, ರಾರಣ್, ಪ್ರತ್ಯಯಲಕ್ಷಣದಿಂದ ಯಙಂತವಾದ್ದರಿಂದ **ಸನಾದ್ಯಂತಾಧಾತವಃ** (ಪಾ ಸೂ. ೩-೧-೩೨) ಎಂಬುದರಿಂದ ಧಾತುಸಂಜ್ಞೆ ಬರುವುದು. ನಂತರ **ಲಿಙರ್ಥೇ ಲೇಟ್** (ಪಾ. ಸೂ. ೩-೪-೭) ಹೇತು ಹೇತುಮದ್ಭಾವವೂ ವಿಧ್ಯಾದಿಗಳೂ ಲಿಙರ್ಥವೆಂದು ಹಿಂದೆಯೇ ನಿರೂಪಿತವಾಗಿರುವುದು. ಹೇತುಹೇತುಮದ್ಭಾವ ಎಂಬ ಅರ್ಥದಲ್ಲಿ ಲೇಟ್. ಇಲ್ಲಿ ಇಂದ್ರಕರ್ತೃಕವಾದ ರಾರಣನವು ಉಕ್ಥಶಾಮಶಂಸನದ ಕರ್ತವ್ಯತೆಯಲ್ಲಿ ಹೇತುವಾಗಿರುವುದು. ಲೇಟ್ಟಿಗೆ ತಿಪ್ ಇತಶ್ಚ **ಲೋಪಃ ಪರಸ್ಮೈಪದೇಷು** (ಪಾ. ಸೂ ೩-೪-೯೭) ಎಂಬುದರಿಂದ ತಿಯ ಇಗೆ ಲೋಪ. **ಲೇಟೋಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ತಿಗೆ ಅಟ್ ಆಗಮ ರಾರಣ್+ಅತ್. **ಕರ್ತರಿಶಪ್** (ಪಾ. ಸೂ. ೩-೧-೬೮) ಎಂಬುದರಿಂದ ವಿಕರಣ **ಶಪ್** ಬರುವುದು. ರಾರಣ್+ಅ+ಅತ್, 'ಚರ್ಕರೀತಂ ಪರಸ್ಮೈಪದಮ್, ಅದಾದಿವಚ್ಚದ್ರಷ್ಟವ್ಯಮ್ ಎಂಬುದರಿಂದ ಯಙ್ಲುಗಂತವು ಅದಾದಿಯಾಗುವುದರಿಂದ ಇದರ ಮುಂದೆ ಇರುವ ವಿಕರಣ ಪ್ರತ್ಯಯಕ್ಕೆ **ಅದಿಪ್ರಭೃತಿಭ್ಯಃ ಶಪಃ** (ಪಾ. ಸೂ. ೨-೪-೭೨) ಎಂಬುದರಿಂದ ಲುಕ್ ಪ್ರಾಪ್ತವಾಗುವುದು. ಆದರೂ **ಬಹುಲಂ ಛಂದಸಿ** ( ಪಾ. ಸೂ. ೨-೪-೭೩ ) ಎಂಬುದರಿಂದ ಲುಕ್ ಬರುವುದಿಲ್ಲ. ಶಪ್ಪು ಪಿತ್ತಾದ್ದರಿಂದ ಅನುದಾತ್ತ. ಅದ್ದರಿಂದ ರಾರಣ ಎಂಬಲ್ಲಿ **ಧಾತೋಃ** ( ಪಾ. ಸೂ. ೬-೧-೧೬೨ ) ಎಂಬುದರಿಂದ ಅಂತೋದಾತ್ತವೇ ನಿಲ್ಲುವುದು. ಈಶಪ್ ವಿಕರಣದಿಂದ ಲಸ್ಥಾನಿಕ ಸಾರ್ವಧಾತುಕವಾದ ಅತ್ ಎಂಬುದಕ್ಕೂ ರಾರಣ್ ಧಾತುವಿಗೂ ವ್ಯವಧಾನವಿರುವುದು. ಆದ್ದರಿಂದ **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಇಡ್ಭಿನ್ನವಾದ ಯಾವ ಅಚ್ಚಿರುವುದೋ ಅಂತಹ ಅಜಾದಿಯಾದ ಲಸ್ಥಾನಿಕ ಸಾರ್ವಧಾತುಕ ಪರವಾಗಿರುವಾಗ ಅಭ್ಯಸ್ತಗಳ ಆದಿಯು ಉದಾತ್ತವಾಗುವುದು ಎಂಬುದರಿಂದ ಆದ್ಯುದಾತ್ತ ಬರುವುದಿಲ್ಲ. ಶಬಕಾರ ಆಗಮಾಕಾರಗಳಿಗೆ **ಅತೋ ಗುಣೇ** (ಪಾ. ಸೂ. ೬-೧-೯೭) ಎಂಬುದರಿಂದ **ಪರರೂಪ**, **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ. ಏಕೆಂದರೆ 'ಶಕ್ರೋಯಥಾ' ಎಂದು ಯಥಾ ಶಬ್ದದ ಯೋಗವಿರುವುದರಿಂದ **ಯಾವದ್ಯಥಾಭ್ಯಾಮ್** (ಪಾ. ಸೂ. ೮-೧-೩೬) ಯಾವತ್-ಯಥಾ ಎಂಬ ಶಬ್ದಗಳಿಂದ ಯುಕ್ತವಾದ ತಿಙಂತವು ಅನುದಾತ್ತವಾಗುವುದಿಲ್ಲ

ಎಂದು ನಿಷೇಧವಿರುವುದು. ಆದಕಾರಣ ಅನುದಾತ್ತ ಬರುವುದಿಲ್ಲ. ಅಥವಾ ಇಲ್ಲಿ ಸಖ್ಯೇಷು ಚ ಎಂಬಲ್ಲಿರುವ ಚಕಾರದಿಂದ ಉತ್ತರವಾಕ್ಯದಲ್ಲಿ ರಾರಣತ್ ಎಂಬ ತಿಙಂತವು ಅನುಕೃಷ್ಟವಾಗುವುದು. ಆ ಅನುಕೃಷ್ಟವಾದ ತಿಙಂತವನ್ನು ಅಪೇಕ್ಷಿಸಿ ಪೂರ್ವವಾಕ್ಯೋಪಾತ್ತವಾದ ರಾರಣತ್ ಎಂಬುದು ಪ್ರಥಮೋಚ್ಚರಿತ ತಿಙಂತವಾಗುವುದು. ಆದ್ದರಿಂದ **ಚವಾಯೋಗೇಪ್ರಥಮಾ** (ಪಾ. ಸೂ. ೮-೧-೫೯) ಚ, ವಾ ಶಬ್ದಗಳಿಂದ ಯೋಗವಿರುವಾಗ ಪ್ರಥಮೋಚ್ಚರಿತ ತಿಙಂತವು ಅನುದಾತ್ತವಾಗುವುದಿಲ್ಲ ಎಂದು ನಿಷೇಧ ಬರುವುದರಿಂದ ಇಲ್ಲಿ ಅನುದಾತ್ತ ಬರುವುದಿಲ್ಲ.

**ಸಖ್ಯೇಷು**—ಸಖ್ಯುಃ ಕರ್ಮಾಣಿ ಸಖ್ಯಾನಿ. ತೇಷು ಎಂದು ವಿಗ್ರಹ, ಸಖ್ಯುರ್ಯಃ (ಪಾ. ಸೂ. ೫-೧-೧೨೬) ಇಲ್ಲಿ **ಗುಣವಚನ ಬ್ರಾಹ್ಮಣಾದಿಭ್ಯಃ ಕರ್ಮಣಿಚ** ( ಪಾ. ಸೂ. ೫-೧-೧೨೪) ಎಂಬ ಸೂತ್ರದಿಂದ ಕರ್ಮಣಿಚ ಎಂಬುದು ಅನುವೃತ್ತವಾಗುವುದು. ಸಖಿಶಬ್ದಪ್ರಕೃತಿಕ ಷಷ್ಠ್ಯಂತದ ಮುಂದೆ ಭಾವ, ಕರ್ಮ ಎಂಬ ಅರ್ಥಗಳಲ್ಲಿ ಯ ಪ್ರತ್ಯಯ ಬರುವುದು ಎಂದು ಸೂತ್ರಾರ್ಥ. ಇಲ್ಲಿ ಕರ್ಮ ಎಂಬ ಅರ್ಥದಲ್ಲಿ ಯ ಪ್ರತ್ಯಯ ಬರುವುದು. ಸಖಿ+ಯ **ಯಚಿಭಮ್** (ಪಾ. ಸೂ. ೧-೪-೧೮) ಕ ಪ್ರತ್ಯಯಾವಧಿಕಾ ಸರ್ವನಾಮಸ್ಥಾನೆಯಾದ್ಯಜಾದಿಸ್ವಾದಿ ಪ್ರತ್ಯಯ ಪರದಲ್ಲಿರುವಾಗ ಪೂರ್ವಕ್ಕೆ ಭ ಸಂಜ್ಞೆ ಬರುವುದು ಎಂಬುದರಿಂದ ಭ ಸಂಜ್ಞೆ ಬರುವುದು. **ಯಸ್ಯೇತಿಚ** (ಪಾ. ಸೂ. ೬-೪-೧೪೮) ಈಕಾರ ತದ್ಧಿತಗಳು ಪರವಾಗಿರುವಾಗ ಭ ಸಂಜ್ಞಕಾಂಗಾವಯವವಾದ ಇವರ್ಣಾವರ್ಣಗಳಿಗೆ ಲೋಪ ಬರುವುದು ಎಂಬುದರಿಂದ ಇಕಾರಕ್ಕೆ ಲೋಪ, ಸಪ್ತಮೀ ಬಹುವಚನದಲ್ಲಿ ಸಖ್ಯೇಷು ಎಂದಾಗುವುದು. ಸಖ್ಯ ಎಂಬಲ್ಲಿ **ಆದ್ಯುದಾತ್ತಶ್ಚ** (ಪಾ. ಸೂ. ೩-೧-೩) ಎಂಬುದರಿಂದ ಯ ಎಂಬುದು ಉದಾತ್ತ ॥ ೫ ॥

॥ ಸಂಹಿತಾಪಾಠಃ ॥

ತಮಿತ್ಸಖಿತ್ವ ಈಮಹೇ ತಂ ರಾಯೇ ತಂ ಸುವೀರ್ಯೇ ॥
ಸ ಶಕ್ರ ಉತ ನಃ ಶಕದಿಂದ್ರೋ ವಸು ದಯಮಾನಃ ॥ ೬ ॥

॥ ಪದಪಾಠಃ ॥

ತಂ । ಇತ್ । ಸಖಿಽತ್ವೇ । ಈಮಹೇ । ತಂ । ರಾಯೇ । ತಂ । ಸುಽವೀರ್ಯೇ ॥
ಸಃ । ಶಕ್ರಃ । ಉತ । ನಃ । ಶಕತ್ । ಇಂದ್ರಃ । ವಸು । ದಯಮಾನಃ ॥ ೬ ॥

॥ ಸಾಯಣಭಾಷ್ಯಂ ॥

ಸಖಿತ್ವೇ ನಿಮಿತ್ತಭೂತೇ ಸತಿ ತಮಿತ್ತಮೇವೇಂದ್ರಮೀಮಹೇ । ಪ್ರಾಪ್ನುಮಃ । ತಥಾ ರಾಯೇ ಧನಾರ್ಥಂ ತಮೀಮಹೇ । ತಥಾ ಸುವೀರ್ಯೇ ಶೋಭನಸಾಮರ್ಥ್ಯನಿಮಿತ್ತಂ ತಮೀಮಹೇ । ಉತಾಪಿಚ ಶಕ್ರಃ ಶಕ್ತಿಮಾನ್ಸ ಇಂದ್ರೋ ನೋಽಸ್ಮಭ್ಯಂ ವಸು ಧನಂ ದಯಮಾನಃ ಪ್ರಯಚ್ಛನ್ ಶಕತ್ ।

ಅಸ್ಮದೀಯರಕ್ಷಣೇ ಶಕ್ನೋಽಭೂತ್ । ಸಪ್ತದಶಯೋಽಚ್ಛಾ ಕರ್ಮಸ್ವೀಮಹೇ ಯೋಽವಿಷ್ಣಾತಿ ಪಠಿತಂ । ತದನುಸಾರೇಣೇಂದ್ರಂ ಯಾಚಾಮಹ ಇತಿ ವ್ಯಾಖ್ಯೇಯಂ ॥ ಸಖ್ಯುರ್ಭಾವಃ ಸಖಿತ್ವಂ । ತಸ್ಯ ಭಾವಸ್ತ್ವ-ತಲೌ । ಪಾ- ೫-೧-೧೧೯ । ಇತಿ ತ್ವಃ । ಪ್ರತ್ಯಯಸ್ವರೇಣೋದಾತ್ತಃ । ಈಮಹೇ । ಈಙ್ ಗತೌ । ಙಿತ್ತ್ವಾದಾತ್ಮನೇಪದಂ । ಪಾ. ೧-೩-೧೨ । ದಿವಾದಿಭ್ಯಃ ಶ್ಯನ್ । ಬಹುಲಂ ಛಂದಸೀತಿ ಶ್ಯನೋ ಲುಕ್ । ತಿಙ್ಙತಿಙ ಇತಿ ನಿಘಾತಃ । ರಾಯೇ । ಊಡಿದಮಿತಿ ವಿಭಕ್ತೇರುದಾತ್ತತ್ವಂ । ಸುವೀರ್ಯೇ । ಶೋಭನಂ ವೀರ್ಯಂ ಯಸ್ಯಾಸೌ ಸುವೀರ್ಯಃ ಭವಿತೃವಾಚಿನಾನೇನ ಭಾವೋ ಲಕ್ಷ್ಯತೇ । ಸುವೀರ್ಯತ್ವೇ ಇತ್ಯರ್ಥಃ ಬಹುವ್ರೀಹಾವಿತ್ಯನುವೃತ್ತೌ ವೀರವೀರ್ಯೌ ಚ । ಪಾ. ೬-೨-೧೨೦ । ಇತ್ಯುತ್ತರಪದಾದ್ಯುದಾತ್ತತ್ವಂ । ಶಕ್ನೋತೀತಿ ಶಕ್ರಃ । ಸ್ಫಾಯಿತಂಚಿವಂಚಿಶಕೀತ್ಯಾದಿನಾ ರಕ್ । ಪ್ರತ್ಯಯಸ್ವರಃ । ಶಕತ್ । ಶಕ್ಲೃ-ಶಕ್ತೌ । ಧಾತುಸಂಬಂಧಾಧಿಕಾರೇ ಛಂದಸಿ ಲುಙ್ಲಙ್ಲಿಟಃ । ಪಾ- ೩-೪-೬ । ಇತಿ ಲುಙ್ । ಯತಃ ಶಕ್ನೋತ್ಯತಸ್ತಮೀಮಹ ಇತಿ ಧಾತುಸಂಬಂಧಃ । ಲುಙಸ್ತಿಪ್ । ಪುಷಾದಿದ್ಯುತಾದ್ಯ್ಲೃದಿತಃ ಪರಸ್ಮೈ-ಪದೇಷು । ಪಾ. ೩-೧-೫೫ । ಇತಿ ಚ್ಲೇರಙಾದೇಶಃ । ಬಹುಲಂ ಛಂದಸಿ । ಪಾ. ೬-೪-೭೫ । ಇತ್ಯಡಾಗ ಮಾಭಾವಃ । ತಿಙ್ಙತಿಙ ಇತಿ ನಿಘಾತಃ । ವಸು । ನಿದಿತ್ಯನುವೃತ್ತೌ ವಸೇರುಪ್ರತ್ಯಯಃ । ಉ- ೧-೧೧ । ನಿತ್ತ್ವಾದಾದ್ಯುದಾತ್ತತ್ವಂ । ದಯಮಾನಃ । ದಯ ದಾನಗತಿರಕ್ಷಣಹಿಂಸಾದಾನೇಷು । ಅನುದಾತ್ತೇತ್ತ್ವಾ-ದಾತ್ಮನೇಪದಂ । ಲಟಃ ಶಾನಜಾದೇಶಃ । ಪಾ. ೩-೨-೧೨೪ । ಶಪಃ ಪಿತ್ತ್ವಾದನುದಾತ್ತತ್ವಂ । ಶಾನಚಶ್ಚಿತ ಇತ್ಯಂತೋದಾತ್ತತ್ವಂ ಬಾಧಿತ್ವಾದುಪದೇಶಾಚ್ಛಪ ಉತ್ತರತ್ವೇನ ಪರತ್ವಾಲ್ಲಸಾರ್ವಧಾತುಕತ್ವಾದನುದಾ-ತ್ತತ್ವಂ । ಧಾತುಸ್ವರ ಏವ ಶಿಷ್ಯತೇ ॥ ೧೯ ॥

॥ ಪ್ರತಿಪದಾರ್ಥ ॥

(ನಾವು) ಸಖಿತ್ವೇ—ಸ್ನೇಹಕ್ಕಾಗಿ । ತಮಿತ್—ಅವನನ್ನೇ (ಇಂದ್ರನನ್ನೇ) ಈಮಹೇ—ಪ್ರಾರ್ಥಿಸುವೆವು। ರಾಯೇ—ಧನಾದ್ಯೈಶ್ವರ್ಯಕ್ಕಾಗಿ। ತಂ—ಅವನನ್ನು (ಇಂದ್ರನನ್ನು) (ಈಮಹೇ—ಯಾಚಿಸುವೆವು)। ಸುವೀರ್ಯೇ—ಹೆಚ್ಚಾದ ಸಾಮರ್ಥ್ಯಕ್ಕಾಗಿ । ತಂ—ಅವನನ್ನು ( ಈಮಹೇ—ಯಾಚಿಸುವೆವು) । ಉತ—ಮತ್ತು । ಶಕ್ರಃ—ಬಲಶಾಲಿಯಾದ । ಸ ಇಂದ್ರಃ—ಆ ಇಂದ್ರನು । ನಃ—ನಮಗೆ । ವಸು—ಧನವನ್ನು । ದಯಮಾನಃ—ಕೊಡುವವನಾಗಿ । ಶಕತ್—ನಮ್ಮನ್ನು ರಕ್ಷಿಸುವುದರಲ್ಲಿ ಸಮರ್ಥನಾಗಿರಲಿ ॥

॥ ಭಾವಾರ್ಥ ॥

ನಾವು ಸ್ನೇಹಕ್ಕಾಗಿಯೂ, ಧನಕ್ಕಾಗಿಯೂ, ಶಕ್ತಿಸಾಮರ್ಥ್ಯಗಳಿಗಾಗಿಯೂ ಇಂದ್ರನನ್ನೇ ಯಾಚಿಸುವೆವು (ಪ್ರಾರ್ಥಿಸುವೆವು). ಆ ಇಂದ್ರನು ಬಲಶಾಲಿಯಾದುದರಿಂದ ನಮಗೆ ಧನವನ್ನು ಕೊಡುವುದಲ್ಲದೆ ನಮ್ಮನ್ನು ರಕ್ಷಿಸುವುದರಲ್ಲಿ ಸಮರ್ಥನಾಗಿರುವನು.

English Translation.

To him (Indra) alone we pray for friendship, to him for wealth, to him for great valour. For he, the powerful Indra conferring wealth is able to protect us.

॥ ವಿಶೇಷವಿಷಯಗಳು ॥

**ಈಮಹೇ**--ಈಮಹೇ, ಯಾಮಿ, ಮನ್ಮಹೇ ಮೊದಲಾದ ಹದಿನೇಳು ಯಾಚ್ಞಾಕರ್ಮವನ್ನು ಸೂಚಿಸುವ ಕ್ರಿಯಾಪದಗಳ ಮಧ್ಯದಲ್ಲಿ **ಈಮಹೇ** ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೧೯) **ಈಮಹೇ** ಎಂದರೆ ಯಾಚಿಸುತ್ತೇವೆ, ಪ್ರಾರ್ಥಿಸುತ್ತೇವೆ ಎಂದರ್ಥವು.

**ಸುವೀರ್ಯೇ**—ಸು=ಒಳ್ಳೆಯ, ಹೆಚ್ಚಾದ, ವೀರ್ಯ =ಪರಾಕ್ರಮ, ಶಕ್ತಿ, ಸಾಮರ್ಥ್ಯ. Great valour, grat power ಇತ್ಯಾದಿ

ವ್ಯಾಕರಣಪ್ರಕ್ರಿಯಾ

**ಸಖಿತ್ವೇ-ಸಖ್ಯುಃ ಭಾವಃ ಸಖಿತ್ವಂ, ತಸ್ಮಿನ್.** ' ತಸ್ಯಭಾವಸ್ತ್ವತಲೌ, ( ಪಾ. ಸೂ. ೫-೧ ೧೧೯ ) ಎಂಬುದರಿಂದ ತ್ವ ಪ್ರತ್ಯಯ. ಪ್ರತ್ಯಯಸ್ವರದಿಂದ ಉದಾತ್ತ.

**ಈಮಹೇ**--- ' ಈಙ್ ಗತೌ ' ಧಾತು. ಧಾತುವು ಙಿತ್ತು ಆದ್ದರಿಂದ ' **ಅನುದಾತ್ತಙಿತಆತ್ಮನೇಪದಂ,** ( ಪಾ. ಸೂ. ೧-೩-೧೨ ) ಎಂಬುದರಿಂದ ಆತ್ಮನೇ ಪದ ಪ್ರತ್ಯಯವು ಬರುವುದು. ಲಟ್ ಉ. ಪು ಬಹುವಚನದಲ್ಲಿ ಮಹಿಙ್ ಬರುವುದು. ಈ+ಮಹಿ. **ಟಿತ ಆತ್ಮನೇ ಪದಾನಾಂಟೇರೇ** ( ಪಾ. ಸೂ. ೩-೪-೭೯ ) ಎಂಬುದರಿಂದ ಏತ್ವ ಬರುವುದು. ' **ದಿವಾದಿಭ್ಯಃ ಶ್ಯನ್** ' ( ಪಾ. ಸೂ. ೩-೧-೬೯ ) ಎಂಬುದರಿಂದ ಬರುವ ಶ್ಯನ್ ಎಂಬ ವಿಕರಣ ಪ್ರತ್ಯಯಕ್ಕೆ **ಬಹುಲಂ ಛಂದಸಿ** (ಪಾ.ಸೂ. ೨-೪-೭೩) ಎಂಬುದರಿಂದ ಲುಕ್ ' **ತಿಙ್ಙತಿಙಃ** ( ಪಾ. ಸೂ. ೮-೧-೨೮ ) ಎಂಬುದರಿಂದ ಅನುದಾತ್ತ.

**ರಾಯೇ**.-- **ಊಡಿದಮ್ ಪದಾದ್ಯಪ್ಪುಮ್ರೈದ್ಯುಭ್ಯಃ,** ( ಪಾ. ಸೂ. ೬-೧-೧೭೧ ) ಎಂಬುದರಿಂದ ರೈ ಶಬ್ದದ ಮುಂದೆ ಇರುವ ಚತುರ್ಥೀವಿಭಕ್ತಿ **ಙೇ** ಪ್ರತ್ಯಯವು ಉದಾತ್ತ.

**ಸುವೀರ್ಯೇ**—ಶೋಭನಂ ವೀರ್ಯಂ ಯಸ್ಯಾಸೌ ಸುವೀರ್ಯಃ ಎಂದು ವಿಗ್ರಹ, ಭವಿತೃವಾಚಿಯಾದ ಸುವೀರ್ಯಶಬ್ದದಿಂದ ಭಾವಾರ್ಥವು ಲಕ್ಷಿಸಲ್ಪಡುವುದು. ಸುವೀರ್ಯೇ ಎಂಬುದಕ್ಕೆ ಸುವೀರ್ಯತ್ವೇ ಎಂದು ಅರ್ಥ. **ವೀರವೀರ್ಯೌಚ** (ಪಾ ಸೂ ೬-೨-೧೨೦) ಇಲ್ಲಿ **ಬಹುವ್ರೀಹೌ ವಿಶ್ವಂಸಂಜ್ಞಾಯಾಂ** (ಪಾ. ಸೂ. ೬-೨-೧೦೬) ಎಂಬುದರಿಂದ ಬಹುವ್ರೀಹೌ ಎಂಬ ಪದವು ಅನುವೃತ್ತವಾಗುವುದು. ಬಹುವ್ರೀಹಿಸಮಾಸದಲ್ಲಿ ಸು ಎಂಬುದರ ಮುಂದೆ ಇರುವ ವೀರ, ವೀರ್ಯ ಎಂಬ ಶಬ್ದಗಳು ಛಂದಸ್ಸಿನಲ್ಲಿ ಆದ್ಯುದಾತ್ತಗಳಾಗುವುವು ಎಂಬುದರಿಂದ ಉತ್ತರಪದವಾದ ವೀರ್ಯಶಬ್ದದ ಆದಿಯು ಉದಾತ್ತವಾಗುವುದು

**ಶಕ್ನೋತಿ ಇತಿ ಶಕ್ರಃ**—ಶಕ್ಲೃಧಾತುವಿನ ಮುಂದೆ **ಸ್ಫಾಯಿತಞ್ಚಿವಞ್ಚಿಶಕಿ** (ಉ. ಸೂ. ೨-೧೭೦) ಎಂಬುದರಿಂದ ರಕ್ ಪ್ರತ್ಯಯ. ಪ್ರತ್ಯಯಸ್ವರಬರುವುದು. **ಶಕೇತ್**—ಶಕ್ಲೃ ಶಕ್ತೌ ಎಂಬ ಧಾತುವಿನ ಮುಂದೆ **ಧಾತುಸಂಬಂಧೇ ಪ್ರತ್ಯಯಾಃ** (ಪಾ. ಸೂ. ೩-೪-೧) ಎಂಬ ಅಧಿಕಾರದಲ್ಲಿರುವ **ಛಂದಸಿಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ಲುಙ್ ಬರುವುದು. ಯಾವ ಕಾರಣದಿಂದ ಸಮರ್ಥನಾಗುವನೋ ಅದರಿಂದ ಅವನನ್ನು ಹೊಂದುತ್ತೇವೆ. **ಯತಶ್ಶಕ್ನೋತಿ ಅತಸ್ತಮೀಮಹೇ** ಎಂದು ಧಾತುಸಂಬಂಧವಿರುವುದು. ಲುಙ್ಙಿಗೆ ತಿಪ್. ಇಕಾರಕ್ಕೆ ಇತಶ್ಚ **ಲೋಪಃಪರಸ್ಮೈಪದೇಷು** (ಪಾ. ಸೂ. ೩-೪-೯೭) ಎಂಬುದರಿಂದ ಲೋಪ.

**ಚ್ಲಿ ಲುಙಿ** (ಪಾ.ಸೂ. ೩-೧-೪೩) ಎಂಬುದರಿಂದ ಧಾತುವಿನ ಮುಂದೆ ಚ್ಲಿ ಬರುವುದು ಶಕ್+ಚ್ಲಿ+ತ್. ಇದಿತ್ತಾದ ಧಾತುವಿನ ಮುಂದೆ ಇರುವ ಚ್ಲಿಗೆ **ಪುಷಾದಿದ್ಯುತಾದ್ಲೃದಿತಃ ಪರಸ್ಮೈಪದೇಷು** ( ಪಾ. ಸೂ. ೩-೧-೫೫ ) ಪರಸ್ಮೈಪದಪ್ರತ್ಯಯಪರದಲ್ಲಿರುವಾಗ ಪುಷಾದಿಗಣದ ಧಾತುಗಳು- ದ್ಯುತಾದಿಗಣಧಾತುಗಳು ಇದಿತ್ತಾದ ಧಾತುಗಳು ಇವುಗಳ ಮುಂದೆ ಇರುವ ಚ್ಲಿಗೆ ಅಙ್ ಆದೇಶ ಬರುವುದು ಎಂಬುದರಿಂದ ಅಙ್ ಬಂದರೆ ಶಕ್+ಅ+ತ್ **ಲುಙ್ಲಙ್ಲೃಙ್ಕ್ಷ್ವಡುದಾತ್ತಃ** ( ಪಾ. ಸೂ. ೬-೪-೭೧ ) ಎಂಬುದರಿಂದ ಅಡಾಗಮ ಪ್ರಾಪ್ತವಾದರೆ **ಬಹುಲಂಛಂದಸ್ಯಮಾಙ್ಯೋಗೇಪಿ** (ಪಾ. ಸೂ, ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. **ತಿಙ್ಙತಿಙಃ** (ಪಾ. ಸೂ.೮-೧-೨೮) ಎಂಬುದರಿಂದ ಸರ್ವಾನುದಾತ್ತ.

**ವಸು**— ಶೃಸ್ವೃಸ್ನಿಹಿತ್ರಪ್ಯಸಿವಸಿಹನಿಕ್ಲಿದಿಬಂಧಿಮನಿಭ್ಯಶ್ಚ ( ಉ. ಸೂ, ೧-೧೦ ) ಧಾನ್ಯೇನಿತ್ (ಉ. ಸೂ. ೧-೯) ಎಂಬುದರಿಂದ ನಿತ್ ಎಂದೂ, ಭೃಮೃಶೀ ........ಉಃ (ಉ.ಸೂ. ೧-೭) ಎಂಬುದರಿಂದ ಉಃ ಎಂದೂ ಅನುವೃತ್ತವಾಗುವುದು. ಶೃ ಮೊದಲಾದ ಹತ್ತು ಧಾತುಗಳ ಮುಂದೆ ಉ ಪ್ರತ್ಯಯ ಬರುವುದು. ಅದು ನಿತ್ತಾಗುವುದು ಎಂದು ಸೂತ್ರಾರ್ಥ. ಇದರಿಂದ ವಸನಿವಾಸೇ ಎಂಬುದರ ಮುಂದೆ ಉ ಪ್ರತ್ಯಯ ಬರುವುದು, ಪ್ರತ್ಯಯವು ನಿತ್ತಾದ್ದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ವಸು ಎಂಬುದು ಆದ್ಯುದಾತ್ತ.

**ದಯಮಾನಃ**—ದಯ ದಾನಗತಿರಕ್ಷಣಹಿಂಸಾದಾನೇಷು ಧಾತು. ಇದು ಅನುದಾತ್ತೇತ್ತು. ಆದ್ದರಿಂದ **ಅನುದಾತ್ತಙಿತ ಆತ್ಮನೇಪದಂ** (ಪಾ. ಸೂ. ೧-೩-೧) ಎಂಬುದರಿಂದ ಆತ್ಮನೇಪದಿ ದಯಧಾತುವಿನ ಮುಂದೆ ಲಟ್ಟನ್ನು ಇಟ್ಟರೆ ಅದರ ಸ್ಥಾನದಲ್ಲಿ **ಲಟಃಶತೃಶಾನಚೌ** (ಪಾ. ಸೂ. ೩-೨-೧೨೪) ಎಂಬುದರಿಂದ ಆತ್ಮನೇಪದ ಸಂಜ್ಞಕವಾದ ಶಾನಚ್ ಪ್ರತ್ಯಯ ಬರುವುದು **ಕರ್ತರಿಶಪ್** (ಪಾ. ಸೂ. ೩-೧.೬೮) ಎಂಬುದರಿಂದ ಶಪ್ ವಿಕರಣ ಬರುವುದು ದಯ್+ಅ+ಆನ **ಆನೇಮುಕ್** (ಪಾ. ಸೂ. ೭-೨-೮೨) ಆನ ಎಂಬುದು ಪರದಲ್ಲಿರುವಾಗ ಅಂಗಾವಯವವಾದ ಹ್ರಸ್ವಾಕಾರಕ್ಕೆ ಮುಗಾಗಮ ಬರುವುದು ಎಂಬುದರಿಂದ ಮುಕ್ ಆಗಮ. ಅದು ಕಿತ್ತು. ಆದ್ದರಿಂದ **ಆದ್ಯಂತೌಟಕಿತೌ** (ಪಾ.ಸೂ- ೧-೧-೪೬) ಎಂಬುದರಿಂದ ಅಂತಾವಯವವಾಗಿ ಬರುವುದು. ದಯ್+ಅಮ್+ಆನ=ದಯಮಾನ ಎಂದಾಗುವುದು. ಶಪ್ಪು ಪಿತ್ತಾದ್ದರಿಂದ ಅನುದಾತ್ತ. ಶಾನಚ್ಚು ಚಿತ್ತು ಆದ್ದರಿಂದ **ಚಿತಃ** (ಪಾ. ಸೂ ೬-೧-೧೬೩) ಎಂಬುದರಿಂದ ಅಂತೋದಾತ್ತ ಪ್ರಾಪ್ತವಾಗುವುದು. ಆದರೆ ಅದನ್ನು ಬಾಧಿಸಿ ಅದುಪದೇಶವಾದ ಶಪ್‌ವಿಕರಣದ ಮುಂದೆ ಇರುವುದರಿಂದ **ತಾಸ್ಯನುದಾತ್ತೇನ್ಙಿದದುಪದೇಶಾತ್** (ಪಾ. ಸೂ. ೬-೧-೧೮೬) ಲಸಾರ್ವಧಾತುಕಾನುದಾತ್ತ ಬರುವುದು. ದಯ್ ಎಂಬಲ್ಲಿ ಧಾತುಸ್ವರವೇ ನಿಲ್ಲುವುದು. ॥ ೬ ॥

॥ ಸಂಹಿತಾಪಾಠಃ ॥

ಸುವಿವೃತಂ ಸುನಿರಜಮಿಂದ್ರ ತ್ವಾದಾತಮಿದ್ಯಶಃ ।
ಗವಾಮಪ ವ್ರಜಂ ವೃಧಿ ಕೃಣುಷ್ವ ರಾಧೋ ಅದ್ರಿವಃ ॥ ೭ ॥

॥ ಪದಪಾಠಃ ॥

ಸು॒ಽವಿ॒ವೃ॒ತಂ । ಸು॒ನಿಃ॒ಽಅ॒ಜಂ । ಇಂದ್ರ॑ । ತ್ವಾಽದಾ॑ತಂ । ಇತ್ । ಯಶಃ॑ ॥
ಗವಾ॑ಂ । ಅಪ॑ । ವ್ರ॒ಜಂ । ವೃ॒ಧಿ॒ । ಕೃ॒ಣು॒ಷ್ವ । ರಾಧಃ॑ । ಅ॒ದ್ರಿ॒ಽವಃ॒ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಯಶೋಽನ್ನಂ ಕರ್ಮಫಲಭೂತಂ ಸುವಿವೃತಂ ಸುಷ್ಠು ಸರ್ವತ್ರ ಪ್ರಸೃತಂ ಸುನಿರಜಂ ಸುಖೇನ ನಿಃಶೇಷಂ ಪ್ರಾಪ್ತುಂ ಶಕ್ಯಂ ತ್ವಾದಾತಮಿತ್ತ್ವಯಾ ಶೋಧಿತಂ ಚ ಸಂಪನ್ನಮಿತಿ ಶೇಷಃ ಅತಃ ಪರಂ ಕ್ಷೀರಾದಿರಸಲಾಭಾರ್ಥಂ ಗವಾಂ ವ್ರಜಂ ನಿವಾಸಸ್ಥಾನಮಪ ವೃಧಿ । ಅಪವೃತಮುದ್ಘಾಟಿತದ್ವಾರಂ ಕುರು । ಹೇ ಅದ್ರಿವಃ ಪರ್ವತೋಪಲಕ್ಷಿತವಜ್ರಯುಕ್ತೇಂದ್ರ ರಾಧೋ ಧನಂ ಕೃಣುಷ್ವ । ಸಂಪಾದಯ ॥ ಸುವಿವೃತಂ । ವೃಞ್ ವರಣೇ । ಕರ್ಮಣಿ ಕ್ತಪ್ರತ್ಯಯಃ । ವಿಶಬ್ದೇನ ಪ್ರಾದಿಸಮಾಸಃ । ವಿವೃತಮಿತ್ಯತ್ರ ಕೃದುತ್ತರಪದಪ್ರಕೃತಿಸ್ವರಂ ಬಾಧಿತ್ವಾ ಕರ್ಮವಾಚಿನಿ ಕ್ತಾಂತೇ ಪರತೋ ಗತಿರನಂತರಃ। ಪಾ. ೬-೨-೪೯ । ಇತಿ ಪೂರ್ವಪದಪ್ರಕೃತಿಸ್ವರೇ ಪ್ರಾಪ್ತೇ ಪರಾದಿಶ್ಛಂದಸಿ ಬಹುಲಂ । ೬-೨ ೧೯೯ । ಇತ್ಯೃಕಾರ ಉದಾತ್ತಃ । ಪುನಃ ಸುಶಬ್ದೇನ ಸಮಾಸೇ ಕೃದುತ್ತರಪದಪ್ರಕೃತಿಸ್ವರೇಣ ಸ ಏವಕಾರ ಉದಾತ್ತಃ। ನನು ವೃತಮಿತ್ಯೇವ ಕೃದಂತಂ ನ ತು ವಿವೃತಮಿತಿ ಪ್ರತ್ಯಯಗ್ರಹಣೇ ಯಸ್ಮಾತ್ಸ ವಿಹಿತಸ್ತದಾದೇಸ್ತದಂತಸ್ಯ ಗ್ರಹಣಂ । ಪರಿ. ೨೩ । ಇತಿ ವಚನಾತ್ । ಸುವಿವೃತಮಿತ್ಯತ್ರ ಚ ಸಮಾಸೇ ವೃತಮಿತ್ಯೇತಾವನ್ಮಾತ್ರಂ ನೋತ್ತರಪದಂ ಕಿಂತು ವಿವೃತಮಿತಿ । ತತ್ಕಥಂ ಕೃದುತ್ತರಪದಪ್ರಕೃತಿಸ್ವರತ್ವಮಿತಿ ಚೇತ್ ಉಚ್ಯತೇ । ಪ್ರತ್ಯಯಗ್ರಹಣಪರಿಭಾಷಾಪವಾದೇನ ಕೃದ್ಗ್ರಹಣೇ ಗತಿಕಾರಕಪೂರ್ವಸ್ಯಾಪಿ ಗ್ರಹಣಂ । ಪರಿ. ೨೮ । ಇತ್ಯನೇನ ವಿವೃತಮಿತ್ಯಸ್ಯಾಪಿ ಕೃದಂತವ್ಯಪದೇಶೋಪಪತ್ತೇಃ । ನನು ವಿವೃತಮಿತ್ಯಸ್ಯ ಯಥಾ ಕೃದಂತವ್ಯಪದೇಶಃ । ಏವಂ ಕ್ತಾಂತವ್ಯಪದೇಶೋಽಪ್ಯಸ್ತಿ ತಯೈವ ಪರಿಭಾಷಯಾ । ತಥಾ ಚ ಕರ್ಮಣಿ ಕ್ತಾಂತ ಉತ್ತರಪದೇ ಪರತೋ ಗತಿರನಂತರ ಇತಿ ಸುಶಬ್ದಸ್ಯ ಪ್ರಕೃತಿಸ್ವರಃ ಪ್ರಾಪ್ನೋತಿ । ನ ಚಾತ್ರಾಪಿ ಪರಾದಿಶ್ಛಂದಸಿ ಬಹುಲಮಿತ್ಯೇವಂ ನಾಸ್ತಿ ವಿಸ್ತಾರಃ। ತಥಾ ಹಿ ಸತಿ ಸುವಿವೃತಮಿತ್ಯತ್ರ ವಿವೃತಮಿತ್ಯೇವೋತ್ತರಪದಮಿತಿ ತದಾದಿರಿಕಾರ ಏವೋದಾತ್ತಃ ಸ್ಯಾತ್ । ವಿವೃತಮಿತಿ ಸಮಾಸೇ ಯದ್ಯಪ್ಯೃಕಾರಃ ಪದಾದಿರ್ಭವತಿ ತಥಾಪಿ ಸುವಿವೃತಮಿತಿ ಸಮಾಸಸ್ಯ ಸತಿ ಶಿಷ್ಟತ್ವೇನ ಬಲೀಯಸ್ತ್ವಾತ್ತತ್ರತ್ಯ ಏವೋತ್ತರಪದಾದಾವಿಕಾರ ಏವೋದಾತ್ತಸ್ವರೇಣ ಭವಿತವ್ಯಮಿತಿ । ಉಚ್ಯತೇ । ಗತಿರನಂತರ ಇತ್ಯತ್ರಾನುವೃತ್ತೇಃ ಕ್ತಗ್ರಹಣೇ ಕೃದ್ಗ್ರಹಣಪರಿಭಾಷಾ ನಾಶ್ರೀಯತೇ । ತದಾಶ್ರಯಣೇ ವ್ಯವಹಿತಗತಾವಪಿ ಪ್ರಕೃತಿಸ್ವರೇ ಸತ್ಯನಂತರಗ್ರಹಣಮನರ್ಥಕಂ ಸ್ಯಾತ್ । ಅನೇನೈವ ಚಾಭಿಪ್ರಾಯೇಣಾನಂತರಗ್ರಹಣಸ್ಯ ಪ್ರಯೋಜನಮಭ್ಯುದ್ಧೃತಮಿತ್ಯತ್ರ ವ್ಯವಹಿತಸ್ಯಾಭಿಶಬ್ದಸ್ಯ ಮಾ ಭೂದಿತಿ ಪ್ರತ್ಯುದಾಹೃತಂ । ತಸ್ಮಾತ್ಸುವಿವೃತಮಿತ್ಯೃಕಾರ ಏವೋದಾತ್ತ ಇತಿ ಸ್ಥಿತಂ । ಸುನಿರಜಂ । ಅನಾಯಾಸೇನ ನಿರವಶೇಷಂ ಪ್ರಾಪ್ಯಂ ।

ಅಜ ಗತಿಕ್ಷೇಪಣಯೋಃ । ಸುನಿಸೋರುಪಸರ್ಗಯೋಃ ಪ್ರಾಕ್ಪ್ರಯೋಗಃ । ಈಷದ್ದುಃಸುಷು ಕೃಚ್ಛ್ರಾಕೃಚ್ಛ್ರಾರ್ಥೇಷು ಖಲ್ । ಪಾ. ೩-೩-೧೨೬ । ನ ಚಾತ್ರ ಸುಶಬ್ದಸ್ಯ ನಿಸಾ ವ್ಯವಧಾನಂ ಶಂಕನೀಯಂ । ಸುಶಬ್ದಸ್ಯ ಹ್ಯುಪಪದಮಾತ್ರಂ ಖಲೋ ನಿಮಿತ್ತಂ ನಾನಂತರ್ಯಂ । ಅತ ಏವ ಸುಪರಿಹರಂ ದುಷ್ಪರಿಹರಮಿತ್ಯಾದಯಃ ಪ್ರಯೋಗಾ ಇತಿ । ಪೂರ್ವವದ್ಗತಿಸಮಾಸೇ ಲಿತೀತಿ ಪ್ರತ್ಯಯಾತ್ಪೂರ್ವಮುದಾತ್ತಮಿತಿ ಧಾತ್ವಕಾರ ಉದಾತ್ತಃ । ನಿಸಾ ಸಮಾಸೇ ಕೃದುತ್ತರಪದಪ್ರಕೃತಿಸ್ವರೇಣ ಸ ಏವ ಶಿಷ್ಯತೇ । ಪುನಃ ಸುಶಬ್ದೇನ ಸಮಾಸೇ ಕೃದ್ಗ್ರಹಣೇ ಗತಿಕಾರಕಪೂರ್ವಸ್ಯಾಪಿ ಗ್ರಹಣಮಿತಿ ಪರಿಭಾಷಯಾ ಕೃದುತ್ತರಪದಪ್ರಕೃತಿಸ್ವರೇಣ ಸ ಏವ ಶಿಷ್ಯತೇ । ತ್ವಾದಾತಂ । ತ್ವಯಾ ಶೋಧನೇನ ವಿಶದೀಕೃತಂ । ದೈಪ್ ಶೋಧನೇ। ಆದೇಚ ಉಪದೇಶೇಽಶಿತಿ । ಪಾ. ೬-೧-೪೫ । ಇತ್ಯಾತ್ವಂ । ಸತ್ಯಪಿ ಹಿ ಪಕಾರೇ ನಾನುಬಂಧಕೃತಮನೇಜಂತತ್ವಂ ॥ ಪರಿ ೭ ॥ ಇತ್ಯೇಜಂತ ಏವಾಯಂ । ನಿಷ್ಠೇತಿ ಕರ್ಮಣಿ ಕ್ತಃ । ದಾಧಾ ಘ್ವದಾಪ್ । ಪಾ. ೧-೧-೨೦ । ಇತ್ಯತ್ರಾದಾಬಿತಿ ಪ್ರತಿಷೇಧೇನ ಘುಸಂಜ್ಞಾಯಾ ಅಭಾವಾದ್ದೋ ದದ್ಘೋಃ । ಪಾ. ೭-೪-೪೬ । ಇತಿ ದದಾದೇಶೋ ನ ಭವತಿ । ನನು ದಾಪ್ ಲವನ ಇತಿ ಪ್ರತಿಪದೋಕ್ತಸ್ಯೈವ ದಾಪಸ್ತತ್ರಾದಾಬಿತಿ ನಿಷೇಧಃ । ನ ಪುನರ್ಲಾಕ್ಷಣಿಕಸ್ಯ ದೈಪಃ । ಲಕ್ಷಣಪ್ರತಿಪದೋಕ್ತಯೋಃ ಪ್ರತಿಪದೋಕ್ತಸ್ಯೈವ ಗ್ರಹಣಂ ನ ತು ಲಾಕ್ಷಣಿಕಸ್ಯ । ಪರಿ ೧೦೫ । ಇತಿ ನಿಯಮಾದಿತಿ ಚೇನ್ನ । ಗಾಮಾದಾಗ್ರಹಣೇಷ್ವವಿಶೇಷಃ । ಪರಿ ೧೦೬ । ಇತಿ ಪ್ರತಿಪ್ರಸವಾತ್ । ಯುಷ್ಮಚ್ಛಬ್ದಾತ್ತೃತೀಯೈಕವಚನಸ್ಯ ಸುಪಾಂ ಸುಲುಗಿತಿ ಡಾದೇಶಃ ॥ ತ್ವಮಾವೇಕವಚನೇ । ಪಾ. ೭-೨-೯೭ । ಇತಿ ಮಪರ್ಯಂತಸ್ಯ ತ್ವಾದೇಶಃ । ಅತೋ ಗುಣ ಇತಿ ಪರರೂಪತ್ವಂ । ಭಸಂಜ್ಞಾಯಾಂ ಟೇರಿತ್ಯದ್ಯಬ್ದಸ್ಯ ಲೋಪ ಉದಾತ್ತನಿವೃತ್ತಿಸ್ವರೇಣಾಕಾರ ಉದಾತ್ತಃ । ಕರ್ತೃಕರಣೇ ಕೃತಾ ಬಹುಲಂ । ಪಾ. ೨-೧-೩೨ । ಇತಿ ತೃತೀಯಾಸಮಾಸಃ। ತತ್ಪುರುಷೇ ಕೃತಿ ಬಹುಲಂ ಪಾ. ೬-೩-೧೪ । ಇತಿ ತೃತೀಯಾಯಾ ಅಲುಕ್ । ಕೃದುತ್ತರಪದಪ್ರಕೃತಿಸ್ವರೇ ಪ್ರಾಪ್ತೇ ತೃತೀಯಾ ಕರ್ಮಣಿ । ಪಾ. ೬-೨-೪೮ । ಇತಿ ಪೂರ್ವಪದಪ್ರಕೃತಿಸ್ವರತ್ವಂ । ಯಶಃ । ಅಶೂ ವ್ಯಾಪ್ತೌ । ಅಶೇರ್ಯುಟ್ಚ । ಉ ೪ ೧೯೦ । ಇತ್ಯಸುನ್ । ತತ್ಸನ್ನಿಯೋಗೇನ ಧಾತೋರ್ಯುಡಾಗಮಃ । ನಿತ್ತ್ವಾದಾದ್ಯುದಾತ್ತತ್ವಂ । ಗವಾಂ ಪ್ರಾತಿಪದಿಕಸ್ವರಃ। ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ ಪ್ರಾಪ್ತಂ । ನ ಗೋಶ್ವನ್ಸಾವವರ್ಣೇತಿ ನಿಷಿಧ್ಯತೇ । ವೃಧಿ । ವೃಞ್ ವರಣೇ। ಶ್ರುಶೃಣುಪೃಕೃವೃಭ್ಯಶ್ಛಂದಸಿ । ಪಾ. ೬-೪-೧೦೨। ಇತಿ ಹೇರ್ಧಿರಾದೇಶಃ । ಬಹುಲಂ ಛಂದಸೀತಿ ಶ್ನೋರಪಿ ಲುಕ್ । ನಿಘಾತಃ । ಕೃಣುಷ್ವ । ಕೃವಿ । ಹಿಂಸಾಕರಣಯೋಶ್ಚ । ಇದಿತೋ ನುಮ್ । ವ್ಯತ್ಯಯೇನಾತ್ಮನೇ ಪದಂ । ಲೋಟಸ್ಥಾಸ್ । ೩-೪-೭೮ । ಥಾಸಃ ಸೇ । ಪಾ. ೩-೪-೮೦ । ಸವಾಭ್ಯಾಂ ವಾಮೌ । ಪಾ. ೩-೪-೯೧ । ಕರ್ತರಿ ಶಪಿ ಪ್ರಾಪ್ತೇ । ಪಾ. ೩-೧-೬೮ । ಧಿನ್ವಿಕೃಣ್ವ್ಯೋರಚ್ಚ । ಪಾ. ೩-೧-೮೦ । ಇತ್ಯುಪ್ರತ್ಯಯಃ । ತತ್ಸನ್ನಿಯೋಗೇನ ವಕಾರಸ್ಯ ಚಾಕಾರಃ । ತಸ್ಯಾತೋ ಲೋಪಃ । ಪಾ. ೬-೪-೪೮ । ಇತಿ ಲೋಪಃ। ಅಚಃ ಪರಸ್ಮಿನ್ಪೂರ್ವವಿಧೌ । ಪಾ. ೧-೧-೫೭ । ಇತ್ಯಕಾರಲೋಪಸ್ಯ ಸ್ಥಾನಿವದ್ಭಾವಾಲ್ಲಘೂಪಧಗುಣೋ ನ ಭವತಿ । ಅತ್ರ ಸತಿ ಶಿಷ್ಟಸ್ವರಬಲೀಯಸ್ತ್ವಮನ್ಯತ್ರ ವಿಕರಣೇಭ್ಯ ಇತಿ ಸತಿ ಶಿಷ್ಟಮಪಿ ವಿಕರಣಸ್ವರಂ ಬಾಧಿತ್ವಾ ತಿಙ ಏವ ಪ್ರತ್ಯಯಾದ್ಯುದಾತ್ತತ್ವಂ । ರಾಧಃ । ಅಸುನಂತೋ ನಿತ್ತ್ವಾದಾದ್ಯುದಾತ್ತಃ । ಅದ್ರಿವಃ । ಅದ್ರಿರ್ವಜ್ರಂ । ತದಸ್ಯಾಸ್ತೀತಿ ಮತುಪ್ । ಛಂದಸೀರಃ । ಪಾ. ೮-೨-೧೫ । ಇತಿ ವತ್ವಂ । ಸಂಬುದ್ಧಾವುಗಿದಚಾಂ । ಪಾ. ೭-೧-೭೦ । ಇತಿ ನುಮ್ । ಹಲ್ಙ್ಯಾದಿಸಂಯೋಗಾಂತಲೋಪೌ । ಪಾ. ೬-೧-೬೮ । ಮತುವಸೋ ರುಃ ಸಂಬುದ್ಧೌ ಛಂದಸಿ । ಪಾ. ೮-೩-೧ । ಇತಿ ರುತ್ವಂ । ವಿಸರ್ಜನೀಯಃ । ಆಮಂತ್ರಿತಸ್ಯ ಚ ನಿಘಾತಃ ॥

॥ ಪ್ರತಿಪದಾರ್ಥ ॥

(ಹೇ) ಇಂದ್ರ—ಎಲೈ ಇಂದ್ರನೇ । ಸುವಿವೃತಂ—ಎಲ್ಲೆಲ್ಲಿಯೂ ಚೆನ್ನಾಗಿ ಪ್ರಸರಿಸಿರುವ ಎಂದರೆ ಹೆಚ್ಚಾಗಿರುವ । ಸುನಿರಜಂ—ಸುಲಭವಾಗಿ ದೊರೆಯುವ । ಯಶಃ—ಅನ್ನವನ್ನು (ಆಹಾರವನ್ನು) । ತ್ವಾದಾತಂ ಇತ್—ನೀನು ಚೆನ್ನಾಗಿ ಶೋಧಿಸಿಕೊಡುವವನಾಗು । (ಹೇ) ಅದ್ರಿವಃ—ಎಲೈ ವಜ್ರಾಯುಧಧಾರಿಯಾದ ಇಂದ್ರನೇ । ಗವಾಂ—ಗೋವುಗಳ । ವ್ರಜಂ—ಕೊಟ್ಟಿಗೆಯನ್ನು । ಅಪ ವೃಧಿ—ಬಾಗಿಲನ್ನು ತೆಗೆ (ದು ನಮಗೆ ಗೋವುಗಳನ್ನು ಕೊಡು) । ರಾಧಃ—ಧನವನ್ನು । ಕೃಣುಷ್ವ—(ನಮಗೆ) ದೊರಕಿಸು ॥

॥ ಭಾವಾರ್ಥ ॥

ಎಲೈ ಇಂದ್ರನೇ ನಮಗೆ ಬಹಳವಾದ ಅನ್ನವು ದೊರೆಯುವಂತೆ ಮಾಡು. ಆ ಅನ್ನವು ಎಲ್ಲೆಡೆಯಲ್ಲಿಯೂ ಇದ್ದು ನಮಗೆ ಸುಲಭವಾಗಿ ಸಿಕ್ಕುವಂತಿರಬೇಕು. ಇದಲ್ಲದೆ ಗೋವುಗಳ ಕೊಟ್ಟಿಗೆಯನ್ನು ತೆರೆದು ನಮಗೆ ಬಹಳವಾದ ಗೋವುಗಳನ್ನೂ ಧನವನ್ನೂ ಸಂಪಾದಿಸಿಕೊಡು.

English Translation

O Indra, the food is rendered abundant everywhere and easily obtainable; O weilder of thunderbolt, throw open, then the cow-fold and give us wealth.

॥ ವಿಶೇಷವಿಷಯಗಳು ॥

ಸುವಿವೃತಂ—ಈ ಶಬ್ದಕ್ಕೆ ಭಾಷ್ಯಕಾರರು—"ಸುಷ್ಠು ಸರ್ವತ್ರ ಪ್ರಸೃತಂ—ಎಲ್ಲಾ ಕಡೆಯಲ್ಲಿಯೂ ಚೆನ್ನಾಗಿ ಹರಡಿರುವ" ಎಂದೂ ಸ್ಕಂದಸ್ವಾಮಿಯು—ಸುಷ್ಠು ಲೋಕೇ ಪ್ರಕಾಶಂ—ಲೋಕದಲ್ಲಿ ಚೆನ್ನಾಗಿ ದೊರೆಯುವ" ಎಂದೂ ಅರ್ಥಮಾಡಿದಾರೆ. Wilson ಪಂಡಿತನು ಈ ಶಬ್ದಕ್ಕೆ rendered everywhere abundant ಎಂದು ಅರ್ಥವನ್ನು ವಿವರಿಸಿದಾನೆ.

ಸುನಿರಜಂ—ಸುಖೇನ ನಿಶ್ಶೇಷಂ ಪ್ರಾಪ್ತುಂ ಶಕ್ಯಂ ಎಂದು ಭಾಷ್ಯಕಾರರೂ, ಸುನಿರಜಂ । ನಿರಿತ್ಯೇಷ ನೀತ್ಯೇತಸ್ಯ ಸ್ಥಾನೇ ಅಜಗತಿಕ್ಷೇಪಣಯೋಃ । ಸುನಿಕ್ಷೇಪಂ । ಯತ್ರ ಯತ್ರ ವಿನಿಯೋಕ್ತುಮಿಷ್ಯತೇ ತತ್ರ ತತ್ರ ಪ್ರಭೂತತ್ವಾತ್ ಸುವಿನಿಯೋಜಮಿತ್ಯರ್ಥಃ ॥ ಎಂದು ಸ್ಕಂದಸ್ವಾಮಿಯೂ ವ್ಯಾಖ್ಯಾನ ಮಾಡಿದಾರೆ. ಎಂದರೆ ಸುಲಭವಾಗಿ ಸಿಕ್ಕುವ, ಎಲ್ಲೆಲ್ಲಿಯೂ ಹರಡಿರುವುದರಿಂದ ಸುಲಭವಾಗಿ ದೊರೆಯುವ ಎಂದರ್ಥವು.

ತ್ವಾದಾತಂ—ತ್ವಯಾ ಶೋಧನೇನ ವಿಶದೀಕೃತಂ ಎಂದು ಭಾಷ್ಯಕಾರರೂ, ತ್ವಯಾ ದತ್ತಂ ಎಂದು ಸ್ಕಂದಸ್ವಾಮಿಯೂ ಅರ್ಥವಿವರಣೆ ಮಾಡಿರುವರು. ಭಾಷ್ಯಕಾರರು ದೈಪ್ ಶೋಧನೇ ಎಂಬ ಧಾತು

ವಿನ ಆದೇ ಚ ಉಪದೇಶೇಽಶಿತಿ ಇತ್ಯಾತ್ವಂ (ಪಾ. ಸೂ. ೬-೧-೪೫) ಸೂತ್ರಪ್ರಕಾರ ದೈಪ್ ಧಾತುವಿನ ರೂಪಾಂತರವೆಂದು ಹೇಳಿ ಅದಕ್ಕನುಸಾರವಾಗಿ "ನಿನ್ನಿಂದ ಶೋಧನೆ ಮಾಡಿ ವಿಶದಪಡಿಸಲ್ಪಟ್ಟ" ಎಂದರ್ಥ ಮಾಡಿರುವರು. ಸ್ಕಂದಸ್ವಾಮಿಯ ವ್ಯಾಖ್ಯಾನ ಪ್ರಕಾರ ತ್ವಾದಾತಂ ಎಂದರೆ ತ್ವಯಾ ದತ್ತಂ—ನಿನ್ನಿಂದ ಕೊಡಲ್ಪಟ್ಟ ಎಂದಾಗುವುದು. ಒಟ್ಟಿನಲ್ಲಿ ಅಭಿಪ್ರಾಯವು ಒಂದೇ ಆದರೂ ಶಬ್ದದ ರೂಪನಿಷ್ಪತ್ತಿಯು ಬೇರೆ ಬೇರೆಯಾಗಿರುವುದು. ತ್ವಾದಾತಂ ಎಂಬ ಶಬ್ದವು ಈ ಋಕ್ಕಿನಲ್ಲಿಲ್ಲದೆ ಋ. ಸಂ. ೩-೪೦-೬ ; ೫-೭-೧೦ ; ೫-೩೯-೧ರಲ್ಲಿಯೂ, ತ್ವಾದತ್ತಃ ಎಂಬ ಶಬ್ದವು ಋ. ಸಂ. ೮-೯೨-೧೮ ರಲ್ಲಿಯೂ, ತ್ವಾದತ್ತೇಭಿಃ ಎಂಬ ಶಬ್ದವು ಋ. ಸಂ. ೨-೩೩-೨ ರಲ್ಲಿಯೂ ಪಠಿತವಾಗಿದೆ. (ಈ ಋಕ್ಕಿನಲ್ಲಿರುವ ಅದ್ರಿವಃ ಎಂಬ ಶಬ್ದದ ವಿವರಣೆಯನ್ನು ನೋಡಿ).

ಯಶಃ—ಅಂಧಃ, ವಾಜಃ, ಮೊದಲಾದ ಇಪ್ಪತ್ತೆಂಟು ಅನ್ನವಾಚಕಶಬ್ದಗಳ ಮಧ್ಯದಲ್ಲಿ ಯಶಃ ಶಬ್ದವು ಪಠಿತವಾಗಿರುವುದರಿಂದ ಇಲ್ಲಿ ಯಶಃ ಶಬ್ದಕ್ಕೆ ಅನ್ನವೆಂದರ್ಥವು.

ಅಪ ವೃಧಿ—ಉದ್ಘಾಟಿತದ್ವಾರಂ ಕುರು—ಬಾಗಿಲನ್ನು ತೆರೆ throw open the door (of cow-fold)

ವ್ರಜಂ—ಗೋಷ್ಠಂ ಅಥವಾ ಗವಾಂ ನಿವಾಸಸ್ಥಾನಂ—ಗೋವುಗಳನ್ನು ಕಟ್ಟುವ ಕೊಟ್ಟಿಗೆ cow fold.

ಇಲ್ಲಿ ಯಶಃ ಎಂಬ ಶಬ್ದಕ್ಕೆ ಉದಕವೆಂದೂ (ನಿ. ೨-೨೪) ವ್ರಜ ಮತ್ತು ಅದ್ರಿ ಶಬ್ದಗಳಿಗೆ ಮೇಘವೆಂದೂ (ನಿ. ೨-೨೧) ಅರ್ಥಮಾಡಿದಲ್ಲಿ ಮೇಘ ಸಮೂಹವನ್ನು ಪ್ರಹರಿಸಿ ಮಳೆಯನ್ನು ಬರುವಂತೆ ಮಾಡಿ ಆಮೂಲಕ ಉದಕವನ್ನು ಕೊಡು ಎಂದರ್ಥವು ಸರಿಹೋಗುವುದು. Wilson ಪಂಡಿತನೂ ಕೂಡ ಈ ವಿಷಯದಲ್ಲಿ—the text is literally rendered: the meaning being that Indra as the sender of rain should fertilize the fields, and by providing abundant pasturage enable the cattle to yield store of milk ಈ ಅಭಿಪ್ರಾಯವನ್ನು ಅನುಮೋದಿಸಿದಾನೆ.

ಅದ್ರಿವಃ—ಅದ್ರಿರ್ವಜ್ರಂ । ತದಸ್ಯಾಸ್ತೀತಿ ॥ ಅದ್ರಿ ಎಂದರೆ ವಜ್ರಾಯುಧವು. ಆದುದರಿಂದ ಅದ್ರಿವಾನ್ ಎಂದರೆ ವಜ್ರಾಯುಧಧರನು ಎಂದರ್ಥವು. ನಿರುಕ್ತದಲ್ಲಿ ಅದ್ರಿಯೆಂದರೆ ಪರ್ವತವೆಂದು ಹೇಳಿರುವುದರಿಂದ ಭಾಷ್ಯಕಾರರು ಪರ್ವತೋಪಲಕ್ಷಿತವಜ್ರಯುಕ್ತ ಎಂದರ್ಥ ಹೇಳಿರುವರು. ಇದಲ್ಲದೆ ಅದ್ರಿಶಬ್ದಕ್ಕೆ ಮೇಘವೆಂದೂ ಹೆಸರು (ನಿ. ೨-೨೧) ಮತ್ತು ಯಾಸ್ಕರು--

ಯದಿಂದ್ರ ಚಿತ್ರ ಮೇಹನಾಸ್ತಿ ತ್ವಾದಾತಮದ್ರಿವಃ ।
ರಾಧಸ್ತನ್ನೋ ವಿದದ್ವಸ ಉಭಯಾಹಸ್ತ್ಯಾ ಭರ ॥
(ಋ. ಸಂ. ೫-೩೯-೧)

ಎಂಬ ಋಕ್ಕಿಗೆ ಅರ್ಥವಿವರಣೆ ಮಾಡುವಾಗ ಅದ್ರಿವನ್ । ಅದ್ರಿರಾದೃಣಾತ್ಯೇತೇನ (ಹೇ ಅದ್ರಿವಃ-ವಜ್ರಿನ್) ಎಂದೂ ತ್ವಾದಾತಂ ಎಂಬ ಶಬ್ದಕ್ಕೆ ತ್ವಯಾ ನಸ್ತದ್ದಾತವ್ಯಂ ಎಂದೂ ಅರ್ಥಮಾಡಿರುವರು. ಆದುದರಿಂದ ಈ ಅದ್ರಿವನ್ ಮತ್ತು ತ್ವಾದಾತಂ ಎಂಬ ಎರಡುಶಬ್ದಗಳಿಗೂ ಯಾಸ್ಕರು ಕೊಟ್ಟಿರುವ ವಿವರಣೆಯೇ ಪರಿಗ್ರಾಹ್ಯವು.

|| ವ್ಯಾಕರಣಪ್ರಕ್ರಿಯಾ ||

**ಸುವಿವೃತಮ್** 'ವೃಞ್‌ವರಣೇ 'ಧಾತು. ಇದರ ಮುಂದೆ ಕರ್ಮಾರ್ಥದಲ್ಲಿ ಕ್ತ ಪ್ರತ್ಯಯ. ವಿ ಶಬ್ದಕ್ಕೂ ವೃತ ಶಬ್ದಕ್ಕೂ **ಕುಗತಿಪ್ರಾದಯಃ** (ಪಾ. ಸೂ. ೨-೨-೧೮) ಎಂಬುದರಿಂದ ಪ್ರಾದಿಸಮಾಸ, ವಿವೃತಮ್ ಎಂಬಲ್ಲಿ ವೃತಮ್ ಎಂಬುದು ಕೃದಂತವಾದ್ದರಿಂದ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರವು ಪ್ರಾಪ್ತವಾಗುವುದು. ಆದರೆ ಅದನ್ನು ಬಾಧಿಸಿ **ಗತಿರನಂತರಃ** (ಪಾ. ಸೂ. ೬-೨-೪೯) ಕರ್ಮಾರ್ಥಕ ಕ್ತ ಪ್ರತ್ಯಯಾಂತವು ಪರದಲ್ಲಿರುವಾಗ ಅವ್ಯವಹಿತವಾದ ಗತಿಯು ಪೂರ್ವಪದ ಪ್ರಕೃತಿ ಸ್ವರವನ್ನು ಹೊಂದುವುದು ಎಂಬುದರಿಂದ ಕರ್ಮಾರ್ಥಕ ಕ್ತ ಪ್ರತ್ಯಯಾಂತವಾದ ವೃತ ಎಂಬುದರ ಹಿಂದೆ ಇರುವ ಗತಿ ಸಂಜ್ಞಕವಾದ ವಿಗೆ ಪ್ರಕೃತಿಸ್ವರ ಆದ್ಯುದಾತ್ತವೇ ಪ್ರಾಪ್ತವಾಗುವುದು. ಇದನ್ನೂ ಬಾಧಿಸಿ **ಪರಾದಿಶ್ಛಂದಸಿ ಬಹುಲಮ್** (ಪಾ. ಸೂ. ೬-೨-೧೯೯) ಎಂಬುದರಿಂದ ಪರಪದವಾದ ವೃತ ಶಬ್ದದ ಆದಿಯಾದ ಋಕಾರವು ಉದಾತ್ತ. ತಿರುಗಿಯೂ ಸು ಶಬ್ದದೊಂದಿಗೆ ಪ್ರಾದಿ ಸಮಾಸವನ್ನು ಮಾಡಿದರೆ **ಗತಿಕಾರಕೋ....**(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರ ಪದಪ್ರಕೃತಿಸ್ವರವೇ ಬಂದು ಆ ಋಕಾರವೇ ಉದಾತ್ತವಾಗುವುದು. ಸು ಶಬ್ದದೊಂದಿಗೆ ವಿವೃತ ಶಬ್ದಕ್ಕೆ ಸಮಾಸಬಂದಾಗ ' ಗತಿಕಾರಕೋಪಪದಾತ್ಕೃತ್ ' ಎಂಬುದು ಹೇಗೆ ಬರುವುದು ? ಇಲ್ಲಿ ವಿವೃತಂ ಎಂಬುದು ಸುಗೆ ಪರದಲ್ಲಿರುವುದು. ಅದು ಕೃದಂತವಾಗುವುದಿಲ್ಲ. **ಪ್ರತ್ಯಯಗ್ರಹಣೇ ಯಸ್ಮಾತ್ಸವಿಹಿತಸ್ತದಾದೇಸ್ತದಂತಸ್ಯಗ್ರಹಣಮ್** (ಪಾರಿಭಾ ೨೩) ಪ್ರತ್ಯಯತ್ವ, ತದ್ವ್ಯಾಪ್ಯ ಅನ್ಯತರ ಧರ್ಮ ಪುರಸ್ಕಾರವಾಗಿ ಎಲ್ಲಿ ಪ್ರತ್ಯಯಕ್ಕೆ ಗ್ರಹಣವಿರುವುದೋ ಅಲ್ಲಿ ಯಾವ ಪ್ರಕೃತಿಯಿಂದ ಆ ಪ್ರತ್ಯಯವು ವಿಹಿತವಾಗಿರುವುದೋ ಆ ಪ್ರಕೃತ್ಯಾದ್ಯವಯವಕವಾದ ಆ ಪ್ರತ್ಯಯಾಂತಕ್ಕೆ ಗ್ರಹಣಬರುವುದು ಎಂದು ಪರಿಭಾಷಾರ್ಥ, ' ಗತಿಕಾರಕೋಪಪದಾತ್ಕೃತ್ ' ಎಂಬ ಸೂತ್ರದಲ್ಲಿ ಪ್ರತ್ಯಯತ್ವವ್ಯಾಪ್ಯವಾದ ಕೃತ್ವಧರ್ಮಪುರಸ್ಕಾರವಾಗಿ ಪ್ರತ್ಯಯಕ್ಕೆ ಗ್ರಹಣವಿರುವುದು. ಆದ್ದರಿಂದ ಈ ಪರಿಭಾಷೆಯಿಂದ ಕೃತ್ಪ್ರತ್ಯಯವು ಯಾವ ಪ್ರಕೃತಿಯ ಮುಂದೆ ವಿಹಿತವಾಗುವುದೋ ಆ ಪ್ರಕೃತ್ಯಾದ್ಯವಯವಕವಾದ ಆ ಕೃತ್ಪ್ರತ್ಯಯಾಂತಕ್ಕೆ ಗ್ರಹಣ ಬರುವುದು. ಇಲ್ಲಿ ಕ್ತ ಪ್ರತ್ಯಯ ವೃ ಎಂಬ ಪ್ರಕೃತಿಯ ಮುಂದೆ ವಿಹಿತವಾಗಿರುವುದು. ಆದ್ದರಿಂದ ವೃ ಎಂಬ ಪ್ರಕೃತ್ಯಾದ್ಯವಯವಕ ಕ್ತ ಎಂಬ ಕೃತ್ಪ್ರತ್ಯಯ ಚರಮಾವಯವಕವಾದ ವೃತ ಎಂಬುದು ಕೃದಂತವಾಗುವುದು. ಕೃದಂತವಾದ ವೃತ ಎಂಬುದು ಸು ಶಬ್ದದ ಮುಂದೆ ಇಲ್ಲ. ಸುಶಬ್ದದ ಮುಂದೆ ಇರುವ ವಿವೃತ ಎಂಬುದು ಕೃದಂತವಾಗುವುದಿಲ್ಲ. ಆದ್ದರಿಂದ ಗತಿಯ ಮುಂದೆ ಇರುವ ಕೃದಂತಕ್ಕೆ ವಿಧಿಸಿರುವ ಕೃದುತ್ತರಪದಪ್ರಕೃತಿಸ್ವರವು ಬರಲಾರದು ಎಂದು ಪೂರ್ವಪಕ್ಷ ಬರುವುದು. ಆದರೆ ' ಪ್ರತ್ಯಯಗ್ರಹಣೇಯಸ್ಮಾತ್ಸವಿತಸ್ತದಾದೇಸ್ತದಂತಸ್ಯ ಗ್ರಹಣಂ' ಎಂಬ ಪರಿಭಾಷೆಗೆ **ಕೃದ್ಗ್ರಹಣೇಗತಿಕಾರಕಪೂರ್ವಸ್ಯಾಪಿಗ್ರಹಣಂ** ( ಪರಿಭಾ ೨೮ ) ಎಂಬ ಪರಿಭಾಷೆಯು ಅಪವಾದವಾದುದು. ಆದಕ್ಕೆ ಕೃತ್ವತದ್ವ್ಯಾಪ್ಯಾನ್ಯತರ ಧರ್ಮಪುರಸ್ಕಾರವಾಗಿ ಎಲ್ಲಿ ಕೃತ್ತಿಗೆ ಗೃಹಣವಿದೆಯೋ ಅಲ್ಲಿ ಗತಿಪೂರ್ವಕಕ್ಕೂ ಗ್ರಹಣಬರುವುದು. ಎಂದು ಅರ್ಥ. ಗತಿಕಾರಕೋಪಪದಾತ್ಕೃತ್ ಎಂಬಲ್ಲಿ ಕೃತ್ವಧರ್ಮಪುರಸ್ಕಾರವಾಗಿ ಕೃತ್ತಿಗೆ ಗ್ರಹಣವಿರುವುದು. ಆದ್ದರಿಂದ ಗತಿಪೂರ್ವಕವೂ ಕಾರಕಪೂರ್ವಕವೂ ಕೃದಂತವೆಂದು ಭಾವಿಸಲ್ಪಡುವುದು. ಆದ್ದರಿಂದ ವಿ ಎಂಬ ಗತಿಪೂರ್ವಕವಾದ ವೃತ ಅಂದರೆ ವಿವೃತ ಎಂಬುದು ಕೃದಂತವೇ ಆಯಿತು. ಅದು ಸು ಎಂಬ ಗತಿಯ ಮುಂದೆ ಇರುವುದರಿಂದ ಕೃದುತ್ತರಪದಪ್ರಕೃತಿಸ್ವರ ಬಂದು ಋಕಾರವು ಉದಾತ್ತವಾಗುವುದು ಎಂಬುದು ಯುಕ್ತವಾಗಿಯೇ ಇರುವುದು.

ಹಾಗಾದರೆ ಕೃದ್ಗ್ರಹಣಪರಿಭಾಷೆಯಿಂದ ಹೇಗೆ ವಿವೃತಂ ಎಂಬುದು ಕೃದಂತವಾಗುವುದೋ ಹಾಗೆಯೇ ಆದೇ ಪರಿಭಾಷೆಯಿಂದಲೇ ಕ್ತಾಂತವೂ ಆಗುವುದು. ಗತಿಕಾರಕ ಎಂಬ ಸೂತ್ರದಲ್ಲಿ ಕೃತ್ವಧರ್ಮಪುರ

ಸ್ಕಾರವಾಗಿ ಕೃತ್ತಿಗೆ ಉಪಾದಾನವಿರುವುದು. ಗತಿರನಂತರಃ ಎಂಬಲ್ಲಿ ಕ್ತೇಚ (ಪಾ. ಸೂ. ೫-೨-೪೫) ಎಂಬುದು ಅನುವೃತ್ತಿಯಾಗುವುದರಿಂದ ಕೃತ್ವವ್ಯಾಪ್ಯ ಕ್ತತ್ವಧರ್ಮಪುರಸ್ಕಾರವಾಗಿ ಕೃತ್ತಿಗೆ ಉಪಾದಾನವಿರುವುದು. ಆದ್ದರಿಂದ ‘ ಗತಿರನಂತರಃ ’ ಎಂಬ ಸೂತ್ರದಲ್ಲಿ ಕೃದ್ಗ್ರಹಣಪರಿಭಾಷೆಯು ಉಪಸ್ಥಿತವಾಗುವುದರಿಂದ ಗತಿಕಾರಕ ಪೂರ್ವಕವಾದ ಕರ್ಮಾರ್ಥಕಕ್ತಾಂತ ಪರದಲ್ಲಿರುವಾಗ ಅನಂತರವಾದ ಗತಿಯು ಪ್ರಕೃತಿ ಸ್ವರವನ್ನು ಹೊಂದುವುದು ಎಂದು ಅರ್ಥವೇರ್ಪಡುವುದು. ಆದ್ದರಿಂದ ‘ಗತಿಕಾರಕೋಪಪದಾತ್ಕೃತ್’ ಎಂಬ ಕೃದುತ್ತರಪದ ಪ್ರಕೃತಿಸ್ವರವನ್ನು ಬಾಧಿಸಿ ‘ಗತಿರನಂತರಃ’ ಎಂಬುದರಿಂದ ವಿವೃತ ಎಂಬ ಕ್ತಾಂತ ಪರದಲ್ಲಿರುವಾಗ ಸು ಎಂಬ ಗತಿಗೆ ಪ್ರಕೃತಿ ಸ್ವರ ಆದ್ಯುದಾತ್ತ ಬರಲಿ ಎಂದು ಕೇಳಬಹುದು. ಆದರೆ ಇಲ್ಲಿಯೂ ಹಿಂದೆ ಹೇಳಿದಂತೆ ಪರಾದಿಶ್ಛಂದಸಿಬಹುಲಂ (ಪಾ. ಸೂ. ೬-೨-೧೧೯) ಎಂಬುದರಿಂದ ಗತಿರನಂತರಃ (ಪಾ. ಸೂ. ೬-೨-೪೯) ಎಂಬದು ಬರುವುದಿಲ್ಲ ಎಂದು ಹೇಳಲಾಗುವುದಿಲ್ಲ. ಹಾಗೆ ಹೇಳಿದಪಕ್ಷದಲ್ಲಿ ‘ಪರಾದಿಃ’ ಎಂಬುದರಿಂದ ಸ್ವರವನ್ನು ಮಾಡುವ ಪಕ್ಷದಲ್ಲಿ ಸುವಿವೃತಂ ಎಂಬಲ್ಲಿ ವಿವೃತಂ ಎಂಬುದು ಪರಪದವಾಗುವುದು. ಆದ್ದರಿಂದ ಅದರ ಆದಿಯಾದ ಇಕಾರವು ಉದಾತ್ತವಾಗಬೇಕಾಗುವುದು. ವಿವೃತಂ ಎಂಬ ಸಮಾಸದಲ್ಲಿ ಯದ್ಯಪಿ ಋಕಾರವು ಪದಾದಿಯಾಗುವುದು. ಆದರೂ ಸುವಿವೃತಂ ಎಂಬ ಸಮಾಸವು ಸತಿಶಿಷ್ಟವಾಗುವಕಾರಣ ಬಲೀಯಸ್ಸಾಗುವುದರಿಂದ ಆಸಮಾಸದ ಉತ್ತರಪದಾದಿಯಾದ ಇಕಾರಕ್ಕೆ ಉದಾತ್ತ ಸ್ವರ ಬರಬೇಕಾಗುವುದು ಎಂದು ಪೂರ್ವಪಕ್ಷ ಬರುವುದು. ಇದಕ್ಕೆ ಹೀಗೆ ಸಮಾಧಾನ ಹೇಳಬಹುದು. ಗತಿರನಂತರಃ (ಪಾ. ಸೂ. ೬-೨-೪೯) ಎಂಬ ಸೂತ್ರದಲ್ಲಿ ಅನಂತರ ಗ್ರಹಣವಿರುವ ಸಾಮರ್ಥ್ಯದಿಂದ ಕೃದ್ಗ್ರಹಣಪರಿಭಾಷೆಯು ಅಲ್ಲಿ ಉಪಸ್ಥಿತವಾಗುವುದಿಲ್ಲ. ಕೃದ್ಗ್ರಹಣಪರಿಭಾಷೆಯು ಉಪಸ್ಥಿತವಾದರೆ ವ್ಯವಹಿತವಾದ ಗತಿಗೂ ಪ್ರಕೃತಿಸ್ವರವು ಬರಬೇಕಾಗುವುದರಿಂದ ಅನಂತರ ಗ್ರಹಣವು ವ್ಯರ್ಥವೇ ಆಗುವುದು. ಇದೇ ಅಭಿಪ್ರಾಯದಿಂದಲೇ ಅನಂತರಗ್ರಹಣಕ್ಕೆ ಪ್ರಯೋಜನವನ್ನು ತೋರುವಾಗ, ಅಭ್ಯುದ್ಧೃತಮ್ ಎಂದು ಪ್ರತ್ಯುದಾಹರಣೆ ಕೊಟ್ಟಿರುವರು. ಇಲ್ಲಿ ವ್ಯವಹಿತವಾದ ಅಭಿ ಎಂಬ ಗತಿಗೆ ಪ್ರಕೃತಿಸ್ವರ ಬರಬಾರದು ಎಂದು ಅಭಿಪ್ರಾಯ. ಇಲ್ಲಿ ಕೃದ್ಗ್ರಹಣ ಪರಿಭಾಷೆಯು ಉಪಸ್ಥಿತವಾದರೆ ಉದ್ಧೃತ ಎಂಬುದು ಕ್ತಾಂತವಾಗುವುದರಿಂದ ಅಭಿ ಎಂಬುದು ಅನಂತರವಾದ ಗತಿಯೇ ಆಗಿಬಿಡುವುದು. ಆದ್ದರಿಂದ ಅಭಿಗೆ ಪ್ರಕೃತಿ ಸ್ವರವೇ ಬರಬೇಕಾಗುವುದು. ಏವಂಚ ಅನಂತರಗ್ರಹಣವು ವ್ಯರ್ಥವಾಗುವುದು. ಕೃದ್ಗ್ರಹಣಪರಿಭಾಷೆಯು ಉಪಸ್ಥಿತವಾಗದೇ ಹೋದರೆ ಪ್ರತ್ಯಯಗ್ರಹಣ ಪರಿಭಾಷೆಯಿಂದ ಹೃತ ಎಂಬುದು ಕ್ತಾಂತವಾಗುವುವೇ ವಿನಾ ಉದ್ಧೃತ ಎಂಬುದು ಕ್ತಾಂತವಾಗುವುದಿಲ್ಲ. ಆದ್ದರಿಂದ ಉತ್ ಎಂಬ ಅನಂತರ ಗತಿಗೆ ಪ್ರಕೃತಿಸ್ವರ ಬರುವುದು. ವ್ಯವಹಿತವಾದ ಅಭಿ ಎಂಬುದಕ್ಕೆ ಅನಂತರಗ್ರಹಣವಿರುವುದರಿಂದ ಪ್ರಕೃತಿಸ್ವರ ಬರುವುದಿಲ್ಲ. ಆದ್ದರಿಂದ ಅನಂತರ ಗ್ರಹಣವು ಸಾರ್ಥಕವಾಗುವುದು. ಏವಂಚ ಸುವಿವೃತಂ ಎಂಬಲ್ಲಿ ವಿವೃತಂ ಎಂಬುದು ಕ್ತಾಂತವಾಗುವುದಿಲ್ಲವಾದಕಾರಣ ಗತಿರನಂತರ ಎಂಬುದರಿಂದ ಸುಗೆ ಪ್ರಕೃತಿಸ್ವರವು ಬರುವುದಿಲ್ಲ, ‘ಗತಿಕಾರಕೋ’ ಎಂಬಲ್ಲಿ ಕೃದ್ಗ್ರಹಣಪರಿಭಾಷೆ ಬರುವುದರಿಂದ ವಿವೃತ ಎಂಬುದು ಕೃದಂತವಾಗುವುದರಿಂದ ಸು ಎಂಬುದರ ಮುಂದೆ ಇರುವ ವಿವೃತಂ ಎಂಬುದಕ್ಕೆ ಕೃದುತ್ತರ ಪದಪ್ರಕೃತಿಸ್ವರ ಬಂದು ಋಕಾರವೇ ಉದಾತ್ತವಾಗಿ ನಿಲ್ಲುವುದು. ಇಲ್ಲಿಗೆ ಈ ಮಹಾವಾಕ್ಯಾರ್ಥವನ್ನು ಸಿಲ್ಲಿಸುವ.

ಸುನಿರಜಮ್—ಆಯಾಸವಿಲ್ಲದೆ ನಿಶ್ಶೇಷವಾಗಿ ಹೊಂದಲು ಯೋಗ್ಯವಾದುದು ಎಂದರ್ಥ. ಅಜಗತಿಕ್ಷೇಪಣಯೋಃ ಧಾತು. ಇದರ ಹಿಂದೆ ಸು, ನಿಸ್ ಎಂಬ ಉಪಸರ್ಗಗಳನ್ನು ಪ್ರಯೋಗಿಸುವುದು. ಈಷದ್ದುಸ್ಸುಷುಕೃಚ್ಛ್ರಾಕೃಚ್ಛ್ರಾರ್ಥೇಷುಖಲ್ ( ಪಾ. ಸೂ. ೩-೩-೧೨೬ ) ಕೃಚ್ಛ್ರಾರ್ಥಕವಾದ ದುರ್,

ಎಂಬುದು ಉಪಪದವಾಗಿದ್ದರೂ, ಅಕೃಚ್ಛ್ರಾರ್ಥಕವಾದ ಈಷತ್, ಸು ಎಂಬಿವು ಉಪಪದವಾಗಿರುವಾಗಲೂ ಧಾತುವಿನ ಮುಂದೆ ಖಲ್ ಪ್ರತ್ಯಯ ಬರುವುದು ಎಂಬುದರಿಂದ ಖಲ್ ಪ್ರತ್ಯಯವು ಅಜಧಾತುವಿನ ಮುಂದೆ ಬರುವುದು. ಖಕಾರ ಲಕಾರಗಳಿಗೆ ಇತ್ಸಂಜ್ಞೆಯೂ ಲೋಪವೂ ಸಹ ಬರುವುದು. ಸುನಿಸ್+ಅಜ್+ಅ ಎಂದಾಗುವುದು. ಇಲ್ಲಿ ಸು ಎಂಬುದಕ್ಕೆ ನಿಸ್ ಎಂಬುದರಿಂದ ವ್ಯವಧಾನವಿರುವುದರಿಂದ ಖಲ್ ಪ್ರತ್ಯಯ ಬರುವುದಿಲ್ಲವೆಂದು ಶಂಕಿಸಕೂಡದು. ಸು ಎಂಬುದು ಉಪಪದವಾಗಿದ್ದರೆ ಖಲ್ ಪ್ರತ್ಯಯ ಬರುವುದು. ಇಷ್ಟೇ ವಿನಾ ಸುಶಬ್ದಾನಂತರ್ಯವು ಅಪೇಕ್ಷಿತವಾಗಿಲ್ಲವು. ಸು ಮೊದಲಾದುವುಗಳಿಗಿಂತಲೂ ಪರದಲ್ಲಿರುವ ಧಾತುಗಳ ಮುಂದೆ ಖಲ್ ಬರುವುದು ಎಂದು ಅರ್ಥವು ಸೂತ್ರಕ್ಕೆ ಏರ್ಪಟ್ಟಿದ್ದರೆ ನಿಸ್ಸಿನಿಂದ ವ್ಯವಧಾನವಿರುವುದರಿಂದ ಧಾತುವು ಸು ಎಂಬುದಕ್ಕಿಂತಲೂ ಪರವಾಗುವುದಿಲ್ಲವಾದ್ದರಿಂದ ಖಲ್ ಪ್ರತ್ಯಯ ಬರುವುದಿಲ್ಲ ಎಂದು ಹೇಳಬಹುದಾಗಿತ್ತು. ಆದರೆ ಆರೀತಿ ಸೂತ್ರಕ್ಕೆ ಅರ್ಥವು ಏರ್ಪಡುವುದಿಲ್ಲ. ಆದ್ದರಿಂದ ವ್ಯವಧಾನಶಂಕೆಗೆ ಅವಕಾಶವಿಲ್ಲ. ಆದುದರಿಂದಲೇ ಸುಪರಿಹರಂ, ದುಷ್ಪರಿಹರಮ್ ಇತ್ಯಾದಿಯಾದ ಖಲ್ ಪ್ರತ್ಯಯಾಂತವಾದ ಪ್ರಯೋಗಗಳು ಕಂಡುಬರುವುವು. ಪೂರ್ವದಂತೆ ಇಲ್ಲಿಯೂ ಎರಡಾವರ್ತಿ ಗತಿ ಸಮಾಸ. ಖಲ್ ಪ್ರತ್ಯಯವು ಲಿತ್ತಾದ್ದರಿಂದ ' ಲಿತಿ ' ಎಂಬುದರಿಂದ ಪ್ರತ್ಯಯದ ಹಿಂದೆ ಇರುವ ಧಾತು ಸಂಬಂಧಿಯಾದ ಅಕಾರವು ಉದಾತ್ತ. ನಿಸ್ ಎಂಬ ಉಪಸರ್ಗದೊಂದಿಗೆ ಗತಿಸಮಾಸ ಮಾಡಿದರೆ ಕೃದುತ್ತರಪದಪ್ರಕೃತಿಸ್ವರದಿಂದ ಧಾತ್ವಕಾರದ ಉದಾತ್ತಸ್ವರವೇ ನಿಲ್ಲುವುದು. ಪುನಃ ಸು ಎಂಬುದರೊಡನೆ ಸಮಾಸ ಮಾಡಿದರೂ, ಕೃದ್ಗ್ರಹಣೇಗತಿಕಾರಕಪೂರ್ವಸ್ಯಾಪಿ ಗ್ರಹಣಮ್ (ಪರಿಭಾ ೨೮) ಎಂಬುದರಿಂದ ನಿರಜ ಎಂಬುದು ಕೃದಂತವಾಗುವುದರಿಂದ ಕೃದುತ್ತರಪದ ಪ್ರಕೃತಿಸ್ವರವೇ ಬಂದು ಆ ಉದಾತ್ತವೇ ನಿಲ್ಲುವುದು. ಶೇಷ ನಿಘಾತದಿಂದ ಮಿಕ್ಕವು ಅನುದಾತ್ತಗಳು. ಉದಾತ್ತವಾದ ಧಾತ್ವಕಾರದ ಮುಂದೆ ಇರುವ ಪ್ರತ್ಯಯ ಸಂಬಂಧಿಯಾದ ಅನುದಾತ್ತ ಅಕಾರವು ಉದಾತ್ತಾನುದಾತ್ತಸ್ಯಸ್ವರಿತಃ ಎಂಬುದರಿಂದ ಸ್ವರಿತ.

ತ್ವಾದಾತಂ—ತ್ವಯಾ ಶೋಧನೇನ ವಿಶದೀಕೃತಮ್—ನಿನ್ನಿಂದ ಶೋಧನ ಮಾಡುವಿಕೆಯಿಂದ ವಿಶದೀಕೃತವಾದುದು. ದೈಪ್ ಶೋಧನೇ ಧಾತು. ಆದೇಚ ಉಪದೇಶೇಽಶಿತಿ (ಪಾ. ಸೂ. ೬-೧-೪೫) ಶಿತ್ತಾದ ಪ್ರತ್ಯಯ ಪರದಲ್ಲಿಲ್ಲದೇ ಇದ್ದರೆ ಉಪದೇಶದಲ್ಲಿ ಏಜಂತವಾದ ಧಾತುವಿಗೆ ಆತ್ವ ಬರುವುದು ಎಂಬುದರಿಂದ ದೈ ಎಂಬುದರ ಐಕಾರಕ್ಕೆ ಆತ್ವ ಬರುವುದು. ಆದರೆ ಧಾತುವು ದೈಪ್ ಎಂದು ಪಕಾರಾಂತವಾಗಿ ಉಪದೇಶಿಸಲ್ಪಟ್ಟಿರುವುದು. ದೈ ಎಂದು ಏಜಂತವಾಗಿ ಉಪದೇಶವಾಗಿಲ್ಲ. ಏವಂಚ ಉಪದೇಶದಲ್ಲಿ ಏಜಂತವಲ್ಲದೇ ಇರುವುದರಿಂದ ಆದೇಚ ಎಂಬುದರಿಂದ ಆತ್ವವು ಹೇಗೆ ಬರುವುದು ಎಂದು ಶಂಕೆ ತೋರುವುದು. ಆದರೂ ನಾನುಬಂಧಕೃತಮನೇಜಂತತ್ವಂ ( ಪರಿಭಾ ೬ ) ಅನುಬಂಧ ( ಇತ್ಸಂಜ್ಞಕವಾದ ವರ್ಣ ) ಪ್ರಯುಕ್ತವಾದ ಏಜ್ವ್ಯಕ್ತಿಚರಮಾವಯವಕತ್ವಾಭಾವವನ್ನು ಆಶ್ರಯಿಸಲಾಗುವುದಿಲ್ಲ ಎಂದು ಪರಿಭಾಷಾರ್ಥ. ಅನುಬಂಧೇನ ಕೃತಮ್—ಅನುಬಂಧಕೃತಂ ಎಂದು ತೃತೀಯಾ ತತ್ಪುರುಷ, ಏಚ್ಚಾಸಾವಂತಶ್ಚ ಏಜಂತಃ-ತಸ್ಯಾಭಾವಃ ಅನೇಜಂತಃ-ತಸ್ಯಭಾವ ಅನೇಜಂತತ್ವಂ. ಹೀಗೆ ತತ್ಪುರುಷ ಸಮಾಸಗರ್ಭ ಅವ್ಯಯೀಭಾವ ಸಮಾಸವು ಇಲ್ಲಿ ವಿವಕ್ಷಿತವು. ಈ ಪರಿಭಾಷೆಯಿಂದ ಅನುಬಂಧಗಳಿಗೆ ಅವಿದ್ಯಮಾನವದ್ಭಾವ ಬೋಧನ ಮೂಲಕವೋ ಏಚ್ಚಿನ ಚರಮಾವಯವತ್ವಾ (ಕೊನೆಯವರ್ಣವಾಗುವಿಕೆ)ಲೋಪ ಮೂಲಕವೋ ಉಪದಿಶ್ಯಮಾನವಾಗಿರುವ ದೈಪ್‌ನಲ್ಲಿಏಜಂತತ್ವಬುದ್ಧಿ ಪ್ರಯೋಜಕವಾದ ಏಜ್ ಗತ ಚರಮಾವಯವತ್ವಕ್ಕೆ ಪ್ರತಿಬಂಧಕವಾಗಿರುವ ಪಕಾರಾನುಬಂಧದಿಂದ ವಿಶೇಷಣಾಭಾವ ಪ್ರಯುಕ್ತವಿಶಿಷ್ಟಾಭಾವವಿಧಿಯಿಂದ ಪ್ರಸಕ್ತವಾದ ಏಜಂತತ್ವಾಭಾವಕ್ಕೆ ಅಭಾವು ಬೋಧಿತವಾಗುವುದು. ಆದ್ದರಿಂದ

ದೈಪ್ ಎಂಬುದು ಏಜಂತವಾಗುವುದರಿಂದ ಆತ್ವ ಬರುವುದು- ನಂತರ ನಿಷ್ಠಾ (ಪಾ. ಸೂ. ೩-೨.೧೦೨) ಎಂಬುದರಿಂದ ಕರ್ಮಣಿಕ್ತ ಪ್ರತ್ಯಯ ಬರುವುದು. ದಾ+ತ ಎಂದಿರುವುದು. ಈಗ ದಾ ಎಂಬುದು ದಾರೂಪವಾಗಿದ್ದರೂ ದಾಪ್ ಸಂಬಂಧಿಯಾದ್ದರಿಂದ **ದಾಧಾಘ್ವದಾಪ್** (ಪಾ. ಸೂ. ೧-೧-೨೦) ದಾಪ್ ಲವನೇ ದೈಪ್ ಶೋಧನೇ ಈ ಎರಡು ಧಾತುಗಳನ್ನು ಬಿಟ್ಟು ದಾ ರೂಪವಾಗಿಯೂ ಧಾ ರೂಪವಾಗಿಯೂ ಇರುವ ಧಾತುಗಳಿಗೆ ಘು ಸಂಜ್ಞೆ ಬರುವುದು ಎಂದು ಹೇಳಿರುವುದರಿಂದ ಇಲ್ಲಿ ಘು ಸಂಜ್ಞೆ ಬರುವುದಿಲ್ಲ. ಅದಾಪ್ ಎಂಬ ನಿಷೇಧದಿಂದ ದಾಪ್ ಲವನೇ ಎಂಬ ಪ್ರತಿಪದೋಕ್ತಕ್ಕೆ ನಿಷೇಧವೇ ವಿನಾ ದೈಪ್ ಶೋಧನೇ ಎಂಬುದಕ್ಕೆ ನಿಷೇಧ ಬರುವುದಿಲ್ಲ. ದೈಪ್ ಧಾತುವಿನಲ್ಲಿ ದಾಪ್ ರೂಪತ್ವ ಲಾಕ್ಷಣಿಕವಾಗುವುದು. ಲಾಕ್ಷಣಿಕ ಲಕ್ಷಣದಿಂದ ಉಂಟಾದ ಲಕ್ಷಣ ಎಂದರೆ ಶಾಸ್ತ್ರ. ದೈಪಿನಲ್ಲಿ ' ಆದೇಶ ಉಪದೇಶೇಽಶಿತಿ' ಎಂಬ ಶಾಸ್ತ್ರದಿಂದ ಆತ್ವ ಬಂದು ದಾಪ್ ರೂಪ ಏರ್ಪಡುವುದರಿಂದ ಇದು ಲಾಕ್ಷಣಿಕವು. ಲಕ್ಷಣಪ್ರತಿಪದೋಕ್ತಯೋಃಪ್ರತಿಪದೋಕ್ತಸ್ಯಗ್ರಹಣಮ್ ಎಂಬ ಪರಿಭಾಷೆಯಿಂದ ಪ್ರತಿಪದೋಕ್ತವಾದ ದಾಪ್‌ಗೆ ಪರ್ಯುದಾಸ ಬರುವುದೇ ವಿನಾ ದೈಪ್‌ನಿಂದ ಆಗಿ ಲಾಕ್ಷಣಿಕವಾದ ದಾಪ್‌ಗೆ ಪರ್ಯುದಾಸ ಬರಲಾರದು ಎಂದು ಶಂಕೆಯುಂಟಾಗಬಹುದು. ಆದರೆ ಅದಕ್ಕೆ ಅವಕಾಶವಿಲ್ಲ. **ಗಾಮಾದಾಗ್ರಹಣೇಷ್ವವಿಶೇಷಃ** ( ಪರಿ. ೧೦೬ ) ಗಾ, ಮಾ-ದಾ ಇವುಗಳನ್ನು ಗ್ರಹಿಸುವಾಗ ಲಾಕ್ಷಣಿಕ ಪ್ರತಿಪದೋಕ್ತ ಎಂಬ ವಿಶೇಷವನ್ನು ಆದರಿಸದೇ ಎಲ್ಲಕ್ಕೂ ಗ್ರಹಣಬರುವುದು ಎಂದು ಇದರ ಅರ್ಥ. ಇದು ಪ್ರತಿಪದೋಕ್ತ ಪರಿಭಾಷೆಗೆ ಅಪವಾದವಾದುದು. ಇದರಿಂದ ಲಾಕ್ಷಣಿಕವಾದ ಅಂದರೆ ದೈಪ ದಾತುವಿನಿಂದ ಆದ ದಾ ರೂಪಕ್ಕೂ ಅದಾ ಪ್ ಎಂಬ ಪರ್ಯುದಾಸ ಬಂದೇ ಬರುವುದು. ಅದ್ದರಿಂದ ಇದಕ್ಕೆ ಘು ಎಂಬ ಸಂಜ್ಞೆ ಇಲ್ಲ. ಘು ಸಂಜ್ಞೆ ಇಲ್ಲದೇ ಇರುವುದರಿಂದ **ದೋದದ್ಘೋಃ** ( ಪಾ. ಸೂ. ೭-೪-೪೬) ತಕಾರಾದಿಯಾದ ಕಿತ್ ಪ್ರತ್ಯಯ ಪರದಲ್ಲಿರುವಾಗ ಘು ಸಂಜ್ಞಕವಾದ ದಾ ಎಂಬುದಕ್ಕೆ ದಥ್ ಆದೇಶ ಬರುವುದು ಎಂಬುದರಿಂದ ದಥ್ ಆದೇಶ ಬರುವುದಿಲ್ಲ. ಯದ್ಯಪಿ ದದ್ಘೋಃ, ಎಂಬಲ್ಲಿ ದತ್, ದದ್, ದಥ್ ದಥ್ ಎಂದು ನಾಲ್ಕು ಪದವಿಭಾಗ ಮಾಡಬಹುದು. ಆದರೂ ಮೊದಲಿನ ಮೂರರಲ್ಲಿ ದೋಷವಿರುವುದರಿಂದ ದಥ್ ಎಂದು ಪದ ವಿಭಾಗವೇ ಯುಕ್ತವು. ತಾಂತೇ ದೀರ್ಘತ್ವಾಪ್ಯೋರ್ದೋಷೋ ದೋಷೋದಾಂತೇ ನಿಷ್ಠಾನತ್ವಂ । ಧಾಂತೇದೋಷೋಧತ್ವಾಪ್ತ್ಯಾಃಸ್ಯಾತ್ ನಿರ್ದೋಷತ್ವಾತ್ ಧಾಂತೋಗ್ರಾಹ್ಯಃ ॥ ಎಂದು ಹೇಳಿರುವುದರಿಂದ ದಥ್ ಎಂಬ ಛೇದವನ್ನು ಪುರಸ್ಕರಿಸಿ ಸೂತ್ರಾರ್ಥ ವರ್ಣನೆ ಮಾಡಿರುವೆವು. ಯುಷ್ಮದ್ ಶಬ್ದದ ಮುಂದೆ ತೃತೀಯಾ ವಿಭಕ್ತಿ, ಏಕವಚನ ಟಾ ಪ್ರತ್ಯಯವಿನ್ನಿಟ್ಟರೆ ಯುಷ್ಮದ್+ಟಾ **ಸುಪಾಂಸುಲುಕ್** ( ಪಾ. ಸೂ. ೭-೧-೩೯ ) ಎಂಬುದರಿಂದ ಟಾಗೆ ಡಾ ಆದೇಶ ಯುಷ್ಮದ್+ಆ. **ತ್ವಮಾವೇಕವಚನೇ** (ಪಾ. ಸೂ. ೭-೨-೯೭) ವಿಭಕ್ತಿ ಪರದಲ್ಲಿರುವಾಗ ಏಕತ್ವ ವಿಶಿಷ್ಟಾರ್ಥ ಪ್ರತಿಪಾದಕಗಳಾದ ಯುಷ್ಮದ್ ಅಸ್ಮದ್ ಶಬ್ದಗಳ ಮಪರ್ಯಂತಕ್ಕೆ ಕ್ರಮವಾಗಿತ್ವ, ಮ ಎಂಬ ಆದೇಶಗಳು ಬರುವುವು ಎಂಬುದರಿಂದ ತ್ವ ಆದೇಶ ಬಂದರೆ, ತ್ವ+ಅದ್+ಆ. **ಅತೋಗುಣೇ** (ಪಾ, ಸೂ. ೬-೧-೯೭) ಎಂಬುದರಿಂದ ಪರರೂಪ, ತ್ವದ್+ಆ. ಯಚಿಭಂ ಎಂಬುದರಿಂದ ಭ ಸಂಜ್ಞೆ ಬಂದರೆ **ಟೇಃ** (ಪಾ.ಸೂ. ೬-೪-೧೪೩) ಎಂಬುದರಿಂದ ಅದ್ ಎಂಬ ಟಿಗೆ ಲೋಪ. ತ್ವಾ ದಾತ ಎಂದಾಗುವುದು. **ಯುಷ್ಯೇದಿಭ್ಯಾಂ ಮದಿಕ್** ( ಉ. ಸೂ. ೧-೧೩೭ ) ಎಂಬುದರಿಂದ ಯುಷ್ ಧಾತುವಿನ ಮುಂದೆ ಮದಿಕ್ ಪ್ರತ್ಯ ಬಂದು ಯುಷ್ಮದ್ ಎಂದಾಗುವುದು. ಅವ್ಯುತ್ಪತ್ತಿಪಕ್ಷದಲ್ಲಿ ಪ್ರತ್ಯಯಸ್ವರದಿಂದ ಅದ್ ಎಂಬಲ್ಲಿರುವ ಅಕಾರ ಉದಾತ್ತ. ಅವ್ಯುತ್ಪತ್ತಿಪಕ್ಷದಲ್ಲಿ ಪ್ರಾತಿಪದಿಕ ಸ್ವರದಿಂದ ಉದಾತ್ತ. ಡಾದೇಶ ಸಂಬಂಧಿಯಾದ ಅನುದಾತ್ತ ಆಕಾರ ಪರದಲ್ಲಿರುವಾಗ ಟಿಲೋಪ ಬಂದು ಅದ್‌ನ ಉದಾತ್ತ ಅಕಾರಕ್ಕೆ ಲೋಪ ಬಂದಿರುವುದು. ಆದ್ದರಿಂದ **ಅನುದಾತ್ತಸ್ಯಚಯತ್ರೋದಾತ್ತಲೋಪಃ** ( ಪಾ. ಸೂ. ೬-೧-೧೬೧ ) ಎಂಬುದರಿಂದ ಆಕಾರ ಉದಾತ್ತ.

**ಕರ್ತೃಕರಣೇಕೃತಾಬಹುಲಮ್** (ಪಾ. ಸೂ. ೨-೧-೩೨) ಕರ್ತೃಕರಣಾನ್ಯತರಾರ್ಥ ಪ್ರತಿಪಾದಕ ತೃತೀಯಾಂತ ಸುಬಂತವು ಕೃದಂತದೊಂದಿಗೆ ಬಹುಲವಾಗಿ ಸಮಾಸವನ್ನು ಹೊಂದುವುದು ಎಂಬುದರಿಂದ ತ್ವಾ ಎಂಬ ತೃತೀಯಾಂತ, ದಾತ ಎಂಬ ಕೃದಂತಗಳಿಗೆ ಸಮಾಸ ಬರುವುದು. **ಸುಪೋಧಾತುಪ್ರಾತಿಪದಿಕಯೋಃ** (ಪಾ. ಸೂ. ೨-೪-೭೧) ಎಂಬುದರಿಂದ ತೃತೀಯಾ ವಿಭಕ್ತಿಯಾದ ತ್ವಾ ಎಂಬುದರ ಆಕಾರಕ್ಕೆ ಲೋಪ ಪ್ರಾಪ್ತವಾಗುವುದು, **ತತ್ಪುರುಷೇಕೃತಿಬಹುಲಂ** (ಪಾ. ಸೂ ೬-೩-೧೪) ಕೃದಂತ ಉತ್ತರಪದವು ಪರದಲ್ಲಿದ್ದರೆ ತತ್ಪುರುಷ ಸಮಾಸದಲ್ಲಿ ಸಪ್ತಮಿಗೆ ಬಹುಲವಾಗಿ ಅಲುಕ್ ಬರುವುದು ಎಂಬುದರಿಂದ ಲುಕ್ ಬರುವುದಿಲ್ಲ. ಕೃದುತ್ತರ ಪದಪ್ರಕೃತಿಸ್ವರವು ಪ್ರಾಪ್ತವಾದರೆ ಅದನ್ನು ಬಾಧಿಸಿ **ತೃತೀಯಾಕರ್ಮಣಿ** (ಪಾ. ಸೂ. ೬-೨-೪೮) ಕರ್ಮಣಿಕ್ತ ಪ್ರತ್ಯಯಾಂತವು ಪರದಲ್ಲಿದ್ದರೆ ತೃತೀಯಾಂತವು ಪ್ರಕೃತಿಸ್ವರವನ್ನು ಹೊಂದುವುದು ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುವುದು.

**ಯಶಃ**—ಅಶೂ ವ್ಯಾಪ್ತೌ ಧಾತು. **ಅಶೇಯುಟ್ ಚ** (ಪಾ. ಸೂ. ४-೬೩೦) ಅಶ್ ಧಾತುವಿನ ಮುಂದೆ ಅಸುನ್ ಪ್ರತ್ಯಯ ಬರುವುದು. ಧಾತುವಿಗೆ ಯುಟ್ ಆಗಮ ಬರುವುದು. ಎಂಬುದರಿಂದ ಅಶ್ ಧಾತುವಿನ ಮುಂದೆ ಅಸುನ್ ಪ್ರತ್ಯಯವೂ ಧಾತುವಿಗೆ ಯುಡಾಗಮವೂ ಬಂದರೆ ಯಶಸ್ ಎಂದಾಗುವುದು. ಇದರ ಮುಂದೆ ಬರುವ ಪ್ರಥಮಾ ವಿಭಕ್ತಿ ಏಕವಚನ ಸು ಪ್ರತ್ಯಯಕ್ಕೆ ಹಲ್‌ಙ್ಯಾಭ್ಯಃ ( ಪಾ. ಸೂ. ೬-೧-೬೮ ) ಎಂಬುದರಿಂದ ಲೋಪ. ಯಶಸ್ ಎಂಬದಕ್ಕೆ ರುತ್ವ ವಿಸರ್ಗಗಳು ಬಂದರೆ ಯಶಃ ಎಂದಾಗುವುದು. ಪ್ರತ್ಯಯವು ನಿತ್ತಾದ್ದರಿಂದ ನಿತ್ಸ್ವರ. ಅದ್ಯುದಾತ್ತ ಬರುವುದು.

**ಗವಾಮ್**—ಪ್ರಾತಿಪದಿಕಸ್ವರ ಬರುವುದು. **ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಪ್ರಾಪ್ತವಾದರೆ **ನಗೋಶ್ವನ್‌ಸಾವವರ್ಣರಾಡಙ್‌ಕ್ರುಙ್‌ಕೃದ್ಭ್ಯಃ** (ಪಾ. ಸೂ. ೧-೧೮೨) ಎಂಬುದರಿಂದ ಅದಕ್ಕೆ ನಿಷೇಧ ಬರುವುದು **ಅನುದಾತ್ತೌಸುಪ್ಪಿತೌ** ಎಂಬುದರಿಂದ ವಿಭಕ್ತಿಯು ಅನುದಾತ್ತವೇ ಆಗುವುದು.

**ವೃಧಿ**—ವೃಞ್ ವರಣೇ, ಧಾತು- ಇದರ ಮುಂದೆ ಲೋಟ್ ಮಧ್ಯಮಪುರುಷ ಏಕವಚನ ಸಿಪ್ ಅದಕ್ಕೆ ಸೇರ್ಹ್ಯಪಿಚ್ಚ ಎಂಬುದರಿಂದ ಹಿ ಆದೇಶ. **ಸ್ವಾದಿಭ್ಯಃಶ್ನುಃ** (ಪಾ. ಸೂ. ೩-೧-೭೩) ಎಂಬುದರಿಂದ ಶ್ನು ವಿಕರಣ ಪ್ರತ್ಯಯ. ಅದಕ್ಕೆ **ಬಹುಲಂ ಛಂದಸಿ** ( ಪಾ. ಸೂ. ೨-೪-೭೩) ಶ್ನು ಎಂಬುದಕ್ಕೂ ಲುಕ್ ಬರುವುದು. **ಶುಶೃಣು ಪೃಕೃವೃಭ್ಯಶ್ಛಂದಸಿ** (ಪಾ- ಸೂ. ೬-४ ೧೦೨) ಈ ಧಾತುಗಳ ಮುಂದೆ ಇರುವ ಹಿಗೆ ಧಿ ಆದೇಶ ಬರುವುದು ಎಂಬುದರಿಂದ ಧಿ ಆದೇಶ ವೃಧಿ. ಹಿಯು ಅಪಿತ್ತಾದರಿಂದ ಙಿತ್ತಾಗುವುದು, ಆದ್ದರಿಂದ **ಕ್ಙಿತಿಚ** (ಪಾ. ಸೂ. ೧-೧-೫) ಎಂಬುದರಿಂದ ನಿಷೇಧ ಬರುವಕಾರಣ ಗುಣಬರುವುದಿಲ್ಲ. **ತಿಙ್ಙತಿಙಃ** ಎಂಬುದರಿಂದ ಅನುದಾತ್ತ ಬರುವುದು

**ಕೃಣುಷ್ವ**— ಕೃದಿಹಿಂಸಾಕರಣಯೋಶ್ಚ, ಧಾತು, ಧಾತುವು ಇದಿತ್ತು. ಆದ್ದರಿಂದ **ಇದಿತೋನುಮ್‌ಧಾತೋಃ**(ಪಾ.ಸೂ. ೭-೧-೫೮) ಎಂಬುದರಿಂದ ನುಮ್ ಆಗಮ. ನುಮ್ ಮಿತ್ತಾದ್ದರಿಂದ **ಮಿದಚೋಂತ್ಯಾತ್ಪರಃ** (ಪಾ. ಸೂ. ೧-೧-४೭) ಅಂತ್ಯದ ಸ್ವರದ ಮುಂದೆ ಬರುವುದು. ವ್ಯತ್ಯಯದಿಂದ ಆತ್ಮನೇ ಪದ. ಧಾತುವಿನ ಮುಂದೆ ಲೋಟ್. ಅದಕ್ಕೆ ಆತ್ಮನೇ ಪದ ಮಧ್ಯಮಪುರುಷ ಏಕವಚನ ಸಂಜ್ಞಕ ಥಾಸ್ **ಥಾಸಸ್ಸೇ** (ಪಾ.ಸೂ.

೩-೪-೮೦) ಎಂಬುದರಿಂದ ಥಾಸ್‌ಗೆ ಸೇ ಆದೇಶ ಕೃನ್ವ್-ಸೇ **ಸವಾಭ್ಯಾಂ ವಾಮೌ** (ಪಾ. ಸೂ. ೩-೪-೯೧) ಎಂದು ಏಕಾರಕ್ಕೆ ವಕಾರಾದೇಶ. ಕೃನ್ವ್+ಸ್ವ. **ಕರ್ತರಿ ಶಪ್** ( ಪಾ. ಸೂ. ೩-೧-೬೮ ) ಎಂಬುವರಿಂದ ಶಪ್ ವಿಕರಣ ಪ್ರಾಪ್ತವಾದರೆ ಅದನ್ನು ಬಾಧಿಸಿ ಧಿನ್ವಿಕೃಣ್ವ್ಯೋರಚ ( ಪಾ. ಸೂ. ೩-೧-೮೦ ) ಧಿವಿ, ಕೃವಿ, ಧಾತುಗಳ ಕೊನೆಯ ವರ್ಣಕ್ಕೆ ಅಕಾರಾದೇಶವೂ ಶಪ್ ವಿಷಯದಲ್ಲಿ ಇವುಗಳ ಮುಂದೆ ಉ ಪ್ರತ್ಯಯವೂ ಬರುವುದು ಎಂಬುದರಿಂದ, ಉ ವಿಕರಣ ಪ್ರತ್ಯಯವೂ, ವಕಾರಕ್ಕೆ ಅಕಾರವೂ ಬರುವುದು. ಕೃನ್ ಅ+ಉ-ಸ್ವ ಎಂದಾಗುವುದು ಈ ಎರಡು ಧಾತುಗಳೂ ಭ್ವಾದಿ (೧ನೇ ಗಣ)ಯಲ್ಲಿರುವುವು. ಆದರೆ ವೋಪದೇವರು ಈ ಎರಡೂ ತನಾದಿ ಧಾತುಗಳು ಎಂದು ಸ್ವೀಕರಿಸುವರು ಅವರ ಮತದಲ್ಲಿ ಧಿನ್ವಿಕೃಣ್ವ್ಯೋರಚ ಎಂಬ ಸೂತ್ರದಲ್ಲಿ ಚ ಎಂಬುದು ಅನವಶ್ಯಕ- ಅಕಾರಾದೇಶವನ್ನು ಮಾತ್ರ ವಿಧಿಸಿದರೆ ಸಾಕು. **ಅತೋಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಆರ್ಧಧಾತುಕವಾದ ಉ ಪ್ರತ್ಯಯದ ಹಿಂದೆ ಇರುವ ಅಕಾರಕ್ಕೆ **ಲೋಪ.** ಕೃನ್+ಉ+ಸ್ವ ಈಗ ಕೃನ್ ಎಂಬುದು ಲಘೂಪಧ ಆದ್ದರಿಂದ **ಪುಗಂತಲಘೂಪಧಸ್ಯಚ** ( ಪಾ. ಸೂ. ೭-೩-೮೬) ಎಂಬುದರಿಂದ ಲಘೂಪಧಗುಣವು ಪ್ರಾಪ್ತವಾಗುವುದು. ಆದರೂ ಅದು ಬರುವುದಿಲ್ಲ ಏಕೆಂದರೆ **ಅಚಃ ಪರಸ್ಮಿನ್ಪೂರ್ವವಿಧೌ** (ಪಾ. ಸೂ ೧-೧-೫೭) ಸ್ಥಾನಿಭೂತವಾದ ಸ್ವರಕ್ಕಿಂತಲೂ ಪೂರ್ವತ್ವೇನ ದೃಷ್ಟವಾದುದಕ್ಕೆ ಕಾರ್ಯವನ್ನು ಮಾಡುವಾಗ ಪರನಿಮಿತ್ತಕವೂ ಅಚ್ ಸ್ಥಾನದಲ್ಲಿ ಬಂದದೂ ಆದ ಆದೇಶವು ಸ್ಥಾನಿವದ್ಭಾವವನ್ನು ಹೊಂದುವುದು ಎಂಬುದರಿಂದ ಅಲೋಪಕ್ಕೆ ಸ್ಥಾನಿವದ್ಭಾವ ಬರುವುದು ಹೇಗೆಂದರೆ ಸ್ಥಾನಿಭೂತವಾದ ಅಚ್ಚು ಅಕಾರ. ಇದಕ್ಕಿಂತ ಪೂರ್ವತ್ವೇನ ದೃಷ್ಟವಾಗಿರುವುದು ಕೃನ್ ಎಂಬಲ್ಲಿರುವ ಋಕಾರ. ಆದಕ್ಕೆ ಗುಣರೂಪವಾದ ಕಾರ್ಯವನ್ನು ಮಾಡುವಾಗ ಪರದಲ್ಲಿರುವ ಉ ಪ್ರತ್ಯಯವನ್ನು ನಿಮಿತ್ತಮಾಡಿಕೊಂಡು ಬಂದುದೂ, ಅ ಎಂಬ ಅಚ್ಚಿನ ಸ್ಥಾನದಲ್ಲಿ ಬಂದುದೂ ಆದ ಲೋಪರೂಪವಾದ ಆದೇಶವು ಸ್ಥಾನಿವದ್ಭಾವವನ್ನು ಹೊಂದುವುದು ಎಂಬುದರಿಂದ ಸ್ಥಾನಿವದ್ಭಾವ ಬಂದರೆ ಅಕಾರವು ಇದ್ದಂತೆ ಆಗುವುದು ಈಗ ವಕಾರೋಪಧವಾಗುವುದೇ ವಿನಾ ಲಘೂಪಧವಾಗುವುದಿಲ್ಲ ಆದ್ದರಿಂದ ಲಘೂಪಧಗುಣ ಬರುವುದಿಲ್ಲ ಕೃನ್+ಉ+ಸ್ವ 'ಋವರ್ಣಾನ್ನಸ್ಯಣತ್ವಂ ವಾಚ್ಯಂ' ಎಂಬುದರಿಂದ ನಕಾರಕ್ಕೆ ಣಕಾರ, ಆದೇಶಪ್ರತ್ಯಯಯೋಃ ಎಂಬುದರಿಂದ ಪ್ರತ್ಯಯಾವಯವವಾದ ಸಕಾರಕ್ಕೆ ಷಕಾರ, ಕೃಣುಷ್ವ ಎಂದಾಗುವುದು ಸತಿಶಿಷ್ಟಸ್ವರಬಲೀಯಸ್ತ್ವಮನ್ಯತ್ರವಿಕರಣೇಭ್ಯಃ—ವಿಕರಣಾತಿರಿಕ್ತ ಸ್ಥಳದಲ್ಲಿ ಸತಿಷ್ಟಸ್ವರವು ಬಲವಾದುದು ಇಲ್ಲಿ ಉ ಎಂಬ ವಿಕರಣಕ್ಕೆ ಬರುವ ಸ್ವರವು ಸತಿಶಿಷ್ಟವಾದುದು- ಆದರೂ ಅದು ಬಲವಾದುದಲ್ಲ ಆದ್ದರಿಂದ ಆದ್ಯುದಾತ್ತಶ್ಚ ಎಂಬುದರಿಂದ ಸ್ವ ಎಂಬ ತಿಬ್‌ಪ್ರತ್ಯಯಕ್ಕೆ ಆದ್ಯುದಾತ್ತ ಬರುವುದು ಶೇಷನಿಘಾತದಿಂದ ಮಿಕ್ಕವು ಅನುದಾತ್ತಗಳು.

**ರಾಧಃ—ಸರ್ವಧಾತುಭ್ಯೋಽಸುನ್** ( ಉ. ಸೂ. ೪-೬೨೮ ) ಎಂಬುದರಿಂದ ಅಸುನ್ ಪ್ರತ್ಯಯ ಪ್ರತ್ಯಯವು ನಿತ್ತಾದ್ದರಿಂದ ರಾಧಃ ಎಂಬುದು ಆದ್ಯುದಾತ್ತ.

**ಅದ್ರಿವಃ—**ಅದ್ರಿ ಎಂದರೆ ವಜ್ರ ಎಂದು ಅರ್ಥ. ಅದ್ರಿಃ ಅಸ್ಯ ಅಸ್ತಿ ಎಂದು ವಿಗ್ರಹಮಾಡಿದರೆ **ತದಸ್ಯಾಸ್ತ್ಯಸ್ಮಿನ್ನಿತಿಮತುಪ್** (ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಬರುವುದು. **ಛಂದಸೀರಃ** (ಪಾ. ಸೂ. ೮-೨-೧೫) ಇವರ್ಣಾಂತ ರೇಫಾಂತ ಶಬ್ದಗಳ ಮುಂದೆ ಇರುವ ಮತುಪ್ಪಿನ ಮಕಾರಕ್ಕೆ ಛಂದಸ್ಸಿನಲ್ಲಿ ವಕಾರ ಬರುವುದು ಎಂಬುದರಿಂದ ಮಕಾರಕ್ಕೆ ವಕಾರ. ಅದ್ರಿ+ವತ್ ಇದರ ಮುಂದೆ ಸಂಬೋಧನಪ್ರಥಮಾ ಏಕವಚನ ಸುಪ್ರತ್ಯಯವನ್ನಿಟ್ಟರೆ **ಉಗಿದಚಾಂ ಸರ್ವನಾಮಸ್ಥಾನೇಧಾತೋಃ** (ಪಾ ಸೂ. ೭-೧-೭೦) ಎಂಬುದರಿಂದ ನುಮಾಗಮವು 'ಮಿದಚೋಂತ್ಯಾತ್ಪರಃ' ಎಂಬ ಪರಿಭಾಷಾಪ್ರಕಾರ ಅಂತ್ಯಸ್ವರದ ಮುಂದೆ ಬರುವುದು.

ಅದ್ರಿವನ್ ಕ್+ಸು **ಹಲ್ಜ್ಯಾಭ್ಯೋದೀರ್ಘಾತ್ಸುತಿಸ್ಯ ಪೃಕ್ತಂಹಲ್** (ಪಾ. ಸೂ. ೬-೧-೬೮) ಎಂಬುದರಿಂದ ಸುಲೋಪ. **ಸಂಯೋಗಾಂತಸ್ಯ ಲೋಪಃ** (ಪಾ. ಸೂ. ೮-೨-೨೩) ಎಂಬುದರಿಂದ ತಲೋಪ. **ಪೂರ್ವತ್ರಾಸಿದ್ಧಮ್** (ಪಾ. ಸೂ. ೮-೧-೯೨) ಎಂಬುದರಿಂದ ತಲೋಪವು ಅಸಿದ್ಧವಾಗುವುದರಿಂದ **ನಲೋಪಃಪ್ರಾತಿಪದಿಕಾಂತಸ್ಯ** (ಪಾ. ಸೂ. ೮-೨-೭) ಎಂಬುದರಿಂದ ನಲೋಪ ಬರುವುದಿಲ್ಲ. **ಮತುವಸೋರುಸಂಬುದ್ಧೌ ಛಂದಸಿ** (ಪಾ. ೮-೩-೧) ಛಂದಸ್ಸಿನಲ್ಲಿ ಮತುಪ್ ಪ್ರತ್ಯಯಾಂತ ಅಥವಾ ವಸುಪ್ರತ್ಯಯಾಂತವಾದ ಪದದ ಕೊನೆಯ ವರ್ಣಕ್ಕೆ ರು ಆದೇಶ ಬರುವುದು ಎಂಬುದರಿಂದ ನಕಾರಕ್ಕೆ ರು ಆದೇಶ ಬಂದರೆ ಅದ್ರಿವರ್ ಎಂದಾಗುವುದು. **ಖರವಸಾನಯೋರ್ವಿಸರ್ಜನೀಯಃ** ( ಪಾ. ಸೂ. ೮-೩-೧೫ ) ಖರ್‌ವರ್ಣ ಪರದಲ್ಲಿರುವಾಗಲೂ ಅವಸಾನ ವಿಷಯದಲ್ಲೂ ಪದದ ಕೊನೆಯಲ್ಲಿರುವ ರೇಫಕ್ಕೆ ವಿಸರ್ಗ ಬರುವುದು ಎಂಬುದರಿಂದ ರೇಫಕ್ಕೆ ವಿಸರ್ಗ ಬಂದರೆ ಅದ್ರಿವಃ ಎಂದಾಗುವುದು. **ಆಮಂತ್ರಿತಸ್ಯ ಚ** (ಪಾ-ಸೂ. ೮-೧-೧೯) ಎಂಬುದರಿಂದ ಅನುದಾತ್ತ ಬರುವುದು. ||೭||

॥ ಸಂಹಿತಾಪಾಠಃ ॥

ನಹಿ ತ್ವಾ ರೋದಸೀ ಉಭೇ ಋಘಾಯಮಾಣಮಿನ್ವತಃ ।
ಜೇಷಃ ಸ್ವರ್ವತೀರಪಃ ಸಂ ಗಾ ಅಸ್ಮಭ್ಯಂ ಧೂನುಹಿ ॥ ೮ ॥

॥ ಪದಪಾಠಃ ॥

ನಹಿ । ತ್ವಾ । ರೋದಸೀ ಇತಿ । ಉಭೇ ಇತಿ । ಋಘಾಯಮಾಣಂ । ಇನ್ವತಃ ।
ಜೇಷಃ । ಸ್ವಃऽವತೀಃ । ಅಪಃ । ಸಂ । ಗಾಃ । ಅಸ್ಮಭ್ಯಂ । ಧೂನುಹಿ ॥ ೮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಋಘಾಯಮಾಣಂ ಶತ್ರುವಧಂಕುರ್ವಾಣಂ ತ್ವಾಂ ರೋದಸೀ ಉಭೇ ದ್ಯಾವಾಪೃಥಿವ್ಯಾವಪಿ ತ್ವದೀಯಂ ಮಹಿಮಾನಂ ನಹೀನ್ವತಃ । ವ್ಯಾಪ್ತುಂ ನ ಸಮರ್ಥೇ ಇತ್ಯರ್ಥಃ । ತಾದೃಶಸ್ತ್ವಂ ಸ್ವರ್ವತೀಃ ಸ್ವರ್ಲೋಕಯುಕ್ತಾ ಅಪೋ ವೃಷ್ಟಿರೂಪಾ ಜೇಷಃ । ಜಯೇಃ । ಪ್ರೇರಯೇತ್ಯರ್ಥಃ । ಅಪಾಂ ಸ್ವರ್ಗಸಂಬಂಧಶ್ಚಾನ್ಯತ್ರ ದಿವೋ ವೃಷ್ಟಿಂ ಚ್ಯಾವಯತಿ । ತೈ. ಸಂ. ೩-೩-೪-೧ । ಇತಿ ಶ್ರುತಂ । ಕಿಂಚ ವೃಷ್ಟಿಪ್ರದಾನಾದನ್ನಸಂಪತ್ತೇರೂರ್ಧ್ವಮಸ್ಮಭ್ಯಂ ಕ್ಷೀರಾದಿರಸಪ್ರದಾ ಗಾಃ ಸಂ ಧೂನುಹಿ । ಸಮ್ಯಕ್ ಪ್ರೇರಯ ॥ ನಹಿ । ನಞಿತೋ ಹಿಶಬ್ದೇನ ಸಹ ಸುಪಾ । ಪಾ. ೨-೧-೪ । ಇತಿ ಸಮಾಸಃ । ಸಮಾಸತ್ವಾದಂತೋದಾತ್ತತ್ವಂ । ತ್ವಾ । ಅನುದಾತ್ತಂ ಸರ್ವಮಿತ್ಯನುವೃತ್ತೌ ತ್ವಾಮೌ ದ್ವಿತೀಯಾಯಾಃ ! ಪಾ. ೮-೧-೨೩ । ಇತಿ ತ್ವಾದೇಶಃ । ರೋದಸೀ । ರುದೇರಸುನ್ । ನಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತಃ । ಉಗಿತಶ್ಚ ।

ಪಾ. ೪.೧.೬ | ಇತಿ ಙೀಪ್ | ಉಭೇ | ಪ್ರಾತಿಪದಿಕಸ್ವರೇಣಾಂತೋದಾತ್ತಃ | ಶ್ಯಾ ಸಹೈಕಾದೇಶ ಉದಾತ್ತಃ | ಋಘಾಯಮಾಣಂ | ನ್ಯಾನ್ಯಂತೀತ್ಯೃಘಾ | ಅನ್ಯೇಭ್ಯೋಽಪಿ ದೃಶ್ಯಂತ ಇತಿ ವಿಚ್ | ದೃಶಿಗ್ರಹಣಸ್ಯ ವಿಧ್ಯಂತರೋಪಸಂಗ್ರಹಣಾರ್ಥತ್ವಾನ್ನಕಾರಲೋಪೋ ಹಕಾರಸ್ಯ ಚ ಘಕಾರಃ | ಅನೃಘಾ ಋಘಾ ಭವತೀತ್ಯಭೂತತದ್ಭಾವೇ ಲೋಹಿತಾದಿಡಾಜ್ಭ್ಯಃ ಕ್ಯಷ್ | ಪಾ. ೩.೧.೧೩ | ಇತಿ ಕ್ಯಷ್ಪ್ರತ್ಯಯೋ ಭವತಿ | ಸ ಹ್ಯಾಕೃತಿಗಣಃ | ಲೋಪಶ್ಚ ಹಲಃ | ಪಾ. ೩.೧.೧೨ | ಇತ್ಯನುವೃತ್ತೇರ್ನಕಾರಲೋಪಶ್ಚ | ವಾ ಕ್ಯಷಃ | ಪಾ. ೧.೩.೯೦ | ಇತ್ಯಾತ್ಮನೇಪದಂ | ಲಟಃ ಶಾನಚ್ | ಶಪೋಽದುಪದೇಶಾತ್ಪರಾಚ್ಛಾನಚೋ ಲಸಾರ್ವಧಾತುಕಾನುದಾತ್ತತ್ವಂ | ಶಪಃ ಪಿತ್ತ್ವಾದನುದಾತ್ತತ್ವಂ | ಕ್ಯಷಃ ಪ್ರತ್ಯಯಸ್ವರಃ | ಏಕಾದೇಶಸ್ಯೋದಾತ್ತತ್ವಂ | ಇನ್ವತಃ | ಇವಿ ವ್ಯಾಪ್ತೌ | ಇದಿತೋ ನುಮ್ ಧಾತೋರಿತಿ ನುಮ್ | ಶಪಃ ಪಿತ್ತ್ವಾದನುದಾತ್ತತ್ವಂ | ಲಡಾದೇಶಸ್ಯ ತಸಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರ ಏವ ಶಿಷ್ಯತೇ | ಹಿ ಚೇತಿ ನಿಷೇಧಾತ್ತಿಙ್ಙತಿಙ ಇತಿ ನಿಘಾತೋ ನ ಭವತಿ | ಜೇಷಃ | ಜೇಃ ಪ್ರಾರ್ಥನಾಯಾಂ ಲಿಙರ್ಥೇ ಲೇಟ್ | ತಸ್ಯ ಮಧ್ಯಮಪುರುಷೈಕವಚನಂ ಸಿಪ್ | ಇತಶ್ಚ ಲೋಪಃ ಪರಸ್ಮೈಪದೇಷ್ವಿತೀಕಾರಲೋಪಃ | ಕರ್ತರಿ ಶಪಿ ಪ್ರಾಪ್ತೇ ತದಪವಾದಃ ಸಿಬ್ಬಹುಲಂ ಲೇಟೀತಿ ಸಿಪ್ | ಅಡಾಗಮಸ್ಯಾನುದಾತ್ತತ್ವಾದ್ಧಾತುಸ್ವರ ಏವ ಶಿಷ್ಯತೇ | ಸ್ವರಾಸಾಮುಸ್ತೀತಿ ಸರ್ವತ್ಯಃ | ನ್ಯಙ್ಸ್ವರೌ ಸ್ವರಿತೌ | ಫಿ. ೪.೬ | ಇತಿ ಸ್ವರ್ಶಬ್ದಃ ಸ್ವರಿತಃ | ಮತುಬ್ಙೀಪೌ ಪಿತ್ತ್ವಾದನುದಾತ್ತೌ | ಸಂಹಿತಾಯಾಂ ಸ್ವರಿತಾತ್ಸಂಹಿತಾಯಾಮನುದಾತ್ತಾನಾಂ | ಪಾ ೧.೨.೩೯ | ಇತ್ಯೇಕಶ್ರುತಿಃ | ಸ್ವರಿತ ಏವ ಶಿಷ್ಯತೇ | ಅಪಃ | ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ | ಧೂನುಹಿ | ಧೂಞ್ ಕಂಪನೇ | ಲೋಟ್ | ಸೇರ್ಹ್ಯಪಿಚ್ಚ | ಸ್ವಾದಿಭ್ಯಃ ಶ್ನುಃ | ಉತಶ್ಚ ಪ್ರತ್ಯಯಾದಸಂಯೋಗಪೂರ್ವಾತ್ | ಪಾ ೬.೪.೧೦೬ | ಇತಿ ಪ್ರಾಪ್ತಸ್ಯ ಲುಕಶ್ಛಾಂದಸತ್ವಾದಭಾವಃ ||

|| ಪ್ರತಿಪದಾರ್ಥ ||

**ಋಘಾಯಮಾಣಂ**—ಶತ್ರುವಧೆಯನ್ನು ಮಾಡುವ | **ತ್ವಾಂ**—ನಿನ್ನನ್ನು (ನಿನ್ನ ಮಹಿಮೆಯನ್ನು) | **ಉಭೇ ರೋದಸೀ**—ಭೂಮ್ಯಂತರಿಕ್ಷಗಳು | **ನಹಿ ಇನ್ವತಃ**—ಹೊಂದಲಸಮರ್ಥಗಳಾಗಿರುವವು | (ಅಂತಹ ನೀನು) **ಸ್ವರ್ವತೀಃ**—ಸ್ವರ್ಗಲೋಕದಲ್ಲಿರುವ | **ಅಪಃ**—ವೃಷ್ಟಿರೂಪವಾದ ಉದಕವನ್ನು | **ಜೇಷಃ**—ಜಯಿಸು (ಎಂದರೆ ಮಳೆಯರೂಪದಲ್ಲಿ ಉದಕವು ಭೂಮಿಯ ಮೇಲೆ ಬೀಳುವಂತೆ ಪ್ರೇರಿಸು, | (ಅನಂತರ) **ಅಸ್ಮಭ್ಯಂ**—ನಮಗೆ | **ಗಾಃ**—ಗೋವುಗಳನ್ನು | **ಸಂ ಧೂನುಹಿ**—ಕಳುಹಿಸಿಕೊಡು.

|| ಭಾವಾರ್ಥ ||

ಎಲೈ ಇಂದ್ರನೇ, ಶತ್ರುಸಂಹಾರಮಾಡುವ ಸಾಮರ್ಥ್ಯವುಳ್ಳ ನಿನ್ನ ಮಹಿಮೆಯು ಭೂಮ್ಯಂತರಿಕ್ಷಗಳು ಹಿಡಿಸಲಾರದಷ್ಟು ಅತಿಶಯವಾಗಿರುವುದು (ಹೆಚ್ಚಾಗಿರುವುದು). ಈಗ ನೀನು ಸ್ವರ್ಗಲೋಕದಲ್ಲಿರುವ ಉದಕವನ್ನು ವೃಷ್ಟಿರೂಪವಾಗಿ ಭೂಮಿಯ ಮೇಲೆ ಬೀಳುವಂತೆ ಮಾಡು ಮತ್ತು ನಮಗೆ ಹಾಲನ್ನು ಕೊಡುವ ಗೋವುಗಳನ್ನು ಕಳುಹಿಸಿಕೊಡು.

## English Translation.

Heaven and earth are unable to hold you (your exploits) the destroyer of your enemies; command the waters of heaven (so that they may fall upon earth as rain) and send us cows.

|| ವಿಶೇಷವಿಷಯಗಳು ||

**ರೋದಸೀ**—ದ್ಯಾವಾಪೃಥಿವೀ, ಭೂಮ್ಯಂತರಿಕ್ಷಲೋಕಗಳು ಅಥವಾ ಭೂಮಿ ಮತ್ತು ಸ್ವರ್ಗಲೋಕಗಳು. ಸ್ವಧೇ ಪುರಂಧೀ ಮೊದಲಾದ ಇಪ್ಪತ್ತುನಾಲ್ಕು ದ್ಯಾವಾಪೃಥಿವೀವಾಚಕಗಳಾದ ಶಬ್ದಗಳ ಮಧ್ಯದಲ್ಲಿ ರೋದಸೀ ಎಂಬ ಶಬ್ದವು ಪಠಿತವಾಗಿದೆ. (ನಿ. ೩.೨೧)

**ಋಘಾಯಮಾಣಂ**—ನೃನ್ ಹಂತೀತ್ಯೃಘಾ | ಮನುಷ್ಯರನ್ನು ಎಂದರೆ ಶತ್ರುಗಳನ್ನು ಸಂಹಾರ ಮಾಡುವ.

**ತ್ವಾ**—ನಿನ್ನನ್ನು ಎಂದರೆ ನಿನ್ನ ಮಹಿಮೆಯನ್ನು.

**ಇನ್ವತಃ**—ಇವಿ ವ್ಯಾಪ್ತೌ | ವ್ಯಾಪಿಸುವುದಕ್ಕೆ ಅಸಮರ್ಥವು ಎಂದರೆ ನಿನ್ನ ಮಹಿಮೆಯು ಅಪಾರವಾಗಿರುವುದರಿಂದ ಅವು ಬಹಳ ವಿಸ್ತಾರವಾದ ಭೂಮ್ಯಂತರಿಕ್ಷಗಳೂ ಹಿಡಿಸಲಾರದಷ್ಟು ಹೆಚ್ಚಾಗಿರುವವು ಎಂದಭಿಪ್ರಾಯವು,

**ಜೇಷಃ**—ಗೆಲ್ಲುವಿ, ಎಂದರೆ ಉದಕಗಳು ಅಥವಾ ವೃಷ್ಟಿಯು ಮಳೆ ಹುಯ್ಯುವಂತೆ ಮಾಡುವ ಸಾಮರ್ಥ್ಯವು, ನಿನ್ನ ಅಧೀನದಲ್ಲಿರುವ, ಎಂದರ್ಥವು.

**ಸ್ವರ್ವತೀಃ**—ಸ್ವರ್ಗಲೋಕದಲ್ಲಿರುವ. ಮಳೆಯು ಹುಯ್ಯುವಾಗ ಅಂತರಿಕ್ಷದಿಂದ (ಆಕಾಶದಿಂದ) ಬೀಳುವುದರಿಂದಲೂ, ಸ್ವರ್ಗಲೋಕವು ಅಂತರಿಕ್ಷಲೋಕದ ಮೇಲುಭಾಗದಲ್ಲಿರುವುದೆಂದು ಪ್ರತೀತಿ ಇರುವುದರಿಂದಲೂ ವೃಷ್ಟಿರೂಪವಾದ ಉದಕವು ಸ್ವರ್ಗದಲ್ಲಿರುವ ನೀರೆಂದು ಹೇಳುವುದು ರೂಢಿಯಾಗಿರುವುದು. ಈ ವಿಷಯದಲ್ಲಿ—

> ಏತದ್ವಾ ಅಪಾಂ ನಾಮಧೇಯಂ ಗುಹ್ಯಂ ಯದಾಧಾವಾ ಮಾಂದಾಸು ತೇ ಶುಕ್ರ ಶುಕ್ರಮಾ ಧೂನೋಮೀತ್ಯಾಹಾಪಾಮೇವ ನಾಮಧೇಯೇನ ಗುಹ್ಯೇನ ದಿವೋ ವೃಷ್ಟಿಮವ ರುಂಧೇ ಶುಕ್ರಂ ತೇ ಶುಕ್ರೇಣ ಗೃಹ್ಣಾಮೀತ್ಯಾಹ್ಯೈತದ್ವಾ ಅಹ್ನೋ ರೂಪಂ ಯದ್ರಾತ್ರಿಸ್ಸೂರ್ಯಸ್ಯ ರಶ್ಮಯೋ ವೃಷ್ಟ್ಯಾ ಈಶತೇಽಹ್ನ ಏವ ರೂಪೇಣ ಸೂರ್ಯಸ್ಯ ರಶ್ಮಿಭಿರ್ದಿವೋ ವೃಷ್ಟಿಂ ಚ್ಯಾವಯತ್ಯಾಸ್ಮಿನ್ನುಗ್ರಾ ಅಚುಚ್ಯವುರಿತ್ಯಾಹ ಯಥಾಯಜುರೇವೈತತ್ ||

ಎಂದು ತೈತ್ತಿರೀಯ ಸಂಹಿತೆಯಲ್ಲಿ ಹೇಳಿರುವುದು.

**ಧೂನುಹಿ**—ಧೂಞ್ ಕಂಪನೇ | ಈ ಧಾತುವಿಗೆ ಕಂಪಿಸು, ಚಲಿಸು ಎಂದರ್ಥವಿದ್ದರೂ, ಪ್ರೇರಿಸು, ಕಳುಹಿಸು, ಕೊಡು ಎಂಬ ಅರ್ಥವನ್ನು ಭಾಷ್ಯಕಾರರೂ ಇತರರೂ ಅನುಮೋದಿಸುವರು.

॥ ವ್ಯಾಕರಣಪ್ರಕ್ರಿಯಾ ॥

**ನಹಿ-ಸಹಸುಪಾ** (ಪಾ. ಸೂ. ೨-೧-೪) ಸುಬಂತವು ಸಮರ್ಥವಾದ ಸುಬಂತದೊಂದಿಗೆ ಸಮಾಸವನ್ನು ಹೊಂದುವುದು ಎಂಬುದರಿಂದ ನಞ್‌ಗೆ ಹಿ ಶಬ್ದದೊಂದಿಗೆ ಸಮಾಸ ಬರುವುದು. ಸಮಾಸವಾದ್ದರಿಂದ **ಸಮಾಸಸ್ಯ** (ಪಾ. ಸೂ. ೬-೧-೨೨೩) ಎಂಬುದರಿಂದ ಅಂತೋದಾತ್ತಸ್ವರ ಬರುವುದು.

**ತ್ವಾ**—ಯುಷ್ಮದ್ ಶಬ್ದದ ಮುಂದೆ ದ್ವಿತೀಯಾ ಏಕವಚನ ಅಮ್ ಪ್ರತ್ಯಯ. ಆ ಅಮ್‌ಗೆ **ಙೇಪ್ರಥಮಯೋರಮ್** (ಪಾ. ಸೂ. ೭-೧-೨೮) ಯುಷ್ಮದ್+ಅಸ್ಮದ್ ಶಬ್ದಗಳ ಮುಂದೆ ಇರುವ ಙೇ ಎಂಬುದಕ್ಕೂ ಪ್ರಥಮಾದ್ವಿತೀಯಾ ವಿಭಕ್ತಿಗಳಿಗೂ ಅಮ್ ಆದೇಶ ಬರುವುದು. ಇಲ್ಲಿ ಅಮ್‌ಗೆ ಅಮ್ ಆದೇಶವನ್ನು ವಿಧಿಸದೇ ಇದ್ದರೆ ಅಮ್ ಎಂಬುದು ಆದೇಶವನ್ನು ಹೊಂದದೇ ಇರುವ ವಿಭಕ್ತಿಯಾಗುವುದು. ಆದ್ದರಿಂದ **ಯೋಽಚಿ** (ಪಾ. ಸೂ. ೭-೨-೮೯) ಆತ್ವಯತ್ವಗಳಿಗೆ ನಿಮಿತ್ತವಾಗದೇ ಇರುವ ಅಜಾದಿ ವಿಭಕ್ತಿಯು ಪರದಲ್ಲಿದ್ದರೆ ಯುಷ್ಮದ್-ಅಸ್ಮದ್ ಶಬ್ದಗಳಿಗೆ ಯಾದೇಶ ಬರುವುದು ಎಂಬುದರಿಂದ ಯಾದೇಶ ಬರಬೇಕಾಗಿ ಬರುವುದು• ಆದೇಶವನ್ನು ವಿಧಿಸಿದರೆ ವಿಭಕ್ತಿಯು ಆದೇಶವನ್ನು ಹೊಂದುವುದರಿಂದ 'ಯೋಚಿ' ಎಂಬುದು ಬರುವುದಿಲ್ಲ. ಯುಷ್ಮದ್+ಅಮ್ ಎಂದಿರುವಾಗ **ತ್ವಮಾವೇಕವಚನೇ** (ಪಾ. ಸೂ. ೭-೨-೯೭) ಏಕತ್ವ ವಿಶಿಷ್ಟಾರ್ಥ ಪ್ರತಿಪಾದಕಗಳಾದ ಯುಷ್ಮದ್, ಅಸ್ಮದ್ ಶಬ್ದಗಳ ಮಪರ್ಯಂತಕ್ಕೆ ತ್ವ ಮ ಆದೇಶಗಳು ಬರುವುವು ಎಂಬುದರಿಂದ ಮಪರ್ಯಂತಕ್ಕೆ ತ್ವ ಆದೇಶ ಬಂದರೆ ತ್ವ+ಅದ್+ಅಮ್ **ದ್ವಿತೀಯಾಯಾಂಚ** (ಪಾ. ಸೂ. ೭-೨-೮೭) ದ್ವಿತೀಯಾ ವಿಭಕ್ತಿಪರದಲ್ಲಿರುವಾಗ ಯುಷ್ಮದ್, ಅಸ್ಮದ್, ಶಬ್ದಗಳಿಗೆ ಆಕಾರ ಬರುವುದು. ತ್ವ+ಅ+ಆ+ಅಮ್ **ಅತೋಗುಣೇ** (ಪಾ. ಸೂ. ೬-೧-೯೭) ಎಂಬುದರಿಂದ ಪರರೂಪ, **ಅಕಃಸವರ್ಣೇದೀರ್ಘಃ** (ಪಾ. ಸೂ. ೬-೧-೧೦೧) ಸವರ್ಣದೀರ್ಘ, ತ್ವಾ+ಅಮ್ **ಅಮಿಪೂರ್ವಃ** (ಪಾ. ಸೂ. ೬-೧-೧೦೭) ಎಂಬುದರಿಂದ ಪೂರ್ವರೂಪ. ತ್ವಾಮ್ ಎಂದಾಗುವುದು. ಈಗ **ತ್ವಾಮೌದ್ವಿತೀಯಾಯಾಃ** (ಪಾ. ಸೂ. ೮-೧-೨೩) ಪದಸ್ಯ+ಪದಾತ್, **ಅನುದಾತ್ತಂಸರ್ವಮಪಾದಾದೌ** (೮-೧-೧೮) ಇವುಗಳು ಅಧಿಕೃತಗಳಾಗುವವು. ಪದದ ಮುಂದೆ ಇರತಕ್ಕವೂ ಪಾದದ ಆದಿಯಲ್ಲಿಲ್ಲದವುಗಳೂ ಆದ ದ್ವಿತೀಯಾ ಏಕವಚನಾಂತಗಳಾದ ಯುಷ್ಮದಸ್ಮಚ್ಛಬ್ದಗಳಿಗೆ ಕ್ರಮವಾಗಿ ತ್ವಾ ಮಾ ಎಂಬ ಆದೇಶಗಳು ಬರುವುವು. ಅವು ಅನುದಾತ್ತಗಳೂ ಆಗುವುವು ಎಂಬುದರಿಂದ ತ್ವಾಮ್ ಎಂಬುದಕ್ಕೆ ಅನುದಾತ್ತವಾದ ತ್ವಾ ಆದೇಶ ಬರುವುದು.

**ರೋದಸೀ**—ರುದ್ ಧಾತುವಿನ ಮುಂದೆ **ಸರ್ವಧಾತುಭ್ಯೋಽಸುನ್** (ಉ. ಸೂ. ೪-೬೨೮) ಎಂಬುದರಿಂದ ಅಸುನ್ ಪ್ರತ್ಯಯ, ಲಘೂಪಧ ಗುಣ, ಪ್ರತ್ಯಯವು ನಿತ್ತಾದ್ದರಿಂದ ರೋದಸ್ ಎಂಬುದು ಆದ್ಯುದಾತ್ತ. ಅಸುನ್ ಪ್ರತ್ಯಯದ ಉಕಾರಕ್ಕೆ ಇತ್ಸಂಜ್ಞೆ ಬಂದಿರುವುದರಿಂದ ಅದು ಇದಿತ್ತು, ರೋದಸ್ ಎಂಬುದು ಉಗಿದಂತ. ಆದ್ದರಿಂದ **ಉಗಿತಶ್ಚ** (ಪಾ. ಸೂ. ೪-೧-೬) ಸ್ತ್ರೀತ್ವ ತೋರುವಾಗ ಉಗಿದಂತವಾದ ಪ್ರಾತಿಪದಿಕದ ಮುಂದೆ ಙೀಪ್ ಬರುವುದು ಎಂದು ಙೀಪ್ ಬರುತ್ತೆ. ಙೀಪ್ಪು ಪಿತ್ತಾದ್ದರಿಂದ ಅನುದಾತ್ತ.

**ಉಭೇ**—ಉಭ ಎಂಬುದು ಪ್ರಾತಿಪದಿಕ ಸ್ವರದಿಂದ ಅಂತೋದಾತ್ತ. **ಅಜಾದ್ಯತಷ್ಟಾಪ್** (ಪಾ. ಸೂ. ೪-೧-೪) ಎಂಬುದರಿಂದ ಟಾಪ್ ಬರುವುದು. ಅದು ಪಿತ್ತಾದ್ದರಿಂದ ಅನುದಾತ್ತ. ಉಭ+ಆ ಎರಡಕ್ಕೂ ಸವರ್ಣದೀರ್ಘ. ಏಕಾದೇಶ ಉದಾತ್ತೇನೋದಾತ್ತಃ ಎಂಬುದರಿಂದ ಉದಾತ್ತ. ಉಭಾ ಶಬ್ದದ ಮುಂದೆ ಪ್ರ. ದ್ವಿ. ಔ ಪ್ರತ್ಯಯವನ್ನು ಹಚ್ಚಿದರೆ **ಔಙ ಆಪಃ** (ಪಾ. ಸೂ. ೭-೧-೧೮) ಆಬಂತವಾದ ಅಂಗದ ಮುಂದೆ ಇರುವ ಔಕಾರ ರೂಪ ವಿಭಕ್ತಿಗೆ (ಔ, ಔಟ್) ಶೀ ಆದೇಶ ಬರುವುದು ಎಂಬುದರಿಂದ ಶೀ ಆದೇಶ ಬಂದರೆ ಶಕಾರಕ್ಕೆ

ಇತ್ಸಂಜ್ಞೆ ಲೋಪ ಬಂದು ಈ ನಿಲ್ಲುವುದು. ಉಭಾ+ಈ. ಈ ಎಂಬುದು ಸುಪ್ಪಾದ್ದರಿಂದ ಅನುದಾತ್ತ. **ಆದ್ಗುಣಃ** (ಪಾ.ಸೂ.೬-೧-೮೭) ಎಂಬುದರಿಂದ ಅ+ಈ ಗಳ ಸ್ಥಾನದಲ್ಲಿ ಏಕಾರರೂಪವಾದ ಗುಣವು ಏಕಾದೇಶವಾಗಿ ಬರುವುದು. ಈ ಏಕಾದೇಶವೂ ' ಏಕಾದೇಶ ಉದಾತ್ತೇನೋದಾತ್ತಃ ' ಎಂಬುದರಿಂದ ಉದಾತ್ತ.

**ಋಘಾಯಮಾಣಮ್**— ನೄನ್ ಹನ್ತಿ ಎಂದು ವಿಗ್ರಹ ಮಾಡಿದರೆ ಪ್ರಥಮೈಕವಚನದಲ್ಲಿ ಋಘಾ ಎಂದಾಗುವುದು. ನೄನ್ ಎಂಬುದು ಉಪಪದವಾಗಿರುವಾಗ ಹನ್ ಧಾತುವಿನ ಮುಂದೆ **ಅನ್ಯೇಭ್ಯೋಽಪಿದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ವಿಚ್ ಪ್ರತ್ಯಯ ಬರುವುದು. ನೃ+ಶಸ್-ಹನ್-ವಿಚ್. ವಿಚ್ ನ ವರ್ಣಗಳಿಗೆಲ್ಲ ಲೋಪ ಕೃದಂತವಾದ್ದರಿಂದ ಪ್ರಾತಿಪದಿಕ ಸಂಜ್ಞೆ ಬಂದು **ಸುಪೋಧಾತುಪ್ರಾತಿಪದಿಕಯೋಃ** (ಪಾ.ಸೂ.೭-೪-೭೧) ಎಂಬುದರಿಂದ ಶಸ್‌ಗೆ ಲೋಪ, 'ಅನ್ಯೇಭ್ಯೋಽಪಿದೃಶ್ಯಂತೇ' ಎಂಬ ಸೂತ್ರದಲ್ಲಿ ದೃಶ್ಯಂತೇ ಎಂಬುದು ವಿಧ್ಯಂತರೋಪಸಂಗ್ರಹಕ್ಕಾಗಿ (ಬೇರೆ ಶಾಸ್ತ್ರಸಂಗ್ರಹಕ್ಕಾಗಿ) ಇರುವುದು. ಆದ್ದರಿಂದ ನೃನ ನಕಾರಕ್ಕೆ ಲೋಪವೂ, ಹನ್ ಧಾತುವಿನ ಹಕಾರಕ್ಕೆ ಘಕಾರವೂ ಬರುವುದು ಋಘ ಎಂದಾಗುವುದು. ಅನ್ಯಥಾ ಋಘಾ ಭವತಿ ಎಂದು ಅಭೂತ ತದ್ಭಾವವನ್ನು ವಿವಕ್ಷಿಸಿದರೆ **ಲೋಹಿತಾದಿಡಾಜ್ಭ್ಯಃಕ್ಯಷ್** (ಪಾ. ಸೂ. ೩-೧-೧೩) ಲೋಹಿತಾದಿ ಶಬ್ದಗಳ ಮುಂದೆಯೂ ಡಾಚ್ ಪ್ರತ್ಯಯಾಂತ ಶಬ್ದಗಳ ಮುಂದೆಯೂ ಭವತಿ - ಎಂಬ ಅರ್ಥದಲ್ಲಿ ಕ್ಯಷ್ ಪ್ರತ್ಯಯ ಬರುವುದು ಎಂಬುದರಿಂದ ಲೋಹಿತಾದಿಯು ಆಕೃತಿಗಣವಾದಕಾರಣ ಋಘನ್ ಎಂಬುದರ ಮುಂದೆ ಕ್ಯಷ್ ಪ್ರತ್ಯಯ ಬರುವುದು. ಕ್ಯಷ್‌ನಲ್ಲಿ ಕಕಾರಷಕಾರಗಳು ಇತ್ಸಂಜ್ಞೆಯಿಂದ ನಿವೃತ್ತಗಳಾಗುವುವು. ಋಘನ್+ಯ ' **ಭೃಶಾದಿಭ್ಯೋ ಭುವ್ಯಚ್ವೇರ್ಲೋಪಶ್ಚ ಹಲಃ** ( ಪಾ ಸೂ. ೩ ೧-೧೨ ) ಎಂಬ ಸೂತ್ರದಿಂದ ' ಲೋಪಶ್ಚ ಹಲಃ ' ಎಂಬುದು ' ಲೋಹಿತಾದಿ ' ಎಂಬಲ್ಲಿ ಅನುವೃತ್ತವಾಗುವುದು- ಆದ್ದರಿಂದ ಕ್ಯಷ್ ಬರುವುದಲ್ಲದೆ ಹಲ್ ವರ್ಣಗಳು ಪೂರ್ವದಲ್ಲಿದ್ದರೆ ಆದಕ್ಕೆ ಲೋಪವೂ ಬರುವುದು ಎಂದು ಅರ್ಥವು ಏರ್ಪಡುವುದು. ಆದ್ದರಿಂದ ನಕಾರಕ್ಕೆ ಲೋಪ ' **ಅಕೃತ್ಸಾರ್ವಧಾತುಕಯೋಃ** ( ಪಾ. ಸೂ. ೭-೪-೩೫ ) ಕೃತ್ತು ಸಾರ್ವಧಾತುಕ ಇವುಗಳನ್ನುಳಿದು ಕಿತ್ತು ಙಿತ್ತು ಆದ ಯಾದಿಪ್ರತ್ಯಯ ಪರದಲ್ಲಿರುವಾಗ ಅಜಂತವಾದ ಅಂಗಕ್ಕೆ ದೀರ್ಘ ಬರುವುದು ಎಂಬುದರಿಂದ ದೀರ್ಘಬಂದರೆ ಋಘಾಯ ಇದರ ಮುಂದೆ ಲಟ್. ಲಟ್ಟಿಗೆ **ವಾಕ್ಯಷಃ** (ಪಾ. ಸು. ೧-೩.೯೦) ಕ್ಯಷಂತದ ಮುಂದೆ ಪರಸ್ಮೈಪದವು ವಿಕಲ್ಪವಾಗಿ ಬರುವುದು ಎಂಬುದರಿಂದ ಆತ್ಮನೇಪದ ಸಂಜ್ಞಕವಾದ ಶಾನಚ್ ಪ್ರತ್ಯಯವು **ಲಟಶ್ಶತೃಶಾನಚೌ** ಎಂಬುದರಿಂದ ಬರುವುದು. ವಿಕರಣ ಶಪ್ ಬರುವುದು ಋಘಾಯ+ಅ+ಅನ, ಶಪ್ಪು ಪಿತ್ತಾದ್ದರಿಂದ ಅನುದಾತ್ತ. ಶಪ್ಪು ಅದಂತವಾದ ಉಪದೇಶವಾದ್ದರಿಂದ ಇದರ ಮುಂದೆ ಇರುವ ಲಸ್ಥಾನಿಕಸಾರ್ವಧಾತುವಾದ ಶಾನಚ್ಚು **ತಾಸ್ಯನುದಾತ್ತೇನ್ಙಿದದುಪದೇಶಾತ್** (ಪಾ.ಸೂ.೬-೧-೧೮೬) ಎಂಬುದರಿಂದ ಅನುದಾತ್ತ. ಕ್ಯಷ್‌ಗೆ ಪ್ರತ್ಯಯಸ್ವರ ಉದಾತ್ತ ಬರುವುದು. **ಅತೋಗುಣೇ** (ಪಾ. ಸೂ. ೬-೧-೯೭) ಎಂಬುದರಿಂದ ಹ್ರಸ್ವಾಕಾರಗಳೆರಡಕ್ಕೂ ಪರರೂಪ ಬಂದರೆ ಋಘಾಯ+ಅನ. ಏಕಾದೇಶದಿಂದ ಬಂದ ಅಕಾರವು ಏಕಾದೇಶ ಉದಾತ್ತೇನೋದಾತ್ತಃ, ಎಂಬುದರಿಂದ ಉದಾತ್ತ. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಮುಗಾಗಮ-ಋಘಾಯಮಾನ ನಕಾರಕ್ಕೆ ಣಕಾರ. ಋಘಾಯಮಾಣ ಎಂದಾಗುವುದು. ಈ ಪ್ರಕ್ರಿಯೆಯು ವೃತ್ತಿಕಾರಮತವನ್ನು ಅನುಸರಿಸಿ ಬಂದಿರುವುದು. ವಸ್ತುತಃ ಇಲ್ಲಿ ಕ್ಯಷ್ ಪ್ರತ್ಯಯವು ಬರುವುದಿಲ್ಲ. ಲೋಹಿತಾದಿಗಣದಲ್ಲಿ ಅಜಂತಶಬ್ದಗಳೇ ಪಠಿತವಾಗಿರುವುವು. ಆದ್ದರಿಂದ ಆಕೃತಿಗಣವಾದರೂ ಅಜಂತದ ಮುಂದೆ ಕ್ಯಷ್ ಬರುವುದೇ ವಿನ ಹಲಂತದ ಮುಂದೆ ಕ್ಯಷ್ ಬರುವುದಿಲ್ಲ. ಆದುದರಿಂದಲೇ ಮಹಾಭಾಷ್ಯದಲ್ಲಿ ಪತಂಜಲಿಮಹರ್ಷಿಗಳು ಲೋಹಿತಾ ಎಂಬ ಸೂತ್ರದಲ್ಲಿ ' ನಾಯಂ

ಹಲಂತಾದ್ವಿಧೀಯತೇ ' ಕ್ಯಷ್ ಪ್ರತ್ಯಯವು ಹಲಂತ ಶಬ್ದಗಳ ಮುಂದೆ ವಿಧಿಸಲ್ಪಡುವುದಿಲ್ಲ. ಎಂದು ಕಂಠೋಕ್ತವಾಗಿ ಹೇಳಿರುವರು. ಅಪಠಿತಸಂಗ್ರಹಾರ್ಥೋಽಪ್ಯಾದಿಶಬ್ದೋ ನ ಭವತಿ, ತಸ್ಯವಾರ್ತ್ತಿಕಕಾರೇಣ ದೂಷಿತತ್ವಾತ್ ಎಂಬ ಕೈಯಟಕ್ಕೆ ವಾಖ್ಯಾನ ಮಾಡುವ ಪ್ರಸಂಗದಲ್ಲಿ ಅಪಠಿತೇತಿ ಎಂಬ ಪ್ರತೀಕ ದಲ್ಲಿ ಉದ್ಯೋತಕಾರರು, ತೇನ ಚರ್ಮಾಯತಿ, ಚರ್ಮ್ಮಾಯತೇ ಇತ್ಯಾದಿ ವೃತ್ಯಾದ್ಯುಕ್ತಮಸಂಗತಮ್ ' ನಾಯಂ ಹಲಂತಾದ್ವಿಧೀಯತೇ ಇತಿ ಭಾಷ್ಯೋಕ್ತೇರಿತಿ ಬೋಧ್ಯಮ್ ಎಂದು ಹೇಳಿರುವರು. ವಾರ್ತ್ತಿಕಕಾರರು ಲೋಹಿತಡಾಜ್ಭ್ಯಃ ಕ್ಯಷ್ವಚನಂ ಎಂದು ವಾರ್ತ್ತಿಕಪಾಠಮಾಡಿ ಆದಿಗ್ರಹಣವನ್ನೇ ಪ್ರತ್ಯಾಖ್ಯಾನ ಮಾಡಿ ರುವರು. ಕೌಮುದೀಕಾರರೂ ಅತ್ರಾ ಚ್ವೇರಿತ್ಯನುವೃತ್ತ್ಯಾಭೂತತದ್ಭಾವವಿಷಯತ್ವಂ ಲಬ್ಧಂ, ತಚ್ಚ ಲೋಹಿತ ಶಬ್ದಸ್ಯೈವವಿಶೇಷಣಂ, ನತು ಡಾಜೋಽಸಂಭವಾತ್, ನಾಪ್ಯಾದಿಗ್ರಾಹ್ಯಾಣಾಂ, ತಸ್ಯಪ್ರತ್ಯಾಖ್ಯಾನಾತ್- ತಥಾಚ ವಾರ್ತ್ತಿಕಂ, ಲೋಹಿತಡಾಜ್ಭ್ಯಃ ಕ್ಯಷ್ವಚನಂ, ಭೃಶಾದಿಷ್ವಿತರಾಣೀತಿ ಎಂದು ಆದಿ ಗ್ರಹಣಕ್ಕೆ ಪ್ರತ್ಯಾಖ್ಯಾನವನ್ನು ವಿವರಿಸಿರುವರು. ಆದುದರಿಂದ ' ಋಘನ್ ' ಎಂಬ ನಾಂತವಾದ ಶಬ್ದದ ಮುಂದೆ ಕ್ಯಷ್ ವರ್ಣನೆಯು ಭಾಷ್ಯ ಸಮ್ಮತವಲ್ಲವೆಂದು ತೋರುವುದು. ' ನಾಯಂನಾಂತಾದ್ವಿಧೀಯತೇ ' ಎಂದು ಮಹಾಭಾಷ್ಯದಲ್ಲಿ ನಾಂತಶಬ್ದದ ವಿಷಯದಲ್ಲಿ ಪ್ರತ್ಯೇಕ ನಿಷೇಧವೂ ಇರುವುದು. ಆದುದರಿಂದ ಇಲ್ಲಿ ಹೀಗೆ ಪ್ರಕ್ರಿಯೆಯು ಯುಕ್ತವು. ಋಘೇವ ಆಚರತಿ ಎಂದು ವಿಗ್ರಹವನ್ನು ಮಾಡಿ ಕರ್ತುಃಕ್ಯಙ್‌ಸಲೋಪಶ್ಚ (ಪಾ. ಸೂ. ೩-೧-೧೧) ಉಪಮಾನವಾಚ ಕವೂ ಕರ್ತೃವಾಚಕವೂ ಆದ ಸುಬಂತದ ಮುಂದೆ ವಿಕಲ್ಪದಿಂದ ಕ್ಯಙ್ ಪ್ರತ್ಯಯ ಬರುವುದು ಎಂದು ಇದರ ಅರ್ಥ. ಇದರಿಂದ ಕ್ಯಙ್ ಪ್ರತ್ಯಯ ಬಂದರೆ ಋಘನ್+ಸು+ಯ. ಕ್ಯಙ್ ಸನಾದಿಯಲ್ಲಿರುವುದರಿಂದ ಸನಾ ದ್ಯಂತಾಧಾತವಃ (ಪಾ. ಸೂ. ೩-೧-೩೨) ಎಂಬುದರಿಂದ ಧಾತು ಸಂಜ್ಞೆ ಬಂದು ' ಸುಪೋಧಾತು ಪ್ರಾತಿಪದಿ ಕಯೋಃ' ಎಂಬುದರಿಂದ ಧಾತ್ವವಯವವಾದ ಸುಗೆ ಲೋಪ ಋಘನ್+ಯ ನಃಕ್ಯೇ (ಪಾ ಸೂ. ೧-೪-೧೫) ಕ್ಯಚ್ ಕ್ಯಙ್ ಪರದಲ್ಲಿರುವಾಗ ನಾಂತವೇ ಪದವಾಗುವುದು, ಬಾಕಿಯವು ಪದವಾಗುವುದಿಲ್ಲ ಎಂಬುದರಿಂದ ನಾಂತಕ್ಕೆ ಪದಸಂಜ್ಞೆ ಇರುವುದರಿಂದ ನ ಲೋಪಃ ಪ್ರಾತಿಪದಿಕಾಂತಸ್ಯ (ಪಾ. ಸೂ. ೮-೨-೭) ಎಂಬುದರಿಂದ ನಲೋಪ. ನಲೋಪಃ ಸುಪ್ಸ್ವರಸಂಜ್ಞಾತುಗ್ವಿಧಿಷುಕೃತಿ (ಪಾ. ಸೂ. ೮-೨-೨) ಸುಬ್ವಿಧಿಯಲ್ಲಿಯೂ, ಸ್ವರ ವಿಧಿಯ ಲ್ಲಿಯೂ ಸಂಜ್ಞಾ ವಿಧಿಯಲ್ಲಿಯೂ, ಕೃತಿತುಗ್ವಿಧಿಯಲ್ಲಿಯೂ, ನಲೋಪವು ಅಸಿದ್ಧವಾಗುವುದು. ಮಿಕ್ಕ ಕಾರ್ಯಗ ಳನ್ನು ಮಾಡುವಾಗ ನಲೋಪವು ಅಸಿದ್ಧವಾಗುವುದಿಲ್ಲ ಎಂದು ಹೇಳಿರುವುದರಿಂದ ದೀರ್ಘವನ್ನು ಮಾಡುವಾಗ ' ಪೂರ್ವತ್ರಾಸಿದ್ಧಮ್ ' (ಪಾ. ಸೂ. ೮-೨-೧) ಎಂಬುದರಿಂದ ನಕಾರ ಲೋಪವು ಅಸಿದ್ಧವಾಗುವುದಿಲ್ಲ. ಆದ್ದ ರಿಂದ ಅಕೃತ್ಸಾರ್ವಧಾತುಕಯೋಃ (ಪಾ. ಸೂ. ೭-೪-೨೫) ಎಂಬುದರಿಂದ ದೀರ್ಘ ಬರುವುದು. ಋಘಾಯ, ಇದರ ಮುಂದೆ ಲಟ್ ಕ್ಯಙ್ಙು ಙಿತ್ತಾದ್ದರಿಂದ ಅನುದಾತ್ತಙಿತ ಆತ್ಮನೇಪದಮ್ (ಪಾ. ಸೂ. ೧-೩-೧೨) ಎಂಬು ದರಿಂದ ಲಟ್ಟಿನ ಸ್ಥಾನದಲ್ಲಿ ಆತ್ಮನೇ ಪದ ಬರುವುದು. ಮಿಕ್ಕ ಪ್ರಕ್ರಿಯೆ ಪೂರ್ವದಂತೆ.

ಇನ್ವತಃ—ಇವಿವ್ಯಾಪ್ತೌ, ಧಾತು. ಇದಿತೋನುಮ್ ಧಾತೋಃ (ಪಾ. ಸೂ. ೭-೧-೫೮)ಎಂಬುದರಿಂದ ನುಮಾಗಮ ಬರುವುದು. ಇದರ ಮುಂದೆ ಲಟ್. ಅದಕ್ಕೆ ಪ್ರಥಮಪುರುಷ ದ್ವಿವಚನ ಸಂಜ್ಞಕವಾದ ತಸ್. ಶಪ್ ವಿಕರಣ ಇನ್ವತಸ್. ರುತ್ವ ವಿಸರ್ಗಗಳು ಬಂದರೆ ಇನ್ವತಃ ಎಂದಾಗುವುದು. ಶಪ್ಪು ಪಿತ್ ಆದ್ದರಿಂದ ಅನು ದಾತ್ತ. ತಾಸ್ಯನುದಾತ್ತೇಶ್ ( ಪಾ. ಸೂ. ೬-೧-೧೮೬ ) ಎಂಬುದರಿಂದ ಅದಂತೋಪದೇಶದ ಮುಂದೆ ಇರುವ ಲಸ್ಥಾನಿಕ ಸಾರ್ವಧಾತುಕವು ಅನುದಾತ್ತ. ಧಾತುವಿನ ಸ್ವರವೇ ನಿಲ್ಲುವುದು. ಹಿಚ (ಪಾ. ಸೂ. ೮-೧-೩೪) ಅಂಗಾಪ್ರಾತಿಲೋಮ್ಯೇ (ಪಾ. ಸೂ. ೮-೧-೩೩) ಎಂಬುದರಿಂದ ಅಪ್ರಾತಿಲೋಮ್ಯೇ ಎಂಬುದು ಅನುವೃತ್ತವಾ

ಗುವುದು. ಅಪ್ರಾತಿಲೋಮ್ಯ ಎಂದರೆ ಆನುಕೂಲ್ಯ ಎಂದರ್ಥ. ಆನುಕೂಲ್ಯ ತೋರುವಾಗ ಹಿ ಎಂಬ ಶಬ್ದ ದಿಂದ ಕೂಡಿದ ತಿಙಂತವು ಅನುದಾತ್ತವಾಗುವುದಿಲ್ಲ ಎಂಬುದರಿಂದ ನಿಷೇಧ ಬರುವುದರಿಂದ ತಿಙ್ಙತಿಙಃ (ಪಾ.ಸೂ. ೮-೧-೨೮) ಎಂಬದರಿಂದ ಅನುದಾತ್ತ ಬರುವುದಿಲ್ಲ.

**ಜೇಷಃ**—ಜಿ ಜಯೇ ಧಾತು. ಇದರ ಮುಂದೆ ಪ್ರಾರ್ಥನಾರೂಪವಾದ **ಲಿಙರ್ಥ**ದಲ್ಲಿ ಲೇಟ್—ಅದಕ್ಕೆ ಮಧ್ಯಮಪುರುಷ ಏಕವಚನ ಸಂಜ್ಞಕವಾದ ಸಿಪ್ ಪಕಾರಕ್ಕೆ **ಹಲಂತ್ಯಮ್** (ಪಾ. ಸೂ. ೧-೩-೩) ಎಂಬುದರಿಂದ ಇತ್ಸಂಜ್ಞೆ. ಇಕಾರಕ್ಕೆ **ಇತಶ್ಚಲೋಪಃಪರಸ್ಮೈಪದೇಷು** (ಪಾ. ಸೂ. ೩-೪-೯೭) ಎಂಬುದರಿಂದ **ಲೋಪ. ಕರ್ತರಿಶಪ್** ಎಂಬುದರಿಂದ ಶಪ್ ವಿಕರಣ ಪ್ರಾಪ್ತವಾದರೆ ಅದನ್ನು ಬಾಧಿಸಿ **ಸಿಬ್ಬಹುಲಂಲೇಟಿ** (ಪಾ ಸೂ. ೩-೧-೩೪) ಎಂಬುದರಿಂದ ಸಿಪ್ ಬರುವುದು. ಜಿ+ಸ್+ಸ್ **ಲೇಟೋಽಡಾಟೌ** (ಪಾ ಸೂ. ೪-೪-೯೪) ಎಂಬುದ ರಿಂಡ ಸಿಪ್ಪಿಗೆ ಅಡಾಗಮ. ಜಿ ಎಂಬುದಕ್ಕೆ **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೯೪) ಎಂಬುದರಿಂದ ಗುಣ. ಜೇಸಸ್ ಪ್ರಥಮ ಸಕಾರಕ್ಕೆ **ಆದೇಶ ಪ್ರತ್ಯಯಯೋಃ** (ಪಾ.ಸೂ. ೮-೩-೫೧) ಎಂಬುದ ರಿಂದ ಷತ್ವ ರುತ್ವ ವಿಸರ್ಗಗಳು ಬಂದರೆ ಜೇಷಃ ಎಂದಾಗುವುದು. ಆಗಮವು ಅನುದಾತ್ತವಾದ್ದರಿಂದ ಧಾತುಸ್ವರ ಮಾತ್ರ ನಿಲ್ಲುವುದು.

**ಸ್ವರ್ವತೀಃ**—ಸ್ವಃ ಅಸಾಮಸ್ತಿ ಎಂದು ವಿಗ್ರಹಮಾಡಿದರೆ ಸ್ವರ್ ಶಬ್ದದ ಮುಂದೆ **ತದಸ್ಯಾಸ್ತ್ಯಸ್ಮಿನ್ನಿತಿಮತುಪ್** (ಪಾ. ಸೂ. ೫-೨-೯೪ ) ಎಂಬುದರಿಂದ ಮತುಪ್. ಮತುಪ್ಪಿನ ಮಕಾರಕ್ಕೆ ಸ್ವರ್ ಶಬ್ದವು ರೇಫಾಂತವಾದ್ದರಿಂದ **ಛಂದಸೀರಃ** (ಪಾ. ಸೂ. ೮-೨-೧೫) ,ಎಂಬುದರಿಂದಲೋ ಸ್ವರ್ ಶಬ್ದವು ಅದುಪಧವಾದ್ದರಿಂದ **ಮಾದುಪಧಾಯಾಶ್ಚ ಮತೋರ್ವೋಽಯವಾದಿಭ್ಯಃ** (ಪಾ. ಸೂ. ೮-೨-೯) ಎಂಬುದರಿಂದಲೋ ವಕಾರ ಸ್ವರ್ವತ್ ಎಂದಾಗುವುದು. **ಉಗಿತಶ್ಚ** ( ಪಾ. ಸೂ. ೪-೧-೬ ) ಎಂಬುದರಿಂದ ಙೀಪ್ ಬಂದರೆ ಸ್ವರ್ವತೀ ಎಂದಾಗುವುದು. ಮತುಪ್, ಙೀಪ್ ಎರಡೂ ಪಿತ್ತಾದ್ದರಿಂದ ಅನುದಾತ್ತ. **ನ್ಯಙ್ಸ್ವರೌ ಸ್ವರಿತೌ** (ಫಿ. ಸೂ. ೭೪) ನ್ಯಙ್, ಸ್ವರ್ ಈ ಎರಡು ಶಬ್ದಗಳು ಸ್ವರಿತಗಳಾಗುವವು ಎಂಬುದರಿಂದ ಸ್ವರ್ ಎಂಬುದಕ್ಕೆ ಸ್ವರಿತಸ್ವರ ಬರುವುದು. ಸಂಹಿತಾಕಾಲದಲ್ಲಿ **ಸ್ವರಿತಾತ್ಸಂಹಿತಾಯಾಮನುದಾತ್ತಾನಾಂ** (ಪಾ. ಸೂ. ೧-೨-೩೯) ಸಂಹಿತಾ ಕಾಲದಲ್ಲಿ ಸ್ವರಿತದ ಮುಂದೆ ಇರುವ ಅನುದಾತ್ತಗಳಿಗೆ ಏಕಶ್ರುತಿ (ಪ್ರಚಯ) ಬರುವುದು ಎಂಬುದರಿಂದ ಅನು ದಾತ್ತಗಳು ಪ್ರಚಯಗಳಾಗುವವು. ಸ್ವರ್ ಎಂಬಲ್ಲಿ ಸ್ವರಿತಸ್ವರವೇ ನಿಲ್ಲುವುದು.

**ಅಪಃ**—**ಊಡಿದಮ್ಪದಾದ್ಯಪ್ಪುಮ್ರೈದ್ಯುಭ್ಯಃ** (ಪಾ ಸೂ. ೬-೧-೧೭೧) ಎಂಬುದರಿಂದ ಅಪ್ ಶಬ್ದದ ಮುಂದೆ ಇರುವ ಶಸ್ ವಿಭಕ್ತಿಯು ಉದಾತ್ತವಾಗುವುದು. ಧೂನುಹಿ ಧೂಞ್ ಕಂಪನೇ ಧಾತುಃ. ಇದರ ಮುಂದೆ ಲೋಟ್ ಅದಕ್ಕೆ ಮಧ್ಯಮಪುರುಷ ಏಕವಚನ ಸಿಪ್. **ಸೇರ್ಹ್ಯಪಿಚ್ಚ** (ಪಾ. ಸೂ. ೩-೪-೮೭) ಸಿಗೆ ಹಿ ಆದೇಶ ಧೂ+ಹಿ ಸ್ವಾದಿಭ್ಯಃಶ್ನುಃ ಎಂಬುದರಿಂದ ಶ್ನು ವಿಕರಣ ಧೂನುಹಿ. **ಉತಶ್ಚಪ್ರತ್ಯಯಾದ ಸಂಯೋಗ-ಪೂರ್ವಾತ್** (ಪಾ, ಸೂ. ೬-೪-೧೦೬) ಸಂಯೋಗಪೂರ್ವಕವಲ್ಲದ ಪ್ರತ್ಯಯ ಸಂಬಂಧಿಯಾದ ಹ್ರಸ್ವ ಉಕಾರದ ಮುಂದೆ ಇರುವ ಹಿಗೆ ಲುಕ್ ಬರುವುದು ಎಂಬುದರಿಂದ ಹಿಗೆ ಲುಕ್ ಪ್ರಾಪ್ತವಾಗುವುದು. ಆದರೂ **ಸರ್ವೇವಿಧ-ಯಶ್ಛಂದಸಿ ವಿಕಲ್ಪ್ಯಂತೇ** (ಪರಿಭಾ. ೩೫ ) ಎಂಬುದರಿಂದ ಇಲ್ಲಿ ಬರುವುದಿಲ್ಲ, ಧೂನುಹಿ ಎಂದಾಗುವುದು ||೮||

॥ ಸಂಹಿತಾಪಾಠಃ ॥

ಆಶ್ರುತ್ಕರ್ಣ ಶ್ರುಧೀ ಹವಂ ನೂ ಚಿದ್ದಧಿಷ್ವ ಮೇ ಗಿರಃ ।
ಇಂದ್ರ ಸ್ತೋಮಮಿಮಂ ಮಮ ಕೃಷ್ವಾ ಯುಜಶ್ಚಿದಂತರಂ ॥೯॥

॥ ಪದಪಾಠಃ ॥

ಆಶ್ರುತ್ಽಕರ್ಣ । ಶ್ರುಧಿ । ಹವಂ । ನು । ಚಿತ್ । ದಧಿಷ್ವ । ಮೇ । ಗಿರಃ ॥
ಇಂದ್ರ । ಸ್ತೋಮಂ । ಇಮಂ । ಮಮ । ಕೃಷ್ವ । ಯುಜಃ । ಚಿತ್ ।
ಅಂತರಂ ॥ ೯ ॥

॥ ಸಾಯಣಭಾಷ್ಯಂ ॥

ಹೇ ಆಶ್ರುತ್ಕರ್ಣ ಸರ್ವತಃ ಶ್ರೋತಾರೌ ಕರ್ಣೌ ಯಸ್ಯ ತಾದೃಗಿಂದ್ರ ಹವಮಸ್ಮದೀಯಮಾಹ್ವಾನಂ ನು ಕ್ಷಿಪ್ರಂ ಶ್ರುಧಿ । ಶೃಣು । ಮೇ ಮಮ ಹೋತುರ್ಗಿರಶ್ಚಿತ್ಸ್ತುತೀರಪಿ ದಧಿಷ್ವ । ಚಿತ್ತೇ ಧಾರಯ । ಕಿಂಚ ಮಮ ಮದೀಯಮಿಮಂ ಸ್ತೋಮಂ ಸ್ತೋತ್ರರೂಪಂ ವಾಕ್ಸಮೂಹಂ ಯುಜಶ್ಚಿತ್ಸ್ವಕೀಯಸಖ್ಯುರಪ್ಯಂತರಂ ಕೃಷ್ವ । ಆಸನ್ನಂ ಕುರು । ಯಥಾ ವಚನಂ ತಸ್ಯ ಪ್ರಿಯಂ ಮನ್ಯಸೇ ತದ್ವದಸ್ಮದೀಯಸ್ತುತಿಷ್ವಪಿ ಪ್ರೀತಿಂ ಕುರ್ವಿತ್ಯರ್ಥಃ ॥ ಆಶ್ರುತ್ಕರ್ಣ । ಆ ಸಮಂತಾಚ್ಛೃಣುತ ಇತ್ಯಾಶ್ರುತ್ । ಕ್ವಿಪ್ । ಹ್ರಸ್ವಸ್ಯ ತುಕ್ । ಪಾ. ೬-೧-೭೧ । ತಾದೃಶೌ ಕರ್ಣೌ ಯಸ್ಯ । ಆಮಂತ್ರಿತಸ್ಯ ಚೇತ್ಯಾದ್ಯುದಾತ್ತತ್ವಂ । ಶ್ರುಧೀ । ಶ್ರು ಶ್ರವಣೇ । ಲೋಟೋ ಹಿಃ । ಶ್ರುವಃ ಶೃ ಚ । ಪಾ. ೩-೧-೭೪ । ಇತಿ ವಿಹಿತಶ್ನೋರ್ಬಹುಲಂ ಛಂದಸೀತಿ ಲುಕ್ । ತತ್ಸನ್ನಿಯೋಗಶಿಷ್ಟತ್ವಾಚ್ಛೃಭಾವೋಽಪಿ ನಿವರ್ತತೇ । ಶ್ರು ಶೃಣುಪೄಕೃವೃಭ್ಯಶ್ಛಂದಸಿ । ಪಾ. ೬-೪-೧೦೨ । ಇತಿ ಹೇರ್ಧಿರಾದೇಶಃ ಸತಿ ಶಿಷ್ಟತ್ವಾತ್ಪ್ರತ್ಯಯಸ್ವರಃ । ಆಮಂತ್ರಿತಂ ಪೂರ್ವಮವಿದ್ಯಮಾನವತ್ । ಪಾ. ೮-೧-೭೨ । ಇತ್ಯವಿದ್ಯಮಾನವತ್ತ್ವೇನ ಪದಾದಪರತ್ವಾತ್ತಿಙ್ಙತಿಙ ಇತಿ ನಿಘಾತೋ ನ ಭವತಿ । ಸಂಹಿತಾಯಾಮನ್ಯೇಷಾಮಪಿ ದೃಶ್ಯತ ಇತಿ ದೀರ್ಘಃ । ಹವಂ । ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ । ಬಹುಲಂ ಛಂದಸೀತ್ಯನೈಮಿತ್ತಿಕೇ ಸಂಪ್ರಸಾರಣೇ ಕೃತೇ ಪಶ್ಚಾದುಕಾರಾಂತತ್ವೇನ ಋದೋರಪ್ । ಪಾ. ೩-೩-೫೭ । ಇತ್ಯಪ್ಪ್ರತ್ಯಯಃ । ಅಪಃ ಪಿತ್ತ್ವಾದ್ಧಾತುಸ್ವರಃ । ನು । ಸಂಹಿತಾಯಾಮೃಚಿ ತುನುಘಮಕ್ಷುತಙ್ಕುತ್ರೋರುಷ್ಯಾಣಾಂ । ಪಾ. ೬-೩-೧೩೩ । ಇತಿ ದೀರ್ಘಃ । ಚಿತ್ । ಚಾದಿರನುದಾತ್ತಃ । ದಧಿಷ್ವ । ದಧಾತೇರ್ಲೋಟ್ । ಥಾಸಃ ಸೇ । ಸವಾಭ್ಯಾಂ ವಾಮೌ । ಪಾ. ೩-೪-೯೧ । ಶಪಃ ಶ್ಲುಃ । ಅಭ್ಯಾಸಸ್ಯ ಹ್ರಸ್ವತ್ವಾದಿ । ಛಂದಸ್ಯುಭಯಥೇತ್ಯಾರ್ಧಧಾತುಕಸ್ಯಾಪಿ ಸ್ವೇಕಾರಾದಿಡಾಗಮಃ । ಆಕಾರಲೋಪಃ । ನಿಘಾತಃ । ಮಮ । ತವಮಮೌ ಙಸಿ ।

ಪಾ. ೬-೨-೯೬ | ಇತ್ಯನೇನ ಮಪರ್ಯಂತಸ್ಯ ಮವಾದೇಶಃ | ಪ್ರಾತಿಪದಿಕಸ್ವರೇಣಾಂತೋದಾತ್ತತ್ವೇ ಪ್ರಾಪ್ತೇ ಯುಷ್ಮದಸ್ಮದೋರ್ಙಸಿ | ಪಾ- ೬-೧-೨೧೧ | ಇತ್ಯಾದ್ಯುದಾತ್ತತ್ವಂ| ಕೃಷ್ವ | ಡುಕೃಞ್ ಕರಣೇ ಲೋಟ್ | ಥಾಸಃ ಸೇ | ಸವಾಭ್ಯಾಂ ವಾಮೌ | ಶಪೋ ಬಹುಲಂ ಛಂದಸೀತಿ ಲುಕ್ | ಸತಿ ಶಿಷ್ಟತ್ವಾ-ತ್ಪ್ರತ್ಯಯಸ್ವರಃ | ಪಾದಾದಿತ್ವಾನ್ನ ನಿಘಾತಃ | ಯುಜಃ | ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ | ಅಂತರಂ | ವೃಷಾದಿತ್ವಾದಾದ್ಯುದಾತ್ತಃ ||

॥ ಪ್ರತಿಪದಾರ್ಥ ॥

(ಹೇ) ಅತ್ರುತ್ಕರ್ಣ—ಎಲ್ಲವನ್ನೂ ಕೇಳಲು ಸಾಮರ್ಥ್ಯವುಳ್ಳ ಕಿವಿಗಳಿರುವ ಎಲೈ ಇಂದ್ರನೇ | ಹವಂ—ನಮ್ಮ ಆಹ್ವಾನವನ್ನು (ನಾವು ನಿನ್ನನ್ನು ಕರೆಯುವುದನ್ನು) | ನು—ಜಾಗ್ರತೆಯಾಗಿ | ಶ್ರುಧಿ—ಕೇಳು | ಮೇ—(ಹೋತೃವಾದ) ನನ್ನ | ಗಿರಶ್ಚಿತ್—(ಸ್ತೋತ್ರರೂಪವಾದ) ವಾಕ್ಯಗಳನ್ನೂ ಸಹ | ದಧಿಷ್ವ—ಚಿತ್ತದಲ್ಲಿ ಧರಿಸು | (ಮತ್ತು) ಮಮ—ನನ್ನ (ಎಂದರೆ ನಾನು ಮಾಡುವ) | ಇಮಂ ಸ್ತೋಮಂ—ಈ ಸ್ತೋತ್ರವನ್ನು | ಅಂತರಂ ಯುಜಶ್ಚಿತ್ಕೃಷ್ವ—ನಿನ್ನ ಸ್ನೇಹಿತನ ವಾಕ್ಯದಂತೆ ಪ್ರಿಯವನ್ನಾಗಿ ಪರಿಗಣಿಸು ||

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಕಿವಿಗಳು ಎಲ್ಲವನ್ನೂ (ಎಲ್ಲಾ ಕಡೆಯಲ್ಲಿಯೂ) ಕೇಳಲು ಸಮರ್ಥವಾಗಿರುವವು. ಆದುದರಿಂದ ನಾವು ಮಾಡುವ ಆಹ್ವಾನವನ್ನು (ನಾವು ನಿನ್ನನ್ನು ಕರೆಯುವುದನ್ನು) ಬೇಗನೆ ಕೇಳು; ನನ್ನ ಮಾತನ್ನು ಮನಸ್ಸಿನಲ್ಲಿ ನೆನಪಿಡು; ಮತ್ತು ನಾನು ಮಾಡುವ ಈ ಸ್ತೋತ್ರವನ್ನು ಅಥವಾ ಸ್ತೋತ್ರರೂಪವಾದ ವಾಕ್ಯಗಳನ್ನು ನಿನ್ನ ಸ್ನೇಹಿತನ ಮಾತಿನಂತೆ ಅತಿ ಪ್ರಿಯವಾದವುಗಳೆಂದು ಭಾವಿಸು.

## English Translation.

O Indra, whose ears hear all things, listen quickly to my invocation; hold my praises (in four heart); keep near this my hymn as it were the words of a friend.

॥ ವಿಶೇಷವಿಷಯಗಳು ॥

ಅತ್ರುತ್ಕರ್ಣ—ಆ ಸಮಂತಾತ್ ಶೃಣುತ ಇತ್ಯಾಶ್ರುತ್ | ತಾದೃಶೌ ಕರ್ಣೌ ಯಸ್ಯ ಸಃ | ಸರ್ವತಃ ಶ್ರೋತಾರೌ ಕರ್ಣೌ ಯಸ್ಯ ತಾದೃಗಿಂದ್ರ—ಆಶ್ರುತ್ ಎಂದರೆ ಎಲ್ಲಾ ಕಡೆಯಲ್ಲಿಯೂ ಸರ್ವ ಸ್ಥಳಗಳಲ್ಲಿಯೂ ಕೇಳುವ ಎಂದು. ಇಂತಹ ಕರ್ಣಗಳುಳ್ಳವನಿಗೆ ಅಶ್ರುತ್ಕರ್ಣ ಎಂದು ಹೆಸರು. ನಾವು ಮಾಡುವ ಸ್ತೋತ್ರವನ್ನೂ ನಮ್ಮ ವಾಕ್ಯಗಳನ್ನೂ ಇಂದ್ರನು ಎಲ್ಲಿದ್ದರೂ ಕೇಳುವ ಸಾಮರ್ಥವುಳ್ಳವನೆಂದಭಿಪ್ರಾಯವು.

**ಶ್ರುಧಿ, ಸು, ಕೃಷ್ವ**— ಈ ಶಬ್ದಗಳ ಅಂತ್ಯಾಕ್ಷರವು ಛಂದಸ್ಸಿನ ಅನುಕೂಲಕ್ಕಾಗಿ ಸಂಹಿತಾಪಾಠದಲ್ಲಿ ದೀರ್ಘವಾಗಿರುವುದು.

**ದಧಿಷ್ವ ಮೇ ಗಿರಃ**— ನಮ್ಮ ಮಾತುಗಳನ್ನು ಅಥವಾ ನಮ್ಮ ಪ್ರಾರ್ಥನೆಯನ್ನು ನಿನ್ನ ಚಿತ್ತದಲ್ಲಿ ಧರಿಸು ಎಂದರೆ ನಾವು ಮಾಡುವ ಪ್ರಾರ್ಥನೆಯನ್ನು ಗಮನವಿಟ್ಟು ಕೇಳಿ ಅದನ್ನು ಮರೆಯದಂತೆ ಜ್ಞಾಪಕದಲ್ಲಿಡು ಎಂದರ್ಥವು.

**ಯುಜಶ್ಚಿದಂತರಂ**— ಸ್ನೇಹಿತರ ಮಾತಿನಂತೆ ಪ್ರಿಯವಾದುದನ್ನಾಗಿ ಎಂದು ಭಾಷ್ಯಕಾರರು ಅರ್ಥ ಮಾಡಿರುವರು. ಇಲ್ಲಿ ಸ್ನೇಹಿತರೆಂಬ ಪದವನ್ನು ಸೂಚಿಸುವ ಯಾವ ಶಬ್ದವೂ ಇಲ್ಲದಿದ್ದರೂ ಅರ್ಥವು ಹೊಂದುವಂತೆ ಭಾಷ್ಯಕಾರರು ಸಖ್ಯುಃ ಎಂಬ ಶಬ್ದವನ್ನು ಅಧ್ಯಾಹಾರ ಮಾಡಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಆಶ್ರುತ್ಕರ್ಣ**— ಆ ಸಮಂತಾತ್ (ಸರ್ವತೋಮುಖವಾಗಿ) ಶೃಣಾತ (ಕೇಳಿ) ಇತಿ ಆಶ್ರುತ್— ಆಙ್ ಪೂರ್ವಕವಾದ 'ಶ್ರುಶ್ರವಣೇ' ಧಾತುವಿನ ಮುಂದೆ **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಕ್ವಿಪ್ ನಲ್ಲಿ ಎಲ್ಲ ವರ್ಣಗಳಿಗೂ **ಲೋಪ**— ಆಶ್ರು ಎಂದಿರುವಾಗ **ಪ್ರತ್ಯಯಲೋಪೇ ಪ್ರತ್ಯಯಲಕ್ಷಣಮ್** (ಪಾ. ಸೂ. ೧-೧-೬೨) ಎಂಬ ಪ್ರತ್ಯಯಲಕ್ಷಣದಿಂದ ಕ್ವಿಪ್ ಪ್ರತ್ಯಯ ಪರದಲ್ಲಿದ್ದಂತೆ ಆಗುವುದು. ಆದ್ದರಿಂದ **ಹ್ರಸ್ವಸ್ಯಪಿತಿಕೃತಿತುಕ್** (ಪಾ. ಸೂ. ೬-೧-೭೧) ಪಿತ್ತಾದ ಕೃತ್ಪ್ರತ್ಯಯ ಪರದಲ್ಲಿರುವಾಗ ಹ್ರಸ್ವಕ್ಕೆ ತುಕ್ ಆಗಮ ಬರುವುದು ಎಂಬುದರಿಂದ ತುಕ್ ಬರುವುದು. ಆಶ್ರುತ್ ಎಂದಾಗುವುದು. ಆಶ್ರುತೌ ಕರ್ಣೌ ಯಸ್ಯ ಸಃ ಎಂದು ಬಹುವ್ರೀಹಿ ಸಮಾಸ ಮಾಡಿದರೆ ಆಶ್ರುತ್ಕರ್ಣಃ ತಸ್ಯ ಸಂಬುದ್ಧಿಃ, ಆಶ್ರುತ್ಕರ್ಣ, ಇದು ಆಮಂತ್ರಿತ. ಆದ್ದರಿಂದ **ಆಮಂತ್ರಿತಸ್ಯಚ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತ.

**ಶ್ರುಧೀ**— ಶ್ರುಶ್ರವಣೇ ಧಾತು. ಇದರ ಮುಂದೆ ಲೋಟ್ ಪರಸ್ಮೈಪದ ಮಧ್ಯಮಪುರುಷ ಏಕವಚನ ಸಿಪ್. ಸಿಪ್ಪಿಗೆ ಹಿ ಆದೇಶ, ಶ್ರು+ಹಿ. ಶ್ರುವಃಶೃಚ (ಪಾ. ಸೂ. ೩-೧-೭೪) ಶ್ರುಗೆ ಶೃ ಆದೇಶ ಬರುವುದು. ಶಬ್ವಿಷಯದಲ್ಲಿ ಶ್ನು ಎಂಬ ವಿಕರಣ ಪ್ರತ್ಯಯವೂ ಬರುವುದು ಎಂಬುದರಿಂದ ಬಂದ ಶ್ನು ವಿಕರಣಕ್ಕೆ ಬಹುಲಂ ಛಂದಸಿ (ಪಾ. ಸೂ. ೨-೪-೭೩) ಎಂಬುದರಿಂದ ಲುಕ್, ಹೀಗೆ ವಿಕರಣ ಶ್ನು ಪ್ರತ್ಯಯ ನಿವೃತ್ತವಾದರೆ ತತ್ಸನ್ನಿಯೋಗಶಿಷ್ಟವಾದ ಶೃ ಆದೇಶವೂ ಸನ್ನಿಯೋಗಶಿಷ್ಟಾನಾಮನ್ಯತರಾಪಾಯೇ ಉಭಯೋರಪ್ಯಪಾಯಃ ( ಪರಿ. ೮೬ ) ಎಂಬುದರಿಂದ ನಿವೃತ್ತವಾಗುವುದು. **ಶ್ರು ಶೃಣು ಪೃಕೃವೃಭ್ಯಶ್ಛಂದಸಿ** (ಪಾ. ಸೂ ೬-೪-೧೦೨) ಎಂಬುದರಿಂದ ಹಿಗೆ ಧಿ ಆದೇಶ. ಶ್ರುಧಿ ಇಲ್ಲಿ **ಸತಿಶಿಷ್ಟ**ವಾದ್ದರಿಂದ ಪ್ರತ್ಯಯಸ್ವರ ಆದ್ಯುದಾತ್ತ ನಿಲ್ಲುವುದು. ಯದ್ಯಪಿ ಆಶ್ರುತ್ಕರ್ಣ ಎಂಬ ಪದದಮುಂದೆ ಶ್ರುಧಿ ಎಂಬುದು ಇರುವುದು. ಆದ್ದರಿಂದ **ತಿಙ್ಙತಿಙಃ** ಎಂಬುದರಿಂದ ಅನುದಾತ್ತ ಪ್ರಾಪ್ತವಾಗುವುದು ಆದರೂ ಆಶ್ರುತ್ಕರ್ಣ ಎಂಬುದು ಆಮಂತ್ರಿತ ಆದ್ದರಿಂದ **ಆಮಂತ್ರಿತಂಪೂರ್ವಮವಿದ್ಯಮಾನವತ್** (ಪಾ. ಸೂ. ೮-೧-೭) ಎಂಬುದರಿಂದ ಅದಕ್ಕೆ ಅವಿದ್ಯಮಾನವದ್ಭಾವ ಬರುವುದು. ಆದಕಾರಣ ಪದಾತ್ಪರತ್ವ ಸಂಭವಿಸುವುದಿಲ್ಲ ಆದ್ದರಿಂದ ಅನುದಾತ್ತ ಬರುವುದಿಲ್ಲ. ಸಂಹಿತಾಕಾಲದಲ್ಲಿ **ಅನ್ಯೇಷಾಮಪಿದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ದೀರ್ಘ ಬರುವುದು ಶ್ರುಧೀ ಎಂದಾಗುವುದು.

**ಹವವಮ್**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು, **ಬಹುಲಂ ಛಂದಸಿ** (ಪಾ. ಸೂ. ೬-೧-೩೪) ಎಂಬುದರಿಂದ ಅನೈಮಿತ್ತಿಕವಾಗಿ ಸಂಪ್ರಸಾರಣ ಬರುವುದು **ಸಂಪ್ರಸಾರಣಾಚ್ಚ** (ಪಾ. ಸೂ. ೬-೧-೧೦೮) ಎಂಬುದರಿಂದ **ಪೂರ್ವರೂಪ**=ಹು ಎಂದಾಗುವುದು. ಈಗ ಉಪರ್ಣಾಂತವಾದ್ದರಿಂದ **ಋದೋರಪ್** (ಪಾ.ಸೂ. ೩-೩-೫೭) ಎಂಬುದರಿಂದ ಅಪ್ ಪ್ರತ್ಯಯ, ಗುಣ ಅವಾದೇಶಗಳು ಬಂದರೆ ಹವ ಎಂದಾಗುವುದು. ಅಪ್ ಪ್ರತ್ಯಯವು ಪಿತ್ತಾದ್ದರಿಂದ ಅನುದಾತ್ತ. ಇದರ ಮುಂದೆ ದ್ವಿತೀಯಾ ಏಕವಚನ ಅಮ್ ಪ್ರತ್ಯಯವನ್ನಿಟ್ಟರೆ **ಅಮಿಪೂರ್ವಃ** (ಪಾ. ಸೂ. ೬-೧-೨೩) ಎಂಬುದರಿಂದ ಪೂರ್ವರೂಪ ಬಂದು ಹವವಮ್ ಎಂದು ನಿಷ್ಪನ್ನವಾಗುವುದು.

**ನು**—ಸಂಹಿತಾಕಾಲದಲ್ಲಿ ‘ ಋಚಿ ತು, ನು, ಘ, ಮಕ್ಷು ತಜ್, ಕು, **ತ್ರೋರುಷ್ಯಾಣಾಮ್** (ಪಾ.ಸೂ. ೬-೩-೧೩೩) ಋಕ್ಕಿನಲ್ಲಿ ಇವುಗಳಿಗೆ ದೀರ್ಘ ಬರುವುದು ಎಂಬುದರಿಂದ ದೀರ್ಘಬಂದರೆ ನೂ ಎಂದಾಗುವುದು.

**ಚಿತ್**—ಇದು ಚಾದಿಗಣದಲ್ಲಿರುವುದು. ಆದುದರಿಂದ ಚಾದಯೋನುದಾತ್ತಾಃ (ಫಿ. ಸೂ. ೮೪) ಎಂಬುದರಿಂದ ಅನುದಾತ್ತ

**ದಧಿಷ್ವ**—ಡು ಧಾಞ್ ಧಾರಣ **ಪೋಷಣಯೋಃ**. ಧಾತು. ಜುಹೋತ್ಯಾದಿಯಲ್ಲಿರುವುದು. ಇದರ ಮುಂದೆ **ಲೋಟ್** ಆತ್ಮನೇಪದ ಮಧ್ಯಮಪುರುಷ **ಥಾಸ್**, ಥಾಸ್‌ಗೆ ಥಾಸಸ್ಸೇ (ಪಾ. ಸೂ. ೩-೧-೮೦) ಎಂಬುದರಿಂದ ಸೇ ಆದೇಶ, **ಸವಾಭ್ಯಾಂವಾಮೌ** (ಪಾ. ಸೂ. ೩-೪-೯೧) ಎಂಬುದರಿಂದ ಏಕಾರಕ್ಕೆ ವಕಾರ, **ಕರ್ತರಿಶಪ್** (ಪಾ.ಸೂ. ೩-೧-೬೮) ಎಂಬುದರಿಂದ ಶಪ್‌ವಿಕರಣ. ಅದಕ್ಕೆ **ಜುಹೋತ್ಯಾದಿಭ್ಯಃ ಶ್ಲುಃ** (ಪಾ. ಸೂ. ೭-೪-೭೮) ಎಂಬುದರಿಂದ ಶ್ಲು. **ಶ್ಲೌ** (ಪಾ. ಸೂ. ೬-೧-೧೦) ಎಂಬುದರಿಂದ ದ್ವಿತ್ವ. ಧಾ ಧಾ+ಸ್ವ ಅಭ್ಯಾಸಕ್ಕೆ **ಹ್ರಸ್ವಃ** (ಪಾ. ಸೂ ೭-೪-೫೯) ಅಭ್ಯಾಸದಲ್ಲಿರುವ ಅಚ್ಚಿಗೆ ಹ್ರಸ್ವ ಬರುವುದು ಎಂಬುದರಿಂದ ಹ್ರಸ್ವ. **ಅಭ್ಯಾಸೇ ಚರ್ಚ** (ಪಾ.ಸೂ. ೮-೪-೫೪) ಅಭ್ಯಾಸದಲ್ಲಿರುವ ಝಶ್ ವರ್ಣಗಳಿಗೆ ಜಶ್ತ್ವವೂ ಖಯ್ ವರ್ಣಗಳಿಗೆ ಚರ್ತ್ವವೂ ಬರುವುದು. ಎಂಬುದರಿಂದ ಅಭ್ಯಾಸದಲ್ಲಿರುವ ಧಕಾರಕ್ಕೆ ದಕಾರ. ದ ಧಾ+ಸ್ವ. ಈಗ **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಧಾತ್ವಧಿಕಾರದಲ್ಲಿ ವಿಹಿತವಾದ ಪ್ರತ್ಯಯವು ಛಂದಸ್ಸಿನಲ್ಲಿ ಸಾರ್ವಧಾತುಕ ಸಂಜ್ಞೆಯನ್ನೂ ಆರ್ಧಧಾತುಕ ಸಂಜ್ಞೆಯನ್ನೂ ಹೊಂದುವುದು ಎಂಬುದರಿಂದ ಸ್ವ ಎಂಬುದಕ್ಕೆ ಆರ್ಧಧಾತುಕ ಸಂಜ್ಞೆ ಬರುವುದು. ಆದ್ದರಿಂದ **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂಬುದರಿಂದ ಇಡಾಗಮ ದಧಾ+ಇಸ್ವ ಪೂರ್ವೋಕ್ತ ಸೂತ್ರದಿಂದ ಸಾರ್ವಧಾತುಕಸಂಜ್ಞೆಯೂ ಇರುವುದರಿಂದ **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಶ್ನಾ ಪ್ರತ್ಯಯ ಅಭ್ಯಸ್ತ ಇವುಗಳ ಆಕಾರಕ್ಕೆ ಕಿತ್ತು ಅಥವಾ ಙಿತ್ತು ಆದ ಸಾರ್ವಧಾತುಕ ಪರದಲ್ಲಿರುವಾಗ ಲೋಪ ಬರುವುದು ಎಂಬುದರಿಂದ ಆಕಾರಕ್ಕೆ **ಲೋಪ, ಆದೇಶ ಪ್ರತ್ಯಯಯೋಃ** (ಪಾ. ಸೂ. ೮-೩-೫೯) ಎಂಬುದರಿಂದ ಸ್ವ ಎಂಬುದರ ಸಕಾರಕ್ಕೆ ಷಕಾರ. ದಧಿಷ್ವ ಎಂದಾಗುವುದು. **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಅನುದಾತ್ತ.

**ಮಮ**—ಅಸ್ಮದ್ ಶಬ್ದದ ಮುಂದೆ ಷಷ್ಠೀವಿಭಕ್ತಿ ಏಕವಚನ ಙಸ್ ಪ್ರತ್ಯಯ. ಅಸ್ಮದ್+ಙಸ್ **ತವ-ಮಮೌಙಸಿ** (ಪಾ. ಸೂ. ೭-೨-೯೬) ಙಸ್ ಪ್ರತ್ಯಯ ಪರದಲ್ಲಿರುವಾಗ ಯುಷ್ಮದ್ ಅಸ್ಮದ್ ಶಬ್ದಗಳ ಮಪರ್ಯಂತಕ್ಕೆ ಕ್ರಮವಾಗಿ ತವ ಮಮ ಎಂಬ ಆದೇಶಗಳು ಬರುವುವು ಎಂಬುದರಿಂದ ಅಸ್ಮ ಎಂಬುದಕ್ಕೆ ಮಮ ಎಂಬ ಆದೇಶ. ಮಮ+ಅದ್+ಅಸ್. **ಅತೋಗುಣೇ** (ಪಾ. ಸೂ. ೬-೧-೯೭) ಎಂಬುದರಿಂದ ಮಮ+

ಅದ್ ಎಂಬಲ್ಲಿ ಎರಡು ಅಕಾರಗಳಿಗೂ ಪರರೂಪ, ಮಮದ್+ಅಶ್ **ಯುಷ್ಮದಸ್ಮದ್ಭ್ಯಾಂಙಸೋಽಶ್** (ಪಾ.ಸೂ. ೭-೧-೨೭) ಯುಷ್ಮದ್ ಅಸ್ಮದ್ ಶಬ್ದಗಳ ಮುಂದೆ ಇರುವ ಙಸ್‌ಗೆ ಅಶ್ ಆದೇಶ ಬರುವುದು ಎಂಬುದರಿಂದ ಙಸ್‌ಗೆ ಅಶ್ ಆದೇಶ. ಅಶ್ಯ ಶಿತ್ತ್ವಾದ್ದರಿಂದ ಅನೇಕಾಲ್ ಶಿತ್ಸರ್ವಸ್ಯ ಎಂಬುದರಿಂದ ಸರ್ವಸ್ಥಾನದಲ್ಲಿಯೂ ಬರುವುದು. ಮಮದ್+ಅ. **ಶೇಷೇಲೋಪಃ** (ಪಾ. ಸೂ. ೭-೨-೯೦) ಎಂಬುದರಿಂದ ಟಿಲೋಪ ಪಕ್ಷದಲ್ಲಿ ಅದ್‌ಗೆ ಲೋಪ, ಮಮ ಎಂದಾಗುವುದು, ಶೇಷೇ ಲೋಪಃ ಎಂಬುದರಿಂದ ಅಂತ್ಯಲೋಪ ಬರುವುದು ಎಂಬ ಪಕ್ಷದಲ್ಲಿ, ದಕಾರಕ್ಕೆ ಲೋಪ ಬಂದರೆ ಮಮ+ಅ ಎಂದಿರುವಾಗ ಪರರೂಪ ಬಂದರೆ ಮಮ ಎಂದಾಗುವುದು. ಇಲ್ಲಿ ಮಮ+ಅ ಎಂದಿರುವಾಗ **ಟಾಙಸಿಙಸಾಮಿನಾತ್ಸ್ಯಾಃ** (ಪಾ ಸೂ. ೭-೧-೧೨) ಹ್ರಸ್ವ ಅಕಾರಾಂತವಾದ ಅಂಗದ ಮುಂದೆ ಇರುವ ಟಾ, ಙಸಿ, ಙಸ್ ಇವುಗಳಿಗೆ ಕ್ರಮವಾಗಿ ಇನ್ ಆತ್, ಸ್ಯ ಎಂಬ ಆದೇಶಗಳು ಬರುವುವು ಎಂಬುದರಿಂದ ಅಶ್-ನ ಅಕಾರಕ್ಕೆ ಸ್ಯ ಆದೇಶ ಬರಲಿ ಎಂದು ಕೇಳಲು ಅವಕಾಶವಿರುವುದು. ಸ್ಯಾದೇಶವನ್ನು ಒಪ್ಪಿದರೆ ಅಶ್ ವಿಧಾನವು ವ್ಯರ್ಥವಾಗುವುದು ಎಂದು ಹೇಳಲಾಗುವುದಿಲ್ಲ. **ಯೋಽಚಿ** (೭-೨-೮೯) ಎಂಬುದರಿಂದ ಬರುವ ಯತ್ವ ವಾರಣ ಮಾಡುವುದರಿಂದ ಅದು ಸಾರ್ಥಕವಾಗುವುದು. ಅಶಾವಿಧಿ ಇಲ್ಲದಿದ್ದರೆ, ಅಙ್ ಎಂಬುದು ಆದೇಶವನ್ನು ಹೊಂದದ ವಿಭಕ್ತಿಯಾಗುವದರಿಂದ ದಕಾರಕ್ಕೆ ಯಾದೇಶ ಬರಬೇಕಾಗುವುದು. ಅಶಾದೇಶ ಬಂದರೆ ಆದೇಶವನ್ನು ಹೊಂದಿದ ವಿಭಕ್ತಿಯಾಗುವುದು. ಆದೇಶವನ್ನು ಹೊಂದದ ವಿಭಕ್ತಿಯಾಗುವುದಿಲ್ಲ. ಆದ್ದರಿಂದ **ಯೋಽಚಿ** (ಪಾ. ಸೂ. ೭-೨-೮೯) ಆದೇಶವನ್ನು ಹೊಂದದ ಅಜಾದಿ ವಿಭಕ್ತಿಯು ಪರದಲ್ಲಿರುವಾಗ ಯುಷ್ಮದ್ ಅಸ್ಮದ್ ಶಬ್ದಗಳಿಗೆ ಯಾದೇಶ ಬರುವುದು ಎಂಬುದರಿಂದ ಯಾದೇಶ ಬರುವುದಿಲ್ಲ. ಹೀಗೆ ಯತ್ವವಾರಣೆಯಿಂದ ಅಶ್ ವಿಧಿಯು ಸಾರ್ಥಕ. ಆದ್ದರಿಂದ ಅಶ್‌ವಿಧಿ ಸಾಮರ್ಥ್ಯದಿಂದ ಸ್ಯ ಆದೇಶ ಬರುವುದಿಲ್ಲವೆಂದು ಹೇಳಲಾಗುವುದಿಲ್ಲ. ಸ್ಯ ಆದೇಶಕ್ಕೆ ಅಶ್ ವಿಧಿಯು ಅಪವಾದವೆಂದೂ ಹೇಳಲಾಗುವುದಿಲ್ಲ ಅಶಾದೇಶ ಕಾಲದಲ್ಲಿ ಸ್ಯಾದೇಶಕ್ಕೆ ಪ್ರಾಪ್ತಿ ಇದ್ದರೆ **ಯೇನನಾಪ್ರಾಪ್ತೇಯೋವಿಧಿರಾರಭ್ಯತೇ ಸ ತಸ್ಯ ಬಾಧಕೋ ಭವತಿ** (ಪರಿಭಾ. ೫೬) ಎಂಬುದರಿಂದ ಬಾಧವು ಬರುತ್ತಿತ್ತು ಮಮದ್+ಙಸ್ ಎಂದಿರುವಾಗ ಪ್ರಕೃತಿಯು ಅದಂತವಾಗುವುದಿಲ್ಲ. ಆದ ಕಾರಣ ಸ್ಯಾದೇಶಕ್ಕೆ ಪ್ರಾಪ್ತಿ ಇಲ್ಲ. ಆದ್ದರಿಂದ ತಾನು ಬರುವಕಾಲದಲ್ಲಿ ಪ್ರಾಪ್ತವಾಗದೇ ಇರುವ ಸ್ಯ ಆದೇಶವನ್ನು ಅಶ್ ವಿಧಿಯು ಬಾಧಿಸಲಾರದು ಆದ್ದರಿಂದ ಸ್ಯಾದೇಶ ಬರಲಿ ಎಂದು ಪೂರ್ವಪಕ್ಷ ಬರಬಹುದು. ಆದರೆ ಇದಕ್ಕೆ ಅವಕಾಶವಿಲ್ಲ. ಯುಷ್ಮದಸ್ಮದ್ಭ್ಯಾಂಙಸೋಶ್ ಎಂಬುದೂ ಅಂಗಾಧಿಕಾರದಲ್ಲಿರುವ ಶಾಸ್ತ್ರ. ಆದ್ದರಿಂದ **ಅಂಗವೃತ್ತೇ ಪುನರ್ವೃತ್ತಾವವಿಧಿಃ** (ಪರಿ. ೯೨) ಒಂದು ಅಂಗಾಧಿಕಾರಶಾಸ್ತ್ರ ಬಂದನಂತರ ಮತ್ತೊಂದು ಅಂಗಾಧಿಕಾರಶಾಸ್ತ್ರ ಬರುವುದಿಲ್ಲ ಎಂಬುದರಿಂದ ಅಶಾದೇಶ ಬಂದನಂತರ ಸ್ಯ ಆದೇಶ ಬರುವುದಿಲ್ಲ ಎಂದು ಸಮಾಧಾನ ಹೇಳಬಹುದು, ಅಂಗವೃತೇ ಪುನರ್ವೃತ್ತಾವವಿಧಿಃ ಇದಕ್ಕೆ ಒಂದು ಅಂಗಾಧಿಕಾರೀಯಶಾಸ್ತ್ರ ಬಂದನಂತರ ಮತ್ತೊಂದು ಅಂಗಾಧಿಕಾರೀಯಶಾಸ್ತ್ರ ಬರುವುದಿಲ್ಲ ಎಂದು ಅರ್ಥವಲ್ಲ. ಅಂಗ ಶಬ್ದವು ಅಂಗೋದ್ದೇಶ್ಯಕವಾದ ಕಾರ್ಯ ಎಂಬ ಅರ್ಥವನ್ನು ಹೇಳುವುದು. ಅಂಗೋದ್ದೇಶ್ಯಕವಾದ ಕಾರ್ಯ ಬಂದನಂತರ ಮತ್ತೊಂದು ಅಂಗೋದ್ದೇಶ್ಯಕವಾದ ಕಾರ್ಯ ಬರುವುದಿಲ್ಲ ಎಂದು ಇದಕ್ಕೆ ಅರ್ಥ ಎಂದು ಕೆಲವರು ವರ್ಣಿಸುವರು. ಯದ್ಯಪಿ ಈ ಅರ್ಥವು **ಜ್ಯಾದಾದೀಯಸಃ**(ಪಾ.ಸೂ. ೬-೪-೧೬೦) ಎಂಬ ಸೂತ್ರದ ಭಾಷ್ಯಕ್ಕೆ ವಿರುದ್ಧವು. ಜ್ಯಾದಾದೀಯಸಃ-ಕಿಮರ್ಥಂ ಜ್ಯಾತ್ಪರಸ್ಯೇಯಸ ಆತ್ವಮುಚ್ಯತೇ ನ ಲೋಪಃ ಪ್ರಕೃತಸ್ಸೋಽನುವರ್ತೇತ ಕಾ ರೂಪಸಿದ್ಧಿಃ । ಜ್ಯಾಯಾನ್ । ಅಕೃದ್ಯಕಾರ ಇತಿ ದೀರ್ಘತ್ವಂ ಭವಿಷ್ಯತಿ । ಏವಂ ತರ್ಹಿ ಸಿದ್ಧೇ ಸತಿ ಯಜ್ಜ್ಯಾತ್ಪರಸ್ಯೇಯಸ ಆತ್ವಂ ಶಾಸ್ತಿತಜ್ಜ್ಞಾಪಯತ್ಯಾಚಾರ್ಯೋ ಭವತ್ಯೇಷಾ ಪರಿಭಾಷಾ ಅಙ್ಗವೃತ್ತೇ ಪುನರ್ವೃತ್ತಾವವಿಧಿಃ ಇತಿ ಎಂದು ಮಹಾಭಾಷ್ಯದಲ್ಲಿರುವುದು. ಈ ಭಾಷ್ಯವನ್ನು ನೋಡಿದರೆ ಪ್ರತ್ಯಯದ ಈಕಾರ ಲೋಪ ಬಂದಮೇಲೆ ಪ್ರಕೃತಿಗೆ ದೀರ್ಘ ಬರಲಾರದು. ಅದಕ್ಕಾಗಿ ಆತ್ವವಿಧಿ

ಸಾರ್ಥಕವೆಂದು ಸ್ಪಷ್ಟವು. ಏವಂಚ ಅಂಗೋದ್ದೇಶ್ಯಕಕಾರ್ಯ ಬಂದಮೇಲೆ ಇತ್ಯಾದಿವರ್ಣನೆಯು ಇದಕ್ಕೆ ವಿರುದ್ಧವು. ಆದರೂ ಈ ಪಕ್ಷದಲ್ಲಿ ಸಮಾಧಾನವು ಅಪೇಕ್ಷಿತವಾದರೆ ಯುಷ್ಮದಸ್ಮದ್ಭ್ಯಾಂಜಸೋಶ್ ಎಂಬ ಸೂತ್ರದಲ್ಲಿ ಅಶ್ ಎಂಬಲ್ಲಿ ಅ ಅಶ್ ಎಂದು ಪರರೂಪದಿಂದ ಮತ್ತೊಂದು ಅಕಾರವನ್ನು ಪ್ರಶ್ಲೇಷಮಾಡಿಕೊಳ್ಳುವುದು. ಅಕಾರರೂಪವಾದ ಅಶ್ ಬರುವುದು ಎಂದು ಸೂತ್ರಾರ್ಥ. ಅಶ್ ವಿಕಾರವನ್ನು ಹೊಂದುವುದೇ ಇಲ್ಲವೆಂದು ಇದರಿಂದ ಏರ್ಪಡುವುದು. ಆದ್ದರಿಂದ ಸ್ಯಾದೇಶ ಬರುವುದಿಲ್ಲ. ಮಮ ಎಂಬಲ್ಲಿ ಪ್ರಾತಿಪದಿಕಸ್ವರದಿಂದ ಅಂತೋದಾತ್ತ ಪ್ರಾಪ್ತವಾದರೆ ಅದನ್ನು ಬಾಧಿಸಿ **ಯುಷ್ಮದಸ್ಮದೋರ್ಙಸಿ** (ಪಾ.ಸೂ. ೬-೧-೨೧೧) ಙಸ್‌ಪ್ರತ್ಯಯ ಪರದಲ್ಲಿರುವಾಗ ಯುಷ್ಮದ್ ಅಸ್ಮದ್ ಶಬ್ದಗಳ ಆದಿಯು ಉದಾತ್ತವಾಗುವುದು ಎಂಬುದರಿಂದ ಆದ್ಯುದಾತ್ತ

**ಕೃಷ್ವ**—ಡುಕೃಞ್ ಕರಣೇ ಧಾತು. ಲೋಟ್ ಥಾಸಾದೇಶ, ಥಾಸ್‌ಗೆ **ಥಾಸಸ್ಸೇ** (ಪಾ. ಸೂ. ೩-೪-೮೦) ಎಂಬುದರಿಂದ ಸೇ ಆದೇಶ. ಇದರ ಏಕಾರಕ್ಕೆ **ಸವಾಭ್ಯಾಂ ವಾಮೌ** (ಪಾ. ಸೂ. ೩-೪-೯೧) ಎಂಬುದರಿಂದ ವಕಾರಾದೇಶ. ಕೃ-ಸ್ವ-ಶಪ್‌ವಿಕರಣಕ್ಕೆ ಅಪವಾದವಾಗಿ **ತನಾದಿಕೃಞ್‌ಭ್ಯಉಃ** (ಪಾ. ೩-೧-೭೯) ಎಂದು ಬರುವ ಉ-ವಿಕರಣಕ್ಕೆ **ಬಹುಲಂ ಛಂದಸಿ** ಎಂಬುದರಿಂದ ಲುಕ್, **ಆದೇಶಪ್ರತ್ಯಯಯೋಃ** ಎಂಬುದರಿಂದ ಸಕಾರಕ್ಕೆ ಷಕಾರ, ಕೃಷ್ವ ಎಂದಾಗುವುದು. ಸಂಹಿತಾಕಾಲದಲ್ಲಿ ದ್ವ್ಯಚೋಽತಸ್ತಿಙಃ (ಪಾ ಸೂ. ೬-೩-೧೩೫) ಎಂಬುದರಿಂದ ದೀರ್ಘ ಸತಿಶಿಷ್ಟವಾದ್ದರಿಂದ ಪ್ರತ್ಯಯಸ್ವರ ಬರುವುದು ಪಾದದ ಆದಿಯಲ್ಲಿರುವುದರಿಂದ ಅನುದಾತ್ತ ಬರುವುದಿಲ್ಲ.

**ಯುಜಃ—ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಯು ಉದಾತ್ತ.

**ಅಂತರಮ್**—ಇದು ವೃಷಾದಿಯಲ್ಲಿರುವುದು. ಆದ್ದರಿಂದ **ವೃಷಾದೀನಾಂ ಚ** (ಪಾ.ಸೂ. ೬-೧-೨೦೩ ಎಂಬುದರಿಂದ ಆದ್ಯುದಾತ್ತ. ॥ ೯ ॥

॥ ಸಂಹಿತಾಪಾಠಃ ॥

ವಿದ್ಮಾ ಹಿ ತ್ವಾ ವೃಷಂತಮಂ ವಾಜೇಷು ಹವನಶ್ರುತಂ ।
ವೃಷಂತಮಸ್ಯ ಹೂಮಹ ಊತಿಂ ಸಹಸ್ರಸಾತಮಾಂ ॥ ೧೦ ॥

॥ ಪದಪಾಠಃ ॥

ವಿದ್ಮ । ಹಿ । ತ್ವಾ । ವೃಷನ್ಽತಮಂ । ವಾಜೇಷು । ಹವನಽಶ್ರುತಂ ॥
ವೃಷನ್ಽತಮಸ್ಯ । ಹೂಮಹೇ । ಊತಿಂ । ಸಹಸ್ರಽಸಾತಮಾಂ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಾಂ ವಿದ್ಮ । ಜಾನೀಮಃ । ಕೀದೃಶಂ ತ್ವಾಂ । ವೃಷಂತಮಂ ಕಾಮಾನಾಮತಿಶಯೇನ ವರ್ಷಿತಾರಂ ವಾಜೇಷು ಸಂಗ್ರಾಮೇಷು ಹವನಶ್ರುತಂ ಅಸ್ಮದೀಯಸ್ಯಾಹ್ವಾನಸ್ಯ ಶ್ರೋತಾರಂ । ವೃಷಂತಮಸ್ಯಾತಿಶಯೇನ ಕಾಮಾದೀನಾಂ ವರ್ಷಿತುಸ್ತವೋತಿಂ ರಕ್ಷಾಮಸ್ಮದ್ವಿಷಯಾಮುದ್ದಿಶ್ಯ ಹೂಮಹೇ । ತ್ವಾಮಾಹ್ವಯಾಮಃ । ಕೀದೃಶೀಮೂತಿಂ । ಸಹಸ್ರಸಾತಮಾಮತಿಶಯೇನ ಧನಸಹಸ್ರಾಣಾಂ ದಾತ್ರೀಂ ॥ ವಿದ್ಮ । ವಿದೋ ಲಟೋ ವಾ । ಪಾ. ೩.೪.೮೩ । ಇತಿ ಮಸೋ ಮಾದೇಶಃ । ಪ್ರತ್ಯಯಸ್ವರೇಣಾಂತೋದಾತ್ತಃ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘಃ । ವೃಷಂತಮಂ । ವೃಷು ವೃಷು ಮೃಷು ಸೇಚನೇ । ಕನಿನ್ಯುವೃಷಿತಕ್ಷಿರಾಜಿಧನ್ವಿದ್ಯುಪ್ರತಿದಿವಃ । ಉ. ೧-೧೫೬ । ಇತಿ ಕನಿನ್ । ನಿತ್ತ್ವಾದಾದ್ಯುದಾತ್ತಃ । ತಮಪಃ ಪಿತ್ತ್ವಾತ್ಸ ಏವ ಶಿಷ್ಯತೇ । ಅಯಸ್ಮಯಾದೀನಿ ಛಂದಸಿ । ಪಾ. ೧.೪.೨೦ । ಇತಿ ಭತ್ವೇನ ಪದತ್ವಾಭಾವಾನ್ನಲೋಪಾಭಾವಃ । ಪಾ ೮.೨.೭ । ವಾಜೇಷು । ವಾಜಶಬ್ದೋ ವೃಷಾದಿರಾದ್ಯುದಾತ್ತಃ । ಹವನಶ್ರುತಂ । ಹ್ವಾ ಇತ್ಯನುವೃತ್ತೌ ಬಹುಲಂ ಛಂದಸೀತಿ ಲ್ಯುಟಿ ಸಂಪ್ರಸಾರಣಂ । ಹವನಂ ಶೃಣೋತೀತಿ ಕ್ವಿಪ್। ತುಗಾಗಮಃ । ವೃಷಂತಮಸ್ಯ। ಉಕ್ತಂ। ಹೂಮಹೇ ಬಹುಲಂ ಛಂದಸೀತಿ ಸಂಪ್ರಸಾರಣಂ। ಶಪ ಇತ್ಯನುವೃತ್ತೌ ಬಹುಲಂ ಛಂದಸೀತಿ ಶಪೋ ಲುಕ್। ಊತಿಂ। ಊತಿಯೂತೀತ್ಯಾದಿನಾಂತೋದಾತ್ತೋ ನಿಪಾತಿತಃ। ಸಹಸ್ರಸಾತಮಾಂ। ಸಹಸ್ರಂ ಸನೋತೀತಿ ಸಹಸ್ರಸಾಃ। ಷಣು ದಾನೇ। ಜನಸನಖನಕ್ರಮಗಮೋ ವಿಟ್ । ಪಾ. ೩-೨-೬೭ । ವಿಡ್ವನೋರನುನಾಸಿಕಸ್ಯಾತ್ । ಪಾ. ೬-೪-೪೧ । ಇತ್ಯಾಕಾರಾದೇಶಃ । ಕೃದುತ್ತರಪದಪ್ರಕೃತಿಸ್ವರತ್ವಂ ತಮಪಃ ಪಿತ್ತ್ವಾದೇವ ಶಿಷ್ಯತೇ ॥

॥ ಪ್ರತಿಪದಾರ್ಥ ॥

(ಹೇ) ಇಂದ್ರ—ಎಲೈ ಇಂದ್ರನೇ । ತ್ವಾಂ—ನಿನ್ನನ್ನು । ವೃಷಂತಮಂ--(ಇಷ್ಟಾರ್ಥಗಳೆಂಬ) ವೃಷ್ಟಿಪ್ರದನನ್ನಾಗಿಯೂ । ವಾಜೇಷು—ಯುದ್ಧಗಳಲ್ಲಿ । ಹವನಶ್ರುತಂ--ನಮ್ಮ ಆಹ್ವಾನವನ್ನು ಕೇಳುವವನನ್ನಾಗಿಯೂ । ವಿದ್ಮ—ತಿಳಿಯುತ್ತೇವೆ । ಹಿ-ಏಕೆಂದರೆ । ವೃಷಂತಮಸ್ಯ—(ಕಾಮಾರ್ಥಗಳ) ವೃಷ್ಟಿಪ್ರದನಾದ ನಿನ್ನ । ಸಹಸ್ರಸಾತಮಾಂ—ಸಾವಿರಾರು ವಿಧಗಳಲ್ಲಿ ನೀನು ಕೊಡುವ । ಊತಿಂ—ರಕ್ಷಣೆಯನ್ನು ಅಥವಾ ನಮ್ಮ ರಕ್ಷಣೆಗಾಗಿ । ಹೂಮಹೇ--ಕರೆಯುತ್ತೇವೆ (ಪ್ರಾರ್ಥಿಸುತ್ತೇವೆ) ॥

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ನಮ್ಮ ಇಷ್ಟಾರ್ಥಪ್ರದನೆಂದೂ ಯುದ್ಧಗಳಲ್ಲಿ ನಮ್ಮ ಆಹ್ವಾನವನ್ನು (ಮೊರೆಯನ್ನು) ಕೇಳುವವನೆಂದೂ ನಾವು ಬಲ್ಲೆವು. ಆದುದರಿಂದಲೇ ಇಷ್ಟಾರ್ಥಗಳೆಂಬ ವೃಷ್ಟಿಪ್ರದನಾದ ನಿನ್ನ ನಾನಾ ವಿಧವಾದ ರಕ್ಷಣೆಗಾಗಿ ನಾವು ನಿನ್ನನ್ನು ಕರೆಯುವೆವು.

## English Translation.

O Indra, we know you, the rainer of blessings, the hearer of our call in battles; we invoke the thousand-fold protection of you, the showerer of bounties.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು ಸುಲಭವಾಗಿ ತಿಳಿಯುವಂತೆ ಇದೆ. ವಿಶೇಷ ತೊಡಕುಗಳಾಗಲಿ, ಕ್ಲಿಷ್ಟವಾದ ಶಬ್ದಗಳಾಗಲಿ ಇಲ್ಲ.

ವಿದ್ಮ—ಛಂದಸ್ಸಿನ ಅನುಕೂಲಕ್ಕಾಗಿ ಅಂತ್ಯಾಕ್ಷರವು ದೀರ್ಘವಾಗಿರುವುದು.

**ವೃಷಂತಮಂ, ವೃಷಂತಮಸ್ಯ**—ವೃಷ್ಟಿಪ್ರದನಾದ ಎಂದರೆ ನಮ್ಮ ಇಷ್ಟಾರ್ಥಗಳೆಂಬ ಮಳೆಯನ್ನು ಕೊಡುವವನಾದ ಎಂದರ್ಥವು

**ಹವನಶ್ರುತಂ**—ನಮ್ಮ ಆಹ್ವಾನವನ್ನು ಕೇಳುವ, ನಮ್ಮ ಮೊರೆಯನ್ನು ಗಮನಿಸುವ.

**ಸಹಸ್ರಸಾತಮಾಂ**—ಈ ಶಬ್ದದ ವಿವರಣೆಯನ್ನು ಹಿಂದೆಯೇ ಕೊಟ್ಟಿದೇವೆ. (ಋ. ಸಂ. ೧-೩-೯ನೇ ಋಕ್ಕನ್ನು ನೋಡಿ).

ವ್ಯಾಕರಣಪ್ರಕ್ರಿಯಾ

**ವಿದ್ಮ**—ವಿದ ಜ್ಞಾನೇ ಧಾತು, ಇದರ ಮುಂದೆ ಲಟ್. ಅದರ ಸ್ಥಾನದಲ್ಲಿ ಪರಸ್ಮೈಪದ ಉತ್ತಮ ಪುರುಷ ಬಹುವಚನ ಮಸ್. ಶಪ್ ವಿಕರಣಕ್ಕೆ **ಅದಿಪ್ರಭೃತಿಭ್ಯಃ ಶಪಃ** (ಪಾ.ಸೂ. ೨-೪-೭೨)ಎಂಬುದರಿಂದ **ಲುಕ್.** ವಿದೋ ಲಟೋವಾ (ಪಾ. ಸೂ. ೩-೪-೮೩) ವಿದಜ್ಞಾನೇ ಧಾತುವಿನ ಮುಂದೆ ಬಂದ ಲಟ್ಸ್ಥಾನದಲ್ಲಿ ಬಂದ ಪರಸ್ಮೈಪದ ಸಂಜ್ಞಕವಾದ ತಿಪ್ ಮೊದಲಾದ ಒಂಭತ್ತು ಪ್ರತ್ಯಯಗಳಿಗೆ ಕ್ರಮವಾಗಿ ಣಲ್,ಅತುಸ್, ಉಸ್, ಥಲ್, ಅಥುಸ್, ಅ,ಣಲ್.ವ, ಮ ಎಂಬ ಆದೇಶಗಳು ಬರುವವು ಎಂಬುದರಿಂದ, ಮಸ್ ಗೆ ಮ ಆದೇಶ ಬರುವುದು. ವಿದ್ಮ ಎಂದಾಗುವುದು. ಸಂಹಿತಾಕಾಲದಲ್ಲಿ **ದ್ವ್ಯಚೋತಸ್ತಿಙಃ** (ಪಾ. ಸೂ. ೬-೩-೧೩೫) ಋಕ್ಕಿನಲ್ಲಿ ಎರಡು ಅಚ್ಚುಗಳ್ಳ ತಿಙಂತದ ಹ್ರಸ್ವಾಕಾರಕ್ಕೆ ದೀರ್ಘ ಬರುವುದು ಎಂಬುದರಿಂದ ದೀರ್ಘ ಬಂದರೆ ವಿದ್ಮಾ ಎಂದಾಗುವುದು.

**ವೃಷಂತಮಮ್**—ಪೃಷು, ವೃಷು, ಮೃಷು ಸೇಚನೇ, ಧಾತು. ವೃಷ್ ಧಾತುವಿನ ಮುಂದೆ **ಕನಿನ್ ಯುವೃಷಿತಕ್ಷಿರಾಜಿಧನ್ವಿದ್ಯುಪ್ರತಿದಿವಃ** (ಉ. ಫಾ. ೧-೧೫೪) ಎಂಬುದರಿಂದ ಕನಿನ್ಪ್ರತ್ಯಯ. ಕ್ ಇನ್ ಇವುಗಳಿಗೆ ಇತ್ಸಂಜ್ಞೆ ಲೋಪಗಳು ಬರುವುವು. ಅನ್ ಉಳಿಯುವುದು ವೃಷ+ಅನ್-ವೃಷನ್. ಇದು ನಿತ್ಸ್ವರದಿಂದ ಆದ್ಯುದಾತ್ತ. ಇದರ ಮುಂದೆ ಅತಿಶಯಾರ್ಥದಲ್ಲಿ ತಮಪ್ ಪ್ರತ್ಯಯ. ತಮಪ್ ಪಿತ್ತಾದ್ದರಿಂದ ಅನುದಾತ್ತ. ಆದ್ಯುದಾತ್ತವೇ ನಿಲ್ಲುವುದು. **ಅಯಸ್ಮಯಾದೀನಿಛಂದಸಿ** (ಪಾ. ಸೂ. ೧-೪-೨೦) ಎಂಬುದರಿಂದ ಭ ಸಂಜ್ಞಾಯು ಪದಸಂಜ್ಞೆಯನ್ನು ಬಾಧಿಸಿ ಬರುವುದು. ಆದ್ದರಿಂದ ಪದಸಂಜ್ಞೆ ಬರುವುದಿಲ್ಲ. ಅದ ಕಾರಣ **ನಲೋಪಃ ಪ್ರಾತಿಪದಿಕಾಂತಸ್ಯ** (ಪಾ. ಸೂ ೮-೨-೭) ಎಂಬುದರಿಂದ ನಕಾರಕ್ಕೆ ಲೋಪ ಬರುವುದಿಲ್ಲ.

ವಾ- ಇದು ವೃಷಾದಿಯಲ್ಲಿರುವುದು. ಆದ್ದರಿಂದ ಆದ್ಯುದಾತ್ತ

**ಹವನಶ್ರುತಮ್**—ಹ್ವೇಞ್ ಧಾತುವಿನ ಮುಂದೆ ಲ್ಯುಟ್ ಪ್ರತ್ಯಯವನ್ನಿಟ್ಟರೆ ಅದಕ್ಕೆ ಅನಾದೇಶ ಬಂದು ಹ್ವೇ+ಅನ ಎಂದಿರುವಾಗ **ಬಹುಲಂ ಛಂದಸಿ** (ಪಾ.ಸೂ. ೬-೧-೩೪) ಇಲ್ಲಿ ಹ್ವಸ್ಸಂಪ್ರಸಾರಣಂ (ಪಾ.ಸೂ.

೬-೧-೩೨) ಎಂಬುದು ಅನುವೃತ್ತವಾಗುವುದು. ಇದರಿಂದ ಸಂಪ್ರಸಾರಣ ವಕಾರಕ್ಕೆ ಉಕಾರ. ಸಂಪ್ರಸಾರಣಾಚ್ಚ, ಪೂರ್ವರೂಪ ಹು+ಅನ ಗುಣ ಅವಾದೇಶ ಹವನ. ಹವನಂ ಶೃಣೋತಿ ಎಂದು ವಿಗ್ರಹವಾದಾಗ ಹವನ ಶಬ್ದೋಪಪದಕವಾದ ಶ್ರುಧಾತುವಿನ ಮುಂದೆ ಕ್ವಿಪ್ ಪ್ರತ್ಯಯ ಬರುವುದು. **ಹ್ರಸ್ವಸ್ಯಪಿತಿಕೃತಿತುಕ್** (ಪಾ. ಸೂ. ೬-೧-೭೧) ಎಂಬುದರಿಂದ ತುಗಾಗಮ. ಹವನಶ್ರುತ್, ದ್ವಿತೀಯಾ ಏಕವಚನ ಅಮ್ ಪ್ರತ್ಯಯ. ಹವನಶ್ರುತಮ್ ಎಂದಾಗುವುದು.

**ವೃಷಂತಮಸ್ಯ**— ವೃಷಂತಮ ಎಂಬುದಕ್ಕೆ ಪ್ರಕ್ರಿಯೆಯು ಮೊದಲು ಈ ಮಂತ್ರದಲ್ಲೇ ವರ್ಣಿತವಾಗಿರುವುದು. ಷಷ್ಠೀವಿಭಕ್ತಿ ಏಕವಚನಾಂತ ವೃಷಂತಮಸ್ಯ ಎಂದಾಗುವುದು.

**ಹೂಮಹೇ**— ಹ್ವೇಞ್ ಸ್ಪರ್ಧಾಯಾಂ ಶಬ್ದೇಚ ಧಾತು. ಇದರಮುಂದೆ ಲಟ್. ಅದಕ್ಕೆ ಆತ್ಮನೇಪದ ಉತ್ತಮಪುರುಷಬಹುವಚನ ಮಹಿಙ್. **ಟಿತ ಆತ್ಮನೇ ಪದಾನಾಂಟೇರೇ** (ಪಾ ಸೂ. ೩.೪-೭೯) ಎಂಬುದರಿಂದ ಮಹಿ ಎಂಬುದರ ಇಕಾರಕ್ಕೆ ಏಕಾರ. ಹ್ವೇ+ಮಹೇ ಶಪ್ ವಿಕರಣ ಅದಕ್ಕೆ ಬಹುಲಂ ಛಂದಸಿ(ಪಾ. ಸೂ. ೨-೪-೭೩) ಎಂಬುದರಿಂದ ಲುಕ್. **ಬಹುಲಂ ಛಂದಸಿ** (ಪಾ. ಸೂ. ೬-೪-೩೪) ಹ್ವಸ್ಸಂಪ್ರಸಾರಣಂ ಎಂದು ಅನುವೃತ್ತವಾಗುವುದು. ಇದರಿಂದ ಸಂಪ್ರಸಾರಣ ಬಂದು ಸಂಪ್ರಸಾರಣಾಚ್ಚ ಎಂಬುದರಿಂದ ಪೂರ್ವರೂಪ ಬಂದರೆ ಹು+ಮಹೇ ಹಲಃ (ಪಾ. ಸೂ ೬-೪-೨) ಅಂಗಾವಯವವಾದ ಹಲ್ ವರ್ಣದ ಮುಂದೆ ಇರುವ ಸಂಪ್ರಸಾರಣವನ್ನು ಕೊನೆಯಲ್ಲಿ ಹೊಂದಿರುವ ಅಂಗಕ್ಕೆ ದೀರ್ಘ ಬರುವುದು ಎಂಬುದರಿಂದ ದೀರ್ಘ. ಹೂಮಹೇ ಎಂದಾಗುವುದು

**ಊತಿಂ**— ಊತಿಯೂತಿಜೂತಿಸಾತಿಹೇತಿಕೀರ್ತಯಶ್ಚ(ಪಾ ಸೂ. ೩-೩-೯೭)ಎಂಬುದರಿಂದ ಈ ಕ್ತಿನ್ ಪ್ರತ್ಯಯಾಂತಗಳು ಅಂತೋದಾತ್ತವಾಗಿ ನಿಪಾತಿತಗಳಾಗಿರುವುವು

**ಸಹಸ್ರಸಾತಮಾಮ್**— ಸಹಸ್ರಂ ಸನೋತಿ ಇತಿ ಸಹಸ್ರಸಾಃ. ಷಣುದಾನೇ ಧಾತು. **ಧಾತ್ವಾದೇಃ ಷಃ ಸಃ**(ಪಾ. ಸೂ. ೬-೧-೬೪) ಎಂಬುದರಿಂದ ಷಕಾರಕ್ಕೆ ಸಕಾರ, ಣಕಾರಕ್ಕೆ ನಿವೃತ್ತಿ. ಸಹಸ್ರಶಬ್ದೋಪಪಾದಕವಾದ ಸನ್ ಧಾತುವಿನ ಮುಂದೆ **ಜನಸನಖನಕ್ರಮಗಮೋ ವಿಟ್** (ಪಾ. ಸೂ. ೩-೨-೬೭) ಈ ಧಾತುಗಳ ಮುಂದೆ ವಿಟ್ ಪ್ರತ್ಯಯ ಬರುವುದು ಎಂಬುದರಿಂದ ವಿಟ್ ಪ್ರತ್ಯಯ, ಪ್ರತ್ಯಯದ ಎಲ್ಲಾ ವರ್ಣಗಳಿಗೂ ಲೋಪ- ವಿಡ್ವನೋರನುನಾಸಿಕಸ್ಯಾತ್ (ಪಾ. ಸೂ. ೬-೪-೪೧) ವಿಟ್‌ವನ್ ಈ ಪ್ರತ್ಯಯಗಳ ಹಿಂದೆ ಇರುವ ಅನುನಾಸಿಕಕ್ಕೆ ಆಕಾರಾದೇಶ ಬರುವುದು ಎಂಬುದರಿಂದ ಆಕಾರಾದೇಶವು ನಕಾರಕ್ಕೆ ಬರುವುದು. ಸವರ್ಣದೀರ್ಘ ಸಹಸ್ರಸಾ ಎಂದಾಗುವುದು. ಕೃದುತ್ತರಪದಪ್ರಕೃತಿಸ್ವರ ಬರುವುದು. ಇದರಮುಂದೆ ಅತಿಶಯಾರ್ಥದಲ್ಲಿ ತಮಪ್ ಪ್ರತ್ಯಯ. ತಮಪ್ಪು ಪಿತ್ತಾದ್ದರಿಂದ ಅನುದಾತ್ತ. ಸಹಸ್ರಸಾ ಎಂಬಲ್ಲಿ ಪೂರ್ವೋಕ್ತಸ್ವರವೇ ನಿಲ್ಲುವುದು. ಸ್ತ್ರೀಲಿಂಗವಾದ್ದರಿಂದ ಸಹಸ್ರಸಾತಮ ಎಂಬುದರ ಮುಂದೆ ಅಜಾದ್ಯತಷ್ಟಾಪ್ ಎಂಬುದರಿಂದ ಟಾಪ್ ಪ್ರತ್ಯಯ. ಪಿತ್ತಾದ್ದರಿಂದ ಟಾಪ್ಪು ಅನುದಾತ್ತ. ಆಂತರ್ಯತಮದಿಂದ ಟಾಪಿನೊಂದಿಗೆ ಬರುವ ಸವರ್ಣದೀರ್ಘವೂ ಅನುದಾತ್ತ. ದ್ವಿತೀಯಾ ಏಕವಚನ ಅಮ್ ಪ್ರತ್ಯಯ. **ಅಮಿಪೂರ್ವಃ** (ಪಾ. ೮-೧-೨೩) ಎಂಬುದರಿಂದ ಪೂರ್ವರೂಪ. ಸಹಸ್ರಸಾತಮಾಮ್ ॥ ೧೦ ॥

॥ ಸಂಹಿತಾಪಾಠಃ ॥

ಆ ತೂ ನ ಇಂದ್ರ ಕೌಶಿಕ ಮಂದಸಾನಃ ಸುತಂ ಪಿಬ ।
ನವ್ಯಮಾಯುಃ ಪ್ರ ಸೂ ತಿರ ಕೃಧೀ ಸಹಸ್ರಸಾಮೃಷಿಂ ॥೧೧॥

॥ ಪದಪಾಠಃ ॥

ಆ । ತು । ನಃ । ಇಂದ್ರ । ಕೌಶಿಕ । ಮಂದಸಾನಃ । ಸುತಂ । ಪಿಬ ॥
ನವ್ಯಂ । ಆಯುಃ । ಪ್ರ । ಸು । ತಿರ । ಕೃಧಿ । ಸಹಸ್ರಽಸಾಂ । ಋಷಿಂ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತು ಕ್ಷಿಪ್ರಂ ನೋಽಸ್ಮಾನ್ಪ್ರತ್ಯಾ ಗಚ್ಛೇತಿ ಶೇಷಃ । ಹೇ ಕೌಶಿಕ ಕುಶಿಕಸ್ಯ ಪುತ್ರೇಂದ್ರ ಮಂದಸಾನೋ ಹೃಷ್ಟೋ ಭೂತ್ವಾ ಸುತಮಭಿಷುತಂ ಸೋಮಂ ಪಿಬ । ಯದ್ಯಪಿ ವಿಶ್ವಾಮಿತ್ರಃ ಕುಶಿಕಸ್ಯ ಪುತ್ರಸ್ತಥಾಪಿ ತದ್ರೂಪೇಣೇಂದ್ರಸ್ಯೈವೋತ್ಪನ್ನತ್ವಾತ್ಕುಶಿಕಪುತ್ರತ್ವಮವಿರುದ್ಧಂ । ಅಯಂ ವೃತ್ತಾಂತೋಽನುಕ್ರಮಣಿಕಾಯಾಮುಕ್ತಃ । ಕುಶಿಕಸ್ತ್ವೈಷೀರಥಿರಿಂದ್ರತುಲ್ಯಂ ಪುತ್ರಮಿಚ್ಛನ್ಬ್ರಹ್ಮಚರ್ಯಂ ಚಕಾರ। ತಸ್ಯೇಂದ್ರ ಏವ ಗಾಥೀ ಪುತ್ರೋ ಜಜ್ಞೇ। ಅನು. ಋಗ್ವೇ ೩-೧ । ಇತಿ । ಹೇ ಇಂದ್ರ ನವ್ಯಂ ಸರ್ವೈರ್ದೇವೈಃ ಸ್ತುತ್ಯಂ ಕರ್ಮಾನುಷ್ಠಾನಪರಮಾಯುರ್ಜೀವಿತಂ ಪ್ರ ಸೂ ತಿರ । ಪ್ರಕರ್ಷೇಣ ಸುಷ್ಠು ವರ್ಧಯ । ತತೋ ಮಾಂ ಸಹಸ್ರಸಾಂ ಸಹಸ್ರಸಂಖ್ಯಾಕಲಾಭೋಪೇತಮೃಷಿಮತೀಂದ್ರಿಯದ್ರಷ್ಟಾರಂ ಕೃಧಿ । ಕುರು॥ ತು । ಸಂಹಿತಾಯಾಮೃಚಿ ತುನುಘಮಕ್ಷುತಙ್ಕುತ್ರೋರುಷ್ಯಾಣಾಮಿತಿ ದೀರ್ಘಃ । ನಃ । ಸಂಹಿತಾಯಾಮುದಾತ್ತಾದನುದಾತ್ತಸ್ಯ ಸ್ವರಿತಃ । ಇಂದ್ರ । ಆಮಂತ್ರಿತನಿಘಾತಃ । ಕೌಶಿಕ । ನಿಘಾತಃ । ಮಂದಸಾನಃ । ಹೃಷ್ಯನ್ । ಮದಿ ಸ್ತುತಿಮೋದಮದಸ್ವಪ್ನಕಾಂತಿಗತಿಷು । ಆಸಾನಜಿತ್ಯನುವೃತ್ತಾವೃಂಜಿವೃಧಿಮಂದಿಸಹಿಭ್ಯಃ ಕಿತ್ । ಉ. ೨-೮೭ । ಇತ್ಯಸಾನಚ್‌ಪ್ರತ್ಯಯಃ । ಚಿತ್ತ್ವಾದಂತೋದಾತ್ತಃ । ಸುತಂ । ಪ್ರತ್ಯಯಸ್ವರಃ । ನವ್ಯಂ । ಣು ಸ್ತುತೌ । ಅಚೋ ಯತ್ । ಗುಣಃ । ವಾಂತೋ ಯಿ ಪ್ರತ್ಯಯೇ । ಪಾ. ೬-೧ ೭೯ । ಇತ್ಯವಾದೇಶಃ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಆಯುಃ । ಉಸಿನಿದಿತ್ಯನುವೃತ್ತಾವೇತೇರ್ಣಿಚ್ಚ । ಉ. ೨-೧೧೮ । ಇತ್ಯುಸಿಪ್ರತ್ಯಯಃ ಣಿತ್ತ್ವಾದ್ವೃದ್ಧ್ಯಾಯಾದೇಶೌ । ನಿತ್ತ್ವಾದಾದ್ಯುದಾತ್ತತ್ವಂ । ಸು । ನಿಪಾತಸ್ಯ ಚೇತಿ ಸಂಹಿತಾಯಾಂ ದೀರ್ಘತ್ವಂ । ತಿರ । ತರತೇರ್ವ್ಯತ್ಯಯೇನ ಶಃ । ಋತ ಇದ್ಧಾತೋಃ । ಪಾ. ೭-೧ ೧೦೦ । ಇತೀತ್ವಂ । ಅತೋ ಹೇರಿತಿ ಹೇರ್ಲುಕ್ । ಕೃಧಿ। ಡುಕೃಞ್ ಕರಣೇ । ಬಹುಲಂ ಛಂದಸೀತಿ ಶಪೋ ಲುಕ್ । ಶ್ರು ಶೃಣುಪೃಕೃವೃಭ್ಯಶ್ಛಂದಸೀತಿ ಹೇರ್ಧಿರಾದೇಶಃ । ಸಹಸ್ರಸಾಂ । ಉಕ್ತಂ । ಋಷಿಂ । ಋಷೀ ಗತೌ । ಇಗುಪಧಾತ್ಕಿದಿತ್ಯನುವೃತ್ತಾವಿಗುಪಧಾತ್ಕಿಚ್ಚ । ಕಿತ್ತ್ವಾದ್ಗುಣಾಭಾವಃ । ನಿತ್ತ್ವಾದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

(ಹೇ) **ಇಂದ್ರ**--ಎಲೈ ಇಂದ್ರನೇ । **ತು** ಜಾಗ್ರತೆಯಾಗಿ । **ನಃ**--ನಮ್ಮ (ಸಮೀಪಕ್ಕೆ) । **ಆ** (**ಗಚ್ಛ**)—ಬಾ । (**ಹೇ**) **ಕೌಶಿಕ**--ಎಲೈ ಕುಶಿಕಪುತ್ರನಾದ ಇಂದ್ರನೇ । (ನೀನು) **ಮಂದಸಾನಃ**—ಸಂತೋಷವುಳ್ಳವನಾಗಿ। **ಸುತಂ**—ಹಿಂಡಿ ಸಿದ್ಧಪಡಿಸಿರುವ ಸೋಮರಸವನ್ನು । **ಪಿಬ**—ಕುಡಿ । (ನನಗೆ) **ನವ್ಯಂ**—ಪ್ರಾರ್ಥಿಸಲ್ಪಟ್ಟ (ಬೇಕಾದ) । **ಆಯುಃ**—ಆಯುಸ್ಸನ್ನು । **ಪ್ರ ಸು ತಿರ**—ವಿಶೇಷವಾಗಿ ವೃದ್ಧಿಪಡಿಸು । (ನನ್ನನ್ನು) **ಸಹಸ್ರಸಾಂ**—ಸಾವಿರಾರು ಲಾಭಾದಿಗಳನ್ನು ಪಡೆಯುವ । **ಋಷಿಂ**—ಋಷಿಯನ್ನಾಗಿ । **ಕೃಧಿ**-ಮಾಡು ॥

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಬೇಗ ನಮ್ಮ ಬಳಿಗೆ ಬಂದು ನಾವು ಸಿದ್ಧಪಡಿಸಿರುವ ಈ ಸೋಮರಸವನ್ನು ಸಂತೋಷದಿಂದ ಪಾನಮಾಡು. ನಮ್ಮ ಆಯುಸ್ಸನ್ನು ಹೆಚ್ಚುವಂತೆ ಮಾಡು ಮತ್ತು (ಸಾಧಾರಣ) ಋಷಿಯಾಗಿರುವ ನನ್ನನ್ನು ಸಾವಿರಾರು ವಿಧದಲ್ಲಿ ಪ್ರಯೋಜನ ಹೊಂದುವಂತೆ ಮಾಡು.

English Translation

Come quickly, Indra, son of Kusika, and drink the soma libation with delight; prolong the life which we merit and make me a Rishi abundantly endowed with thousands of benefits

॥ ವಿಶೇಷವಿಷಯಗಳು ॥

**ತು, ಸು, ಕೃಧಿ**—ಈ ಋಕ್ಕಿನಲ್ಲಿರುವ ಈ ಶಬ್ದಗಳ ಅಂತ್ಯಾಕ್ಷರಗಳು ಛಂದಸ್ಸಿನ ಅನುಕೂಲಕ್ಕಾಗಿ ದೀರ್ಘವಾಗಿವೆ.

**ಆ**--ಈ ಋಕ್ಕಿನಲ್ಲಿ ಆ ಎಂಬ ಉಪಸರ್ಗಮಾತ್ರವಿದೆ ಇದರ ಜತೆಗೆ ಗಚ್ಛ ಎಂಬ ಕ್ರಿಯಾಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಇಂತಹ ಪ್ರಯೋಗಗಳು ಋಗ್ವೇದದಲ್ಲಿ ಬೇಕಾದಷ್ಟಿವೆ.

**ಕೌಶಿಕ**—ಇಲ್ಲಿ ಇಂದ್ರನನ್ನು ಕುಶಿಕಪುತ್ರನೆಂದು ಸಂಬೋಧನೆ ಮಾಡಿದೆ. ಈ ವಿಷಯದಲ್ಲಿ ಭಾಷ್ಯಕಾರರು ಅನುಕ್ರಮಣಿಕೆಯಲ್ಲಿ ಹೇಳಿರುವ ವೃತ್ತಾಂತವನ್ನು ಉದಾಹರಿಸಿದಾರೆ—

**ಕುಶಿಕಸ್ತ್ವೈಷೀರಥಿರಿಂದ್ರತುಲ್ಯಂ ಪುತ್ರಮಿಚ್ಛನ್ ಬ್ರಹ್ಮಚರ್ಯಂ ಚಚಾರ । ತಸ್ಯೇಂದ್ರ ಏವ ಗಾಧೀ ಪುತ್ರೋ ಜಜ್ಞೇ ॥**

(ಋ. ಅನು. ೩-೧)

ಸ್ಕಂದಸ್ವಾಮಿಯು ಈ ವಿಷಯದಲ್ಲಿ—

**ಅತ್ರ ಚೇತಿಹಾಸಮಾಚಕ್ಷತೇ । ಇಷೀರಥಪುತ್ರಃ ಕುಶಿಕೋ ನಾಮ ರಾಜಾ ಪುತ್ರಮಿಂದ್ರತುಲ್ಯಂ ಕಾಮಯಮಾನೋ ಬ್ರಹ್ಮಚರ್ಯಂ ಚಚಾರ । ತಸ್ಯ ಗಾಧೀ ನಾಮೇಂದ್ರ ಏವ ಸ್ವಯಂ ಪುತ್ರೋ ಜಾತ ಇತಿ ॥**

ವೆಂಕಟಮಾಧವರು--

**ಪುತ್ರಮಿಂದ್ರಸಮಮಿಚ್ಛನ್ ಕುಶಿಕೋ ಬ್ರಹ್ಮಚರ್ಯಂ ಚಚಾರ । ತಸ್ಯೇಂದ್ರಃ ಸ್ವಯಮೇವ ಪುತ್ರೋಽಭೂತ್ । ಸಾಸ್ಯ ಕೌಶಿಕತಾ ॥**

ಎಂದು ಹೇಳಿರುವರು. ಮುಖ್ಯಾಭಿಪ್ರಾಯವೇನೆಂದರೆ, ಹಿಂದೆ ಇಷೀರಥನೆಂಬ ರಾಜನಿಗೆ ಕುಶಿಕನೆಂಬ ಪುತ್ರನಿದ್ದನು. ಅವನು ತನಗೆ ಇಂದ್ರನಿಗೆ ಸಮನಾದ ಪುತ್ರನಾಗಬೇಕೆಂದು ಬಯಸಿ ಬ್ರಹ್ಮಚರ್ಯವನ್ನಾಚರಿಸುತ್ತಿದ್ದನು. ಆಗ ಇಂದ್ರನು ಗಾಧಿಯೆಂಬ ಹೆಸರಿನಿಂದ ತಾನೇ ಅವನ ಮಗನಾಗಿ ಹುಟ್ಟಿದನು ಎಂದು. ವಿಶ್ವಾಮಿತ್ರ ಋಷಿಯು ಗಾಧಿರಾಜನ ಮಗನು ಮತ್ತು ಈ ಋಕ್ಕಿನ ದ್ರಷ್ಟೃವಾದ ಮಧುಚ್ಛಂದ ಋಷಿಯು ವಿಶ್ವಾಮಿತ್ರನ ವಂಶೋದ್ಭವನಾದುದರಿಂದ ತನ್ನ ವಂಶದಲ್ಲಿ ಎಂದರೆ ಕುಶಿಕವಂಶದಲ್ಲಿ ಉತ್ಪನ್ನನಾದ ಇಂದ್ರನನ್ನು ಕೌಶಿಕನೆಂದು ಸಂಬೋಧನೆಮಾಡಿರುವನು.

**ನವ್ಯಂ**— ಭಾಷ್ಯಕಾರರು, **ಣು ಸ್ತುತೌ** ಎಂಬ ಧಾತುವಿನ ರೂಪಾಂತರವೆಂದು ಹೇಳಿ ನವ್ಯಶಬ್ದಕ್ಕೆ ಸರ್ವೈರ್ದೇವೈಃ ಸ್ತುತ್ಯಂ ಕರ್ಮಾನುಷ್ಠಾನಪರಂ— ಕರ್ಮಾನುಷ್ಠಾನಾದಿಗಳಿಗೆ ಸಾಧನವಾದ ಮತ್ತು ಸಮಸ್ತ ದೇವತೆಗಳೂ ಸ್ತುತಿಸುವ ಅಥವಾ ಅಪೇಕ್ಷಿಸುವ ಎಂದು ಅರ್ಥವಿವರಣೆ ಮಾಡಿರುವರು. ಎಂದರೆ ಸರ್ವರೂ ಅಪೇಕ್ಷಿಸುವ ದೀರ್ಘಾಯುಸ್ಸು ಎಂದರ್ಥವು ಬಹಳಕಾಲ ಜೀವಿಸಿರಬೇಕೆಂದು ಬಯಸುವುದು ಸಹಜವಾಗಿಯೇ ಇದೆ. ಅಥವಾ ಸ್ಕಂದಸ್ವಾಮಿಯು ಹೇಳಿರುವಂತೆ ನವ್ಯಂ ಎಂಬ ಶಬ್ದಕ್ಕೆ ನವಂ--ಹೊಸದಾದ ಎಂಬ ಅರ್ಥವನ್ನು ಹೇಳುವುದಾದರೆ **ನವ್ಯಂ ಆಯುಃ** ಎಂಬ ಶಬ್ದಗಳಿಗೆ ಹೊಸ ಚೈತನ್ಯವು, ಅಥವಾ ಇಲ್ಲಿಂದ ಮುಂದಕ್ಕೆ ಇನ್ನೂ ಹೆಚ್ಚಾದ ಆಯುಸ್ಸು ಎಂದು ತಾತ್ಪರ್ಯವನ್ನು ಹೇಳಬೇಕು. ಒಟ್ಟಿನಲ್ಲಿ ಹೇಳುವುದಾದರೆ ಬಹುಕಾಲ ಜೀವಿಸಿರುವಂತೆ ಮಾಡು. ನಮ್ಮ ಆಯುಸ್ಸನ್ನು ವೃದ್ಧಿಪಡಿಸು, prolong our life ಎಂದಭಿಪ್ರಾಯವು.

**ಸಹಸ್ರಸಾಂ**— ಸಾವಿರಾರು ಲಾಭಗಳು, ಪ್ರಯೋಜನಗಳು, ಅನೇಕ ವಿಧವಾದ ಇಷ್ಟಾರ್ಥಗಳು.

**ಋಷಿಂ-ಋಷೀ ಗತೌ**- ಎಂಬ ಧಾತುವಿಗೆ ಗತ್ಯರ್ಥ ಅಥವಾ ಜ್ಞಾನಾರ್ಥವಿರುವುದರಿಂದ ಋಷಿಯೆಂದರೆ ತಿಳಿವಳಿಕೆಯುಳ್ಳವನು, ಪ್ರಜ್ಞಾಶಾಲಿಯು, ಅಥವಾ ಭಾಷ್ಯಕಾರರು ಹೇಳುವಂತೆ **ಅತೀಂದ್ರಿಯದ್ರಷ್ಟಾರಂ**— ಬಾಹ್ಯೇಂದ್ರಿಯಗಳಿಗೆ ಗೋಚರವಾಗದ ವಿಷಯಗಳನ್ನು ತಿಳಿದುಕೊಳ್ಳುವ ಶಕ್ತಿಯುಳ್ಳ ಮಹಾಪುರುಷನು ಎಂದರ್ಥವು. ಇಲ್ಲಿ ಋಷಿಯೆಂದರೆ ಈ ಮಂತ್ರದ್ರಷ್ಟೃವಾದ ಮಧುಚ್ಛಂದಋಷಿಯು. ತನಗೆ ದೀರ್ಘಾಯುಸ್ಸನ್ನು ಕೊಟ್ಟು ಉತ್ತಮ ಋಷಿಯನ್ನಾಗಿ ಮಾಡಬೇಕೆಂದು ಇಂದ್ರನನ್ನು ಪ್ರಾರ್ಥಿಸುವಾಗ ಉತ್ತಮಪುರುಷ ಕ್ರಿಯಾಪದವನ್ನು ಉಪಯೋಗಿಸದೆ ಪ್ರಥಮಪುರುಷ ಪ್ರಯೋಗವನ್ನೇ ಮಾಡಿರುವನು.

॥ ವ್ಯಾಕರಣಪ್ರಕ್ರಿಯಾ ॥

**ತು**--ಸಂಹಿತಾಕಾಲದಲ್ಲಿ **ಋಚಿತುನುಘಮಕ್ಷುತಙ್ಕುತ್ರೋರುಷ್ಯಾಣಾಮ್** (ಪಾ. ಸೂ. ೬-೩-೧೩೩) ಎಂಬುದರಿಂದ ತು ಎಂಬುದಕ್ಕೆ ದೀರ್ಘ ಬರುವುದು. ನಿಪಾತಾ ಆದ್ಯುದಾತ್ತಾಃ (ಫಿ. ಸೂ. ೮೦) ಎಂಬುದರಿಂದ ಇದು ಉದಾತ್ತ.

ನಃ ಅಸ್ಮಾನ್ ಎಂಬುದಕ್ಕೆ **ಬಹುವಚನಸ್ಯವಸ್ನಸೌ** (ಪಾ. ಸೂ. ೮-೧-೨೧) ಎಂಬುದರಿಂದ ಅನುದಾತ್ತವಾದ ವಸ್ ಆದೇಶ ಬಂದಿರುವುದು, ಸಂಹಿತಾಕಾಲದಲ್ಲಿ **ಉದಾತ್ತಾದನುದಾತ್ತಸ್ಯ ಸ್ವರಿತಃ** (ಪಾ. ಸೂ. ೮-೪-೬೬) ಎಂಬುದರಿಂದ ನಃ ಎಂಬುದು ಸ್ವರಿತವಾಗುವುದು.

ಇಂದ್ರ—ಇದು ಆಮಂತ್ರಿತ. ಆದ್ದರಿಂದ **ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ಅನುದಾತ್ತ ಬರುವುದು.

**ಕೌಶಿಕ**—ಇದೂ ಆಮಂತ್ರಿತ. ಆದ್ದರಿಂದ ಸರ್ವಾನುದಾತ್ತ.

**ಮಂದಸಾನಃ**—ಹೃಷ್ಯನ್ (ಸಂತೋಷಿಸುವನಾಗಿ) ಎಂದರ್ಥ. ಮದಿ ಸ್ತುತಿ ಮೋದ ಮದ ಸ್ವಪ್ನ ಕಾಂತಿಗತಿಷು, ಧಾತು. ಇದರ ಮುಂದೆ **ಋಞ್ಜಿ ವೃಧಿಮನ್ದಿಸಹಿಭ್ಯಃಕಿತ್** (ಉ. ಸೂ. ೨-೨೪೪) **ಛಂದಸ್ಯ ಸಾನಚ್ ಶುಜ್ಯಾಭ್ಯಾಂ** (ಉ. ಸೂ. ೨-೨೪೩) ಎಂಬುದರಿಂದ ಅಸಾನಚ್ ಎಂಬುದು ಅನುವೃತ್ತವಾಗುವುದು. ಋಜಿ ಭರ್ಜನೇ ವೃಧು ವೃದ್ಧೌ, ಮದಿಸ್ತುತಿಮೋದಮದಸ್ವಪ್ನಕಾಂತಿಗತಿಷು, ಷಹಹರ್ಷಣೇ ಈ ಧಾತುಗಳ ಮುಂದೆ ಅಸಾನಚ್ ಪ್ರತ್ಯಯ ಬರುವುದು. ಅದು ಕಿತ್ತಾಗುವುದು ಎಂದು ಸೂತ್ರಾರ್ಥ. ಇಲ್ಲಿ ಬಾಲಮನೋರಮೆಯಲ್ಲಿ ಋಜಿಗತೌ ಮದೀಹರ್ಷೇ ಧಾತುಗಳು ಎತ್ತಲ್ಪಟ್ಟಿರುವುವು. ಋಜಗತೌ ಎಂದು ಧಾತುವಿದ್ದರೂ ಋಜಿಗತೌ ಎಂಬುದು ಧಾತುಪಾಠದಲ್ಲಿ ಕಾಣಿಸುವುದಿಲ್ಲ. ಮದೀಹರ್ಷೇ ಎಂಬದನ್ನು ಗ್ರಹಿಸಿದರೆ ಅದು ಇದಿತ್ತಲ್ಲದೇ ಇರುವುದರಿಂದ ಅದಕ್ಕೆ ನುಮಾಗಮ ಬರುವುದಿಲ್ಲ. ಆದ್ದರಿಂಥ ಪ್ರಕೃತ ಸೂತ್ರದಲ್ಲಿ ಮನ್ದಿ ಎಂಬ ನಿರ್ದೇಶವು ಸರಿಯಾಗುವುದಿಲ್ಲ ಆದುದರಿಂದ ಇದು ಲೇಖಕಶೋಧಕ ದೋಷದಿಂದ ಬಂದಿರಬಹುದು ಎಂದು ಭಾವಿಸಬಹುದು, ಪ್ರತ್ಯಯವು ಚಿತ್ತಾದ್ದರಿಂದ **ಚಿತಃ** (ಪಾ ಸೂ ೬-೧-೧೬೩) ಎಂಬುದರಿಂದ ಅಂತೋದಾತ್ತವಾಗುವುದು.

**ಸುತಮ್**—ಕ್ತ ಪ್ರತ್ಯಯಾಂತ, ಪ್ರತ್ಯಯಸ್ವರ ಬರುವುದು.

**ನವ್ಯಮ್**-**ಣು ಸ್ತುತೌ, ಧಾತು. ಣೋನಃ** (ಪಾ ಸೂ. ೬-೧-೬೫) ಎಂಬುದರಿಂದ ಣಕಾರಕ್ಕೆ ನಕಾರ **ಅಚೋಯತ್** (ಪಾ. ಸೂ. ೩-೧-೯೭) ಅಜಂತವಾದ ಧಾತುವಿನ ಮುಂದೆ ಯತ್ ಪ್ರತ್ಯಯ ಬರುವುದು ಎಂಬುದರಿಂದ ಯತ್ ನು+ಯ. ಯ ಎಂಬ ಆರ್ಧಧಾತುಕ ಪ್ರತ್ಯಯ ಪರದಲ್ಲಿರುವುದರಿಂದ ಸಾರ್ವಧಾತುಕಾರ್ಧಧಾತುಕಯೋಃ, ಎಂಬುದರಿಂದ ಗುಣ. ಉಕಾರಕ್ಕೆ ಓಕಾರ. ನೋ+ಯ **ವಾಂತೋಯಿ ಪ್ರತ್ಯಯೇ** (ಪಾ. ಸೂ. ೬-೧-೭೯) ಯಕಾರಾದಿಯಾದ ಪ್ರತ್ಯಯ ಪರದಲ್ಲಿರುವಾಗ ಓಕಾರ ಔಕಾರಗಳಿಗೆ ಕ್ರಮವಾಗ ಅವ್, ಆವ್ ಆದೇಶಗಳು ಬರುವುವು ಎಂಬುದರಿಂದ ಪ್ರತ್ಯಯದ ಹಿಂದೆ ಇರುವ ಓಕಾರಕ್ಕೆ ಅವ್ ಆದೇಶ. ನವ್ಯ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುವುದು- ದ್ವಿತೀಯಾ ಏಕವಚನವನ್ನು ಹಚ್ಚಿದರೆ ನವ್ಯಮ್ ಎಂದಾಗುವುದು.

**ಆಯುಃ**—**ಏತೇರ್ಣಿಚ್ಚ** (ಉ ಸೂ. ೨-೨೭೫) **ಜನೇರುಸಿಃ** (ಉ ಸೂ ೨-೨೭೬) ಎಂಬುದರಿಂದ ಉಸಿಃ ಎಂದೂ **ಅರ್ತಿಪೃವಪಿಯಜಿತನಿಧನಿತಪಿಭ್ಯೋನಿತ್** ( ಉ. ಸೂ ೨-೨೭೪ ) ಎಂಬುದರಿಂದ ನಿತ್ ಎಂದೂ ಎರಡು ಪದಗಳು ಅನುವೃತ್ತಗಳಾಗುವುವು ಇಣ್ ಗತೌ ಎಂಬ ಧಾತುವಿನ ಮುಂದೆ ಉಸಿ ಪ್ರತ್ಯಯ ಬರುವುದು. ಅದು ಣಿತ್ತೂ, ನಿತ್ತೂ ಸಹ ಆಗುವುದು ಎಂದ. ಸೂತ್ರಾರ್ಥಸಿದ್ಧವಾಗುವುದು. ಇದರಿಂದ ಇಣ್

ಧಾತುವಿನ ಮುಂದೆ ಉಸ್‌ಪ್ರತ್ಯಯ ಬಂದರೆ ಇ+ಉಸ್-ಪ್ರತ್ಯಯ ಣಿತ್ತಾದ್ದರಿಂದ **ಅಚೋಞ್ಣಿತಿ** (ಪಾ. ಸೂ. ೭-೨-೧೧೫) ಎಂಬುದರಿಂದ ವೃದ್ಧಿ ಬಂದರೆ ಸ್ಥಾನಸಾಮ್ಯದಿಂದ ಇಗೆ ಐ ಬರುವುದು. **ಏಚೋಽಯವಾಯಾವಃ** (ಪಾ.ಸೂ. ೬-೧-೭೮) ಎಂಬುದರಿಂದ ಆಯ್ ಆದೇಶ ಬಂದರೆ ಆಯುಸ್. ರುತ್ವ ವಿಸರ್ಗಗಳು ಬಂದರೆ ಆಯುಃ ಎಂದಾಗುವುದು, ಪ್ರತ್ಯಯವು ನಿತ್ತಾದ್ದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುವುದು.

**ಸು**—ಸಂಹಿತಾಕಾಲದಲ್ಲಿ **ನಿಪಾತಸ್ಯಚ** (ಪಾ. ಸೂ. ೬-೩-೧೩೬) ಎಂಬುದರಿಂದ ದೀರ್ಘ ಬರುವುದು.

**ತಿರ**—ತ್ೃ ಪ್ಲವನತರಣಯೋಃ ಧಾತು. ಭ್ವಾದಿಯಲ್ಲಿ(೧ನೇಗಣ)ರುವುದು. ಇದರ ಮುಂದೆ ಲೋಟ್ ಅದಕ್ಕೆ ಮಧ್ಯಮಪುರುಷ ಏಕವಚ ಸಿಪ್. ಸಿಪ್ಪಿಗೆ **ಸೇರ್ಹ್ಯಪಿಚ್ಚ** (ಪಾ. ಸೂ ೩-೪-೮೭) ಎಂಬುದರಿಂದ ಹಿ ಆದೇಶ ತ್ೃ+ಹಿ. ನ್ಯಾಯವಾಗಿ ಶಪ್ ವಿಕರಣ ಬರಬೇಕು. ಆದರೂ ವ್ಯತ್ಯಯದಿಂದ ಶ ಎಂಬ ವಿಕರಣ ಪ್ರತ್ಯಯ ಬರುವುದು. ಶ, ಎಂಬುದು ಅಪಿತ್ತಾದ ಸಾರ್ವಧಾತುಕ. ಆದ್ದರಿಂದ **ಸಾರ್ವಧಾತುಕಮಪಿತ್** (ಪಾ. ಸೂ. ೧-೨-೪) ಎಂಬುದರಿಂದ ಙಿತ್ತಾಗುವುದು, **ಕ್ಙಿತಿಚ** (ಪಾ. ಸೂ ೧-೧-೫) ಎಂಬುದರಿಂದ ಗುಣಕ್ಕೆ ನಿಷೇಧ ಬರುವುದು. **ಋತಇದ್ಧಾತೋಃ** (ಪಾ. ಸೂ. ೭-೧-೧೦೦) ಋಕಾರಾಂತ ಧಾತುರೂಪವಾದ ಅಂಗಕ್ಕೆ ಇತ್ವ ಬರುವುದು ಎಂಬುದರಿಂದ ಬರುವ ಇತ್ವವು **ಅಲೋಂತ್ಯಸ್ಯ** (ಪಾ. ಸೂ. ೧-೧-೫೩) ಎಂಬುದರಿಂದ ಕೊನೆಯಲ್ಲಿರುವ ಋಕಾರಕ್ಕೆ ಬರುವುದು. ಅದು **ಉರಣ್ರಪರಃ** (ಪಾ. ಸೂ. ೧-೧-೫೧) ಎಂಬುದರಿಂದ ರೇಫ ಶಿರಸ್ಕವಾಗಿ ಬರುವುದು. ತಿರ್+ಅ+ಹಿ **ಅತೋಹೇಃ** (ಪಾ. ಸೂ. ೬-೪-೧೦೫) ಅದಂತಾಂಗದ ಮುಂದೆ ಇರುವ ಹಿಗೆ ಲುಕ್ ಬರುವುದು ಎಂಬುದರಿಂದ ಹಿಗೆ ಲುಕ್ ಬರುವುದು. ತಿರ ಎಂದಾಗುವುದು,

**ಕೃಧಿ**—ಡುಕೃಞ್ ಕರಣೇ, ಧಾತು ಲೋಟ್. ಅದಕ್ಕೆ ಸಿಪ್. ಅದಕ್ಕೆ ಹಿ ಆದೇಶ. ಕೃ+ಹಿ ಶಪ್ ವಿಕರಣಕ್ಕೆ **ಬಹುಲಂ ಛಂದಸಿ** ( ಪಾ. ಸೂ. ೨-೪-೭೩ ) ಎಂಬುದರಿಂದ ಲುಕ್. **ಶ್ರುಶೃಣುಪೄಕೃವೃಭ್ಯಶ್ಛಂದಸಿ** (೬-೪.೧೦೨) ಎಂಬುದರಿಂದ ಹಿಗೆ ಧಿ ಆದೇಶ. ಕೃಧಿ ಎಂದಾಗುವುದು.

**ಸಹಸ್ರಸಾಮ್**--ಪೂರ್ವಮಂತ್ರದಲ್ಲಿ ವಿವೃತವಾಗಿರುವುದು.

**ಋಷಿಮ್**--ಋಷೀ ಗತೌ ಧಾತು **ಇಗುಪಧಾತ್ಕಿತ್** (ಉ. ಸೂ. ೪-೫೫೯) **ಸರ್ವಧಾತುಭ್ಯ ಇನ್** (ಉ. ಸೂ. ೪-೫೫೭) ಎಂಬುದರಿಂದ ಇನ್ ಎಂಬುದು ಅನುವೃತ್ತವಾಗುವುದು. ಇಗುಪಧವಾದ ಧಾತುವಿನ ಮುಂದೆ ಇನ್ ಪ್ರತ್ಯಯ ಬರುವುದು ಅದು ಕಿತ್ತಾಗುವುದು ಎಂಬುದರಿಂದ ಋಷ್ ಎಂಬುದರ ಮುಂದೆ ಇನ್ ಬರುವುದು. ಪ್ರತ್ಯಯವು ಕಿತ್ತಾದ್ದರಿಂದ ಗುಣನಿಷೇಧ ಬರುವುದು. ನಿತ್ತಾದ್ದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತ ಬರುವುದು. ಇದರ ಮುಂದೆ ದ್ವಿತೀಯಾವಿಭಕ್ತಿ ಏಕವಚನ **ಅಮ್** ಪ್ರತ್ಯಯವನ್ನಿಟ್ಟರೆ ಪೂರ್ವರೂಪ ಬಂದು ಋಷಿಮ್ ಎಂದಾಗುವುದು ॥ ೧೧ ॥

॥ ಸಂಹಿತಾಪಾಠಃ ॥

ಪರಿ ತ್ವಾ ಗಿರ್ವಣೋ ಗಿರ ಇಮಾ ಭವಂತು ವಿಶ್ವತಃ ।
ವೃದ್ಧಾಯುಮನು ವೃದ್ಧಯೋ ಜುಷ್ಟಾ ಭವಂತು ಜುಷ್ಟಯಃ ॥೧೨॥

॥ ಪದಪಾಠಃ ॥

ಪರಿ । ತ್ವಾ । ಗಿರ್ವಣಃ । ಗಿರಃ । ಇಮಾಃ । ಭವಂತು । ವಿಶ್ವತಃ ।
ವೃದ್ಧಽಆಯುಂ । ಅನು । ವೃದ್ಧಯಃ । ಜುಷ್ಟಾಃ । ಭವಂತು । ಜುಷ್ಟಯಃ ॥೧೨॥

॥ ಸಾಯಣಭಾಷ್ಯಂ ॥

ಪ್ರವರ್ಗ್ಯೇ ಪರಿ ತ್ವೇತ್ಯಭಿಷ್ಟುಯಾತ್ । ಸ್ಪೃಷ್ಟ್ವೋದಕಮಿತಿ ಖಂಡೇ ಪರಿ ತ್ವಾ ಗಿರ್ವಣೋ ಗಿರೋಽಧಿ ದ್ವಯೋರಥಧಾ ಉಕ್ಥ್ಯಂ ವಚಃ। ಆ. ೪-೬ । ಇತಿ ಸೂತ್ರಿತಂ । ತಥಾ ಹವಿರ್ಧಾನಪ್ರವರ್ತನೇ ಸೇಯಂ ಪರಿಧಾನೀಯಾ । ಹವಿರ್ಧಾನೇ ಪ್ರವರ್ತಯಂತೀತಿ ಖಂಡೇ ಪರಿ ತ್ವಾ ಗಿರ್ವಣೋ ಗಿರ ಇತಿ ಪರಿದಧ್ಯಾತ್ । ಆ. ೪-೯ । ಇತಿ ಸೂತ್ರಿತಂ । ತಥಾ ಬ್ರಾಹ್ಮಣಂ ಚ। ಪರಿ ತ್ವಾ ಗಿರ್ವಣೋ ಗಿರ ಇತ್ಯುತ್ತಮಯಾ ಪರಿದಧಾತಿ । ಐ. ಬ್ರಾ. ೧-೨೯ । ಇತಿ ॥

ಹೇ ಗಿರ್ವಣೋಽಸ್ಮದೀಯಸ್ತುತಿಭಾಗಿಂದ್ರ ವಿಶ್ವತಃ ಸರ್ವೇಷು ಕರ್ಮಸು ಪ್ರಯುಜ್ಯಮಾನಾ ಇಮಾ ಗಿರೋಽಸ್ಮದೀಯಾ ಸ್ತುತಯಸ್ತ್ವಾಂ ಪರಿ ಭವಂತು । ಸರ್ವತಃ ಪ್ರಾಪ್ನುವಂತು । ಕೀದೃಶ್ಯೋ ಗಿರಃ । ವೃದ್ಧಾಯುಮನು ಪ್ರವೃದ್ಧೇನಾಯುಷ್ಯೇಣೋಪೇತಂ ತ್ವಾಮನುಸೃತ್ಯ ವೃದ್ಧಯೋ ವರ್ಧಮಾನಾಃ । ಕಿಂಚೈತಾ ಗಿರೋ ಜುಷ್ಟಾಸ್ತ್ವಯಾ ಸೇವಿತಾಃ ಸತ್ಯೋ ಜುಷ್ಟಯೋಽಸ್ಮಾಕಂ ಪ್ರೀತಿಹೇತವೋ ಭವಂತು ॥ ಗಿರ್ವಣಃ । ಗೀರ್ಭಿರ್ವನ್ಯತ ಇತಿ ಗಿರ್ವಣಾಃ । ವನ ಷಣ ಸಂಭಕ್ತೌ । ಸರ್ವಧಾತುಭ್ಯೋಽಸುನ್ । ಗಿರ ಉಪಧಾಯಾ ದೀರ್ಘಾಭಾವಶ್ಛಾಂದಸಃ । ಆಮಂತ್ರಿತನಿಘಾತಃ । ವಿಶ್ವತಃ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ವೃದ್ಧಾಯುಂ । ವೃಧು ವೃದ್ಧೌ । ಕ್ತಪ್ರತ್ಯಯಃ । ಉದಿತೋ ವಾ । ಪಾ. ೭-೨-೫೬ । ಇತೀಟಃ ಕ್ತ್ವಾಪ್ರತ್ಯಯೇ ವಿಕಲ್ಪಿತತ್ವಾದ್ಯಸ್ಯ ವಿಭಾಷಾ । ಪಾ. ೭-೨-೧೫ । ಇತಿ ನಿಷ್ಠಾಯಾಮಿಡಭಾವಃ । ಪ್ರತ್ಯಯಸ್ವರಃ । ಇಣ್ ಗತೌ । ಛಂದಸೀಣಃ । ಉ.೧-೨ । ಇತ್ಯುಣ್ । ಣಿತ್ತ್ವಾದ್ವೃದ್ಧಿಃ । ಆಯಾದೇಶಶ್ಚ । ವೃದ್ಧಮಾಯುರ್ಯಸ್ಯ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ವೃದ್ಧಯಃ ವೃಧೇಃ ಕ್ತಿನಿ ತಿತುತ್ರತಥಸಿಸುಸರಕಸೇಷು ಚ । ಪಾ ೭ ೨-೯ । ಇತೀಡಭಾವಃ । ನಿತ್ತ್ವಾದಾದ್ಯುದಾತ್ತತ್ವಂ ಜುಷ್ಟಾಃ । ಶ್ವೀದಿತೋ ನಿಷ್ಠಾಯಾಂ । ಪಾ. ೭-೨-೧೪ । ಇತೀಡಭಾವಃ । ಜುಷ್ಟಾರ್ಪಿತೇ ಇತ್ಯನುವೃತ್ತೌ ನಿತ್ಯಂ ಮಂತ್ರೇ । ಪಾ. ೬-೧ ೨೧೦ । ಇತ್ಯಾದ್ಯುದಾತ್ತತ್ವಂ । ಜುಷ್ಟಯಃ । ಜುಷೀ ಪ್ರೀತಿಸೇವನಯೋಃ ಕ್ತಿನ್ । ತಿತುತ್ರೇತೀಡಭಾವಃ । ನಿತ್ತ್ವಾದಾದ್ಯುದಾತ್ತಃ ॥ ೨೦ ॥

ಪ್ರತಿಪದಾರ್ಥ

**(ಹೇ) ಗಿರ್ವಣಃ**--ನಮ್ಮಿಂದ ಸ್ತುತಿಸಲ್ಪಡಲು ಅರ್ಹನಾದ ಎಲೈ ಇಂದ್ರನೇ | **ವಿಶ್ವತಃ**--ಎಲ್ಲೆಲ್ಲಿಯೂ ಎಂದರೆ ಎಲ್ಲಾ ಕರ್ಮಗಳಲ್ಲಿಯೂ ನಾವು ಉಪಯೋಗಿಸುವ | **ಇಮಾ ಗಿರಃ**—ಸ್ತೋತ್ರರೂಪವಾದ ಈ ವಾಕ್ಯಗಳು | **ತ್ವಾ**—ನಿನ್ನನ್ನು | **ಪರಿ ಭವಂತು**--ಎಲ್ಲೆಡೆಯಿಂದಲೂ ಬಂದು ಸೇರಲಿ | **ವೃದ್ಧಾಯುಂ**—ದೀರ್ಘಾಯುಸ್ಸುಳ್ಳ ನಿನ್ನನ್ನು | **ಅನು**—ಅನುಸರಿಸಿರುವ | **ವೃದ್ಧಯಃ**—ಪ್ರವರ್ಧಮಾನವಾದ | **ಜುಷ್ಟಾಃ**—ನಿನ್ನಿಂದ ಸೇವಿಸಲ್ಪಟ್ಟ (ವಾಕ್ಯಗಳು) | **ಜುಷ್ಟಯಃ**—ನಮಗೆ ಪ್ರೀತಿಯನ್ನುಂಟುಮಾಡುವವುಗಳಾಗಿ | **ಭವಂತು**—ಆಗಲಿ ||

|| ಭಾವಾರ್ಥ ||

ಎಲೈ ಸ್ತುತಿಪ್ರಿಯನಾದ ಇಂದ್ರನೇ, ನಾವು ಮಾಡುವ ಸ್ತುತಿರೂಪವಾದ ಈ ವಾಕ್ಯಗಳು ನಿನ್ನನ್ನು ಸುತ್ತಲೂ ಬಂದು ಸೇರಿ ನಿನಗೆ ಸಂತೋಷವನ್ನುಂಟುಮಾಡಲಿ. ಈ ವಾಕ್ಯಗಳು ನಿನಗೆ ಸಂತೋಷವುಂಟು ಮಾಡುವುದರಿಂದ ನಿನ್ನ ಆಯುಸ್ಸನ್ನು ( ಶಕ್ತಿಯನ್ನು ) ಹೆಚ್ಚಿಸಲಿ ಮತ್ತು ಈ ನಮ್ಮ ವಾಕ್ಯಗಳು ನಿನಗೆ ಸಂತೋಷವನ್ನುಂಟುಮಾಡುವುದರಿಂದ ನಮಗೂ ಅದರಿಂದ ಸಂತೋಷವುಂಟಾಗಲಿ.

## English Translation.

O deserver of praise, may those our praises be on all occasions around you (accepted by you), may they increase your power, O long-lived, and being agreeable to you, may they become our enjoyments.

ವಿಶೇಷವಿಷಯಗಳು

ಈ ಋಕ್ಕಿನ ಅರ್ಥವು ಬಹಳ ತೊಡಕಾಗಿರುವುದು ಅಭಿಪ್ರಾಯವು ಸರಿಯಾಗಿ ಹೊಂದುವುದಿಲ್ಲ. ಋಷಿಯ ಆಶಯವೇನೆಂಬದು ಸ್ಪಷ್ಟವಾಗಿ ತಿಳಿಯುವಂತಿಲ್ಲ.

**ಗಿರ್ವಣಃ**—**ಗೀರ್ಭಿರ್ವನ್ಯತೆ ಇತಿ ಗಿರ್ವಣಾಃ | ವನ ಷಣ ಸಂಭಕ್ತೌ|| ಅಸ್ಮದೀಯಸ್ತುತಿಭಾಕ್||** ನಮ್ಮ ವಾಕ್ಯಗಳಿಂದ ಭಜಿಸಲ್ಪಡುವವನು, ಸ್ತುತಿಸಲ್ಪಡುವವನು, ಸ್ತುತ್ಯರ್ಹನು ಎಂದರ್ಥವು.

ವಿಶ್ವತಃ—ಎಲ್ಲಾ ಕಡೆಗಳಲ್ಲಿಯೂ ಅಥವಾ ಎಲ್ಲಾ ಸಂದರ್ಭಗಳಲ್ಲಿಯೂ.

ವೃದ್ಧಾಯುಂ—**ಪ್ರವೃದ್ಧೇನಾಯುಷ್ಯೇಣೋಪೇತಂ**—ಹೆಚ್ಚಾದ ಅಥವಾ ಹೆಚ್ಚುತ್ತಿರುವ (ವೃದ್ಧಿಯಾಗುತ್ತಿರುವ) ಆಯುಸ್ಸಿನಿಂದ ಕೂಡಿದವನು, ಬಹುಕಾಲ ಜೀವಿಸಿರುವವನು. ಸ್ಕಂದಸ್ವಾಮಿಯು ಈ ಶಬ್ದಕ್ಕೆ **ವೃದ್ಧಾನ್ ಶತ್ರೂನ್ ಅತಿಗಂತಾರಂ**—ಶತ್ರುಗಳನ್ನು ನಿಗ್ರಹಿಸುವವನು ಎಂದು ಅರ್ಥಮಾಡಿದಾರೆ.

**ಅನು-ಅನುಸೃತ್ಯ, ಪ್ರಾಪ್ಯ**—ಎಂದರೆ ನಾವು ಮಾಡುವ ಸ್ತೋತ್ರಗಳು ನಿನಗೆ ಸೇರಿ ಎಂದರೆ ನಿನಗೆ ಕೇಳಿಸಿ.

**ವೃದ್ಧಯೇ**— **ವರ್ಧಮಾನಾಃ**—ಹೆಚ್ಚಾಗಿ, ವಿಶೇಷವಾಗಿ, ವೃದ್ಧಿಯಾಗುವ, ಬಹಳವಾದ.

**ಜುಷ್ಟಾಃ, ಜುಷ್ಟಯೇ**— **ಜುಷೀ ಪ್ರೀತಿಸೇವನಯೋಃ**—ಜುಷೀ ಎಂಬ ಧಾತುವಿಗೆ ಪ್ರೀತಿಸು, ಸೇವಿಸು ಎಂದರ್ಥವಿರುವುದರಿಂದ ಈ ಶಬ್ದಗಳಿಗೆ ಪ್ರೀತಿಯನ್ನುಂಟುಮಾಡುವ, ಪ್ರೀತ್ಯಾಸ್ಪದವಾದ ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಗಿರ್ವಣಃ**— ಗೀರ್ಭಿಃ ವನ್ಯತೇ ಇತಿ ಗಿರ್ವಣಾಃ ಎಂದು ವಿಗ್ರಹ. ಗೄ ಶಬ್ದೇ ಧಾತು. **ಕ್ರ್ಯಾದಿ**ಯಲ್ಲಿರುವುದು. ಇದರಮುಂದೆ **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. **ಋತ ಇದ್ಧಾತೋಃ** (ಪಾ. ಸೂ. ೭-೧-೧೦೦) ಎಂಬುದರಿಂದ ಇತ್ವ ಅದು ಪರವಾಗಿ ಬರುವುದು. ವನಷಣ ಸಂಭಕ್ತೌ ಧಾತು. ಇದರಮುಂದೆ **ಸರ್ವಧಾತುಭ್ಯೋಽಸುನ್** ( ಉ. ಸೂ. ೪-೬೨೮ ) ಎಂಬುದರಿಂದ ಅಸುನ್ ಪ್ರತ್ಯಯ ಗಿರ್+ಭಿಸ್+ವನಸ್ ಎಂಬುದಕ್ಕೆ ಪ್ರಾತಿಪದಿಕಸಂಜ್ಞೆ ಬಂದು **ಸುಪೋಧಾತುಪ್ರಾತಿಪದಿಕಯೋಃ** (ಪಾ. ಸೂ. ೨-೪-೭೧) ಎಂಬುದರಿಂದ ಭಿಸ್ ಪ್ರತ್ಯಯಕ್ಕೆ ಲುಕ್ ಬರುವುದು. ಪ್ರತ್ಯಯಲಕ್ಷಣದಿಂದ ಗಿರ್ ಎಂಬುದು ಪದ ಆದ್ದರಿಂದ **ರ್ವೋರುಪಧಾಯಾದೀರ್ಘ ಇಕಃ** (ಪಾ. ಸೂ. ೮-೨-೭೬) ಪದಾಂತವಿಷಯದಲ್ಲಿ ರೇಫಾಂತವಕಾರಾಂತಧಾತುಗಳ ಉಪಧಾಭೂತವಾದ ( ಉಪಾಂತ್ಯವಾದ ) ಇಕ್‌ಗೆ ದೀರ್ಘ ಬರುವುದು ಎಂಬುದರಿಂದ ಗಿರ್ ನ ಇಕಾರಕ್ಕೆ ದೀರ್ಘವು ಪ್ರಾಪ್ತವಾಗುವುದು. ಸರ್ವೇವಿಧಯಶ್ಛಂದಸಿ ವಿಕಲ್ಪ್ಯಂತೇ ( ಪರಿಭಾ. ೩೫ ) ಎಂಬುದರಿಂದ ಛಂದಸ್ಸಿನಲ್ಲಿ ದೀರ್ಘವಿಧಿಯೂ ವಿಕಲ್ಪವಾದ್ದರಿಂದ ಬರುವುದಿಲ್ಲ. ಗಿರ್ವನಸ್ ಎಂಬುದರ ಮುಂದೆ ಸಂಬೋಧನಪ್ರಥಮಾಏಕವಚನ ಸು ಪ್ರತ್ಯಯವನ್ನು ಹಚ್ಚುವುದು. **ಹಲ್‌ಙ್ಯಾಬ್ಭ್ಯಃ** ( ಪಾ. ಸೂ. ೬-೧-೬೮) ಎಂಬುದರಿಂದ ಸುಲೋಪ. ರುತ್ವವಿಸರ್ಗಗಳೂ ನಕಾರಕ್ಕೆ ಣಕಾರವೂ ಬಂದರೆ ಗಿರ್ವಣಃ ಎಂದಾಗುವುದು. ಇದು ಆಮಂತ್ರಿತ. ಆದ್ದರಿಂದ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ಅನುದಾತ್ತ.

**ವಿಶ್ವತಃ**— ತಸಿಲ್‌ಪ್ರತ್ಯಯಾಂತ. ಪ್ರತ್ಯಯವು ಲಿತ್. ಆದ್ದರಿಂದ ಪ್ರತ್ಯಯದ ಹಿಂದೆ ಇರುವ ಅಕಾರವು **ಲಿತಿ** (ಪಾ. ಸೂ ೬-೧-೧೯೩) ಎಂಬುದರಿಂದ ಉದಾತ್ತ.

**ವೃದ್ಧಾಯುಂ**— ವೃಧು ವೃದ್ಧೌ ಧಾತು. ಇದರ ಮುಂದೆ ಕ್ತ ಪ್ರತ್ಯಯ. ವೃಧ್+ತ ವೃಧ್ ಧಾತುವು ಉದಿತ್ತು. ಇದರ ಮುಂದೆ ಕ್ತ್ವಾ ಪ್ರತ್ಯಯವನ್ನಿಟ್ಟರೆ **ಉದಿತೋ ವಾ** (ಪಾ.ಸೂ. ೭-೨-೫೬) ಉದಿತ್ತಾದ ಧಾತುವಿನ ಮುಂದೆ ಇರುವ ಕ್ತ್ವಾ ಪ್ರತ್ಯಯಕ್ಕೆ ಇಡಾಗಮವು ವಿಕಲ್ಪವಾಗಿ ಬರುವುದು ಎಂದು ವಿಕಲ್ಪದಿಂದ ಇಡಾಗಮವನ್ನು ವಿಧಾನಮಾಡಿರುವರು ಆದ್ದರಿಂದ **ಯಸ್ಯ ವಿಭಾಷಾ** (ಪಾ ಸೂ. ೭-೨-೧೫) ಯಾವ ಧಾತುವಿನ ಮುಂದಿರುವ ಪ್ರತ್ಯಯಕ್ಕೆ ಕ್ವಚಿತ್ ಇಡಾಗಮವನ್ನು ವಿಕಲ್ಪವಾಗಿ ವಿಧಿಸುವರೋ ಅದರಮುಂದೆ ಇರುವ ಕ್ತ, ಕ್ತವತು ಪ್ರತ್ಯಯಗಳಿಗೆ ಇಡಾಗಮ ಬರುವುದಿಲ್ಲ ಎಂಬುದರಿಂದ **ಆರ್ಧಧಾತುಕಸ್ಯೇಡ್ವಲಾದೇಃ** ( ಪಾ. ಸೂ. ೭-೨-೩೫) ಎಂಬುದರಿಂದ ಪ್ರಾಪ್ತವಾಗುವ ಇಡಾಗಮಕ್ಕೆ ನಿಷೇಧ ಬರುವುದು. ವೃಧ್+ ತ ಎಂದಿರುವಾಗ **ಝಷಸ್ತಥೋರ್ಧೋಽಧಃ** (ಪಾ. ಸೂ. ೮-೨-೪೦) ಧಾ ಧಾತುಸಂಬಂಧಿಯಲ್ಲದ ಝಷ್‌ವರ್ಣದ ಮುಂದೆ ಇರುವ ತಕಾರ ಥಕಾರಗಳಿಗೆ ಧಕಾರ ಬರುವುದು ಎಂಬುದರಿಂದ ಝಷ್‌ಪ್ರತ್ಯಾಹಾರದಲ್ಲಿರುವ ಧಕಾರದ ಮುಂದೆ ಇರುವ ತಕಾರಕ್ಕೆ ಧಕಾರ ಬರುವುದು. ವೃಧ್+ಧ **ಝಲಾಂ ಜಶ್ ಝಶಿ** ( ಪಾ. ಸೂ. ೮-೪-೫೩ ) ಝಶ್ ವರ್ಣದ ಹಿಂದೆ ಇರುವ ಝಲ್ ವರ್ಣಗಳಿಗೆ ಜಶ್ ವರ್ಣಗಳು ಬರುವುವು ಎಂಬುದರಿಂದ ಧಕಾರಕ್ಕೆ ದಕಾರ ಬಂದರೆ ವೃದ್ಧ

ಎಂದಾಗುವುದು. ಪ್ರತ್ಯಯಸ್ವರ ಬರುವುದು. ಇಣ್ ಗತೌ ಧಾತು. ಇದರಮುಂದೆ **ಛಂದಸೀಣಃ** (ಉ.ಸೂ. ೧-೨) ಛಂದಸ್ಸಿನಲ್ಲಿ ಇಣ್ ಧಾತುವಿನ ಮುಂದೆ ಉಣ್ ಪ್ರತ್ಯಯು ಬರುವುದು ಎಂಬುದರಿಂದ ಉಣ್ ಪ್ರತ್ಯಯುಬಂದರೆ ಇ+ಉ. ಉಣ್ ಪ್ರತ್ಯಯವು ಣಿತ್. ಆದ್ದರಿಂದ **ಅಚೋಞ್ಣಿತಿ** (ಪಾ. ಸೂ. ೭-೨-೧೧೫) ಞಿತ್ತು ಣಿತ್ತು ಆದ ಪ್ರತ್ಯಯಗಳು ಪರದಲ್ಲಿರುವಾದ ಅಜಂತವಾದ ಅಂಗಕ್ಕೆ ವೃದ್ಧಿ ಬರುವುದು ಎಂಬುದರಿಂದ ವೃದ್ಧಿಬಂದರೆ ಐ+ಉ **ಏಚೋಯವಾಯಾವಃ** (ಪಾ. ಸೂ. ೬-೧-೭೮) ಎಂಬುದರಿಂದ ಆಯ್ ಆದೇಶ ಬಂದರೆ ಆಯು ಎಂದಾಗು ವುದು. ವೃದ್ಧಂ ಆಯುಃ ಯಸ್ಯ ಸಃ ವೃದ್ಧಾಯುಃ ಎಂದು ಬಹುವ್ರೀಹಿಸಮಾಸ. **ಬಹುವ್ರೀಹೌ ಪ್ರಕೃತ್ಯಾ-ಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುವುದು.

**ವೃದ್ಧಯಃ—ಸ್ತ್ರಿಯಾಂ ಕ್ತಿನ್** (ಪಾ. ಸೂ. ೩-೩-೯೪) ಎಂಬುದರಿಂದ ವೃಧ್ ಧಾತುವಿನ ಮುಂದೆ ಕ್ತಿನ್ ಪ್ರತ್ಯಯ, **ತಿ, ತು, ತ್ರ ತಥ, ಸಿಸು, ಸರ, ಕ, ಸೇ, ಷುಚ** (ಪಾ. ಸೂ. ೭-೨-೯) ಎಂಬುದರಿಂದ ತಿಗೆ ಇಡಾಗಮ ಬರುವುದಿಲ್ಲ. ಧತ್ವ ಜಶ್ತ್ವಗಳು ಪೂರ್ವದಂತೆಯೇ ಬರುವುವು. ವೃದ್ಧಿ ಎಂದಾಗುವುದು. **ಞ್ನಿತ್ಯಾ-ದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ವೃದ್ಧಿ ಎಂಬುದು ಆದ್ಯುದಾತ್ತ. ಪ್ರಥಮಾ ಬಹುವಚನ ದಲ್ಲಿ ವೃದ್ಧಯಃ ಎಂದಾಗುವುದು.

**ಜುಷ್ಟಾಃ—ಜುಷೀ ಪ್ರೀತಿಸೇವನಯೋಃ**—ಇದಿತ್ತಾದ ಧಾತು. ಇದರ ಮುಂದೆ ಕ್ತ ಪ್ರತ್ಯಯು **ಶ್ವೀದಿತೋನಿಷ್ಠಾಯಾಮ್** (ಪಾ. ಸೂ. ೭-೨-೧೪) ಶ್ವಿ ಧಾತು ಇದಿತ್ತಾದ ಧಾತು ಇವುಗಳ ಮುಂದೆ ಇರುವ ಕ್ತ, ಕ್ತವತು, ಪ್ರತ್ಯಯಗಳಿಗೆ ಇಡಾಗಮ ಬರುವುದಿಲ್ಲ ಎಂದು ನಿಷೇಧವಿರುವುದರಿಂದ ಕ್ತ ಪ್ರತ್ಯಯಕ್ಕೆ ಇಡಾಗಮ ಬರು ವುದಿಲ್ಲ. ಪ್ರತ್ಯಯಸ್ವರವು ಪ್ರಾಪ್ತವಾದರೆ ಅದನ್ನು ಬಾಧಿಸಿ **ನಿತ್ಯಂಮಂತ್ರೇ** (ಪಾ. ಸೂ. ೬-೧-೨೧೦) **ಜುಷ್ಟಾ-ರ್ಪಿತೇಚ ಛಂದಸಿ** (ಪಾ. ಸೂ. ೬-೧-೨೦೯) ಎಂಬ ಪೂರ್ವಸೂತ್ರದಿಂದ ಜುಷ್ಟಾರ್ಪಿತೇ ಎಂಬ ಪದವು ಅನು-ವೃತ್ತವಾಗುವುದು. ಜುಷ್ಟ ಆರ್ಪಿತ ಎಂಬ ಶಬ್ದಗಳು ಮಂತ್ರದಲ್ಲಿ ನಿತ್ಯವಾಗಿ ಆದ್ಯುದಾತ್ತಗಳಾಗುವುವು ಎಂಬುದ ರಿಂದ ಆದ್ಯುದಾತ್ತ ಬರುವುದು.

**ಜುಷ್ಟಯಃ**—ಜುಷೀ ಪ್ರೀತಿಸೇವನಯೋಃ ಧಾತು. ಕ್ತಿನ್ ಪ್ರತ್ಯಯ. **ತಿತುತ್ರ....** (ಪಾ. ಸೂ. ೭-೨-೯) ಎಂಬುದರಿಂದ ಇಡಾಗಮ ಬರುವುದಿಲ್ಲ **ಷ್ಟುನಾಷ್ಟುಃ** (ಪಾ- ಸೂ. ೮-೪-೪೧) ಎಂಬುದರಿಂದ ಷ್ಟುತ್ವ ಬಂದು ತಕಾರಕ್ಕೆ ಟಕಾರ, ಜುಷ್ಟಿ ಎಂದಾಗುವುದು. ನಿತ್ಸ್ವರದಿಂದ ಆದ್ಯುದಾತ್ತ. ಪ್ರಥಮಾಬಹುವಚನದಲ್ಲಿ ಜುಷ್ಟಯಃ ಎಂದಾಗುವುದು. ॥ ೧೨ ॥

**॥ ಇತಿ ದಶಮಂ ಸೂಕ್ತಂ ಸಮಾಪ್ತಂ ॥**

**ಇಲ್ಲಿಗೆ ಪ್ರಥಮಮಂಡಲದಲ್ಲಿ ಹತ್ತನೆಯ ಸೂಕ್ತವು ಮುಗಿದುದು.**



॥ ಓಂ ॥

## ಹನ್ನೊಂದನೆಯ ಸೂಕ್ತವು

**ಇಂದ್ರಂ ವಿಶ್ವಾ ಇತ್ಯಷ್ಟರ್ಚಸ್ಯ ಸೂಕ್ತಸ್ಯ ಮಧುಚ್ಛಂದಸಃ ಪುತ್ರೋ ಜೇತೃನಾಮಕ ಋಷಿಃ। ತಥಾ ಚಾನುಕ್ರಾಂತಂ। ಇಂದ್ರಮಷ್ಟೌ ಜೇತಾ ಮಾಧುಚ್ಛಂದಸ ಇತಿ । ಛಂದಸ್ತ್ವನುಷ್ಟುಭಮಿತಿ ಪೂರ್ವಸೂತ್ರೋಕ್ತಂ । ಇಂದ್ರೋ ದೇವತಾನುವರ್ತತೇ ॥ ವಿನಿಯೋಗಸ್ತು । ಮಹಾವ್ರತೇ ನಿಷ್ಕೇವಲ್ಯೇ ಕೃತ್ಸ್ನಸೂಕ್ತಂ ಶಂಸನೀಯಂ । ಊರೂ ಇತಿ ಖಂಡೇ ಶೌನಕೇನ ಸೂತ್ರಿತಂ । ಇಂದ್ರಂ ವಿಶ್ವಾ ಅವೀವೃಧನಿತ್ಯಾನುಷ್ಟುಭಂ ತಸ್ಯ ಪ್ರಥಮಾಯಾಃ ಪೂರ್ವಮರ್ಧರ್ಚಂ ಶಸ್ತ್ವೋತ್ತರೇಣಾರ್ಧರ್ಚೇನೋತ್ತರಸ್ಯಾಃ ಪೂರ್ವಮರ್ಧರ್ಚಂ ವ್ಯತಿಷಜತಿ ಪಾದೈಃ ಪಾದಾನನುಷ್ಟುಪ್ಕಾರಂ ಪ್ರಾಗುತ್ತಮಾಯಾಃ। ಐ.ಆ. ೫ ೩-೧ । ಇತಿ । ಬ್ರಾಹ್ಮಣಂ ಚ ಪ್ರಥಮಾರಣ್ಯಕೇ ಪಠ್ಯತೇ ಪ್ರ ವೋ ಮಹ ಇತಿ ಖಂಡೇ । ಇಂದ್ರಂ ವಿಶ್ವಾ ಅವೀವೃಧನ್ನಿತಿ ಪದಾನುಷಂಗಾಃ । ಐ. ಆ. ೧-೫-೨ । ಇತಿ । ತಥಾ ಪೃಷ್ಠ್ಯಸ್ಯ ಪಂಚಮೇಽಹನಿ ನಿಷ್ಕೇವಲ್ಯೇ ಶಸ್ತ್ರ ಇಂದ್ರಂ ವಿಶ್ವಾ ಅವೀವೃಧನ್ನಿತ್ಯನುರೂಪಸ್ತೃಚಃ। ಸ್ತೋಮೇ ವರ್ಧಮಾನ ಇತಿ ಖಂಡೇ ಸೂತ್ರಿತಂ ಉಪ ನೋ ಹರಿಭಿಃ ಸುತಮಿಂದ್ರಂ ವಿಶ್ವಾ ಅವೀವೃಧನ್ । ಆ ೭-೧೨ । ಇತಿ ॥**

### ಅನುವಾದವು

ಇಂದ್ರಂ ವಿಶ್ವಾ ಎಂಬ ಈ ಸೂಕ್ತಕ್ಕೆ ಮಧುಚ್ಛಂದಋಷಿಯ ಪುತ್ರನಾದ ಜೇತಾ ಎಂಬುವನು ಋಷಿಯು. ಅನುಕ್ರಮಣಿಕೆಯಲ್ಲಿಯೂ **ಇಂದ್ರಮಷ್ಟೌ ಜೇತಾ ಮಾಧುಚ್ಛಂದಸ ಇತಿ** ಎಂದರೆ ಎಂಟು ಋಕ್ಕುಗಳುಳ್ಳ ಇಂದ್ರಂ ವಿಶ್ವಾ ಎಂಬ ಸೂಕ್ತಕ್ಕೆ ಮಧುಚ್ಛಂದಪುತ್ರನಾದ ಜೇತಾ ಎಂಬುವನು ಋಷಿಯು ಎಂದು ಹೇಳಲ್ಪಟ್ಟಿದೆ. ಛಂದಸ್ಸು ಅನುಷ್ಟುಪೆಂದು ಹಿಂದೆಯೇ ಹೇಳಿದೆ ಇಂದ್ರನೇ ದೇವತೆಯು. ವಿನಿಯೋಗವೇನೆಂದರೆ—ಮಹಾವ್ರತವೆಂಬ ಯಾಗದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಪಠನ ಮಾಡುವಾಗ ಈ ಸೂಕ್ತವೆಲ್ಲವನ್ನೂ ಪಠಿಸಬೇಕು ಎಂದು ಶ್ರೌತಸೂತ್ರದ **ಊರೂ** ಎಂಬ ಖಂಡದಲ್ಲಿ ಶೌನಕರು ಹೇಳಿರುವರು ಮತ್ತು ಐತರೇಯಾರಣ್ಯಕದಲ್ಲಿ (ಐ.ಆ. ೫-೨-೧) ಇಂದ್ರಂ ವಿಶ್ವಾ ಅವೀವೃಧನ್ನಿತ್ಯಾನುಷ್ಟುಭಂ ಎಂದು ಮೊದಲಾಗಿ ಈ ಸೂಕ್ತದ ವಿನಿಯೋಗಕ್ರಮವನ್ನೂ ಮತ್ತು ಇದರ ವಿವರಣೆರೂಪವಾದ ಬ್ರಾಹ್ಮಣ ಭಾಗವನ್ನೂ ಅದೇ ಆರಣ್ಯಕದಲ್ಲಿ (ಐ.ಆ. ೧-೫-೨) ಪ್ರ ವೋ ಮಹೇ ಎಂಬ ಖಂಡದಲ್ಲಿಯೂ ಹೇಳಿರುವುದು. ಮತ್ತು ಪೃಷ್ಠ್ಯಯಾಗದ ಐದನೇ ದಿವಸದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಪಠನ ಮಾಡುವಾಗ **ಇಂದ್ರಂ ವಿಶ್ವಾ ಅವೀವೃಧನ್** ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಸ್ತೋಮಾಪಕ್ಕಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಉಪ ನೋ ಹರಿಭಿಃ ಸುತಮಿಂದ್ರಂ ವಿಶ್ವಾ ಅವೀವೃಧನ್** ಎಂಬ ಸೂತ್ರದಲ್ಲಿ ಹೇಳಿರುವುದು.

॥ ಓಂ ॥

## ಸೂಕ್ತ—೧೧

॥ ಮಂಡಲ—೧ ॥ ಅನುವಾಕ—೩ ॥ ಸೂಕ್ತ—೧೧ ॥

॥ ಅಷ್ಟಕ —೧ ॥ ಅಧ್ಯಾಯ—೧ ॥ ವರ್ಗ— ೨೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೮ ॥

॥ ಋಷಿಃ—ಜೇತಾ ಮಾಧುಚ್ಛಂದಸಃ ॥

॥ ದೇವತಾ—ಇಂದ್ರಃ ॥

॥ ಛಂದಃ—ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಇಂದ್ರಂ ವಿಶ್ವಾ ಅವೀವೃಧನ್ತ್ಸಮುದ್ರವ್ಯಚಸಂ ಗಿರಃ ॥
ರಥೀತಮಂ ರಥೀನಾಂ ವಾಜಾನಾಂ ಸತ್ಪತಿಂ ಪತಿಂ ॥ ೧ ॥

॥ ಪದಪಾಠಃ ॥

ಇಂದ್ರಂ । ವಿಶ್ವಾಃ । ಅವೀವೃಧನ್ । ಸಮುದ್ರಽವ್ಯಚಸಂ । ಗಿರಃ ॥
ರಥಿಽತಮಂ । ರಥೀನಾಂ । ವಾಜಾನಾಂ । ಸತ್ಽಪತಿಂ । ಪತಿಂ ॥ ೧ ॥

॥ ಸಾಯಣಭಾಷ್ಯಂ ॥

ವಿಶ್ವಾಃ ಸರ್ವಾ ಗಿರೋಽಸ್ಮದೀಯಾಃ ಸ್ತುತಯ ಇಂದ್ರಮವೀವೃಧನ್ । ವರ್ಧಿತವತ್ಯಃ । ಕೀದೃಶಮಿಂದ್ರಂ । ಸಮುದ್ರವ್ಯಚಸಂ ಸಮುದ್ರವದ್ವ್ಯಾಪ್ತವಂತಂ ರಥೀನಾಂ ರಥಯುಕ್ತಾನಾಂ ಯೋದ್ಧ್ವಾಣಾಂ ಮಧ್ಯೇ ರಥೀತಮಂ ಅತಿಶಯೇನ ರಥಯುಕ್ತಂ ವಾಜಾನಾಮನ್ನಾನಾಂ ಪತಿಂ ಸ್ವಾಮಿನಂ ಸತ್ಪತಿಂ ಸತಾಂ ಸನ್ಮಾರ್ಗವರ್ತಿನಾಂ ಪಾಲಕಂ ॥ ವಿಶ್ವಾಃ । ವಿಶೇಃ ಕ್ವನ್ । ನಿತ್ಸ್ವರಃ । ಅವೀವೃಧನ್ । ವೃಧೇರ್ಣಿಚಿ ಚಙ್ಯುರ್ಯದಿತ್ಯನುವೃತ್ತೌ ನಿತ್ಯಂ ಛಂದಸಿ । ಪಾ ೭-೪-೮ । ಇತ್ಯೃಕಾರಸ್ಯ ಋಕಾರವಿಧಾನಾಲ್ಲಘೂಪಧಗುಣಾಭಾವಃ । ನಿಘಾತಸ್ವರಃ । ಸಮುದ್ರವ್ಯಚಸಂ । ವ್ಯಚೇರಸುನ್ । ಗಾಙ್ಕುಟಾದಿಭ್ಯೋಽಞ್ಣಿನ್ಙಿತ್ । ಪಾ. ೧-೨-೧ । ಇತಿ ಪ್ರಾಪ್ತಸ್ಯ ಙಿತ್ವಸ್ಯ ವ್ಯಚೇಃ ಕುಟಾದಿತ್ವಮನಸಿ । ಪಾ. ೧-೨-೧-೧ ।

ಇತ್ಯಸಿನಿಷೇಧಾದ್ಗ್ರಹಿಜ್ಯೇತ್ಯಾದಿನಾ ಜಾತಿ ವಿಧೀಯಮಾನಂ ಸಂಪ್ರಸಾರಣಂ । ಪಾ. ೬-೧.೧೬ । ನ ಭವತಿ ಸಮುದ್ರವ್ಯಚ ಇವ ವ್ಯಚೋ ಯಸ್ಯ। ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ರಥೀತಮಂ ರಥೀನಾಂ ರಥಶಬ್ದಾದುತ್ಪನ್ನಸ್ಯೇನಶ್ಛಾಂದಸಂ ದೀರ್ಘತ್ವಂ । ಪ್ರತ್ಯಯಸ್ವರೇಣೋದಾತ್ತತ್ವಂ ಚ । ವಾಜಾನಾಂ । ವೃಷಾದಿತ್ವಾದಾದ್ಯುದಾತ್ತತ್ವಂ । ಸತ್ಪತಿಂ । ಪತ್ಯಾವೈಶ್ವರ್ಯೇ । ಪಾ. ೬-೨.೧೮ । ಇತಿ ಪೂರ್ವಪದ-ಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

ವಿಶ್ವಾಃ—ಸಮಸ್ತವಾದ । ಗಿರಃ—ನಾವು ಮಾಡುವ ಸ್ತೋತ್ರರೂಪವಾದ ವಾಕ್ಯಗಳು । ಸಮುದ್ರ-ವ್ಯಚಸಂ—ಸಮುದ್ರದಂತೆ ವ್ಯಾಪಿಸಿರುವ । ರಥೀನಾಂ—ರಥಯುಕ್ತರಾದ ಯುದ್ಧಭಟರ (ಮಧ್ಯದಲ್ಲಿ) । ರಥೀ-ತಮಂ—ಅತಿಶಯವಾಗಿ ರಥದಿಂದ ಕೂಡಿರುವ। ವಾಜಾನಾಂ—ಅನ್ನಾದ್ಯಾಹಾರಗಳಿಗೆ। ಪತಿಂ—ಸ್ವಾಮಿಯಾದ । ಸತ್ಪತಿಂ—ಸಜ್ಜನರ ರಕ್ಷಕನಾದ । ಇಂದ್ರಂ—ಇಂದ್ರನನ್ನು । ಅವೀವೃಧನ್—ಅಭಿವೃದ್ಧಿಪಡಿಸಿರುವವು ಎಂದರೆ ಪ್ರಶಂಸೆ ಮಾಡಿರುವವು ॥

॥ ಭಾವಾರ್ಥ ॥

ಇಂದ್ರನು ಸಮುದ್ರದಂತೆ ಸರ್ವವ್ಯಾಪಿಯು; ರಥದಲ್ಲಿ ಕುಳಿತು ಯುದ್ಧಮಾಡುವ ವೀರಭಟರಲ್ಲಿ ಅತ್ಯಂತ ಶ್ರೇಷ್ಠನು, ಅನ್ನಾದ್ಯಾಹಾರಗಳಿಗೆ ಒಡೆಯನು, ಸಜ್ಜನರ ಪಾಲಕನು. ಇಂತಹ ಇಂದ್ರನನ್ನು ನಮ್ಮ ಸ್ತುತಿರೂಪವಾದ ವಾಕ್ಯಗಳೆಲ್ಲಾ ಪ್ರಶಂಸೆ ಮಾಡಿರುವವು.

English Translation

All our praises have glorified Indra who is as great as the ocean, who is the best chariateer of all charioteers, the lord of food, the protector of the virtuous.

॥ ವಿಶೇಷವಿಷಯಗಳು ॥

ಅವೀವೃಧನ್—ವೃಧ್ ಧಾತುವು ಸಾಧಾರಣವಾಗಿ ಋಗ್ವೇದದಲ್ಲಿ ಪ್ರಶಂಸೆಮಾಡು ಸ್ತುತಿಸು ಎಂಬ ಅರ್ಥದಲ್ಲಿ ಉಪಯೋಗಿಸಲ್ಪಡುವುದು. ಈ ಋಕ್ಕಿನಲ್ಲಿ ಗಿರಃ ಇಂದ್ರಂ ಅವೀವೃಧನ್ ಎಂದರೆ ನಮ್ಮ ವಾಕ್ಯಗಳು ಇಂದ್ರನನ್ನು ಪ್ರಶಂಸೆಮಾಡಿರುವವು, ಹೊಗಳಿರುವವು ಎಂದರ್ಥವು.

ಸಮುದ್ರವ್ಯಚಸಂ—ಸಮುದ್ರದಂತೆ ವ್ಯಾಪ್ತನಾದ. ಈ ಉಪಮಾನವು ಅಷ್ಟೇನೂ ಸಮಂಜಸವಾಗಿ ತುವುದಿಲ್ಲ. ಏಕೆಂದರೆ ಸಮುದ್ರವು ಎಲ್ಲೆಲ್ಲಿಯೂ ವ್ಯಾಪಿಸಿರುವುದಿಲ್ಲ. ಆದರೆ ಸಮುದ್ರವು ಬಹುವಿಸ್ತಾರವಾಗಿಯೂ, ಅಗಾಧವಾಗಿಯೂ ಇರುವುದರಿಂದ ಋಷಿಯು ಈ ಅಭಿಪ್ರಾಯವನ್ನೇ ಮನಸ್ಸಿನಲ್ಲಿಟ್ಟುಕೊಂಡು ಸಮುದ್ರದ ಉಪಮಾನವನ್ನು ಕೊಟ್ಟಿರಬಹುದು.

**ರಥೀತಮಂ, ರಥೀನಾಂ**— ಋಗ್ವೇದದಲ್ಲಿ ಇಂತಹ ದ್ವಿರುಕ್ತಿಗಳು ಬಹಳವಾಗಿವೆ. **ವಸೋರಿಂದ್ರಂ ವಸುಪತಿಂ; ಸೋಮಪಾ ಸೋಮಪೀತಯೇ** ಎಂದು ಮೊದಲಾದ ಅನೇಕ ಉದಾಹರಣೆಗಳನ್ನು ಕೊಡ ಬಹುದು. ಈ ಪದಗಳಿಗೆ ರಥಿಕರಲ್ಲಿ ಶ್ರೇಷ್ಠನಾದವನು ಎಂದರ್ಥವು.

**ಸತ್ಪತಿಂ— ಸತಾಂ ಪತಿಂ ಪಾಲಕಂ**—ಸಜ್ಜನರ ಸಂರಕ್ಷಕನು, ಪಾಲಕನು ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ವಿಶ್ವಾಃ— ವಿಶ ಪ್ರವೇಶನೇ,** ಧಾತು. ಇದರ ಮುಂದೆ **ಅಶೂಪ್ರುಷಿಲಟಿಕಣಿಖಟಿವಿಶಿಭ್ಯಃ ಕ್ವನ್** (ಉ. ಸೂ. ೧-೧೪೯) ಎಂಬುದರಿಂದ ಕ್ವನ್‌ಪ್ರತ್ಯಯ ವಿಶ್ವನ್. ಇದು ನಿತ್ಸ್ವರದಿಂದ ಆದ್ಯುದಾತ್ತ.

**ಅವೀವೃಧನ್— ವೃಧು ವರ್ಧನೇ** ಧಾತು. ಇದರ ಮುಂದೆ ಣಿಚ್ಪ್ರತ್ಯಯ. ಣಿಜಂತಾಲ್ಲುಙ್. ಲುಙ್ಙಿಗೆ ಪ್ರಥಮಪುರುಷ ಬಹುವಚನ ಝಿ ಆದೇಶ, ಝಕಾರಕ್ಕೆ **ಝೋಽನ್ತಃ** (ಪಾ. ಸೂ. ೭-೧-೩) ಎಂಬುದರಿಂದ ಅನ್ತ್ ಆದೇಶ. ಇಕಾರಕ್ಕೆ **ಇತಶ್ಚ** (ಪಾ. ಸೂ. ೩-೪-೧೦೦) ಎಂಬುದರಿಂದ **ಲೋಪ, ಸಂಯೋಗಾನ್ತ ಲೋಪ.** ಅನ್ ಎಂದಾಗುವುದು. **ಚ್ಲಿ ಲುಙಿ** (ಪಾ. ಸೂ. ೩-೧-೪೩) ಎಂಬುದರಿಂದ ಣಿಜಂತ ಧಾತುವಿನ ಮುಂದೆ ಚ್ಲಿ ಬರ್ರುವುದು. ವೃಧ್+ಇ+ಚ್ಲಿ+ಅನ್ **ಣಿಶ್ರಿದ್ರುಸ್ರುಭ್ಯಃ ಕರ್ತರಿ ಚಙ್** (ಪಾ ಸೂ ೩-೧-೪೮) ಕರ್ತ್ರರ್ಥವಾದ ಲುಙ್ ಪರದಲ್ಲಿರುವಾಗ ಣ್ಯಂತ ಧಾತುವಿನ ಮುಂದೆಯೂ ಶ್ರಿ, ದ್ರು, ಸ್ರು ಧಾತುಗಳ ಮುಂದೆಯೂ ಇರುವ ಚ್ಲಿಗೆ ಚಙ್ ಬರುವುದು ಎಂಬುದರಿಂದ **ಚಙ್** ಬಂದರೆ ವೃಧ್+ಇ+ಅ+ಅನ್. **ಚಙಿ** (ಪಾ ಸೂ. ೬-೧-೧೧) ಎಂಬುದರಿಂದ ದ್ವಿತ್ವ. ವೃಧ್ ವೃಧ್+ಇ+ಅ+ಅನ್ **ಉರತ್** ಎಂಬುದರಿಂದ ಅಭ್ಯಾಸದ ಋಕಾರಕ್ಕೆ ಅಕಾರ ರಪರವಾಗಿ ಬರುವುದು. **ಹಲಾದಿಃ ಶೇಷಃ** (ಪಾ. ಸೂ. ೭-೪-೬೦) ಎಂಬುದರಿಂದ ಅಭ್ಯಾಸದಲ್ಲಿರುವ ಧಕಾರರೇಫಗಳಿಗೆ ನಿವೃತ್ತಿ. ಧಾತುವಿನ ಉಪಧಾಭೂತವಾದ ಋಕಾರಕ್ಕೆ **ಪುಗಂತಲಘೂಪಧಸ್ಯ ಚ** (ಪಾ. ಸೂ. ೭-೩-೮೬) ಎಂಬುದರಿಂದ ಗುಣ ಪ್ರಾಪ್ತವಾಗುವುದು. ಆದರೆ **ನಿತ್ಯಂ ಛಂದಸಿ** (ಪಾ. ಸೂ ೭-೪-೮) **ಉ ಋತ್** (ಪಾ. ಸೂ. ೭-೪೭) ಎಂಬ ಸೂತ್ರವು ಇಲ್ಲಿ ಅನುವೃತ್ತವಾಗುವುದು. ಛಂದಸ್ಸಿನಲ್ಲಿ ಚಙಿನ ಹಿಂದೆ ಇರುವ ಣಿಪ್ರತ್ಯಯದ ಹಿಂದೆ ಇರುವ ಅಂಗದ ಉಪಧಾಭೂತವಾದ ಋಕಾರಕ್ಕೆ ನಿತ್ಯವಾಗಿ ಋಕಾರ ಬರುವುದು ಎಂದು ಋಕಾರಕ್ಕೆ ಋಕಾರವನ್ನೇ ವಿಧಿಸಿರುವುದರಿಂದ ಗುಣಬರುವುದಿಲ್ಲ. ವೃಧ್+ಇ+ಅ+ಅನ್ **ಸನ್ವಲ್ಲಘುನಿ ಚಙ್ಪರೇಽನಗ್ಲೋಪೇ** (ಪಾ. ಸೂ. ೭-೪-೯೩) ಎಂಬುದರಿಂದ ಸನ್ವದ್ಭಾವ ಬರುವುದು. ಆದ್ದರಿಂದ **ಸನ್ಯತಃ** (ಪಾ. ಸೂ. ೭-೪-೭೯) ಎಂಬುದರಿಂದ ಅಭ್ಯಾಸದ ಅಕಾರಕ್ಕೆ ಇಕಾರ. **ದೀರ್ಘೋಲಘೋಃ** (ಪಾ.ಸೂ. ೭-೪-೯೪) ಎಂಬುದರಿಂದ ದೀರ್ಘ. **ಲುಙ್‌ಲಙ್‌ಲೃಙ್‌ಕ್ಷ್ವಡುದಾತ್ತಃ** (ಪಾ. ಸೂ. ೬-೪-೭೧) ಎಂಬುದರಿಂದ ಅಡಾಗಮ ಅವೀವೃಧ್+ಇ+ಅ+ಅನ್ **ಣೇರನಿಟಿ** ( ಪಾ. ಸೂ. ೬-೪-೫೧ ) ಎಂಬುದರಿಂದ ಣಿಗೆ **ಲೋಪ. ಅತೋಗುಣೇ** ಎಂಬುದರಿಂದ ಪರರೂಪ, ಅವೀವೃಧನ್ ಎಂದಾಗುವುದು. **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ.

**ಸಮುದ್ರವ್ಯಚಸಮ್— ವ್ಯಚ ವ್ಯಾಜೀಕರಣೇ** ಧಾತು. ಸರ್ವಧಾತುಭ್ಯೋಽಸುನ್ (ಉ. ಸೂ. ೪-೬೨೮ ) ಎಂಬುದರಿಂದ ಅಸುನ್ ಪ್ರತ್ಯಯ. **ವ್ಯಚೇಃಕುಟಾದಿತ್ವಮನಸಿ** ( ಕಾ. ವಾ. ೧-೨-೧-೧ )

ಅಸ್ ಪರದಲ್ಲಿಲ್ಲದೇ ಇರುವ ವ್ಯಚ ಧಾತುವು ಕುಟಾದಿಯಾಗುವುದು ಎಂದರ್ಥ. ಇದರಿಂದ ವ್ಯಚ್+ಅಸ್ ಎಂದಿರುವಾಗ ಅಸ್‌ನ ಹಿಂದೆ ಇರುವ ವ್ಯಚ್ ಎಂಬುದು ಕುಟಾದಿಯಾಗುವುದಿಲ್ಲ. ಆದ್ದರಿಂದ **ಗಾಙ್‌ಕುಟಾದಿಭ್ಯೋಽಞ್ಣಿನ್ಙಿತ್** (ಪಾ. ಸೂ. ೧-೨-೧) ಗಾಙ್ ಕುಟಾದಿ ಇವುಗಳ ಮುಂದೆ ಇರುವ ಞಿತ್ತು ಣಿತ್ತು ಅಲ್ಲದ ಪ್ರತ್ಯಯವು ಙಿತ್ತಾಗುವುದು ಎಂಬುದರಿಂದ ಙಿತ್ತ್ವ ಬರುವುದಿಲ್ಲ. ಆದ್ದರಿಂದ ಗ್ರಹಿಜ್ಯಾವಯಿವ್ಯಧಿವಷ್ಟಿವಿಚತಿವೃಶ್ಚತಿಪೃಚ್ಛತಿಭೃಜ್ಜತೀನಾಂ ಙಿತಿ ಚ, ( ಪಾ ಸೂ. ೬-೧-೧೬) ಗ್ರಹ್ಯಾದಿ ಧಾತುಗಳಿಗೆ ಕಿತ್ತು ಙಿತ್ತು ಆದ ಪ್ರತ್ಯಯಗಳು ಪರದಲ್ಲಿರುವಾಗ ಸಂಪ್ರಸಾರಣ ಬರುವುದು ಎಂಬುದರಿಂದ ಸಂಪ್ರಸಾರಣ ಬರುವುದಿಲ್ಲ. ಸಮುದ್ರಸ್ಯ ವ್ಯಚ ಇವ ವ್ಯಚಃ ಯಸ್ಯ ಸಃ ಎಂದು ಬಹುವ್ರೀಹಿ ಸಮಾಸ ಮಾಡಿದರೆ **ಬಹುವ್ರೀಹೌ ಪ್ರಕೃತ್ಯಾಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುವುದು.

**ರಥೀತಮಮ್**—ರಥಃ ಅಸ್ಯ ಅಸ್ತಿ ಇತಿ ರಥೀ **ಅತ ಇನಿಠನೌ** (ಪಾ. ಸೂ. ೫ ೨-೧೦೫) ಎಂಬುದರಿಂದ ರಥ ಶಬ್ದದ ಮುಂದೆ ಇನ್ ಪ್ರತ್ಯಯ. **ಯಸ್ಯೇತಿ ಚ** (ಪಾ. ಸೂ. ೬-೪-೧೪೮) ಎಂಬುದರಿಂದ ರಥ ಶಬ್ದದ ಅಕಾರಕ್ಕೆ ಲೋಪ ಅತಿಶಯಿತಃ ರಥೀ ಎಂದು ವಿಗ್ರಹಮಾಡಿ **ಅತಿಶಾಯನೇತಮಬಿಷ್ಠನೌ** (ಪಾ.ಸೂ. ೫-೩-೫೫) ಎಂಬುದರಿಂದ ತಮಪ್ ಪ್ರತ್ಯಯ ರಥಿನ್+ಸುತಮ. ಸುಲೋಪ. ಪ್ರತ್ಯಯ ಲಕ್ಷಣದಿಂದ ಪದಸಂಜ್ಞೆ ಇರುವುದರಿಂದ **ನಲೋಪಃ ಪ್ರಾತಿಪದಿಕಾಂತಸ್ಯ** ( ಪಾ. ಸೂ. ೮-೨-೭ ) ಎಂಬುದರಿಂದ ನಲೋಪ. ಛಾಂದಸವಾಗಿ ರಥಿಶಬ್ದದ ಇಕಾರಕ್ಕೆ ದೀರ್ಘ ರಥೀತಮ- ದ್ವಿತೀಯಾ ಏಕವಚನದಲ್ಲಿ ರಥೀತಮಮ್, ತಮಪ್ ಪಿತ್ತಾದ್ದರಿಂದ **ಅನುದಾತ್ತೌಸುಪ್ಪಿತೌ** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತ. ಇನ್ ಎಂಬುದು ಪ್ರತ್ಯಯ ಸ್ವರದಿಂದ ಉದಾತ್ತ.

**ರಥೀನಾಂ**—ರಥಿನ್ ಶಬ್ದದ ಮುಂದೆ ಷಷ್ಠೀ ಬಹುವಚನ ಆಮ್ ಪ್ರತ್ಯಯ. ಛಾಂದಸವಾಗಿ ಇಕಾರಕ್ಕೆ ದೀರ್ಘ. ರಥೀನಾಮ್ ಎಂದಾಗುವುದು. ಇನ್ ಪ್ರತ್ಯಯಸ್ವರದಿಂದ ಉದಾತ್ತ ಆಮ್ ಸುಪ್ಪಾದ್ದರಿಂದ ಅನುದಾತ್ತ. ನಂತರ ಉದಾತ್ತಾದನುದಾತ್ತಸ್ಯ ಸ್ವರಿತಃ (ಪಾ ಸೂ ೮-೪-೬೬) ಎಂಬುದರಿಂದ ಆಮ್ ಸ್ವರಿತ,

**ವಾಜಾನಾಂ**—ವೃಷಾದಿಯಾದ್ದರಿಂದ **ವೃಷಾದೀನಾಂಚ** (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತ.

**ಸತ್ಪತಿಮ್-ಪತ್ಯಾವೈಶ್ವರ್ಯೇ** (ಪಾ. ಸೂ. ೬-೨-೧೮) ಐಶ್ವರ್ಯಾರ್ಥಕವಾದ ಪತಿಶಬ್ದ ಪರದಲ್ಲಿರುವಾಗ ಪೂರ್ವಪದವು ಪ್ರಕೃತಿಸ್ವರವನ್ನು ಹೊಂದುವುದು ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುವುದು. ಅಸ ಭುವಿ ಧಾತು. ಇದರ ಮುಂದೆ ಲಟ್. ಅದಕ್ಕೆ ಶತೃಪ್ರತ್ಯಯ. ಶಪ್ ವಿಕರಣಕ್ಕೆ ಅದಿಪ್ರಭೃತಿಭ್ಯಃ ಶಪಃ ಎಂಬುದರಿಂದ **ಲುಕ್ ಶ್ನಸೋರಲ್ಲೋಪಃ** (ಪಾ; ಸೂ. ೬-೪-೧೧೧) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ಸತ್ ಎಂದಾಗುವುದು ಇದು ಪ್ರತ್ಯಯ ಸ್ವರದಿಂದ ಅಂತೋದಾತ್ತ. ಸತಾಂ ಪತಿಃ, ಸತ್ಪತಿಃ ಎಂದು ಷಷ್ಠೀತತ್ಪುರುಷ ಸಮಾಸ ॥ ೧ ॥

॥ ಸಂಹಿತಾಪಾಠಃ ॥

ಸಖ್ಯೇ ತ ಇಂದ್ರ ವಾಜಿನೋ ಮಾ ಭೇಮ ಶವಸಸ್ಪತೇ ।
ತ್ವಾಮಭಿ ಪ್ರ ಣೋನುಮೋ ಜೇತಾರಮಪರಾಜಿತಂ ॥ ೨ ॥

॥ ಪದಪಾಠಃ ॥

ಸಖ್ಯೇ । ತೇ । ಇಂದ್ರ । ವಾಜಿನಃ । ಮಾ । ಭೇಮ । ಶವಸಃ । ಪತೇ ॥
ತ್ವಾಂ । ಅಭಿ । ಪ್ರ । ನೋನುಮಃ । ಜೇತಾರಂ । ಅಪರಾಽಜಿತಂ ॥ ೨ ॥

॥ ಸಾಯಣಭಾಷ್ಯಂ ॥

ಹೇ ಶವಸಸ್ಪತೇ ಬಲಸ್ಯ ಪಾಲಕೇಂದ್ರ ತೇ ತವ ಸಖ್ಯೇಽನುಗ್ರಹಪ್ರಯುಕ್ತೇ ಸಖಿತ್ವೇ ವರ್ತಮಾನಾ ವಯಂ ವಾಜಿನೋಽನ್ನವಂತೋ ಭೂತ್ವಾ ಮಾ ಭೇಮ । ಶತ್ರುಭ್ಯೋ ಭೀತಿಂ ಪ್ರಾಪ್ತಾ ಮಾಭೂಮ । ಅತಸ್ತ್ವಾಮುಭಯಹೇತುಮಭಿ ಪ್ರ ಣೋನುಮಃ। ಸರ್ವತಃ ಪ್ರಕರ್ಷೇಣ ಸ್ತುಮಃ । ಕೀದೃಶಂ ತ್ವಾಂ । ಜೇತಾರಂ ಯುದ್ಧೇಷು ಜಯಶೀಲಂ ಅಪರಾಜಿತಂ ಕ್ವಾಪಿ ಪರಾಜಯರಹಿತಂ ॥ ಸಖ್ಯೇ। ಸಖ್ಯುಃ ಕರ್ಮ ಸಖ್ಯಂ। ಸಖ್ಯುರ್ಯಃ । ಪಾ. ೫-೧-೧೨೬ । ಪ್ರತ್ಯಯಸ್ವರಃ । ವಾಜಿನಃ । ವಾಜೋಽನ್ನಮೇಷಾಮಸ್ತೀತಿ ವಾಜಿನಃ । ಪ್ರತ್ಯಯಸ್ವರಃ । ಭೇಮ । ಞಿಭೀ ಭಯೇ । ಲುಙುತ್ತಮಬಹುವಚನಂ ಮಸ್ । ನಿತ್ಯಂ ಙಿತಃ । ಪಾ. ೩-೪-೯೯ । ಇತಿ ಸಲೋಪಃ । ಬಹುಲಂ ಛಂದಸೀತಿ ಚ್ಲೇರ್ಲುಕ್ । ಛಂದಸ್ಯುಭಯಥೇತಿ ತಿಙ ಆರ್ಧಧಾತುಕತ್ವೇನ ಙಿತ್ತ್ವಾಭಾವಾದ್ಗುಣಃ । ನ ಮಾಙ್ಯೋಗೇ । ಪಾ. ೬-೪-೭೪ । ಇತ್ಯಡಾಗಮಪ್ರತಿಷೇಧಃ । ಶವಸಸ್ಪತೇ । ಶವಸಃ ಷಷ್ಠ್ಯಾಃ ಪತಿಪುತ್ರಪೃಷ್ಠಪಾರಪದಪಯಸ್ಪೋಷೇಷು । ಪಾ. ೮-೩-೫೩ । ಇತಿ ವಿಸರ್ಜನೀಯಸ್ಯ ಸಂಹಿತಾಯಾಂ ಸತ್ವಂ । ಸುಬಾಮಂತ್ರಿತಪರಾಂಗವದ್ಭಾವೇನ । ಪಾ. ೨-೧-೨ । ಪದದ್ವಯನಿಘಾತಃ । ನೋನುಮಃ । ಣು ಸ್ತುತೌ । ಣೋ ನಃ । ಪಾ. ೬-೧-೬೫ । ಇತಿ ನತ್ವಂ ಯಙೋ ಲುಕ್ । ಪ್ರತ್ಯಯಲಕ್ಷಣೇನ ಸನ್ಯಙೋರಿತಿ ದ್ವಿರ್ಭಾವಃ। ಗುಣೋ ಯಙ್ಲುಕೋಃ। ಪಾ. ೭-೪-೮೨। ಇತ್ಯಭ್ಯಾಸಸ್ಯ ಗುಣಃ। ಪ್ರತ್ಯಯಲಕ್ಷಣೇನ ಧಾತುಸಂಜ್ಞಾಯಾಂ ಲಟೋ ಮಸ್ । ಅದಾದಿವದ್ಭಾವಾಚ್ಛಪೋ ಲುಕ್ । ಉಪಸರ್ಗಾದಸಮಾಸೇಽಪಿ ಣೋಪದೇಶಸ್ಯ । ಪಾ. ೮-೪-೧೪ । ಇತಿ ಸಂಹಿತಾಯಾಂ ಣತ್ವಂ । ಜೇತಾರಂ । ಜಿ ಜಯೇ । ತಾಚ್ಛೀಲ್ಯಾದಿಷು ತೃನ್ । ಞ್ನಿತ್ಯಾದಿರ್ನಿತ್ಯಂ । ಪಾ. ೬-೧-೧೯೭ । ಇತ್ಯಾದ್ಯುದಾತ್ತತ್ವಂ । ಅಪರಾಜಿತಂ । ಅವ್ಯಯಪೂರ್ವಪದಪ್ರಕೃತಿಸ್ವರತ್ವೇನ ನಞ ಉದಾತ್ತತ್ವಂ ॥

॥ ಪ್ರತಿಪದಾರ್ಥ ॥

(ಹೇ) **ಶವಸಸ್ಪತೇ**—ಶಕ್ತಿಸಾಮರ್ಥ್ಯಗಳಿಗೆ ಸ್ವಾಮಿಯಾದ ಎಂದರೆ ಮಹಾಶಕ್ತಿವಂತನಾದ ಎಲೈ ಇಂದ್ರನೇ । **ತೇ**--ನಿನ್ನ । **ಸಖ್ಯೇ**-ಅನುಗ್ರಹದಿಂದ ಕೂಡಿದ ಸ್ನೇಹಭಾವದಲ್ಲಿ (ಇರುವ ನಾವು) । **ವಾಜಿನಃ**—ಅನ್ನಾದ್ಯಾಹಾರವುಳ್ಳವರಾಗಿ(ರುವುದರಿಂದ) **ಮಾ ಭೇಮ** — (ಶತ್ರುಗಳಿಗೆ) ಹೆದರುವುದಿಲ್ಲ । (ಆದುದರಿಂದಲೇ) **ಜೇತಾರಂ**--ಯುದ್ಧಗಳಲ್ಲಿ ಜಯಿಸುವ । **ಅಪರಾಜಿತಂ**—(ಯಾವಾಗಲೂ) ಸೋಲದಿರುವ । **ತ್ವಾಂ**—ನಿನ್ನನ್ನು । **ಅಭಿ ಪ್ರ ನೋನುಮಃ**—ಸರ್ವಸ್ಥಳಗಳಲ್ಲಿಯೂ ವಿಶೇಷವಾಗಿ ಸ್ತೋತ್ರಮಾಡುವೆವು ॥

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಶಕ್ತಿಸಾಮರ್ಥ್ಯಗಳಿಗೆ ಅಧಿಪತಿಯು ಎಂದರೆ ಮಹಾ ಬಲವುಳ್ಳವನು. ಇಂತಹ ನಿನ್ನೊಡನೆ ಸ್ನೇಹಭಾವದಿಂದಿರುವ ನಮಗೆ ಅನ್ನಾದ್ಯಾಹಾರಗಳಿಗೆ ಕೊರತೆಯಿಲ್ಲದಿರುವುದರಿಂದ ನಾವು ಯಾವ ವಿಷಯದಲ್ಲಿಯೂ ಶತ್ರುಗಳಿಗೆ ಹೆದರಬೇಕಾಗಿಲ್ಲ. ಮತ್ತು ನೀನು ಯುದ್ಧಗಳಲ್ಲಿ ಯಾವಾಗಲೂ ಗೆಲ್ಲುವೆ. ನಿನಗೆ ಸೋಲೆಂಬುದೇ ಇಲ್ಲ. ಇಂತಹ ನಿನ್ನನ್ನು ನಾವು ವಿಶೇಷವಾಗಿ ಸ್ತೋತ್ರಮಾಡುವೆವು

## English Translation.

O Indra, lord of strength, supported by your friendship, we have no fear but glorify you the conqueror and the unoonquered.

॥ ವಿಶೇಷ ವಿಷಯಗಳು ॥

**ಸಖ್ಯೇ**--**ಅನುಗ್ರಾಹಕಯುಕ್ತೇ ಸಖಿತ್ವೇ**—ಅನುಗ್ರಹಯುಕ್ತವಾದ ಸ್ನೇಹಭಾವವು, ನಿನ್ನ ರಕ್ಷಣೆಯು. ನೀನು ನಮ್ಮಲ್ಲಿ ಸ್ನೇಹಭಾವದಿಂದಿರುವುದರಿಂದ ನಮಗೆ ಶತ್ರುಗಳ ಭಯವಿಲ್ಲ. ಅನ್ನಾದ್ಯಾಹಾರಗಳಿಗೆ ಅಭಾವವಿಲ್ಲ. ನೀನು ಯುದ್ಧದಲ್ಲಿ ಗೆಲ್ಲುವವನೇ ಹೊರತು ಸೋಲುವವನಲ್ಲ. ಇಂತಹ ನಿನ್ನನ್ನು ಸ್ತೋತ್ರಮಾಡುವೆವು ಎಂದು ಮಂತ್ರಾಭಿಪ್ರಾಯವು. ಈ ಋಕ್ಕಿನಲ್ಲಿ ಕ್ಲಿಷ್ಟವಾದ ಪದಗಳಾಗಲಿ, ಅರ್ಥದಲ್ಲಿ ತೊಡಕಾಗಲಿ ಇರುವುದಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ಸಖ್ಯೇ**—ಸಖಿಶಬ್ದದ ಮುಂದೆ **ಸಖ್ಯುರ್ಯಃ** (ಪಾ. ಸೂ. ೫-೧-೧೨೬) ಎಂಬುದರಿಂದ ಕರ್ಮಾರ್ಥದಲ್ಲಿ ಯತ್ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಇಕಾರ ಲೋಪ. ಪ್ರತ್ಯಯಸ್ವರದಿಂದ ಯಕಾರ ಉದಾತ್ತ.

**ವಾಜಿನಃ**—ವಾಜ ಎಂದರೆ ಅನ್ನವೆಂದು ಅರ್ಥ. **ವಾಜಃ ಏಷಾಂ ಅಸ್ತಿ** ಎಂದು ವಿಗ್ರಹ. **ಅತ ಇನಿಠನೌ** (ಪಾ. ಸೂ. ೫-೨-೧೧೫) ಎಂಬುದರಿಂದ ಇನಿ ಪ್ರತ್ಯಯ. ಅಕಾರಕ್ಕೆ ಲೋಪ, ಪ್ರತ್ಯಯಸ್ವರ ಬರುವುದು.

**ಭೇಮ**--ಞಿಭೀಭಯೇ ಧಾತು. ಇದರ ಮುಂದೆ **ಲುಙ್.** ಆದರ ಸ್ಥಾನದಲ್ಲಿ ಉತ್ತಮಪುರುಷ ಬಹುವಚನ ಮಸ್. **ನಿತ್ಯಂಙಿತಃ** (ಪಾ. ಸೂ. ೩-೪-೯೯) ಎಂಬುದರಿಂದ ಸಕಾರಕ್ಕೆ ಲೋಪ **ಚ್ಲಿಲುಙಿ** (ಪಾ.ಸೂ. ೩-೧-೪೩) ಎಂಬುದರಿಂದ ಬರುವ ಚ್ಲಿಗೆ **ಬಹುಲಂಛಂದಸಿ** ( ಪಾ. ಸೂ. ೨-೪-೭೩ ) ಎಂಬುದರಿಂದ **ಲುಕ್.** ಮ ಎಂಬ ತಿಙ್ ಪ್ರತ್ಯಯವು ಛಂದಸ್ಯುಭಯಥಾ ಎಂಬುದರಿಂದ ಆರ್ಧಧಾತುಕ ಸಂಜ್ಞೆಯನ್ನು ಹೊಂದುವುದು ಆದ್ದರಿಂದ **ಸ್ವಾರ್ವಧಾತುಕಮಪಿತ್** (ಪಾ. ಸೂ. ೧-೨-೪) ಎಂಬುದರಿಂದ **ಙಿತ್ತಾ**ಗುವುದಿಲ್ಲ **ಕ್ಙಿಙಿತಿಚ,** ಎಂಬುದರಿಂದ ಗುಣ ನಿಷೇಧ ಬರುವುದಿಲ್ಲ. **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಗುಣಬರುವುದು. ಭೇಮ ಎಂದಾಗುವುದು, ಮಾಭೇಮ, ಎಂದು ಮಾಙ್ ಯೋಗವಿರುವುದು. ಆದ್ದರಿಂದ **ನಮಾಙ್ಯೋಗೇ** (ಪಾ. ಸೂ. ೬-೪-೭೪) ಎಂದು ಅಡಾಗಮಕ್ಕೆ ನಿಷೇಧ ಬರುವುದು. ಆದ್ದರಿಂದ ಅಡಾಗಮ ಬರುವುದಿಲ್ಲ.

**ಶವಸಸ್ಪತೇ**—ಶವಸ್ ಶಬ್ದ ಸಕಾರಾಂತ. ಇದರ ಮುಂದೆ ಷಷ್ಠೀ ಏಕವಚನ ಙಸ್ ಪ್ರತ್ಯಯ ಶವಸ್+ಅಸ್= **ಶವಸಸ್.** ರುತ್ವ ವಿಸರ್ಗಗಳು. ಶವಸಃ—ಇದರ ಮುಂದೆ ಪತಿಶಬ್ದವಿರುವುದು. ಆದ್ದರಿಂದ ಸಂಹಿತಾಕಾಲದಲ್ಲಿ **ಷಷ್ಠ್ಯಾಃಪತಿ, ಪುತ್ರ, ಪೃಷ್ಠ, ಪಾರ, ಪದ, ಪಯಸ್ಪೋಷೇಷು** (ಪಾ. ಸೂ. ೮-೪-೫೩) ಪತಿ ಮೊದಲಾದ ಶಬ್ದಗಳು ಪರದಲ್ಲಿರುವಾಗ ಷಷ್ಠೀ ವಿಭಕ್ತಿ ಸಂಬಂಧಿಯಾದ ವಿಸರ್ಗಕ್ಕೆ ಸಕಾರಾದೇಶ ಬರುವುದು ಎಂಬುದರಿಂದ ಸಕಾರಾದೇಶ ಬಂದರೆ **ಶವಸಸ್ಪತೇ** ಎಂದಾಗುವುದು. ಪತೇ ಎಂಬುದು ಆಮಂತ್ರಿತ. ಇದರ ಹಿಂದೆ ಇರುವ ಶವಸಃ ಎಂಬ ಪದವು **ಸುಬಾಮಂತ್ರಿತೇಪರಾಂಗವತ್ಸ್ವರೇ** (ಪಾ. ಸೂ. ೨-೧-೨) ಸ್ವರವನ್ನು ಮಾಡುವಾಗ ಆಮಂತ್ರಿತದ ಹಿಂದಿನ ಪದವು ಪರಪದವಾದ ಆಮಂತ್ರಿತಕ್ಕೆ ಅಂಗವಾದಂತೆ ಆಗುವುದು. ಎಂಬುದರಿಂದ, ಪರಾಂಗವದ್ಭಾವ ಬರುವುದು. ಅಂದರೆ ಶವಃ ಎಂಬುದು ಪತೇ ಎಂಬ ಆಮಂತ್ರಿತದ ಏಕದೇಶದಂತೆ ಆಗಿ ಆಮಂತ್ರಿತವೇ ಆಗುವುದು ಆದ್ದರಿಂದ **ಆಮಂತ್ರಿತಸ್ಯಚ** ( ಪಾ ಸೂ. ೮-೧.೧೯ ) ಎಂಬುದರಿಂದ ಎರಡು ಪದಕ್ಕೂ ಅನುದಾತ್ತಸ್ವರ ಬರುವುದು.

**ನೋನುಮಃ**—**ಣುಸ್ತುತೌ,** ಧಾತು. **ಣೋನಃ** (ಪಾ. ಸೂ. ೬-೧-೬೫) ಎಂಬುದರಿಂದ ಣಕಾರಕ್ಕೆ ನಕಾರ. **ಧಾತೋರೇಕಾಚೋಹಲಾದೇಃ ಕ್ರಿಯಾಸಮಭಿಹಾರೇಯಙ್** (ಪಾ. ಸೂ. ೩-೧-೨೨) ಎಂಬುದರಿಂದ ಯಙ್. ಅದಕ್ಕೆ ಯಙೋಽಚಿಚ (ಪಾ. ಸೂ. ೨-೪-೭೪) ಎಂಬುದರಿಂದ ಲುಕ್ ಬಂದರೂ ಪ್ರತ್ಯಯ ಲಕ್ಷಣದಿಂದ ಯಙಂತವಾಗುವುದರಿಂದ **ಸನ್ಯಙೋಃ** (ಪಾ. ಸೂ. ೬-೧-೯) ಎಂಬುದರಿಂದ ದ್ವಿತ್ವ. ನುನು ಎಂದಿರುವಾಗ **ಗುಣೋಯಙ್ಲುಕೋಃ** (ಪಾ. ಸೂ. ೭-೪-೮೨) ಯಙಿನಲ್ಲಿಯೂ ಯಙ್ಲುಕ್ಕಿನಲ್ಲಿಯೂ ಅಭ್ಯಾಸದ ಇಗ್ವರ್ಣಗಳಿಗೆ ಗುಣಬರುವುದು ಎಂಬುದರಿಂದ ಗುಣ ಬಂದರೆ ನೋನು ಎಂದಾಗುವುದು. ಪ್ರತ್ಯಯಲಕ್ಷಣದಿಂದ ನೋನು ಎಂಬುದು ಯಙಂತ. ಆದ್ದರಿಂದ **ಸನಾದ್ಯಂತಾಧಾತವಃ** (ಪಾ. ಸೂ. ೩-೧-೩೨) ಎಂಬುದರಿಂದ ಧಾತು ಸಂಜ್ಞೆ ಬರುವುದು. ಇದರ ಮುಂದೆ ಲಟ್ ಪರಸ್ಮೈಪದ ಉತ್ತಮಪುರುಷ ಬಹುವಚನ ಮಸ್-ನೋನು+ಮಸ್-**ಕರ್ತರಿಶಪ್** (ಪಾ. ಸೂ. ೩-೧-೬೮) ಎಂಬುದರಿಂದ ವಿಕರಣ ಶಪ್ ಬರುವುದು. ಚರ್ಕರೀತಂ ಪರಸ್ಮೈಪದ ಮಾದಾದಿವಚ್ಚ ದ್ರಷ್ಟವ್ಯಮ್ ಎಂಬುದರಿಂದ ಇದು ಅದಾದಿಯಾಗುವುದು. ಆದ್ದರಿಂದ **ಅದಿಪ್ರಭೃತಿಭ್ಯಃಶಪಃ** (ಪಾ. ಸೂ. ೨-೪-೭೨) ಎಂಬುದರಿಂದ ಶಪ್‌ಗೆ ಲುಕ್ ಬರುವುದು. ಚರ್ಕರೀತಂ ಎಂದರೆ ಯಙ್ಲುಗಂತ ಎಂದರ್ಥ. ಮಸ್ಸಿನ ಸಕಾರಕ್ಕೆ ರುತ್ವ ವಿಸರ್ಗಗಳು ಬಂದರೆ ನೋನುಮಃ ಎಂದಾಗುವುದು. ಇದು ಪ್ರ ಎಂಬ ಉಪಸರ್ಗದ ಮುಂದೆ ಇರುವುದು. ಇದ್ದರಿಂದ **ಉಪಸರ್ಗಾದಸಮಾಸೇಽಪಿಣೋಪದೇಶಸ್ಯ**

(ಪಾ. ಸೂ. ೮-೪-೧೪) ಸಮಾಸ ಬಂದಿದ್ದರೂ, ಸಮಾಸ ಬರದೇ ಇದ್ದರೂ ಉಪಸರ್ಗದಲ್ಲಿರುವ ರೇಫಷಕಾರಗಳ ಮುಂದೆ ಇರುವ ಣೋಪದೇಶವಾದ ಧಾತುವಿನ ನಕಾರಕ್ಕೆ ಣಕಾರ ಬರುವುದು ಎಂಬುದರಿಂದ ಣಕಾರ ಬರುವುದು. ಉಪದೇಶವೆಂದರೆ ಪಾಣಿನಿ ಪತಂಜಲಿ ವರರುಚಿಗಳ ಆದ್ಯೋಚ್ಚಾರಣೆ. ಆ ಆದ್ಯೋಚ್ಚಾರಣೆಯಲ್ಲಿ ಣಕಾರವನ್ನು ಯಾವ ಧಾತುವು ಹೊಂದಿರುವುದೋ ಅದು ಣೋಪದೇಶ.

**ಜೇತಾರಂ**— ಜಿ ಜಯೇ ಧಾತು. **ತೃನ್** (ಪಾ. ಸೂ ೩-೨-೧೩೫) ಎಂಬುದರಿಂದ ತಚ್ಛೀಲ. ತದ್ಧರ್ಮ ತತ್ಸಾಧುಕಾರೀ ಎಂಬ ಅರ್ಥಗಳಲ್ಲಿ ಜಿ ಧಾತುವಿನ ಮುಂದೆ ತೃನ್ ಪ್ರತ್ಯಯ ಬರುವುದು. **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಜಿಗೆ ಗುಣ. ಜೇತೃ ಎಂದಾಗುವುದು. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧ ೧೯೭) ಎಂಬುದರಿಂದ ನಕಾರೇತ್ಸಂಜ್ಞಕ ಪ್ರತ್ಯಯಾಂತವಾದ ಜೇತೃ ಎಂಬುದರ ಆದಿಯು ಉದಾತ್ತ ಜೇತೃ ಎಂಬುದರ ಮುಂದೆ ದ್ವಿತೀಯಾ ವಿಭಕ್ತಿ ಏಕವಚನ ಅಮ್ ಪ್ರತ್ಯಯವನ್ನಿಟ್ಟರೆ **ಋತೋಙಿಸರ್ವನಾಮಸ್ಥಾನಯೋಃ** (ಪಾ. ಸೂ. ೭-೩-೧೧೦) ಙಿ ಪ್ರತ್ಯಯ, ಸರ್ವನಾಮಸ್ಥಾನ ಇವು ಪರದಲ್ಲಿರುವಾಗ ಋದಂತವಾದ ಅಂಗಕ್ಕೆ ಗುಣಬರುವುದು. ಎಂಬುದರಿಂದ ಋಕಾರಕ್ಕೆ ಗುಣಸಂಜ್ಞಕವಾದ ಅಕಾರವು **ಉರಣ್ರಪರಃ** (ಪಾ. ಸೂ. ೧-೧-೫೧) ಎಂಬ ಪ್ರಕಾರ ರೇಫಶಿರಸ್ಕವಾಗಿ ಬರುವುದು. ಜೇತರ್+ಅಮ್. **ಅಪ್ ತೃನ್ ತೃಚ್ ಸ್ವಸೃ ನಪ್ತೃ ನೇಷ್ಟೃ ತ್ವಷ್ಟೃ ಕ್ಷತ್ತೃ ಹೋತೃ ಪೋತೃ ಪ್ರಶಾಸ್ತ್ರೂಣಾಮ್** (ಪಾ. ಸೂ. ೬-೪-೧೧) ಸಂಬುದ್ಧಿಯನ್ನುಳಿದ ಸರ್ವನಾಮಸ್ಥಾನ ಪ್ರತ್ಯಯಪರದಲ್ಲಿರುವಾಗ ಅಪ್ ಮೊದಲಾದ ಶಬ್ದಗಳ ಉಪಧೆಗೆ ದೀರ್ಘ ಬರುವುದು ಎಂಬುದರಿಂದ ಅಕಾರಕ್ಕೆ ದೀರ್ಘ ಬಂದರೆ ಜೇತಾರಮ್

**ಅಪರಾಜಿತಮ್**-**ನಪರಾಜಿತಃ**=**ಅಪರಾಜಿತಃ**, **ತಂ**, **ಅಪರಾಜಿತಂ**. ನ ಞ್ ನಕಾರಕ್ಕೆ **ನಲೋಪೋನಞಃ** (ಪಾ. ಸೂ ೬-೩-೭೩) ಉತ್ತರಪದ ಪರದಲ್ಲಿರುವಾಗ ನ ಞ್ ನಕಾರಕ್ಕೆ ಲೋಪ ಬರುವುದು ಎಂಬುದರಿಂದ ನಕಾರಕ್ಕೆ ಲೋಪ **ತತ್ಪುರುಷೇತುಲ್ಯಾರ್ಥ** (ಪಾ. ಸೂ. ೬-೨-೨-) ಎಂಬ ಸೂತ್ರದಿಂದ ಅವ್ಯಯ ಪೂರ್ವಪದ ಪ್ರಕೃತಿಸ್ವರ ಆದ್ಯುದಾತ್ತ ಬರುವುದು || ೨ ||

|| ಸಂಹಿತಾಪಾಠಃ ||

ಪೂರ್ವೀರಿಂದ್ರಸ್ಯ ರಾತಯೋ ನ ವಿ ದಸ್ಯಂತ್ಯೂತಯಃ |
ಯದೀ ವಾಜಸ್ಯ ಗೋಮತಃ ಸ್ತೋತೃಭ್ಯೋ ಮಂಹತೇ ಮಘಂ||

|| ಪದಪಾಠಃ ||

ಪೂರ್ವೀಃ | ಇಂದ್ರಸ್ಯ | ರಾತಯಃ | ನ | ವಿ | ದಸ್ಯಂತಿ | ಊತಯಃ ||
ಯದಿ | ವಾಜಸ್ಯ | ಗೋऽಮತಃ | ಸ್ತೋತೃऽಭ್ಯಃ | ಮಂಹತೇ | ಮಘಂ || ೩ ||

॥ ಸಾಯಣಭಾಷ್ಯಂ ॥

ಇಂದ್ರಸ್ಯ ಸಂಬಂಧಿನ್ಯೋ ರಾತಯೋ ಧನದಾನಾನಿ ಪೂರ್ವೀರನಾದಿಕಾಲಸಿದ್ಧಾಃ ಪ್ರಭೂತಾ ವಾ। ಅಸ್ಯೇಂದ್ರಸ್ಯ ಸರ್ವದಾ ಯಷ್ಟೃಭ್ಯೋ ಧನದಾನಮೇವ ಸ್ವಭಾವ ಇತ್ಯರ್ಥಃ। ಏವಂ ಸತೀದಾನೀಂತ-ನೋऽಪಿ ಯಜಮಾನಃ ಸ್ತೋತೃಭ್ಯ ಋತ್ವಿಗ್ಭ್ಯೋ ಗೋಮತೋ ಗೋಸಹಿತಸ್ಯ ವಾಜಸ್ಯಾನ್ನಸ್ಯ ಪ-ರ್ಯಾಪ್ತಂ ಮಘಂ ಧನಂ ಯದಿ ಮಂಹತೇ ದಕ್ಷಿಣಾರೂಪೇಣ ದದಾತಿ ತದಾನೀಮೂತಯೋ ಬಹುಧನ ದಾನಪೂರ್ವಕಾಣೀಂದ್ರಸ್ಯಾಸ್ಮದ್ವಿಷಯಾಣಿ ರಕ್ಷಣಾನಿ ನ ವಿ ದಸ್ಯಂತಿ । ವಿಶೇಷೇಣ ನೋಪಕ್ಷೀಯಂತೇ । ಮಘಂ ರೇಕ್ಣ ಇತ್ಯಾದಿಷ್ವಷ್ಟಾವಿಂಶತಿಸಂಖ್ಯಾಕೇಷು ಧನನಾಮಸು ಮಘಶಬ್ದಃ ಪಠಿತಃ । ದಾತಿ ದಾಶ-ತೀತ್ಯಾದಿಷು ದಶಸು ದಾನಕರ್ಮಸು ಮಂಹತ ಇತಿ ಪಠಿತಂ ॥ ಪೂರ್ವೀಃ । ಪುರುಶಬ್ದಸ್ಯ ವೋತೋ ಗುಣವಚನಾದಿತಿ ಙೀಷ್ । ಆದ್ಯಸ್ಯೋಕಾರಸ್ಯ ದೀರ್ಘಶ್ಛಾಂದಸಃ । ಜಸಿ ದೀರ್ಘಾಜ್ಜಸಿ ಚೇತಿ ನಿಷೇಧಂ ಬಾಧಿತ್ವಾ ವಾ ಛಂದಸಿ । ಪಾ. ೬-೧-೧೦೬ । ಇತಿ ಪೂರ್ವಸವರ್ಣದೀರ್ಘತ್ವಂ । ಙೀಷಃ ಪ್ರತ್ಯಯಸ್ವರೇ-ಣೋದಾತ್ತತ್ವಂ । ರಾತಯಃ । ಮಂತ್ರೇ ವೃಷೇಷಪಚಮನವಿದಭೂವೀರಾ ಉದಾತ್ತಃ । ಪಾ. ೩-೩-೯೬ । ಇತಿ ಕ್ತಿನ ಉದಾತ್ತತ್ವಂ । ದಸ್ಯಂತಿ । ದಸು ಉಪಕ್ಷಯೇ । ದಿವಾದಿಭ್ಯಃ । ಶ್ಯನ್ । ನಿಘಾತಃ । ಊ-ತಯಃ । ಊತಿಯೂತೀತ್ಯಾದಿನಾ ಕ್ತಿನ್ನುದಾತ್ತಃ । ಯದಿ । ನಿಪಾತತ್ವಾದಾದ್ಯುದಾತ್ತಃ । ಸಂಹಿತಾಯಾಂ ನಿಪಾತಸ್ಯ ಚೇತಿ ದೀರ್ಘತ್ವಂ । ಸ್ತೋತೃಭ್ಯಃ । ಷ್ಟುಞ್ ಸ್ತುತೌ । ಧಾತ್ವಾದೇಃ ಷಃ ಸಃ । ತೃಚಶ್ಚಿತ್ತ್ವಾ ದಂತೋದಾತ್ತತ್ವಂ । ಮಂಹತೇ ಶಪಃ ಪಿತ್ತ್ವಾದನುದಾತ್ತತ್ವಂ । ತಿಙಶ್ಚ ಲಸಾರ್ವಧಾತುಕಸ್ವರೇಣ ತಿಙ್ಙ-ತಿಙ ಇತಿ ನಿಘಾತೋ ನ ಭವತಿ ನಿಪಾತೈರ್ಯದ್ಯದಿಹಂತೇತಿ ನಿಷೇಧಾತ್ ॥

॥ ಪ್ರತಿಪದಾರ್ಥ ॥

**ಸ್ತೋತೃಭ್ಯಃ**—(ಯಜಮಾನನು) ಇಂದ್ರನನ್ನು ಸ್ತೋತ್ರಮಾಡುವ ಋತ್ವಿಜರಿಗೆ । **ಗೋಮತಃ**—ಗೋಸಹಿತವಾದ । **ವಾಜಸ್ಯ**—ಅನ್ನಕ್ಕೆ (ಬದಲಾಗಿ) । **ಮಘಂ**—ಧನವನ್ನು । **ಯದಿ ಮಂಹತೇ**—ದಕ್ಷಿಣಾ ರೂಪವಾಗಿ ಕೊಡುವ ಸಂದರ್ಭದಲ್ಲಿ। **ಇಂದ್ರಸ್ಯ**—ಇಂದ್ರನ । **ರಾತಯಃ**—ಧನಪ್ರದಾನಾದಿಗಳು। **ಊತಯಃ**—ರಕ್ಷಣೆಗಳು। **ಪೂರ್ವೀಃ**—ಪೂರ್ವಕಾಲದಿಂದಲೂ ಇರುವುದಾದರೂ । **ನ ವಿ ದಸ್ಯಂತಿ**—ಕಮ್ಮಿಯಾಗುವುದಿಲ್ಲ

॥ ಭಾವಾರ್ಥ ॥

ಯಜ್ಞಮಾಡುವ ಯಜಮಾನನು ಇಂದ್ರನನ್ನು ಸ್ತೋತ್ರಮಾಡುವ ಋತ್ವಿಜರಿಗೆ, ಗೋವುಗಳನ್ನೂ, ಅನ್ನವನ್ನೂ ಧನವನ್ನೂ ದಕ್ಷಿಣಾರೂಪವಾಗಿ ಕೊಡುವ ಸಂದರ್ಭದಲ್ಲಿ ಆ ಯಜಮಾನನಿಗೆ ಇಂದ್ರನು ಹಿಂದೆ ಎಷ್ಟುಕೊಟ್ಟಿದ್ದರೂ ಈಗ ಧನರಕ್ಷಣೆ ಮೊದಲಾದವುಗಳನ್ನು ಕೊಡುವುದರಲ್ಲಿ ಸ್ವಲ್ಪವೂ ಕಮ್ಮಿ ಮಾಡುವುದಿಲ್ಲ

English Translation

The former liberalities of Indra and his protection will not be wanting to him who presents wealth, food, and cattle to the reciters of the hymns.

|| ವಿಶೇಷವಿಷಯಗಳು ||

ಈ ಋಕ್ಕಿನ ಅರ್ಥವು ಸ್ವಲ್ಪ ತೊಡಕಾಗಿರುವುದು. ಯಜ್ಞಮಾಡುವ ಯಜಮಾನನಿಗೆ ಇಂದ್ರನು ಹಿಂದೆ ಎಷ್ಟೋಸಾರಿ ಧನಾದಿಗಳನ್ನೂ, ಯುದ್ಧಾದಿಗಳಲ್ಲಿ ರಕ್ಷಣೆಯನ್ನೂ ಕೊಟ್ಟಿರುವನು. ಆದರೂ ಆ ಯಜಮಾನನು ಇಂದ್ರನನ್ನು ಸ್ತೋತ್ರಮಾಡುವ ಋತ್ವಿಜರಿಗೆ ಧನ, ಅನ್ನ ಗೋವು ಮುಂತಾದವುಗಳನ್ನು ಕೊಡುವ ಪಕ್ಷದಲ್ಲಿ ಇಂದ್ರನು ಪುನಃ ಆ ಯಜಮಾನನಿಗೆ ಅನ್ನಾದ್ಯಾಹಾರವನ್ನೂ, ಧನವನ್ನೂ, ರಕ್ಷಣೆಯನ್ನೂ ಕೊಟ್ಟೇ ಕೊಡುವನು. ಹಿಂದೆ ಬೇಕಾದಷ್ಟು ಕೊಟ್ಟಿದ್ದರೂ ಈಗ ಮತ್ತೆ ಕೊಡುವುದರಲ್ಲಿ ಏನೂ ಕಮ್ಮಿಯಾಗುವುದಿಲ್ಲ ಎಂದಭಿಪ್ರಾಯವು.

**ಪೂರ್ವೀಃ**—ಈ ಶಬ್ದಕ್ಕೆ—ಪೂರ್ವಸ್ಯ ಸಂಬಂಧಿನ್ಯಃ ಪೂರ್ವೀಃ—ಹಿಂದಿನ ಸಂಬಂಧವಾದ ಎಂಬ ಅರ್ಥವನ್ನಾಗಲೀ, ಪುರು= ಬಹು, ಪೂರ್ವೀಃ= ಬಹ್ವ್ಯಃ—ಬಹಳವಾದ, ಪ್ರಭೂತವಾದ, ಹೆಚ್ಚಾದ ಎಂಬ ಅರ್ಥವನ್ನಾಗಲೀ ಹೇಳಬಹುದು.

**ರಾತಯಃ**—ದಾತಿ ಮೊದಲಾದ ಹತ್ತು ದಾನಕರ್ಮವನ್ನು ಸೂಚಿಸುವ ಧಾತುಗಳ ಮಧ್ಯದಲ್ಲಿ ರಾತಿ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೧೯) ರಾತಯಃ ಎಂದರೆ ದಾನವು, ಪ್ರದಾನ, ಕೊಡುವಿಕೆಯು ಇತ್ಯಾದ್ಯರ್ಥಗಳನ್ನು ಹೇಳಬಹುದು.

ನ ವಿ ದಸ್ಯಂತಿ—ನೋಪಕ್ಷೀಯಂತೇ। ಕ್ಷೀಣವಾಗುವುದಿಲ್ಲ, ಕಮ್ಮಿಯಾಗುವುದಿಲ್ಲ.

**ಮಂಹತೇ**—ದಾತಿ ಮೊದಲಾದ ಹತ್ತು ದಾನಕರ್ಮವಾಚಕಧಾತುಗಳ ಮಧ್ಯದಲ್ಲಿ ಮಂಹತೇ ಎಂಬ ಶಬ್ದವು ಪಠಿತವಾಗಿರುವುದರಿಂದ ಈ ಶಬ್ದಕ್ಕೆ, ಕೊಡುತ್ತಾನೆ ಎಂದರ್ಥವು (ನಿ ೩-೧೯).

**ಮಘಂ**—ಮಘಂ, ರೇಕ್ಣಃ ಮೊದಲಾದ ಇಪ್ಪತ್ತೆಂಟು ಧನವಾಚಕನಾಮಗಳ ಮಧ್ಯದಲ್ಲಿ ಮಘಶಬ್ದವು ಪಠಿತವಾಗಿರುವುದರಿಂದ ಮಘಶಬ್ದಕ್ಕೆ ಧನವೆಂದರ್ಥವು. (ನಿ. ೩-೯)

ವ್ಯಾಕರಣಪ್ರಕ್ರಿಯಾ

**ಪೂರ್ವೀಃ**—ಪುರು ಶಬ್ದದ ಮುಂದೆ **ವೋತೋಗುಣವಚನಾತ್** (ಪಾ. ಸೂ. ४-೧-४४) ಸ್ತ್ರೀಲಿಂಗದಲ್ಲಿ ಉದಂತವಾದ ಗುಣವಾಚಕದ ಮುಂದೆ ಙೀಷ್ ಪ್ರತ್ಯಯವು ವಿಕಲ್ಪವಾಗಿ ಬರುವುದು ಎಂಬುದರಿಂದ ಙೀಷ್ ಬರುವುದು. ಮೊದಲನೆಯ ಉಕಾರಕ್ಕೆ ಛಾಂದಸವಾಗಿ ದೀರ್ಘ ಬರುವುದು. ಎರಡನೆಯ ಉಕಾರಕ್ಕೆ ಯಣಾದೇಶದಿಂದ ವಕಾರ ಬರುವುದು. ಪೂರ್ವೀ ಎಂದಾಗುವುದು. ಇದರ ಮುಂದೆ ಪ್ರಥಮಾವಿಭಕ್ತಿ ಬಹುವಚನ ಜಸ್ ಪ್ರತ್ಯಯವನ್ನಿಟ್ಟರೆ ಪೂರ್ವೀ+ಅಸ್ ಎಂದಿರುವುದು. ಈಗ **ಪ್ರಥಮಯೋಃ ಪೂರ್ವಸವರ್ಣಃ** (ಪಾ. ಸೂ. ೬-೧-೧೦೨) ಎಂದು ವಿಹಿತವಾಗಿರುವ **ಪೂರ್ವಸವರ್ಣದೀರ್ಘಕ್ಕೆ ದೀರ್ಘಾಜ್ಜಸಿಚ** (ಪಾ. ಸೂ. ೬-೧-೧೦೫) ದೀರ್ಘದ ಮುಂದೆ ಜಸ್ ಅಥವಾ ಇಚ್ ಪ್ರತ್ಯಾಹಾರದ ವರ್ಣಗಳು ಇದ್ದರೆ ಪೂರ್ವಸವರ್ಣದೀರ್ಘ ಬರುವುದಿಲ್ಲ. ಎಂಬುದರಿಂದ ಯದ್ಯಪಿ ನಿಷೇಧ ಬರುವುದು. ಆದರೂ ಇದನ್ನು ಬಾಧಿಸಿ **ವಾ ಛಂದಸಿ** (ಪಾ. ಸೂ. ೬-೧-೧೦೬) ದೀರ್ಘದ ಮುಂದೆ ಜಸ್ ಅಥವಾ ಇಚ್ ಇದ್ದರೆ ಪೂರ್ವಸವರ್ಣದೀರ್ಘವು ವಿಕಲ್ಪವಾಗಿ ಬರುವುದು ಎಂಬುದ

ರಿಂದ ಪೂರ್ವಸವರ್ಣ ದೀರ್ಘ ಬರುವುದು. ರುತ್ವ ವಿಸರ್ಗಗಳು ಬಂದರೆ ಪೂರ್ವೀಃ ಎಂದಾಗುವುದು. ಪ್ರತ್ಯಯಸ್ವರದಿಂದ ಙೀಪ್ ಉದಾತ್ತ.

**ರಾತಯಃ**—ಕ್ತಿನ್ ಪ್ರತ್ಯಯಾಂತ. **ಮಂತ್ರೇವೃಷೇಷಪಚಮನವಿದಭೂವೀರಾ ಉದಾತ್ತಃ** (ಪಾ. ಸೂ. ೩-೩-೯೬) ಎಂಬುದರಿಂದ ಕ್ತಿನ್ ಪ್ರತ್ಯಯ ಉದಾತ್ತ

**ದಸ್ಯನ್ತಿ**—ದಸು ಉಪಕ್ಷಯೇ, ಧಾತು ಲಟ್. ಆದಕ್ಕೆ ಝಿ ಆದೇಶ ಝಕಾರಕ್ಕೆ ಅನ್ತ್ ಆದೇಶ. **ದಿವಾದಿಭ್ಯಃಶ್ಯನ್** (ಪಾ. ಸೂ. ೩-೧-೬೯) ಎಂಬುದರಿಂದ ಶ್ಯನ್ ವಿಕರಣ. **ತಿಙ್ಙತಿಙಃ** ಎಂಬುದರಿಂದ ಅನುದಾತ್ತ.

**ಊತಯಃ-ಊತಿಯೂತಿ ಜೂತಿಸಾತಿ ಹೇತಿಕೀರ್ತಯಶ್ಚ** (ಪಾ. ಸೂ. ೩-೩-೯೭) ಎಂಬುದರಿಂದ ಕ್ತಿನ್ ಪ್ರತ್ಯಯವು ಉದಾತ್ತವಾಗಿ ನಿಪಾತಿತವಾಗಿರುವುದು.

**ಯದಿ**-ನಿಪಾತವಾದ್ದರಿಂದ **ನಿಪಾತಾ ಆದ್ಯುದಾತ್ತಾಃ** ಎಂಬುದರಿಂದ ಆದ್ಯುದಾತ್ತ. ಸಂಹಿತಾಕಾಲದಲ್ಲಿ **ನಿಪಾತಸ್ಯಚ** (ಪಾ.ಸೂ. ೬-೩-೧೩೬) ಎಂಬುದರಿಂದ ದೀರ್ಘ.

**ಸ್ತೋತೃಭ್ಯಃ**—**ಷ್ಟುಞ್ ಸ್ತುತೌ ಧಾತು. ಧಾತ್ವಾದೇಃ ಷಃ ಸಃ** (ಪಾ.ಸೂ ೬-೧-೬೪) ಎಂಬುದರಿಂದ ಷಕಾರಕ್ಕೆ ಸಕಾರ, **ಣ್ವುಲ್‌ತೃಚೌ** (ಪಾ. ಸೂ. ೩-೧-೧೩೩) ಎಂಬುದರಿಂದ ತೃಚ್ ಪ್ರತ್ಯಯ. ಗುಣ. ಪ್ರತ್ಯಯವು ಚಿತ್ತಾದ್ದರಿಂದ **ಚಿತಃ** (ಪಾ.ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತ.

**ಮಂಹತೇ**-ಮಹಿ ವೃದ್ಧೌ ಇದಿತ್ತಾದ್ದರಿಂದ ನುಮಾಗಮ, ಲಟ್ ಆತ್ಮನೇಪದ ಪ್ರಥಮಪುರುಷ ಏಕವಚನ ತ ಆದೇಶ. **ಟಿತಆತ್ಮನೇಪದಾನಾಂಟೇರೇ** (ಪಾ. ಸೂ. ೩-೪-೭೯) ಎಂಬುದರಿಂದ ಏತ್ವ. ಶಪ್ ವಿಕರಣ **ನಶ್ಚಾಪದಾನ್ತಸ್ಯಝಲಿ** (ಪಾ. ಸೂ. ೮-೩-೨೪) ಎಂಬುದರಿಂದ ನುಮ್‌ನ ನಕಾರಕ್ಕೆ ಅನುಸ್ವಾರ. ಮಂಹತೇ ಎಂದಾಗುವುದು. ಶಪ್ಪು ಪಿತ್ತಾದ್ದರಿಂದ ಅನುದಾತ್ತ. ತೇ ಎಂಬುದು **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತ. ಧಾತುಸ್ವರ ನಿಲ್ಲುವುದು. **ನಿಪಾತೈರ್ಯದ್ಯದಿಹನ್ತ ಕುವಿನ್ನೇಚ್ಚೇಚ್ಚಣ್ ಕಚ್ಚಿದ್ಯತ್ರಯುಕ್ತಮ್** (ಪಾ. ಸೂ ೮-೧-೩೦) ಎಂಬುದರಿಂದ ಅನುದಾತ್ತಕ್ಕೆ ನಿಷೇಧ ಬರುವುದು ಆದ್ದರಿಂದ **ತಿಙ್ಙತಿಙಃ** (೮-೧-೨೮) ಎಂಬುದರಿಂದ ಅನುದಾತ್ತ ಬರುವುದಿಲ್ಲ || ೩ ||

॥ ಸಂಹಿತಾಪಾಠಃ ॥

ಪುರಾಂ ಭಿಂದುರ್ಯುವಾ ಕವಿರಮಿತೌಜಾ ಅಜಾಯತ ।
ಇಂದ್ರೋ ವಿಶ್ವಸ್ಯ ಕರ್ಮಣೋ ಧರ್ತಾ ವಜ್ರೀ ಪುರುಷ್ಟುತಃ ॥೪॥

॥ ಪದಪಾಠಃ ॥

ಪುರಾಂ । ಭಿಂದುಃ । ಯುವಾ । ಕವಿಃ । ಅಮಿತಽಓಜಾಃ । ಅಜಾಯತ ॥
ಇಂದ್ರಃ । ವಿಶ್ವಸ್ಯ । ಕರ್ಮಣಃ । ಧರ್ತಾ । ವಜ್ರೀ । ಪುರುಽಸ್ತುತಃ ॥ ೪ ||

ಅಭಿಪ್ಲವಷಡಹಸ್ಯೋಕ್ಥ್ಯೇಷು ತೃತೀಯಸವನೇಽಚ್ಛಾವಾಕಸ್ಯ ಪುರಾಂ ಭಿಂದುರ್ಯುವಾ ಕವಿರಿತಿ ಸ್ತೋತ್ರಿಯಸ್ತೃಚಃ । ತಥಾ ಚ ಸೂತ್ರಿತಂ । ಏಹ್ಯೂ ಷು ತ್ವಿತ್ಯುಪಕ್ರಮ್ಯ ಪುರಾಂ ಭಿಂದುರ್ಯುವಾಕವಿರ್ವೃಷಾ ಹ್ಯಸಿ ರಾಧಸೇ । ಆ. ೭-೮ । ಇತಿ ॥

ಅಯಮಿಂದ್ರ ಉಚ್ಯಮಾನಗುಣಯುಕ್ತೋಽಜಾಯತ । ಸಂಪನ್ನಃ । ಕೀದೃಗ್ಗುಣಕ ಇತಿ ತದುಚ್ಯತೇ । ಪುರಾಮಸುರಪುರಾಣಾಂ ಭಿಂದುರ್ಭೇತ್ತಾ ಯುವಾ ಕದಾಚಿದಪಿ ವಲೀಪಲಿತಾದಿವಾರ್ಧಕರಹಿತಃ ಕವಿರ್ಮೇಧಾವೀ ಅಮಿತೌಜಾಃ ಪ್ರಭೂತಬಲಃ ವಿಶ್ವಸ್ಯ ಕರ್ಮಣಃ ಕೃತ್ಸ್ನಸ್ಯ ಜ್ಯೋತಿಷ್ಟೋಮಾದೇರ್ಧರ್ತಾ ಪೋಷಕಃ ವಜ್ರೀ ಯಜಮಾನರಕ್ಷಣಾರ್ಥಂ ಸರ್ವದಾ ವಜ್ರಯುಕ್ತಃ ಪುರುಷ್ಟುತೋ ಬಹುವಿಧೇ ತತ್ತತ್ಕರ್ಮಣಿ ಸ್ತುತಃ ॥ ಭಿಂದುಃ । ಭಿದಿರ್ ವಿದಾರಣೇ । ಕುರಿತ್ಯನುವೃತ್ತೌ ಪ್ಯಾಭಿದಿವ್ಯಧಿಗೃಧಿಧೃಷಿದೃಶಿಭ್ಯಃ। ಉ ೧-೨೪ । ಇತಿ ಕುಪ್ರತ್ಯಯಃ । ತಸ್ಯ ಛಂದಸ್ಯುಭಯಥೇತಿ ಸಾರ್ವಧಾತುಕಸಂಜ್ಞಾಯಾಂ ರುಧಾದಿಭ್ಯಃ ಶ್ನಮ್ । ಪಾ. ೩ ೧-೭೮ । ಮಿತ್ತ್ವಾದಂತ್ಯಾದಚಃ ಪರೋ ಭವತಿ । ಪಾ. ೧ ೧-೪೭ । ಶ್ನಸೋರಲ್ಲೋಪಃ । ಅನುಸ್ವಾರಪರಸವರ್ಣೌ । ಪಾ- ೮-೪-೫೮ । ಅಚಃ ಪರಸ್ಮಿನ್ಪೂರ್ವವಿಧೌ । ಪಾ. ೧-೧ ೫೭ । ಇತಿ ಪ್ರಾಪ್ತಸ್ಯ ಸ್ಥಾನಿವದ್ಭಾವಸ್ಯ ನ ಪದಾಂತೇತ್ಯಾದಿನಾ । ಪಾ. ೧-೧-೫೮ । ನಿಷೇಧಃ । ಯುವಾ । ಯು ಮಿಶ್ರಣಾಮಿಶ್ರಣಯೋಃ । ಕನಿನ್ಯುವೃಷಿತಕ್ಷಿರಾಜಿಧನ್ವಿದ್ಯುಪ್ರತಿದಿವಃ । ಉ. ೧-೧೫೬ । ಇತಿ ಕನಿನ್ ನಿತ್ತ್ವಾದಾದ್ಯುದಾತ್ತಃ । ಕವಿಃ । ಕು ಶಬ್ದೇ । ಅಚ ಇಃ । ಉ. ೪-೧೩೮ । ಇತೀಃ । ಪ್ರತ್ಯಯಸ್ವರಃ ಅಮಿತೌಜಾಃ । ಅಮಿತಶಬ್ದಸ್ಯಾವ್ಯಯಪೂರ್ವಪದಪ್ರಕೃತಿಸ್ವರತ್ವಂ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವೇನ ತದೇವ ಶಿಷ್ಯತೇ । ವಿಶ್ವಸ್ಯ । ಅಶಿಪ್ರುಷೀತ್ಯಾದಿನಾ । ಉ. ೧-೧೫೧ । ಕ್ವನ್ । ನಿತ್ತ್ವಾದಾದ್ಯುದಾತ್ತಃ । ಕರ್ಮಣಃ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್ । ನಿತ್ಸ್ವರಃ । ಧರ್ತಾ । ತೃಚ್ । ಚಿತ್ತ್ವಾದಂತೋದಾತ್ತಃ । ವಜ್ರೀ । ಮತ್ವರ್ಥೀಯ ಇನಿಃ । ಪ್ರತ್ಯಯಸ್ವರಃ । ಪುರುಷ್ಟುತಃ । ಸ್ತುತಸ್ತೋಮಯೋಶ್ಛಂದಸಿ । ಪಾ. ೮-೩-೧೦೫ । ಇತಿ ಷತ್ವಂ । ಬಹುಷು ಪ್ರದೇಶೇಷು ಸ್ತುತಃ । ಥಾಥಘಞ್ಕ್ತಾಜಬಿತ್ರಕಾಣಾಂ । ಪಾ. ೬-೨-೧೪೪ । ಇತ್ಯಂತೋದಾತ್ತತ್ವಂ ತೃತೀಯಾಸಮಾಸೇ ಹಿ ಥಾಥಾದಿಸ್ವರಾಪವಾದಸ್ತೃತೀಯಾ ಕರ್ಮಣಿ । ಪಾ. ೬-೨-೪೮ । ಇತಿ ಪೂರ್ವಪದಪ್ರಕೃತಿಸ್ವರಃ ಸ್ಯಾತ್ ॥

॥ ಪ್ರತಿಪದಾರ್ಥ ॥

ಇಂದ್ರಃ—ಈ ಇಂದ್ರನು । ಪುರಾಂ—ಶತ್ರುನಗರಗಳ । ಭಿಂದುಃ—ಭಂಜಕನು (ಮುರಿದುಹಾಕುವವನು) ಯುವಾ—ಮುಪ್ಪು ಮೊದಲಾದ ವಾರ್ಧಕ್ಯವಿಕಾರಗಳಿಲ್ಲದೆ ಯಾವಾಗಲೂ ಯೌವನದಶೆಯಲ್ಲಿರುವವನು । ಕವಿಃ—ಮೇಧಾವಿಯು (ಬುದ್ಧಿವಂತನು) । ಅಮಿತೌಜಾಃ—ಮಹಾ ಪರಾಕ್ರಮಶಾಲಿಯು । ವಿಶ್ವಸ್ಯ ಕರ್ಮಣಃ—ಸಮಸ್ತವಾದ ಜ್ಯೋತಿಷ್ಟೋಮಾದಿ ಯಜ್ಞರೂಪವಾದ ಕರ್ಮಗಳ । ಧರ್ತಾ-ಪೋಷಕನು। ವಜ್ರೀ—ವಜ್ರಾಯುಧಧರನು । ಪುರುಷ್ಟುತಃ—ಬಹು ವಿಧವಾದ ಯಜ್ಞಾದಿ ಕರ್ಮಗಳಲ್ಲಿ ಅತಿಶಯವಾಗಿ ಸ್ತುತಿಸಲ್ಪಡುವವನು । (ಇಂತಹ ಇಂದ್ರನು ಈ ಗುಣಗಳಿಂದ) ಅಜಾಯತ—ಸಂಪನ್ನನಾಗಿರುವನು ॥

॥ ಭಾವಾರ್ಥ ॥

ಇಂದ್ರನ ಗುಣಗಳು ಬಹಳವಾಗಿರುವವು. ಈ ಇಂದ್ರನು ಶತ್ರುಗಳ ಪಟ್ಟಣಗಳನ್ನು ಧ್ವಂಸಮಾಡುವವನು. ಇವನಿಗೆ ಮುಪ್ಪು ಮೊದಲಾದ ವಿಕಾರಗಳಿಲ್ಲದೆ ಯಾವಾಗಲೂ ಯೌವನಾವಸ್ಥೆಯಲ್ಲಿರುವವನು, ಬಹಳ

ಬುದ್ಧಿವಂತನು, ಮಹಾ ಬಲಶಾಲಿಯು, ಸಮಸ್ತ ಯಜ್ಞಯಾಗಾದಿಗಳನ್ನು ತನ್ನ ರಕ್ಷಣೆಯಿಂದ ಪೋಷಿಸತಕ್ಕವನು. ಯಜಮಾನನ ರಕ್ಷಣಾರ್ಥವಾಗಿ ವಜ್ರಾಯುಧವನ್ನು ಧರಿಸಿರುವವನು. ಇದಲ್ಲದೆ ಈ ಇಂದ್ರನನ್ನು ಅನೇಕ ಕರ್ಮಗಳಲ್ಲಿ ಜನರು ಬಹಳವಾಗಿ ಸ್ತುತಿಸುವರು.

English Translation.

Indra is the destroyer of (enemies') cities, he is ever young, wise, of unbounded strength, the sustainer of pious acts, the weilder of thunderbolt and praised by many.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ವಿಶೇಷ ವಿನಿಯೋಗವನ್ನು ಹೇಳಿರುವರು ಅಭಿಪ್ಲವಷಡಹವೆಂಬ ಯಾಗದ ಉಕ್ಥ್ಯವೆಂಬ ವಿಶೇಷ ದಿನದಲ್ಲಿ ತೃತೀಯಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು **ಪುರಾಂ ಭಿಂದುರ್ಯುವಾಕವಿಃ** ಎಂಬ ತೃಚವನ್ನು ಸೋತ್ರ ಮಂತ್ರಪಠನದಲ್ಲಿ ಹೇಳಬೇಕು. ಈ ವಿಷಯದಲ್ಲಿ ಆಶ್ವಲಾಯನ ಸೂತ್ರದಲ್ಲಿ ವಿಹ್ಯೌಷ್ಟಿತಿ ಎಂಬ ಖಂಡದಲ್ಲಿ **ಪುರಾಂ ಭಿಂದುರ್ಯುವಾಕವಿಃ** ಮತ್ತು **ವೃಷಾ ಹ್ಯಸಿರಾಧಸೇ** ಎಂಬ ತೃಚಗಳನ್ನು ಪಠಿಸಬೇಕೆಂದು ಹೇಳಿರುವುದು.

**ಭಿಂದುಃ— ಭಿದಿರ್ ವಿದಾರಣೇ—** ಸೀಳುವವನು, ನಾಶಮಾಡುವವನು ಧ್ವಂಸಮಾಡುವವನು. ಇಲ್ಲಿ ಪುರಾಂ ಎಂಬ ಶಬ್ದಕ್ಕೆ ಶತ್ರುಪಟ್ಟಣಗಳ ಎಂಬರ್ಥವನ್ನು ಹೇಳಿರುವರು.

**ಯುವಾ**—ಯೌವನದಶೆಯಲ್ಲಿರುವವನು, ದೇಹಸಾಮರ್ಥ್ಯವು ಕುಗ್ಗಿ ವಾರ್ಧಕ್ಯವು ಬರದಂತೆ ಯೌವನಾವಸ್ಥೆಯಲ್ಲಿಯೇ ಇರುವವನು. **ಯುವಾ** ಮತ್ತು **ಕವಿಃ** ಎಂಬ ಶಬ್ದಗಳು ಅಗ್ನಿಯನ್ನು ಸ್ತೋತ್ರ ಮಾಡುವಾಗಲೂ ವಿಶೇಷವಾಗಿ ಉಪಯೋಗಿಸಲ್ಪಡುವುವು.

**ಅಜಾಯತ**—ಈ ಶಬ್ದಕ್ಕೆ ಉತ್ಪನ್ನನಾದನು, ಹುಟ್ಟಿದನು ಎಂದರ್ಥವಿದ್ದರೂ ಇಲ್ಲಿ—ಇಂತಹ ಗುಣಯುಕ್ತನಾಗಿ ಇರುವನು ಎಂಬ ಅರ್ಥವನ್ನೇ ಹೇಳಬೇಕು.

**ವಿಶ್ವಸ್ಯ ಕರ್ಮಣಃ**—ಭಾಷ್ಯಕಾರರು ಈ ಶಬ್ದಗಳಿಗೆ **ಕೃತ್ಸ್ನಸ್ಯ ಜ್ಯೋತಿಷ್ಟೋಮಾದೇಃ** ಎಂದು ಅರ್ಥಮಾಡಿರುವರು. ಯಜ್ಞಯಾಗಾದಿ ಕರ್ಮಗಳ, ಲೋಕವ್ಯವಹಾರರೂಪವಾದ ಸಮಸ್ತ ಕರ್ಮಗಳು ಎಂಬ ಅರ್ಥವನ್ನೂ ಹೇಳಬಹುದು.

॥ ವ್ಯಾಕರಣಪ್ರಕ್ರಿಯಾ ॥

**ಭಿನ್ದುಃ—ಭಿದಿರ್ ವಿದಾರಣೇ** ಧಾತು. ಇದರ ಮುಂದೆ **ಸ್ಫಾ ಭಿದಿ, ವ್ಯಧಿ, ಗೃಧಿ, ಧೃಷಿ, ದೃಶಿಭ್ಯಃ** (ಉ. ಸೂ. ೧-೨೩) **ಕುರ್ಭ್ರಶ್ಚ** (ಪಾ. ಸೂ. ೧-೨೨) ಎಂಬುದರಿಂದ ಕುಃ ಎಂಬುದು ಅನುವೃತ್ತವಾಗುವುದು.

**ಪ್ಯಾ ಪಾಲನ ಪೂರಣಯೋಃ, ಭಿದಿರ್ ವಿದಾರಣೇ, ವ್ಯಥ ತಾಡನೇ, ಗೃಧು ಅಭಿಕಾಂಕ್ಷಾಯಾಂ, ಞಿಧೃಷಾ-ಪ್ರಾಗಲ್ಭ್ಯೇ** ಈ ಧಾತುಗಳ ಮುಂದೆ ಕು ಪ್ರತ್ಯಯ ಬರುವುದು ಎಂಬುದರಿಂದ ಕು ಪ್ರತ್ಯಯ ಬಂದರೆ ಕಕಾರಕ್ಕೆ ಇತ್ಸಂಜ್ಞೆ ಲೋಪ. ಭಿದ್+ಉ **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಉ ಎಂಬುದು ಸಾರ್ವಧಾತುಕ ಸಂಜ್ಞೆಯನ್ನು ಹೊಂದುವುದು. ಆದ್ದರಿಂದ **ರುಧಾದಿಭ್ಯಃಶ್ನಮ್** (ಪಾ. ಸೂ. ೩-೧-೭೮) ಕರ್ತ್ರರ್ಥಕ ಸಾರ್ವಧಾತುಕ ಪ್ರತ್ಯಯವು ಪರದಲ್ಲಿರುವಾಗ ರುಧಾದಿ ಧಾತುಗಳಿಗೆ ಶ್ನಮ್ ಬರುವುದು ಎಂಬುದರಿಂದ ಶ್ನಮ್ ಬರುವುದು. ಶ್ನಮ್ ಮಿತ್ತಾದ್ದರಿಂದ **ಮಿದಚೋಽಂತ್ಯಾತ್ಪರಃ** (ಪಾ. ಸೂ. ೧-೧-೪೭) ಎಂಬುದರಿಂದ ಅಂತಸ್ವರದ ಮುಂದೆ ಬರುವುದು. ಭಿನದ್+ಉ **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಕಿತ್ತು ಙಿತ್ತು ಆದ ಸಾರ್ವಧಾತುಕ ಪರದಲ್ಲಿರುವಾಗ ಶ್ನ ಪ್ರತ್ಯಯ ಅಕಾರಕ್ಕೂ ಅಸ್ ಧಾತುವಿನ ಅಕಾರಕ್ಕೂ ಲೋಪ ಬರುವುದು ಎಂಬುದರಿಂದ ಶ್ನ ಪ್ರತ್ಯಯದ ಅಕಾರಕ್ಕೆ ಲೋಪ ಭಿನ್ ದ್+ಉ ಎಂದಾಗುವುದು. **ನಶ್ಚಾಪದಾಂತಸ್ಯಝಲಿ** (ಪಾ. ಸೂ. ೮-೩-೨೪) ಝಲ್ ವರ್ಣಪರದಲ್ಲಿರುವಾಗ ಪದದ ಕೊನೆಯಲ್ಲಿಲ್ಲದ ನಕಾರ ಮಕಾರಗಳಿಗೆ ಅನುಸ್ವಾರ ಬರುವುದು ಎಂಬುದರಿಂದ ನ್‌ಗೆ ಅನುಸ್ವಾರ. **ಅನುಸ್ವಾರಸ್ಯಯಯಿ ಪರಸವರ್ಣಃ** (ಪಾ. ಸೂ. ೮-೪-೫೮) ಯಯ್ ವರ್ಣ ಪರದಲ್ಲಿರುವಾಗ ಅನುಸ್ವಾರಕ್ಕೆ ಪರಸವರ್ಣ ಬರುವುದು ಎಂಬುದರಿಂದ ಅನುಸ್ವಾರಕ್ಕೆ ಪರಸವರ್ಣ ಬರುವುದು. ಪರದಲ್ಲಿರುವುದು ದಕಾರ. ಅದಕ್ಕೆ ಸವರ್ಣಗಳು ಯದ್ಯಪಿ ಐದು ಇರುವುವು. ಆದರೂ ಅನುಸ್ವಾರವು ನಾಸಿಕಾ ಸ್ಥಾನದಲ್ಲಿ ಹುಟ್ಟುವುದರಿಂದ, ನಾಸಿಕಾಸ್ಥಾನದಲ್ಲಿ ಹುಟ್ಟುವ ಪರಸವರ್ಣವಾದ ನಕಾರವೇ ಬರುವುದು. ಇಲ್ಲಿ ಅನುಸ್ವಾರ ಪರ ಸವರ್ಣಗಳನ್ನು ಮಾಡುವಾಗ ಅಕಾರ ಲೋಪಕ್ಕೆ **ಅಚಃಪರಸ್ಮಿನ್ ಪೂರ್ವ-ವಿಧೌ** (ಪಾ. ಸೂ ೧-೧-೫೭) ಎಂಬುದರಿಂದ ಸ್ಥಾನಿವದ್ಭಾವವು ಪ್ರಾಪ್ತವಾಗುವುದು. ಸ್ಥಾನಿಭೂತವಾದ ಅಚ್ಚಿಗೆ ಪೂರ್ವದಲ್ಲಿ ಕಂಡುದಕ್ಕೆ ಕಾರ್ಯವನ್ನುಮಾಡುವಾಗ ಪರನಿಮಿತ್ತಕವೂ ಅಚ್ಚಿನಸ್ಥಾನದಲ್ಲಿ ಬಂದುದೂ ಆದ ಆದೇಶವು ಸ್ಥಾನಿವದ್ಭಾವವನ್ನು ಹೊಂದುವುದು ಎಂದು ಸೂತ್ರಕ್ಕೆ ಅರ್ಥ. ಇಲ್ಲಿ ಲೋಪ. ಪರದಲ್ಲಿರುವ ಸಾರ್ವಧಾತುಕ ಉ ಪ್ರತ್ಯಯವನ್ನು ನಿಮಿತ್ತ ಮಾಡಿಕೊಂಡು ಅ ಎಂಬ ಅಚ್ಚಿನ ಸ್ಥಾನದಲ್ಲಿ ಬಂದಿರುವುದು ಆದ್ದರಿಂದ ಆ ಅಕಾರದ ಪೂರ್ವದಲ್ಲಿರುವ ನಕಾರಕ್ಕೆ ಅನುಸ್ವಾರವನ್ನು ಮಾಡುವಾಗಲೂ, ನಕಾರರೂಪಸ್ಥಾನಿದ್ವಾರವಾಗಿ ಸ್ಥಾನಿಭೂತ ಅಕಾರಕ್ಕಿಂತಲೂ ಪೂರ್ವದಲ್ಲಿ ಕಾಣತಕ್ಕದ್ದಾಗುವ ಅನುಸ್ವಾರಕ್ಕೆ ಪರಸವರ್ಣ ಮಾಡುವಾಗಲೂ ಆ ಲೋಪಕ್ಕೆ ಸ್ಥಾನಿವದ್ಭಾವವು ಪ್ರಾಪ್ತವಾಗುವುದು. ಸ್ಥಾನಿವದ್ಭಾವ ಬಂದರೆ ಅಕಾರದಿಂದ ವ್ಯವಧಾನ ಬರುವುದರಿಂದ ಅನುಸ್ವಾರಪರ ಸವರ್ಣಗಳಿಗೆ ಪ್ರಾಪ್ತಿಯಿಲ್ಲ ಎಂದು ಹೇಳಬಹುದು. ಆದರೆ **ನಪದಾಂತ ದ್ವಿರ್ವಚನ-ವರೇ, ಯಲೋಪ, ಸ್ವರ, ಸವರ್ಣಾನುಸ್ವಾರ, ದೀರ್ಘ, ಜಶ್ಚ, ರ್ವಿಧಿಷು** (೧-೧-೫೮) ಎಂಬುದರಿಂದ ಸ್ಥಾನಿವದ್ಭಾವಕ್ಕೆ ಪ್ರತಿಷೇಧ ಬರುವುದು. ಪದಕ್ಕೆ ಚರಮಾವಯವತ್ವ ಸಂಪಾದಕವಾದ ಕಾರ್ಯವನ್ನು ಮಾಡುವಾಗಲೂ ದ್ವಿರ್ವಚನಾದಿ ಕಾರ್ಯಗಳನ್ನು ಮಾಡುವಾಗಲೂ ಪರನಿಮಿತ್ತಕವೂ ಅಚ್ ಸ್ಥಾನದಲ್ಲಿ ಬಂದುದೂ ಆದ ಆದೇಶವು ಸ್ಥಾನಿವದ್ಭಾವವನ್ನು ಹೊಂದುವುದಿಲ್ಲ ಎಂದು ಸೂತ್ರಾರ್ಥ. ಇಲ್ಲಿ ಅನುಸ್ವಾರ ಪರಸವರ್ಣಗಳನ್ನು ಮಾಡುವಾಗ ಈ ಸೂತ್ರದಿಂದ ಅಲೋಪಕ್ಕೆ ಸ್ಥಾನಿವದ್ಭಾವಪ್ರತಿಷೇಧ ಬರುವುದು. ಆದ್ದರಿಂದ ಅಕಾರದಿಂದ ವ್ಯವಧಾನ ಬರುವುದಿಲ್ಲ. ಅನುಸ್ವಾರ ಪರಸವರ್ಣಗಳು ಬರುವುವು. ಭಿನ್ದುಃ ಎಂದಾಗುವುದು. ಪ್ರತ್ಯಯಸ್ವರ ಬರುವುದು.

**ಯುವಾ**—**ಯು ಮಿಶ್ರಣಾಮಿಶ್ರಣಯೋಃ** ಧಾತು ಇದರ ಮುಂದೆ **ಕನಿನ್ಯುವೃಷಿತಕ್ಷಿರಾಜಿ-ಧನ್ವಿದ್ಯುಪ್ರತಿದಿವಃ** (ಉ. ಸೂ. ೧-೧೫೪) ಎದು ಕನಿನ್ ಪ್ರತ್ಯಯ ಬರುವುದು. ಪ್ರತ್ಯಯವು ನಿತ್ತು ಆದ್ದರಿಂದ ಆದ್ಯುದಾತ್ತಸ್ವರ ಬರುವುದು.

**ಕವಿಃ**—ಕು ಶಬ್ದೇ ಧಾತು. ಇದರ ಮುಂದೆ **ಅಚಇಃ** (ಉ. ಸೂ. ೪-೫೭೮) ಅಜಂತವಾದ ಧಾತು ವಿನ ಮುಂದೆ ಇ ಪ್ರತ್ಯಯ ಬರುವುದು ಎಂಬುದರಿಂದ ಇ ಪ್ರತ್ಯಯ ಬಂದರೆ ಕು+ಇ ಗುಣ ಅವಾದೇಶಗಳು ಬಂದು ಕವಿ ಎಂದಾಗುವುದು. ಪ್ರತ್ಯಯಸ್ವರ ಬರುವುದು.

**ಅಮಿತೌಜಾಃ**—ನಮಿತಂ ಅಮಿತಂ। ಅಮಿತಂ ಓಜಃ ಯಸ್ಯ ಸಃ ಅಮಿತೌಜಾಃ ಎಂದು ವಿಗ್ರಹ. ಅಮಿತಮ್ ಎಂಬಲ್ಲಿ **ತತ್ಪುರುಷೇತುಲ್ಯಾರ್ಥ** (ಪಾ. ಸೂ. ೬-೨-೨) ಎಂಬುದರಿಂದ ಅವ್ಯಯ ಪೂರ್ವಪದಪ್ರಕೃತಿ ಸ್ವರ ಬರುವುದು. ನಂತರ ಬಹುವ್ರೀಹಿಸಮಾಸ ಬಂದರೂ **ಬಹುವ್ರೀಹೌಪ್ರಕೃತ್ಯಾಪೂರ್ವಪದಮ್** (ಪಾ ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬಂದು ಅದೇ ಸ್ವರ ನಿಲ್ಲುವುದು.

**ವಿಶ್ವತಃ**—**ಅಶೂಪ್ರುಷಿ** (ಉ. ಸೂ. ೧-೧೪೯) ಎಂಬುದರಿಂದ ಕ್ವನ್ ಪ್ರತ್ಯಯ. ನಿತ್ಸ್ವರ ಬರುವುದು

**ಕರ್ಮಣಃ**—ಡುಕೃಞ್ ಕರಣೇ ಧಾತು. ಇದರ ಮುಂದೆ **ಅನ್ಯೇಭ್ಯೋಽಪಿ ದೃಶ್ಯನ್ತೇ** (ಪಾ. ಸೂ. ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ. ಪೂರ್ವಕ್ಕೆ ಗುಣ ರಪರವಾಗಿ ಬರುವುದು ಕರ್ಮನ್ ನಿತ್ಸ್ವರ ದಿಂದ ಆದ್ಯುದಾತ್ತ. ಷಷ್ಠೀ ಏಕವಚನದಲ್ಲಿ **ಋವರ್ಣಾನ್ನಸ್ಯಣತ್ವಂ ವಾಚ್ಯಂ** ಎಂಬುದರಿಂದ ಣತ್ವ, ರುತ್ವ ವಿಸರ್ಗಗಳು ಕರ್ಮಣಃ ಎಂದಾಗುವುದು

**ಧರ್ತಾ**—ಧೃಞ್ ಅವಸ್ಥಾನೇ ಧಾತು. **ಣ್ವುಲ್‌ತೃಚೌ** (ಪಾ. ಸೂ. ೩-೧-೧೩೩) ಎಂಬುದರಿಂದ ತೃಚ್ ಪ್ರತ್ಯಯ. ಗುಣ ರಪರತ್ವ ಬಂದರೆ ಧರ್ತೃ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋ ದಾತ್ತ. ಪ್ರಥಮೈಕವಚನದಲ್ಲಿ ಧರ್ತಾ ಎಂದಾಗುವುದು.

**ವಜ್ರೀ**—ವಜ್ರಂ ಅಸ್ಯ ಅಸ್ತಿ ಇತಿ ವಜ್ರೀ. **ಅತಇನಿಠನೌ** (ಪಾ. ಸೂ ೫-೨-೧೧೫) ಎಂಬುದರಿಂದ ಇನಿಪ್ರತ್ಯಯ. ಪ್ರತ್ಯಯಸ್ವರ ಬರುವುದು.

**ಪುರುಷ್ಟುತಃ**—ಪೃ ಪಾಲನಪೂರಣಯೋಃ ಎಂಬ ಧಾತುವಿನ ಮುಂದೆ **ಪೄಭಿದಿ** (ಉ ಸೂ ೧-೨೩) ಎಂಬುದರಿಂದ ಕು ಪ್ರತ್ಯಯ. **ಉದೋಷ್ಠ್ಯಪೂರ್ವಸ್ಯ** (ಪಾ. ಸೂ. ೭-೧-೧೦೨) ಎಂಬುದರಿಂದ ಋಕಾರಕ್ಕೆ ಉಕಾರ ರಪರವಾಗಿ ಬರುವುದು ಪುರು ಎಂದಾಗುವುದು ಷ್ಟುಞ್‌ಸ್ತುತೌ ಧಾತು. **ಧಾತ್ವಾದೇಃ ಷಃ ಸಃ** (ಪಾ. ಸೂ. ೬-೧-೬೪) ಎಂಬುದರಿಂದ ಷಕಾರಕ್ಕೆ ಸಕಾರ. ಟಕಾರಕ್ಕೆ ನಿವೃತ್ತಿ. ಪುರುಷು ಸ್ತುತಃ ಎಂದು ಸಪ್ತಮೀತತ್ಪುರುಷ. ಬಹುಪ್ರದೇಶಗಳಲ್ಲಿ ಸ್ತುತಿಸಲ್ಪಟ್ಟವನು ಎಂದು ಅರ್ಥ. **ಸುಪೋಧಾತು** (ಪಾ. ಸೂ ೨-೪-೭೧) ಎಂಬುದರಿಂದ ಸಮಾಸಪ್ರಾತಿಪದಿಕಾವಯವವಾದ ಸುಪ್ಪಿಗೆ ಲುಕ್. ಪುರುಸ್ತುತ ಎಂದಾಗುವುದು. ಈಗ **ಸ್ತುತಸ್ತೋಮಯೋ-ಶ್ಛಂದಸಿ** (ಪಾ. ಸೂ. ೮-೩-೧೦೫) ಸ್ತುತ ಸೋಮಶಬ್ದಗಳು ಪರದಲ್ಲಿರುವಾಗ ಪೂರ್ವಪದದಲ್ಲಿರುವ ಇಣ್ ಕವರ್ಗ ಗಳ ಮುಂದೆ ಇರುವ ಸಕಾರಕ್ಕೆ ಷಕಾರ ಬರುವುದು ಎಂಬುದರಿಂದ ಸಕಾರಕ್ಕೆ ಷಕಾರ. **ಷ್ಟುನಾಷ್ಟುಃ** (ಪಾ ಸೂ. ೮-೪-೪೧) ಎಂಬುದರಿಂದ ಷಕಾರದ ಮುಂದೆ ಇರುವ ತಕಾರಕ್ಕೆ ಟಕಾರ, ಪುರುಷ್ಟುತ ಎಂದಾಗುವುದು. **ಥಾಥ-ಘಞ್‌ಕ್ತಾಜಬಿತ್ರಕಾಣಾಮ್** (ಪಾ. ಸೂ. ೬-೧-೧೪೪) ಗತಿಕಾರಕಗಳ ಮುಂದೆ ಇರುವ ಥ ಅಥ ಘಞ್ ಕ್ತ, ಅಚ್ ಅಪ್ ಇತ್ರ ಕ ಈ ಪ್ರತ್ಯಯಾಂತಗಳ ಕೊನೆಯ ವರ್ಣವು ಉದಾತ್ತವಾಗುವುದು ಎಂಬುದರಿಂದ ಅಂತೋದಾತ್ತ ಬರುವುದು. ಪುರುಭಿಃ ಸ್ತುತಃ ಎಂದು ತೃತೀಯಾತತ್ಪುರುಷ ಸಮಾಸಮಾಡಿದ ಪಕ್ಷದಲ್ಲಿ **ತೃತೀಯಾ ಕರ್ಮಣಿ** (ಪಾ ಸೂ. ೬-೨-೪೮) ಕರ್ಮವಾಚಕಕ್ತಾಂತವು ಪರದಲ್ಲಿದ್ದರೆ ತೃತೀಯಾಂತವು ಪ್ರಕೃತಿಸ್ವರವನ್ನು ಹೊಂದುವುದು ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರಬೇಕಾಗುವುದು ಅದಕ್ಕಾಗಿ ಸಪ್ತಮೀತತ್ಪುರುಷ ಸಮಾಸವನ್ನು ಅಂಗೀಕರಿಸಬೇಕು. ॥ ೪ ॥

॥ ಸಂಹಿತಾಪಾಠಃ ॥

ತ್ವಂ ವ॒ಲಸ್ಯ॒ ಗೋಮ॑ತೋ॒ಽಪಾ॑ವರದ್ರಿವೋ॒ ಬಿಲಂ᳚ ।
ತ್ವಾಂ ದೇ॒ವಾ ಅಬಿ॑ಭ್ಯುಷ॒ಸ್ತುಜ್ಯ॑ಮಾನಾಸ ಆವಿಷುಃ ॥ ೫ ॥

॥ ಪದಪಾಠಃ ॥

ತ್ವಂ । ವ॒ಲಸ್ಯ॑ । ಗೋಽಮ॑ತಃ । ಅಪ॑ । ಅ॒ವಃ॒ । ಅ॒ದ್ರಿ॒ಽವಃ॒ । ಬಿಲಂ᳚ ॥
ತ್ವಾಂ । ದೇ॒ವಾಃ । ಅಬಿ॑ಭ್ಯುಷಃ । ತು॒ಜ್ಯಮಾ॑ನಾಸಃ । ಆ॒ವಿ॒ಷುಃ॒ ॥ ೫ ॥

॥ ಸಾಯಣಭಾಷ್ಯಂ ॥

ವಲನಾಮಕಃ ಕಶ್ಚಿದಸುರೋ ದೇವಸಂಬಂಧಿನೀರ್ಗಾ ಅಪಹೃತ್ಯ ಕಸ್ಮಿಂಶ್ಚಿದ್ಬಿಲೇ ಗೋಪಿತವಾನ್ । ತದಾನೀಮಿಂದ್ರಸ್ತದ್ಬಿಲಂ ಸ್ವಸೈನ್ಯೇನ ಸಮಾವೃತ್ಯ ತಸ್ಮಾದ್ಬಿಲಾದ್ಗಾ ನಿಃಸಾರಯಾಮಾಸ । ತದಿದಮುಪಾಖ್ಯಾನಮಿಂದ್ರೋ ವಲಸ್ಯ ಬಿಲಮಪೌರ್ಣೋತ್ । ತೈ- ಸಂ ೨-೧ ೫-೧ । ಇತ್ಯಾದಿಬ್ರಾಹ್ಮಣೇಷು ಮಂತ್ರಾಂತರೇಷು ಚ ಪ್ರಸಿದ್ಧಂ । ತದೇತದ್ಬುದ್ಧಿ ನಿಧಾಯಾಯಂ ಮಂತ್ರಃ ಪ್ರವರ್ತತೇ ॥ ಹೇ ಅದ್ರಿವೋ ವಜ್ರಯುಕ್ತೇಂದ್ರ ತ್ವಂ ಗೋಮತೋ ವಲಸ್ಯ ಗೋಭಿರ್ಯುಕ್ತಸ್ಯ ವಲನಾಮಕಸ್ಯಾಸುರಸ್ಯ ಸಂಬಂಧಿ ಬಿಲಮಪಾವಃ । ಸ್ವಸೈನ್ಯಮುಖೇನಾಪಾವೃತವಾನಸಿ । ತದಾನೀಂ ತುಜ್ಯಮಾನಾಸೋ ವಲೇನ ಹಿಂಸ್ಯಮಾನಾ ದೇವಾ ಅಭಿಭ್ಯುಷಸ್ತ್ವದೀಯರಕ್ಷಯಾ ವಲಾದಭೀತಾಃ ಸಂತಸ್ತ್ವಾಮಾವಿಷುಃ। ಪ್ರಾಪ್ತವಂತಃ॥ ಅಪ । ನಿಪಾತತ್ವಾದಾದ್ಯುದಾತ್ತಃ । ಅವಃ । ವೃಞ್ ವರಣೇ । ಲಙ್ । ಸಿಪ್ । ಇತಶ್ಚ ಲೋಪಃ । ಸ್ವಾದಿಭ್ಯಃ ಶ್ನುಃ । ತಸ್ಯ ಬಹುಲಂ ಛಂದಸೀತಿ ಲುಕ್ । ಗುಣೋ ರಪರತ್ವಂ ಹಲ್ಙ್ಯಾದಿಲೋಪಃ । ವಿಸರ್ಜನೀಯಃ ಅಡಾಗಮಃ । ಅದ್ರಿವಃ । ಅದ್ರಿರಸ್ಯಾಸ್ತೀತಿ ಮತುಪ್ । ಛಂದಸೀರ ಇತಿ ಮತ್ವಂ । ಸಂಬೋಧನ ಉಗಿದಚಾಮಿತಿ ನುಮ್ । ಹಲ್ಙ್ಯಾದಿಸಂಯೋಗಾಂತಲೋಪೌ । ಮತುವಸೋ ರುಃ ಸಂಬುದ್ಧೌ ಛಂದಸಿ ಪಾ- ೮-೩-೧ । ಇತಿ ರುತ್ವಂ । ಬಿಲಂ । ನಬ್ವಿಷಯಸ್ಯಾನಿಸಂತಸ್ಯೇತ್ಯಾದ್ಯುದಾತ್ತತ್ವಂ । ಅಭಿಭ್ಯುಷಃ । ಞಿಭೀ ಭಯೇ । ಲಿಟ್ । ದ್ವಿರ್ಭಾವಃ । ಅಭ್ಯಾಸಸ್ಯ ಹ್ರಸ್ವಜಶ್ತ್ವೇ। ಕ್ವಸುಶ್ಚೇತಿ ಲಿಟಃ ಕ್ವಸುರಾದೇಶಃ ಕ್ರಾದಿನಿಯಮಾತ್ಪ್ರಾಪ್ತ ಇಟ್ ವಸ್ವೇಕಾಜಾದ್ಘಸಾಮಿತಿ ನಿಯಮಾನ್ನಿವರ್ತತೇ । ಜಸಿ ಸರ್ವನಾಮಸ್ಥಾನೇಽಪಿ ವ್ಯತ್ಯಯೇನ ಭತ್ವಾದ್ವಸೋಃ ಸಂಪ್ರಸಾರಣಂ । ಪರಪೂರ್ವತ್ವಂ । ಶಾಸಿವಸಿಘಸೀನಾಂ ಚೇತಿ ಷತ್ವಂ । ಅಚಿ ಶ್ನುಧಾತ್ವಿತ್ಯಾದಿನಾ । ಪಾ ೬ ೪-೭೭ । ಪ್ರಾಪ್ತಮಿಯಙಾದೇಶಂ ಬಾಧಿತ್ವಾ ಏರನೇಕಾಚ ಇತಿ ಯಣಾದೇಶಃ । ನಞ್‌ಸಮಾಸಃ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ । ತುಜ್ಯಮಾನಾಸಃ । ತುಜೇಹಿಂಸಾರ್ಥಾತ್ಪರಸ್ಯ ಕರ್ಮಣಿ ಲಟಃ ಸ್ಥಾನೇ ಶಾನಚ್ । ಸಾರ್ವಧಾತುಕೇ ಯಕ್ । ಪಾ ೩-೧-೬೭ ।

ಇತಿ ಯಕ್ । ತಸ್ಮಾದದುಪದೇಶಾದುತ್ತರಸ್ಯ ಲಸಾರ್ವಧಾತುಕಸ್ಯಾನುದಾತ್ತತ್ವಂ । ಯಕ ಏವ ಪ್ರತ್ಯಯಸ್ವರಃ ಶಿಷ್ಯತೇ । ಆವಿಷುಃ । ಅವ ರಕ್ಷಣಾದಿಷು । ಅಸ್ಮಾದ್ಗತ್ಯರ್ಥಾಲ್ಲುಙಿ ಉಃ । ತಸ್ಯ ಸಿಜಭ್ಯಸ್ತವಿದಿಭ್ಯಶ್ಚ । ಪಾ. ೩-೪-೧೦೯ । ಇತಿ ಜುಸ್ । ಸಿಚ ಇಡಾಗಮಃ । ಆಡಜಾದೀನಾಂ । ಪಾ- ೬-೪-೭೨ । ಇತ್ಯಾಡಾಗಮಃ । ಆದೇಶಪ್ರತ್ಯಯಯೋರಿತಿ ಷತ್ವಂ ॥

ಪ್ರತಿಪದಾರ್ಥ

(ಹೆ) **ಅದ್ರಿವಃ**— ವಜ್ರಾಯುಧಯುಕ್ತನಾದ ಎಲೈ ಇಂದ್ರನೇ । **ತ್ವಂ**-- ನೀನು । **ಗೋಮತಃ**-- ಗೋವುಗಳನ್ನು ಹೊಂದಿರುವ (ಅಪಹರಿಸಿರುವ) । **ವಲಸ್ಯ**— ವಲನೆಂಬ ಅಸುರನ । **ಬಿಲಂ**-- ಗುಹೆಯನ್ನು । **ಅಪ ಅವಃ**— ನಿನ್ನ ಸೈನ್ಯದ ಸಹಾಯದಿಂದ ನುಗ್ಗಿ ತೆಗೆದಿರುವೆ । (ಆಗ) **ತುಜ್ಯಮಾನಾಸಃ**— ವಲನೆಂಬ ಅಸುರನಿಂದ ಹಿಂಸಿಸಲ್ಪಟ್ಟ । **ದೇವಾಃ**— ದೇವತೆಗಳು । **ಅಬಿಭ್ಯುಷಃ**— ನಿನ್ನ ರಕ್ಷಣೆಯಿಂದ ನಿರ್ಭೀತರಾಗಿ ಎಂದರೆ ಬಲಾಸುರನಿಗೆ ಹೆದರದೆ । **ತ್ವಾಂ**— ನಿನ್ನನ್ನು । **ಆವಿಷುಃ**--ಆಶ್ರಯಿಸಿದರು ॥

॥ ಭಾವಾರ್ಥ ॥

ಎಲೈ ವಜ್ರಾಯುಧಯುಕ್ತನಾದ ಇಂದ್ರನೇ, ವಲನೆಂಬ ಅಸುರನು ದೇವತೆಗಳ ಗೋವುಗಳನ್ನು ಅಪಹರಿಸಿ ಗುಹೆಯಲ್ಲಿ ಬಚ್ಚಿಟ್ಟಿರುವುದನ್ನು ಬಿಡಿಸುವುದಕ್ಕಾಗಿ ಅವನ ಗುಹೆಯನ್ನು ನಿನ್ನ ಸೈನ್ಯ ಸಹಾಯದಿಂದ ಮುತ್ತಿ ಬಾಗಿಲನ್ನು ತೆಗೆದು ಗೋವುಗಳನ್ನು ಬಿಡಿಸಿರುವೆ. ಬಲಾಸುರನಿಂದ ಹಿಂಸಿಸಲ್ಪಟ್ಟ ದೇವತೆಗಳಿಗೆ ನಿನ್ನ ರಕ್ಷಣೆಯಿರುವುದರಿಂದ ಅವನಿಗೆ ಸ್ವಲ್ಪವೂ ಹೆದರದೆ ನಿನ್ನ ಸಮೀಪಕ್ಕೇ ಬಂದು ನಿನ್ನನ್ನೇ ಆಶ್ರಯಿಸಿದರು,

English Translation.

O weilder of the thunderbolt, you opened the cave of Vala, who had concealed the cattle (cows) and the gods whom he had oppressed no longer feared when they had obtained your protection.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವಿಚಾರದಲ್ಲಿ ಭಾಷ್ಯಕಾರರು ಒಂದು ಪೂರ್ವೇತಿಹಾಸವನ್ನು (legend) ಹೇಳಿರುವರು— ವಲನೆಂಬ ಅಸುರನು ದೇವತೆಗಳ ಗೋವುಗಳನ್ನು ಅಪಹರಿಸಿ ಒಂದು ಗುಹೆಯಲ್ಲಿ ಬಚ್ಚಿಟ್ಟಿದ್ದನು. ಆಗ ಇಂದ್ರನು ತನ್ನ ಸೈನ್ಯಸಹಾಯದಿಂದ ಆ ಗುಹೆಯನ್ನು ಮುತ್ತಿ ಆ ಗುಹೆಯಲ್ಲಿದ್ದ ಗೋವುಗಳನ್ನು ಬಿಡಿಸಿದನು ಎಂದು. ಈ ವಿಷಯವು ಯಜುರ್ವೇದದ ತೈ. ಸಂ. ೨-೧-೧-೧ ರಲ್ಲಿ ಈ ರೀತಿ ವಿವರಿಸಲ್ಪಟ್ಟಿರುವುದು—

**ಇಂದ್ರೋ ವಲಸ್ಯ ಬಿಲಮಪೌರ್ಣೋತ್ಸ ಯ ಉತ್ತಮಃ ಪಶುರಾಸೀತ್ತಂ ಪೃಷ್ಠಂ ಪ್ರತಿ ಸಂಗೃಹ್ಯೋದಕ್ಖಿದತ್ತಗ್ಂ ಸಹಸ್ರಂ ಪಶವೋನೂದಾಯನ್ತ್ಸ ಉನ್ನತೋಽಭವದ್ಯಃ**

**ಪಶುಕಾಮಃ ಸ್ಯಾತ್ಸ ಏತನ್ಮೈಂದ್ರವುುನ್ನತವಾ ಲಭೇತೇಂದ್ರಮೇವ ಸ್ವೇನ ಭಾಗ-ಧೇಯೇನೋಪ ಧಾವತಿ ಸ ಏವಾಸ್ಮೈ ಪಶೂನ್ಪ್ರಯಚ್ಛತಿ ಪಶುಮಾನೇವ ಭವತ್ಯು-ನ್ನತೋ ಭವತಿ ॥**

ಈ ವಿಷಯವು ಋಗ್ವೇದದ ಇತರ ಮಂತ್ರಗಳಲ್ಲಿಯೂ, ಇತರ ವೇದಗಳಲ್ಲಿಯೂ ಅಲ್ಲಲ್ಲಿ ವಿವರಿಸಲ್ಪಟ್ಟಿದೆ. ಋಗ್ವೇದದಲ್ಲಿ ಈ ವಲನ ವಿಷಯವು ಋ.ಸಂ. ೧-೬೨-೪ ; ೨-೧೧-೨೦ ; ೨-೧೪-೩ , ೨-೧೫-೮ ; ೨-೧೨-೩ ; ೨-೨೪-೩ , ೩-೩೦-೧೦ ; ೩-೩೪-೧೦ , ೪-೫೦-೫ , ೬-೧೮-೫ ; ೬-೩೯-೨ , ೮-೧೪-೭ , ೮-೨೪-೩೦ ; ೧೦-೬೨-೨; ೧೦-೬೭-೬ , ೧೦-೬೮-೫ , ೧೦-೬೮-೬ , ೧೦-೬೮-೯ , ೧೦-೬೮-೧೦ , ೧೦-೧೩೮-೧ ಎಂಬ ಋಕ್ಕುಗಳಲ್ಲಿ ಪ್ರಸ್ತಾಪಿಸಲ್ಪಟ್ಟಿದೆ. ಈ ವಲನ ಸೈನಿಕರಿಗೆ ಪಣಿಗಳೆಂದು ಹೇಳುವ ರೂಢಿಯಿದೆ. ಇವರು ಗೋವುಗಳನ್ನು ಕದ್ದು ಗುಹೆಗಳಲ್ಲಿ ಬಚ್ಚಿಡುತ್ತಿದ್ದರಿಂದು ಅನೇಕ ಕಡೆಗಳಲ್ಲಿ ಹೇಳಿದೆ. ಈ ವಿಷಯವಾಗಿ ನಾವು ಹಿಂದೆ ಋ. ಸ. ೧-೨-೬ ನೇಯ ಸೂಕ್ತದ ೫ನೆಯ ಋಕ್ಕಿನಲ್ಲಿ (ಭಾಗ ೨ ಪೇಜು ೨೨೮ ನೋಡಿ) ವಿವರಿಸಿದೇವೆ ಇದಲ್ಲದೆ ಋಗ್ವೇದದ ಅನೇಕ ಋಕ್ಕುಗಳಲ್ಲಿ ಪಣಿ ಎಂಬ ಅಸುರರ ವಿಚಾರವು ವರ್ಣಿಸಲ್ಪಟ್ಟಿದೆ. ಅವುಗಳನ್ನು ಆಯಾ ಸಂದರ್ಭಗಳಲ್ಲಿ ವಿವರಿಸಲಾಗುವುದು

ಈ ಋಕ್ಕಿಗೆ ಸ್ಕಂದಸ್ವಾಮಿಯ ಅರ್ಥವಿವರಣೆಯು ಬೇರೆ ರೀತಿಯಲ್ಲಿರುವುದು. ಅವರಂತೆ ವಲ ಎಂದರೆ ಮೇಘ, ಗೋ ಎಂದರೆ ಉದಕ. ಇಂದ್ರನು ತನ್ನ ವಜ್ರಾಯುಧವನ್ನು ಮೇಘಗಳ ಮೇಲೆ ಪ್ರಯೋಗಿಸಿ ತಡೆದಿದ್ದ ಮಳೆಯನ್ನು ಸುರಿಯುವಂತೆ ಮಾಡಿದನೆಂದಭಿಪ್ರಾಯವು. ಮತ್ತು ತುಜ್ಯಮಾನಾಃ ಎಂಬ ಶಬ್ದಕ್ಕೆ ತ್ವರಮಾಣಾಃ ಎಂದೂ ಅವಿಷುಃ ಎಂಬ ಶಬ್ದಕ್ಕೆ ಅನುಗತವಂತಃ ಎಂದೂ, ದೇವಾಃ ಎಂದರೆ ಮರುತಃ ಎಂದೂ ಅರ್ಥಮಾಡಿರುವುದರಿಂದ ಮಳೆಯು ಗಾಳಿಯ ಸಹಾಯದಿಂದ ಬೇಗನೆ ಬೀಳುವಂತಾಯಿತು ಎಂದಭಿಪ್ರಾಯವು ಸೂಚಿತವಾಗುವುದು.

**ಗೋಮತಃ**—ಗೋಭಿರ್ಯುಕ್ತಸ್ಯ ಎಂದರೆ ಗೋವುಗಳನ್ನು ಹೊಂದಿರುವ ಎಂದರ್ಥವು. ಯಾವ ಗೋವುಗಳೆಂದರೆ ಅಪಹರಿಸಲ್ಪಟ್ಟ ಗೋವುಗಳೆಂದು ಇತರ ಕಡೆಗಳಲ್ಲಿ ಹೇಳಿರುವ ವಿಷಯವನ್ನು ವಿಮರ್ಶಿಸಿ ಹೇಳಬೇಕಾಗಿರುವುದು.

ಬಿಲಂ—ಗುಹೆ, ಯಾರಿಗೂ ಕಾಣಿಸದಂತೆ ಇರುವ ಪೊಟ್ಟರೆ (cave) ಇತ್ಯಾದಿ.

**ತುಜ್ಯಮಾನಾಸಃ**—ಬಲೇನ ಹಿಂಸ್ಯಮಾನಾಃ-ಬಲಾಸುರನಿಂದ ಹಿಂಸಿಸಲ್ಪಟ್ಟ.

**ಆವಿಷುಃ**—ಅವ ರಕ್ಷಣಾದಿಷು ॥ ಹೊಂದಿರುವರು, ರಕ್ಷಣೆಗಾಗಿ ಆಶ್ರಯಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಅಪ**—ಇದು ನಿಪಾತ. ಆದ್ದರಿಂದ **ನಿಪಾತಾ ಆದ್ಯುದಾತ್ತಾಃ** (ಫಿ. ಸೂ. ೮೦) ಎಂಬುದರಿಂದ ಆದ್ಯುದಾತ್ತ.

ಅವಃ— ವೃಞ್ ವರಣೇ, ಸ್ವಾದಿಯಲ್ಲಿರುವ ಧಾತು. ಇದರ ಮುಂದೆ ಲಙ್. ಅದರ ಸ್ಥಾನದಲ್ಲಿ ಪರಸ್ಮೈ ಪದ ಮಧ್ಯಮಪುರುಷ ಏಕವಚನ ಸಿಪ್ ಪ್ರತ್ಯಯ. ಸಿಪ್ಪಿನ ಪಕಾರಕ್ಕೆ **ಹಲಂತ್ಯಮ್** (ಪಾ. ಸೂ. ೧-೩-೩) ಎಂಬುದರಿಂದ ಇತ್ಸಂಜ್ಞೆ, ಲೋಪ, ಇಕಾರಕ್ಕೆ **ಇತಶ್ಚ** (ಪಾ. ಸೂ, ೭-೪-೧೦೦) ಙಕಾರೇತ್ಸಂಜ್ಞಕವಾದ ಲಕಾರದ ಸ್ಥಾನದಲ್ಲಿ ಬಂದ ಇಕಾರಾಂತ ಪರಸ್ಮೈಪದಪ್ರತ್ಯಯದ ಕೊನೆಯ ವರ್ಣಕ್ಕೆ ಲೋಪ ಬರುವುದು. ಎಂಬುದರಿಂದ ಲೋಪ. **ಇತಶ್ಚಲೋಪಃ ಪರಸ್ಮೈಪದೇಷು** ( ಪಾ. ಸೂ. ೩-೪-೯೭ ) ಪರಸ್ಮೈಪದದಲ್ಲಿ ಲೇಟ್ ಸ್ಥಾನದಲ್ಲಿ ಬಂದ ತಿಙ್ಙನ ಇಕಾರಕ್ಕೆ ಲೋಪವು ವಿಕಲ್ಪವಾಗಿ ಬರುವುದು ಎಂದು ಈ ಸೂತ್ರದ ಅರ್ಥ. ಆದ್ದರಿಂದ ಇಲ್ಲಿ ಈ ಸೂತ್ರದಿಂದ ಇಕಾರ ಲೋಪ ಬರುವುದಿಲ್ಲ. **ಸ್ವಾದಿಭ್ಯಃಶ್ನುಃ** (ಪಾ. ಸೂ. ೩-೧-೭೩) ಎಂಬುದರಿಂದ ಶ್ನು ವಿಕರಣ ಪ್ರತ್ಯಯ, ಅದಕ್ಕೆ **ಬಹುಲಂ ಛಂದಸಿ** (ಪಾ. ಸೂ. ೨-೪.೭೩) ಎಂಬುದರಿಂದ ಲುಕ್. ವೃ+ಸ್ ಈಗ **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಗುಣಬರುವುದು. **ಉರಣ್ರ‌ಪರಃ** (ಪಾ. ಸೂ. ೧-೧-೫೧) ಎಂಬುದರಿಂದ ರ ಪರವಾಗಿ ಬಂದರೆ ವರ್+ಸ್ **ಹಲ್ ಙ್ಯಾಭ್ಯೋದೀರ್ಘಾತ್ಸುತಿಸ್ಯಪೃಕ್ತಂಹಲ್** (ಪಾ. ಸೂ. ೬ ೧-೬೮) ಎಂಬುದರಿಂದ ಸ್‌ಗೆ ಲೋಪ. ರೇಫಕ್ಕೆ ವಿಸರ್ಗ. **ಲುಙ್‌ಲಙ್‌ಲೃಙ್‌ಕ್ಷ್ವಡುದಾತ್ತಃ** (ಪಾ ಸೂ. ೬-೪-೭೧) ಎಂಬುದರಿಂದ ಅಡಾಗಮ, ಅವಃ ಎಂದಾಗುವುದು.

ಅದ್ರಿವಃ-ಅದ್ರಿಃ ಅಸ್ಯ ಅಸ್ತಿ ಎಂದು ವಿಗ್ರಹ ಮಾಡಿದರೆ **ತದಸ್ಯಾಸ್ತ್ಯಸ್ಮಿನ್ನಿತಿಮತುಪ್** ( ಪಾ. ಸೂ. ೫-೨-೯೪) ಎಂಬುದರಿಂದ ಮತುಪ್. **ಛಂದಸೀರಃ** (ಪಾ. ಸೂ ೮-೨-೧೫) ಎಂಬುದರಿಂದ ಮತುಪ್ಪಿನ ಮಕಾರಕ್ಕೆ ವಕಾರ. ಸಂಬೋಧನ ಪ್ರಥಮಾ ಏಕವಚನ ಸು ವನ್ನು ಹಚ್ಚಿದರೆ ಅದ್ರಿವತ್+ಸು **ಉಗಿದಚಾಂ ಸರ್ವನಾಸ್ಥಾನೇಽಧಾತೋಃ** (ಪಾ. ಸೂ ೭-೧-೭೦) ಎಂಬುದರಿಂದ ವಕಾರದ ಮುಂದೆ ನುಮ್ ಆಗಮ ಅದ್ರಿವನ್ತ್+ಸು. **ಹಲ್‌ಙ್ಯಾಭ್ಯಃ** (ಪಾ. ಸೂ. ೬-೧-೬೮) ಎಂಬುದರಿಂದ ಸುಲೋಪ. **ಸಂಯೋಗಾಂತಸ್ಯಲೋಪಃ** (ಪಾ. ಸೂ. ೮-೨-೨೩) ಎಂಬುದರಿಂದ ತಕಾರಕ್ಕೆ ಲೋಪ **ಪೂರ್ವತ್ರಾಸಿದ್ಧಂ** ( ಪಾ. ಸೂ, ೮-೨-೧ ) ಎಂಬುದರಿಂದ ಸಂಯೋಗಾಂತ ಲೋಪವು ನಲೋಪವನ್ನು ಮಾಡುವಾಗ ಅಸಿದ್ಧವಾಗುವುದು. ಆದ್ದರಿಂದ **ನಲೋಪಃಪ್ರಾತಿಪದಿಕಾಂತಸ್ಯ** (ಪಾ. ಸೂ. ೮-೨-೭) ಎಂಬುದರಿಂದ ನಲೋಪ ಬರುವುದಿಲ್ಲ. **ಮತುವಸೋರುಸಂಬುದ್ಧೌಛಂದಸಿ** (ಪಾ. ಸೂ. ೮-೩ ೧) ನಕಾರಕ್ಕೆ ರು ಆದೇಶ. **ಖರವಸಾನಯೋರ್ವಿಸರ್ಜನೀಯಃ** (ಪಾ. ಸೂ ೮-೩-೧೫) ಎಂಬುದರಿಂದ ರೇಫಕ್ಕೆ ವಿಸರ್ಗ. ಅದ್ರಿವಃ ಎಂದಾಗುವುದು.

**ಬಿಲಮ್-ನಬ್ವಿಷಯಸ್ಯಾನಿಸಂತಸ್ಯ** (ಫಿ. ಸೂ. ೨೬) ಎಂಬುದರಿಂದ ಆದ್ಯುದಾತ್ತ.

ಅಬಿಭ್ಯುಷಃ—**ಞಿಭೀಭಯೇ** ಧಾತು. ಇದರ ಮುಂದೆ ಲಿಟ್- **ಲಿಟಿಧಾತೋರನಭ್ಯಾಸಸ್ಯ** ( ಪಾ.ಸೂ. ೬-೧-೮) ಎಂಬುದರಿಂದ ದ್ವಿತ್ವ ಭೀ+ಭೀ+ಲಿಟ್. **ಹ್ರಸ್ವಃ** (ಪಾ. ಸೂ. ೭-೪-೫೯) ಎಂಬುದರಿಂದ ಮೊದಲನೇ ಭೀಗೆ ಹ್ರಸ್ವ. **ಅಭ್ಯಾಸೇಚರ್ಚ** (ಪಾ. ಸೂ. ೮-೪-೫೪) ಎಂಬುದರಿಂದ ಅಭ್ಯಾಸಕ್ಕೆ ಜಶ್ತ್ವ ಅಂದರೆ ಭಕಾರಕ್ಕೆ ಬಕಾರ, ಬಿಭೀ+ಲಿಟ್. **ಶೇಷಾತ್ಕರ್ತರಿಪರಸ್ಮೈಪದಮ್** (ಪಾ. ಸೂ ೧.೩-೭೮) ಎಂಬುದರಿಂದ ಪರಸ್ಮೈಪದ. **ಕ್ವಸುಶ್ಚ** ( ಪಾ. ಸೂ. ೩-೨-೧೦೭) ಎಂಬುದರಿಂದ ಲಿಟ್ಟಿಗೆ ಕ್ವಸು ಆದೇಶ. ಕ್ವಸು ಪ್ರತ್ಯಯ ಕಿತ್ತು ಆದ್ದರಿಂದ ಪೂರ್ವದ ಈಗೆ ಗುಣ ಬರುವುದಿಲ್ಲ. ಬಿಭೀ+ವಸ್, ವಸ್ ಎಂಬುದು ಆರ್ಧಧಾತುಕ ಪ್ರತ್ಯಯ. ಇದಕ್ಕೆ **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂಬುದರಿಂದ ಇಡಾಗಮವು ಪ್ರಾಪ್ತವಾಗುವುದು.

**ಅದಕ್ಕೆ ಏಕಾಚಉಪದೇಶೇನುದಾತ್ತಾತ್**(ಪಾ.ಸೂ.೭-೨-೧೦) ಉಪದೇಶದಲ್ಲಿ ಏಕಾಚ್ಕವಾದುದೂ ಅನುದಾತ್ತವೂ ಆದ ಧಾತುಗಳ ಮುಂದೆ ಇರುವ ವಲಾದಿಯಾದ ಆರ್ಧಧಾತುಕಕ್ಕೆ ಇಡಾಗಮು ಬರುವುದಿಲ್ಲ ಎಂಬುದರಿಂದ ಇಡಾಗಮಕ್ಕೆ ನಿಷೇಧ ಬರುವುದು. ಭೀಧಾತುವು ಉಪದೇಶದಲ್ಲಿ ಏಕಾಚ್ಕವಾಗಿರುವುದು. ಅಂದರೆ ಒಂದೇ ಒಂದು ಅಜ್ವವರ್ಣವುಳ್ಳದ್ದಾಗಿರುವುದು. ಅಲ್ಲದೆ **ಊದ್ಯ್ರಾದಂತ್ಯೈಯೌತಿರುಕ್ಷ್ಣು ಶೀಙ್ಸ್ನುನುಕ್ಷುಶ್ವಿಡೀಙ್-ಶ್ರಿಭಿಃ । ವೃಙ್ ವೃಞ್ಭ್ಯಾಂಚ ವಿನೈಕಾಚೋಽಜನ್ತೇಷುನಿಹತಾಃಸ್ಮೃತಾಃ ||** ಅಂದರೆ ಅಜಂತ ಧಾತುಗಳಲ್ಲಿ ಊಕಾರಾಂತ, ಋಕಾರಾಂತ ಧಾತುಗಳು ಯು, ರು, ಕ್ಷ್ಣು, ಶೀಙ್, ಸ್ನು, ನು, ಕ್ಷು, ಶ್ವಿ, ಡೀಙ್, ಶ್ರಿ, ವೃಙ್, ವೃಞ್ ಧಾತುಗಳು ಇವುಗಳನ್ನು ಬಿಟ್ಟು ಬಾಕಿ ಅಜಂತ ಧಾತುಗಳೆಲ್ಲವೂ ಅನುದಾತ್ತಗಳು ಎಂದು ಈ ಶ್ಲೋಕದ ಅರ್ಥ. ಭೀ ಧಾತುವು ಅಜಂತ, ಈ ಶ್ಲೋಕದಲ್ಲಿ ಪರಿಗಣಿತ ಧಾತುಗಳಲ್ಲಿ ಅದು ಸೇರುವುದಿಲ್ಲ. ಆದ್ದರಿಂದ ಅದು ಉಪದೇಶದಲ್ಲಿಯೇ ಅನುದಾತ್ತವಾದ ಧಾತು. ಇದರ ಮುಂದೆ ಇರುವ ವಲಾದಿಯಾದ ಆರ್ಧಧಾತುಕವಾದ ವಸ್‌ಗೆ ಇದರಿಂದ ಇಡಾಗಮ ನಿಷೇಧ ಬರುವುದು ನಂತರ ಕ್ರಾದಿನಿಯಮದಿಂದ ಇಡಾಗಮವು ಪ್ರಾಪ್ತವಾಗುವುದು. ಹೇಗೆಂದರೆ **ಕೃ ಸೃ ಭೃ ವೃ ಸ್ತು ದ್ರು ಸ್ರು ಶ್ರು ವೋಲಿಟಿ** (ಪಾ. ಸೂ. ೭-೨-೧೩) ಈ ಧಾತುಗಳ ಮುಂದೆ ಇರುವ ಲಿಟ್ಟಿಗೆ ಇಡಾಗಮ ಬರುವುದಿಲ್ಲ ಎಂದು ಈ ಸೂತ್ರದ ಅರ್ಥ. ಕೃ ಸೃ ಭೃ ಈ ಮೂರು ಧಾತುಗಳು ಉಪದೇಶದಲ್ಲಿ ಏಕಾಚ್ಕವಾಗಿಯೂ ಅನುದಾತ್ತಗಳಾಗಿಯೂ ಇರುವುವು. ಆದ್ದರಿಂದ ಇವುಗಳ ಮುಂದೆ ಇರುವ ಲಿಟ್ಟಿಗೆ ಇಣ್ನಿಷೇಧವು **ಏಕಾಚ ಉಪದೇಶೇ** (ಪಾ. ಸೂ. ೭-೨-೧೦) ಎಂಬುದರಿಂದಲೇ ಸಿದ್ಧವಾಗುವುದು. ವೃ ವು ಪೂರ್ವೋಕ್ತಕಾರಿಕೆಯಲ್ಲಿ ಸೇರಿರುವುದು. ಆದ್ದರಿಂದ ಅದು ಅನುದಾತ್ತವಲ್ಲ ಆದಕಾರಣ **ಏಕಾಚ** ಎಂಬುದರಿಂದ ಇಣ್ನಿಷೇಧವು ಬರುವುದಿಲ್ಲ. ಆದರೂ ವೃ ಎಂಬುದು ಏಕಾಚ್ಕವೂ ಉಗಂತವೂ ಆಗಿರುವುದು ಆದ್ದರಿಂದ **ಶ್ರ್ಯುಕಃಕಿತಿ** (ಪಾ. ಸೂ ೭-೨-೧೧) ಶ್ರೀಞ್ ಧಾತುವಿನ ಮುಂದೆಯೂ ಏಕಾಚ್ಕವೂ ಉಗಂತವೂ ಆಗಿರುವ ಧಾತುವಿನ ಮುಂದೆಯೂ ಇರುವ ಗಿತ್ತು ಅಥವಾ ಕಿತ್ತು ಆದ ಪ್ರತ್ಯಯಕ್ಕೆ ಇಡಾಗಮ ಬರುವುದಿಲ್ಲ ಎಂದಿದರ ಅರ್ಥ. ಇದರಿಂದ ಇಡಾಗಮ ನಿಷೇಧವು ಸಿದ್ಧವಾಗುವುದು ಆದ್ದರಿಂದ ಕ್ರಾದಿಗ್ರಹಣವು ವ್ಯರ್ಥವಾಗುವುದು, ವ್ಯರ್ಥೇ ಸತ್ಯಾರಭ್ಯಮಾಣೋ ವಿಧಿರ್ನಿಯಮಾಯಭವತಿ ಎಂಬ ನ್ಯಾಯದಿಂದ ಈ ಸೂತ್ರವು ನಿಯಾಮಕವಾಗುವುದು. ಏಕಾಚಃ-ಎಂಬುದು ಪ್ರಕೃತಿವಿಶೇಷ ಪುರಸ್ಕಾರದಿಂದ ಬರುವುದರಿಂದ ಪ್ರಕೃತ್ಯಾಶ್ರಯ. ಶ್ರ್ಯುಕಃಕಿತಿ ಎಂಬುದು ಪ್ರತ್ಯಯ ವಿಶೇಷ ಪುರಸ್ಕಾರವಾಗಿ ಬರುವುದರಿಂದ ಪ್ರತ್ಯಯಾಶ್ರಯ ಆದ್ದರಿಂದ ಪ್ರಕೃತ್ಯಾಶ್ರಯವಾದ ಇಟ್ಟಿಗೂ ಪ್ರತ್ಯಯಾಶ್ರಯವಾದ ಇಟ್ಟಿಗೂ ಇದು ನಿಯಾಮಕ. ಪ್ರಕೃತ್ಯಾಶ್ರವಾದ ಇಣ್ನಿಷೇಧಪ್ರತ್ಯಯಾಶ್ರಯಾಶ್ರವಾದ ಇಣ್ನಿಷೇಧಗಳೆಲ್ಲವೂ ಲಿಟ್ಟಿನಲ್ಲಿ ಬರುವ ಪಕ್ಷಕ್ಕೆ ಕೃಸೃಭೃವೃ ಇವುಗಳ ಮುಂದೆಇರುವ ಲಿಟ್ಟಿಗೆಮಾತ್ರ ಬರುವುವು ಕ್ರಾದ್ಯತಿರಿಕ್ತ ಧಾತುಗಳ ಮುಂದೆ ಇರುವ ಲಿಟ್ಟಿಗೆ ಪ್ರಕೃತ್ಯಾಶ್ರಯವಾದ ಇಣ್ನಿಷೇಧವೂ ಬರುವುದಿಲ್ಲ. ಪ್ರತ್ಯಯಾಶ್ರಯವಾದ ಇಣ್ನಿಷೇಧವೂ ಬರುವುದಿಲ್ಲ ಎಂದು ನಿಯಾಮಕ. ಸ್ತು ದ್ರು ಸ್ರು ಶ್ರು ಇವು ನಾಲ್ಕು ಉಕಾರಾಂತಧಾತುಗಳು. **ಋತೋಭಾರದ್ವಾಜಸ್ಯ** (ಪಾ. ಸೂ ೭-೨-೬೩) ತಾಸ್ ಪ್ರತ್ಯಯ ಪರವಲ್ಲಿರುವಾಗ ನಿತ್ಯಾನಿಟ್ಕವಾದ ಧಾತುವಿನ ಮುಂದೆ ಇರುವ ಥಲ್ಲಿಗೆ ಇಣ್ನಿಷೇಧ ಬರುವ ಪಕ್ಷದಲ್ಲಿ ಭಾರದ್ವಾಜರ ಮತದಲ್ಲಿ ಋಕಾರಾಂತ ಧಾತುವಿನ ಮುಂದೆ ಇರುವ ಥಲ್ಲಿಗೆ ಮಾತ್ರ ಇಣ್ನಿಷೇಧ ಬರುವುದು ಋಕಾರಾಂತಾತಿರಿಕ್ತವಾದ ಧಾತುವಿನ ಮುಂದೆ ಇರುವ ಥಲ್ಲಿಗೆ ಇಡಾಗಮ ನಿಷೇಧ ಬರುವುದಿಲ್ಲ ಎಂದು ಇದರ ಅರ್ಥ. ಈ ನಿಯಮದಿಂದ ಉಕಾರಾಂತ ಧಾತುಗಳಾದ ಸ್ತು ಮೊದಲಾದ ಧಾತುಗಳ ಮುಂದೆ ಇರುವ ಥಲ್ಲಿಗೆ ಇಡಾಗಮನಿಷೇಧ ಬರದೇ ಇಡಾಗಮುಪ್ರಾಪ್ತವಾಗುವುದು. ಆ ಇಡಾಗಮನಿಷೇಧಕ್ಕಾಗಿಯೂ ವಮಾದಿಪ್ರತ್ಯಯಗಳು ಪರದಲ್ಲಿರುವಾಗ ಪೂರ್ವೋಕ್ತಕ್ರಾದಿನಿಯಮದಿಂದ ಬರುವ ಇಡಾಗಮನಿಷೇಧಕ್ಕಾಗಿಯೂ ಸ್ತು ಮೊದಲಾದ ಗ್ರಹಣವು ಅವಶ್ಯಕವು ಈರೀತಿಯಲ್ಲಿ ಅವುಗಳಿಗೆ

ವಿಧಾಯಕತ್ವ ಸಂಭವಿಸುವುದು. ಆದ್ದರಿಂದ ವಿಧಿನಿಯಮಸಂಭವೇ ವಿಧಿರೇವ ಜ್ಯಾಯಾನ್ ಎಂಬ ನ್ಯಾಯ ವನ್ನು ಅನುಸರಿಸಿ ಸ್ತು ಮೊದಲಾದ ನಾಲ್ಕು ಧಾತುಗಳಿಗೆ ನಿಯಾಮಕತ್ವವನ್ನು ಒಪ್ಪುವುದಿಲ್ಲ. ಅವು ವಿಧಾಯಕ ಗಳೇ ಆಗುವುವು. ಏವಂಚ ಪೂರ್ವೋಕ್ತವಾದ ಕ್ರಾದಿನಿಯಮದಿಂದ ಕ್ರಾದ್ಯತಿರಿಕ್ತವಾದ ಭೀ ಧಾತುವಿನಮುಂದೆ ಇರುವ ವಸ್ ಎಂಬ ಲಟ್ಟಿಗೆ ಇಣ್ನಿಷೇಧ ಬರದೇ ಹೋಗಿ ಇಡಾಗಮವು ಪ್ರಾಪ್ತವಾಗುವುದು. ಅದು **ವಸ್ವೇ-ಕಾಜಾದ್ಘಸಾಂ** (ಪಾ. ಸೂ ೭-೨-೬೭) ಎಂಬ ನಿಯಮದಿಂದ ನಿವೃತ್ತವಾಗುವುದು. ದ್ವಿತ್ವವನ್ನು ಮಾಡಿದ ನಂತರ ಏಕಾಚ್ಕವಾದ ಧಾತುಗಳು. ಆದಂತಧಾತುಗಳು, ಘಸ್‌ಧಾತು ಇವುಗಳಮುಂದೆ ಇರುವ ವಸ್‌ಗೆ ಇಡಾ-ಗಮ ಬರುವುದು ಎಂದು ಸೂತ್ರಾರ್ಥ. ವಸ್ ಎಂಬುದು ವಶಾದಿಯಾದ ಕೃತ್ತು. ಆದ್ದರಿಂದ **ನೇಡ್ವಶೀಕೃತಿ** (ಪಾ. ಸೂ. ೭-೨-೮) ವಶಾದಿಯಾದ ಕೃತ್ತಿಗೆ ಇಡಾಗಮ ಬರುವುದಿಲ್ಲ ಎಂದು ನಿಷೇಧಪ್ರಾಪ್ತವಾದರೆ ಕ್ರಾದಿನಿಯ-ಮದಿಂದ ವಸ್‌ಗೆ ಇಡಾಗಮವು ಸಿದ್ಧವಾಗುವುದು. ಹೀಗೆ ಇರುವಾಗ ಪುನಃ ಇಡಾಗಮವಿಧಾನವು ನಿಯಮ ಕ್ಕಾಗಿ. ಆ ನಿಯಮವೇನೆಂದರೆ, ವಸ್‌ಗೆ ಇಡಾಗಮ ಬರುವಪಕ್ಷದಲ್ಲಿ ದ್ವಿರ್ವಚನಾನಂತರ ಏಕಾಚ್ಕ. ಆದಂತ ಧಾತು ಗಳು ಘಸ್ ಇವುಗಳ ಮುಂದೆ ಇರುವ ವಸ್‌ಗೆ ಮಾತ್ರ ಇಡಾಗಮ ಬರುವುದು ಬಾಕಿಧಾತುಗಳ ಮುಂದೆ ಇರುವ ವಸ್‌ಗೆ ಇಡಾಗಮ ಬರುವುದಿಲ್ಲ ಎಂದು ನಿಯಾಮಾಕಾರ. ಇದರಿಂದ ಇವುಗಳಲ್ಲಿ ಸೇರದ ಬಿ ಭೀ ಎಂಬುದರ ಮುಂದೆ ಇರುವ ವಸ್‌ಗೆ ಇಡಾಗಮವು ಬರುವುದಿಲ್ಲ. ಬಿಭೀವಸ್ ಇದರಮುಂದೆ ಜಸ್ ಪ್ರತ್ಯಯವನ್ನು ಹಚ್ಚ ಬೇಕು. ಅದು ಸರ್ವನಾಮಸ್ಥಾನಪ್ರತ್ಯಯ. ಆದರೂ ಛಂದಸ್ಸಿನಲ್ಲಿ ವ್ಯತ್ಯಯದಿಂದ ಬಿಭೀವಸ್ ಎಂಬುದಕ್ಕೆ ಭ ಸಂಜ್ಞೆ ಬರುವುದು. **ವಸೋಸ್ಸಂಪ್ರಸಾರಣಂ** (ಪಾ. ಸೂ. ೬-೪-೧೩೧) ಎಂಬುದರಿಂದ ಸಂಪ್ರಸಾರಣವೂ ಸಂಪ್ರಸಾರಣಾಚ್ಚ ಎಂಬುದರಿಂದ **ಪೂರ್ವ**ರೂಪವೂ ಬರುವುದು ಬಿಭೀ+ಉಸ್+ಅಸ್ ಈಕಾರಕ್ಕೆ **ಅಚಿಶ್ನುಧಾತು-ಭ್ರುವಾಂಯ್ವೋರಿಯಙುವಙೌ** (ಪಾ. ಸೂ. ೬-೪-೭೭) ಎಂಬುದರಿಂದ ಇಯಙಾದೇಶ ಪ್ರಾಪ್ತವಾದರೆ ಅದನ್ನು ಬಾಧಿಸಿ **ಏರನೇಕಾಚೋಸಂಯೋಗಪೂರ್ವಸ್ಯ** (ಪಾ. ಸೂ. ೬-೪-೮೨) ಎಂಬುದರಿಂದ ಯಣಾದೇಶ ಬರುವುದು. ಅಂದರೆ ಈಕಾರಕ್ಕೆ ಯಕಾರ ಬರುವುದು **ಆದೇಶಪ್ರತ್ಯಯಯೋಃ** (ಪಾ. ಸೂ. ೮-೩-೫೯) ಎಂಬುದರಿಂದ ವಸ್ ಪ್ರತ್ಯಯಸಂಬಂಧಿಯಾದ ಸಕಾರಕ್ಕೆ ಷಕಾರ. **ಶಾಸಿವಸಿಘಸೀನಾಂಚ** (ಪಾ. ಸೂ ೮-೩-೬೦) ಎಂಬುದು ಇಲ್ಲಿ ಬರುವುದಿಲ್ಲವೆಂದು ಹಿಂದೆಯೇ ನಿರೂಪಿತವಾಗಿರುವುದು ನ ಬಿಭ್ಯುಷಃ ಅಬಿಭ್ಯುಷಃ ಎಂದು ನಞ್‌ಸಮಾಸ. **ತತ್ಪುರುಷೇ ತುಲ್ಯಾರ್ಥ** (ಪಾ ಸೂ ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುವುದು.

**ತುಜ್ಯಮಾನಾಸಃ**—ತುಜ ಹಿಂಸಾಯಾಂ ಧಾತು. ಇದರಮುಂದೆ ಕರ್ಮಣಿ ಲಟ್. ಅದರ ಸ್ಥಾನದಲ್ಲಿ **ಲಟಶ್ಶತೃಶಾನಚೌ** (ಪಾ. ಸೂ ೩-೨-೧೨೪) ಎಂಬುದರಿಂದ ಶಾನಚ್ **ಸಾರ್ವಧಾತುಕೇ ಯಕ್** (ಪಾ. ಸೂ. ೩-೧-೬೭) ಭಾವಕರ್ಮಾನ್ಯತರಾರ್ಥಪ್ರತಿಪಾದಕವಾದ ಸಾರ್ವಧಾತುಕಪರದಲ್ಲಿರುವಾಗ ಧಾತುವಿನಮುಂದೆ ಯಕ್ ಬರುವುದು ಎಂಬುದರಿಂದ ಯಕ್ ಬಂದರೆ ತುಜ್+ಯ+ಆನ. ಯಕ್ಕು ಕಿತ್ತಾದ್ದರಿಂದ ಲಘೂಪಧಗುಣ ಬರುವುದಿಲ್ಲ. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಮುಗಾಗಮ . ತುಜ್ಯಮಾನ ಎಂದಾಗುವುದು. ಇದರ ಮುಂದೆ ಜಸ್ಸನ್ನು ಇಟ್ಟರೆ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅಸುಕ್ ಆಗಮ. ಯಕ್ ಅದಂತವಾದ ಉಪದೇಶ. ಅದರಮುಂದೆ ಇರುವ ಶಾನಚ್ಪ್ರತ್ಯಯದ **ತಾಸ್ಯನುದಾತ್ತೇನ್ಙಿದದುಪದೇಶಾತ್** (ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತ. ಜಸ್ಸು ಸುಪ್ಪಾದ್ದರಿಂದ ಅನುದಾತ್ತ. ಯಕ್ ಪ್ರತ್ಯಯಸ್ವರದಿಂದ ಉದಾತ್ತ ಅದೇ ಉದಾತ್ತ ನಿಲ್ಲುವುದು.

**ಅವಿಷುಃ**—ಅವ ರಕ್ಷಣಾದಿಷು ಧಾತು. ಇಲ್ಲಿ ಗತಿ ಎಂಬ ಅರ್ಥವನ್ನು ವಿವಕ್ಷಿಸುವೆವು ಗತ್ಯರ್ಥ

ವಾದ ಅವಧಾತುವಿನ ಮುಂದೆ ಲುಙ್. ಅದಕ್ಕೆ ಝಿ ಆದೇಶ. **ಚ್ಲಿ ಲುಙಿ** ( ಪಾ. ಸೂ. ೩-೧-೪೩) ಎಂಬುದರಿಂದ ಚ್ಲಿಯು ಧಾತುವಿನ ಮುಂದೆ ಬರುವುದು. ಅದಕ್ಕೆ **ಚ್ಲೇಸ್ಸಿಚ್** (ಪಾ. ಸೂ. ೩-೧-೪೪) ಎಂಬುದರಿಂದ ಸಿಚ್ ಆದೇಶ. ಅವ್+ಸ್+ಝಿ **ಸಿಜಭ್ಯಸ್ತ ವಿದಿಭ್ಯಶ್ಚ** ( ಪಾ. ಸೂ. ೩-೪-೧೦೯ ) ಸಿಚ್ ಅಭ್ಯಸ್ತ ವಿದ್ ಇವುಗಳ ಮುಂದೆ ಇರುವ ಙಿತ್ಸಂಬಂಧಿಯಾದ ಝಿಗೆ ಜುಸ್ ಎಂಬ ಆದೇಶ ಬರುವುದು ಎಂಬುದರಿಂದ ಸಿಚ್ಚಿನ ಮುಂದೆ ಇರುವ ಝಿಗೆ ಜುಸ್ ಆದೇಶ ಅವ್+ಸ್+ಉಸ್. **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫ ) ಎಂಬುದರಿಂದ ಸಿಚ್ಚಿಗೆ ಇಡಾಗಮ **ಆಡಜಾದೀನಾಂ** (ಪಾ. ಸೂ.೬-೪-೭೨) ಎಂಬುದರಿಂದ ಆಡಾಗಮ. **ಆಟಶ್ಚ** (ಪಾ.ಸೂ ೬-೧-೯೦) ಎಂಬುದರಿಂದ ವೃದ್ಧಿ, ಆವಿಸುಸ್. **ಆದೇಶಪ್ರತ್ಯಯಯೋಃ** (ಪಾ. ೮-೩-೫೯) ಎಂಬುದರಿಂದ ಸಿಚ್ಚಿನ ಸಕಾರಕ್ಕೆ ಷಕಾರ. ಕೊನೆಯ ಸಕಾರಕ್ಕೆ ರುತ್ವ ವಿಸರ್ಗಗಳು. ಆವಿಷುಃ ಎಂದಾಗುವುದು. **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ ॥ ೫ ॥

॥ ಸಂಹಿತಾಪಾಠಃ ॥

ತವಾಹಂ ಶೂರ ರಾತಿಭಿಃ ಪ್ರತ್ಯಾಯಂ ಸಿಂಧುಮಾವದನ್ ॥
ಉಪಾತಿಷ್ಠಂತ ಗಿರ್ವಣೋ ವಿದುಷ್ಟೇ ತಸ್ಯ ಕಾರವಃ ॥ ೬ ॥

॥ ಪದಪಾಠಃ ॥

ತವ । ಅಹಂ । ಶೂರ । ರಾತಿಽಭಿಃ । ಪ್ರತಿ । ಆಯಂ । ಸಿಂಧುಂ । ಆಽವದನ್
ಉಪ । ಅತಿಷ್ಠಂತ । ಗಿರ್ವಣಃ । ವಿದುಃ । ತೇ । ತಸ್ಯ । ಕಾರವಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ಶೂರ ಸಂಗ್ರಾಮೇ ಶೌರ್ಯಯುಕ್ತೇಂದ್ರ ತವ ರಾತಿಭಿಃ ಕರ್ಮಸು ತ್ವದೀಯೈರ್ಧನದಾನೈರ್ನಿಮಿತ್ತಭೂತೈರಹಂ ಹೋತಾ ಪ್ರತ್ಯಾಯಂ । ತ್ವಾಂ ಪುನರಾಗತೋಽಸ್ಮಿ । ಪುರಾ ಬಹುಷು ಕರ್ಮಸು ತ್ವತ್ತೋ ಧನಸ್ಯ ಲಬ್ಧತ್ವಾದಸ್ಮಿನ್ಕರ್ಮಣಿ ಪ್ರತ್ಯಾಗಮನನಿಮಿತ್ತ್ಯುಚ್ಯತೇ । ಕಿಂ ಕುರ್ವನ್ । ಸಿಂಧುಂ ಸ್ಯಂದಮಾನಂ ಸೋಮಮಾವದನ್ ಸರ್ವತಃ ಕಥಯನ್। ಅಸ್ಮಿನ್ಸೋಮಯಾಗೇ ತ್ವದೀಯಾಂ ಧನದಾನಕೀರ್ತಿಂ ಪ್ರಕಟಯನ್ನಿತ್ಯರ್ಥಃ । ಹೇ ಗಿರ್ವಣೋ ಗೀರ್ಭಿರ್ವನನೀಯೇಂದ್ರ ಕಾರವಃ ಕರ್ತಾರ ಋತ್ವಿಗ್ಯಜಮಾನಾ ಉಪಾತಿಷ್ಠಂತ । ಪುರಾ ಧನಲಾಭಾರ್ಥಂ ತ್ವಾಮುಪಸ್ಥಿತವಂತಃ । ಉಪಸ್ಥಾಯ ಚ ತಸ್ಯ ತಾದೃಶಸ್ಯೌದಾರ್ಯೋಪೇತಸ್ಯ ತೇ ತವ ಧನದಾನಂ ವಿದುಃ । ಜಾನಂತಿ । ಗಿರ್ವಣಶ್ಶಬ್ದಂ ಯಾಸ್ಕ ಇತ್ಥಂ ನಿಬ್ರೂತೇ ।

ಗಿರ್ವಣಾ ದೇವೋ ಭವತಿ ಗೀರ್ಭಿರೇನಂ ವನಯಂತಿ । ನಿ ೬-೧೪ । ಇತಿ । ರೇಭೋ ಜರಿತೇತ್ಯಾದಿಷು ತ್ರಯೋದಶಸು ಸ್ತೋತೃನಾಮಸು ಕಾರುಶಬ್ದಃ ಪಠಿತಃ ॥ ತವ । ಯುಷ್ಮದಸ್ಮದೋರ್ಙಸೀತ್ಯಾದ್ಯುದಾತ್ತತ್ವಂ । ರಾತಿಭಿಃ । ಮಂತ್ರೇ ವೃಷೇತ್ಯಾದಿನಾ ಕ್ತಿನ್ನುದಾತ್ತಃ । ಆಯಂ । ಇಣೋ ಲಙ್ । ತಸ್ಥಸ್ಥಮಿಪಾಂ ತಾಂತಂತಾಮಃ । ಪಾ- ೩-೪-೧೦೧ । ಇತ್ಯಮಾದೇಶಃ । ಅದಿಪ್ರಭೃತಿಭ್ಯಃ ಶಪ ಇತಿ ಶಪೋ ಲುಕ್ । ಆಡಾಗಮಃ । ವೃದ್ಧ್ಯಾಯಾದೇಶೌ । ತಿಙ್ಙತಿಙ ಇತಿ ನಿಘಾತಃ । ಸಿಂಧುಂ । ಸ್ಯಂದೂ ಪ್ರಸ್ರವಣೇ । ನಿ-ದಿತ್ಯನುವೃತ್ತೌ ಸ್ಯಂದೇಃ ಸಂಪ್ರಸಾರಣಂ ಧಶ್ಚ । ಉ- ೧-೧೨। ಇತ್ಯುಪ್ರತ್ಯಯೋ ಧಕಾರಶ್ಚಾಂತಾದೇಶಃ । ನಿತ್ತ್ವಾದಾದ್ಯುದಾತ್ತಃ । ಆವದನ್ । ವದ ವ್ಯಕ್ತಾಯಾಂ ವಾಚಿ । ಲಟಃ ಶತೃ । ಶಪಃ ಪಿತ್ತ್ವಾದನುದಾತ್ತತ್ವಂ । ಶತುಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರ ಏವ ಶಿಷ್ಯತೇ । ಆಙಾ ಸಹ ಕುಗತಿಪ್ರಾದಯಃ । ಪಾ. ೨-೨-೧೮ । ಇತಿ ಸಮಾಸಃ । ಕೃದುತ್ತರಪದಪ್ರಕೃತಿಸ್ವರತ್ವಂ । ಅತಿಷ್ಠಂತ ಉಪಾನ್ಮಂತ್ರಕರಣೇ । ಪಾ ೧-೩-೨೫ । ಇತ್ಯಾತ್ಮನೇಪದಂ । ಗಿರ್ವಣಃ । ವನ ಷಣ ಸಂಭಕ್ತೌ । ಅಸುನ್ । ಆಮಂತ್ರಿತಸ್ಯ ಚೇ-ತಿ ನಿಘಾತಃ । ವಿದುಃ । ವಿದ ಜ್ಞಾನೇ । ಲಟ್ । ಅದಿಪ್ರಭೃತಿಭ್ಯಃ ಶಪ ಇತಿ ಶಪೋ ಲುಕ್ । ವಿದೋ ಲಟೋ ವಾ । ಪಾ. ೩-೪-೮೩ । ಇತಿ ಝೇರುಸ್ । ಪಾದಾದಿತ್ವಾನ್ನ ನಿಘಾತಃ । ಸಂಹಿತಾಯಾಂ ಯುಷ್ಮತ್ತತ್ತತಕ್ಷುಃಷ್ವಂತಃಪಾದಂ । ಪಾ- ೮-೩-೧೦೩ । ಇತಿ ಷತ್ವಂ । ಷ್ಟುನಾ ಷ್ಟುರಿತ್ಯುತ್ತರಸ್ಯ ತಕಾರಸ್ಯ ಷ್ಟುತ್ವಂ । ತಸ್ಯ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ ಪ್ರಾಪ್ತಂ ನ ಗೋಶ್ವನ್ಸಾವವರ್ಣೇತಿ ನಿಷಿಧ್ಯತೇ। ಕಾರವಃ । ಕೃವಾಪಾಜೀತ್ಯಾದಿನಾ । ಉ. ೧-೧- । ಉಣ್ । ಪ್ರತ್ಯಯಸ್ವರಃ ॥

॥ ಪ್ರತಿಪದಾರ್ಥ ॥

(ಹೇ) **ಶೂರ**—(ಯುದ್ಧ ಮಾಡುವಾಗ) ಪರಾಕ್ರಮಯುಕ್ತನಾದ ಎಲೈ ಇಂದ್ರನೇ । **ತವ**—ನಿನ್ನ । **ರಾತಿಭಿಃ**—ಧನಪ್ರದಾನಗಳಿಂದ । (ನಾನು) **ಸಿಂಧುಂ ಆವದನ್**—(ನಿನಗೆ ಅರ್ಪಿಸುವ) ಸೋಮರಸವನ್ನು ಪ್ರಶಂಸೆ ಮಾಡುತ್ತಾ । **ಪ್ರತಿ ಆಯಂ**—(ನಿನ್ನ ಸಮೀಪಕ್ಕೆ) ಮತ್ತೆ ಬಂದಿರುವೆನು । (ಹೇ) **ಗಿರ್ವಣಃ**—ವಾಕ್ಯಗಳಿಂದ ಸ್ತುತಿಸಲ್ಪಡುವ ಎಲೈ ಇಂದ್ರನೇ । **ಕಾರವಃ**—ಯಜ್ಞಕರ್ಮವನ್ನು ಮಾಡುತ್ತಿರುವ ಋತ್ವಿಗ್ಯಜಮಾನಾದಿ ಜನರು । **ಉಪಾತಿಷ್ಠಂತ**—ನಿನ್ನ ಸಮೀಪವನ್ನೈದಿರುವರು (ನಿನ್ನನ್ನು ಪ್ರಾರ್ಥಿಸುತ್ತಿರುವರು । (ಮತ್ತು) **ತೇ**—ನಿನ್ನ (ಧನಪ್ರದಾನವನ್ನು) । **ವಿದುಃ**—ತಿಳಿಯುವರು.

॥ ಭಾವಾರ್ಥ ॥

ಎಲೈ ಶೂರನೇ, ನೀನು ಹಿಂದೆ ಕೊಟ್ಟಿರುವ ಧನಾದಿಗಳಿಂದ ಉತ್ತೇಜನಗೊಂಡು ನಿನಗೆ ಅರ್ಪಿಸುವ ಸೋಮರಸದ ಗುಣಗಳನ್ನು ಪ್ರಶಂಸೆಮಾಡುತ್ತಾ ನಿನ್ನ ಸಮೀಪಕ್ಕೆ ಪುನಃ ಬಂದಿರುವೆನು, ಯಜ್ಞಯಾಗಾದಿ ಕರ್ಮಗಳನ್ನು ಮಾಡುವ ಋತ್ವಿಗ್ಯಜಮಾನಾದಿ ಜನರೂ ಸಹ ನಿನ್ನ ಉದಾರತ್ವವನ್ನು ತಿಳಿದಿರುವುದರಿಂದ ನಿನ್ನ ಸಮೀಪವನ್ನೈದಿರುವರು.

## English Translation

O Hero, attracted by your bounties, I again come praising the Soma libation to be offered to you; the performers of the rite approach you who are worthy of praise, for they have known your liberalities.

॥ ವಿಶೇಷವಿಷಯಗಳು ॥

**ಸಿಂಧುಂ ಆ ವದನ್—ಸ್ಯಂದೂ ಪ್ರಸ್ರವಣೇ** ಎಂಬ ಧಾತುವಿನಿಂದ ಸಿಂಧುಶಬ್ದವು ಉತ್ಪನ್ನವಾಗಿರುವುದು. ಜಿನುಗುತ್ತಿರುವ, ಎಂದರೆ ಸೋಮಲತೆಯನ್ನು ಜಜ್ಜುವಾಗ ರಸವು ಜಿನುಗಿ ಹರಿಯುತ್ತಾ ಹೊರಟು ಬರುವ ಎಂದರ್ಥವು. **ಆ ವದನ್** ಎಂದರೆ ಸೋಮಪಾನ ಮಾಡುವುದರಿಂದ ಲಭಿಸುವ ಹರ್ಷೋತ್ಕರ್ಷಾದಿಗಳನ್ನು ವಿವರಿಸುತ್ತಾ ಎಂದರ್ಥವು.

**ಉಪ ಅತಿಷ್ಠಂತೆ**—ಸಮೀಪದಲ್ಲಿ ಇರುವೆವು, ಸಮೀಪಕ್ಕೆ ಬರುವೆವು. approach you ; ಎಂದರೆ ನಿನ್ನನ್ನು ಪ್ರಾರ್ಥಿಸುವೆವು.

**ವಿದುಃ ತೇ**—ಈ ಶಬ್ದಗಳ ಜತೆಗೆ **ಧನದಾನಂ** ಎಂಬ ಶಬ್ದವನ್ನು ಅಧ್ಯಾಹಾರಮಾಡದಿದ್ದರೆ ಸರಿಯಾದ ಅರ್ಥವು ಹೊಂದುವುದಿಲ್ಲ. **ವಿದುಷ್ಟೇ** ಎಂಬ ಪ್ರಯೋಗವು ಮುಂದಿನ ಋಕ್ಕಿನಲ್ಲಿಯೂ ಇರುವುದು.

**ಕಾರವಃ**—**ಕರ್ತಾರಃ**, ಈಶಬ್ದಕ್ಕೆ ಮಾಡುವವರು ಎಂದರ್ಥವು. ಏನುಮಾಡುವವರು ಎಂದರೆ ಯಜ್ಞಾನುಷ್ಠಾನಗಳನ್ನಾಗಲಿ, ಸ್ತೋತ್ರಗಳನ್ನಾಗಲಿ ಮಾಡುವವರು ಎಂಬ ವಿವರಣೆಯನ್ನು ಹೇಳಬೇಕು

॥ ವ್ಯಾಕರಣಪ್ರಕ್ರಿಯಾ ॥

**ತವ**—ಯುಷ್ಮದ್ ಶಬ್ದದ ಮುಂದೆ ಷಷ್ಠೀ ಏಕವಚನ ಙಸ್ ಪ್ರತ್ಯಯ. ಇದು ಪರದಲ್ಲಿರುವುದರಿಂದ ತವ ಮಮೌಙಸಿ (ಪಾ ಸೂ ೭-೨-೯೬) ಎಂಬುದರಿಂದ ಮಪರ್ಯಂತವಾದ ಯುಷ್ಮ್ ಎಂಬುದಕ್ಕೆ ತವ ಆದೇಶ ತವ+ಅದ್-ಙಸ್ **ಅತೋಗುಣೇ** (ಪಾ. ಸೂ ೬-೧-೯೭), ಎಂಬುದರಿಂದ ಪರರೂಪ ತವದ್‌ಙಸ್ **ಯುಷ್ಮದಸ್ಮದ್ಭ್ಯಾಂಙಸೋಽಶ್** (ಪಾ. ಸೂ. ೭-೧-೨೭ ) ಎಂಬುದರಿಂದ ಙಸ್‌ಗೆ ಅಶ್ ಆದೇಶ. ತವದ್+ಅ **ಶೇಷೇಲೋಪಃ** (ಪಾ. ಸೂ. ೭-೨-೯೦) ಎಂಬುದರಿಂದ ಟಿ ಲೋಪ, ತವ ಎಂದಾಗುವುದು **ಶೇಷೇಲೋಪಃ** (ಪಾ. ಸೂ. ೭-೨-೯೦) ಎಂಬುದರಿಂದ ಕೊನೆಯ ದಕಾರಕ್ಕೆ ಮಾತ್ರ ಲೋಪ ಬಂದರೆ **ಅತೋಗುಣೇ** (ಪಾ. ಸೂ. ೬-೧-೯೭) ಎಂಬುದರಿಂದ ಪರರೂಪ ಬಂದು ತವ ಎಂದಾಗುವುದು **ಯುಷ್ಮದಸ್ಮದೋರ್ಙಸಿ** (ಪಾ. ಸೂ. ೬-೧-೨೧೧) ಎಂಬುದರಿಂದ ಆದ್ಯುದಾತ್ತಸ್ವರ ಬರುವುದು.

ರಾತಿಭಿಃ-ರಾ **ಆದಾನೇ** ಧಾತು ಇದರ ಮುಂದೆ **ಮನ್ತ್ರೇ ವೃಷೇಷ ಪಚ ಮನ ವಿದ ಭೂ ವೀರಾ ಉದಾತ್ತಃ** (ಪಾ. ಸೂ ೩-೩-೯೬) ಎಂಬುದರಿಂದ ಉದಾತ್ತವಾದ ಕ್ತಿನ್ ಪ್ರತ್ಯಯ ಬರುವುದು. ಇದರ ಮುಂದೆ ಬರುವ ಭಿಸ್ ಪ್ರತ್ಯಯವು ಅನುದಾತ್ತ.

**ಆಯಮ್**—ಇಣ್‌ಗತೌ ಧಾತು ಇದರ ಮುಂದೆ ಲಙ್. ಅದರ **ಸ್ಥಾನದಲ್ಲಿ** ಉತ್ತಮಪುರುಷ ಏಕವಚನ ಮಿಪ್ ಆದಕ್ಕೆ **ತಸ್ಥಸ್ಥ ಮಿಪಾಂತಾಂತಂತಾಮಃ** (ಪಾ. ಸೂ ೩-೪-೧೦೧) ಙಕಾರೇತ್ಸಂಜ್ಞಕವಾದ ಲಕಾರದ ಸ್ಥಾನದಲ್ಲಿ ಬಂದ **ತಸ್-ಥ್‌ಸ್-ಥ-ಮಿಪ್** ಇವುಗಳಿಗೆ ಕ್ರಮವಾಗಿ **ತಾಮ್-ತಮ್-ತ-ಅಮ್** ಎಂಬ ಆದೇಶಗಳು ಬರುವುವು ಎಂಬುದರಿಂದ ಮಿಪ್ಪಿಗೆ ಅಮ್, ಆದೇಶ, ಇ+ಅಮ್ **ಕರ್ತರಿಶಪ್** (ಪಾ. ಸೂ. ೩-೧-೬೮) ಎಂಬುದರಿಂದ ಶಪ್‌ವಿಕರಣ ಅದಕ್ಕೆ **ಅದಿಪ್ರಭೃತಿಭ್ಯಃಶಪಃ** (ಪಾ ಸೂ. ೨-೪-೭೨) ಎಂಬುದರಿಂದ ಲುಕ್ **ಆಡಜಾದೀನಾಮ್** (ಪಾ. ಸೂ- ೬-೪-೭೨) ಎಂಬುದರಿಂದ ಆಡಾಗಮ, **ಆಟಶ್ಚ** (ಪಾ. ಸೂ. ೬-೧-೯೦)

ಎಂಬುದರಿಂದ ವೃದ್ಧಿ. **ಏಚೋಽಯವಾಯಾವಃ** (ಪಾ. ಸೂ. ೬-೧.೭೮) ಎಂಬುದರಿಂದ ಐಗೆ ಆಯ್ ಆದೇಶ ಆಯವಮ್ ಎಂದಾಗುವುದು. **ತಿಙ್ಙತಿಙಃ** (ಪಾ.ಸೂ ೮-೧-೨೮) ಎಂಬುದರಿಂದ ಅನುದಾತ್ತ

**ಸಿನ್ಧುಮ್**—ಸ್ಯನ್ದೂ ಪ್ರಸ್ರವಣೇ ಧಾತು. **ಸ್ಯನ್ದೇಃಸಂಪ್ರಸಾರಣಂಧಶ್ಚ** (ಉ.ಸೂ. ೧-೧೧) **ಧ್ಯಾನೇ ನಿತ್** (ಉ. ಸೂ. ೧-೯) ಎಂಬುದರಿಂದ ನಿತ್ ಎಂಬುದು ಅನುವೃತ್ತವಾಗುವುದು. ಸ್ಯನ್ದೂ ಪ್ರಸ್ರವಣೇ ಎಂಬ ಧಾತುವಿನ ಮುಂದೆ ಉ ಪ್ರತ್ಯಯ ಬರುವುದು. ಅದು ನಿತ್ತಾಗುವುದು. ಧಾತುವಿನ ಯಕಾರಕ್ಕೆ ಸಂಪ್ರಸಾರಣವೂ ದಕಾರಕ್ಕೆ ಧಕಾರವೂ ಸಹ ಬರುವುದು ಎಂದು ಸೂತ್ರಾರ್ಥ. ಇದರಿಂದ ಉ ಪ್ರತ್ಯಯಾದಿಗಳು ಬಂದರೆ ಸಿನ್ಧು ಎಂದಾಗುವುದು. ನಿತ್ಸ್ವರ ಆದ್ಯುದಾತ್ತ ಬರುವುದು. ದ್ವಿತೀಯಾ ಏಕವಚನ ಅಮ್ ಪ್ರತ್ಯಯ ಬಂದರೆ ಸಿನ್ಧುಮ್ ಎಂದಾಗುವುದು.

**ಆ ವದನ್**—ವದ ವ್ಯಕ್ತಾಯಾಂವಾಚಿ ಧಾತು. ಇದರ ಮುಂದೆ ಲಟ್. ಅದಕ್ಕೆ ಶತೃ ಪ್ರತ್ಯಯ ಆದೇಶ. ಶಪ್ ವಿಕರಣ, ವದ್+ಅ+ಅತ್. ಶಪ್ ಪಿತ್ತಾದ್ದರಿಂದ ಅನುದಾತ್ತ. ಶಪ್ ಅದುಪದೇಶ. ಆದ್ದರಿಂದ ಅದರ ಮುಂದೆ ಇರುವ ಲಸ್ಥಾನಿಕವಾದ ಸಾರ್ವಧಾತುಕಕ್ಕೆ **ತಾಸ್ಯನುದಾತ್ತೇನ್ಙಿದದುಪದೇಶಾತ್** (ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತ ಬರುವುದು. ಧಾತುಸ್ವರ ನಿಲ್ಲುವುದು. ವದತ್ ಎಂಬುದರೊಂದಿಗೆ ಆಙ್ ಗೆ **ಕುಗತಿಪ್ರಾದಯಃ** (ಪಾ. ಸೂ- ೨-೨-೧೮) ಎಂಬುದರಿಂದ ಸಮಾಸ ಆವದತ್. ಕೃದುತ್ತರಪದ ಪ್ರಕೃತಿ ಸ್ವರದಿಂದ ಪೂರ್ವದಲ್ಲಿ ಪ್ರತಿಪಾದಿಸಲ್ಪಟ್ಟ ಸ್ವರಗಳೇ ನಿಲ್ಲುವುವು. ಇದರ ಮುಂದೆ ಸು ಪ್ರತ್ಯಯವನ್ನಿಟ್ಟರೆ **ಉಗಿದಚಾಂಸರ್ವನಾಮಸ್ಥಾನೇಽಧಾತೋಃ** (ಪಾ. ಸೂ. ೭-೧-೭೦) ಎಂಬುದರಿಂದ ನುಮಾಗಮವನ್ನು **ಹಲ್ಙ್ಯಾಬ್ಭ್ಯಃ** (ಪಾ. ಸೂ. ೬-೧-೬೮) ಎಂಬುದರಿಂದ ಸುಲೋಪ. **ಸಂಯೋಗಾಂತಸ್ಯಲೋಪಃ** (ಪಾ. ಸೂ. ೮-೨-೨೩) ಎಂಬುದರಿಂದ ತಕಾರಕ್ಕೆ ಲೋಪ. ತಲೋಪವು **ಪೂರ್ವತ್ರಾಸಿದ್ಧಮ್** (ಪಾ. ಸೂ. ೮-೨-೧) ಎಂಬುದರಿಂದ ಅಸಿದ್ಧವಾಗುವ ಕಾರಣ **ನಲೋಪಃಪ್ರಾತಿಪದಿಕಾಂತಸ್ಯ** (ಪಾ. ಸೂ. ೮.೨-೭) ಎಂಬುದರಿಂದ ನಲೋಪ ಬರುವುದಿಲ್ಲ. ಆವದನ್ ಎಂದಾಗುವುದು.

**ಅತಿಷ್ಠನ್ತ**-ಷ್ಠಾ ಗತಿನಿವೃತ್ತೌ ಧಾತು. ಇದು ಇಲ್ಲಿ ಉಪ ಎಂಬ ಉಪಸರ್ಗದ ಮುಂದೆ ಇರುವುದು ಆದ್ದರಿಂದ **ಉಪಾನ್ಮಂತ್ರಕರಣೇ** (ಪಾ. ಸೂ. ೧-೩-೨೫) ಉಪ ಎಂಬುದರ ಮುಂದೆ ಇರುವ ಮಂತ್ರಕರಣಾರ್ಥಕವಾದ ಸ್ಥಾಧಾತುವಿನ ಮುಂದೆ ಇರುವ ಲಕಾರದ ಸ್ಥಾನದಲ್ಲಿ ಆತ್ಮನೇಪದಪ್ರತ್ಯಯ ಬರುವುದು ಎಂದು ಸೂತ್ರಾರ್ಥ. ಇದರಿಂದ ಸ್ಥಾಧಾತುವಿನ ಮುಂದೆ ಲಙ್ನನ್ನು ಇಟ್ಟರೆ ಆತ್ಮನೇಪದಪ್ರತ್ಯಯ ಬರುವುದು. ಪ್ರಥಮಬಹುವಚನ ವಿವಕ್ಷೆ ಮಾಡಿದಾಗ ಝ ಬರುತ್ತೆ. **ಕರ್ತರಿಶಪ್** ಎಂಬುದರಿಂದ ಶಪ್ ವಿಕರಣ ಸ್ಥಾ-ಅ-ಝ. **ಪಾಘ್ರಾಧ್ಮಾ** (ಪಾ. ಸೂ. ೭-೩-೭೮) ಎಂಬುದರಿಂದ ಸ್ಥಾ ಎಂಬುದಕ್ಕೆ ತಿಷ್ಠ ಆದೇಶ. ಝ್‌ಗೆ **ಝೋಽನ್ತಃ** (ಪಾ. ಸೂ. ೭-೧-೩) ಎಂಬುದರಿಂದ ಅನ್ತ್ ಆದೇಶ. **ಲುಙ್‌ಲಙ್‌ಲೃಙ್‌ಕ್ಷ್ವಡುದಾತ್ತಃ** ( ಪಾ. ಸೂ. ೬-೪-೭೧ ) ಎಂಬುದರಿಂದ ಅಡಾಗಮ, ಅತಿಷ್ಠ+ಅ+ಅನ್ತ **ಅತೋಗುಣೇ** (೬-೧-೯೭) ಎಂಬುದರಿಂದ ಎರಡಾವರ್ತಿ ಪರರೂಪ. **ಅತಿಷ್ಠನ್ತ** ಎಂದು ಸಿದ್ಧಿಸುವುದು.

**ಗಿರ್ವಣಃ**-ಗೄ ಶಬ್ದೇ, ಕ್ವಿಪ್. **ಋತಇದ್ಧಾತೋಃ** (೭-೧-೧೦೦) ಎಂಬುದರಿಂದ ಇತ್ವ ರಪರತ್ವ ಗಿರ್. ಗೀರ್ಭಿಃ ವನ್ಯತೇ ಎಂದು ವಿಗ್ರಹ. ವನಷಣಸಂಭಕ್ತೌ ಧಾತು. ಅಸುನ್ ಗಿರ್ವನಸ್, ಸಂಬೋಧನಾ ಏಕ

ವಚನದಲ್ಲಿ ಹಲಾಙ್ಯಾಭ್ಯಃ-ಸುಲೋಪ, ರುತ್ವ ವಿಸರ್ಗ ಣತ್ವಗಳು ಬಂದರೆ ಗಿರ್ವಣಃ ಎಂದಾಗುವುದು. ಆಮಂತ್ರಿತ ಆದ್ದರಿಂದ **ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ಅನುದಾತ್ತ.

**ವಿದುಃ—ವಿದ ಜ್ಞಾನೇ** ಅದಾದಿ ಧಾತು. ಇದರ ಮುಂದೆ **ಲಟ್**, ಅದಕ್ಕೆ ಝಿ. **ಶಪ್** ವಿಕರಣಕ್ಕೆ **ಅದಿಪ್ರಭೃತಿಭ್ಯಃಶಪಃ** ( ಪಾ. ಸೂ. ೭-೪-೭೭ ) ಎಂಬುದರಿಂದ ಲುಕ್. **ವಿದೋಲಟೋವಾ** (ಪಾ.ಸೂ. ೩-೪-೮೩ ) ವಿದಧಾತುವಿನ ಮುಂದೆ ಇರುವ ಲಟ್ಟಿನ ಸ್ಥಾನದಲ್ಲಿ ಬಂದ ಪರಸ್ಮೈ ಪದ ಪ್ರತ್ಯಯಗಳಿಗೆ ಒಂಭತ್ತಕ್ಕೂ ಕ್ರಮವಾಗಿ ಣಲ್ ಮೊದಲಾದ ಒಂಭತ್ತು ಆದೇಶಗಳು ಬರುವುವು ಎಂಬುದರಿಂದ ಝಿಗೆ ಉಸ್ ಬರುವುದು. ವಿದುಸ್ ರುತ್ವ ವಿಸರ್ಗಗಳು. ವಿದುಃ—ಇದು ನಾಲ್ಕನೇ ಪಾದದ ಆದಿಯಲ್ಲಿರುವುದು. ಪಾದಾದಿಯಲ್ಲಿರುವುದರಿಂದ ಅನುದಾತ್ತ ಬರುವುದಿಲ್ಲ. ವಿದುಃ+ತೇ ಎಂದು ಸಂಹಿತಾಕಾಲದಲ್ಲಿ **ವಿಸರ್ಜನೀಯಸ್ಯಸಃ** (ಪಾ. ಸೂ.೮-೩-೩೪) ಖರ್ ವರ್ಣ ಪರದಲ್ಲಿರುವಾಗ ವಿಸರ್ಗಕ್ಕೆ ಸಕಾರ ಬರುವುದು ಎಂಬುದರಿಂದ ವಿಸರ್ಗಕ್ಕೆ ಸಕಾರ, ವಿದುಸ್+ತೇ. ಈಗ **ಯುಷ್ಮತ್ತತಕ್ಷುಷ್ವಂತಃ ಪಾದಮ್** ( ಪಾ. ಸೂ. ೮-೩-೧೦೩ )ತಕಾರಾದಿಯಾದ ಯುಷ್ಮಚ್ಛಬ್ದದ ಸ್ಥಾನದಲ್ಲಿ ಬಂದ ಆದೇಶಗಳು ತತ್-ತತಕ್ಷು ಇವುಗಳ ಹಿಂದೆ ಇರುವ ಸಕಾರಕ್ಕೆ ಷ್ ಕಾರ ಬರುವುದು ಎಂಬುದರಿಂದ ಸಕಾರಕ್ಕೆ ಷಕಾರ ಬಂದರೆ ವಿದುಷ್+ತೇ. **ಷ್ಟುನಾಷ್ಟುಃ** ( ಪಾ. ಸೂ ೮-೪-೪೧) ಎಂಬ ಸೂತ್ರದಿಂದ ಷ್ಟುತ್ವ ಬಂದು ತಕಾರಕ್ಕೆ ಟಕಾರ ಬರುವುದು. ವಿದುಷ್ಟೇ ಎಂದಾಗುವುದು.

**ತಸ್ಯ—ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ** ( ಪಾ. ಸೂ. ೬-೧-೧೬೮ ) ಸಪ್ತಮೀ ಬಹುವಚನ ಸುಪ್ರತ್ಯಯಪರದಲ್ಲಿರುವಾಗ ಯಾವ ಶಬ್ದವು ಏಕಾಚ್ಕವಾಗಿರುವುದೋ ಆ ಶಬ್ದದ ಮುಂದೆ ಇರುವ ತೃತೀಯಾದಿ ವಿಭಕ್ತಿಯು ಉದಾತ್ತವಾಗುವುದು ಎಂಬುದರಿಂದ ತಚ್ಛಬ್ದದ ಮುಂದೆ ಇರುವ ಷಷ್ಠ್ಯೇಕವಚನ ಸ್ಯ ಎಂಬುದಕ್ಕೆ ಉದಾತ್ತಸ್ವರ ಪ್ರಾಪ್ತವಾದರೆ ಅದಕ್ಕೆ **ನಗೋಶ್ವನ್ಸಾವವರ್ಣರಾಡಙ್ಕ್ರುಙ್ಕೃದ್ಭ್ಯಃ** ( ಪಾ. ಸೂ ೬-೧.೧೮೨ ) ಗೋಶಬ್ದ ಶ್ವನ್ ಶಬ್ದ ಪ್ರಥಮೈಕವಚನದಲ್ಲಿ ಅವರ್ಣಾಂತವಾದ ಶಬ್ದ ರಾಟ್-ಅಙ್-ಕ್ರುಙ್-ಕೃತ್ ಇವುಗಳ ಮುಂದೆ ಇರುವ ವಿಭಕ್ತಿ ಮತ್ತು ಮತುಪ್ ಇವುಗಳಿಗೆ ಉದಾತ್ತಸ್ವರ ಬರುವುದಿಲ್ಲ ಎಂಬುದರಿಂದ ನಿಷೇಧವಿರುವುದು. ಆದ್ದರಿಂದ **ಅನುದಾತ್ತೌ ಸುಪ್ಪಿತೌ** ( ೩-೧-೪ ) ಎಂಬುದರಿಂದ ಸ್ಯ ಎಂಬುದು ಅನುದಾತ್ತವೇ ಆಗುವುದು.

**ಕಾರವಃ—ಕೃವಾಪಾಜಿಮಿಸ್ವದಿಸಾಧ್ಯಶೂಭ್ಯ ಉಣ್** ( ಉ. ಸೂ. ೧-೧ ) **ಡುಕೃಞ್ ಕರಣೇ, ವಾ ಗತಿಗಂಧನಯೋಃ ಪಾ ಪಾನೇ, ಜಿ ಅಭಿಭವೇ, ಡುಮಿಞ್ ಪ್ರಕ್ಷೇಪಣೇ, ಸ್ವದ ಆಸ್ವಾದನೇ, ಸಾಧ ಸಂಸಿದ್ಧೌ, ಅಶೂ ವ್ಯಾಪ್ತೌ** ಈ ಧಾತುಗಳ ಮುಂದೆ ಉಣ್ ಪ್ರತ್ಯಯ ಬರುವುದು ಎಂಬುದರಿಂದ ಕೃ ಧಾತುವಿನ ಮುಂದೆ ಉಣ್ ಪ್ರತ್ಯಯ. ಪ್ರತ್ಯಯವು ಣಿತ್ತಾದ್ದರಿಂದ **ಅಚೋಞ್ಣಿತಿ** (ಪಾ. ಸೂ ೭-೨-೧೧೫ ) ಎಂಬುದರಿಂದ ವೃದ್ಧಿಯು, ಉರಣ್ರಪರಃ ಎಂಬುದರಿಂದ ರ ಪರವಾಗಿ ಬರುವುದು. ಕಾರು ಎಂದಾಗುವುದು. ಪ್ರತ್ಯಯಸ್ವರ ಬರುವುದು. || ೭ ||

॥ ಸಂಹಿತಾಪಾಠಃ ॥

ಮಾಯಾಭಿರಿಂದ್ರ ಮಾಯಿನಂ ತ್ವಂ ಶುಷ್ಣಮವಾತಿರಃ ।
ವಿದುಷ್ಟೇ ತಸ್ಯ ಮೇಧಿರಾಸ್ತೇಷಾಂ ಶ್ರವಾಂಸ್ಯುತ್ತಿರ ॥ ೭ ॥

॥ ಪದಪಾಠಃ ॥

ಮಾಯಾಭಿಃ । ಇಂದ್ರ । ಮಾಯಿನಂ । ತ್ವಂ । ಶುಷ್ಣಂ । ಅವ । ಅತಿರಃ ॥
ವಿದುಃ । ತೇ । ತಸ್ಯ । ಮೇಧಿರಾಃ । ತೇಷಾಂ । ಶ್ರವಾಂಸಿ । ಉತ್ । ತಿರ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಮಾಯಿನಂ ನಾನಾವಿಧಕಪಟೋಪೇತಂ ಶುಷ್ಣಂ ಭೂತಾನಾಂ ಶೋಷಣಹೇತುಮೇತನ್ನಾಮಕಮಸುರಂ ಮಾಯಾಭಿಸ್ತತ್ಪ್ರತೀಕಾರೈಃ ಕಪಟವಿಶೇಷೈಃ । ಯದ್ವಾ । ತದ್ವಧೋಪಾಯಗೋಚರಪ್ರಜ್ಞಾಭಿಃ । ಅವಾತಿರಃ । ಹಿಂಸಿತವಾನಸಿ । ಏತಚ್ಚ ಯಾಸ್ಕೇನೋಕ್ತಂ । ಇಂದ್ರಃ ಶುಷ್ಣಂ ಜಘಾನ । ನಿ. ೩.೧೧ । ಇತಿ । ಶುಷ್ಣಂ ಪಿಪ್ರುಂ । ಋಗ್ವೇ. ೧.೧೦೩.೮ । ಇತ್ಯಾದಿಮಂತ್ರೇ ಚಾಯಮರ್ಥೋ ವಿಸ್ಪಷ್ಟಃ । ಮೇಧಿರಾ ಮೇಧಾವಂತೋಽನುಷ್ಠಾತಾರಸ್ತಸ್ಯ ತಾದೃಶಸ್ಯ ತೇ ತವ ಮಹಿಮಾನಂ ವಿದುಃ । ಜಾನಂತಿ । ತೇಷಾಂ ಜಾನತಾಮನುಷ್ಠಾತೄಣಾಂ ಶ್ರವಾಂಸ್ಯನ್ನಾನ್ಯುತ್ತಿರ । ವರ್ಧಯ । ಕೇತಃ ಕೇತುರಿತ್ಯಾದಿಷ್ವೇಕಾದಶಸು ಪ್ರಜ್ಞಾನಾಮಸು ಮಾಯಾ ವಯುನಮಿತಿ ಪಠಿತಂ । ಶ್ರವಃಶಬ್ದಂ ಯಾಸ್ಕೋ ನಿರ್ವಕ್ತಿ । ಶ್ರವ ಇತ್ಯನ್ನನಾಮ ಶ್ರೂಯತ ಇತಿ ಸತಃ । ನಿ. ೧೦.೩ ।ಇತಿ ॥ ಮಾಯಾಭಿಃ। ಮಾಙ್ ಮಾನೆ ಮಾಚ್ಛಾಸಸಿಸೂಭ್ಯೋ ಯಃ । ಉ. ೪.೧೦೯ । ಇತಿ ಯಪ್ರತ್ಯಯಃ । ಪ್ರತ್ಯಯಸ್ವರಃ । ಮಾಯಿನಂ । ಮಾಯಾಸ್ಯಾಸ್ತೀತಿ ಮಾಯೀ । ವ್ರೀಹ್ಯಾದಿತ್ವಾದಿನಿಪ್ರತ್ಯಯಃ । ಪಾ. ೫.೨.೧೧೬ । ಪ್ರತ್ಯಯಸ್ವರಃ । ಶುಷ್ಣಂ । ಶುಷ ಶೋಷಣೇ । ಅಸ್ಮಾದಂತರ್ಭಾವಿತಣ್ಯರ್ಥಾನ್ನಿದಿತ್ಯನುವೃತ್ತೌ ತೃಷಿಶುಷಿರಸಿಭ್ಯಃ ಕಿಚ್ಚ । ಉ ೩.೧೨ । ಇತಿ ನಪ್ರತ್ಯಯಃ ನಿತ್ತ್ವಾದಾದ್ಯುದಾತ್ತಃ । ಅತಿರಃ । ತರತೇರ್ಲಙಿ ವ್ಯತ್ಯಯೇನ ಶಃ । ತಸ್ಯ ಙಿತ್ವೇನ ಗುಣಾಭಾವಾದೃತ ಇದ್ಧಾತೋರಿತೀತ್ವಂ। ರಪರತ್ವಂ ।ವಿದುಸ್ತೇ ತಸ್ಯ। ಗತಮಂತ್ರೇ ಗತಂ। ಮೇಧಿರಾಃ । ಮಿಧೃ ಮೇಧೃ ಮೇಧಾಹಿಂಸನಯೋಃ । ಔಣಾದಿಕ ಇರನ್ । ನಿತ್ತ್ವಾದಾದ್ಯುದಾತ್ತಃ । ಶ್ರವಾಂಸಿ । ನಬ್ವಿಷಯತ್ವಾದಾದ್ಯುದಾತ್ತಃ ॥

॥ ಪ್ರತಿಪದಾರ್ಥ ॥

(ಹೇ) ಇಂದ್ರ—ಎಲೈ ಇಂದ್ರನೇ । ತ್ವಂ—ನೀನು । ಮಾಯಿನಂ—ನಾನಾವಿಧ ಕಪಟಗಳಿಂದ ಕೂಡಿರುವ । ಶುಷ್ಣಂ—ಜನರನ್ನು ಹಿಂಸೆಮಾಡುವ ಶುಷ್ಣನೆಂಬ ಅಸುರನನ್ನು । ಮಾಯಾಭಿಃ—ಸಂದರ್ಭೋಚಿತವಾದ ಕಪಟೋಪಾಯಗಳಿಂದಲೇ ಅಥವಾ ಬುದ್ಧಿಸಾಮರ್ಥ್ಯಗಳಿಂದಲೇ । ಅವ ಅತಿರಃ—ಸಂಹಾರ ಮಾಡಿರುವೆ । ತೇ—ಅಂತಹ ನಿನ್ನ (ಮಹಿಮೆಯನ್ನು) । ಮೇಧಿರಾಃ—ಬುದ್ಧಿಶಾಲಿಗಳಾದ ಜನರು । ವಿದುಃ—ತಿಳಿಯುವರು । ತೇಷಾಂ—ಅವರಿಗೆ ಎಂದರೆ ಮೇಧಾವಿಗಳಾದ ಮತ್ತು ಯಜ್ಞಾದಿಗಳನ್ನು ಮಾಡುವ ಜನರಿಗೆ । ಶ್ರವಾಂಸಿ—ಅನ್ನಗಳನ್ನು (ಅನ್ನಾದ್ಯಾಹಾರಾದಿಗಳನ್ನು) । ಉತ್ ತಿರ—ಅಭಿವೃದ್ಧಿಪಡಿಸು (ಹೆಚ್ಚಾಗಿ ಕೊಡು).

॥ ಭಾವಾರ್ಥ ॥

ಎಲೈ ಇಂದ್ರನೇ, ಶುಷ್ಣನೆಂಬ ಅಸುರನು ಬಹಳ ಕಪಟಿಯು. ಅಂತಹ ಕಪಟಸ್ವಭಾವದ ಅಸುರನನ್ನು ಕಪಟೋಪಾಯಗಳಿಂದಲೇ ಅಥವ ನಿನ್ನ ಬುದ್ಧಿಶಕ್ತಿಯಿಂದಲೇ ಕೊಂದಿರುವೆ. ಇಂತಹ ನಿನ್ನ ಮಹಿಮೆಯನ್ನು ಬುದ್ಧಿವಂತರಾದ ಜನರು ತಿಳಿಯುವರು. ಅವರಿಗೆ ಅನ್ನಾದ್ಯಾಹಾರಗಳನ್ನು ಹೆಚ್ಚಾಗಿ ಕೊಡು.

## English Translation.

O Indra, you killed the wily Sushna by your stratagems; the wise men have known this your greatness; bestow upon them abundant food.

॥ ವಿಶೇಷವಿಷಯಗಳು ॥

**ಮಾಯಾಭಿಃ, ಮಾಯಿನಂ**—ಮಾಯಾ ಎಂದರೆ ಕಪಟವಿಶೇಷ, ತಂತ್ರ ಉಪಾಯ, ಶಕ್ತಿಸಾಮರ್ಥ್ಯ wile, stratagem, etc., ಮಾಯಾ ಶಬ್ದದ ಈ ವಿಧವಾದ ಅರ್ಥವಿವರಣೆಯನ್ನು ಮಾಡುವ ಒಂದೆರಡು ಋಕ್ಕುಗಳನ್ನು ಕೆಳಗೆ ಕೊಟ್ಟಿದೆ—

ರೂಪಂ ರೂಪಂ ಮಘವಾ ಬೋಭವೀತಿ ಮಾಯಾಃ ಕೃಣ್ವಾನಸ್ತನ್ವಂ೧ ಪರಿ ಸ್ವಾಂ ॥
(ಋ. ಸಂ. ೩-೫೩-೮)

ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾ ದಶ ॥
(ಋ. ಸಂ. ೬-೪೭-೧೮)

ಇತ್ಯಾದಿ ಅನೇಕ ಉದಾಹರಣೆಗಳಿವೆ. ಕೇತಃ, ಕೇತುಃ ಮೊದಲಾದ ಹನ್ನೊಂದು ಪ್ರಜ್ಞಾನಾಮಕ ಶಬ್ದಗಳ ಮಧ್ಯದಲ್ಲಿ ಮಾಯಾ ಶಬ್ದವು ಪಠಿತವಾಗಿರುವುದರಿಂದ (ನಿ ೩-೧೩) ಮಾಯಾ ಎಂದರೆ ಪ್ರಜ್ಞೆ, ತಿಳುವಳಿಕೆ, ಬುದ್ಧಿವಂತಿಕೆ, ಉಪಾಯ, ಮುಂತಾದ ಅರ್ಥಗಳೂ ಆಗುವವು. ಪ್ರಜ್ಞಾ ಎಂಬ ಅರ್ಥವಿಚಾರದಲ್ಲಿ ಯಾಸ್ಕ ಮಹರ್ಷಿಯು ನಿರುಕ್ತದಲ್ಲಿ—

ಮೂರ್ಧಾ ಭುವೋ ಭವತಿ ನಕ್ತಮಗ್ನಿಸ್ತತಃ ಸೂರ್ಯೋ ಜಾಯತೇ ಪ್ರಾತರುದ್ಯನ್ ।
ಮಾಯಾ ಮೂ ತು ಯಜ್ಞಿಯಾನಾಮೇತಾಮಪೋ ಯತ್ತೂರ್ಣಿಶ್ಚರತಿ ಪ್ರಜಾನನ್ ॥
(ಋ. ಸಂ. ೧೦-೮೮-೬)

ಎಂಬ ಋಕ್ಕಿಗೆ ಅರ್ಥವಿವರಣೆ ಮಾಡುವಾಗ,

ಮೂರ್ಧಾ ಮೂರ್ತಮಸ್ಮಿನ್ ಧೀಯತೇ ಮೂರ್ಧಾ ಯಃ ಸರ್ವೇಷಾಂ ಭೂತಾನಾಂ ಭವತಿ ನಕ್ತಮಗ್ನಿಸ್ತತಃ ಸೂರ್ಯೋ ಜಾಯತೇ ಪ್ರಾತರುದ್ಯನ್ ಸ ಏವ ಪ್ರಜ್ಞಾಂ ತ್ವೇತಾಂ ಮನ್ಯಂತೇ ಯಜ್ಞಿಯಾನಾಂ ದೇವಾನಾಂ ಯಜ್ಞಸಂಪಾದಿನಾಮಪೋ ಯತ್ಕರ್ಮ ಚರತಿ ಪ್ರಜಾನನ್ ಸರ್ವಾಣಿ ಸ್ಥಾನಾನ್ಯನುಸಂ ಚರತೇ ತ್ವರಮಾಣಃ (ನಿ. ೭-೨೭).

ಎಂದು ಮಾಯಾ ಶಬ್ದಕ್ಕೆ ಪ್ರಜ್ಞಾ ಎಂಬ ಅರ್ಥವನ್ನು ಸ್ಪಷ್ಟವಾಗಿ ಹೇಳಿರುವರು ಮತ್ತು—

**ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯದ್ವಿಷುರೂಪೇ ಅಹನೀ ದ್ಯೌರಿವಾಸಿ |**
**ವಿಶ್ವಾ ಹಿ ಮಾಯಾ ಅವಸಿ ಸ್ವಧಾವೋ ಭದ್ರಾ ತೇ ಪೂಷನ್ನಿಹ ರಾತಿರಸ್ತು ||**
(ಋ. ಸಂ. ೬-೫೮-೧)

ಎಂಬ ಋಕ್ಕಿನ ಅರ್ಥವಿವರಣೆಯಲ್ಲಿಯೂ ಸಹ

**ಶುಕ್ರಂ ತೇ ಅನ್ಯಲ್ಲೋಹಿತಂ ತೇ ಅನ್ಯದ್ಯಜತಂ ತೇ ಅನ್ಯದ್ಯಜ್ಞಿಯಂ ತೇ ಅನ್ಯದ್ವಿಷಮರೂಪೇ ತೇ ಅಹನೀ ಕರ್ಮ ದ್ಯೌರಿವ ಚಾಸಿ ಸರ್ವಾಣಿ ಪ್ರಜ್ಞಾನಾನ್ಯವಸ್ಯನ್ನವನ್ಭಾಜನವತೀ ತೇ ಪೂಷನ್ನಿಹ ದತ್ತಿರಸ್ತು || (ನಿ- ೧೨-೧೭)**

ಮಾಯಾ ಶಬ್ದಕ್ಕೆ ಪ್ರಜ್ಞೆಯೆಂದೇ ಅರ್ಥವಿವರಣೆ ಮಾಡಿರುವರು.

**ಶುಷ್ಣಂ**—ಶುಷ್ಣನೆಂಬ ಅಸುರನು. ಶುಷ್ಣಶಬ್ದಕ್ಕೆ ಬಲವೆಂದೂ ಅರ್ಥವಾಗುವುದು. (ನಿ. ೩-೯) ಇಂದ್ರನು ಶುಷ್ಣನೆಂಬ ಅಸುರನನ್ನು ಸಂಹರಿಸಿದ ವಿಷಯವನ್ನು ಹೇಳುವ ಋಕ್ಕುಗಳು ಅನೇಕವಿವೆ.

**ಶುಷ್ಣಂ ಪಿಪ್ರುಂ ಕುಯವಂ ವೃತ್ರಮಿಂದ್ರ ಯದಾವಧೀರ್ವಿ ಪುರಃ ಶಂಬರಸ್ಯ ||**
(ಋ. ಸಂ. ೧-೧೦೩-೮)

ಈ ಋಕ್ಕಿನಲ್ಲಿ ಇಂದ್ರನು ಶಂಬರಾಸುರನ ಪಟ್ಟಣವನ್ನು ನಾಶಮಾಡಿದಾಗ ಶುಷ್ಣ, ಪಿಪ್ರು, ಕುಯವ, ವೃತ್ರ ಎಂಬ ನಾಲ್ಕು ಅಸುರನನ್ನು ಸಂಹಾರ ಮಾಡಿದನೆಂದು ಹೇಳಿದೆ.

**ಉಗ್ರೋ ಯಯಿಂ ನಿರಪಃ ಸ್ರೋತಸಾಸೃಜದ್ವಿ ಶುಷ್ಣಸ್ಯ ದೃಂಹಿತಾ ಐರಯತ್ಪುರಃ ||**
(ಋ. ಸಂ ೧-೫೧-೧೧)

ಈ ಋಕ್ಕಿನಲ್ಲಿ ಇಂದ್ರನು ಶುಷ್ಣಾಸುರನ ಪುರವನ್ನು ಮುತ್ತಿದನೆಂದು ಹೇಳಿದೆ. ಇಂತಹ ಅರ್ಥವನ್ನು ಸೂಚಿಸುವ ಋಕ್ಕುಗಳು ಅನೇಕವಾಗಿವೆ. ಇದಲ್ಲದೆ ಶುಷ್ಣಶಬ್ದಕ್ಕೆ ಶೋಷಯಿತೃ ಎಂದರೆ ಒಣಗಿಸುವ ಎಂಬ ಅರ್ಥವನ್ನು ಹೇಳಬಹುದು. ಇಂತಹ ಸಂದರ್ಭದಲ್ಲಿ ಮಳೆಯನ್ನು ಸುರಿಸದೆ ಭೂಮಿಯು ಬಾಡಿಹೋಗುವಂತೆ ಮಾಡುತ್ತಿರುವ ಮೇಘವನ್ನು ಇಂದ್ರನು ತನ್ನ ಶಕ್ತಿಯಿಂದ ಪ್ರಹರಿಸಿ ಮಳೆಯನ್ನುಂಟು ಮಾಡುವನೆಂಬ ಅರ್ಥವನ್ನು ಹೇಳಬಹುದು. ಈ ವಿಧವಾದ ಅರ್ಥವಿಚಾರದಲ್ಲಿ ಯಾಸ್ಕರು--

**ನಿಯದ್ವೃಣಕ್ಷಿ ಶ್ವಸನಸ್ಯ ಮೂರ್ಧನಿ ಶುಷ್ಣಸ್ಯ ಚಿದ್ವ್ರಂದಿನೋ ರೋರುವದ್ವನಾ ||**
(ಋ. ಸಂ. ೧-೫೪-೫)

ಎಂಬ ಋಕ್ಕಿನ ಅರ್ಥವಿವರಣೆ ಮಾಡುವಾಗ **ಶುಷ್ಣಸ್ಯಾದಿತ್ಯಸ್ಯ ಚ ಶೋಷಯಿತುಃ** ಎಂದು ಶುಷ್ಣಶಬ್ದಕ್ಕೆ ಶೋಷಯಿತುಃ ಎಂದರೆ ಒಣಗಿಸುವ ಎಂದರ್ಥವಿವರಣೆ ಮಾಡಿರುವರು (ನಿ-೫-೧೬) ಮತ್ತು—

**ನ್ಯಾವಿಧ್ಯದಿಲೀವಿಶಸ್ಯ ದೃಳ್ಹಾ ವಿ ಶೃಂಗಿಣಮಭಿನಚ್ಛುಷ್ಣಮಿಂದ್ರಃ ||**
ಋ. ಸಂ. ೧-೩೩-೧೨)

ಎಂಬ ಋಕ್ಕಿನಲ್ಲಿಯೂ ಸಹ **ನಿರವಿಧ್ಯದಿಲಾಬಿಲಶಯಸ್ಯ ದೃಢಾನಿ ವ್ಯಭಿನಚ್ಛೃಂಗಿಣಂ ಶುಷ್ಣಮಿಂದ್ರಃ** ಎಂದರೆ ಪರ್ವತದ ಶಿಖರದ ಮೇಲಿದ್ದುಕೊಂಡು ಮಳೆಯನ್ನು ಸುರಿಸದೆ ಭೂಮಿಯನ್ನು ಒಣಗುವಂತೆ ಮಾಡುತ್ತಿರುವ ಮೇಘವನ್ನು ಇಂದ್ರನು ಪ್ರಹರಿಸಿದನು ಎಂದು ಅರ್ಥವಿವರಣೆ ಮಾಡಿರುವರು (ನಿ. ೬-೨೦).

**ಅವ ಅತಿರಃ**— ಹಿಂಸಿತವಾನಸಿ. ಹಿಂಸೆಮಾಡಿದೆ, ಪ್ರಹರಿಸಿದೆ, ಕೊಂದೆ ಎಂದರ್ಥವು.

**ವಿದುಃ ತೇ**— ನಿನ್ನ ಅಥವಾ ನಿನ್ನನ್ನೂ ಬಲ್ಲರು ಎಂದರೆ ನಿನ್ನ ಮಹಿಮೆ ಅಥವಾ ಶಕ್ತಿಸಾಮರ್ಥ್ಯಗಳನ್ನು ಬಲ್ಲರು ಎಂದಭಿಪ್ರಾಯವು.

**ಮೇಧಿರಾಃ**— ಮೇಧಾವಂತಃ ಪುರುಷಾಃ— ಬುದ್ಧಿವಂತರಾದವರು, ವಿವೇಕಿಗಳು ಇತ್ಯಾದಿ.

**ಶ್ರವಾಂಸಿ**— ಅನ್ನಗಳು, ಅನ್ನಾದ್ಯಾಹಾರಗಳು. ಅಸಸ್ರಾಣಾಸಃ ಶವಸಾ (ಋ. ಸಂ. ೬-೩೭-೩) ಎಂಬ ಋಕ್ಕಿನ ಅರ್ಥವಿವರಣೆ ಮಾಡುವಾಗ ಯಸ್ಕರು ಶ್ರವಶ್ಶಬ್ದಕ್ಕೆ **ಶ್ರವ ಇತ್ಯನ್ನನಾಮ ಶ್ರೂಯತ ಇತಿ ಸತಃ** ಎಂದು ಅನ್ನವೆಂಬ ಅರ್ಥವನ್ನು ಹೇಳಿರುವರು. (ನಿ. ೧೦-೩)

॥ ವ್ಯಾಕರಣಪ್ರಕ್ರಿಯಾ ॥

**ಮಾಯಾಭಿಃ**— **ಮಾಙ್** ಮಾನೇ ಧಾತು. ಇದರಮುಂದೆ **ಮಾಚ್ಛಾಸಸಿ (ಸೂ) ಭ್ಯೋಯಃ** (ಉ. ಸೂ. ೪-೫೪೯) ಮಾಙ್ ಮಾನೇ, ಛೋ ಛೇದನೇ, ಷಸ ಸ್ವಪ್ನೇ ಈ ಧಾತುಗಳ ಮುಂದೆ ಯ ಪ್ರತ್ಯಯ ಬರುವುದು ಎಂಬುದರಿಂದ ಯ ಬಂದರೆ ಮಾಯ ಪ್ರತ್ಯಯಸ್ವರದಿಂದ ಅಂತೋದಾತ್ತ. ಸ್ತ್ರೀತ್ವವನ್ನು ವಿವಕ್ಷೆಮಾಡಿದರೆ **ಅಜಾದ್ಯತಷ್ಟಾಪ್** (ಪಾ. ಸೂ. ೪-೧-೪) ಎಂಬುದರಿಂದ ಟಾಪ್ ಪ್ರತ್ಯಯ. ಟಾಪ್ ಪಿತ್ತಾದ್ದರಿಂದ ಅನುದಾತ್ತ. ಸವರ್ಣದೀರ್ಘ. ಏಕಾದೇಶವು, **ಏಕಾದೇಶ ಉದಾತ್ತೇನ** (ಪಾ. ಸೂ. ೮-೨-೫) ಎಂಬುದರಿಂದ ಉದಾತ್ತ. ಇದರ ಮುಂದೆ ಭಿಸ್ ಪ್ರತ್ಯಯ. ರುತ್ವ ವಿಸರ್ಗ. ಭಿಸ್ ಅನುದಾತ್ತ. ಉದಾತ್ತಾದನುದಾತ್ತಸ್ಯ ಸ್ವರಿತಃ ಎಂಬುದರಿಂದ ಸ್ವರಿತ.

**ಮಾಯಿನಂ**— **ಮಾಯಾ ಅಸ್ಯ ಅಸ್ತಿ** ಎಂದು ವಿಗ್ರಹಮಾಡಿದರೆ **ವ್ರೀಹ್ಯಾದಿಭ್ಯಶ್ಚ** ( ಪಾ. ಸೂ ೫-೨ ೧೧೬) ವ್ರೀಹ್ಯಾದಿಗಣಪಠಿತ ಶಬ್ದಗಳ ಮುಂದೆ ಮತ್ವರ್ಥದಲ್ಲಿ ಇನಿಠನ್ ಪ್ರತ್ಯಯಗಳು ಬರುವುವು ಎಂಬುದರಿಂದ ಇನ್ ಪ್ರತ್ಯಯ **ಯಸ್ಯೇತಿಚ** (ಪಾ. ಸೂ. ೬-೪-೧೪೮) ಎಂಬುದರಿಂದ ಆಕಾರಕ್ಕೆ ಲೋಪ. ದ್ವಿತೀಯಾಏಕವಚನ ಅಮ್ ಪ್ರತ್ಯಯವನ್ನಿಟ್ಟರೆ ಮಾಯಿನಂ ಎಂದಾಗುವುದು. ಇನಿಪ್ರತ್ಯಯಕ್ಕೆ ಪ್ರತ್ಯಯಸ್ವರ ಬರುವುದು.

**ಶುಷ್ಣಂ**— **ಶುಷಶೋಷಣೇ** ಧಾತು. ಅಂತರ್ಭಾವಿತಣಿಚ್ಪ್ರತ್ಯಯಾರ್ಥಕವಾದ ಈ ಧಾತುವಿನ ಮುಂದೆ **ತೃಷಿಶುಷಿರಸಿಭ್ಯಃ ಕಿಚ್ಚ** (ಉ. ಸೂ. ೩-೫೭೨) **ಞಿತೃಷಾಪಿಪಾಸಾಯಾಂ, ಶುಷ ಶೋಷಣೇ ರಸಶಬ್ದೇ** ಇವುಗಳ ಮುಂದೆ ನ ಪ್ರತ್ಯಯ ಬರುವುದು ಅದು ಕಿತ್ತಾಗುವುದು, ಮತ್ತು ನಿತ್ತೂ ಆಗುವುದು ಎಂಬುದರಿಂದ ನ ಪ್ರತ್ಯಯ ಬರುವುದು. ಶುಷ್+ನ ಪ್ರತ್ಯಯವು ಕಿತ್ತಾದ್ದರಿಂದ **ಲಘೂಪಧಗುಣ** ಬರುವುದಿಲ್ಲ. ನಿತ್ಸ್ವರ ಬರುವುದು. **ರಷಾಭ್ಯಾಂ ನೋಣಸ್ಸಮಾನಪದೇ** (ಪಾ. ಸೂ. ೮-೩-೧) ಎಂಬುದರಿಂದ ನಕಾರಕ್ಕೆ ಣಕಾರ, ಶುಷ್ಣ ಎಂದಾಗುವುದು.

**ಅತಿರಃ**— **ತೄಪ್ಲವನತರಣಯೋಃ** ಧಾತು. ಭ್ವಾದಿಯಲ್ಲಿರುವುದು. ಇದರಮುಂದೆ ಲಙ್ ಮಧ್ಯಮಪುರುಷ ಏಕವಚನ ಸಿಪ್ ಶಪ್. ವಿಕರಣಕ್ಕೆ ಬದಲಾಗಿ ವ್ಯತ್ಯಯದಿಂದ ಶವಿಕರಣ ತೃ+ಅಸ್ **ಸಾರ್ವಧಾತುಕ ಮಪಿತ್** (ಪಾ, ಸೂ. ೧-೨-೪) ಎಂಬುದರಿಂದ ಶಪ್ರತ್ಯಯವು ಙಿತ್ತಾಗುವುದು. ಆದ್ದರಿಂದ ಗುಣ ಬರುವುದಿಲ್ಲ.

ಋತಇದ್ಧಾತೋಃ (ಪಾ. ಸೂ. ೧೭-೧-೧೦೦) ಎಂಬುದರಿಂದ ಇತ್ವವೂ ಋಕಾರಕ್ಕೆ ಬರುವುದು. ಅದು ರೇಫ ಶಿರಸ್ಕವಾಗಿ ಬರುವುದು. ಲುಙ್ ಲಙ್ ಲೃಙ್ ಕ್ಷ್ವಡುದಾತ್ತಃ (ಪಾ. ಸೂ. ೬-೪-೭೧) ಎಂಬುದರಿಂದ ಅಡಾಗಮ ಅತಿರಸ್. ರುತ್ವವಿಸರ್ಗ.

ವಿದುಷ್ಟೇ ತಸ್ಯ— ಈ ಮೂರು ಪದಗಳೂ ಹಿಂದಿನ ಮಂತ್ರದಲ್ಲಿ ವ್ಯಾಖ್ಯಾತವಾಗಿವೆ. ಆದರೆ ಅಲ್ಲಿ ನಾಲ್ಕನೇ ಪಾದದ ಆದಿಯಲ್ಲಿರುವುದು, ಇಲ್ಲಿ ತೃತೀಯಪಾದದ ಆದಿಯಲ್ಲಿರುವುದು, ಇಷ್ಟೇ ವಿಶೇಷ.

ಮೇಧಿರಾಃ— ಮಿಧೃಮೇಧೃ ಮೇಧಾ ಹಿಂಸನಯೋಃ ಧಾತು- ಮಿಧೃಧಾತುವಿನ ಮುಂದೆ ಔಣಾದಿಕ ವಾದ ಇರನ್ ಪ್ರತ್ಯಯ ಬರುವುದು. ಪ್ರತ್ಯಯವು ನಿತ್ತಾದ್ದರಿಂದ ನಿತ್ಸ್ವರ ಬರುವುದು.

ಶ್ರವಾಂಸಿ— ನಬ್ವಿಷಯಸ್ಯಾನಿಸಂತಸ್ಯ ( ಪಿ. ಸೂ. ೨೬ ) ಎಂಬುದರಿಂದ ಆದ್ಯುದಾತ್ತ. ॥ ೭ ॥

॥ ಸಂಹಿತಾಪಾಠಃ ॥

ಇಂದ್ರಮೀಶಾನಮೋಜಸಾಭಿ ಸ್ತೋಮಾ ಅನೂಷತ ।
ಸಹಸ್ರಂ ಯಸ್ಯ ರಾತಯ ಉತ ವಾ ಸಂತಿ ಭೂಯಸೀಃ ॥ ೮ ॥

॥ ಪದಪಾಠಃ ॥

ಇಂದ್ರಂ । ಈಶಾನಂ । ಓಜಸಾ । ಅಭಿ । ಸ್ತೋಮಾಃ । ಅನೂಷತ ॥
ಸಹಸ್ರಂ । ಯಸ್ಯ । ರಾತಯಃ । ಉತ । ವಾ । ಸಂತಿ । ಭೂಯಸೀಃ ॥ ೮ ॥

॥ ಸಾಯಣಭಾಷ್ಯಂ ॥

ಸ್ತೋಮಾಃ ಸ್ತೋತಾರ ಋತ್ವಿಜ ಓಜಸಾ ಬಲೇನೇಶಾನಂ ಜಗತೋ ನಿಯಾಮಕಮಿಂದ್ರಮಭ್ಯನೂಷತ ।ಸರ್ವತ್ರ ಸ್ತುತವಂತಃ । ಯಸ್ಯೇಂದ್ರಸ್ಯ ರಾತಯೋ ಧನದಾನಾನಿ ಸಹಸ್ರಂ ಸಹಸ್ರಸಂಖ್ಯೋಪೇತಾನಿ ಸಂತಿ । ಉತ ವಾಥವಾ ಭೂಯಸೀಃ ಸಹಸ್ರಸಂಖ್ಯಾಯಾ ಅಪ್ಯಧಿಕಾಃ ಸಂತಿ । ತಮಿಂದ್ರಮಿತಿ ಪೂರ್ವತ್ರಾನ್ವಯಃ ॥ ಇಂದ್ರಂ । ಋಜ್ರೇಂದ್ರೇತ್ಯಾದಿನಾ ರನ್। ನಿತ್ತ್ವಾದಾದ್ಯುದಾತ್ತಃ । ಈಶಾನಂ । ಲಟಃ ಶಾನಚ್ । ಅದಿಪ್ರಭೃತಿಭ್ಯಃ ಶಪ ಇತಿ ಶಪೋ ಲುಕ್ । ಧಾತೋರನುದಾತ್ತೇತ್ತ್ವಾತ್ತಾಸ್ಯನುದಾತ್ತೇತ್ಯಾದಿನಾ ಶಾನಚೋಽನುದಾತ್ತತ್ವಂ । ಓಜಸಾ । ನಬ್ವಿಷಯತ್ವಾದಾದ್ಯುದಾತ್ತಃ । ಸ್ತೋಮಾಃ । ಅರ್ತಿಸ್ತುಸ್ವಿತ್ಯಾದಿನಾ ಮನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತಃ । ಅನೂಷತ । ಣು ಸ್ತುತೌ । ಣೋ ನಃ । ಲುಙ್ । ವ್ಯತ್ಯಯೇನ ಝಃ । ತಸ್ಯಾದಾದೇಶಃ । ಪಾ- ೭-೧-೫ । ಚ್ಲೇಃ ಸಿಚ್ । ಅಸ್ಯ ಧಾತೋಃ ಕುಟಾದಿತ್ವೇನ ಸಿ-

ಚೋ ಜಿತ್ವಾದ್ಗುಣಾಭಾವಃ | ಇಡಭಾವಶ್ಛಾಂದಸಃ | ದೀರ್ಘತ್ವಂ ಚ | ಅಡಾಗಮಃ | ಸಹಸ್ರಂ | ಕರ್ದಮಾದೀನಾಂ ಚ | ಫಿ. ೩-೧೦ | ಇತಿ ದ್ವಿತೀಯೋಕ್ಷರಮುದಾತ್ತಂ | ರಾತಯಃ | ಮಂತ್ರೇ ವೃಷೇತ್ಯಾದಿನಾ ಕ್ತಿನ್ನುದಾತ್ತಃ | ಉತ | ಪ್ರಾತಿಪದಿಕಸ್ವರಃ | ವಾ | ಚಾದಿರನುದಾತ್ತಃ | ಸಂತಿ | ಪ್ರತ್ಯಯೋದ್ಯುದಾತ್ತತ್ವಂ | ತಿಙ್ಙತಿಙ ಇತಿ ನಿಘಾತೋ ನ ಭವತಿ ಯದ್ವೃತ್ತಾನ್ನಿತ್ಯಮಿತಿ ಪ್ರತಿಷೇಧಾತ್ | ಸ ಹಿ ವ್ಯವಹಿತೇಽಪಿ ಭವತೀತ್ಯುಕ್ತಂ | ಭೂಯಸೀಃ | ಸಹಸ್ರಾದತಿಶಯೇನ ಬಹ್ವ್ಯೋ ಭೂಯಸ್ಯಃ | ಅತ್ರ ವಿಭಕ್ತ್ಯವ್ಯಸ್ಯ ಸಹಸ್ರಸ್ಯ ಸಂನಿಧಿಬಲಾದುಪಪದತ್ವಪ್ರತೀತೇರ್ದ್ವಿವಚನವಿಭಜ್ಯೋಪಪದೇ ತರಬೀಯಸುನೌ | ಪಾ. ೫-೩-೫೭ | ಇತಿ ಬಹುಶಬ್ದಾದೀಯಸುನ್ | ಬಹೋರ್ಲೋಪೋ ಭೂ ಚ ಬಹೋಃ | ಪಾ. ೬-೪-೧೫೮ | ಇತೀಕಾರಲೋಪಃ | ಪ್ರಕೃತೇರ್ಭೂ ಇತ್ಯಾದೇಶಶ್ಚ | ಈಯಸುನೋ ನಿತ್ವಾದಾದ್ಯುದಾತ್ತತ್ವಂ | ಉಗಿತಶ್ಚೇತಿ ಙೀಪ್ || ೨೧ ||

|| ಪ್ರತಿಪದಾರ್ಥ ||

ಯಸ್ಯ— ಯಾವ ಇಂದ್ರನ | ರಾತಯಃ— ಧನಪ್ರದಾನಗಳು | ಸಹಸ್ರಂ— ಸಾವಿರಾರು ಪಾಲಿನಷ್ಟು | ಉತ ವಾ— ಅಥವಾ | ಭೂಯಸೀಃ— ಇನ್ನೂ ಹೆಚ್ಚಾಗಿ | ಸಂತಿ— ಇರುವವೋ ( ಅಂತಹ ) | ಈಶಾನಂ— ಜಗತ್ತಿಗೆ ನಿಯಾಮಕನಾದ | ಇಂದ್ರಂ— ಇಂದ್ರನನ್ನು | ಸ್ತೋಮಾಃ— ಸ್ತೋತ್ರಮಾಡುವ ಋತ್ವಿಜರು | ಓಜಸಾ— ತಮ್ಮ ಶಕ್ತಿ ಇರುವಷ್ಟುಮಟ್ಟಿಗೆ | ಅಭಿ ಅನೂಷತ— ಸ್ತೋತ್ರಮಾಡುವರು ||

|| ಭಾವಾರ್ಥ ||

ಇಂದ್ರನು ತನ್ನನ್ನು ಸ್ತೋತ್ರ ಮಾಡುವವರಿಗೆ ಸಾವಿರ ಸಂಖ್ಯೆಯುಷ್ಟು ಅಥವಾ ಅದಕ್ಕೂ ಹೆಚ್ಚಾಗಿ ಧನಾದಿಗಳನ್ನು ಕೊಡುವನು. ಇಂತಹ ಇಂದ್ರನನ್ನು ಋತ್ವಿಜರೇ ಮೊದಲಾದ ಜನರು ತಮ್ಮ ಶಕ್ತಿಯನ್ನೆಲ್ಲಾ ಉಪಯೋಗಿಸಿ ಸ್ತೋತ್ರಮಾಡುವರು.

## English Translation

The reciters of Sacred hymns praise with all their might Indra, the ruler of the world whose bounties are counted by thousends or even more.

ಈಶಾನಂ— ಜಗತ್ತಿಗೆ ಸ್ವಾಮಿ, ಅಧಿಪತಿ, Thr ruler of the world.

|| ವಿಶೇಷವಿಷಯಗಳು ||

ಓಜಸಾ— ಬಲೇನ, ಬಲದಿಂದ, ತಮ್ಮ ಶಕ್ತಿ ಇರುವಷ್ಟು. ಉತ್ಸಾಹದಿಂದ ಕೂಡಿ ಇತ್ಯಾದಿ.

ಸ್ತೋಮಾಃ— ಈ ಶಬ್ದಕ್ಕೆ ಭಾಷ್ಯಕಾರರು ಸ್ತೋತಾರೋ ಋತ್ವಿಜಃ ಎಂದರೆ ಸ್ತೋತ್ರಮಾಡುವ ಋತ್ವಿಜರು ಎಂದು ಅರ್ಥಮಾಡಿರುವರು. ಸ್ತೋಮಶಬ್ದವು ನಪುಂಸಕಲಿಂಗವಾಗಿರುವಾಗ ಸ್ತೋತ್ರವೆಂದೂ ಪುಲ್ಲಿಂಗವಾದಾಗ ಸ್ತೊತ್ರಮಾಡುವವರೆಂದೂ ಅರ್ಥವು.

ಸಹಸ್ರಂ— ಸಹಸ್ರಸಂಖ್ಯಾಕವಾಗಿ, ಬಹಳವಾಗಿ,

[illegible] | ಭೂಯಸೀಃ— ಸಹಸ್ರಸಂಖ್ಯೆಗಿಂತಲೂ ಹೆಚ್ಚಾಗಿ, ಎಣಿಸಲಾರದಷ್ಟು ಹೆಚ್ಚಾಗಿ, ಅತಿಶಯವಾಗಿ [illegible]

‖ ವ್ಯಾಕರಣಪ್ರಕ್ರಿಯಾ ‖

**ಇಂದ್ರಂ**— **ಋಜ್ರೇಂದ್ರಾಗ್ರ**-(ಉ. ಸೂ. ೨-೧೮೬) ಎಂಬುದರಿಂದ ರನ್‌ಪ್ರತ್ಯಯಾಂತ. ನಿತ್ತ್ವಾದ್ದರಿಂದ ಆದ್ಯುದಾತ್ತ.

**ಈಶಾನಂ**— ಈಶ ಐಶ್ವರ್ಯೇ ಧಾತು. ಇದು ಅನುದಾತ್ತೇತ್ತು. ಆದ್ದರಿಂದ ಆತ್ಮನೇಪದ ಇದರ ಮುಂದೆ ಲಟ್. ಲಟ್ಟಿಗೆ ಲಟಶ್ಶತೃಶಾನಚೌ ಎಂಬುದರಿಂದ ಶಾನಚ್‌ಪ್ರತ್ಯಯ ಈಶ್+ಆನ. **ಅದಿಪ್ರಭೃತಿಭ್ಯಃ ಶಪಃ** (ಪಾ. ಸೂ. ೨-೪-೭೨) ಎಂಬುದರಿಂದ ಶಪ್‌ಗೆ ಲುಕ್. **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂದು ಲಸ್ಥಾನಿಕಸಾರ್ವಧಾತುಕವಾದ ಶಾನಚ್‌ಪ್ರತ್ಯಯವು ಅನುದಾತ್ತ.

**ಓಜಸಾ**— **ನಬ್ವಿಷಯಸ್ಯಾನಿಸನ್ತಸ್ಯ** (ಫಿ. ಸೂ. ೨೬) ಎಂಬುದರಿಂದ ಆದ್ಯುದಾತ್ತ.

**ಸ್ತೋಮಾಃ**— **ಅರ್ತಿಸ್ತುಸು** (ಉ. ಸೂ. ೧-೧೩೭) ಎಂಬುದರಿಂದ ಸ್ತು ಧಾತುವಿನ ಮುಂದೆ ಮನ್ ಪ್ರತ್ಯಯ. ನಿತ್ಸ್ವರ ಆದ್ಯುದಾತ್ತ ಬರುವುಗು

**ಅನೂಷತ**— ಣು ಸ್ತುತೌ ಧಾತು. **ಣೋನಃ** (ಪಾ. ಸೂ. ೬-೧-೬೫) ಎಂಬುದರಿಂದ ಣಕಾರಕ್ಕೆ ನಕಾರ. **ಲುಜ್‌ಚ್ಲಿಲುಙಿ** (ಪಾ. ಸೂ. ೩-೧-೪೩) ಎಂಬುದುರಿಂದ ಚ್ಲಿ ಪ್ರತ್ಯಯ. ಅದಕ್ಕೆ ಚ್ಲೇಸ್ಸಿಚ್ (೩-೧-೪೪) ಎಂಬುದರಿಂದ ಸಿಚ್ ಆದೇಶ. ಇದು ಪರಸ್ಮೈಪದ ಧಾತುವಾದ್ದರಿಂದ ಪ್ರಥಮಪುರುಷಬಹುವಚನದಲ್ಲಿ ನ್ಯಾಯವಾಗಿ ಝಿ ಪ್ರತ್ಯಯ ಬರಬೇಕು. ಆದರೂ ಇಲ್ಲಿ ವ್ಯತ್ಯಯದಿಂದ ಆತ್ಮನೇಪದ ಪ್ರಥಮಪುರುಷ ಬಹುವಚನಸಂಜ್ಞಕವಾದ ಝ ವೇ ಬರುವುದು ಝಗೆ **ಆತ್ಮನೇಪದೇಷ್ವನತಃ** (ಪಾ. ಸೂ ೭-೧-೫) ಎಂಬುದರಿಂದ ಅತ್ ಆದೇಶ. ನುಸ್+ಅತ ಈಧಾತುವು ಕುಟಾದಿಯಲ್ಲಿರುವುದು. ಆದ್ದರಿಂದ **ಗಾಙ್ಕುಟಾದಿಭ್ಯೋಽಞ್ಣಿನ್ಙಿತ್** (ಪಾ. ಸೂ. ೧-೨-೧) ಎಂಬುದರಿಂದ ಸಿಚ್ಚು ಙಿತ್ತಾಗುವುದು ಆದ್ದರಿಂದ ಗುಣ ಬರುವುದಿಲ್ಲ. ಛಾಂದಸಪ್ರಕ್ರಿಯೆಯಿಂದ ಇಡಾಗಮ ಬರುವುದಿಲ್ಲ. ಧಾತುಗೆ ದೀರ್ಘವೂ ಛಾಂದಸ. ಅಡಾಗಮ ಅನೂಷತ ಎಂದಾಗುವುದು.

**ಸಹಸ್ರಂ**— **ಕರ್ದಮಾದೀನಾಂಚ** (ಫಿ. ಸೂ ೫೯) ಮೊದಲನೆಯ ವರ್ಣ ಅಥವಾ ಎರಡನೆಯ ವರ್ಣ ಉದಾತ್ತ ಎಂಬುದರಿಂದ ಎರಡನೆಯ ವರ್ಣ ಉದಾತ್ತ.

**ರಾತಯಃ**— **ಮಂತ್ರೇ ವೃಷೇಷಪಚಮನವಿದಭೂವಿರಾ ಉದಾತ್ತಃ** ( ಪಾ. ಸೂ. ೩-೩-೯೬ ) ಎಂಬುದರಿಂದ ರಾ ಧಾತುವಿನ ಮುಂದೆ ಉದಾತ್ತವಾದ ಕ್ತಿನ್ ಪ್ರತ್ಯಯ.

**ಉತ**— ಪ್ರಾತಿಪದಿಕಸ್ವರಬರುವುದು. ವಾ-**ಚಾದಯೋಽನುದಾತ್ತಾಃ** (ಫಿ. ಸೂ. ೮೪) ಎಂಬುದರಿಂದ ಅನುದಾತ್ತ.

**ಸನ್ತಿ**— **ಅಸಭುವಿ** ಧಾತು. ಲಟ್ ಝಿ **ಅನ್ತಾದೇಶ. ಶಪ್**‌ಗೆ ಲುಕ್ **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಎಂಬುದರಿಂದ ಧಾತ್ವಕಾರಕ್ಕೆ ಲೋಪ, ಸನ್ತಿ. ತಿಙ್‌ಪ್ರತ್ಯಯಸ್ವರ ಬರುವುದು. **ಯದ್ವೃತ್ತಾನ್ನಿತ್ಯಂ** (ಪಾ. ಸೂ. ೮-೧-೬೬) ಎಂಬ ನಿಷೇಧವು ಪೂಜನಾತ್ಪೂಜಿತಃ ಎಂಬ ಸೂತ್ರದಲ್ಲಿ ಪುನಃ ಪೂಜಿತಗ್ರಹಣವಿರುವುದರಿಂದ ವ್ಯವಹಿತವಾಗಿದ್ದರೂ ಬರುವುದೆಂದು ಹಿಂದೆ ವಿವರಿಸಲಾಗಿರುವುದು. ಆದ್ದರಿಂದ **ತಿಙ್ಙತಿಙಃ** ಎಂಬುದರಿಂದ ಅನುದಾತ್ತ ಬರುವುದಿಲ್ಲ

**ಭೂಯಸೀಃ**—ಸಹಸ್ರಾದಪಿ ಅತಿಶಯೇನ ಬಹ್ವ್ಯಃ ಎಂದು ವಿಗ್ರಹ. **ದ್ವಿವಚನವಿಭಜ್ಯೋಪಪದೇತ ರಬೀಯಸುನೌ** (ಪಾ. ಸೂ. ೫-೩-೫೭) ದ್ವ್ಯರ್ಥಪ್ರತಿಪಾದಕವಾದ ಶಬ್ದ, ವಿಭಕ್ತವ್ಯವಾಚಕಶಬ್ದ ಇವು ಉಪ ಪದವಾಗಿರುವಾಗ ಎರಡರ ಮಧ್ಯದಲ್ಲಿ ಅನ್ಯತರಾಪೇಕ್ಷಯಾ ಅತಿಶಯ ವಿಶಿಷ್ಟಸ್ವಾರ್ಥಬೋಧಕವೂ, ವಿಭಾಗಪ್ರ- ಯೋಜಕಧರ್ಮವಾಚಕವೂ ಆದ ಸುಬಂತ ತಿಙಂತಗಳ ಮುಂದೆ ಸ್ವಾರ್ಥದಲ್ಲಿ ತರಪ್ ಈಯಸುನ್‌ಪ್ರತ್ಯಯಗಳು ಬರುವುವು ಎಂದು ಸೂತ್ರಾರ್ಥ. ಉಪಪದ ಎಂಬುದರಿಂದ ಸಮೀಪದಲ್ಲಿ ಉಚ್ಚರಿತ ಪದಕ್ಕೆ ಗ್ರಹಣ. **ತತ್ರೋ- ಪಪದಂಸಪ್ತಮೀಸ್ಥಂ** ( ಪಾ. ಸೂ. ೩-೧-೯೨ ) ಎಂಬುದಕ್ಕೆ ಗ್ರಹಣವಿಲ್ಲ. ಧಾತ್ವಧಿಕಾರದಲ್ಲಿ ಮಾತ್ರ ಇದು ಸಂಭವಿಸುವುದೇ ವಿನಾ ಮಿಕ್ಕ ಸ್ಥಳದಲ್ಲಿ ಇದು ಸಂಭವಿಸುವುದಿಲ್ಲ. ದ್ವಿತ್ವವಿಶಿಷ್ಟಾರ್ಥಪ್ರತಿಪಾದಕಶಬ್ದಕ್ಕೂ ವಿಭಕ್ತ ವ್ಯವಾಚಕಕ್ಕೂ ವಿಗ್ರಹವಾಕ್ಯದಲ್ಲಿ ಮಾತ್ರ ಪ್ರಯೋಗವು ಆವಶ್ಯಕ, ತದ್ಧಿತವೃತ್ತಿಯಲ್ಲಿ ಗತಾರ್ಥವಾಗುವುದರಿಂದ ಅವುಗಳ ಪ್ರಯೋಗವು ಅನವಶ್ಯಕ. ಇಂದ್ರನಲ್ಲಿ ಸಹಸ್ರಸಂಖ್ಯಾಕವಾದ ಧನಧಾನ್ಯಗಳು ಇರುವುವು ಅಥವಾ ಸಹಸ್ರಕ್ಕಿಂತಲೂ ಹೆಚ್ಚಾದ ಧನವಿರುವುದು ಎಂದು ಉತ್ತರಾರ್ಧಮಂತ್ರದ ಅರ್ಥ. ವಿಭಕ್ತವ್ಯವಾದ ಸಹಸ್ರವು ಉಪಪದವಾಗಿರುವಾಗ ಈ ಸೂತ್ರದಿಂದ ಬಹುಶಬ್ದದ ಮುಂದೆ ಈಯಸುಪ್ರತ್ಯಯ ಬರುವುದು. ಬಹು+ಈಯಸ್ ಎಂದಿರುವಾಗ **ಬಹೋರ್ಲೋಪೋಭೂಚ ಬಹೋಃ** (ಪಾ. ಸೂ. ೬-೪-೧೫೮) ಬಹುಶಬ್ದದ ಮುಂದೆ ಇರುವ ಇಮ-ನಿಚ್ ಈಯಸುನ್ ಪ್ರತ್ಯಯಗಳಿಗೆ ಲೋಪ ಬರುವುದು ಬಹುಶಬ್ದಕ್ಕೆ ಭೂ ಆದೇಶವೂ ಬರುವುದು ಎಂಬುದ ರಿಂದ ಈಯಸುನ್‌ಪ್ರತ್ಯಯಕ್ಕೆ ಬರುವ ಲೋಪವು **ಆದೇಃ ಪರಸ್ಯ** (ಪಾ. ಸೂ. ೧-೧-೫೪) ಪಂಚಮ್ಯಂತಪದವನ್ನುಚ್ಚ ರಿಸಿ ಎಲ್ಲಿ ಪರಕ್ಕೆ ಕಾರ್ಯವನ್ನು ವಿಧಿಸಿರುವುದೋ ಅಲ್ಲಿ ಆ ಕಾರ್ಯವು ಯಾವುದಕ್ಕೆ ವಿಹಿತವಾಗಿದೆಯೋ ಅದರ ಆದಿವರ್ಣಕ್ಕೆ ಬರುವುದು ಎಂಬುದರಿಂದ ಈಕಾರಕ್ಕೆ ಲೋಪ, ಇದೇ ಸೂತ್ರದಿಂದಲೇ ಭೂ ಆದೇಶವೂ ಬಂದರೆ ಭೂಯಸ್. ಈಯಸುನ್‌ಪ್ರತ್ಯಯವು ನಿತ್. ಆದ್ದರಿಂದ **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದ ರಿಂದ ಭೂಯಸ್ ಎಂಬುದು ಆದ್ಯುದಾತ್ತ. ಭೂಯಸ್ ಎಂಬುದು ಉಗಿದಂತವಾದ ಪ್ರಾತಿಪದಿಕ. ಆದ್ದರಿಂದ **ಉಗಿತಶ್ಚ** (ಪಾ. ಸೂ. ೪-೧-೬) ಉಗಿದಂತವಾದ ಪ್ರಾತಿಪದಿಕದಮುಂದೆ ಸ್ತ್ರೀಲಿಂಗದಲ್ಲಿ ಙೀಪ್ ಬರುವುದು ಎಂಬುದರಿಂದ ಙೀಪ್ ಪ್ರತ್ಯಯ ಬರುವುದು. ಭೂಯಸ್+ಙೀಪ್ ಙಕಾರಕ್ಕೆ **ಲಶಕ್ವತದ್ಧಿತೇ** ಎಂಬುದರಿಂದಲೂ ಪಕಾರಕ್ಕೆ ಹಲನ್ತ್ಯಂ (ಪಾ. ಸೂ. ೧-೩-೩) ಎಂಬುದರಿಂದಲೂ ಇತ್ಸಂಜ್ಞೆ **ತಸ್ಯಲೋಪಃ** (ಪಾ. ಸೂ. ೧- ೩-೯) ಎಂಬುದರಿಂದ ಲೋಪ. ಙೀಪ್‌ಪ್ರತ್ಯಯ ಪಿತ್ತು. ಆದ್ದರಿಂದ **ಅನುದಾತ್ತೌ ಸುಪ್ಪಿತೌ** (ಪಾ. ಸೂ. ೩- ೧-೪) ಎಂಬುದರಿಂದ ಅನುದಾತ್ತ ॥ ೮ ॥



# ಹನ್ನೆರಡನೆಯ ಸೂಕ್ತವು.

—

॥ ಸಾಯಣಭಾಷ್ಯಂ ॥

ಚತುರ್ಥಾನುವಾಕೇ ಷಟ್ ಸೂಕ್ತಾನಿ । ತತ್ರಾಗ್ನಿಂ ದೂತಮಿತ್ಯಾದಿಕಸ್ಯ ದ್ವಾದಶರ್ಚಸ್ಯ ಪ್ರಥಮಸ್ಯ ಸೂಕ್ತಸ್ಯ ಕಣ್ವಪುತ್ರೋ ಮೇಧಾತಿಥಿರ್ಋಷಿಃ । ಅಪವಾದಾಭಾವಾದನುವರ್ತಮಾನಂ ಪ್ರಾಗ್ಹಿರಣ್ಯಸ್ತೂಪಾದಿತ್ಯುಕ್ತಂ ಗಾಯತ್ರಮೇವ ಛಂದಃ । ಅಗ್ನಿದೇವತಾಕತ್ವಂ ವಿಸ್ಪಷ್ಟಂ । ಅತ ಏವಾನುಕ್ರಮ್ಯತೇ । ಅಗ್ನಿಂ ದ್ವಾದಶ ಮೇಧಾತಿಥಿಃ ಕಾಣ್ವ ಆಗ್ನೇಯಮಗ್ನಿನೇತಿ ಪಾದೋ ದ್ವ್ಯಗ್ನಿದೈವತೋ ನಿರ್ಮಥ್ಯ ಆಹವನೀಯಶ್ಚೇತಿ ॥ ವಿನಿಯೋಗಸ್ತು । ಪ್ರಾತರನುವಾಕ ಆಗ್ನೇಯೇ ಕ್ರತೌ ಗಾಯತ್ರೇ ಛಂದಸ್ಯಗ್ನಿಂ ದೂತಮಿತಿ ಸೂಕ್ತಂ । ಅಥೈತಸ್ಯಾ ರಾತ್ರೇರ್ವಿವಾಸಕಾಲ ಇತಿ ಖಂಡೇಽಗ್ನಿಮೀಳೇಽಗ್ನಿಂ ದೂತಂ । ಆ. ೪. ೧೩. । ಇತಿ ಸೂತ್ರಿತಂ ॥ ತಥಾ ಪೃಷ್ಠ್ಯಷಡಹಸ್ಯ ದ್ವಿತೀಯೇಽಹನೀದಮೇವ ಸೂಕ್ತಮಾಜ್ಯಶಸ್ತ್ರಂ । ಪೃಷ್ಠ್ಯಸ್ಯಾಭಿಪ್ಲವೇನೋಕ್ತೇ ಅಹನೀ ಇತಿ ಖಂಡೇ ಸೂತ್ರಿತಂ । ಅಗ್ನಿಂ ದೂತಮಿತಿ ದ್ವಿತೀಯೇ । ಆ. ೭. ೧೦ । ಇತಿ ॥ ದರ್ಶಪೂರ್ಣಮಾಸಯೋಃ ಸಾಮಿಧೇನೀಷ್ವಗ್ನಿಂ ದೂತಮಿತ್ಯೇಕಾ ನಮಃ ಪ್ರವಕ್ತ್ರ ಇತಿ ಖಂಡೇ ಸೂತ್ರಿತಂ । ಈಳೇನ್ಯೋ ನಮಸ್ಯಸ್ತಿರೋಽಗ್ನಿಂ ದೂತಂ ವೃಣೀಮಹೇ ॥ ಆ. ೧-೧೨ । ಇತಿ ॥

## ಅನುವಾದವು

ಹನ್ನೆರಡನೆಯ ಸೂಕ್ತದಿಂದ ನಾಲ್ಕನೆಯ ಅನುವಾಕವು ಪ್ರಾರಂಭವಾಗುವುದು. ಈ ಅನುವಾಕದಲ್ಲಿ ಆರು ಸೂಕ್ತಗಳಿರುವವು. ಈ ಆರು ಸೂಕ್ತಗಳಲ್ಲಿ ಮೊದಲನೆಯದಾದ **ಅಗ್ನಿಂ ದೂತಂ** ಎಂಬ ಹನ್ನೆರಡು ಋಕ್ಕಿನ ಸೂಕ್ತಕ್ಕೆ ಕಣ್ವಪುತ್ರನಾದ ಮೇಧಾತಿಥಿಯು ಋಷಿಯು. ಗಾಯತ್ರಿಯು ಛಂದಸ್ಸು. ಅಗ್ನಿಯೇ ದೇವತೆಯು ಈ ವಿಷಯವು ಅನುಕ್ರಮಣಿಕೆಯ **ಅಗ್ನಿಂ ದ್ವಾದಶ ಮೇಧಾತಿಥಿಃ ಕಾಣ್ವಃ** ಎಂಬ ಖಂಡದಲ್ಲಿ ಹೇಳಲ್ಪಟ್ಟಿದೆ ವಿನಿಯೋಗಕ್ರಮವೇನೆಂದರೆ—ಆಗ್ನೇಯ ಕ್ರತುವಿನ ಪ್ರಾತರನುವಾಕಮಂತ್ರಪಠನಕಾಲದಲ್ಲಿ ಗಾಯತ್ರೀಛಂದಸ್ಸಿನ ಋಕ್ಕುಗಳನ್ನು ಹೇಳುವಾಗ **ಅಗ್ನಿಂ ದೂತಂ** ಎಂಬ ಈ ಸೂಕ್ತವನ್ನು ಪಠಿಸಬೇಕು. ಈ ವಿಷಯವು ಆಶ್ವಲಾಯನ ಶ್ರೌತಸೂತ್ರದ **ಅಥೈತಸ್ಯಾ ರಾತ್ರೇರ್ವಿವಾಸಕಾಲೇ** ಎಂಬ ಖಂಡದಲ್ಲಿ (ಆ. ೪-೧೩) ಹೇಳಲ್ಪಟ್ಟಿರುವುದು ಮತ್ತು ಪೃಷ್ಠ್ಯಷಡಹಕ್ರತುವಿನ ಎರಡನೇ ದಿವಸದಲ್ಲಿ ಈ ಸೂಕ್ತವನ್ನು ಆಜ್ಯಶಸ್ತ್ರಮಂತ್ರಗಳನ್ನಾಗಿ ಪಠಿಸುವರು. ಈ ವಿಷಯವು ಆಶ್ವಲಾಯನಸೂತ್ರದ ೭-೧೦ ರಲ್ಲಿ **ಅಗ್ನಿಂ ದೂತಮಿತಿ ದ್ವಿತೀಯೇ** ಎಂದು **ಪೃಷ್ಠ್ಯಸ್ಯಾಭಿಪ್ಲವೇನೋಕ್ತೇ ಅಹನೀ** ಎಂಬ ಖಂಡದಲ್ಲಿ ಹೇಳಲ್ಪಟ್ಟಿರುವುದು. ಮತ್ತು ದರ್ಶಪೂರ್ಣಮಾಸಯಾಗಗಳಲ್ಲಿ ಸಾಮಿಧೇನೀ ಎಂಬ ಋಕ್ಕುಗಳನ್ನು ಪಠಿಸುವಾಗ **ಅಗ್ನಿಂ ದೂತಂ** ಎಂಬ ಋಕ್ಕನ್ನು ಪಠಿಸಬೇಕೆಂದು **ನಮಃ ಪ್ರವಕ್ತ್ರೇ** ಎಂಬ ಖಂಡದಲ್ಲಿ ಹೇಳಿರುವುದು. ಈ ವಿಷಯವೂ ಸಹ ಆಶ್ವಲಾಯನ ಶ್ರೌತಸೂತ್ರದ ೧-೨ ಖಂಡದಲ್ಲಿ **ಈಳೇನ್ಯೋನಮಸ್ಯಸ್ತಿರೋಽಗ್ನಿಂ ದೂತಂ ವೃಣೀಮಹೇ** ಎಂದು ಹೇಳಲ್ಪಟ್ಟಿರುವುದು.

॥ ಓಂ ॥

## ಸೂಕ್ತ—೧೨

॥ ಮಂಡಲ—೧ ॥ ಅನುವಾಕ—೪ ॥ ಸೂಕ್ತ—೧೨ ॥

॥ ಅಷ್ಟಕ —೧ ॥ ಅಧ್ಯಾಯ—೧ ॥ ವರ್ಗ— ೨೨, ೨೩॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೧-೧೨ ॥

॥ ಋಷಿಃ—೧-೧೨ ಮೇಧಾತಿಥಿಃ ಕಾಣ್ವಃ ॥

॥ ದೇವತಾ—ಅಗ್ನಿಃ । ೬-ಅಗ್ನಿರ್ನಿರ್ಮಥ್ಯೋಽಗ್ನಿರಾಹವನೀಯಶ್ಚ ॥

॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಅಗ್ನಿಂ ದೂತಂ ವೃಣೀಮಹೇ ಹೋತಾರಂ ವಿಶ್ವವೇದಸಂ ।
ಅಸ್ಯ ಯಜ್ಞಸ್ಯ ಸುಕ್ರತುಂ ॥ ೧ ॥

॥ ಪದಪಾಠಃ ॥

ಅಗ್ನಿಂ । ದೂತಂ । ವೃಣೀಮಹೇ । ಹೋತಾರಂ । ವಿಶ್ವಽವೇದಸಂ ॥
ಅಸ್ಯ । ಯಜ್ಞಸ್ಯ । ಸುಽಕ್ರತುಂ ॥ ೧ ॥

॥ ಸಾಯಣಭಾಷ್ಯಂ ॥

ಅಗ್ನೇರ್ದೂತತ್ವಮೇತನ್ಮಂತ್ರವ್ಯಾಖ್ಯಾನೇ ತೈತ್ತಿರೀಯಬ್ರಾಹ್ಮಣೇ ಸಮಾಮ್ನಾಯತೇ । ಅಗ್ನಿರ್ದೇವಾನಾಂ ದೂತ ಆಸೀದುಶನಾಃ ಕಾವ್ಯೋಽಸುರಾಣಾಂ । ತೈ· ಸಂ ೨. ೫. ೮. ೫ । ಇತಿ । ತಾದೃಶಂ ದೇವದೂತಮಗ್ನಿಮಸ್ಮಿನ್ಕರ್ಮಣಿ ವೃಣೀಮಹೇ । ಸಂಭಜಾಮಃ । ಕೀದೃಶಂ । ಹೋತಾರಂ ದೇವಾನಾಮಾಹ್ವಾತಾರಂ ವಿಶ್ವವೇದಸಂ ಸರ್ವಧನೋಪೇತಂ ಅಸ್ಯ ಪ್ರವರ್ತಮಾನಸ್ಯ ಯಜ್ಞಸ್ಯ ನಿಷ್ಪಾದಕತ್ವೇನ ಸುಕ್ರತುಂ ಶೋಭನಕರ್ಮಾಣಂ ಶೋಭನಪ್ರಜ್ಞಂ ವಾ ॥ ಮಘಮಿತ್ಯಾದಿಷ್ವಷ್ಟಾವಿಂಶತಿಸಂಖ್ಯಾಕೇಷು ಧನನಾಮಸು ವೇದಸ್ಶಬ್ದಃ ಪಠಿತಃ ॥ ಹೋತಾರಂ । ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ । ತಾಚ್ಛೀಲ್ಯಾದಿಷು ತೃನ್ । ಬಹುಲಂ ಛಂದಸೀತಿ ಸಂಪ್ರಸಾರಣೇ ಪರಪೂರ್ವತ್ವೇ ಗುಣಃ । ನಿತ್ತ್ವಾದಾದ್ಯುದಾತ್ತಃ । ವಿಶ್ವವೇದಸಂ । ಬಹುವ್ರೀಹೌ । ವಿಶ್ವಂ ಸಂಜ್ಞಾಯಾಂ । ಪಾ· ೬. ೨. ೧೦೬. । ಇತಿ ಪೂರ್ವಪದಾಂತೋದಾತ್ತತ್ವಂ । ಅಸ್ಯ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ । ಸುಕ್ರತುಂ । ಕ್ರತ್ವಾದಯಶ್ಚ । ಪಾ. ೬. ೨. ೧೧೮ । ಇತ್ಯಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ದೂತಂ**— ದೇವತೆಗಳಿಗೆ ದೂತನಾದ | **ಹೋತಾರಂ**—ದೇವತೆಗಳನ್ನು ಯಜ್ಞಯಾಗಾದಿಗಳಿಗೆ ಕರೆತರುವ | **ವಿಶ್ವವೇದಸಂ**—ಸಮಸ್ತ ಧನಯುಕ್ತನಾದ | **ಅಸ್ಯ ಯಜ್ಞಸ್ಯ**—ಈ ಯಜ್ಞದ | **ಸುಕ್ರತುಂ**—ಕರ್ಮಕರ್ತನಾದ ಅಥವಾ ಈ ಯಜ್ಞವಿಧಾನವನ್ನು ಚೆನ್ನಾಗಿ ತಿಳಿದಿರುವ | **ಅಗ್ನಿಂ**—ಅಗ್ನಿನಾಮಕ ದೇವತೆಯನ್ನು | (ನಾವು) **ವೃಣೀಮಹೇ**—ಆರಿಸಿ ಆಹ್ವಾನ ಮಾಡುವೆವು (ಕರೆಯುವೆವು)

॥ ಭಾವಾರ್ಥ ॥

ಅಗ್ನಿಯು ದೇವತೆಗಳಿಗೆ ದೂತನಾಗಿರುವನು ಮತ್ತು ಅವರನ್ನು ನಾವು ಮಾಡುವ ಯಜ್ಞಯಾಗಾದಿ ಕರ್ಮಗಳಿಗೆ ಕರೆತರುವನು. ಈ ಅಗ್ನಿಯು ಬಹಳ ಧನವುಳ್ಳವನು, ಈ ಯಜ್ಞದಲ್ಲಿ ಮುಖ್ಯಪಾತ್ರವಹಿಸುವವನು. ಅಥವಾ ಯಜ್ಞದ ಸ್ವರೂಪವನ್ನು ಚೆನ್ನಾಗಿ ತಿಳಿದಿರುವವನು. ಇಂತಹ ಅಗ್ನಿಯನ್ನು ನಾವು ಆರಿಸಿಕೊಂಡಿರುವೆವು (ಪ್ರಾರ್ಥಿಸುವೆವು.)

English Translation

We select (invoke) Agni, the messenger of Gods, their invoker, the possessor of riches, the perfector of this rite or the highly wise.

॥ ವಿಶೇಷವಿಷಯಗಳು ॥

ಈ ೧೨ ನೆಯ ಸೂಕ್ತದಿಂದ ೨೩ ನೆಯ ಸೂಕ್ತದವರೆವಿಗೂ ಕಣ್ವಪುತ್ರನಾದ ಮೇಧಾತಿಥಿಯು ಋಷಿಯು. ಈ ಸೂಕ್ತಗಳು ಇದುವರೆಗೆ ವಿವರಿಸಿದ ಮಧುಚ್ಛಂದಋಷಿಯ ಸೂಕ್ತಗಳಂತೆ ಹೆಚ್ಚು ತೊಡಕುಗಳಿಲ್ಲದೆ ವಿಶೇಷ ಪದಗಳನ್ನು ಅಧ್ಯಾಹಾರಮಾಡಿಕೊಳ್ಳಬೇಕಾದ ಅವಶ್ಯಕತೆಯೂ ಇಲ್ಲದೆ ತಕ್ಕಮಟ್ಟಿಗೆ ಸುಲಭಶೈಲಿಯಲ್ಲಿದ್ದು ಎಲ್ಲರಿಗೂ ಅರ್ಥವಾಗುವಂತಿರುವವು. ಕೆಲವು ಋಷಿಗಳ ಭಾಷಾಶೈಲಿಯು ಬಹು ಕ್ಲಿಷ್ಟವಾಗಿರುವುದು, ಕೆಲವರ ಶೈಲಿಯು ಸುಲಭವಾಗಿ ತಿಳಿಯುವಂತೆ ಇರುವುದು. ಹಿಂದೆ ಹೇಳಿದ ಕ್ರಮದಂತೆ ಪ್ರಾರಂಭದಲ್ಲಿ ಅಗ್ನಿಪರವಾದ ಸೂಕ್ತಗಳೂ ಬಳಿಕ ಇಂದ್ರನ ಪರವಾದ ಸೂಕ್ತಗಳೂ ಅನಂತರ ಇತರ ದೇವತಾಕವಾದ ಸೂಕ್ತಗಳೂ ಇರುವವು. ಈ ಋಷಿಯ ವಂಶಸ್ಥರು ಈ ಮಂಡಲದಲ್ಲಿ ೩೬-೫೦ ನೆಯ ಸೂಕ್ತಗಳಿಗೂ ೮ ನೆಯ ಮಂಡಲದ ಸೂಕ್ತಗಳಿಗೂ ೯ ನೆಯ ಮಂಡಲದಲ್ಲಿ ೨ ನೆಯ ಸೂಕ್ತಕ್ಕೂ ದ್ರಷ್ಟೃಗಳಾಗಿರುವರು. **ಅಗ್ನಿಂ ದೂತಂ ವೃಣೀಮಹೇ** ಎಂಬ ಋಕ್ಕು ತೈತ್ತಿರೀಯ ಸಂಹಿತಾ ೨-೫-೮-೫; ೫-೫.೬-೧, ತೈ. ಬ್ರಾ ೩-೫-೨-೩; ಸಾಮವೇದ ೧-೩; ಮೈತ್ರಾಯಣೀಯ ಸಂಹಿತಾ ೪-೧೦-೨ ಈ ಸ್ಥಳಗಳಲ್ಲಿ ಪಠಿತವಾಗಿದೆ

**ದೂತಂ**—ಭಾಷ್ಯಕಾರರು ದೂತಶಬ್ದಕ್ಕೆ ಅರ್ಥವನ್ನು ವಿವರಿಸುವಾಗ **ಅಗ್ನಿರ್ದೇವಾನಾಂ ದೂತ ಆಸೀದುಶನಾಃ ಕಾವ್ಯೋಽಸುರಾಣಾಂ** (ತೈ. ಸಂ. ೩-೫-೮-೫) ಎಂಬ ಯಜುರ್ವೇದ ವಾಕ್ಯವನ್ನು ಉದಹರಿಸಿರುವರು. ಎಂದರೆ ಅಗ್ನಿಯು ದೇವತೆಗಳ ದೂತನು, ಕವಿಪುತ್ರನಾದ ಉಶನಸ್ ಎಂಬುವನು ಅಸುರರ ದೂತನು ಎಂದು

ಇದರ ಅರ್ಥವು. **ಪರೋಕ್ಷಂ ವಾ ಅನ್ಯೇ ದೇವಾಃ** (ಅಗ್ನಿಯಲ್ಲದ) ಇತರ ದೇವತೆಗಳು ನಮಗೆ ಪ್ರತ್ಯಕ್ಷವಾಗಿ ಕಾಣಿಸುವುದಿಲ್ಲ ಎಂದು ಯಜುರ್ವೇದ ಶ್ರುತಿಯು ಹೇಳುವಂತೆ ನಾವು ಎಂದರೆ ಮನುಷ್ಯರು ಅರ್ಪಿಸುವ ಹವಿಸ್ಸು ಮೊದಲಾದ ವಸ್ತುಗಳನ್ನು ದೇವತೆಗಳಿಗೆ ತಲಪುವಂತೆ ಮಾಡಲು ಅಗ್ನಿಯಲ್ಲಿ ಹೋಮಮಾಡುವುದರಿಂದ ಅಗ್ನಿಯು ಮನುಷ್ಯರಿಗೂ ದೇವತೆಗಳಿಗೂ ಮಧ್ಯಸ್ಥನಾಗಿದ್ದು ಹೋಮಮಾಡಿದ ಹವಿಸ್ಸನ್ನು ದೇವತೆಗಳಿಗೆ ಒಯ್ಯುವ ನೆಂದು ಪ್ರತೀತಿ ಇರುವುದು. ಆದುದರಿಂದ ಅಗ್ನಿಯು ದೇವದೂತನೆಂದು ಹೇಳುವ ರೂಢಿಯಿರುವುದು.

**ವೃಣೀಮಹೇ**—ವರಣಮಾಡುವೆವು. ಆರಿಸಿಕೊಳ್ಳುವೆವು. Select, Choose ಇತ್ಯಾದಿ. ಸ್ಕಂದ ಸ್ವಾಮಿಯು ಪ್ರಾರ್ಥಿಸುವೆವು ಎಂದು ಅರ್ಥವಿವರಣೆ ಮಾಡಿರುವರು.

**ವಿಶ್ವವೇದಸಂ— ಸರ್ವಧನೋಪೇತಂ** ಸಮಸ್ತಧನಯುಕ್ತನಾದ ಎಂದರ್ಥವು. ಋಗ್ವೇದದ **ಅಗ್ನಿ ಮೀಳೇ** ಎಂಬ ಮೊದಲನೆಯ ಋಕ್ಕಿನಲ್ಲಿಯೇ **ರತ್ನಧಾತಮಮ್** ಎಂಬ ಶಬ್ದವು ಈ ಅರ್ಥವನ್ನು ಸಮರ್ಥಿಸುವುದು. ಮ.ಘ ಮೊದಲಾದ ಇಪ್ಪತ್ತೆಂಟು ಧನನಾಮಗಳಲ್ಲಿ ವೇದಸ್ ಶಬ್ದವು ಪಠಿತವಾಗಿರುವುದು (೨-೩-೯) ಆದುದರಿಂದ ವೇದಸ್ ಶಬ್ದಕ್ಕೆ ಧನವೆಂಬ ಅರ್ಥವನ್ನು ಹೇಳಬೇಕು.

**ಸುಕ್ರತುಂ— ಶೋಭನಕರ್ಮಾಣಂ ಅಥವಾ ಶೋಭನಪ್ರಜ್ಞಂ,** ಎಂದರೆ ಯಜ್ಞಾದಿ ಕರ್ಮಗಳಿಗೆ ಅವಶ್ಯಕವೆನಿಸುವ. ಯಜ್ಞಕರ್ಮವನ್ನು ಸಾಂಗಗೊಳಿಸುವ, ಉತ್ತಮವಾದ ಪ್ರಜ್ಞೆಯುಳ್ಳ, ಯಜ್ಞಾದಿಕರ್ಮಗಳ ಸ್ವರೂಪವನ್ನು ಚೆನ್ನಾಗಿ ತಿಳಿದಿರುವ ಇತ್ಯಾದಿ ಅರ್ಥಗಳನ್ನು ಹೇಳಬಹುದು. ಕ್ರತುಶಬ್ದವು ಅಪಃ ಮೊದಲಾದ ಇಪ್ಪತ್ತಾರು ಕರ್ಮವಾಚಕ ಶಬ್ದಗಳ ಮಧ್ಯದಲ್ಲಿಯೂ (ನಿ. ೩-೧) ಕೇತಃ ಮೊದಲಾದ ಹನ್ನೊಂದು ಪ್ರಜ್ಞಾವಾ-ಚಕ ಶಬ್ದಗಳ ಮಧ್ಯದಲ್ಲಿಯೂ (ನಿ. ೩-೧೩) ಪಠಿತವಾಗಿರುವುದರಿಂದ ಕ್ರತುಶಬ್ದಕ್ಕೆ ಕರ್ಮ ಮತ್ತು ಪ್ರಜ್ಞೆ ಎಂಬ ಎರಡು ವಿಧವಾದ ಅರ್ಥಗಳಿರುವವು

॥ ವ್ಯಾಕರಣಪ್ರಕ್ರಿಯಾ ॥

**ಹೋತಾರಂ— ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ** ಧಾತು. ಇದರಮುಂದೆ **ತೃನ್** (ಪಾ. ಸೂ. ೩-೨-೧೩೫) ಎಂಬ ಸೂತ್ರದಿಂದ ತಚ್ಛೀಲ, ತದ್ಧರ್ಮ, ತತ್ಸಾಧುಕಾರಿ, ಎಂಬ ಅರ್ಥಗಳಲ್ಲಿ ತೃನ್ ಪ್ರತ್ಯಯ. ಹ್ವೇ+ತೃ ಬಹುಲಂ ಛಂದಸಿ (ಪಾ. ಸೂ. ೬-೧-೩೪) ಎಂಬುದರಿಂದ ಸಂಪ್ರಸಾರಣ ವಕಾರಕ್ಕೆ ಉಕಾರ. **ಸಂಪ್ರ-ಸಾರಣಾಚ್ಚ** (ಪಾ.ಸೂ. ೬-೧-೧೦೮) ಎಂಬುದರಿಂದ ಪೂರ್ವರೂಪ. ಹು+ತೃ **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಸಾರ್ವಧಾತುಕಆರ್ಧಧಾತುಕಪ್ರತ್ಯಯಗಳು ಪರದಲ್ಲಿರುವಾಗ ಇಗಂತವಾದ ಅಂಗಕ್ಕೆ ಗುಣ ಬರುವುದು ಎಂದು ಸೂತ್ರಾರ್ಥ. **ತಿಙ್ ಶಿತ್ಸಾರ್ವಧಾತುಕಂ** (ಪಾ. ಸೂ. ೩-೪-೧೧೩) **ತಿಪ್ ತಸ್ ಝಿ** ಮೊದಲಾದ ೧೮ ತಿಙ್ ಪ್ರತ್ಯಯಗಳಿಗೂ ಶಕಾರವನ್ನು ಇತ್ಸಂಜ್ಞೆಹೊಂದಿರುವ ಪ್ರತ್ಯಯಗಳಿಗೂ ಸಾರ್ವಧಾತುಕ ವೆಂದು ಹೆಸರು. **ಆರ್ಧಧಾತುಕಂ ಶೇಷಃ** (ಪಾ. ಸೂ. ೩-೪-೧೧೪) ತಿಙ್ ಶಿತ್ ಇವುಗಳನ್ನುಳಿದು **ಧಾತೋಃ** (ಪಾ. ಸೂ. ೩-೧-೯೧) ಎಂಬ ಅಧಿಕಾರದಲ್ಲಿ ವಿಹಿತವಾದ ಪ್ರತ್ಯಯಕ್ಕೆ ಆರ್ಧಧಾತುಕವೆಂದು ಹೆಸರು. ಇಲ್ಲಿ **ತೃನ್** ಎಂಬುದು **ತಿಙ್** ಪ್ರತ್ಯಯವಲ್ಲ ಶಿತ್ತೂ ಅಲ್ಲ. ಧಾತೋಃ ಎಂಬ ಅಧಿಕಾರದಲ್ಲಿ ವಿಹಿತವಾದ ಪ್ರತ್ಯಯ, ಆದ್ದರಿಂದ ಆರ್ಧಧಾತುಕವು. ಅದು ಪರದಲ್ಲಿರುವಾಗ ಹು ಎಂಬ ಇಗಂತವಾದ ಅಂಗಕ್ಕೆ ಗುಣ ಬರುವುದು ಎಂದರೆ ಉಕಾರಕ್ಕೆ ಓಕಾರಬರುವುದು ಹೋತೃ ಎಂದಾಗುವುದು. ಇದರ ಮುಂದೆ ದ್ವಿತೀಯಾಏಕವಚನ ಅಮ್ ಪ್ರತ್ಯಯ

ವನ್ನಿಟ್ಟರೆ **ಋತೋಙಿಸರ್ವನಾಮಸ್ಥಾನಯೋಃ** (ಪಾ ಸೂ. ೭-೩-೧೧೦) ಎಂಬುದರಿಂದ ಋಕಾರಕ್ಕೆ ಗುಣವು ರಪರವಾಗಿ ಬರುವುದು ಹೋತರ್+ಅಮ್ **ಅಪ್ ತೃನ್ ತೃಚ್** (ಪಾ. ೬-೪-೧೧) ಎಂಬುದರಿಂದ ಉಪಧಾ ದೀರ್ಘ ಬಂದರೆ ಹೋತಾರಂ ಎಂದಾಗುವುದು. ಹೋತೃ ಎಂಬುದು ನಿತ್ಸ್ವರದಿಂದ ಆದ್ಯುದಾತ್ತ.

**ವಿಶ್ವವೇದಸಂ**—ವಿಶ್ವಂ ವೇದಃ ಯಸ್ಯ ಸಃ ತಂ ವಿಶ್ವವೇದಸಂ. **ಬಹುವ್ರೀಹೌ ವಿಶ್ವಂ ಸಂಜ್ಞಾಯಾಂ** (ಪಾ. ಸೂ. ೬-೨-೧೦೬) ಸಂಜ್ಞೆ ತೋರುವಾಗ ಬಹುವ್ರೀಹಿಸಮಾಸದಲ್ಲಿ ಪೂರ್ವಪದಭೂತವಾದ ವಿಶ್ವ ಶಬ್ದವು ಅಂತೋದಾತ್ತವಾಗುವುದು ಎಂಬುದರಿಂದ ಅಂತೋದಾತ್ತ. ಈ ಸೂತ್ರವಿಲ್ಲದಿದ್ದರೆ ವಿಶ್ವಶಬ್ದವು ಕ್ವನ್ ಪ್ರತ್ಯಯಾಂತವಾದ್ದರಿಂದ ನಿತ್ಸ್ವರದಿಂದ ಆದ್ಯುದಾತ್ತ. **ಬಹುವ್ರೀಹೌಪ್ರಕೃತ್ಯಾಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಆದ್ಯುದಾತ್ತ ಬರಬೇಕಾಗುವುದು. ಅದನ್ನು ಬಾಧಿಸಿ ಅಂತೋದಾತ್ತ ಬರುವುದು.

**ಅಸ್ಯ**—**ಊಡಿದಂ ಪದಾದ್ಯಪ್ಪುಮ್ರೈದ್ಯುಭ್ಯಃ** (ಪಾ. ಸೂ. ೬-೧-೧೭೧) ಎಂಬುದರಿಂದ ಇದಂ ಶಬ್ದದ ಮುಂದೆ ಸ್ಯ ವಿಭಕ್ತಿಯು ಉದಾತ್ತ.

**ಸುಕ್ರತುಂ**—**ಕ್ರತ್ವಾದಯಶ್ಚ** (ಪಾ. ಸೂ. ೬-೨-೧೧೮) ಸು ಎಂಬುದರ ಮುಂದೆ ಇರುವ ಕ್ರತ್ವಾದಿ ಗಣಪಠಿತವಾದ ಶಬ್ದಗಳು ಆದ್ಯುದಾತ್ತಗಳಾಗುವುವು ಎಂಬುದರಿಂದ ಸು ಎಂಬುದರ ಮುಂದೆ ಇರುವ ಕ್ರತು ಶಬ್ದವು ಆದ್ಯುದಾತ್ತ. ॥ ೧ ॥

॥ ಸಂಹಿತಾಪಾಠಃ ॥

ಅಗ್ನಿಮಗ್ನಿಂ ಹವೀಮಭಿಃ ಸದಾ ಹವಂತ ವಿಶ್ಪತಿಂ ।
ಹವ್ಯವಾಹಂ ಪುರುಪ್ರಿಯಂ ॥ ೨ ॥

॥ ಪದಪಾಠಃ ॥

ಅಗ್ನಿಂಽಅಗ್ನಿಂ । ಹವೀಮಽಭಿಃ । ಸದಾ । ಹವಂತ । ವಿಶ್ಪತಿಂ ॥
ಹವ್ಯಽವಾಹಂ । ಪುರುಽಪ್ರಿಯಂ ॥ ೨ ॥

॥ ಸಾಯಣಭಾಷ್ಯಂ ॥

ಯದ್ಯಪ್ಯಗ್ನಿಃ ಸ್ವರೂಪೇಣೈಕ ಏವ ತಥಾಪಿ ಪ್ರಯೋಗಭೇದಾದಾಹವನೀಯಾದಿಸ್ಥಾನಭೇದಾತ್ಪಾವಕಾದಿವಿಶೇಷಣಭೇದಾದ್ವಾ ಬಹುವಿಧತ್ವಮಭಿಪ್ರೇತ್ಯಾಗ್ನಿಮಗ್ನಿಮಿತಿ ವೀಪ್ಸಾ । ತಂ ಹವೀಮಭಿರಾಹ್ವಾನಕಿರನ್ಯೈರ್ಮಂತ್ರೈಃ ಸದಾ ಹವಂತ । ನಿರಂತರಮನುಷ್ಠಾತಾರ ಆಹ್ವಯಂತಿ । ಕೀದೃಶಂ । ವಿಶ್ಪತಿಂ

ವಿಶಾಂ ಪ್ರಜಾನಾಂ ಹೋತ್ರಾದೀನಾಂ ಪಾಲಕಂ ಹವ್ಯವಾಹಂ ಯಜಮಾನಸಮರ್ಪಿತಸ್ಯ ಹವಿಷೋ ದೇವಾನ್ಪ್ರತಿ ವೋಢಾರಂ । ಅತ ಏವ ಪುರುಪ್ರಿಯಂ ಬಹೂನಾಂ ಪ್ರೀತ್ಯಾಸ್ಪದಂ ॥ ಅಗ್ನಿಮಗ್ನಿಂ । ನಿತ್ಯ-ವೀಪ್ಸಯೋರಿತಿ ವೀಪ್ಸಾಯಾಂ ದ್ವಿರ್ಭಾವಃ। ತಸ್ಯ ಪರಮಾಮ್ರೇಡಿತಮಿತ್ಯುತ್ತರಸ್ಯಾಮ್ರೇಡಿತಸಂಜ್ಞಾಯಾ-ಮನುದಾತ್ತಂ ಚೇತ್ಯನುದಾತ್ತಂ । ಹವೀಮಭಿಃ । ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ । ಆಹ್ವಾನಕರಣ-ಭೂತೇಷು ಮಂತ್ರೇಷು ಸ್ವವ್ಯಾಪಾರಸ್ವಾತಂತ್ರ್ಯಕೃತ್ಕರ್ತೃತ್ವವಿವಕ್ಷಯಾನ್ಯೇಭ್ಯೋಽಪಿ ದೃಶ್ಯಂತ ಇತಿ ಕರ್ತರಿ ಮನಿನ್ । ತಸ್ಯ ಛಾಂದಸ ಈಡಾಗಮಃ । ಬಹುಲಂ ಛಂದಸೀತಿ ಧಾತೋಃ ಸಂಪ್ರಸಾರಣಂ ಪರಪೂರ್ವತ್ವಂ ಗುಣಾವಾದೇಶೌ । ನಿತ್ತ್ವಾದಾದ್ಯುದಾತ್ತತ್ವಂ । ಸದಾ ಸರ್ವೈಕಾನ್ಯೇತ್ಯಾದಿನಾ । ಪಾ. ೫. ೩. ೧೫ । ಸರ್ವಶಬ್ದಾದ್ದಾಪ್ರತ್ಯಯಃ । ಸರ್ವಸ್ಯ ಸೋಽನ್ಯತರಸ್ಯಾಂ ದಿ । ಪಾ. ೫. ೩. ೬ । ಇತಿ ಸಭಾವಃ । ವ್ಯತ್ಯಯೇನಾದ್ಯುದಾತ್ತತ್ವಂ । ಹವಂತ । ಹ್ವೇಞೋ ಲಟ್ । ಝಸ್ಯಾಂತಾದೇಶಃ । ಟೇರೇತ್ವಾ-ಭಾವಶ್ಛಾಂದಸಃ । ಶಪಿ ಬಹುಲಂ ಛಂದಸೀತಿ ಸಂಪ್ರಸಾರಣಂ । ತಿಙ್ಙತಿಙ ಇತಿ ನಿಘಾತಃ । ವಿಶ್ಪತಿಂ । ಪತ್ಯಾವೈಶ್ವರ್ಯೇ ಇತಿ ಪೂರ್ವಪದಪ್ರಕೃತಿಸ್ವರೇ ಪ್ರಾಪ್ತೇ ಪರಾದಿಶ್ಛಂದಸಿ ಬಹುಲಮಿತ್ಯುತ್ತರ ಪದಾದ್ಯು-ದಾತ್ತತ್ವಂ । ಹವ್ಯವಾಹಂ । ವಹ ಪ್ರಾಪಣೇ । ವಹಶ್ಚ । ಪಾ ೩. ೨. ೬೪ । ಇತಿ ಣ್ವಿಪ್ರತ್ಯಯಃ । ಕೃದುತ್ತರಪದಪ್ರಕೃತಿಸ್ವರತ್ವಂ । ಪುರುಪ್ರಿಯಂ । ಪುರೂಣಾಂ ಪ್ರಿಯಂ । ಸಮಾಸಾಂತೋದಾತ್ತತ್ವಂ ॥

॥ ಪ್ರತಿಪದಾರ್ಥ ॥

ವಿಶ್ಪತಿಂ— ಯಜಮಾನ ಹೋತೃ ಮೊದಲಾದ ಪ್ರಜೆಗಳಿಗೆ ಸ್ವಾಮಿಯಾದ (ಪಾಲಕನಾದ) । ಹವ್ಯ-ವಾಹಂ—ಯಜಮಾನನು ಸಮರ್ಪಿಸುವ ಹವಿಸ್ಸನ್ನು ದೇವತೆಗಳಿಗೆ ಒಯ್ಯುವ । ಪುರುಪ್ರಿಯಂ—ಎಲ್ಲರಿಗೂ ಪ್ರೀತಿಪಾತ್ರನಾದ । ಅಗ್ನಿಮಗ್ನಿಂ—(ಆಹವನೀಯಾದಿ ಸ್ಥಾನವಿಶೇಷಗಳಲ್ಲಿರುವ) ಪ್ರತಿ ಅಗ್ನಿಯನ್ನು । ಹವೀ-ಮಭಿಃ—ಆಹ್ವಾನಗಳಿಗಾಗಿ ಉಪಯೋಗಿಸುವ ಮಂತ್ರಗಳಿಂದ । ಸದಾ—ಯಾವಾಗಲೂ । ಹವಂತ— (ಯಜ್ಞಾನುಷ್ಠಾತೃಗಳು) ಆಹ್ವಾನಮಾಡುವರು ॥

॥ ಭಾವಾರ್ಥ ॥

ಅಗ್ನಿಯು ಒಬ್ಬನೇ ಆದರೂ ಆಹವನೀಯ, ಗಾರ್ಹಪತ್ಯ ಮೊದಲಾದ ಸ್ಥಾನಭೇದಗಳಿಂದ ಬೇರೆಬೇರೆ ಯಾಗಿ ತೋರುವನು ಯಜಮಾನರಾದಿಯಾದ ಸಮಸ್ತ ಪ್ರಜೆಗಳಿಗೂ ಪಾಲಕನು. ಯಜ್ಞದಲ್ಲಿ ಅರ್ಪಿಸುವ ಹವಿಸ್ಸನ್ನು ದೇವತೆಗಳಿಗೆ ಒಯ್ಯುವವನು, ಸಕಲರಿಗೂ ಪ್ರಿಯನಾದವನು. ಇಂತಹ ಅಗ್ನಿಯನ್ನೇ ಯಜ್ಞ ಮಾಡುವ ಜನರು ಯಾವಾಗಲೂ ಆಹ್ವಾನಮಂತ್ರಗಳಿಂದ ಪ್ರಾರ್ಥಿಸಿ ಕರೆಯುವರು

## English Translation.

They (offerers of oblations) constantly invoke Agni and Agni again, the lord of men, the bearer of offerings, the beloved of many.

|| ವಿಶೇಷವಿಷಯಗಳು ||

**ಅಗ್ನಿಮಗ್ನಿಂ**— **ನಿತ್ಯವೀಪ್ಸಯೋರಿತಿ ವೀಪ್ಸಾಯಾಂ ದ್ವಿರ್ಭಾವಃ** || ಒಂದು ಶಬ್ದವನ್ನು ಎರಡಾವರ್ತಿ ಉಚ್ಚರಿಸುವುದರಿಂದ ಪ್ರತಿಯೊಂದು ಎಂಬರ್ಥವು ಸೂಚಿತವಾಗುವುದು. ಇಲ್ಲಿ ಪ್ರತಿಯೊಂದು ಅಗ್ನಿಯನ್ನೂ ಎಂದರೆ ಯಜ್ಞಗಳಲ್ಲಿ ಬೇರೆ ಬೇರೆ ಸ್ಥಾನಗಳಲ್ಲಿ ಪ್ರತಿಷ್ಠಿಸಲ್ಪಟ್ಟಿರುವ ಆಹವನೀಯ, ದಕ್ಷಿಣಾಗ್ನಿ, ಗಾರ್ಹಪತ್ಯ ಇತ್ಯಾದಿ.

**ವಿಶ್ಪತಿಂ**— **ವಿಶಾಂ ಪ್ರಜಾನಾಂ ಪತಿಂ**, ಪ್ರಜೆಗಳ ಅಥವಾ ಜನರ ಅಧಿಪತಿಯು, ಸ್ವಾಮಿಯು, Ruler of men, progeny.

ವ್ಯಾಕರಣಪ್ರಕ್ರಿಯಾ

**ಅಗ್ನಿಮಗ್ನಿಂ**— **ನಿತ್ಯವೀಪ್ಸಯೋಃ** (ಪಾ. ಸೂ ೮-೧-೪) ನಿತ್ಯವೀಪ್ಸಯೋಃ ಎಂಬ ಪದವು ನಿತ್ಯ. ವೀಪ್ಸೆ, ಎಂಬ ಎರಡು ಅರ್ಥವನ್ನು ನಿರ್ದೇಶಿಸುವ ಪದ. ಈ ಅರ್ಥದಲ್ಲಿ ಯಾವುದಕ್ಕೆ ಏನು ಬರುವುದು ಎಂದರೆ ಸ್ಥಾನ್ಯಾಕಾಂಕ್ಷೆ ವಿಧೇಯಾಕಾಂಕ್ಷೆ ಇರುವುದು. ಆದ್ದರಿಂದ **ಸರ್ವಸ್ಯದ್ವೇ** (ಪಾ. ಸೂ. ೮-೧-೧) ಎಂಬ ಸೂತ್ರವು ಅಧಿಕೃತವಾಗುವುದು. **ಪದಸ್ಯ** (ಪಾ. ಸೂ. ೮-೧-೧೬) ಎಂದು ಅಷ್ಟಾಧ್ಯಾಯಿಯಲ್ಲಿ ಮುಂದೆ ಹೇಳುವ ಸೂತ್ರವೂ ಸಹ ಇಲ್ಲಿ ಸಂಬಂಧಿಸುವುದು. ದ್ವೇ, ಎಂಬುದುದು ಸಂಖ್ಯಾವಾಚಕ ಸಂಖ್ಯೇಯಾಕಾಂಕ್ಷೆ (ಎಣಿಕೆಗೆ ವಿಷಯುವಾದುದು) ಬಂದರೆ ಶಬ್ದಶಾಸ್ತ್ರವಾದ್ದರಿಂದ ಶಬ್ದೇ ಎಂದು ಲಬ್ಧವಾಗುವುದು. ನಿತ್ಯಶಬ್ದಕ್ಕೆ ಆಭೀಕ್ಷ್ಣ್ಯ ಎಂದರೆ ಪೌನಃಪುನ್ಯ ಎಂದರ್ಥ. ವೀಪ್ಸಾ ಎಂದರೆ ವ್ಯಾಪ್ತೀಚ್ಛೆ. ಆದರೆ ಶಾಬ್ದಬೋಧದಲ್ಲಿ ವ್ಯಾಪ್ತಿ ಮಾತ್ರ ತೋರುವುದು. ಇತ್ಥಂಚ ಪೌನಃಪುನ್ಯವ್ಯಾಪ್ತಿ ಇವು ತೋರುವಾಗ ಪದದ ಸಂಪೂರ್ಣದ ಸ್ಥಾನದಲ್ಲಿ ಎರಡು ಶಬ್ದಗಳು ಬರುವುವು ಎಂದು ಅರ್ಥವು ಏರ್ಪಡುವುದು. ಇಲ್ಲಿ ವ್ಯಾಪ್ತಿ ಎಂಬ ಅರ್ಥವನ್ನು ವಿವಕ್ಷಿಸಿದಾಗ ಅಗ್ನಿಮ್ ಎಂಬ ಪೂರ್ಣಪದದ ಸ್ಥಾನದಲ್ಲಿ ಎರಡು ಅಗ್ನಿಮ್ ಎಂಬ ಪದಗಳು ಬರುತ್ತವೆ. ಅಗ್ನಿಮ್ ಅಗ್ನಿಮ್. ಪ್ರತಿಯೊಂದು ಅಗ್ನಿಯನ್ನೂ ಎಂದು ಅರ್ಥ. ಪೌನಃಪುನ್ಯ ಎಂಬುದು ಕ್ರಿಯೆಯಲ್ಲಿಗುವ ಧರ್ಮ, ಪೌನಃ ಪುನ್ಯ ಎಂಬ ಅರ್ಥದಲ್ಲಿ ಬರುವ ದ್ವಿರ್ವಚನವು ತಿಙಂತಕ್ಕೂ ಅವ್ಯಯಸಂಜ್ಞಕವಾದಕೃದಂತಕ್ಕೂ ಸಹ ಬರುವುದು. **ತಸ್ಯ ಪರಮಾಮ್ರೇಡಿತಮ್** (ಪಾ. ಸೂ. ೮-೧-೨) ದ್ವಿತ್ವವನ್ನು ಹೊಂದಿದ ಶಬ್ದದ ಎರಡನೆ ರೂಪಕ್ಕೆ ಆಮ್ರೇಡಿತ ಸಂಜ್ಞೆ ಬರುವುದು ಎಂಬುದರಿಂದ ಆಮ್ರೇಡಿತ ಸಂಜ್ಞೆಬರುವುದು. ಅದಕ್ಕೆ **ಅನುದಾತ್ತಂಚ** (ಪಾ. ಸೂ ೮-೧-೩) ಎಂಬುದರಿಂದ ಅನುದಾತ್ತ ಸ್ವರ ಬರುವುದು.

**ಹವೀಮಭಿಃ**— **ಹ್ವೇಞ್ ಸ್ಪರ್ಧಾಯಾಂಶಬ್ದೇ ಚ** ಧಾತು ಇದರ ಮುಂದೆ **ಅನ್ಯೇಭ್ಯೋಽಪಿದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ಕರ್ತ್ರರ್ಥದಲ್ಲಿ ಮನಿನ್ ಪ್ರತ್ಯಯ ಬರುವುದು. ಯದ್ಯಪಿ ಮಂತ್ರಗಳು ಆಹ್ವಾನದಲ್ಲಿ ಕರಣಗಳಾಗಿರುವುವು ಆದರೂ **ವಿವಕ್ಷಾತಃ ಕಾರಕಾಣಿಭವನ್ತಿ** ಎಂಬ ನ್ಯಾಯದಿಂದ ಸ್ವವ್ಯಾಪಾರದಲ್ಲಿರುವ ಸ್ವಾತಂತ್ರ್ಯವನ್ನು ವಿವಕ್ಷಿಸಿ ಸ್ಥಾಲೀಪಚತಿ ಎಂಬಲ್ಲಿ ಕರ್ತೃಸಂಜ್ಞೆ ಬರುವಂತೆ ಇಲ್ಲಿಯೂ ಸ್ವವ್ಯಾಪಾರಗತವಾದ ಸ್ವಾತಂತ್ರ್ಯವನ್ನು ವಿವಕ್ಷಿಸಿ ಕರ್ತ್ರರ್ಥದಲ್ಲಿ ಮನಿನ್ ಪ್ರತ್ಯಯ ಬರಲು ತಡೆಯಿಲ್ಲ. ಹ್ವೇ+ ಮನ್- ಮನಿನ್ ಪ್ರತ್ಯಯಕ್ಕೆ ಛಾಂದಸವಾಗಿ ಈಡಾಗಮ ಬರುವುದು ಹ್ವೇ+ಈಮನ್. **ಬಹುಲಂ ಛಂದಸಿ**

(ಪಾ. ಸೂ. ೬-೧-೩೪) ಎಂಬುದರಿಂದ ಧಾತುವಿಗೆ ಸಂಪ್ರಸಾರಣದಿಂದ ಏಕಾರಕ್ಕೆ ಉಕಾರ, ಪೂರ್ವರೂಪ, ಗುಣ, ಅವಾದೇಶ ಹವೀಮನ್ ತೃತೀಯಾಬಹುವಚನ ಭಿಸ್ ಪ್ರತ್ಯಯ. **ಸ್ವಾದಿಷ್ವಸರ್ವನಾಮಸ್ಥಾನೇ** (ಪಾ. ಸೂ. ೪-೧-೧೭) ಎಂಬುದರಿಂದ ನಲೋಪ ರುತ್ವ ವಿಸರ್ಗಗಳು ಹವೀಮಭಿಃ ಎಂದಾಗುವುದು. ಹವೀಮಭಿಸ್ ಎಂಬುದು ನಿತ್ಸ್ವರದಿಂದ ಆದ್ಯುದಾತ್ತ.

ಸದಾ—ಸರ್ವೈಕಾನ್ಯಕಿಂಯತ್ತದಃಕಾಲೇದಾ (ಪಾ. ಸೂ. ೫-೩-೧೫) ಕಾಲಾರ್ಥದಲ್ಲಿರುವುಗಳೂ ಸಪ್ತಮ್ಯಂತಗಳೂ ಆದ ಸರ್ವ, ಏಕ, ಅನ್ಯ, ಕಿಮ್- ಯದ್, ತದ್. ಇವುಗಳ ಮುಂದೆ ಸ್ವಾರ್ಥದಲ್ಲಿ ದಾ ಪ್ರತ್ಯಯ ಬರುವುದು ಎಂಬುದರಿಂದ ದಾ ಪ್ರತ್ಯಯ ಬಂದರೆ ಸರ್ವ+ದಾ ಈಗ **ಸರ್ವಸ್ಯ ಸೋನ್ಯತರಸ್ಯಾಂದಿ** (ಪಾ. ಸೂ. ೫-೩-೬) ಪ್ರಾಗ್ದಿಶೀಯವಾದ ದಕಾರಾದಿ ಪ್ರತ್ಯಯ ಪರದಲ್ಲಿರುವಾಗ ಸರ್ವಶಬ್ದದ ಸ್ಥಾನದಲ್ಲಿ ಸ ಎಂಬ ಆದೇಶವು ವಿಕಲ್ಪವಾಗಿ ಬರುವುದು ಎಂಬುದರಿಂದ ಸರ್ವ ಶಬ್ದಕ್ಕೆ ಸ ಆದೇಶ ಬಂದರೆ ಸದಾ ಎಂದಾಗುವುದು- ಸರ್ವಸ್ಮಿನ್ ಕಾಲೇ ಎಂದು ವಿಗ್ರಹ, ಪ್ರತ್ಯಯಸ್ವರ ಬಂದು ನ್ಯಾಯವಾಗಿ ಸದಾ ಎಂಬುದು ಅಂತೋದಾತ್ತವಾಗಬೇಕು ಆದರೂ ವ್ಯತ್ಯಯದಿಂದ ಆದ್ಯುದಾತ್ತವಾಗುವುದು.

**ಹವನ್ತ**—ಹ್ವೇಞ್ ಧಾತುವಿನ ಮುಂದೆ ಲಟ್. ಅದಕ್ಕೆ ಝ ಆದೇಶ **ಝೋಽನ್ತಃ** (ಪಾ. ಸೂ. ೭-೧-೩) ಎಂಬುದರಿಂದ ಝಕಾರಕ್ಕೆ ಅನ್ತಾದೇಶ **ಟಿತಆತ್ಮನೇಪದಾನಾಂ ಟೇರೇ** (ಪಾ.ಸೂ. ೩-೪-೭೯) ಎಂಬುದರಿಂದ ಪ್ರಾಪ್ತವಾದ ಏತ್ವವು ಬರದೇ ಇರುವಿಕೆಯು ಛಾಂದಸವು. ವಿಕರಣ ಶಪ್ ಹ್ವೇ-ಅ+ಅನ್ತ. **ಬಹುಲಂ ಛಂದಸಿ** (ಪಾ. ಸೂ. ೬-೧-೩೪) ಎಂಬುದರಿಂದ ಸಂಪ್ರಸಾರಣ. ಪೂರ್ವರೂಪ. ಗುಣ. ಅವಾದೇಶ. ಹವನ್ತ ಎಂದಾಗುವುದು. **ತಿಙ್ಙತಿಙಃ** (ಪಾ. ಸೂ. ೮ ೧-೨೮) ಎಂಬುದರಿಂದ ಅನುದಾತ್ತ.

ವಿಶ್ಪತಿಮ್—ಪತ್ಯಾವೈಶ್ವರ್ಯೇ (ಪಾ. ಸೂ. ೬-೨-೧೮) ಎಂಬುದರಿಂದ **ಪೂರ್ವಪದಪ್ರಕೃತಿಸ್ವರ** ಪ್ರಾಪ್ತವಾದರೆ ಅದನ್ನು ಬಾಧಿಸಿ **ಪರಾದಿಶ್ಛಂದಸಿಬಹುಲಮ್** ( ಪಾ. ಸದ. ೬-೨-೧೯೯) ಎಂಬುದರಿಂದ ಉತ್ತರ ಪದವಾದ ಪತಿ ಎಂಬುದಕ್ಕೆ ಆದ್ಯುದಾತ್ತ ಬರುವುದು.

**ಹವ್ಯವಾಹಂ**—ಹವ್ಯಂ ವಹತಿ ಇತಿ ಹವ್ಯವಾಹಃ ತಮ್. ವಹ ಪ್ರಾಪಣೇ ಧಾತು. ಇದರ ಮುಂದೆ **ವಹಶ್ಚ** (ಪಾ. ಸೂ. ೩-೨-೬೪) ಛಂದಸ್ಸಿನಲ್ಲಿ ಸುಬಂತವು ಉಪಪದವಾಗಿರುವಾಗ ವಹ ಧಾತುವಿನ ಮುಂದೆ ಣ್ವಿ ಪ್ರತ್ಯಯ ಬರುವುದು ಎಂಬುದರಿಂದ ಣ್ವಿ ಪ್ರತ್ಯಯ. ಹವ್ಯ+ಅಮ್+ವಹ್+ಣ್ವಿ ನ್ಯಾಯವಾಗಿ ಅಲೌಕಿಕ ಪ್ರಕ್ರಿಯಾ ವಾಕ್ಯವನ್ನು ಹವ್ಯ+ಅಸ್ ವಹ್+ಣ್ವಿ ಎಂದು ತೋರಿಸಬೇಕು. ಕೃದಂತವಾದ್ದರಿಂದ ಪ್ರಾತಿಪದಿಕ ಸಂಜ್ಞೆ ಸುಪ್ಪಿಗೆ ಲುಕ್. ಣ್ವಿ ಪ್ರತ್ಯಯಕ್ಕೆ ಖಂಡಶಃ ಲೋಪಃ ಉಪಧಾವೃದ್ಧಿ. ಹವ್ಯವಾಹ ಕೃದುತ್ತರ ಪದ ಪ್ರಕೃತಿಸ್ವರ ಬರುವುದು. ಏಕವಚನ ಅಮ್. ಹವ್ಯವಾಹಮ್.

**ಪುರುಪ್ರಿಯಮ್**—ಪುರೂಣಾಂ ಪ್ರಿಯಸ್ತಮ್ ಎಂದು ವಿಗ್ರಹ. ಷಷ್ಠೀತತ್ಪುರುಷ. **ಸಮಾಸಸ್ಯ** (ಪಾ ಸೂ. ೬-೧-೨೨೩) ಎಂಬುದರಿಂದ ಅಂತೋದಾತ್ತ ॥ ೨ ॥

॥ ಸಂಹಿತಾಪಾಠಃ ॥

ಅಗ್ನೇ ದೇವಾಁ ಇಹಾವಹ ಜಜ್ಞಾನೋ ವೃಕ್ತಬರ್ಹಿಷೇ ।
ಅಸಿ ಹೋತಾ ನ ಈಡ್ಯಃ ॥ ೩ ॥

॥ ಪದಪಾಠಃ ॥

ಅಗ್ನೇ । ದೇವಾನ್ । ಇಹ । ಆ । ವಹ । ಜಜ್ಞಾನಃ । ವೃಕ್ತಽಬರ್ಹಿಷೇ ॥
ಅಸಿ । ಹೋತಾ । ನಃ । ಈಡ್ಯಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಜಜ್ಞಾನೋಽರಣ್ಯೋರುತ್ಪನ್ನಸ್ತ್ವಂ ವೃಕ್ತಬರ್ಹಿಷ ಆಸ್ತರಣಾರ್ಥಂ ಛಿನ್ನೇನ ಬರ್ಹಿಷಾ ಯುಕ್ತಾಯ ತಂ ಯಜಮಾನಮನುಗ್ರಹೀತುಮಿಹ ಕರ್ಮಾಣಿ ಹವಿರ್ಭುಜೋ ದೇವಾನಾವಹ । ಸೋಽಸ್ಮದರ್ಥಂ ಹೋತಾ ದೇವಾನಾಮಾಹ್ವಾತಾ ತ್ವಮೀಡ್ಯಃ ಸ್ತುತ್ಯೋಽಸಿ ॥ ದೇವಾನಿತ್ಯತ್ರ ಸಂಹಿತಾಯಾಂ ದೀರ್ಘಾದಟಿ ಸಮಾನಪಾದ ಇತಿ ರುತ್ವಂ । ಆತೋಽಟಿ ನಿತ್ಯಮಿತ್ಯನುನಾಸಿಕಭಾವಃ । ಜಜ್ಞಾನಃ । ಜನೀ ಪ್ರಾದುರ್ಭಾವೇ । ಲಿಟಃ ಕಾನಚ್ । ಗಮಹನೇತ್ಯುಪಧಾಲೋಪಃ । ದ್ವಿರ್ವಚನೇಽಚಿ । ಪಾ. ೧-೧-೫೯ । ಇತಿ ತಸ್ಯ ಸ್ಥಾನಿವದ್ಭಾವಾದ್ದ್ವಿರ್ವಚನಂ । ಚಿತ್ತ್ವಾದಂತೋದಾತ್ತಃ । ವೃಕ್ತಬರ್ಹಿಷೇ ಓವ್ರಶ್ಚೂ ಛೇದನೇ । ನಿಷ್ಠೇತಿ ಕ್ತಪ್ರತ್ಯಯಃ । ಯಸ್ಯ ವಿಭಾಷೇತೀಟ್ಪ್ರತಿಷೇಧಃ । ವೃಕ್ತಂ ಬರ್ಹಿರ್ಯಸ್ಮೈ ಯಜಮಾನಾಯ ಯೇನ ವಾ ಋತ್ವಿಜಾ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರಃ । ಅಸಿ । ಅಸ್ತೇಃ ಸಿಪ್ । ಅದಿಪ್ರಭೃತಿಭ್ಯಃ ಶಪ ಇತಿ ಶಪೋ ಲುಕ್ । ತಾಸಸ್ತ್ಯೋರ್ಲೋಪಃ । ಪಾ ೭-೪-೫೦ । ಇತಿ ಸಕಾರಸ್ಯ ಲೋಪಃ । ಪಾದಾದಿತ್ವಾನ್ನ ನಿಘಾತಃ । ಹೋತಾ । ಹ್ವಯತೇಸ್ತೃಚ್ಛೀಲ್ಯಾದಿಷು ತೃನ್ । ಬಹುಲಂ ಛಂದಸೀತಿ ಸಂಪ್ರಸಾರಣಂ । ನಿತ್ತ್ವಾದಾದ್ಯುದಾತ್ತಃ । ಈಡ್ಯಃ । ಈಡಸ್ತುತೌ । ಋಹಲೋರ್ಣ್ಯತ್ । ಪಾ. ೩-೧-೧೨೪ । ತಿತ್ಸ್ವರಿತೇ ಪ್ರಾಪ್ತ ಈಡವಂದವೃಶಂಸದುಹಾಂ ಣ್ಯತಃ । ಪಾ ೬-೧-೨೧೪ । ಇತ್ಯಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

(ಹೇ) ಅಗ್ನೇ—ಎಲೈ ಅಗ್ನಿಯೇ । ಜಜ್ಞಾನಃ—ಅರಣಿಯಲ್ಲಿ ಉತ್ಪನ್ನನಾದ (ನೀನು) । ವೃಕ್ತಬರ್ಹಿಷೇ—ಆಸನಾರ್ಥವಾಗಿ ಕತ್ತರಿಸಿದ ದರ್ಭೆಗಳನ್ನು ಹರಡಿರುವ ಯಜಮಾನನನ್ನು ಅನುಗ್ರಹಿಸುವುದಕ್ಕಾಗಿ । ಇಹ—ಈ ಕರ್ಮದಲ್ಲಿ (ಯಜ್ಞದಲ್ಲಿ) । ದೇವಾನ್—ದೇವತೆಗಳನ್ನು । ಆ ವಹ—ಕರೆದುಕೊಂಡು ಬಾ । ನಃ—ನಮಗಾಗಿ । ಹೋತಾ—ದೇವತೆಗಳನ್ನು ಕರೆದುಕೊಂಡುಬರುವ ನೀನು । ಈಡ್ಯಃ—ಸ್ತುತಿಸಲ್ಪಡಲರ್ಹನಾಗಿ । ಅಸಿ—ಇರುವೆ ॥

‖ ಭಾವಾರ್ಥ ‖

ಎಲೈ ಅಗ್ನಿಯೇ, ನೀನು (ಅರಣಿಯಲ್ಲಿ) ಉತ್ಪನ್ನನಾದವನು. ಇಂತಹ ನೀನು ದೇವತೆಗಳು ಬಂದು ಕುಳಿತುಕೊಳ್ಳುವುದಕ್ಕಾಗಿ ಕತ್ತರಿಸಿದ ದರ್ಭೆಗಳನ್ನು ಹಾಸಿ ಸಿದ್ಧಪಡಿಸಿರುವ ಯಜಮಾನನಿಗೆ ಅನುಗ್ರಹಮಾಡುವುದಕ್ಕಾಗಿ ದೇವತೆಗಳನ್ನು ಇಲ್ಲಿಗೆ ಕರೆದುಕೊಂಡು ಬಾ. ಏಕೆಂದರೆ ದೇವತೆಗಳನ್ನು ಕರೆದುಕೊಂಡು ಬರುವುದರಿಂದ ನೀನು ನಮ್ಮೆಲ್ಲರಿಂದಲೂ ಸ್ತುತಿಸಲ್ಪಡಲು ಅರ್ಹನಾಗಿರುವೆ.

English Translation

Agni, when born, bring hither the gods for him who has prepared their seats with the clipped sacred grass ; you are their invoker for us and are to be adored.

‖ ವಿಶೇಷ ವಿಷಯಗಳು ‖

**ಜಜ್ಞಾನಃ**—ಹುಟ್ಟಿದ, ಉತ್ಪನ್ನನಾದ, born. ಹುಟ್ಟಿದ ಅಗ್ನಿಯೆಂದರೆ--ಯಜ್ಞಗಳಲ್ಲಿ ಅರಣಿ ಎಂಬ ಎರಡು ಮರದ ತುಂಡುಗಳನ್ನು ಒಂದಕ್ಕೊಂದು ಉಜ್ಜಿ ಬೆಂಕಿಯನ್ನು ಉತ್ಪತ್ತಿಮಾಡುವರು. ಆದುದರಿಂದ ಅಗ್ನಿಯು ಅರಣಿಯಲ್ಲಿ ಹುಟ್ಟಿದನೆಂದು ಹೇಳುವ ರೂಢಿಯಿದೆ.

**ವೃಕ್ತಬರ್ಹಿಷೇ**—ಈ ಶಬ್ದವನ್ನು ಹಿಂದೆಯೇ ವಿವರಿಸಿದೇವೆ. ಬರ್ಹಿ ಎಂದರೆ ಕತ್ತರಿಸಿದ ದರ್ಭೆಯು. ಇಂತಹ ದರ್ಭೆಗಳನ್ನು ದೇವತೆಗಳು ಬಂದು ಕೂಡುವುದಕ್ಕೆ ಹರಡಿ ಸಿದ್ಧಪಡಿಸಿದ ಯಜಮಾನನಿಗೋಸ್ಕರ ಎಂದರ್ಥವು.

‖ ವ್ಯಾಕರಣಪ್ರಕ್ರಿಯಾ ‖

**ದೇವಾನ್**—ಸಂಹಿತಾಕಾಲದಲ್ಲಿ ಇವರ್ಣ ಪರದಲ್ಲಿರುವುದರಿಂದ **ದೀರ್ಘಾದಟಿಸಮಾನಪಾದೇ** (ಪಾ. ಸೂ. ೮-೩-೯) ನಕಾರವೂ ಅಟ್ಪರ್ಣವೂ ಒಂದೇ ಪಾದದಲ್ಲಿರುವ ಪಕ್ಷಕ್ಕೆ ಅಟ್ಪರ್ಣದ ಹಿಂದೆ ಇರುವುದೂ ದೀರ್ಘದ ಮುಂದೆ ಇರತಕ್ಕದ್ದೂ ಆದ ನಕಾರಕ್ಕೆ ರು ಆದೇಶ ಬರುವುದು ಎಂಬುದರಿಂದ ರು ಆದೇಶ ಬಂದರೆ ದೇವಾರ್ ಇ **ಆತೋಽಟಿನಿತ್ಯಮ್** (೮-೩-೩) ಅಟ್ಪರ್ಣದ ಹಿಂದೆ ಇರುವ ರುವಿಗೆ ಹಿಂದೆ ಇರುವ ದೀರ್ಘಾಕಾರಕ್ಕೆ ನಿತ್ಯವಾಗಿ ಅನುನಾಸಿಕವು ಬರುವುದು. ಇ ಎಂಬುದು ಅಟ್ಪರ್ಣ. ಅದರ ಹಿಂದೆ ದೇವಾರ್ ಎಂಬಲ್ಲಿ ರ್-ಎಂಬ ರು ಇರುವುದು. ಆ ರುವಿನ ಹಿಂಭಾಗದಲ್ಲಿ ವಕಾರದ ಮುಂದೆ ಆಕಾರವಿರುವುದು. ಅದಕ್ಕೆ ನಿತ್ಯವಾಗಿ ಅನುನಾಸಿಕ ಬಂದರೆ ದೇವಾರ್ ಇ ರ್ ಗೆ **ಭೋಭಗೋ ಅಘೋ ಅಪೂರ್ವಸ್ಯಯೋಽಶಿ** (ಪಾ. ಸೂ. ೮-೩-೧೭) ಎಂಬುದರಿಂದ ಯತ್ವ. **ಲೋಪಶ್ಶಾಕಲ್ಯಸ್ಯ** (ಪಾ. ಸೂ. ೮-೩-೧೯) ಎಂಬುದರಿಂದ ಯಕಾರಕ್ಕೆ ಲೋಪ. ದೇವಾँ ಇಹ ಎಂದಾಗುವುದು.

**ಜಜ್ಞಾನಃ**—ಜನೀ ಪ್ರಾದುರ್ಭಾವೇ ಧಾತು. ಇದರ ಮುಂದೆ ಲಿಟ್. ಅದರ ಸ್ಥಾನದಲ್ಲಿ **ಲಿಟಃ-ಕಾನಜ್ವಾ** (ಪಾ. ಸೂ. ೩-೨-೧೦೬) ಎಂಬುದರಿಂದ ಕಾನಜಾದೇಶ. **ಗಮಹನಜನಖನಘಸಾಂ ಲೋಪಃ**

**ಕ್ಙಿತ್ಯನಜಿ** (ಪಾ.ಸೂ. ೬-೪-೯೮) ಅಙ್ ಎಂಬುದನ್ನು ಬಿಡು ಅಜಾದಿಯಾದ ಕಿತ್ ಅಥವಾ ಙಿತ್ ಆದ ಪ್ರತ್ಯಯು ಗಳು ಪರದಲ್ಲಿರುವಾಗ ಗಮ್ ಮೊದಲಾದ ಧಾತುವಿನ ಉಪಧಾಭೂತವಾದ ವರ್ಣಕ್ಕೆ ಲೋಪ ಬರುವುದು ಎಂಬುದರಿಂದ ಜ್ ಎಂಬುದರ ಮುಂದೆ ಇರುವ ಅಕಾರಕ್ಕೆ ಲೋಪ ಜ್‌ಗ್+ಅನ. **ದ್ವಿರ್ವಚನೇಽಚಿ** (ಪಾ.ಸೂ. ೧-೧-೫೯) ದ್ವಿತ್ವಕ್ಕೆ ನಿಮಿತ್ತವಾದ ಅಜ್ವರ್ಣಪರದಲ್ಲಿದ್ದರೆ ಅಚ್ ಸ್ಥಾನಿಕವಾದ ಆದೇಶವು ದ್ವಿತ್ವವನ್ನು ಮಾಡುವಾಗ ಸ್ಥಾನಿವಧ್ಭಾವವನ್ನು ಹೊಂದುವುದು ಎಂಬುದರಿಂದ ಅಕಾರಲೋಪಕ್ಕೆ ಸ್ಥಾನಿವದ್ಭಾವ ಬಂದರೆ, **ಲಿಟಿಧಾ-ತೋರನಭ್ಯಾಸಸ್ಯ** (ಪಾ.ಸೂ. ೬-೧-೮) ಎಂಬುದರಿಂದ ದ್ವಿತ್ವ. ಜಗ್ ಜ್‌ನ್ ಅನ. **ಹಲಾದಿಃಶೇಷಃ** (ಪಾ.ಸೂ. ೭-೪-೬೦) ಎಂಬುದರಿಂದ ಅಭ್ಯಾಸದಲ್ಲಿರುವನಕಾರಕ್ಕೆ ನಿವೃತ್ತಿ. ಶ್ಚುತ್ವದಿಂದ ತವರ್ಗಪಂಚಮಾಕ್ಷರವಾದ ನಕಾರಕ್ಕೆ, ಚವರ್ಗ ಪಂಚಮಾಕ್ಷರ ಞಕಾರ, ಜಜ್ಞಾನ ಎಂದಾಗುವುದು. ಪ್ರತ್ಯಯವು ಚಿತ್ತಾದ್ದರಿಂದ ಚಿತ್ಸ್ವರ ಅಂತೋದಾತ್ತ ಬರುವುದು.

**ವೃಕ್ತಬರ್ಹಿಷೇ**—ಓ ವ್ರಶ್ಚೂ ಛೇದನೇ ಧಾತು. ಊದಿತ್ತು. **ಸ್ವರತಿಸೂರತಿ ಸೂಯತಿ ಧೂ ಞೂದಿತೋವಾ** (ಪಾ. ಸೂ. ೭-೨-೪೪) ಸ್ವರತ್ಯಾದಿ ಧಾತುಗಳ ಮುಂದೆಯೂ ಊದಿತ್ತಾದ ಧಾತುಗಳ ಮುಂದೆಯೂ ಇರುವ ವಲಾದಿಯಾದ ಆರ್ಧಧಾತುಕಕ್ಕೆ ಇಡಾಗಮವು ವಿಕಲ್ಪವಾಗಿ ಬರುವುದು ಎಂದು ವಿಕಲ್ಪ ದಿಂದ ಇಡಾಗಮವು ವಿಹಿತವಾಗಿರುವುದು- ಆದ್ದರಿಂದ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಇದರ ಮುಂದೆ ಕ್ತ ಪ್ರತ್ಯಯವನ್ನು ಇಟ್ಟಾಗ **ಯಸ್ಯವಿಭಾಷಾ** (ಪಾ. ಸೂ. ೭-೨-೧೫) ಎಂಬುದರಿಂದ ಇಡಾಗಮಕ್ಕೆ ಪ್ರತಿಷೇಧ ಬರುವುದು. ವ್ರಶ್ಚ್+ತ **ಓದಿತಶ್ಚ** (ಪಾ. ಸೂ. ೮-೨-೪೫) ಓಕಾರೇತ್ಸಂಜ್ಞಕವಾದ ಧಾತುವಿನ ಮುಂದೆ ಇರುವ ಕ್ತ ಪ್ರತ್ಯಯದ ತಕಾರಕ್ಕೆ ನಕಾರ ಬರುವುದು ಎಂಬುದರಿಂದ ಕ್ತ ಪ್ರತ್ಯಯದ ತಕಾರಕ್ಕೆ ನಕಾರ ಬಂದರೆ ವ್ರಶ್ಚ್+ನ ಎಂದಿರುವಾಗ **ಗ್ರಹಿಜ್ಯಾವಯಿವ್ಯಧಿ ವಷ್ಟಿ ವಿಚತಿ ವೃಶ್ಚತಿ ಪೃಚ್ಛತಿ ಭೃಜ್ಜತೀನಾಂ ಙಿತಿಚ** ( ಪಾ. ಸೂ. ೬-೧-೧೬ ) ಎಂಬುದರಿಂದ ಸಂಪ್ರಸಾರಣ ರೇಫಕ್ಕೆ ಋಕಾರ ಬಂದರೆ ಪೂರ್ವ ರೂಪ ಬಂದು ವೃಶ್ಚ್+ನ ಸ್ಕೋಃಸ್ಸಂಯೋಗಾದ್ಯೋರನ್ತೇಚ ( ಪಾ. ಸೂ. ೮-೨-೨೯ ) ಸಂಯೋಗವು ಪದದ ಕೊನೆಯಲ್ಲಿದ್ದರೂ, ಝಲ್ ವರ್ಣದ ಹಿಂದೆ ಇದ್ದರೂ ಆ ಸಂಯೋಗದ ಆದಿಯಲ್ಲಿರುವ ಸಕಾರ ಕಕಾರಗಳಿಗೆ **ಲೋಪ** ಬರುವುದು. ಎಂಬುದರಿಂದ ಸಕಾರಕ್ಕೆ ಲೋಪ ಬರುವುದು. ಈ ಸೂತ್ರದಿಂದ ಸಲೋಪವನ್ನು ಮಾಡುವಾಗ **ಓದಿತಶ್ಚ** ( ಪಾ. ಸೂ. ೮-೨-೪೫ ) ಎಂಬುದರಿಂದ ಬಂದ ನಿಷ್ಠಾದೇಶವಾದ ನತ್ವವು ಪೂರ್ವತ್ರಾಸಿದ್ಧಮ್ ಎಂಬುದರಿಂದ ಅಸಿದ್ಧವಾಗುವುದರಿಂದ ಸಂಯೋಗವು ಝಲ್ ವರ್ಣದ ಹಿಂದೆ ಇರ ತಕ್ಕದ್ದಾಗಿ ಆಗುವುದು. ನಕಾರಜಾವನುಸ್ವಾರ ಪಂಚಮೌ ಝಲಿಧಾತುಷು ಸಕಾರಜಶ್ಶಕಾರಶ್ಚೇಷಾಟ್ಟವರ್ಗ ಸ್ತವರ್ಗಜಃ ಅಂದರೆ ಧಾತುಗಳಲ್ಲಿ ಝಲ್ ವರ್ಣದ ಹಿಂದೆ ಇರುವ ಅನುಸ್ವಾರ, ಮತ್ತು ತತ್ತದ್ವರ್ಗೀಯ ಪಂಚ ಮಾಕ್ಷರಗಳೂ ಸಹ ನಕಾರದಿಂದ ಹುಟ್ಟಿದವು. ಚಕಾರದ ಹಿಂದೆ ಇರುವ ಶಕಾರವು ಸಕಾರದಿಂದ ಹುಟ್ಟಿದುದು ಷಕಾರದ ಯೋಗವಿದ್ದು ಟವರ್ಗವಿದ್ದರೆ ಅದು ತವರ್ಗದಿಂದ ಹುಟ್ಟಿದುದು ಎಂದು ತಿಳಿಯತಕ್ಕದ್ದು ಎಂದು ಈ ಶ್ಲೋಕದ ಅರ್ಥ. ಇದರಿಂದ ವ್ರಶ್ಚ್ ಎಂಬಲ್ಲಿ ಚಕಾರದ ಹಿಂದೆ ಇರುವ ಶಕಾರ ಸಕಾರದಿಂದ ಹುಟ್ಟಿದುದು ಎಂದು ಏರ್ಪಟ್ಟಿತು. ಅಂದರೆ ವ್ರಸ್ ಚ್ ಎಂದಿರುವಾಗ **ಸ್ತೋಃಶ್ಚುನಾಶ್ಚುಃ** (ಪಾ. ಸೂ. ೮-೪-೪೦) ಎಂಬುದ ರಿಂದ ಶ್ಚುತ್ವ ಬಂದು ನಿಷ್ಪನ್ನವಾದುದು ಎಂದು ಏರ್ಪಟ್ಟಿತು. ಸಂಯೋಗಾದಿ ಲೋಪವನ್ನು ಮಾಡುವಾಗ ಆ ಶ್ಚುತ್ವದಿಂದ ಬಂದ ಶಕಾರವು ಪೂರ್ವತ್ರಾಸಿದ್ಧಮ್ ಎಂಬುದರಿಂದ ಅಸಿದ್ಧವಾಗುವುದು. ಆದ್ದರಿಂದ ಸಂಯೋ ಗಾದಿಯಾದ ಸಕಾರವು ಸಿಗುವುದು. ಏವಂಚ ಸಂಯೋಗಾದಿ ಲೋಪ ಬಂದರೆ ವೃಚ್+ನ **ಚೋಃಕುಃ** (ಪಾ. ಸೂ.

೮-೨-೩೦) ಝಲ್ವರ್ಣಪರದಲ್ಲಿರುವಾಗಲೂ ಪದಾಂತವಿಷಯದಲ್ಲಿರುವಾಗಲೂ ಚವರ್ಗಕ್ಕೆ ಕವರ್ಗ ಬರುವುದು ಎಂಬುದರಿಂದ ಚಕಾರಕ್ಕೆ ಕಕಾರ. ಇಲ್ಲಿಯೂ ಕುತ್ವವನ್ನು ಮಾಡುವಾಗ **ಪೂರ್ವತ್ರಾಸಿದ್ಧಮ್** ಎಂಬುದರಿಂದ ನತ್ವವು ಅಸಿದ್ಧವಾಗುವುದು. ಆದರೆ ನತ್ವವು ಅಸಿದ್ಧವಾಗುವುದರಿಂದ **ವ್ರಶ್ಚಭ್ರಸ್ಜ ಸೃಜಮೃಜಯಜರಾಜಭ್ರಾಜಚ್ಛಶಾಂಷಃ** (ಪಾ.ಸೂ. ೮-೨-೩೬) ಎಂದು ವ್ರಶ್ಚ ಎಂಬಲ್ಲಿರುವ ಚಕಾರಕ್ಕೆ ಷಕಾರಬರಲಿ ಎಂದು ಕೇಳಬಹುದು. ಆದರೂ **ನಿಷ್ಠಾದೇಶಃಷತ್ವಸ್ವರಪ್ರತ್ಯಯೇಡ್ವಿಧಿಷುಸಿದ್ಧೋವಾಚ್ಯಃ** ( ಪಾ. ಸೂ. ೮-೨-೬ ವಾ. ೬ ) ಎಂದು ಷತ್ವಾದಿ ಕಾರ್ಯಗಳನ್ನು ಮಾಡುವಾಗ ನಿಷ್ಠಾದೇಶವು ಸಿದ್ಧವೇ ಆಗುವುದು ಎಂಬುದರಿಂದ ನತ್ವವು ಅಸಿದ್ಧವಾಗುವುದಿಲ್ಲ ಆದ್ದರಿಂದ ಷತ್ವ ಬರುವುದಿಲ್ಲ. ಈ ವಿಷಯವು ಮಾಧವೀಯ ಧಾತು ವೃತ್ತಿಯಲ್ಲಿಯೂ, ಸಿದ್ಧಾನ್ತಕೌಮುದಿಯಲ್ಲಿಯೂ ಸಹ ವ್ಯಕ್ತವಾಗಿರುವುದು. ಕ್ಷುಭ್ನಾದಿಗಣದಲ್ಲಿ ಆ ಣತ್ವನಿಷೇಧಕ್ಕಾಗಿ ನೃನಮನ ಶಬ್ದಪಾಠ ಮಾಡಿರುವುದರಿಂದ ಋಕಾರವನ್ನು ನಿಮಿತ್ತಮಾಡಿ ಕೊಂಡೂ **ಅಟ್ಕುಪ್ವಾಙ್** (ಪಾ. ಸೂ. ೮-೪-೨) ಎಂಬುದರಿಂದ ಣತ್ವ ಬರುವುದು ಎಂದು ಏರ್ಪಡುವುದು. ಆದುದರಿಂದ ಪೂರ್ವೋಕ್ತ ಸೂತ್ರದಿಂದ ನಕಾರಕ್ಕೆ ಣಕಾರ ಬಂಬರೆ ವೃಕ್ಣಃ ಎಂದಾಗಬೇಕು ಇಲ್ಲಿ ಛಾಂದಸ ಪ್ರಕ್ರಿಯೆಯಿಂದ ಓದಿತಕ್ಕ ಎಂದು ವಿಹಿತವಾದ ನಿಷ್ಠಾನತ್ವವೂ **ವ್ರಶ್ಚಭ್ರಸ್ಜ**—(ಪಾ ಸೂ ೮-೨-೩೬) ಎಂದುವಿಹಿತವಾದ ಷತ್ವವೂ ಸಹ ಬರುವುದಿಲ್ಲವೆಂದು ಹೇಳಬೇಕು. ಏವಂಚ ವೃಚ್+ತ ಎಂದಿರುವಾಗ ಕುತ್ವ ಬಂದರೆ ವೃಕ್ತ ಎಂದು ರೂಪವು ಸಿದ್ಧವಾಗುವುದು. ವೃಕ್ತ ಎಂಬುದು ಪ್ರತ್ಯಯ ಸ್ವರದಿಂದ ಅಂತೋದಾತ್ತ. ವೃಕ್ತಂ ಬರ್ಹಿಃ ಯಸ್ಮೈ ಯಜಮಾನಾಯ, ಎಂದಾಗಲೀ ವೃಕ್ತಂ ಬರ್ಹಿಃಯೇನ ಋತ್ವಿಜಾ, ಎಂದಾಗಲೀ ಬಹುವ್ರೀಹಿಸಮಾಸ ಮಾಡಿದರೆ **ಬಹುವ್ರೀಹೌ ಪ್ರಕೃತ್ಯಾಪೂರ್ವಪದಂ** (ಪಾ- ಸೂ. ೬-೨ ೧) ಎಂಬುದರಿಂದ **ಪೂರ್ವಪದಪ್ರಕೃತಿ** ಸ್ವರಬರುವುದು.

**ಅಸಿ**—ಅಸ ಭುವಿ ಧಾತು ಇದರ ಮುಂದೆ ಲಟ್. ಅದರ ಸ್ಥಾನದಲ್ಲಿ ಸಿಪ್. ಶಪ್ ವಿಕರಣಕ್ಕೆ **ಅದಿಪ್ರಭೃತಿಭ್ಯಃ ಶಪಃ** (೨-೪-೭೨) ಎಂಬುದರಿಂದ ಲುಕ್ **ತಾಸಸ್ತ್ಯೋರ್ಲೋಪಃ** (ಪಾ. ಸೂ. ೭-೪-೫೦) ಸಕಾರಾದಿ ಪ್ರತ್ಯಯಪರದಲ್ಲಿರುವಾಗ ತಾಸ್ ಪ್ರತ್ಯಯ ಅಸ್ ಧಾತು ಇವುಗಳ ಕೊನೆಯಲ್ಲಿರುವ ಸಕಾರಕ್ಕೆ ಲೋಪ ಬರುವುದು ಎಂಬುದರಿಂದ ಸಕಾರಕ್ಕೆ ಲೋಪ. ಅಸಿ ಎಂದಾಗುವುದು. ಇದು ಪಾದದ ಆದಿಯಲ್ಲಿ ಇರುವುದರಿಂದ ಅನುದಾತ್ತಸ್ವರ ಬರುವುದಿಲ್ಲ.

**ಹೋತಾ**—**ಹ್ವೇಞ್** ಸ್ಪರ್ಧಾಯಾಂ ಶಬ್ದೇಚ ಧಾತು. ಇದರ ಮುಂದೆ **ತೃನ್** ( ಪಾ ಸೂ. ೩-೨-೧೩೫) ಎಂಬುದರಿಂದ ತಚ್ಛೀಲ ಮೊದಲಾದ ಅರ್ಥಗಳಲ್ಲಿ ತೃ ಪ್ರತ್ಯಯ **ಬಹುಲಂ ಛಂದಸಿ** (ಪಾ. ಸೂ. ೬-೧-೩೪) ಎಂಬುದರಿಂದ ಸಂಪ್ರಸಾರಣ ಸಂಪ್ರಸಾರಣಾಚ್ಚ ಎಂಬುದರಿಂದ ಪೂರ್ವರೂಪ- ಗುಣ ಪ್ರಥಮಾವಿಭಕ್ತಿ ಏಕವಚನದಲ್ಲಿ ಹೋತಾ ಎಂದಾಗುವುದು. ಪ್ರತ್ಯಯವು ನಿತ್ತಾದ್ದರಿಂದ ನಿತ್ಸ್ವರ ಆದ್ಯುದಾತ್ತ ಬರುವುದು.

**ಈಡ್ಯಃ**—ಈಡಸ್ತುತೌ ಧಾತು. **ಋಹಲೋರ್ಣ್ಯತ್** (ಪಾ. ಸೂ. ೩-೧-೧೨೪) ಋಕಾರಾಂತ ಅಥವಾ ಹಲಂತವಾದ ಧಾತುಗಳ ಮುಂದೆ ಣ್ಯತ್ ಪ್ರತ್ಯಯ ಬರುವುದು ಎಂಬುದರಿಂದ ಣ್ಯತ್ ಪ್ರತ್ಯಯ ಬರುವುದು, **ತಿತ್ಸ್ವರಿತಮ್** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತವು ಪ್ರಾಪ್ತವಾದರೆ ಅದನ್ನು ಬಾಧಿಸಿ **ಈಡವನ್ದವೃಶಂಸದುಹಾಂಣ್ಯತಃ** (ಪಾ. ಸೂ. ೬-೧-೨೧೪) ಎಂಬುದರಿಂದ ಆದ್ಯುದಾತ್ತಸ್ವರಬರುವುದು ॥ ೩ ॥

॥ ಸಂಹಿತಾಪಾಠಃ ॥

ತಾँ ಉಶತೋ ವಿ ಬೋಧಯ ಯದಗ್ನೇ ಯಾಸಿ ದೂತ್ಯಂ ।
ದೇವೈರಾ ಸತ್ಸಿ ಬರ್ಹಿಷಿ ॥ ೪ ॥

॥ ಪದಪಾಠಃ ॥

ತಾನ್ । ಉಶತಃ । ವಿ । ಬೋಧಯ । ಯತ್ । ಅಗ್ನೇ । ಯಾಸಿ । ದೂತ್ಯಂ ।
ದೇವೈಃ । ಆ । ಸತ್ಸಿ । ಬರ್ಹಿಷಿ ॥ ೪ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಯದ್ಯಸ್ಮಾತ್ಕಾರಣಾದ್ದೂತಂ ಯಾಸಿ ದೇವಾನಾಂ ದೂತಕರ್ಮ ಪ್ರಾಪ್ನೋಷಿ ತ-ಸ್ಮಾತ್ಕಾರಣಾದುಶತೋ ಹವಿಃ ಕಾಮಯಮಾನಾಂಸ್ತಾನ್ ದೇವಾನ್ ಹವಿಃ ಸ್ವೀಕಾರಾರ್ಥಂ ವಿ ಬೋಧಯ। ವಿಬೋಧ್ಯ ಚ ಬರ್ಹಿಷ್ಯಸ್ಮಿನ್ಕರ್ಮಣಿ ತೈರ್ದೇವೈಃ ಸಹ ಆ ಸತ್ಸಿ । ಆಸೀದ । ಆಗತ್ಯೋಪವಿಶ ॥ ತಾನ್। ದೀರ್ಘಾದಟಿ ಸಮಾನಪಾದೇ ಇತಿ ಸಂಹಿತಾಯಾಂ ರುತ್ವಂ । ಆತೋಽಟಿ ನಿತ್ಯಮಿತ್ಯನುನಾಸಿಕಭಾವಃ । ಉಶತಃ । ವಶ ಕಾಂತೌ । ಲಟಃ ಶತೃ । ಅದಿಪ್ರಭೃತಿಭ್ಯಃ ಶಪ ಇತಿ ಶಪೋ ಲುಕ್ । ಗ್ರಹಿಜ್ಯೇತ್ಯಾದಿನಾ ಸಂಪ್ರಸಾರಣಂ। ಶತುರನುಮೋ ನದ್ಯಜಾದೀ ಇತಿ ವಿಭಕ್ತೇರುದಾತ್ತತ್ವಂ । ಯಾಸಿ । ಯದ್ವೃತ್ತಾನ್ನಿತ್ಯ-ಮಿತಿ ನಿಘಾತಪ್ರತಿಷೇಧಃ । ದೂತಸ್ಯ ಭಾಗಃ ಕರ್ಮ ವಾ ದೂತ್ಯಂ । ದೂತಸ್ಯ ಭಾಗಕರ್ಮಣೀ । ಪಾ. ೪-೪-೧೨೦ । ಇತಿ ಯತ್ । ತಸ್ಯ ತಿತ್ಸ್ವರಿತಾಪವಾದತ್ವೇನ ಯತೋಽನಾವ ಇತಿ ಪ್ರಾಪ್ತಮಾದ್ಯುದಾ-ತ್ತತ್ವಂ ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತ ಇತಿ ನಿವರ್ತತೇ । ಅತಸ್ತಿತ್ಸ್ವರಿತಮಿತ್ಯೇವ ಭವತಿ । ಶೇಷ-ನಿಘಾತಃ । ಸತ್ಸಿ । ಸೀದಸಿ । ಷದಲ್ ವಿಶರಣಗತ್ಯವಸಾದನೇಷು । ಲಟಃ ಸಿಪಿ ಶಪೋ ಬಹುಲಂ ಛಂ-ದಸೀತಿ ಲುಕ್ । ನ ಲುಮತಾಂಗಸ್ಯೇತಿ ಪ್ರತ್ಯಯಲಕ್ಷಣಪ್ರತಿಷೇಧಾತ್ ಪಾಘ್ರೇತ್ಯಾದಿನಾ । ಪಾ. ೭-೩-೭೮ । ಸೀದಾದೇಶೋ ನ ಭವತಿ । ಬರ್ಹಿಷಿ । ವೃಹ ವೃಹಿ ವೃದ್ಧೌ । ವೃಹೇರ್ನಲೋಪಶ್ಚ । ಉ. ೨-೧೧೦ । ಇತೀಸಿಪ್ರತ್ಯಯಃ । ಪ್ರತ್ಯಯಸ್ವರೇಣೇಕಾರ ಉದಾತ್ತಃ ॥

॥ ಪ್ರತಿಪದಾರ್ಥ ॥

(ಹೇ) ಅಗ್ನೇ—ಎಲೈ ಅಗ್ನಿಯೇ । ಯತ್—ಯಾವಕಾರಣದಿಂದ । ದೂತ್ಯಂ—ದೇವತೆಗಳಿಗೆ ದೂತ ಭಾವವನ್ನು । ಯಾಸಿ—ಹೊಂದಿರುವೆಯೋ (ಆ ಕಾರಣದಿಂದ) ಉಶತಃ-ಹವಿಸ್ಸನ್ನ ಪೇಕ್ಷಿಸುವ । ತಾನ್—ಆ ದೇವ ತೆಗಳನ್ನು। ವಿಬೋಧಯ—ಎಚ್ಚರಿಸು (ಪ್ರೇರಿಸು) । (ಅನಂತರ) ದೇವೈಃ—ಆ ದೇವತೆಗಳಿಂದ ಸಹಿತನಾಗಿ । ಬರ್ಹಿಷಿ—ಆಸನಕ್ಕಾಗಿ ಹರಡಿರುವ ದರ್ಭೆಗಳಲ್ಲಿ । ಆ ಸತ್ಸಿ—ಕುಳಿತುಕೋ ॥

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ದೇವತೆಗಳಿಗೆ ದೂತನು. ಆದುದರಿಂದ (ಯಜ್ಞಗಳಲ್ಲಿ) ಹವಿಸ್ಸನ್ನು ಅಪೇಕ್ಷಿಸುವ ಆ ದೇವತೆಗಳನ್ನ ಪ್ರೇರಿಸಿ ಇಲ್ಲಿಗೆ ಕರೆದುಕೊಂಡು ಬಂದು ಅವರೊಡನೆ ಆಸನಾರ್ಥವಾಗಿ ಸಿದ್ಧಪಡಿಸಿರುವ ಕತ್ತರಿಸಿದ ದರ್ಭೆಗಳ ಮೇಲೆ ಕುಳಿತುಕೋ ||

## English Translation

O Agni, as you go as messenger of Gods, awaken them desirous of oblations ; sit down with them on the sacred grass.

॥ ವಿಶೇಷವಿಷಯಗಳು ॥

**ಬರ್ಹಿಷಿ**—ಆಸನಕ್ಕಾಗಿ ಎಂದರೆ ದೇವತೆಗಳು ಕುಳಿತುಕೊಳ್ಳುವುದಕ್ಕಾಗಿ ತುದಿಗಳನ್ನು ಕತ್ತರಿಸಿದ ದರ್ಭೆಗಳನ್ನು ಹರಡುವುದು ಪದ್ಧತಿಯು. ಆಜ್ಯಪಾತ್ರೆಗಳನ್ನೂ ಹವಿಸ್ಸನ್ನೂ ಇಂತಹ ದರ್ಭೆಗಳನ್ನು ಹರಡಿ ಅದರ ಮೇಲೆ ಇಡುವುದು ಶ್ರೇಷ್ಠವೆಂದೂ ಪದ್ಧತಿಯೆಂದೂ ಭಾವಿಸಲ್ಪಟ್ಟಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ತಾನ್**—**ದೀರ್ಘಾದಟಿಸಮಾನಪಾದೇ** (ಪಾ. ಸೂ. ೮-೩-೯) ಎಂಬುದರಿಂದ ಸಂಹಿತಾ ಕಾಲದಲ್ಲಿ ನಕಾರಕ್ಕೆ ರು ಆದೇಶ. **ಆತೋಽಟಿನಿತ್ಯಮ್** (ಪಾ. ಸೂ. ೮-೩-೩) ಎಂಬುದರಿಂದ ದೀರ್ಘಾಕಾರಕ್ಕೆ ಅನುನಾಸಿಕವಾದ ಅಕಾರ **ಭೋಭಗೋ** ( ಪಾ. ಸೂ. ೮ ೩-೧೭ ) ಎಂಬುದರಿಂದ ಯತ್ವ **ಲೋಪಶ್ಶಾಕಲ್ಯಸ್ಯ** (ಪಾ ಸೂ ೮.೩-೧೯) ಎಂಬುದರಿಂದ ಯ ಲೋಪ. ತಾ ಉಶತಃ ಎಂದಾಗುವುದು.

ಉಶತಃ--ವಶ ಕಾನ್ತೌ ಧಾತು. ಇದರ ಮುಂದೆ ಲಟ್. ಅದಕ್ಕೆ **ಲಟಶ್ಶತೃ** (ಪಾ.ಸೂ. ೩-೨-೧೨೪) ಎಂಬುದರಿಂದ ಶತೃ. **ಅದಿಪ್ರಭೃತಿಭ್ಯಃಶಪಃ** (ಪಾ. ಸೂ. ೨-೪-೭೨) ಎಂಬುದರಿಂದ ವಿಕರಣ ಶಪ್‌ಗೆ ಲುಕ್ **ಗ್ರಹಿಜ್ಯಾವಯಿ ವ್ಯಧಿವಷ್ಟಿ** (ಪಾ. ಸೂ. ೬-೧-೧೬) ಎಂಬುದರಿಂದ ಸಂಪ್ರಸಾರಣ ವಕಾರಕ್ಕೆ ಉಕಾರ. ಸಂಪ್ರಸಾರಣಾಚ್ಚ ಎಂಬುದರಿಂದ ಪೂರ್ವರೂಪ. ಉಶತ್ ದ್ವಿತೀಯಾ ಬಹುವಚನಾಂತ. **ಶತುರನುಮೋನದ್ಯಜಾದೀ** (ಪಾ. ಸೂ. ೭-೧-೧೭೩) ಎಂಬುದರಿಂದ ವಿಭಕ್ತಿಯು ಉದಾತ್ತ.

**ಯಾಸಿ**—**ಯಾ ಪ್ರಾಪಣೇ** ಧಾತು ಲಟ್. ಮಧ್ಯಮಪುರುಷ ಏಕವಚನ. **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಯಾವ ಪದದಲ್ಲಿಯಚ್ಛಬ್ದವಿರುವುದೋ ಅದರ ಮುಂದೆ ಇರುವ ತಿಙಂತವು ಅನುದಾತ್ತವಾಗುವುದಿಲ್ಲ ಎಂದು ನಿಷೇಧ ಬರುವುದರಿಂದ **ತಿಙ್ಙತಿಙಃ** ಎಂಬುದರಿಂದ **ಅನುದಾತ್ತ** ಬರುವುದಿಲ್ಲ

ದೂತ್ಯಮ್—ದೂತಸ್ಯ ಭಾವಃ, ಕರ್ಮ ವಾ, ಎಂದು ವಿಗ್ರಹ. ಭಾಗ ಎಂದರೆ ಅಂಶ. ಕರ್ಮ ಎಂದರೆ ಕ್ರಿಯಾ. ಭಾಗಾರ್ಥದಲ್ಲಿ ಪುಲ್ಲಿಂಗ ದ್ವಿವಚನಾನ್ತ. ಕರ್ಮಾರ್ಥದಲ್ಲಿ ನಪುಂಸಕಲಿಂಗ ದ್ವಿತೀಯಾ ಏಕವಚನಾನ್ತ. **ದೂತಸ್ಯಭಾಗಕರ್ಮಣೀ** (ಪಾ. ಸೂ. ೪-೪-೧೨೦) ದೂತಶಬ್ದ ಪ್ರಕೃತಿಕ ಷಷ್ಠ್ಯಂತದ ಮುಂದೆ ಭಾಗ ಕರ್ಮ ಎಂಬ ಅರ್ಥಗಳಲ್ಲಿ ಯತ್ ಪ್ರತ್ಯಯ ಬರುವುದು. ಎಂಬುದರಿಂದ ದೂತ ಶಬ್ದದ ಮುಂದೆ ಯತ್ ಪ್ರತ್ಯಯ

ಬರುವುದು. ಯತ್ ಪ್ರತ್ಯಯವು ತಕಾರೇತ್ಸಂಜ್ಞಕ. ಆದ್ದರಿಂದ **ತಿತ್ಸ್ವರಿತಮ್** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಪ್ರಾಪ್ತವಾದರೆ ಅದನ್ನು ಬಾಧಿಸಿ **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತ ಪ್ರಾಪ್ತವಾಗುವುದು. ಅದು **ಸರ್ವೇವಿಧಯಶ್ಛಂದಸಿ ವಿಕಲ್ಪ್ಯಂತೇ** ( ಪರಿಭಾ. ೩೫ ) ಎಂಬ ಪರಿಭಾಷೆಯಿಂದ ವಿಕಲ್ಪವಾದ್ದರಿಂದ ಪ್ರವೃತ್ತ ವಾಗುವುದಿಲ್ಲ. ಆದ್ದರಿಂದ ಸ್ವರಿತ ಸ್ವರವೇ ಬರುವುದು. **ಅನುದಾತ್ತಂ ಪದಮೇಕವರ್ಜಮ್** (ಪಾ. ಸೂ. ೬-೧-೧೫೮) ಎಂಬುದರಿಂದ ಮಿಕ್ಕ ಪೂ ಎಂಬುದಕ್ಕೆ ಅನುದಾತ್ತ ಬರುವುದು.

**ಸತ್ಸಿ**—ಸೀದಸಿ ಎಂದು ಅರ್ಥ. ಷದ್ಲೃ ವಿಶರಣಗತ್ಯವಸಾದನೇಷು ಧಾತು. ಇದರ ಮುಂದೆ ಲಟ್, ಅದರ ಸ್ಥಾನದಲ್ಲಿ ಮಧ್ಯಮ ಏಕವಚನ ಸಿಪ್. ಸದ್+ಸಿ **ಬಹುಲಂಛಂದಸಿ** ( ಪಾ. ಸೂ. ೨-೪-೭೩ ) ಎಂಬುದರಿಂದ ಶಪ್ ವಿಕರಣಕ್ಕೆ ಲುಕ್. **ನಲುಮತಾಂಗಸ್ಯ** (ಪಾ. ಸೂ. ೧-೧-೬೩) ಎಂಬುದರಿಂದ ಪ್ರತ್ಯಯ ಲಕ್ಷಣಕ್ಕೆ ಪ್ರತಿಷೇಧ ಬರುವುದು ಆದ್ದರಿಂದ **ಪಾಘ್ರಾಧ್ಮಾ**... (ಪಾ. ಸೂ. ೭-೩-೭೮) ಎಂಬುದರಿಂದ ಸೀದ ಎಂಬ ಆದೇಶ ಬರುವುದಿಲ್ಲ. **ಖರಿಚ** (ಪಾ. ಸೂ. ೮-೪-೫೫) ಎಂಬುದರಿಂದ ಚರ್ತ್ವ. ಸರ್ವಾನುದಾತ್ತ ಬರುವುದು.

**ಬರ್ಹಿಷಿ**—ಬೃಹ ಬೃಹಿ ವೃದ್ಧೌ ಧಾತು, **ಬೃಂಹೇರ್ನಲೋಪಶ್ಚ** (ಉ. ಸೂ. ೨-೨೬೬) ಬೃಹಿ ಧಾತುವಿನ ಮುಂದೆ ಇಸಿ ಪ್ರತ್ಯಯ ಬರುವುದು. ನಕಾರಕ್ಕೆ ಲೋಪವೂ ಬರುವುದು ಎಂದು ಇದರ ಅರ್ಥ. ಈಸೂತ್ರದಿಂದ ಬೃಹಿ ಧಾತುವಿನ ಮುಂದೆ ಇಸಿ ಪ್ರತ್ಯಯವೂ ಬೃಹಿಧಾತುವು ಇದಿತ್ತಾದ್ದರಿಂದ **ಇದಿತೋನುಮ್-ಧಾತೋಃ** (ಪಾ.ಸೂ. (೭-೧-೫೮) ಎಂಬುದರಿಂದ ಬಂದ ನುಮಾಗಮಸಂಬಂಧಿಯಾದ ನಕಾರಕ್ಕೆ ಲೋಪವೂ-ಸಹ ಬರುವುದು. ಬೃಹ್+ ಇಸ್ ಲಘೂಪಧಗುಣ, ರಪರತ್ವ. ಬರ್ಹಿಸ್ ಎಂದಾಗುವುದು ಪ್ರತ್ಯಯ ಸ್ವರದಿಂದ ಇಕಾರವು ಉದಾತ್ತ. ಸಪ್ತಮ್ಯೇಕವಚನದಲ್ಲಿ ಬರ್ಹಿಷಿ ಎಂದಾಗುವುದು. ॥ ೪ ॥

॥ ಸಂಹಿತಾಪಾಠಃ ॥

ಘೃತಾಹವನ ದೀದಿವಃ ಪ್ರತಿ ಷ್ಮ ರಿಷತೋ ದಹ ॥
ಅಗ್ನೇ ತ್ವಂ ರಕ್ಷಸ್ವಿನಃ ॥ ೫ ॥

॥ ಪದಪಾಠಃ ॥

ಘೃತಽಆಹವನ । ದೀದಿಽವಃ । ಪ್ರತಿ । ಸ್ಮ । ರಿಷತಃ । ದಹ ॥
ಅಗ್ನೇ । ತ್ವಂ । ರಕ್ಷಸ್ವಿನಃ ॥ ೫ ॥

॥ ಸಾಯಣಭಾಷ್ಯಂ ॥

ಹೇ ಘೃತಾಹವನ ಘೃತೇನಾಹೂಯಮಾನ ದೀದಿವೋ ದೀಪ್ಯಮಾನಾಗ್ನೇ ತ್ವಂ ರಕ್ಷಸ್ವಿನೋ ರಕ್ಷೋಯುಕ್ತಾನ್ ರಿಷತೋ ಹಿಂಸಕಾನ್ ಶತ್ರೂನ್ಪ್ರತ್ಯಸ್ಮಾಕಂ ಪ್ರತಿಕೂಲಾನ್ದಹ ಸ್ಮ। ಸರ್ವಥಾ ಭಸ್ಮೀಕುರು ॥ ಘೃತೇನಾಹೂಯತೇಽಸ್ಮಿನ್ನಿತಿ ಕರಣಾಧಿಕರಣಯೋಶ್ಚೇತ್ಯಧಿಕರಣೇ ಲ್ಯುಟ್ । ಅತ್ರ ಜುಹೋತೇರವಿವಕ್ಷಿತಕರ್ಮತ್ವೇನಾಕರ್ಮಕತ್ವಾದ್ಘೃತಸ್ಯ ಕರಣತ್ವಮೇವ ನ ತು ಕರ್ಮತ್ವಂ । ಅತೋ ನೈಷಾ ತೃತೀಯಾ ಚ ಹೋಶ್ಛಂದಸಿ । ಪಾ. ೨-೩-೩ । ಇತಿ ಕರ್ಮಣಿ ತೃತೀಯಾ । ಕಿಂತು ಕರ್ತೃಕರಣಯೋಸ್ತೃತೀಯಾ । ಪಾ. ೨-೩-೧೮ । ಇತಿ ಕರಣವಾಚಿನ್ಯೇವ । ಅತಃ ಕರ್ತೃಕರಣೇ ಕೃತಾ ಬಹುಲಂ । ಪಾ. ೨-೧-೩೨ । ಇತಿ ಸಮಾಸಃ । ತತ್ರ ಪೂರ್ವಪದಪ್ರಕೃತಿಸ್ವರಾಪವಾದೇ ಕೃದುತ್ತರಪದಪ್ರಕೃತಿಸ್ವರೇ ಪ್ರಾತಿಪದಿಕಾವಸ್ಥಾಯಾಮೇವ ಕೃತೇ ಸತಿ ಪಶ್ಚಾದ್ವಿಭಕ್ತ್ಯುತ್ಪನ್ನಾಯಾಮಾಮಂತ್ರಿತಸ್ಯ ಚೇತ್ಯಾದ್ಯುದಾತ್ತತ್ವಂ। ದೀದಿವಃ । ದೀವ್ಯತೇರ್ಲಿಟಃ । ಕ್ವಸುಃ । ತಸ್ಯ ವಸ್ವೇಕಾಜಾದ್ಘಸಾಮಿತಿ ನಿಯಮಾದಿಡಭಾವಃ । ದ್ವಿರ್ವಚನಂ। ಹಲಾದಿಶೇಷಃ। ಉತ್ತರವಕಾರಸ್ಯ ಲೋಪೋ ವ್ಯೋರ್ವಲೀತಿ ಲೋಪಃ। ಕ್ವಸುಃ । ಕಿತ್ತ್ವಾದ್ಗುಣಾಭಾವಃ । ತುಜಾದೀನಾಂ ದೀರ್ಘೋಽಭ್ಯಾಸಸ್ಯ । ಪಾ. ೬-೧-೭ । ಇತಿ ದೀರ್ಘತ್ವಮಭ್ಯಾಸಸ್ಯ । ಸಂಬುದ್ಧಾವುಗಿದಚಾಮಿತಿ ನುಮ್ । ಸಂಯೋಗಾಂತಸ್ಯ ಲೋಪಃ । ಪಾ. ೮-೨-೨೩ । ಇತಿ ಸಕಾರಲೋಪೇ ನಕಾರಸ್ಯ ಮತುವಸೋ ರುಃ ಸಂಬುದ್ಧೌ ಛಂದಸೀತಿ ರುತ್ವಂ। ವಿಸರ್ಗಃ । ಪಾದಾತ್ಪರತ್ವಾದಾಮಂತ್ರಿತನಿಘಾತಃ । ನನು ಪೂರ್ವಾಮಂತ್ರಿತಸ್ಯಾವಿದ್ಯಮಾನವತ್ತ್ವಾತ್ಪಾದಾದಿತ್ವೇನ ನ ನಿಘಾತೋಪಪತ್ತಿಃ । ನ ಚ ನಾಮಂತ್ರಿತೇ ಸಮಾನಾಧಿಕರಣೇ ಸಾಮಾನ್ಯವಚನಂ । ಪಾ. ೮-೧-೭೩ । ಇತ್ಯವಿದ್ಯಮಾನವತ್ತ್ವಪ್ರತಿಷೇಧಃ । ಉಭಯೋರಗ್ನಿಪದವಿಶೇಷಣತ್ವೇನ ವಿಶೇಷವಚನತ್ವಾತ್। ಅತ ಏವ ಪರಸ್ಪರಮನನ್ವಯೇನಾಸಾಮರ್ಥ್ಯಾತ್ಸಮರ್ಥಃ ಪದವಿಧಿಃ ॥ ಪಾ. ೨-೧-೧ । ಇತಿ ಚ ನಿಯಮಾತ್ಪೂರ್ವಸ್ಯ ನ ಪರಾಂಗವದ್ಭಾವೋ ಯೇನೈಕಪದ್ಯೇನ ನಿಘಾತಃ ಸ್ಯಾತ್ । ಅತ ಏವ ಹೀಡೇ ರಂತೇಽದಿತೇ ಸರಸ್ವತೀತ್ಯಾದೌ । ತೈ. ಸಂ. ೭-೧-೬-೮ । ಪೃಥಕ್ ಪೃಥಗಾದ್ಯುದಾತ್ತತ್ವಮಿತಿ । ಉಚ್ಯತೇ । ಅತ್ರ ದೀದಿವ ಇತಿ ನಾಗ್ನಿಪದಸ್ಯ ವಿಶೇಷಣಂ ಕಿಂತು ಘೃತಾಹವನಪದಸ್ಯೈವ ದ್ಯೋತನಾರ್ಥಂ । ಘೃತಾಹವನ ಇತಿ ವಿಶೇಷ್ಯತ್ವೇನ ವಿವಕ್ಷಿತತ್ವಾತ್ । ವಿಶಿಷ್ಟಸ್ಯ ತು ಪಶ್ಚಾದಗ್ನಿವಿಶೇಷಣತಾ । ತತ್ರ ದೀದಿವಃ ಪದಂ ಪ್ರತಿ ಘೃತಾಹವನಪದಸ್ಯ ವಿಶೇಷ್ಯತ್ವಾನ್ನಾಮಂತ್ರಿತೇ ಸಮಾನಾಧಿಕರಣ ಇತ್ಯವಿದ್ಯಮಾನವತ್ತ್ವಪ್ರತಿಷೇಧಾನ್ನಿಘಾತೋಪಪತ್ತಿಃ । ಅತ ಏವ ಪರಸ್ಪರವಿಶೇಷಣವಿಶೇಷ್ಯಭಾವೇನ ಸಾಮರ್ಥ್ಯಾತ್ಸುಬಾಮಂತ್ರಿತ ಇತಿ ಪರಾಂಗವದ್ಭಾವೇ ಶೇಷನಿಘಾತೇನಾಪಿ ಸ್ವರೋಪಪತ್ತಿರಿತಿ । ಇಡೇ ರಂತ ಇತ್ಯಾದೌ ತು ನೈವಂ ಪರಸ್ಪರಾನ್ವಯ ಇತಿ ವೈಷಮ್ಯಂ । ರಿಷತಃ। ರುಷ ರಿಷ ಹಿಂಸಾರ್ಥಾ ಇತಿ ಭೌವಾದಿಕಸ್ಯ ಲಟಃ । ಶತ್ರಾದೇಶೇ ಶಪಿ ಛಾಂದಸೋ ಗುಣಾಭಾವಃ । ತೌದಾದಿಕಸ್ಯ ವಾ ರುಶ ರಿಶ ಹಿಂಸಾಯಾಮಿತ್ಯಸ್ಯ ಛಾಂದಸಂ ಷತ್ವಂ । ವಿಕರಣಸ್ಯ ಶಸ್ಯ ಙಿತ್ತ್ವಾದ್ಗುಣಾಭಾವಃ । ರಕ್ಷಸ್ಯಬ್ದಾದಸ್ಮಾಯಾಮೇಧಾಸ್ರಜೋ ವಿನಿಃ । ಪಾ. ೫-೨-೧೨೧ । ಇತಿ ಮತ್ವರ್ಥೀಯೋ ವಿನಿಃ । ತಸ್ಯ ಪ್ರತ್ಯಯಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

ಘೃತಾಹವನ—ಘೃತ (ತುಪ್ಪ) ವನ್ನು ಹೋಮಮಾಡುವುದರಿಂದ ಆಹ್ವಾನಮಾಡಲ್ಪಡುವ। ದೀದಿವಃ— ಪ್ರಕಾಶಮಾನನಾದ। (ಹೇ) ಅಗ್ನೇ—ಎಲೈ ಅಗ್ನಿಯೇ। ತ್ವಂ—ನೀನು । ರಕ್ಷಸ್ವಿನಃ—ರಾಕ್ಷಸರಿಂದ ಸಹಿತರಾದ । ರಿಷತಃ—ಹಿಂಸೆಮಾಡುವ । ಪ್ರತಿ—ನಮಗೆ ವಿರೋಧಿಗಳಾದವರನ್ನು । ದಹ ಸ್ಮ—ಚೆನ್ನಾಗಿ ಭಸ್ಮಮಾಡು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನ್ನನ್ನು ಆಹ್ವಾನಮಾಡುವಾಗ ಘೃತದಿಂದ ಹೋಮಮಾಡುವೆವು. ಆದರಿಂದ ನೀನು ಜಾಜ್ವಲ್ಯಮಾನನಾಗಿ ಪ್ರಕಾಶಿಸುವೆ. ಇಂತಹ ನೀನು ರಾಕ್ಷಸರೂ ನಮ್ಮನ್ನು ಹಿಂಸೆಮಾಡುವವರೂ ಆದ ನಮ್ಮ ವಿರೋಧಿಗಳನ್ನು ಸುಟ್ಟು ಭಸ್ಮಮಾಡು.

## English Translation

Resplendent Agni, invoked by oblations of clarified butter burn down our adversaries defended by evil spirits ( Rakshas )

॥ ವಿಶೇಷವಿಷಯಗಳು ॥

ಘೃತಾಹವನ, ದೀದಿವಃ— ಅಗ್ನಿಯಲ್ಲಿ ತುಪ್ಪವನ್ನು ಹೋಮಮಾಡಿ ಆಹ್ವಾನ ಮಾಡುವುದು ಯಜ್ಞಗಳಲ್ಲಿ ಪದ್ಧತಿಯು ಮತ್ತು ಆರೀತಿ ಮಾಡುವ ಘೃತಹೋಮದಿಂದ ಅಗ್ನಿಯು ಜಾಜ್ವಲ್ಯಮಾನವಾಗಿ ಪ್ರಕಾಶಿಸುವುದರಿಂದ ದೀದಿವಃ— ಎಂಬ ಶಬ್ದವು ಇಲ್ಲಿ ಉಪಯೋಗಿಸಲ್ಪಟ್ಟಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಘೃತಾಹವನ**— ಘೃತೇನ ಹೂಯತೇ ಅಸ್ಮಿನ್ ಎಂದು ವಿಗ್ರಹ ಮಾಡಿದರೆ **ಕರಣಾಧಿಕರಣಯೋಶ್ಚ** (ಪಾ. ಸೂ. ಸೂ. ೩-೩-೧೧೭) ಕರಣ ಮತ್ತು ಅಧಿಕರಣ ಎಂಬ ಅರ್ಥಗಳಲ್ಲಿ ಧಾತುವಿನ ಮುಂದೆ ಲ್ಯುಟ್ ಪ್ರತ್ಯಯ ಬರುವುದು ಎಂಬುದರಿಂದ ಹು ದಾನಾದನಯೋಃ ಎಂಬ ಧಾತುವಿನ ಮುಂದೆ ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅನಾದೇಶ, ಗುಣ, ಅವಾದೇಶ, ಹವನ ಎಂದು ಸಿದ್ಧವಾಗುವುದು. ಧಾತುವು ಸಕರ್ಮಕವಾದರೂ ಕರ್ಮವನ್ನು ವಿವಕ್ಷೆ ಮಾಡುವುದಿಲ್ಲವಾದ್ದರಿಂದ ಅಕರ್ಮಕವಾಗುವುದು. ಆದ್ದರಿಂದ ಘೃತ ಎಂಬುದು ಹುಧಾತೂಪಾತ್ತಕ್ರಿಯೆಯಲ್ಲಿ ಕರಣವಾಗುವುದೇ ವಿನಾ ಕರ್ಮವಾಗುವುದಿಲ್ಲ. ಕರ್ಮವಲ್ಲದುದರಿಂದ **ತೃತೀಯಾ ಚ ಹೋಶ್ಛಂದಸಿ** (ಪಾ. ಸೂ. ೨-೩-೩) ಹುಧಾತ್ವರ್ಥ ಕ್ರಿಯಾನಿರೂಪಿತ ಕರ್ಮವಾಚಕದ ಮುಂದೆ ತೃತೀಯಾವಿಭಕ್ತಿಯೂ ಚಕಾರದಿಂದ ದ್ವಿತೀಯಾವಿಭಕ್ತಿಯೂ ಸಹ ಛಂದಸ್ಸಿನಲ್ಲಿ ಬರುವುದು ಎಂಬುದರಿಂದ ಕರ್ಮಣಿ ತೃತೀಯಾವಿಭಕ್ತಿ ಬರುವುದಿಲ್ಲ. **ಕರ್ತೃಕರಣಯೋಸ್ತೃತೀಯಾ** (ಪಾ ಸೂ. ೨-೩-೧೮) ಕರ್ತ್ರರ್ಥಕ ಅಥವಾ ಕರಣಾರ್ಥಕವಾದ ಪ್ರಾತಿಪದಿಕದ ಮುಂದೆ ತೃತೀಯಾ ಬರುವುದು ಎಂಬುದರಿಂದ ಕರಣಾರ್ಥಕವಾದ ತೃತೀಯೆಯು ಬರುವುದು. ಏವಂಚ ಘೃತೇನ ಎಂಬುದು ಕರಣತೃತೀಯಾಂತ. ಇದಕ್ಕೆ ಹವನ ಎಂಬ ಕೃದಂತದೊಂದಿಗೆ **ಕರ್ತೃಕರಣೇ ಕೃತಾಬಹುಲಮ್** (ಪಾ. ಸೂ. ೨-೧-೩ ಕರ್ತೃಕರಣಾನ್ಯತರಾರ್ಥಪ್ರತಿಪಾದಕವಾದ ತೃತೀಯಾಂತ ಸುಬಂತವು ಸಮರ್ಥವಾದ ಕೃದಂತದೊಂದಿಗೆ ಸಮಾಸವನ್ನು ಹೊಂದುವುದು ಎಂಬುದರಿಂದ ಸಮಾಸ ಬರುವುದು. ಘೃತಹವನ ಎಂದಿರುವುದು. ಈಗ **ತೆತ್ಪುರುಷೇತುಲ್ಯಾರ್ಥ** (ಪಾ. ಸೂ. ೬-೨-೨) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಪ್ರಾಪ್ತವಾದರೆ ಅದನ್ನು ಬಾಧಿಸಿ **ಗತಿಕಾರಕೋ....**(ಪಾ. ಸೂ. ೬-೨-೧೩೯) ಎಂಬುದರಿಂದ ಪ್ರಾತಿಪದಿಕವಾಗಿರುವಾಗಲೇ ಕೃದುತ್ತರಪದ

ಪ್ರಕೃತಿ ಸ್ವರ ಬರುವುದು. ನಂತರ ಸಂಬೋಧನ ಪ್ರಥಮಾವಿಭಕ್ತಿಯನ್ನು ಹಚ್ಚಿದರೆ ಅದಕ್ಕೆ **ಏಙ್ಹ್ರಸ್ವಾತ್ಸಂಬುದ್ಧೇಃ** (ಪಾ. ಸೂ. ೬-೧-೬೯) ಏಙಂತ ಅಥವಾ ಹ್ರಸ್ವಾಂತವಾದ ಅಂಗದ ಮುಂದೆ ಇರುವ ಸಂಬುದ್ಧ್ಯವಯವವಾದ ವ್ಯಂಜನಕ್ಕೆ ಲೋಪ ಬರುವುದು ಎಂಬುದರಿಂದ ಲೋಪ. ಈಗ ಘೃತಹವನ ಎಂಬುದು ಆಮಂತ್ರಿತವಾಗುವುದು. ಆದ್ದರಿಂದ **ಆಮಂತ್ರಿತಸ್ಯಚ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತ ಬರುವುದು.

**ದೀದಿವಃ**—ದಿವುಕ್ರೀಡಾವಿಜಗೀಷಾವ್ಯವಹಾರದ್ಯುತಿ ಮೋದಮದಸ್ವಪ್ನಕಾನ್ತಿಗತಿಷು ಧಾತು. ಇದರ ಮುಂದೆ ಲಿಟ್ ಅದರ ಸ್ಥಾನದಲ್ಲಿ **ಕ್ವಸುಶ್ಚ** (ಪಾ. ಸೂ ೩-೨-೧೦೭) ಎಂಬುದರಿಂದ ಕ್ವಸುಪ್ರತ್ಯಯ. ದಿವ್+ವಸ್, ಈಗ **ವಸ್ವೇಕಾಜಾದ್ಘಸಾಮ್** (ಪಾ. ಸೂ. ೭-೨-೬೭) ದ್ವಿತ್ವ ಮಾಡಿದ ನಂತರ ಏಕಾಚ್ಕವಾದಧಾತು ಆಕಾರಾಂತ ಧಾತು ಘಸ್ಲೃ ಧಾತು ಇವುಗಳ ಮುಂದೆ ಇರುವ ವಸ್‌ಗೆ ಮಾತ್ರ ಇಡಾಗಮ ಬರುವುದು. ಬಾಕಿ ಧಾತುಗಳ ಮುಂದೆ ಇರುವ ವಸ್‌ಗೆ ಇಡಾಗಮ ಬರುವುದಿಲ್ಲ ಎಂದು ಹೇಳಿರುವುದರಿಂದ ಇಲ್ಲಿ ವಸ್‌ಗೆ ಇಡಾಗಮ ಬರುವುದಿಲ್ಲ. **ಲಿಟಿಧಾತೋರನಭ್ಯಾಸಸ್ಯ** (ಪಾ. ಸೂ. ೬-೧-೮) ಎಂಬುದರಿಂದ ದ್ವಿತ್ವ ದಿವ್. ದಿವ್+ವಸ್. **ಹಲಾದಿಃಶೇಷಃ** (ಪಾ. ಸೂ ) ೭-೪-೬೦ ಎಂಬುದರಿಂದ ಅಭ್ಯಾಸದಲ್ಲಿರುವ ವಕಾರಕ್ಕೆ ನಿವೃತ್ತಿ, **ತುಜಾದೀನಾಂ ದೀರ್ಘೋಽಭ್ಯಾಸಸ್ಯ** (ಪಾ. ಸೂ. ೬-೧-೭) ತುಜಾದಿಯು ಆಕೃತಿಗಣ. ತುಜಾದಿಗಣಕ್ಕೆ ಸೇರಿದ ಧಾತುಗಳ ಅಭ್ಯಾಸಕ್ಕೆ ಛಂದಸ್ಸಿನಲ್ಲಿ ದೀರ್ಘ ಬರುವುದು ಎಂಬುದರಿಂದ ದೀರ್ಘ ದೀದಿವ್+ವಸ್. **ಲೋಪೋವ್ಯೋರ್ವಲಿ** (ಪಾ.ಸೂ. ೬-೧-೬೬) ವಲ್ ಪ್ರತ್ಯಾಹಾರದ ವರ್ಣಗಳು ಪರದಲ್ಲಿರುವಾಗ ವಕಾರ ಯಕಾರಗಳಿಗೆ ಲೋಪ ಬರುವುದು ಎಂಬುದರಿಂದ ಎರಡನೆಯ ದಿವ್ ಶಬ್ದದ ವಕಾರಕ್ಕೆ ಲೋಪ. ದೀದಿವಸ್. ಕ್ವಸುಪ್ರತ್ಯಯವು ಕಿತ್ತು. ಆದ್ದರಿಂದ ದೀದಿ ಎಂಬುದಕ್ಕೆ **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ ೭-೩-೮೪) ಎಂಬುದರಿಂದ ಗುಣ ಬರುವುದಿಲ್ಲ. ಇದರ ಮುಂದೆ ಸಂಬೋಧನಪ್ರಥಮಾ ಏಕವಚನ ಸುಪ್ರತ್ಯಯವನ್ನು ಹಚ್ಚುವುದು. **ಉಗಿದಚಾಂ ಸರ್ವನಾಮಸ್ಥಾನೇಽಧಾತೋಃ** (ಪಾ ಸೂ. ೭-೧-೭೦) ಧಾತು ಸಂಬಂಧಿಯಲ್ಲದ ಉಗಿತ್ತು, ನಕಾರಲೋಪವನ್ನು ಹೊಂದಿರುವ ಅಞ್ಚು ಧಾತು ಇವುಗಳಿಗೆ ಸರ್ವನಾಮಸ್ಥಾನ ಪರದಲ್ಲಿರುವಾಗ ನುಮಾಗಮ ಬರುವುದು ಎಂಬುದರಿಂದ ನುಮಾಗಮ, ದೀದಿವನಸ್+ಸು. **ಹಲ್ಙ್ಯಾಬ್ಭ್ಯಃ** (ಪಾ. ಸೂ. ೬-೧-೬೮) ಎಂಬುದರಿಂದ ಸುಲೋಪ **ಸಂಯೋಗಾಂತಸ್ಯಲೋಪಃ** (ಪಾ. ಸೂ. ೮-೨-೨೩) ಸಂಯೋಗವನ್ನು ಕೊನೆಯಲ್ಲಿ ಹೊಂದಿರುವ ಪದದ ಕೊನೆಯ ವರ್ಣಕ್ಕೆ ಲೋಪ ಬರುವುದು ಎಂಬುದರಿಂದ ಸಕಾರಕ್ಕೆ ಲೋಪ ದೀದಿವನ್ ಎಂದಿರುವುದು ಈಗ **ಮತುವಸೋರು ಸಂಬುದ್ಧೌ ಛಂದಸಿ** (ಪಾ. ಸೂ. ೮-೩-೧) ಛಂದಸ್ಸಿನಲ್ಲಿ ಸಂಬುದ್ಧಿಯ ಹಿಂದೆ ಇರುವ ಮತುಪ್ ಪ್ರತ್ಯಯಾಂತ ವಸುಪ್ರತ್ಯಯಾಂತಗಳ ಕೊನೆಯ ವರ್ಣಕ್ಕೆ ರು ಆದೇಶ ಬರುವುದು ಎಂಬುದರಿಂದ ನಕಾರಕ್ಕೆ ರು ಆದೇಶ. **ಖರವಸಾನಯೋರ್ವಿಸರ್ಜನೀಯಃ** (ಪಾ ಸೂ. ೮-೩-೧೫) ಎಂಬುದರಿಂದ ರೇಫಕ್ಕೆ ವಿಸರ್ಗ ದೀದಿವಃ ಎಂದಾಗುವುದು. ಇದು ಘೃತಾಹವನ ಎಂಬ ಪದದ ಮುಂದೆ ಇರುವುದು. ಆದ್ದರಿಂದ **ಆಮಂತ್ರಿತಸ್ಯಚ** (ಪಾ. ಸೂ ೮-೧-೧೯) ಎಂಬುದರಿಂದ ಸರ್ವಾನುದತ್ತ ಬರುವುದು. ಇಲ್ಲಿ ಘೃತಾಹವನ ಎಂಬುದೂ ಆಮಂತ್ರಿತ, ದೀದಿವಃ ಎಂಬುದೂ ಆಮಂತ್ರಿತ, ಮೊದಲನೆಯ ಆಮಂತ್ರಿತಕ್ಕೆ **ಆಮಂತ್ರಿತಂಪೂರ್ವಮವಿದ್ಯಮಾನವತ್** (ಪಾ. ಸೂ ೮-೧-೭೨) ಪೂರ್ವದಲ್ಲಿರುವ ಆಮಂತ್ರಿತವು ಅವಿದ್ಯಮಾನದಂತೆ ಆಗುವುದು ಅಂದರೆ ಇಲ್ಲದಂತೆ ಆಗುವುದು ಎಂದು ಭಾವ. ಇದರಿಂದ ಅವಿದ್ಯಮಾನವದ್ಭಾವ ಬಂದರೆ ಎರಡನೇ ಆಮಂತ್ರಿತವು ಪದಾತ್ಪರವಾಗುವುದಿಲ್ಲ ಆದ್ದರಿಂದ ಅಷ್ಟಮಿಕವಾದ ಆಮಂತ್ರಿತಾನುದಾತ್ತವು ಹೇಗೆ ಉಪಪನ್ನವಾಗುವುದು, **ನಾಮಂತ್ರಿತೇ ಸಮಾನಾಧಿಕರಣೇ ಸಾಮಾನ್ಯವಚನಮ್** (ಪಾ. ಸೂ. ೮-೧-೭೩) ಸಾಮಾನ್ಯ ವಚನ ಎಂದರೆ ವಿಶೇಷ್ಯವಾಚಕ ಎಂದು ಅರ್ಥ. ಸಮಾನಾಧಿ

**ಕರಣವಿಶೇಷಣವಾಚಕವು** ಪರದಲ್ಲಿದ್ದರೆ **ವಿಶೇಷ್ಯವಾಚಕವಾದ** ಆಮಂತ್ರಿತವು ಅವಿದ್ಯಮಾನವದ್ಭಾವವನ್ನು ಹೊಂದುವುದಿಲ್ಲ ಎಂಬುದರಿಂದ ಅವಿದ್ಯಮಾನವದ್ಭಾವಕ್ಕೆ ಪ್ರತಿಷೇಧ ಬರುವುದು. ಆದ್ದರಿಂದ ಅವಿದ್ಯಮಾನವದ್ಭಾವ ಬರದೇ ಇದ್ದರೆ ಪದಾತ್ಪರತ್ವವು ಸಂಭವಿಸುವುದರಿಂದ ಅಷ್ಟಮಿಕಾನುದಾತ್ತವು ಉಪಪನ್ನವಾಗುವುದು ಎಂದು ಹೇಳಲು ಆಗುವುದಿಲ್ಲ. ಏಕೆಂದರೆ ಇಲ್ಲಿ ಘೃತಾಹವನ ದೀದಿವಃ ಎಂಬ ಎರಡು ಆಮಂತ್ರಿತಗಳೂ ಅಗ್ನೇ ಎಂಬುದಕ್ಕೆ ವಿಶೇಷಣವಾಗಿರುವುವು. ಆದ್ದರಿಂದ ಅಗ್ನೇ ಎಂಬುದು ಸಾಮಾನ್ಯ ವಚನ ಇವೆರಡೂ ವಿಶೇಷ ವಚನಗಳೇ ಆಗುವುವು. ಆದಕಾರಣ ಅವಿದ್ಯಮಾನವದ್ಭಾವಕ್ಕೆ ಪ್ರತಿಷೇಧ ಬರುವುದಿಲ್ಲ. ಇದೇ ರೀತಿಯಲ್ಲಿ ಎರಡು ಆಮಂತ್ರಿತಗಳೂ ಅಗ್ನೇ ಎಂಬಲ್ಲಿ ಅನ್ವಯಿಸುವುವು. ಆಮಂತ್ರಿತಗಳೆರಡಕ್ಕೂ ಪರಸ್ಪರಾನ್ವಯವಿಲ್ಲ. ಆದಕಾರಣ ಪರಸ್ಪರಾನ್ವಯದಿಂದ ಅರ್ಥಬೋಧಕತ್ವರೂಪವಾದ ಸಾಮರ್ಥ್ಯವಿಲ್ಲ. ಸುಬಾಮಂತ್ರಿತೇಪರಾಂಗವತ್ಸ್ವರೇ (ಪಾ. ಸೂ. ೭-೧-೨) ಸ್ವರವನ್ನುಮಾಡುವಾಗ ಆಮಂತ್ರಿತದ ಹಿಂದೆ ಇರುವ ಸುಬಂತವು ಪರಾಂಗವದ್ಭಾವವನ್ನು ಹೊಂದುವುದು ಅಂದರೆ ಪರದಲ್ಲಿರುವ ಆಮಂತ್ರಿತದ ಏಕದೇಶದಂತೆ ಆಗುವುದು ಎಂದು ವಿಹಿತವಾದ ಪರಾಂಗವದ್ಭಾವವು ಪದವಿಧಿಯಾದ್ದರಿಂದ **ಸಮರ್ಥಃಪದವಿಧಿಃ** (ಪಾ. ಸೂ. ೨-೧-೧) ಎಂಬ ಪರಿಭಾಷೆಯಿಂದ ಸಾಮರ್ಥ್ಯವಿರುವಾಗಲೇ ಪ್ರವರ್ತಿಸುವುದು. ಪ್ರಕೃತದಲ್ಲಿ ಎರಡಕ್ಕೂ ಸಾಮರ್ಥ್ಯವಿಲ್ಲದ ಕಾರಣ ಪರಾಂಗವದ್ಭಾವವೂ ಬರುವುದಿಲ್ಲ. ಆದ್ದರಿಂದ ಪರಾಂಗವದ್ಭಾವದಿಂದ ಘೃತಾಹವನ ದಿದೀವ ಎಂಬ ಪದಗಳೆರಡನ್ನೂ ಒಂದೇ ಪದವೆಂದು ಭಾವಿಸಿ ಷಾಷ್ಠವಾದ **ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ಘೃ ಎಂಬುದು ಉದಾತ್ತವೂ ಮಿಕ್ಕವುಗಳು **ಅನುದಾತ್ತಂಪದಮೇಕವರ್ಜಂ** (ಪಾ. ಸೂ ೬-೧-೧೫೮) ಎಂಬುದರಿಂದ ಅನುದಾತ್ತಗಳೂ ಆಗುವುವು ಎಂದೂಹೇಳಲಾಗುವುದಿಲ್ಲ. ಆದುದರಿಂದ ಪರಸ್ಪರಾನ್ವಯವಿಲ್ಲದೇ ಇರುವ **ಇಡೇರನ್ತೇऽದಿತೇಸರಸ್ವತಿ** (ತೈ. ಸಂ. ೭-೧-೬-೮) ಎಂಬ ಮಂತ್ರದಲ್ಲಿ ಪ್ರತಿಯೊಂದು ಆಮಂತ್ರಿತಕ್ಕೂ ಷಾಷ್ಠ ಸೂತ್ರದಿಂದ ಆದ್ಯುದಾತ್ತವೇ ಬಂದಿರುವುದು. ಪ್ರಕೃತದಲ್ಲಿಯೂ ಇದೇ ರೀತಿಯಲ್ಲಿ ಪ್ರತ್ಯೇಕವಾಗಿ ಆದ್ಯುದಾತ್ತ ಬರಬೇಕೇ ವಿನಾ ಅಷ್ಟಮಿಕಾನುದಾತ್ತವು ಹೇಗೆ ಉಪಪನ್ನವಾಗುವುದು ಎಂದು ಶಂಕೆ ಅವತರಿಸಬಹುದು. ಈ ಶಂಕೆಗೆ ಹೀಗೆ ಸಮಾಧಾನವನ್ನು ಹೇಳಬಹುದು. ಇಲ್ಲಿ ದೀದಿವಃ ಎಂಬ ಪದವು ಅಗ್ನೇ ಎಂಬುದಕ್ಕೆ ವಿಶೇಷಣವಲ್ಲ. ಘೃತಾಹವನ ಎಂಬ ಪದಕ್ಕೇ ವಿಶೇಷಣವು. ಘೃತಾಹವನಪದವನ್ನು ವಿಶೇಷ್ಯವೆಂದೇ ವಿವಕ್ಷಿಸುವುವೆವು. ಅನಂತರ ದೀದೀವಃ ಘೃತಾಹವನ ಎಂಬ ವಿಶಿಷ್ಟವು ಅಗ್ನೇ ಎಂಬಲ್ಲಿ ವಿಶೇಷಣವಾಗುವುದು. ಈಗ ದೀದಿವಃ ಎಂಬ ಪದವನ್ನು ಉದ್ದೇಶಿಸಿ ಘೃತಾಹವನ ಪದವು ವಿಶೇಷ್ಯವಾಗುವುದರಿಂದ ಸಾಮಾನ್ಯವಚನವಾಗುವುದು. ಆದ್ದರಿಂದ **ನಾಮಂತ್ರಿತೇ ಸಮಾನಾಧಿಕರಣೇ ಸಾಮಾನ್ಯವಚನಮ್** (ಪಾ. ಸೂ. ೮-೧-೭೩) ಎಂಬುದರಿಂದ ಅವಿದ್ಯಮಾನವದ್ಭಾವಕ್ಕೆ ಪ್ರತಿಷೇಧ ಬರುವುದು. ಏವಂಚ ಪದಾತ್ಪರತ್ವ ಸಂಭವಿಸುವುದರಿಂದ ಅಷ್ಟಮಿಕಾನುದಾತ್ತವು ಉಪಪನ್ನವಾಗುವುದು. ಈ ರೀತಿಯಲ್ಲಿ ದಿದೀವಃ ಘೃತಾಹವನ ಪದಗಳಿಗೆ ಪರಸ್ಪರಾನ್ವಯವಿರುವುದರಿಂದ ಸಾಮರ್ಥ್ಯವೂ ಇರುವುದು. ಆದ್ದರಿಂದ **ಸುಬಾಮಂತ್ರಿತೇಪರಾಂಗವತ್ಸ್ವರೇ** (ಪಾ. ಸೂ. ೨-೧-೨) ಎಂಬುದರಿಂದ ಪರಾಂಗವದ್ಭಾವವೂ ಬರುವುದು. ಪರಾಂಗವದ್ಭಾವ ಬಂದರೆ ಘೃತಾಹವನ ದೀದಿವಃ ಎಂಬ ಪದಗಳು ಒಂದೇ ಪದದಂತೆ ಆಗುವುದರಿಂದ ಆರನೇ ಅಧ್ಯಾಯದಲ್ಲಿರುವ ಆಮಂತ್ರಿತಸ್ಯಚ ಎಂಬುದರಿಂದ ಆದ್ಯುದಾತ್ತ ಬಂದು ಘೃ ಎಂಬುದು ಉದಾತ್ತವಾಗುವುದು. ಮಿಕ್ಕ ವರ್ಣಗಳು **ಅನುದಾತ್ತಂಪದಮೇಕವರ್ಜಂ** (ಪಾ ಸೂ. ೬-೧-೧೫೮) ಎಂಬುದರಿಂದ ಅನುದಾತ್ತಗಳಾಗುವುವು. ಈ ರೀತಿಯಲ್ಲಿಯೂ ದೀದಿವಃ ಎಂಬುದಕ್ಕೆ ಸರ್ವಾನುದಾತ್ತಸ್ವರವು ಉಪಪನ್ನವಾಗುವುದು. **ಇಡೇರನ್ತೇऽದಿತೇಸರಸ್ವತಿ** (ತೈ. ಸಂ. ೭-೧-೬-೮) ಎಂಬಲ್ಲಿ ಈರೀತಿ ಪರಸ್ಪರಾನ್ವಯವಿಲ್ಲ. ಆದ್ದರಿಂದ ಅಲ್ಲಿ ಸರ್ವಾನುದಾತ್ತವು ಉಪಪನ್ನವಾಗುವುದಿಲ್ಲ. ಪ್ರತಿಯೊಂದು ಆಮಂತ್ರಿತಕ್ಕೆ ಷಾಷ್ಠಸೂತ್ರದಿಂದ

ಆದ್ಯುದಾತ್ತವೇ ಬರುವುದು. ಈ ಪ್ರಕಾರವಾಗಿ ಘೃತಾಹವನದೀದಿವಃ ಎಂಬುದಕ್ಕೂ ಇಡೇರನ್ನೇ ಎಂಬುದಕ್ಕೂ ಪರಸ್ಪರಾನ್ವಯಸತ್ವ ತದಭಾವರೂಪವಾದ ವೈಷಮ್ಯವು ಇರುವುದು.

**ರಿಷತಃ**—ರುಷ ರಿಷ ಹಿಂಸಾರ್ಥಾಃ ಧಾತು. ಇದು ಭ್ವಾದಿಯ (೧ನೇ ಗಣ) ಲ್ಲಿರುವುದು. ಇದರ ಮುಂದೆ ಲಟ್ ಅದರ ಸ್ಥಾನದಲ್ಲಿ **ಲಟಶ್ಶತೃಶಾನಚೌ** (ಪಾ. ಸೂ. ೩-೨-೧೨೪) ಎಂಬುದರಿಂದ ಶತೃ ಆದೇಶ. **ಕರ್ತರಿಶಪ್** (ಪಾ. ಸೂ. ೩-೧-೬೮) ಎಂಬುದರಿಂದ ವಿಕರಣಶಪ್ ಬರುವುದು. ಇದನ್ನು ನಿಮಿತ್ತಮಾಡಿ ಕೊಂಡು **ಪುಗನ್ತಲಘೂಪಧಸ್ಯಚ** ( ಪಾ. ಸೂ. ೭-೩-೮೬ ) ಎಂಬುದರಿಂದ ಲಘೂಪಧಗುಣವು ಯದ್ಯಪಿ ಪ್ರಾಪ್ತವಾಗುವುದು. ಆದರೂ ಛಾಂದಸಪ್ರಕ್ರಿಯೆಯಿಂದ ಗುಣವು ಬರುವುದಿಲ್ಲ. ರಿಷ್+ಅ+ಅತ್ **ಅತೋ-ಗುಣೇ** (ಪಾ. ಸೂ. ೬-೧-೯೭) ಎರಡು ಅಕಾರಗಳಿಗೂ ಪರರೂಪ. ರಿಷತ್ ಎಂದಾಗುವುದು. ಅಥವಾ ರುಶ-ರಿಶ ಹಿಂಸಾಯಾಂ ಧಾತು. ಇದು ತುದಾದಿಯಲ್ಲಿರುವುದು. ಇದರ ಮುಂದೆ ಲಟ್ ಶತೃ ಆದೇಶ ಬಂದರೆ **ತುದಾ-ದಿಭ್ಯಃ ಶಃ** (ಪಾ. ಸೂ. ೩-೧-೭೭) ಎಂಬುದರಿಂದ ಶ ಎಂಬ ವಿಕರಣಪ್ರತ್ಯಯ ಬರುವುದು. ಅದು ಅಪಿತು. **ಸಾರ್ವಧಾತುಕಮಪಿತ್** (ಪಾ. ಸೂ. ೧-೨-೪) ಎಂಬುದರಿಂದ ಙಿತ್ತಾಗುವುದು **ಕ್ಙಿತಿಚ** ( ಪಾ. ಸೂ. ೧-೧೫) ಎಂಬುದರಿಂದ ಗುಣನಿಷೇಧ ಬರುವುದರಿಂದ ಲಘೂಪಧಗುಣ ಬರುವುದಿಲ್ಲ, ಇಲ್ಲಿ ಷಕಾರವು ಛಾಂದಸ ಪ್ರಕ್ರಿಯೆಯಿಂದ ಬರುವುದು. ಪರರೂಪ ರಿಷತ್ ಎಂದಾಗುವುದು. ಎರಡು ಪ್ರಕಾರದಲ್ಲೂ ದ್ವಿತೀಯಾಬಹು ವಚನದಲ್ಲಿ ರಿಷತಃ ಎಂಬ ರೂಪವು ಏರ್ಪಡುವುದು.

ರಕ್ಷಸ್ವಿನಃ—ರಕ್ಷಸ್ ಶಬ್ದವು ಅಸಂತ. ಆದ್ದರಿಂದ **ಅಸ್ಮಾಯಾಮೇಧಾಸ್ರಜೋವಿನಿಃ** (ಪಾ. ಸೂ. ೫-೨-೧೨೧) ಅಸನ್ತವಾದ ಶಬ್ದಗಳು ಮಾಯಾ ಮೇಧಾ ಸ್ರಜ್ ಈ ಶಬ್ದಗಳು ಇವುಗಳ ಮುಂದೆ ಮತ್ವರ್ಥ ದಲ್ಲಿ ವಿನಿಪ್ರತ್ಯಯ ಬರುವುದು ಎಂಬುದರಿಂದ ವಿನಿಪ್ರತ್ಯಯ ಎಂದರೆ ರಕ್ಷಸ್ವಿನ್, ದ್ವಿತೀಯಾ ಬಹುವಚನ ಶಸ್, ರಕ್ಷಸ್ವಿನಃ ಪ್ರತ್ಯಯಸ್ವರ ಆದ್ಯುದಾತ್ತ ಬರುವುದು. ॥ ೫ ॥

॥ ಸಂಹಿತಾಪಾಠಃ ॥

ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹಪತಿರ್ಯುವಾ ।
ಹವ್ಯವಾಡ್ಜುಹ್ವಾಸ್ಯಃ ॥ ೬ ॥

॥ ಪದಪಾಠಃ ॥

ಅಗ್ನಿನಾ । ಅಗ್ನಿಃ । ಸಂ । ಇಧ್ಯತೇ । ಕವಿಃ । ಗೃಹಽಪತಿಃ । ಯುವಾ ।
ಹವ್ಯಽವಾಟ್ । ಜುಹುಽಆಸ್ಯಃ ॥ ೬ ॥

॥ ಸಾಯಣಭಾಷ್ಯಂ ॥

ಅಗ್ನಿಮಂಥನೇಽಗ್ನಿನಾಗ್ನಿಃ ಸಮಿಧ್ಯತ ಇತ್ಯೇಷಾನುವಚನೀಯಾ । ಪ್ರಾತರ್ವೈಶ್ವದೇವ್ಯಾಂ ಪ್ರೇಷಿತ ಇತಿ ಖಂಡೇ ಸೂತ್ರಿತಂ । ಅಗ್ನಿನಾಗ್ನಿಃ ಸಮಿಧ್ಯತೇ ತ್ವಂ ಹ್ಯಗ್ನೇ ಅಗ್ನಿನಾ । ಆ. ೨-೧೬ । ಇತಿ ॥ ವಿಷ್ಣೌವಾಗ್ನಿಮತ ಇತ್ಯಸ್ಯಾನುವಾಕ್ಯಾ । ಅಥಾಗ್ನೇಯ್ಯಾ ಇತಿ ಖಂಡೇಽಗ್ನಾವಗ್ನಿಪ್ರಣಯನ ಇತ್ಯುಪಕ್ರಮ್ಯ ಸೂತ್ರಿತಂ । ಯದ್ವೋ ವಯಂ ಪ್ರಮಿನಾಮ ವ್ರತಾನ್ಯಗ್ನಿನಾಗ್ನಿಃ ಸಮಿಧ್ಯತೇ। ಆ. ೩-೧೩। ಇತಿ ॥

ಅಗ್ನಿರಾಹವನೀಯಾಖ್ಯಸ್ತಸ್ಮಿನ್ಪ್ರಕ್ಷಿಪ್ಯಮಾಣೇನಾಗ್ನಿನಾ ನಿರ್ಮಥ್ಯೇನ ಪ್ರಣೀತೇನ ವಾ ಸಹ ಸಮಿಧ್ಯತೇ । ಸಮ್ಯಕ್ ದೀಪ್ಯತೇ । ಕೀದೃಶೋಽಗ್ನಿಃ । ಕವಿರ್ಮೇಧಾವೀ ಗೃಹಪತಿರ್ಯಜಮಾನಗೃಹಸ್ಯ ಪಾಲಕೋ ಯುವಾ ನಿತ್ಯತರುಣೋ ಹವ್ಯವಾಟ್ ಹವಿಷೋ ವೋಢಾ ಜುಹ್ವಾಸ್ಯೋ ಜುಹೂರೂಪೇಣ ಮುಖೇನ ಯುಕ್ತಃ ॥ ಗೃಹಪತಿಃ । ಪತ್ಯಾವೈಶ್ವರ್ಯ ಇತಿ ಪೂರ್ವಪದಪ್ರಕೃತಿಸ್ವರತ್ವಂ । ಯುವಾ । ಯು ಮಿಶ್ರಣೇ । ಕನಿನ್ಯುವೃಷಿತಕ್ಷಿರಾಜಿಧನ್ವಿದ್ಯುಪ್ರತಿದಿವ ಇತಿ ಕನಿನ್ । ನಿತ್ತ್ವಾದಾದ್ಯುದಾತ್ತಃ । ಹವ್ಯಂ ವಹತೀತಿ ಹವ್ಯವಾಟ್ । ವಹಶ್ಚೇತಿ ಣ್ವಿಪ್ರತ್ಯಯಃ । ಣಿತ್ತ್ವಾದುಪಧಾವೃದ್ಧಿಃ । ಗತಿಕಾರಕೋಪಪದಾತ್ಕೃದುತ್ತರಪದಪ್ರಕೃತಿಸ್ವರತ್ವಂ । ಜುಹ್ವಾಸ್ಯಃ । ಹೂಯತೇಽನಯೇತಿ ಜುಹೂಃ । ಹುವಃ ಶ್ಲುವಚ್ಚ । ಉ. ೨-೬೦ । ಇತಿ ಕ್ವಿಪ್ । ತತ್ಸನ್ನಿಯೋಗಾದ್ದೀರ್ಘಃ । ಶ್ಲುವದ್ಭಾವಾದ್ದ್ವಿರ್ಭಾವಃ । ಚುತ್ವಜಶ್ತ್ವೇ । ಪ್ರಾತಿಪದಿಕಸ್ವರೇಣಾಂತೋದಾತ್ತಃ । ಜುಹೂರಾಸ್ಯಂ ಯಸ್ಯೇತಿ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವೇನ ಸ ಏವ ಶಿಷ್ಯತೇ । ಶೇಷನಿಘಾತಃ । ಯಣಾದೇಶ ಉದಾತ್ತಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ । ಪಾ. ೮-೨-೪ । ಇತ್ಯಾಕಾರಃ ಸ್ವರಿತಃ ॥ ೨೨ ॥

॥ ಪ್ರತಿಪದಾರ್ಥ ॥

ಅಗ್ನಿಃ—ಆಹವನೀಯವೆಂಬ ಅಗ್ನಿಯು । ಅಗ್ನಿನಾ—ಅರಣಿಯಲ್ಲಿ ಕಡೆದು ಉತ್ಪನ್ನಮಾಡಿದ ಅಗ್ನಿಯಿಂದ । ಸಂ ಇಧ್ಯತೇ— ಹೊತ್ತಿಸಲ್ಪಟ್ಟು ಚೆನ್ನಾಗಿ ಉಜ್ವಲಗೊಳಿಸಲ್ಪಡುತ್ತದೆ । (ಇಂತಹ ಈ ಅಗ್ನಿಯು) ಕವಿಃ— ಮೇಧಾವಿಯು, ವಿವೇಕಿಯು । ಗೃಹಪತಿಃ—ಯಜಮಾನನ ಗೃಹದ ಪಾಲಕನು । ಯುವಾ—ನಿತ್ಯತರುಣನು । ಹವ್ಯವಾಟ್—ದೇವತೆಗಳಿಗೆ ಹವಿಸ್ಸನ್ನು ಒಯ್ಯುವವನು । ಜುಹ್ವಾಸ್ಯಃ—ಜುಹೂರೂಪವಾದ ಮುಖವುಳ್ಳವನು.

॥ ಭಾವಾರ್ಥ ॥

ಯಜ್ಞದ ಪ್ರಾರಂಭದಲ್ಲಿ ಅಗ್ನಿಯನ್ನು ಅರಣಿಯಲ್ಲಿ ಕಡೆದು ಉತ್ಪತ್ತಿಮಾಡುವರು. ಈ ಅಗ್ನಿಯಿಂದ ಗಾರ್ಹಪತ್ಯ ಮೊದಲಾದ ಇತರ ಅಗ್ನಿಗಳನ್ನು ಹೊತ್ತಿಸಿ ಉದ್ದೀಪನಗೊಳಿಸುವರು. ಇಂತಹ ಈ ಅಗ್ನಿಯು ಬಹಳ ಮೇಧಾವಿಯು, ಯಜ್ಞಮಾಡುವ ಯಜಮಾನನ ಗೃಹರಕ್ಷಕನು, ನಿತ್ಯತರುಣನು, ದೇವತೆಗಳಿಗೆ ಹವಿಸ್ಸನ್ನು ಒಯ್ಯುವವನು. ಜುಹೂ ಎಂಬ ಹೋಮಮಾಡುವ ಸಾಧನವೇ ಇವನ ಮುಖವು.

## English Translation

Agni is kindlod by Agni, the ever young and wise, the gaurdian of the dwelling ( of the Sacrificer ) the bearer of offerings, whose mouth is the sacrificial spoon.

|| ವಿಶೇಷವಿಷಯಗಳು ||

**ಅಗ್ನಿನಾ, ಅಗ್ನಿಃ**— ಒಂದು ಅಗ್ನಿಯಿಂದ ಮತ್ತೊಂದು ಅಗ್ನಿಯು ಹೊತ್ತಿಸಲ್ಪಡುವುದು ಎಂದರೆ ಯಜ್ಞಾರಂಭದಲ್ಲಿ ಅರಣಿಯೆಂಬ ಮರದ ತುಂಡನ್ನು ಉಜ್ಜಿ ಕಡೆದು ಉತ್ಪತ್ತಿಮಾಡಿದ ಅಗ್ನಿಯಿಂದ ಇತರ ಅಗ್ನಿಗಳನ್ನು ಹೊತ್ತಿಸುವರೆಂದರ್ಥವು. ಯಜ್ಞದಲ್ಲಿ ಅರಣಿಯಿಂದಲೇ ಅಗ್ನಿಯನ್ನು ಈ ಋಕ್ಕನ್ನು ಪಠಿಸುತ್ತಾ ಉತ್ಪನ್ನಮಾಡಬೇಕು. ಬೇರೆ ವಿಧದಲ್ಲಿ ಅಥವಾ ಮೊದಲೇ ಹೊತ್ತಿಸಿ ಸಿದ್ಧವಾಗಿರುವ ಅಗ್ನಿಯನ್ನು ಯಜ್ಞದಲ್ಲಿ ಉಪಯೋಗಿಸುವುದಿಲ್ಲ.

ಈ ಋಕ್ಕಿನ ವಿನಿಯೋಗಕ್ರಮವು ಈ ರೀತಿ ಇರುವುದು-ಅಗ್ನಿಮಥನಕಾಲದಲ್ಲಿ **ಅಗ್ನಿನಾಗ್ನಿಃ ಸಮಿಧ್ಯತೇ** ಎಂಬ ಋಕ್ಕನ್ನು ಪಠಿಸಬೇಕು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ **ಪ್ರಾತರ್ವೈಶ್ವದೇವ್ಯಾಂ ಪ್ರೇಷಿತ** ಎಂಬ ಖಂಡದಲ್ಲಿ **ಅಗ್ನಿನಾಗ್ನಿಃ ಸಮಿಧ್ಯತೇ** (ಋ. ಸಂ. ೧-೧೨-೬) ಮತ್ತು **ತ್ವಂ ಹ್ಯಗ್ನೇ ಅಗ್ನಿನಾ** ಎಂಬ ಋಕ್ಕುಗಳನ್ನು ಪಠಿಸಬೇಕೆಂದು ಹೇಳಿರುವುದು. ಮತ್ತು ಈ ಋಕ್ಕು ಪುರೋನುವಾಕ್ಯಾ ಋಕ್ಕನ್ನಾಗಿಯೂ ಉಪಯೋಗಿಸುವರು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ **ಅಥಾಗ್ನೇಯ್ಯೋ** ಎಂಬ ಖಂಡದಲ್ಲಿ **ಅಗ್ನಾವಗ್ನಿಪ್ರಣಯನ** ಎಂಬ ಸೂತ್ರದಲ್ಲಿ **ಯದ್ವೋ ವಯಂ ಪ್ರಮಿನಾಮ** (ಋ. ಸಂ. ೧೦-೨-೪) ಎಂಬ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿಯೂ, **ಅಗ್ನಿನಾಗ್ನಿಃ ಸಮಿಧ್ಯತೇ** (ಋ. ಸಂ. ೧-೧೨-೬) ಎಂಬ ಋಕ್ಕನ್ನು ಪುರೋನುವಾಕ್ಯಾ ಮಂತ್ರವನ್ನಾಗಿಯೂ ಉಪಯೋಗಿಸಬೇಕೆಂದು ಹೇಳಿರುವುದು.

**ಕವಿಃ**— ಮೇಧಾವಿ, ಬುದ್ಧಿವಂತನು, ವಿವೇಕಿಯು, The wise etc.

**ಗೃಹಪತಿಃ— ಯಜಮಾನಗೃಹಸ್ಯ ಪಾಲಕಃ**— ಯಜಮಾನನ ಮನೆಯನ್ನು ಸಂರಕ್ಷಿಸುವವನು. ಯಜ್ಞಯಾಗಾದಿಗಳನ್ನು ಮಾಡುವ ಯಜಮಾನನು ಆಹಿತಾಗ್ನಿಯೆಂದು ಹೇಳಲ್ಪಡುವನು. ಆಹಿತಾಗ್ನಿಯೆಂದರೆ ಯಜ್ಞಾರಂಭಕಾಲದಲ್ಲಿ ವಿಧ್ಯುಕ್ತವಾಗಿ ಅಗ್ನ್ಯಾಧಾನವೆಂಬ ಕರ್ಮವನ್ನು ಮಾಡಿ ಅಗ್ನಿಯನ್ನು ಉತ್ಪತ್ತಿಮಾಡಿ ಮುಂದೆ ಮಾಡುವ ಯಜ್ಞದಲ್ಲಿ ಉಪಯೋಗಿಸುವವನು. ಈ ರೀತಿ ಸಂಸ್ಕೃತವಾದ ಅಗ್ನಿಯನ್ನು ಆಹಿತಾಗ್ನಿಯು ತನ್ನ ಜೀವಮಾನ ಪರ್ಯಂತರವಾಗಿ ಕಾಪಾಡಬೇಕು. ಆದುದರಿಂದ ಯಜಮಾನನ ಗೃಹದಲ್ಲಿ ಯಾವಾಗಲೂ ಇದ್ದು ಅವನು ಮಾಡುವ ಯಜ್ಞಾದಿಗಳಿಗೆ ಅನುಕೂಲನಾಗಿರುವುದರಿಂದ ಅಗ್ನಿಯನ್ನು ಗೃಹಪತಿ ಎಂದು ಕರೆಯುವ ರೂಢಿ ಬಂದಿರಬಹುದು. **ಗೃಹಪತಿಃ** ಎಂಬ ಶಬ್ದವು ಋ. ಸಂ. ೧-೧೨-೬ ; ೧-೩೬-೫ ; ೧-೬೦-೪ ; ೨-೧-೨ ; ೪-೯-೪ , ೬-೧೫-೧೩ ; ೬-೪೮-೮ ; ೭-೧೬-೫ ; ೮-೬೦-೧೯ ; ೧೦-೧೨೨-೧ ಋಕ್ಕುಗಳಲ್ಲಿಯೂ, **ಗೃಹಪತಿಂ** ಎಂಬ ಶಬ್ದವು ಋ. ಸಂ. ೪-೧೧-೫ ; ೫-೮-೧ ; ೫-೮-೨ ; ೬-೧೬-೪೨ ; ೬-೫೩-೨ ; ೭-೧-೧ ; ೧೦-೧೧೮-೬ ಋಕ್ಕುಗಳಲ್ಲಿಯೂ, **ಗೃಹಪತೇ** ಎಂಬ ಶಬ್ದವು ೬-೧೫-೧೯ ಎಂಬ ಋಕ್ಕಿನಲ್ಲಿಯೂ ಪಠಿತವಾಗಿದೆ.

ಯುವಾ—ನಿತ್ಯತರುಣನು, ಎಂದರೆ ಹವಿಸ್ಸು, ಆಜ್ಯ, ಸಮಿತ್ತು ಮೊದಲಾದ ಹೋಮದ್ರವ್ಯಗಳನ್ನು ಅಗ್ನಿಯಲ್ಲಿ ಹೋಮಮಾಡುವುದರಿಂದ ಅಗ್ನಿಯು ಯಾವಾಗಲೂ ಜ್ವಾಲೆಗಳಿಂದ ಕೂಡಿ ಪ್ರಕಾಶಿಸುತ್ತಿರುವನು. ಯಾವಾಗಲೂ ಒಂದೇ ವಿಧವಾಗಿ ಪ್ರಕಾಶವುಳ್ಳವನಾಗಿರುವುದರಿಂದ ಅಗ್ನಿಯನ್ನು ಯುವಾ—ತರುಣನು ಎಂದು ಹೇಳುವುದು ರೂಢಿಯಾಗಿದೆ.

ಹವ್ಯವಾಟ್—ಹವ್ಯಂ ವಹತೀತಿ ಹವ್ಯವಾಟ್ । ಅಗ್ನಿಯಲ್ಲಿ ಹೋಮಮಾಡುವ ಹವಿರ್ದ್ರವ್ಯಗಳನ್ನು ದೇವತೆಗಳಿಗೆ ಒಯ್ಯುವುದರಿಂದ ಹವ್ಯವಾಟ್ ಎಂದರೆ ಹವ್ಯವನ್ನು ವಹಿಸುವವನು ಎಂದಭಿಪ್ರಾಯವು.

ಜುಹ್ವಾಸ್ಯಃ—ಜುಹೂ ಎಂದರೆ ಯಜ್ಞಗಳಲ್ಲಿ ತುಪ್ಪವನ್ನು ಹೋಮಮಾಡುವಾಗ ಉಪಯೋಗಿಸುವ ಸೌಟಿನಂತಿರುವ ಉದ್ದವಾದ ಮರದ ಪಾತ್ರೆಯು. ಈ ಜುಹೂ ಎಂಬ ಯಜ್ಞಸಾಧನವನ್ನು ಮಾಡುವಕ್ರಮ, ಅದರ ಆಕಾರಪ್ರಮಾಣಾದಿಗಳು, ಅದನ್ನು ಯಾವ ದ್ರವ್ಯದಿಂದ ಹೇಗೆ ಮಾಡಬೇಕು ಮುಂತಾದ ಕ್ರಮಗಳು ಶುಲ್ಬಸೂತ್ರಗಳಲ್ಲಿ ವಿವರಿಸಲ್ಪಟ್ಟಿವೆ. ಈ ಜುಹೂವನ್ನು ತುಪ್ಪದಿಂದ ತುಂಬಿ ಹೋಮಮಾಡುವಾಗ ಅಗ್ನಿಯ ಸಪ್ತಜಿಹ್ವೆಗಳೆಂದು ಹೇಳಲ್ಪಡುವ ಜ್ವಾಲೆಗಳಿಗೆ ಸೋಕುವುದರಿಂದ ಅಗ್ನಿಯನ್ನು ಜುಹ್ವಾಸ್ಯಃ-ಮುಖದಲ್ಲಿ ಅಥವಾ ಬಾಯಿಯಲ್ಲಿ ಜುಹೂ ಎಂಬ ಪಾತ್ರೆಯುಳ್ಳವನು, ಜುಹೂ ಎಂಬ ಪಾತ್ರೆಯರೂಪವಾದ ಬಾಯುಳ್ಳವನು ಎಂದು ಕರೆಯುವುದು ರೂಢಿಯಾಗಿದೆ.

### ವ್ಯಾಕರಣಪ್ರಕ್ರಿಯಾ

ಗೃಹಪತಿಃ—ಪತ್ಯಾವೈಶ್ವರ್ಯೇ (ಪಾ. ಸೂ. ೬-೨-೧೮) ತತ್ಪುರುಷಸಮಾಸದಲ್ಲಿ ಐಶ್ವರ್ಯಾರ್ಥಕವಾದ ಪತಿಶಬ್ದವು ಪರದಲ್ಲಿದ್ದರೆ ಪೂರ್ವಪದವು ಪ್ರಕೃತಿಸ್ವರವನ್ನು ಹೊಂದುವುದು ಎಂದು ಸೂತ್ರಾರ್ಥ. ಇಲ್ಲಿ ಗೃಹ ಎಂಬುದು ಗೇಹೇಕಃ (ಪಾ.ಸೂ ೩-೧ ೪೪) ಗೇಹವು (ಮನೆಯು) ಕರ್ತೃವಾದಾಗ ಗ್ರಹ ಧಾತುವಿನ ಮುಂದೆ ಕ ಪ್ರತ್ಯಯ ಬರುವುದು. ಎಂಬುದರಿಂದ ಗ್ರಹ ಧಾತುವಿನ ಮುಂದೆ ಕಪ್ರತ್ಯಯ ಬಂದು ಗ್ರಹಿಜ್ಯಾವಯಿ...., (ಪಾ. ಸೂ. ೬-೧-೧೬) ಎಂಬುದರಿಂದ ಸಂಪ್ರಸಾರಣ ಬಂದರೆ ಗೃಹಶಬ್ದವು ನಿಷ್ಪನ್ನವಾಗುವುದು. ಅಥವಾ ಗೃಹೂಗ್ರಹಣೇ ಧಾತುವು ಭ್ವಾದಿಯಲ್ಲಿರುವುದು. ಇದರ ಮುಂದೆ ಇಗುಪಧಜ್ಞಾಪ್ರೀಕಿರಃಕಃ ( ಪಾ. ಸೂ. ೩-೧-೧೩೫ ) ಎಂಬುದರಿಂದ ಇಗುಪಧನಿಮಿತ್ತಕವಾದ ಕಪ್ರತ್ಯಯ ಬಂದರೂ ಗೃಹ ಎಂದು ಸಿದ್ಧವಾಗುವುದು. ಎರಡು ಪ್ರಕಾರದಲ್ಲೂ ಪ್ರತ್ಯಯಸ್ವರದಿಂದ ಗೃಹಶಬ್ದವು ಅಂತೋದಾತ್ತ. ಪತ್ಯಾವೈಶ್ವರ್ಯೇ, ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬಂದರೆ ಅದೇ ಸ್ವರ ನಿಲ್ಲುವುದು.

ಯುವಾ — ಯು ಮಿಶ್ರಣೇ ಧಾತು. ಕನಿನ್ಯುವೃಷಿತಕ್ಷಿರಾಜಿಧನ್ವಿದ್ಯುಪ್ರತಿದಿವಃ, ( ಉ. ಸೂ. ೧-೧೫೪) ಎಂಬುದರಿಂದ ಯು, ಎಂಬುದರ ಮುಂದೆ ಕನಿನ್ ಪ್ರತ್ಯಯಬರುವುದು. ಯುವನ್ ಎಂಬುದು ನಿತ್ಸ್ವರದಿಂದ ಆದ್ಯುದಾತ್ತ. ಪ್ರಥಮೈಕವಚನದಲ್ಲಿ ಸುಲೋಪ, ಉಪಧಾದೀರ್ಘ ನಲೋಪಗಳು ಬಂದು ಯುವಾ ಎಂದು ಸಿದ್ಧವಾಗುವುದು.

ಹವ್ಯವಾಟ್—ಹವ್ಯಂ ವಹತಿ ಇತಿ ಹವ್ಯವಾಟ್-ಹವ್ಯಶಬ್ದೋಪಪದಕವಾದ ವಹ್ ಧಾತುವಿನ ಮುಂದೆ ವಹಶ್ಚ (ಪಾ. ಸೂ. ೪-೨-೬೪) ಛಂದಸ್ಸಿನಲ್ಲಿ ಸುಬಂತವು ಉಪಪದವಾಗಿರುವಾಗ ವಹ ಧಾತುವಿನ ಮುಂದೆ ಣ್ವಿ ಪ್ರತ್ಯಯಬರುವುದು ಎಂಬುದರಿಂದ ಣ್ವಿ ಪ್ರತ್ಯಯಬರುವುದು, ಈ ಣ್ವಿ ಪ್ರತ್ಯಯವು ಲೋಕದಲ್ಲಿಯೂ ಪ್ರವೃತ್ತವಾಗುವುದು ಎಂದು ಕೆಲವರು ಅಭಿಪ್ರಾಯ ಪಡುವರು ಎಂದು ಶೇಖರಕಾರರು ನಿರೂಪಿಸಿರುವರು, ಪ್ರತ್ಯ

ಯವು ಣಿತ್ತ್ವಾದ್ದರಿಂದ **ಅತಉಪಧಾಯಾಃ** (ಪಾ. ಸೂ. ೭೧-೧೧೬) ಎಂಬುದರಿಂದ **ಉಪಧಾವೃದ್ಧಿ** ಬರುವುದು ಣ್ವಿ ಪ್ರತ್ಯಯದಲ್ಲಿ ಎಲ್ಲಾ ವರ್ಣಗಳಿಗೂ ಲೋಪಬರುವುದು, ಹವ್ಯವಾಹ್-ಎಂದಾಗುವುದು. ವಾಹ್-ಎಂಬುದು ಧಾತುಸ್ವರದಿಂದ ಅಂತೋದಾತ್ತ. ಸಮಾಸಬಂದಮೇಲೆಯೂ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬಂದರೆ ಅದೇ ನಿಲ್ಲುವುದು. ಇದರ ಮುಂದೆ ಪ್ರಥಮಾವಿಭಕ್ತಿ ಏಕವಚನ ಸುಪ್ರತ್ಯಯ, ಅದಕ್ಕೆ **ಹಲ್‌ಙ್ಯಾಭ್ಯಃ** (ಪಾ. ಸೂ. ೬-೧-೬೮) ಎಂಬುದರಿಂದ ಲೋಪ. ಹಕಾರಕ್ಕೆ **ಹೋಢಃ** (ಪಾ. ಸೂ. ೮-೨-೩೧) ಝಲ್ ವರ್ಣದ ಹಿಂದೆ ಇರುವ ಅಥವಾ ಪದದ ಕೊನೆಯಲ್ಲಿರುವ ಹಕಾರಕ್ಕೆ ಢಕಾರ ಬರುವುದು ಎಂಬುದರಿಂದ ಢಕಾರ ಬಂದರೆ ಹವ್ಯವಾಢ್. **ಝಲಾಂಜಶೋಽನ್ತೇ** (ಪಾ ಸೂ. ೮-೨-೩೯) ಎಂಬುದರಿಂದ ಜಶ್ತ್ವ ಬಂದು ಢಕಾರಕ್ಕೆ ಡಕಾರ ಬರುವುದು. **ವಾವಸಾನೇ** (ಪಾ. ಸೂ. ೮-೪-೫೬) ಎಂಬುದರಿಂದ ಚರ್ತ್ವ ಬಂದರೆ ಹವ್ಯವಾಟ್ ಎಂದಾಗುವುದು.

**ಜುಹ್ವಾಸ್ಯಃ**— ಹೂಯತೇಽನೇನ ಇತಿ ಜುಹೂಃ **ಹುವಃ ಶ್ಲುವಚ್ಚ** ( ಉ. ಸೂ. ೨-೨೮) ಹು ದಾನಾದನಯೋಃ ಎಂಬ ಧಾತುವಿನ ಮುಂದೆ ಕ್ವಿಪ್ ಪ್ರತ್ಯಯವೂ ಹು ಧಾತುವಿಗೆ ದೀರ್ಘವೂ ಪ್ರತ್ಯಯಕ್ಕೆ ಶ್ಲುವದ್ಭಾವವೂ ಸಹ ಬರುವುದು ಎಂಬುದರಿಂದ ಕ್ವಿಪ್ ಬಂದರೆ ಹು+ಕ್ವಿಪ್ ಈ ಸೂತ್ರದಿಂದಲೇ ಧಾತುವಿಗೆ ದೀರ್ಘ. ಹೂ ಕ್ವಿಪ್. ಕ್ವಿಪ್ ಪ್ರತ್ಯಯವು ಈ ಸೂತ್ರದಿಂದ ಶ್ಲುವಿನಂತೆ ಆಗುವುದರಿಂದ **ಶ್ಲೌ** ( ಪಾ ಸೂ. ೬-೧-೧೦ ) ಎಂಬುದರಿಂದ ದ್ವಿತ್ವ. **ಹ್ರಸ್ವಃ** (ಪಾ. ಸೂ ೭-೪-೫೯) ಎಂಬುದರಿಂದ ಅಭ್ಯಾಸಕ್ಕೆ ಹ್ರಸ್ವ ಅಭ್ಯಾಸದ ಹಕಾರಕ್ಕೆ **ಕುಹೋಶ್ಚುಃ** (ಪಾ. ಸೂ. ೭-೪-೬೨ ) ಅಭ್ಯಾಸದಲ್ಲಿರುವ ಕವರ್ಗಹಕಾರಗಳಿಗೆ ಚವರ್ಗ ಬರುವುದು ಎಂಬುದರಿಂದ ಝಕಾರ ಬರುವುದು ಘೋಷಸಂವಾದವಾದ ಮಹಾಪ್ರಾಣಪ್ರಯತ್ನಕವಾದ ಹಕಾರಕ್ಕೆ ಇಂತಹ ಝಕಾರ ಬರುವುದು ಯುಕ್ತವು ಝಕಾರಕ್ಕೆ **ಅಭ್ಯಾಸೇಚರ್ಚ** (ಪಾ. ಸೂ ೮-೪-೫೪) ಎಂಬುದರಿಂದ ಜಶ್ತ್ವ ಬಂದು ಜಕಾರ ಬರುವುದು. ಜುಹೂ ಎಂದಾಗುವುದು. ಕ್ವಿಪ್ ಪ್ರತ್ಯಯ ಲುಪ್ತವಾಗುವುದು. ಇದು ಪ್ರಾತಿಪದಿಕ ಸ್ವರದಿಂದ ಅಂತೋದಾತ್ತ. ಜುಹೂಃ ಆಸ್ಯಂ ಯಸ್ಯ ಸಃ ಜುಹ್ವಾಸ್ಯಃ ಎಂದು ಬಹುವ್ರೀಹಿಸಮಾಸ ಮಾಡಿದಾಗ **ಬಹುವ್ರೀಹೌ ಪ್ರಕೃತ್ಯಾಪೂರ್ವಪದಂ** (ಪಾ ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬಂದು ಅದೇ ಸ್ವರ ನಿಲ್ಲುವುದು. **ಅನುದಾತ್ತಂ ಪದಮೇಕವರ್ಜಂ** ( ಪಾ. ಸೂ. ೬-೧-೧೫೮ ) ಎಂಬುದರಿಂದ ಊಕಾರವನ್ನುಳಿದ ವರ್ಣಗಳು ಅನುದಾತ್ತಗಳಾಗುವುವು ಉದಾತ್ತವಾದ ಊಕಾರಕ್ಕೆ **ಇಕೋಯಣಚಿ** (ಪಾ ಸೂ. ೬-೧-೭೭) ಎಂಬುದರಿಂದ ಯಣಾದೇಶ, ಅಂದರೆ ವಕಾರ ಬರುವುದು. ಈಗ **ಉದಾತ್ತಸ್ವರಿತಯೋರ್ಯಣಸ್ಸ್ವರಿತೋಽನುದಾತ್ತಸ್ಯ** (ಪಾ. ಸೂ. ೮-೨-೪) ಉದಾತ್ತ ಅಥವಾ ಸ್ವರಿತ ಇವುಗಳ ಸ್ಥಾನದಲ್ಲಿ ಯಾವ ಯ ರ ಲ ವ ಗಳು ಬರುವುವೋ ಅವುಗಳ ಮುಂದೆ ಇರುವ ಅನುದಾತ್ತಕ್ಕೆ ಸ್ವರಿತ ಬರುವುದು ಎಂಬುದರಿಂದ ಆಕಾರಕ್ಕೆ ಸ್ವರಿತ ಬರುವುದು. ॥ ೬ ॥

॥ ಸಂಹಿತಾಪಾಠಃ ॥

ಕವಿಮಗ್ನಿಮುಪ ಸ್ತುಹಿ ಸತ್ಯಧರ್ಮಾಣಮಧ್ವರೇ ।
ದೇವಮಮೀವಚಾತನಂ ॥ ೭ ॥

॥ ಪದಪಾಠಃ ॥

ಕವಿಂ । ಅಗ್ನಿಂ । ಉಪ । ಸ್ತುಹಿ । ಸತ್ಯಽಧರ್ಮಾಣಂ । ಅಧ್ವರೇ ।
ದೇವಂ । ಅಮೀವಽಚಾತನಂ ॥ ೭ ॥

॥ ಸಾಯಣಭಾಷ್ಯಂ ॥

ಹೇ ಸ್ತೋತೃಸಂಘ ಅಧ್ವರೇ ಕ್ರತಾವಗ್ನಿಮುಪಸ್ತುಹಿ । ಉಪೇತ್ಯ ಸ್ತುತಿಂ ಕುರು । ಕೀದೃಶಂ। ಕವಿಂ ಮೇಧಾವಿನಂ ಸತ್ಯಧರ್ಮಾಣಂ ಸತ್ಯವದನರೂಪೇಣ ಧರ್ಮೇಣೋಪೇತಂ ದೇವಂ ದ್ಯೋತಮಾನಂ ಅಮೀವಚಾತನಮಮೀವಾನಾಂ ಹಿಂಸಕಾನಾಂ ಶತ್ರೂಣಾಂ ರೋಗಾಣಾಂ ವಾ ಘಾತಕಂ ॥ ಸತ್ಯಂ ಧರ್ಮೋ ಯಸ್ಯೇತಿ ಸತ್ಯಧರ್ಮಾ । ಧರ್ಮಾದನಿಚ್ ಕೇವಲಾತ್ । ಪಾ. ೫-೪-೧೨೪ । ಇತ್ಯನಿಚ್ ಸಮಾಸಾಂತಃ । ಅಂತಃಪದೇನ ತಸ್ಯ ಸಮಾಸತ್ವಾಭಿಧಾನಾದ್ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವೇ ಶೇಷನಿಘಾತೇನಾನುದಾತ್ತತ್ವಂ । ಅಮೀವಶಬ್ದೋಽಮರೋಗ ಇತ್ಯಸ್ಮಾತ್ ಶೇವಾಯಹೂಜಿಹ್ವಾಗ್ರೀವಾಪ್ವಾಮೀವಾಃ । ಉ. ೧-೧೫೪ । ಇತಿ ವನ್ಪ್ರತ್ಯಯ ಈಡಾಗಮೋ ಚ ನಿಪಾತಿತಃ । ನಿತ್ತ್ವಾದಾದ್ಯುದಾತ್ತಃ । ಚತೇ ಚದೇ ಯಾಚನೇ ಚೇತ್ಯಸ್ಮಾದ್ಧಿಂಸಾರ್ಥಾತ್ । ಣಿಜಂತಾನ್ನಂದ್ಯಾದಿತ್ವಾತ್ ಲ್ಯುಃ । ಪಾ. ೩-೧-೧೩೪ । ಯೋರನಾದೇಶಃ। ಪಾ. ೭-೧-೧ । ಣೇರನಿಟೀತಿ ಣೇರ್ಲೋಪಃ । ಲಿತೀತಿ ಧಾತೋರಕಾರಸ್ಯೋದಾತ್ತತ್ವಂ । ನ ಚ ಸ್ವರೇ ಕರ್ತವ್ಯೇ ಣಿಲೋಪಸ್ಯ ಸ್ಥಾನಿವದ್ಭಾವಃ । ನ ಪದಾಂತದ್ವಿರ್ವಚನೇತ್ಯಾದಿನಾ ಪ್ರತಿಷೇಧಾತ್ । ಪಾ. ೧-೧ ೫೮ । ಅಮೀವಾನಾಂ ಚಾತನ ಇತಿ ಸಮಾಸೇ ಕೃದುತ್ತರಪದಪ್ರಕೃತಿಸ್ವರೇಣ ಸ ಏವ ಶಿಷ್ಯತೇ ॥

॥ ಪ್ರತಿಪದಾರ್ಥ ॥

(ಎಲೈ ಸ್ತೋತ್ರಮಾಡುವ ಋತ್ವಿಜಾದಿ ಜನರೇ) ಕವಿಂ—ಮೇಧಾವಿಯಾದ । ಸತ್ಯಧರ್ಮಾಣಂ—ಸತ್ಯ, ಧರ್ಮ ಇವುಗಳ ಸ್ವರೂಪನಾದ । ದೇವಂ—ಪ್ರಕಾಶಮಾನನಾದ । ಅಮೀವಚಾತನಂ—ಶತ್ರು ಸಂಹಾರಕನಾದ ಅಥವಾ ರೋಗಗಳನ್ನು ನಾಶಮಾಡುವ । ಅಗ್ನಿಂ—ಅಗ್ನಿಯನ್ನು । ಅಧ್ವರೇ—ಯಜ್ಞಕರ್ಮದಲ್ಲಿ ಉಪಸ್ತುಹಿ—ಸಮೀಪದಲ್ಲಿ ನಿಂತುಕೊಂಡು ಸ್ತೋತ್ರಮಾಡಿರಿ ॥

॥ ಭಾವಾರ್ಥ ॥

ಎಲೈ ಋತ್ವಿಗಾದಿಜನರೇ, ನೀವು ಸ್ತೋತ್ರಮಾಡುತ್ತಿರುವ ಈ ಅಗ್ನಿಯು ಬಹಳ ಮೇಧಾವಿಯು, ಸತ್ಯಧರ್ಮಗಳ ಸ್ವರೂಪನು ಅಥವಾ ಸತ್ಯವೇ ಇವನ ಧರ್ಮವು (ನಡವಳಿಕೆಯು), ಪ್ರಕಾಶಮಾನನು, ಶತ್ರುಗಳನ್ನು ಅಥವಾ ರೋಗಾದ್ಯುಪದ್ರವಗಳನ್ನು ನಾಶಮಾಡುವವನು. ಇಂತಹ ಅಗ್ನಿಯನ್ನು ನಾವುಮಾಡುವ ಯಜ್ಞದಲ್ಲಿ ಸಮೀಪದಲ್ಲಿ ನಿಂತು ಸ್ತೋತ್ರಮಾಡಿರಿ.

## English Translation

Praise, in the sacrifice, Agni, the wise, the observer of truth, the radiant, the remover of disease.

|| ವಿಶೇಷವಿಷಯಗಳು ||

ಈ ಋಕ್ಕು ಅಗ್ನಿಯನ್ನು ಸ್ತೋತ್ರವಮಾಡುತ್ತಿರುವ ಋತ್ವಿಗ್ಜನರನ್ನು ಉದ್ದೇಶಿಸಿ ಹೇಳಲ್ಪಟ್ಟಿರುವುದು.

**ಸತ್ಯಧರ್ಮಾಣಂ**—**ಸತ್ಯಂ ಧರ್ಮೋ ಯಸ್ಯ** | ಸತ್ಯವೇ ಇವನ ಸ್ವರೂಪವು ಅಥವಾ **ಸತ್ಯವದನರೂಪೇಣ ಧರ್ಮೇಣೋಪೇತಂ**—ಸತ್ಯವನ್ನೇ ಹೇಳುವ ಸ್ವಭಾವದವನು

**ಅಮೀವಚಾತನಂ**—**ಅಮೀವಾನಾಂ ಹಿಂಸಕಾನಾಂ ಶತ್ರೂಣಾಂ ರೋಗಾಣಾಂ ವಾ ಘಾತಕಂ**—ಶತ್ರುಗಳ ಅಥವಾ ರೋಗಗಳ ನಾಶಕನು ಈ ಶಬ್ದವು ಈ ಋಕ್ಕಿನಲ್ಲಲ್ಲದೆ—

**ವಿಪ್ರಃ ಸ ಉಚ್ಯತೇ ಭಿಷಗ್ರಕ್ಷೋಹಾಮೀವಚಾತನಃ |**

(ಋ. ಸಂ. ೧೦-೯೭-೬)

**ಆಪ ಇದ್ವಾ ಉ ಭೇಷಜೀರಾಪೋ ಅಮೀವಚಾತನೀಃ |**

(ಋ. ಸಂ. ೧೦-೧೩೭-೬)

ಎಂಬ ಋಕ್ಕುಗಳಲ್ಲಿಯೂ ಇರುವುದು ಮೊದಲನೆಯ ಉದಾಹರಣೆಯಲ್ಲಿ **ಭಿಷಕ್ ರಕ್ಷೋಹಾ** ಎಂಬ ಶಬ್ದಗಳು, ರೋಗಗಳನ್ನೂ, ಶತ್ರುಗಳನ್ನೂ ನಾಶವಮಾಡುವ ಎಂಬ ಅರ್ಥವನ್ನು ಸಮರ್ಥಿಸುವವು. ಎರಡನೆಯ ಉದಾಹರಣೆಯಲ್ಲಿ **ಭೇಷಜೀಃ** ಎಂಬ ಶಬ್ದವು ರೋಗನಿವಾರಣೆಯನ್ನು ಸೂಚಿಸುವುದು. ಆದುದರಿಂದ ಈ ಶಬ್ದಕ್ಕೆ ರೋಗನಿವಾರಕನು ಎಂಬ ಅರ್ಥವೇ ಸಮಂಜಸವಾಗಿರುವುದು.

|| ವ್ಯಾಕರಣಪ್ರಕ್ರಿಯಾ ||

**ಸತ್ಯಧರ್ಮಾಣಂ**—ಸತ್ಯಂ ಧರ್ಮಃ ಯಸ್ಯ ಸಃ ಸತ್ಯಧರ್ಮಾ ಎಂದು ಬಹುವ್ರೀಹಿಸಮಾಸ. **ಧರ್ಮಾದನಿಚ್ ಕೇವಲಾತ್** (ಪಾ. ಸೂ. ೫-೪-೧೨೪) ಕೇವಲವಾದ ಪೂರ್ವಪದದ ಮುಂದೆ ಇರುವ ಯಾವ ಧರ್ಮಶಬ್ದವಿದೆಯೋ ಆ ಧರ್ಮಶಬ್ದಾಂತವಾದ ಬಹುವ್ರೀಹಿಯ ಮುಂದೆ ಅನಿಚ್‌ಪ್ರತ್ಯಯು ಬರುವುದು. ಅದು ಸಮಾಸಕ್ಕೆ ಅಂತಾವಯವವಾಗುವುದು ಎಂದು ಸೂತ್ರಾರ್ಥ. ಕೇವಲ ಎಂದರೆ ಉತ್ತರಪದಾತಿರಿಕ್ತ ಪದಾಂತರ ಸಮಭಿವ್ಯಾಹಾರಶೂನ್ಯವಾದುದು ಎಂದರ್ಥ. ಈ ಸೂತ್ರದಿಂದ ಅನಿಚ್ ಬಂದರೆ ಸತ್ಯಧರ್ಮ+ಅನ್. **ಯಸ್ಯೇತಿ ಚ** (ಪಾ. ಸೂ. ೬-೪-೧೪೮) ಎಂಬುದರಿಂದ ಧರ್ಮಶಬ್ದದ ಕೊನೆಯ ಅಕಾರಕ್ಕೆ ಲೋಪ. ಸತ್ಯಧರ್ಮನ್ ಎಂದಾಗುವುದು. ಅನಿಚ್ ಪ್ರತ್ಯಯವು **ಸಮಾಸಾಂತಾಃ** (ಪಾ. ಸೂ. ೫-೪-೬೮) ಎಂಬುದರಿಂದ ಸಮಾಸಕ್ಕೆ ಅಂತಾವಯವವಾಗಿ ಸಮಾಸಕ್ಕೆ ಸೇರಿಬಿಡುವುದು. ಆದ್ದರಿಂದ ಪೂರ್ವಪದಪ್ರಕೃತಿಸ್ವರ ಬಂದು ಶೇಷಾನುದಾತ್ತಸ್ವರದಿಂದ ಅನುದಾತ್ತವಾಗುವುದು.

**ಅಮೀವಚಾತನಂ**—ಅಮೀವ ಶಬ್ದವು ಅಮ ರೋಗೇ ಎಂಬ ಧಾತುವಿನ ಮುಂದೆ **ಶೇವಯಹ್ವಜಿಹ್ವಾಗ್ರೀವಾಪ್ವಾಮೀವಾಃ** ( ಉ. ಸೂ. ೧-೧೫೨) ಈ ಶಬ್ದಗಳು ವನ್ ಪ್ರತ್ಯಯಾಂತವಾಗಿ ನಿಪಾತಿಸಲ್ಪ

ಡುವುವು ಎಂದು ಅರ್ಥ. **ಶೀಙ್** ಸ್ವಪ್ನೇ ಎಂಬುದರ ಮುಂದೆ ವನ್ ಪ್ರತ್ಯಯು ಬಂದು ಗುಣ ಬಂದರೆ ಶೇವ ಎಂದಾಗುವುದು. ಇಲ್ಲಿ ಅಂತೋದಾತ್ತಸ್ವರವು ನಿಪಾತಿತವಾಗುವುದು. ಇಲ್ಲದಿದ್ದರೆ **ಇಣ್ಶೀಭ್ಯಾಂ ವನ್** (ಉ. ಸೂ. ೧-೧೫೦) ಎಂಬುದರಿಂದ ವನ್ ಬಂದು ನಿತ್ಸ್ವರ ಅದ್ಯುದಾತ್ತ ಬರಬೇಕಾಗುವುದು. **ಯಾನ್ತಿ ಅನೇನ ಇತಿ** ಯಹ್ವಃ ಯಾ ಪ್ರಾಪಣೇ ಧಾತುವಿನ ಮುಂದೆ ವನ್‌ಬಂದರೆ ತತ್ಸನ್ನಿಯೋಗದಿಂದ ಯಾಗೆ ಹುಕ್ ಎಂಬಆಗಮವೂ ಹ್ರಸ್ವವೂ ನಿಪಾತಿಸಲ್ಪಡುವುದು ಯಹ್ವ ಎಂದಾಗುವುದು. ಲಿಹಂತಿ ಅನಯಾ ಇತಿ ಜಿಹ್ವಾ. ಲಿಹ ಆಸ್ವಾದನೇ ಎಂಬುದರ ಮುಂದೆ ವನ್ ಬಂದರೆ ಲಕಾರಕ್ಕೆ ಜಕಾರಾದೇಶವೂ ಗುಣಾಭಾವವೂ ನಿಪಾತಿಸಲ್ಪಡುವುದು, ಗಿರನ್ತಿ ಅನಯಾ ಇತಿ ಗ್ರೀವಾ. ಗೃ ನಿಗರಣೇ ಎಂಬ ಧಾತುವಿನ ಮುಂದೆ ವನ್ ಪ್ರತ್ಯಯು ಬಂದರೆ ಈಡಾಗಮವು ನಿಪಾತಿಸಲ್ಪಡುವುದು. ಗೃ+ಈವ ಯಣಾದೇಶ ಬಂದರೆ ಗ್ರೀವ ಎಂದಾಗುವುದು. ಅಶ್ಲೃ ವ್ಯಾಪ್ತೌ ಎಂಬುದರ ಮುಂದೆ ವನ್ ಬಂದರೆ ಅಶ್ವ ಎಂದಾಗುವುದು. ಅಮಧಾತುವಿನ ಮುಂದೆ ವನ್ ಪ್ರತ್ಯಯು ಬಂದರೆ ಅದಕ್ಕೆ ಈಡಾಗಮವು ನಿಪಾತಿತವಾಗುವುದು ಅಮೀವ ಎಂದಾಗುವುದು. ವನ್ ಪ್ರತ್ಯಯವು ನಿತ್ತಾದ್ದರಿಂದ ನಿತ್ಸ್ವರ ಆದ್ಯುದಾತ್ತ ಬರುವುದು. ಚಾತನೀಃ ಚತೇಚದೇ ಯಾಚನೇಚ ಎಂಬ ಧಾತುವು ಹಿಂಸಾರ್ಥದಲ್ಲಿಯೂ ಇರುವುದು. ಇದರ ಮುಂದೆ ಣಿಚ್ ಪ್ರತ್ಯಯ. **ಅತಉಪಧಾಯಾಃ** ( ಪಾ. ಸೂ. ೭-೧-೧೧೬) ಎಂಬುದರಿಂದ ಉಪಧಾವೃದ್ಧಿ. ಚಾತ್+ಇ **ನಂದಿಗ್ರಹಿಪಚಾದಿಭ್ಯೋಲ್ಯುಣಿನ್ಯಚಃ** (ಪಾ. ಸೂ. ೩-೧-೧೩೪) ಎಂಬುದರಿಂದ ಲ್ಯು ಪ್ರತ್ಯಯ. ಅದಕ್ಕೆ **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅನ ಆದೇಶ. **ಣೇರನಿಟಿ** (ಪಾ.ಸೂ. ೬-೪-೫೧) ಣಿಚ್ಪ್ರತ್ಯಯಕ್ಕೆ ಲೋಪ ಚಾತನ ಎಂದಾಗುವುದು. **ಲಿತಿ** (ಪಾ. ಸೂ. ೬-೧-೧೯೩) ಲಕಾರೇತ್ಸಂಜ್ಞಕ ಪ್ರತ್ಯಯದ ಹಿಂದೆ ಇರುವ ವರ್ಣವು ಉದಾತ್ತವಾಗುವುದು ಎಂಬುದರಿಂದ ಚಾತ್ ಎಂಬಲ್ಲಿರುವ ಆಕಾರವು ಉದಾತ್ತ. ಇಲ್ಲಿ ಸ್ವರವನ್ನು ಮಾಡುವಾಗ ಪರನಿಮಿತ್ತಕವಾದ ಣಿ ಲೋಪಕ್ಕೆ **ಅಚಃ ಪರಸ್ಮಿನ್ಪೂರ್ವವಿಧೌ** (ಪಾ. ಸೂ. ೧-೧-೫೭) ಸ್ಥಾನಿಭೂತವಾದ ಅಜ್ವರ್ಣಕ್ಕಿಂತಲೂ ಪೂರ್ವದಲ್ಲಿ ದೃಷ್ಟವಾದುದಕ್ಕೆ ಕಾರ್ಯವನ್ನು ಮಾಡುವಾಗ ಪರನಿಮಿತ್ತಕವೂ ಅಚ್ಚಿನಸ್ಥಾನದಲ್ಲಿ ಬಂದುದೂ ಆದ ಆದೇಶವು ಸ್ಥಾನಿವದ್ಭಾವವನ್ನು ಹೊಂದುವುದು ಎಂಬುದರಿಂದ ಪ್ರಾಪ್ತವಾಗುವ ಸ್ಥಾನಿವದ್ಭಾವಕ್ಕೆ **ನಪದಾಂತದ್ವಿರ್ವಚನವರೇಯಲೋಪಸ್ವರಸವರ್ಣಾನುಸ್ವಾರದೀರ್ಘಜಶ್ಚರ್ವಿಧಿಷು** (ಪಾ. ಸೂ. ೧-೧-೫೮) ಎಂಬುದರಿಂದ ಪ್ರತಿಷೇಧ ಬರುವುದು. ಅದ್ದರಿಂದ ಸ್ಥಾನಿವದ್ಭಾವವು ಬರುವುದಿಲ್ಲ. ಅಮೀವಾನಾಂ ಚಾತನಃ ಎಂದು ಷಷ್ಠೀತತ್ಪುರುಷಸಮಾಸ ಮಾಡಿದರೆ **ಗತಿಕಾರಕೋಪಪದಾತ್ಕೃತ್** (ಪಾ. ಸೂ ೬-೨-೧೩೯ ) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರವು ಬಂದು ಅದೇ ಸ್ವರವು ನಿಲ್ಲುವುದು ‖ ೭ ‖

‖ ಸಂಹಿತಾಪಾಠಃ ‖

# ಯಸ್ತ್ವಾಮಗ್ನೇ ಹವಿಷ್ಪತಿರ್ದೂತಂ ದೇವ ಸಪರ್ಯತಿ ‖
# ತಸ್ಯ ಸ್ಮ ಪ್ರಾವಿತಾ ಭವ ‖ ೮ ‖

॥ ಪದಪಾಠಃ ॥

**ಯಃ । ತ್ವಾಂ । ಅಗ್ನೇ । ಹವಿಃ ಽ ಪತಿಃ । ದೂತಂ । ದೇವ । ಸಪರ್ಯತಿ ॥**

**ತಸ್ಯ । ಸ್ಮ । ಪ್ರ ಽ ಅವಿತಾ । ಭವ ॥ ೮ ॥**

॥ ಸಾಯಣಭಾಷ್ಯಂ ॥

ಹೇ ಅಗ್ನೇ ದೇವ ಯೋ ಹವಿಷ್ಪತಿರ್ಯಜಮಾನೋ ದೇವದೂತಂ ತ್ವಾಂ ಸಪರ್ಯತಿ ಪರಿಚರತಿ ತಸ್ಯ ಯಜಮಾನಸ್ಯ ಪ್ರಾವಿತಾ ಭವ ಸ್ಮ । ಅವಶ್ಯಂ ರಕ್ಷಕೋ ಭವ ॥ ಹೂಯತ ಇತಿ ಹವಿಃ । ಅರ್ಚಿಶುಚೀತ್ಯಾದಿನಾ । ಉ. ೨-೧೦೯ । ಇಸಿಃ । ಪ್ರತ್ಯಯಸ್ವರೇಣೇಕಾರ ಉದಾತ್ತಃ । ಹವಿಷಃ ಪತಿರ್ಹವಿಷ್ಪತಿಃ । ನಿತ್ಯಂ ಸಮಾಸೇ-ನುತ್ತರಪದಸ್ಥಸ್ಯ । ಪಾ. ೮-೩-೪೫ । ಇತಿ ಷತ್ವಂ । ಪತ್ಯಾವೈಶ್ವರ್ಯ ಇತಿ ಪೂರ್ವಪದಪ್ರಕೃತಿಸ್ವರತ್ವಂ । ಸಪರಶಬ್ದಾತ್ಕಂಡ್ವಾದಿಭ್ಯೋ ಯಕ್ । ಪಾ. ೩-೧-೨೭ । ಇತಿ ಯಕ್ । ಧಾತುಪ್ರಕರಣಾದ್ಗುಣಪ್ರತಿಷೇಧಾದ್ಯರ್ಥಾದ್ಯಕಃ ಕಿತ್ತ್ವಾಚ್ಚ ಸಪರಶಬ್ದಸ್ಯ ಧಾತುತ್ವಾತ್ತತೋ ವಿಹಿತಸ್ಯ ಯಕ ಆರ್ಧಧಾತುಕತ್ವೇ ಸತ್ಯತೋ ಲೋಪ ಇತಿ ಲೋಪಃ । ಸನಾದ್ಯಂತಾ ಧಾತವ ಇತಿ ಧಾತುಸಂಜ್ಞಾಯಾಂ ತಿಪ್ । ಕರ್ತರಿ ಶಪ್ । ತಸ್ಮಿನ್ಪೂರ್ವಸ್ಯಾತೋ ಗುಣ ಇತಿ ಪರಪೂರ್ವತ್ವಂ। ಯಕಃ ಪ್ರತ್ಯಯಸ್ವರೇಣೋದಾತ್ತತ್ವಂ । ಶಪಾ ಸಹೈಕಾದೇಶಸ್ಯೈಕಾದೇಶ ಉದಾತ್ತೇನೋದಾತ್ತ ಇತ್ಯುದಾತ್ತತ್ವಂ । ತಿಙ್ಙತಿಙ ಇತಿ ನಿಘಾತೋ ನ ಭವತಿ ಯದ್ವೃತ್ತಾನ್ನಿತ್ಯಮಿತಿ ಪ್ರತಿಷೇಧಾತ್ ॥

॥ ಪ್ರತಿಪದಾರ್ಥ ॥

**ದೇವ**— ಪ್ರಕಾಶಮಾನನಾದ । (ಹೇ) **ಅಗ್ನೇ** — ಎಲೈ ಅಗ್ನಿಯೇ । **ಹವಿಷ್ಪತಿಃ** — ನಿನಗೆ ಹವಿಸ್ಸನ್ನು ಸಮರ್ಪಿಸುವ ಯಾವ ಯಜಮಾನನು । **ದೂತಂ**-ದೇವದೂತನಾದ। **ತ್ವಾಂ**—ನಿನ್ನನ್ನು। **ಸಪರ್ಯತಿ** ಪೂಜಿಸುವನೋ (ಆರಾಧಿಸುವನೋ) । **ತಸ್ಯ** —ಆ ಯಜಮಾನನ। **ಪ್ರಾವಿತಾ**—ಮುಖ್ಯರಕ್ಷಕನಾಗಿ । **ಭವ ಸ್ಮ**-ಆಗು (ಇರು)

॥ ಭಾವಾರ್ಥ ॥

ಎಲೈ ಪ್ರಕಾಶಮಾನನಾದ ಅಗ್ನಿಯೇ, ನಿನಗೆ ಹವಿಸ್ಸನ್ನು ಸಮರ್ಪಿಸುವ ಯಜಮಾನನು ದೇವದೂತನಾದ ನಿನ್ನನ್ನು ಆರಾಧಿಸುವನು ಅಂತಹ ಯಜಮಾನನನ್ನು ನೀನು ಅವಶ್ಯಕವಾಗಿ ರಕ್ಷಿಸು.

English Translation.

Be the protector, O Agni of the master (offeror] of sacrificial food, who worships you O God, as his messenger.

॥ ವಿಶೇಷವಿಷಯಗಳು ॥

**ಹವಿಷ್ಪತಿಃ—ಹವಿಷಃ ಪತಿಃ**—ಹವಿಸ್ಸಿಗೆ ಸ್ವಾಮಿಯು ಎಂದರೆ ಹವಿಸ್ಸನ್ನು ಅರ್ಪಿಸುವವನು, offerer of oblations.

**ಪ್ರಾವಿತಾ**—ವಿಶೇಷರೀತಿಯಿಂದ ಅಥವಾ ಮುಖ್ಯ ಸಂರಕ್ಷಕನು.

॥ ವ್ಯಾಕರಣಪ್ರಕ್ರಿಯಾ ॥

**ಹವಿಷ್ಪತಿಃ**—ಹೂಯತೇ ಇತಿ ಹವಿಃ—**ಅರ್ಚಿ ಶುಚಿ ಹು ಸೃಪಿ ಛಾದಿ ಛರ್ದಿಭ್ಯ ಇಸಿಃ** (ಉ. ಸೂ. ೨-೨೬೫) ಅರ್ಚ ಪೂಜಾಯಾಂ. ಶುಚ ಶೋಕೇ, ಹು ದಾನಾದನಯೋಃ, ಸೃಪ್ಲೃ ಗತೌ, ಛದಿ ಅಪವಾರಣೇ ಣಿಜನ್ತ. ಛರ್ದ ವಮನೇ, ಈ ಧಾತುಗಳ ಮುಂದೆ ಇಸಿ ಪ್ರತ್ಯಯ ಬರುವುದು ಎಂಬುದರಿಂದ ಹು ಧಾತುವಿನ ಮುಂದೆ ಇಸಿ ಪ್ರತ್ಯಯ ಬರುವುದು. ಹು+ಇಸ್. ಗುಣ ಅವಾದೇಶ, ಹವಿಸ್. ಪ್ರ.ಏ. ವಚನದಲ್ಲಿ ಹವಿಃ ಎಂದಾಗುವುದು. ಪ್ರತ್ಯಯ ಸ್ವರದಿಂದ ಇಕಾರವು ಉದಾತ್ತ. ಹವಿಷಃ ಪತಿಃ ಎಂದು ಷಷ್ಠೀ ತತ್ಪುರುಷ ಸಮಾಸ. ಸಕಾರಕ್ಕೆ ರುತ್ವವಿಸರ್ಗಗಳು ಬಂದು ಹವಿಃಪತಿಃ ಎಂದಿರುವುದು. ಈಗ **ನಿತ್ಯಂಸಮಾಸೇಽನುತ್ತರಪದಸ್ಥಸ್ಯ** (ಪಾ. ಸೂ. ೮-೩-೪೫) ಸಮಾಸದಲ್ಲಿ ಕವರ್ಗಪವರ್ಗಗಳು ಪರದಲ್ಲಿದ್ದರೆ ಉತ್ತರಪದದಲ್ಲಿಲ್ಲದ ಇಸ್ ಉಸ್ ಸಂಬಂಧಿಯಾದ ವಿಸರ್ಗಕ್ಕೆ ನಿತ್ಯವಾಗಿ ಷತ್ವ ಬರುವುದು ಎಂಬುದರಿಂದ ಪಕಾರದ ಹಿಂದಿರುವ ಇಸ್ ಪ್ರತ್ಯಯದ ವಿಸರ್ಗಕ್ಕೆ ಷತ್ವ ಬರುವುದು. ಹವಿಷ್ಪತಿಃ ಎಂದಾಗುವುದು. **ಪತ್ಯಾವೈಶ್ವರ್ಯೇ** ( ಪಾ ಸೂ. ೬-೨-೧೮ ) ಎಂಬುದರಿಂದ ಪೂರ್ವಪದಪ್ರಕೃತಿಸ್ವರಬರುವುದು.

**ಸಪರ್ಯತಿ**—ಸಪರ ಎಂಬ ಶಬ್ದ ಕಣ್ವಾದಿಯಲ್ಲಿ ಪಠಿತವಾಗಿರುವುದು. ಆದ್ದರಿಂದ **ಕಂಡ್ವಾದಿಭ್ಯೋ- ಯಕ್** (ವಾ. ೩-೧-೨೭) ಕಣ್ವಾದಿಗಣಪಠಿತವಾದ ಧಾತುಗಳ ಮುಂದೆ ಯಕ್ ಪ್ರತ್ಯಯ ಬರುವುದು ಎಂಬುದರಿಂದ ಸಪರ ಎಂಬುದರ ಮುಂದೆ ಯಕ್ ಬರುವುದು. ಕಂಡ್ವಾದಿಯಲ್ಲಿರುವ ಪದಗಳು ಧಾತುಸಂಜ್ಞೆಯನ್ನೂ ಪ್ರಾತಿಪದಿಕಸಂಜ್ಞೆಯನ್ನೂ ಸಹ ಹೊಂದುವುವು. ಈ ಅಂಶವು ಮಹಾಭಾಷ್ಯದಲ್ಲಿ ಸ್ಪಷ್ಟವಾಗಿರುವುದು.

**ಧಾತುಪ್ರಕರಣಾದ್ಧಾತುಃ ಕಸ್ಯಚಾಸಂಜನಾದಪಿ ।**

**ಆಹಚಾಯಮಿಮಂ ದೀರ್ಘಂ ಮನ್ಯೇ ಧಾತುರ್ವಿಭಾಷಿತಃ ॥** (ಪಾ. ಸೂ. ಮ. ೩-೧-೨೭) ಧಾತು ಪ್ರಕರಣದಲ್ಲಿರುವುದರಿಂದ ಕಣ್ವಾದಿಯು ಧಾತುವು. ಅಲ್ಲದೆ ಯಕ್ ಪ್ರತ್ಯಯದಲ್ಲಿ ಕಕಾರವನ್ನು ಸೇರಿಸಿರುವುದರಿಂದಲೂ ಕಣ್ವಾದಿಯು ಧಾತುವಾಗುವುದು. ಕಣ್ವಾದಿಯು ಧಾತು ಎಂದು ಒಪ್ಪಿದರೆ ಅದರ ಮುಂದೆ ವಿಹಿತವಾದ ಯಕ್ಕಿಗೆ ಆರ್ಧಧಾತುಕಸಂಜ್ಞೆ ಬಂದು ಗುಣಪ್ರಾಪ್ತವಾದರೆ ಗುಣನಿಷೇಧಕ್ಕಾಗಿ ಕಿತ್ಕರಣವು ಸಾರ್ಥಕವಾಗುವುದು. ಇಲ್ಲದಿದ್ದರೆ ಕಿತ್ಕರಣವು ವ್ಯರ್ಥವಾಗುವುದು. ಇದು ಧಾತುವೆಂದೇ ಒಪ್ಪಿದರೆ ಕಂಡೂಯ ಎಂಬಲ್ಲಿ **ಅಕೃತ್ಸಾರ್ವಧಾತುಕಯೋಃ** (ಪಾ. ಸೂ. ೭-೪-೨) ಎಂಬುದರಿಂದ ದೀರ್ಘವು ಸಿದ್ಧಿವಾಗುವುದು. ಆದ್ದರಿಂದ ಗಣಪಾಠದಲ್ಲಿ ಕಂಡೂ ಎಂದು ದೀರ್ಘಪಾಠವು ವ್ಯರ್ಥವಾಗುವುದು. ಧಾತುಸಂಜ್ಞೆಯು ಪಾಕ್ಷಿಕವೆಂದು ಒಪ್ಪಿದರೆ ಧಾತುಸಂಜ್ಞೆ ಬರದೇ ಇರುವಾಗ ಯಕ್ ಬರುವುದಿಲ್ಲ. ಆಗ ದೀರ್ಘ ಶ್ರವಣಕ್ಕಾಗಿ ದೀರ್ಘಪಾಠವು ಸಾರ್ಥಕವಾಗುವುದು. ಆದ್ದರಿಂದ ಕಂಡ್ವಾದಿಶಬ್ದಗಳು ವಿಕಲ್ಪದಿಂದ ಧಾತು ಸಂಜ್ಞೆಯನ್ನು ಹೊಂದುವುವು ಅಂದರೆ ಧಾತು ಸಂಜ್ಞೆಯನ್ನೂ ಅದಿಲ್ಲದೇ ಇರುವಾಗ ಪ್ರಾತಿಪದಿಕಸಂಜ್ಞೆಯನ್ನೂ ಹೊಂದುವುವು ಎಂದು ನಿಷ್ಕರ್ಷವು. ಪ್ರಕೃತ

ದಲ್ಲಿ ಸಪರಶಬ್ದವನ್ನು ಧಾತುವೆಂದು ಇಟ್ಟುಕೊಂಡು ಇದರ ಮುಂದೆ ಯಕ್ ಬಂದರೆ ಅದಕ್ಕೆ **ಆರ್ಧಧಾತುಕಂ ಶೇಷಃ** (ಪಾ. ಸೂ. ೩-೪-೧೧೪) ಎಂಬುದರಿಂದ ಆರ್ಧಧಾತುಕಸಂಜ್ಞೆ ಬರುವುದು. ಆದ್ದರಿಂದ **ಅತೋಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಸಪರಶಬ್ದದ ಕೊನೆಯ ಅಕಾರಕ್ಕೆ ಲೋಪ ಬರುವುದು ಸಪರ್ಯ ಎಂದಾಗುವುದು. ಇದಕ್ಕೆ **ಸನಾದ್ಯಂತಾ ಧಾತವಃ** (ಪಾ. ಸೂ. ೩-೧-೩೨) ಎಂಬುದರಿಂದ ಧಾತುಸಂಜ್ಞೆ ಬರುವುದು. ಅದರ ಮುಂದೆ ಲಟ್. ಅದರ ಸ್ಥಾನದಲ್ಲಿ ಪ್ರ.ಪು.ಏ.ತಿಪ್. **ಕರ್ತರಿ ಶಪ್** (ಪಾ. ಸೂ. ೩-೧-೬೮) ಎಂಬುದರಿಂದ **ಶಪ್** ವಿಕರಣ, ಸಪರ್ಯ+ಅ +ತಿ. **ಅತೋಗುಣೇ** (ಪಾ. ಸೂ. ೬-೧-೯೭) ಎಂಬುದರಿಂದ ಧಾತ್ವಕಾರಶಬಕಾರಗಳಿಗೆ ಪರರೂಪ. ಸಪರ್ಯತಿ ಎಂದಾಗುವುದು. ಯಕ್ ಪ್ರತ್ಯಯಸ್ವರದಿಂದ ಉದಾತ್ತ. ಶಪ್ಪಿನ ಅಕಾರದೊಂದಿಗೆ ಪರರೂಪದಿಂದ ಏಕಾದೇಶವಾಗಿ ಬಂದ ಅಕಾರವೂ **ಏಕಾದೇಶ ಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಎಂಬುದರಿಂದ ಉದಾತ್ತ. **ಯದ್ವೃತ್ತಾನ್ನಿತ್ಯಂ** (ಪಾ. ಸೂ. ೮-೧-೬೬) ಎಂದು ಪ್ರತಿಷೇಧವಿರುವುದರಿಂದ **ತಿಙ್ಙತಿಙಃ** (ಪಾ. ಸೂ. ೮ ೧-೨೮) ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ. **ಅನುದಾತ್ತಂ ಪದಮೇಕವರ್ಜಂ** (ಪಾ. ಸೂ. ೬-೧-೧೫೮) ಎಂಬುದರಿಂದ ಮಿಕ್ಕ ವರ್ಣಗಳು ಅನುದಾತ್ತಗಳಾಗುವುವು. ತಿ ಯ ಇಕಾರವು **ಉದಾತ್ತಾದನುದಾತ್ತಸ್ಯಸ್ವರಿತಃ** (ಪಾ. ಸೂ. ೮-೪-೬೬) ಎಂಬುದರಿಂದ ಸ್ವರಿತವಾಗುವುದು. ॥ ೮ ॥

॥ ಸಂಹಿತಾಪಾಠಃ ॥

ಯೋ ಅಗ್ನಿಂ ದೇವವೀತಯೇ ಹವಿಷ್ಮಾँ ಆವಿವಾಸತಿ ।
ತಸ್ಮೈ ಪಾವಕ ಮೃಳಯ ॥ ೯ ॥

॥ ಪದಪಾಠಃ ॥

ಯಃ । ಅಗ್ನಿಂ । ದೇವಽವೀತಯೇ । ಹವಿಷ್ಮಾನ್ । ಆಽವಿವಾಸತಿ ॥
ತಸ್ಮೈ । ಪಾವಕ । ಮೃಳಯ ॥ ೯ ॥

॥ ಸಾಯಣಭಾಷ್ಯಂ ॥

ಗಾರ್ಹಪತ್ಯಾಹವನೀಯಯೋಃ ಪರಸ್ಪರಸಂಸರ್ಗೇ ವಿಹಿತಸ್ಯ ಹವಿಷೋ ಯಾಜ್ಯಾ ಯೋ ಅಗ್ನಿಂ ದೇವವೀತಯ ಇತ್ಯೇಷಾ। ಅಥಾಗ್ನೇಯ್ಯೌ ಇಷ್ಟಯ ಇತಿ ಖಂಡೇ ಸೂತ್ರಿತಂ । ಯೋ ಅಗ್ನಿಂ ದೇವವೀತಯೇ ಉವಿತ್ಸು ನೋ ಗವಿಷ್ಟಯೇ ॥ ಆ- ೩-೧೩ । ಇತಿ ॥

ಹವಿಷ್ಮಾನ್ ಹವಿರ್ಯುಕ್ತೋ ಯೋ ಯಜಮಾನೋ ದೇವವೀತಯೇ ದೇವಾನಾಂ ಹವಿರ್ಭಕ್ಷಣಹೇತುಯಾಗಾರ್ಥಮಗ್ನಿಮಾವಿವಾಸತಿ ಅಗ್ನೇಃ ಸಮೀಪೇ ವಿಶೇಷೇಣಾಗತ್ಯ ಪರಿಚರ್ಯಾಂ ಕರೋತಿ ಹೇ ಪಾವಕಾಗ್ನೇ ತಸ್ಮೈ ಮೃಳಯ । ತಂ ಯಜಮಾನಂ ಸುಖಯ॥ ದೇವವೀತಯೇ। ವೀ ಗತಿಪ್ರಜನಕಾಂತ್ಯತ-

ಸಖಾದನೇಷ್ವಿತ್ಯಸ್ಮಾದಶನಾರ್ಥಾತ್ ಕ್ತಿನ್ । ದೇವಾನಾಂ ವೀತಿರ್ಯಸ್ಮಿನ್ಯಾಗೇ ಸ ದೇವವೀತಿಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಹವಿಷ್ಮಾನ್ । ನಬ್ವಿಷಯಾನಿಸಂತಸ್ಯೇತಿ । ಪರ್ಯುದಾಸಾದ್ಧವಿಃಶಬ್ದೋಽಂತೋದಾತ್ತಃ । ಮತುಪಃ ಸರ್ವಾನುದಾತ್ತತ್ವಾತ್ಸ ಏವ ಶಿಷ್ಯತೇ । ಆವಿವಾಸತಿ । ವಾ ಗತಿಗಂಧನಯೋಃ । ಅಸ್ಮಾದಂತರ್ಭಾವಿತಣ್ಯರ್ಥಾದಾಗಮಯಿತುಮಿಚ್ಛತೀತ್ಯರ್ಥೇ ಸನ್ । ಆಹ್ವಾನೇಚ್ಛಾ ಪರಿಚರ್ಯಾಯಾಂ ಪರ್ಯವಸ್ಯತೀತಿ ವಿವಾಸತಿಶಬ್ದಃ ಪರಿಚರ್ಯಾರ್ಥೇ ನಿಘಂಟೌ ಪಠಿತಃ । ದ್ವಿರ್ಭಾವಃ । ಅಭ್ಯಾಸಸ್ಯ ಹ್ರಸ್ವಃ । ಸನ್ಯತಃ । ಪಾ. ೭.೪.೭೯ । ಇತೀತ್ವಂ । ಞ್ನಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತತ್ವಂ । ತಿಙ್ಙತಿಙ ಇತಿ ನಿಘಾತೋ ನ ಭವತಿ । ಯದ್ವೃತ್ತಾನ್ನಿತ್ಯಮಿತಿ ಪ್ರತಿಷೇಧಾತ್ । ತಿಙಶ್ಚೋದಾತ್ತವತಿ । ಪಾ. ೮.೧.೭೧ । ಇತ್ಯಾಙೋ ನಿಘಾತಃ । ಸಹ ಸುಪಾ । ಪಾ. ೨.೧.೪ । ಇತ್ಯತ್ರ ಸಹೇತಿ ಯೋಗವಿಭಾಗಾದಾಙಸ್ತಿಙಾ ಸಹ ಸಮಾಸೇ ಸಮಾಸಾಂತೋದಾತ್ತತ್ವೇ ಪ್ರಾಪ್ತೇ ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ತಸ್ಮೈ । ಕ್ರಿಯಾಗ್ರಹಣಂ ಕರ್ತವ್ಯಂ । ಪಾ. ೧.೪.೩೨ । ಇತಿ ಸಂಪ್ರದಾನೇ ಚತುರ್ಥೀ ॥

॥ ಪ್ರತಿಪದಾರ್ಥ ॥

ಹವಿಷ್ಮಾನ್—ಹವಿಯುಕ್ತನಾದ । ಯಃ—ಯಾವ ಯಜಮಾನನು । ದೇವವೀತಯೇ—ದೇವತೆಗಳಿಗೆ ಹವಿಸ್ಸನ್ನು ಅರ್ಪಿಸುವುದಕ್ಕಾಗಿ । ಅಗ್ನಿಂ--ಅಗ್ನಿಯಾದ ನಿನ್ನನ್ನು । ಆವಿವಾಸತಿ--ಸಮೀಪವನ್ನೈದಿ ಸೇವಿಸುವನೋ । ತಸ್ಮೈ--ಆ ಯಜಮಾನನಿಗಾಗಿ । (ಹೇ) ಪಾವಕ—ಸಮಸ್ತವನ್ನು ಶುದ್ಧಿಗೊಳಿಸುವ ಎಲೈ ಅಗ್ನಿಯೇ । ಮೃಳಯ-ಸುಖವನ್ನುಂಟುಮಾಡು ॥

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಸಮಸ್ತವನ್ನು ಶುದ್ಧಿಗೊಳಿಸುವವನು. ನಿನ್ನ ಮೂಲಕ ದೇವತೆಗಳಿಗೆ ಹವಿಸ್ಸನ್ನು ಸಮರ್ಪಿಸುವುದಕ್ಕಾಗಿ ಯಜಮಾನನು ನಿನ್ನ ಬಳಿಗೆ ಬಂದು ನಿನ್ನನ್ನು ಶುಶ್ರೂಷೆಮಾಡುವನು. ಅಂತಹ ಯಜಮಾನನಿಗೆ ಸುಖವನ್ನುಂಟುಮಾಡು.

## English Translation

Be merciful, O purifier, to the man who, presenting oblations for the gratification of gods, approaches Agni.

॥ ವಿಶೇಷವಿಷಯಗಳು ॥

ಗಾರ್ಹಪತ್ಯ, ಆಹವನೀಯ ಎಂಬ ಎರಡು ಅಗ್ನಿಕುಂಡಗಳಲ್ಲಿರುವ ಅಗ್ನಿಗಳನ್ನು ಯಜಮಾನನು ಸಮೀಪಿಸುವಾಗ ಈ ಋಕ್ಕನ್ನು ಪಠಿಸಿ ಹವಿಸ್ಸನ್ನು ಸಮರ್ಪಿಸಿ ಹೋಮಮಾಡುವನು. ಆ ಕಾಲದಲ್ಲಿ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಉಪಯೋಗಿಸುವರು. ಈ ವಿಷಯದಲ್ಲಿ ಆಶ್ವಲಾಯನ ಶ್ರೌತಸೂತ್ರದ

(ಅ. ೩-೧೩) **ಅಥಾಗ್ನೇಯ್ಯೈ ಇಷ್ಟ್ಯಯೆ** ಎಂಬ ಖಂಡದಲ್ಲಿ--**ಯೋ ಅಗ್ನಿಂ ದೇವವೀತಯೇ** (ಋ. ಸಂ. ೧-೧೩-೯) ಮತ್ತು **ಕುವಿತ್ಸು ನೋ ಗವಿಷ್ಟಯೇ** (ಋ. ಸಂ. ೮-೭೫-೧೧) ಎಂಬ ಋಕ್ಕುಗಳನ್ನು ಯಾಜ್ಯಾ ಮತ್ತು ಪುರೋನುವಾಕ್ಯಾ ಮಂತ್ರಗಳನ್ನಾಗಿ ಉಪಯೋಗಿಸಬೇಕೆಂದು ಹೇಳಿರುವುದು.

**ದೇವವೀತಯೇ**—ದೇವಾನಾಂ ಹವಿರ್ಭಕ್ಷಣಹೇತುಯಾಗಾರ್ಥಂ | ದೇವತೆಗಳಿಗೆ ಹವಿಃಪ್ರದಾನ ಮಾಡುವುದಕ್ಕಾಗಿ. ಅಗ್ನಿ ಹೊರತು ಇತರ ದೇವತೆಗಳು ಕಣ್ಣಿಗೆ ಕಾಣಿಸುವುದಿಲ್ಲವಾದ್ದರಿಂದ ಪರೋಕ್ಷರಾದ ಅವರಿಗೆ ಅಗ್ನಿಯಲ್ಲಿ ಹೋಮ ಮಾಡುವುದರ ಮೂಲಕ ಹವಿಸ್ಸನ್ನು ಸಮರ್ಪಿಸಬೇಕಾಗಿರುವುದು. ಅದಕ್ಕಾಗಿ ಯಜಮಾನನು ಅಗ್ನಿಯ ಸಮೀಪಕ್ಕೆ ಹವಿಸ್ಸನ್ನು ತೆಗೆದುಕೊಂಡು ಬಂದು ಅಗ್ನಿಯನ್ನು ಶುಶ್ರೂಷೆಮಾಡಿ ಪ್ರಾರ್ಥಿಸುವನೆಂದು ಭಾವವು. ಸ್ಕಂದಸ್ವಾಮಿಯು ಈ ಶಬ್ದಕ್ಕೆ- **ದೇವಾನ್ ಪ್ರತಿ ಗಮನಾಯ, ದೇವಾನಾಂ ವೋ ಹವಿರ್ಭಕ್ಷಣಾಯ** | ಎಂದರೆ ದೇವತೆಗಳ ಬಳಿಗೆ ಯಜಮಾನನ ಪರವಾಗಿ ದೂತನಾಗಿ ಹೋಗುವುದಕ್ಕೆ ಮತ್ತು ದೇವತೆಗಳನ್ನು ಹವಿರ್ಭಕ್ಷಣಕ್ಕಾಗಿ ಆಹ್ವಾನ ಮಾಡುವುದಕ್ಕೆ ಎಂಬ ಅರ್ಥವನ್ನು ಹೇಳಿರುವರು.

**ಹವಿಷ್ಮಾನ್—ಹವಿರ್ಯುಕ್ತಃ**—ದೇವತೆಗಳಿಗೆ ಅರ್ಪಿಸುವುದಕ್ಕಾಗಿ ಹವಿಸ್ಸನ್ನು ಸಿದ್ಧಪಡಿಸಿ ತನ್ನೊಡನೆ ತಂದಿರುವ ಯಜಮಾನನು ಎಂದರ್ಥವು.

**ಆವಿವಾಸತಿ—ಸಮೀಪೇ ವಿಶೇಷೇಣಾಗತ್ಯ ಪರಿಚರ್ಯಾಂ ಕರೋತಿ** || ಸಮೀಪಕ್ಕೆ ಬಂದು ವಿಶೇಷವಾಗಿ ಶುಶ್ರೂಷೆ ಮಾಡುವನು. Approaches you for presenting oblations.

**ಪಾವಕ**—ಶುದ್ಧಿಗೊಳಿಸುವವನು, ಪವಿತ್ರನು, purifier ಅಥವಾ ಜಾಜ್ವಲ್ಯಮಾನವಾಗಿ ಪ್ರಕಾಶಿಸುವವನು, Resplendent. ಈ ಶಬ್ದವು ಅಗ್ನಿಯನ್ನು ಸಂಬೋಧನೆ ಮಾಡುವಾಗ ವಿಶೇಷವಾಗಿ ಉಪಯೋಗಿಸಲ್ಪಡುವುದು.

**ಮೃಳಯ—ಸುಖಯ,** ಸುಖಮುತ್ಪಾದಯ. ಸುಖವನ್ನುಂಟುಮಾಡು.

|| ವ್ಯಾಕರಣಪ್ರಕ್ರಿಯಾ ||

**ದೇವವೀತಯೇ**—ವೀ ಗತಿಪ್ರಜನಕಾನ್ತ್ಯಶನಖಾದನೇಷು ಧಾತು. ಅಶನ ಎಂಬ ಅರ್ಥದಲ್ಲಿರುವ ಈ ಧಾತುವಿನ ಮುಂದೆ **ಸ್ತ್ರಿಯಾಂಕ್ತಿನ್** (ಪಾ. ಸೂ. ೩-೩-೯೪) ಎಂಬುದರಿಂದ ಕ್ತಿನ್ ಪ್ರತ್ಯಯ, ಪ್ರತ್ಯಯವು ಕಿತ್ತಾದ್ದರಿಂದ ಗುಣಬರುವುದಿಲ್ಲ, ವೀತಿ ಎಂದಿರುವುದು. ದೇವಾನಾಂ ವೀತಿಃ ಯಸ್ಮಿನ್ ಯಾಗೇ ಸಃ ದೇವವೀತಿಃ, ಎಂದು ಬಹುವ್ರೀಹಿಸಮಾಸ ಮಾಡಿದರೆ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ.ಸೂ. ೬-೭-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರಬರುವುದು. ಹವಿಃಶಬ್ದವು ಯದ್ಯಪಿ ನಪುಂಸಕಲಿಂಗವು. ಆದರೂ ಇಸಂತವಾದ್ದರಿಂದ ಅನಿಸಂತಸ್ಯ ಎಂದು ಪರ್ಯುದಾಸಮಾಡಿರುವಕಾರಣದಿಂದ **ನಬ್ವಿಷಯಸ್ಯಾನಿಸಂತಸ್ಯ,** (ಫಿ. ಸೂ. ೨೬) ಎಂಬುದರಿಂದ ಆದ್ಯುದಾತ್ತ ಬರುವುದಿಲ್ಲ. ಪ್ರತ್ಯಯಸ್ವರ ಬಂದು ಅಂತೋದಾತ್ತವೇ ಆಗುವುದು

**ಹವಿಷ್ಮಾನ್**—ಹವಿಃ ಅಸ್ಯ ಅಸ್ತಿ ಎಂದು ವಿಗ್ರಹ. **ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್** (ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯವು ಇದರ ಮುಂದೆ ಬರುವುದು. ಅದು ಪಿತ್ತಾದ್ದರಿಂದ **ಅನುದಾತ್ತೌ ಸುಪ್ಪಿತೌ** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತ. ಆದ್ದರಿಂದ ಹವಿಃ ಎಂಬಲ್ಲಿ ಅಂತೋದಾತ್ತವೇ ನಿಲ್ಲುವುದು.

**ಆವಿವಾಸತಿ**—ವಾ ಗತಿಗಂಧನಯೋಃ—ಧಾತು. ಅಂತರ್ಭಾವಿತಣಿಚ್ಪ್ರತ್ಯಯಾರ್ಥಕವಾದ ಈ ಧಾತುವಿನ ಮುಂದೆ ಆಗಮಯಿತುಂ ಇಚ್ಛತಿ ಎಂಬ ಅರ್ಥದಲ್ಲಿ **ಧಾತೋಃ ಕರ್ಮಣಸ್ಸಮಾನಕರ್ತೃಕಾದಿಚ್ಛಾಯಾಂ ವಾ** (ಪಾ. ಸೂ. ೩-೧-೭) ಎಂಬುದರಿಂದ ಸನ್ ಪ್ರತ್ಯಯ ಬರುವುದು. ಆಹ್ವಾನೇಚ್ಛೆಯು ಪರಿಚರ್ಯೆ ಎಂಬ ಅರ್ಥದಲ್ಲಿ ವಿಶ್ರಾಂತವಾಗುವುದು. ಆದ್ದರಿಂದಲೇ ನಿಘಂಟುವಿನಲ್ಲಿ (ನಿ. ೩-೫-೧೦) ಪರಿಚರ್ಯೇ ಎಂಬ ಅರ್ಥದಲ್ಲಿ ವಿವಾಸತಿ ಶಬ್ದವನ್ನು ಪಠಿಸಿರುವರು. ವಾ+ಸ ಎಂದಿರುವಾಗ **ಸನ್ಯಙೋಃ** ( ಪಾ. ಸೂ. ೬-೧-೯ ) ಎಂಬುದರಿಂದ ದ್ವಿತ್ವ. ಅಭ್ಯಾಸಕ್ಕೆ **ಹ್ರಸ್ವಃ** (ಪಾ. ಸೂ. ೭-೪-೫೯) ಎಂಬುದರಿಂದ ಹ್ರಸ್ವ. **ಸನ್ಯತಃ** (ಪಾ.ಸೂ. ೭-೪.೭೯) ಸನ್ ಪರದಲ್ಲಿರುವಾಗ ಅಭ್ಯಾಸದಲ್ಲಿರುವ ಅಕಾರಕ್ಕೆ ಇಕಾರ ಬರುವುದು ಎಂಬುದರಿಂದ ಅಕಾರಕ್ಕೆ ಇಕಾರ, ವಿವಾಸ ಎಂದಾಗುವುದು. ಸನ್ ಪ್ರತ್ಯಯವು ನಿತ್ತಾದ್ದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ.ಸೂ. ೬-೧-೧೯೭) ಎಂಬುದರಿಂದ ವಿವಾಸ ಎಂಬುದು ಆದ್ಯುದಾತ್ತ. ಇದಕ್ಕೆ **ಸನಾದ್ಯನ್ತಾ ಧಾತವಃ** (ಪಾ.ಸೂ. ೩-೧-೩೨)ಎಂಬುದರಿಂದ ಧಾತುಸಂಜ್ಞೆ ಬರುವುದು. ಆದ್ದರಿಂದ ಇದರಮುಂದೆ ಲಟ್, ಅದರ ಸ್ಥಾನದಲ್ಲಿ ತಿಪ್ ಬರುವುದು. ಶಪ್ ವಿಕರಣ ಪರರೂಪ ಬಂದರೆ ವಿವಾಸತಿ ಎಂದಾಗುವುದು. **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂದು ಪ್ರತಿಷೇಧ ಬರುವುದರಿಂದ **ತಿಙ್ಙತಿಙಃ** ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ. ಆ ಎಂಬ ಅಜ್ಞಿಗೆ **ತಿಙಿ ಚೋದಾತ್ತವತಿ** (ಪಾ. ಸೂ. ೮-೧-೭೧) ಉದಾತ್ತವನ್ನು ಹೊಂದಿರುವ ತಿಙಂತವು ಪರದಲ್ಲಿರುವಾಗ ಗತಿಸಂಜ್ಞಕವಾದ ಶಬ್ದವು ಅನುದಾತ್ತವಾಗುವುದು ಎಂಬುದರಿಂದ ಅನುದಾತ್ತ ಬರುವುದು. **ನಿಪಾತಾ ಆದ್ಯುದಾತ್ತಾಃ** ಎಂಬುದಕ್ಕೆ ಇದು ಅಪವಾದವಾದುದು. **ಸಹ ಸುಪಾ** (ಪಾ. ಸೂ. ೨-೧-೪ ) ಎಂಬಲ್ಲಿ ಸಹ ಎಂದು ಸೂತ್ರವನ್ನು ವಿಭಾಗಮಾಡಿರುವರು ಇದರಿಂದ ಅಜ್ಞಿಗೆ ತಿಙಂತದೊಂದಿಗೆ ಸಮಾಸ ಬರುವುದು. ಈಗ **ಸಮಾಸಸ್ಯ** (ಪಾ. ಸೂ. ೬-೧-೨೨೩) ಎಂಬುದರಿಂದ ಅಂತೋದಾತ್ತವು ಪ್ರಾಪ್ತವಾದರೆ ಅದನ್ನು ಬಾಧಿಸಿ **ಪರಾದಿಶ್ಛಂದಸಿ ಬಹುಲಮ್** ( ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದದ ಆದಿಯು ಉದಾತ್ತವಾಗುವುದು.

**ತಸ್ಮೈ**—ಕರ್ಮಣಾ ಯಮಭಿಪ್ರೈತಿ ಸಃ ಸಂಪ್ರದಾನಂ (ಪಾ. ಸೂ. ೧-೪-೩೨) ದಾನಕ್ರಿಯಾ ನಿರೂಪಿತವಾದ ಕರ್ಮದೊಂದಿಗೆ ಯಾವುದನ್ನು ಸಂಬಂಧಿಸಲು ಇಚ್ಛಿಸುವನೋ ಅದು ಕಾರಕಸಂಜ್ಞೆಯನ್ನು ಹೊಂದಿ ಸಂಪ್ರದಾನ ಸಂಜ್ಞೆಯನ್ನು ಹೊಂದುವುದು ಎಂದು ಅರ್ಥ. ದೇಯದ್ರವ್ಯೋದ್ದೇಶ್ಯವಾದುದು ಸಂಪ್ರದಾನಸಂಜ್ಞೆಯನ್ನು ಹೊಂದುವುದು ಎಂದು ಫಲಿತಾರ್ಥ. ಈ ಸೂತ್ರದಲ್ಲಿ ಭಾಷ್ಯಕಾರರು **ಕ್ರಿಯಾಗ್ರಹಣಂ ಕರ್ತವ್ಯಂ** (ಪಾ. ಸೂ. ವಾ- ೧-೪-೩೨-೧) ಕ್ರಿಯೋದ್ದೇಶ್ಯಭೂತವು ಸಂಪ್ರದಾನಸಂಜ್ಞೆಯನ್ನು ಹೊಂದುವುದು ಎಂದು ವಾರ್ತಿಕದ ಅರ್ಥ. ಇಲ್ಲಿ ಮೃಡಯಧಾತೂಪಸ್ಥಾಪ್ಯವಾದ ಸುಖನಕ್ರಿಯೆಗೆ ಉದ್ದೇಶ್ಯವಾಗಿರುವುದರಿಂದ ತತ್‌ಶಬ್ದಕ್ಕೆ ಸಂಪ್ರದಾನಸಂಜ್ಞೆ ಬಂದು **ಚತುರ್ಥೀ ಸಂಪ್ರದಾನೇ** ( ೫-೨-೩-೧-೧೩ ) ಎಂಬುದರಿಂದ ಚತುರ್ಥೀವಿಭಕ್ತಿಯು ಬರುವುದು.

**ಮೃಳಯ-ಮೃಡ ಸುಖನೇ, ಧಾತು**—ಣಿಜನ್ತವಾದ ಈ ಧಾತುವಿನ ಮುಂದೆ ಲೋಟ್ ಮಧ್ಯಮ ಪುರುಷ ಏಕವಚನ ಸಿಪ್, ಅದಕ್ಕೆ ಹಿ ಆದೇಶ, ಶಪ್ ವಿಕರಣ, ಗುಣ, ಅಯಾದೇಶ. **ಅತೋಹೇಃ** (ಪಾ. ಸೂ. ೬-೪-೧೦೫) ಎಂಬುದರಿಂದ ಹಿ ಗೆ ಲುಕ್. ಡಕಾರಕ್ಕೆ ಳಕಾರದೇಶ. ಮೃಳಯ ಎಂದಾಗುವುದು ॥ ೯ ॥

॥ ಸಂಹಿತಾಪಾಠಃ ॥

ಸ ನಃ ಪಾವಕ ದೀದಿವೋಽಗ್ನೇ ದೇವಾँ ಇಹಾ ವಹ ॥
ಉಪ ಯಜ್ಞಂ ಹವಿಶ್ಚ ನಃ ॥ ೧೦ ॥

॥ ಪದಪಾಠಃ ॥

ಸಃ । ನಃ । ಪಾವಕ । ದೀದಿಽವಃ । ಅಗ್ನೇ । ದೇವಾನ್ । ಇಹ । ಆ । ವಹ ॥
ಉಪ । ಯಜ್ಞಂ । ಹವಿಃ । ಚ । ನಃ ॥ ೧೦ ॥

॥ ಸಾಯಣಭಾಷ್ಯಂ ॥

ಪವಮಾನೇಷ್ಟಾವಗ್ನೇಃ ಪಾವಕಸ್ಯಾನುವಾಕ್ಯಾ ಸ ನಃ ಪಾವಕ ದೀದಿವ ಇತಿ। ಪೌರ್ಣಮಾಸೇನೇಷ್ಟಿಪಶುಸೋಮಾ ಉಪದಿಷ್ಟಾ ಖಂಡೇ ಸೂತ್ರಿತಂ । ಸ ನಃ ಪಾವಕ ದೀದಿವೋಽಗ್ನೇ ಪಾವಕ ರೋಚಿಷಾ । ಆ ೨೧ । ಇತಿ ॥

ಹೇ ದೀದಿವೋ ದೀಪ್ಯಮಾನ ಪಾವಕ ಶೋಧಕಾಗ್ನೇ ಸ ತ್ವಂ ನೋಽಸ್ಮದರ್ಥಮಿಹ ದೇವಯಜನದೇಶೇ ದೇವಾನಾ ವಹ । ತತೋ ನೋಽಸ್ಮದೀಯಂ ಯಜ್ಞಂ ತತ್ರತ್ಯಂ ಹವಿಶ್ಚೋಪ ದೇವಸಮೀಪೇ ಪ್ರಾಪಯೇತಿ ಶೇಷಃ ॥ ದೀದಿವಃ । ದಿವು ಕ್ರೀಡಾದೌ । ಛಂದಸಿ ಲುಙ್ಲಙ್ಲಿಟ ಇತಿ ವರ್ತಮಾನೇ ಲಿಟ್ । ಕ್ವಸುಃ । ದ್ವಿರ್ಭಾವೋ ಹಲಾದಿಶೇಷಃ । ತುಜಾದೀನಾಂ ದೀರ್ಘೋಽಭ್ಯಾಸಸ್ಯೇತ್ಯಭ್ಯಾಸಸ್ಯ ದೀರ್ಘತ್ವಂ । ವಸ್ವೇಕಾಜಾದ್ಘಸಾಮಿತಿ ನಿಯಮಾದ್ವಸೋರಿಟ್ಪ್ರತಿಷೇಧಃ । ಲೋಪೋ ವ್ಯೋರ್ವಲೀತಿ ವಕಾರಲೋಪಃ । ಸಂಬುದ್ಧಾವುಗಿದಚಾಮಿತ್ಯಾದಿನಾ ನುಮ್ । ಹಲ್ಙ್ಯಾದಿಲೋಪಃ ಸಂಯೋಗಾಂತಲೋಪಃ । ಮತುವಸೋರಿತಿ ರುತ್ವಂ । ವಿಸರ್ಗಃ । ಅಗ್ನೇ । ಪಾದಾದಿತ್ವಾನ್ನನಿಘಾತಃ । ದೇವಾँ ಇಹೇತ್ಯತ್ರ ದೀರ್ಘಾದಟಿ ಸಮಾನಪಾದ ಇತಿ ರುತ್ವಂ । ಆತೋಽಟಿ ನಿತ್ಯಮಿತ್ಯಾಕಾರಸ್ಯಾನುನಾಸಿಕಃ । ಭೋಭಗೋಅಘೋಅಪೂರ್ವಸ್ಯ ಯೋಽಶೀತಿ ರೋರ್ಯಕಾರಃ । ಲೋಪಃ ಶಾಕಲ್ಯಸ್ಯೇತಿ ಯಕಾರಲೋಪಃ । ತಸ್ಯಾಸಿದ್ಧತ್ವಾದಾದ್ಗುಣೋ ನ ಭವತಿ । ಇಹ । ಇದಮೋ ಹಃ । ಪಾ. ೫-೩-೧೧ । ಇತಿ ಸಪ್ತಮ್ಯಂತಾದ್ಧಪ್ರತ್ಯಯಃ । ಇದಮ ಇಶ್ । ಪಾ ೫-೩-೩ । ತದ್ಧಿತಾಂತತ್ವಾತ್ಪ್ರಾತಿಪದಿಕತ್ವೇ ಸುಪೋ ಧಾತುಪ್ರಾತಿಪದಿಕಯೋಃ । ಪಾ. ೨-೪-೭೧ । ಇತಿ ಸಪ್ತಮ್ಯಾ ಲುಕ್ । ತದ್ಧಿತಶ್ಚಾಸರ್ವವಿಭಕ್ತಿಃ । ಪಾ ೧-೧-೩೮ । ಇತ್ಯವ್ಯಯಸಂಜ್ಞಾಯಾಮವ್ಯಯಾದಾಪ್ಸುಪಃ । ಪಾ. ೨-೪ ೮೨ । ಇತ್ಯುತ್ತರಸ್ಯಾಃ ಸಪ್ತಮ್ಯಾ ಲುಕ್ । ಚಕಾರಃ ಪ್ರತ್ಯಯಸ್ವರೇಣೋದಾತ್ತಃ ॥

॥ ಪ್ರತಿಪದಾರ್ಥ ॥

**ದೀದಿವಃ**—ಪ್ರಕಾಶಮಾನನಾದ । (ಹೇ) **ಪಾವಕ**--ಶುದ್ಧಿಗೊಳಿಸುವ ಎಲೈ ಅಗ್ನಿಯೇ । **ಸಃ**—ಇಂತಹ (ನೀನು) । **ನಃ**—ನಮಗೆ । **ಇಹ**—ಈ ಯಜ್ಞ ಪ್ರದೇಶಕ್ಕೆ । **ದೇವಾನ್**—ದೇವತೆಗಳನ್ನು । **ಆ ವಹ**। ಕರೆದುಕೊಂಡು ಬಾ । (ಅನಂತರ) **ನಃ**—ನಮ್ಮ (ನಾವು ಮಾಡುವ) । **ಯಜ್ಞಂ**--ಯಜ್ಞವನ್ನು । **ಹವಿಃ ಚ**—ಆ ಯಜ್ಞದಲ್ಲಿ ನಾವು ಸಮರ್ಪಿಸುವ ಹವಿಸ್ಸನ್ನೂ ಸಹ । **ಉಪ**--ದೇವತೆಗಳ ಸಮೀಪಕ್ಕೆ ಸೇರುವಂತೆ ಮಾಡು ॥

॥ ಭಾವಾರ್ಥ ॥

ಎಲೈ ಅಗ್ನಿಯೇ ನೀನು ದೇದೀಪ್ಯಮಾನವಾಗಿ ಪ್ರಕಾಶಿಸುವವನು. ಎಲ್ಲವನ್ನು ಶುದ್ಧಿಗೊಳಿಸುವವನು. ಇಂತಹ ನೀನು ನಾವು ಮಾಡುತ್ತಿರುವ ಈ ಯಜ್ಞಭೂಮಿಗೆ ದೇವತೆಗಳನ್ನು ಕರೆದುಕೊಂಡು ಬಾ ಮತ್ತು ದೇವತೆಗಳನ್ನುದ್ದೇಶಿಸಿ ನಾವು ಮಾಡುವ ಯಜ್ಞವನ್ನೂ ಅವರಿಗೆ ನಾವು ಅರ್ಪಿಸುವ ಹವಿಸ್ಸನ್ನೂ ಅವರಿಗೆ ಹೋಗಿ ಸೇರುವಂತೆ ಮಾಡು.

English Translation.

O Agni, resplendent and purifier, conduct the gods hither to us, to our sacrifice and to our oblations.

॥ ವಿಶೇಷವಿಷಯಗಳು ॥

ಈಋಕ್ಕಿನ ವಿನಿಯೋಗವು-ಪವಮಾನೇಷ್ಟಿಯಲ್ಲಿ **ಅಗ್ನಿಃ ಪಾವಕ** ಎಂಬ ಅಗ್ನಿಯನ್ನುದ್ದೇಶಿಸಿ ಹೋಮ ಮಾಡುವಾಗ ಈ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿ ಉಪಯೋಗಿಸುವರು. ಈ ವಿಷಯವು ಆಶ್ವಲಾಯನ ಶ್ರೌತಸೂತ್ರದ (ಆ. ೨-೧) **ಪೌರ್ಣಮಾಸೇನೇಷ್ಟಿಪಶುಸೋಮಾ ಉಪದಿಷ್ಟಾ** ಎಂದು ಮೊದಲಾಗುವ ಖಂಡದಲ್ಲಿ **ಸ ನಃ ಪಾವಕ ದೀದಿವಃ** (ಋ. ಸಂ ೧-೧೨-೧೦) ಮತ್ತು **ಅಗ್ನೇ ಪಾವಕ ರೋಚಿಷಾ** (ಋ ಸಂ. ೫-೨೬-೧) ಎಂಬ ಋಕ್ಕುಗಳನ್ನು ಕ್ರಮವಾಗಿ ಯಾಜ್ಯಾಪುರೋನುವಾಕ್ಯಾ ಋಕ್ಕುಗಳನ್ನಾಗಿ ಪಠಿಸಬೇಕೆಂದು ಹೇಳಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ದೀದಿವಃ**— ದಿವು ಕ್ರೀಡಾವಿಜಿಗೀಷಾವ್ಯವಹಾರದ್ಯುತಿಮೋದಮದಸ್ವಪ್ನಕಾನ್ತಿಗತಿಷು. ಇದರ ಮುಂದೆ **ಛಂದಸಿ ಲುಙ್ಲಙ್ಲಿಟಃ** (ಪಾ. ಸೂ. ೩-೪೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಅದಕ್ಕೆ **ಕ್ವಸುಶ್ಚ** (ಪಾ. ಸೂ ೩-೨-೧೦೭) ಎಂಬುದರಿಂದ ಕ್ವಸು ಪ್ರತ್ಯಯ. **ಲಿಟಿ ಧಾತೋರನಭ್ಯಾಸಸ್ಯ** (ಪಾ. ಸೂ. ೬-೧-೮) ಎಂಬುದರಿಂದ ದ್ವಿತ್ವ. **ಹಲಾದಿಃಶೇಷಃ** (ಪಾ. ಸೂ. ೭-೪೬೦) ಎಂಬುದರಿಂದ ಅಭ್ಯಾಸದಲ್ಲಿರುವ ವಕಾರಕ್ಕೆ ನಿವೃತ್ತಿ. **ತುಜಾದೀನಾಂ ದೀರ್ಘೋಽಭ್ಯಾಸಸ್ಯ** (ಪಾ. ಸೂ. ೬-೧-೭) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ-

ದೀದಿವ್+ವಸ್. ಈಗ **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂಬುದರಿಂದ ಇಡಾಗಮವು ಯದ್ಯಪಿ ಪ್ರಾಪ್ತವಾಗುವುದು. ಆದರೂ **ವಸ್ವೇಕಾಜಾದ್ಘಸಾಮ್** ೭-೨-೬೭) ಎಂಬ ನಿಯಮ ಸೂತ್ರದಿಂದ ಬರುವುದಿಲ್ಲ. **ಲೋಪೋವ್ಯೋರ್ವಲಿ** (ಪಾ. ಸೂ. ೬-೧-೬೬) ಎಂಬುದರಿಂದ ಉತ್ತರಖಂಡದಲ್ಲಿರುವ ವಕಾರಕ್ಕೆ ಲೋಪ. ದೀದಿವಸ್ ಎಂಬುದರ ಮುಂದೆ ಸಂಬೋಧನ ಪ್ರಥಮೈಕವಚನ ಸು ಪ್ರತ್ಯಯವನ್ನಿಟ್ಟರೆ **ಉಗಿದಚಾಂ-ಸರ್ವನಾಮಸ್ಥಾನೇಽಧಾತೋಃ** (ಪಾ. ಸು. ೬-೧-೬೮) ಎಂಬುದರಿಂದ ಸುಗೆ ಲೋಪ. **ಸಂಯೋಗಾಂತಸ್ಯ-ಲೋಪಃ** (ಪಾ. ಸೂ. (೮-೨-೨೩) ಎಂಬುದರಿಂದ ಸಕಾರಕ್ಕೆ ಲೋಪ, ಇದು ವಸ್ವಂತ. ಆದ್ದರಿಂದ **ಮತುವ-ಸೋರುಸಂಬುದ್ಧೌ ಛಂದಸಿ** ಎಂಬುದರಿಂದ ನಕಾರಕ್ಕೆ ರು ಆದೇಶ. **ಖರವಸಾನಯೋರ್ವಿಸರ್ಜನೀಯಃ** (ಪಾ. ಸೂ. ೮-೩-೧೫) ಎಂಬುದರಿಂದ ವಿಸರ್ಗ. ದೀದಿವಃ ಎಂದಾಗುವುದು.

**ಅಗ್ನೇ**— ಇದು ದ್ವಿತೀಯಪಾದದ ಆದಿಯಲ್ಲಿರುವುದು. ಆದ್ದರಿಂದ ಅಷ್ಟಮಿಕಾನುದಾತ್ತ ಬರುವುದಿಲ್ಲ.

**ದೇವಾ ಇಹ**— ದೇವ ಶಬ್ದಕ್ಕೆ ದ್ವಿತೀಯಾಬಹುವಚನದಲ್ಲಿ ದೇವಾನ್ ಎಂದು ರೂಪವು. ಅದರ ನಕಾರ ಸಂಹಿತಾಕಾಲದಲ್ಲಿ **ದೀರ್ಘಾದಟಿ ಸಮಾನಪಾದೇ** (ಪಾ. ಸೂ. ೮-೩-೯) ನಕಾರ ಅಡ್ವರ್ಣಗಳು ಒಂದೇ ಪಾದದಲ್ಲಿದ್ದರೆ ಅಡ್ವರ್ಣದ ಹಿಂದೆ ಇರುವುದೂ ದೀರ್ಘಕ್ಕಿಂತಲೂ ಪರದಲ್ಲಿ ಇರತಕ್ಕದ್ದೂ ಆದ ನಕಾರಕ್ಕೆ ರು ಆದೇಶ ಬರುವುದು ಎಂಬುದರಿಂದ ರು ಆದೇಶ ಬರುವುದು. ದೇವಾರ್+ಇಹ ಈಗ **ಆತೋಽಟಿ ನಿತ್ಯಮ್** (ಪಾ. ಸೂ. ೮-೩-೩) ಅಡ್ವರ್ಣ ಪರದಲ್ಲಿರುವಾಗ ರು ವಿಗಿಂತಲೂ ಪೂರ್ವದಲ್ಲಿರುವ ದೀರ್ಘಾಕಾರದ ಸ್ಥಾನದಲ್ಲಿ ಅನುನಾಸಿಕವು ನಿತ್ಯವಾಗಿ ಬರುವುದು ಎಂಬುದರಿಂದ ದೇವಾ ಎಂಬಲ್ಲಿರುವ ಆಕಾರಕ್ಕೆ ಅನುನಾಸಿಕವಾದ ಅಕಾರ ಬಂದರೆ ದೇವಾ ರ್+ಇಹ. **ಭೋಭಗೋ ಅಘೋ ಅಪೂರ್ವಸ್ಯಯೋಽಶಿ**(ಪಾ.ಸೂ. ೮-೩-೧೭)ಭೋಶಬ್ದಪೂರ್ವಕವೂ, ಭಗೋಶಬ್ದಪೂರ್ವಕವೂ, ಅಘೋಶಬ್ದಪೂರ್ವಕವೂ ಅವರ್ಣಪೂರ್ವಕವೂ ಆದ ರುಗೆ ಯಾದೇಶವು ಅಶ್ ವರ್ಣ ಪರದಲ್ಲಿದ್ದರೆ ಬರುವುದು ಎಂಬುದರಿಂದ ದೀರ್ಘಾಕಾರದ ಮುಂದೆಯೂ ಇ ಎಂಬ ಅಶ್ವರ್ಣದ ಹಿಂದೆಯೂ ಇರುವ ರುಗೆ ಯಾದೇಶ ಬರುವುದು. ದೇವಾಯ್ ಇಹ ಎಂದಾಗುವುದು. ಈಗ **ಲೋಪಶ್ಶಾಕಲ್ಯಸ್ಯ** (ಪಾ. ಸೂ. ೮-೩-೧೯) ಅವರ್ಣಪೂರ್ವಕಗಳೂ ಪದದ ಕೊನೆಯಲ್ಲಿರತಕ್ಕವುಗಳೂ ಆದ ಯಕಾರವಕಾರಗಳಿಗೆ ಅಶ್ವರ್ಣ ಪರದಲ್ಲಿರುವಾಗ ಲೋಪವು ವಿಕಲ್ಪವಾಗಿ ಬರುವುದು ಎಂಬುದರಿಂದ ಯಕಾರಕ್ಕೆ ಲೋಪ, ದೇವಾ +ಇಹ. ಈಗ ಆಕಾರಕ್ಕೆ ಇಕಾರ ಪರದಲ್ಲಿರುವುದರಿಂದ **ಆದ್ಗುಣಃ** (ಪಾ. ಸೂ. ೬-೧-೮೭) ಎಂಬುದರಿಂದ ಯದ್ಯಪಿ ಗುಣವು ಪ್ರಾಪ್ತವಾಗುವುದು. ಆದರೆ **ಪೂರ್ವತ್ರಾಸಿದ್ಧಮ್** (ಪಾ. ಸೂ. ೮-೨-೧) ಎಂಬುದರಿಂದ ಗುಣವನ್ನು ಮಾಡುವಾಗ ಯ ಲೋಪವು ಅಸಿದ್ಧವಾಗುವುದರಿಂದ ಆಕಾರಕ್ಕೆ ಯಕಾರ ಪರದಲ್ಲಿರುವುದೇ ವಿನಾ ಇಕಾರ ಪರದಲ್ಲಿರುವುದಿಲ್ಲ. ಆದ್ದರಿಂದ ಗುಣವು ಬರುವುದಿಲ್ಲ

**ಇಹ**– **ಇದಮೋಹಃ** (ಪಾ. ಸೂ. ೮-೩-೧೧) ಇದಮ್‌ಶಬ್ದ ಪ್ರಕೃತಿಕವಾದ ಸಪ್ತಮ್ಯಂತದ ಮುಂದೆ ಹ ಪ್ರತ್ಯಯ ಬರುವುದು. ಇದಮ್ ಙಿ ಎಂಬುದರಿಂದ ಮುಂದೆ ಹ ಪ್ರತ್ಯಯ ಬರುವುದು. ಇದಮ್ ಙಿ, ಹ, ತದ್ಧಿತಾನ್ತವಾದ್ದರಿಂದ **ಕೃತ್ತದ್ಧಿತಸಮಾಸಾಶ್ಚ** (ಪಾ. ಸೂ. ೧-೨-೪೬) ಕೃದಂತ ತದ್ಧಿತಾಂತ ಸಮಾಸ ಇವುಗಳು ಪ್ರಾತಿಪದಿಕಸಂಜ್ಞೆಯನ್ನು ಹೊಂದುವುವು ಎಂಬುದರಿಂದ ಪ್ರಾತಿಪದಿಕಸಂಜ್ಞೆ ಬರುವುದು- ಪ್ರಾತಿಪದಿಕಾವಯವವಾದ ಙಿ ಎಂಬ ಸುಪ್ಪಿಗೆ **ಸುಪೋಧಾತುಪ್ರಾತಿಪದಿಕಯೋಃ** (೨-೪-೭೧) ಧಾತುಪ್ರಾತಿಪದಿಕಾವಯವವಾದ ಸುಪ್ಪಿಗೆ ಲುಕ್ ಬರುವುದು ಎಂಬುದರಿಂದ ಲುಕ್ ಬರುವುದು. ನಂತರ **ಇದಮಇಶ್** (ಪಾ. ಸೂ. ೫-೩-೩) ಪ್ರಾಗ್ದಿಶೀಯ ಪ್ರತ್ಯಯ ಪರದಲ್ಲಿರುವಾಗ ಇದಮ್ ಶಬ್ದಕ್ಕೆ ಇಶ್ ಆದೇಶ ಬರುವುದು ಎಂಬುದರಿಂದ

ಇದಮ್ ಶಬ್ದಕ್ಕೆ ಇಶ್ ಆದೇಶ. ಅದು ಶಿತ್ತಾದ್ದರಿಂದ **ಅನೇಕಾಲ್‌ಶಿತ್ಸರ್ವಸ್ಯ** (ಪಾ. ಸೂ. ೧-೧-೫೫) ಎಂಬುದರಿಂದ ಸರ್ವಾದೇಶ ಇಹ ಎಂದಾಗುವುದು. **ತದ್ಧಿತಶ್ಚಾಸರ್ವವಿಭಕ್ತಿಃ** (ಪಾ. ಸೂ. ೧-೧-೩೮) ಯಾವ ತದ್ಧಿತಾಂತಶಬ್ದದ ಮುಂದೆ ವಚನತ್ರಯಾತ್ಮಕವಾದ ಎಲ್ಲಾ ವಿಭಕ್ತಿಯೂ ಬರುವುದಿಲ್ಲವೋ ಏಕವಚನ ವಿಭಕ್ತಿಗಳು ಮಾತ್ರ ಉತ್ಪನ್ನಗಳಾಗುವುವೋ ಆ ತದ್ಧಿತಾಂತವು ಅವ್ಯಯಸಂಜ್ಞೆಯನ್ನು ಹೊಂದುವುದು ಎಂಬುದರಿಂದ ಇಹ ಎಂಬುದಕ್ಕೆ ಅವ್ಯಯಸಂಜ್ಞೆ ಬರುವುದು. ಇದರ ಮುಂದೆ ಬರುವ ಸಪ್ತಮೀಏಕವಚನ ಙಿ ಪ್ರತ್ಯಯಕ್ಕೆ **ಅವ್ಯಯಾದಾಪ್ಸುಪಃ** (ಪಾ. ಸೂ. ೨-೪-೮೨) ಅವ್ಯಯದ ಮುಂದೆ ಇರುವ ಆಪ್ ಸುಪ್ ಇವುಗಳಿಗೆ ಲುಕ್ ಬರುವುದು ಎಂಬುದರಿಂದ ಲುಕ್ (ಲೋಪ) ಬರುವುದು. ಅಕಾರವು **ಆದ್ಯುದಾತ್ತಶ್ಚ** (ಪಾ. ಸೂ, ೩-೧-೩) ಎಂಬುದರಿಂದ ಉದಾತ್ತವಾಗುವುದು ॥ ೧೦ ॥

॥ ಸಂಹಿತಾಪಾಠಃ ॥

ಸ ನಃ ಸ್ತವಾನ ಆ ಭರ ಗಾಯತ್ರೇಣ ನವೀಯಸಾ ।
ರಯಿಂ ವೀರವತೀಮಿಷಂ ॥ ೧೧ ॥

॥ ಪದಪಾಠಃ ॥

ಸಃ । ನಃ । ಸ್ತವಾನಃ । ಆ । ಭರ । ಗಾಯತ್ರೇಣ । ನವೀಯಸಾ ।
ರಯಿಂ । ವೀರಽವತೀಂ । ಇಷಂ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ನವೀಯಸಾ ನವತರೇಣ ಪೂರ್ವೈರಪ್ಯಸಂಪಾದಿತೇನ ಗಾಯತ್ರೇಣ ಗಾಯತ್ರೀಚ್ಛಂದಸ್ಕೇನಾನೇನ ಸೂಕ್ತೇನ ಸ್ತವಾನಃ ಸ್ತೂಯಮಾನಃ ಸ ತ್ವಂ ನೋಽಸ್ಮದರ್ಥಂ ರಯಿಂ ಧನಂ ವೀರವತೀಂ ಶೂರಪುತ್ರಪ್ರಭೃತ್ಯಪತ್ಯಯುಕ್ತಾಮಿಷಮನ್ನಂ ಚಾ ಭರ । ಸಂಪಾದಯ ॥ ಸ್ತವಾನಃ । ಷ್ಟುಞ್ ಸ್ತುತೌ । ಧಾತ್ವಾದೇಃ ಷಃ ಸಃ । ಸ್ವರಿತಞಿತ ಇತ್ಯಾತ್ಮನೇಪದಂ । ಲಟಃ ಶಾನಚ್ । ಕರ್ತರಿ ಶಪ್ । ಬಹುಲಂ ಛಂದಸೀತಿ ಲುಗಭಾವಃ । ಗುಣಾವಾದೇಶೌ । ಆನೇ ಮುಕ್ । ಪಾ. ೭-೨-೮೨ । ಇತಿ ಮುಗ್ನ ಭವತ್ಯನಿತ್ಯಮಾಗಮಶಾಸನಮಿತ್ಯಾಗಮಾನುಶಾಸನಸ್ಯಾನಿತ್ಯತ್ವಾತ್ । ತಪಃ ಪಿತ್ತ್ವಾದನುದಾತ್ತತ್ವಂ । ಶಾನಚಶ್ಚಿತ್ತ್ವಾದಂತೋದಾತ್ತಸ್ಯಾದುಪದೇಶಾಚ್ಛಪಃ ಪರತ್ವಾಲ್ಲಸಾರ್ವಧಾತುಕಾನುದಾತ್ತತ್ವಂ । ಧಾತುಸ್ವರ-

ಏವ ಶಿಷ್ಯತೇ । ಭರ । ಹೃಗ್ರಹೋರ್ಭಶ್ಛಂದಸಿ । ಪಾ. ೮-೨-೩೨-೧ । ಇತಿ ಭತ್ವಂ । ಗಾಯತ್ರೇಣ । ಗಾಯತ್ರ್ಯಾಃ ಸಂಬಂಧಿ ಗಾಯತ್ರಂ । ತಸ್ಯೇದಂ । ಪಾ. ೪-೩-೧೨೦ । ಇತ್ಯಣ್ಪ್ರತ್ಯಯಃ । ಪ್ರತ್ಯಯಸ್ವರಃ । ನವೀಯಸಾ । ನವಶಬ್ದಾದಾತಿಶಾಯನಿಕ ಈಯಸುನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತಃ । ವೀರವತೀಂ । ಮತುಬ್ಙೀಪೋಃ ಪಿತ್ವಾದನುದಾತ್ತತ್ವಂ । ಅಕಾರಃ ಪ್ರಾತಿಪದಿಕಸ್ವರೇಣೋದಾತ್ತಃ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ,) **ಗಾಯತ್ರೇಣ**—ಗಾಯತ್ರೀಛಂದಸ್ಸಿನಿಂದ ಯುಕ್ತವಾದ । **ನವೀಯಸಾ**—ಹೊಸದಾದ ಎಂದರೆ ಇದುವರೆಗೆ ನಾವು ಉಪಯೋಗಿಸದೆ ಇರುವ (ಹೊಸದಾಗಿ ರಚಿಸಿರುವ) ಸೂಕ್ತದಿಂದ । **ಸ್ತವಾನಃ**-ಸ್ತುತಿಸಲ್ಪಡುವ । **ಸಃ**—(ಅ) ನೀನು । **ನಃ**—ನಮಗೆ । **ರಯಿಂ**—ಧನವನ್ನೂ । **ವೀರವತೀಂ**—ಶೂರರಾದ ಪುತ್ರಾದಿಗಳನ್ನೂ । **ಇಷಂ**—ಅನ್ನವನ್ನೂ (ಆಹಾರವನ್ನೂ) । **ಆ ಭರ**—ದೊರಕಿಸಿಕೊಡು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಾವು ಈಗತಾನೇ ಹೊಸದಾಗಿ ಗಾಯತ್ರೀಛಂದಸ್ಸಿನಿಂದ ರಚಿಸಿರುವ ಈ ಸ್ತೋತ್ರದಿಂದ ನಿನ್ನನ್ನು ಸ್ತೋತ್ರಮಾಡುತ್ತಿರುವೆವು ಹೀಗೆ ಸ್ತುತಿಸಲ್ಪಡುವ ನೀನು ನಮಗೆ ಧನವನ್ನೂ ಶೂರರಾದ ಜನರನ್ನೂ ಅನ್ನಾದ್ಯಾಹಾರವನ್ನೂ ದೊರಕಿಸಿಕೊಡು.

English Translation.

Thus praised by us with our new Gayatra hymn, bring us wealth, valiant men and food.

॥ ವಿಶೇಷ ವಿಷಯಗಳು ॥

ಆ ಭರ-ಧರಿಸು, ಕೊಡು. ಕೊಡು ಎಂಬ ಅರ್ಥದಲ್ಲಿ ಭರ ಎಂಬ ಶಬ್ದವನ್ನು ಉಪಯೋಗಿಸುವುದು ಋಗ್ವೇದದಲ್ಲಿ ವಿಶೇಷ ರೂಢಿಯಲ್ಲಿದೆ.

**ಸುಪೇಶಸಂ ವಾಜಮಾ ಭರಾ ನಃ ಪ್ರಾತರ್ಮಕ್ಷೂ ಧಿಯಾವಸುರ್ಜಗಮ್ಯಾತ್ ॥**

**(ಋ. ಸ. ೧-೬೩-೯)**

**ವಿಶ್ವಾ ಅಗ್ನೇ ಅಭಿಯುಜೋ ವಿಹತ್ಯಾ ಶತ್ರೂಯತಾಮಾ ಭರಾ ಭೋಜನಾನಿ ॥**

**(ಋ. ಸಂ. ೫-೪-೫)**

**ಸುವೀರಂ ರಯಿಮಾ ಭರ ಜಾತವೇದೋ ವಿಚರ್ಷಣೇ ॥**

**(ಋ. ಸಂ. ೬-೧೬-೨೯)**

**ಇತ್ಯಾದಿ ಅನೇಕ ಉದಾಹರಣೆಗಳನ್ನು ಕೊಡಬಹುದು.**

**ಗಾಯತ್ರೇಣ**— ಭಾಷ್ಯಕಾರರು ಗಾಯತ್ರೀಛಂದಸ್ಸಿನಿಂದ ಕೂಡಿದ ಎಂದರ್ಥಮಾಡಿರುವರು. ಇದಲ್ಲದೆ ಗಾಯತ್ರವೆಂಬ ಒಂದು ಸಾಮಮಂತ್ರವೂ ಇರುವುದು. ಮತ್ತು ಗಾಯತ್ರೇಣ ಎಂದರೆ ಗಾನಮಾಡುತ್ತಾ ಎಂಬ ಅರ್ಥವನ್ನು ಹೇಳಬಹುದು.

**ನವೀಯಸಾ**— ಹೊಸದಾದ, ಹೊಸದಾಗಿ ರಚಿಸಿರುವ, ಹಿಂದೆ ಉಪಯೋಗಿಸಿದೆ. ಈಗಲೇ ಪ್ರಥಮವಾರವಾಗಿ ಉಪಯೋಗಿಸುತ್ತಿರುವ ಎಂದರ್ಥವು. ಒಂದು ಸೂಕ್ತವನ್ನು ಅಥವಾ ಋಕ್ಕನ್ನು ರಚಿಸಿದ ಮೇಲೆ ಅದನ್ನು ಅನೇಕಾವರ್ತಿ ಅನೇಕ ಜನರು ಸ್ತೋತ್ರಮಾಡುವುದಕ್ಕಾಗಿ ಪಠಿಸುವರು. ಆದರೆ ಈ ಸೂಕ್ತದಿಂದ ಇದೇ ಮೊದಲನೇ ಸಾರಿ ಸ್ತೋತ್ರಮಾಡಿರುವೆನೆಂದು ಋಷಿಯು ಹೇಳಿರುವನು.

**ವೀರವತೀಂ**— ಈ ಶಬ್ದವು ಇಷಂ ಎಂಬ ಶಬ್ದಕ್ಕೆ ವಿಶೇಷಣಪದವಾಗಿ ಉಪಯೋಗಿಸಿರುವುದು. ಆದುದರಿಂದ ವೀರವತೀಂ ಇಷಂ ಎಂಬ ಶಬ್ದಗಳಿಗೆ ಶೂರರಾದ ಪುತ್ರಪೌತ್ರಾದಿ ಸಂತತಿ, ಭೃತ್ಯರು, ಆಪ್ತರಾದ ಜನರು ಇವರುಗಳಿಂದ ಸಹಿತವಾದ ಅನ್ನಾದ್ಯಾಹಾರಗಳನ್ನು ಕೊಡು ಎಂದರ್ಥವು. ಶೂರರಾದ ಜನರನ್ನೂ, ಅನ್ನಾದ್ಯಾಹಾರವನ್ನೂ ಅನುಗ್ರಹಿಸು ಎಂದು ಮುಖ್ಯಾಭಿಪ್ರಾಯವು.

|| ವ್ಯಾಕರಣಪ್ರಕ್ರಿಯಾ ||

**ಸ್ತವಾನಃ**— ಷ್ಟುಞ್ ಸ್ತುತೌ ಧಾತು. **ಧಾತ್ವಾದೇಃ ಷಃ ಸಃ** (ಪಾ. ಸೂ. ೬-೧-೬೪) ಎಂಬುದರಿಂದ ಷಕಾರಕ್ಕೆ ಸಕಾರ. ಷ್ಟುತ್ವದಿಂದ ಬಂದ ಟಕಾರಕ್ಕೆ ನಿವೃತ್ತಿ ಸ್ತು ಎಂದಾಗುವುದು. **ಸ್ವರಿತಞಿತಃ ಕರ್ತ್ರಭಿಪ್ರಾಯೇ ಕ್ರಿಯಾಫಲೇ** (ಪಾ. ಸೂ. ೧-೩-೭೨) ಕ್ರಿಯಾ ಫಲವು ಕರ್ತೃವಿಗೆ ಸೇರುವಾಗ ಸ್ವರಿತೇತ್ತು ಅಥವಾ ಞಿತ್ತು ಆದ ಧಾತುವಿನ ಮುಂದೆ ಇರುವ ಲಕಾರದ ಸ್ಥಾನದಲ್ಲಿ ಆತ್ಮನೇಪದ ಬರುವುದು ಎಂಬುದರಿಂದ ಞಿತ್ತಾದ ಸ್ತುಧಾತುವಿನ ಮುಂದೆ ಇರುವ ಲಕಾರಕ್ಕೆ ಆತ್ಮನೇಪದಪ್ರತ್ಯಯ ಬರುವುದು. ಆದ್ದರಿಂದ ಇದರ ಮುಂದೆ ಲಟ್ ಬಂದರೆ ಅದರ ಸ್ಥಾನದಲ್ಲಿ **ಲಟಶ್ಶತೃಶಾನಚಾವಪ್ರಥಮಾ ಸಮಾನಾಧಿಕರಣೇ** (ಪಾ. ಸೂ. ೧-೩-೭೨) ಎಂಬುದರಿಂದ ಆತ್ಮನೇ ಪದಸಂಜ್ಞಕವಾದ ಶಾನಚ್ ಆದೇಶ ಬರುವುದು. ಸ್ತು+ಅ+ಆನ **ಅದಿಪ್ರಭೃತಿಭ್ಯಃ ಶಪಃ** (ಪಾ. ಸೂ. ೩-೧-೬೮) ಎಂಬುದರಿಂದ ಲುಕ್ ಪ್ರಾಪ್ತವಾದರೆ **ಬಹುಲಂ ಛಂದಸಿ** (ಪಾ. ಸೂ. ೨-೪-೭೩) ಎಂಬಲ್ಲಿ ಬಹುಲಗ್ರಹಣವಿರುವುದರಿಂದ ಲುಕ್ಕು ಬರುವುದಿಲ್ಲ. **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಗುಣ. **ಏಚೋಽಯವಾಯಾವಃ** (ಪಾ. ಸೂ.) ಎಂಬುದರಿಂದ ಅವಾದೇಶ ಸ್ತವ+ಆನ. **ಅನಿತ್ಯಮಾಗಮಶಾಸನಮ್** (ಪರಿಭಾ. ೯೬) ಎಂಬುದರಿಂದ ಆಗಮವಿಧಾಯಕವಾದ ಶಾಸ್ತ್ರವು ಅನಿತ್ಯವು. ಆದ್ದರಿಂದ **ಆನೇಮುಕ್** (ಪಾ. ಸೂ. ೭-೩-೫೨) ಆನ ಎಂಬುದು ಪರದಲ್ಲಿರುವಾಗ ಅದಂತವಾದ ಅಂಗಕ್ಕೆ ಮುಗಾಗಮ ಬರುವುದಿಲ್ಲ. ಸವರ್ಣದೀರ್ಘ ಬಂದರೆ ಸ್ತವಾನ ಎಂದಾಗುವುದು. ಶಪ್ಪು ಪಿತ್ತಾದ್ದರಿಂದ ಅನುದಾತ್ತ. ಶಾನಚ್‌ಪ್ರತ್ಯಯವು ಅಕಾರಾಂತೋಪದೇಶವಾದ ಶಪ್ಪಿಗಿಂತಲೂ ಪರದಲ್ಲಿರುವುದು. ಆದ್ದರಿಂದ **ತಾಸ್ಯನುದಾತ್ತೇನ್ಙಿದದುಪದೇಶಾತ್** (ಪಾ. ಸೂ. ೬-೧-೧೮೬) ಎಂಬುದರಿಂದ ಲಸ್ಥಾನಿಕ ಸಾರ್ವಧಾತುಕವಾದ ಶಾನಚ್‌ಪ್ರತ್ಯಯಕ್ಕೆ ಅನುದಾತ್ತ ಬರುವುದು. **ಧಾತೋಃ** (ಪಾ. ಸೂ. ೬-೧-೧೬೨) ಎಂಬುದರಿಂದ ಧಾತುವಾದ ಸ್ತುವಿಗೆ ಉದಾತ್ತ ಸ್ವರ ಬಂದು ಅದೇ ನಿಲ್ಲುವುದು.

**ಭರ**— ಹೃಞ್ ಹರಣೇ ಧಾತು. ಇದರ ಮುಂದೆ ಲೋಟ್ ಮಧ್ಯಮಪುರುಷ ಏಕವಚನ ಸಿಪ್. ಅದಕ್ಕೆ **ಸೇರ್ಹ್ಯಪಿಚ್ಚ**(ಪಾ.ಸೂ. ೩-೪-೮೭) ಎಂಬುದರಿಂದ ಹಿ ಆದೇಶ, ಶಪ್ ವಿಕರಣ, ಗುಣ, ರಪರತ್ವ. ಹರ್+ಅ+ಹಿ

**ಆತೋಹೇಃ** (ಪಾ. ಸೂ. ೬-೪-೧೦೫) ಎಂಬುದರಿಂದ ಹಿಗೆ ಲುಕ್. **ದಾದೇರ್ಧಾತೋರ್ಘಃ** (ಪಾ. ಸೂ. ಎಂಬ ಸೂತ್ರದಲ್ಲಿ **ಹೃಗ್ರಹೋರ್ಭಶ್ಛಂದಸಿ** (ಪಾ. ಸೂ. ೮-೨-೩೨) ಛಂದಸ್ಸಿನಲ್ಲಿ ಹೃಞ್ ಹರಣೇ, ಗ್ರಹ ಉಪಾದಾನೇ ಎಂಬ ಧಾತುಗಳ ಹ ಕಾರಕ್ಕೆ ಭಕಾರ ಬರುವುದು ಎಂಬುದರಿಂದ ಹಕಾರಕ್ಕೆ ಭಕಾರ ಬಂದರೆ ಭರ ಎಂದಾಗುವುದು.

**ಗಾಯತ್ರೇಣ**—ಗಾಯತ್ರ್ಯಾಃ ಇದಮ್ (ಸಂಬಂಧಿ) ಎಂದು ವಿಗ್ರಹ. **ತಸ್ಯೇದಮ್** (ಪಾ. ಸೂ. ೪-೩-೧೨೦) ಪ್ರಾತಿಪದಿಕಪ್ರಕೃತಿಕವಾದ ಷಷ್ಠ್ಯಂತದ ಮುಂದೆ ಇದಂ ಎಂಬ ಅರ್ಥದಲ್ಲಿ ಅಣ್‌ಪ್ರತ್ಯಯ ಬರುವುದು ಎಂಬುದರಿಂದ ಅಣ್‌ಪ್ರತ್ಯಯ ಬಂದರೆ ಗಾಯತ್ರೀ+ಅ. **ಯಸ್ಯೇತಿ ಚ** (ಪಾ.ಸೂ. ೬-೪-೧೪೮) ಎಂಬುದರಿಂದ ಈಕಾರಕ್ಕೆ ಲೋಪ, ಗಾಯತ್ರ ಎಂದಾಗುವುದು. ಪ್ರತ್ಯಯಸ್ವರದಿಂದ ಅಂತೋದಾತ್ತ. ತೃತೀಯಾಏಕವಚನ ಟಾಪ್ರತ್ಯಯವನ್ನು ಇದರ ಮುಂದೆ ಇಟ್ಟರೆ **ಟಾಙಸಿಙಸಾಮಿನಾತ್ಸ್ಯಾಃ** (ಪಾ ಸೂ. ೭-೧-೧೨) ಎಂಬುದರಿಂದ ಟಾಗೆ ಇನ ಆದೇಶ. ಗುಣ. **ಅಟ್ಕುಪ್ವಾಙ್ನುಮ್ವ್ಯವಾಯೇಽಪಿ** (ಪಾ. ಸೂ. ೮-೪-೨) ಎಂಬುದರಿಂದ ನಕಾರಕ್ಕೆ ಣಕಾರ, ಗಾಯತ್ರೇಣ ಎಂದಾಗುವುದು.

**ನವೀಯಸಾ**—ಅತಿಶಾಯನ ಎಂಬ ಅರ್ಥದಲ್ಲಿ **ದ್ವಿವಚನವಿಭಜ್ಯೋಪಪದೇತರಬೀಯಸುನೌ** (ಪಾ ಸೂ. ೫-೩-೫೭) ಎಂಬುದರಿಂದ ನವಶಬ್ದದ ಮುಂದೆ ಈಯಸುನ್ ಪ್ರತ್ಯಯ. ಯಸ್ಯೇತಿ ಚ ಎಂಬುದರಿಂದ ಅಕಾರಕ್ಕೆ ಲೋಪ, ತೃತೀಯಾಏಕವಚನ ಟಾ ಪ್ರತ್ಯಯ, ನವೀಯಸಾ ಎಂದಾಗುವುದು. ಈಯಸುನ್‌ಪ್ರತ್ಯಯ ನಿತ್ತು. ಆದ್ದರಿಂದ ನಿತ್ಸ್ವರ ಬಂದು ನವೀಯಸ್ ಶಬ್ದವು ಆದ್ಯುದಾತ್ತವಾಗುವುದು.

**ವೀರವತೀಮ್**—ವೀರಾಃ ಅಸ್ಯಾಃ ಅಸ್ತಿ ಎಂದು ವಿಗ್ರಹ. **ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್**(ಪಾ. ಸೂ. ೫-೨-೯೪) ಎಂಬುದರಿಂದ ಮತುಪ್‌ಪ್ರತ್ಯಯವು ವೀರ ಶಬ್ದದ ಮುಂದೆ ಬರುವುದು. ಮತುಪ್ ಉಗಿತ್ತು. ಆದ್ದರಿಂದ ಸ್ತ್ರೀತ್ವವನ್ನು ವಿವಕ್ಷಿಸಿದಾಗ **ಉಗಿತಶ್ಚ** (ಪಾ. ಸೂ. ೬-೩-೪೫) ಉಗಿದಂತವಾದ ಪ್ರಾತಿಪದಿಕದ ಮುಂದೆ ಸ್ತ್ರೀಲಿಂಗದಲ್ಲಿ **ಙೀಪ್** ಬರುವುದು ಎಂಬುದರಿಂದ ಙೀಪ್ ಬರುವುದು. ವೀರ ಶಬ್ದವು ಅಕಾರಾಂತ, ಅದರ ಮುಂದೆ ಇರುವ ಮತುಪ್‌ಪ್ರತ್ಯಯದ ಮಕಾರಕ್ಕೆ **ಮಾದುಪಧಾಯಾಶ್ಚ ಮತೋರ್ವೋಽಯವಾದಿಭ್ಯಃ** (ಪಾ. ಸೂ. ೮-೨-೯) ಮವರ್ಣಾಂತ, ಅವರ್ಣಾಂತ, ಮವರ್ಣೋಪಧ ಅಥವಾ ಅವರ್ಣೋಪಧವಾದ ಯವಾದಿಕ ಗಣಪಠಿತ ಶಬ್ದಾತಿರಿಕ್ತ ಶಬ್ದದ ಮುಂದೆ ಇರುವ ಮತುಪ್ಪಿನ ಮಕಾರಕ್ಕೆ ವಕಾರ ಬರುವುದು ಎಂಬುದರಿಂದ ವಕಾರ, ವೀರವತೀ ಎಂದಾಗುವುದು. ಮತುಪ್ ಙೀಪ್ ಎರಡೂ ಪಿತ್ತಾದ್ದರಿಂದ ಅನುದಾತ್ತ. ವೀರ ಎಂಬಲ್ಲಿರುವ ಅಕಾರವು **ಫಿಷೋಂತ ಉದಾತ್ತಃ** (ಫಿ. ಸೂ. ೧) ಎಂಬ ಪ್ರಾತಿಪದಿಕ ಸ್ವರದಿಂದ ಉದಾತ್ತ ||೧೧||

|| ಸಂಹಿತಾಪಾಠಃ ||

ಅಗ್ನೇ ಶುಕ್ರೇಣ ಶೋಚಿಷಾ ವಿಶ್ವಾಭಿರ್ದೇವಹೂತಿಭಿಃ |
ಇಮಂ ಸ್ತೋಮಂ ಜುಷಸ್ವ ನಃ || ೧೨ ||

॥ ಪದಪಾಠಃ ॥

ಅಗ್ನೇ । ಶುಕ್ರೇಣ । ಶೋಚಿಷಾ । ವಿಶ್ವಾಭಿಃ । ದೇವಹೂತಿಽಭಿಃ ॥

ಇಮಂ । ಸ್ತೋಮಂ । ಜುಷಸ್ವ । ನಃ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಶುಕ್ರೇಣ ಶೋಚಿಷಾ ತ್ವದೀಯಶ್ವೇತವರ್ಣದೀಪ್ತ್ಯಾ ವಿಶ್ವಾಭಿರ್ದೇವಹೂತಿಭಿಸ್ತ್ವತ್ಕೃತಸರ್ವದೇವತಾಹ್ವಾನಸಾಧನಸ್ತೋತ್ರೈಶ್ಚ ಯುಕ್ತಸ್ತ್ವಂ ನೋಽಸ್ಮದೀಯಮಿಮಂ ಸ್ತೋಮಂ ಸ್ತೋತ್ರವಿಶೇಷಂ ಜುಷಸ್ವ । ಸೇವಸ್ವ ॥ ವಿಶ್ವಶಬ್ದೋ ವಿಶೇಃ ಕ್ವನಂತೋ ನಿತ್ತ್ವಾದಾದ್ಯುದಾತ್ತಃ । ದೇವಹೂತಿಭಿಃ । ದೇವಶಬ್ದಃ ಪಚಾದ್ಯಜಂತಃ । ಚಿತ್ತ್ವಾದಂತೋದಾತ್ತಃ। ದೇವಾನಾಂ ಹೂತಯ ಆಹ್ವಾನಾನ್ಯಾಸು ಸ್ತುತಿಷ್ವಿತಿ ದೇವಹೂತಯಃ ಸ್ತುತಯಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಸ್ತೂಯತೇಽನೇನೇತಿ ಸ್ತೋಮಃ । ಅರ್ತಿಸ್ತುಸ್ವಿತ್ಯಾದಿನಾ ಮನ್ । ನಿತ್ತ್ವಾದಾದ್ಯುದಾತ್ತಃ ॥ ೨೩ ॥

॥ ಪ್ರತಿಪದಾರ್ಥ ॥

(ಹೇ) ಅಗ್ನೇ—ಎಲೈ ಅಗ್ನಿಯೇ । ಶುಕ್ರೇಣ—ಶ್ವೇತವರ್ಣೋಪೇತವಾದ । ಶೋಚಿಷಾ—ನಿನ್ನ ಕಾಂತಿಯಿಂದಲೂ । ವಿಶ್ವಾಭಿಃ—ಸಮಸ್ತವಾದ । ದೇವಹೂತಿಭಿಃ—ದೇವತಾಹ್ವಾನಸಾಧನಭೂತವಾದ ಸ್ತೋತ್ರಗಳಿಂದಲೂ । (ಯುಕ್ತನಾದ ನೀನು) ನಃ—ನಮ್ಮ । ಇಮಂ ಸ್ತೋಮಂ—ಈ ಸ್ತೋತ್ರ ವಿಶೇಷವನ್ನು । ಜುಷಸ್ವ—ಸೇವಿಸು ॥

॥ ಭಾವಾರ್ಥ ॥

ಎಲೈ ಅಗ್ನಿಯೇ ನೀನು ಬೆಳ್ಳಗೆ ಹೊಳೆಯುತ್ತಿರುವ ಕಾಂತಿಯಿಂದ ಬೆಳಗುತ್ತಿರುವೆ. ಮತ್ತು ದೇವತೆಗಳನ್ನು ಆಹ್ವಾನಮಾಡುವುದಕ್ಕಾಗಿ ನಾವು ಸೋತ್ರಗಳನ್ನು ನಿನ್ನ ಮೂಲಕವಾಗಿಯೇ ಮಾಡುವೆವು. ಇಂತಹ ನೀನು ನಾವು ಮಾಡುವ ಈ ಸ್ತೋತ್ರವನ್ನು ಕೇಳಿ ತೃಪ್ತನಾಗು (ಸಂತೋಷಪಡು)

English Translation.

Agni. with your bright splendour. be pleased through all our invocations of the gods, with this our praise.

॥ ವಿಶೇಷವಿಷಯಗಳು ॥

ಶುಕ್ರೇಣ ಶೋಚಿಷಾ—ಶುಕ್ಲವರ್ಣೇನ ಕಾಂತ್ಯಾ—ಅಗ್ನಿಯು ಜಾಜ್ವಲ್ಯಮಾನವಾಗಿ ಉರಿಯುತ್ತಿರುವಾಗ ಅದರ ಪ್ರಕಾಶವು ಸುತ್ತಲೂ ಹರಡುವುದು. ಆ ಬೆಳಕನ್ನು ಅಥವಾ ಕಾಂತಿಯನ್ನು ಬೆಳ್ಳಗಿರುವಂತೆ ವರ್ಣಿಸುವುದು ರೂಢಿಯು. Radiance, bright splendour ಮೊದಲಾದ ಅರ್ಥಗಳನ್ನು ಹೇಳಬಹುದು.

**ದೇವಹೂತಿಭಿಃ**—ದೇವಾನಾಂ ಹೂತಯ ಆಹ್ವಾನಾನ್ಯಾಸು ಸ್ತುತಿಷ್ವಿತಿ ದೇವಹೂತಯಃ। ತ್ವತ್ಕೃತದೇವತಾಹ್ವಾನಸಾಧನಸ್ತೋತ್ರೈರ್ಯುಕ್ತಃ ।। ದೇವತೆಗಳನ್ನು ಆಹ್ವಾನ ಮಾಡುವುದಕ್ಕಾಗಿ ಸ್ತೋತ್ರಗಳನ್ನು ಪಠಿಸುವರು. ಆ ಸ್ತೋತ್ರಗಳು ಅಗ್ನಿಯ ಮೂಲಕ ದೇವತೆಗಳಿಗೆ ಮುಟ್ಟುವುದರಿಂದ ದೇವತಾಹ್ವಾನ ಸಾಧನವಾದ ಸ್ತೋತ್ರಗಳಿಂದ ಯುಕ್ತನಾದ ಅಗ್ನಿಯು ಎಂದು ಅಭಿಪ್ರಾಯವು.

**ಜುಷಸ್ವ**—ಸೇವಸ್ವ । ಜುಷೀ ಪ್ರೀತಿಸೇವನಯೋಃ—ಸೇವಿಸು ಎಂದರೆ ನಾವು ಮಾಡುವ ಸ್ತೋತ್ರಗಳನ್ನು ಕೇಳಿ ಆನಂದಪಡು, ತೃಪ್ತನಾಗು ಎಂದರ್ಥವು.

### ವ್ಯಾಕರಣಪ್ರಕ್ರಿಯಾ

**ವಿಶ್ವಾಭಿಃ**—ಅಶೂ ಪ್ರುಷಿ ಲಟಿ ಕಣಿ ಖಟಿ ವಿಶಿಭ್ಯಃಕ್ವನ್ (ಉ. ಸೂ ೧-೧-೪೯) ಎಂಬುದರಿಂದ ವಿಶಪ್ರವೇಶನೇ ಎಂಬ ಧಾತುವಿನ ಮುಂದೆ ಕ್ವನ್ ಪ್ರತ್ಯಯ, ನಿತ್ಸ್ವರದಿಂದ ವಿಶ್ವಶಬ್ದ ಆದ್ಯುದಾತ್ತ, ಟಾಪ್ ಸವರ್ಣ ದೀರ್ಘ, ತೃತೀಯಾಬಹುವಚನ ಭಿಸ್. ರುತ್ವ ವಿಸರ್ಗಗಳು. ವಿಶ್ವಾಭಿಃ ಎಂದಾಗುವುದು.

**ದೇವಹೂತಿಭಿಃ**—ನನ್ದಿಗ್ರಹಿ ಪಚಾದಿಭ್ಯೋಲ್ಯುಣಿನ್ಯಚಃ, (ಪಾ. ಸೂ. ೩-೧-೧೩೪) ಎಂಬುದರಿಂದ ದಿವ್ ಧಾತುವಿನ ಮುಂದೆ ಅಚ್ ಪ್ರತ್ಯಯ, ಲಘೂಪಧ ಗುಣ, ದೇವ ಎಂದಾಗುವುದು. ಪ್ರತ್ಯಯವು ಚಿತ್ತಾದ್ದರಿಂದ **ಚಿತಃ** (ಪಾ ಸೂ. ೬ ೧-೧೬೩) ಎಂಬುದರಿಂದ ಅಂತೋದಾತ್ತ ಬರುವುದು. ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ, ಎಂಬುದರ ಮುಂದೆ **ಸ್ತ್ರಿಯಾಂ ಕ್ತಿನ್** ( ಪಾ. ಸೂ. ೩-೩-೯೪) ಎಂಬುದರಿಂದ ಕ್ತಿನ್ ಪ್ರತ್ಯಯ. ಪ್ರತ್ಯಯವು ಕಿತ್ತಾದ್ದರಿಂದ **ವಚಿಸ್ವಪಿಯಜಾದೀನಾಂಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಯಜಾದಿಯಲ್ಲಿ ಸೇರಿದ ಹ್ವೇಞ್ ಧಾತುವಿಗೆ ಸಂಪ್ರಸಾರಣ, ವಕಾರಕ್ಕೆ ಉಕಾರ ಬರುವುದು. ಯಜಿರ್ವಪಿರ್ವಹಿಶ್ಚೈವ ವಸಿರ್ವೇಞ್ ವ್ಯೇಞ್ ಇತ್ಯಪಿ, ಹ್ವೇಞ್ವದಿಃ ಶ್ವಯತಿಶ್ಚೈವ ಯಜಾದ್ಯಾಃ ಸ್ಯುರಿಮೇ ನವ ಎಂದು ಯಜಾದಿ ಧಾತುಗಳನ್ನು ಪರಿಗಣನೆ ಮಾಡಿರುವರು. **ಸಂಪ್ರಸಾರಣಾಚ್ಚ**, **ಪೂರ್ವರೂಪ** **ಹಲಃ** (ಪಾ. ಸೂ. ೬-೪-೨) ಎಂಬುದರಿಂದ ದೀರ್ಘ. ಹೂತಿ ಎಂದಾಗುವುದು. ಹೂತಿ ಎಂದರೆ ಕರೆಯುವಿಕೆ. ದೇವಾನಾಂ ಹೂತಯಃ ಆಸು ಸ್ತುತಿಷು ಸನ್ತೀತಿ ದೇವಹೂತಯಃ ಎಂದು ಬಹುವ್ರೀಹಿಸಮಾಸ, ದೇವತೆಗಳಿಗೆ ಆಹ್ವಾನವು ಯಾವ ಸ್ತುತಿಗಳಲ್ಲಿ ಇದೆಯೋ ಆ ಸ್ತುತಿಗಳಿಗೆ ದೇವಹೂತಯಃ, ಎನ್ನಲಾಗುವುದು. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುವುದು.

**ಸ್ತೋಮಂ**—ಅರ್ತಿ, ಸ್ತು, ಸು, ಹು, ಸೃ, ಧೃ- ಕ್ಷಿ, ಕ್ಷು, ಭಾ, ಯಾ, ವಾ, ಪದಿ, ಯಕ್ಷಿ ನೀ ಭ್ಯೋ ಮನ್, (ಉ. ಸೂ- ೧-೧೩೭) ಎಂಬುದರಿಂದ ಸ್ತುಧಾತುವಿನ ಮುಂದೆ ಮನ್ ಪ್ರತ್ಯಯ. **ಸಾರ್ವಧಾತುಕಾರ್ಧ ಧಾತುಕಯೋಃ** (ಪಾ. ಸೂ- ೭-೩-೮) ಎಂಬುದರಿಂದ ಗುಣಸ್ತೋಮ ಎಂದಾಗುವುದು.. ಪ್ರತ್ಯಯವು ನಿತ್ತಾದ್ದರಿಂದ **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ- ೬-೧-೧೯೭) ಎಂಬುದರಿಂದ ನಿತ್ಸ್ವರ ಆದ್ಯುದಾತ್ತ ಬರುವುದು. ।।೧೨।।

# ಹದಿಮೂರನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಸುಸಮಿದ್ಧ ಇತ್ಯಾದಿಕಂ ದ್ವಾದಶರ್ಚಂ ದ್ವಿತೀಯಮಾಪ್ರೀಸೂಕ್ತಂ । ತಸ್ಯ ಕಾಣ್ವೋ ಮೇಧಾತಿಥಿರ್ಋಷಿಃ । ಗಾಯತ್ರಂ ಛಂದಃ । ಪ್ರತ್ಯೃಚಂ ಪ್ರತೀಯಮಾನಾಃ ಸಮಿದ್ಧತನೂನಪಾದಾದಿಕಾ ದ್ವಾದಶ ದೇವತಾಃ । ತಥಾ ಚಾನುಕ್ರಮಣಿಕಾಯಾಮೃಕ್ಸಂಖ್ಯಾಮೃಷಿಂ ಛಂದಶ್ಚಾನುವೃತ್ತಿಬಲಾತ್ಸಿದ್ಧವತ್ಕೃತ್ಯ ದೇವತಾ ಉದಾಹೃತಾಃ । ಸುಸಮಿದ್ಧ ಇತೀಧ್ಮಃ ಸಮಿದ್ಧೋ ವಾಗ್ನಿಸ್ತನೂನಪಾನ್ನರಾಶಂಸ ಇಳೋ ಬರ್ಹಿರ್ದೇವೀರ್ದ್ವಾರ ಉಷಾಸಾನಕ್ತಾ ದೈವ್ಯಾ ಹೋತಾರೌ ಪ್ರಚೇತಸೌ ತಿಸ್ರೋ ದೇವ್ಯಃ ಸರಸ್ವತೀಳಾಭಾರತ್ಯಸ್ತ್ವಷ್ಟಾ ವನಸ್ಪತಿಃ ಸ್ವಾಹಾಕೃತಯ ಇತಿ ಪ್ರತ್ಯೃಚಂ ದೇವತಾ ಏತದಾಪ್ರೀಸೂಕ್ತಮಿತಿ॥ ವಿನಿಯೋಗಸ್ತು ಪಶೌ ಸುಸಮಿದ್ಧೋನ ಆ ವಹೇತಿ ಕಾಣ್ವಮಾಪ್ರೀಸೂಕ್ತಂ । ಏಕಾದಶ ಪ್ರಯಾಜಾ ಇತಿ ಖಂಡೇ ಸೂತ್ರಿತಂ । ಸಮಿದ್ಧೋ ಅದ್ಯೇತಿ ಸರ್ವೇಷಾಂ ಯಥರ್ಷಿ ವಾ । ಆ. ೩. ೨ । ಇತಿ ॥**

ಅನುವಾದವು—**ಸುಸಮಿದ್ಧ** ಎಂದು ಪ್ರಾರಂಭವಾಗುವ ಹನ್ನೆರಡು ಋಕ್ಕಿನ ಸೂಕ್ತವು ಈ ನಾಲ್ಕನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದನ್ನು ಆಪ್ರೀಸೂಕ್ತವೆಂದು ಹೇಳುವರು. ಇದಕ್ಕೆ ಮೇಧಾತಿಥಿಃ ಕಾಣ್ವಃ ಎಂಬುವನು ಋಷಿಯು. ಗಾಯತ್ರೀ ಛಂದಸ್ಸು. ಪ್ರತಿ ಋಕ್ಕಿಗೂ ಒಬ್ಬೊಬ್ಬ ದೇವತೆಯಂತೆ ಸಮಿಧೋಽಗ್ನಿಃ, ತನೂನಪಾತ್ ಮೊದಲಾದ ಹನ್ನೆರಡು ದೇವತೆಗಳು ಹನ್ನೆರಡು ಋಕ್ಕುಗಳಿಗೂ ಬೇರೆಬೇರೆ ಇರುವರು. ಅನುಕ್ರಮಣಿಕೆಯಲ್ಲಿಯೂ ಸಹ ಈ ಸೂಕ್ತದ ಋಕ್ಸಂಖ್ಯೆ, ಋಷಿ, ಛಂದಸ್ಸು, ಇವುಗಳನ್ನು ಗಮನಿಸಿ ದೇವತೆಗಳನ್ನು ಉದಾಹರಿಸಿರುವರು—**ಸುಸಮಿದ್ಧ** ಎಂಬ ಸೂಕ್ತದಲ್ಲಿ ಒಂದೊಂದು ಋಕ್ಕಿಗೂ ಕ್ರಮವಾಗಿ (೧) ಇಧ್ಮಃ ಸಮಿದ್ಧಃ ಅಗ್ನಿರ್ವಾ (೨) ತನೂನಪಾತ್ (೩) ನರಾಶಂಸಃ (೪) ಇಳಃ (೫) ಬರ್ಹಿಃ (೬) ದೇವೀರ್ದ್ವಾರಃ (೭) ಉಷಾಸಾನಕ್ತಾ (೮) ದೈವ್ಯಾ ಹೋತಾರೌ ಪ್ರಚೇತಸೌ (೯) ತಿಸ್ರೋ ದೇವ್ಯಃ ಸರಸ್ವತೀಳಾ ಭಾರತ್ಯಃ (೧೦) ತ್ವಷ್ಟಾ (೧೧) ವನಸ್ಪತಿಃ (೧೨) ಸ್ವಾಹಾಕೃತಯಃ ಎಂಬ ಹನ್ನೆರಡು ದೇವತೆಗಳಿರುವುದರಿಂದ ಇದು ಆಪ್ರೀಸೂಕ್ತವೆಂದು ಪ್ರಸಿದ್ಧವಾಗಿರುವುದೆಂದು ಹೇಳಲ್ಪಟ್ಟಿದೆ. ವಿನಿಯೋಗವು—ಪಶುಯಾಗದಲ್ಲಿ ಏಕಾದಶ ಪ್ರಯಾಜಾ ಎಂಬ ಹನ್ನೊಂದು ಹೋಮಗಳನ್ನು ಮಾಡುವಾಗ ಉಪಯೋಗಿಸುವ ಕಾಣ್ವಋಷಿಸಂಬಂಧ ಆಪ್ರೀಸೂಕ್ತವು. ಈ ವಿಷಯವು ಆಶ್ವಲಾಯನ ಶ್ರೌತಸೂತ್ರದ **ಏಕಾದಶ ಪ್ರಯಾಜಾ** ಎಂಬ ಖಂಡದಲ್ಲಿ **ಸಮಿದ್ಧೋ ಅದ್ಯೇತಿ ಸರ್ವೇಷಾಂ ಯಥರ್ಷಿರ್ವಾ** ಎಂಬ ಸೂತ್ರದಿಂದ (ಆ. ೩-೨) ವಿವರಿಸಲ್ಪಟ್ಟಿರುವುದು

॥ ಓಂ ॥

## ಸೂಕ್ತ—೧೩

॥ ಮಂಡಲ—೧ ॥ ಅನುವಾಕ—೪ ॥ ಸೂಕ್ತ—೧೩ ॥

॥ ಅಷ್ಟಕ —೧ ॥ ಅಧ್ಯಾಯ—೧ ॥ ವರ್ಗ— ೨೪, ೨೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೧-೧೨ ॥

॥ ಋಷಿಃ—೧-೧೨ ಮೇಧಾತಿಥಿಃ ಕಾಣ್ವಃ ॥

॥ ದೇವತಾ—೧-ಇಧ್ಮಃ ಸಮಿಧ್ಧೋ ವಾಗ್ನಿಃ । ೨-ತನೂನಪಾತ್ ।
೩-ನರಾಶಂಸಃ । ೪-ಇಳಃ । ೫-ಬರ್ಹಿಃ । ೬-ದೇವೀರ್ದ್ವಾರಃ ।
೭-ಉಷಾಸಾನಕ್ತಾ । ೮-ದೈವ್ಯಾ ಹೋತಾರಾ ಪ್ರಚೇತಸಾ ।
೯-ತಿಸ್ರೋ ದೇವ್ಯಃ ಸರಸ್ವತೀಳಾಭಾರತ್ಯಃ । ೧೦-ತ್ವಷ್ಟಾ ।
೧೧-ವನಸ್ಪತಿಃ । ೧೨-ಸ್ವಾಹಾಕೃತಯಃ ॥

॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಸುಸಮಿದ್ಧೋ ನ ಆ ವಹ ದೇವಾँ ಅಗ್ನೇ ಹವಿಷ್ಮತೇ ।
ಹೋತಃ ಪಾವಕ ಯಕ್ಷಿ ಚ ॥ ೧ ॥

॥ ಪದಪಾಠಃ ॥

ಸುऽಸಮಿದ್ಧಃ । ನಃ । ಆ । ವಹ । ದೇವಾನ್ । ಅಗ್ನೇ । ಹವಿಷ್ಮತೇ ॥
ಹೋತರಿತಿ । ಪಾವಕ । ಯಕ್ಷಿ । ಚ ॥ ೧ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಸುಸಮಿದ್ಧನಾಮಕಸ್ತ್ವಂ ನೋऽಸ್ಮದೀಯಾಯ ಹವಿಷ್ಮತೇ ಯಜಮಾನಾಯ ತದನುಗ್ರಹಾರ್ಥಂ ದೇವಾನಾ ವಹ । ಹೇ ಪಾವಕ ಶೋಧಕ ಹೋತರ್ಹೋಮನಿಷ್ಪಾದಕಾಗ್ನೇ ಯಕ್ಷಿ ಚ । ಯಜ ಚ ॥ ಸುಸಮಿದ್ಧಃ । ಸಮಃ ಕ್ರಿಯಾವಿಶೇಷೇಣತ್ವೇನ ಗತಿಸಂಜ್ಞಕತ್ವಾತ್ಪ್ರಾದಿಸಮಾಸಃ । ಶೋಭನವಾಚಿನಃ ಸುಶಬ್ದಸ್ಯ ತು ವಿಶೇಷಣಂ ವಿಶೇಷ್ಯೇಣ ಬಹುಲಂ । ಪಾ. ೨-೧-೫೭ । ಇತಿ ಸಮಿದ್ಧ-

ಪದೇನ ಕರ್ಮಧಾರಯಸಮಾಸಃ । ಸುಶಬ್ದಃ ಪ್ರಾತಿಪದಿಕಸ್ವರೇಣೋದಾತ್ತಃ । ಕರ್ಮಧಾರಯೇಽತ್ವನಿಷ್ಠಾ । ಪಾ- ೬-೨-೪೬ । ಇತಿ ಪೂರ್ವಪದಪ್ರಕೃತಿಸ್ವರತ್ವಂ । ಕ್ರಿಯಾವಿಶೇಷಣತ್ವೇ ಹಿ ಸುಶಬ್ದಸ್ಯ ಗತಿತ್ವಾತ್ತ್ವಾದಿ- ಸಮಾಸೇ ಗತಿರನಂತರ ಇತಿ ಸಮೋ ಯದುದಾತ್ತತ್ವಂ ತದೇವ ಕೃದುತ್ತರಪದಪ್ರಕೃತಿಸ್ವರತ್ವೇನ ಸ್ಥಾಸ್ಯ- ತೀತಿ ಸುಶಬ್ದೋನುದಾತ್ತಃ ಸ್ಯಾತ್ । ದೇವಾ॑ ಅಗ್ನೇ । ಪೂರ್ವವದ್ರುತ್ವಾನುನಾಸಿಕೇ । ಹವಿಷ್ಮತೇ । ಹವಿರಸ್ಯಾಸ್ತೀತಿ ಮತುಪ್ । ತಸೌ ಮತ್ವರ್ಥೇ । ಪಾ. ೧-೪-೧೯ । ಇತಿ ಭತ್ವೇನ ಪದತ್ವಸ್ಯ ಬಾಧಿತತ್ವಾನ್ನ ರುತ್ವಂ । ಹೋತಃಪಾವಕಶಬ್ದಯೋರಾಮಂತ್ರಿತಯೋಃ ಪೃಥಕ್ಪೃಥಗೇವ ಕ್ರಿಯಾನ್ವಯೇ ಪರಸ್ಪರಮಸಾ- ಮರ್ಥ್ಯಾತ್ಪರಾಂಗವದ್ಭಾವಾಭಾವಾನ್ನ ತನ್ನಿಬಂಧನಮೈಕಸ್ವರ್ಯಂ । ನ ಚ ದ್ವಿತೀಯಸ್ಯಾಮಂತ್ರಿತಸ್ಯಾ- ಷ್ಟಮಿಕನಿಘಾತೇನೈಕಸ್ವರ್ಯಂ । ಆಮಂತ್ರಿತಂ ಪೂರ್ವಮವಿದ್ಯಮಾನವದಿತಿ ಪೂರ್ವಸ್ಯಾವಿದ್ಯಮಾನ- ವತ್ತ್ವೇನ ಪದಾತ್ಪರತ್ವಾಭಾವಾತ್ಪಾದಾದಿತ್ವಾಚ್ಚ ಪರಸ್ಪರಸಾಮಾನಾಧಿಕರಣ್ಯೇಽಪಿ ಹೋತರಿತ್ಯಸ್ಯ ವಿಶೇಷ- ಣತ್ವೇ ಸಮಾನಮೇವಾವಿದ್ಯಮಾನವತ್ತ್ವಂ । ಅತ ಏವಾವಿದ್ಯಮಾನವತ್ತ್ವಾತ್ಸಾಮರ್ಥ್ಯೇಽಪಿ ನ ಪರಾಂಗ ವದ್ಭಾವ ಇತಿ ನೈಕಸ್ವರ್ಯಸಿದ್ಧಿಃ । ಅತೋ ಹೋತರಿತಿ ವಿಶೇಷ್ಯಂ । ಅತಃ ಪುನಾತೀತಿ ಪಾವಕ ಇತ್ಯ- ವಯವಪ್ರಸಿದ್ಧಿಸ್ವೀಕಾರೇಣ ವಿಶೇಷಣತ್ವಾದ್ಧೋತರಿತಿ ವಿಶೇಷ್ಯಂ । ತಚ್ಚ ಸಾಮಾನ್ಯವಚನಮಿತಿ ನಾಮಂ- ತ್ರಿತೇ ಸಮಾನಾಧಿಕರಣ ಇತ್ಯವಿದ್ಯಮಾನವತ್ತ್ವಪ್ರತಿಷೇಧಾತ್ಪದಾತ್ಪರತ್ವಾದಪಾದಾದಿತ್ವಾಚ್ಚ ದ್ವಿತೀಯಾ- ಮಂತ್ರಿತಸ್ಯಾಷ್ಟಮಿಕನಿಘಾತೇನ ವಾ ಪರಾಂಗವದ್ಭಾವೇ ಸತಿ ಶೇಷನಿಘಾತೇನ ವಾ ಸರ್ವಾನುದಾತ್ತತ್ವ ಸಿದ್ಧಿಃ । ಯಕ್ಷಿ । ಯಜೇರ್ಲೋಟಃ । ಸಿಪಿ ಬಹುಲಂ ಛಂದಸೀತಿ ಶಪೋ ಲುಕ್ । ವ್ರಶ್ಚಾದಿನಾ ಷತ್ವಂ । ಷಢೋಃ ಕಃ ಸಿ । ಪಾ. ೮-೨-೪೧ । ಇತಿ ಕತ್ವಂ । ಸೇರ್ಹಿರಾದೇಶಶ್ಛಾಂದಸತ್ವಾನ್ನ ಭವತಿ । ಸಿಪಃ ಪಿತ್ತ್ವೇನಾನುದಾತ್ತತ್ವಾದ್ಧಾತುಸ್ವರ ಏವ ಶಿಷ್ಯತೇ । ನ ಚ ತಿಙ್ಙತಿಙ ಇತಿ ನಿಘಾತಃ । ಪೂರ್ವಸ್ಯ ಪಾವ- ಕೇತ್ಯಾಮಂತ್ರಿತಸ್ಯಾವಿದ್ಯಮಾನವತ್ತ್ವೇನ ಪದಾದಪರತ್ವಾತ್ । ಅತ ಏವ ತಸ್ಯಾವ್ಯವಧಾಯಕತ್ವೇನ ಹೋತರಿತ್ಯಪೇಕ್ಷ್ಯ ನಿಘಾತಃ ಸ್ಯಾದಿತಿ ಚೇನ್ನ । ಯಕ್ಷಿಪದಾಪೇಕ್ಷಯಾ ಹೋತರಿತ್ಯಸ್ಯಾಪಿ ಪೂರ್ವತ್ವೇನಾ ವಿದ್ಯಮಾನವತ್ತ್ವಾತ್ । ನನು ನಾಮಂತ್ರಿತೇ ಸಮಾನಾಧಿಕರಣ ಇತಿ ತಸ್ಯ ನಿಷಿದ್ಧಮವಿದ್ಯಮಾನವತ್ತ್ವಂ । ನ ಚ । ಪಾವಕಪದಸ್ಯಾವಿದ್ಯಮಾನವತ್ತ್ವೇನ ಸಮಾನಾಧಿಕರಣಪರತ್ವಾಭಾವಃ । ಯಕ್ಷಿಪದಸ್ಯೈವ ಹಿ ಕಾರ್ಯಂ ಪ್ರತಿ ಪಾವಕಪದಂ ಪೂರ್ವತ್ವಾದವಿದ್ಯಮಾನವತ್ಸ್ಯಾತ್ । ಹೋತಃಪದಕಾರ್ಯಮವಿದ್ಯ- ಮಾನವತ್ತ್ವಪ್ರತಿಷೇಧಂ ಪ್ರತಿ ತು ಪರತ್ವಾದ್ವಿದ್ಯಮಾನವದೇವೇತಿ ಭವತ್ಯೇವ ಹೋತರಿತ್ಯಸ್ಯಾವಿದ್ಯಮಾ- ನವತ್ತ್ವಪ್ರತಿಷೇಧಃ । ಅತಸ್ತಸ್ಯ ವಿದ್ಯಮಾನವತ್ತ್ವಾತ್ತದಪೇಕ್ಷಯಾ ಯಕ್ಷೀತ್ಯಸ್ಯ ನಿಘಾತಃ ಪ್ರಾಪ್ನೋ- ತ್ಯೇವ । ಸತ್ಯಂ । ಅತ್ರ ಯಕ್ಷೀತ್ಯಸ್ಯ ಚಶಬ್ದಪರತ್ವಾಚ್ಚಾದಿಷು ಚ । ೮-೧-೫೮ । ಇತಿ ನಿಘಾತಪ್ರತಿ ಷೇಧೋ ಭವಿಷ್ಯತೀತ್ಯದೋಷಃ ॥

॥ ಪ್ರತಿಪದಾರ್ಥ ॥

(ಹೇ) **ಅಗ್ನೇ**—ಎಲೈ ಅಗ್ನಿಯೇ । **ಸುಸಮಿದ್ಧಃ**—ಚೆನ್ನಾಗಿ ಉದ್ದೀಪನಗೊಳಿಸಲ್ಪಟ್ಟ (ಸುಸಮಿದ್ಧ ನೆಂಬ ಹೆಸರುಳ್ಳ) ನೀನು । **ನಃ**—ನಮ್ಮ । **ಹವಿಷ್ಮತೇ**—ಹವಿಸ್ಸಿನಿಂದ ಯುಕ್ತನಾದ ಯಜಮಾನನಿಗೆ ಅನು ಗ್ರಹಮಾಡುವುದಕ್ಕಾಗಿ । **ದೇವಾನ್**—ದೇವತೆಗಳನ್ನು । **ಆ ವಹ**—(ಇಲ್ಲಿಗೆ) ಕರೆದುಕೊಂಡು ಬಾ । **ಪಾವಕ**—ಶುದ್ಧಿಗೊಳಿಸುವ । **ಹೋತಃ**—ಹೋಮನಿಷ್ಪಾದಕನಾದ ಎಲೈ ಅಗ್ನಿಯೇ । **ಯಕ್ಷಿ ಚ**—ಯಜ್ಞವನ್ನೂ ನೆರ ವೇರಿಸು ॥

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನ್ನನ್ನು ಸುಸಮಿದ್ಧನೆಂದೂ ಹೇಳುವರು. ಏಕೆಂದರೆ ನೀನು ಚೆನ್ನಾಗಿ ಹೊತ್ತಿಸಲ್ಪಟ್ಟು ಜಾಜ್ವಲ್ಯಮಾನನಾಗಿ ಬೆಳಗುತ್ತಿರುವೆ. ಇಂತಹ ನೀನು ಹವಿಸ್ಸನ್ನು ಸಿದ್ಧಪಡಿಸಿಕೊಂಡು ಇರುವ ನಮ್ಮ ಯಜಮಾನನ ಅನುಗ್ರಹಾರ್ಥವಾಗಿ ದೇವತೆಗಳನ್ನು ಇಲ್ಲಿಗೆ ಕರೆದುಕೊಂಡು ಬಾ ಮತ್ತು ಈ ಯಜ್ಞವನ್ನೂ ನೆರವೇರಿಸು.

English Translation.

Being well lighted, O Agni, invoker and purifier, bring hither the gods to the offerer of our oblations and perform the sacrifice.

॥ ವಿಶೇಷವಿಷಯಗಳು ॥

ಇದು ಆಪ್ರೀಸೂಕ್ತವು. ಆಪ್ರೀಸೂಕ್ತದ ಸೂಕ್ಷ್ಮವಿವರಣೆಯನ್ನು ನಾವು ೭೩-೭೪ನೇ ಪೇಜುಗಳಲ್ಲಿ ಕೊಟ್ಟಿದೇವೆ. ಈ ವಿಷಯದಲ್ಲಿ ಯಾಸ್ಕಮಹರ್ಷಿಯು ತಮ್ಮ ನಿರುಕ್ತದಲ್ಲಿ—

ಅಥಾತ ಆಪ್ರಿಯಃ । ಆಪ್ರಿಯಃ ಕಸ್ಮಾದಾಪ್ನೋತೇಃ ಪ್ರೀಣಾತೇರ್ವಾ । ಆಪ್ರೀಭಿರಾಪ್ರೀಣಾತೀತಿ ಚ ಬ್ರಾಹ್ಮಣಂ ॥

ಎಂದರೆ ಆಪ್ರಿಯವೆಂದರೆ ಸಂತೋಷಪಡುವುದು ಎಂದರ್ಥವು. ದೇವತೆಗಳನ್ನು ಈ ಸೂಕ್ತಗಳಿಂದ ಸಂತೋಷಪಡಿಸುವುದರಿಂದ ಈ ಸೂಕ್ತಗಳಿಗೆ ಆಪ್ರೀಸೂಕ್ತಗಳೆಂದು ಹೆಸರಾಯಿತು ಎಂದು ಹೇಳಿ, ಆಪ್ರೀಭಿರಾಪ್ರೀಣಾತಿ ಚ॥ ಎಂಬ ಬ್ರಾಹ್ಮಣ ವಾಕ್ಯವನ್ನು ಉದಾಹರಿಸಿದಾರೆ.

**ಸುಸಮಿದ್ಧಃ** — ಈ ಋಕ್ಕಿಗೆ ಸಮಿದ್ಧ ಎಂಬ ಹೆಸರಿನಿಂದ ಕರೆಯಲ್ಪಡುವ ಅಗ್ನಿಯೇ ದೇವತೆಯು. ಇಲ್ಲಿ ಈ ಶಬ್ದಕ್ಕೆ ಸು= ಚೆನ್ನಾಗಿ, ಸಂ–ಪೂರ್ತಿಯಾಗಿ, ಇದ್ಧಃ--ಹೊತ್ತಿಸಲ್ಪಟ್ಟ ಎಂದು ಅವಯವಾರ್ಥವು. ಎಂದರೆ ಚೆನ್ನಾಗಿ ಹೊತ್ತಿಸಲ್ಪಟ್ಟು ಧಗಧಗನೆ ಜಾಜ್ವಲ್ಯಮಾನವಾಗಿ ಉರಿಯುತ್ತಿರುವ the thoroughly kindled ಎಂದಭಿಪ್ರಾಯವು. ಪಶುಹೋಮ ಮಾಡುವಾಗ ಅಗ್ನಿಯು ಚೆನ್ನಾಗಿ ಉರಿಯುತ್ತಿರಬೇಕಾದುದು ಅವಶ್ಯಕವಾದುದರಿಂದ ಅಗ್ನಿಯನ್ನು ಈ ರೀತಿ ಸಂಬೋಧನೆ ಮಾಡುವುದು ರೂಢಿಯಾಗಿರಬಹುದು. ಈ ಆಪ್ರೀಸೂಕ್ತದ ಮೊದಲು ಐದು ಋಕ್ಕುಗಳಿಗೆ ಬೇರೆಬೇರೆ ಹೆಸರಿನ ದೇವತೆಗಳಿದ್ದರೂ, ಅಗ್ನಿಯೇ ಈ ಹೆಸರುಗಳಿಂದ ಕರೆಯಲ್ಪಡುವನು. ಈ ವಿಷಯದಲ್ಲಿ ಯಾಸ್ಕರು—

ಇಧ್ಮಃ । ಶಾಸಾಮಿಧ್ಮಃ ಪ್ರಥಮಾಗಾಮಿೞ ಭವತಿ । ಇಧ್ಮಃಸಮಿಂಧನಾತ್ ।ಯಜ್ಞೇಧ್ಮ ಇತಿ ಕಾತ್ಥಕ್ಯಃ । ಅಗ್ನಿರಿತಿ ಶಾಕಪೂಣಿಃ ॥ ಎಂದು ಹೇಳಿದಾರೆ. ಎಂದರೆ ಅಗ್ನಿಯ ಈ ಐದು ಹೆಸರುಗಳಲ್ಲಿ ಸಮಿದ್ಧಃ ಎಂಬುವುದೇ ಮೊದಲನೆಯದು. ಏಕೆಂದರೆ ಇಧ್ಮ (ಕಟ್ಟಿಗೆ fuel) ವೇ ಅಗ್ನಿಯನ್ನುತ್ಪತ್ತಿಮಾಡಲು ಪ್ರಥಮಸಾಧನವು. ಈ ಶಬ್ದಕ್ಕೆ ಯಜ್ಞದಲ್ಲಿ ಉಪಯೋಗಿಸುವ ಸಮಿತ್ತುಗಳೆಂಬ ಇಧ್ಮವೆಂದು ಕಾತ್ಥಕ್ಯರೂ, ಅಗ್ನಿಯೆಂದು ಶಾಕಪೂಣಿಯೂ ಅಭಿಪ್ರಾಯಪಡುವರೆಂದು ಯಾಸ್ಕರು ಹೇಳಿರುವರು. (ನಿ. ೮-೪).

**ಹೋತಃ—ಹೋಮನಿಷ್ಪಾದಕಃ**—ಹೋಮ ಮಾಡುವುದರಲ್ಲಿ ಮುಖ್ಯಪಾತ್ರ ವಹಿಸುವವನು ಅಥವಾ ದೇವತೆಗಳನ್ನು ಆಹ್ವಾನ ಮಾಡುವವನು.

**ಪಾವಕ—ಶೋಧಕ**—ಶುದ್ಧಿಗೊಳಿಸುವ, ಪವಿತ್ರಗೊಳಿಸುವ, ಅಥವಾ ಪ್ರಕಾಶಮಾನವಾಗಿ ಬೆಳಗುವ.

**ಯಕ್ಷಿ**—ಯಜ್ಞಮಾಡು. ಇಲ್ಲಿ ಅಗ್ನಿಯನ್ನು ಯಜ್ಞಮಾಡು ಎಂದು ಪ್ರಾರ್ಥಿಸಿರುವುದಕ್ಕೆ ಕಾರಣ ವೇನೆಂದರೆ, ಅಗ್ನಿಯಿಲ್ಲದಿದ್ದರೆ ಯಜ್ಞವಾಗುವುದಿಲ್ಲ. ಆದುದರಿಂದ ದೇವತೆಗಳನ್ನು ಯಜ್ಞಭೂಮಿಗೆ ಕರೆತಂದು ಅಗ್ನಿಯಲ್ಲಿ ಹೋಮಮಾಡಿದ ಹವಿಸ್ಸನ್ನು ಅವರಿಗೆ ಸೇರುವಂತೆ ಮಾಡಿ ಯಜ್ಞದಲ್ಲಿ ಮುಖ್ಯಪಾತ್ರವನ್ನು ವಹಿಸಿ ಯಜ್ಞವು ಸಾಂಗವಾಗಿ ನೆರವೇರುವಂತೆ ಮಾಡುವುದರಿಂದ **ಯಜ್ಞವನ್ನು ಮಾಡು** ಎಂದು ಅಗ್ನಿಯನ್ನು ಋಷಿಯು ಪ್ರಾರ್ಥಿಸಿರುವನು.

॥ ವ್ಯಾಕರಣಪ್ರಕ್ರಿಯಾ ॥

**ಸುಸಮಿದ್ಧಃ**-- ಞಿ ಇನ್ಧೀ ದೀಪ್ತೌ, ಧಾತು. ರುಧಾದಿ. ಇದರ ಮುಂದೆ ಕ್ತಪ್ರತ್ಯಯ, **ಅನಿದಿತಾಂ ಹಲ ಉಪಧಾಯಾಃ ಕ್ಙಿತಿ** (ಪಾ. ಸೂ. ೬.೪-೨೪) ಕಿತ್ತು ಅಥವಾ ಙಿತ್ತು ಆದ ಪ್ರತ್ಯಯ ಪರದಲ್ಲಿರುವಾಗ ಹಲಂತವೂ ಇದಿತ್ತಾಗದೇ ಇರುವುದೂ ಆದ ಅಂಗದ ಉಪಧಾಭೂತವಾದ ನಕಾರಕ್ಕೆ ಲೋಪ ಬರುವುದು ಎಂಬುದರಿಂದ ನಲೋಪ. ಇಧ್+ತ **ಝಷಸ್ತಥೋರ್ಧೋಽಧಃ** (ಪಾ. ಸೂ. ೮-೨-೪೦) ಎಂಬುದರಿಂದ ತಕಾರಕ್ಕೆ ಧಕಾರ, ಜಶ್ತ್ವ. ಇದ್ಧ ಎಂದಾಗುವುದು. ಸಮ್ ಎಂಬುದು ಕ್ರಿಯಾವಿಶೇಷಣವಾದ್ದರಿಂದ ಗತಿಸಂಜ್ಞಕ, ಅದಕ್ಕೆ ಇದ್ಧಃ ಎಂಬುದರೊಂದಿಗೆ **ಕುಗತಿಪ್ರಾದಯಃ** (ಪಾ. ಸೂ. ೨-೨-೧೮) ಎಂಬುದರಿಂದ ಸಮಾಸ ಬರುವುದು. ಸು ಎಂಬುದು ಶೋಭನಾರ್ಥಕವಾದ ಪ್ರಾತಿಪದಿಕ ಗತಿಸಂಜ್ಞಕವಲ್ಲ. ಅದಕ್ಕೆ ಸಮಿದ್ಧ ಎಂಬ ಪದದೊಂದಿಗೆ **ವಿಶೇಷಣಂ ವಿಶೇಷ್ಯೇಣ ಬಹುಲಮ್** (ಪಾ. ಸೂ. ೨ ೧-೫೭) ಎಂಬುದರಿಂದ ಕರ್ಮಧಾರಯ ಸಮಾಸ. ಸು ಎಂಬುದು ಪ್ರಾತಿಪದಿಕಸ್ವರದಿಂದ ಅಂತೋದಾತ್ತ **ಕರ್ಮಧಾರಯೇಽನಿಷ್ಠಾ** (ಪಾ ಸೂ. ೬-೨ ೪೬) ಕರ್ಮಧಾರಯ ಸಮಾಸದಲ್ಲಿ ಕ್ತಪ್ರತ್ಯಯಾಂತವು ಪರದಲ್ಲಿದ್ದರೆ ನಿಷ್ಠಾಂತವಲ್ಲದ ಪೂರ್ವಪದವು ಪ್ರಕೃತಿಸ್ವರವನ್ನು ಹೊಂದುವುದು ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬಂದು ಸು ಶಬ್ದದ ಉದಾತ್ತವೇ ನಿಲ್ಲುವುದು. ಮಿಕ್ಕ ವರ್ಣಗಳು ಶೇಷಾನುದಾತ್ತವನ್ನು ಹೊಂದುವುವು. ಸುಶಬ್ದದ ಮುಂದೆ ಇರುವ ಸಕಾರವು **ಉದಾತ್ತಾದನುದಾತ್ತಸ್ಯ ಸ್ವರಿತಃ** (ಪಾ. ಸೂ. ೮-೪-೬೬) ಎಂಬುದರಿಂದ ಸ್ವರಿತ, ಅದರ ಮುಂದಿರುವ ವರ್ಣಗಳು **ಸ್ವರಿತಾತ್ಸಂಹಿತಾಯಾಮನುದಾತ್ತಾನಾಮ್** (ಪಾ.ಸೂ. ೧-೨-೩೯) ಎಂಬುದರಿಂದ ಪ್ರಚಯಗಳು. ಇಲ್ಲಿ ಸಮ್ ಎಂಬುದರಂತೆ ಸು ಎಂಬುದೂ ಕ್ರಿಯಾವಿಶೇಷಣವೆಂದು ಇಟ್ಟುಕೊಂಡರೆ, ಸು ಎಂಬದಕ್ಕೆ ಗತಿಸಂಜ್ಞೆ ಬರುವುದರಿಂದ ಪ್ರಾದಿಸಮಾಸ ಬರುತ್ತೆ. **ಗತಿರನಂತರಃ** (ಪಾ. ಸೂ. ೬-೨-೪೯) ಕರ್ಮಾರ್ಥಕವಾದ ಕ್ತಾಂತವು ಪರದಲ್ಲಿರುವಾಗ ಅವ್ಯವಹಿತವಾದ ಗತಿಯು ಪ್ರಕೃತಿಸ್ವರವನ್ನುಹೊಂದುವುದು ಎಂಬುದರಿಂದ ಸಮ್ ಎಂಬುದು ಉದಾತ್ತವಾಗುವುದು. ಸಮಾಸ ಬಂದ ನಂತರವೂ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬಂದು ಅದೇ ಸ್ವರವೇ ನಿಲ್ಲಬೇಕಾಗುವುದು. ಆದ್ದರಿಂದ ಶೇಷನಿಘಾತದಿಂದ ಸು ಎಂಬುದು ಅನುದಾತ್ತವಾಗಬೇಕಾಗುವುದು. ಆದ್ದರಿಂದ ಸು ಎಂಬುದು ಕ್ರಿಯಾವಿಶೇಷಣವೆಂದು ಸ್ವೀಕರಿಸುವುದಿಲ್ಲ. ಶೋಭನಾರ್ಥಕವಾದ ಪ್ರಾತಿಪದಿಕವೆಂದೇ ಸ್ವೀಕರಿಸಬೇಕು. ಸುಸಮಿದ್ಧ ಎಂಬಲ್ಲಿ ಇಷ್ಟವಾದ ಆದ್ಯುದಾತ್ತ ಸ್ವರವು ಸಿದ್ಧವಾಗುವುದು.

ಸುಶಬ್ದವು ಕ್ರಿಯಾವಿಶೇಷಣವಲ್ಲ. ಶೋಭನಾರ್ಥಕವಾದ ಪ್ರಾತಿಪದಿಕ ಎಂದು ಒಪ್ಪಿದರೂ ಇಲ್ಲಿ **ಕರ್ಮಧಾರಯೇಽನಿಷ್ಠಾ** ಎಂಬ ಸೂತ್ರದಿಂದ ಪೂರ್ವಪದಪ್ರಕೃತಿಸ್ವರಕ್ಕೆ ಪ್ರಾಪ್ತಿ ಇಲ್ಲ. ಈ ಸೂತ್ರವು **ಶ್ರೇಣ್ಯಾದಯಃ ಕೃತಾದಿಭಿಃ** (ಪಾ. ಸೂ. ೨-೧.೫೯) ಎಂಬುದರಿಂದ ಕ್ತಪ್ರತ್ಯಯಾಂತದೊಂದಿಗೆ ಪ್ರತಿಪದೋಕ್ತವಾಗಿ ವಿಹಿತವಾದ ಸಮಾಸ ಬಂಧಸ್ಥಳದಲ್ಲಿಯೇ ಪ್ರವೃತ್ತಿಸುವುದು. ಆದ್ದರಿಂದಲೇ **ಮಹಾನ್ ವ್ರೀಹ್ಯ, ಪರಾಹ್ಣ, ಗೃಷ್ಟೀ, ಷ್ವಾಸ, ಜಾಬಾಲ, ಭಾರ, ಭಾರತ, ಹೈಲಿಹಿಲ, ರೌರವ, ಪ್ರವೃದ್ಧೇಷು** (ಪಾ. ಸೂ. ೬-೨-೩೮) ವ್ರೀಹಿ ಮೊದಲಾದ ಹತ್ತು ಶಬ್ದಗಳು ಪರದಲ್ಲಿರುವಾಗ ಮಹಚ್ಛಬ್ದವು ಪ್ರಕೃತಿಸ್ವರವನ್ನು ಹೊಂದುವುದು. ಎಂಬ ಸೂತ್ರದಲ್ಲಿ ಪ್ರವೃದ್ಧ ಗ್ರಹಣವು ಸಾರ್ಥಕವಾಗುವುದು. ಇಲ್ಲದಿದ್ದರೆ ಮಹಾಪ್ರವೃದ್ಧ ಎಂಬಲ್ಲಿ **ಕರ್ಮಧಾರಯೇಽನಿಷ್ಠಾ** (ಪಾ. ಸೂ. ೬-೨-೪೬) ಎಂಬುದರಿಂದಲೇ ಪೂರ್ವಪದಪ್ರಕೃತಿಸ್ವರವು ಸಿದ್ಧವಾಗುವುದರಿಂದ ಪ್ರವೃದ ಗ್ರಹಣ ವ್ಯರ್ಥವೇ ಆಗುವುದು. ಮಹಾನ್‌ವ್ರೀಹಿ ಎಂಬ ಸೂತ್ರದಲ್ಲಿ ಮಹಾಭಾಷ್ಯದಲ್ಲಿ ಈ ಅಂಶವು ಸ್ಪಷ್ಟವಾಗಿರುವುದು. ಅಲ್ಲಿ ಭಾಷ್ಯಪಂಕ್ತಿಗಳು ಹೀಗಿರುವುವು. **ಕಿಮರ್ಥಂ ಮಹತಃ ಪ್ರವೃದ್ಧಶಬ್ದ ಉತ್ತರಪದೇ ಪೂರ್ವಪದಪ್ರಕೃತಿಸ್ವರತ್ವಮುಚ್ಯತೇ ? ನ ಕರ್ಮಧಾರಯೇಽನಿಷ್ಠೇತ್ಯೇವ ಸಿದ್ಧಮ್ ? ನ ಸಿಧ್ಯತಿ । ಕಿಂಕಾರಣಮ್? । ಶ್ರೇಣ್ಯಾದಿಸಮಾಸ ಇತ್ಯೇವಂ ತತ್ । ಕಿಂ ಪುನಃ ಕಾರಣಂ ಶ್ರೇಣ್ಯಾದಿಸಮಾಸ ಇತ್ಯೇವಂ ತತ್ ? ಇಹ ಮಾ ಭೂತ್ ಮಹಾನಿರನಿಷ್ಟೋ ದಕ್ಷಿಣಾ ದೀಯತೇ** ಎಂದು. ಕೈಯಟದಲ್ಲಿ ಶ್ರೇಣ್ಯಾದಿ ಸಮಾಸ ಇತಿ ಎಂದು ಪ್ರತೀಕಧಾರಣೆ ಮಾಡಿ **ಲಕ್ಷಣಪ್ರತಿಪದೋಕ್ತಪರಿಭಾಷಯಾ ಕಾನ್ತೇನ ಪ್ರತಿಪದೋಕ್ತೋ ಯಃ ಕರ್ಮಧಾರಾಯಸ್ತಸ್ಯ ಗ್ರಹಣಮಿತ್ಯರ್ಥಃ** ಎಂದು ವಿವರಣೆ ಇರುವುದು. ಆದ್ದರಿಂದ **ಸನ್ಮಹತ್ಪರಮೋತ್ತಮೋತ್ಕೃಷ್ಟಾಃ ಪೂಜ್ಯಮಾನೈಃ** (ಪಾ. ಸೂ. ೨-೧-೬೧) ಎಂಬುದರಿಂದ ಬಂದಿರುವ ಮಹಾಪ್ರವೃದ್ಧ ಎಂಬಲ್ಲಿ ಹೇಗೋ ಹಾಗೆಯೇ **ವಿಶೇಷಣಂ ವಿಶೇಷ್ಯೇಣ ಬಹುಲಂ** (ಪಾ ಸೂ. ೨-೧-೫೭) ಎಂಬುದರಿಂದ ಸಮಾಸವನ್ನು ಹೊಂದಿರುವ ಸುಸಮಿದ್ಧಃ ಎಂಬಲ್ಲಿ **ಕರ್ಮಧಾರಯೇಽನಿಷ್ಠಾ** (ಪಾ. ಸೂ. ೬-೨-೪೬) ಎಂಬುವುದು ಪ್ರವರ್ತಿಸುವುದಿಲ್ಲ. ಇನ್ಧೀ ಧಾತುವು ದೀಪ್ತ್ಯರ್ಥಕವಾದ್ದರಿಂದ ಅಕರ್ಮಕ, ಇದರ ಮುಂದೆ ಭಾವಾರ್ಥದಲ್ಲಿ ಕ್ತಪ್ರತ್ಯಯ ಬರುವುದೇ ವಿನಾ ಕರ್ಮಾರ್ಥದಲ್ಲಿ ಕ್ತಪ್ರತ್ಯಯ ಬರಲಾರದು. ಆದ್ದರಿಂದ **ಗತಿರನಂತರಃ** (ಪಾ. ಸೂ. ೬ ೨-೪೯) ಎಂಬುದರಿಂದ ಕ್ರಿಯಾವಿಶೇಷಣತ್ವಪಕ್ಷದಲ್ಲಿ ಸಮ್‌ಗೆ ಉದಾತ್ತಸ್ವರ ಉಪಪಾದನೆಯು ಸರಿಯಾಗದು. ಉಪಸರ್ಗ ಬಲದಿಂದ ಈ ಉಪಪಾದನೆಯನ್ನು ಒಪ್ಪಿದರೂ ದ್ವಿತೀಯ ಸಮಾಸದಲ್ಲಿಯೂ ಇದರಿಂದಲೇ ಸಮ್‌ಗೆ ಉದಾತ್ತವನ್ನು ಉಪಪಾದಿಸುವುದು ಯುಕ್ತವು. ಅಪವಾದವಾದ ಥಾಥಾದಿಸ್ವರವು ಜಾಗರೂಕವಾಗಿರುವುದರಿಂದ ಕೃದುತ್ತರ ಪದಪ್ರಕೃತಿಸ್ವರವು ಪ್ರವೃತ್ತಿಸದು. ದಾಸೀಭಾರಾದಿಯು (ಪಾ. ಸೂ. ೬-೨-೪೨) ಆಕೃತಿ ಗಣವು. ಅಲ್ಲಿ ಸುಸಮಿದ್ಧ ಶಬ್ದವನ್ನು ಸೇರಿಸಿ ಪೂರ್ವಪದಪ್ರಕೃತಿಸ್ವರವನ್ನು ಉಪಪಾದಿಸುವುದು ಯುಕ್ತವು.

**ದೇವಾ॒ಂ ಅಗ್ನೇ**—ರುತ್ವಾನುನಾಸಿಕಗಳು ಪೂರ್ವದಂತೆ.

**ಹವಿಷ್ಮತೇ**—ಹವಿಃ ಅಸ್ಯ ಅಸ್ತಿ ಎಂದುವಿಗ್ರಹ. **ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್** (ಪಾ.ಸೂ. ೫-೨-೯೪) ಎಂಬುದರಿಂದ ಮತುಪ್‌ಪ್ರತ್ಯಯ. ಹವಿಸ್+ಮತೇ ಎಂಬಲ್ಲಿ **ತಸೌಮತ್ವರ್ಥೇ** (ಪಾ.ಸೂ. ೧-೪-೧೯) ಮತ್ವರ್ಥ ಪ್ರತ್ಯಯ ಪರದಲ್ಲಿರುವಾಗ ತಾಂತಸಾಂತಗಳು ಭ ಸಂಜ್ಞೆಯನ್ನು ಹೊಂದುವುವು ಎಂದು ವಿಹಿತವಾದ ಭ ಸಂಜ್ಞೆಯಿಂದ ಪದಸಂಜ್ಞೆಗೆ ಬಾಧಬರುವುದು । ಆದ್ದರಿಂದ **ಸಸಜುಷೋರುಃ** (ಪಾ. ಸೂ. ೮-೨-೬೬) ಎಂಬುದರಿಂದ ರುತ್ವ ಬರುವುದಿಲ್ಲ.

**ಹೋತಃಪಾವಕ**— ಈ ಎರಡು ಪದಗಳೂ ಆಮಂತ್ರಿತಗಳು. ಇವೆರಡಕ್ಕೂ ಪ್ರತ್ಯೇಕ ಪ್ರತ್ಯೇಕವಾಗಿ ಕ್ರಿಯೆಯಲ್ಲಿಯೇ ಅನ್ವಯವನ್ನು ಹೇಳಿದರೆ ಪರಸ್ಪರಾನ್ವಯವಿಲ್ಲದೇ ಇರುವುದರಿಂದ ಸಾಮರ್ಥ್ಯವಿಲ್ಲದ ಕಾರಣ ಪರಾಂಗವದ್ಭಾವ ಬರುವುದಿಲ್ಲ. ಅದ್ದರಿಂದ ಪರಾಂಗವದ್ಭಾವವನ್ನು ಮುಂದಿಟ್ಟುಕೊಂಡು **ಷಾಷ್ಠ**ಸೂತ್ರದಿಂದ ಓಕಾರವು ಉದಾತ್ತವಾಗುವುದೆಂದೂ ಮಿಕ್ಕವುಗಳಿಗೆ ಶೇಷನಿಘಾತದಿಂದ ಅನುದಾತ್ತರೂಪವಾದ ಏಕಸ್ವರವೇ ಬರುವುದೆಂದೂ ಹೇಳಲಾಗುವುದಿಲ್ಲ. **ಆಮಂತ್ರಿತಂ ಪೂರ್ವಮವಿದ್ಯಮಾನವತ್** (ಪಾ.ಸೂ. ೮-೧-೭೨) ಎಂಬುದರಿಂದ ಮೊದಲನೆಯ ಆಮಂತ್ರಿತಕ್ಕೆ ಅವಿದ್ಯಮಾನವದ್ಭಾವ ಬರುವುದರಿಂದ ಎರಡನೆಯ ಆಮಂತ್ರಿತವು ಪದಾತ್ಪರವಾಗುವುದಿಲ್ಲ ಪಾದಾದಿಯಲ್ಲಿರುವುದೂ ಆಗುವುದು. ಅದ್ದರಿಂದ ಎರಡನೆ ಆಮಂತ್ರಿತಕ್ಕೆ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ಸರ್ವಾನುದಾತ್ತ ಬರಲಾರದು. ಇನ್ನು ಹೋತಃ ಪಾವಕ ಎಂಬ ಎರಡಕ್ಕೂ ಪರಸ್ಪರಾನ್ವಯವನ್ನು ಹೇಳಿದರೆ ಯಾವ ತೆರನಾಗುವುದೆಂದು ವಿಚಾರಿಸುವ. ಈ ಪಕ್ಷದಲ್ಲಿ ಹೋತಃ ಎಂಬುದು ವಿಶೇಷಣವಾಚಕವೆಂದು ಇಟ್ಟುಕೊಂಡರೆ **ಆಮಂತ್ರಿತಂ ಪೂರ್ವಮವಿದ್ಯಮಾನವತ್** ಎಂಬುದರಿಂದ ಮೊದಲಿನಂತೆಯೇ ಅವಿದ್ಯಮಾನವದ್ಭಾವ ಬರುವುದು. ಹೀಗೆ ಅವಿದ್ಯಮಾನವದ್ಭಾವ ಬರುವುದರಿಂದಲೇ ಪರಸ್ಪರಾನ್ವಯದಿಂದ ಸಾಮರ್ಥವಿದ್ದರೂ ಪರಾಂಗವದ್ಭಾವ ಬರುವುದಿಲ್ಲ. ಅದ್ದರಿಂದ ಈ ಪಕ್ಷದಲ್ಲಿಯೂ ಸರ್ವಾನುದಾತ್ತರೂಪವಾದ ಏಕಸ್ವರವು ಸಿದ್ಧಿಸುವುದಿಲ್ಲ. ಆದಕಾರಣ ಪುನಾತೀತಿ ಪಾವಕಃ ಎಂದು ಅವಯವಾರ್ಥಪ್ರಸಿದ್ಧಿಯನ್ನು ಸ್ವೀಕರಿಸಿ ಪಾವಕಪದವು ವಿಶೇಷಣವಾಚಕವೆಂದೂ, ಹೋತಃ ಎಂಬುದು ವಿಶೇಷ್ಯವಾಚಕವೆಂದೂ ಒಪ್ಪಿಕೊಳ್ಳಬೇಕು. ಈಗ ಹೋತಃ ಎಂಬುದು ವಿಶೇಷ್ಯವಾದ್ದರಿಂದ ಸಾಮಾನ್ಯವಚನವಾಗುವುದು. ಅದ್ದರಿಂದ ನಾಮಂತ್ರಿತೇ ಸಮಾನಾಧಿಕರಣೇ ಸಾಮಾನ್ಯವಚನಮ್ (ಪಾ. ಸೂ. ೮-೧-೭೩) ಎಂಬುದರಿಂದ ಅವಿದ್ಯಮಾನವದ್ಭಾವಕ್ಕೆ ಪ್ರತಿಷೇಧ ಬರುವುದು. ಏವಂಚ ಎರಡನೆಯ ಆಮಂತ್ರಿತಕ್ಕೆ ಪದಾತ್ಪರತ್ವವೂ ಪಾದಾದಿಗತತ್ವಾಭಾವವೂ ಸಂಭವಿಸುವುದರಿಂದ ಅಷ್ಟಮಿಕಾನುದಾತ್ತವು ಬರುವುದು. ಅಥವಾ **ಸುಬಾಮಂತ್ರಿತೇ** (ಪಾ. ಸೂ. ೨-೧-೨) ಎಂಬುದರಿಂದ ಪರಾಂಗವದ್ಭಾವ ಬಂದರೆ ಆರನೇ ಅಧ್ಯಾಯದ **ಆಮಂತ್ರಿತಸ್ಯ ಚ** (ಪಾ. ಸೂ. ೬-೧-೧೯೮) ಎಂಬುದರಿಂದ ಓಕಾರವು ಉದಾತ್ತವಾಗಿ **ಅನುದಾತ್ತಂ ಪದಮೇಕವರ್ಜಂ** (ಪಾ. ಸೂ. ೬-೧-೧೫೮) ಎಂಬ ಶೇಷನಿಘಾತದಿಂದ ಮಿಕ್ಕ ವರ್ಣಗಳು ಎಲ್ಲವೂ ಅನುದಾತ್ತಗಳಾಗುವುವು.

**ಯಕ್ಷಿ— ಯಜದೇವಪೂಜಾಸಂಗತಿಕರಣದಾನೇಷು** ಧಾತು. ಲೋಟ್ ಮಧ್ಯಮಪುರುಷ ಏಕವಚನ ಸಿಪ್ ಛಾಂದಸವಾದ್ದರಿಂದ **ಸೇಹ್ಯರ್ಪಿಚ್ಚ** (ಪಾ. ಸೂ. ೩-೪-೮೭) ಎಂಬುದರಿಂದ ಸಿಗೆ ಹಿ ಆದೇಶ ಬರುವುದಿಲ್ಲ ಶಪ್ ವಿಕರಣಕ್ಕೆ ಬಹುಲಂ ಛಂದಸಿ (ಪಾ.ಸೂ. ೨-೪-೭೩) ಎಂಬುದರಿಂದ ಲುಕ್. ಯಜ್+ಸಿ ಎಂದಿರುವಾಗ **ವ್ರಶ್ಚಭ್ರಸ್ಜಸೃಜಮೃಜಯಜರಾಜಭ್ರಾಜಚ್ಛಶಾಂ ಷಃ** (ಪಾ. ಸೂ. ೮-೨-೩೬) ಎಂಬುದರಿಂದ ಜಕಾರಕ್ಕೆ ಷಕಾರ. **ಷಢೋಃಕಸ್ಸಿ** (ಪಾ. ಸೂ. ೮-೨-೪೧) ಸಕಾರ ಪರದಲ್ಲಿದ್ದರೆ ಷಕಾರ ಢಕಾರಗಳಿಗೆ ಕಕಾರಾದೇಶ ಬರುವುದು ಎಂಬುದರಿಂದ ಷಕಾರಕ್ಕೆ ಕಕಾರ **ಆದೇಶಪ್ರತ್ಯಯಯೋಃ** (ಪಾ. ಸೂ. ೮-೩-೫೧) ಎಂಬುದರಿಂದ ಸಕಾರಕ್ಕೆ ಷಕಾರ ಯಕ್ಷಿ ಎಂದಾಗುವುದು. ಸಿಪ್ ಎಂಬುದು ಪಿತ್ತಾದ್ದರಿಂದ **ಅನುದಾತ್ತೌಸುಪ್ಪಿತೌ** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತ. ಆದಕಾರಣ ಧಾತುಸ್ವರವೇ ನಿಲ್ಲುವುದು. ಯಕ್ಷಿ ಎಂಬ ಪದಕ್ಕೆ ಪೂರ್ವದಲ್ಲಿ ಪಾವಕ ಪದವಿರುವುದು. ಅದು ಆಮಂತ್ರಿತ. **ಆಮಂತ್ರಿತಂ ಪೂರ್ವಮವಿದ್ಯಮಾನವತ್** (ಪಾ. ಸೂ. ೮-೧-೭೨) ಎಂಬುದರಿಂದ ಆದಕ್ಕೆ ಅವಿದ್ಯಮಾನವದ್ಭಾವ ಬರುವುದು. ಅದ್ದರಿಂದ ಅತಿಙಂತವಾದ ಪದಾತ್ಪರತ್ವವು ಯಕ್ಷಿ ಎಂಬುದಕ್ಕೆ ಇಲ್ಲ. ಆದಕಾರಣದಿಂದ ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ. ಯಕ್ಷಿ ಎಂಬುದಕ್ಕೆ

ಅವಿದ್ಯಮಾನವದ್ಭಾವ ಬಂದುದರಿಂದಲೇ ಅದು ವ್ಯವಧಾಯಕವಾಗಲಾರದು. ಆದ್ದರಿಂದ ಹೋತಃ ಎಂಬ ಪದಾತ್ಪರತ್ವವು ಇರುವುದರಿಂದ ಸರ್ವಾನುದಾತ್ತ ಬರಲಿ ಎನ್ನಬಹುದು. ಆದರೆ ಯಕ್ಷಿ ಎಂಬ ಪದವನ್ನಪೇಕ್ಷಿಸಿ ಹೋತಃ ಎಂಬ ಪದವೂ ಪೂರ್ವಪದವೇ ಆಗುವುದರಿಂದ ಆಮಂತ್ರಿತಂ ಪೂರ್ವಮವಿದ್ಯಮಾನವತ್, ಎಂಬುದರಿಂದ ಅವಿದ್ಯಮಾನವದ್ಭಾವವು ಅದಕ್ಕೂ ಬರುವುದು. ಆದ್ದರಿಂದ ಹೋತಃ ಎಂಬ ಪದವನ್ನು ನಿಮಿತ್ತ ಮಾಡಿಕೊಂಡೂ ಸರ್ವಾನುದಾತ್ತ ಬರುವುದಿಲ್ಲ.

ಆದರೆ ಹೋತಃ, ಪಾವಕ ಎಂಬ ಪದಗಳಿಗೆ ಸ್ವರವನ್ನು ಉಪಪಾದಿಸುವಾಗ ಹೋತಃ ಎಂಬುದು ವಿಶೇಷ್ಯವೆಂದೂ ಪಾವಕಪದವು ಅವಯವಪ್ರಸಿದ್ಧಿಯಿಂದ ವಿಶೇಷಣವೆಂದೂ ಹೇಳಲಾಗಿದೆ. ಆದ್ದರಿಂದ **ನಾಮಂತ್ರಿತೇ ಸಮಾನಾಧಿಕರಣೇ ಸಾಮಾನ್ಯವಚನಮ್** (ಪಾ. ಸೂ. ೮-೧-೭೩) ಎಂಬುದರಿಂದ ಹೋತಃ ಎಂಬುದಕ್ಕೆ ಅವಿದ್ಯಮಾನವದ್ಭಾವಕ್ಕೆ ಪ್ರತಿಷೇಧ ಬರುವುದು. ಇದರ ಮುಂದೆ ಇರುವ ಪಾವಕಪದಕ್ಕೆ ಅವಿದ್ಯಮಾನವದ್ಭಾವವಿರುವುದರಿಂದ ಸಮಾನಾಧಿಕರಣಪರತ್ವವಿಲ್ಲದುದರಿಂದ ಅವಿದ್ಯಮಾನವದ್ಭಾವಪ್ರತಿಷೇಧಕ್ಕೆ ಅವಕಾಶವಿಲ್ಲ ಎಂದು ಹೇಳಲಾಗುವುದಿಲ್ಲ ಏಕೆಂದರೆ, ಯಕ್ಷಿಪದಕ್ಕೆ ಕಾರ್ಯವನ್ನು ಮಾಡುವಾಗ ಪಾವಕಪದ ಪೂರ್ವಪದವಾಗುವುದರಿಂದ ಆಗ ಮಾತ್ರ ಅವಿದ್ಯಮಾನವದ್ಭಾವ ಬರುವುದು. ಹೋತಃ ಎಂಬುದಕ್ಕೆ ಅವಿದ್ಯಮಾನವದ್ಭಾವಪ್ರತಿಷೇಧರೂಪವಾದ ಕಾರ್ಯವನ್ನು ಮಾಡುವಾಗ ಹೋತಃಪದಾಪೇಕ್ಷೆಯಿಂದ ಅದು ಪರವಾಗುವುದೇ ವಿನಾ ಪೂರ್ವವಾಗುವುದಿಲ್ಲ. ಆದ್ದರಿಂದ ಹೋತಃ ಎಂಬುದಕ್ಕೆ ಅವಿದ್ಯಮಾನವದ್ಭಾವ ಪ್ರತಿಷೇಧವನ್ನು ಮಾಡುವಾಗ ಪಾವಕ ಪದಕ್ಕೆ ಅವಿದ್ಯಮಾನವದ್ಭಾವ ಬರುವುದಿಲ್ಲ ಆದ್ದರಿಂದ ಸಮಾನಾಧಿಕರಣ ಆಮಂತ್ರಿತ ಪರಕತ್ವವು ಸಂಭವಿಸುವುದರಿಂದ ನಾಮಂತ್ರಿತೇ ಎಂಬುದರಿಂದ ಅವಿದ್ಯಮಾನವದ್ಭಾವಪ್ರತಿಷೇಧ ಬರುವ ಕಾರಣದಿಂದ ಹೋತಃ ಎಂಬುದಕ್ಕೆ ಅವಿದ್ಯಮಾನವದ್ಭಾವ ಬರುವುದಿಲ್ಲ. ಹೀಗಿದ್ದರೆ ಹೋತಃ ಎಂಬ ಪದಾತ್ ಪರತ್ವವು ಯಕ್ಷಿ ಎಂಬುದಕ್ಕೆ ಇರುವುದರಿಂದ ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತ ಬರಬೇಕಾಗುವುದು. ಎಂದರೆ ಇದು ಸತ್ಯವು. ಆದರೂ ಇಲ್ಲಿ ಯಕ್ಷಿ ಪದದ ಮುಂದೆ ಚ ಶಬ್ದವಿರುವುದು ಆದ್ದರಿಂದ **ಚಾದಿಷು ಚ** (ಪಾ. ಸೂ. ೮-೧-೫೮) ಚ, ವಾ, ಹಾ, ಅಹ ಏವ, ಈ ಐದು ಪದಗಳು ಪರದಲ್ಲಿದ್ದರೆ ತಿಙಂತವು ಅನುದಾತ್ತವಾಗುವುದಿಲ್ಲ ಎಂಬುದರಿಂದ ತಿಙ್ಙತಿಙಃ (ಪಾ ಸೂ. ೮-೧-೨೮) ಎಂಬುದಕ್ಕೆ ಪ್ರತಿಷೇಧ ಬರುವುದು ಆದ್ದರಿಂದ ಯಕ್ಷಿ, ಎಂಬಲ್ಲಿ ಸರ್ವಾನುದಾತ್ತ ಬರುವುದಿಲ್ಲ ಪೂರ್ವೋಕ್ತರೀತಿಯಲ್ಲಿ ಧಾತುಸ್ವರವೇ ನಿಲ್ಲುವುದು ||೧||

॥ ಸಂಹಿತಾಪಾಠಃ ॥

ಮಧುಮಂತಂ ತನೂನಪಾದ್ಯಜ್ಞಂ ದೇವೇಷು ನಃ ಕವೇ ।
ಅದ್ಯಾ ಕೃಣುಹಿ ವೀತಯೇ ॥ ೨ ॥

॥ ಪದಪಾಠಃ ॥

ಮಧುऽಮಂತಂ । ತನೂऽನಪಾತ್ । ಯಜ್ಞಂ । ದೇವೇಷು । ನಃ । ಕವೇ ॥
ಅದ್ಯ । ಕೃಣುಹಿ । ವೀತಯೇ ॥ ೨ ॥

॥ ಸಾಯಣಭಾಷ್ಯಂ ॥

ಹೇ ಕವೇ ಮೇಧಾವಿನ್ ಅಗ್ನೇ ತನೂನಪಾದೇತನ್ನಾಮಕಸ್ತ್ವಮದ್ಯಾಸ್ಮಿನ್ದಿನೇ ನೋಽಸ್ಮದೀಯಂ ಮಧುಮಂತಂ ರಸವಂತಂ ಯಜ್ಞಂ ಹವಿರ್ವೀತಯೇ ಭಕ್ಷಣಾರ್ಥಂ ದೇವೇಷು ಕೃಣುಹಿ । ಕುರು । ಪ್ರಾಪಯೇತ್ಯರ್ಥಃ ॥ ಮಧುಮಂತಂ ಫಲಿಪಾಟಿನಮಿಮನಿಜನಾಂ ಗುಕ್ಪಟಿನಾಕಿಧತಶ್ಚ । ಉ. ೧-೧೮ । ಇತಿ ಮನ್ಯತೇರುಪ್ರತ್ಯಯೋ ಧಕಾರಶ್ಚಾಂತಾದೇಶಃ । ನಿದಿತ್ಯನುವೃತ್ತೇಃ ಪ್ರತ್ಯಯಸ್ಯ ನಿತ್ತ್ವಾದಾದ್ಯುದಾತ್ತೋ ಮಧುಶಬ್ದಃ । ತನೂನಪಾತ್ । ಆಮಂತ್ರಿತನಿಘಾತಃ । ಅದ್ಯ । ಸದ್ಯಃಪರುದಿತ್ಯಾದಿನಾಸ್ಮಿನ್ಕಾಲ ಇತ್ಯರ್ಥೇ ದ್ಯಪ್ರತ್ಯಯಾಂತೋ ನಿಪಾತಿತಃ । ಪ್ರತ್ಯಯಸ್ವರೇಣಾಂತೋದಾತ್ತಃ । ತದ್ಧಿತಶ್ಚಾಸರ್ವವಿಭಕ್ತಿರಿತ್ಯವ್ಯಯತ್ವಾದವ್ಯಯಾದಾಪ್ಸುಪ ಇತ್ಯುಪರಿ ಸಪ್ತಮ್ಯಾ ಲುಕ್। ಸಂಹಿತಾಯಾಮನ್ಯೇಷಾಮಪಿ ದೃಶ್ಯತ ಇತಿ ದೀರ್ಘತ್ವಂ । ಕೃಣುಹಿ । ಕೃವಿ ಹಿಂಸಾಕರಣಯೋಶ್ಚ। ಇದಿತೋ ನುಮ್ ಧಾತೋರಿತಿ ನುಮ್ । ಲೋಟಃ ಸೇರ್ಹಿರಾದೇಶಃ । ಧಿನ್ವಿಕೃಣ್ವ್ಯೋರಚ್ಚೇತಿ ಶಪೋಽಪವಾದೋ ವಿಕರಣ ಉಪ್ರತ್ಯಯಃ । ತತ್ಸಂನಿಯೋಗೇನ ವಕಾರಸ್ಯಾಕಾರಃ । ತಸ್ಯಾತೋ ಲೋಪ ಇತಿ ಲೋಪಃ । ತಸ್ಯ ಸ್ಥಾನಿವದ್ಭಾವಾಲ್ಲಘೂಪಧಗುಣೋ ನ ಭವತಿ । ಉತಶ್ಚ । ಪ್ರತ್ಯಯಾದಸಂಯೋಗಪೂರ್ವಾತ್ । ಪಾ ೬-೪-೧೦೬ । ಇತಿ ಹೇರ್ಲುಗ್ನ ಭವತ್ಯುತಶ್ಚ ಪ್ರತ್ಯಯಾಚ್ಛಂದೋ ವಾವಚನಂ । ಪಾ. ೬-೪-೧೦೬-೧ । ಇತಿ ವಚನಾತ್ । ತಿಙ್ಙತಿಙ ಇತಿ ನಿಘಾತಃ। ವೀತಯೇ । ಮಂತ್ರೇ ವೃಷೇಷಪಚಮನವಿದಭೂವೀರಾ ಉದಾತ್ತ ಇತಿ ಕ್ತಿನ್ನುದಾತ್ತಃ ॥

॥ ಪ್ರತಿಪದಾರ್ಥ ॥

(ಹೇ) **ಕವೇ**—ಎಲೈ ಮೇಧಾವಿಯಾದ ಅಗ್ನಿಯೇ, । **ತನೂನಪಾತ್**—ತನೂನಪಾತ್ ಎಂಬ ಹೆಸರುಳ್ಳ ನೀನು । **ಅದ್ಯ**—ಈ ದಿನ (ಈಗ) **ನಃ**—ನಮ್ಮ । **ಮಧುಮಂತಂ**—ಮಧುವಿನಂತೆ ರುಚಿಕರವಾದ ] **ಯಜ್ಞಂ**—ಯಜ್ಞವನ್ನು ಎಂದರೆ ಯಜ್ಞದಲ್ಲಿ ಅರ್ಪಿಸುವ ಹವಿಸ್ಸನ್ನು । **ವೀತಯೇ**—ಭಕ್ಷಿಸುವುದಕ್ಕಾಗಿ । **ದೇವೇಷು**—ದೇವತೆಗಳಲ್ಲಿ । **ಕೃಣುಹಿ**—ಮಾಡು ಎಂದರೆ ಅರ್ಪಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಮೇಧಾವಿಯು. ನಿನಗೆ ತನೂನಪಾತ್ ಎಂತಲೂ ಹೆಸರು. ಇಂತಹ ನೀನು ಈ ದಿನ ನಾವು ಮಾಡುತ್ತಿರುವ ಯಜ್ಞವನ್ನು (ಅಥವಾ ಯಜ್ಞಸಂಬಂಧವಾದ ಹವಿಸ್ಸನ್ನು) ಭಕ್ಷಣಾರ್ಥವಾಗಿ ದೇವತೆಗಳಿಗೆ ಸಮರ್ಪಿಸು.

## English Translation.

Wise Agni, also called Tanunapat present, this day our well-flavoured sacrifice to the gods that they may feast.

॥ ವಿಶೇಷವಿಷಯಗಳು ॥

**ಮಧುಮಂತಂ—ರಸವಂತಂ** ಎಂದರೆ ರುಚಿಕರವಾದ, ಜೇನುತುಪ್ಪದಂತೆ ಸಿಹಿಯಾದ well-flavoured, rich in honey ಎಂದರ್ಥವು. ವೇದಾರ್ಥಯತ್ನಕಾರರು ಮಧುಶಬ್ದಕ್ಕೆ ಸೋಮವೆಂದು ಅರ್ಥ ಮಾಡಿ ಸೋಮರಸಯುಕ್ತವಾದ ಹವಿಸ್ಸು ಎಂದು ಹೇಳಿರುವರು. ಈ ವಿಧವಾದ ಅರ್ಥಸಮರ್ಥನೆಗಾಗಿ—

**ಅಶ್ವಿನಾ ಪಿಬತಂ ಮಧು ದೀದ್ಯಗ್ನೀ ಶುಚಿವ್ರತಾ ।**

(ಋ. ಸಂ. ೧-೧೫ ೧೧)

ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು. ಈ ಋಕ್ಕಿನ ಅರ್ಥವಿವರಣೆ ಮಾಡುವಾಗ ಸಾಯಣರು **ಮಧು-ಮಾಧುರ್ಯೋಪೇತಂ ಸೋಮಂ,** ಮಧುರವಾದ (ಸಿಹಿಯಾದ) ಸೋಮರಸವನ್ನು ಎಂದು ಸ್ಪಷ್ಟವಾಗಿ ಹೇಳಿರುವರು. ಇದಲ್ಲದೆ—

**ಮಧೋರ್ಧಾರಾಭಿರ್ಜನಯಂತೋ ಅರ್ಕಮಿತ್ಪ್ರಿಯಾಮಿಂದ್ರಸ್ಯ ತನ್ವಮವೀವೃಧನ್ ।**

(ಋ. ಸಂ. ೯-೭೩-೨)

ಎಂಬ ಋಕ್ಕಿನ ಅರ್ಥವಿವರಣೆ ಮಾಡುವಾಗಲೂ ಭಾಷ್ಯಕಾರರು ಮಧೋಃ ಎಂಬ ಶಬ್ದಕ್ಕೆ **ಮದಕರಸ್ಯ ಸೋಮಸ್ಯ** ಮದವನ್ನುಂಟುಮಾಡುವ ಸೋಮರಸದ ಎಂಬ ಅರ್ಥವನ್ನೇ ಹೇಳಿರುವರು. ಮಧುಶಬ್ದಕ್ಕೆ ಸೋಮರಸವೆಂದು ಅರ್ಥಪ್ರತಿಪಾದನೆ ಮಾಡುವ ಋಕ್ಕುಗಳು ಋಗ್ವೇದದಲ್ಲಿ ಅನೇಕ ಇವೆ. ಆದುದರಿಂದ **ಮಧುಮಂತಂ** ಎಂಬ ಶಬ್ದಕ್ಕೆ ಸೋಮರಸಸಹಿತವಾದ ಎಂಬ ಅರ್ಥವನ್ನು ಹೇಳಬಹುದು.

**ತನೂನಪಾತ್**—ಈ ಶಬ್ದವೂ ಅಗ್ನಿಯ ಮತ್ತೊಂದು ಹೆಸರು. ಈ ಶಬ್ದಕ್ಕೆ ತನ್ನಿಂದಲೇ ಹುಟ್ಟಿದವನು ಎಂದು ಕೆಲವರು ಅರ್ಥಮಾಡಿರುವರು. ಈ ಅರ್ಥಸಮರ್ಥನೆಗಾಗಿ **ಅಗ್ನಿನಾಗ್ನಿಃ ಸಮಿಧ್ಯತೇ** (ಒಂದು) ಅಗ್ನಿಯಿಂದ (ಮತ್ತೊಂದು) ಅಗ್ನಿಯು ಹೊತ್ತಿಸಲ್ಪಡುವುದು ಎಂಬ ಋಕ್ಕನ್ನು ಉದಾಹರಿಸುವರು ಮತ್ತು ನಿರುಕ್ತದಲ್ಲಿ ತುಕ್, ತೋಕಂ ಮೊದಲಾದ ಹದಿನೈದು ಅಪತ್ಯವಾಚಕಶಬ್ದಗಳ ಮಧ್ಯದಲ್ಲಿ ನಪಾತ್ ಎಂಬ ಶಬ್ದವು ಪಠಿತವಾಗಿರುವುದರಿಂದ(ನಿ -೩-೨)ನಪಾತ್ ಶಬ್ದಕ್ಕೆ ಮಗನು, ಪುತ್ರನು ಎಂದರ್ಥವು. ತನು= ತನ್ನ ಶರೀರದಿಂದ ನಪಾತ್= ಹುಟ್ಟಿದವನು. ಮತ್ತು ಯಾಸ್ಕಮಹರ್ಷಿಯು ತಮ್ಮ ನಿರುಕ್ತದ ದೈವತಕಾಂಡದಲ್ಲಿ ತನೂನಪಾತ್ ಎಂಬ ಶಬ್ದದ ಅರ್ಥವಿವರಣೆ ಮಾಡುವಾಗ—

> **ತನೂನಪಾತ್—ತನೂನಪಾದಾಜ್ಯಮಿತಿ ಕಾತ್ಥಕ್ಯಃ । ನಪಾದಿತ್ಯನಂತರಾಯಾಃ ಪ್ರಜಾಯಾ ನಾಮಧೇಯಂ ನಿರ್ಣತತಮಾ ಭವತಿ । ಗೌರತ್ರ ತನೂರುಚ್ಯತೇ । ತತಾ ಅಸ್ಯಾಂ ಭೋಗಾಃ ತಸ್ಯಾಃ ಪಯೋ ಜಾಯತೇ ಪಯಸ್ಯ ಆಜ್ಯಂ ಜಾಯತೇ ॥**
> **ಅಗ್ನಿರಿತಿ ಶಾಕಪೂಣಿಃ—ಆಪೋಽತ್ರ ತನ್ವ ಉಚ್ಯಂತೇ । ತತಾ ಅಂತರಿಕ್ಷೇ ತಾಭ್ಯ ಓಷಧಿವನಸ್ಪತಯೋ ಜಾಯಂತ ಓಷಧಿವನಸ್ಪತಿಭ್ಯ ಏಷ ಜಾಯತೇ ॥**
>
> (ನಿ. ೮-೫)

ಎಂದು ಹೇಳಿದಾರೆ—ಅಭಿಪ್ರಾಯವೇನೆಂದರೆ, ಕಾತ್ಥಕ್ಯ ಎಂಬುವರು ತನೂನಪಾತ್ ಎಂಬದರೆ ಆಜ್ಯ (ಕರಗಿಸಿದ ತುಪ್ಪ)ವೆಂದು ಹೇಳುವರು. ಇದನ್ನು ಸಮರ್ಥಿಸುವುದಕ್ಕಾಗಿ ತನೂಃ ಎಂದರೆ ಗೌಃ, ಗೋವು, ನಪಾತ್--

ಎಂದರೆ ಪ್ರಜೆ, ಹುಟ್ಟಿದ ಎಂದರ್ಥವು. ಆದುದರಿಂದ ತನೂ-ಗೋವಿನಿಂದ, ನಪಾತ್-ಹುಟ್ಟಿದ ಎಂದರೆ ಉಂಟಾದ ಹಾಲು, ಹಾಲಿನಿಂದ ಉತ್ಪನ್ನವಾದುದು ತುಪ್ಪವು ಅಥವಾ ಆಜ್ಯವು ಎಂದು ತನೂನಪಾತ್ ಶಬ್ದಕ್ಕೆ ಆಜ್ಯವೆಂಬ ಅರ್ಥವನ್ನು ಸಮರ್ಥಿಸಿರುವರು. ಈ ಅರ್ಥದ ಉದಾಹರಣೆಗಾಗಿ--

**ತನೂನಪಾತ್ಪಥ ಋತಸ್ಯ ಯಾನಾನ್ಮಧ್ವಾ ಸಮಂಜನ್ತ್ಸ್ವದಯಾ ಸುಜಿಹ್ವ ।**
**ಮನ್ಮಾನಿ ಧೀಭಿರುತ ಯಜ್ಞಮೃಂಧನ್ದೇವತ್ರಾ ಚ ಕೃಣುಹ್ಯಧ್ವರಂ ನಃ ॥**

(ಋ. ಸಂ. ೧೦-೧೧೦-೨)

ಎಂಬ ಋಕ್ಕನ್ನು ಕೊಟ್ಟಿರುವರು. ಈ ಋಕ್ಕೂ ಸಹ ಆಪ್ರೀಸೂಕ್ತದಲ್ಲಿಯೇ ಇರುವುದರಿಂದ ಇದರಲ್ಲಿರುವ ತನೂನಪಾತ್ ಎಂಬ ಶಬ್ದಕ್ಕೆ ಆಜ್ಯವೆಂಬ ಅರ್ಥವು ಯುಕ್ತವೇ ಎಂಬ ಸಂದೇಹಕ್ಕೆ ಅವಕಾಶವಿರುವುದು. ಇನ್ನು ಶಾಕಪೂಣಿಯ ಮತದಂತೆ ತನೂನಪಾತ್ ಎಂದರೆ ಅಗ್ನಿಯು. ಇಲ್ಲಿ ತನು-ಎಂದರೆ ನೀರು. ನೀರು ಮಳೆಯು ರೂಪದಿಂದ ಬಿದ್ದು ಅದರಿಂದ ಓಷಧಿವನಸ್ಪತಿಗಳು ಉತ್ಪನ್ನವಾಗುವವು. ವನಸ್ಪತಿಯಿಂದ (ಅರಣಿ ಎಂಬ ಮರದ ತುಂಡು) ಹುಟ್ಟುವುದರಿಂದ ಅಗ್ನಿಗೆ ತನೂನಪಾತ್ ಎಂದು ಹೆಸರು.

॥ ವ್ಯಾಕರಣಪ್ರಕ್ರಿಯಾ ॥

**ಮಧುಮನ್ತಮ್**—ಫಲಿಪಾಟಿ ನಮಿ ಮನಿ ಜನಾಂ ಗುಕ್ಪಟಿ ನಾಕಿಧತಶ್ಚ, (ಉ. ಸೂ. ೧-೧೮) ಫಲ ನಿಷ್ಪತ್ತೌ, ಪಟ ಗತೌ, ಣಿಜಂತ, ಣಮ ಪ್ರಹ್ವತ್ವೇ ಶಬ್ದೇ, ಮನ ಜ್ಞಾನೇ, ಜನೀ ಪ್ರಾದುರ್ಭಾವೇ. ಈ ಧಾತುಗಳ ಮುಂದೆ ಉ ಪ್ರತ್ಯಯ ಬರುವುದು. ಅದು ನಿತ್ತಾಗುವುದು ಫಲ್ ಎಂಬುದಕ್ಕೆ ಗುಕ್ ಎಂಬ ಆಗಮವೂ ಮಿಕ್ಕವುಗಳಿಗೆ ಯಥಾಕ್ರಮವಾಗಿ ಪಟಿ, ನಾಕಿಧ, ತ ಈ ಆದೇಶಗಳೂ ಬರುವುವು ಎಂದು ಸೂತ್ರಾರ್ಥ, ಏಕಾಪಿ ಷಷ್ಠೀ ವಿಷಯಭೇದಾದ್ಭಿದ್ಯತೇ, ಅಂದರೆ ಷಷ್ಠೀವಿಭಕ್ತಿಪ್ರತ್ಯಯವು ಒಂದೇ ಆದರೂ ವಿಷಯಭೇದದಿಂದ ಬೇರೆ ಬೇರೆ ಅರ್ಥವನ್ನು ಕೊಡುವುದು ಎಂಬ ನ್ಯಾಯದಿಂದ ಗುಗಾಗಮ ವಿಷಯದಲ್ಲಿ ಫಲಿ ಶಬ್ದಾನ್ವಿತವಾದ ಷಷ್ಠಿಯು ಅವಯವಾರ್ಥಕ ಪಟ್ಯಾದ್ಯಾದೇಶಗಳನ್ನು ವಿಧಿಸುವಾಗ ಮಿಕ್ಕ ನಾಲ್ಕರಲ್ಲಿ ಅನ್ವಿತವಾದ ಷಷ್ಠಿಯು ಸ್ಥಾನಷ್ಠೀ, ಅದರಲ್ಲೂ ಧ ತ ಆದೇಶ ವಿಷಯದಲ್ಲಿ ಮನ್ ಜನ್ ಇವುಗಳ ಅಂತ್ಯಕ್ಕೆ ಆದೇಶವನ್ನು ಬೋಧಿಸುವುದು. ಇದರಿಂದ ಮನ ಧಾತುವಿನ ಮುಂದೆ ಉಪ್ರತ್ಯಯ ಬಂದರೆ ಮನ್+ಉ, ನಕಾರಕ್ಕೆ ಧಕಾರಾದೇಶ ಮಧು ಎಂದಾಗುವುದು. ಪ್ರತ್ಯಯವು ನಿತ್ತಾದ್ದರಿಂದ ಮಧುಶಬ್ದವು **ಞ್ನಿತ್ಯಾದಿರ್ನಿತ್ಯಮ್** (ಪಾ, ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತ. **ಧಾನ್ಯೇ ನಿತ್** (ಉ. ಸೂ. ೧-೯) ಎಂಬುದರಿಂದ ನಿತ್, ಎಂಬುದು ಫಲಿಪಾಟಿ ಎಂಬಲ್ಲಿ ಅನುವೃತ್ತವಾಗುವುದು.

**ತನೂನಪಾತ್**—ಇದು ಆಮಂತ್ರಿತ. ಆದ್ದರಿಂದ ಅಷ್ಟಮಿಕವಾದ **ಆಮಂತ್ರಿತಸ್ಯ ಚ** (ಪಾ. ಸೂ. ೧-೧೯) ಎಂಬುದರಿಂದ ಸರ್ವಾನುದಾತ್ತ ಬರುವುದು.

**ಅದ್ಯ**—ಅಸ್ಮಿನ್ ಕಾಲೇ ಎಂದು ವಿಗ್ರಹ. **ಸದ್ಯಃ ಪರುತ್ಪರಾರ್ಯೈಷಮಃ ಪರೇದ್ಯವ್ಯದ್ಯ** (ಪಾ. ಸೂ. ೫-೩-೨೨) ಎಂಬುದರಿಂದ ನಿಪಾತಿತವಾಗಿರುವುದು. ಇದಮೋಽಶ್ ದ್ಯಶ್ಚ, ಅಂದರೆ ಸಪ್ತಮ್ಯಂತವಾದ ಇದಮ್ ಶಬ್ದದ ಮುಂದೆ ದ್ಯ ಎಂಬ ಅಕಾರಾಂತವಾದ ಪ್ರತ್ಯಯ ಬರುವುದು. ಇದಮ್

ಶಬ್ದಕ್ಕೆ ಅಶ್ ಆದೇಶವೂ ಬರುವುದು ಎಂದು ಭಾಷ್ಯವಾಕ್ಯದ ಅರ್ಥ. ಇದರಿಂದ ಸಪ್ತಮ್ಯಂತವಾದ ಇದಮ್ ಶಬ್ದದ ಮುಂದೆ ದ್ಯಪ್ರತ್ಯಯ ಬಂದರೆ ಇದಮ್+ಙಿ+ದ್ಯ, ತದ್ಧಿತಾಂತವಾದ್ದರಿಂದ ಪ್ರಾತಿಪದಿಕಸಂಜ್ಞೆ ಬರುವುದು. **ಸುಪೋಧಾತು ಪ್ರಾತಿಪದಿಕಯೋಃ** ( ಪಾ. ಸೂ. ೨೪-೭೧ ) ಎಂಬುದರಿಂದ ಙಿಪ್ರತ್ಯಯಕ್ಕೆ ಲುಕ್. ಇದಮ್ ಶಬ್ದಕ್ಕೆ ಅಶ್ ಬರುವುದು. ಅದು ಶಿತ್ತಾದ್ದರಿಂದ ಸರ್ವಾದೇಶವಾಗಿ ಬರುವುದು. ಅದ್ಯ ಎಂದಾಗುವುದು. ಇದು ಪ್ರತ್ಯಯಸ್ವರದಿಂದ ಅಂತೋದಾತ್ತ. **ತದ್ಧಿತಶ್ಚಾಸರ್ವವಿಭಕ್ತಿಃ** (ಪಾ. ಸೂ. ೧-೧-೩೮) ಅಸರ್ವವಿಭಕ್ತಿಃ ಎಂಬಲ್ಲಿ ಬಹುವ್ರೀಹಿಸಮಾಸ ಮಾಡಬೇಕು. ಅಲ್ಲಿ ಸರ್ವಾ ವಿಭಕ್ತಯಃ ಯಸ್ಮಾತ್ ನ ಭವನ್ತಿ ಸಃ ಎಂದು ಬಹುವಚನಾಂತ ವಿಗ್ರಹವು ಸಂಭವಿಸುವುದಿಲ್ಲ. ಏಕೆಂದರೆ ಪ್ರಕೃತ ಸೂತ್ರದಲ್ಲಿಯೇ ಮಹಾಭಾಷ್ಯದಲ್ಲಿ **ದ್ವೇಕಯೋರ್ದ್ವಿವಚನೈಕವಚನೇ** (ಪಾ ಸೂ. ೧-೪-೨೨) **ಬಹುಷು ಬಹುವಚನಮ್** (ಪಾ ಸೂ ೧-೪-೨೧) ಎಂಬ ಸೂತ್ರವಿನ್ಯಾಸವನ್ನು ಒಡೆದು ಏಕವಚನಮ್, ದ್ವಯೋರ್ದ್ವಿವಚನಮ್, ಬಹುಷು ಬಹುವಚನಮ್ ಎಂದು ಸೂತ್ರವಿನ್ಯಾಸವನ್ನು ಮಾಡಿ ಏಕವಚನವು ಉತ್ಸರ್ಗವಾಗಿ ಬರುವುದು ದ್ವಿತ್ವ ಬಹುತ್ವ ತೋರಿದಾಗ ದ್ವಿವಚನ ಬಹುವಚನಗಳು ಅದಕ್ಕೆ ಬಾಧಕಗಳಾಗುವುವು ಎಂದು ಪ್ರತಿಪಾದಿತವಾಗಿರುವುದು. ಇಲ್ಲಿ ಏಕವಚನಮ್, ಎಂಬುದಕ್ಕೆ ಙ್ಯಂತಾಬಂತಪ್ರಾತಿಪದಿಕಗಳ ಮುಂದೆ ಏಕವಚನ ಬರುವುದು ಎಂದು ಅರ್ಥವು ಏರ್ಪಡುವುದು. ಈ ಸಾಮಾನ್ಯವಿಧಿಯಿಂದ ದ್ವಿತಬಹುತ್ವಗಳು ತೋರದೇ ಇರುವಾಗ ಏಕವಚನ ಬರುವುದು ಎಂದು ಏರ್ಪಡುವುದು. ಏವಂಚ ದ್ವಿತ್ವಬಹುತ್ವಗಳು ತೋರದೇ ಇರುವಾಗ ಏಕತ್ವವಿದ್ದರೂ, ಏಕತ್ವವಿಲ್ಲದೇ ಇದ್ದರೂ ಏಕವಚನ ಬರುವುದು ಎಂದು ಸಿದ್ಧವಾಗುವುದು. ಇಲ್ಲಿ ದ್ವಿತ್ವಬಹುತ್ವಗಳಲ್ಲಿ ದ್ವಿವಚನ ಬಹುವಚನ ವಿಧಾನಮಾತ್ರದಿಂದಲೇ ದ್ವಿತ್ವಾದಿಗಳು ತೋರದೇ ಇರುವಾಗ ಏಕವಚನವು ಉತ್ಪನ್ನವಾಗುವುದು. ಹೀಗಿರುವಾಗ ಏಕವಚನಮ್, ಎಂಬುದು ವ್ಯರ್ಥವಾಗಿ ಕರ್ಮತ್ವಾದ್ಯರ್ಥಪ್ರತೀತಿ ಇಲ್ಲದೆ ಇದ್ದರೂ ಏಕವಚನವು ಬರುವುದು ಎಂದು ಬೋಧಿಸುವುದು. ಏವಂಚ ಲಿಂಗಸಂಖ್ಯಾನ್ವಯವಿಲ್ಲದೇ ಇರುವ ಅವ್ಯಯಗಳ ಮುಂದೆ ಏಕವಚನವು ಪ್ರವರ್ತಿಸುವಾಗ ವಿನಿಗಮಕವಿಲ್ಲದೇ ಇರುವುದರಿಂದ ಎಲ್ಲಾ ವಿಭಕ್ತಿಯ ಏಕವಚನವೂ ಬರುವುದು. ಆದುದರಿಂದಲೇ ಅವ್ಯಯಾದಾಪ್ಸುಪಃ, ಎಂಬಲ್ಲಿ ಪ್ರತ್ಯಾಹಾರಗ್ರಹಣವು ಸಾರ್ಥಕವಾಗುವುದು. ಈ ರೀತಿಯಾಗಿ ಅವ್ಯಯದ ಮುಂದೆ ಎಲ್ಲಾ ವಿಭಕ್ತಿಗಳೂ ಬರುವುವು. ಆದ್ದರಿಂದ ಸರ್ವಾಃ ವಿಭಕ್ತಯಃ ಯಸ್ಮಾನ್ನ ಭವನ್ತಿ ಎಂದು ಬಹುವಾಚನಾಂತ ವಿಗ್ರಹವನ್ನು ಮಾಡಲು ಸಾಧ್ಯವಿಲ್ಲ. ಆದ್ದರಿಂದ ಸರ್ವಾ ವಚನತ್ರಯಾತ್ಮಿಕಾ ವಿಭಕ್ತಿರ್ಯಸ್ಮಾನ್ನೋತ್ಪದ್ಯತೇ ಕಿಂತು ಏಕವಚನಾನ್ಯೇವೋತ್ಪದ್ಯಂತೇ ಸ ತದ್ಧಿತಾಂತಃ ಅವ್ಯಯಸಂಜ್ಞಕಃ ಭವತಿ ಎಂದು ಫಲಿಸುವುದು. ಏವಂಚ ಯಾವ ತದ್ಧಿತಾಂತದ ಮುಂದೆ ವಚನತ್ರಯಾತ್ಮಕವಾದ ಎಲ್ಲಾ ವಿಭಕ್ತಿಯೂ ಬರುವುದಿಲ್ಲವೋ ಏಕವಚನ ಮಾತ್ರವೇ ಬರುವುದೋ ಆ ತದ್ಧಿತಾಂತವು ಅವ್ಯಯಸಂಜ್ಞೆಯನ್ನು ಹೊಂದುವುದು ಎಂದು ಈ ಸೂತ್ರದ ನಿರ್ಗಳಿತಾರ್ಥ

**ಅದ್ಯ**—ಎಂಬಲ್ಲಿ ಈ ಸೂತ್ರದಿಂದ ಅವ್ಯಯ ಸಂಜ್ಞೆ ಬಂದರೆ ಅದರ ಮುಂದೆ ಬರುವ ಸಪ್ತಮೀ ಏಕವಚನಕ್ಕೆ **ಅವ್ಯಯಾದಾಪ್‌ಸುಪಃ** (ಪಾ. ಸೂ. ೨-೪-೮೨) ಎಂಬುದರಿಂದ **ಲುಕ್** ಬರುವುದು. ಸಂಹಿತಾಕಾಲದಲ್ಲಿ **ಅನ್ಯೇಷಾಮಪಿದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ದೀರ್ಘಬರುವುದು.

**ಕೃಣುಹಿ**—ಕೃವಿ ಹಿಂಸಾಕರಣಯೋಶ್ಚ ಧಾತು. **ಇದಿತೋನುಮ್‌ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮವು ಬರುವುದು. ಕೃನ್‌ವ್ ಎಂದಾಗುವುದು. ಇದರ ಮುಂದೆ **ಲೋಟ್** ಮಧ್ಯಮಪುರುಷ ಏಕವಚನ ಸಿಪ್, ಅದಕ್ಕೆ ಹಿ ಆದೇಶ. ಶಪ್ ವಿಕರಣಕ್ಕೆ ಅಪವಾದವಾಗಿ ಉ ಎಂಬ ವಿಕರಣವು **ಧಿನ್ವಿಕೃಣ್ವ್ಯೋ-**

ರಚ (ಪಾ. ಸೂ. ೩-೧-೮೦) ಧಿನ್ವ್ ಕೃಣ್ವ್ ಇವುಗಳ ಮುಂದೆ ಶಬ್ವಿಷಯದಲ್ಲಿ ಉ ಪ್ರತ್ಯಯವೂ, ಇವುಗಳಿಗೆ ಅಂತಾದೇಶವಾಗಿ ಅಕಾರವೂ ಬರುವುದು ಎಂಬುದರಿಂದ ವಕಾರಕ್ಕೆ ಅಕಾರಾದೇಶವೂ ಬರುವುದು. ಏವಂಚ ಕೃನ + ಉ + ಹಿ ಎಂದಿರುವಾಗ **ಅತೋಲೋಪಃ** ( ಪಾ. ಸೂ. ೬-೪-೪೮ ) ಎಂಬುದರಿಂದ ಅಕಾರಕ್ಕೆ ಲೋಪ. ಈ ಅಕಾರಲೋಪಕ್ಕೆ ಸ್ಥಾನಿವದ್ಭಾವ ಬರುವುದರಿಂದ ಲಘೂಪಧಗುಣ ಬರುವುದಿಲ್ಲ. ಇಲ್ಲಿ **ಉತಶ್ಚ ಪ್ರತ್ಯಯಾದಸಂಯೋಗಪೂರ್ವಾತ್** (ಪಾ. ಸೂ. ೬-೪-೧೦೬) ಎಂಬುದರಿಂದ ಹಿಗೆ ಲುಕ್ ಪ್ರಾಪ್ತವಾಗುವುದು. ಆದರೂ **ಉತಶ್ಚಪ್ರತ್ಯಯಾಚ್ಛಂದೋವಾ ವಚನಮ್** (ಪಾ. ಸೂ. ೬-೪-೧೦೬-೧) **ಉತಶ್ಚ-ಪ್ರತ್ಯಯಾತ್** (ಪಾ. ಸೂ. ೬-೪-೧೮೬) ಎಂದು ವಿಹಿತವಾದ ಹಿ ಲುಕ್ಕು ಛಂದಸ್ಸಿನಲ್ಲಿ ವಿಕಲ್ಪವಾಗಿ ಬರುವುದು ಎಂಬುದರಿಂದ ಹಿಗೆ ಲುಕ್ ಬರುವುದಿಲ್ಲ. ಋವರ್ಣಾನ್ನಸ್ಯ ಣತ್ವಂ ವಾಚ್ಯಮ್, ಎಂಬುದರಿಂದ ನಕಾರಕ್ಕೆ ಣಕಾರ. ಕೃಣುಹಿ ಎಂದಾಗುವುದು. ತಿಙ್ಙತಿಙಃ (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ ಬರುವುದು.

ವೀತಯೇ—**ಮಂತ್ರೇ ವೃಷೇಷಪಚಮನವಿದಭೂವಿರಾ ಉದಾತ್ತಃ** ( ಪಾ. ಸೂ. ೩-೩-೯೬ ) ಎಂಬುದರಿಂದ ಕ್ತಿನ್ ಪ್ರತ್ಯಯವು ಉದಾತ್ತವಾಗಿ ಬರುವುದು. ॥ ೨ ॥

॥ ಸಂಹಿತಾಪಾಠಃ ॥

ನರಾಶಂಸಮಿಹ ಪ್ರಿಯಮಸ್ಮಿನ್ಯಜ್ಞ ಉಪ ಹ್ವಯೇ ।
ಮಧುಜಿಹ್ವಂ ಹವಿಷ್ಕೃತಂ ॥ ೩ ॥

॥ ಪದಪಾಠಃ ॥

ನರಾಶಂಸಂ । ಇಹ । ಪ್ರಿಯಂ । ಅಸ್ಮಿನ್ । ಯಜ್ಞೇ । ಉಪ । ಹ್ವಯೇ ॥
ಮಧುಽಜಿಹ್ವಂ । ಹವಿಃಽಕೃತಂ ॥ ೩ ॥

॥ ಸಾಯಣಭಾಷ್ಯಂ ॥

ಇಹ ದೇವಯಜನದೇಶೇಽಸ್ಮಿನ್ಪ್ರವರ್ತಮಾನೇ ಯಜ್ಞೇ ನರಾಶಂಸನಾಮಕಮಗ್ನಿಮುಪಹ್ವಯೇ । ಆಹ್ವಯಾಮಿ । ಕೀದೃಶಂ । ಪ್ರಿಯಂ ದೇವಾನಾಂ ಪ್ರೀತಿಹೇತುಂ ಮಧುಜಿಹ್ವಂ ಮಧುರಭಾಷಿಜಿಹ್ವೋಪೇತಂ ಮಾಧುರ್ಯರಸಾಸ್ವಾದಕಜಿಹ್ವೋಪೇತಂ ವಾ ಹವಿಷ್ಕೃತಂ ಹವಿಷೋ ನಿಷ್ಪಾದಕಂ ॥ ನರಶಬ್ದೋ ನೄ ನಯ ಇತ್ಯಸ್ಮಾದಬಂತಃ । ಪ್ರತ್ಯಯಸ್ಯ ಪಿತ್ತ್ವಾದ್ಧಾತುಸ್ವರ ಏವ ಶಿಷ್ಯತೇ । ಶಂಸಂತ್ಯಸ್ಮಿನ್ನಿತಿ ಶಂಸಃ । ಹಲಶ್ಚ । ಪಾ. ೩-೩-೧೨೧ । ಇತ್ಯಧಿಕರಣೇ ಘಞ್ । ನರಾಣಾಂ ಶಂಸ ಇತಿ ಸಮಾಸೇ

ಕೃದುತ್ತರಪದಪ್ರಕೃತಿಸ್ವರತ್ವೇ ಪ್ರಾಪ್ತೇ ಉಭೇ ವನಸ್ಪತ್ಯಾದಿಷು ಯುಗಪತ್ । ಪಾ. ೬.೨.೧೪೦ । ಇತಿ ಪೂರ್ವೋತ್ತರಪದೇ ಪ್ರಕೃತಿಸ್ವರೇ ಭವತಃ । ಅತ ಏವ ವನಸ್ಪತ್ಯಾದಿಷು ಪಾಠಾನ್ನರಶಬ್ದಸ್ಯ ದೀರ್ಘತ್ವಂ। ಇಹ । ಇದಮೋ ಹ ಇತಿ ಹಪ್ರತ್ಯಯಃ । ಇದಮ ಇಶಿತೀಶಾದೇಶಃ । ಪ್ರತ್ಯಯಸ್ವರಃ । ಪ್ರಿಯಂ । ಪ್ರೀಣಾತೀತಿ ಪ್ರಿಯಃ । ಇಗುಪಧಜ್ಞಾಪ್ರೀಕಿರಃ ಕ ಇತಿ ಕಃ । ಪ್ರತ್ಯಯಸ್ವರಃ । ಅಸ್ಮಿನ್ । ಊಡಿದ-ಮಿತ್ಯಾದಿನಾ ವಿಭಕ್ತೇರುದಾತ್ತತ್ವಂ । ಹ್ವಯೇ । ನಿಘಾತಃ । ಮಧುಜಿಹ್ವಂ । ಮಧುಶಬ್ದಸ್ಯಾದ್ಯುದಾತ್ತ-ತ್ವಮುಕ್ತಂ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರೇಣ ಸ ಏವ ಶಿಷ್ಯತೇ । ಹವಿಷ್ಕೃತಂ । ಹವಿಃ ಕರೋತೀತಿ ಹವಿಷ್ಕೃತ್ । ಕ್ವಿಪಿ ಹ್ರಸ್ವಸ್ಯ ತುಕ್ । ನಿತ್ಯಂ ಸಮಾಸೇಽನುತ್ತರಪದಸ್ಥಸ್ಯೇತಿ ಷತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

ಇಹ—ಈ ಯಜ್ಞಪ್ರದೇಶದಲ್ಲಿ । ಅಸ್ಮಿನ್ ಯಜ್ಞೇ—ನಾವು ಮಾಡುತ್ತಿರುವ ಈ ಯಜ್ಞದಲ್ಲಿ । ಪ್ರಿಯಂ—ದೇವತೆಗಳಿಗೆ ಪ್ರೀತಿಪಾತ್ರನಾದ । ಮಧುಜಿಹ್ವಂ—ಮಧುರವಾದ (ಒಳ್ಳೆಯ) ಮಾತನ್ನಾಡುವ ಅಥವಾ ಮಾಧುರ್ಯರಸವನ್ನು ಆಸ್ವಾದನೆ ಮಾಡುವ ಜಿಹ್ವೆಯುಳ್ಳ । ಹವಿಷ್ಕೃತಂ—ಹವಿಸ್ಸನ್ನು (ಪಚನ) ಮಾಡುವ । ನರಾಶಂಸಂ—ನರಾಶಂಸನೆಂಬ ಹೆಸರಿನಿಂದ ಕರೆಯಲ್ಪಡುವ ಅಗ್ನಿಯನ್ನು । ಉಪಹ್ವಯೇ—ಆಹ್ವಾನಮಾಡುವೆನು ॥

॥ ಭಾವಾರ್ಥ ॥

ನರಾಶಂಸನೆಂದು ಹೇಳಲ್ಪಡುವ ಎಲೈ ಅಗ್ನಿಯೇ- ನೀನು ದೇವತೆಗಳಿಗೆ ಪ್ರಿಯನಾದವನು. ಮಧುರವಾಗಿ ಮಾತನಾಡುವವನು ಅಥವಾ ಮಾಧುರ್ಯಯುಕ್ತವಾದ ಹವಿಸ್ಸನ್ನು ಆಸ್ವಾದನೆ ಮಾಡುವವನು, ಹವಿಸ್ಸನ್ನು ಪಚನಮಾಡಿ ಸಿದ್ಧಪಡಿಸುವವನು. ಇಂತಹ ನರಾಶಂಸನನ್ನು ಈಗ ನಾವು ಮಾಡುತ್ತಿರುವ ಯಜ್ಞದಲ್ಲಿ ಆಹ್ವಾನ ಮಾಡುವೆನು.

## English Translation

I invoke here at this sacrifice Narasamsa, the beloved one, the sweet-tongoned, preparer of sacrifcial food.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ದೇವತೆಯು ನರಾಶಂಸನು ಎಂದರೆ ಆ ಹೆಸರಿನಿಂದ ಕರೆಯಲ್ಪಡುವ ಅಗ್ನಿಯು. ಯಾಸ್ಕರ ಅರ್ಥವಿವರಣೆಯು ಈರೀತಿ ಇರುವುದು—

(೧) ನರಾಶಂಸಃ । ನರಾಶಂಸೋ ಯಜ್ಞ ಇತಿ ಕಾತ್ಥಕ್ಯಃ । ನರಾ ಅಸ್ಮಿನ್ನಾಸೀನಾಃ ಶಂಸಂತಿ ॥

**(೨) ಅಗ್ನಿರಿತಿ ಶಾಕಪೂಣಿಃ । ನರೈಃ ಪ್ರಶಸ್ಯೋ ಭವತಿ ॥**

ನರಾಶಂಸ ಶಬ್ದಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಿರುವರು. (೧) ನರಾಶಂಸವೆಂದರೆ ಯಜ್ಞವು. ಈ ಯಜ್ಞದಲ್ಲಿ ಕುಳಿತು ನರಾಃ ಎಂದರೆ ಮನುಷ್ಯರು (ಅಗ್ನಿಯನ್ನು ಅಥವಾ ದೇವತೆಯನ್ನು) ಶಂಸನ (ಸ್ತುತಿ) ಮಾಡುವುದರಿಂದ ಈ ಕರ್ಮಕ್ಕೆ ಯಜ್ಞವೆಂದು ಹೆಸರು. ಇದು ಕಾತ್ಥಕ್ಯರ ಮತವು. (೨) ನರರಿಂದ ಎಂದರೆ ಮನುಷ್ಯರಿಂದ ಸ್ತುತಿಸಲ್ಪಡುವವನಾದುದರಿಂದ ನರಾಶಂಸನೆಂದರೆ ಅಗ್ನಿಯೆಂದು ಹೆಸರು. ಇದು ಶಾಕಪೂಣಿಯ ಮತವು. ಈ ಎರಡನೆಯ ಅರ್ಥವಿವರಣೆಯೇ ಇಲ್ಲಿ ಯುಕ್ತವಾಗಿರುವುದು ಸ್ಕಂದಸ್ವಾಮಿಯೂ—**ನರೈಃ ಪ್ರಶಸ್ಯತೆ ಇತಿ ನರಾಶಂಸೋಽಗ್ನಿಃ ತಂ ನರಾಶಂಸಂ** ॥ ಮನುಷ್ಯರಿಂದ ಸ್ತುತಿಸಲ್ಪಡುವವನಾದ್ದರಿಂದ ಅಗ್ನಿಗೆ ನರಾಶಂಸನೆಂದು ಹೆಸರು ಎಂದು ಹೇಳಿರುವರು

**ಪ್ರಿಯಂ**—ಭಾಷ್ಯಕಾರರು **ದೇವಾನಾಂ ಪ್ರಿಯಂ** ದೇವತೆಗಳಿಗೆ ಪ್ರಿಯನಾದವನು ಎಂದೂ ಸ್ಕಂದ ಸ್ವಾಮಿಯು, **ಮನುಷ್ಯಾಣಾಂ ಪ್ರಿಯಂ** ಮನುಷ್ಯರಿಗೆ ಪ್ರಿಯನಾದವನು ಎಂದೂ ಅರ್ಥಮಾಡಿರುವರು. ಎರಡು ವಿಧವಾದ ಅರ್ಥವೂ ಸಮಂಜಸವಾಗಿರುವುದು.

**ಮಧುಜಿಹ್ವಂ—ಮಧುರಭಾಷಿಜಿಹ್ವೋಪೇತಂ**—ಮಧುರವಾಗಿ ಮಾತನಾಡುವ ನಾಲಗೆಯುಳ್ಳವನು **ಮಾಧುರ್ಯರಸಾಸ್ವಾದಕಜಿಹ್ವೋಪೇತಂ**—ಮಧುರವಾದ ರಸವನ್ನು (ಹವಿಸ್ಸು, ಆಜ್ಯ ಮುಂತಾದ ಹೋಮ ದ್ರವ್ಯಗಳು) ಆಸ್ವಾದನೆ ಮಾಡುವ ಜಿಹ್ವೆಯುಳ್ಳವನು ಎಂದು ಭಾಷ್ಯಕಾರರು ಅರ್ಥವಿವರಣೆ ಮಾಡಿರುವರು. ಸ್ಕಂದಸ್ವಾಮಿಯು—**ಮಧುಜಿಹ್ವಃ= ನಿತ್ಯಮೃಷ್ಟಾನಾಂ ಹವಿಷಾಂ ಭಕ್ಷಯಿತಾ,** ನಿತ್ಯವೂ ರುಚಿಯಾದ ಅಥವಾ ಮಧುರವಾದ ಹವಿಸ್ಸನ್ನು ಭಕ್ಷಿಸುವವನು; ಅಥವಾ **ಜಿಹ್ವೇತಿ ವಾಙ್ನಾಮ ಮಧ್ವೀ ಜಿಹ್ವಾ ಯಸ್ಯ ಸ ಮಧುಜಿಹ್ವಃ । ಹೋತೃತ್ವಾದ್ಧ್ಯಗ್ನೇರ್ದೇವತಾನಾಂ ಸ್ತಾವಕತ್ವಾದಸ್ತಿ ಮಧುವಾಕ್ತ್ವಂ । ಸುಭಗವಚನ ಮಿತ್ಯರ್ಥಃ** ॥ ಎಂದರೆ ಜುಹ್ವಾ ಎಂದರೆ ವಾಕ್ಯ, ಮಾತು, ಆದುದರಿಂದ ಮಧುಜಿಹ್ವಃ ಎಂದರೆ ಒಳ್ಳೆಯ ಮಾತು ಗಳನ್ನಾಡುವವನು. ಕರ್ಣಾನಂದವನ್ನುಂಟುಮಾಡುವ ಮಾತನ್ನಾಡುವವನು. ದೇವತೆಗಳನ್ನು ಆಹ್ವಾನ ಮಾಡು ವಾಗ ಅವರನ್ನುದ್ದೇಶಿಸಿ ಮಧುರ ವಾಕ್ಯಗಳನ್ನಾಡುವವನಾದುದರಿಂದ ಮಧುಜಿಹ್ವ ಎಂದು ಅಗ್ನಿಗೆ ಹೆಸರು ಎಂದು ಭಾಷ್ಯಕಾರರು ಹೇಳಿರುವ ಎರಡು ವಿಧವಾದ ಅರ್ಥವಿವರಣೆಯನ್ನೇ ಪ್ರಕಾರಾಂತರವಾಗಿ ಹೇಳಿರು ವರು. Honey-tongoned, sweet-longoned ಮೊದಲಾದ ಅರ್ಥಗಳನ್ನು ಹೇಳಬಹುದು.

**ಹವಿಷ್ಕೃತಂ—ಹವಿಷೋ ನಿಷ್ಪಾದಂ, ಹವಿಷಾಂ ಕರ್ತಾರಂ** ಹವಿಸ್ಸನ್ನು ಮಾಡುವವನು, ಸಿದ್ಧ ಪಡಿಸುವವನು. ಎಂದರೆ ಹವಿಸ್ಸನ್ನು ಮಾಡುವಾಗ ಅಗ್ನಿಯ ಮೇಲಿಟ್ಟು ಪಾಕಮಾಡಬೇಕಾಗುವುದರಿಂದ ಅಗ್ನಿಯು ಹವಿಸ್ಸನ್ನು ಮಾಡುವವನೆಂದು ಹೇಳಿರುವುದು. Preparer of sacrifical food

॥ ವ್ಯಾಕರಣಪ್ರಕ್ರಿಯಾ ॥

**ನರಾಶಂಸಂ**—ನ್ಯಾ ನಯೇ ಧಾತು **ಋದೋರಪ್** (ಪಾ. ಸೂ. ೩-೩-೫೭) ಋಕಾರಾಂತ ಅಥವಾ ಉಕಾರಾಂತವಾದ ಧಾತುಗಳ ಮುಂದೆ ಭಾವಾರ್ಥದಲ್ಲಿಯೂ ಕರ್ತೃಭಿನ್ನವಾದ ಕಾರಕವನ್ನು ಹೇಳುವಾಗಲೂ ಅಪ್ ಪ್ರತ್ಯಯ ಬರುವುದು ಎಂಬುದರಿಂದ ಅಪ್ ಪ್ರತ್ಯಯವು ನ್ಯಾ ಧಾತುವಿನ ಮುಂದೆ ಬರುವುದು. ನ್ಯಾ+ಅ ಗಣವು

ರಪರವಾಗಿ ಬರುವುದು ನರ ಎಂದಾಗುವುದು. ಪ್ರತ್ಯಯವು ಪಿತ್ತಾದ್ದರಿಂದ ಅನುದಾತ್ತ. ನಕಾರದ ಮುಂದೆ ಇರುವ ಅಕಾರವು ಧಾತುಸ್ವರದಿಂದ ಉದಾತ್ತವಾಗಿಯೇ ನಿಲ್ಲುವುದು. ಶಂಸನ್ತಿ ಅಸ್ಮಿನ್ ಇತಿ ಶಂಸಃ **ಹಲಶ್ಚ** (ಪಾ. ಸೂ. ೩-೩-೧೨೧) ಹಲಂತವಾದ ಧಾತುವಿನ ಮುಂದೆ ಘಞ್ ಪ್ರತ್ಯಯ ಬರುವುದು ಎಂಬುದರಿಂದ ಅಧಿಕರಣಾರ್ಥದಲ್ಲಿ ಶಂಸ್ ಧಾತುವಿನ ಮುಂದೆ ಘಞ್ ಪ್ರತ್ಯಯ ಬರುವುದು. ಶಂಸ ಎಂಬುದು **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತ. ನರಾಣಾಂ ಶಂಸಃ ಎಂದು ಸಮಾಸ ಮಾಡಿದರೆ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರವು ಪ್ರಾಪ್ತವಾದರೆ ಅದನ್ನು ಬಾಧಿಸಿ **ಥಾಥಘಞ್ಕ್ತಾಜಬಿತ್ರಕಾಣಾಂ** (ಪಾ.ಸೂ. ೬-೨-೧೪೪) ಎಂಬುದರಿಂದ ಉತ್ತರಪದಕ್ಕೆ ಅಂತೋದಾತ್ತವು ಪ್ರಾಪ್ತವಾಗುವುದು. ಇದನ್ನು ಬಾಧಿಸಿ ನರಾಶಂಸಶಬ್ದವು ವನಸ್ಪತ್ಯಾದಿಗಣದಲ್ಲಿ ಪಠಿತವಾಗಿರುವುದರಿಂದ **ಉಭೇವನಸ್ಪತ್ಯಾದಿಷು ಯುಗಪತ್** (ಪಾ. ಸೂ. ೬-೨-೧೪೦) ಈ ಗಣಪಠಿತವಾದ ಶಬ್ದಗಳಲ್ಲಿರುವ ಪೂರ್ವೋತ್ತರಪದಗಳು ಯುಗಪತ್ ಪ್ರಕೃತಿಸ್ವರವನ್ನು ಹೊಂದುವುವು ಎಂಬುದರಿಂದ ಪೂರ್ವೋತ್ತರಪದಗಳೆರಡಕ್ಕೂ ಏಕಕಾಲದಲ್ಲಿ ಪ್ರಕೃತಿಸ್ವರ ಬರುವುದು. ಈ ವನಸ್ಪತ್ಯಾದಿಗಣದಲ್ಲಿ ನರಾಶಂಸ ಎಂದು ದೀರ್ಘವಾಗಿ ನರಶಬ್ದವನ್ನು ಪಾಠಮಾಡಿರುವುದರಿಂದ ನರಶಬ್ದಕ್ಕೆ ದೀರ್ಘ ಬರುವುದು. ಕೌಮುದೀಕಾರರೂ ಸಹ ಇದೇ ರೀತಿಯಲ್ಲಿ ನಿಪಾತನದಿಂದ ದೀರ್ಘವನ್ನು ಉಪಪಾದಿಸಿರುವರು. ಕೆಲವರು **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ಪೂರ್ವಪದಕ್ಕೆ ದೀರ್ಘ ಬರುವುದು ಎಂದು ಉಪಪಾದಿಸುವರು.

**ಇಹ ಇದಮೋ ಹಃ** (ಪಾ. ಸೂ. ೫-೩-೧೧) ಸಪ್ತಮ್ಯಂತವಾದ ಇದಂ ಶಬ್ದದ ಮುಂದೆ ಹ ಪ್ರತ್ಯಯ ಬರುವುದು ಎಂಬುದರಿಂದ ಇದಂ ಙಿ ಎಂಬುದರ ಮುಂದೆ ಹ ಪ್ರತ್ಯಯ. ಙಿಗೆ ಲುಕ್. **ಇದಮ ಇಶ್** (ಪಾ.ಸೂ. ೫-೩-೩) ಎಂಬುದರಿಂದ ಇದಂ ಶಬ್ದಕ್ಕೆ ಇಶ್ ಆದೇಶ ಬರುವುದು. ಇಹ ಎಂದಾಗುವುದು. ಪ್ರತ್ಯಯಸ್ವರ ಬರುವುದು

**ಪ್ರಿಯಂ**—ಪ್ರೀಣಾತಿ ಇತಿ ಪ್ರಿಯಃ **ಇಗುಪಧಜ್ಞಾಪ್ರೀಕಿರಃಕಃ** (ಪಾ.ಸೂ. ೩-೧-೧೩೫) ಇಗುಪಧಕವಾದ ಧಾತು. ಜ್ಞಾ ಅವಬೋಧನೇ, ಪ್ರೀಞ್ ತರ್ಪಣೇ, ಕೄ ವಿಕ್ಷೇಪೇ ಈ ಧಾತುಗಳು ಇವುಗಳ ಮುಂದೆ ಕ ಪ್ರತ್ಯಯ ಬರುವುದು ಎಂಬುದರಿಂದ ಪ್ರೀಞ್ ತರ್ಪಣೇ ಎಂಬುದರ ಮುಂದೆ ಕ ಪ್ರತ್ಯಯ. ಪ್ರತ್ಯಯವು ಕಿತ್ತಾದ್ದರಿಂದ ಗುಣ ಬರುವುದಿಲ್ಲ. **ಅಚಿಶ್ನುಧಾತುಭ್ರುವಾಂಯ್ವೋರಿಯಙುವಙೌ** (ಪಾ. ಸೂ. ೬-೪-೭೭) ಎಂಬುದರಿಂದ ಇಯಙ್ ಆದೇಶ ಬಂದರೆ ಪ್ರಿಯ ಎಂದಾಗುವುದು. ಪ್ರತ್ಯಯಸ್ವರ ಬರುವುದು ಅಸ್ಮಿನ್ **ಊಡಿದಂಪದಾದ್ಯಪ್ಪುಮ್ರೈದ್ಯುಭ್ಯಃ** (ಪಾ. ಸೂ. ೬-೧-೭೧) ವಿಭಕ್ತಿಯು ಉದಾತ್ತ.

**ಹ್ವಯೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಞಿತ್ತಾದ್ದರಿಂದ ಉಭಯಪದಿಯು. ಆತ್ಮನೇಪದ ಲಟ್ ಉತ್ತಮಪುರುಷ ಏಕವಚನ ಇಟ್. **ಟಿತ ಆತ್ಮನೇ ಪದಾನಾಂ ಟೇರೇ** ( ಪಾ. ಸೂ. ೩-೪-೭೯ ) ಎಂಬುದರಿಂದ ಇಗೆ ಏಕಾರ. **ಕರ್ತರಿಶಪ್** ಎಂಬುದರಿಂದ ಪರರೂಪ. ಹ್ವಯೇ ಎಂದಾಗುವುದು **ತಿಙ್ಙತಿಙಃ** ಎಂಬುದರಿಂದ ಸರ್ವಾನುದಾತ್ತ.

**ಮಧುಜಿಹ್ವಂ**—ಮಧುಶಬ್ದವು ಆದ್ಯುದಾತ್ತವೆಂದು ಹಿಂದಿನ ಮಂತ್ರದಲ್ಲಿ ಹೇಳಲಾಗಿರುವುದು. ಮಧು ಜಿಹ್ವಾ ಯಸ್ಯ ಸಃ ಎಂದು ಬಹುವ್ರೀಹಿಸಮಾಸವನ್ನು ಮಾಡಬೇಕು. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬಂದು ಅದೇ ಸ್ವರ ನಿಲ್ಲುವುದು.

ಹವಿಷ್ಕೃತಂ—ಹವಿಃಕರೋತಿ ಎಂದು ವಿಗ್ರಹ. ಹವಿಶ್ಶಬ್ದೋಪಪದಕವಾದ ಕೃಞ್ ಧಾತು ವಿನ ಮುಂದೆ ಕ್ವಿಪ್‌ಚ ( ಪಾ. ಸೂ- ೩-೨-೭೬ ) ಎಂಬುದರಿಂದ ಕ್ವಿಪ್ ಬರುವುದು. ಕೃದಂತವಾದ್ದ ರಿಂದ ಪ್ರಾತಿಪದಿಕಸಂಜ್ಞೆ ಬರುವುದು. ಸುಪ್ಪಿಗೆ ಲುಕ್ ಕ್ವಿಪ್ಪಿಗೆ ಲೋಪ. ಹವಿಸ್+ಕೃ ಎಂಬುದರ ಮುಂದೆ ಹ್ರಸ್ವಸ್ಯ ಪಿತಿಕೃತಿತುಕ್ (ಪಾ. ಸೂ. ೬-೧-೭೧) ಪಕಾರೇತ್ಸಂಜ್ಞಕವಾದ ಕೃತ್ತು ಪರದಲ್ಲಿರುವಾಗ ಹ್ರಸ್ವಾಂ-ತವಾದ ಶಬ್ದಕ್ಕೆ ತುಕ್ ಆಗಮ ಬರುವುದು ಎಂಬುದರಿಂದ ತುಗಾಗಮವು. ಆದ್ಯಂತೌ ಟಕಿತೌ ಎಂಬ ಪರಿಭಾಷಾ-ಪರ್ಯಾಲೋಚನೆಯಿಂದ ಅಂತಾವಯವವಾಗಿ ಬರುವುದು. ಹವಿಸ್+ಕೃತ್. ಸಕಾರಕ್ಕೆ ರುತ್ವ ವಿಸರ್ಗಗಳು. ಹವಿಃ ಕೃತ್ ಎಂದಿರುವಾಗ ನಿತ್ಯಂ ಸಮಾಸೇಽನುತ್ತರಪದಸ್ಥಸ್ಯ (ಪಾ.ಸೂ. ೮-೩-೪೫) ಎಂಬುದರಿಂದ ವಿಸರ್ಗಕ್ಕೆ ಷಕಾರ ಬರುವುದು. ಹವಿಷ್ಕೃತ್ ಎಂದಾಗುವುದು. ಗತಿಕಾರಕೋಪಪದಾತ್ಕೃತ್ (ಪಾ. ಸೂ. ೬-೨ ೧೩೯) ಎಂಬುದ ರಿಂದ ಕೃದುತ್ತರಪದಪ್ರಕೃತಿಸ್ವರ ಅಂತೋದಾತ್ತ ಬರುವುದು. ಕೃತ್ ಎಂಬ ಉತ್ತರಪದವು ಧಾತುಸ್ವರದಿಂದ ಅಂತೋದಾತ್ತ. ಇದರ ಮುಂದೆ ಅಮ್ ಪ್ರತ್ಯಯ. ಅದು ಸುಪ್ಪಾದ್ದರಿಂದ ಅನುದಾತ್ತ. ನಂತರ ಉದಾತ್ತಾ-ದನುದಾತ್ತಸ್ಯ ಸ್ವರಿತಃ ಎಂಬುದರಿಂದ ಸ್ವರಿತಸ್ವರ ಬರುವುದು. ॥ ೩ ॥

॥ ಸಂಹಿತಾಪಾಠಃ ॥

ಅಗ್ನೇ ಸುಖತಮೇ ರಥೇ ದೇವಾ ಈಳಿತ ಆ ವಹ ।
ಅಸಿ ಹೋತಾ ಮನುರ್ಹಿತಃ ॥ ೪ ॥

॥ ಪದಪಾಠಃ ॥

ಅಗ್ನೇ । ಸುಖಽತಮೇ । ರಥೇ । ದೇವಾನ್ । ಈಳಿತಃ । ಆ । ವಹ ।
ಅಸಿ । ಹೋತಾ ।। ಮನುಃಽಹಿತಃ ॥ ೪ ॥

॥ ಸಾಯಣಭಾಷ್ಯಂ ॥

ಇಟ್‌ಶಬ್ದಾಭಿಧೇಯ ಹೇ ಅಗ್ನೇ ಈಳಿತೋಽಸ್ಮಾಭಿಃ ಸ್ತುತಃ ಸನ್ ಸುಖತಮೇಽತಿಶಯೇನ ಸುಖಹೇತೌ ಕಸ್ಮಿಂಶ್ಚಿದ್ರಥೇ ದೇವಾನ್ ಸ್ಥಾಪಯಿತ್ವಾ ಕರ್ಮಭೂಮಾವಾ ವಹ। ಇಟ್‌ಶಬ್ದಾಭಿಧೇಯತ್ವ-ಮತ್ರ ಸೂಚಯಿತುಮೀಳಿತ ಇತಿ ವಿಶೇಷಣಂ । ಮನುರ್ಹಿತೋ ಮನುನಾ ಮಂತ್ರೇಣ ಮನುಷ್ಯೇಣ ವಾ ಯಜಮಾನಾದಿರೂಪೇಣ ಹಿತೋಽತ್ರ ಸ್ಥಾಪಿತಸ್ತ್ವಂ ಹೋತಾ ದೇವಾನಾಮಾಹ್ವಾತಾಸಿ ॥ ಸುಖ-ತಮೇ । ಸುಖಮಸ್ಮಿನ್ನಸ್ತೀತಿ ಮತುಪ್ । ತಸ್ಯ ಗುಣವಚನೇಭ್ಯೋ ಮತುಪೋ ಲುಗ್ವಕ್ತವ್ಯಃ । ಪಾ. ೫-೨-೯೪-೩ । ಇತಿ ಲುಕ್ । ಅತಿಶಯೇನ ಸುಖಃ ಸುಖತಮಃ । ತಮಪೋಽನುದಾತ್ತತ್ವಾತ್ಪ್ರಾತಿಪದಿಕ-

ಸ್ವರಃ । ರಥೇ । ರಮುಕ್ರೀಡಾಯಾಂ । ರಮಂತೇಽಸ್ಮಿನ್ನಿತಿ ರಥಃ । ಹನಿಕುಷಿನೀರಮಿಕಾಶಿಭ್ಯಃ ಕ್ಥನ್ । ಉ. ೨-೨ । ಇತಿ ಕ್ಥನ್ । ಏಕಾಚ ಉಪದೇಶೇಽನುದಾತ್ತಾತ್ । ಪಾ. ೭-೨-೧೦ । ಇತೀಟ್ಪ್ರತಿಷೇಧಃ । ಅನುದಾತ್ತೋಪದೇಶೇತ್ಯಾದಿನಾ । ಪಾ. ೬-೪-೩೭ । ಮಕಾರಲೋಪಃ । ನಿತ್ತ್ವಾದಾದ್ಯುದಾತ್ತತ್ವಂ । ಈಳಿತಃ । ಈಡ ಸ್ತುತೌ । ನಿಷ್ಠೇತಿ ಕ್ತಃ । ಇಡಾಗಮಃ । ತಸ್ಯಾಗಮಾ ಅನುದಾತ್ತಾ ಇತ್ಯನುದಾತ್ತಃ। ಪ್ರತ್ಯಯಸ್ವರಃ । ದೇವಾನಿತಿ ನಕಾರಸ್ಯ ಸಂಹಿತಾಯಾಂ ದೀರ್ಘಾದಟಿ ಸಮಾನಪಾದ ಇತಿ ರುತ್ವಂ । ಆತೋಽಟಿ ನಿತ್ಯಮಿತ್ಯಾಕಾರಸ್ಯಾನುನಾಸಿಕಭಾವಃ । ಭೋಭಗೋ ಇತ್ಯಾದಿನಾ ರೋರ್ಯತ್ವಂ । ತಸ್ಯ ಲೋಪಃ ಶಾಕಲ್ಯಸ್ಯೇತಿ ಲೋಪಃ । ತಸ್ಯಾಸಿದ್ಧತ್ವಾದಾದ್ಗುಣೋ ನ ಭವತಿ । ಆ । ನಿಪಾತತ್ವಾದಾದ್ಯುದಾತ್ತಃ । ಅಸಿ । ಅಸ ಭುವಿ । ಲಟಃ ಸಿಪ್ । ಅದಿಪ್ರಭೃತಿಭ್ಯಃ ಶಪ ಇತಿ ಶಪೋ ಲುಕ್ । ತಾಸಸ್ತ್ಯೋರ್ಲೋಪ ಇತಿ ಸಕಾರಸ್ಯ ಲೋಪಃ । ಹೋತಾ । ತಾಚ್ಛೀಲ್ಯೇ ತೃನ್ । ಸೌ ಋದುಶನ ಇತ್ಯಾದಿನಾ । ಪಾ. ೭-೧-೯೪ । ಅನಙ್ । ಋತ್ವ್ತಾದಂತಾದೇಶಃ ಅಪ್ತೃನ್ನಿತ್ಯಾದಿನಾ । ಪಾ. ೬-೪-೧೧ । ಉಪಧಾದೀರ್ಘಃ । ಹಲ್ಙ್ಯಾದಿ ಲೋಪನಲೋಪೌ । ನಿತ್ತ್ವಾದಾದ್ಯುದಾತ್ತಃ । ಮನುರ್ಹಿತಃ । ಮನ್ಯತೆ ಇತಿ ಮನುಃ । ಮನ ಜ್ಞಾನೇ । ಶೃಸ್ವೃಸ್ನಿಹಿತ್ರಪ್ಯಸಿವಸಿಹನಿಕ್ಲಿದಿಬಂಧಿಮನಿಭ್ಯಶ್ಚ । ಉ ೧-೧೦ । ಇತ್ಯುಪ್ರತ್ಯಯಃ । ತತ್ರ ನಿದಿತ್ಯನುವೃತ್ತೇರ್ನಿತ್ತ್ವಾದಾದ್ಯುದಾತ್ತಃ । ಹಿತಃ । ದಧಾತೇರ್ನಿಷ್ಠೇತಿ ಕರ್ಮಣಿ ಕ್ತಃ । ದಧಾತೇರ್ಹಿಃ। ಪಾ. ೭-೪-೪೨ । ಇತಿ ಹಿರಾದೇಶಃ । ಮನುನಾ ಹಿತ ಇತಿ ಸಮಾಸೇ ತೃತೀಯಾಯಾಃ ಸ್ಥಾನೇ ಸುಪಾಂ ಸುಲುಗಿತ್ಯಾದಿನಾ ಸ್ವಿತ್ಯಾದೇಶಃ । ತಸ್ಯ ರುತ್ವಂ । ಲುಗಭಾವಶ್ಛಾಂದಸಃ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

(ಹೇ) ಅಗ್ನೇ—ಇಟ್ ಎಂಬ ಹೆಸರಿನಿಂದ ಕರೆಯಲ್ಪಡುವ ಎಲೈ ಅಗ್ನಿಯೇ । ಈಳಿತಃ—ನಮ್ಮಿಂದ ಸ್ತುತಿಸಲ್ಪಡುವವನಾಗಿ । ದೇವಾನ್—ದೇವತೆಗಳನ್ನು । ಸುಖತಮೇ-ಅತಿಶಯ ಸೌಖ್ಯಹೇತುವಾದ । ರಥೇ—ರಥದಲ್ಲಿ ಕುಳ್ಳಿರಿಸಿಕೊಂಡು । ಆ ವಹ—ಇಲ್ಲಿಗೆ ಕರೆದುಕೊಂಡು ಬಾ । (ಏಕೆಂದರೆ ನೀನು) ಮನುರ್ಹಿತಃ—ಮಂತ್ರದಿಂದ ಅಥವಾ ಯಜಮಾನ ರೂಪದಿಂದಿರುವ ಮನುಷ್ಯನಿಂದ ಸ್ಥಾಪಿಸಲ್ಪಟ್ಟ । ಹೋತಾ—ದೇವತೆಗಳನ್ನು ಆಹ್ವಾನ ಮಾಡುವವನಾಗಿ । ಅಸಿ—ಇರುವೆ ॥

॥ ಭಾವಾರ್ಥ ॥

ಎಲೈ ಅಗ್ನಿಯೇ ನಿನ್ನನ್ನು ಇಟ್ (ಇಳ) ಎಂದು ಕರೆಯುವರು. ಏತಕ್ಕೆಂದರೆ ನೀನು ನಮ್ಮಿಂದ (ಮನುಷ್ಯರಿಂದ) ಸ್ತುತಿಸಲ್ಪಡುವವನು. ಇಂತಹ ನೀನು ದೇವತೆಗಳನ್ನು ಸುಖವನ್ನುಂಟುಮಾಡುವ ರಥದಲ್ಲಿ ಕುಳ್ಳಿರಿಸಿಕೊಂಡು ಇಲ್ಲಿಗೆ ಕರೆದುಕೊಂಡು ಬಾ. ಏತಕ್ಕೆಂದರೆ ನಿನ್ನನ್ನು ಯಜಮಾನನು ದೇವತೆಗಳನ್ನು ಆಹ್ವಾನ ಮಾಡಲು ಹೋತೃವನ್ನಾಗಿ ಸ್ಥಾಪಿಸಿರುವನು.

## English Translation

O Agni (called Ila ) being praised (by men) conduct the gods hither in an easy-moving chariot ; for you are the invoker instituted by men.

|| ವಿಶೇಷವಿಷಯಗಳು ||

ರಾಸ್ಕರ ಅರ್ಥವಿವರಣೆಯು—**ಈಳಿಃ । ಈಳ ಈಟ್ಟೇಃ ಸ್ತುತಿಕರ್ಮಣಃ ಇಂಧತೇರ್ವಾ ॥ ಈಳಿಃ** ಅಥವಾ ಈಳಿತ ಎಂಬ ಶಬ್ದವು **ಈಡ ಸ್ತುತೌ** ಸ್ತೋತ್ರಮಾಡು ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಸ್ತುತಿ ಸಲ್ಪಡುವವನಾದುದರಿಂದ ಅಗ್ನಿಗೆ ಈಳ ಎಂದು ಹೆಸರು

**ಸುಖತಮೇ—ಸುಖಮಸ್ಮಿನ್ನಸ್ತೀತಿ । ಅತಿಶಯೇನ ಸುಖಃ ಸುಖತಮಃ । ಅತಿಶಯೇನ ಸುಖ ಹೇತೌ (ಕಸ್ಮಿಂಶ್ಚಿದ್ರಥೇ)** ಎಂದರೆ ಅತಿಶಯವಾಗಿ ಸುಖವನ್ನುಂಟುಮಾಡುವ, **ಚಲಿಸುವಾಗ** ಅಲುಗಾಡದೆ ಇರುವ. ಕುಳಿತುಕೊಳ್ಳಲು ಮೆತ್ತನೆಯ ಆಸನಾದಿಗಳನ್ನು ಹಾಕಿ ಸಿದ್ಧಪಡಿಸಿರುವ, **ಪ್ರಯಾಣ** ಮಾಡಲು ಸುಖಪ್ರದವಾದ, easy-moving chariot ಎಂದರ್ಥವು.

**ರಥೇ—ರಮು ಕ್ರೀಡಾಯಾಂ । ರಮಂತೇಽಸ್ಮಿನ್ನಿತಿ ರಥಃ ।** ಸುಖವಾಗಿ ಇದರಲ್ಲಿ ಕುಳಿತು ವಿಹರಿಸಬಹುದಾದ್ದರಿಂದ ಇದಕ್ಕೆ ರಥವೆಂದು ಹೆಸರು.

**ಈಳಿತಃ—ಈಡ ಸ್ತುತೌ**—ಸ್ತುತಿಸಲ್ಪಡುವ praised, adored etc.

**ಹೋತಾ—ದೇವಾನಾಮಾಹ್ವಾತಾ**—ದೇವತೆಗಳನ್ನು ಯಜ್ಞಭೂಮಿಗೆ ಕರೆತರುವವನು.

**ಮನುರ್ಹಿತಃ--ಮನುನಾ ಮಂತ್ರೇಣ, ಯಜಮಾನಾದಿರೂಪೇಣ ಮನುಷ್ಯೇಣ ವಾ ಸ್ಥಾಪಿತಃ ॥** ಎಂದರೆ ಮಂತ್ರಪೂರ್ವಕವಾಗಿ ಅಥವಾ ಮನುಷ್ಯರೂಪದಿಂದಿರುವ ಯಜಮಾನನಿಂದ ಸ್ಥಾಪಿಸಲ್ಪಟ್ಟ (ಪ್ರಾರ್ಥಿಸಲ್ಪಟ್ಟ, ನಿಯಮಿಸಲ್ಪಟ್ಟ) ಎಂದರ್ಥವು. ಸ್ಕಂದಸ್ವಾಮಿಯು **ಪ್ರಜಾಪತಿನಾ ನಿಹಿತಃ** ಪ್ರಜಾಪತಿಯಿಂದ (ಬ್ರಹ್ಮನಿಂದ) ಸ್ಥಾಪಿಸಲ್ಪಟ್ಟ ಎಂಬ ಅರ್ಥವನ್ನು **ಮನುಷ್ಯೇಷು ನಿಹಿತಃ ಉಪಕಾರಕ ಇತ್ಯರ್ಥಃ** ಮನುಷ್ಯರಲ್ಲಿ (ದೇವತೆಗಳಿಂದ) ಇರಿಸಲ್ಪಟ್ಟವನು ಎಂದರೆ ಮನುಷ್ಯರಿಗೆ ಉಪಕಾರಮಾಡುವುದಕ್ಕಾಗಿ ಭೂಮಿಯಲ್ಲಿ ಮನುಷ್ಯರ ಮಧ್ಯದಲ್ಲಿ ಸ್ಥಾಪಿಸಲ್ಪಟ್ಟ, ಮನುಷ್ಯರಿಗೆ ಉಪಕಾರವನ್ನು ಮಾಡುವ ಎಂಬ ಅರ್ಥಗಳನ್ನು ಹೇಳಿರುವರು. Oldenberg ಎಂಬ ಪಾಶ್ಚಾತ್ಯಪಂಡಿತರು ಈ ಶಬ್ದಕ್ಕೆ "Instituted by Manus," not by men. ಎಂದು ಅರ್ಥವಿವರಣೆ ಮಾಡಿರುವನು.

|| ವ್ಯಾಕರಣಪ್ರಕ್ರಿಯಾ ||

**ಸುಖತಮೇ**—ಸುಖಮಸ್ಮಿನ್ ಅಸ್ತಿ ಎಂದು ವಿಗ್ರಹ, ಗುಣವಾಚಕವಾದ ಸುಖಶಬ್ದದ ಮುಂದೆ **ತದಸ್ಯಾಸ್ತ್ಯಸ್ಮಿನ್ನಿತಿಮತುಪ್** (ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ. ಮತುಪ್ ಪ್ರತ್ಯಯಕ್ಕೆ **ಗುಣವಚನೇಭ್ಯೋಮತುಪೋ ಲುಗಿಷ್ಟಃ** (ಪಾ. ಸೂ.. ೫-೨-೯೪ ವಾ. ೩) ಎಂಬುದರಿಂದ ಮತುಪ್ ಪ್ರತ್ಯಯಕ್ಕೆ ಲುಕ್ ಬರುವುದು. ಈಗ ಗುಣವಾಚಕವಾದ ಸುಖಶಬ್ದದ ಮುಂದೆ ಅತಿಶಯಾರ್ಥದಲ್ಲಿ **ಅತಿಶಾಯನೇ ತಮಬಿಷ್ಠನೌ** (ಪಾ. ಸೂ. ೫-೩-೫೫) ಎಂಬುದರಿಂದ ತಮಪ್ ಬರುವುದು. ಸುಖತಮ ಎಂದಾಗುವುದು. ಮತುಪ್ಪು ಪಿತ್ತಾದ್ದರಿಂದ ಅನುದಾತ್ತ. ಪ್ರಾತಿಪದಿಕ ಸ್ವರವೇ ನಿಲ್ಲುವುದು.

ರಥೇ—ರಮನ್ತೇ ಅಸ್ಮಿನ್ ಎಂದು ವಿಗ್ರಹ. ರಮುಕ್ರೀಡಾಯಾಮ್ ಧಾತು. ಇದರ ಮುಂದೆ **ಹನಿಕುಷಿನೀರಮಿಕಾಶಿಭ್ಯಃ ಕ್ಥನ್** (ಉ. ಸೂ. ೨-೧೫೫) ಹನ ಹಿಂಸಾಗತ್ಯೋಃ, ಕುಷ್ ನಿಷ್ಕರ್ಷೇ, ಣೀಞ್ ಪ್ರಾಪಣೇ, ರಮು ಕ್ರೀಡಾಯಾಮ್ ಕಾಶೃ ದೀಪ್ತೌ ಈ ಧಾತುಗಳ ಮುಂದೆ ಕ್ಥನ್ ಪ್ರತ್ಯಯ ಬರುವುದು ಎಂಬುದರಿಂದ ಕ್ಥನ್ ಬಂದರೆ ರಮ್+ಥ,ಈಗ ಥ ಎಂಬ ಆರ್ಧಧಾತುಕಕ್ಕೆ **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂಬುದರಿಂದ ಇಡಾಗವು ಪ್ರಾಪ್ತವಾಗುವುದು. ರಮ್ ಧಾತುವನ್ನು ಅನುದಾತ್ತ ಧಾತುಗಳನ್ನು ಪರಿಗಣನೆ ಮಾಡುವ ಕಾರಿಕೆಯಲ್ಲಿ ಲಿಪ್ ಲುಪ್ ವಪ್ ಶಪ್ ಸ್ವಪ್ ಸೃಪಿ ಯಭ್ ರಭ್ ಲಭ್ ಗಮ್ ನಮ್ ಯಮೋ ರಮಿಃ ಎಂದು ಪರಿಗಣನೆ ಮಾಡಿರುವರು. ಆದ್ದರಿಂದ ರಮ್ ಧಾತುವು ಅನುದಾತ್ತೋಪದೇಶವು, ಏಕಾಚ್ಕವಾಗಿಯೂ ಇರುವುದು. ಆದ್ದರಿಂದ **ಏಕಾಚ ಉಪದೇಶೇಽನುದಾತ್ತಾತ್** (ಪಾ. ಸೂ. ೭-೨-೧೦) ಉಪದೇಶದಲ್ಲಿ ಯಾವುದು ಅನುದಾತ್ತವೂ ಏಕಾಚ್ಕವೂ ಆಗಿರುವುದೋ ಆ ಧಾತುವಿನ ಮುಂದೆ ಇರುವ ವಲಾದಿಯಾದ ಆರ್ಧಧಾತುಕಕ್ಕೆ ಇಡಾಗಮ ಬರುವುದಿಲ್ಲ ಎಂಬುದರಿಂದ ಇಡಾಗಮಕ್ಕೆ ನಿಷೇಧ ಬರುವುದು ನನ್ತರ **ಅನುದಾತ್ತೋಪದೇಶವನತಿತನೋತ್ಯಾದೀನಾಮನುನಾಸಿಕಲೋಪೋಝಲಿಕ್ಙಿತಿ** ( ಪಾ. ಸೂ. ೬-೪-೩೭ ) ಕಿತ್ತು ಅಥವಾ ಙಿತ್ತು ಆದ ಝಲಾದಿಪ್ರತ್ಯಯ ಪರದಲ್ಲಿರುವಾಗ ಅನುನಾಸಿಕವನ್ನು ಕೊನೆಯಲ್ಲಿ ಹೊಂದಿರುವ ಅನುದಾತ್ತೋಪದೇಶವೇ ಮೊದಲಾದ ಧಾತುಗಳ ಕೊನೆಯ ಅನುನಾಸಿಕಕ್ಕೂ ವನಧಾತುವಿನ ಕೊನೆಯ ವರ್ಣಕ್ಕೂ ಲೋಪ ಬರುವುದು ಎಂಬುದರಿಂದ ಮಕಾರಕ್ಕೆ ಲೋಪ. ರಥ ಎಂದಾಗುವುದು. ಪ್ರತ್ಯಯವು ನಿತ್ತಾದ್ದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ ೬-೧-೧೯೩ ಎಂಬುದರಿಂದ ರಥಶಬ್ದವು ಆದ್ಯುದಾತ್ತವಾಗುವುದು.

ಈಳಿತಃ—ಈಡ ಸ್ತುತೌ ಧಾತು. ಇದರ ಮುಂದೆ **ನಿಷ್ಠಾ** ( ಪಾ. ಸೂ. ೩-೨-೧೦ ) ಎಂಬುದರಿಂದ ಕ್ತ ಪ್ರತ್ಯಯ ಬರುವುದು. **ಆರ್ಧಧಾತುಕಸ್ಯೇಡ್ವಲಾದೇಃ** (ಪಾ.ಸೂ. ೭-೨-೩೫) ಎಂಬುದರಿಂದ ಇಡಾಗಮ. ಅಜ್ಮಧ್ಯಸ್ಥಡಕಾರಸ್ಯ ಳಕಾರಂ ಬಹ್ವೃಚಾ ಜಗುಃ ಎಂಬ ಸಂಪ್ರದಾಯದಿಂದ ಡಕಾರಕ್ಕೆ ಳಕಾರ, ಅಥವಾ **ದ್ವಯೋಶ್ಚಾಸ್ಯಸ್ವರಯೋಃ** (ಪ್ರಾ. ಶಾ.) ಎಂಬುದರಿಂದ ಡಕಾರಕ್ಕೆ ಳಕಾರ. ಇಡಾಗಮದಿಂದ ಬಂದಿರುವ ಇಕಾರವು ಆಗಮಾ ಅನುದಾತ್ತಾಃ ಎಂಬುದರಿಂದ ಅನುದಾತ್ತ. ಪ್ರತ್ಯಯಸ್ವರ ನಿಲ್ಲುವುದು.

ದೇವಾನ್ ಎಂಬಲ್ಲಿ ಸಂಹಿತಾಕಾಲದಲ್ಲಿ **ದೀರ್ಘಾದಟಿ ಸಮಾನಪಾದೇ** (ಪಾ.ಸೂ ೮-೩-೯) ಎಂಬುದರಿಂದ ನಕಾರಕ್ಕೆ ರು ಆದೇಶ. **ಆತೋಽಟೀಽನಿತ್ಯಮ್** (ಪಾ.ಸೂ. ೮-೩-೩) ಎಂಬುದರಿಂದ ಆಕಾರಕ್ಕೆ ಅನುನಾಸಿಕ. **ಭೋಭಗೋ ಅಘೋ ಅಪೂರ್ವಸ್ಯಯೋಽಶಿ** (ಪಾ. ಸೂ. ೮-೩-೧೭) ಎಂಬುದರಿಂದ ರುಗೆ ಯಾದೇಶ. **ಲೋಪಶ್ಶಾಕಲ್ಯಸ್ಯ** (ಪಾ. ಸೂ. ೮-೩-೧೯) ಎಂಬುದರಿಂದ ಬಂದ ಯಕಾರಲೋಪವು ಅಸಿದ್ಧವಾಗುವುದು. ಆದ್ದರಿಂದ **ಆದ್ಗುಣಃ** (ಪಾ. ಸೂ. ೬-೧-೮೭) ಎಂಬುದರಿಂದ ಗುಣ ಬರುವುದಿಲ್ಲ.

ಆ—ಇದು ನಿಪಾತ. ಆದ್ದರಿಂದ **ನಿಪಾತಾ ಆದ್ಯುದಾತ್ತಾಃ** ಎಂಬುದರಿಂದ ಆ ಎಂಬುದು ಆದ್ಯುದಾತ್ತ.

ಅಸಿ—ಅಸ ಭುವಿ ಧಾತು. ಇದರ ಮುಂದೆ ಲಟ್. ಅದರ ಸ್ಥಾನದಲ್ಲಿ ಮಧ್ಯಮ ಪುರುಷ ಏಕವಚನ ಸಿಪ್ **ಕರ್ತ್ತರಿಶಪ್** (ಪಾ. ಸೂ. ೩-೧-೬೮) ಎಂಬುದರಿಂದ ಬಂದ ಶಪ್ಪಿಗೆ **ಅದಿಪ್ರಭೃತಿಭ್ಯಃ** ( ಪಾ ಸೂ. ೨-೪-೭೨) ಎಂಬುದರಿಂದ ಲುಕ್. **ತಾಸಸ್ತ್ಯೋರ್ಲೋಪಃ** (ಪಾ ಸೂ. ೭-೪-೫೦) ಸಕಾರಾದಿಯಾದ ಪ್ರತ್ಯಯ ಪರದಲ್ಲಿರುವಾಗ ತಾಸ್ ಪ್ರತ್ಯಯ, ಅಸ್ ಧಾತು ಇವುಗಳಕೊನೆಯ ವರ್ಣಕ್ಕೆ ಲೋಪ ಬರುವುದು ಎಂಬುದರಿಂದ ಅಸ್ ಧಾತುಸಂಬಂಧಿ

ಯೂದ ಸಕಾರಕ್ಕೆ ಲೋಪ, ಅಸಿ ಎಂದಾಗುವುದು. ಪಾದಾದಿಯಲ್ಲಿರುವುದರಿಂದ **ತಿಙ್ಙತಿಙಃ** (ಪಾ.ಸೂ ೮-೧-೨೮) ಎಂಬುದರಿಂದ ಸರ್ವಾನುದಾತ್ತಬರುವುದಿಲ್ಲ. ಸಿಪ್ಪು ಪಿತ್ತಾದ್ದರಿಂದ ಅನುದಾತ್ತ. ಧಾತುಸ್ವರವೇ ನಿಲ್ಲುವುದು.

**ಹೋತಾ**— ಹ್ವೇಞ್ ಸ್ಪರ್ಧಾಯಾಂ ಶಬ್ದೇಚ ಧಾತು. ಇದರ ಮುಂದೆ **ಆಕ್ವೇಸ್ತಚ್ಛೀಲತದ್ಧರ್ಮತತ್ಸಾಧುಕಾರಿಷು** (ಪಾ.ಸೂ.೩-೨-೧೩೪) ಎಂಬ ಅಧಿಕಾರದಲ್ಲಿರುವ **ತೃನ್** (ಪಾ. ಸೂ. ೩-೨-೧೩೫) ಎಂಬುದರಿಂದ ತೃನ್ ಪ್ರತ್ಯಯಬರುವುದು. **ಬಹುಲಂ ಛಂದಸಿ** (ಪಾ.ಸೂ. ೬-೧-೩೪) ಎಂಬುದರಿಂದ ಸಂಪ್ರಸಾರಣ. **ಸಂಪ್ರಸಾರಣಾಚ್ಚ** (ಪಾ. ಸೂ. ೬-೧-೧೦೮) ಎಂಬುದರಿಂದ ಪೂರ್ವರೂಪ. **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಹುಗೆ ಗುಣ. ಹೋತೃ ಎಂದಾಗುವುದು. ಇದರ ಮುಂದೆ ಪ್ರಥಮಾವಿಭಕ್ತಿ ಏಕವಚನಸಂಜ್ಞಕ ಸು ಪ್ರತ್ಯಯ, ಋದುಶನಸ್ಪುರುದಂಸೋಽನೇಹಸಾಂಚ (ಪಾ. ಸೂ. ೭-೧-೯೪) ಸಂಬುದ್ಧಿಭಿನ್ನವಾದ ಸು ಪ್ರತ್ಯಯ ಪರದಲ್ಲಿರುವಾಗ ಹ್ರಸ್ವಋವರ್ಣಾಂತ ಶಬ್ದಗಳು ಉಶನಸ್ ಪುರುದಂಸಸ್, ಅನೇಹಸ್, ಈ ಶಬ್ದಗಳನ್ನು ಕೊನೆಯಲ್ಲಿ ಹೊಂದಿರುವ ಶಬ್ದಗಳು, ಇವುಗಳಿಗೆ ಅನಙ್ ಆದೇಶ ಬರುವುದು ಎಂಬುದರಿಂದ ಬರುವ ಅನಙಾದೇಶವು ಅನೇಕಾಲ್ಲಾದರೂ ಙಿತ್ತಾದ್ದರಿಂದ **ಙಿಚ್ಚ** ( ಪಾ. ಸೂ. ೧-೧-೫೩ ) ಙಕಾರೇತ್ಸಂಜ್ಞಕವಾದ ಆದೇಶವು ಅನೇಕಾಲ್ಲಾಗಿದ್ದರೂ ಯಾವುದಕ್ಕೆ ವಿಹಿತವಾಗಿರುವುದೋ ಅದರ ಅಂತ್ಯಕ್ಕೆ ಬರುವುದು ಎಂಬುದರಿಂದ, ಹೋತೃಶಬ್ದದ ಕೊನೆಯ ಋಕಾರಕ್ಕೆ ಬರುವುದು ಹೋತನ್+ಸ್. **ಅಪ್ತೃನ್ ತೃಚ್ ಸ್ವಸೃ ನಪ್ತೃ ನೇಷ್ಟೃ ತ್ವಷ್ಟೃ ಕ್ಷತ್ತೃ ಹೋತೃ ಪೋತೃ ಪ್ರಶಾಸ್ತೄಣಾಮ್** (ಪಾ. ಸೂ. ೬-೪-೧೧) ಸಂಬುದ್ಧಿಭಿನ್ನವಾದ ಸರ್ವನಾಮಸ್ಥಾನಸಂಜ್ಞಕವಾದ ಪ್ರತ್ಯಯಗಳು ಪರದಲ್ಲಿರುವಾಗ ಅಪ್ಶಬ್ದ ತೃನ್ನಂತ, ತೃಜನ್ತ ಸ್ವಸೃ ಮೊದಲಾದ ಶಬ್ದಗಳು ಇವುಗಳ ಉಪಧಾಭೂತವಾದ ವರ್ಣಕ್ಕೆ ದೀರ್ಘ ಬರುವುದು ಎಂಬುದರಿಂದ ದೀರ್ಘಬಂದರೆ ಹೋತಾನ್+ಸ್. **ಹಲ್‌ಙ್ಯಾಭ್ಯೋದೀರ್ಘಾತ್ಸು ತಿಸ್ಯಪೃಕ್ತಂಹಲ್** (ಪಾ.ಸೂ. ೬-೧-೬೮) ಎಂಬುದರಿಂದ ಸು ಪ್ರತ್ಯಯಕ್ಕೆ ಲೋಪ. **ನಲೋಪಃಪ್ರಾತಿಪದಿಕಾಂತಸ್ಯ** (ಪಾ. ಸೂ. ೮-೨-೭) ಎಂಬುದರಿಂದ ನಕಾರಕ್ಕೆ ಲೋಪ. ಹೋತಾ ಎಂದು ರೂಪವು ಸಿದ್ಧವಾಗುವುದು. ಇದು ನಕಾರೇತ್ಸಂಜ್ಞಕವಾದ ಪ್ರತ್ಯಯವನ್ನು ಕೊನೆಯಲ್ಲಿ ಹೊಂದಿರುವುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತವಾಗುವುದು.

**ಮನುರ್ಹಿತಃ**— ಮನ್ಯತೇ ಇತಿ ಮನುಃ — ಮನ ಜ್ಞಾನೇ ಧಾತು. ಇದರ ಮುಂದೆ **ಶೄ ಸ್ವೃ ಸ್ನಿಹಿ ತ್ರಪ್ಯಸಿ ವಸಿ ಹನಿ ಕ್ಲಿದಿ ಬಂಧಿ ಮನಿಭ್ಯಶ್ಚ** ( ಉ. ಸೂ. ೧-೧೦ ) ಶೄ ಹಿಂಸಾಯಾಂ, ಸ್ವೃ ಶಬ್ದೋಪತಾಪಯೋಃ, ಸ್ನಿಹ ಉಪತಾಪೇ. ತ್ರಪೂಷ್ ಲಜ್ಜಾಯಾಂ, ಅಸು ಕ್ಷೇಪಣೇ. ವಸ ನಿವಾಸೇ, ಹನ ಹಿಂಸಾಗತ್ಯೋಃ, ಕ್ಲಿದೂ ಆರ್ದ್ರೀಭಾವೇ, ಬಂಧ ಬಂಧನೇ, ಮನ ಜ್ಞಾನೇ, ಈ ಧಾತುಗಳ ಮುಂದೆ ಉ ಪ್ರತ್ಯಯ ಬರುವುದು. ಅದು **ನಿತ್** ಆಗುವುದು. ಈ ಅರ್ಥವು ಧಾನ್ಯೇನಿತ್ (ಉ. ಸೂ. ೧-೯) ಎಂಬುದರಿಂದ ನಿತ್ ಎಂಬುದನ್ನು ಅನುವೃತ್ತಿ ಮಾಡಿಕೊಳ್ಳುವುದರಿಂದ ಲಬ್ಧವಾಗುವುದು. ಈ ಸೂತ್ರದಿಂದ ಉ ಪ್ರತ್ಯಯ ಬರುವುದು. ನಿತ್ಸ್ವರ ಆದ್ಯುತ್ತ ಬರುವುದು. ಮನು ಎಂದು ಏರ್ಪಟ್ಟಿತು. ಹಿತಃ–ಡುಧಾಞ್ ಧಾರಣಪೋಷಣಯೋಃ, ಇದರ ಮುಂದೆ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕರ್ಮಣಿಕ್ತ ಪ್ರತ್ಯಯ. **ದಧಾತೇರ್ಹಿಃ** (ಪಾ.ಸೂ. ೭-೪-೪೨) ತಕಾರಾದಿಯೂ. ಕಕಾರೇತ್ಸಂಜ್ಞಕವೂ ಆದ ಪ್ರತ್ಯಯವು ಪರದಲ್ಲಿರುವಾಗ ಧಾ ಧಾತುವಿನ ಸ್ಥಾನದಲ್ಲಿ ಹಿ ಆದೇಶ ಬರುವುದು ಎಂಬುದರಿಂದ ಹಿ ಆದೇಶ ಬಂದರೆ ಹಿತ ಎಂದಾಗುವುದು. ನಂತರ ಮನುನಾ ಹಿತಃ

ಎಂದು ತೃತೀಯಾತತ್ಪುರುಷಸಮಾಸ. ಮನು-ಟಾ-ಹಿತಸು- ತೃತೀಯಾವಿಭಕ್ತಿ ಟಾ ಪ್ರತ್ಯಯಕ್ಕೆ **ಸುಪಾಂಸು-ಲುಕ್** (ಪಾ ಸೂ. ೭-೧-೩೯) ಎಂಬುದರಿಂದ ಸು ಆದೇಶ ಮನು+ಸ್+ಹಿತ. **ಸಸಜುಷೋರುಃ** (ಪಾ.ಸೂ. ೮-೨-೬೬) ಎಂಬುದರಿಂದ ರುತ್ವ ಮನುರ್ಹಿತ ಸ್ಥಾನಿವದ್ಭಾವದಿಂದ ರುವು ಯದ್ಯಪಿ ಸುಪ್ಪು ಆದ್ದರಿಂದ **ಸುಪೋ-ಧಾತು ಪ್ರಾತಿಪದಿಕಯೋಃ** (ಪಾ. ಸೂ. ೨-೪-೭೧) ಎಂಬುದರಿಂದ ಲುಕ್ ಪ್ರಾಪ್ತವಾಗುವುದು. ಆದರೂ ಛಂದಸ್ಸಿನಲ್ಲಿ **ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ** ( ಪರಿಭಾ ೩೫ ) ಎಂಬುದರಿಂದ ಎಲ್ಲಾ ವಿಧಿಗಳಿಗೂ ವಿಕಲ್ಪವಿರುವುದರಿಂದ ಇಲ್ಲಿ ಲುಕ್ ಬರುವುದಿಲ್ಲ. **ಸಮಾಸಸ್ಯ** ( ಪಾ. ಸೂ. ೬-೧-೨೨೩ ) ಎಂಬುದರಿಂದ ಅಂತೋದಾತ್ತವು ಪ್ರಾಪ್ತವಾದರೆ ಅದನ್ನು ಬಾಧಿಸಿ **ತತ್ಪುರುಷೇತುಲ್ಯಾರ್ಥ** (ಪಾ ಸೂ ೬-೨-೨) ಎಂಬುದರಿಂದ ಪೂರ್ವಪದಪ್ರಕೃತಿಸ್ವರವೂ, ಇದನ್ನು ಬಾಧಿಸಿ **ಗತಿಕಾರಕೋಪಪದಾತ್ಕೃತ್** (ಪಾ ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರವೂ, ಇದನ್ನು ಬಾಧಿಸಿ **ಥಾಥಘಞ್‌ಕ್ತಾಜಬಿತ್ರಕಾಣಾಂ** ( ಪಾ. ಸೂ. ೬-೨-೧-೧೪೪) ಎಂಬುದರಿಂದ ಕಾರಕದ ಮುಂದೆ ಇರುವ ಕ್ತ ಪ್ರತ್ಯಯಾಂತಕ್ಕೆ ಅಂತೋದಾತ್ತವೂ ಪ್ರಾಪ್ತವಾದರೆ ಇದನ್ನೂ ಬಾಧಿಸಿ **ತೃತೀಯಾಕರ್ಮಣಿ** (ಪಾ. ಸೂ. ೬-೨-೪೮) ಕರ್ಮಣಿಕ್ತ ಪ್ರತ್ಯಯಾಂತವು ಪರದಲ್ಲಿರುವಾಗ ತೃತೀಯಾಂತವು ಪ್ರಕೃತಿಸ್ವರವನ್ನು ಹೊಂದುವುದು ಎಂಬುದರಿಂದ ಪೂರ್ವಪದಪ್ರಕೃತಿಸ್ವರವೇ ಬರುವುದು. ಅಂದರೆ ಮನುರ್ಹಿತ ಎಂಬಲ್ಲಿ ಮಕಾರದ ಮುಂದೆ ಇರುವ ಅಕಾರವೇ ಉದಾತ್ತವಾಗುವುದು. ಮಿಕ್ಕ ವರ್ಣಗಳಿಗೆ **ಅನುದಾತ್ತಂಪದಮೇಕವರ್ಜಂ** (ಪಾ ಸೂ ೬-೧-೧೫೮) ಎಂಬುದರಿಂದ ಅನುದಾತ್ತ ಬರುವುದು. ನಂತರ **ಉದಾತ್ತಾದನುದಾತ್ತಸ್ಯ ಸ್ವರಿತಃ** (ಪಾ ಸೂ. ೮-೪-೬೬) ಎಂಬುದರಿಂದ ಎರಡನೆಯ ಸ್ವರವಾದ ಉಕಾರವು ಸ್ವರಿತ, ನಂತರ **ಸ್ವರಿತಾತ್ಸಂಹಿತಾಯಾಮನುದಾತ್ತಾನಾಮ್** (ಪಾ. ಸೂ. ೧-೨-೩೯) ಎಂಬುದರಿಂದ ಮಿಕ್ಕ ಸ್ವರಗಳು ಪ್ರಚಯಗಳಾಗುವುವು ॥ ೪ ॥

॥ ಸಂಹಿತಾಪಾಠಃ ॥

ಸ್ತೃಣೀತ ಬರ್ಹಿರಾನುಷಗ್ಘೃತಪೃಷ್ಠಂ ಮನೀಷಿಣಃ ।
ಯತ್ರಾಮೃತಸ್ಯ ಚಕ್ಷಣಂ ॥ ೫ ॥

॥ ಪದಪಾಠಃ ॥

ಸ್ತೃಣೀತ । ಬರ್ಹಿಃ । ಆನುಷಕ್ । ಘೃತಽಪೃಷ್ಠಂ । ಮನೀಷಿಣಃ ॥
ಯತ್ರ । ಅಮೃತಸ್ಯ । ಚಕ್ಷಣಂ ॥ ೫ ॥

॥ ಸಾಯಣಭಾಷ್ಯಂ ॥

ಹೇ ಮನೀಷಿಣೋ ಬುದ್ಧಿಮಂತ ಋತ್ವಿಜೋ ಬರ್ಹಿರ್ದರ್ಭಂ ಸ್ತೃಣೀತ । ವೇದೇರುಪರ್ಯಾಚ್ಛಾದಯತ। ಅತ್ರಾಪಿ ಬರ್ಹಿರ್ನಾಮಕೋಽಗ್ನಿಃ ಸೂಚ್ಯತೇ । ಕೀದೃಶಂ ಬರ್ಹಿರಾಸ್ತರಣೀಯಂ । ಆನುಷಕ್ ಅನುಕ್ರಮೇಣ ಸಕ್ತಂ ಪರಸ್ಪರಂ ಸಂಬದ್ಧಂ ಘೃತಪೃಷ್ಠಂ। ಘೃತಪೂರ್ಣಾನಾಂ ಸ್ರುಚಾಂ ಬರ್ಹಿಷ್ಯಾಸಾದಿತತ್ವಾದ್ಘೃತಂ ಪೃಷ್ಠ ಉಪರಿಭಾಗೇ ಯಸ್ಯ ಬರ್ಹಿಷಸ್ತದ್ಘೃತಪೃಷ್ಠಂ । ಯತ್ರ ಯಸ್ಮಿನ್ಬರ್ಹಿಷ್ಯಮೃತಸ್ಯಾಮೃತಸಮಾನಸ್ಯ ಘೃತಸ್ಯ ಚಕ್ಷಣಂ ದರ್ಶನಂ ಭವತಿ । ಯದ್ವಾ । ಮರಣರಹಿತಸ್ಯ ದೇವಸ್ಯ ಬರ್ಹಿರ್ನಾಮಕಸ್ಯಾಗ್ನೇರ್ದರ್ಶನಂ ಭವತಿ । ತದ್ಬರ್ಹಿಃ ಸ್ತೃಣೀತೇತಿ ಪೂರ್ವತ್ರಾನ್ವಯಃ ॥ ಸ್ತೃಣೀತ । ಸ್ತೃಞ್ ಆಚ್ಛಾದನೇ । ಲೋಣ್ಮಧ್ಯಮಪುರುಷಸ್ಯ ಬಹುವಚನಂ । ಲೋಟೋ ಲಙ್ವತ್ । ಪಾ. ೩-೪-೮೫ । ತಸ್ಥಸ್ಥಮಿಪಾಂ । ಪಾ. ೩ ೪-೧೦೧ । ಇತಿ ಥಸ್ಯ ತಾದೇಶಃ । ಕ್ರ್ಯಾದಿಭ್ಯಃ ಶ್ನಾ । ಈ ಹಲ್ಯಘೋಃ । ಪಾ. ೬-೪ ೧೧೩ । ಇತೀತ್ವಂ । ಋವರ್ಣಾಚ್ಚೇತಿ ವಕ್ತವ್ಯಂ । ಕಾ. ೮-೪-೧-೧ । ಇತಿ ಣತ್ವಂ । ಪ್ವಾದೀನಾಂ ಹ್ರಸ್ವಃ । ಪಾ. ೭-೩-೮೦। ಇತಿ ಧಾತೋರ್ಹ್ರಸ್ವತ್ವಂ । ಸತಿ ಶಿಷ್ಟಸ್ವರಬಲೀಯಸ್ತ್ವಮನ್ಯತ್ರ ವಿಕರಣೇಭ್ಯಃ। ಅತಸ್ತಿಙ ಏವ ಪ್ರತ್ಯಯಸ್ವರೇಣೋದಾತ್ತತ್ವಂ ಬರ್ಹಿಃ । ಬೃಂಹೇರ್ನಲೋಪಶ್ಚ । ಉ. ೨-೧೧೦ । ಇತೀಸ್ಪ್ರತ್ಯಯನಲೋಪೌ । ಪ್ರತ್ಯಯಸ್ವರಃ । ಆನುಷಕ್ । ಆ ಸಮಂತಾದನುಷಜತೀತ್ಯಾನುಷಕ್ । ಷಂಜ ಸಂಗೇ । ಧಾತ್ವಾದೇಃ ಷಃ ಸಃ । ಕ್ವಿಪ್ಚೇತಿ ಕ್ವಿಪ್ । ಅನಿದಿತಾಂ । ಪಾ. ೬-೪-೨೪ । ಇತಿ ಲೋಪಃ । ಆಙನ್ವೋರುಪಸರ್ಗಯೋಃ ಪ್ರಾಕ್ಪ್ರಯೋಗಃ । ಗತಿಸಮಾಸಃ । ಉಪಸರ್ಗಾತ್ಸುನೋತೀತ್ಯಾದಿನಾ ಷತ್ವಂ । ಘೃತಪೃಷ್ಠಂ । ಘೃ ಕ್ಷರಣದೀಪ್ತ್ಯೋಃ । ನಿಷ್ಠೇತಿ ಕ್ತಃ । ಪ್ರತ್ಯಯಸ್ವರೇಣೋದಾತ್ತಃ । ಘೃತಯುಕ್ತಂ ಪೃಷ್ಠಮಸ್ಯೇತಿ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಮನೀಷಿಣಃ । ಆಮಂತ್ರಿತನಿಘಾತಃ । ಅಮೃತಸ್ಯ । ನ ವಿದ್ಯತೇ ಮೃತಂ ಮರಣಮಸ್ಮಿನ್ನಿತ್ಯಮೃತಂ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ಬಾಧಿತ್ವಾ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವೇ ಪ್ರಾಪ್ತೇ ನಞೋ ಜರಮರಮಿತ್ರಮೃತಾಃ । ಪಾ. ೬-೨-೧೧೬ । ಇತ್ಯುತ್ತರಪದಾದ್ಯುದಾತ್ತತ್ವಂ । ಚಕ್ಷಣಂ । ಚಕ್ಷಿಙ್ ವ್ಯಕ್ತಾಯಾಂ ವಾಚಿ । ವಾಗಭಿವ್ಯಕ್ತಿವಾಚೀ ಧಾತುರಿಹಾಭಿವ್ಯಕ್ತಿಮಾತ್ರಂ ಲಕ್ಷಯತಿ । ಲ್ಯುಟ್ ಚ । ಪಾ. ೩-೩-೧೧೫ । ಇತಿ ಭಾವೇ ಲ್ಯುಟ್ । ಯೋರನಾದೇಶಃ । ತಸ್ಯಾರ್ಧಧಾತುಕತ್ವಾಚ್ಚಕ್ಷಿಙಃ ಖ್ಯಾಞ್ । ಪಾ. ೨-೪-೫೪ । ಇತಿ ಖ್ಯಾಞಾದೇಶೇ ಪ್ರಾಪ್ತೇಽಸನಯೋಶ್ಚ । ಪಾ. ೨-೪-೫೪-೧೦ । ಇತಿ ಪ್ರತಿಷೇಧಃ ॥

॥ ಪ್ರತಿಪದಾರ್ಥ ॥

(ಹೇ) **ಮನೀಷಿಣಃ**—ಬುದ್ಧಿವಂತರಾದ ಋತ್ವಿಜರೇ । **ಆನುಷಕ್**—ಅನುಕ್ರಮವಾಗಿ ಒಂದನ್ನೊಂದು ಸ್ಪರ್ಶಮಾಡುವಂತೆ, ಎಂದರೆ ವತ್ತಾಗಿರುವಂತೆಯೂ । **ಘೃತಪೃಷ್ಠಂ**—ತುಪ್ಪದಿಂದ (ಅಥವಾ ನೀರಿನಿಂದ) ಚುಮಿಕಿಸಲ್ಪಟ್ಟು ನೆನೆದಿರುವುದಾಗಿಯೂ । **ಯತ್ರ**—ಯಾವ ದರ್ಭೆಯ ಮೇಲೆ । **ಅಮೃತಸ್ಯ**—ಅಮೃತ ಸಮಾನವಾದ ಘೃತದ ಅಥವಾ ಮರಣರಹಿತನಾದ ಬರ್ಹಿರ್ನಾಮಕನಾದ ಅಗ್ನಿಯ । **ಚಕ್ಷಣಂ**—ದರ್ಶನವುಂಟಾಗುವುದೋ ಅಂತಹ । **ಬರ್ಹಿಃ**—ಅಗ್ರಭಾಗವನ್ನು ಕತ್ತರಿಸಿದ ಕುಶದರ್ಭೆಯನ್ನು । **ಸ್ತೃಣೀತ**--(ವೇದಿಯ ಮೇಲೆ) ಹರಡಿರಿ ॥

॥ ಭಾವಾರ್ಥ ॥

ಎಲೈ ಬುದ್ಧಿವಂತರಾದ ಋತ್ವಿಜರೇ, ಬರ್ಹಿಃ ಎಂಬ ಅಗ್ನಿಯು ಬಂದು ಕೂಡುವುದಕ್ಕಾಗಿ ವೇದಿಯ ಮೇಲೆ ಆಸನಾರ್ಥವಾಗಿ ದರ್ಭೆಯನ್ನು ಹರಡಿರಿ. ಅದನ್ನು ಹರಡುವಾಗ ಮೆತ್ತಗಿರುವಂತೆ ಒತ್ತೊತ್ತಾಗಿರ ಬೇಕು. ಘೃತದಿಂದ ಅಥವಾ ನೀರಿನಿಂದ ನೆನೆಸಲ್ಪಟ್ಟು ಮೆತ್ತಗಿರಬೇಕು. ಅದರ ಮೇಲೆ ಇರುವ ಘೃತವು ಅಥವಾ ಬರ್ಹಿ ಎಂಬ ಅಗ್ನಿಯು ಎಲ್ಲರಿಗೂ ಕಾಣುವಂತಿರಬೇಕು. ಈ ರೀತಿಯಾಗಿ ವೇದಿಯ ಮೇಲೆ ಕುಶ ವೆಂಬ ದರ್ಭೆಗಳನ್ನು ಚೆನ್ನಾಗಿ ಹರಡಿರಿ.

English Translation.

Strew, learned priests, in due order, the sacrificial grass the back (or surface) of which is sprinkled with clarified butter (or water), that we may see the immortal ones thereon.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು ಸ್ವಲ್ಪ ತೊಡಕಾಗಿರುವುದು. ಬರ್ಹಿಃ ಶಬ್ದಕ್ಕೆ ಯಾಸ್ಕರು—**ಬರ್ಹಿಃ ಪರಿಬರ್ಹಣಾತ್** ಎಂದು ವಿವರಣೆ ಮಾಡಿರುವರು. **ಬರ್ಹಿಃ ಪ್ರಸಿದ್ಧಮೇವ ಕುಶಮಯಂ ಯಜ್ಞಾಂಗಂ । ಪರಿಬರ್ಹಣಾತ್ ಪರಿಚ್ಛೇದನಾತ್ ಲೂನಂ ಹಿ ತದ್ಭವತಿ ।** ಬರ್ಹಿಯೆಂದರೆ ಯಜ್ಞದಲ್ಲಿ ಉಪಯೋಗಿಸುವ, ಅಗ್ರ ಭಾಗವನ್ನು ಕತ್ತರಿಸಿದ ಕುಶವೆಂಬ ದರ್ಭೆಯು. ಪರಿಬರ್ಹಣವೆಂದರೆ ಕತ್ತರಿಸುವುದು ಎಂದರ್ಥವು. ಎಂದರೆ ಅಗ್ರಭಾಗವನ್ನು ಕತ್ತರಿಸಿರುವುದರಿಂದ ಈ ವಿಧವಾದ ದರ್ಭೆಗೆ ಬರ್ಹಿಃ ಎಂದು ಹೆಸರು. ಅಥವಾ ಬರ್ಹಿಃ ಎಂದರೆ **ಪ್ರವೃಜ್ಯತೇ= ಪ್ರಚ್ಛಿದ್ಯತೇ, ಲೂಯತೇ ಅಥವಾ ಪ್ರವೃಜ್ಯತೇ= ಪ್ರಸ್ತೀರ್ಯತೆ ॥** ಕತ್ತರಿಸಲ್ಪಡು ವುದರಿಂದ ಅಥವಾ ಹರಡಲ್ಪಡುವುದರಿಂದ ಇದಕ್ಕೆ ಬರ್ಹಿಃ ಎಂದು ಹೆಸರು ಎಂದು ಬೇಕಾದರೂ ಹೇಳಬಹುದು. ಈ ಅರ್ಥವನ್ನು ಸಮರ್ಥಿಸುವುದಕ್ಕಾಗಿ ಯಾಸ್ಕರು—

**ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾ ವಸ್ತೋರಸ್ಯಾ ವೃಜ್ಯತೇ ಅಗ್ರೇ ಅಹ್ನಾಂ ॥**
**ವ್ಯುಪ್ರಥತೇ ವಿತರಂ ವರೀಯೋ ದೇವೇಭ್ಯೋ ಅದಿತಯೇ ಸ್ಯೋನಂ ॥**
(ಋ. ಸಂ. ೧೦-೧೧೦-೪)

ಎಂಬ ಋಕ್ಕನ್ನು ಉದಾಹರಿಸಿ, ಇದಕ್ಕೆ ವಿವರಣೆರೂಪವಾಗಿ—

**ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾ ವಸನಾಯಾಸ್ಯಾಃ ಪ್ರವೃಜ್ಯತೇ ಅಗ್ರೇ ಅಹ್ನಾಂ ಬರ್ಹಿಃ ಪೂರ್ವಾಹ್ಣೇ ತದ್ವಿಪ್ರಥತೇ ವಿತರಂ ವಿಕೀರ್ಣತರಮಿತಿ ವಾ ವಿಸ್ತೀರ್ಣತರಮಿತಿ ವಾ ವರೀಯೋ ವರತರಮುರುತರಂ ವಾ ದೇವೇಭ್ಯಶ್ಚಾದಿತಯೇ ಚ ಸ್ಯೋನಂ । ಸ್ಯೋನಮಿತಿ ಸುಖನಾಮ ಸ್ಯತೇರವಸ್ಯನ್ತ್ಯೇತತ್ ಸೇವಿತವ್ಯಂ ಭವತೀತಿ ವಾ ॥**

ಎಂದು ಹೇಳಿರುವರು. ಈ ವಿವರಣೆಯಿಂದ ಬರ್ಹಿಃ ಶಬ್ದಕ್ಕೆ ಚೆನ್ನಾಗಿಯೂ ವಿಸ್ತಾರವಾಗಿಯೂ ಹರಡಿರುವ ಕತ್ತರಿಸಿದ ದರ್ಭೆಗಳು ಎಂದರ್ಥವು. ಇಂತಹ ಕತ್ತರಿಸಿದ ದರ್ಭೆಗಳನ್ನು ಯಜ್ಞದಲ್ಲಿ ಎರಡು ಕಾರಣಗಳಿಗಾಗಿ ಹರಡಿ ಸಿದ್ಧಪಡಿಸುವರು. ಒಂದು-ಅಗ್ನಿಯ ಮುಂದೆ ಆಜ್ಯಪಾತ್ರೆ (ಘೃತಪಾತ್ರೆ) ಸ್ರುಕ್ ಇವುಗಳನ್ನಿಡುವುದಕ್ಕಾಗಿ ದರ್ಭೆಯನ್ನು ಹರಡುವರು. ಎರಡು-ಆಹ್ವಾನ ಮಾಡಲ್ಪಟ್ಟ ದೇವತೆಗಳು ಬಂದು ಕೂಡುವ ಆಸನಾರ್ಥವಾಗಿ. ದರ್ಭಾಸನದಲ್ಲಿ ಕುಳಿತು ಕರ್ಮಾನುಷ್ಠಾನ ಮಾಡುವುದು ಶ್ರೇಷ್ಠವೆಂದು ಪರಿಗಣಿಸಲ್ಪಟ್ಟಿದೆ. ಆದುದರಿಂದ ದೇವತೆಗಳು ಕುಳಿತುಕೊಳ್ಳುವುದಕ್ಕಾಗಿ ಯಜ್ಞವೇದಿಯ ಒಂದು ಭಾಗದಲ್ಲಿ ಬರ್ಹಿಃ ಎಂಬ ಕತ್ತರಿಸಿದ ದರ್ಭೆಗಳನ್ನು ಹರಡಿ ಆಸನವನ್ನು ಸಿದ್ಧಪಡಿಸುವುದು ಪದ್ಧತಿಯಾಗಿದೆ ಇದುವರೆಗೆ ಹೇಳಿದ ಸಮಿದ್ಧ. ತನೂನಪಾತ್, ನರಾಶಂಸ, ಇಳ, ಬರ್ಹಿಃ. ಈ ಐದೂ ಅಗ್ನಿಯ ವಿವಿಧರೂಪಗಳೆಂದು ಭಾವಿಸಲ್ಪಟ್ಟು ಈ ಹೆಸರುಗಳಿಂದ ಪಶುಯಾಗದಲ್ಲಿ ಹೋಮ ಮಾಡುವರು.

**ಆನುಷಕ್—ಆನುಕ್ರಮೇಣ ಸಕ್ತಂ ಪರಸ್ಪರಂ ಸಂಬದ್ಧಂ**—ದರ್ಭೆಗಳು ಒಂದಕ್ಕೊಂದು ತಗಲುವಂತೆ, ಪರಸ್ಪರ ಸಂಬಂಧವಾಗಿ ಎಂದರೆ ವಿರಳವಾಗದಂತೆ ಒತ್ತೊತ್ತಾಗಿರುವ ಎಂದರ್ಥವು. ವಿರಳವಾಗಿರುವಂತೆ ಸ್ವಲ್ಪ ದರ್ಭೆಗಳನ್ನು ಹಾಸಿದಲ್ಲಿ ಮೆತ್ತಗಿರುವುದಿಲ್ಲ. ದರ್ಭೆಗಳನ್ನು ಹೆಚ್ಚಾಗಿಯೂ ಒತ್ತೊತ್ತಾಗಿಯೂ ಹರಡಿದಲ್ಲಿ ಆಸನವು ಮೆತ್ತಗಿರುವುದು ಎಂದಭಿಪ್ರಾಯವು.

**ಘೃತಪೃಷ್ಠಂ—ಘೃ ಕ್ಷರಣದೀಪ್ತ್ಯೋಃ । ಘೃತಯುಕ್ತಂ ಪೃಷ್ಠಮಸ್ಯೇತಿ** । ಘೃತದಿಂದ ಸವರಿದ ಅಥವಾ ನೆನೆದ, ಅಥವಾ ನೀರಿನಿಂದ ಚುಮುಕಿಸಲ್ಪಟ್ಟ. ಘೃತಶಬ್ದಕ್ಕೆ ನೀರು ಎಂದೂ ಅರ್ಥವಾಗುವುದು. (ನಿ. ೨-೨೪) ಒಣಗಿದ ದರ್ಭೆಯು ಮೃದುವಾಗುವುದಕ್ಕಾಗಿ ನೀರನ್ನು ಚುಮುಕಿಸುವುದು ಪದ್ಧತಿಯು.

**ಅಮೃತಸ್ಯ—ನ ವಿದ್ಯತೇ ಮೃತಂ ಮರಣಂ ಅಸ್ಮಿನ್ನಿತ್ಯಮೃತಂ** । ಮರಣರಹಿತವಾದ ಎಂದರೆ ದೇವನಾದ ಅಗ್ನಿಯು. ಅಥವಾ ಅಮೃತಕ್ಕೆ ಸಮಾನವಾದ ಘೃತವು ಎಂದು ಭಾಷ್ಯಕಾರರು ಹೇಳಿರುವರು.

**ಚಕ್ಷಣಂ—ಚಕ್ಷಿಙ್ ವ್ಯಕ್ತಾಯಾಂ ವಾಚಿ** । ವ್ಯಕ್ತವಾಗುವುದು, ಕಾಣಿಸುವುದು ಎಂದರ್ಥವು. **ಅಮೃತಸ್ಯ ಚಕ್ಷಣಂ** ಎಂಬ ಶಬ್ದಗಳಿಗೆ ಸರಿಯಾದ ಅರ್ಥವೇನೆಂಬುದು ಸ್ಪಷ್ಟವಾಗಿಲ್ಲ. ಋಷಿಯ ಆಶಯವೂ ಸರಿಯಾಗಿ ತಿಳಿಯುವಂತಿಲ್ಲ. ಈ ಶಬ್ದಗಳಿಗೆ ರೂಢಿಯಲ್ಲಿರುವ ಅರ್ಥವನ್ನು ನಾವು ಹೇಳಿದ್ದರೂ ಋಷಿಯ ಮನಸ್ಸಿನಲ್ಲಿದ್ದ ಮುಖ್ಯಾಭಿಪ್ರಾಯವು ವಿಶದವಾಗಿಲ್ಲ.

### ವ್ಯಾಕರಣಪ್ರಕ್ರಿಯಾ

**ಸ್ತೃಣೀತ—**ಸ್ತೃಞ್ ಆಚ್ಛಾದನೇ, ಕ್ರ್ಯಾದಿಗಣಕ್ಕೆ ಸೇರಿದ ಧಾತು. ಲೋಟ್ ಪರಸ್ಮೈಪದ ಮಧ್ಯಮಪುರುಷ ಬಹುವಚನ ಥಪ್ರತ್ಯಯವು ಇದರ ಮುಂದೆ ಬರುವುದು. ಸ್ತೃ+ಥ **ಲೋಟೋಲಙ್ವತ್** (ಪಾ. ಸೂ. ೩-೪-೮೫) ಲೋಟ್ಟಿಗೆ ಲಙ್ಙಿಗೆ ಕಾರ್ಯ ಬರುವಂತೆ ಕಾರ್ಯವು ಬರುವುದು ಎಂದು ಹೇಳಿರುವುದರಿಂದ **ತಸ್ಥಸ್ಥಮಿಪಾಂ ತಾಂತಂತಾಮಃ** (ಪಾ. ಸೂ. ೩-೪-೧೦೧) ಙಕಾರೇತ್ಸಂಜ್ಞಕವಾದ ಲಕಾರಸ್ಥಾನದಲ್ಲಿ ಬಂದ ತಸ್, ಥಸ್, ಥ, ಮಿಪ್. ಈ ನಾಲ್ಕಕ್ಕೆ ಕ್ರಮವಾಗಿ ತಾಮ್, ತಮ್, ತ, ಅಮ್, ಎಂಬ ನಾಲ್ಕು ಆದೇಶಗಳು ಬರುವುವು ಎಂಬುದರಿಂದ ಥ ಎಂಬುದಕ್ಕೆ ತ ಆದೇಶ. **ಕ್ರ್ಯಾದಿಭ್ಯಃಶ್ನಾ,** (ಪಾ.ಸೂ. ೩-೧-೮೧) ಕರ್ತ್ರರ್ಥಕವಾದ ಸಾರ್ವ

ಧಾತುಕಪ್ರತ್ಯಯವು ಪರದಲ್ಲಿರುವಾಗ ಕ್ರ್ಯಾದಿಗಣದ ಧಾತುಗಳ ಮುಂದೆ ಶ್ನಾ, ಎಂಬ ವಿಕರಣ ಪ್ರತ್ಯಯವು ಸ್ವಾರ್ಥದಲ್ಲಿ ಬರುವುದು ಎಂಬುದರಿಂದ ಶ್ನಾ, ಬಂದರೆ ಸ್ತೃ+ನಾ+ತ. **ಈಹಲ್ಯಘೋಃ** (ಪಾ. ಸೂ ೬-೪-೧೧೩) ಹಲಾದಿಯೂ ಕಿತ್ತು ಅಥವಾ ಙಿತ್ತೂ ಆದ ಸಾರ್ವಧಾತುಕಪ್ರತ್ಯಯ ಪರದಲ್ಲಿದ್ದರೆ, ಶ್ನಾಪ್ರತ್ಯಯ, ಘು ಸಂಜ್ಞೆಯನ್ನು ಹೊಂದದೇ ಅಭ್ಯಸ್ತ ಸಂಜ್ಞೆಯನ್ನು ಹೊಂದಿರುವ ಧಾತು, ಇವುಗಳ ಆಕಾರಕ್ಕೆ ಈತ್ವ ಬರುವುದು ಎಂಬುದರಿಂದ ಶ್ನಾ ಪ್ರತ್ಯಯದ ಆಕಾರಕ್ಕೆ ಈತ್ವ ಬಂದರೆ ಸ್ತೃ+ನೀ+ತ **ಪ್ವಾದೀನಾಂಹ್ರಸ್ವಃ** (ಪಾ. ಸೂ ೭-೩-೮೦) ಎಂಬುದರಿಂದ ಧಾತುವಿನ ಋಕಾರಕ್ಕೆ ಹ್ರಸ್ವ. **ಋವರ್ಣಾಚ್ಚೇತಿ ವಕ್ತವ್ಯಮ್** (ಪಾ ಸೂ. ೮ ೪-೧-೧) ಎಂಬುದರಿಂದ ನಕಾರಕ್ಕೆ ಣಕಾರ, ಸ್ತೃಣೀತ, ಎಂದಾಗುವುದು ಇದು ಪಾದದ ಆದಿಯಲ್ಲಿರುವುದರಿಂದ **ತಿಙ್ಙತಿಙಃ** ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ. ಯದ್ಯಪಿ ಶ್ನಾಪ್ರತ್ಯಯ ಸ್ವರವು ಸತಿಶಿಷ್ಟ ಅಂದರೆ ಕೊನೆಯಲ್ಲಿ ಬರತಕ್ಕದ್ದು. ಆದರೂ ಅದು ವಿಕರಣವಾದ್ದರಿಂದ ಸತಿಶಿಷ್ಟಸ್ವರಬಲೀಯಸ್ತ್ವಮನ್ಯತ್ರವಿಕರಣೇಭ್ಯಃ, ಎಂಬ ವಚನಾನುಸಾರವಾಗಿ ಅದು ಪ್ರಬಲವಾಗುವುದಿಲ್ಲ. ಆದ್ದರಿಂದ ತಿಙ್ ಪ್ರತ್ಯಯವಾದ ತ, ಎಂಬುದೇ ಪ್ರತ್ಯಯ ಸ್ವರದಿಂದ ಉದಾತ್ತವಾಗುವುದು.

**ಬರ್ಹಿಃ**— ಬೃಹಿ ವೃದ್ಧೌ, ಧಾತು. ಇದಿತ್ತು. ಆದ್ದರಿಂದ **ಇದಿತೋನುಮ್‌ಧಾತೋಃ** ( ಪಾ. ಸೂ. ೭-೧-೫೮ ) ಎಂಬುದರಿಂದ ನುಮಾಗಮ. ಇದರ ಮುಂದೆ **ಬೃಂಹೇರ್ನಲೋಪಶ್ಚ** (ಉ ಸೂ- ೨--೨೬೭) ಬೃಹಿ ಧಾತುವಿನ ಮುಂದೆ ಇಸಿ ಪ್ರತ್ಯಯವೂ ನಕಾರಕ್ಕೆ ಲೋಪವೂ ಸಹ ಬರುವುದು ಎಂಬುದರಿಂದ ಇಸಿ ಪ್ರತ್ಯಯ ನಲೋಪಗಳು ಬಂದರೆ, ಬೃಹ್+ಇಸ್, ಲಘೂಪಧಗುಣವು ರಪರವಾಗಿ ಬರುವುದು ಬರ್ಹಿಸ್ ಎಂದಾಗುವುದು. ಪ್ರತ್ಯಯ ಸ್ವರ ಬರುವುದು. ದ್ವಿತೀಯಾಏಕವಚನದಲ್ಲಿ ಬರ್ಹಿಃ ಎಂದಾಗುವುದು.

**ಆನುಷಕ್**– ಆ ಸಮನ್ತಾತ್ ಅನುಜುಷತಿ ಇತಿ ಆನುಷಕ್. ಷಞ್ಜ ಸಂಗೇ, ಧಾತು. **ಧಾತ್ವಾದೇಃ ಷಃಸಃ** (ಪಾ ಸೂ. ೬-೧-೬೪) ಎಂಬುದರಿಂದ ಷಕಾರಕ್ಕೆ ಸಕಾರ, **ಕ್ವಿಪ್ ಚ** (ಪಾ.ಸೂ ೩-೨,೭೬) ಎಂಬುದರಿಂದ ಕ್ವಿಪ್, ಕ್ವಿಪ್ ಪ್ರತ್ಯಯವು ಲುಪ್ತವಾಗುವುದು. **ಅನಿದಿತಾಂಹಲ ಉಪಧಾಯಾಃಕ್ಙಿತಿ** (ಪಾ ಸೂ. ೬-೪-೨೪) ಎಂಬುದರಿಂದ ನಕಾರಕ್ಕೆ ಲೋಪ, ಆಙ್, ಅನು ಎಂಬ ಉಪಸರ್ಗಗಳನ್ನು ಕ್ರಮವಾಗಿ ಪೂರ್ವಭಾಗದಲ್ಲಿ ಪ್ರಯೋಗಿಸುವುದು. ಆ+ಅನು+ಸಜ್ **ಕುಗತಿಪ್ರಾದಯಃ** (ಪಾ. ಸೂ. ೨೨-೧೮) ಎಂಬುದರಿಂದ ಗತಿಸಮಾಸ ಆ ಅನು ಎಂಬಲ್ಲಿ ಸವರ್ಣದೀರ್ಘ. **ಉಪಸರ್ಗಾತ್ಸುನೋತಿಸುವತಿ** (ಪಾ.ಸೂ ೮-೩-೬೫) ಎಂಬುದರಿಂದ ಸಕಾರಕ್ಕೆ ಷಕಾರ. ಇದರ ಮುಂದೆ ದ್ವಿತೀಯೈಕವಚನ ಅಮ್. ಆದಕ್ಕೆ **ಸ್ವಮೋರ್ನಪುಂಸಕಾತ್** ( ಪಾ ಸೂ ೭-೧-೨೩ ) ನಪುಂಸಕ ಲಿಂಗವಾದ ಅಂಗದ ಮುಂದೆ ಇರುವ ಸು ಅಮ್ ಇವುಗಳಿಗೆ ಲುಕ್ ಬರುವುದು ಎಂಬುದರಿಂದ ಲುಕ್ **ಚೋಃಕುಃ** (ಪಾ. ಸೂ. ೮-೨-೩೦) ಎಂಬುದರಿಂದ ಕುತ್ವ, ಚವರ್ಗದ ತೃತೀಯಾಕ್ಷರವಾದ ಜಕಾರಕ್ಕೆ ಕವರ್ಗದ ತೃತೀಯ ಗ ಬರುವುದು. **ಝಲಾಂಜಶೋಽನ್ತೇ** (ಪಾ. ಸೂ. ೮-೨-೩೯) ಎಂಬುದರಿಂದ ಜಶ್ತ್ವ. **ವಾಽವಸಾನೇ** (ಪಾ. ಸೂ. ೮-೪-೫೬) ಎಂಬುದರಿಂದ ಚರ್ತ್ವ. ಗಕಾರಕ್ಕೆ ಕಕಾರ. ಆನುಷಕ್ ಎಂದಾಗುವುದು.

**ಘೃತಪೃಷ್ಠಮ್**— ಘೃ ಕ್ಷರಣದೀಪ್ತ್ಯೋಃ, ಧಾತು. ಇದರ ಮುಂದೆ **ನಿಷ್ಠಾ** (ಪಾ. ಸೂ. ೩-೨-೧೦೨), ಎಂಬುದರಿಂದ ಕ್ತಪ್ರತ್ಯಯ ಘೃತಶಬ್ದವು ಪ್ರತ್ಯಯ ಸ್ವರದಿಂದ ಅಂತೋದಾತ್ತ. ಘೃತಯುಕ್ತಂ ಪೃಷ್ಠಂ ಅಸ್ಯ ಎಂದು ಬಹುವ್ರೀಹಿ. **ಬಹುವ್ರೀಹೌಪ್ರಕೃತ್ಯಾಪೂರ್ವಪದಮ್** (ಪಾ. ಸೂ ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುವುದು.

**ಮನೀಷಿಣಃ**— ಆಮಂತ್ರಿತ. ಆದ್ದರಿಂದ ಆಷ್ಟಮಿಕಾನುದಾತ್ತ ಬರುವುದು.

**ಅಮೃತಸ್ಯ**—ನ ವಿದ್ಯತೇ ಮೃತಂ-ಮರಣಂ ಅಸ್ಮಿನ್ ಎಂದು ವಿಗ್ರಹ. ಅಮೃತಶಬ್ದವು ಬಹುವ್ರೀಹಿ ಸಮಾಸವಾದ್ದರಿಂದ ಪೂರ್ವಪದಪ್ರಕೃತಿಸ್ವರವು ಪ್ರಾಪ್ತವಾಗುವುದು ಅದನ್ನು ಬಾಧಿಸಿ **ನಞ್‌ಸುಭ್ಯಾಮ್** (ಪಾ. ಸೂ. ೬-೨-೧೭೨) ಬಹುವ್ರೀಹಿಸಮಾಸದಲ್ಲಿ **ನಞ್,** ಸು ಇವುಗಳ ಮುಂದೆ ಇರುವ ಉತ್ತರಪದವು ಅಂತೋದಾತ್ತವಾಗುತ್ತೆ ಎಂದು ಅಂತೋದಾತ್ತವು ಪ್ರಾಪ್ತವಾಗುವುದು. ಇದನ್ನೂ ಬಾಧಿಸಿ **ನಞೋ ಜರಮರಮಿತ್ರಮೃತಾಃ** ( ಪಾ, ಸೂ. ೬-೨-೧೧೬) ಬಹುವ್ರೀಹಿಸಮಾಸದಲ್ಲಿ ನಞ್ ನ ಮುಂದೆ ಇರುವ ಜರ, ಮರ, ಮಿತ್ರ ಮೃತ, ಈ ಶಬ್ದಗಳು ಆದ್ಯುದಾತ್ತಗಳಾಗುವುವು ಎಂಬುದರಿಂದ ಉತ್ತರಪದಕ್ಕೆ ಆದ್ಯುದಾತ್ತ ಬರುವುದು.

**ಚಕ್ಷಣಮ್**—ಚಕ್ಷಿಙ್ ವ್ಯಕ್ತಾಯಾಂ ವಾಚಿ, ಧಾತು, ಇದು ವಾಕ್ಕಿನ ಅಭಿವ್ಯಕ್ತಿಯನ್ನು ಹೇಳ ತಕ್ಕದ್ದು. ಇಲ್ಲಿ ಲಕ್ಷಣೆಯಿಂದ ಅಭಿವ್ಯಕ್ತಿಯನ್ನು ಮಾತ್ರ ಬೋಧಿಸುವುದು. ಇದರ ಮುಂದೆ **ಲ್ಯುಟ್ ಚ,** (ಪಾ. ಸೂ. ೩-೩-೧೧೫) ಧಾತುವಿನ ಮುಂದೆ ನಪುಂಸಕ ಲಿಂಗದಲ್ಲಿ ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯಕ್ತಪ್ರತ್ಯಯ ಗಳು ಬರುವುವು ಎಂಬುದರಿಂದ ಲ್ಯುಟ್, ಬರುವುದು ಲಕಾರಟಕಾರಗಳು ಇತ್ಸಂಜ್ಞೆಯನ್ನು ಹೊಂದಿ ಲುಪ್ತ ಗಳಾಗುವುವು. ಯು, ಗೆ **ಯುವೋರನಾಕೌ** (ಪಾ ಸೂ. ೭-೧-೧ ಎಂಬುದರಿಂದ ಅನ ಆದೇಶ. ಚಕ್ಷ್+ಅನ, ಅನ ಎಂಬುದು ಆರ್ಧಧಾತುಕ. ಆದ್ದರಿಂದ **ಚಕ್ಷಿಙಃ ಖ್ಯಾಞ್** (ಪಾ. ಸೂ. ೨-೪-೫೪) ಆರ್ಧಧಾತುಕ ಪ್ರತ್ಯಯವು ಪರದಲ್ಲಿರುವಾಗ ಚಕ್ಷಿಙ್ ಧಾತುವಿಗೆ ಖ್ಯಾಞ್ ಆದೇಶ ಬರುವುದು ಎಂಬುದರಿಂದ ಖ್ಯಾಞ್ ಆದೇಶಕ್ಕೆ ಯದ್ಯಪಿ ಪ್ರಾಪ್ತಿ ಇರುವುದು ಆದರೂ **ಅಸನಯೋಶ್ಚ** (ಪಾ. ಸೂ. ೨-೪-೫೪ ವಾ ೧೦) ಅಸ್, ಅನ ಪ್ರತ್ಯಯಗಳು ಪರದಲ್ಲಿದ್ದರೆ ಚಕ್ಷಿಙ್ ಧಾತುವಿಗೆ ಖ್ಯಾಞ್ ಆದೇಶ ಬರುವುದಿಲ್ಲ ಎಂಬುದರಿಂದ ನಿಷೇಧ ಬರು ವುದರಿಂದ ಖ್ಯಾಞಾದೇಶ ಬರುವುದಿಲ್ಲ. ಇಲ್ಲಿ ಕೈಯ್ಯಟದಲ್ಲಿ **ಅದುದಾತ್ತೇತಶ್ಚ ಹಲಾದೇಃ** (ಪಾ. ಸೂ. ೩-೨-೧೪೯) ಎಂಬುದರಿಂದ ಯುಚ್ ಪ್ರತ್ಯಯವನ್ನು ಹೇಳಿ ವಿಚಕ್ಷಣಃ ಎಂಬುದನ್ನು ವ್ಯುತ್ಪಾದನೆ ಮಾಡಿರುವರು. ಈ ಪಕ್ಷದಲ್ಲಿ ವಿಚಕ್ಷಣ ಎಂಬುದು ಅಂತೋದಾತ್ತ. ಲ್ಯುಟ್ ಪಕ್ಷದಲ್ಲಿ ಲಿತಿ, ಎಂಬುದರಿಂದ ಆದುದ್ಯಾತ್ತ ಬಂದು **ಶೇಷಾನುದಾತ್ತಸ್ವರದಿಂದ** ಮಿಕ್ಕ ಎರಡು ಅಕಾರಗಳೂ ಅನುದಾತ್ತಗಳು, ನಂತರ ಉದಾತ್ತಾದನುದಾತ್ತಸ್ಯ ಸ್ವರಿತಃ ಎಂಬುದರಿಂದ ಎರಡನೇ ಅಕಾರ ಸ್ವರಿತ, ಸ್ವರಿತಾತ್ಸಂಹಿತಾಯಾಮನುದಾತ್ತಾನಾಂ, ಎಂಬುದರಿಂದ ಮೂರನೇ ಅಕಾರ ಪ್ರಚಯವಾಗುವುದು. ಈ ರೀತಿ ಸ್ವರಸಿದ್ಧಿಗಾಗಿಯೇ ಇಲ್ಲಿ ಲ್ಯುಟ್ ವರ್ಣಿತವಾಗಿ ರುವುದು.

॥ ಸಂಹಿತಾಪಾಠಃ ॥

ವಿ ಶ್ರಯಂತಾಮೃತಾವೃಧೋ ದ್ವಾರೋ ದೇವೀರಸಶ್ಚತಃ ।
ಅದ್ಯಾ ನೂನಂ ಚ ಯಷ್ಟವೇ ॥ ೬ ॥

॥ ಪದಪಾಠಃ ॥

ವಿ । ಶ್ರಯಂತಾಂ । ಋತಽವೃಧಃ । ದ್ವಾರಃ । ದೇವೀಃ । ಅಸಶ್ಚತಃ ॥
ಅದ್ಯ । ನೂನಂ । ಚ । ಯಷ್ಟವೇ ॥ ೬ ॥

॥ ಸಾಯಣಭಾಷ್ಯಂ ॥

ದ್ವಾರೋ ಯಜ್ಞಶಾಲಾದ್ವಾರಾಣಿ ವಿ ಶ್ರಯಂತಾಂ । ಕಪಾಟೋದ್ಘಾಟನೇನ ವಿಶ್ರಿಯಂತಾಂ । ಕೀದೃಶ್ಯಃ । ಋತಾವೃಧ ಋತಸ್ಯ ಸತ್ಯಸ್ಯ ಯಜ್ಞಸ್ಯ ವಾ ವರ್ಧಯಿತ್ರ್ಯೋ ದೇವೀರ್ದ್ಯೋತಮಾನಾ ಅಸಶ್ಚತೋಽಸಜ್ಜಂತ್ಯ ಉದ್ಘಾಟನೇನ ಪ್ರವೇಷ್ಟೃಪುರುಷಸಂಗರಹಿತಾಃ । ಯದ್ವಾ । ಅಸಶ್ಚತಃ ಪ್ರವೇಷ್ಟೃಪುರುಷರಹಿತಾನ್ಯಜ್ಞಗೃಹಾಂಸ್ತತ್ಪುರುಷಪ್ರವೇಶಾಯ ದ್ವಾರಾಭಿಮಾನಿನ್ಯ ಏತತ್ಸಂಜ್ಞಿಕಾ ಅಗ್ನಿವಿಶೇಷಮೂರ್ತಯೋ ವಿ ಶ್ರಯಂತಾಂ । ವಿಶೇಷೇಣ ಸೇವಂತಾಂ । ದ್ವಾರಸೇವಯಾ ತತ್ರ ಪುರುಷಪ್ರವೇಶೇನ ವಾ ಕಿಂ ಪ್ರಯೋಜನಮಿತಿ ತದುಚ್ಯತೇ । ಅದ್ಯಾಸ್ಮಿನ್ದಿನೇ ನೂನಮವಶ್ಯಂ ಯಷ್ಟವೇ ಯಷ್ಟುಂ । ಚಕಾರಾದ್ದಿನಾಂತರೇಷ್ವಪೀತಿ ದ್ರಷ್ಟವ್ಯಂ ॥ ಋತಾವೃಧಃ । ಋತಂ ವರ್ಧಯಂತೀತ್ಯರ್ಥೇ ವೃಧೇರಂತರ್ಭಾವಿತಣ್ಯರ್ಥಾತ್ಕ್ವಿಪ್ಚೇತಿ ಕ್ವಿಪ್ । ಉಪಪದಸಮಾಸಃ । ಅನ್ಯೇಷಾಮಪಿ ದೃಶ್ಯತ ಇತಿ ಪೂರ್ವಪದಸ್ಯ ದೀರ್ಘತ್ವಂ। ವೃಧಿಧಾತುಸ್ವರೇಣೋದಾತ್ತಃ । ಸಮಾಸೇಕೃದುತ್ತರಪದಪ್ರಕೃತಿಸ್ವರತ್ವೇನ ಸ ಏವ ಶಿಷ್ಯತೇ। ದೇವೀಃ । ವಾ ಛಂದಸೀತಿ ಪೂರ್ವಸವರ್ಣದೀರ್ಘತ್ವಂ । ದೇವಶಬ್ದಾತ್ಪಚಾದ್ಯಜಂತಾತ್ಪುಂಯೋಗಾದಾಖ್ಯಾಯಾಂ । ಪಾ. ೪-೧-೪೮ । ಇತಿ ಙೀಷ್ । ಪ್ರತ್ಯಯಸ್ವರೇಣೋದಾತ್ತಃ । ವಿಭಕ್ತ್ಯಾ ಸಹೈಕಾದೇಶ ಉದಾತ್ತೇನೋದಾತ್ತ ಇತ್ಯುದಾತ್ತಃ । ಅಸಶ್ಚತಃ । ಗ್ಲುಞ್ಚು ಷಸ್ಜ ಗತೌ । ಜಕಾರಸ್ಯ ವ್ಯತ್ಯಯೇನ ಚಕಾರಃ । ಲಟಃ ಶತ್ರಾದೇಶಃ । ದ್ವಾರಾಭಾವೇ ನ ವಿದ್ಯಂತೇ ಸಶ್ಚಂತೋ ಗಚ್ಛಂತೋ ಯೇಷು ಪ್ರಾಗ್ವಂಶಾದಿಷು ತಾನಸಶ್ಚತಃ । ಅದ್ಯ । ಸದ್ಯಃಪರುದಿತ್ಯಾದಿನಾ ದ್ಯಪ್ರತ್ಯಯಾಂತೋ ನಿಪಾತಿತಃ । ತದ್ಧಿತಶ್ಚಾಸರ್ವವಿಭಕ್ತಿರಿತ್ಯವ್ಯಯಸಂಜ್ಞಕತ್ವಾತ್ಪರಸ್ಯಾ ವಿಭಕ್ತೇರ್ಲುಕ್ । ಪ್ರತ್ಯಯಸ್ವರೇಣಾಂತೋದಾತ್ತಃ । ಸಂಹಿತಾಯಾಮನ್ಯೇಷಾಮಪಿ ದೃಶ್ಯತ ಇತಿ ದೀರ್ಘತ್ವಂ । ನೂನಂ । ಏವಮಾದೀನಾಮಂತ ಇತ್ಯಂತೋದಾತ್ತತ್ವಂ । ಯಷ್ಟವೇ । ಯಜೇಸ್ತುಮರ್ಥೇ ಸೇಸೇನಿತ್ಯಾದಿನಾ । ಪಾ. ೩-೪-೯ । ತವೇನ್ಪ್ರತ್ಯಯಃ । ವ್ರಶ್ಚಾದಿನಾ ಷತ್ವಂ । ನಿತ್ತ್ವಾದಾದ್ಯುದಾತ್ತಃ ॥

॥ ಪ್ರತಿಪದಾರ್ಥ ॥

ಅದ್ಯ—ಈ ದಿವಸದಲ್ಲಿ (ಈಗಲೇ) । ನೂನಂ—ಅವಶ್ಯಕವಾಗಿ । ಯಷ್ಟವೇ ಚ—(ನಾವು) ಯಜ್ಞ ಮಾಡುವುದಕ್ಕಾಗಿ । ಋತಾವೃಧಃ—ಯಜ್ಞದ ವೃದ್ಧಿಗೆ ಎಂದರೆ ಯಜ್ಞವು ಮುಂದೆ ನಡೆಯುವುದಕ್ಕೆ ಸಹಾಯ ಭೂತವಾದ । ದೇವೀಃ—ಪ್ರಕಾಶಿಸುವ (ಬೆಳಕನ್ನುಂಟುಮಾಡುವ) । ಅಸಶ್ಚತಃ—ಸಂಗರಹಿತವಾದ ಎಂದರೆ ಇದುವರೆಗೆ ಯಾರೂ ಪ್ರವೇಶಿಸದಿರುವ । ದ್ವಾರಃ—ಯಜ್ಞಶಾಲೆಯ ದ್ವಾರಗಳು (ಬಾಗಿಲುಗಳು) । ವಿಶ್ರಯಂತಾಂ—ತೆರೆಯಲ್ಪಡಲಿ ॥

॥ ಭಾವಾರ್ಥ ॥

ಯಾಗಶಾಲೆಯ ದ್ವಾರಗಳು ಚೆನ್ನಾಗಿ ಬೆಳಕನ್ನುಂಟುಮಾಡಿ ಯಜ್ಞವು ನಡೆಯುವುದಕ್ಕೆ ಸಹಾಯ ಭೂತವಾಗಿರುವವು. ಇದುವರೆಗೆ (ಎಂದರೆ ಈದಿನ) ಈ ಯಜ್ಞಶಾಲೆಯುನ್ನು ಯಾರೂ ಪ್ರವೇಶಿಸಿಲ್ಲ. ಇಂತಹ ಯಜ್ಞಶಾಲೆಯ ಬಾಗಿಲುಗಳು ನಾವು ಮಾಡುವ ಯಜ್ಞಕ್ಕಾಗಿ ಈಗಲೇ ತಡವಿಲ್ಲದೆ ತೆರೆಯಲ್ಪಡಲಿ.

## English Translation.

Let the divine doors, the promoters of the sacred rite, hitherto unentered be set open ; for certainly to-day the sacrifice is to be performed.

### ॥ ವಿಶೇಷವಿಷಯಗಳು ॥

ಯಜ್ಞಶಾಲೆಯನ್ನು ಪ್ರವೇಶಮಾಡುವಾಗ ಯಜಮಾನಾದಿ ಋತ್ವಿಜರು ಯಜ್ಞಶಾಲೆಯ ದ್ವಾರಗಳನ್ನು ಪ್ರಾರ್ಥಿಸುವರು. ಈ ಸೂಕ್ತದಲ್ಲಿರುವ ಋಕ್ಕುಗಳೆಲ್ಲವೂ ಸಾಮಾನ್ಯವಾಗಿ ಅಗ್ನಿಪರವಾಗಿಯೇ ಇದ್ದರೂ ಈ ಋಕ್ಕಿನಲ್ಲಿ **ದೇವೀರ್ದ್ವಾರಃ** ಎಂದರೆ ದ್ವಾರದೇವತೆಗಳನ್ನು (ದ್ವಾರಾಭಿಮಾನಿ ದೇವತೆಗಳನ್ನು) ಪ್ರಾರ್ಥಿಸಲಾಗಿದೆ ಯಾಸ್ಕರ ವಿವರಣೆಯು—

**ದ್ವಾರಃ । ದ್ವಾರೋ ಜವತೇರ್ವಾ ದ್ರವತೇರ್ವಾ ವಾರಯತೇರ್ವಾ ॥**
**ಅಗ್ನಿರಿತಿ ಶಾಕಪೂಣಿಃ ॥**

ದ್ವಾರವೆಂದರೆ ಪ್ರವೇಶಿಸುವುದಕ್ಕೆ, ಒಳಕ್ಕೆ ಹೋಗುವುದಕ್ಕೆ ಅಥವಾ ಒಳಗೆ ಹೋಗುವುದನ್ನು ತಡೆಯುವುದಕ್ಕೆ ಇರುವುದರಿಂದ ಇದಕ್ಕೆ ದ್ವಾರವೆಂದು ಹೆಸರು. ದ್ವಾರವೆಂದರೆ ಅಗ್ನಿಯೆಂದು ಶಾಕಪೂಣಿಯ ಮತವು ಎಂದಿರುವುದು. ಹೋಮವನ್ನು ಮಾಡುವ ಹೋಮಗೃಹವು ಅಗ್ನಿಯ ಸ್ವರೂಪವೆಂದೂ ಆದುದರಿಂದ ಅದರ ದ್ವಾರಗಳೂ ಅಗ್ನಿಯ ವಿಶೇಷ ರೂಪಗಳೆಂದು (ಅಗ್ನಿವಿಶೇಷಮೂರ್ತಯಃ) ಹೇಳುವರು. The doors of the chamber in which the oblation is offered, said to be personifications of Agni.

**ವಿಶ್ರಯಂತಾಂ—ಕವಾಟೋದ್ಘಾಟನೇನ ವಿವ್ರಿಯಂತಾಂ । ವಿವೃತಾ ಭವಂತು ।** ಬಾಗಿಲುಗಳು ಚೆನ್ನಾಗಿ ತೆರೆಯಲ್ಪಡಲಿ.

**ಋತಾವೃಧಃ—ಋತಂ (ಯಜ್ಞಂ) ವರ್ಧಯಂತೀತಿ ಋತಾವೃಧಃ** ಯಜ್ಞವು ಮುಂದುವರೆಯಲು ಸಹಾಯಭೂತವಾದ ಎಂದರೆ ಯಾಗಶಾಲಾಪ್ರವೇಶದಿಂದ ಯಜ್ಞದಲ್ಲಿ ಮಾಡಬೇಕಾಗಿರುವ ಹೋಮಾದಿಗಳನ್ನು ನಡೆಸಲು ಸಹಾಯವಾಗುವುದು ಎಂದಭಿಪ್ರಾಯವು.

**ದೇವೀಃ—ದ್ಯೋತಮಾನಾಃ** ಪ್ರಕಾಶಮಾನವಾದ, ಚೆನ್ನಾಗಿ ಬೆಳಕನ್ನುಂಟುಮಾಡುವ. ಬಾಗಿಲನ್ನು ತೆರೆದರೆ ಚೆನ್ನಾಗಿ ಬೆಳಕುಂಟಾಗುವುದು ಸಹಜವೇ ಆಗಿದೆ. ಇಲ್ಲಿ **ದೇವೀಃ** ಎಂಬ ಶಬ್ದವನ್ನು **ದ್ವಾರಃ** ಎಂಬ ಶಬ್ದಕ್ಕೆ ವಿಶೇಷಣ ಪದವನ್ನಾಗಿ ಭಾವಿಸಿ ಅರ್ಥಮಾಡಿದ್ದರೂ **ದೇವೀರ್ದ್ವಾರಃ** ಎಂಬ ಎರಡು ಶಬ್ದಗಳೂ ದ್ವಾರಾಭಿಮಾನಿ ದೇವತೆಗಳು ಎಂಬ ಅರ್ಥದಲ್ಲಿಯೂ ಉಪಯೋಗಿಸಲ್ಪಡಬಹುದು. ಏಕೆಂದರೆ ಅನುಕ್ರಮಣಿಕೆಯಲ್ಲಿ ಈ ಋಕ್ಕಿನ ದೇವತೆಯು **ದೇವೀರ್ದ್ವಾರಃ** ಎಂದು ನಿರ್ದೇಶಿಸಲ್ಪಟ್ಟಿದೆ.

**ಅಸಶ್ಚತಃ**—**ದ್ವಾರಾಭಾವೇ ಸಶ್ಚಂತೋ ಗಚ್ಛಂತೋ ಯೇಷು । ನ ಸಶ್ಚತಃ ಅಸಶ್ಚತಃ**— ಪ್ರವೇಶರಹಿತವಾದ, ಯಾರೂ ಪ್ರವೇಶಿಸಿಲ್ಲದ, ಅಥವಾ ಪ್ರವೇಶಿಸುವವರನ್ನು ತಡೆಯುವ ಇತ್ಯಾದ್ಯರ್ಥಗಳನ್ನು ಹೇಳಬಹುದು.

**ಅದ್ಯ**— ಈಗ, ಈದಿನ, ನಾವು ಯಜ್ಞಮಾಡುತ್ತಿರುವ ಈ ಕಾಲ ಅಂತ್ಯಾಕ್ಷರವು ಛಂದಸ್ಸಿನ ಅನು ಕೂಲಕ್ಕಾಗಿ ಸಂಹಿತಾಪಾಠದಲ್ಲಿ ದೀರ್ಘವಾಗಿರುವುದು.

**ನೂನಂ**—ಅವಶ್ಯಕವಾಗಿ, ನಿಶ್ಚಯವಾಗಿ certainly, without fail.

**ಚ**— ಈ ಶಬ್ದಕ್ಕೆ ಇಲ್ಲಿ ಹೆಚ್ಚು ಅರ್ಥವೇನೂ ಇಲ್ಲ. ಒಂದು ವಿಧದಲ್ಲಿ ನೋಡಿದರೆ ಈ ಋಕ್ಕಿನಲ್ಲಿ ಈ ಶಬ್ದದ ಆವಶ್ಯಕತೆಯೇ ಇರುವುದಿಲ್ಲ. ಭಾಷ್ಯಕಾರರು ಇದಕ್ಕೆ **ದಿನಾಂತರೇಷ್ವಪಿ**— ಇತರ ದಿನಗಳಲ್ಲಿಯೂ ಎಂದರ್ಥ ಹೇಳಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಋತಾವೃಧಃ**— ಋತಂ ವರ್ಧಯನ್ತಿ ಎಂಬ ಅರ್ಥದಲ್ಲಿ ಅಂತರ್ಭಾವಿತ ಣಿಚ್ಪ್ರತ್ಯಯಾರ್ಥಕವಾದ **ವೃಧ್** ಧಾತುವಿನ ಮುಂದೆ **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಬರುವುದು. **ಉಪಪದಮತಿಙ್** (ಪಾ. ಸೂ. ೨-೨-೧೯) ಉಪಪದವಾದ ಸುಬಂತವು ಸಮರ್ಥವಾದ ಶಬ್ದದೊಂದಿಗೆ ನಿತ್ಯವಾಗಿ ಸಮಾಸವನ್ನು ಹೊಂದುವುದು ಎಂಬುದರಿಂದ ಸಮಾಸ, **ಅನ್ಯೇಷಾಮಪಿ ದೃಶ್ಯತೇ** (ಪಾ ಸೂ. ೬-೩-೧೩೭) ಎಂಬುದರಿಂದ **ಪೂರ್ವ ಪದಕ್ಕೆ** ದೀರ್ಘ. ವೃಧ್ ಎಂಬುದು ಧಾತುಸ್ವರದಿಂದ ಉದಾತ್ತಸಮಾಸ ಬಂದಮೇಲೆ **ಗತಿಕಾರಕೋಪಪದಾ ತ್ಕೃತ್** (ಪಾ ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬಂದು ಅದೇ ಸ್ವರವೇ ನಿಲ್ಲುವುದು. ಪ್ರಥಮಾಬಹುವಚನಾಂತ.

**ದೇವೀಃ**— ದೇವಶಬ್ದವು ದಿವು ಕ್ರೀಡಾದೌ, ಧಾತುವಿನ ಮುಂದೆ **ನಂದಿಗ್ರಹಿಪಚಾದಿಭ್ಯೋಲ್ಯುಣಿ- ನ್ಯಚಃ** ( ಪಾ. ಸೂ. ೩-೧-೧೩೪ ) ಎಂಬುದರಿಂದ ಅಚ್ಪ್ರತ್ಯಯ ಬಂದು ನಿಷ್ಪನ್ನವಾಗಿರುವುದು. ಆದ್ದರಿಂದ ಚಿತಃ, ಎಂಬುದರಿಂದ ಅಂತೋದಾತ್ತ, ಇದರ ಮುಂದೆ **ಪುಂಯೋಗಾದಾಖ್ಯಾಯಾಂ** (ಪಾ. ಸೂ ೪-೧-೪೮) ಪುಲ್ಲಿಂಗದಲ್ಲಿ ಪ್ರಸಿದ್ಧವಾದ ಶಬ್ದವು ಪುರುಷಸಂಬಂಧದಿಂದ ಲಕ್ಷಣಾಮೂಲಕವಾಗಿ ಸ್ತ್ರೀಲಿಂಗದಲ್ಲಿದ್ದರೆ ಅಂತಹ ಶಬ್ದದ ಮುಂದೆ **ಙೀಷ್** ಬರುವುದು. (ಪುರುಷಸಂಬಂಧವು ದಾಂಪತ್ಯರೂಪವಾದುದು. ಅಥವಾ ಜನ್ಯ ಜನಕಭಾವವು ವಿವಕ್ಷಿತವು) ಎಂಬುದರಿಂದ ದೇವಸ್ಯ ಸ್ತ್ರೀ ಎಂದು ವಿವಕ್ಷಿಸಿದಾಗ ಙೀಷ್, ಬರುವುದು. ದೇವ+ಈ **ಯಸ್ಯೇತಿಚ** (ಪಾ. ಸೂ. ೬-೪-೧೪೮) ಎಂಬುದರಿಂದ ಅಕಾರಕ್ಕೆ ಲೋಪ. ಈಕಾರವು ಪ್ರತ್ಯಯಸ್ವರದಿಂದ ಉದಾತ್ತ. ಇದರ ಮುಂದೆ ಪ್ರಥಮಾಬಹುವಚನ ಜಸ್ ಪ್ರತ್ಯಯ **ಪ್ರಥಮಯೋಃ ಪೂರ್ವಸವರ್ಣಃ** (ಪಾ ಸೂ ೬-೧-೧೦೨) ಎಂಬುದರಿಂದ ಪೂರ್ವಸವರ್ಣದೀರ್ಘ ಪ್ರಾಪ್ತವಾದರೆ **ದೀರ್ಘಾಜ್ಜಸಿಚ** (ಪಾ. ಸೂ. ೬-೧-೧೦೫) ಎಂಬುದರಿಂದ ಅದಕ್ಕೆ ನಿಷೇಧವು ಬರುವುದು. ಆದರೂ **ವಾಛಂದಸಿ** (ಪಾ. ಸೂ. ೩-೪-೮೮ ಎಂಬುದರಿಂದ ಪೂರ್ವಸವರ್ಣದೀರ್ಘವು ಏಕಾದೇಶವಾಗಿ ಬರುವುದು. ಈ ಏಕಾದೇಶವು **ಏಕಾದೇಶ ಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಎಂಬುದರಿಂದ ಉದಾತ್ತ.

**ಅಸಶ್ಚತಃ**— ಗ್ಲುಞ್ಚು ಷಸ್ಜ ಗತೌ ಧಾತು. ಜಕಾರಕ್ಕೆ ವ್ಯತ್ಯಯದಿಂದ ಚಕಾರ **ಧಾತ್ವಾದೇಃ ಷಃ ಸಃ** (ಪಾ. ಸೂ. ೬-೧-೬೪) ಎಂಬುದರಿಂದ ಷಕಾರಕ್ಕೆ ಸಕಾರ. ಇದರ ಮುಂದೆ ಲಟ್ ಅದರ ಸ್ಥಾನದಲ್ಲಿ **ಲಟಶ್ಶತೃ** (ಪಾ. ಸೂ. ೩-೨-೧೨೪) ಎಂಬುದರಿಂದ ಶತೃ ಆದೇಶ. ಶಪ್ ವಿಕರಣ. ಸಸ್ಚ್+ಅ+ಅತ್ **ಅತೋಗುಣೇ** ಎಂಬುದರಿಂದ ಪರರೂಪ ಸಶ್ಚತ್. ದ್ವಾರಾಭಾವೇನ ನ ವಿದ್ಯಂತೇ ಸಶ್ಚಂತೋ ಗಚ್ಛಂತಃ ಯೇಷು ಪ್ರಾಗ್ವಂಶಾದಿಷು, ತಾನ್ ಎಂದು ವಿಗ್ರಹ. ದ್ವಿತೀಯಾಬಹುವಚನ ಶಸ್ ಬಂದು ಅಸಶ್ಚತಃ ಎಂದಾಗುವುದು-

**ಅದ್ಯ**— **ಸದ್ಯಃ ಪರುತ್** (ಪಾ. ಸೂ ೫-೩-೨೨) ಇತ್ಯಾದಿ ಸೂತ್ರದಿಂದ, ಸ್ಪ್ರತ್ಯಯಾಂತವಾಗಿ ನಿಪಾ. ತಿಸಲ್ಪಟ್ಟಿರುವುದು. **ತದ್ಧಿತಶ್ಚಾ ಸರ್ವವಿಭಕ್ತಿಃ** (ಪಾ. ಸೂ. ೧-೧-೩೮) ಎಂಬುದರಿಂದ ಅವ್ಯಯಸಂಜ್ಞೆ ಇರುವುದರಿಂದ ಇದರ ಮುಂದೆ ಬರುವ ಸಪ್ತಮೀ ಏಕವಚನ ಜಿಪ್ರತ್ಯಯಕ್ಕೆ **ಅವ್ಯಯಾದಾಪ್ ಸುಪಃ** (ಪಾ. ಸೂ. ೨-೪-೮೨) ಎಂಬುದರಿಂದ ಲುಕ್ ಬರುವುದು. ಇದು ಪ್ರತ್ಯಯಸ್ವರದಿಂದ ಅಂತೋದಾತ್ತ. ಸಂಹಿತಾಕಾಲದಲ್ಲಿ **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ ೬-೩-೧೩೭) ಎಂಬುದರಿಂದ ದೀರ್ಘ.

**ನೂನಂ**— **ಏವಾದೀನಾಮನ್ತಃ** (ಪಾ. ಸೂ. ೮೨) ಎಂಬುದರಿಂದ ಅಂತೋದಾತ್ತ.

**ಯಷ್ಟವೇ**— ಯಜದೇವಪೂಜಾದೌ ಧಾತು. ಇದರ ಮುಂದೆ **ತುಮರ್ಥೇಸೇಸೇನಸೇ ಅಸೇನ್‌ಕ್ಸೇ ಕಸೇನಧ್ಯೈ ಅಧ್ಯೈನ್ ಕಧ್ಯೈ ಕಧ್ಯೈನ್ ಶಧ್ಯೈ ಶಧ್ಯೈನ್ ತವೈ ತವೇಙ್ ತವೇನಃ** (ಪಾ.ಸೂ. ೩-೪-೯) ಎಂಬುದರಿಂದ ತುಮುನ್ ಪ್ರತ್ಯಯಾರ್ಥದಲ್ಲಿ ತವೇನ್‌ಪ್ರತ್ಯಯ ಯಜ್+ತವೇ **ವ್ರಶ್ಚಭ್ರಸ್ಜಸೃಜ ಮೃಜಯಜರಾಜಭ್ರಾಜಚ್ಛಶಾಂ ಷಃ** (ಪಾ. ಸೂ. ೮-೨-೩೬) ಎಂಬುದರಿಂದ ಜಕಾರಕ್ಕೆ ಷಕಾರ. **ಷ್ಟುನಾಷ್ಟುಃ** (ಪಾ. ಸೂ. ೮-೪-೪೧) ಎಂಬುದರಿಂದ ಷ್ಟುತ್ವ ಬಂದು ತಕಾರಕ್ಕೆ ಟಕಾರ ಬರುವುದು. ಯಷ್ಟವೇ ಎಂದಾಗುವುದು ಪ್ರತ್ಯಯವು ನಿತ್ತಾದ್ದರಿಂದ ನಿತ್ಸ್ವರದಿಂದ ಇದು ಆದ್ಯುದಾತ್ತ. ॥ ೬ ॥

॥ ಸಂಹಿತಾಪಾಠಃ ॥

ನಕ್ತೋಷಾಸಾ ಸುಪೇಶಸಾಸ್ಮಿನ್ಯಜ್ಞ ಉಪ ಹ್ವಯೇ ।
ಇದಂ ನೋ ಬರ್ಹಿರಾಸದೇ ॥ ೭ ॥

॥ ಪದಪಾಠಃ ॥

ನಕ್ತೋಷಸಾ । ಸುಽ ಪೇಶಸಾ । ಅಸ್ಮಿನ್ । ಯಜ್ಞೇ । ಉಪ । ಹ್ವಯೇ ॥
ಇದಂ । ನಃ । ಬರ್ಹಿಃ । ಆಽ ಸದೇ ॥ ೭ ॥

॥ ಸಾಯಣಭಾಷ್ಯಂ ॥

ನಕ್ತಶಬ್ದ ಉಷಃಶಬ್ದಶ್ಚ ಲೋಕೇ ಕಾಲವಿಶೇಷವಾಚಿನೌ । ಇಹ ತು ತತ್ಕಾಲಾಭಿಮಾನಿ ವಹ್ನಿಮೂರ್ತಿದ್ವಯೇ ಪ್ರಯುಜ್ಯೇತೇ । ನಕ್ತೋಷಾಸಾ ನಕ್ತೋಷೋ ನಾಮಿಕೇ ವಹ್ನಿಮೂರ್ತೀ ಅಸ್ಮಿನ್ವರ್ತಮಾನೇ ಯಜ್ಞಕರ್ಮಣ್ಯುಪ ಹ್ವಯೇ । ಆಹ್ವಯಾಮಿ । ಕಿಮರ್ಥಂ । ನೋಽಸ್ಮದೀಯಮಿದಂ ವೇದ್ಯಾಮಾಸ್ತೀರ್ಣಂ ಬರ್ಹಿರ್ದರ್ಭಮಾಸದೇ । ಆಸತ್ತುಂ । ಪ್ರಾಪ್ತುಂ । ಕೀದೃಶೌ । ಸುಪೇಶಸಾ ಶೋಭನರೂಪಯುಕ್ತೇ ॥ ನಕ್ತಂ ಚೋಷಾಶ್ಚ ನಕ್ತೋಷಸಾ । ದ್ವಿತೀಯಾದ್ವಿವಚನಸ್ಯ ಸುಪಾಂ ಸುಲುಗಿತ್ಯಾಕಾರಃ ಮಲೋಪ ಉಪಧಾದೀರ್ಘಶ್ಛಾಂದಸೌ । ದೇವತಾದ್ವಂದ್ವೇ ಚ । ಪಾ. ೬.೨.೧೪೧ । ಇತಿ ಪೂರ್ವೋತ್ತರಪದಯೋರ್ಯುಗಪತ್ಪ್ರಕೃತಿಸ್ವರತ್ವಂ । ಸುಪೇಶಸಾ । ಶೋಭನಂ ಪೇಶೋ ರೂಪಂ ಯಯೋಸ್ತೇ । ಪೂರ್ವವದಾಕಾರಃ । ಪೇಶಃಶಬ್ದೋ ನಬ್ವಿಷಯತ್ವಾದಾದ್ಯುದಾತ್ತಃ । ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಸ್ಯಾಪವಾದತ್ವೇನಾದ್ಯುದಾತ್ತಂ ದ್ವ್ಯಚ್ಛಂದಸಿ । ಪಾ. ೬.೨.೧೧೯ । ಇತ್ಯುತ್ತರಪದಾದ್ಯುದಾತ್ತತ್ವಂ । ಅಸ್ಮಿನ್ । ಊಡಿದಮಿತ್ಯಾದಿನಾ ವಿಭಕ್ತಿರುದಾತ್ತಾ । ಆಸದೇ । ಷದ್ಲೃ ವಿಶರಣಗತ್ಯವಸಾದನೇಷು । ಧಾತ್ವಾದೇಃ ಷಃ ಸಃ । ಆಙ್ಪೂರ್ವಾದಸ್ಮಾತ್ಸಂಪದಾದಿಭ್ಯೋ ಭಾವೇ ಕ್ವಿಪ್ । ಪಾ. ೩-೩-೧೦೮. ೯ । ಪ್ರಾದಿಸಮಾಸಃ । ಕೃದುತ್ತರಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ನಃ**—ನಮ್ಮ । **ಇದಂ**—ಈ ವೇದಿಯಲ್ಲಿ ಹರಡಿರುವ । **ಬರ್ಹಿಃ**—ಆಸನಾರ್ಥವಾಗಿ ಸಿದ್ಧಪಡಿಸಿರುವ ದರ್ಭೆಯನ್ನು । **ಆಸದೇ**—ಹೊಂದುವುದಕ್ಕೋಸ್ಕರ (ನಾವು ಹಾಸಿರುವ ದರ್ಭೆಯಲ್ಲಿ ಕುಳಿತುಕೊಳ್ಳುವುದಕ್ಕಾಗಿ) । **ಸುಪೇಶಸಾ**—ಶೋಭನ (ಉತ್ತಮವಾದ) ರೂಪಯುಕ್ತರಾದ । **ನಕ್ತೋಷಾಸಾ**—ರಾತ್ರಿ ಮತ್ತು ಉಷಃಕಾಲಗಳೆಂಬ (ಅಥವಾ ಈ ಕಾಲಗಳ ಅಭಿಮಾನಿಗಳಾದ) ದೇವತೆಗಳನ್ನು । **ಅಸ್ಮಿನ್ ಯಜ್ಞೇ**—ನಡೆಯುತ್ತಿರುವ ಈ ಯಜ್ಞದಲ್ಲಿ । **ಉಪ ಹ್ವಯೇ**—ಆಹ್ವಾನ ಮಾಡುವೆನು.

॥ ಭಾವಾರ್ಥ ॥

ನಾವು ಮಾಡುತ್ತಿರುವ ಯಜ್ಞದಲ್ಲಿ ವೇದಿಯ ಮೇಲೆ ದರ್ಭೆಗಳನ್ನು ಹರಡಿ ಆಸನವನ್ನು ಸಿದ್ಧಪಡಿಸಿರುವೆವು. ಈ ಆಸನದ ಮೇಲೆ ಬಂದು ಕುಳಿತುಕೊಳ್ಳುವುದಕ್ಕಾಗಿ ಉತ್ತಮವಾದ ರೂಪಗಳಿಂದ ಶೋಭಿಸುವ (ರಾತ್ರಿ ಮತ್ತು ಪ್ರಾತಃಕಾಲದ ಅಭಿಮಾನಿದೇವತೆಗಳಾದ ನಕ್ತೋಷಾಸಾ ಎಂಬ) ದೇವತೆಗಳನ್ನು ಈಗ ನಡೆಯುತ್ತಿರುವ ಯಜ್ಞದಲ್ಲಿ ಆಹ್ವಾನ ಮಾಡುವೆನು.

English Translation.

I invoke here at this sacrifice Night and Dawn, the beautifully adorned goddesses, that they may sit down on this our sacrificial grass.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ **ನಕ್ತೋಷಾಸಾ** ಎಂಬ ರಾತ್ರಿ ಮತ್ತು ಪ್ರಾತಃಕಾಲದ ಅಭಿಮಾನಿದೇವತೆಗಳು ಆಹ್ವಾನ ಮಾಡಲ್ಪಟ್ಟಿರುವರು. **ನಕ್ತೋಷಸಾ** ಎಂಬ ಶಬ್ದಕ್ಕೆ ಯಾಸ್ಕರ ವಿವರಣೆಯು ಈರೀತಿ ಇರುವುದು—

**ಉಷಾಸಾನಕ್ತಾ । ಉಷಾಸಾನಕ್ತೋಷಾಶ್ಚ ನಕ್ತಾ ಚೋಷಾ ವ್ಯಾಖ್ಯಾತಾ । ನಕ್ತೇತಿ ರಾತ್ರಿನಾಮಾನಕ್ತಿ ಭೂತಾನ್ಯವಶ್ಯಾಯೇನಾಪಿ ವಾ ನಕ್ತಾವ್ಯಕ್ತವರ್ಣಾ ॥**

**ನಕ್ತೋಷಾಸಾ, ಉಷಾಸಾನಕ್ತಾ** ಎಂದು ಎರಡು ವಿಧನಾಗಿ ಪಠಿಸಿದರೂ, ಅರ್ಥವಮಾತ್ರ ಒಂದೇ ಆಗಿರುವುದು. **ಉಷಾಃ** ಶಬ್ದದ ವಿವರಣೆಯನ್ನು ಹಿಂದೆಯೇ ಹೇಳಿರುವೆವು **ನಕ್ತಾ** ಎಂಬರೆ ರಾತ್ರಿಯು ಹೆಸರು. ಏಕೆಂದರೆ, **ನಕ್ತಾ** ಎಂದರೆ **ಅವ್ಯಕ್ತವರ್ಣಾ** ಕತ್ತಲೆಯಾಗಿರುವುದರಿಂದ ವಸ್ತುಗಳು ಅವ್ಯಕ್ತವಾಗಿರುವವು ಎಂದರೆ ಚೆನ್ನಾಗಿ ಕಾಣಿಸಿದೆ ಇರುವವು. ಆದುದರಿಂದ ಕತ್ತಲೆಯಿಂದ ಕೂಡಿದ ರಾತ್ರಿಗೆ ನಕ್ತಾ ಎಂದು ಹೆಸರು ಮತ್ತು ಈ ರಾತ್ರಿಕಾಲದಲ್ಲಿ ಪ್ರಾಣಿಗಳು ತಮ್ಮ ತಮ್ಮ ವ್ಯಾಪಾರಗಳನ್ನು ಮಾಡಲಸಮರ್ಥವಾಗಿರುವವು. **ಅನಕ್ತಿ, ಕ್ಲೇದಯತಿ ಭೂತಾನಿ ಅವಶ್ಯಾಯೇನ ಇತಿ । ಅಪಿ ವಾನಕ್ತಾ ಅವ್ಯಕ್ತವರ್ಣಾ । ಯಥಾ ಅಹಃ ಸರ್ವಮಭಿವ್ಯಕ್ತರೂಪಂ ಭವತಿ ನ ತಥಾ ರಾತ್ರಿಃ ॥** ಕತ್ತಲೆಯು ಪ್ರಾಣಿಗಳ ವ್ಯಾಪಾರಾದಿಗಳು ಸರಿಯಾಗಿ ನಡೆಯಲು ಅವಕಾಶವಿಲ್ಲದಂತೆ ಅವುಗಳಿಗೆ ತೊಂದರೆ ಕೊಡುವುದರಿಂದ ಅಂತಹ ಕತ್ತಲೆಯಿಂದ ಕೂಡಿದ ರಾತ್ರಿಗೆ ನಕ್ತಾ ಎಂದು ಹೆಸರು ಅಥವಾ ಯಾವುದೂ ಚೆನ್ನಾಗಿ ಕಾಣಿಸದಂತೆ ಅವ್ಯಕ್ತವಾಗಿರುವುದರಿಂದ **ನಕ್ತಾ** ಎಂದು ಹೆಸರು. ಹಗಲಿನಲ್ಲಿ ಸಮಸ್ತ ವಸ್ತುಗಳ ರೂಪಗಳು ಸ್ಪಷ್ಟವಾಗಿ ಕಾಣಿಸುವವು. ರಾತ್ರಿಯಲ್ಲಿ ಆರೀತಿ ಕಾಣಿಸುವುದಿಲ್ಲ. ಆದುದರಿಂದ ರಾತ್ರಿಕಾಲಕ್ಕೆ ನಕ್ತಾ ಎಂದು ಹೆಸರು ಎಂದು ಅರ್ಥವಿವರಣೆ ಮಾಡಿರುವರು. (ನಿ. ೮-೧೧).

**ಉಷಾಃ** ಎಂಬ ಶಬ್ದಕ್ಕೆ ಅರ್ಥವಿವರಣೆಯನ್ನು ಹಿಂದೆಯೇ ಮಾಡಿರುವೆವು ಎಂದು ಹೇಳಿರುವರಷ್ಟೆ. ಆ ವಿವರಣೆಯು ಈರೀತಿ ಇರುವುದು—

**ವಿಭಾವರೀ, ಸೂನರೀ ಮೊದಲಾದ ಹದಿನಾರು ಶಬ್ದಗಳು ಉಷೋನಾಮ ಶಬ್ದಗಳು. (೨-೧೯)** ಮತ್ತು

**ಉಷಾಃ ಕಸ್ಮಾದುಚ್ಛತೀತಿ ಸತ್ಯಾ ರಾತ್ರೇರಪರಃ ಕಾಲಃ ॥**

ರಾತ್ರಿಕಾಲದ ತಮಸ್ಸನ್ನು (ಕತ್ತಲೆಯನ್ನು ನಿವಾರಣೆ ಮಾಡುವುದರಿಂದ ಉಷಾಃ ಎಂದು ಹೆಸರು ಎಂದರೆ ರಾತ್ರಿಯ ಅಪರಕಾಲವು, ಕೊನೆಯ ಭಾಗವು. ಈ ಅರ್ಥವನ್ನು ಸಮರ್ಥಿಸುವುದಕ್ಕಾಗಿ ಒಂದು ಉದಾಹರಣೆಯನ್ನು ಕೊಟ್ಟಿರುವರು.

**ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರಾಗಾಚ್ಚಿತ್ರಃ ಪ್ರಕೇತೋ ಅಜನಿಷ್ಟ ವಿಭ್ವಾ ।**
**ಯಥಾ ಪ್ರಸೂತಾ ಸವಿತುಃ ಸವಾಯ॑ ಏವಾ ರಾತ್ರ್ಯುಷಸೇ ಯೋನಿಮಾರೈಕ್ ॥**
(ಋ. ಸಂ. ೧-೧೧೩-೧)

ಈ ಋಕ್ಕಿನ ನಿರುಕ್ತವು—

ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರಾಗಮತ್ । ಚಿತ್ರಂ ಪ್ರಕೇತನಂ ಪ್ರಜ್ಞಾತತಮಮಜನಿಷ್ಟ ವಿಭೂತತಮಂ ಯಥಾ ಪ್ರಸೂತಾ ಸವಿತುಃ ಪ್ರಸವಾಯ ರಾತ್ರಿರಾದಿತ್ಯಸ್ಯ । ಏವಂ ರಾತ್ರ್ಯುಷಸೇ ಯೋನಿಮರಿಚತ್ ಸ್ಥಾನಂ । ಸ್ತ್ರೀಯೋನಿರಭಿಯುತ ಏನಾಂ ಗರ್ಭಃ ॥

ಸೂರ್ಯನ ಉತ್ತಮವಾದ ಮತ್ತು ಅತಿಪ್ರಕಾಶಮಾನವಾದ ಬೆಳಕು ಉದಯಿಸುತ್ತಿರುವುದು. ಇಂತಹ ಸೂರ್ಯನ ಪ್ರಕಾಶಕ್ಕೆ ಪೂರ್ವಭಾವಿಯಾಗಿರುವ ಉಷಃಕಾಲವು ಆ ಪ್ರಕಾಶದ ನಿಕೇತನ (ಧ್ವಜದಂತೆ)ದಂತೆ ಬೆಳಕಿಗೆ ಮುಂಚೆಯೇ ತಲೆದೋರುವುದು. ಹೇಗೆಂದರೆ, ಸೂರ್ಯನ ಬೆಳಕು ಹಗಲೆಲ್ಲಾ ಪ್ರಕಾಶಿಸಿ ಅಸ್ತಮಾನ ಕಾಲದಲ್ಲಿ ರಾತ್ರಿಗೆ ಯೋನಿಭೂತವಾಗಿ ಎಂದರೆ ಕಾರಣವಾಗಿರುವಂತೆ ರಾತ್ರಿಯು ತನ್ನ ಅವಸಾನಕಾಲದಲ್ಲಿ ಉಷಃಕಾಲಕ್ಕೆ ಯೋನಿಭೂತವಾಗಿರುವುದು ಎಂದರೆ ಕಾರಣಭೂತವಾಗಿರುವುದು. ಯೋನಿಯೆಂದರೆ ಜನ್ಮಸ್ಥಾನವು. ಹಗಲಿನ ಕೊನೆಯಲ್ಲಿ ರಾತ್ರಿಯೂ ರಾತ್ರಿಯ ಕೊನೆಯಲ್ಲಿ ಉಷಃಕಾಲವೂ ಒಂದಾಗುತ್ತಲೊಂದು ಪರಿವರ್ತನರೂಪದಿಂದ ಪ್ರಾಪ್ತವಾಗುವವು ಎಂದು ಮುಖ್ಯಾಭಿಪ್ರಾಯವು. ಆದುದರಿಂದ ಉಷಃ ಎಂದರೆ ರಾತ್ರಿ ಕಳೆದನಂತರ ಸೂರ್ಯೋದಯಕ್ಕೆ ಪೂರ್ವದಲ್ಲಿ ಸಮಸ್ತ ದಿಕ್ಕುಗಳನ್ನು ವ್ಯಾಪಿಸಿ ತಲೆದೋರುವ ಪ್ರಕಾಶವು, ಬೆಳಕು ಎಂದರ್ಥವು.

ಭಾಷ್ಯಕಾರರ (ಸಾಯಣರ) ಅರ್ಥವಿವರಣೆಯು-ನಕ್ತಶಬ್ದ ಉಷಶ್ಶಬ್ದಶ್ಚ ಲೋಕೇ ಕಾಲವಿಶೇಷವಾಚಿನೌ। ಇಹ ತು ತತ್ಕಾಲಾಭಿಮಾನಿವಹ್ನಿಮೂರ್ತಿದ್ವಯೇ ಪ್ರಯುಜ್ಯೇತೇ । ನಕ್ತೋಷಾಸಾ ನಕ್ತೋಷೋನಾಮಿಕೇ ವಹ್ನಿಮೂರ್ತೀ-ಎಂದರೆ ನಕ್ತ (ರಾತ್ರಿ)ಉಷಃ (ಪ್ರಾತಃಕಾಲ) ಎಂಬ ಈ ಎರಡು ಶಬ್ದಗಳಿಗೆ ಲೋಕ ವ್ಯವಹಾರದಲ್ಲಿ ರಾತ್ರಿ, ಪ್ರಾತಃಕಾಲ ಎಂಬ ಕಾಲವಿಶೇಷಗಳನ್ನು ಸೂಚಿಸುವ ಅರ್ಥವಿರುವುದು. ಇಲ್ಲಿ ಎಂದರೆ ಈ ಋಕ್ಕಿನಲ್ಲಿ ಅಥವಾ ಋಗ್ವೇದದಲ್ಲಿ, ಈ ಶಬ್ದಗಳು ರಾತ್ರಿ ಮತ್ತು ಪ್ರಾತಃಕಾಲಾಭಿಮಾನಿದೇವತೆಗಳೆಂಬ ಅರ್ಥವನ್ನು ಪ್ರತಿಪಾದಿಸುವವು. ಆದುದರಿಂದ ನಕ್ತೋಷಾಸಾ ಅಥವಾ ಉಷಾಸಾನಕ್ತಾ ಎಂಬ ಶಬ್ದಗಳು ರಾತ್ರಿ ಮತ್ತು ಉಷಃಕಾಲಾಭಿಮಾನಿದೇವತೆಗಳಾದ ಅಗ್ನಿಯ ಎರಡು ಮೂರ್ತಿ (ರೂಪಗಳು)ಗಳೆಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿವೆ. ಈ ಋಕ್ಕಿನಲ್ಲಿ ಉಪಯೋಗಿಸಿರುವ ಸುಪೇಶಸಾ (ಒಳ್ಳೆಯ ರೂಪ ಅಥವಾ ಆಕಾರವುಳ್ಳ) ಎಂಬ ಶಬ್ದವು ಈ ಅರ್ಥವನ್ನು ಸಮರ್ಥಿಸುವುದು. ಏಕೆಂದರೆ ರಾತ್ರಿ ಮತ್ತು ಪ್ರಾತಃಕಾಲಗಳು ಕಾಲ ವಿಭಾಗಗಳಾದ್ದರಿಂದ ಅವುಗಳಿಗೆ ರೂಪವಾಗಲೀ, ಆಕಾರವಾಗಲಿ ಇರುವುದಿಲ್ಲ. ಆ ಕಾಲದ ಅಭಿಮಾನಿದೇವತೆಗಳೆಂದು ಹೇಳುವ ಪಕ್ಷದಲ್ಲಿ ಆ ದೇವತೆಗಳಿಗೆ ರೂಪವನ್ನು ನಿರ್ದೇಶಿಸಬಹುದು. ಈ ಋಕ್ಕಿನಲ್ಲಿ ಆರೀತಿ ನಿರ್ದೇಶವಿರುವುದರಿಂದ ಇಲ್ಲಿ ಆ ಕಾಲಗಳ ಅಭಿಮಾನಿದೇವತೆಗಳನ್ನೇ ಪ್ರತಿಪಾದಿಸಿರುವುದೆಂದು ತಿಳಿಯಬೇಕು, ನಕ್ತೋಷಸಾ ಎಂಬ ಶಬ್ದದಲ್ಲಿರುವ ಷಕಾರವು ಛಂದಸ್ಸಿನ ಅನುಕೂಲಕ್ಕಾಗಿ ದೀರ್ಘವಾಗಿರುವುದು.

**ಸುಪೇಶಸಾ**--ನಿರ್ಣಿಕ್, ವವ್ರಿಃ ಮೊದಲಾದ ಹದಿನಾರು ರೂಪವಾಚಕ ಶಬ್ದಗಳ ಮಧ್ಯದಲ್ಲಿ ಪೇಶಃ ಎಂಬ ಶಬ್ದವು ಪಠಿತವಾಗಿರುವುದರಿಂದ ಪೇಶಃ ಎಂದರೆ ರೂಪವು. ಆದುದರಿಂದ **ಸುಪೇಶಸಾ-ಶೋಭನರೂಪಯುಕ್ತೇ** —ಶೋಭನರೂಪದಿಂದ ಕೂಡಿದ, ಸುಂದರರಾದ ಎಂದರ್ಥವು.

**ಆಸದೇ**--**ಷದ್ಲೃ ವಿಶರಣಗತ್ಯವಸಾದನೇಷು।** ಹೊಂದುವುದಕ್ಕಾಗಿ ಎಂದರೆ ಬಂದು ಕುಳಿತುಕೊಳ್ಳುವುದಕ್ಕಾಗಿ ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ನಕ್ತೋಷಸಾ**-ನಕ್ತಂಚ ಉಷಶ್ಚ ನಕ್ತೋಷಸಾ ಎಂದು ದ್ವಂದ್ವಸಮಾಸ, ಇದರ ಮುಂದೆ ದ್ವಿತೀಯಾ ದ್ವಿವಚನ ಔಟ್ ಪ್ರತ್ಯಯ. ಅದಕ್ಕೆ **ಸುಪಾಂಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಆಕಾರಾದೇಶಂನ-ಕ್ತಮ್ ಎಂಬುದರ ಮಕಾರಕ್ಕೆ ಲೋಪವೂ, ಉಷಸ್ ಶಬ್ದದ ಉಪಧಾಭೂತವಾದ ಅಕಾರಕ್ಕೆ ದೀರ್ಘವೂ ಸಹ ಛಾಂದಸವಾಗಿ ಬರುವುದು, **ದೇವತಾದ್ವಂದ್ವೇಚ**, ( ಪಾ. ಸೂ. ೬-೨-೧೪೧) ದೇವತಾವಾಚಕಪದಗಳನ್ನೊಳಗೊಂಡ ದ್ವಂದ್ವಸಮಾಸದಲ್ಲಿ ಪೂರ್ವೋತ್ತರಪದಗಳೆರಡೂ ಒಟ್ಟಿಗೆ ಪ್ರಕೃತಿಸ್ವರವನ್ನು ಹೊಂದುವುವು ಎಂಬುದರಿಂದ ಪೂರ್ವಪದ ಉತ್ತರಪದಗಳೆರಡಕ್ಕೂ ಪ್ರಕೃತಿಸ್ವರಬರುವುದು.

**ಸುಪೇಶಸಾ**—ಶೋಭನಂ ಪೇಶಃ ಯಯೋಸ್ತೇ, ಪೂರ್ವದಂತೆಯೇ ದ್ವಿತೀಯಾದ್ವಿವಚನಕ್ಕೆ ಆಕಾರಾದೇಶ ಪೇಶಃ ಎಂಬ ಶಬ್ದವು ನಪುಂಸಕಲಿಂಗ. ಅದ್ದರಿಂದ **ನಬ್ವಿಷಯಸ್ಯಾನಿಸಂತಸ್ಯ**, (ಫಿ.ಸೂ. ೨-೨೬) ಎಂಬುದರಿಂದ ಆದ್ಯುದಾತ್ತ. ಬಹುವ್ರೀಹಿಸಮಾಸದಲ್ಲಿ **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರಪ್ರಾಪ್ತವಾದರೆ ಅದನ್ನು ಬಾಧಿಸಿ **ನಞ್ ಸುಭ್ಯಾಮ್** (ಪಾ.ಸೂ. ೬-೨-೧೭೨) ಎಂಬುದರಿಂದ ಉತ್ತರಪದಕ್ಕೆ ಅಂತೋದಾತ್ತ ಪ್ರಾಪ್ತವಾಗುವುದು ಅದನ್ನೂ ಬಾಧಿಸಿ **ಆದ್ಯುದಾತ್ತಂದ್ವ್ಯಚ್ಛಂದಸಿ** (ಪಾ.ಸೂ. ೬.೨.೧೧೯) ಬಹುವ್ರೀಹಿಸಮಾಸದಲ್ಲಿ ಆದ್ಯುದಾತ್ತವೂ ದ್ವ್ಯಚ್ಕವೂ ಆದ ಉತ್ತರಪದವು ಸು ಎಂಬುದರ ಮುಂದೆ ಇದ್ದರೆಆದ್ಯುದಾತ್ತವೇ ಆಗುವುದು ಎಂಬುದರಿಂದ ಪೇಶ ಎಂಬುದು ಆದ್ಯುದಾತ್ತವೇ ಆಗುವುದು.

**ಅಸ್ಮಿನ್** — **ಊಡಿದಂ ಪದಾದ್ಯಪ್ಪುಮ್ರೈದ್ಯುಭ್ಯಃ** ( ಪಾ. ಸೂ. ೬-೧-೧೭೧ ) ಎಂಬುದರಿಂದ ವಿಭಕ್ತಿಯು ಉದಾತ್ತ

**ಆಸದೇ**—ಷದ್ಲೃ ವಿಶರಣಗತ್ಯವಸಾದನೇಷು ಧಾತು. **ಧಾತ್ವಾದೇಃ ಷಃ ಸಃ** (ಪಾ. ಸೂ. ೬-೧-೬೪) ಎಂಬುದರಿಂದ ಷಕಾರಕ್ಕೆ ಸಕಾರ. **ಸಂಪದಾದಿಭ್ಯಃ ಕ್ವಿಪ್** ( ಪಾ. ಸೂ. ೩-೩-೧೦೮. ವಾ. ೯ ) ಎಂಬುದರಿಂದ ಭಾವಾರ್ಥದಲ್ಲಿ ಆಙ್ ಪೂರ್ವಕವಾದ ಸದ್ ಧಾತುವಿನ ಮುಂದೆ ಕ್ವಿಪ್ ಬರುವುದು. ಸದ್ ಎಂಬುದು ಧಾತುಸ್ವರದಿಂದ ಉದಾತ್ತ. ಆಙ್ ನೊಂದಿಗೆ **ಕುಗತಿಪ್ರಾದಯಃ** ( ಪಾ. ಸೂ. ೨೨-೧೮) ಎಂಬುದರಿಂದ ಪ್ರಾದಿಸಮಾಸ. ಆಸದ್ ಎಂಬುದು **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೯೧೩೯) ಎಂಬ ಕೃದುತ್ತರಪದಪ್ರಕೃತಿಸ್ವರದಿಂದ ಅದೇ ನಿಲ್ಲುವುದು. ಇದರ ಮುಂದೆ ಚತುರ್ಥ್ಯೇಕವಚನ ಙೇಪ್ರತ್ಯಯ. ಅದು ಸುಪ್ಪಾದರಿಂದ ಅನುದಾತ್ತ. **ಉದಾತ್ತಾದನುದಾತ್ತಸ್ಯ** (ಪಾ.ಸೂ. ೮-೪-೬೬) ಎಂಬುದರಿಂದ ಸ್ವರಿತವಾಗುವುದು.

॥ ಸಂಹಿತಾಪಾಠಃ ॥

ತಾ ಸುಜಿಹ್ವಾ ಉಪ ಹ್ವಯೇ ಹೋತಾರಾ ದೈವ್ಯಾ ಕವೀ ।

ಯಜ್ಞಂ ನೋ ಯಕ್ಷತಾಮಿಮಂ ॥ ೮ ॥

॥ ಪದಪಾಠಃ ॥

ತಾ । ಸುऽಜಿಹ್ವೌ । ಉಪ । ಹ್ವಯೇ । ಹೋತಾರಾ । ದೈವ್ಯಾ । ಕವೀ ಇತಿ ॥
ಯಜ್ಞಂ । ನಃ । ಯಕ್ಷತಾಂ । ಇಮಂ ॥ ೮ ॥

॥ ಸಾಯಣಭಾಷ್ಯಂ ॥

ತಚ್ಛಬ್ದೋಽತ್ರ ಸರ್ವನಾಮತ್ವಾತ್ಪ್ರಸಿದ್ಧಾರ್ಥವಾಚೀ । ತಾ ತೌ ಯಾಜ್ಞಿಕಾನಾಂ ಪ್ರಸಿದ್ಧೌ ದ್ವಾವಗ್ನೀ ಉಪಹ್ವಯೇ । ಆಹ್ವಯಾಮಿ । ನೋಽಸ್ಮದೀಯಮಿಮಂ ಯಜ್ಞಂ ಯಕ್ಷತಾಂ । ತಾವುಭೌ ಯಜತಾಮನುತಿಷ್ಠತಾಂ । ಕೀದೃಶೌ ಸುಜಿಹ್ವೌ ಶೋಭನಜಿಹ್ವೋಪೇತೌ । ಪ್ರಿಯವಚನೌ ಶೋಭನಜ್ವಾಲೌ ವೇತ್ಯರ್ಥಃ। ಹೋತಾರೌ ಹೋಮನಿಷ್ಪಾದಕೌ ದೈವ್ಯಾ ದೈವ್ಯೌ ದೇವಸಂಬಂಧಿನೌ । ಅತ ಏವೈವಮಾವಗ್ನೀ ದೈವ್ಯಹೋತೃನಾಮಕೌ । ಕವೀ ಮೇಧಾವಿನೌ ॥ ತಾ ತೌ । ದ್ವಿತೀಯಾದ್ವಿವಚನಸ್ಯ ಸುಪಾಂ ಸುಲುಗಿತ್ಯಾಕಾರಃ । ಏಕಾದೇಶ ಉದಾತ್ತೇನೋದಾತ್ತ ಇತ್ಯುದಾತ್ತಃ । ಸುಜಿಹ್ವೌ । ಶೋಭನಾ ಜಿಹ್ವಾ ಯಯೋಸ್ತೌ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಪೂರ್ವಪದೇಕಾದೇಶಸ್ವರಃ । ಸಂಹಿತಾಯಾಮಾವಾದೇಶಃ । ವಸ್ಯ ಲೋಪಃ ಶಾಕಲ್ಯಸ್ಯೇತಿ ಲೋಪಃ । ಹೋತಾರಾ । ಜುಹೋತೇಸ್ತೃನ್ । ದ್ವಿವಚನೇ ಋತೋ ಙಿ ಪಾ. ೭-೩-೧೧೦ । ಇತಿ ಗುಣಃ । ಅಪ್ತೃನ್ನಿತ್ಯುಪಧಾದೀರ್ಘಃ । ಪೂರ್ವವದಾಕಾರಃ । ನಿತ್ತ್ವಾದಾದ್ಯುದಾತ್ತಃ । ದೈವ್ಯಾ । ದೇವಾನಾಮಿಮೌ । ದೇವಾದ್ಯಞಞೌ । ಪಾ. ೪-೧ ೮೫-೩ । ಇತಿ ಯಞ್ । ಯಸ್ಯೇತಿ ಚೇತ್ಯಕಾರಲೋಪಃ । ಞ್ನಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತಃ । ಪೂರ್ವವದಾಕಾರಃ । ಯಕ್ಷತಾಂ । ಯಜತಾಂ । ಲೋಟಿ ಶಪಿ ಪರತಃ ಸಿಬ್ಬಹುಲಂ ಲೇಟೀತಿ ಬಹುಲಗ್ರಹಣಾತ್ಸಿಪ್ । ಕುತ್ವಚತ್ವಷತ್ವಾನಿ ॥

॥ ಪ್ರತಿಪದಾರ್ಥ ॥

ಸುಜಿಹ್ವೌ—ಉತ್ತಮವಾದ ಜಿಹ್ವೆಗಳುಳ್ಳ ಎಂದರೆ ಪ್ರಿಯವಚನಗಳನ್ನಾಡುವ ಅಥವಾ ಶೋಭನಜ್ವಾಲೆಗಳಿಂದ ಯುಕ್ತರಾದ । ಕವೀ—ಮೇಧಾವಿಗಳಾದ । ತಾ—ಆ ಎಂದರೆ ಯಜ್ಞಕರ್ಮದಲ್ಲಿ ಪ್ರಸಿದ್ಧರಾದ । ದೈವ್ಯಾ—ದೇವಸಂಬಂಧಿಗಳಾದ । ಹೋತಾರಾ—ಹೋಮನಿಷ್ಪಾದಕರಾದ । (ದೈವ್ಯಾ ಹೋತಾರಾ— ದೈವ್ಯಹೋತೃಗಳೆಂಬ ಇಬ್ಬರು ಅಗ್ನಿಮೂರ್ತಿ ವಿಶೇಷಗಳನ್ನು) । ಉಪ ಹ್ವಯೇ—ನಮ್ಮ ಸಮೀಪಕ್ಕೆ ಬರುವಂತೆ ಆಹ್ವಾನ ಮಾಡುವೆನು । (ಅವರು) ನಃ—ನಮ್ಮ ಎಂದರೆ ನಾವು ಮಾಡುತ್ತಿರುವ । ಇಮಂ ಯಜ್ಞಂ—ಈ ಯಜ್ಞವನ್ನು । ಯಕ್ಷತಾಂ— ಅನುಷ್ಠಾನಮಾಡಲಿ ಎಂದರೆ ನಿರ್ವಹಿಸಲಿ.

॥ ಭಾವಾರ್ಥ ॥

ದೈವ್ಯಾ ಹೋತಾರಾ ಎಂಬ (ಅಗ್ನಿರೂಪ ವಿಶೇಷಗಳಾದ) ಈರ್ವರು ದೇವತೆಗಳು ಪ್ರಿಯವಚನಗಳನಾಡುವವರು (ಅಥವಾ ಚೆನ್ನಾಗಿ ಜ್ವಲಿಸುವ ಜ್ವಾಲೆಗಳಿಂದ ಕೂಡಿರುವವರು) ಬಹಳ ಬುದ್ಧಿಶಾಲಿಗಳು ಹೋತೃಕರ್ಮದಲ್ಲಿ ನಿಷ್ಣಾತರಾದವರು ಇಂತಹ ದೇವಸಂಬಂಧಿಗಳಾದ ದೈವ್ಯಾ ಹೋತಾರಾ ಎಂಬ ದೇವತೆಗಳನ್ನು ಆಹ್ವಾನಮಾಡುವೆನು (ಕರೆಯುವೆನು). ಅವರು ಇಲ್ಲಿಗೆ ಬಂದು ಹೋತೃಸ್ಥಾನದಲ್ಲಿದ್ದುಕೊಂಡು ನಾವು ಮಾಡುತ್ತಿರುವ ಯಜ್ಞಕರ್ಮವನ್ನು ನಿರ್ವಹಿಸಲಿ.

English Translation

I invoke those Daivya and Hotara, those two divine hotries who are good-tongued and wise. May they perform this our sacrifice.

॥ ವಿಶೇಷವಿಷಯಗಳು ॥

ದೈವ್ಯಾಹೋತಾರಾ ಎಂಬ ಶಬ್ದದ ವಿಷಯದಲ್ಲಿ ಯಾಸ್ಕರ ವಿವರಣೆಯು.—

ದೈವ್ಯಾ ಹೋತಾರಾ ದೈವ್ಯೌ ಹೋತಾರಾವಯಂ ಚಾಗ್ನಿರಸೌ ಚ ಮಧ್ಯಮಃ ॥

ಎಂದರೆ ಈ ಶಬ್ದವು ಅಗ್ನಿಯನ್ನೇ ಸೂಚಿಸುವುದು. ಅಗ್ನಿಯು ದೇವತೆಗಳನ್ನು ಆಹ್ವಾನ ಮಾಡುವುದರಿಂದ ದೇವತೆಗಳಿಗೂ ಮನುಷ್ಯರಿಗೂ ಅಗ್ನಿಯು ಮಧ್ಯಸ್ಥನಾಗಿರುವನು ಎಂದು ಈ ವಿಷಯದಲ್ಲಿ ಒಂದು ಉದಾಹರಣೆಯನ್ನು ಕೊಟ್ಟಿರುವರು.

ದೈವ್ಯಾ ಹೋತಾರಾ ಪ್ರಥಮಾ ಸುವಾಚಾ ಮಿಮಾನಾ ಯಜ್ಞಂ ಮನುಷೋ ಯಜಧ್ಯೈ ।
ಪ್ರಚೋದಯಂತಾ ವಿದಥೇಷು ಕಾರೂ ಪ್ರಾಚೀನಂ ಜ್ಯೋತಿಃ ಪ್ರದಿಶಾ ದಿಶಂತಾ ॥
(ಋ. ಸಂ. ೧೦-೧೧೦-೭).

ಇದಕ್ಕೆ ದುರ್ಗಾಚಾರ್ಯಕೃತವ್ಯಾಖ್ಯಾನವು--

ಯಾವೇತೌ ದೈವ್ಯೌ ಹೋತಾರೌ । ದೇವೇಷು ಭವೌ ದೇವ್ಯೌ ದೇವಾವೇವ ದೇವ್ಯೌ । ಸ್ವಾರ್ಥೇ ಏವ ತದ್ಧಿತಃ । ಮನುಷ್ಯಹೋತಾರೌ ಅಪೇಕ್ಷ್ಯ । ದೈವ್ಯೌ ಹೋತಾರೌ ಹೋತೃಮೈತ್ರಾವರುಣೌ ಇತಿ ವಿಶೇಷಣಂ । ಹೋತಾರಾ ಹೋತಾರೌ ಆಹ್ವಾತಾರೌ ದೇವಾನಾಂ ವಾಯ್ವಗ್ನೀ । ಪ್ರಥಮಾ ಪ್ರಥಮೌ ಮುಖ್ಯೌ ಮನುಷ್ಯಹೋತಾರಾ- ವಪೇಕ್ಷ್ಯ। ಸುವಾಚಾ ಸುವಾಚೌ, ಪ್ರಶಸ್ತವಾಚೌ, ಸುಸ್ತುತೌ। ಮಿಮಾನಾ ಯಜ್ಞಂ ಯಜ್ಞನಿರ್ಮಾತಾರೌ ನಿತ್ಯಂ । ಮನುಷಃ ಮನುಷ್ಯಸ್ಯ ಯಜಧ್ಯೈ ಯಜನಾಯ । ಪ್ರಚೋದಯಂತಾ ಪ್ರಚೋದಯಮಾನೌ । ವಿದಥೇಷು ಯಜ್ಞೇಷು । ಕಾರೂ ಕರ್ತಾರೌ । ಇತ್ಯಾದಿ

ಇವರ ಮುಖ್ಯಾಭಿಪ್ರಾಯವೇನೆಂದರೆ--ದೇವತೆಗಳಿಗೆ ಅಗ್ನಿವಾಯುಗಳು ಹೋತೃಗಳೆಂದೂ ಮನುಷ್ಯರಿಗೆ ಹೋತೃಮೈತ್ರಾವರುಣರೆಂಬ ಋತ್ವಿಜರು ಹೋತೃಗಳೆಂದೂ ಪ್ರಸಿದ್ಧವು. ಅಗ್ನಿ ಅಥವಾ ಅಗ್ನಿವಾಯುಗಳು ದೇವತೆಗಳಿಗೂ ಮನುಷ್ಯರಿಗೂ ಮಧ್ಯದಲ್ಲಿದ್ದು ಅವರಿಗೆ ಸಂಬಂಧವನ್ನು ಕಲ್ಪಿಸುವುದರಿಂದ ಅಗ್ನಿಯು ಮಧ್ಯಮನೆಂದು ಹೇಳಲ್ಪಡುವನು. ದೈವ್ಯಾ ಹೋತಾರಾ ಎಂಬ ಈ ದೇವತೆಗಳ ಹೆಸರು ಆಪ್ರೀಸೂಕ್ತಗಳಲ್ಲಲ್ಲದೆ—

ತ್ವಷ್ಟಾರಂ ವಾಯುಮೃಭವೋ ಯ ಓಹತೇ ದೈವ್ಯಾ ಹೋತಾರಾ ಉಷಸಂ ಸ್ವಸ್ತಯೇ॥
(ಋ. ಸಂ. ೧೦-೬೫-೧೦)

**ದೈವ್ಯಾ ಹೋತಾರಾ ಪ್ರಥಮಾ ಪುರೋಹಿತ ಋತಸ್ಯ ಪಂಥಾಮನ್ವೇಮಿ ಸಾಧುಯಾ ॥**
(ಋ. ಸಂ. ೧೦-೬೬-೧೩)

ಎಂಬ ಎರಡು ಋಕ್ಕುಗಳಲ್ಲಿ ಮಾತ್ರ ಪಠಿತವಾಗಿರುವುದು. ಋ. ಸಂ. ೭-೨-೭ನೆಯ ಋಕ್ಕಿನಲ್ಲಿ ಜಾತವೇದಸಾ ಎಂಗೂ ಋ. ಸಂ. ೧೦-೭೦-೭ನೆಯ ಋಕ್ಕಿನಲ್ಲಿ ಪುರೋಹಿತೌ ಎಂದೂ ಇವರನ್ನು ಕರೆದಿದಾರೆ. ಮತ್ತು ಮೇಲೆ ಹೇಳಿದ ಋಕ್ಕುಗಳಲ್ಲಿರುವ **ಮಿಮಾನಾ ಯಜ್ಞಂ ಮನುಷೋ ಯಜಧ್ಯೈ, ಯಜ್ಞೇಷು ಮಾನುಷೇಷು ಕಾರೂ,** ಮತ್ತು **ಪ್ರಚೋದಯಂತಾ ವಿದಥೇಷು ಕಾರೂ** ಎಂಬ ಶಬ್ದಗಳು ಈ ದೇವತೆಗಳು ಮನುಷ್ಯರು ಮಾಡುವ ಯಜ್ಞಗಳನ್ನು ನಿರ್ವಹಿಸುವವರು ಅಥವಾ ಪ್ರೇರಿಸುವವರು ಎಂದು ಹೇಳಿರುವುದರಿಂದ ಇವರನ್ನು ಪುರೋಹಿತರೆಂದು ಕರೆದಿರುವುದು) ಸಹಜವಾಗಿದೆ. ದೇವತೆಗಳಲ್ಲಿ ಹೋತೃಗಳು ಅಗ್ನಿವಾಯುಗಳಾದರೆ ಮನುಷ್ಯರಲ್ಲಿ ಹೋತೃ, ಇವನ ಸಹಾಯಕ ಋತ್ವಿಜನಾದ ಮೈತ್ರಾವರುಣನು ಹೋತೃಗಳೆಂದು ಕರೆಯಲ್ಪಡುವರು. ಈ ಮೈತ್ರಾವರುಣನು ಪ್ರೈಷಮಂತ್ರಗಳಿಂದ ಇತರ ಋತ್ವಿಜರಿಗೆ ಆಯಾಯ ಕಾರ್ಯಗಳನ್ನು ಮಾಡುವಂತೆ ಆಜ್ಞಾಪಿಸುವನು. ಯಜುರ್ವೇದದಲ್ಲಿ (ತೈ. ಸಂ. ೬-೧- ) **ಮೈತ್ರಾವರುಣೋ ಹಿ ಪುರಸ್ತಾದೃತ್ವಿಗ್ಭ್ಯೋ ವಾಚಂ ವಿಭಜತಿ**— ಎಂದು ಹೇಳಿರುವುದು.

**ಸುಜಿಹ್ವಾ-ಸುಜಿಹ್ವೌ--ಶೋಭನಾ ಜಿಹ್ವಾ ಯಯೋಸ್ತೌ ಸುಜಿಹ್ವೌ । ಶೋಭನಜಿಹ್ವೋಪೇತೌ, ಪ್ರಿಯವಚನೌ, ಶೋಭನಜ್ವಾಲೌ ವಾ ॥** ಉತ್ತಮವಾದ ನಾಲಗೆಯುಳ್ಳ, ಪ್ರಿಯವಾದ ಮಾತುಗಳನ್ನಾಡುವ ಅಥವಾ ಅಗ್ನಿಪರವಾಗಿ ಹೇಳುವುದಾದರೆ ಉತ್ತಮವಾದ ಜ್ವಾಲೆಗಳುಳ್ಳ ಎಂದರ್ಥವು.

**ಯಕ್ಷತಾಂ—ಯಜತಾಂ,** ಯಜ್ಞಮಾಡಲಿ ಎಂದರೆ ಯಜ್ಞವನ್ನು ನಿರ್ವಹಿಸಲಿ ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ತಾ—ತೌ** ಎಂದರ್ಥ. ತದ್ ಶಬ್ದದ ಮುಂದೆ ದ್ವಿತೀಯಾದ್ವಿವಚನ ಔಟ್. ಅದಕ್ಕೆ **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಆಕಾರ. **ತ್ಯದಾದೀನಾಮಃ** ( ಪಾ. ಸೂ. ೭-೨-೧೦೨ ) ಎಂಬುದರಿಂದ ದಕಾರಕ್ಕೆ ಅಕಾರ. **ಅತೋಗುಣೇ** (ಪಾ. ಸೂ ೬-೧-೯೭) ಎಂಬುದರಿಂದ ಪರರೂಪ. ಸವರ್ಣದೀರ್ಘ. **ಏಕಾದೇಶ ಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಎಂಬುದರಿಂದ ಏಕಾದೇಶದಿಂದ ಬಂದ ಆಕಾರವು ಉದಾತ್ತ.

**ಸುಜಿಹ್ವಾ**—**ಶೋಭನಾ** ಜಿಹ್ವಾ ಯಯೋಸ್ತೌ. **ಶೇವ ಯಹ್ವ ಜಿಹ್ವಾ ಗ್ರೀವಾಮೀವಾಃ** (ಪಾ. ಸೂ. ೧-೧೫೨) ಎಂಬುದರಿಂದ ವನ್ ಪ್ರತ್ಯಯಾಂತವಾಗಿ ಜಿಹ್ವಾ ಶಬ್ದವು ನಿಪಾತಿತವಾಗಿರುವುದು. ಲಿಹಂತಿ ಅನಯಾ ಜಿಹ್ವಾ ಇತಿ. **ಲಿಹ** ಆಸ್ವಾದನೇ ಧಾತು. ಇದರ ಮುಂದೆ ವನ್ ಪ್ರತ್ಯಯ. ಲಕಾರಕ್ಕೆ ಜಕಾರ. ಗುಣಾಭಾವವೂ ನಿಪಾತಿತವಾಗಿರುವುದು. ಜಿಹ್ವಾ ಶಬ್ದವು ನಿತ್ಸ್ವರದಿಂದ ಆದ್ಯುದಾತ್ತ. ಬಹುವ್ರೀಹಿಯಲ್ಲಿ ಪೂರ್ವಪದಪ್ರಕೃತಿಸ್ವರ ಪ್ರಾಪ್ತವಾದರೆ ಅದನ್ನು ಬಾಧಿಸಿ **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದವಾದ ಜಿಹ್ವಾ ಎಂಬುದು ಅಂತೋದಾತ್ತ. ಸುಜಿಹ್ವ ಎಂಬುದರ ಮುಂದೆ ದ್ವಿತೀಯಾದ್ವಿವಚನ ಔಟ್ ಪ್ರತ್ಯಯ. ಸು-ಜಿಹ್ವ+ಔ **ವೃದ್ಧಿರೇಚಿ** (ಪಾ. ಸೂ. ೬-೧-೮೮) ಎಂಬುದರಿಂದ ವೃದ್ಧಿಯು ಪ್ರಾಪ್ತವಾದರೆ ಅದನ್ನುಬಾಧಿಸಿ **ಪ್ರಥ**

**ಮಯೋಃಪೂರ್ವಸವರ್ಣಃ** (ಪಾ. ಸೂ. ೬-೧-೧೦೨) ಎಂಬುದರಿಂದ **ಪೂರ್ವಸವರ್ಣದೀರ್ಘವು** ಪ್ರಾಪ್ತವಾದರೆ ಅದಕ್ಕೆ **ನಾದಿಚಿ** (ಪಾ. ೬-೧-೧೦೪) ಆಕಾರದ ಮುಂದೆ ಇಚ್ ವರ್ಣಗಳಿದ್ದರೆ ಪೂರ್ವಸವರ್ಣದೀರ್ಘ ಬರುವುದಿಲ್ಲ ಎಂಬುದರಿಂದ ನಿಷೇಧಬರುವುದು. ಏವಂಚ **ವೃದ್ಧಿರೇಚಿ** ಎಂಬುದರಿಂದ ವೃದ್ಧಿಯು ಏಕಾದೇಶವಾಗಿ ಬರುವುದು ಸುಜಿಹ್ವೌ ಎಂದಾಗುವುದು. **ಏಕಾದೇಶ ಉದಾತ್ತೇನೋದಾತ್ತಃ** ಎಂಬುದರಿಂದ ವೃದ್ಧಿರೂಪ ಏಕಾದೇಶದಿಂದ ಬಂದ ಔಕಾರವು ಉದಾತ್ತ. ಸುಜಿಹ್ವೌ ಎಂಬುದರ ಮುಂದೆ ಉಪಶಬ್ದದ ಉಕಾರಪರದಲ್ಲಿರುವುದರಿಂದ ಸಂಹಿತಾಕಾಲದಲ್ಲಿ **ಏಚೋಽಯವಾಯಾವಃ** (ಪಾ. ಸೂ. ೬-೧-೭೮) ಎಂಬುದರಿಂದ ಔಗೆ ಆವ್ ಆದೇಶ. ಸುಜಿಹ್ವಾವ್+ಉಪ **ಲೋಪಶ್ಶಾಕಲ್ಯಸ್ಯ** (ಪಾ ಸೂ. ೮-೩-೧೯) ಎಂಬುದರಿಂದ ವಕಾರಕ್ಕೆ ಲೋಪ. ಈ ವಕಾರಲೋಪವು ಆದ್ಗುಣಃ ಎಂಬುದರಿಂದ ಗುಣವನ್ನು ಮಾಡುವಾಗ **ಪೂರ್ವತ್ರಾಸಿದ್ಧಮ್** (ಪಾ. ಸೂ ೮-೨-೧) ಎಂಬುದರಿಂದ ಅಸಿದ್ಧವಾಗುವುದು. ಆದ್ದರಿಂದ ವಕಾರದಿಂದ ವ್ಯವಧಾನವು ಏರ್ಪಡುವುದು. ಆದಕಾರಣ ಗುಣ ಬರುವುದಿಲ್ಲ.

**ಹೋತಾರಾ**—ಹು ದಾನಾದನಯೋಃ ಜುಹೋತ್ಯಾದಿಯಲ್ಲಿರುವ ಧಾತು. ಇದರ ಮುಂದೆ ತೃನ್. ಲಘೂಪಧಗುಣ. ಪ್ರಥಮಾವಿಭಕ್ತಿದ್ವಿವಚನ ಔ ಪ್ರತ್ಯಯ. ಹೋತೃ+ಔ, **ಋತೋ ಙಿಸರ್ವನಾಮಸ್ಥಾನಯೋಃ** (ಪಾ. ಸೂ. ೭-೩-೧೧೦) ಎಂಬುದರಿಂದ ಬರುವ ಗುಣವು ರಪರವಾಗಿ ಬರುವುದು. **ಅಪ್ ತೃನ್ ತೃಚ್ಸ್ವಸೃ** ( ಪಾ. ಸೂ. ೬-೪-೧೧ ) ಎಂಬುದರಿಂದ ಉಪಧಾದೀರ್ಘ. ಹೋತಾರೌ ಎಂದಾಗುವುದು. ಔ ಪ್ರತ್ಯಯಕ್ಕೆ **ಸುಪಾಂ ಸುಲುಕ್** ಎಂಬುದರಿಂದ ಆಕಾರ. ಹೋತಾರಾ ಎಂದು ಸಿದ್ಧವಾಗುವುದು. ಹೋತೃ ಎಂಬುದು ನಕಾರೇತ್ಸಂಜ್ಞಕಪ್ರತ್ಯಯಾಂತ ಆದ್ದರಿಂದ **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತ.

**ದೈವ್ಯಾ**—ದಿವ್ ಧಾತುವಿನ ಮುಂದೆ **ನಂದಿಗ್ರಹಿ** (ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. ಲಘೂಪಧಗುಣ. ದೇವ ಶಬ್ದವು ಚಿತ್ಸ್ವರದಿಂದ ಅಂತೋದಾತ್ತ. **ದೇವಾದ್ಯಞಞೌ** (ಪಾ. ಸೂ. ೪-೧-೮೫ ವಾ. ೩) ದೇವಶಬ್ದದ ಮುಂದೆ ಪ್ರಾಗ್ದೀವ್ಯತೀಯದಲ್ಲಿರುವ ಅರ್ಥಗಳಲ್ಲಿ ಯಞ್ ಅಞ್ ಎಂಬ ಪ್ರತ್ಯಯಗಳು ಬರುವುವು ಎಂಬುದರಿಂದ ದೇವಸ್ಯ ಇಮೌ ಎಂದು ವಿವಕ್ಷಿಸಿದಾಗ ಯಞ್ ಪ್ರತ್ಯಯ **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ. ಏಕಾರಕ್ಕೆ ಐಕಾರ. **ಯಸ್ಯೇತಿಚ** (ಪಾ. ಸೂ. ೬ ೪-೧೪೮) ಎಂಬುದರಿಂದ ಪ್ರತ್ಯಯದ ಹಿಂದೆ ಇರುವ ಅಕಾರಕ್ಕೆ ಲೋಪ ಞ್ನಿತ್ಯಾದಿರ್ನಿತ್ಯಂ (ಪಾ. ಸೂ ೬-೧-೧೯೭) ಎಂಬುದರಿಂದ ದೈವ್ಯಶಬ್ದ ಆದ್ಯುದಾತ್ತ. ಇದರ ಮುಂದೆ ಔ ಪ್ರತ್ಯಯ. ಅದಕ್ಕೆ ಪೂರ್ವದಂತೆಯೇ ಆಕಾರಾದೇಶ. ಸವರ್ಣದೀರ್ಘ. ದೈವ್ಯಾ ಎಂದಾಗುವುದು.

**ಯಕ್ಷತಾಂ**—**ಯಜ ದೇವಪೂಜಾದೌ** ಇದರ ಮುಂದೆ ಲೋಟ್ ಪ್ರಥಮಪುರುಷ ದ್ವಿವಚನ ತಸ್ **ಲೋಟೋಲಙ್ವತ್** ಎಂಬುದರಿಂದ ಲಙ್ವದ್ಭಾವ, **ತಸ್ಥಸ್ಥಮಿಪಾಂತಾಂತಂತಾಮಃ**, ಎಂಬುದರಿಂದ ತಾಂ ಆದೇಶ. ಶಪ್ವಿಕರಣ. ಯಜ್+ಅ+ತಾಂ **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಎಂಬಲ್ಲಿ ಬಹುಲಗ್ರಹಣವಿರುವುದರಿಂದ ಶಪ್ ವಿಕರಣಕ್ಕಿಂತಲೂ ಪೂರ್ವಕ್ಕೆ ಸಿಪ್ ಬರುವುದು. ಯಜ್+ಸ್ ಅ+ ತಾಂ **ಚೋಃಕುಃ** ಎಂಬುದರಿಂದ ಕುತ್ವ ಜಕಾರಕ್ಕೆ ಗಕಾರ. **ಖರಿಚ** (ಪಾ. ಸೂ. ೮-೪-೫೫) ಎಂಬುದರಿಂದ ಚರ್ತ್ವ ಗಕಾರಕ್ಕೆ ಕಕಾರ. **ಆದೇಶಪ್ರತ್ಯಯಯೋಃ** (ಪಾ. ಸೂ. ೮-೩-೫೯) ಎಂಬುದರಿಂದ ಸಕಾರಕ್ಕೆ ಷಕಾರ. ಯಕ್ಷತಾಂ ಎಂದಾಗುವುದು. **ತಿಙ್ಙತಿಙಃ** ಎಂಬುದರಿಂದ ಸರ್ವಾನುದಾತ್ತ ॥ ೮ ॥

|| ಸಂಹಿತಾಪಾಠಃ ||

ಇಳಾ ಸರಸ್ವತೀ ಮಹೀ ತಿಸ್ರೋ ದೇವೀರ್ಮಯೋಭುವಃ |
ಬರ್ಹಿಃ ಸೀದಂತ್ವಸ್ರಿಧಃ || ೯ ||

|| ಪದಪಾಠಃ ||

ಇಳಾ | ಸರಸ್ವತೀ | ಮಹೀ | ತಿಸ್ರಃ | ದೇವೀಃ | ಮಯಃಽಭುವಃ ||
ಬರ್ಹಿಃ | ಸೀದಂತು | ಅಸ್ರಿಧಃ || ೯ ||

|| ಸಾಯಣಭಾಷ್ಯಂ ||

ಅತ್ರ ಮಹೀಶಬ್ದೋ ಮಹತ್ವಗುಣಯುಕ್ತಾಂ ಭಾರತೀಮಾಚಷ್ಟೇಽನ್ಯೇಷ್ವಾಪ್ರೀಸೂಕ್ತೇಷು ಸದೃಶೇಷ್ವಿಳಾ ಸರಸ್ವತೀ ಭಾರತೀತ್ಯಾಮ್ನಾತತ್ವಾತ್ | ಇಳಾದಿಶಬ್ದಾಭಿಧೇಯಾ ವಹ್ನಿಮೂರ್ತಯಸ್ತಿಸ್ರೋ ದೇವೀರ್ದೀಪ್ಯಮಾನಾ ಬರ್ಹಿರ್ವೇದ್ಯಾಮಾಸ್ತೀರ್ಣಂ ಸೀದಂತು | ಪ್ರಾಪ್ನುವಂತು| ಕೀದೃಶ್ಯಃ | ಮಯೋಭುವಃ ಸುಖೋತ್ಪಾದಿಕಾ ಅಸ್ರಿಧಃ ಶೋಷೇಣ ಕ್ಷಯೇಣ ವಾ ರಹಿತಾಃ || ಇಳಾ | ಈಡ ಸ್ತುತೌ | ಛಾಂದಸಂ ಹ್ರಸ್ವತ್ವಂ | ಕ್ವಿಪ್ | ಧಾತುಸ್ವರಃ | ಟಾಪಂ ಚಾಪಿ ಹಲಂತಾನಾಂ ಯಥಾ ವಾಚಾ ದಿಶಾ ನಿಶೇತಿ ಟಾಪ್ | ಸರಸ್ವತೀ | ಸರೋಽಸುನಂತೋ ನಿತ್ತ್ವಾದಾದ್ಯುದಾತ್ತಃ | ತದಸ್ಯಾಸ್ತೀತಿ ಮತುಪ್ | ಅದುಪಧತ್ವಾದ್ವತ್ವಂ | ತಸೌ ಮತ್ವರ್ಥ ಇತಿ ಭತ್ವೇನ ಪದತ್ವಸ್ಯ ಬಾಧಿತತ್ವಾದ್ರುತ್ವಾದ್ಯಭಾವಃ | ಉಗಿತಶ್ಚೇತಿ ಙೀಪ್| ಮತುಬ್ಙೀಪೌ ಪಿತ್ವಾದನುದಾತ್ತೌ| ಮಹೀ| ಮಹತೀಶಬ್ದೇ ತಕಾರಲೋಪಶ್ಛಾಂದಸಃ | ಯಸ್ಯೇತಿ ಚೇತ್ಯಕಾರಲೋಪಃ | ಉದಾತ್ತನಿವೃತ್ತಿಸ್ವರೇಣ ಙೀಪ ಉದಾತ್ತತ್ವಂ | ತಿಸ್ರಃ | ತ್ರಿಶಬ್ದಾಜ್ಜಸಿ ತ್ರಿಚತುರೋಃ ಸ್ತ್ರಿಯಾಂ ತಿಸೃಚತಸೃ | ಪಾ. ೭-೨-೯೯ | ಇತಿ ತಿಸ್ರಾದೇಶಃ | ಅಚಿ ರ ಋತಃ | ಪಾ. ೭-೨-೧೦೦ | ಇತಿ ರೇಫಾದೇಶಃ | ತಿಸೃಭ್ಯೋ ಜಸಃ | ಪಾ. ೬-೧-೧೬೬ | ಇತಿ ಜಸ ಉದಾತ್ತತ್ವಂ | ದೇವೀಃ ದೇವಾನಾಂ ಪತ್ನ್ಯೋ ದೇವ್ಯಃ ಪುಂಯೋಗಾದಾಖ್ಯಾಯಾಮಿತಿ ಙೀಷ್ | ಯಸ್ಯೇತಿ ಚೇತ್ಯಕಾರ ಲೋಪಃ | ಪ್ರತ್ಯಯಸ್ವರೇಣ ಙೀಷ ಉದಾತ್ತತ್ವಂ | ಜಸಿದೀರ್ಘಾಜ್ಜಸಿ ಚ | ಪಾ. ೬-೧-೧೦೫ | ಇತಿ ನಿಷಿದ್ಧಂ ದೀರ್ಘತ್ವಂ | ವಾ ಛಂದಸೀತಿ ಪಕ್ಷೇಽಭ್ಯನುಜ್ಞಾಯತೇ | ಮಯೋಭುವಃ | ಮಿಞ್ ಹಿಂಸಾಯಾಂ | ಹಿನಸ್ತಿ ದುಃಖಮಿತಿ ಸುಖಂ ಮಯಃ | ತದ್ಭಾವಯಂತೀತಿ ಮಯೋಭುವಃ | ಅಂತರ್ಭಾವಿತಣ್ಯರ್ಥಾದ್ಭುವಃ ಕ್ವಿಪ್ | ಕೃದುತ್ತರಪದಪ್ರಕೃತಿಸ್ವರತ್ವಂ | ಬರ್ಹಿಃ | ಬೃಂಹೇರ್ನಲೋಪಶ್ಚೇತಿ ಇಸಿಪ್ರತ್ಯಯಃ | ಪ್ರತ್ಯಯಸ್ವರಃ | ಸೀದಂತು | ಷದ್ಲೃ ವಿಶರಣಾದೌ | ಪಾಘ್ರೇತ್ಯಾದಿನಾ ಸೀದಾದೇಶಃ | ಅಸ್ರಿಧಃ | ಸ್ರಿಧೇರ್ಹಿಂಸಾರ್ಥಸ್ಯ ಶೋಷಣಾರ್ಥಸ್ಯ ವಾ ಸಂಪದಾದಿಭ್ಯೋ ಭಾವೇ ಕ್ವಿಪ್ ನಞಾ ಬಹುವ್ರೀಹಿಃ | ಪೂರ್ವಪದಪ್ರಕೃತಿಸ್ವರಂ ಬಾಧಿತ್ವಾ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ ||

॥ ಪ್ರತಿಪದಾರ್ಥ ॥

**ಮಯೋಭುವಃ**—ಸುಖವನ್ನುಂಟುಮಾಡುವ । **ಅಸ್ರಿಧಃ**—ಕ್ಷಯರಹಿತರಾದ ಅಥವಾ ಹಿಂಸೆಮಾಡ ದಿರುವ । **ಇಳಾ**—ಇಳಾ ಎಂಬ ದೇವಿಯೂ । **ಸರಸ್ವತೀ**—ಸರಸ್ವತೀ ಎಂಬ ದೇವಿಯೂ । **ಮಹೀ**—ಮಹತ್ವಗುಣಯುಕ್ತಳಾದ (ಭಾರತೀ ಎಂಬ) ದೇವಿಯೂ । **ತಿಸ್ರೋ ದೇವೀಃ**—ಇಳಾದಿ ಶಬ್ದಗಳಿಂದ ಕರೆಯಲ್ಪಡುವ ಅಗ್ನಿಮೂರ್ತಿಗಳಾದ ಪ್ರಕಾಶಮಾನರಾದ ಈ ಮೂರು ಜನ ದೇವತೆಯರು । **ಬರ್ಹಿಃ**—ವೇದಿಯ ಮೇಲೆ ಆಸ್ತರಣಾರ್ಥವಾಗಿ ಹರಡಿರುವ ದರ್ಭೆಯನ್ನು । **ಸೀದಂತು**—ಕೂಂದಲಿ (ಎಂದರೆ ದರ್ಭೆಯ ಮೇಲೆ ಕುಳಿತುಕೊಳ್ಳಲಿ).

॥ ಭಾವಾರ್ಥ ॥

ಅಗ್ನಿಮೂರ್ತಿಸ್ವರೂಪರೂ ದೇದೀಪ್ಯಮಾನರೂ ಆದ, ಸರ್ವರಿಗೂ ಸುಖವನ್ನುಂಟುಮಾಡುವ ಮತ್ತು ಯಾರಿಗೂ ಹಿಂಸೆಮಾಡದಿರುವ ಇಳಾ ಸರಸ್ವತೀ ಭಾರತಿ (ಮಹಿ)ಯರೆಂಬ ಮೂರು ಮಂದಿ ದೇವಿಯರು ಯಜ್ಞವೇದಿಯ ಮೇಲೆ ಆಸನಾರ್ಥವಾಗಿ ಹಾಸಿರುವ ದರ್ಭೆಯ ಮೇಲೆ ಬಂದು ಕುಳಿತುಕೊಳ್ಳಲಿ.

English Translation

May Ila, Saraswati, Mahi (Bharati), the three comfort-giving and unhurting goddesses sit on the sacrificial grass.

॥ ವಿಶೇಷವಿಷಯಗಳು ॥

ತಿಸ್ರೋ ದೇವೀಃ ಎಂಬ ವಿಷಯದಲ್ಲಿ ಯಾಸ್ಕರು—

ತಿಸ್ರೋ ದೇವೀಃ । ತಿಸ್ರೋ ದೇವೀಸ್ತಿಸ್ರೋ ದೇವ್ಯಃ ॥

ಎಂದು ಮಾತ್ರ ಹೇಳಿ ಉದಾಹರಣೆಗಾಗಿ ಕೊಟ್ಟಿರುವ ಋಕ್ಕಿನಲ್ಲಿ

ಆ ನೋ ಯಜ್ಞಂ ಭಾರತೀ ತೂಯಮೇತ್ವಿಳಾ ಮನುಷ್ವದಿಹ ಚೇತಯಂತೀ ।
ತಿಸ್ರೋ ದೇವೀರ್ಬರ್ಹಿರೇದಂ ಸ್ಯೋನಂ ಸರಸ್ವತೀ ಸ್ವಪಸಃ ಸದಂತು ॥

(ಋ. ಸಂ. ೧೦-೧೧೦-೮)

ಐತು ನೋ ಯಜ್ಞಂ ಭಾರತೀ ಕ್ಷಿಪ್ರಂ । ಭರತ ಆದಿತ್ಯಸ್ತಸ್ಯ ಭಾ ಇಳಾ ಚ ಮನುಷ್ಯವದಿಹ ಚೇತಯಮಾನಾ ತಿಸ್ರೋ ದೇವ್ಯೋ ಬರ್ಹಿರಿದಂ ಸುಖಂ ಸರಸ್ವತೀ ಚ ಸುಕರ್ಮಾಣ ಆಸೀದಂತು ॥

ಎಂದು ವಿವರಿಸಿರುವರು. ಎಂದರೆ—

ಭಾರತೀ—ಭರತನೆಂದರೆ ದ್ವಾದಶಾದಿತ್ಯರಲ್ಲಿ ಒಬ್ಬನು. ಆದಿತ್ಯನ ದೀಪ್ತಿಗೆ ಭಾ ಎಂದು ಹೆಸರು. ಆದುದರಿಂದ ಭಾರತಿಯೆಂದರೆ ಸೂರ್ಯನ ಪ್ರಕಾಶವು ಅಥವಾ ಸೂರ್ಯಮಂಡಲದಲ್ಲಿ ಪ್ರಕಾಶರೂಪದಿಂದಿರುವ ಅಗ್ನಿಯು.

ಇಳಾ—ಇಳಾ ಎಂದರೆ ಪೃಥಿವಿಯು. **ಮನುಷ್ಯತ್ ಚೇತಯಂತೀ**—ಮನುಷ್ಯರಂತೆ ಪ್ರೇರಿಸುವ ಶಕ್ತಿಯುಳ್ಳ ಎಂದರೆ ಭೂಮಿಯ ಮೇಲೆ ಇರುವ ಮನುಷ್ಯರಿಗೆ ಅನ್ನಾದ್ಯಾಹಾರಗಳನ್ನು ಧನಾದಿಗಳನ್ನು, ಕೊಡುವುದರಿಂದ ಇಳಾ ಎಂದರೆ ಪೃಥಿವೀಸ್ಥಾನದಲ್ಲಿರುವ ಅಗ್ನಿಯ ರೂಪವಿಶೇಷವು.

**ಸರಸ್ವತೀ**—ಅಂತರಿಕ್ಷ ಸ್ಥಾನದಲ್ಲಿರುವ ಸಿಡಿಲುಮಿಂಚುಗಳಿಗೆ ಅಭಿಮಾನಿದೇವತೆಯಾಗಿರುವುದರಿಂದ ಸರಸ್ವತಿಯು ಅಂತರಿಕ್ಷಸ್ಥಾನದಲ್ಲಿರುವ ಅಗ್ನಿಸ್ವರೂಪವೆಂದು ಹೇಳಲ್ಪಡುವುದು.

ಆದುದರಿಂದ ಇಳಾ, ಸರಸ್ವತೀ, ಭಾರತೀ ಎಂಬ ಮೂರು ಮಂದಿ ದೇವಿಯರನ್ನು ಸ್ವರ್ಗ, ಅಂತರಿಕ್ಷ, ಭೂಮಿಯ ಮೇಲೆ ಇರುವ ಅಗ್ನಿಯ ಮೂರು ರೂಪಗಳೆಂದು ಹೇಳುವ ರೂಢಿಯಿರುವುದು. (೭೪-೭೫ನೇ ಪೇಜು ಗಳನ್ನು ನೋಡಿ).

**ಮಹೀ**—ಮಹೀಶಬ್ದೋ ಮಹತ್ತ್ವಗುಣಯುಕ್ತಾಂ ಭಾರತೀಮಾಚಷ್ಟೇऽನ್ಯೇಷ್ವಾಪ್ರೀಸೂಕ್ತೇಷು ಸದೃಶೇಷ್ವಿಳಾ ಸರಸ್ವತೀ ಭಾರತೀತ್ಯಾಮ್ನಾತತ್ವಾತ್ ॥ ಎಂದರೆ, ಈ ಋಕ್ಕಿನಲ್ಲಿರುವ ಮಹೀ ಎಂಬ ಶಬ್ದಕ್ಕೆ ಮಹತ್ವಗುಣಯುಕ್ತಳಾದ ಭಾರತಿಯು ಎಂದರ್ಥವು. ಏಕೆಂದರೆ, ಆಪ್ರೀಸೂಕ್ತಗಳಲ್ಲಿ ತಿಸ್ರೋದೇವೀಃ ಎಂದು ಹೇಳಿರುವ ಋಕ್ಕುಗಳಲ್ಲಿ ಇಳಾ, ಸರಸ್ವತೀ, ಭಾರತೀ ಎಂದು ಮೂವರು ದೇವಿಯರ ಹೆಸರುಗಳನ್ನು ಸ್ಪಷ್ಟವಾಗಿ ಹೇಳಿದೆ. ಈ ಋಕ್ಕಿನಲ್ಲಿ ಮಾತ್ರ ಇಳಾ, ಸರಸ್ವತೀ ಎಂಬ ಎರಡು ಹೆಸರುಗಳನ್ನು ಹೇಳಿ ಮತ್ತೊಂದು ಹೆಸರಿನ ಸ್ಥಾನದಲ್ಲಿ ಮಹೀ ಎಂದಿರುವುದರಿಂದ ಮಹೀ ಎಂಬ ಶಬ್ದವು ಭಾರತೀ ಎಂಬ ಹೆಸರನ್ನೇ ನಿರ್ದೇಶಿಸಿರುವುದೆಂದು ಹೇಳಲು ಅನುಮಾನವೇ ಇಲ್ಲ ಕೆಲವು ಪಾಶ್ಚಾತ್ಯಪಂಡಿತರು ಮಹೀ ಎಂಬ ಶಬ್ದವು ಮಹೀ ಎಂಬ ಹೆಸರಿನ ಬೇರೆ ಒಂದು ದೇವತೆಯನ್ನು ಸೂಚಿಸುವುದೆಂದು ಅಭಿಪ್ರಾಯಪಡುವರು. ಅದು ಸರಿಯಲ್ಲ. ಛಂದಸ್ಸಿನ ಅನುಕೂಲಕ್ಕಾಗಿ ಭಾರತೀ ಶಬ್ದಕ್ಕೆ ಬದಲಾಗಿ ಮಹೀಶಬ್ದವನ್ನು ಉಪಯೋಗಿಸಿರಬಹುದು.

**ಬರ್ಹಿಃ ಸೀದಂತು**—ವೇದ್ಯಾಮಾಸ್ತೀರ್ಣಂ ಪ್ರಾಪ್ನುವಂತು—ಆಸನಾರ್ಥವಾಗಿ ಹಾಸಿರುವ ದರ್ಭೆಗಳನ್ನು ಹೊಂದಲಿ ಎಂದರೆ ದರ್ಭೆಯ ಆಸನದ ಮೇಲೆ ಕುಳಿತುಕೊಳ್ಳಲಿ ಎಂದಭಿಪ್ರಾಯವು.

**ಇಳಾ, ಸರಸ್ವತೀ, ಮಹೀ**—ಈಡ ಸ್ತುತೌ । ಸರ ಅಸ್ಯಾಸ್ತೀತಿ । ಮಹೀ ಮಹತೀ, ತಕಾರಲೋಪಶ್ಛಾಂದಸಃ॥ ಸ್ತುತಿಸಲ್ಪಡುವುದರಿಂದ ಇಡಾ ಎಂದೂ, ಸರಃ ಎಂದರೆ (ಉದಕವು) ಇರುವುದರಿಂದ ಸರಸ್ವತೀ ಎಂದೂ, ಮಹತೀ ಶಬ್ದದ ತಕಾರವು ಛಂದಸ್ಸಿನ ಅನುಕೂಲಕ್ಕಾಗಿ ಲೋಪವಾಗಿರುವುದರಿಂದ ಮಹೀ ಎಂದಾಗಿ ಮಹತ್ವಗುಣಯುಕ್ತಳಾದ (ಭಾರತೀ) ಎಂದೂ ಈ ಶಬ್ದಗಳ ಅವಯವಾರ್ಥನಿಷ್ಪತ್ತಿಯಿರುವುದು.

**ದೇವೀಃ—ದೇವಾನಾಂ ಪತ್ನ್ಯೋ ದೇವ್ಯಃ । ತಾಃ । ಅಥವಾ ದೇವೀಃ ದೀಪ್ಯಮಾನಾಃ ॥** ದೇವತೆಗಳ ಪತ್ನಿಯರಾದುದರಿಂದ ಅಥವಾ ಪ್ರಕಾಶಮಾನರಾದುದರಿಂದ ದೇವೀಃ ಎಂದು ಈ ದೇವತೆಗಳಿಗೆ ಹೆಸರು.

**ಮಯೋಭುವಃ--ಮೀಞ್ ಹಿಂಸಾಯಾಂ । ಹಿನಸ್ತಿ ದುಃಖಮಿತಿ ಸುಖಂ ಮಯಃ । ತದ್ಭಾವಯಂತೀತಿ ಮಯೋಭುವಃ ।** ಮೀಞ್ ಧಾತುವಿಗೆ ಹಿಂಸೆಮಾಡು ದುಃಖವನ್ನುಂಟುಮಾಡು ಎಂದರ್ಥವು. ದುಃಖರಹಿತವಾದುದು ಸುಖವು. ಸುಖವನ್ನುಂಟುಮಾಡುವುದರಿಂದ ಮಯೋಭುವ ಎಂಬ ರೂಪನಿಷ್ಪತ್ತಿಯಾಗಿರುವುದು.

**ಅಸ್ರಿಧಃ—ಸ್ರಿಧೇರ್ಹಿಂಸಾರ್ಥಸ್ಯ ಶೋಷಣಾರ್ಥಸ್ಯ ವಾ ಭಾವೇ ಕ್ವಿಪ್ । ಶೋಷೇಣ ಕ್ಷಯೇಣ ವಾ ರಹಿತಾಃ ॥** ಸ್ರಿಧ ಧಾತುವಿಗೆ ಹಿಂಸೆಮಾಡು, ಶೋಷಣೆಮಾಡು ಎಂದರ್ಥವು. ಅಸಿಧ್ರಃ ಎಂದರೆ ಅರೀತಿ ಇಲ್ಲದಿರುವ, ಶೋಷಣರಹಿತರಾದ, ಕ್ಷಯರಹಿತರಾದ ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

ಇಳಾ—ಈಡಸ್ತುತೌ ಧಾತು. ಈಕಾರಕ್ಕೆ ಛಾಂದಸವಾಗಿ ಹ್ರಸ್ವ ಬರುವುದು. **ಕ್ವಿಪ್‌ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್. ಕ್ವಿಪ್‌ಗೆ ಲೋಪ. **ಧಾತೋಃ** (ಪಾ.ಸೂ. ೬-೧-೧೬೨) ಎಂಬುದರಿಂದ ಅಂತೋದಾತ್ತ. **ಡ್ವಯೋಶ್ಚಾಸ್ಯ ಸ್ವರಯೋಃ** ( ಪ್ರಾ ಶಾ. ) ಎಂಬುದರಿಂದ ಡಕಾರಕ್ಕೆ ಳಕಾರ. ವಷ್ಟಿಭಾಗುರಿರಲ್ಲೋಪಮವಾಪ್ಯೋರುಪಸರ್ಗಯೋಃ । ಆಪಂ ಚೈವ ಹಲನ್ತಾನಾಂ ಯಥಾ ವಾಚಾ ನಿಶಾ ದಿಶಾ ( ಕೌ. ೨-೪-೮೨) ಭಾಗುರಿಮಹರ್ಷಿಗಳು ಅವ ಅಪಿ ಎಂಬ ಉಪಸರ್ಗಗಳ ಅಕಾರಕ್ಕೆ ಲೋಪವನ್ನು ಹೇಳುವರು. ಅವಗಾಹಃ ಎಂಬಲ್ಲಿ ವಗಾಹಃ ಎಂದೂ ಅಪಿಧಾನಂ ಎಂಬಲ್ಲಿ ಪಿಧಾನಂ ಎಂದೂ ಆಗುವುದು.|ಶಬ್ದಗಳು ಹಲಂತವಾಗಿದ್ದರೆ ಅವುಗಳ ಮುಂದೆ ಆಪ್ ಪ್ರತ್ಯಯವನ್ನು ಅಪೇಕ್ಷಿಸುವರು ಎಂದು ಶ್ಲೋಕದ ಅರ್ಥ. ಇದರಿಂದ ಇಳ್ ಎಂಬುದರ ಮುಂದೆ ಟಾಪ್ ಬರುವುದು ಇಳಾ ಎಂದಾಗುವುದು.

ಸರಸ್ವತೀ—ಸೃ ಧಾತುವಿನ ಮುಂದೆ ಅಸುನ್‌ಪ್ರತ್ಯಯವು. **ಸರ್ವಧಾತುಭ್ಯೋಽಸುನ್** (ಉ. ಸೂ. ೪-೬೨೮ ) ಎಂಬುದರಿಂದ ಬರುವುದು. ಗುಣ. ರಪರತ್ವ. ಸರಃ. ಇದು ನಿತ್ಸ್ವರದಿಂದ ಆದ್ಯುದಾತ್ತ. ಸರಃ ಅಸ್ಯ ಅಸ್ತಿ ಎಂದು ವಿಗ್ರಹ ಮಾಡಿದರೆ **ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್** ( ಪಾ. ಸೂ. ೫-೨-೯೪ ) ಎಂಬುದರಿಂದ ಮತುಪ್ ಸದಸ್ ಎಂಬುದು ಅದುಪದ ಆದ್ದರಿಂದ **ಮಾದುಪಧಾಯಾಶ್ಚ** (ಪಾ. ಸೂ. ೮-೨-೯) ಎಂಬುದರಿಂದ ಮಕಾರಕ್ಕೆ ವಕಾರ **ತಸೌಮತ್ವರ್ಥೇ** (ಪಾ.ಸೂ. ೧-೪-೧೯) ಮತ್ವರ್ಥಪ್ರತ್ಯಯವು ಪರದಲ್ಲಿರುವಾಗ ತಕಾರಾಂತ ಸಕಾರಾಂತಪದಗಳು ಭ ಸಂಜ್ಞೆಯನ್ನು ಹೊಂದುವುವು ಎಂಬುದರಿಂದ ಪದಸಂಜ್ಞೆಯನ್ನು ಬಾಧಿಸಿ ಭಸಂಜ್ಞೆ ಬರುವುದು. ಆದ್ದರಿಂದ **ಸಸಜುಷೋಃ ರುಃ** (ಪಾ. ಸೂ. ೮-೨-೬೬) ಇತ್ಯಾದಿ ಶಾಸ್ತ್ರಗಳಿಂದ ರುತ್ವಾದಿ ಕಾರ್ಯಗಳು ಬರುವುದಿಲ್ಲ. **ಉಗಿತಶ್ಚ** (ಪಾ. ಸೂ. ೬-೩-೪೫) ಎಂಬುದರಿಂದ ಙೀಪ್, ಮತುಪ್ ಙೀಪ್ ಎರಡೂ ಪಿತ್ತಾದ್ದರಿಂದ ಅನುದಾತ್ತ.

**ಮಹೀ**—ಮಹತೀ ಶಬ್ದದ ತಕಾರಕ್ಕೆ ಛಾಂದಸವಾಗಿ ಲೋಪ, ಹಕಾರೋತ್ತರದಲ್ಲಿರುವ ಅಕಾರಕ್ಕೆ **ಯಸ್ಯೇತಿಚ** (ಪಾ. ಸೂ. ೬-೪-೧೪೮) ಎಂಬುದರಿಂದ ಲೋಪ, **ಅನುದಾತ್ತಸ್ಯಚ ಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಎಂಬುದರಿಂದ ಉದಾತ್ತವಾದ ಅಕಾರಲೋಪಕ್ಕೆ ನಿಮಿತ್ತವಾದ ಈಕಾರವು ಉದಾತ್ತವಾಗುವುದು.

**ತಿಸ್ರಃ**—ತ್ರಿ ಶಬ್ದದ ಮುಂದೆ ಜಸ್ **ತ್ರಿಚತುರೋಃಸ್ತ್ರಿಯಾಂ ತಿಸೃ ಚತಸೃ** (ಪಾ. ಸೂ. ೭-೨-೯೯) ವಿಭಕ್ತಿಯು ಪರದಲ್ಲಿರುವಾಗ ಸ್ತ್ರೀತ್ವವಿಶಿಷ್ಟಾರ್ಥಪ್ರತಿಪಾದಕಗಳಾದ ತ್ರಿ ಚತುರ್ ಶಬ್ದಗಳ ಸ್ಥಾನದಲ್ಲಿ ಕ್ರಮವಾಗಿ ತಿಸೃ-ಚತಸೃ ಎಂಬ ಆದೇಶಗಳು ಬರುವುವು ಎಂಬುದರಿಂದ ತ್ರಿಸೃ ಆದೇಶ. ತಿಸೃ+ಅಸ್ **ಋತೋಙಿ ಸರ್ವನಾಮಸ್ಥಾನಯೋಃ** ( ಪಾ. ಸೂ. ೭-೩-೧೧೦ ) ಎಂಬುದರಿಂದ ಗುಣವು ಪ್ರಾಪ್ತವಾದರೆ ಅದಕ್ಕೆ ಅಪವಾದ **ಅಚಿರಋತಃ** (ಪಾ- ಸೂ. ೭-೨-೧೦೦) ಅಜ್ವರ್ಣಪರದಲ್ಲಿದ್ದರೆ ತಿಸೃ, ಚತಸೃ ಇವುಗಳ ಋಕಾರಕ್ಕೆ ರ ಆದೇಶ ಬರುವುದು ಎಂಬುದರಿಂದ ರೇಫಾದೇಶ. ರುತ್ವ ವಿಸರ್ಗ, ತಿಸ್ರಃ ಎಂದಾಗುವುದು. ಅನುದಾತ್ತೌ ಸುಪ್ಪಿತೌ ಎಂಬುದರಿಂದ ಜಸ್ ಪ್ರತ್ಯಯವು ಅನುದಾತ್ತ. ತ್ರಿಶಬ್ದವು ಅಂತೋದಾತ್ತ. ಆದರ ಸ್ಥಾನದಲ್ಲಿ ಬರುವ ತಿಸೃ ಆದೇಶವೂ ಸ್ಥಾನಿವದ್ಭಾವದಿಂದ ಅಂತೋದಾತ್ತ. ಉದಾತ್ತವಾದ ಋಕಾರದ ಸ್ಥಾನದಲ್ಲಿ ರೇಫರೂಪವಾದ ಯಣ್ ಬಂದಿರುವುದು ಆದ್ದರಿಂದ **ಉದಾತ್ತ ಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ** ಉದಾತ್ತ ಅಥವಾ ಸ್ವರಿತ ಇವುಗಳ ಸ್ಥಾನದಲ್ಲಿ ಬಂದಿರುವ ಯಣ್ವರ್ಣದ ಮುಂದೆ ಇರುವ ಅನುದಾತ್ತವು ಸ್ವರಿತವಾಗುವುದು ಎಂಬುದರಿಂದ ಸ್ವರಿತ ಪ್ರಾಪ್ತವಾದರೆ ಅದನ್ನು ಬಾಧಿಸಿ **ತಿಸೃಭ್ಯೋಜಸಃ** (ಪಾ.ಸೂ. ೭-೧-೧೬೬) ತಿಸೃ ಶಬ್ದದ ಮುಂದೆ ಇರುವ ಜಸ್ ಪ್ರತ್ಯಯದ ಅಂತವು ಉದಾತ್ತವಾಗುವುದು. ಎಂಬುದರಿಂದ ಜಸ್ ಪ್ರತ್ಯಯವು ಉದಾತ್ತ.

**ದೇವೀಃ**—ದೇವಶಬ್ದವು ಅಚ್ಪ್ರತ್ಯಯಾಂತ. ದೇವಾನಾಂ ಪತ್ನ್ಯಃ ದೇವ್ಯಃ **ಪುಂಯೋಗಾದಾಖ್ಯಾಯಾಮ್** (ಪಾ. ಸೂ. ೪-೧-೪೮) ಎಂಬುದರಿಂದ ಙೀಷ್ **ಯಸ್ಯೇತಿಚ** (೬-೪-೧೪೮) ಎಂಬುದರಿಂದ ಅಕಾರಕ್ಕೆ ಲೋಪ, ಙೀಷ್ ಪ್ರತ್ಯಯವು ಪ್ರತ್ಯಯಸ್ವರದಿಂದ ಉದಾತ್ತ, ದೇವೀ ಎಂದಾಯಿತು. ಇದರ ಮುಂದೆ ಜಸ್ ಪ್ರತ್ಯಯವನ್ನಿಟ್ಟರೆ **ಪ್ರಥಮಯೋಃಪೂರ್ವಸವರ್ಣಃ** (ಪಾ. ಸೂ. ೬-೧-೧೦೨) ಎಂದು ವಿಹಿತವಾದ ಪೂರ್ವಸವರ್ಣ ದೀರ್ಘಕ್ಕೆ **ದೀರ್ಘಾಜ್ಜಸಿಚ** (ಪಾ. ಸೂ. ೬-‑-೧೦೫) ಎಂಬುದರಿಂದ ನಿಷೇಧ ಪ್ರಾಪ್ತವಾದರೂ **ವಾಛಂದಸಿ** (ಪಾ. ಸೂ. ೬-೧-೧೦೬) ಎಂಬುದರಿಂದ ಪಾಕ್ಷಿಕವಾದ ಅಭ್ಯನುಜ್ಞೆ ಇರುವಕಾರಣ ಪೂರ್ವಸವರ್ಣ ದೀರ್ಘವು ಬರುವುದು. ರುತ್ವ, ವಿಸರ್ಗ, ದೇವೀಃ ಎಂದಾಗುವುದು.

**ಮಯೋಭುವಃ**—ಮೀಞ್ ಹಿಂಸಾಯಾಂ ಕ್ರ್ಯಾದಿ ಧಾತು. ಮಿನಾತಿ ಹಿನಸ್ತಿ ದುಃಖಮ್. ದುಃಖವನ್ನು ಹೋಗಲಾಡಿಸುವುದು) ಎಂದು ವಿಗ್ರಹ. **ಸರ್ವಧಾತುಭ್ಯೋಽಸುನ್** ( ಉ. ಸೂ. ೪-೬೨೮ ) ಎಂಬುದರಿಂದ ಅಸುನ್ ಪ್ರತ್ಯಯ, ಗುಣ. ಅಯಾದೇಶ, ಯಸ್ ಎಂದಾಗುವುದು. ಮಯಸ್ ಶಬ್ದಕ್ಕೆ ಸುಖ ಎಂದು ಅರ್ಥ. ಮಯಃ ಭಾವಯನ್ತಿ ಇತಿ ಮಯೋಭುವಃ, ಮಯಶ್ಶಬ್ದೋಪಪದಕವಾದ ಅಂತರ್ಭಾವಿತ ಣಿಚ್‌ಪ್ರತ್ಯಯಾರ್ಥಕ ಭೂಧಾತುವಿನ ಮುಂದೆ **ಕ್ವಿಪ್‌ಚ** ( ಪಾ. ಸೂ. ೩-೨-೭೬ ) ಎಂಬುದರಿಂದ ಕ್ವಿಪ್. ಮಯೋಭೂ-ಶಬ್ದದ ಮುಂದೆ ಜಸ್. **ಅ ಚಿ ಶ್ನು** (ಪಾ. ಸೂ. ೬-೪-೭೭) ಎಂಬುದರಿಂದ ಉವಙ್ ಆದೇಶ. ಮಯಸ್+ಭೂ ಎಂದಿರುವಾಗ ರುತ್ವ ಉತ್ವ ಗುಣಗಳು ಬರುವುವು. **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬ ಕೃದುತ್ತರಪದಪ್ರಕೃತಿಸ್ವರದಿಂದ ಮಯೋಭೂಃ ಎಂಬುದು ಅಂತೋದಾತ್ತ.

ಬರ್ಹಿಃ— ಬೃಹಿ ವೃದ್ಧೌ. ಇದಿತ್ತ್ವಾದ್ದರಿಂದ ನುಮಾಗಮ. ಬೃಂಹೇರ್ನ ಲೋಪಶ್ಚ (ಉ. ಸೂ. ೨-೨೬೬) ಎಂಬುದರಿಂದ ಇಸಿ ಪ್ರತ್ಯಯವೂ ನಕಾರಕ್ಕೆ ಲೋಪವೂ ಬರುವುದು. ಲಘೂಪಧಗುಣ ಪ್ರತ್ಯಯ ಸ್ವರದಿಂದ ಅಂತೋದಾತ್ತ.

ಸೀದಂತಂ — ಷದ್ಲೃ ವಿಶರಣಗತ್ಯವಸಾದನೇಷು. ಧಾತ್ವಾದೇಃ ಷಃ ಸಃ ಎಂಬುದರಿಂದ ಷಕಾರಕ್ಕೆ ಸಕಾರ. ಲೋಟ್‌ಪ್ರಥಮಪುರುಷಬಹುವಚನ ಝಿ ಪ್ರತ್ಯಯ. ಝೋಽನ್ತಃ ( ಪಾ. ಸೂ. ೭-೧-೩ ) ಎಂಬುದರಿಂದ ಝಕಾರಕ್ಕೆ ಅನ್ತ್ ಆದೇಶ ಏರುಃ (ಪಾ. ಸೂ. ೩-೪-೮೬) ಎಂಬುದರಿಂದ ಏಕಾರಕ್ಕೆ ಉಕಾರ. ಶಪ್ ವಿಕರಣ. ಸದ್-ಅ+ಅನ್ತು. ಸದ್ ಎಂಬುದಕ್ಕೆ ಪಾಘ್ರಾಧ್ಮಾ (ಪಾ. ಸೂ. ೭-೩-೭೮) ಎಂಬುದರಿಂದ ಸೀದ ಎಂಬ ಆದೇಶ. ಸೀದನ್ತು ಎಂದಾಗುವುದು. ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತ.

ಅಸ್ರಿಧಃ— ಸ್ರಿಧ್ ಧಾತುವು ಹಿಂಸಾರ್ಥಕ ಅಥವಾ ಶೋಷಣಾರ್ಥಕ ಇದರ ಮುಂದೆ ಸಂಪದಾದಿಭ್ಯಃಕ್ವಿಪ್ (ಪಾ. ಸೂ. ವಾ. ೦-೩-೧೦೮-೯) ಎಂಬುದರಿಂದ ಕ್ವಿಪ್. ನ ವಿದ್ಯತೇ ಸ್ರಿತ್ ಯಾಸಾಂ ತಾಃ ಅಸ್ರಿಧಃ ಎಂದು ಬಹುವ್ರೀಹಿ. ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್ (ಪಾ. ಸೂ. ೬-೨-೧) ಎಂದು ವಿಹಿತವಾದ ಪೂರ್ವಪದಪ್ರಕೃತಿಸ್ವರವನ್ನು ಬಾಧಿಸಿ ನಞ್‌ಸುಭ್ಯಾಮ್ ( ಪಾ. ಸೂ. ೬-೨-೧೭೨ ) ಎಂಬುದರಿಂದ ಉತ್ತರ ಪದಕ್ಕೆ ಅಂತೋದಾತ್ತಸ್ವರ ಬರುವುದು ॥ ೯ ॥

॥ ಸಂಹಿತಾಪಾಠಃ ॥

ಇಹ ತ್ವಷ್ಟಾರಮಗ್ರಿಯಂ ವಿಶ್ವರೂಪಮುಪ ಹ್ವಯೇ ।
ಅಸ್ಮಾಕಮಸ್ತು ಕೇವಲಃ ॥ ೧೦ ॥

॥ ಪದಪಾಠಃ ॥

ಇಹ । ತ್ವಷ್ಟಾರಂ । ಅಗ್ರಿಯಂ । ವಿಶ್ವಽರೂಪಂ । ಉಪ । ಹ್ವಯೇ ॥
ಅಸ್ಮಾಕಂ । ಅಸ್ತು । ಕೇವಲಃ ॥ ೧೦ ॥

॥ ಸಾಯಣಭಾಷ್ಯಂ ॥

ಪತ್ನೀಸಂಯಾಜೇ ತ್ವಷ್ಟುಃ ಪುರೋಽನುವಾಕ್ಯೇಹ ತ್ವಷ್ಟಾರಮಗ್ರಿಯಮಿತಿ । ಶಂ ಯುವಾಕಾಯ ಸಂಪ್ರೇಷಿತ ಇತಿ ಖಂಡೇ ಸೂತ್ರಿತಂ । ಸಂ ಶೇ ಪಯಾಂಸಿ ಸಮು ಯಂತು ವಾಜಾ ಇಹ ತ್ವಷ್ಟಾರಮಗ್ರಿಯಂ । ಆ. ೧-೧೦ ॥ ಇತಿ ॥

ತ್ವಷ್ಟಾರಂ ತ್ವಷ್ಟೃನಾಮಕಮಗ್ನಿಮಿಹ ಕರ್ಮಣ್ಯುಪಹ್ವಯೇ। ಕೀದೃಶಂ । ಅಗ್ರಿಯಂ ಶ್ರೇಷ್ಠಂ ವಿಶ್ವರೂಪಂ ಬಹುವಿಧರೂಪೋಪೇತಂ । ಸೋಽಸ್ಮಾಕಂ ಕೇವಲೋಽಸಾಧಾರಣೋಽಸ್ತು । ಇತರಯಜಮಾನೇಭ್ಯೋಽಪ್ಯಧಿಕಮನುಗ್ರಹಂ ಕರೋತ್ವಿತ್ಯರ್ಥಃ॥ ತ್ವಷ್ಟಾರಂ । ತಕ್ಷೂ ತ್ವಕ್ಷೂ ತನೂಕರಣೇ । ತೃನ್। ಸ್ವರತಿಸೂತಿಸೂಯತಿಧೂಞೂದಿತೋ ವಾ। ಪಾ. ೭-೨-೪೪। ಇತೀಡಭಾವಪಕ್ಷೇ ಸ್ಕೋಃ ಸಂಯೋಗಾದ್ಯೋರಂತೇ ಚ । ಪಾ. ೮-೨-೨೯। ಇತಿ ಕಕಾರಲೋಪಃ । ಷ್ಟುತ್ವಂ । ದ್ವಿತೀಯೈಕವಚನೇ ಋತೋ ಙಿಸರ್ವನಾಮಸ್ಥಾನಯೋರಿತಿ ಗುಣೇಽಪ್ತೃನ್ನಿತ್ಯಾದಿನೋಪಧಾಯಾ ದೀರ್ಘಃ । ತೃನೋ ನಿತ್ತ್ವಾದಾದ್ಯುದಾತ್ತತ್ವಂ । ಅಗ್ರಿಯಂ ಅಗ್ರಾದಿತ್ಯನುವೃತ್ತೌ ಘಚ್ಛೌ ಚ । ಪಾ. ೪-೪-೧೧೭ । ಇತಿ ಘಚ್ । ಆಯನೇಯೀತ್ಯಾದಿನಾ । ಪಾ. ೭-೧-೨ । ಘಕಾರಸ್ಯ ಇಯಾದೇಶಃ । ಯಸ್ಯೇತಿ ಲೋಪಃ । ಆಯನಾದಿಷೂಪದೇಶಿವದ್ವಚನಂ ಸ್ವರಸಿದ್ಧ್ಯರ್ಥಂ । ಪಾ. ೭-೧-೨-೧ । ಇತ್ಯುಪದೇಶಿವದ್ಭಾವಾತ್ಪ್ರತ್ಯಯಾದ್ಯುದಾತ್ತತ್ವಾಚ್ಚ ಚಿತ್ತ್ವಾದಂತೋದಾತ್ತತ್ವಂ । ವಿಶ್ವರೂಪಂ । ವಿಶ್ವಾನಿ ರೂಪಾಣಿ ತ್ವಷ್ಟೃತ್ಪನ್ನತ್ವೇನ ಯಸ್ಯ । ತ್ವಷ್ಟಾ ವೈ ಪಶೂನಾಂ ಮಿಥುನಾನಾಂ ರೂಪಕೃತ್ । ತೈ ಸಂ-೬-೧-೮-೫ । ಇತಿ ಶ್ರುತೇಃ। ವಿಶ್ವಶಬ್ದಸ್ಯಾದ್ಯುದಾತ್ತತ್ವಾತ್ಪೂರ್ವಪದ ಪ್ರಕೃತಿಸ್ವರತ್ವೇ ಪ್ರಾಪ್ತೇ ಬಹುವ್ರೀಹೌ ವಿಶ್ವಂ ಸಂಜ್ಞಾಯಾಂ । ಪಾ. ೬-೨-೧೦೬ । ಇತಿ ಪೂರ್ವಪದಾಂತೋದಾತ್ತತ್ವಂ । ಅಸ್ಮಾಕಂ । ಅಸು ಕ್ಷೇಪಣೇ । ಯುಷ್ಯಸಿಭ್ಯಾಂ ಮದಿಕ್ । ಉ.೧-೧೩೮ । ಪ್ರತ್ಯಯಸ್ವರೇಣಾಂತೋದಾತ್ತಃ । ಷಷ್ಠೀಬಹುವಚನಮಾಮ್। ಅತ್ರ ಹರಮುಪಿ ಯೋಽಚಿ । ಪಾ.೭-೨-೮೯ । ಇತಿ ಯತ್ವಂ ಬಾಧಿತ್ವಾ ನಿತ್ಯತ್ವಾತ್ಪ್ರತಿಪದವಿಧಿತ್ವಾಚ್ಚಾಮ ಆಕಮಾದೇಶೇ ಕೃತೇ । ಪಾ. ೭-೧-೩೩ । ಅನಾದೇಶ ಇತಿ ನಿಷೇಧೇನ । ಪಾ. ೭-೨-೮೬ । ಯತ್ವಾಭಾವಾಚ್ಛೇಷೇ ಲೋಪ ಇತಿ ದಕಾರಲೋಪೇಽಕಾರಾಂತತ್ವೇನ ಪಶ್ಚಾತ್ಪ್ರಾಪ್ತಸ್ಯಾಪಿ ಸುಟಃ । ಪಾ. ೭-೧-೫೨ । ಸಾಮ ಇತಿ ನಿರ್ದೇಶೇ ಸ್ಥಾನಿನ್ಯಂತರ್ಭಾವೇನ ನಿವೃತ್ತಿಃ । ಏವಮರ್ಥ ಏವ ಹಿ ಸಾಮ ಇತಿ ಸಸುಟ್ಕನಿರ್ದೇಶಃ । ಕೇವಲಃ । ವೃಷಾದೇರಾಕೃತಿಗಣತ್ವಾದಾದ್ಯುದಾತ್ತಃ ॥

॥ ಪ್ರತಿಪದಾರ್ಥ ॥

ಅಗ್ರಿಯಂ—ಶ್ರೇಷ್ಠವಾದ । ವಿಶ್ವರೂಪಂ—ಬಹುವಿಧರೂಪಗಳುಳ್ಳ ತ್ವಷ್ಟಾರಂ—ತ್ವಷ್ಟೃವೆಂಬ (ಅಗ್ನಿರೂಪ ವಿಶೇಷ) ದೇವತೆಯನ್ನು । ಇಹ—ಈ ಯಜ್ಞಕರ್ಮದಲ್ಲಿ । ಉಪ ಹ್ವಯೇ—ಆಹ್ವಾನಮಾಡುವೆನು । (ಆ ತ್ವಷ್ಟೃವು) ಅಸ್ಮಾಕಂ—ನಮಗೆ (ನಮ್ಮ ವಿಷಯದಲ್ಲಿ) । ಕೇವಲಃ—ಅಸಾಧಾರಣನಾಗಿ ಎಂದರೆ ಹೆಚ್ಚಾದ ಅಭಿಮಾನವುಳ್ಳವನಾಗಿ । ಅಸ್ತು—ಆಗಲಿ ॥

॥ ಭಾವಾರ್ಥ ॥

ತ್ವಷ್ಟಾ ಎಂಬ ದೇವತೆಯು ದೇವತೆಗಳಲ್ಲಿ ಶ್ರೇಷ್ಠನಾದವನು. ಅನೇಕ ವಿಧವಾದ ರೂಪ (ಆಕಾರ) ಗಳುಳ್ಳ ವಸ್ತುಗಳ ನಿರ್ಮಾಪಕನು. ಇಂತಹ ದೇವತೆಯನ್ನು ಈ ಯಜ್ಞದಲ್ಲಿ ಆಹ್ವಾನಮಾಡುವೆನು. ಅವನು ನಮ್ಮ ವಿಷಯದಲ್ಲಿ ಅತ್ಯಂತ ಅಭಿಮಾನವುಳ್ಳವನಾಗಿ ಆಗಲಿ.

**English Translation.**

I invoke Twashtir, the foremost and the multi-form here. May he be soley ours.

|| ವಿಶೇಷವಿಷಯಗಳು ||

ಈ ಮಂತ್ರದ ವಿನಿಯೋಗವು—ಯಜ್ಞದಲ್ಲಿ ಮಾಡುವ ಪತ್ನೀಸಂಯಾಜವೆಂಬ ಹೋಮದಲ್ಲಿ ಇಹ ತ್ವಷ್ಟಾರಮಗ್ರಿಯಂ ಎಂಬ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿ ಉಪಯೋಗಿಸುವರು. ಆಶ್ವಲಾಯನ ಶ್ರೌತಸೂತ್ರದ ಶಂ ಯುವಾಕಾಯ ಸಂಪ್ರೇಷಿತ ಎಂಬ ಖಂಡದಲ್ಲಿ ಸಂ ತೇ ಪಯಾಂಸಿ ಸಮು ಯಂತು ವಾಜಾ ಇಹ ತ್ವಷ್ಟಾರಮಗ್ರಿಯಂ (ಋ. ಸಂ. ೧-೧೩-೧೦) ಎಂಬ ಋಕ್ಕುಗಳನ್ನು ಯಾಜ್ಯಾ ಪುರೋನುವಾಕ್ಯಾ ಮಂತ್ರಗಳನ್ನಾಗಿ ಉಪಯೋಗಿಸಬೇಕೆಂದು ಹೇಳಿರುವುದು. (ಆಶ್ವ. ಸೂ. ೧-೧೦)
ಯಾಸ್ಕರ ವಿವರಣೆಯು—

> ತ್ವಷ್ಟಾ | ತ್ವಷ್ಟಾ ತೂರ್ಣಮಶ್ನುತ ಇತಿ ನೈರುಕ್ತಾಃ | ತ್ವಿಷೇರ್ವಾ ಸ್ಯಾದ್ದೀಪ್ತಿಕರ್ಮಣ ಸ್ತ್ವಕ್ಷತೇರ್ವಾ ಸ್ಯಾತ್ಕರೋತಿಕರ್ಮಣಃ |' ಮಾಧ್ಯಮಿಕಸ್ತ್ವಷ್ಟೇತ್ಯಾಹುರ್ಮಧ್ಯಮೇ ಚ ಸ್ಥಾನೇ ಸಮಾಮ್ನಾತಃ | ಅಗ್ನಿರಿತಿ ಶಾಕಪೂಣಿಃ || (ನಿ. ೮-೧೪)

ಎಂದರೆ ತ್ವಷ್ಟಾ ಎಂಬ ಶಬ್ದಕ್ಕೆ ಜಾಗ್ರತೆಯಾಗಿ ವ್ಯಾಪಿಸುವವನು ಎಂದು ನಿರುಕ್ತಕಾರರು ಹೇಳುವರು ಅಥವಾ ಪ್ರಕಾಶಮಾನನಾಗಿರುವವನು ಅಥವಾ ಕರ್ಮಗಳನ್ನು (ಶಿಲ್ಪಕರ್ಮಗಳನ್ನು ?) ಮಾಡುವವನು, ಮಾಧ್ಯಮಿಕ ನೆಂದೂ ಕೆಲವರು ಹೇಳುವರು. ಎಂದರೆ ದ್ಯಾವಾಪೃಥಿವಿಗಳ ಮಧ್ಯದಲ್ಲಿ ಇರುವವನು. ಅಗ್ನಿಯೆಂದು ಶಾಕ ಪೂಣಿಯು ಹೇಳುವನು.

ತ್ವಷ್ಟೃವು ವಿಶ್ವಕರ್ಮನಂತೆ ದೇವತೆಗಳ ಶಿಲ್ಪಿಯೆಂದೂ ಕೆಲವರು ಹೇಳುವರು. ಏಕೆಂದರೆ ಯಾಸ್ಕರು ಉದಾಹರಣೆಗಾಗಿ ಕೊಟ್ಟಿರುವ ಋಕ್ಕಿನಲ್ಲಿ

> ಯ ಇಮೇ ದ್ಯಾವಾಪೃಥಿವೀ ಜನಿತ್ರೀ ರೂಪೈರಪಿಂಶದ್ಭುವನಾನಿ ವಿಶ್ವಾ |
> ತಮದ್ಯ ಹೋತರಿಷಿತೋ ಯಜೀಯಾನ್ ದೇವಂ ತ್ವಷ್ಟಾರಮಿಹ ಯಕ್ಷಿ ವಿದ್ವಾನ್ ||
> (ಋ ಸಂ. ೧೦-೧೧೦-೯)

ತ್ವಷ್ಟೃವು ದ್ಯಾವಾಪೃಥಿವಿಗಳ ನಿರ್ಮಾಪಕನು ಮತ್ತು ಸಮಸ್ತ ಲೋಕಗಳಲ್ಲಿರುವ ಪ್ರಾಣಿಗಳಿಗೆ ಅವರವರಿಗೆ ಯೋಗ್ಯವಾದ ರೂಪ, ಸೌಂದರ್ಯ ಋದ್ಧಿ, ವೃದ್ಧಿ ಮೊದಲಾದವುಗಳಿಗೆ ಕಾರಣಕರ್ತನು ಎಂದು ಹೇಳಿರುವುದು. ಇದಲ್ಲದೆ ತ್ವಷ್ಟಾ ವೈ ಪಶೂನಾಂ ಮಿಥುನಾನಾಂ ರೂಪಕೃತ್ (ತೈ. ಸಂ. ೬-೧-೮-೫) ತ್ವಷ್ಟಾ ರೂಪಾಣಾ ಮಧಿಪತಿಃ (ತೈ. ಸಂ. ೩-೩- ) ತ್ವಷ್ಟಾ ರೂಪಾಣಿ ವಿಕರೋತಿ—ಮೊದಲಾದ ಶ್ರುತಿ (ಯಜುರ್ವೇದ) ವಾಕ್ಯ ಗಳು ತ್ವಷ್ಟೃವಿನ ವಸ್ತುನಿರ್ಮಾಣಕುಶಲತೆಯನ್ನು ಪ್ರತಿಪಾದಿಸುವವು. ಮತ್ತು

> ಮಹ್ಯಂ ತ್ವಷ್ಟಾ ವಜ್ರಮತಕ್ಷದಾಯಸಂ ಮಯಿ ದೇವಾಸೋಽವೃಜನ್ನಪಿ ಕ್ರತುಂ ||
> (ಋ. ಸಂ. ೧೦-೪೮-೩)

ತ್ವಷ್ಟೃವು ನನಗೆ ಉಕ್ಕಿನಿಂದ ವಜ್ರಾಯುಧವನ್ನು ನಿರ್ಮಾಣ ಮಾಡಿಕೊಟ್ಟನು ಎಂದು ಇಂದ್ರನು ಹೇಳಿರು ವನು. ದೇವತೆಗಳಿಗೆ ಅವಶ್ಯಕವಾದ ಯಜ್ಞಸಾಮಗ್ರಿಗಳನ್ನೂ, ಇತರ ಅನೇಕ ವಸ್ತುಗಳನ್ನು ನಿರ್ಮಿಸಿ ಕೊಟ್ಟಿ ರುವನೆಂದು ಋಗ್ವೇದದ ಅನೇಕ ಮಂತ್ರಗಳಲ್ಲಿ ಹೇಳಿದೆ.

ತ್ವಷ್ಟೃವು ದ್ವಾದಶಾದಿತ್ಯರಲ್ಲಿ ಒಬ್ಬನೆಂದು ಪ್ರಸಿದ್ಧಿಯು. ಆದುದರಿಂದಲೇ ಪ್ರಕಾಶಮಾನನು ಎಂದು ಯಾಸ್ಕರು ಅರ್ಥವಿವರಣೆ ಮಾಡಿರುವರು.

**ಅಗ್ರಿಯಂ—ಶ್ರೇಷ್ಠಂ, ಪ್ರಧಾನಂ**—ಶ್ರೇಷ್ಠನು, ಮುಖ್ಯನು.

**ವಿಶ್ವರೂಪಂ—ವಿಶ್ವಾನಿ ರೂಪಾಣಿ ತ್ವಷ್ಟ್ರಾ ತ್ವಷ್ಟ್ರತ್ವೇನ ಯಸ್ಯ** ‖ ಅನೇಕ ರೂಪಗಳ ಕಾರಣ ಕರ್ತನಾದುದರಿಂದ ವಿಶ್ವರೂಪನೆಂದು ಹೇಳಲ್ಪಡುವನು.

**ಅಸ್ಮಾಕಮಸ್ತು ಕೇವಲಃ**—ಈ ಋಕ್ಕಿನ ಮೂರನೆಯ ಪಾದವಾದ ಅಸ್ಮಾಕಮಸ್ತು ಕೇವಲಃ ಎಂಬ ವಾಕ್ಯವು ಋ. ಸಂ. ೧-೭-೧೦ನೆಯ ಋಕ್ಕಿನಲ್ಲಿಯೂ ಪಠಿತವಾಗಿರುವುದು. ಅಲ್ಲಿ ಇದು ಇಂದ್ರನ ಪರವಾಗಿರುವುದು. ನಮಗೆ ಮುಖ್ಯಾನುಗ್ರಾಹಕನಾಗಿರಲಿ ಎಂದು ಇದರ ಅಭಿಪ್ರಾಯವು.

‖ ವ್ಯಾಕರಣಪ್ರಕ್ರಿಯಾ ‖

**ತ್ವಷ್ಟಾರಮ್**—ತಕ್ಷೂ ತ್ವಕ್ಷೂ ತನೂಕರಣೇ ಧಾತು. ತ್ವಕ್ಷೂ ಧಾತುವಿನ ಮುಂದೆ ತೃನ್ ಪ್ರತ್ಯಯ, ಊದಿತ್ತುಧಾತು. ಆದ್ದರಿಂದ **ಸ್ವರತಿಸೂತಿಸೂಯತಿಧೂಞೂದಿತೋವಾ** (ಪಾ. ಸೂ. ೭-೨-೪೪) ಸ್ವರತ್ಯಾದಿ ಧಾತುಗಳು, ಊಕಾರೇತ್ಸಂಜ್ಞಕವಾದ ಧಾತು, ಇವುಗಳ ಮುಂದೆ ಇರುವ ವಲಾದಿಯಾದ ಆರ್ಧಧಾತುಕಕ್ಕೆ ಇಡಾಗಮವು ವಿಕಲ್ಪವಾಗಿ ಬರುವುದು ಎಂಬುದರಿಂದ ಇಡಾಗಮ ವಿಕಲ್ಪವಾಗಿ ಬರುವುದು. ಇಡಾಗಮವು ಬರದೇ ಇರುವ ಪಕ್ಷದಲ್ಲಿ ತ್ವಕ್ಷ್+ತೃ ಎಂದಿರುವಾಗ **ಸ್ಕೋಃಸಂಯೋಗಾದ್ಯೋರಂತೇಚ** (ಪಾ. ಸೂ. ೮-೨-೨೯) ಪದದ ಕೊನೆಯಲ್ಲಿರತಕ್ಕದ್ದು. ಅಥವಾ ಝಲ್ ವರ್ಣದ ಹಿಂದೆ ಇರತಕ್ಕದ್ದು ಆದ ಸಂಯೋಗದ ಆದ್ಯವಯವವಾದ ಸಕಾರ ಕಕಾರಗಳಿಗೆ ಲೋಪಬರುವುದು ಎಂಬುದರಿಂದ ಕಕಾರಕ್ಕೆ ಲೋಪ. ತ್ವಷ್+ತೃ **ಷ್ಟುನಾಷ್ಟುಃ** (ಪಾ. ಸೂ. ೮-೪-೪೧) ಎಂಬುದರಿಂದ ಷಕಾರದ ಮುಂದೆ ಇರುವ ತಕಾರಕ್ಕೆ ಟಕಾರ. ತ್ವಷ್ಟೃ ಎಂದಾಗುವುದು. ಇದರ ಮುಂದೆ ದ್ವಿತೀಯಾ ವಿಭಕ್ತಿ ಏಕವಚನ ಅಮ್ ಪ್ರತ್ಯಯ. **ಋತೋಙಿಸರ್ವನಾಮಸ್ಥಾನಯೋಃ** (ಪಾ. ಸೂ. ೭-೩-೧೧೦) ಎಂಬುದರಿಂದ ಗುಣ. **ಉರಣ್ರಪರಃ** (ಪಾ. ಸೂ. ೧-೧-೫೧) ಎಂಬುದರಿಂದ ರಪರವಾಗಿ ಬರುವುದು. ತ್ವಷ್ಟರ್+ಅಮ್ **ಅಪ್ ತೃನ್ ತೃಚ್** (ಪಾ. ಸೂ. ೬-೪-೧೧) ಎಂಬುದರಿಂದ ಉಪಧಾದೀರ್ಘ. **ತ್ವಷ್ಟಾರಮ್** ಎಂದಾಗುತ್ತೆ. ತೃನ್ ಪ್ರತ್ಯಯವು ನಿತ್. ಆದ್ದರಿಂದ ನಿತ್ಸ್ವರದಿಂದ ಆದ್ಯುದಾತ್ತ ಬರುವುದು.

**ಅಗ್ರಿಯಮ್**—**ಘಚ್ಛೌ ಚ** (ಪಾ. ಸೂ. ೪-೪-೧೧೭) **ಅಗ್ರಾದ್ಯತ್** (ಪಾ. ಸೂ. ೪-೪-೧೧೬) ಎಂಬ ಸೂತ್ರದಿಂದ ಅಗ್ರಾತ್ ಎಂಬ ಪದವು ಅನುವೃತ್ತವಾಗುವುದು. ಅಗ್ರಶಬ್ದಪ್ರಕೃತಿಕವಾದ ಸಪ್ತಮ್ಯಂತದ ಮುಂದೆ ಭವಃ ಎಂಬ ಅರ್ಥದಲ್ಲಿ ಘಚ್ ಛ ಎಂಬ ಎರಡು ಪ್ರತ್ಯಯಗಳು ಬರುವುವು ಎಂಬುದರಿಂದ ಘಚ್ ಬಂದರೆ ಅಗ್ರ+ಘ. **ಆಯನೇಯೀನೀಯಿಯಃ ಫ ಢ ಖ ಛ ಘಾಂ ಪ್ರತ್ಯಯಾದೀನಾಮ್** (ಪಾ. ಸೂ. ೭-೧-೨) ಪ್ರತ್ಯಯದ ಆದಿಯಲ್ಲಿರುವ ಫ ಢ ಖ ಛ ಘ ಇವುಗಳಿಗೆ ಕ್ರಮವಾಗಿ ಆಯನ್, ಏಯ್, ಈನ್, ಈಯ್, ಇಯ್ ಆದೇಶಗಳು ಬರುವುವು ಎಂಬುದರಿಂದ ಘ ಗೆ ಇಯ್ ಬಂದರೆ ಅಗ್ರ+ಇಯ್+ಅ. **ಯಸ್ಯೇತಿಚ** (ಪಾ. ಸೂ. ೬-೪-೧೪೮) ಎಂಬುದರಿಂದ ಅಕಾರ ಲೋಪ ಅಗ್ರಿಯ ಎಂದಾಗುವುದು. ಇಲ್ಲಿ ಈ ಸೂತ್ರದಿಂದ

ಬರುವ ಆದೇಶಗಳು ಪ್ರತ್ಯಯಾದಿಗಳಾದ ಘ್ ಮೊದಲಾದ ವ್ಯಂಜನಗಳಿಗೆ ಬರುವುವು. ಪ್ರಕೃತದಲ್ಲಿ ಘ್ ಎಂಬುದಕ್ಕೆ ಇಯ್ ಆದೇಶ ಬರುವುದು. ಅಂಗಾಧಿಕಾರದಲ್ಲಿ ವಿಧಿಸಿರುವುದರಿಂದ ಪ್ರಕೃತಿಪ್ರತ್ಯಯಸಾಪೇಕ್ಷವಾಗಿ ಈ ಆದೇಶಗಳು ಬರುವುವು. ಆದ್ದರಿಂದ ಇವು ಬಹಿರಂಗಗಳು. **ಆದ್ಯುದಾತ್ತಶ್ಚ** (ಪಾ. ಸೂ. ೩-೧-೩) ಎಂಬುದು ಪ್ರಕೃತಿಯನ್ನು ಅಪೇಕ್ಷಿಸುವುದಿಲ್ಲ ಆದ್ದರಿಂದ ಇದು ಅಂತರಂಗ. ಅಂತರಂಗವಾದ್ದರಿಂದ ಆಯನ್ನಾದಿಯಾದ ಆದೇಶಗಳು ಬರುವುದಕ್ಕಿಂತಲೂ ಮುಂಚೆಯೇ ಆದ್ಯುದಾತ್ತಶ್ಚ ಎಂಬುದರಿಂದ ಆದ್ಯುದಾತ್ತ ಬರುವುದು. **ಪ್ರತ್ಯಯಃ** (ಪಾ. ಸೂ ೩-೧-೧) **ಪರಶ್ಚ** (ಪಾ ಸೂ ೩-೧-೨) **ಆದ್ಯುದಾತ್ತಶ್ಚ** (ಪಾ. ಸೂ. ೩-೧-೩) ಈ ಮೂರು ಸೂತ್ರಗಳೂ ಪ್ರತ್ಯಯವಿಧಿಯಲ್ಲಿ ಅಧಿಕೃತಗಳಾಗುವುವು. ಆದ್ದರಿಂದ ಆದ್ಯುದಾತ್ತ ಸ್ವರವು ಪ್ರತ್ಯಯಸನ್ನಿಯೋಗಶಿಷ್ಟವಾಗುವುದು. ಆದ್ದರಿಂದ ಪ್ರತ್ಯಯೋತ್ಪತ್ತಿಸಮನಂತರವೇ ಆದ್ಯುದಾತ್ತ ಸ್ವರವು ಬರುವುದು. ಈಗ ಘಚ್ ಪ್ರತ್ಯಯಸ್ವರವು ಮೊದಲು ಬರುವುದು ನಂತರ ಘ ಗೆ ಇಯ್ ಬರುವುದು. ಘ ಎಂಬುದು ವ್ಯಂಜನ. ಅದಕ್ಕೆ ಸ್ವರವಿಲ್ಲ. ಆದರ ಸ್ಥಾನದಲ್ಲಿ ಬರುವ ಆದೇಶವೂ ಆಂತರತಮ್ಯದಿಂದ ಪ್ರವೃತ್ತಿಕಾಲದಲ್ಲಿ ಅಸ್ವರಕವಾಗಿಯೇ ಬರುವುದು. ಇದೇ ಅಂಶವನ್ನು **ಅಕ್ರಿಯಮಾಣೇಹ್ಯುಪದೇಶಿವದ್ಭಾವೇ ಪ್ರತ್ಯಯಸಂಜ್ಞಾಸನ್ನಿಯೋಗೇನಾದ್ಯುದಾತ್ತತ್ವೇ ಕೃತೇ ಆಂತರ್ಯತ ಆದೇಶಾ ಅಸ್ವರಕಾಣಾಂ ಅಸ್ವರಕಾಃ ಸ್ಯುಃ** (೭-೧-೨ ಮಭಾ) ಎಂದು ಭಾಷ್ಯಕಾರರು ಹೇಳಿರುವರು. ಪ್ರವೃತ್ತಿಕಾಲದಲ್ಲಿ ಸ್ವರವಿಲ್ಲದವುಗಳಾಗಿ ಬಂದರೂ ಪ್ರಯೋಗಕಾಲದಲ್ಲಿ ಸ್ವರವಿಲ್ಲದೇ ಅಚ್ಚಿಗೆ ( ಪ್ರಯೋಗ ) ಉಚ್ಚಾರಣೆ ಇಲ್ಲದೇ ಇರುವುದರಿಂದ **ಅನುದಾತ್ತಂಪದಮೇಕವರ್ಜಂ** ಎಂಬುದರಿಂದ ಆಯನ್ನಾದ್ಯಾದೇಶಗಳು ಅನುದಾತ್ತಗಳಾಗಿ ಬರಬೇಕಾಗುವುದು. ಅಸ್ವರಕಾಣಾಮಸ್ವರಕಾಃಸ್ಯುಃ, ಎಂಬುದಕ್ಕೆ ಇನ್ನೊಂದು ತೆರನಾಗಿಯೂ ಅರ್ಥ ಹೇಳಬಹುದು. ಅನುದಾತ್ತವನ್ನು ಉಚ್ಚಾರಣೆ ಮಾಡಿದರೆ ಗಾತ್ರಗಳಿಗೆ ( ಅವಯವಗಳಿಗೆ ) ಶೈಥಿಲ್ಯವೂ, ಸ್ವರಕ್ಕೆ ಸ್ನಿಗ್ಧತೆಯೂ, ಕಂಠವಿವರಕ್ಕೆ ಮಹತ್ವವೂ ಉಂಟಾಗುವುದು. ಇದೇ ರೀತಿಯಲ್ಲಿ ವ್ಯಂಜನವನ್ನು ಉಚ್ಚಾರಣೆ ಮಾಡಿದಗೂ ಆಗುವುಗು. ಆದರೂ ಯೋಗ್ಯತೆ ಇಲ್ಲದೇ ಇರುವುದರಿಂದ ವ್ಯಂಜನಗಳಲ್ಲಿ ಅನುದಾತ್ತಸ್ವರ ಬರುವುದಿಲ್ಲ. ಈರೀತಿಯಲ್ಲಿ ವ್ಯಂಜನಗಳಲ್ಲಿ ಅನುದಾತ್ತ ಧರ್ಮವಿದೆ, ಉದಾತ್ತ ಧರ್ಮವಿಲ್ಲ ಎಂದು ಸ್ಪಷ್ಟವು. ಅಸ್ವರಕಾಣಾಂ ಎಂಬಲ್ಲಿರುವ ಸ್ವರಪದದಿಂದ ಉದಾತ್ತಸ್ವರವನ್ನು ತೆಗೆದುಕೊಳ್ಳುವುದು. ಅಸ್ವಕಾಣಾಂ ಉದಾತ್ತ ಸ್ವರರಹಿತಗಳಾದ ವ್ಯಂಜನಗಳಿಗೆ, ಅಸ್ವರಕಾಃ — ಇಷ್ಟವಾದ ಉದಾತ್ತ ಸ್ವರವಿಲ್ಲದೇ ಇರುವುದರಿಂದ ಅನುದಾತ್ತಗಳಾದ ಆದೇಶಗಳೇ ಬರುವುವು ಎಂದು ವರ್ಣಿಸುವರು. ಏವಂಚ ಪ್ರಕೃತದಲ್ಲಿ ಘ್‌ಗೆ ಬರುವ ಇಯ್ ಆದೇಶವು ಅನುದಾತ್ತವಾಗಬೇಕಾಗುವುದು. ಎಂದರೆ ಇಲ್ಲಿ ವಾರ್ತಿಕಕಾರರು **ಆಯನಾದಿಷೂಪದೇಶಿವದ್ವಚನಂ ಸ್ವರಸಿದ್ಧ್ಯರ್ಥಂ** (ಪಾ. ಸೂ. ೭-೧-೨-೧) ಎಂದು ಹೇಳಿರುವರು. ಸ್ವರಸಿದ್ಧಿಗಾಗಿ ಪ್ರತ್ಯಯೋಪದೇಶಕಾಲದಲ್ಲಿಯೇ ಆಯನ್ನಾದ್ಯಾದೇಶ ಬರುವುದು ಎಂದು ಹೇಳಬೇಕು ಎಂದು ಇದರ ಅರ್ಥ. ಇದರಿಂದ ಪ್ರತ್ಯಯೋತ್ಪತ್ತಿಕಾಲದಲ್ಲಿಯೇ ಇಯಾದೇಶ ಬಂದರೆ ಅಗ್ರ+ಇಯ ಎಂಬಲ್ಲಿ ಪ್ರತ್ಯಯಾದ್ಯುದಾತ್ತಸ್ವರವನ್ನು ಬಾಧಿಸಿ ಚಿತ್ಕರಣದಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಇಯ ಎಂಬುದು ಅಂತೋದಾತ್ತವಾಗುವುದು. ಅಥವಾ ಬಹಿರಂಗವಾದ್ದರಿಂದ ಮೊದಲು ಆದೇಶಗಳು ಬರದೇ ಇದ್ದರೆ ಘಚ್ಛೌಚ ಎಂಬಲ್ಲಿ ಚಿತ್ಕರಣವು ವ್ಯರ್ಥವಾಗುವುದು. ಹೇಗೆಂದರೆ ಅಗ್ರ+ಘ ಈಗ ಪ್ರತ್ಯಯಾದ್ಯುದಾತ್ತ ಬಂದರೂ, ಅಕಾರ ಉದಾತ್ತ ನಂತರ ಘಗೆ ಅನುದಾತ್ತವಾದ ಇಯ್ ಬರುವುದು. ಏವಂಚ ಇಯ ಎಂಬುದು ಅಂತೋದಾತ್ತವೇ ಆಯಿತು. ಆದ್ದರಿಂದ ಅಂತೋದಾತ್ತಸ್ವರಸಿದ್ಧಿಗಾಗಿ ಮಾಡಿರುವ ಚಿತ್ಕರಣವು ಚಿತ್ಕರಣವಿಲ್ಲದೇ ಇದ್ದರೂ ಅಂತೋದಾತ್ತ ಸ್ವರ ಸಿದ್ಧಿಸುವುದರಿಂದ ವ್ಯರ್ಥವಾಗುವುದು. **ವ್ಯರ್ಥಂಸತ್ ಕಿಂಚಿದರ್ಥಂ ಜ್ಞಾಪಯತಿ** ಅಂದರೆ ವ್ಯರ್ಥವಾದ

ಪದವು ತಾನು ಸಾರ್ಥಕವಾಗುವಂತೆ ಒಂದು ಅರ್ಥವನ್ನು ಜ್ಞಾಪಿಸುವುದು ಎಂದು ಹೇಳಿರುವುದರಿಂದ ಒಂದು ವಚನವನ್ನು ಜ್ಞಾಪಿಸುವುದು. ಅದು ಯಾವುದು? ಎಂದರೆ ಉಪದೇಶಾವಸ್ಥಾಯಾಮಾಯನ್ನಾದಯೋ ಭವನ್ತಿ, ಎಂದು ಜ್ಞಾಪಿಸುವುದು. ಇದರ ಅರ್ಥವನ್ನು ಉದ್ಯೋತಕಾರರು ಪ್ರತ್ಯಯಸಂಬಂಧ್ಯಾದೇಶಾನಾಮುತ್ಪತ್ತಿ ಸನ್ನಿಯೋಗಶಿಷ್ಟಕಾರ್ಯ್ಯಾದಪಿ ಪೂರ್ವಂ ಪ್ರವೃತ್ತಿರ್ಜ್ಞಾಪ್ಯತೇ ಇತಿ ಭಾಷ್ಯಾರ್ಥಃ ಎಂದು ಹೇಳಿರುವರು. ಪ್ರತ್ಯಯಸಂಬಂಧಿಯಾದ ಆಯನಾದ್ಯಾದೇಶಗಳು, ಪ್ರತ್ಯಯೋತ್ಪತ್ತಿಸನ್ನಿಯೋಗಶಿಷ್ಟವಾದ ಆದ್ಯುದಾತ್ತ ಕ್ಕಿಂತಲೂ ಮೊದಲೇ ಬರುವುವು ಎಂದು ಚಿತ್ಕರಣದಿಂದ ಜ್ಞಾಪಿತವಾಗುವುದು ಎಂದು ಅರ್ಥ. ಈಗ ಚಿತ್ಕರಣ ವಿಲ್ಲದೆ ಇದ್ದರೆ ಅಗ್ರ+ಘ ಎಂದಿರುವಾಗ ಆದ್ಯುದಾತ್ತ ಬರುವುದಕ್ಕಿಂತಲೂ ಮುಂಚೆಯೇ ಇಯಾದೇಶ ಬಂದರೆ ಅಗ್ರ+ಇಯ ಎಂದಿರುವಾಗ ಆದ್ಯುದಾತ್ತ ಬಂದರೆ ಇಕಾರವು ಉದಾತ್ತವಾಗುವುದು. ಶ್ರುತಿಯಲ್ಲಿ ಆಕಾರವು ಉದಾತ್ತವಾಗಿರುವುದು. ಆದ್ದರಿಂದ ಅಂತೋದಾತ್ತಸ್ವರಸಿದ್ಧಿಗಾಗಿ ಚಿತ್ಕರಣವು ಸಾರ್ಥಕವಾಗುವುದು. ಏವಂಚ ಉಪದೇಶಿವದ್ವಚನವನ್ನು ಮಾಡಬೇಕಾದುದಿಲ್ಲ. ಈ ಅಂಶವನ್ನು ನವಾಕ್ಯಚಿಚ್ಚಿತ್ಕರಣಾತ್ (ಪಾ. ಸೂ. ೭-೧-೨-೨) ಎಂದು ವಾರ್ತಿಕಕಾರರೇ ಹೇಳಿರುವರು, ಈ ರೀತಿಯಲ್ಲಿ ಅಗ್ರಿಯ ಎಂಬುದು ಅಂತೋದಾತ್ತ ವಾಗುವುದು.

ವಿಶ್ವರೂಪಂ-ವಿಶ್ವಾನಿ ರೂಪಾಣಿ ತ್ವಷ್ಟುಃ ಉತ್ಪನ್ನತ್ವೇನ ಯಸ್ಯ ಸಃ ವಿಶ್ವರೂಪಃ ಎಂದು ಬಹುವ್ರೀಹಿ ರೂಪವು. ತ್ವಷ್ಟೃವಿನಿಂದ ಉತ್ಪನ್ನವಾದುದು ಎಂಬ ಅರ್ಥವನ್ನು ತ್ವಷ್ಟಾ ವೈ ಪಶೂನಾಂ ಮಿಥುನಾನಾಂ ರೂಪ-ಕೃತ್ (ತೈ. ಶ್ರು. ಸಂ. ೬-೧-೮-೫) ಈ ಶ್ರುತಿಯು ಬೋಧಿಸುವುದು. ವಿಶ್ವಶಬ್ದವು ವಿಶ್ ಧಾತುವಿನ ಮುಂದೆ ಕ್ವನ್‌ಪ್ರತ್ಯಯು ಬಂದು ನಿಷ್ಪನ್ನವಾಗುವುದು. ಆದ್ದರಿಂದ ನಿತ್ಸ್ವರದಿಂದ ಆದ್ಯುದಾತ್ತ. ಬಹುವ್ರೀಹಿಯಾದ್ದರಿಂದ ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್ (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿ ಸ್ವರವು ಪ್ರಾಪ್ತವಾಗುವುದು, ಆದರೂ ಅದನ್ನು ಬಾಧಿಸಿ ಬಹುವ್ರೀಹೌ ವಿಶ್ವಂ ಸಂಜ್ಞಾಯಾಂ (ಪಾ. ಸೂ. ೬-೨-೧೦೬) ಬಹುವ್ರೀಹಿಸಮಾಸದಲ್ಲಿ ಸಂಜ್ಞೆ ತೋರುವಾಗ ಪೂರ್ವಪದವಾದ ವಿಶ್ವಶಬ್ದವು ಅಂತೋದಾತ್ತವಾಗುವುದು ಎಂಬುದರಿಂದ ಅಂತೋದಾತ್ತಸ್ವರ ಬರುವುದು.

ಅಸ್ಮಾಕಂ—ಅಸು ಕ್ಷೇಪಣೇ ಧಾತು. ಇದರ ಮುಂದೆ ಯುಷ್ಯಸಿಭ್ಯಾಂ ಮದಿಕ್ (ಉ. ಸೂ. ೧-೧೩೬) ಯುಷ್ ಅಸ್ ಈ ಧಾತುಗಳ ಮುಂದೆ ಮದಿಕ್‌ಪ್ರತ್ಯಯ ಬರುವುದು ಎಂಬುದರಿಂದ ಮದಿಕ್‌ಪ್ರತ್ಯಯ ಅಸ್ಮದ್ ಎಂದಾಗುವುದು. ಇದು ಪ್ರತ್ಯಯಸ್ವರದಿಂದ ಅಂತೋದಾತ್ತ. ಇದರ ಮುಂದೆ ಷಷ್ಠೀಬಹುವಚನ ಆಮ್ ಪ್ರತ್ಯಯ. ಅಸ್ಮದ್+ಆಮ್ ಈಗ ಯೋಽಚಿ (ಪಾ. ಸೂ. ೭-೨-೮೯) ಆದೇಶವನ್ನು ಹೊಂದದೇ ಇರುವ ಅಜಾದಿ ವಿಭಕ್ತಿ ಪರದಲ್ಲಿರುವಾಗ ಯುಷ್ಮದ್ ಅಸ್ಮದ್ ಶಬ್ದಗಳಿಗೆ ಯಾದೇಶ ಬರುವುದು ಎಂಬುದರಿಂದ ಯಾದೇಶಕ್ಕೆ ಪ್ರಾಪ್ತಿ ಇದೆ. ಸಾಮ ಆಕಮ್ (ಪಾ. ಸೂ. ೭-೧-೩೩) ಯುಷ್ಮದ್ ಅಸ್ಮದ್ ಶಬ್ದಗಳ ಮುಂದೆ ಇರುವ ಸಾಮ್‌ಗೆ ಆಕಂ ಬರುವುದು ಎಂಬುದರಿಂದ ಆಕಂ ಆದೇಶಕ್ಕೂ ಪ್ರಾಪ್ತಿ ಇದೆ. ಯೋಽಚಿ (ಪಾ. ಸೂ. ೭-೨-೮೯) ಎಂಬುದು ಪರದಲ್ಲಿರುವ ಶಾಸ್ತ್ರ. ಆದ್ದರಿಂದ ವಿಪ್ರತಿಷೇಧೇ ಪರಂ ಕಾರ್ಯಂ (ಪಾ. ಸೂ. ೧-೪-೨) ಎಂಬ ಪರಿಭಾಷಾನುಸಾರ ಯತ್ವವು ಪ್ರಾಪ್ತವಾಗುವುದು. ಆದರೂ ಸಾಮ ಆಕಂ (ಪಾ. ಸೂ. ೭-೧-೩೩) ಎಂಬುದು ನಿತ್ಯ, ಅಂದರೆ ಯಾದೇಶವನ್ನು ಮಾಡಿದರೂ ಆಕಂ ಬರುವುದು ಯಾದೇಶವನ್ನು ಮಾಡದೆ ಇದ್ದರೂ ಆಕಂ ಬರುವುದು. ಆದ್ದರಿಂದ ಆಕಂ ಆದೇಶವು ಕೃತಾಕೃತಪ್ರಸಂಗಿಯಾಗುವುದು. ಆದ

ಕಾರಣ ಅದು ನಿತ್ಯವಾಗುವುದು. ಆಕಂ ಆದೇಶ ಮಾಡುವುದಕ್ಕಿಂತಲೂ ಮುಂಚೆ ಯಾದೇಶಕ್ಕೆ ಪ್ರಾಪ್ತಿ ಇದ್ದರೂ ಆಕಮಾದೇಶ ಬಂದಮೇಲೆ ಯೋಚಿ ಎಂಬುದು ಬರುವುದಿಲ್ಲ. ಏಕೆಂದರೆ ಆದೇಶವನ್ನು ಹೊಂದದ ವಿಭಕ್ತಿ ಪರದಲ್ಲಿರುವಾಗ ಇದು ಬರುವುದು. ಆಕಮಾದೇಶ ಬಂದಮೇಲೆ ವಿಭಕ್ತಿಯು ಆದೇಶವನ್ನು ಹೊಂದಿದ ವಿಭಕ್ತಿಯಾಗುವುದು. ಆದ್ದರಿಂದ ಕೃತಾಕೃತಪ್ರಸಂಗಿತ್ವರೂಪವಾದ ನಿತ್ಯತ್ವವು ಯೋಚಿ ಎಂಬುದಕ್ಕೆ ಬರುವುದಿಲ್ಲ. ಆದಕಾರಣ **ಪರನಿತ್ಯಾನ್ತರಂಗಾಪವಾದಾನಾಮುತ್ತರೋತ್ತರಂ ಬಲೀಯಃ** ( ಪರಿಭಾ. ೩೮ ) ಎಂಬುದರಿಂದ ಪರವಾದ ಯತ್ವವನ್ನು ಬಾಧಿಸಿ ನಿತ್ಯವಾದ ಆಕಮೇ ಬರುವುದು. ಆಕಂ ಪ್ರತಿಪದೋಕ್ತವಾದ್ದರಿಂದಲೂ ಯತ್ವಕ್ಕಿಂತಲೂ ಪ್ರಬಲ. ಯದ್ಯಪಿ ಇಲ್ಲಿ ಯುಷ್ಮದ್+ಆಮ್ ಎಂದಿರುವಾಗ ಸಾಮ್ ಇಲ್ಲ. ಆಮ್‌ಪ್ರತ್ಯಯಕ್ಕೆ **ಆಮಿ ಸರ್ವನಾಮ್ನಃ ಸುಟ್** (ಪಾ. ಸೂ. ೭-೧-೫೨) ಅವರ್ಣಾಂತವಾದ ಶಬ್ದಕ್ಕಿಂತಲೂ ಪರದಲ್ಲಿರುವ ಸರ್ವನಾಮ ಶಬ್ದದ ಮುಂದೆ ವಿಹಿತವಾಗಿರುವ ಆಮ್‌ಗೆ ಸುಟ್ ಆಗಮ ಬರುವುದು ಎಂಬುದರಿಂದ ಸುಟ್ ಆಗಮ ಬಂದರೆ ಸಾಮ್ ಆಗುವುದು. ಇಲ್ಲಿ ಆಕಮಾದೇಶ ಬರುವುದಕ್ಕಿಂತಲೂ ಮುಂಚೆ ಯತ್ವ ಬರುವುದರಿಂದ **ಶೇಷೇ ಲೋಪಃ** (ಪಾ. ಸೂ. ೭-೨-೯೦) ಎಂಬುದು ಬರುವುದಿಲ್ಲವಾದ್ದರಿಂದ ಅವರ್ಣಾಂತವಾದ ಅಂಗವು ಸಿಗುವುದಿಲ್ಲ. ಆದ್ದರಿಂದ ಸಸುಟ್ಕವಾಗಿ ನಿರ್ದೇಶವು ವ್ಯರ್ಥವೆಂದು ತೋರಬಹುದು. ಸುಡಾಗಮವಿಶಿಷ್ಟವಾಗಿ ನಿರ್ದೇಶಮಾಡದೇ ಇದ್ದರೆ ಆಮ ಆಕಂ ಎಂದು ಸೂತ್ರವನ್ನುಮಾಡಿದರೆ ಆಕಮಾದೇಶ ಬಂದಮೇಲೆ ಸ್ಥಾನಿವದ್ಭಾವದಿಂದ ಆಕಂ ಎಂಬುದು ಆಮ್ ಆದ್ದರಿಂದ **ಶೇಷೇ ಲೋಪಃ** (ಪಾ.ಸೂ. ೭-೨-೯೦) ಎಂಬುದರಿಂದ ಅಂತ್ಯವಾದ ದಕಾರಕ್ಕೆ ಲೋಪ ಬರುವುದು ಎಂಬ ಪಕ್ಷದಲ್ಲಿ ಸುಟ್ ಆಗಮವು ಬರಬೇಕಾಗಿ ಬರುವುದು ಆ ಸುಡಾಗಮ ವಾರಣೆಗಾಗಿ ಸಸುಟ್ಕವಾಗಿ ನಿರ್ದೇಶಮಾಡಿರುವರು. ಸಸುಟ್ಕವಾಗಿ ನಿರ್ದೇಶಮಾಡಿದರೆ ಸುಟ್ಟಿಗೂ ಸ್ಥಾನಿತ್ವವಿರುವುದರಿಂದ ಭಾವಿಯಾಗಿ ಬರುವ ಅದಕ್ಕೂ ನಿವೃತ್ತಿ ಏರ್ಪಡುವುದು. ಆದ್ದರಿಂದ ಸಸುಟ್ಕನಿರ್ದೇಶವು ಸಾರ್ಥಕವಾಗುವುದು. ಶೇಷೇ ಲೋಪಃ ಎಂಬುದರಿಂದ ಟಿಗೆ ಲೋಪ ಎಂಬ ಪಕ್ಷದಲ್ಲಿ ಸಸುಟ್ಕನಿರ್ದೇಶವು ಅವಶ್ಯಕವಿಲ್ಲ.

**ಕೇವಲಃ**—ವೃಷಾದಿಯು ಆಕೃತಿಗಣ. ಆದ್ದರಿಂದ **ವೃಷಾದೀನಾಂ ಚ** ( ಪಾ. ಸೂ. ೬-೧-೨೦೩ ) ಎಂಬುದರಿಂದ ಅಂತೋದಾತ್ತಸ್ವರಬರುವುದು. ॥ ೧೦ ॥

॥ ಸಂಹಿತಾಪಾಠಃ ॥

ಅವ ಸೃಜಾ ವನಸ್ಪತೇ ದೇವ ದೇವೇಭ್ಯೋ ಹವಿಃ ।
ಪ್ರ ದಾತುರಸ್ತು ಚೇತನಂ ॥ ೧೧ ॥

। ಪದಪಾಠಃ ।

ಅವ । ಸೃಜ । ವನಸ್ಪತೇ । ದೇವ । ದೇವೇಭ್ಯಃ । ಹವಿಃ ॥
ಪ್ರ । ದಾತುಃ । ಅಸ್ತು । ಚೇತನಂ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ವನಸ್ಪತೇ ಏತನ್ನಾಮಕಾಗ್ನೇ ದೇವ ಹವಿರ್ಭಾಗೆಭ್ಯೋ ದೇವೇಭ್ಯೋಽಸ್ಮದೀಯಂ ಹವಿರವ ಸೃಜ । ಸಮರ್ಪಯೇತ್ಯರ್ಥಃ ಪ್ರ ದಾತುರ್ಯಜಮಾನಸ್ಯ ಚೇತನಂ ಪರಲೋಕವಿಷಯಂ ವಿಜ್ಞಾನಂ ತ್ವತ್ಪ್ರಸಾದಾದಸ್ತು ॥ ವನಸ್ಪತೇ । ಆಮಂತ್ರಿತನಿಘಾತಃ। ದೇವ । ಪಾದಾದಿತ್ವಾನ್ನ ನಿಘಾತಃ । ಷಾಷ್ಠಿಕಮಾಮಂತ್ರಿತಾದ್ಯುದಾತ್ತತ್ವಂ । ಹವಿಃ । ಇಸಃ ಪ್ರತ್ಯಯಸ್ವರಃ । ದಾತುಃ । ದದಾತೇಸ್ತೃಚ್ । ಚಿತ ಇತ್ಯಂತೋದಾತ್ತಃ । ಙಸಿ ಙಸೋಶ್ಚ ಉತ್ । ಪಾ. ೬-೧-೧೧೧ ಇತ್ಯುತ್ವಂ । ಏಕಾದೇಶೋ ರಪರತ್ವಂ ಚ । ರಾತ್ಸಸ್ಯ । ಪಾ. ೮-೨-೨೪ । ಇತಿ ಸಲೋಪಃ । ಏಕಾದೇಶಸ್ವರೇಣೋಕಾರ ಉದಾತ್ತಃ । ಚೇತನಂ । ಚಿತೀ ಸಂಜ್ಞಾನೇ । ಕರಣೇ ಲ್ಯುಟ್ । ಯೋರನಾದೇಶಃ । ಲಘೂಪಧಗುಣಃ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ ॥

॥ ಪ್ರತಿಪದಾರ್ಥ ॥

ದೇವ—ದೇವನಾದ । ವನಸ್ಪತೇ—ವನಸ್ಪತಿಯೇ ಅಥವಾ ವನಸ್ಪತಿ ಎಂಬ ಹೆಸರಿನ ಅಗ್ನಿಯೇ । ದೇವೇಭ್ಯಃ—ದೇವತೆಗಳಿಗೆ । ಹವಿಃ—ನಾವು (ಸಿದ್ಧಪಡಿಸಿರುವ) ಹವಿಸ್ಸನ್ನು । ಅವ ಸೃಜ—ಸಮರ್ಪಿಸು । ದಾತುಃ—ದೇವತೆಗಳಿಗೆ ಹವಿಸ್ಸನ್ನು ಕೊಡುವ ಯಜಮಾನನಿಗೆ । ಚೇತನಂ—(ಪರಲೋಕವಿಷಯವಾದ) ಉತ್ತಮ ಜ್ಞಾನವು । ಅಸ್ತು—(ನಿನ್ನ ಅನುಗ್ರಹದಿಂದ) ಉಂಟಾಗಲಿ ॥

॥ ಭಾವಾರ್ಥ ॥

ಎಲೈ ವನಸ್ಪತಿಯೇ, ಅಥವಾ ವನಸ್ಪತಿನಾಮಕ ಅಗ್ನಿಯೇ, ನಾವು ಕೊಡುವ ಹವಿಸ್ಸನ್ನು ದೇವತೆಗಳಿಗೆ ಸಮರ್ಪಿಸು ಮತ್ತು ಹವಿಸ್ಸನ್ನು ಕೊಡುವ ಯಜಮಾನನಿಗೆ ನಿನ್ನ ಅನುಗ್ರಹದಿಂದ ಉತ್ತಮವಾದ ಜ್ಞಾನವು ಉಂಟಾಗಲಿ.

## English Translation.

Present, divine Vanaspati, our oblation to the gods, and may true knowledge be the reward of the giver.

॥ ವಿಶೇಷವಿಷಯಗಳು ॥

ವನಸ್ಪತೇ—ವನಸ್ಪತಿ ಶಬ್ದಕ್ಕೆ ಯಾಸ್ಕರ ವಿವರಣೆಯು—

ವನಸ್ಪತ ಇತ್ಯೇನಮಾಹೈಷ ಹಿ ವನಾನಾಂ ಪಾತಾ ವಾ ಪಾಲಯಿತಾ ವಾ । ವನಂ ವನೋತೇಃ ॥ (ನಿ. ೮-೩)

ತತ್ಕೋ ವನಸ್ಪತಿಃ । ಯೂಪ ಇತಿ ಕಾತ್ಥಕ್ಯಃ । ಅಗ್ನಿರಿತಿ ಶಾಕಪೂಣಿಃ ॥ (ನಿ. ೮-೧೮).

ಎಂದರೆ ಅಗ್ನಿಯನ್ನೇ ವನಸ್ಪತಿಯೆಂದು ಹೇಳುವರು. ಏಕೆಂದರೆ ಅಗ್ನಿಯು ವನಗಳ ಪಾಲಕನು ಅಥವಾ ಸಂರಕ್ಷಕನು. ವೃಕ್ಷದಲ್ಲಿ ಅಗ್ನಿಯು ಅಂತರ್ಭೂತವಾಗಿದ್ದರೂ ಅದನ್ನು ಸುಡುವುದಿಲ್ಲವಾದ್ದರಿಂದ ಅದರ ಸಂರಕ್ಷನೆಂದು ಹೇಳಲ್ಪಡುವನು. ಅಥವಾ ದಾರ್ವಾದಿ ಯಜ್ಞಸಾಧನಗಳಿಗೆ ಉಪಯೋಗವಾಗುವುದರಿಂದ ವನವೆಂದು ಹೆಸರು. ವನಸ್ಪತಿ ಎಂದರೆ ವೃಕ್ಷರಾಜ, ದೊಡ್ಡದಾದ ವೃಕ್ಷ ಎಂದರ್ಥವು. ವನಸ್ಪತಿ ಎಂದರೆ ಯಾವ ದೇವತೆಯು? ಯಜ್ಞದಲ್ಲಿ ಪಶುವನ್ನು ಕಟ್ಟುವುದಕ್ಕಾಗಿ ನೆಟ್ಟಿರುವ ಮರದ ಕಂಭವೆಂದು ಕಾತ್ಥಕ್ಯರ ಅಭಿಪ್ರಾಯವು. ವನಸ್ಪತಿಯೆಂದರೆ ಅಗ್ನಿಯೆಂದು ಶಾಕಪೂಣಿಯ ಅಭಿಪ್ರಾಯವು.

ಕಾತ್ಥಕ್ಯರ ಅಭಿಪ್ರಾಯವನ್ನು ಸಮರ್ಥಿಸುವುದಕ್ಕಾಗಿ ಯಾಸ್ಕರು ಒಂದು ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು—

**ಅಂಜಂತಿ ತ್ವಾಮಧ್ವರೇ ದೇವಯಂತೋ ವನಸ್ಪತೇ ಮಧುನಾ ದೈವ್ಯೇನ ॥**

(ಋ. ಸಂ. ೩-೮-೧)

ಎಂದರೆ ಎಲೈ ವನಸ್ಪತಿಯೇ (ಯೂಪಸ್ತಂಭವೇ) ಯಜ್ಞದಲ್ಲಿ ಋತ್ವಿಗ್ಯಜಮಾನರು ನಿನ್ನನ್ನು ಮಂತ್ರಸಂಸ್ಕೃತವಾದ ಘೃತ (ತುಪ್ಪ)ದಿಂದ ಲೇಪನ ಮಾಡುವರು ಎಂದು ಪಶುವನ್ನು ಕಟ್ಟುವ ಯೂಪಸ್ತಂಭವನ್ನುದ್ದೇಶಿಸಿ ಸಂಬೋಧನೆ ಮಾಡಿರುವುದು. ಮತ್ತು ಇದೇ ಸೂಕ್ತದ ೩, ೬, ೧೧ ನೆಯ ಋಕ್ಕುಗಳಲ್ಲಿಯೂ ವನಸ್ಪತಿಯನ್ನು ಯೂಪಸ್ತಂಭವೆಂದು ಸಂಬೋಧನೆ ಮಾಡಿರುವುದಲ್ಲದೆ ಈ ಸೂಕ್ತಕ್ಕೆ ಯೂಪವೇ ದೇವತೆಯು ಎಂದು ಪ್ರಸಿದ್ಧವಾಗಿರುವುದು. ಈ ಸೂಕ್ತದ ಹನ್ನೊಂದನೆಯ ಋಕ್ಕಿನಲ್ಲಿ—“**ವನಸ್ಪತೇ ಶತವಲ್ಶೋ ವಿರೋಹ ಸಹಸ್ರವಲ್ಶಾ ವಿ ವಯಂ ರುಹೇಮ**” ಎಂದರೆ, ಎಲೈ ವನಸ್ಪತಿಯೇ, ನೂರಾರು ಮತ್ತು ಸಾವಿರಾರು (ಸ್ಥಳಗಳಲ್ಲಿ) ಚಿಗುರುಗಳಿಂದ ಕೂಡಿ ಬೆಳೆ ಎಂದು ಹೇಳಿರುವುದು ವನಸ್ಪತಿಯಾದ ವೃಕ್ಷಕ್ಕೇ ಅನ್ವಯಿಸುವುದಾಗಿರುವುದು. ಋ. ಸಂ. ೧೦-೭೦-೧೦ ನೇ ಋಕ್ಕಿನಲ್ಲಿ “**ವನಸ್ಪತೇ ರಶನಯಾ ನಿಯೂಯ**” ಎಲೈ ವನಸ್ಪತಿಯೇ, ಪಶುವನ್ನು ಕಟ್ಟುವ ಹಗ್ಗದಿಂದ ಕಟ್ಟು ಎಂದು ಹೇಳಿರುವುದು ವನಸ್ಪತಿ ಶಬ್ದಕ್ಕೆ ಯೂಪಸ್ತಂಭವೆಂಬ ಅರ್ಥವನ್ನು ಪುಷ್ಟೀಕರಿಸುವುದು. ಆದುದರಿಂದ ವನಸ್ಪತಿಯೆಂದರೆ ಯೂಪಸ್ತಂಭವೆಂದೇ ಅರ್ಥವು. ಅಗ್ನಿಯೆಂದು ಪರೋಕ್ಷಾರ್ಥವು.

**ದಾತುಃ**— ಹವಿಃಪ್ರದಾತುಃ ಯಜಮಾನಸ್ಯ । ಹವಿಸ್ಸನ್ನು ಸಮರ್ಪಿಸುವ ಯಜಮಾನನ.

**ಚೇತನಂ**— ಪರಲೋಕವಿಷಯಂ ವಿಜ್ಞಾನಂ, ಪರಲೋಕವಿಷಯವಾದ ಜ್ಞಾನವೆಂದು ಭಾಷ್ಯಕಾರರು ಹೇಳಿರುವರು. ಚೇತನಂ ಎಂದರೆ ಜ್ಞಾನವು ತಿಳಿವಳಿಕೆ, ವಿವೇಕ ಎಂದರ್ಥವು. ವೆಂಕಟಮಾಧವರು **ದಾತುರ್ಯಜಮಾನಸ್ಯ ಪ್ರಜ್ಞಾಪನಂ ದೇವೇಷು ತ್ವಯಾ ನಿವೇದಿತಸ್ಯ**-ಯಜಮಾನನ ವಿಷಯವಾಗಿ ದೇವತೆಗಳಿಗೆ ನೀನು ವಿಜ್ಞಾಪಿಸಬೇಕು ಎಂಬರ್ಥವನ್ನು ಹೇಳಿರುವರು.

## ॥ ವ್ಯಾಕರಣಪ್ರಕ್ರಿಯಾ ॥

**ವನಸ್ಪತೇ-ಆಮಂತ್ರಿತಸ್ಯ ಚ** (ಪಾ.ಸೂ. ೮-೧-೧೯) ಎಂಬುದರಿಂದ ಸರ್ವಾನುದಾತ್ತ.

**ದೇವ**—ಎರಡನೇ ಪಾದದ ಆದಿಯಲ್ಲಿರುವುದು. ಆದ್ದರಿಂದ **ಅಪಾದಾದೌ** (ಪಾ. ಸೂ. ೮-೧-೧೮) ಎಂದು ನಿಷೇಧ ಬರುವುದರಿಂದ ಸರ್ವಾನುದಾತ್ತ ಬರುವುದಿಲ್ಲ. **ಆಮಂತ್ರಿತಸ್ಯ ಚ** ( ಪಾ. ಸೂ. ೬-೧-೧೯೮) ಎಂಬ ಆರನೇ ಅಧ್ಯಾಯದ ಸೂತ್ರದಿಂದ ಆದ್ಯುದಾತ್ತ ಬರುವುದು.

**ಹವಿಃ**— ಹು ದಾನಾದನಯೋಃ, ಧಾತು—**ಅರ್ಚಿ ಶುಚಿ ಹು** (ಉ.ಸೂ. ೨-೨೬೬) ಎಂಬುದರಿಂದ ಇಸಿ ಪ್ರತ್ಯಯ, ಗುಣ. 'ಅನಿಸನ್ತಸ್ಯ,' ಎಂದು ಪರ್ಯುದಾಸವಿರುವುದು. ಪ್ರಸಜ್ಯಪ್ರತಿಷೇಧೋಽಯಂ ಕ್ರಿಯಯಾ ಸಹ ಯತ್ರ ನಞ್ | ಪರ್ಯುದಾಸಸ್ತು ವಿಜ್ಞೇಯೋ ಯತ್ರೋತ್ತರಪದೇನ ನಞ್ || ಇತಿ ನಭವತಿ ಎಂದು ಕ್ರಿಯೆಯೊಂದಿಗೆ ನಞ್ ಪದಕ್ಕೆ ಅನ್ವಯ ಬಂದರೆ ಅದು ಪ್ರಸಜ್ಯಪ್ರತಿಷೇಧ ಎನ್ನಲ್ಪಡುವುದು. ನ, ಇಸ್, ಅನಿಸ್ ಎಂದು ಉತ್ತರಪದವಾದ ಇಸ್ ಎಂಬುದರಲ್ಲಿ ನಞ್‌ಗೆ ಅನ್ವಯ ಬಂದರೆ ಪರ್ಯುದಾಸ ಎನ್ನಲ್ಪಡುವುದು. ಪ್ರಸಜ್ಯಪ್ರತಿಷೇಧ ಸ್ಥಳದಲ್ಲಿ ಯೋಗ್ಯಕ್ರಿಯಾಧ್ಯಾಹಾರ, ಅಸಮರ್ಥ ಸಮಾಸಾಶ್ರಯಣ, ವಾಕ್ಯಭೇದ, ಎಂಬ ಮೂರು ದೋಷಗಳು ನಿಯಮವಾಗಿರುವುವು. ಆದ್ದರಿಂದ ಪರ್ಯುದಾಸವನ್ನು ಹೇಳಲವಕಾಶವಿಲ್ಲದೇ ಇರುವ ಸ್ಥಳಗಳಲ್ಲಿ ಪ್ರಸಜ್ಯಪ್ರತಿಷೇಧವನ್ನು ಹೇಳಬೇಕು ಇಲ್ಲಿ ಪರ್ಯುದಾಸವನ್ನೇ ಆಶ್ರಯಿಸಬೇಕು. ಏವಂಚ ಇಸಂತ ಭಿನ್ನವಾದ ನಪುಂಸಕಲಿಂಗಪ್ರತಿಪಾದಕ ಶಬ್ದದ ಆದಿಯು ಉದಾತ್ತವಾಗುವುದು. ಎಂದು ನಬ್ವಿಷಯಸ್ಯಾನಿಸಂತಸ್ಯ ( ಫಿ.ಸೂ. ಎಂಬುದಕ್ಕೆ ಅರ್ಥವು ಏರ್ಪಡುವುದು. ಹವಿಸ್ ಎಂಬುದು ಇಸಂತವಾದ್ದರಿಂದ ಇಲ್ಲಿ ಈ ಸೂತ್ರದಿಂದ ಆದ್ಯುದಾತ್ತ ಬರುವುದಿಲ್ಲ. ಪ್ರತ್ಯಯಸ್ವರ ಬರುವುದು. ಏವಂಚ ಹವಿಃ ಎಂಬುದು ಅಂತೋದಾತ್ತ-

**ದಾತುಃ**—ಡುದಾಞ್ ದಾನೇ, ಧಾತು. ಇದರ ಮುಂದೆ **ಣ್ವುಲ್‌ತೃಚೌ** (ಪಾ. ಸೂ. ೩-೧-೧೩೩) ಎಂಬುದರಿಂದ ತೃಚ್ ಪ್ರತ್ಯಯ. ತೃಚ್‌ಪ್ರತ್ಯಯವು ಚಿತ್ ಆದ್ದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ದಾತೃ ಎಂಬುದು ಅಂತೋದಾತ್ತ. ಇದರ ಮುಂದೆ ಷಷ್ಠೀ ವಿಭಕ್ತಿ ಏಕವಚನ ಙಸ್ ಪ್ರತ್ಯಯ **ಋತ ಉತ್** (ಪಾ. ಸೂ. ೬-೧-೧೧೧) ಋಕಾರಾಂತವಾದ ಶಬ್ದದ ಮುಂದೆ ಙಸಿ, ಙಸ್ ಪ್ರತ್ಯಯ ಸಂಬಂಧಿಯಾದ ಅಕಾರವಿದ್ದರೆ ಪೂರ್ವಪರಗಳಾದ ಋಕಾರ ಅಕಾರಗಳ ಸ್ಥಾನದಲ್ಲಿ ಉಕಾರವು ಏಕಾದೇಶವಾಗಿ ಬರುವುದು ಎಂಬುದರಿಂದ ಉಕಾರವು ಋ+ಅ ಗಳ ಸ್ಥಾನದಲ್ಲಿ ಬರುವುದು. ಅದು **ಉರಣ್ರಪರಃ** (ಪಾ. ಸೂ. ೧-೧-೫೧) ಎಂಬ ಸೂತ್ರಾನುಸಾರ ರ ಪರವಾಗಿ ಬರುವುದು. ದಾತುರ್+ಸ್ ಎಂದಾಗುವುದು. **ರಾತ್ಸಸ್ಯ** (ಪಾ. ಸೂ. ೮-೨-೨೪) ರೇಫದ ಮುಂದೆ ಇರುವ ಸಂಯೋಗದ ಚರಮವರ್ಣಕ್ಕೆ ಲೋಪ ಬರುವುದು ಎಂಬುದರಿಂದ ಸಂಯೋಗದ ಕೊನೆಯಲ್ಲಿರುವುದೂ ರೇಫದ ಮುಂದೆ ಇರತಕ್ಕದ್ದೂ ಆದ ಸಕಾರಕ್ಕೆ ಲೋಪ. ಯದ್ಯಪಿ ಇಲ್ಲಿ **ಸಂಯೋಗಾಂತಸ್ಯಲೋಪಃ** (ಪಾ.ಸೂ. ೮.೨-೨೩) ಎಂಬುದರಿಂದಲೇ ಸಲೋಪವನ್ನು ಹೇಳಬಹುದು. ಆದರೂ ರೇಫದ ಮುಂದೆ ಇರುವ ಸಂಯೋಗಾಂತ ವರ್ಣಕ್ಕೆ ಲೋಪ ಬರುವ ಪಕ್ಷದಲ್ಲಿ ಸಕಾರಕ್ಕೆ ಮಾತ್ರವೇ ಬರುವುದು. ಸಕಾರವನ್ನು ಬಿಟ್ಟು ಯಾವ ವರ್ಣ ರೇಫದ ಮುಂದೆ ಇದ್ದರೂ ಅದಕ್ಕೆ ಲೋಪ ಬರುವುದಿಲ್ಲ ಎಂದು ನಿಯಮಲಾಭಕ್ಕಾಗಿ ಈ ಸೂತ್ರವು ಅವಶ್ಯಕವು. ಈ ನಿಯಮದಿಂದ ಊರ್ಕ್ ಎಂಬಲ್ಲಿ ರೇಫದ ಮುಂದೆ ಇರುವ ಕಕಾರಕ್ಕೆ ಲೋಪ ಬರುವುದಿಲ್ಲ. ರೇಫಕ್ಕೆ ವಿಸರ್ಗ. ದಾತುಃ ಎಂದಾಗುವುದು. ಏಕಾದೇಶ **ಉದಾತ್ತೇನೋದಾತ್ತಃ** (ಪಾ. ಸೂ. ೮.೨-೫) ಎಂಬುದರಿಂದ ಉಕಾರ ಉದಾತ್ತ.

**ಚೇತನಂ**—ಚಿತೀ ಸಂಜ್ಞಾನೇ ಧಾತು. ಇದರ ಮುಂದೆ **ಕರಣಾಧಿಕರಣಯೋಶ್ಚ** (ಪಾ. ಸೂ. ೩-೩-೧೧೭) ಎಂಬುದರಿಂದ ಕರಣ ಎಂಬ ಅರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** ( ಪಾ. ಸೂ. ೭-೧-೧) ಎಂಬುದರಿಂದ ಯುಗೆ ಅನ ಆದೇಶ, ಚಿತ್+ಅನ. **ಪುಗನ್ತಲಘೂಪಧಸ್ಯ ಚ** (ಪಾ. ಸೂ. ೭-೩-೮೬) ಎಂಬುದರಿಂದ ಲಘೂಪಧಗುಣ. ಇಕಾರಕ್ಕೆ ಏಕಾರ. ಚೇತನ ಎಂದಾಗುವುದು. **ಲಿತಿ** (ಪಾ. ಸೂ. ೬-೧ ೧೯೩) ಎಂಬುದರಿಂದ ಪ್ರತ್ಯಯದ ಹಿಂದೆ ಇರುವ ಏಕಾರವು ಉದಾತ್ತವಾಗುವುದು || ೧೧ ||

॥ ಸಂಹಿತಾಪಾಠಃ ॥

ಸ್ವಾಹಾ ಯಜ್ಞಂ ಕೃಣೋತನೇಂದ್ರಾಯ ಯಜ್ವನೋ ಗೃಹೇ ।
ತತ್ರ ದೇವಾँ ಉಪ ಹ್ವಯೇ ॥ ೧೨ ॥

॥ ಪದಪಾಠಃ ॥

ಸ್ವಾಹಾ । ಯಜ್ಞಂ । ಕೃಣೋತನ । ಇಂದ್ರಾಯ । ಯಜ್ವನಃ । ಗೃಹೇ ॥
ತತ್ರ । ದೇವಾನ್ । ಉಪ । ಹ್ವಯೇ ॥ ೧೨ ॥

॥ಸಾಯಣಭಾಷ್ಯಂ ॥

ಸ್ವಾಹಾಶಬ್ದೋ ಹವಿಷ್ಪ್ರದಾನವಾಚೀ ಸನ್ ಏತನ್ನಾಮಕಮಗ್ನಿವಿಶೇಷಂ ಲಕ್ಷಯತಿ । ತದಗ್ನಿಸಂಪಾದಿತಂ ಯಜ್ಞಮಿಂದ್ರಾಯೇಂದ್ರತುಷ್ಟ್ಯರ್ಥಂ ಯಜ್ವನೋ ಯಜಮಾನಸ್ಯ ಗೃಹೇ ಋತ್ವಿಜಃ ಕೃಣೋತನ । ಕುರುತ । ತತ್ರ ಯಜ್ಞೇ ದೇವಾನುಪ ಹ್ವಯೇ ॥ ಕೃಣೋತನ । ಕೃವಿ ಹಿಂಸಾಕರಣಯೋಶ್ಚ । ಇದಿತ್ತ್ವಾನ್ನುಮ್ । ಲೋಣ್ಮಧ್ಯಮಬಹುವಚನಸ್ಯ ತಸ್ಥಸ್ಥಮಿಪಾಮಿತಿ ತಾದೇಶಃ । ತಪ್ತನಪ್ತನಥನಾಶ್ಚ । ಪಾ ೭ ೧.೪೫। ಇತಿ ತನಬಾದೇಶಃ । ಶಪಿ ಪ್ರಾಪ್ತೇ ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ। ತತ್ಸನ್ನಿಯೋಗೇನ ವಕಾರಸ್ಯ ಚಾಕಾರಃ । ತಸ್ಯಾತೋ ಲೋಪ ಇತಿ ಲೋಪಃ । ತಸ್ಯಾಚಃ ಪರಸ್ಮಿನ್ನಿತಿ ಸ್ಥಾನಿವದ್ಭಾವಾದೃಕಾರಸ್ಯ ಲಘೂಪಧಗುಣೋ ನ ಭವತಿ । ತನಪಃ ಪಿತ್ತ್ವೇನಾಙಿತ್ತ್ವಾದುಕಾರಸ್ಯ ಗುಣಃ । ಇಂದ್ರಾಯ । ಋಜ್ರೇಂದ್ರೇತ್ಯಾದಿನಾ ರನ್ । ನಿತ್ತ್ವಾದಾದ್ಯುದಾತ್ತಃ। ಯಜ್ವನಃ । ಯಜ ದೇವಪೂಜಾಸಂಗತಿಕರಣದಾನೇಷು । ಸುಯಜೋರ್ಙ್ವನಿಪ್ । ಪಾ. ೩-೨-೧೦೩ । ಜಸಿ ಭಸಂಜ್ಞಾಯಾಮಲ್ಲೋಪೇ ಪ್ರಾಪ್ತೇ ನ ಸಂಯೋಗಾದ್ವಮಂತಾತ್ । ಪಾ. ೬-೪-೧೩೭ । ಇತಿ ನಿಷೇಧಃ । ವನಿಪಃ ಪಿತ್ತ್ವೇನ ಧಾತುಸ್ವರ ಏವ ಶಿಷ್ಯತೇ। ಗೃಹೇ । ಗ್ರಹ ಉಪಾದಾನೇ । ಗೇಹೇ ಕಃ । ಪಾ. ೩-೧-೧೪೪ । ಇತಿ ಕಪ್ರತ್ಯಯಃ । ಗ್ರಹಿಜ್ಯೇತ್ಯಾದಿನಾ । ಪಾ. ೬-೧-೧೬ । ಸಂಪ್ರಸಾರಣಂ । ಪರಪೂರ್ವತ್ವಂ । ಪ್ರತ್ಯಯಸ್ವರಃ । ತತ್ರ । ತ್ರಲ್ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ದೇವಾ~ ಉಪೇತ್ಯತ್ರ ಸಂಹಿತಾಯಾಂ ದೀರ್ಘಾದಟೀತಿ ನಕಾರಸ್ಯ ರುತ್ವಂ । ಆತೋಽಟಿ ನಿತ್ಯಮಿತ್ಯಾಕಾರಸ್ಯಾನುನಾಸಿಕಾದೇಶಃ । ಭೋಭಗೋ ಇತಿ ಯತ್ವಂ । ತಸ್ಯ ಲೋಪಃ ಶಾಕಲ್ಯಸ್ಯೇತಿ ಲೋಪಃ ॥ ೨೫ ॥

॥ ಪ್ರತಿಪದಾರ್ಥ ॥

(ಎಲೈ ಋತ್ವಿಜರೇ) ಇಂದ್ರಾಯ—ಇಂದ್ರನ ತೃಪ್ತಿಗಾಗಿ । ಯಜ್ವನಃ—ಯಜ್ಞಮಾಡುವ ಯಜಮಾನನ । ಗೃಹೇ—ಮನೆಯಲ್ಲಿ (ಯಜ್ಞಶಾಲೆಯಲ್ಲಿ) ಸ್ವಾಹಾ—ಸ್ವಾಹಾಕಾರಪೂರ್ವಕವಾಗಿ (ಅಥವಾ ಸ್ವಾಹಾ

ಎಂಬ ಹೆಸರುಳ್ಳ ಅಗ್ನಿಯಿಂದ ಸಂಪಾದಿತವಾದ) । **ಯಜ್ಞಂ**—ಯಜ್ಞವನ್ನು । **ಕೃಣೋತನ**—ಮಾಡಿರಿ । **ತತ್ರ**—ಆ ಯಜ್ಞಭೂಮಿಗೆ । **ದೇವಾನ್**—ದೇವತೆಗಳನ್ನು । **ಉಪ ಹ್ವಯೇ**—ಆಹ್ವಾನ ಮಾಡುವೆನು (ಕರೆಯುವೆನು.)

॥ ಭಾವಾರ್ಥ ॥

ಎಲೈ ಅಧ್ವರ್ಯು ಮೊದಲಾದ ಋತ್ವಿಜರೇ, ಯಜಮಾನ ಮನೆಯಲ್ಲಿ ಇಂದ್ರನ ಸಂತೋಷಾರ್ಥವಾಗಿ ಯಜ್ಞವನ್ನು ಸ್ವಾಹಾಕಾರಪೂರ್ವಕವಾಗಿ ಮಾಡಿರಿ ಅಥವಾ ಸ್ವಾಹಾ ಎಂಬ ಅಗ್ನಿಸಂಬಂಧವಾದ ಹವಿಸ್ಸನ್ನಿರ್ಸುತ್ತಾ ಯಜ್ಞಮಾಡಿರಿ. ಆದಕ್ಕಾಗಿ ಅಲ್ಲಿಗೆ ದೇವತೆಗಳನ್ನು ಆಹ್ವಾನ ಮಾಡುವೆನು.

English Translation.

Perform the sacrifice to Indra conveyed through ***swaha*** in the house of the sacrificer. I invoke the gods thither.

॥ ವಿಶೇಷವಿಷಯಗಳು ॥

ಸ್ವಾಹಾ—ಯಾಸ್ಕರ ವಿವರಣೆಯು—

**ಸ್ವಾಹಾಕೃತಯಃ । ಸ್ವಾಹಾಕೃತಯಃ ಸ್ವಾಹೇತ್ಯೇತ್ ಸು ಆಹೇತಿ ವಾ । ಸ್ವಾ ವಾಗಾಹೇತಿ ವಾ । ಸ್ವಂ ಪ್ರಾಹೇತಿ ವಾ । ಸ್ವಾಹುತಂ ಹವಿರ್ಜುಹೋತೀತಿ ವಾ ॥**

ಸ್ವಾಹಾ ಎಂಬ ಶಬ್ದಕ್ಕೆ ನಾಲ್ಕು ವಿಧವಾದ ಅವಯವಾರ್ಥಗಳಿರುವವು.

(೧) **ಸು ಆಹೇತಿ ವಾ**—ಸು=ಚೆನ್ನಾಗಿ ಆಹ = ಹೇಳುತ್ತಾನೆ. ಚೆನ್ನಾಗಿ ಅಥವಾ ಸ್ಪಷ್ಟವಾಗಿ ಉಚ್ಚರಿಸುವುದರಿಂದ ಇದಕ್ಕೆ ಸ್ವಾಹಾ ಎಂದು ಹೆಸರು.

(೨) **ಸ್ವಾ ವಾಗಾಹೇತಿ ವಾ**—ಸ್ವಾ = ಸ್ವಕೀಯವಾದ ವಾಕ್ = ವಾಕ್ಯವು ತಂ ಸ್ವಾ ವಾಗಭ್ಯವದಜ್ಜುಹುಧೀತಿ ತತ್ಸ್ವಾಹಾಕಾರಸ್ಯ ಜನ್ಮ ಎಂದು ಶ್ರುತಿವಾಕ್ಯವಿರುವುದು (ಬ್ರಾಹ್ಮಣ). ಎಂದರೆ ಹೋಮ ಮಾಡುವಾಗ ವೇದಮಂತ್ರವಾದ ಋಕ್ಕಿನ ಅಂತ್ಯದಲ್ಲಿ ಸ್ವಾಹಾ ಎಂಬ ಶಬ್ದವನ್ನು ತಾನೇ (ಹೋಮ ಮಾಡುವವನು) ಸೇರಿಸಿ ಹೇಳುವುದರಿಂದ ಸ್ವಾಹಾ ಎಂದು ಹೆಸರು.

(೩) **ಸ್ವಂ ಪ್ರಾಹೇತಿ ವಾ**—ಇಲ್ಲಿ ಸ್ವಂ = ತನ್ನ ಹವಿಸ್ಸನ್ನು ಆಹ—ಹೋಮ ಮಾಡುವೆನೆಂದು ಹೇಳುವನು. ಆದ್ದರಿಂದ ಸ್ವಾಹಾ ಎಂದು ಹೆಸರು.

(೪) **ಸ್ವಾಹುತಂ ಹವಿರ್ಜುಹೋತೀತಿ ವಾ**—ತಾನು ಹೋಮಮಾಡಿದ ಹವಿಸ್ಸನ್ನು ಸ್ವಾಹಾ ಎಂಬ ಶಬ್ದೋಚ್ಚಾರಣೆ ಮೂಲಕ ಹೋಮ ಮಾಡುವುದರಿಂದ ಎಂದರೆ ಅಗ್ನಿಯಲ್ಲಿ ಹವಿಃಪ್ರದಾನ ಮಾಡುವುದರಿಂದ ಸ್ವಾಹಾ ಎಂದು ಹೆಸರು.

ಸ್ವಾಹಾಕಾರಾರ್ಥಕ್ಕೆ ಯಾಸ್ಕರು ಈ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು—

ಸದ್ಯೋ॑ ಜಾತೋ॒ ವ್ಯ॑ಮಿಮೀತ ಯ॒ಜ್ಞಮ॒ಗ್ನಿರ್ದೇ॒ವಾನಾ॑ಮಭವತ್ಪುರೋ॒ಗಾಃ ।
ಅ॒ಸ್ಯ ಹೋತುಃ॑ ಪ್ರ॒ದಿಶ್ಯೃ॒ತಸ್ಯ॑ ವಾ॒ಚಿ ಸ್ವಾಹಾ॑ಕೃತಂ ಹ॒ವಿರ॑ದಂತು ದೇ॒ವಾಃ ॥
(ಋ. ಸಂ. ೧೦-೧೧೦-೧೧)

ಇದರ ಮುಖ್ಯಾರ್ಥವು— ಈಗತಾನೇ ಉತ್ಪನ್ನನಾದ (ಎಂದರೆ ಯಜ್ಞದಲ್ಲಿ ಈಗ ಪ್ರತಿಷ್ಠಿಸಲ್ಪಟ್ಟಿರುವ) ಅಗ್ನಿಯು ದೇವತೆಗಳ ಮುಂದೆ ಕುಳಿತು ಹೋತೃವಿನ ಕರ್ತವ್ಯವನ್ನು ಎಂದರೆ ದೇವತೆಗಳನ್ನು ಆಹ್ವಾನಮಾಡುವ ಕಾರ್ಯ ವನ್ನು ನೆರವೇರಿಸುತ್ತಾ ಯಜ್ಞವನ್ನು ನಿರ್ವಹಿಸುವನು. ಇಂತಹ ಹೋತೃವು ಪೂರ್ವದಿಕ್ಕಿನಲ್ಲಿ ಇದ್ದು ಸಮರ್ಪಿ ಸುವ ಸ್ವಾಹಾಕಾರಶಬ್ದಪೂರ್ವಕವಾಗಿ ಹೋಮಮಾಡುವ ಹವಿಸ್ಸನ್ನು ದೇವತೆಗಳು ಭಕ್ಷಿಸಲಿ ಎಂದು. ಆದುದ ರಿಂದ ಸ್ವಾಹಾ ಎಂದರೆ ಯಜ್ಞಾರ್ಥವಾಗಿ ವಿಧಿಪೂರ್ವಕವಾಗಿ ಪ್ರತಿಷ್ಠಿತವಾದ ಅಗ್ನಿಯಲ್ಲಿ ದೇವತೆಗಳ ಪ್ರೀತ್ಯ ರ್ಥವಾಗಿ ಹವಿಸ್ಸನ್ನು ಹೋಮಮಾಡುವಾಗ ಮಂತ್ರಾಂತ್ಯದಲ್ಲಿ ಉಚ್ಚರಿಸುವ ಶಬ್ದಕ್ಕೆ ಸ್ವಾಹಾ ಎಂದು ಹೆಸರು ಎಂದಭಿಪ್ರಾಯವು.

ಕೆಲವು ಆಪ್ರೀಸೂಕ್ತಗಳಲ್ಲಿ ಸ್ವಾಹಾಕೃತಯಃ ಎಂದು ಬಹುವಚನ ಪ್ರಯೋಗವಿರುವುದು. ಈ ಸೂಕ್ತ ದಲ್ಲಿರುವ ಹನ್ನೊಂದು ದೇವತೆಗಳಿಗೆ ಹೋಮಮಾಡುವಾಗ ಉಪಯೋಗಿಸುವ ಹನ್ನೊಂದು ಪ್ರಯಾಜಾ ಮಂತ್ರ ಗಳಿಗೂ ಸ್ವಾಹಾಕಾರವನ್ನು ಸೇರಿಸಿ ಪಠಿಸುವುದರಿಂದ ಸ್ವಾಹಾಕೃತಯಃ ಎಂದು ಬಹುವಚನವನ್ನು ಪ್ರಯೋಗಿ ಸಿರುವುದು.

ಪುರಾಣಾದಿಗಳಲ್ಲಿ ಸ್ವಾಹಾ ಎಂಬ ಶಬ್ದವು ಬೇರೆ ಅರ್ಥದಲ್ಲಿ ಉಪಯೋಗಿಸಲ್ಪಡುವುದು. ಅಂಗಿರಾ ಋಷಿಯು ಪುತ್ರನಾದ ಬೃಹಸ್ಪತಿಯ ಮಗಳಿಗೆ ಸ್ವಾಹಾ ಎಂದು ಮಹಾಭಾರತದಲ್ಲಿ ಹೇಳಿರುವುದು, ಪುರಾಣ ಗಳಲ್ಲಿ ಸ್ವಾಹಾದೇವಿಯು ದಕ್ಷಪ್ರಜಾಪತಿಯ ಮಗಳೆಂದೂ, ಅಗ್ನಿಯ ಪತ್ನಿಯೆಂದೂ ಹೇಳಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಕೃಣೋತನ**--ಕೃವಿ ಹಿಂಸಾಕರಣಯೋಶ್ಚ ಧಾತು. ಇದಿತ್ತು. ಆದ್ದರಿಂದ '**ಇದಿತೋನುಮ್ ಧಾತೋಃ**' ಎಂಬುದರಿಂದ ಋಕಾರದ ಮುಂದೆ ನುಮ್ ಆಗಮ. ಕೃನ್ವ್ ಎಂದಾಗುವುದು. ಇದರ ಮುಂದೆ ಲೋಟ್ ಮಧ್ಯಮಪುರುಷ ಬಹುವಚನ ಥ ಪ್ರತ್ಯಯ. **ಲೋಟೋಲಙ್ವತ್** (ಪಾ. ಸೂ. ೩-೪-೮೫) ಎಂಬುದ ರಿಂದ ಲಙ್ವದ್ಭಾವ ಬಂದರೆ **ತಸ್ಥಸ್ಥಮಿಪಾಂ ತಾಂತಂತಾಮಃ** (ಪಾ. ಸೂ. ೩-೪-೧೦೧) ಎಂಬುದರಿಂದ ಥಗೆ **ತ** ಆದೇಶ. **ತಪ್ತನಪ್ತನಥನಾಶ್ಚ** (ಪಾ. ಸೂ. ೭-೧-೪೫) ಲೋಟ್ ಮಧ್ಯಮಪುರುಷಕ್ಕೆ ಆದೇಶವಾಗಿ ಬಂದ ತಕಾರಕ್ಕೆ, ತಪ್, ತನಪ್, ತನ, ಥನ ಎಂಬ ನಾಲ್ಕು ಆದೇಶಗಳು ಬರುವುವು ಎಂಬುದರಿಂದ ಇಲ್ಲಿ ತ ಎಂಬುದರ ಸ್ಥಾನದಲ್ಲಿ ತನಪ್ ಆದೇಶ ಕೃನ್ವ್+ತನ ಕರ್ತರಿ ಶಪ್ ಎಂಬುದರಿಂದ ಶಪ್ ವಿಕರಣ ಪ್ರಾಪ್ತವಾದರೆ **ಧಿನ್ವಿ-ಕೃಣ್ವ್ಯೋ॰ ರಚ** (ಪಾ. ಸೂ. ೩-೧-೮೦) ಧಿನ್ವ್ ಕೃಣ್ವ್ ಇವುಗಳ ಕೊನೆಯ ವರ್ಣಕ್ಕೆ ಅಕಾರಾದೇಶ ಬರು ವುದು. ಶಬ್ವಿಷಯದಲ್ಲಿ ಉ ಪ್ರತ್ಯಯವೂ ಬರುತ್ತೆ ಎಂದು ಅಕಾರಾದೇಶ ಉ ಪ್ರತ್ಯಯಗಳು ಬಂದರೆ ಕೃನ+ ಉ+ತನ. **ಅತೋಲೋಪಃ** ( ಪಾ. ಸೂ. ೬-೪-೪೮) ಆರ್ಧಧಾತುಕ ಪ್ರತ್ಯಯ ಪರವಾಗಿರುವಾಗ ಆರ್ಧ ಧಾತುಕೋಪದೇಶ ಕಾಲದಲ್ಲಿ ಯಾವುದು ಅಕಾರಾಂತವಾಗಿರುವುದೋ ಅದರ ಅಕಾರಕ್ಕೆ ಲೋಪ ಬರುವುದು

ಎಂಬುದರಿಂದ ಕೃನ ಎಂಬಲ್ಲಿರುವ ಅಕಾರಕ್ಕೆ ಲೋಪ. ಈ ಅಕಾರ ಲೋಪಕ್ಕೆ **ಅಚಃ ಪರಸ್ಮಿನ್ಪೂರ್ವವಿಧೌ** (ಪಾ. ಸೂ. ೧-೧-೫೭) ಎಂಬುದರಿಂದ ಸ್ಥಾನಿವದ್ಭಾವ ಬರುವುದರಿಂದ ಋಕಾರಕ್ಕೆ ಲಘೂಪಧಗುಣ ಬರುವುದಿಲ್ಲ. ತನಪ್ ಪಿತ್ತು ಆದ್ದರಿಂದ ಅಪಿತ್ ಎಂದು ಪರ್ಯುದಾಸಮಾಡಿರುವುದರಿಂದ **ಸಾರ್ವಧಾತುಕಮಪಿತ್** (ಪಾ. ಸೂ. ೧ ೨-೪) ಎಂಬುದರಿಂದ ಙಿತ್ವ ಬರುವುದಿಲ್ಲ- ಆದಕಾರಣ **ಕ್ಙಿತಿಚ** (ಪಾ. ಸೂ. ೧-೧-೫) ಎಂಬುದರಿಂದ ಗುಣಕ್ಕೆ ನಿಷೇಧ ಬರುವುದಿಲ್ಲ. **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ ೭-೩-೮೪) ಎಂಬುದರಿಂದ ಉಕಾರಕ್ಕೆ ಗುಣ ಓಕಾರ, **ಋವರ್ಣಾನ್ನಸ್ಯಣತ್ವಂವಕ್ತವ್ಯಂ** (ಪಾ. ಸೂ. ೮-೪-೧-೧) ಎಂಬುದರಿಂದ ನಕಾರಕ್ಕೆ ಣಕಾರ, ಕೃಣೋತನ ಎಂದಾಗುವುದು. ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತ.

**ಇನ್ದ್ರಾಯ**— ಇದಿ ಪರಮೈಶ್ವರ್ಯೇ ಧಾತು. ನುಮಾಗಮ. **ಋಜ್ರೇನ್ದ್ರಾಗ್ರ** (ಉ. ಸೂ. ೨-೧೮೬ ) ಇತ್ಯಾದಿ ಸೂತ್ರದಿಂದ ರನ್ ಪ್ರತ್ಯಯ. ಪ್ರತ್ಯಯವು ನಿತ್ತು. ಆದ್ದರಿಂದ **ಞ್ನಿತ್ಯಾದಿರ್ನಿತ್ಯಮ್** ( ಪಾ. ಸೂ. ೬-೧-೧೯೭) ಎಂಬುದರಿಂದ ಇನ್ದ್ರ ಎಂಬುದು ಆದ್ಯುದಾತ್ತ.

**ಯಜ್ವನಃ— ಯಜ ದೇವಪೂಜಾಸಂಗತಿಕರಣದಾನೇಷು. ಸುಯಜೋರ್ಙ್ವನಿಪ್** ( ಪಾ. ಸೂ. ೩-೨-೧೦೩) ಷುಞ್ ಅಭಿಷವೇ, ಯಜ ದೇವ ಪೂಜಾದೌ. ಈ ಧಾತುಗಳ ಮುಂದೆ ಭೂತಾರ್ಥದಲ್ಲಿ ಙ್ವನಿಪ್ ಪ್ರತ್ಯಯ ಬರುವುದು. ಎಂಬುದರಿಂದ ಙ್ವನಿಪ್ ಪ್ರತ್ಯಯ. ಇದರಲ್ಲಿ ವನ್ ಎಂಬುದು ನಿಲ್ಲುವುದು. ಯಜ್ವನ್ ಶಬ್ದದ ಮುಂದೆ ಷಷ್ಠೀ ವಿಭಕ್ತಿ ಏಕವಚನ ಙಸ್ ಪ್ರತ್ಯಯ ಯಜ್ವನ್+ಅಸ್ ಇದಕ್ಕೆ **ಯಚಿಭಮ್** (ಪಾ ಸೂ. ೧-೪-೧೮) ಎಂಬುದರಿಂದ ಭ ಸಂಜ್ಞೆ ಬರುವುದು. ಆದ್ದರಿಂದ **ಅಲ್ಲೋಪೋಽನಃ** (ಪಾ. ಸೂ. ೬-೪-೧೩೪) ಅಂಗಾವಯವವೂ ಭಪ್ರತ್ಯಯಾವಧಿಕ ಅಸರ್ವನಾಮಸ್ಥಾನ ಯಾದ್ಯಜಾದ್ಯನ್ಯತರಸ್ವಾದಿಪ್ರತ್ಯಯಾವ್ಯವಹಿತ ಪೂರ್ವವರ್ತಿಯೂ ಆದ ಯಾವ ಅನ್ ಇರುವುದೋ ಅದರ ಅಕಾರಕ್ಕೆ ಲೋಪ ಬರುವುದು ಎಂಬುದರಿಂದ ಯಜ್ವನ್ ಶಬ್ದದ ಅನ್ನಿನ ಅಕಾರಕ್ಕೆ ಲೋಪವು ಯದ್ಯಪಿ ಪ್ರಾಪ್ತವಾಗುವುದು. ಆದರೂ ಅದಕ್ಕೆ **ನ ಸಂಯೋಗಾದ್ವಮನ್ತಾತ್** (ಪಾ. ಸೂ. ೬-೪-೧೩೭) ವಕಾರಾಂತ ಮಕಾರಾಂತವಾದ ಸಂಯೋಗದ ಮುಂದೆ ಇರುವ ಅನ್ನಿನ ಅಕಾರಕ್ಕೆ ಲೋಪ ಬರುವುದಿಲ್ಲ ಎಂಬುದರಿಂದ ಜ್ವ ಎಂಬ ವಕಾರಾಂತ ಸಂಯೋಗದ ಮುಂದೆ ಇರುವ ಅನ್ ನ ಅಕಾರಕ್ಕೆ ಲೋಪ ಬರುವುದಿಲ್ಲ.

**ಗೃಹೇ— ಗೇಹಕಃ** (ಪಾ. ಸೂ. ೩-೧-೧೪೪) ಎಂಬುದರಿಂದ ಕ ಪ್ರತ್ಯಯ. ಕಕಾರಕ್ಕೆ ಲಶಕ್ವತದ್ಧಿತೇ ( ಪಾ. ಸೂ. ೧-೩-೮ ) ಎಂಬುದರಿಂದ ಇತ್ಸಂಜ್ಞೆ ತಸ್ಯಲೋಪಃ ಎಂಬುದರಿಂದ ಲೋಪ **ಗ್ರಹಿಜ್ಯಾವಯಿವ್ಯಧಿವಷ್ಟಿ ವೃಶ್ಚತಿ ಭೃಜ್ಜತೀನಾಂಙಿತಿಚ** ( ಪಾ. ೬-೧-೧೬ ) ಎಂಬುದರಿಂದ ಸಂಪ್ರಸಾರಣ ರೇಫಕ್ಕೆ ಋಕಾರ. ಇಗ್ಯಣಸ್ಸಂಪ್ರಸಾರಣಮ್ (ಪಾ. ಸೂ. ೧-೧-೪೫) ಯ ವ ರ ಲ ಇವುಗಳ ಸ್ಥಾನದಲ್ಲಿ ಕ್ರಮವಾಗಿ ಬರುವ ಇ, ಉ, ಋ. ಲೃ ಇವುಗಳಿಗೆ ಸಂಪ್ರಸಾರಣವೆಂದು ಹೆಸರು. **ಸಂಪ್ರಸಾರಣಾಚ್ಚ** (ಪಾ.ಸೂ. ೬-೧-೧೦೮) ಎಂಬುದ ರಿಂದ ಋಕಾರ ಅಕಾರಗಳಿಗೆ ಪೂರ್ವರೂಪ ಗೃಹ, ಸಪ್ತಮೀವಿಭಕ್ತಿ ಏಕವಚನದಲ್ಲಿ ಗೃಹೇ ಎಂದು ರೂಪವು. ಕ ಪ್ರತ್ಯಯ ಸ್ವರವು ಬರುವುದು.

**ತತ್ರ–ಸಪ್ತಮ್ಯಾಸ್ತ್ರಲ್** (ಪಾ. ಸೂ. ೫-೩-೧೦) ಎಂಬುದರಿಂದ ತತ್ ಶಬ್ದ ಪ್ರಕೃತಿಕ ಸಪ್ತಮ್ಯಂತದ ಮುಂದೆ ತ್ರಲ್ ಪ್ರತ್ಯಯ ತದ್ಧಿತಾನ್ತವಾದ್ದರಿಂದ **'ಕೃತ್ತದ್ಧಿತಸಮಾಸಾಶ್ಚ'** ಎಂಬುದರಿಂದ ಪ್ರಾತಿಪದಿಕ ಸಂಜ್ಞೆ 'ಸುಪೋಧಾತು ಪ್ರಾತಿಪದಿಕಯೋಃ' ಜಾಗೆ ಲುಕ್ **ಪ್ರಾಗ್ದಿಶೋ ವಿಭಕ್ತಿಃ** ಎಂಬುದರಿಂದ ತ್ರಲ್ಲಿಗೆ ವಿಭಕ್ತಿ ಸಂಜ್ಞೆ ಇರುವುದು. ಆದ್ದರಿಂದ ಅದು ಪರವಾಗಿರುವಾಗ **ತ್ಯದಾದೀನಾಮಃ** (ಪಾ. ಸೂ. ೭-೨-೧೦೨ ಎಂಬುದರಿಂದ

ದಕಾರಕ್ಕೆ ಅಕಾರ, ತ+ಅ+ತ್ರ **ಅತೋಗುಣೇ** (ಪಾ. ಸೂ. ೬-೧-೯೭) ಎಂಬುದರಿಂದ ಪರರೂಪ ತತ್ರ ಎಂದು ರೂಪ. **ಲಿತಿ** (೬-೧-೧೯೩) ಎಂಬುದರಿಂದ ತ್ರಲ್ ಪ್ರತ್ಯಯದ ಹಿಂದೆ ಇರುವ ವರ್ಣವು ಉದಾತ್ತ.

**ದೇವಾಁ ಉಪ**-ದೇವಶಬ್ದವು ದಿವ್ ಧಾತುವಿನ ಮುಂದೆ ಪಚಾದಿ (ಪಾ.ಸೂ. ೩. ೧-೧೩೪) ಲಕ್ಷಣವಾದ ಅಚ್ ಪ್ರತ್ಯಯ ಬಂದು ಲಘೂಪಧಗುಣ (ಪಾ ಸೂ ೭-೩-೮೬) ಬಂದು ನಿಷ್ಪನ್ನವಾಗಿರುವುದು. ಇದರ ಮುಂದೆ ದ್ವಿತೀಯಾಬಹುವಚನ ಶಸ್ ದೇವ+ಅಸ್ **ಪ್ರಥಮಯೋಃ ಪೂರ್ವಸವರ್ಣಃ** (ಪಾ.ಸೂ. ೬-೧.೧೦೨) ಎಂಬುದರಿಂದ ಪೂರ್ವಸವರ್ಣದೀರ್ಘ ದೇವಾಸ್ ತಸ್ಮಾಚ್ಛಸೋನಃಪುಂಸಿ ( ಪಾ. ಸೂ. ೬-೧-೧೦೩ ) ಪೂರ್ವಸವರ್ಣದೀರ್ಘದ ಮುಂದೆ ಇರುವ ಶಸ್ ಪ್ರತ್ಯಯಾವಯವವಾದ ಸಕಾರಕ್ಕೆ ನಕಾರ ಬರುವುದು ಎಂಬುದರಿಂದ ಸಕಾರಕ್ಕೆ ನಕಾರ, ದೇವಾನ್. ಸಂಹಿತಾಕಾಲದಲ್ಲಿ ಉಪ ಶಬ್ದವು ಪರವಾದಾಗ **ದೀರ್ಘಾದಟಿಸಮಾನಪಾದೇ** (ಪಾ. ಸೂ. ೮-೩-೯) ಎಂಬುದರಿಂದ ನಕಾರಕ್ಕೆ ರು ಆದೇಶ, ದೇವಾರ್+ಉಪ **ಆತೋಽಟಿನಿತ್ಯಮ್** (ಪಾ. ಸೂ. ೮-೩-೩) ಎಂಬುದರಿಂದ ರೇಫದ ಹಿಂದೆ ಇರುವ ಆಕಾರಕ್ಕೆ ಅನುನಾಸಿಕವಾದ ಆಕಾರ, ದೇವಾರ್+ಉಪ. **ಭೋ ಭಗೋ ಅಘೋ ಅಪೂರ್ವಸ್ಯಯೋಽಶಿ** (ಪಾ. ಸೂ. ೮-೩-೧೭) ಎಂಬುದರಿಂದ ರುಗೆ ಯತ್ವ ದೇವಾಯ್+ಉಪ **ಲೋಪಶ್ಶಾಕಲ್ಯಸ್ಯ** (ಪಾ. ಸೂ. ೮-೩-೧೯) ಎಂಬುದರಿಂದ ಯಕಾರಕ್ಕೆ ಲೋಪ. ದೇವಾ+ಉಪ. ಈಗ **ಆದ್ಗುಣಃ** (ಪಾ.ಸೂ. ೬-೧-೮೭) ಎಂಬುದರಿಂದ ಆ+ಉಗಳಿಗೆ ಓಕಾರರೂಪವಾದ ಗುಣವು ಯದ್ಯಪಿ ಪ್ರಾಪ್ತವಾಗುವುದು. ಆದರೂ ಯ ಲೋಪಕ್ಕೆ **ಪೂರ್ವತ್ರಾಸಿದ್ಧಮ್** (ಪಾ. ಸೂ. ೮-೨-೧) ಎಂಬುದರಿಂದ ಗುಣವನ್ನು ಮಾಡುವಾಗ ಅಸಿದ್ಧತ್ವ ಬರುವುದು. ಆದ್ದರಿಂದ ಅವರ್ಣದ ಮುಂದೆ ಯಕಾರವು ಇದ್ದಂತೆ ಆಗುವುದು. ಅಜ್ವರ್ಣ ಪರದಲ್ಲಿರುವುದಿಲ್ಲ. ಆದ್ದರಿಂದ ಗುಣ ಬರುವುದಿಲ್ಲ || ೧೨ ||

# ಹದಿನಾಲ್ಕನೆಯ ಸೂಕ್ತವು.

**ಐಭಿರಗ್ನ ಇತ್ಯಾದಿಕಸ್ಯ ದ್ವಾದಶರ್ಚಸ್ಯ ತೃತೀಯಸೂಕ್ತಸ್ಯ ಋಷಿಚ್ಛಂದಸೀ ಪೂರ್ವವತ್ । ತಚ್ಚ ಸೂಕ್ತಂ ಬಹುದೇವತಾಕಂ । ಅತ ಏವಾನುಕ್ರಮ್ಯತೇ । ಐಭಿರ್ವೈಶ್ವದೇವಮಿತಿ ॥ ವಿನಿಯೋಗಸ್ತು । ವ್ಯೂಢದ್ವಾದಶಾಹಸ್ಯ ಪ್ರಥಮೇ ಛಂದೋಮೇ ತೃತೀಯಸವನೇ ವೈಶ್ವದೇವಶಸ್ತ್ರ ಐಭಿರಗ್ನೇ ದುವೋ ಗಿರ ಇತಿ ಸೂಕ್ತಂ ॥ ತಥಾ ಚ ಸೂತ್ರಿತಂ । ಅಥ ಛಂದೋಮಾಃ ಸಮುದ್ರಾದೂರ್ಮಿರಿತ್ಯುಪಕ್ರಮ್ಯೈಭಿರಗ್ನೇ ದುವೋ ಗಿರ ಇತಿ ವೈಶ್ವದೇವಂ । ಆ ೮-೯೧ । ಇತಿ ॥**

**ಅನುವಾದವು**— ನಾಲ್ಕನೆಯ ಅನುವಾಕದಲ್ಲಿ ಮೂರನೆಯ ಸೂಕ್ತವಾದ ಐಭಿರಗ್ನೇ ಎಂಬ ಸೂಕ್ತದಲ್ಲಿ ಹನ್ನೆರಡು ಋಕ್ಕುಗಳಿರುವವು. ಋಷಿ ಮತ್ತು ಛಂಗಸ್ಸು ಹಿಂದಿನ ಸೂಕ್ತದಂತೆಯೇ ಅನೇಕ ದೇವತೆಗಳಿರುವುದರಿಂದ ಸೂಕ್ತವು ಬಹುದೇವತಾಕವಾದುದು. ಆದುದರಿಂದ ಅನುಕ್ರಮಣಿಕೆಯಲ್ಲಿ ವಿಶ್ವೇದೇವತಾಕವಾದ ಸೂಕ್ತವೆಂದು ಹೇಳಲ್ಪಟ್ಟಿರುವುದು. **ವಿನಿಯೋಗವು**— ವ್ಯೂಢದ್ವಾದಶಾಹಯಾಗದ ಪ್ರಥಮ ಛಂದೋಮದಲ್ಲಿ **ತೃತೀಯ**

ಸವನದಲ್ಲಿ ವೈಶ್ವದೇವಶಸ್ತ್ರಮಂತ್ರಪಠನ ಮಾಡುವಾಗ ಐಭಿರಗ್ನೇ ದುವೋ ಗಿರ ಎಂಬ ಸೂಕ್ತವನ್ನು ಪಠಿಸಬೇಕು. ಆಶ್ವಲಾಯನ ಶ್ರೌತಸೂತ್ರದಲ್ಲಿ ಅಥ ಛಂದೋಮಾಃ ಸಮುದ್ರಾದೂರ್ಮಿರಿತ್ಯುಪಕ್ರಮ್ಯೈಭಿರಗ್ನೇ ದುವೋಗಿರ ಇತಿ ವೈಶ್ವದೇವಂ—ಎಂದರೆ ಸಮುದ್ರಾದೂರ್ಮಿ ಎಂದು ಮೊದಲು ಮಾಡಿ ಐಭಿರಗ್ನೇ ದುವೋಗಿರ ಎಂಬ ಮಂತ್ರಗಳು ಛಂದೋಮಾ ಮಂತ್ರಗಳೆಂದು ಹೇಳಲ್ಪಟ್ಟಿದೆ. (ಆ. ಸೂ. ೮-೯).

॥ ಓಂ ॥

## ಸೂಕ್ತ—೧೪

॥ ಮಂಡಲ—೧ ॥ ಅನುವಾಕ—೪ ॥ ಸೂಕ್ತ—೧೪ ॥

॥ ಅಷ್ಟಕ —೧ ॥ ಅಧ್ಯಾಯ—೧ ॥ ವರ್ಗ— ೨೬, ೨೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೧-೧೨ ॥

॥ ಋಷಿಃ—ಮೇಧಾತಿಥಿಃ ಕಾಣ್ವಃ ॥

॥ ದೇವತಾ—ವಿಶ್ವೇ ದೇವಾಃ (ವಿಶ್ವೈರ್ದೇವೈಃ ಸಹಿತೋಽಗ್ನಿಃ ।
೩-ಇಂದ್ರವಾಯುಬೃಹಸ್ಪತಿಮಿತ್ರಾಗ್ನಿಪೂಷಭಗಾದಿ-
ತ್ಯಮರುದ್ಗಣಾಃ । ೧೦-ವಿಶ್ವದೇವಾಗ್ನೀಂದ್ರವಾಯು
ಮಿತ್ರಧಾಮಾನಿ । ೧೧. ಅಗ್ನಿಃ) ॥

॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಐಭಿರಗ್ನೇ ದುವೋ ಗಿರೋ ವಿಶ್ವೇಭಿಃ ಸೋಮಪೀತಯೇ ।
ದೇವೇಭಿರ್ಯಾಹಿ ಯಕ್ಷಿ ಚ ॥ ೧ ॥

॥ ಪದಪಾಠಃ ॥

ಆ । ಏಭಿಃ । ಅಗ್ನೇ । ದುವಃ । ಗಿರಃ । ವಿಶ್ವೇಭಿಃ । ಸೋಮಽಪೀತಯೇ ॥
ದೇವೇಭಿಃ । ಯಾಹಿ । ಯಕ್ಷಿ । ಚ ॥ ೧ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಏಭಿರಸ್ಮಿನ್ಯಜ್ಞೇ ಸಂಭಾವಿತೈರ್ವಿಶ್ವೇಭಿರ್ದೇವೇಭಿಃ ಸರ್ವೈರ್ದೇವೈಃ ಸಹ ಸೋಮಪೀತಯೇ ಸೋಮಪಾನೋಪೇತಯಾಗಾರ್ಥಂ ದುವೋಽಸ್ಮದೀಯಾಂ ಪರಿಚರ್ಯಾಂ ಗಿರೋಽಸ್ಮದೀಯಾಃ ಸ್ತುತೀಶ್ಚ ಪ್ರತ್ಯಾ ಯಾಹಿ । ಆಗಚ್ಛ । ಯಕ್ಷಿ ಚ । ಆಗತ್ಯ ಯಜ ಚ ॥ ಏಭಿಃ । ಪೂರ್ವನಿರ್ದಿಷ್ಟಾನಾಂ ದೇವಾನಾಮಿದಮಾ ಪರಾಮರ್ಶಾದಿದಮೋಽನ್ವಾದೇಶೇಽಶನುದಾತ್ತಸ್ತೃತೀಯಾದೌ । ಪಾ. ೨-೪-೩೨ । ಇತ್ಯಶನುದಾತ್ತಃ । ಶಿತ್ತ್ವಾತ್ಸರ್ವಾದೇಶಃ । ನೇದಮದಸೋರಕೋಃ । ಪಾ. ೭-೧-೧೧ । ಇತಿ ಭಿಸ ಐಸಾದೇಶಾಭಾವಃ । ವಿಭಕ್ತಿರನುದಾತ್ತೈವ । ನ ಚೋಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ ತತ್ರಾಂತೋದಾತ್ತಾದಿತ್ಯಧಿಕಾರಾತ್ । ದುವಃ । ನಬ್ವಿಷಯಸ್ಯಾನಿಸಂತಸ್ಯೇತ್ಯಾದ್ಯುದಾತ್ತತ್ವಂ । ವಿಶ್ವೇಭಿಃ । ವಿಶ್ವಶಬ್ದೋ ವಿಶೇಃ ಕ್ವನಂತೋ ನಿತ್ತ್ವಾದಾದ್ಯುದಾತ್ತಃ । ಬಹುಲಂ ಛಂದಸೀತಿ ಭಿಸ ಐಸ್ ನ ಭವತಿ । ಬಹುವಚನೇ ಝಲ್ಯೇತ್ । ಪಾ. ೭-೩-೧೦೩ । ಇತ್ಯೇತ್ವಂ । ಸೋಮಪೀತಯೇ । ಸೋಮಶಬ್ದೋಽರ್ತಿಸ್ತುಸ್ವಿ[illegible]ನಾ ಮನಂತೋ ನಿತ್ತ್ವಾದಾದ್ಯುದಾತ್ತಃ । ಸೋಮಸ್ಯ ಪೀತಿರ್ಯಸ್ಮಿನ್ಯಾಗೇ ಸ ಸೋಮಪೀತಿಃ । ತಸ್ಮೈ । ತಾದರ್ಥ್ಯೇ ಚತುರ್ಥೀ । ದೇವೇಭಿಃ । ಬಹುಲಂ ಛಂದಸೀತಿ ಭಿಸ ಐಸಾದೇಶಾಭಾವಃ । ಬಹುವಚನೇ ಝಲ್ಯೇದಿತ್ಯೇತ್ವಂ । ಯಕ್ಷಿ । ಯಜೇರ್ಲೋಟಃ ಸಿಪ್ । ಬಹುಲಂ ಛಂದಸೀತಿ ಶಪೋ ಲುಕ್ । ವ್ರಶ್ಚಾದಿನಾ ಷತ್ವಂ । ಷಢೋಃ ಕಃ ಸೀತಿ ಕತ್ವಂ । ಸೇರ್ಹಿರಾದೇಶಶ್ಛಾಂದಸತ್ವಾನ್ನ ಭವತಿ । ಸಿಪಃ ಪಿತ್ತ್ವೇನಾನುದಾತ್ತತ್ವಾದ್ಧಾತುಸ್ವರ ಏವ ॥

॥ ಪ್ರತಿಪದಾರ್ಥ ॥

(ಹೇ) ಅಗ್ನೇ—ಎಲೈ ಅಗ್ನಿಯೇ । ಏಭಿಃ—ಈ ನಮ್ಮ ಯಜ್ಞದಲ್ಲಿ ಸಂಭಾವಿತರಾದ । ವಿಶ್ವೇಭಿಃ—ಸಮಸ್ತರಾದ । ದೇವೇಭಿಃ—ದೇವತೆಗಳೊಡನೆ । ದುವಃ—ನಾವು ಮಾಡುವ ಶುಶ್ರೂಷೆಯನ್ನೂ । ಗಿರಃ—ಸ್ತೋತ್ರರೂಪವಾದ ವಾಕ್ಯಗಳನ್ನು ಸ್ವೀಕರಿಸುವುದಕ್ಕೂ । ಸೋಮಪೀತಯೇ—ಸೋಮಪಾನ ಮಾಡುವುದಕ್ಕೂ। ಪ್ರತಿ ಆ ಯಾಹಿ—ಬರುವವನಾಗು । ಯಕ್ಷಿ ಚ—ಯಜ್ಞವನ್ನೂ ನೆರವೇರಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಈ ನಮ್ಮ ಯಜ್ಞದಲ್ಲಿ ನಾವು ಮಾಡುವ ಶುಶ್ರೂಷೆಯನ್ನೂ, ಸ್ತೋತ್ರಗಳನ್ನು ಸ್ವೀಕರಿಸುವುದಕ್ಕೂ, ಸೋಮಪಾನ ಮಾಡುವುದಕ್ಕೂ ಸಮಸ್ತದೇವತೆಗಳೊಡನೆ ಬಾ. ಬಂದನಂತರ ಈ ಯಜ್ಞಕರ್ಮವನ್ನೂ ಸಾಂಗವಾಗಿ ನೆರವೇರಿಸು.

English Translation

Come, Agni with all those gods to receive our adoration and praises and for drinking soma; and also perform the sacrifice.

॥ ವ್ಯಾಕರಣಪ್ರಕ್ರಿಯಾ ॥

**ಏಭಿಃ**— ಇದಮ್ ಶಬ್ದದ ಮುಂದೆ ಭಿಸ್ ಪ್ರತ್ಯಯ, ಇದಮ್ ಶಬ್ದವು ಪೂರ್ವದಲ್ಲಿ ಪ್ರಸ್ತುತರಾದ ದೇವತೆಗಳನ್ನು ಪರಾಮರ್ಶಿಸುವುದು. ಆದ್ದರಿಂದ ಅನ್ವಾದೇಶವಿರುವುದು. ಆದಕಾರಣ **ಇದಮೋಽನ್ವಾದೇಶೇಽಶನುದಾತ್ತಸ್ತೃತೀಯಾದೌ**, (ಪಾ. ಸೂ. ೨-೪-೩೨) ಎಂಬುದರಿಂದ ಅನುದಾತ್ತವಾದ ಅಶ್ ಆದೇಶವು ಇದಮ್ ಶಬ್ದಕ್ಕೆ ಬರುವುದು. ಅಶ್ ಶಿತ್ತಾದ್ದರಿಂದ ಅನೇಕಾಲ್ ಶಿತ್ಸರ್ವಸ್ಯ, ಎಂಬುದರಿಂದ ಸರ್ವಾದೇಶವಾಗಿಬರುವುದು. ಅ+ಭಿಸ್, ಈಗ **ಅತೋಭಿಸ ಐಸ್**, (ಪಾ. ಸೂ. ೭-೧-೯) ಎಂಬುದರಿಂದ ಐಸ್ ಆದೇಶವು ಪ್ರಾಪ್ತವಾಗುವುದು. ಅದಕ್ಕೆ **ನೇದಮದಸೋರಕೋಃ** (ಪಾ. ಸೂ. ೭-೧-೧೧) ಕಕಾರವನ್ನು ಹೊಂದದೇ ಇರುವ ಇದಮ್, ಅದಸ್ ಶಬ್ದಗಳ ಮುಂದೆ ಇರುವ ಭಿಸ್‌ಗೆ ಐಸಾದೇಶ ಬರುವುದಿಲ್ಲ ಎಂಬುದರಿಂದ ನಿಷೇಧ ಬರುವುದು. ಆದ್ದರಿಂದ ಐಸ್ ಆದೇಶ ಬರುವುದಿಲ್ಲ. **ಬಹುವಚನೇ ಝಲ್ಯೇತ್** (ಪಾ. ಸೂ. ೭-೩-೧೦೩) ಝಲಾದಿಯಾದ ಬಹುವಚನ ಪರದಲ್ಲಿರುವಾಗ ಅದಂತವಾದ ಅಂಗಕ್ಕೆ ಏತ್ವ ಬರುವುದು ಎಂಬುದರಿಂದ ಅ ಗೆ ಏ ಬಂದರೆ ಏ+ಭಿಸ್ ರುತ್ವ ವಿಸರ್ಗಗಳು ಬಂದರೆ ಏಭಿಃ ಎಂದುರೂಪ. **ಊಡಿದಮ್ ಪದಾದ್ಯಪ್ಪುಮ್ರೈದ್ಯುಭ್ಯಃ** (ಪಾ. ಸೂ. ೬-೧-೧೭೧) ಇಲ್ಲಿ **ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ಏಕಾಚಃ, ಎಂದೂ, **ಅನ್ತೋದಾತ್ತಾದುತ್ತರಪದಾದನ್ಯತರಸ್ಯಾಮನಿತ್ಯಸಮಾಸೇ**, (ಪಾ. ಸೂ. ೬-೧-೧೬೯) ಎಂಬುದರಿಂದ ಅಂತೋದಾತ್ತಾತ್ ಎಂದೂ ಎರಡು ಪದಗಳು ಅನುವೃತ್ತಗಳಾಗುವುವು. ಏವಂಚ, ಒಂದೇ ಅಚ್ಚನ್ನು ಹೊಂದಿರುವುವೂ ಅಂತೋದಾತ್ತಗಳೂ ಆದ ಇದಮಾದಿ ಶಬ್ದಗಳ ಮುಂದೆ ಇರುವ ಅಸರ್ವನಾಮಸ್ಥಾನವಿಭಕ್ತಿಯು ಉದಾತ್ತವಾಗುವುದು ಎಂದು ಸೂತ್ರಾರ್ಥವಾಗುವುದು. ಇಲ್ಲಿ ಅಶ್, ಆದೇಶ ಅನುದಾತ್ತ, ಏ. ಯು ಸ್ಥಾನಿವದ್ಭಾವದಿಂದ ಇದಮ್ ಶಬ್ದವಾದರೂ ಅಂತೋದಾತ್ತವಾಗುವುದಿಲ್ಲ. ಆದ್ದರಿಂದ ಈ ಸೂತ್ರದಿಂದ ವಿಭಕ್ತಿಗೆ ಉದಾತ್ತ ಬರುವುದಿಲ್ಲ. **ಅನುದಾತ್ತೌಸುಪ್ಪಿತೌ** (ಪಾ. ಸೂ. ೩-೧-೪) ಎಂಬುದರಿಂದ ಭಿಸ್ ಪ್ರತ್ಯಯವು ಅನುದಾತ್ತವೇ ಆಗುವುದು.

**ದುವಃ**— **ನಬ್ವಿಷಯಸ್ಯಾನಿಸಂತಸ್ಯ** (ಫಿ ಸೂ. ೨೬) ಎಂಬುದರಿಂದ ಆದ್ಯುದಾತ್ತ. ವಿಶ್ವೇಭಿಃ ವಿಶ ಪ್ರವೇಶನೇ ಧಾತುವಿನ ಮುಂದೆ **ಅಶೂಪ್ರುಷಿ ಲಟಿಕಣಿಖಟಿವಿಶಿಭ್ಯಃಕ್ವನ್** ( ಉ. ಸೂ. ೧೪೯) ಎಂಬುದರಿಂದ ಕ್ವನ್ ಪ್ರತ್ಯಯ, ಪ್ರತ್ಯಯವು ನಿತ್, ಆದ್ದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತ. ವಿಶ್ವಶಬ್ದದ ಮುಂದೆ ಭಿಸ್ ಪ್ರತ್ಯಯವನ್ನಿಟ್ಟರೆ, **ಬಹುಲಂ ಛಂದಸಿ** ( ಪಾ. ಸೂ. ೭-೧-೧೦ ) ಛಂದಸ್ಸಿನಲ್ಲಿ ಭಿಸ್‌ಗೆ ಐಸ್ ಆದೇಶವು ಬಹುಲವಾಗಿ ಬರುವುದು ಎಂಬುದರಿಂದ ಐಸ್ ಆದೇಶ ಬರುವುದಿಲ್ಲ. ವಿಶ್ವ+ಭಿಸ್, ಎಂದಿರುವಾಗ **ಬಹುವಚನೇ ಝಲ್ಯೇತ್** (ಪಾ ಸೂ. ೭-೩-೧೦೩) ಎಂಬುದರಿಂದ ಅಕಾರಕ್ಕೆ ಏಕಾರ ವಿಶ್ವೇ+ಭಿಸ್, ರುತ್ವ ವಿಸರ್ಗ. ವಿಶ್ವೇಭಿಃ.

**ಸೋಮಪೀತಯೇ**--ಸೋಮಶಬ್ದವು **ಅರ್ತಿಸ್ತುಸುಹುಸೃಧೃಕ್ಷಿಕ್ಷುಭಾಯಾವಾಪದಿಯಕ್ಷಿನೀಭ್ಯೋಮನ್** (ಉ. ಸೂ. ೧-೧೩೭) ಎಂಬುದರಿಂದ ಸ್ತುಧಾತುವಿನ ಮುಂದೆ ಮನ್‌ಪ್ರತ್ಯಯ ಬಂದು ನಿಷ್ಪನ್ನವಾಗಿರುವುದು. ಆದ್ದರಿಂದ ನಿತ್ಸ್ವರ ಬಂದು ಆದ್ಯುದಾತ್ತವಾಗುವುದು. ಸೋಮಸ್ಯ ಪೀತಿರ್ಯಸ್ಮಿನ್ ಯಾಗೇ ಸಃ ತಸ್ಮೈ ಸೋಮಪೀತಯೇ ಎಂದು ಬಹುವ್ರೀಹಿ. **ಚತುರ್ಥೀವಿಧಾನೇ ತದರ್ಥೆ ಉಪಸಂಖ್ಯಾನಮ್** (ಪಾ. ಸೂ. ೨-೩-೧೩-೧) ತಸ್ಮೈ ಇದಂ ತದರ್ಥಮ್ ಅರ್ಥೇನ ನಿತ್ಯಸಮಾಸಃ ವಿಶೇಷ್ಯಲಿಂಗತಾ ಚ ಎಂಬುದರಿಂದ ಸಮಾಸ, ತದರ್ಥಸ್ಯಭಾವಃ ತಾದರ್ಥ್ಯಮ್. **ಗುಣವಚನಬ್ರಾಹ್ಮಣಾದಿಭ್ಯಃ ಷ್ಯಞ್** (ಪಾ ಸೂ. ೫-೧-೧೨೪) ಎಂಬುದರಿಂದ

ಭಾವಾರ್ಥದಲ್ಲಿ ಷ್ಯಞ್ ಪ್ರತ್ಯಯ. ತತ್ ಶಬ್ದಕ್ಕೆ ಕಾರ್ಯ ಎಂದು ಅರ್ಥ, ಕಾರಣವು ಕಾರ್ಯಕ್ಕಾಗಿ ಇರುವುದು. ಅಲ್ಲವೇ ? ಆದ್ದರಿಂದ ತದರ್ಥ ಶಬ್ದದಿಂದ ಕಾರ್ಯಪ್ರಯೋಜನಕವಾದ ಕಾರಣವು ಬೋಧಿತವಾಗುವುದು. ಬ್ರಾಹ್ಮಣಾಯ ದಧಿ ಇತ್ಯಾದಿಸ್ಥಳಗಳಲ್ಲಿ ಚತುರ್ಥೀ ವಿಭಕ್ತಿನಿರ್ವಾಹಕ್ಕಾಗಿ ಕಾರ್ಯಪದದಿಂದ ವಿಶಿಷ್ಟಕಾರ್ಯವನ್ನು ವಿವಕ್ಷಿಸಬೇಕು. ಬ್ರಾಹ್ಮಣರು ದಧಿಯಿಂದ ಉಂಟಾಗಲಾರರು ಆದ್ದರಿಂದ ಇಲ್ಲಿ ಚತುರ್ಥಿಯು ಬರಲಾರದು, ವಿಶಿಷ್ಟವಾದ ಕಾರ್ಯವನ್ನು ವಿವಕ್ಷಿಸಿದರೆ ಭೋಜನ ವಿಶಿಷ್ಟ, ಬ್ರಾಹ್ಮಣನು ಕಾರ್ಯ. ಇಲ್ಲಿ ದಧಿಯು ವಿಶೇಷಣವಾದ ಭೋಜನಕ್ಕೆ ಕಾರಣವಾಗುವುದು. ಆದ್ದರಿಂದ ಭೋಜನವಿಶಿಷ್ಟ, ಬ್ರಾಹ್ಮಣನಿಗೆ ದಧಿಯು ಕಾರಣವಾಗಬಹುದು. ಏವಂಚ ಇಲ್ಲಿ ಚತುರ್ಥಿಯು ಉಪಪನ್ನವಾಗುವುದು. ಸಮಾಸಕೃತ್ತದ್ಧಿತೇಷು ಭಾವಪ್ರತ್ಯಯೇನ ಸಂಬಂಧಾಭಿಧಾನಮ್ ಸಮಾಸ, ಕೃದಂತ, ತದ್ಧಿತಾಂತ ಇವುಗಳ ಮುಂದೆ ಬರುವ ಭಾವಪ್ರತ್ಯಯ ಸಂಬಂಧವನ್ನು ಹೇಳುವುದು. ಎಂಬುದರಿಂದ ತದರ್ಥ ಎಂಬ ಸಮಾಸದ ಮುಂದೆ ಬಂದಿರುವ ಭಾವಾರ್ಥಕವಾದ ಷ್ಯಞ್ ಪ್ರತ್ಯಯುವು ಸಂಬಂಧವನ್ನು ಹೇಳುವುದು. ಏವಂಚ ತಾದರ್ಥ್ಯ ಎಂದರೆ ತದರ್ಥಸಂಬಂಧಕಾರ್ಯಪ್ರಯೋಜನಕಕಾರಣಸಂಬಂಧ ಎಂದು ಅರ್ಥ. ತಥಾಚ ಕಾರ್ಯಕಾರಣಭಾವಸಂಬಂಧ ತೋರುವಾಗ ಕಾರ್ಯವಾಚಕವಾದ ಪ್ರಾತಿಪದಿಕದ ಮುಂದೆ ಚತುರ್ಥೀ ಬರುವುದು ಎಂದು ವಾರ್ತಿಕದ ಅರ್ಥವು ಏರ್ಪಡುವುದು. ಇಲ್ಲಿ ಅಗ್ನ್ಯಾಗಮನದಿಂದ ಸೋಮಪಾನೋಪೇತಯಾಗವು ಉಂಟಾಗುವುದು. ಆದ್ದರಿಂದ ಸೋಮಪೀತಿಶಬ್ದವು ಕಾರ್ಯವಾಚಕ. ಇದರ ಮುಂದೆ ಚತುರ್ಥೀ ವಿಭಕ್ತಿ ಬರುವುದು. ಭಾಷ್ಯದಲ್ಲಿ ಯೂಪಾಯ ದಾರು ಎಂದು ಈವಚನಕ್ಕೆ ಉದಾಹರಣೆ ಇರುವುದು. ದಾರು ಎಂದರೆ ಮರ. ಮರದಿಂದ ಯೂಪಸ್ತಂಭವು ಉಂಟಾಗುವುದರಿಂದ ಯೂಪ ಕಾರ್ಯ. ಅದರ ಮುಂದೆ ಚತುರ್ಥೀ ವಿಭಕ್ತಿಯು ಬಂದಿರುವುದು ಎಂದು ತಿಳಿಯಬೇಕು. ಕುಂಡಲಾಯ ಹಿರಣ್ಯಂ ಎಂಬುದು ಮತ್ತೊಂದು ಉದಾಹರಣೆಯೂ ಈ ವಚನಕ್ಕೆ ಭಾಷ್ಯದಲ್ಲಿ ಕೊಡಲ್ಪಟ್ಟಿರುವುದು.

**ದೇವೇಭಿಃ**— ದೇವಶಬ್ದ ಅಕಾರಾಂತ. ಇದರ ಮುಂದೆ ಇರುವ ಭಿಸ್‌ಗೆ **ಅತೋಭಿಸಐಸ್** (ಪಾ. ಸೂ. ೭.೧.೯) ಎಂಬುದರಿಂದ ಐಸ್ ಆದೇಶ ಪ್ರಾಪ್ತವಾಗುವುದು ಆದರೂ **ಬಹುಲಂಛಂದಸಿ** (ಪಾ ಸೂ. ೭-೧-೧೦) ಎಂಬುದರಿಂದ ಐಸ್ ಬರುವುದಿಲ್ಲ. ಆಮೇಲೆ ಭಿಸ್ ಝಲಾದಿಯಾದ ಬಹುವಚನವಾದ್ದರಿಂದ ಬಹುವಚನೇ ಝಲ್ಯೇತ್ ಎಂಬುದರಿಂದ ದೇವಶಬ್ದದ ಅಕಾರಕ್ಕೆ ಏಕಾರಾದೇಶ ರುತ್ವ ವಿಸರ್ಗ, ದೇವೇಭಿಃ

**ಯಾಹಿ**— **ತಿಙ್ಙತಿಙಃ** (ಪಾ. ಸೂ.೮-೧-೨೮) ಎಂಬುದರಿಂದ ಸರ್ವಾನುದಾತ್ತ.

**ಯಕ್ಷಿ**—ಯಜ ದೇವಪೂಜಾಸಂಗತಿಕರಣದಾನೇಷು, ಧಾತು. ಇದರ ಮುಂದೆ ಲೋಟ್. ಅದರ ಸ್ಥಾನದಲ್ಲಿ ಮಧ್ಯಮಪುರುಷಏಕವಚನ ಸಿಪ್ ಯಜ್+ಸಿ. **ಕರ್ತರಿಶಪ್** ( ಪಾ. ಸೂ. ೩-೧-೬೮ ) ಎಂದು ಬಂದ ವಿಕರಣ ಶಪ್‌ಗೆ **ಬಹುಲಂ ಛಂದಸಿ** (ಪಾ. ಸೂ. ೨-೪-೭೩) ಎಂಬುದರಿಂದ ಲುಕ್. **ವ್ರಶ್ಚಭ್ರಸ್ಜಸೃಜಮೃಜಯಜರಾಜಭ್ರಾಜಚ್ಛಶಾಂ ಷಃ** (ಪಾ. ಸೂ. ೮-೨-೩೬) ಎಂಬುದರಿಂದ ಜಕಾರಕ್ಕೆ ಷಕಾರ ಯಷ್+ಸಿ+ **ಷಢೋಃಕಸ್ಸಿ** (ಪಾ ಸೂ. ೮-೨-೪೧ ) ಸಕಾರ ಪರದಲ್ಲಿರುವಾಗ ಷಕಾರ ಢಕಾರಗಳಿಗೆ ಕಕಾರ ಬರುವುದು ಎಂಬುದರಿಂದ ಷಕಾರಕ್ಕೆ ಕಕಾರ. ಯಕ್+.ಸಿ **ಸೇರ್ಹ್ಯಪಿಚ್ಚ** (ಪಾ ಸೂ. ೩-೪-೮೭) ಎಂಬುದರಿಂದ ಸಿಗೆ ಹಿ ಆದೇಶವು ಯದ್ಯಪಿ ಪ್ರಾಪ್ತವಾಗುವುದು. ಆದರೂ ಛಾಂದಸವಾಗಿ ಇಲ್ಲಿ ಬರುವುದಿಲ್ಲ. ಸಿಪ್ ಪಿತ್ತು. ಆದ್ದರಿಂದ ಅನುದಾತ್ತೌ ಸುಪ್ಪಿತೌ ಎಂಬುದರಿಂದ ಅನುದಾತ್ತ. ಆದೇಶ ಪ್ರತ್ಯಯಯೋಃ ಎಂಬುದರಿಂದ ಸಕಾರಕ್ಕೆ ಷಕಾರ ಯಕ್ಷಿ ಎಂದಾಗುವುದು. ಇದು ಯಾಹಿ ಎಂಬ ತಿಙಂತದ ಮುಂದೆ ಇರುವುದು. ಆದ್ದರಿಂದ ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ

॥ ಸಂಹಿತಾಪಾಠಃ ॥

ಆ ತ್ವಾ ಕಣ್ವಾ ಅಹೂಷತ ಗೃಣಂತಿ ವಿಪ್ರ ತೇ ಧಿಯಃ ।
ದೇವೇಭಿರಗ್ನ ಆ ಗಹಿ ॥ ೨ ॥

॥ ಪದಪಾಠಃ ॥

ಆ । ತ್ವಾ । ಕಣ್ವಾಃ । ಅಹೂಷತ । ಗೃಣಂತಿ । ವಿಪ್ರ । ತೇ । ಧಿಯಃ ।
ದೇವೇಭಿಃ । ಅಗ್ನೇ । ಆ । ಗಹಿ ॥ ೨ ॥

॥ ಸಾಯಣಭಾಷ್ಯಂ ॥

ಹೇ ವಿಪ್ರ ಮೇಧಾವಿನ್ನಗ್ನೇ ಕಣ್ವಾ ಮೇಧಾವಿನ ಋತ್ವಿಜಸ್ತ್ವಾ ಯಜ್ಞನಿಷ್ಪಾದಕಂ ತ್ವಾಮಾಹೂಷತ । ಆಹ್ವಯಂತಿ । ತಥಾ ತೇ ಧಿಯಸ್ತ್ವದೀಯಾನಿ ಕರ್ಮಾಣಿ ಗೃಣಂತಿ । ಕಥಯಂತಿ । ತತೋ ಹೇ ಅಗ್ನೇ ದೇವೇಭಿರ್ದೇವೈಃ ಸಹಾ ಗಹಿ । ಆಗಚ್ಛ । ವಿಪ್ರ ಇತ್ಯಾದಿಷು ಚತುರ್ವಿಂಶತಿಸಂಖ್ಯಾಕೇಷು ಮೇಧಾವಿನಾಮಸು ಕಣ್ವ ಋಭುರಿತಿ ಪಠಿತಂ ॥ ತ್ವಾ । ತ್ವಾಮೌ ದ್ವಿತೀಯಾಯಾ ಇತಿ ತ್ವಾದೇಶಃ। ಸರ್ವಾನುದಾತ್ತಃ । ಕಣ್ವಾಃ । ಕಣ ಶಬ್ದಾರ್ಥಃ । ಅಶಿಪ್ರುಷಿಲಟಿಕಣಿಖಟೀತ್ಯಾದಿನಾ ಕ್ವನ್ । ನಿತ್ತ್ವಾದಾದ್ಯುದಾತ್ತಃ । ಅಹೂಷತ । ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ । ಛಂದಸಿ ಲುಙ್ಲಙ್ಲಿಟ ಇತಿ ವರ್ತಮಾನೇ ಲುಙ್ । ಞಿತತ್ತ್ವಾದಾತ್ಮನೇಪದಂ । ಝ ಆತ್ಮನೇಪದೇಷ್ವನತ ಇತ್ಯದಾದೇಶಃ । ಚ್ಲೇಃ ಸಿಚ್ । ಏಕಾಚ ಇತೀಟ್ಪ್ರತಿಷೇಧಃ । ಪಾ. ೭-೨-೧೦ । ಬಹುಲಂ ಛಂದಸೀತಿ ಸಂಪ್ರಸಾರಣಂ ಪರಪೂರ್ವತ್ವಂ । ಹಲಃ । ಪಾ- ೬-೪-೨ । ಇತಿ ದೀರ್ಘತ್ವಂ । ಆದೇಶಪ್ರತ್ಯಯಯೋರಿತಿ ಷತ್ವಂ । ಛಾಂದಸತ್ವಾದೂಕಾರಸ್ಯ ನ ಗುಣಃ । ಅಡಾಗಮಃ । ಗೃಣಂತಿ । ಗೄ ಶಬ್ದೇ । ಲಟ್ । ಝಿ । ಝೋಽಂತಃ । ಕ್ರ್ಯಾದಿಭ್ಯಃ ಶ್ನಾ । ಪ್ವಾದೀನಾಂ ಹ್ರಸ್ವ ಇತಿ ಧಾತೋರ್ಹ್ರಸ್ವತ್ವಂ । ಶ್ನಾಭ್ಯಸ್ತಯೋರಾತಃ । ಪಾ. ೬-೪-೧೧೨ । ಇತ್ಯಾಕಾರಲೋಪಃ । ಋವರ್ಣಾಚ್ಚೇತಿ ವಕ್ತವ್ಯಂ । ಕಾ. ೮-೪-೧-೧ । ಇತಿ ಣತ್ವಂ । ತಿಙಃ ಸ್ವರ ಏವ ಶಿಷ್ಯತೇ । ವಿಪ್ರ । ಆಮಂತ್ರಿತನಿಘಾತಃ । ತೇ । ಅನುದಾತ್ತಮಿತ್ಯನುವೃತ್ತೌ ತೇಮಯಾವೇಕವಚನಸ್ಯ । ಪಾ. ೮-೧-೨೨ । ಇತಿ ಷಷ್ಠ್ಯಾಸ್ತೇ ಇತ್ಯಾದೇಶಃ । ದೇವೇಭಿಃ । ಛಾಂದಸ ಐಸಭಾವಃ । ಗಹಿ । ಗಮ್ಲೃ ಸೃಪ್ಲೃ ಗತೌ । ಲೋಟಃ ಸಿಪ್ । ಸೇರ್ಹ್ಯಪಿಚ್ಚ । ಕರ್ತರಿ ಶಪ್ । ತಸ್ಯ ಬಹುಲಂ ಛಂದಸೀತಿ ಲುಕ್ । ಅನುದಾತ್ತೋಪದೇಶೇತ್ಯಾದಿನಾ ಮಕಾರಲೋಪಃ । ತಸ್ಯಾಸಿದ್ಧವದತ್ರಾಭಾದಿತ್ಯಸಿದ್ಧತ್ವಾದತೋ ಹೇರಿತಿ ಹೇರ್ಲುಗ್ನ ಭವತಿ ॥

॥ ಪ್ರತಿಪದಾರ್ಥ ॥

(ಹೇ) ವಿಪ್ರ—ಎಲೈ ಪ್ರಾಜ್ಞನಾದ ಅಗ್ನಿಯೇ, । ಕಣ್ವಾಃ—ಮೇಧಾವಿಗಳಾದ ಋತ್ವಿಕ್ಕುಗಳು (ಕಣ್ವ ಋಷಿಯ ವಂಶಸ್ಥರು) । ತ್ವಾ—ನಿನ್ನನ್ನು । ಆ ಅಹೂಷತ—(ಪ್ರಾರ್ಥಿಸಿ) ಕರೆಯುತ್ತಾರೆ । (ಹಾಗೆಯೇ) ತೇ—ನಿನ್ನ । ಧಿಯಃ—ಕೆಲಸಗಳನ್ನು । ಗೃಣಂತಿ—ಹೊಗಳುತ್ತಾರೆ. (ಆದ್ದರಿಂದ) । ಅಗ್ನೇ—ಎಲೈ ಅಗ್ನಿಯೇ । ದೇವೇಭಿಃ——ದೇವತೆಗಳೊಡನೆ । ಆ ಗಹಿ—ದಯಮಾಡು.

॥ ಭಾವಾರ್ಥ ॥

ಎಲೈ ಪ್ರಾಜ್ಞನಾದ ಅಗ್ನಿಯೇ, ನಿನ್ನ ಗುಣಗಳನ್ನು ಹೊಗಳಲು ಬುದ್ಧಿವಂತರಾದ ಋತ್ವಿಕ್ಕುಗಳು (ಅಥವಾ ಕಣ್ವಋಷಿಯ ವಂಶಸ್ಥರು) ನಿನ್ನನ್ನು ಪ್ರಾರ್ಥಿಸಿ ಯಜ್ಞಕ್ಕೆ ಕರೆಯುತ್ತಾರೆ. ಮತ್ತು ನಿನ್ನ ಶ್ರೇಷ್ಠವಾದ ಕೆಲಸಗಳನ್ನು ಹೊಗಳುತ್ತಾರೆ. ಆದುದರಿಂದ ನೀನು ಸಕಲ ದೇವತೆಗಳೊಡನೆ ನಮ್ಮ ಯಜ್ಞಕ್ಕೆ ದಯಮಾಡು.

English Translation.

The Kanwas invoke you, wise Agni, and extrol your deeds; come Agni with the gods,

॥ ವಿಶೇಷವಿಷಯಗಳು ॥

ಕಣ್ವಾಃ--ವಿಪ್ರ ಮೊದಲಾದ ಇಪ್ಪತ್ತುನಾಲ್ಕು ಮೇಧಾವಿ ನಾಮಗಳ ಮಧ್ಯದಲ್ಲಿ ಕಣ್ವಶಬ್ದವು ಪಠಿತವಾಗಿರುವುದರಿಂದ (ನಿ. ೩-೧೫) ಕಣ್ವಶಬ್ದಕ್ಕೆ ಮೇಧಾವಿ, ಬುದ್ಧಿವಂತ ಎಂದರ್ಥವಾಗುವುದು. ಭಾಷ್ಯಕಾರರು ಈ ರೀತಿ ಸಾಧಾರಣವಾದ ಅರ್ಥಮಾಡಿದ್ದರೂ ಈ ಋಕ್ಕಿನ ಋಷಿಯು ಕಣ್ವವಂಶಸ್ಥನಾದುದರಿಂದ ಇಲ್ಲಿ ಕಣ್ವಾಃ ಎಂದರೆ ಕಣ್ವವಂಶದಲ್ಲಿ ಉತ್ಪನ್ನರಾದ ಯಜಮಾನಋತ್ವಿಗಾದಿ ಜನರು ಎಂದು ಅರ್ಥಮಾಡುವುದೇ ಸಮಂಜಸವಾಗಿ ಕಾಣುವುದು.

ಧಿಯಃ--ಅಪಃ ಮೊದಲಾದ ಇಪ್ಪತ್ತಾರು ಕರ್ಮವಾಚಕನಾಮಗಳ ಮಧ್ಯದಲ್ಲಿ ಧೀಃ ಶಬ್ದವು ಪಠಿತವಾಗಿರುವುದರಿಂದ (ನಿ. ೩-೨) ಧಿಯಃ ಎಂದರೆ ಕರ್ಮಗಳನ್ನು, ಕೆಲಸಗಳನ್ನು ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

ಆ-ನಿಪಾತಾ ಆದ್ಯುದಾತ್ತಾಃ ಎಂಬುದರಿಂದ ಆದ್ಯುದಾತ್ತ-

ತ್ವಾ—ತ್ವಾಮೌದ್ವಿತೀಯಾಯಾಃ (ಪಾ. ಸೂ. ೮-೧-೨೩) ಪದದ ಮುಂದೆ ಇರತಕ್ಕವೂ ಪಾದದ ಆದಿಯಲ್ಲಿಲ್ಲದೇ ಇರತಕ್ಕವೂ ಆದ ದ್ವಿತೀಯಾವಿಭಕ್ತಿ ಏಕವಚನಾಂತಗಳಾದ ಯುಷ್ಮದ್ ಅಸ್ಮದ್ ಶಬ್ದಗಳಿಗೆ ಕ್ರಮವಾಗಿ ತ್ವಾ ಮಾ ಆದೇಶಗಳು ಬರುವುವು. ಅವು ಅನುದಾತ್ತಗಳಾಗುವುವು ಎಂಬುದರಿಂದ ತ್ವಾಮ್ ಎಂಬುದಕ್ಕೆ ತ್ವಾ ಎಂಬ ಅನುದಾತ್ತವಾದ ಆದೇಶ ಬರುವುದು.

**ಕಣ್ವಾಃ** — ಕಣಶಬ್ದಾರ್ಥ ಧಾತು. ಇದರ ಮುಂದೆ **ಅಶೂಪ್ರುಷಿಲಟಿಕಣಿಖಟಿವಿಶಿಭ್ಯಃಕ್ವನ್** (ಉ. ಸೂ. ೧-೧-೪೯) ಎಂಬುದರಿಂದ ಕ್ವನ್ಪ್ರತ್ಯಯ ಬರುವುದು. ಕಣಧಾತ್ವರ್ಥಃ ಕಣ ಗತೌ, ಕಣ ನಿಮೀಲನೇ ಎಂದು ಕಣಧಾತುವು ಮೂರು ಇರುವುದು. ತತ್ತ್ವಬೋಧಿನ್ಯಾದಿವ್ಯಾಖ್ಯಾಕಾರರು ಕಣ ನಿಮೀಲನೇ ಎಂಬ ಚುರಾದಿಧಾತುವನ್ನು ಇಲ್ಲಿ ಸ್ವೀಕರಿಸಿರುವರು. ಆದರೂ ಮೂರು ಧಾತುಗಳ ಮುಂದೆಯೂ ಕ್ವನ್ ಬರಬಹುದೆಂದು ವೇದಭಾಷ್ಯಕಾರರು ಅಭಿಪ್ರಾಯಪಡುವರು. ಪ್ರತ್ಯಯ ನಿತ್ತಾದ್ದರಿಂದ ಕಣ್ವಾಃ ಆದ್ಯುದಾತ್ತ.

**ಅಹೂಷತ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಧಾತ್ವರ್ಥ ಸಂಬಂಧ ತೋರುವಾಗ ಎಲ್ಲಾ ಕಾಲದಲ್ಲಿಯೂ (ಭೂತಭವಿಷ್ಯದ್ವರ್ತಮಾನ) ಈ ಲಕಾರಗಳು ಬರುವುವು ಎಂಬುದರಿಂದ ವರ್ತಮಾನ ಕಾಲದಲ್ಲಿ ಲುಙ್ ಪ್ರತ್ಯಯವು ಹ್ವೇಞ್ ಧಾತುವಿನ ಮುಂದೆ ಬರುವುದು. ಹ್ವೇ+ಲ್-ಇಕಾರವು ಞಿತ್ಸಂಜ್ಞೆಯನ್ನು ಹೊಂದಿರುವುದರಿಂದ ಈ ಧಾತು ಞಿತ್. ಆದ್ದರಿಂದ **ಸ್ವರಿತ ಞಿತಃ ಕರ್ತ್ರಭಿಪ್ರಾಯೇ ಕ್ರಿಯಾಫಲೇ** (ಪಾ. ಸೂ. ೧-೩-೭೨) ಕ್ರಿಯಾಫಲವು ಕರ್ತೃವಿಗೆ ಸೇರುವಾಗ ಸ್ವರಿತೇತ್. ಞಿತ್ ಆದ ಧಾತುಗಳ ಮುಂದೆ ಆತ್ಮನೇಪದ ಬರುವುದು. ಎಂಬುದರಿಂದ ಆತ್ಮನೇಪದ ಬರುವುದು. ಪ್ರಥಮಪುರುಷ ಬಹುವಚನವಾದ ಝ ಪ್ರತ್ಯಯ. ಹ್ವೇ+ಝ, ಚ್ಲಿ ಲುಙಿ (ಪಾ. ಸೂ. ೩-೧-೪೩) ಎಂಬುದರಿಂದ ಧಾತುವಿನ ಮುಂದೆ ಚ್ಲಿ ಪ್ರತ್ಯಯ. ಆದಕ್ಕೆ **ಚ್ಲೇಸ್ಸಿಚ್** (ಪಾ. ಸೂ. ೩-೧-೪೪) ಎಂಬುದರಿಂದ ಸಿಚ್ ಆದೇಶ. ಹ್ವೇ+ಸ್-ಝ. ಸಿಚ್ ಆರ್ಧಧಾತುಕ. ಆದ್ದರಿಂದ **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂಬುದರಿಂದ ಇಡಾಗಮವು ಪ್ರಾಪ್ತವಾಗುವುದು. ಹ್ವೇ ಧಾತುವು ಅಜಂತ ಊದೃದಂತೈಃ—ಎಂಬ ಕಾರಿಕೆಯಲ್ಲಿ ಇದು ಸೇರಿಲ್ಲ. ಆದ್ದರಿಂದ ಇದು ಉಪದೇಶಕಾಲದಲ್ಲಿಯೇ ಅನುದಾತ್ತ. ಅಲ್ಲದೆ ಉಪದೇಶಕಾಲದಲ್ಲಿ ಏಕಾಚ್ಕವಾಗಿಯೂ ಇದೆ. ಆದಕಾರಣದಿಂದ **ಏಕಾಚ ಉಪದೇಶೇಽನುದಾತ್ತಾತ್** (ಪಾ. ಸೂ. ೭-೨-೧೦) ಎಂಬುದರಿಂದ ಇಡಾಗಮಕ್ಕೆ ನಿಷೇಧ ಬರುವುದು. **ಹ್ವಃ ಸಂಪ್ರಸಾರಣಮ್** (ಪಾ. ಸೂ. ೬-೧-೩೨) ಎಂಬುದು ಅನುವೃತ್ತವಾದರೆ **ಬಹುಲಂಛಂದಸಿ** (ಪಾ. ಸೂ. ೬-೧-೩೪) ಎಂಬುದರಿಂದ ಸಂಪ್ರಸಾರಣ ವಕಾರಕ್ಕೆ ಉಕಾರ. ಹು ಏ+ಸ್ ಝ. **ಸಂಪ್ರಸಾರಣಾಚ್ಚ** (ಪಾ. ಸೂ. ೬-೧-೧೦೮) ಎಂಬುದರಿಂದ ಉ+ಏಗಳಿಗೆ ಪೂರ್ವರೂಪ, ಹು-ಸ್-ಝ ಹಲಃ (ಪಾ. ಸೂ. ೬-೪-೨) ಅಂಗಾವಯವವಾದ ವ್ಯಂಜನದ ಮುಂದೆ ಇರುವ ಯಾವ ಸಂಪ್ರಸಾರಣವುಂಟೋ ಅದನ್ನು ಕೊನೆಯಲ್ಲಿ ಹೊಂದಿರುವ ಅಂಗದ ಕೊನೆಯ ವರ್ಣಕೆ ದೀರ್ಘ ಬರುವುದು ಎಂಬುದರಿಂದ ದೀರ್ಘ, ಹೂ+ಸ್+ಝ. ಉತಃ, ನಿರುತಂ, ವಿಧ್ಯತಿ, ಇವುಗಳಲ್ಲಿ ದೀರ್ಘವಾರಣೆಗಾಗಿ ಈ ರೀತಿಯಲ್ಲಿ ಹಲಃ ಎಂಬುದಕ್ಕೆ ಅರ್ಥವು ವರ್ಣಿಸಲಾಗಿರುವುದು. **ಆತ್ಮನೇಪದೇಷ್ವನತಃ** (ಪಾ. ಸೂ. ೭-೧-೫) ಎಂಬುದರಿಂದ ಝಕಾರಕ್ಕೆ ಅತ್ ಆದೇಶ, ಹೂ+ಸ್. ಅತ **ಲುಙ್‌ಲಙ್‌ಲೃಙ್ಕ್ಷ್ವಡುದಾತ್ತಃ** (ಪಾ. ಸೂ. ೬-೪-೭೧) ಎಂಬುದರಿಂದ ಧಾತುವಿಗೆ ಅಡಾಗಮ ಅಹೂಸ್+ಅತ. **ಆದೇಶಪ್ರತ್ಯಯಯೋಃ** (ಪಾ. ಸೂ. ೮-೩-೫೯) ಎಂಬುದರಿಂದ ಸಕಾರಕ್ಕೆ ಷಕಾರ ಅಹೂಷತ ಎಂದಾಗುವುದು. ಸಿಚ್ ಪ್ರತ್ಯಯವನ್ನು ನಿಮಿತ್ತ ಮಾಡಿಕೊಂಡು **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಊಕಾರಕ್ಕೆ ಗುಣವು ಪ್ರಾಪ್ತವಾದರೂ **ಸರ್ವೇವಿಧಯಶ್ಛಂದಸಿ ವಿಕಲ್ಪ್ಯಂತೇ** (ಪರಿಭಾ ೩೫) ಎಂಬ ಪರಿಭಾಷಾನುಸಾರ ಛಂದಸ್ಸಿನಲ್ಲಿ ಅದು ವಿಕಲ್ಪವಾಗುವ ಕಾರಣ ಇಲ್ಲಿ ಬರುವುದಿಲ್ಲ. **ತಿಙ್ಙತಿಙಃ** ಎಂದು ಸರ್ವಾನುದಾತ್ತ.

**ಗೃಣನ್ತಿ**—ಗೄ ಶಬ್ದೇ ಧಾತು. ಇದರ ಮುಂದೆ **ವರ್ತಮಾನೇಲಟ್** (ಪಾ. ಸೂ. ೩-೨-೧೨೩) ವರ್ತಮಾನೇ ಎಂಬುದು ಪ್ರಕೃತ್ಯರ್ಥಕ್ಕೆ ವಿಶೇಷಣ. ಪ್ರತ್ಯಯವು ದ್ಯೋತಕ, ವರ್ತಮಾನ ಕ್ರಿಯಾವಾಚಕವಾದ

ಧಾತುವಿನ ಮುಂದೆ ಲಟ್ ಬರುವುದು. ಭೂತಭವಿಷ್ಯತೋಃಪ್ರತಿದ್ವಂದ್ವೀ ವರ್ತಮಾನಕಾಲಃ, ಎಂದು ಭಾಷ್ಯದಲ್ಲಿರುವುದು. ಅತೀತಾನಾಗತಭಿನ್ನಕಾಲತ್ವಂ ವರ್ತಮಾನಕಾಲತ್ವಮ್, ಭೂತಭವಿಷ್ಯದ್ಭಿನ್ನವಾದುದು ವರ್ತಮಾನಕಾಲ, ಎಂದು ಕೆಲವರು ಲಕ್ಷಣವನ್ನು ಹೇಳುವರು. ಪ್ರಾರಬ್ಧಾಪರಿಸಮಾಪ್ತಕ್ರಿಯಾಶ್ರಯತ್ವಂ ಕಾಲಗತಂ ವರ್ತಮಾನತ್ವಮ್, ಪ್ರಾರಂಭಿಸಲ್ಪಟ್ಟು ಮುಗಿಯದೇ ಇರುವ ಕ್ರಿಯೆಗೆ ಆಶ್ರಯವಾದ ಕಾಲ ವರ್ತಮಾನಕಾಲ ಎಂದು ಹಲವರು ಲಕ್ಷಣ ಹೇಳುವರು. ಈ ಸೂತ್ರದಿಂದ ಗೄಧಾತುವಿನ ಮುಂದೆ ಲಟ್ ಗೄ+ಲ್ ಪರಸ್ಮೈಪದ ಪ್ರಥಮಪುರುಷ ಬಹುವಚನ ಝಿ ಆದೇಶ. ಗೄ+ಝಿ, ಝೋಽನ್ತಃ (ಪಾ ಸೂ. ೭-೧-೩) ಎಂಬುದರಿಂದ ಝಕಾರಕ್ಕೆ ಅನ್ತಾದೇಶ ಗೄ+ಅನ್ತಿ ಕ್ರ್ಯಾದಿಭ್ಯಃಶ್ನಾ (ಪಾ.ಸೂ. ೩-೧-೮೧) ಎಂಬುದರಿಂದ ಶ್ನಾ ವಿಕರಣ. ಗೄ+ನಾ+ಅನ್ತಿ ಪ್ವಾದೀನಾಂಹ್ರಸ್ವಃ (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ ಗೃ ನಾ+ಅನ್ತಿ ಶ್ನಾಭ್ಯಸ್ತಯೋರಾತಃ (ಪಾ. ಸೂ. ೬-೪-೧೧೨) ಕಿತ್ತು ಅಥವಾ ಙಿತ್ತು ಆದ ಪ್ರತ್ಯಯಗಳು ಪರದಲ್ಲಿರುವಾಗ ಶ್ನಾಪ್ರತ್ಯಯ ಅಭ್ಯಸ್ತ ಇವುಗಳ ಆಕಾರಕ್ಕೆ ಲೋಪ, ಶ್ನಾಪ್ರತ್ಯಯವು ಸಾರ್ವಧಾತುಕಮಪಿತ್ (ಪಾ.ಸೂ. ೧-೨-೪) ಎಂಬುದರಿಂದು ಙಿತ್ತಾಗುವುದು. ಗೃ+ನ್+ಅನ್ತಿ ಋವರ್ಣಾನ್ನಸ್ಯಣತ್ವಂ ವಕ್ತವ್ಯಮ್ ( ಪಾ. ಸೂ ೮-೪-೧- ವಾ. ೧ ) ಎಂಬುದರಿಂದ ನಕಾರಕ್ಕೆ ಣಕಾರ ಗೃಣನ್ತಿ, ಎಂದು ಸಿದ್ಧವಾಗುವುದು. ಅಹೂಷತ ಎಂಬ ತಿಙಂತದ ಮುಂದೆ ಇರುವುದರಿಂದ ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ. ತಿಙ್ ಪ್ರತ್ಯಯವಾದ್ದರಿಂದ ಆದ್ಯುದಾತ್ತಶ್ಚ (ಪಾ. ಸೂ. ೩-೧-೩) ಎಂಬುದರಿಂದ ಆದ್ಯುದಾತ್ತಸ್ವರ ಬಂದು ಅನ್ತಿ ಎಂಬುದರ ಅಕಾರವು ಉದಾತ್ತವಾಗುವುದು.

ವಿಪ್ರ—ಇದು ಆಮನ್ತ್ರಿತ. ಆದ್ದರಿಂದ ಆಮನ್ತ್ರಿತಸ್ಯಚ (ಪಾ. ಸೂ. ೧-೧೯) ಎಂಬುದರಿಂದ ಸರ್ವಾನುದಾತ್ತ ಬರುವುದು.

ತೇ — ಅನುದಾತ್ತಂ ಸರ್ವಮಪಾದಾದೌ (ಪಾ. ಸೂ. ೮-೧-೧೮,) ಪದಾತ್ (ಪಾ. ಸೂ. ೮-೧೧-೭) ಎಂಬಿವು ಅನುವೃತ್ತವಾಗಲು ತೇ ಮಯಾವೇಕವಚನಸ್ಯ (ಪಾ. ಸೂ. ೮-೧-೨೨) ಪದದ ಮುಂದೆ ಇರುವುವೂ ಪಾದದ ಆದಿಯಲಿಲ್ಲದವೂ ಆದ ಷಷ್ಠೀಏಕವಚನಾಂತವಾದ ಯುಷ್ಮದಸ್ಮಚ್ಛಬ್ದಗಳಿಗೆ ಕ್ರಮವಾಗಿ ತೇ ಮೇ ಆದೇಶಗಳು ಬರುವುವು. ಅವು ಅನುದಾತ್ತಗಳಾಗುವುವು ಎಂಬುದರಿಂದ ತವ ಎಂಬುದಕ್ಕೆ ತೇ ಆದೇಶ ಬರುವುದು. ಅದು ಅನುದಾತ್ತವೂ ಆಗುವುದು.

ದೇವೇಭಿಃ—ಬಹುಲಂ ಛಂದಸಿ ಎಂಬುದರಿಂದ ಭಿಸ್‌ಗೆ ಐಸ್ ಆದೇಶ ಬರುವುದಿಲ್ಲ.

ಗಹಿ—ಗಮ್ಲೃ ಸೃಪ್ಲೃ ಗತೌ, ಧಾತು. ಇದರ ಮುಂದೆ ಲೋಟ್, ಮಧ್ಯಮಪುರುಷ ಏಕವಚನ ಸಿಪ್ ಗಮ್+ಸಿ ಸೇರ್ಹ್ಯಪಿಚ್ಚ (ಪಾ. ಸೂ. ೩-೪-೮೭) ಎಂಬುದರಿಂದ ಸಿಗೆ ಹಿ ಆದೇಶ. ಇದು ಸಾರ್ವಧಾತುಕಮಪಿತ್ (ಪಾ ಸೂ. ೧-೨-೪) ಎಂಬುದರಿಂದ ಙಿತ್ತು, ಕರ್ತರಿ ಶಪ್ ಎಂಬುದರಿಂದ ವಿಕರಣ+ಶಪ್ ಅದಕ್ಕೆ ಬಹುಲಂ ಛಂದಸಿ, ( ಪಾ. ಸೂ. ೨-೪-೭೩) ಎಂಬುದರಿಂದ ಲುಕ್. ಅನುದಾತ್ತೋಪದೇಶವನತಿತನೋತ್ಯಾದೀನಾಮನುನಾಸಿಕಲೋಪೋ ಝಲಿಕ್ಙಿತಿ (ಪಾ.ಸೂ. ೬-೪-೩೭) ಎಂಬುದರಿಂದ ಮಕಾರಕ್ಕೆ ಲೋಪ. ಅಸಿದ್ಧವದತ್ರಾಭಾತ್ (ಪಾ. ಸೂ. ೬-೪-೨೨) ಈ ಸೂತ್ರದಿಂದ ಈ ಪಾದ ಮುಗಿಯುವ ವರೆಗೂ ಇರುವ ಶಾಸ್ತ್ರಗಳಿಗೆ ಅಭೀಯ, ಎಂದು ಹೇಳುವರು. ಈ ಸೂತ್ರದಿಂದ ಅತೋಹೇಃ (ಪಾ ಸೂ. ೬-೪-೧೦೫) ಎಂಬುದರಿಂದ ಹಿ ಗೆ

ಲುಕ್ಕನ್ನು ಮಾಡುವಾಗ ಅನುದಾತ್ತೋಪದೇಶ ಎಂಬುದರಿಂದ ವಿಹಿತವಾದ ಮಕಾರಲೋಪವು ಅಸಿದ್ಧವಾಗುವುದು. ಆದ್ದರಿಂದ ಹಿಯು ಅಕಾರಾಂತವಾದ ಅಂಗದ ಮುಂದೆ ಇರತಕ್ಕದ್ದಾಗುವುದಿಲ್ಲವಾದಕಾರಣ ಹಿಗೆ ಲುಕ್ ಬರುವುದಿಲ್ಲ.

॥ ಸಂಹಿತಾಪಾಠಃ ॥

ಇಂದ್ರವಾಯೂ ಬೃಹಸ್ಪತಿಂ ಮಿತ್ರಾಗ್ನಿಂ ಪೂಷಣಂ ಭಗಂ ।
ಆದಿತ್ಯಾನ್ಮಾರುತಂ ಗಣಂ ॥ ೩ ॥

॥ ಪದಪಾಠಃ ॥

ಇಂದ್ರವಾಯೂ ಇತಿ । ಬೃಹಸ್ಪತಿಂ । ಮಿತ್ರಾ । ಅಗ್ನಿಂ । ಪೂಷಣಂ । ಭಗಂ ॥
ಆದಿತ್ಯಾನ್ । ಮಾರುತಂ । ಗಣಂ ॥ ೩ ॥

॥ ಸಾಯಣಭಾಷ್ಯಂ ॥

ಇಂದ್ರಾದಿದೇವಾನ್ಮಾರುತಂ ಮರುತಾಂ ವಾಯೂನಾಂ ಸಂಬಂಧಿನಂ ಗಣಂ ಚ ಹೇ ಅಗ್ನೇ ಯಕ್ಷೀತಿ ಪದದ್ವಯಮನುವರ್ತತೇ ॥ ಇಂದ್ರಶ್ಚ ವಾಯುಶ್ಚೇಂದ್ರವಾಯೂ । ದೇವತಾದ್ವಂದ್ವೇ ಚ । ಪಾ. ೬-೩-೨೬। ಇತಿ ಪ್ರಾಪ್ತಸ್ಯಾನಙ ಉಭಯತ್ರ ವಾಯೋಃ ಪ್ರತಿಷೇಧೋ ವಕ್ತವ್ಯಃ। ಪಾ. ೬-೩-೨೬ ೧ ಇತಿ ಪ್ರತಿಷೇಧಃ । ದೇವತಾದ್ವಂದೇ ಚ । ಪಾ. ೬-೨-೧೪೧ । ಇತಿ ಪ್ರಾಪ್ತಸ್ಯೋಭಯಪದಪ್ರಕೃತಿಸ್ವರಸ್ಯ ನೋತ್ತರಪದೇಽನುದಾತ್ತಾದೌ । ಪಾ. ೬-೨-೧೪೨ । ಇತಿ ನಿಷೇಧಃ । ಸಮಾಸಾಂತೋದಾತ್ತತ್ವಮೇವ । ಬೃಹಸ್ಪತಿಂ । ತದ್ಬೃಹತೋಃ ಕರಪತ್ಯೋಶ್ಚೋರದೇವತಯೋರಭಿಧೇಯಯೋಃ ಸುಟ್ ತಲೋಪಶ್ಚ ವಕ್ತವ್ಯಃ । ಮ. ೬-೧-೧೫೭ । ಇತಿ ತಲೋಪಃ ಸುಡಾಗಮಶ್ಚ । ಬೃಹಚ್ಛಬ್ದಮಾದ್ಯುದಾತ್ತಂ ಕೇಚಿದ್ವರ್ಣಯಂತೀತಿ ವಾಮನಃ । ಪಾ ರಕ್ಷಣೇ । ಪಾತೀತಿ ಪತಿಃ। ಪಾತೇರ್ಡತಿಃ । ಉ. ೪-೫೭। ಪ್ರತ್ಯಯಸ್ವರೇಣಾ-ದ್ಯುದಾತ್ತಃ। ಸಮಾಸ ಉಭೇ ವನಸ್ಪತ್ಯಾದಿಷು ಯುಗಪತ್ । ಪಾ. ೬-೨-೧೪೦ । ಇತ್ಯುಭಯಪದಪ್ರಕೃತಿ-ಸ್ವರತ್ವಂ । ಮಿತ್ರಾ । ದ್ವಿತೀಯಾಯಾಃ ಸುಪಾಂ ಸುಲುಗಿತ್ಯಾದಿನಾ ವಿಭಕ್ತೇರಾಜಾದೇಶಃ । ಆದಿತ್ಯಾನ್ । ಅದಿತೇರಪತ್ಯಾನ್ಯಾದಿತ್ಯಾಃ । ದಿತ್ಯದಿತ್ಯಾದಿತ್ಯಪತ್ಯುತ್ತರಪದಾಣ್ಣ್ಯಃ । ಪಾ. ೪-೧-೮೫ । ಪ್ರತ್ಯಯಸ್ವರಃ । ಮಾರುತಂ । ಮರುತಾಂ ವಿಕಾರಃ । ಅನುದಾತ್ತಾದೇಶ್ಚ । ಪಾ. ೪-೩-೧೪೦ । ಇತ್ಯಞ್ । ಞಿತ್ತ್ವಾದಾದ್ಯುದಾತ್ತಃ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) **ಇಂದ್ರವಾಯೂ**—ಇಂದ್ರವಾಯುಗಳನ್ನೂ | **ಬೃಹಸ್ಪತಿಂ**—ಬೃಹಸ್ಪತಿಯನ್ನೂ | **ಮಿತ್ರಾ** — ಮಿತ್ರನನ್ನೂ | **ಅಗ್ನಿಂ** — ಅಗ್ನಿಯನ್ನೂ | **ಪೂಷಣಂ**— ಪೂಷನನ್ನೂ | **ಭಗಂ** — ಭಗನನ್ನೂ | **ಆದಿತ್ಯಾನ್**— ಆದಿತ್ಯರನ್ನೂ | **ಮಾರುತಂ ಗಣಂ**—ಮರುದ್ಗಣಗಳನ್ನೂ ಉದ್ದೇಶಿಸಿ | (ಯಕ್ಷಿ-ಯಜ್ಞಮಾಡು )

॥ ಭಾವಾರ್ಥ ॥

ಎಲೈ ಅಗ್ನಿಯೇ, ಇಂದ್ರ, ವಾಯು, ಬೃಹಸ್ಪತಿ, ಮಿತ್ರ, ಅಗ್ನಿ, ಪೂಷಾ, ಭಗ, ಆದಿತ್ಯರು (ಅಥವಾ ದೇವತೆಗಳು) ಮರುದ್ಗಣಗಳು ಇವರನ್ನು ಉದ್ದೇಶಿಸಿ ಯಜ್ಞಮಾಡು.

English Translation

Sacrifice to Indra, Vayu, Brihaspati, Mitra, Agni, Pushan, Bhaga, the **Adityas**. and the hosts of Maruts.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಕ್ರಿಯಾಪದವಿಲ್ಲದೇ ಇರುವುದರಿಂದ **ಅಗ್ನೇ ಯಕ್ಷಿ**--ಎಲೈ ಅಗ್ನಿಯೇ, ಯಜ್ಞಮಾಡು ಎಂಬ ಪದಗಳನ್ನು ಅಧ್ಯಾಹಾರಮಾಡಿಕೊಳ್ಳಬೇಕೆಂದು ಭಾಷ್ಯಕಾರರು ಹೇಳಿರುವರು. ಈ ಗುಂಪಿನಲ್ಲಿ ಅಗ್ನಿಯೂ ಇರುವುದರಿಂದ ಅಗ್ನಿಯೇ, ಎಂದು ಅಗ್ನಿಯನ್ನು ಸಂಬೋಧನೆಮಾಡಿ ಅಗ್ನಿಯನ್ನುದ್ದೇಶಿಸಿ ಯಜ್ಞ ಮಾಡು ಎಂದು ಹೇಳುವುದು ಯುಕ್ತವಾಗಿ ಕಾಣುವುದಿಲ್ಲ. ವೇದಾರ್ಥಯತ್ನಕಾರರು ಈ ಕಾರಣಕ್ಕಾಗಿ I invoke ಎಂದರೆ ಇಂದ್ರವಾಯು ಮೊದಲಾದ ದೇವತೆಗಳನ್ನು ನಾನು ಆಹ್ವಾನ ಮಾಡುತ್ತೇನೆ ಎಂದು **ಅಹಂ ಹ್ವಯೇ** ಎಂಬ ಎರಡು ಪದಗಳನ್ನು ಅಧ್ಯಾಹಾರ ಮಾಡಿರುವರು.

**ಇಂದ್ರವಾಯೂ**-ಇಂದ್ರಶ್ಚ ವಾಯುಶ್ಚೇಂದ್ರವಾಯೂ | ದೇವತಾದ್ವಂದ್ವೇ | ಇಂದ್ರ ಮತ್ತು ವಾಯು ಎಂಬ ಎರಡು ದೇವತೆಗಳನ್ನು ದ್ವಿವಚನಾಂತವಾದ ಒಂದೇ ಶಬ್ದದಿಂದ ನಿರ್ದೇಶಿಸಲಾಗಿದೆ.

**ಮಿತ್ರಾ**— ಈ ಶಬ್ದಕ್ಕೆ ಇಲ್ಲಿ ದ್ವಿತೀಯಾವಿಭಕ್ತಿಯ ಏಕವಚನಾರ್ಥವನ್ನು ಹೇಳಬೇಕು.

**ಆದಿತ್ಯಾನ್**—ಅದಿತೇರಪತ್ಯಾನ್ಯಾದಿತ್ಯಾಃ | ದೇವಮಾತೆಯಾದ ಅದಿತಿಯ ಮಕ್ಕಳಿಗೆ ಆದಿತ್ಯರೆಂದು ಹೆಸರು. ದೇವತೆಗಳು ಅಥವಾ ದ್ವಾದಶಾದಿತ್ಯರು ಎಂದರ್ಥವು.

**ಮಾರುತಂ**—ಮಾರುತಾಂ ಎಂಬ ಷಷ್ಠೀಬಹುವಚನದ ಅಂತ್ಯಾಕ್ಷರವು ಛಂದಸ್ಸಿನ ಅನುಕೂಲಕ್ಕಾಗಿ ಹ್ರಸ್ವವಾಗಿರುವುದು.

**ಮಾರುತಂ ಗಣಂ**—ಮರುದ್ದೇವತೆಗಳ ಸಮೂಹವು. ಪುರಾಣಾದಿಗಳಲ್ಲಿ ಮರುದ್ದೇವತೆಗಳು ಏಳು ಮಂದಿ (ಸಪ್ತಮರುತ್ತುಗಳು) ಇರುವರೆಂದು ಹೇಳಿದೆ. ಋಗ್ವೇದದಲ್ಲಿಯೂ ಸಹ ಮರುತ್ ಶಬ್ದವು ಸಾಧಾರಣ ವಾಗಿ ಬಹುವಚನದಲ್ಲಿಯೇ ಉಪಯೋಗಿಸಲ್ಪಡುವುದು. **ಮಾರುತಂ ಗಣಂ** ಎಂದರೆ ಮರುದ್ದೇವತೆಗಳ ಗುಂಪು, ಸಮೂಹವು ಎಂದರ್ಥವು.

### ವ್ಯಾಕರಣಪ್ರಕ್ರಿಯಾ

**ಇನ್ದ್ರಶ್ಚ ವಾಯುಶ್ಚ**—ಇನ್ದ್ರ ವಾಯೂ ಎಂದು ದ್ವಂದ್ವಸಮಾಸ. **ದೇವತಾದ್ವಂದ್ವೇಚ** (ಪಾ.ಸೂ. ೬-೩-೨೬) ದೇವತಾಬೋಧಕ ಪದಗಳನ್ನೊಳಗೊಂಡ ದ್ವಂದ್ವಸಮಾಸದಲ್ಲಿ ಉತ್ತರಪದದ ಹಿಂದೆ ಇರುವ ಪೂರ್ವ ಪದಕ್ಕೆ ಆನಙ್ ಆದೇಶ ಬರುವುದು ಎಂದು ಸೂತ್ರಾರ್ಥ. ಇಂದ್ರ ವಾಯು, ಶಬ್ದಗಳು ದೇವತೆಯನ್ನು ಬೋಧಿಸ ತಕ್ಕವು. ಆದ್ದರಿಂದ ಇಲ್ಲಿ ವಾಯು ಎಂಬ ಉತ್ತರಪದದ ಹಿಂದೆ ಇರುವ ಇನ್ದ್ರ ಪದಕ್ಕೆ ಆನಙಾದೇಶ ಪ್ರಾಪ್ತ ವಾಗುವುದು. ಆದರೂ **ಉಭಯತ್ರ ವಾಯೋಃ ಪ್ರತಿಷೇಧೋ ವಕ್ತವ್ಯಃ** ( ಪಾ. ಸೂ. ೬-೩-೨೬-೧) ಎರಡು ಕಡೆಯಲ್ಲಿಯೂ ಅಂದರೆ ವಾಯುಪದವು ಪೂರ್ವಪದವಾಗಿದ್ದರೂ ಸರಿಯೆ, ಉತ್ತರ ಪದವಾಗಿದ್ದರೂ ಸರಿಯೆ, ಆ ದ್ವಂದ್ವಸಮಾಸದಲ್ಲಿ ಆನಙ್ ಆದೇಶಕ್ಕೆ ಪ್ರತಿಷೇಧವನ್ನು ಹೇಳಬೇಕು ಎಂಬ ವಾರ್ತಿಕದಿಂದ ಪ್ರತಿಷೇಧ ಬರುವುದರಿಂದ ಆನಙ್ ಆದೇಶ ಬರುವುದಿಲ್ಲ. **ದೇವತಾದ್ವಂದ್ವೇ ಚ** (ಪಾ. ಸೂ. ೬-೨-೧೪೧) ದೇವತಾ ಬೋಧಕ ಪದಗಳನ್ನೊಳಗೊಂಡ ದ್ವಂದ್ವಸಮಾಸದಲ್ಲಿ ಪೂರ್ವೋತ್ತರ ಪದಗಳೆರಡೂ ಏಕ ಕಾಲದಲ್ಲಿ ಪ್ರಕೃತಿಸ್ವರ ವನ್ನು ಹೊಂದುವುವು ಎಂಬುದರಿಂದ ಪೂರ್ವಪದ ಉತ್ತರ ಪದಗಳೆರಡಕ್ಕೂ ಪ್ರಕೃತಿಸ್ವರ ಪ್ರಾಪ್ತವಾಗುವುದು. ಇನ್ದ್ರಶಬ್ದ ರನ್ ಪ್ರತ್ಯಯಾನ್ತವಾದ್ದರಿಂದ ಆದ್ಯುದಾತ್ತ. ವಾಯು ಶಬ್ದವು ಉಣ್ ಪ್ರತ್ಯಯಾಂತ. ಪ್ರತ್ಯಯಸ್ವರ ದಿಂದ ಅಂತೋದಾತ್ತ. ಈ ಸ್ವರಗಳೇ ಬರಬೇಕಾಗಿ ಬಂದರೆ **ನೋತ್ತರಪದೇಽನುದಾತ್ತಾದಾವಪೃಥಿವೀರುದ್ರ ಪೂಷಮನ್ಥಿಷು** (ಪಾ. ಸೂ. ೬-೨-೧೪೨) ಪೃಥಿವೀ ಮೊದಲಾದ ಶಬ್ದಗಳನ್ನುಳಿದು ಅನುದಾತ್ತಾದಿಯಾದ ಉತ್ತರಪದವು ಪರದಲ್ಲಿದ್ದರೆ ಪೂರ್ವೋಕ್ತವಾದ ಸ್ವರ ಬರುವುದಿಲ್ಲ ಎಂಬುದರಿಂದ ನಿಷೇಧ ಬರುವುದು. ಆದ್ದರಿಂದ ಉಭಯಪದ ಪ್ರಕೃತಿಸ್ವರ ಬರುವುದಿಲ್ಲ. **ಸಮಾಸಸ್ಯ** (ಪಾ ಸೂ. ೬-೧-೨೨೩) ಎಂಬುದರಿಂದ ಅಂತೋದಾತ್ತವೇ ಬರುವುದು. ಮಿಕ್ಕ ವರ್ಣಗಳು ಶೇಷನಿಘಾತದಿಂದ ಅನುದಾತ್ತಗಳಾಗುವುವು.

**ಬೃಹಸ್ಪತಿಮ್**-ಬೃಹತೀ ಎಂದರೆ ವಾಕ್, ಬೃಹತ್ಯಾಃಪತಿಃ ಬೃಹಸ್ಪತಿಃ ಎಂದು ವಿಗ್ರಹ, ಬೃಹತೀ ಪತಿ ಎಂದಿರುವಾಗ ಪತಿ ಶಬ್ದದ ಹಿಂದೆ ಇರುವ ಬೃಹತೀ ಶಬ್ದಕ್ಕೆ **ಕುಕ್ಕುಟ್ಯಾದೀನಾಮಂಡಾದಿಷು** (ಪಾ.ಸೂ. ೬-೩ ೪೨-೧. ವಾ) ಅಂಡಾದಿ ಶಬ್ದಗಳು ಪರದಲ್ಲಿರುವಾಗ ಕುಕ್ಕುಟೀ ಮೊದಲಾದ ಶಬ್ದಗಳಿಗೆ ಪುಂವದ್ಭಾವ ಬರುವುದು ಎಂಬುದರಿಂದ ಪುಂವದ್ಭಾವ ಬರುವುದು. ಬಾದರೆ ಙೀಪ್ ನಿವೃತ್ತವಾಗುವುದು. ಬೃಹತ್+ಪತಿ ಈಗ **ತದ್ಬೃಹತೋಃಕರಪತ್ಯೋಶ್ಚೋರದೇವತಯೋಸ್ಸುಟ್ತಲೋಪಶ್ಚ** (ಗ. ಸೂ. ೬-೧-೧೫೭) ತದ್, ಬೃಹತ್ ಶಬ್ದಗ ಳಿಗೆ ಕ್ರಮವಾಗಿ ಕರ ಪತಿ ಎಂಬಿವು ಪರದಲ್ಲಿದ್ದರೆ ದಕಾರ ತಕಾರಗಳಿಗೆ ಲೋಪವೂ, ಕರ, ಪತಿ ಶಬ್ದಗಳಿಗೆ ಸುಟ್ ಆಗಮವೂ ಬರುವುದು ಎಂಬುದರಿಂದ ಬೃಹತ್ ಶಬ್ದದ ತಕಾರಕ್ಕೆ ಲೋಪವೂ, ಪತಿ ಶಬ್ದಕ್ಕೆ ಸುಟ್ ಆಗಮವೂ ಬರುವುದು. ಸುಟ್, ಟಿತ್. ಆದ್ದರಿಂದ **ಆದ್ಯನ್ತೌ ಟಕಿತೌ** (ಪಾ. ಸೂ. ೧-೧-೪೬) ಎಂಬುದರಿಂದ ಪತಿ ಶಬ್ದದ ಆದ್ಯವಯವವಾಗಿ ಬರುವುದು- ಬೃಹಸ್ಪತಿ ಎಂದಾಗುವುದು. ಕುಕ್ಕುಟ್ಯಾದೀನಾಮಂಡಾದಿಷು, ಎಂಬು

ದನ್ನು ಮಹಾಭಾಷ್ಯಕಾರರು ಪ್ರತ್ಯಾಖ್ಯಾನ ಮಾಡಿರುವರು. ಆ ಪಕ್ಷದಲ್ಲಿ ಬೃಹತಃ ವಾಕ್ಸಮೂಹಸ್ಯ, ಪತಿಃ ಎಂದು ವಿಗ್ರಹ ಮಾಡಿಕೊಳ್ಳಬೇಕು. ಬೃಹತ್ಯಾಃಪತಿಃ ಎಂದು ವಿಗ್ರಹವು ವಾಗ್ವೈ (ವಾಗ್ವೈ) ಬೃಹತೀ, ತಸ್ಯಾ, ಏಷ ಪತಿಃ, ಎಂಬ ಛಂದೋಗಬ್ರಾಹ್ಮಣವನ್ನು ಅನುಸರಿಸಿ ಉಕ್ತವಾಗಿರುವುದು. ಬೃಹತ್ ಶಬ್ದವು ಆದ್ಯುದಾತ್ತ ವೆಂದು ಕೆಲವರು ಹೇಳುವರು ಎಂದು ವಾಮನರು ಅಭಿಪ್ರಾಯ ಪಡುವರು. ಆದ್ದರಿಂದ ಬೃಹತ್ ಶಬ್ದ ಆದ್ಯು ದಾತ್ತ. ಪಾ ರಕ್ಷಣೇ ಧಾತು. ಪಾತೀತಿ ಪತಿಃ, (ರಕ್ಷಿಸುವವನು) ಎಂದು ವಿಗ್ರಹ. **ಪಾತೇರ್ಡತಿಃ** (ಉ.ಸೂ. ೪-೫೭) ಪಾರಕ್ಷಣೇ ಎಂಬ ಧಾತುವಿನ ಮುಂದೆ ಡತಿ ಪ್ರತ್ಯಯ ಬರುವುದು ಎಂಬುದರಿಂದ ಡತಿ ಪ್ರತ್ಯಯ ಬಂದರೆ, ಪಾ+ ಅತಿ. ಪ್ರತ್ಯಯವು ಡಿತ್ತಾದ್ದರಿಂದ ಪಾ ಶಬ್ದದ (ಟಿಗೆ) ಆಕಾರಕ್ಕೆ ಲೋಪ, ಪ್+ಅತಿ=ಪತಿ ಎಂದು ಆಗುವುದು. **ಆದ್ಯುದಾತ್ತಶ್ಚ** (ಪಾ. ಸೂ. ೩-೧-೩) ಎಂಬ ಪ್ರತ್ಯಯ ಸ್ವರದಿಂದ ಇದು ಆದ್ಯುದಾತ್ತ, ಇವೆರಡಕ್ಕೂ ಸಮಾಸ ಬಂದರೆ **ಉಭೇವನಸ್ಪತ್ಯಾದಿಷುಯುಗಪತ್** ( ಪಾ. ಸೂ. ೬-೨-೧೪೦) ಎಂಬುದರಿಂದ ಎರಡು ಪದಗಳಿಗೂ ಪ್ರಕೃತಿಸ್ವರವೇ ಬರುವುದು. ಬೃಹತ್ ಶಬ್ದದ ಆಕಾರಕ್ಕೆ **ಉದಾತ್ತಸ್ವರಿತಪರಸ್ಯಸನ್ನತರಃ** (ಪಾ. ಸೂ. ೧-೨-೪೦) ಎಂಬುದರಿಂದ ಅನುದಾತ್ತತರಸ್ವರ ಬರುವುದು.

**ಮಿತ್ರಾ** — ಮಿತ್ರ ಶಬ್ದವು ಪ್ರಾತಿಪದಿಕಸ್ವರದಿಂದ ಅಂತೋದಾತ್ತ. ಇದರ ಮುಂದೆ ದ್ವಿತೀಯಾ ವಿಭಕ್ತಿ ಏಕವಚನ ಅಮ್. ಅದಕ್ಕೆ **ಸುಪಾಂಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಆಚ್ ಆದೇಶ, ಮಿತ್ರ+ಆ ಸವರ್ಣದೀರ್ಘ. ಏಕಾದೇಶ ಉದಾತ್ತೇನೋದಾತ್ತಃ, (ಪಾ. ಸೂ. ೮-೨-೫) ಎಂಬುದರಿಂದ ಏಕಾ ದೇಶವು ಉದಾತ್ತ.

ಆದಿತ್ಯಾನ್—ಅದಿತೇಃ ಅಪತ್ಯಾನಿ ಪುಮಾಂಸಃ ಆದಿತ್ಯಾಃ ಎಂದು ವಿಗ್ರಹ. **ದಿತ್ಯದಿತ್ಯಾದಿತ್ಯ ಪತ್ಯುತ್ತರಪದಾಣ್ಣ್ಯಃ** (ಪಾ. ಸೂ. ೪-೧.೮೫) ಈ ಸೂತ್ರವನ್ನಾರಂಭಿಸಿ **ತೇನ ದೀವ್ಯತಿ ಖನತಿಜಯತಿಜಿತಮ್** (ಪಾ. ಸೂ. ೪-೪-೪೨) ಎಂಬ ಸೂತ್ರದ ವರೆಗೆ ಅಷ್ಟಾಧ್ಯಾಯಿಯಲ್ಲಿ ನಿರ್ದಿಷ್ಟವಾದ ಅಪತ್ಯಾದ್ಯರ್ಥಗಳಲ್ಲಿ ದಿತಿ, ಅದಿತಿ, ಆದಿತ್ಯ, ಪತಿ ಶಬ್ದವನ್ನು ಉತ್ತರಪದದಲ್ಲಿ ಹೊಂದಿರುವ ಶಬ್ದ ಇವುಗಳ ಮುಂದೆ **ಣ್ಯತ್** ಪ್ರತ್ಯಯ ಬರುವುದು ಎಂಬುದರಿಂದ ಅದಿತಿ ಶಬ್ದಪ್ರಕೃತಿಕವಾದ ಷಷ್ಠ್ಯಂತದ ಮುಂದೆ ಣ್ಯತ್, ಬಂದರೆ ಅದಿತಿ+ಙಸ್-ಣ್ಯ ತದ್ಧಿ ತಾಂತವಾದ್ದರಿಂದ ಪ್ರಾತಿಪದಿಕ ಸಂಜ್ಞೆ. ಸುಪ್ಪಿಗೆ ಲುಕ್, ಅದಿತಿ+ಯ. **ಯಸ್ಯೇತಿಚ** (ಪಾ. ಸೂ. ೬-೪-೧೪೮) ಎಂಬುದರಿಂದ ಇಕಾರಲೋಪ. **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ, ಆದಿತ್ಯ ಎಂದಾಗುವುದು. ಇದು ಪ್ರತ್ಯಯಸ್ವರದಿಂದ ಅಂತೋದಾತ್ತ, ದ್ವಿತೀಯಾ ಬಹುವಚನ ಶಸ್, ಪೂರ್ವಸ ವರ್ಣ ದೀರ್ಘ. **ತಸ್ಮಾಚ್ಛಸೋನಃಪುಂಸಿ** (ಪಾ.ಸೂ. ೬-೧-೧೦೩) ಎಂಬುದರಿಂದ ಸಕಾರಕ್ಕೆ ನಕಾರ, ಏಕಾದೇಶವು ಉದಾತ್ತವಾಗುವುದು. ಆದಿತ್ಯಾನ್ ಎಂದು ರೂಪವು.

**ಮಾರುತಮ್**—**ಮೃಗ್ರೋರುತಿಃ** ( ಉ. ಸೂ. ೧-೯೪) ಮೃಙ್ ಪ್ರಾಣತ್ಯಾಗೇ ಗ್ರ್ಯ ನಿಗರಣೇ, ಈ ಧಾತುಗಳ ಮುಂದೆ ಉತಿಪ್ರತ್ಯಯ ಬರುವುದು ಎಂಬುದರಿಂದ ಮೃ, ಧಾತುವಿನ ಮುಂದೆ ಉತಿಪ್ರತ್ಯಯ, ಮೃ+ ಉತ್ ಗುಣರಪರತ್ವ, ಇಲ್ಲಿ ಪ್ರತ್ಯಯಸ್ವರದಿಂದ ಉಕಾರ ಉದಾತ್ತ. ಶೇಷನಿಘಾತದಿಂದ ಅಕಾರ ಅನುದಾತ್ತ. ಈ ರೀತಿಯಾಗಿ ಮರುತ್ ಶಬ್ದ ಅನುದಾತ್ತಾದಿ. ಮರುತಾಂ ವಿಕಾರಃ ಎಂದು ವಿಗ್ರಹ. **ಅನುದಾತ್ತಾ ದೇಶ್ಚ** (ಪಾ. ಸೂ. ೪-೧-೮೫) ಅನುದಾತ್ತಾದಿಯಾದ ಶಬ್ದ ಪ್ರಕೃತಿಕವಾದ ಷಷ್ಠ್ಯಂತದ ಮುಂದೆ ವಿಕಾರ, ಅವ

ಯವ ಎಂಬ ಅರ್ಥಗಳಲ್ಲಿ ಅಞ್ ಪ್ರತ್ಯಯ ಬರುವುದು ಎಂಬುದರಿಂದ ಅಞ್ ಬರುವುದು. ಮರುತ್+ಅ ಆದಿವೃದ್ಧಿ, ಮಾರುತ. ಪ್ರತ್ಯಯವು ಞಿತ್ ಆದ್ದರಿಂದ ಞ್ನಿತ್ಯಾದಿರ್ನಿತ್ಯಮ್ (ಪಾ. ಸೂ. ೬-೧,೧೯೭) ಎಂಬುದರಿಂದ ಮಾರುತ ಶಬ್ದ ಆದ್ಯುದಾತ್ತ || ೩ ||

॥ ಸಂಹಿತಾಪಾಠಃ ॥

ಪ್ರ ವೋ᳚ ಭ್ರಿಯಂತ॒ ಇಂದ॑ವೋ ಮತ್ಸ॒ರಾ ಮಾ᳚ದಯಿ॒ಷ್ಣವಃ॑ ।
ದ್ರ॒ಪ್ಸಾ ಮಧ್ವ॑ಶ್ಚಮೂ॒ಷದಃ॑ ॥ ೪ ॥

॥ ಪದಪಾಠಃ ॥

ಪ್ರ । ವಃ॒ । ಭ್ರಿ॒ಯಂತೇ॒ । ಇಂದ॑ವಃ । ಮ॒ತ್ಸ॒ರಾಃ । ಮಾ॒ದ॒ಯಿ॒ಷ್ಣವಃ॑ ॥
ದ್ರ॒ಪ್ಸಾಃ । ಮಧ್ವಃ॑ । ಚ॒ಮೂ॒ಽಸದಃ॑ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾದಿದೇವಾ ವೋ ಯುಷ್ಮದರ್ಥಮಿಂದವಃ ಸೋಮಾಃ ಪ್ರ ಭ್ರಿಯಂತೇ । ಪ್ರಕರ್ಷೇಣ ಸಂಪಾದ್ಯಂತೇ । ಕೀದೃಶಾಃ । ಮತ್ಸರಾಸ್ತೃಪ್ತಿಕರಾಃ । ಮತ್ಸರಃ ಸೋಮೋ ಮದಂತೇಸ್ತೃಪ್ತಿಕರ್ಮಣಃ । ನಿ. ೨-೫ । ಇತಿ ಯಾಸ್ಕಃ । ಮಾದಯಿಷ್ಣವೋ ಹರ್ಷಹೇತವೋ ದ್ರಪ್ಸಾ ಬಿಂದುರೂಪಾ ಮಧ್ವೋ ಮಧುರಾಃ ಚಮೂಷದಶ್ಚಮೂಷು ಚಮಸಾದಿಪಾತ್ರೇಷ್ವವಸ್ಥಿತಾಃ ॥ ಪ್ರ । ವ್ಯವಹಿತಾಶ್ಚ । ಪಾ. ೧-೪-೮೨ । ಇತಿ ವ್ಯವಹಿತಪ್ರಯೋಗಃ । ಭ್ರಿಯಂತೇ । ಭೃಞೋ ಯಕಿ ರಿಙ್ ಶಯಗ್ಲಿಙ್‍ಕ್ಷು । ಪಾ. ೭-೪-೨೮ । ಇತಿ ರಿಙಾದೇಶಃ । ಹೃಞೋ ವಾ । ಹೃಗ್ರಹೋರ್ಭಶ್ಛಂದಸೀತಿ ಹಕಾರಸ್ಯ ಭಕಾರಃ । ಇಂದವಃ । ಉಂದೀ ಕ್ಲೇದನೇ । ಉಂದಂತಿ ಪಾತ್ರಾಣೀತಿ । ನಿದಿತ್ಯನುವೃತ್ತಾವುಂದೇರಿಚ್ಚಾದೇಃ । ಉ.೧-೧೩ । ಇತ್ಯುಪ್ರತ್ಯಯ ಆದೇರಿಕಾರಶ್ಚ । ನಿತ್ವಾದಾದ್ಯುದಾತ್ತಃ । ಮತ್ಸರಾಃ । ಮದ ತೃಪ್ತಿಯೋಗೇ । ಚಿದಿತ್ಯನುವೃತ್ತೌ ಕೃಧೂಮದಿಭ್ಯಃ ಕಿತ್ । ಉ. ೩-೭೩ । ಇತಿ ಸರಪ್ರತ್ಯಯಃ ತಿತುತ್ರತಥಸಿಸುಸರಕಸೇಷು ಚೇತೀಟ್ ಪ್ರತಿಷೇಧಃ । ಚಿತ್ತ್ವಾದಂತೋದಾತ್ತಃ । ಮಾದಯಿಷ್ಣವಃ । ಮದೀ ಹರ್ಷಗ್ಲಪನಯೋಃ । ಮದೇರ್ಣ್ಯಂತಾಣ್ಣೇಶ್ಛಂದಸಿ। ಪಾ.೩-೨-೧೩೭ । ಇತೀಷ್ಣುಚ್ । ಣೇರನಿಟೀತಿ ಣಿಲೋಪೇ ಪ್ರಾಪ್ತೇಽಯಾಮಂತಾಲ್ವಾಯ್ಯೇತ್ನ್ವಿಷ್ಣುಷು। ಪಾ. ೬-೪-೫೫ । ಇತ್ಯಯಾದೇಶಃ । ಚಿತ್ತ್ವಾದಂತೋದಾತ್ತಃ । ಮಧ್ವಃ । ಮಧುಶಬ್ದ ಆದ್ಯುದಾತ್ತ ಉಕ್ತಃ । ಮಧುಶಬ್ದಸ್ಯ ವ್ಯತ್ಯಯೇನ ಪುಲ್ಲಿಂಗತ್ವಂ । ಸಂಜ್ಞಾಪೂರ್ವಕೋ ವಿಧಿರನಿ-

ತ್ಯ ಇತಿ ಜಸಿ ಚ । ಪಾ. ೭-೩-೧೦೯ । ಇತಿ ಗುಣೋ ನ ಭವತಿ । ಚಮೂಷದಃ । ಚಮು ಛಮು ಜಮು ಝಮು ಅದನೇ । ಚಮ್ಯತೇ ಭಕ್ಷ್ಯತೇ ಯೇಷು ಚಮಸೇಷು ತೇ ಚಮ್ವಃ । ಕೃಷಿಚಮಿತಾಭ್ಯಾದಿನಾ । ಉ.೧-೮೨ । ಊಃ । ತತ್ರ ಸೀದಂತೀತಿ ಚಮೂಷದಃ । ಸತ್ಸೂದ್ವಿಷೇತ್ಯಾದಿನಾ । ಪಾ. ೩-೨-೬೧ । ಕ್ವಿಪ್ । ಸುಷಾಮಾದೇರಾಕೃತಿಗಣತ್ವಾತ್ ಷತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರಾದಿ ದೇವತೆಗಳೇ) ವಃ—ನಿಮಗೋಸ್ಕರವಾಗಿ । ಮತ್ಸರಾಃ——ತೃಪ್ತಿಯನ್ನು ಕೊಡತಕ್ಕ । ಮಾದಯಿಷ್ಣವಃ—ಹರ್ಷದಾಯಕಗಳಾದ । ದ್ರಪ್ಸಾಃ—ಬಿಂದುರೂಪಗಳಾದ । ಮಧ್ವಃ—ಮಧುರಗಳಾದ । ಚಮೂಷದಃ—ಚಮಸ ಪಾತ್ರೆಗಳಲ್ಲಿರತಕ್ಕ । ಇಂದವಃ—ಸೋಮರಸಗಳು । ಪ್ರಭೃಯಂತೇ—ಚನ್ನಾಗಿ ಸಿದ್ಧಪಡಿಸಲ್ಪಡುತ್ತಲಿವೆ.

॥ ಭಾವಾರ್ಥ ॥

ಎಲೈ ಇಂದ್ರಾದಿ ದೇವತೆಗಳೇ, ನಿಮಗೋಸ್ಕರವಾಗಿ ಮಧುರವಾದ, ನಿಮಗೆ ಹರ್ಷಜನಕವಾಗಿಯೂ, ತೃಪ್ತಿದಾಯಕವಾಗಿಯೂ ಇರುವ ಮತ್ತು ಬಿಂದುರೂಪವಾಗಿರುವ ಸೋಮರಸಗಳು ಶೇಖರಿಸಲ್ಪಡುತ್ತಿವೆ. ಅಥವಾ ಸಿದ್ಧಪಡಿಸಲ್ಪಡುತ್ತವೆ.

## English Translation.

For you (gods) are poured out these (soma) juices, satisfying, exhilarating, sweet, falling in drops or standing in the cup.

॥ ವಿಶೇಷವಿಷಯಗಳು ॥

ಮತ್ಸರಾಃ-ಸೋಮೋ ಮಂದತೇಸ್ತೃಪ್ತಿಕರ್ಮಣಃ (ನಿ. ೨-೫) ಹರ್ಷವನ್ನುಂಟುಮಾಡುವುದರಿಂದ ಸೋಮರಸಕ್ಕೆ ಮತ್ಸರ ಎಂದು ಹೇಳುವುದುಂಟು.

ಮಾದಯಿಷ್ಣವಃ—ಮದೀ ಹರ್ಷಗ್ಲಪನಯೋಃ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಹರ್ಷಹೇತುವಾದ ಎಂದರ್ಥವು.

ದ್ರಪ್ಸಾಃ—ಬಿಂದುರೂಪಾಃ, ಸೋಮಲತೆಯನ್ನು ಜಜ್ಜಿ ಹಿಂಡುವಾಗ ರಸವು ಜಿನುಗುತ್ತಾ ತೊಟ್ಟು ತೊಟ್ಟಾಗಿ ಬೀಳುವುದರಿಂದ ಬಿಂದುರೂಪ ಎಂದು ಹೇಳಲ್ಪಡುವುದು.

ಚಮೂಷದಃ—ಚಮ್ಯತೇ ಭಕ್ಷ್ಯತೇ ಯೇಷು ಚಮಸೇಷು ತೇ ಚಮ್ವಃ । ಚಮಸವೆಂಬ ಯಜ್ಞಪಾತ್ರೆಯಲ್ಲಿರುವ. ತಿನ್ನುವ ಅಥವಾ ಪಾನಮಾಡುವ ಪಾತ್ರೆಗೆ ಚಮಸ ಎಂದು ಚಮಸಶಬ್ದದ ನಿಷ್ಪತ್ತಿಯು. ಇಂತಹ ಪಾತ್ರೆಯಲ್ಲಿರುವ ಸೋಮರಸವು.

॥ ವ್ಯಾಕರಣಪ್ರಕ್ರಿಯಾ ॥

**ಪ್ರ--ವ್ಯವಹಿತಾಶ್ಚ** (ಪಾ. ಸೂ. ೧-೪-೮೨) ಛಂದಸ್ಸಿನಲ್ಲಿ ವ್ಯವಹಿತವಾಗಿಯೂ ಉಪಸರ್ಗಗಳು ಪ್ರಯೋಗಿಸಲ್ಪಡುವುವು ಎಂಬುದರಿಂದ ವ್ಯವಹಿತವಾಗಿ ಪ್ರಯುಕ್ತವಾಗಿರುವುದು.

ಭ್ರಿಯನ್ತೇ--ಭೃ ಭರಣೇ ಅಥವಾ ಡುಭೃಞ್ ಧಾರಣಪೋಷಣಯೋಃ, ಇವುಗಳ ಮುಂದೆ ಕರ್ಮಣಿ ಲಟ್--ಇದರ ಸ್ಥಾನದಲ್ಲಿ **ಭಾವಕರ್ಮಣೋಃ** (ಪಾ. ಸೂ. ೧-೩-೧೩) ಭಾವಾರ್ಥ ಕರ್ಮಾರ್ಥಗಳಲ್ಲಿರುವ ಲಕಾರದ ಸ್ಥಾನದಲ್ಲಿ ಆತ್ಮನೇ ಪದ ಬರುವುದು ಎಂಬುದರಿಂದ ಆತ್ಮನೇ ಪದ ಬರುವುದು. ಪ್ರಥಮಪುರುಷ ಬಹುವಚನ ಝ ಪ್ರತ್ಯಯ. ಭೃ+ಝ **ಸಾರ್ವಧಾತುಕೇಯಕ್** (ಪಾ. ಸೂ. ೩-೧-೬೭) ಎಂದು ಭಾವ, ಕರ್ಮಾರ್ಥಕವಾದ ಸಾರ್ವ ಧಾತುಕಪರವಾಗಿರುವಾಗ ಧಾತುವಿನ ಮುಂದೆ ಯಕ್ ಪ್ರತ್ಯಯ, ಭೃ+ಯ+ಝ. **ಟಿತಆತ್ಮನೇಪದಾನಾಂ-ಟೇರೇ** (ಪಾ. ಸೂ ೩-೪-೧೭) ಎಂಬುದರಿಂದ ಟಿಗೆ ಏಕಾರಾದೇಶ. **ಝೋಽನ್ತಃ** (ಪಾ.ಸೂ.೭-೧-೩) ಎಂಬುದರಿಂದ ಝಕಾರಕ್ಕೆ ಅನ್ತ್ ಆದೇಶ. ಭೃ+ಯ+ಅನ್ತೇ **ರಿಙ್‌ಶಯಗ್ಲಿಙ್ಕ್ಷು** ( ಪಾ. ಸೂ. ೭-೪-೨೮) ಶ ಎಂಬ ವಿಕರಣ ಪ್ರತ್ಯಯ. ಯಕ್, ಯಾದಿಯಾದ ಆರ್ಧಧಾತುಕ, ಲಿಙ್ ಇವು ಪರದಲ್ಲಿರುವಾಗ ಹ್ರಸ್ವಋಕಾರಕ್ಕೆ ರಿಙ್ ಆದೇಶ ಬರುವುದು ಎಂಬುದರಿಂದ ಋಕಾರಕ್ಕೆ ರಿಙ್ ಆದೇಶ- ಭ್ರಿಯತೇ ಎಂದಾಗುವುದು. ಯಕ್ ಕಿತ್ತು ಆದ್ದರಿಂದ ಗುಣ ಬರುವುದಿಲ್ಲ. ಅಥವಾ ಹೃಞ್ ಹರಣೇ ಧಾತುವಿನ ಮುಂದೆ ಕರ್ಮಣಿ ಲಕಾರ ಬಂದರೆ ಹಿಂದೆ ಹೇಳಿದಂತೆ ಹ್ರಿಯನ್ತೇ ಎಂದಾಗುವುದು. ಈಗ **ಹೃಗ್ರಹೋರ್ಭಶ್ಛಂದಸಿ** (ಪಾ. ಸೂ. ೮-೨-೩೨-೧) ಎಂಬುದ ರಿಂದ ಹಕಾರಕ್ಕೆ ಭಕಾರಾದೇಶ, ಭ್ರಿಯನ್ತೇ ಎಂದಾಗುವುದು.

ಇನ್ದವಃ--ಉನ್ದೀ ಕ್ಲೇದನೇ ಧಾತು. ಉನ್ದನ್ತಿ ಪಾತ್ರಾಣಿ (ಪಾತ್ರೆಗಳನ್ನು ನೆನೆಸುವುವು) ಇತಿ ಇನ್ದವಃ **ಉನ್ದೇರಿಚ್ಚಾದೇಃ** (ಉ. ಸೂ. ೧-೧೨) ಉನ್ದೀಕ್ಲೇದನೇ ಧಾತುವಿನ ಮುಂದೆ ಉತ್ ಪ್ರತ್ಯಯ ಬರುವುದು. ಅದು ನಿತ್ತಾಗುವುದು. ಉನ್ದೀಧಾತುವಿನ ಆದ್ಯಕ್ಷರವಾದ ಉಕಾರಕ್ಕೆ ಇಕಾರಾದೇಶ ಬರುವುದು. ಎಂಬುದರಿಂದ ಉ ಪ್ರತ್ಯಯ ಇಕಾರಾದೇಶಗಳು ಬಂದರೆ ಇನ್ದು ಎಂದಾಗುವುದು. ನಿತ್ಸ್ವರ ಆದ್ಯುದಾತ್ತ ಬರುವುದು.

ಮತ್ಸರಾಃ—ಮದ ತೃಪ್ತಿಯೋಗೇ ಚುರಾದಿಧಾತು ಇದರ ಮುಂದೆ **ಕೃ ಧೂ ಮದಿಭ್ಯಃ ಕಿತ್** (ಉ. ಸೂ. ೩-೩೫೩) ಡುಕೃಞ್ ಕರಣೇ, ಧೂಞ್ ಕಂಪನೇ (ಮದೀ ಹರ್ಷೇ) ಮದ ತೃಪ್ತಿಯೋಗೇ ಇವುಗಳ ಮುಂದೆ ಸರ ಪ್ರತ್ಯಯ ಬರುವುದು, ಅದು ಕಿತ್ತು ಮತ್ತು ಚಿತ್ತು ಆಗುವುದು ಎಂಬುದರಿಂದ ಸರ ಪ್ರತ್ಯಯ. ಇದು ಆರ್ಧಧಾತುಕ- ಆದರೂ ತಿ, ತು, ತ್ರ, ತ, ಧ, ಸಿ, ಸು, ಸರ, ಕ, ಸೇಷು, ಚ (ಪಾ ಸೂ. ೭-೨-೯) ಎಂಬುದರಿಂದ ಇಡಾಗಮವು ಪ್ರತಿಷೇಧಿತವಾಗಿರುವುದರಿಂದ ಇಡಾಗಮ ಬರುವುದಿಲ್ಲ. ಚಿತ್ತಾದ್ದರಿಂದ ಚಿತಃ ಎಂಬುದರಿಂದ ಅಂತೋದಾತ್ತ ಬರುವುದು.

**ಮಾದಯಿಷ್ಣವಃ**--ಮದೀ ಹರ್ಷಗ್ಲಪನಯೋಃ ಧಾತು. ಇದರ ಮುಂದೆ ಹೇತುಮತಿಚ (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ಇದರ ಮುಂದೆ ಣೇಶ್ಛಂದಸಿ (ಪಾ. ಸೂ. ೩-೨ ೧೩೭) ಛಂದಸ್ಸಿನಲ್ಲಿ ಣಿಜನ್ತ ವಾದ ಧಾತುವಿನ ಮುಂದೆ ತಚ್ಛೀಲಾದ್ಯರ್ಥಗಳಲ್ಲಿ ಇಷ್ಣುಚ್ ಪ್ರತ್ಯಯ ಬರುವುದು ಎಂಬುದರಿಂದ ಇಷ್ಣುಚ್ ಬರುವುದು. ಮದ್+ಇ+ಇಷ್ಣು. ಣೇರನಿಟಿ (ಪಾ. ಸೂ. ೬-೪-೫೧) ಎಂಬುದರಿಂದ ಣಿಗೆ ಲೋಪವು ಪ್ರಾಪ್ತ ವಾಗುವುದು. ಆದರೂ **ಅಯಾಮನ್ತಾಲ್ವಾಯ್ಯೇತ್ನ್ವಿಷ್ಣುಷು** ( ಪಾ. ಸೂ. ೬-೪-೫೫ ) ಆಮ್, ಅನ್ತ, ಆಲು

ಆಯ್ಯ, ಇತ್ನು, ಇಷ್ಣು ಇವು ಪರವಾಗಿರುವಾಗ ಣಿಗೆ ಅಯ್ ಆದೇಶ ಬರುವುದು ಎಂಬುದರಿಂದ ಅಯ್ ಆದೇಶ ಬರುವುದು. ಮದ್+ಅಯ್+ಇಷ್ಣು. ಉಪಧಾವೃದ್ಧಿ. ಪ್ರಥಮಾ ಬಹುವಚನ ಮಾದಯಿಷ್ಣವಃ. ಚಿತ್ಸ್ವರ ಅನ್ತೋದಾತ್ತ ಬರುವುದು.

**ಮಧ್ವಃ**--೧೩ನೇ ಸೂಕ್ತ ಎರಡನೇ ಮಂತ್ರದಲ್ಲಿ ಮಧು ಶಬ್ದವು ಆದ್ಯುದಾತ್ತವು ಎಂದು ಹೇಳಲಾಗಿದೆ. ಮಧು ಶಬ್ದವು ಯದ್ಯಪಿ ನಪುಂಸಕಲಿಂಗ. ಆದರೂ ಇಲ್ಲಿ ವ್ಯತ್ಯಯದಿಂದ ಪುಲ್ಲಿಂಗವಾಗಿರುವುದು. ಇದರ ಮುಂದೆ ಜಸ್ ಇಟ್ಟರೆ ಮಧು+ಜಸ್. ಈಗ **ಜಸಿಚ** (ಪಾ. ಸೂ. ೭-೩-೧೦೯) ಜಸ್ ಪ್ರತ್ಯಯ ಪರದಲ್ಲಿರುವಾಗ ಇಗನ್ತವಾದ ಅಂಗಕ್ಕೆ ಗುಣ ಬರುವುದು ಎಂಬುದರಿಂದ ಗುಣಕ್ಕೆ ಪ್ರಾಪ್ತಿ ಇದೆ. ಆದರೂ ಅದು ಗುಣ ಎಂಬ ಸಂಜ್ಞೆ ಬೋಧಕ ಪದವನ್ನು ಮುನ್ನಿಟ್ಟು ಬರುವುದು. ಆದ್ದರಿಂದ **ಸಂಜ್ಞಾಪೂರ್ವಕೋವಿಧಿರನಿತ್ಯಃ** (ಪರಿಭಾ. ೯೩ ) ಎಂಬುದರಿಂದ ಅನಿತ್ಯವಾಗುವುದು. ಆದಕಾರಣ ಇಲ್ಲಿ ಬರುವುದಿಲ್ಲ.

**ಚಮೂಷದಃ**- ಚಮು ಛಮು, ಜಮು ಝಮು ಅದನೇ, ಧಾತು. **ಕೃಷಿಚಮಿತನಿಧನಿಸರ್ಜಿಖರ್ಜಿಭ್ಯ ಊಃ** (ಉ.ಸೂ.೧-೮೧) ಕೃಷ ವಿಲೇಖನೇ ಚಮು ಅದನೇ ತನು ವಿಸ್ತಾರೇ, ಧನ ಧಾನ್ಯೇ, ಸರ್ಜ ಸರ್ಜನೇ, ಖರ್ಜ ವ್ಯಥನೇ ಈ ಧಾತುಗಳ ಮುಂದೆ ಊ ಪ್ರತ್ಯಯ ಬರುವುದು ಎಂಬುದರಿಂದ ಚಮುಧಾತುವಿನ ಮುಂದೆ ಊ ಪ್ರತ್ಯಯ. ಚಮ್ಯತೇ ಭಕ್ಷ್ಯತೇ ಯೇಷು ಚಮಸೇಷು ತೇ ( ಯಾವ ಪಾತ್ರೆಗಳಲ್ಲಿ ತಿನ್ನಲಾಗುವುದೋ ಅವು.) ಚಮ್ವಃ ಚಮೂಷು ಸೀದನ್ತಿ ಇತಿ ಚಮೂಷದಃ **ಸತ್ಸೂದ್ವಿಷದ್ರುಹ ದುಹಯುಜವಿದಭಿದಚ್ಛಿದಜಿನೀರಾಜಾಮುಪಸರ್ಗೇಽಪಿಕ್ವಿಪ್** (ಪಾ. ಸೂ. ೩-೨-೬೧) ಷದ್ಲೃ ವಿಶರಣಾದೌ, ಷೂಙ್ ಪ್ರಾಣಿಗರ್ಭವಿಮೋಚನೇ ಅದಾದಿ-ದ್ವಿಷ ಅಪ್ರೀತೌ, ದ್ರುಹ ಜಿಘಾಂಸಾಯಾಂ, ದುಹ ಪ್ರಪೂರಣೇ, ಯುಜಿರ್ ಯೋಗೇ-ಯುಜ ಸಮಾಧೌ, ವಿದ ಜ್ಞಾನೇ, ವಿದ ವಿಚಾರಣೇ, ವಿದ ಸತ್ತಾಯಾಂ, ಭಿದಿರ್ ವಿದಾರಣೇ, ಛಿದಿರ್ ದ್ವೈಧೀಕರಣೇ, ಜಿ ಜಯೇ, ಣೀಞ್ ಪ್ರಾಪಣೇ, ರಾಜೃ ದೀಪ್ತೌ. ಈ ಧಾತುಗಳ ಮುಂದೆ ಉಪಸರ್ಗವಿದ್ದರೂ ಇಲ್ಲದಿದ್ದರೂ ಸುಂಬಂತವು ಉಪಪದವಾಗಿದ್ದರೆ ಕ್ವಿಪ್ ಬರುವುದು ಎಂಬುದರಿಂದ ಚಮೂಶಬ್ದೋಪಪದಕವಾದ ಸದ್ ಧಾತುವಿನ ಮುಂದೆ ಕ್ವಿಪ್ ಪ್ರತ್ಯಯ, ಚಮೂಸದ್ ಎಂದಿರುವಾಗ **ಸುಷಾಮಾದಿಷು ಚ** (ಪಾ. ಸೂ. ೮-೩-೯೮) ಸುಷಾಮಾದಿಯಲ್ಲಿ ಸೇರುವ ಶಬ್ದಗಳ ಸಕಾರಕ್ಕೆ ಷಕಾರ ಬರುವುದು ಎಂಬುದರಿಂದ ಚಮೂ ಸಕಾರಕ್ಕೆ ಷಕಾರ, ಸುಷಾಮಾದಿಯು ಆಕೃತಿಗಣ, ಆದ್ದರಿಂದ ಈ ಶಬ್ದವು ಅದಕ್ಕೆ ಸೇರುವುದು. **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಕೃದುತ್ತರಪದ ಪ್ರಕೃತಿಸ್ವರ ಬರುವುದು. ಉತ್ತರಪದವು ಧಾತುಸ್ವರದಿಂದ ಅಂತೋದಾತ್ತ. ಇದರ ಮುಂದೆ ಜಸ್. ಅದು ಅನುದಾತ್ತ. ಅದಕ್ಕೆ ಉದಾತ್ತಾದನುದಾತ್ತಸ್ಯ ಎಂಬುದರಿಂದ ಸ್ವರಿತ ಬರುವುದು ॥ ೪ ॥

॥ ಸಂಹಿತಾಪಾಠಃ ॥

ಈಳತೇ ತ್ವಾಮವಸ್ಯವಃ ಕಣ್ವಾಸೋ ವೃಕ್ತಬರ್ಹಿಷಃ ।
ಹವಿಷ್ಮಂತೋ ಅರಂಕೃತಃ ॥ ೫ ॥

|| ಪದಪಾಠಃ ||

ಈಳತೇ | ತ್ವಾಂ | ಅವಸ್ಯವಃ | ಕಣ್ವಾಸಃ | ವೃಕ್ತಽಬರ್ಹಿಷಃ ||
ಹವಿಷ್ಮಂತಃ | ಅರಂಽಕೃತಃ || ೫ ||

|| ಸಾಯಣಭಾಷ್ಯಂ ||

ಹೇ ಅಗ್ನೇ ತ್ವಾಮೀಳತೇ | ಋತ್ವಿಜಃ ಸ್ತುವಂತಿ | ಕೀದೃಶಾಃ | ಅವಸ್ಯವಃ | ಅವನಂ ರಕ್ಷಣಂ ತದ್ಧೇತೋರ್ದೇವಾನಿಚ್ಛಂತಃ | ಕಣ್ವಾಸೋ ಮೇಧಾವಿನೋ ವೃಕ್ತಬರ್ಹಿಷ ಆಸ್ತರಣಾರ್ಥಂ ಛಿನ್ನದರ್ಭಾ ಹವಿಷ್ಮಂತೋ ಹವಿರ್ಯುಕ್ತಾ ಅರಂಕೃತೋಽಲಂಕರ್ತಾರಃ || ಈಳತೇ | ಈಡ ಸ್ತುತೌ | ಅನುದಾತ್ತೇತ್ತ್ವಾಲ್ಲಟೋ ಝಃ | ಅದಿಪ್ರಭೃತಿಭ್ಯಃ ಶಪ ಇತಿ ಶಪೋ ಲುಕ್ | ಝಸ್ಯಾದೇಶಃ | ಟೇರೇತ್ವಂ | ತಾಸ್ಯನುದಾತ್ತೇದಿತ್ಯಾದಿನಾ ಲಸಾರ್ವಧಾತುಕಸ್ಯಾನುದಾತ್ತತ್ವಾದ್ಧಾತುಸ್ವರ ಏವ ಶಿಷ್ಯತೇ | ಅವಸ್ಯವಃ | ಅವಂತೀತ್ಯವಾ ದೇವಾಃ | ತಾನತಿಶಯೇನೇಚ್ಛಂತಿ | ಸುಪ ಆತ್ಮನಃ ಕ್ಯಚ್ | ಕ್ಯಚಿ ಚ | ಪಾ. ೭-೪-೩೩ | ಇತೀತ್ವಂ ನ ಭವತಿ | ನ ಛಂದಸ್ಯಪುತ್ರಸ್ಯ | ಪಾ ೭-೪-೩೫ | ಇತಿ ನಿಷೇಧಾತ್ | ಸರ್ವಪ್ರಾತಿಪದಿಕೇಭ್ಯೋ ಲಾಲಸಾಯಾಂ ಸುಗ್ವಕ್ತವ್ಯಃ | ಮ. ೭-೧-೫೧-೨ | ಇತಿ ಸುಕ್ | ಕ್ಯಾಚ್ಛಂದಸೀತ್ಯುಪ್ರತ್ಯಯಃ | ಅತೋ ಲೋಪಃ | ಪ್ರತ್ಯಯಸ್ವರೇಣಾಂತೋದಾತ್ತತ್ವಂ | ಕಣ್ವಾಸಃ | ಕಣ ಶಬ್ದಾರ್ಥಃ | ಕಣಂತಿ ಧ್ವನಂತಿ ಸ್ತೋತ್ರಾದಿಪಾಠೇನೇತಿ ಕಣ್ವಾ ಋತ್ವಿಜಃ | ಅಶಿಪ್ರುಷೀತ್ಯಾದಿನಾ ಕ್ವನ್ | ನಿತ್ತ್ವಾದಾದ್ಯುದಾತ್ತಃ | ಆಜ್ಜಸೇರಸುಕ್ | ಪಾ. ೭-೧-೫೦ | ಇತ್ಯಸುಕ್ | ವೃಕ್ತಬರ್ಹಿಷಃ | ವೃಕ್ತಮುಕ್ತಂ | ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ | ಹವಿಷ್ಮಂತಃ | ಹವಿರೇಷಾಮಸ್ತೀತಿ ಹವಿಷ್ಮಂತಃ | ತಸೌ ಮತ್ವರ್ಥ ಇತಿ ಭತ್ವೇನಾಪದತ್ವಾನ್ನ ರುತ್ವಂ | ಅರಂಕೃತಃ | ಅಲಂಕುರ್ವಂತೀತ್ಯರಂಕೃತಃ | ಕ್ವಿಪ್ಚೇತಿ ಕ್ವಿಪ್ | ಹ್ರಸ್ವಸ್ಯ ತುಕ್ | ಕಪಿಲಕಾದೀನಾಂ ಸಂಜ್ಞಾಛಂದಸೋರ್ವಾ ಲೋ ರತ್ವಮಾಪದ್ಯತೇ | ಪಾ. ೮-೨-೧೮-೩ | ಇತಿ ಲಕಾರಸ್ಯ ರೇಫಾದೇಶಃ ||

|| ಪ್ರತಿಪದಾರ್ಥ ||

(ಎಲೈ ಅಗ್ನಿಯೇ) ಅವಸ್ಯವಃ—ರಕ್ಷಣೆ ಮಾಡತಕ್ಕ ದೇವತೆಗಳ (ಸಹಾಯವನ್ನು) ಅಪೇಕ್ಷಿಸುವ | ವೃಕ್ತಬರ್ಹಿಷಃ—(ಆಸನಕ್ಕಾಗಿ) ಪರಿಷ್ಕರಿಸಿದ ದರ್ಭವುಳ್ಳ | ಹವಿಷ್ಮಂತಃ—ಹವಿಸ್ಸನ್ನು ಹಿಡಿದಿರುವ | ಅರಂಕೃತಃ—ಅಲಂಕಾರಗಳನ್ನು ಅರ್ಪಿಸುವ | ಕಣ್ವಾಸಃ—ಬುದ್ಧಿವಂತರಾದ ಅಥವಾ ಕಣ್ವಋಷಿಯ ವಂಶಸ್ಥರಾದ ಋತ್ವಿಕ್ಕುಗಳು | ತ್ವಾಂ—ನಿನ್ನನ್ನು | ಈಳತೇ——ಸ್ತೋತ್ರಮಾಡುತ್ತಾರೆ.

|| ಭಾವಾರ್ಥ ||

ಎಲೈ ಅಗ್ನಿಯೇ, ಋತ್ವಿಕ್ಕುಗಳು ತಮ್ಮ ಯಜ್ಞರಕ್ಷಣೆಗಾಗಿ ದೇವತೆಗಳ ಸಹಾಯವನ್ನು ಅಪೇಕ್ಷಿಸುತ್ತಾರೆ. ಅವರು ಸ್ತೋತ್ರ ಮಾಡುವುದರಲ್ಲಿ ನಿಪುಣರು. ದೇವತೆಗಳನ್ನು ಕರೆತರುವವನು ನೀನೇ ಆದ್ದರಿಂದ ಈಗ ನಿನ್ನನ್ನು ಸ್ತೋತ್ರಮಾಡುತ್ತಾರೆ. ನಿನ್ನ ಆಸನಕ್ಕಾಗಿ ದರ್ಭವನ್ನು ಪರಿಷ್ಕರಿಸಿದ್ದಾರೆ. ಹವಿಸ್ಸನ್ನೂ ಅಲಂಕಾರಗಳನ್ನೂ ಅರ್ಪಿಸುತ್ತಾರೆ. ದಯವಿಟ್ಟು ಬಾ.

## English Translation.

O Agni, the Kanvas (or the wise priests) desirous of your favour, having spread the sacrificial grass and carrying the oblations and ornaments are praising you.

॥ ವಿಶೇಷ ವಿಷಯಗಳು ॥

**ಅವಸ್ಯವಃ**— **ಅವನಂ ರಕ್ಷಣಂ ತದ್ಧೇತೂನ್ ದೇವಾನಿಚ್ಛಂತಃ । ಅವಂತೀತ್ಯವಾ ದೇವಾಃ ॥** ಮನುಷ್ಯರನ್ನು ರಕ್ಷಿಸುವುದರಿಂದ ದೇವತೆಗಳಿಗೆ **ಅವಾಃ** ಎಂದು ಹೆಸರು. ಆ ದೇವತೆಗಳನ್ನು ಅಪೇಕ್ಷಿಸುವವರಿಗೆ **ಅವಸ್ಯವಃ** ಎಂದು ಹೆಸರು.

**ಕಣ್ವಾಸಃ**—ಕಣ್ವಶಬ್ದದ ಬಹುವಚನವು. **ಕಣ್ವಾಃ** ಎಂಬುದರ ಪ್ರಾಚೀನ ಪ್ರಯೋಗವು. **ಕಣಂತಿ ಧ್ವನಂತಿ ಸ್ತೋತ್ರಾದಿಪಾಠೇನೇತಿ ಕಣ್ವಾಃ ಋತ್ವಿಜಃ ಮೇಧಾವಿನಃ ॥** ಸ್ತೋತ್ರಾದಿಗಳನ್ನು ಉಚ್ಚರಿಸುತ್ತಾ ಧ್ವನಿಮಾಡುವುದರಿಂದ ಋತ್ವಿಜರಿಗೆ ಕಣ್ವಾಃ ಎಂದು ಹೆಸರು. ಈ ಶಬ್ದಕ್ಕೆ ಮೇಧಾವಿನಃ. ಬುದ್ಧಿವಂತರು ಎಂಬ ಅರ್ಥವನ್ನು ಭಾಷ್ಯಕಾರರು ಹೇಳಿರುವರು- ಈ ಶಬ್ದಕ್ಕೆ ಅವಯವಾರ್ಥನಿಷ್ಪತ್ತಿಯಿಂದ ಉಂಟಾಗುವ ಅರ್ಥವಲ್ಲದೆ, ಬೇರೆ ಅರ್ಥವನ್ನು ಹೇಳಬಹುದು. ಈ ಋಕ್ಕಿನ ಋಷಿಯು ಕಣ್ವವಂಶಸ್ಥನಾದುದರಿಂದ ತನ್ನ ವಂಶೀಯರಾದ ಋತ್ವಿಗ್ಯಜಮಾನಾದಿ ಜನರನ್ನು ನಿರ್ದೇಶಿಸಿ ಹೇಳುವಾಗ **ಕಣ್ವಾಸಃ**=ಕಣ್ವಋಷಿಯ ವಂಶಸ್ಥರಾದ ನಾವುಗಳು ಎಂಬ ಅರ್ಥವನ್ನು ಮನಸ್ಸಿನಲ್ಲಿಟ್ಟುಕೊಂಡು **ಕಣ್ವಾಸಃ** ಎಂಬ ಶಬ್ದವನ್ನು ಉಪಯೋಗಿಸಿರಬಹುದೆಂದು ಹೇಳುವುದೇ ಸಮಂಜಸವಾಗಿರುವುದು.

**ವೃಕ್ತಬರ್ಹಿಷಃ**—ಈ ಶಬ್ದವಿವರಣೆಯನ್ನು ನಾವು ೨೮ನೇ ಪುಟದಲ್ಲಿ ಕೊಟ್ಟಿದೇವೆ.

**ಅರಂಕೃತಃ**—ಈ ಶಬ್ದದ ವಿವರಣೆಗಾಗಿ (ಋ, ಸಂ. ಭಾಗ ೧-೬೭೭ನೇ ಪೇಜನ್ನು ನೋಡಿ.)

॥ ವ್ಯಾಕರಣಪ್ರಕ್ರಿಯಾ ॥

**ಈಳತೇ** — ಈಡಸ್ತುತೌ-ಅನುದಾತ್ತೇತ್. ಆದ್ದರಿಂದ **ಅನುದಾತ್ತಙಿತ ಆತ್ಮನೇಪದಮ್** (ಪಾ. ಸೂ ೧-೩-೧) ಎಂಬುದರಿಂದ ಆತ್ಮನೇಪದ ಬರುವುದು. ಪ್ರ. ಪು. ಬ. ಝ. ಬರುವುದು. ಕರ್ತರಿಶಪ್ ಎಂಬುದರಿಂದ ಬಂದ ಶಪ್ ವಿಕರಣಕ್ಕೆ **ಅದಿಪ್ರಭೃತಿಭ್ಯಃಶಪಃ** (ಪಾ. ಸೂ. ೨-೪-೭೨) ಎಂಬುದರಿಂದ ಲುಕ್. ಝಕಾರಕ್ಕೆ **ಆತ್ಮನೇಪದೇಷ್ವನತಃ** (ಪಾ. ಸೂ. ೭-೧-೫) ಎಂಬುದರಿಂದ ಅತ್ ಆದೇಶ. **ಟಿತ ಆತ್ಮನೇ ಪದಾನಾಂಟೇರೇ** (ಪಾ.ಸೂ. ೩-೪-೭೯) ಎಂದು ಟಿಗೆ ಏಕಾರಾದೇಶ. ಈಡತೇ ಡಕಾರಕ್ಕೆ 'ದ್ವಯೋಶ್ಚಾಸ್ಯಸ್ವರಯೋಃ' ಎಂಬುದರಿಂದ ಳಕಾರ. **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಲಕಾರ ಸ್ಥಾನದಲ್ಲಿ ಬಂದಿರುವ ಅತೇ ಎಂಬ ಸಾರ್ವಧಾತುಕಕ್ಕೆ ಅನುದಾತ್ತಸ್ವರ ಬರುವುದು. ಧಾತುಸ್ವರವೇ ನಿಲ್ಲುವುದು.

**ಅವಸ್ಯತಿ**-ಅವನ್ತಿ ರಕ್ಷನ್ತಿ ಇತ್ಯವಾಃ=ದೇವಾಃ, ಅವ ರಕ್ಷಣೇ ಧಾತು. ಅಚ್ ಪ್ರತ್ಯಯ. ಅವಾನ್ ಅತಿಶಯೇನ ಇಚ್ಛನ್ತಿ ಎಂದು ವಿಗ್ರಹ. **ಸುಪ ಆತ್ಮನಃ ಕ್ಯಚ್** (ಪಾ-ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ

ನ ಛಂದಸ್ಯಪುತ್ರಸ್ಯ (ಪಾ. ಸೂ. ೭-೪-೩೫) ಛಂದಸ್ಸಿನಲ್ಲಿ ಪುತ್ರ ಶಬ್ದವನ್ನುಳಿದ ಅಕಾರಾಂತವಾದ ಶಬ್ದಗಳಿಗೆ ಈತ್ವದೀರ್ಘಗಳು ಕ್ಯಚ್ ಪರದಲ್ಲಿರುವಾಗ ಬರುವುದಿಲ್ಲ ಎಂದು ನಿಷೇಧವಿರುವುದರಿಂದಲೂ ಕ್ಯಚಿ ಚ (ಪಾ. ಸೂ. ೭-೪-೩೩) ಕ್ಯಚ್ ಪ್ರತ್ಯಯ ಪರದಲ್ಲಿರುವಾಗ ಅಕಾರಕ್ಕೆ ಈಕಾರ ಬರುವುದು ಎಂಬುದರಿಂದಲೂ ಅಕಾರಕ್ಕೆ ಈಕಾರ ಬರುವುದಿಲ್ಲ. ಇದೇ ನಿಷೇಧದಿಂದ ಅಕೃತ್ಸಾರ್ವಧಾತುಕಯೋಃ (ಪಾ. ಸೂ. ೭-೪-೨) ಎಂಬುದರಿಂದ ದೀರ್ಘವೂ ಬರುವುದಿಲ್ಲ. ಸರ್ವಪ್ರಾತಿಪದಿಕೇಭ್ಯೋ ಲಾಲಸಾಯೋಂ ಸುಗ್ವಕ್ತವ್ಯಃ (ಪಾ. ಸೂ. ೭-೧-೫೧ ವಾ. ೨) ಉತ್ಕಟೇಚ್ಛೆ ತೋರುವಾಗ ಕ್ಯಚ್ ಪ್ರತ್ಯಯ ಪರದಲ್ಲಿದ್ದರೆ ಎಲ್ಲಾ ಪ್ರಾತಿಪದಿಕಗಳಿಗೂ ಸುಕ್ ಆಗಮ ಬರುವುದು ಎಂಬುದರಿಂದ ಸುಗಾಗಮ ಬಂದರೆ ಅವಸ್+ಯ ಕ್ಯಾಚ್ಛಂದಸಿ (ಪಾ. ಸೂ. ೩-೨-೧೭೦) ಕ್ಯ ಎಂಬುದರಿಂದ ಕ್ಯಚ್-ಕ್ಯಙ್-ಕ್ಯಷ್ ಇವುಗಳಿಗೆ ಸಾಮಾನ್ಯವಾಗಿ ಗ್ರಹಣವು. ಕ್ಯಾಂತವಾದ ಧಾತುವಿನ ಮುಂದೆ ಛಂದಸ್ಸಿನಲ್ಲಿ ತಚ್ಛೀಲಾದ್ಯರ್ಥಗಳಲ್ಲಿ ಉ ಪ್ರತ್ಯಯ ಬರುವುದು ಎಂದು ಕಾಶಿಕಾಕಾರರು ಅಭಿಪ್ರಾಯಪಡುವರು. ಕ್ಯಶಬ್ದದಿಂದ ವ್ಯಾಖ್ಯಾನ ಬಲದಿಂದ ಕಂಡ್ವಾದಿಯಕ್ಕಿ ಗೂ ಗ್ರಹಣವು ಉಂಟು ಎಂದು ಮತ್ತೆ ಕೆಲವರು ಅಭಿಪ್ರಾಯಪಡುವರು. ಇದರಿಂದ ಉ ಪ್ರತ್ಯಯ ಬಂದರೆ ಅವಸ್ಯ+ಉ ಅತೋಲೋಪಃ (ಪಾ. ಸೂ. ೬-೪-೪೮) ಎಂಬುದರಿಂದ ಅಕಾರಕ್ಕೆ ಲೋಪ. ಅವಸ್ಯು ಎಂದಾಗುವುದು. ಪ್ರತ್ಯಯಸ್ವರದಿಂದ ಅಂತೋದಾತ್ತ. ಪ್ರಥಮಾವಿಭಕ್ತಿ ಬಹುವಚನದಲ್ಲಿ ಅವಸ್ಯವಃ ಎಂದಾಗುವುದು.

ಕಣ್ವಾಸಃ— ಕಣಶಬ್ದಾರ್ಥಃ ಧಾತು. ಕಣನ್ತಿ-ಧ್ವನನ್ತಿ ಸ್ತೋತ್ರಾದಿಪಾಠೇನ ( ಸ್ತೋತ್ರಾದಿಗಳನ್ನು ಹೇಳುವುದರಿಂದ ಶಬ್ದ ಮಾಡುವರು) ಇತಿ ಕಣ್ವಾಃ, ಋತ್ವಿಜಃ, ಕಣ್ವಾ ಎಂದರೆ ಋತ್ವಿಕ್ಕುಗಳು. ಅಶಿಪ್ರುಷಿಲಟಿಕಣಿಖಟಿವಿಶಿಭ್ಯಃಕ್ವನ್ (ಉ. ಸೂ. ೧-೧೪೯) ಎಂಬುದರಿಂದ ಕಣಧಾತುವಿನ ಮುಂದೆ ಕ್ವನ್ ಪ್ರತ್ಯಯ. ಅದರ ಮುಂದೆ ಜಸ್ಸನ್ನಿಟ್ಟರೆ ಆಜ್ಜಸೇರಸುಕ್ (ಪಾ. ಸೂ. ೭-೧-೫೦) ಎಂಬುದರಿಂದ ಅಸುಗಾಗಮ, ಕಣ್ವಾಸಃ ಎಂದಾಗುವುದು.

ವೃಕ್ತಬರ್ಹಿಷಃ—ಸೂ. (೧೨ ಋ ೩)ರಲ್ಲಿ ವೃಕ್ತ ಶಬ್ದಕ್ಕೆ ಪ್ರಕ್ರಿಯೆಯು ಉಪಪಾದಿತವಾಗಿರುವುದು. ವೃಕ್ತ ಎಂಬುದು ಪ್ರತ್ಯಯ ಸ್ವರದಿಂದ ಅಂತೋದಾತ್ತ. ವೃಕ್ತಾನಿ ಬರ್ಹೀಂಷಿ ಯೇಷಾಂ ತೇ ಎಂದು ಬಹುವ್ರೀಹಿ. ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್ (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರಬರುವುದು.

ಹವಿಷ್ಮಂತಃ— ಹವಿಃ ಏಷಾಮಸ್ತಿ ಇತಿ ಹವಿಷ್ಮನ್ತಃ ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್ (ಪಾ. ಸೂ. ೫-೨-೯೪) ಎಂಬುದರಿಂದ ಹವಿಸ್ ಶಬ್ದದ ಮುಂದೆ ಮತುಪ್ ಪ್ರತ್ಯಯ. ಆದೇಶಪ್ರತ್ಯಯಯೋಃ (ಪಾ.ಸೂ. ೮-೫-೫೧) ಎಂಬುದರಿಂದ ಸಕಾರಕ್ಕೆ ಷಕಾರ. ಜಸ್ ಪ್ರತ್ಯಯ. ಉಗಿದಚಾಂಸರ್ವನಾಮಸ್ಥಾನೇಽಧಾತೋಃ (ಪಾ. ಸೂ. ೭-೧-೭೦) ಎಂಬುದರಿಂದ ನುಮಾಗಮ. ತಸೌಮತ್ವರ್ಥೇ (ಪಾ. ಸೂ. ೧-೪-೧೯) ಎಂಬುದರಿಂದ ಹವಿಸ್ ಎಂಬುದಕ್ಕೆ ಭ ಸಂಜ್ಞೆ ಬರುವುದು. ಇದರಿಂದ ಪದಸಂಜ್ಞೆಗೆ ಬಾಧ ಬರುವುದರಿಂದ ಸಕಾರಕ್ಕೆ ರುತ್ವ ಬರುವುದಿಲ್ಲ.

ಅರಂಕೃತಃ—ಅಲಂಕುರ್ವನ್ತಿ ಇತಿ ಅರಂಕೃತಃ ಅಲಮ್ ಎಂಬ ಸುಬಂತವು ಉಪಪದವಾಗಿರುವಾಗ ಕೃಞ್ ಧಾತುವಿನ ಮುಂದೆ ಕ್ವಿಪ್ಚ ( ಪಾ. ಸೂ. ೩-೨-೭೬ ) ಎಂಬುದರಿಂದ ಕ್ವಿಪ್ ಪ್ರತ್ಯಯ ಬರುವುದು.

ಕ್ವಿಪ್ ಪ್ರತ್ಯಯಕ್ಕೆ ಲೋಪ. ಪ್ರತ್ಯಯಲಕ್ಷಣದಿಂದ ಕ್ವಿಪ್ ಪರವಾಗಿರುವುದು. ಆದ್ದರಿಂದ **ಹ್ರಸ್ವಸ್ಯ ಪಿತಿಕೃತಿತುಕ್** (ಪಾ. ಸೂ. ೬-೧-೭೧) ಎಂಬುದರಿಂದ ತುಗಾಗಮ. ಅದು ಕಿತ್ತಾದ್ದರಿಂದ **ಆದ್ಯಂತೌಟಕಿತೌ** ( ಪಾ. ಸೂ. ೧-೧-೪೬) ಎಂಬುದರಿಂದ ಅನ್ತಾವಯವವಾಗಿ ಬರುವುದು. **ಕಪಿಲಕಾದೀನಾಂ ಸಂಜ್ಞಾ ಛಂದಸೋರ್ವಾ ಲೋ ರತ್ವಮಾಪದ್ಯತೇ** (ಪಾ. ಸೂ. ವಾ. ೮-೨-೧೮) ಸಂಜ್ಞೆ ತೋರುವಾಗಲೂ ಛಂದಸ್ಸಿನಲ್ಲಿಯೂ ಸಹ ಕಪಿಲಕಾದಿಗೆ ಸೇರಿದ ಶಬ್ದಗಳ ಲಕಾರಕ್ಕೆ ರೇಫವು ವಿಕಲ್ಪವಾಗಿ ಬರುವುದು ಎಂಬುದರಿಂದ ಅಲಂಶಬ್ದದ ಲಕಾರಕ್ಕೆ ರೇಫ ಬರುವುದು. ಕಪಿಲಕಾದಿಯು ಆಕೃತಿಗಣವಾದ್ದರಿಂದ ಇಲ್ಲಿ ಅಲಂಶಬ್ದವು ಸೇರುವುದು. ಇಲ್ಲಿ ಮಹಾಭಾಷ್ಯದಲ್ಲಿ **ವಾಲಮೂಲಲಘ್ವಲಮಙ್ಗುಲೀನಾಂ ವಾ ಲೋ ರತ್ವಮಾಪದ್ಯತೇ** (ಮಭಾ ೮-೨-೧೮-೨) ವಾಲ, ಮೂಲ ಲಘು, ಅಲಮ್, ಅಙ್ಗುಲಿ ಈ ಶಬ್ದಗಳ ಲಕಾರಕ್ಕೆ ರೇಫವು ವಿಕಲ್ಪವಾಗಿ ಬರುವುದು. ಉದಾಹರಣೆ, ಅಶ್ವವಾರಃ, ಅಶ್ವವಾಲಃ, ಮೂರದೇವಃ, ಮೂಲದೇವಃ, ಲಘುಸ್ಯದಃ, ರಘುಸ್ಯದಃ, ಅಲಂಭಕ್ತಾಯ-ಅರಂಭಕ್ತಾಯ, ಸ್ವಂಗುಲಿಃ-ಸ್ವಂಗುರಿಃ ಎಂದು ಹೇಳಿ ನಂತರ ಸಂಜ್ಞಾಛನ್ದಸೋರ್ವಾ ಕಪಿಲಕಾದೀನಾಮ್ ಎಂದು ವಚನವಿರುವುದು. ಇದಕ್ಕೆ ಉದಾಹರಣೆ — ಕಪಿರಕಃ, ಕಪಿಲಕಃ; ತಿಲ್ಪಿಲಿಕಮ್-ತಿರ್ಪಿರಿಕಮ್, ಕಲ್ಮಷಮ್-ಕರ್ಮಷಮ್, ರೋಮಾಣಿ-ಲೋಮಾನಿ, ಪಾಂಸುಲಂ - ಪಾಂಸುರಂ, ಕರ್ಮ-ಕಲ್ಮ, ಶುಕ್ರಃ-ಶುಕ್ಲಃ-ಎಂದು ಇರುವುದು. ಕೈಯಟಕಾರರು ಕಪಿಲಕಾದಿಷು ವಾರಸ್ಯಲಃ, ಕಪಿಲಕಾದಿ ಶಬ್ದಗಳ ರೇಫಕ್ಕೆ ಲಕಾರವು ವಿಕಲ್ಪವಾಗಿ ಬರುವುದು ಎಂದಿರುವರು. ಇದಕ್ಕೆ ಉದ್ಯೋತದಲ್ಲಿ ಪೂರ್ವವಾಕ್ಯೇನ ಲಸ್ಯರತ್ವಂ ಪ್ರೋಕ್ತಂ ಅನೇನ ರಸ್ಯಲೋವೇತ್ಯರ್ಥಃ, ಅಂದರೆ ವಾಲಮೂಲ ಎಂಬ ಪೂರ್ವವಾಕ್ಯದಿಂದ ಲಕಾರಕ್ಕೆ ರೇಫ ವಿಕಲ್ಪವಾಗಿ ವಿಹಿತವಾಗಿರುವುದು ಈ ವಾಕ್ಯದಿಂದ ರೇಫಕ್ಕೆ ಲಕಾರವು ವಿಕಲ್ಪದಿಂದ ವಿಧಿಸಲ್ಪಡುವುದು ಎಂದು, ವಿವರಣೆ ಇರುವುದು. ಆದುದರಿಂದ ಕೈಯಟ ಉದ್ಯೋತಕಾರರ ಪಾಠವನ್ನು ಅನುಸರಿಸಿದರೆ ಇಲ್ಲಿ ವಾಲಮೂಲ, ಎಂಬುದರಿಂದ ಲಕಾರಕ್ಕೆ ರೇಫ ಬರುವುದು ಎಂದು ವರ್ಣಿಸುವುದು ಯುಕ್ತವು ‖ ೫ ‖

‖ ಸಂಹಿತಾಪಾಠಃ ‖

ಘೃತಪೃಷ್ಠಾ ಮನೋಯುಜೋ ಯೇ ತ್ವಾ ವಹಂತಿ ವಹ್ನಯಃ ।
ಆ ದೇವಾನ್ಸೋಮಪೀತಯೇ ‖ ೬ ‖

‖ ಪದಪಾಠಃ ‖

ಘೃತ ऽ ಪೃಷ್ಠಾಃ । ಮನಃ ऽ ಯುಜಃ । ಯೇ । ತ್ವಾ । ವಹಂತಿ । ವಹ್ನಯಃ ।
ಆ । ದೇವಾನ್ । ಸೋಮ ऽ ಪೀತಯೇ ‖ ೬ ‖

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಾ ತ್ವಾಂ ಯೇಽಶ್ವಾ ರಥೇನ ವಹಂತಿ । ಕೀದೃಶಾಃ । ಘೃತಪೃಷ್ಠಾಃ । ಪುಷ್ಟಾಂಗತ್ವೇನ ದೀಪ್ತಪೃಷ್ಠಾ ಮನೋಯುಜೋ ಮನಃಸಂಕಲ್ಪಮಾತ್ರೇಣ ರಥೇ ಯುಜ್ಯಮಾನಾ ವಹ್ನಯೋ ವೋಢಾರಃ । ತೈರಶ್ವೈಃ ಸೋಮಪೀತಯೇ ಸೋಮಪಾನಯಾಗಾರ್ಥಂ ದೇವಾನಾ ವಹೇತಿ ಶೇಷಃ ॥ ಘೃತಪೃಷ್ಠಾಃ। ಘೃ ಕ್ಷರಣದೀಪ್ತ್ಯೋಃ । ಘೃತಂ ದೀಪ್ತಂ ಪೃಷ್ಠಂ ಯೇಷಾಂ ತೇ ಘೃತಪೃಷ್ಠಾಃ । ಘೃತಶಬ್ದಃ ಪ್ರತ್ಯಯಸ್ವರೇಣಾಂತೋದಾತ್ತಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಮನಸಾ ಯುಂಜತ ಇತಿ ಮನೋಯುಜಃ । ಋತ್ವಿಗ್ದಧೃಗಿತ್ಯಾದಿನಾ ಕ್ವಿನ್ । ಕೃದುತ್ತರಪದಪ್ರಕೃತಿಸ್ವರತ್ವಂ । ತ್ವಾ । ತ್ವಾಮೌ ದ್ವಿತೀಯಾಯಾ ಇತ್ಯನುದಾತ್ತಸ್ತ್ವಾದೇಶಃ । ವಹಂತಿ । ಶಪ್ತಿಙೋರನುದಾತ್ತತ್ವಾದ್ಧಾತುಸ್ವರಃ । ಯದ್ವೃತ್ತಯೋಗಾನ್ನಿಘಾತಾಭಾವಃ । ವಹ್ನಯಃ । ನಿರಿತ್ಯನುವೃತ್ತೌ ವಹಿಶ್ರಿಶ್ರುಯುದ್ರುಗ್ಲಾಹಾತ್ವರಿಭ್ಯೋ ನಿತ್ । ಉ. ೪-೫೧ । ಇತಿ ನಿ ಪ್ರತ್ಯಯಃ । ತಸ್ಯ ನಿತ್ತ್ವಾದಾದ್ಯುದಾತ್ತತ್ವಂ । ಸೋಮಪೀತಯೇ। ಉಕ್ತಂ । ನಕಾರೇ ಪರತೋ ನಕಾರಸ್ಯ ಸಂಹಿತಾಯಾಂ ನಶ್ಛ । ಪಾ- ೮-೩-೩೦ । ಇತಿ ಧುಡಾಗಮಃ । ಖರಿ ಚ। ಪಾ. ೮-೪-೫೫ । ಇತಿ ಚರ್ತ್ವಂ। ಚಯೋ ದ್ವಿತೀಯಾಃ ಶರಿ ಪೌಷ್ಕರಸಾದೇಃ । ಪಾ- ೮.೪-೪೮-೩ ೩ । ಇತಿ ದ್ವಿತೀಯಸ್ಥಕಾರಃ ॥ ೨೬ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ ) ಘೃತಪೃಷ್ಠಾಃ—ಪುಷ್ಟವಾಗಿರುವುದರಿಂದ ತುಪ್ಪದಂತೆ ನುಣುಪಾದ ಬೆನ್ನುಗಳುಳ್ಳ ಮನೋಯುಜಃ—ಸಂಕಲ್ಪಮಾತ್ರದಿಂದಲೆ (ರಥಕ್ಕೆ ) ಸೇರಿಕೊಳ್ಳತಕ್ಕ । ವಹ್ನಯಃ—ಹೊರಲು ಶಕ್ತವಾದ । ಯೇ—ಯಾವ ಕುದುರೆಗಳು । ತ್ವಾ—ನಿನ್ನನ್ನು । ವಹಂತಿ—ಎಳೆದುಕೊಂಡುಬರುತ್ತವೆಯೋ (ಆ ಕುದುರೆಗಳಿಂದಲೇ) । ಸೋಮಪೀತಯೇ—ಸೋಮಪಾನಕ್ಕಾಗಿ । ದೇವಾನ್—ದೇವತೆಗಳನ್ನು । ಆ (ವಹ)—ಕರೆದುಕೊಂಡು ಬಾ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನ್ನನ್ನು ರಥದಲ್ಲಿ ಕುಳ್ಳಿರಿಸಿ ಯಜ್ಞಭೂಮಿಗೆ ಹೊತ್ತುಕೊಂಡು ಬರುವ ಕುದುರೆಗಳ ಬೆನ್ನುಗಳು ಪುಷ್ಟವಾಗಿರುವುದರಿಂದ ಪ್ರಕಾಶಮಾನವಾಗಿವೆ. ಅವುಗಳು ತಮ್ಮ ಸಂಕಲ್ಪಮಾತ್ರದಿಂದ ರಥಕ್ಕೆ ಸೇರಿಕೊಳ್ಳಬಲ್ಲವು. ಅವುಗಳು ಹೊರಲು ಸಮರ್ಥವಾಗಿವೆ. ಅವುಗಳ ಮೇಲೆಯೇ ಸೋಮಪಾನಕ್ಕಾಗಿ ದೇವತೆಗಳನ್ನು ಕರೆದುಕೊಂಡು ಬಾ.

English Translation

By means of horses which have backs as soft and smooth as clarified butter which harnessing themselves promptly according to your wish, carry you and the gods hither to drink soma-juice.

॥ ವಿಶೇಷವಿಷಯಗಳು ॥

**ಘೃತಪೃಷ್ಠಾಃ**—ಈ ಶಬ್ದದ ವಿವರಣೆಯನ್ನು ನಾವು ಹಿಂದಿನ ಸೂಕ್ತದ ಆರನೆಯ ಋಕ್ಕಿನಲ್ಲಿ ( ಪೇಜು. 549) ಮಾಡಿದೇವೆ. ಇಲ್ಲಿ ಈ ಶಬ್ದವು ವಹ್ನಯಃ ಎಂಬ ಶಬ್ದಕ್ಕೆ ವಿಶೇಷಣವಾಗಿರುವುದರಿಂದ ಅರ್ಥವು ಸ್ವಲ್ಪ ವ್ಯತ್ಯಾಸವಾಗಿರುವುದು. ತುಪ್ಪದಂತೆ ಮೃದುವಾದ ಅಥವಾ ನಯವಾದ ಬೆನ್ನುಗಳುಳ್ಳ backs as smooth as clarifed butter ಎಂದರ್ಥವು.

**ವಹ್ನಯಃ**—**ವೋಢಾರಃ ಅಶ್ವಾ ಇತ್ಯರ್ಥಃ** ರಥವನ್ನು ವಹಿಸುವುದರಿಂದ ಅಶ್ವಗಳಿಗೆ ವಹ್ನಯಃ ಎಂದು ಹೆಸರು.

**ಮನೋಯುಜಃ**—ಅಗ್ನಿಯ ಮನಸ್ಸಂಕಲ್ಪಮಾತ್ರದಿಂದ ರಥದಲ್ಲಿ ಕಟ್ಟಲ್ಪಡುವುವು. **ಮನಸಾ ಯುಂಜತೇ ಇತಿ ಮನೋಯುಜಃ** ಎಂದು ನಿಷ್ಪತ್ತಿಯು.

॥ ವ್ಯಾಕರಣಪ್ರಕ್ರಿಯಾ ॥

**ಘೃತಪೃಷ್ಠಾಃ**—ಪ್ರತ್ಯಯಸ್ವರದಿಂದ ಅಂತೋದಾತ್ತ. ಇದಕ್ಕೆ ಅಪವಾದವಾದ ನಬ್ವಿಷಯಸ್ಯಾನಿಸ ನ್ತಸ್ಯ, (ಫಿ ಸೂ. ೨೬ ) ಎಂಬುದರಿಂದ ಆದ್ಯುದಾತ್ತ ಪ್ರಾಪ್ತವಾದರೆ ಅದನ್ನು ಬಾಧಿಸಿ **ಘೃತಾದೀನಾಂಚ** (ಫಿ. ಸೂ. ೨೧) ಎಂಬುದರಿಂದ ಘೃತಶಬ್ದ ಅಂತೋದಾತ್ತ. ಘೃಕ್ಷರಣದೀಪ್ತ್ಯೋಃ, ಧಾತು. ಘೃತಂ= ದೀಪ್ತಂ ಪೃಷ್ಠಂ ಯೇಷಾಂ ತೇ ಎಂದು ಬಹುವ್ರೀಹಿ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ ಸೂ ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ.

**ಮನೋಯುಜಃ**—ಮನಸಾ ಯುಜ್ಯಂತೇ ಇತಿ ಮನೋಯುಜಃ **ಋತ್ವಿಕ್ದಧೃಕ್ಸ್ರಗ್ದಿಗುಷ್ಣಿಗಞ್ಚು-ಯುಜಿಕ್ರುಞ್ಚಾಂಚ** (ಪಾ. ಸೂ. ೩-೨-೫೯) ಎಂಬುದರಿಂದ ಮನಶ್ಶಬ್ದವು ಉಪಪದವಾಗಿರುವಾಗ ಯುಜ್‌ಧಾತುವಿನ ಮುಂದೆ ಕ್ವಿನ್ ಪ್ರತ್ಯಯ. ಯುಜ್ ಎಂಬುದರ ಉಕಾರ ಧಾತು ಸ್ವರದಿಂದ ಅಂತೋದಾತ್ತ, ಸಮಾಸಾನಂತರ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬಂದು ಅದೇ ಸ್ವರ ನಿಲ್ಲುವುದು. ನಿರುಪಪದಾದ್ಯುಜೇಃಕ್ವಿನ್—ಉಪಪದವಿಲ್ಲದೇ ಇರುವ ಯುಜ್ ಧಾತುವಿನ ಮುಂದೆ ಕ್ವಿನ್ ಬರುವುದು ಎಂದು ಕೌಮುದೀಕಾರ ಪ್ರಭೃತಿಗಳು ಅಭಿಪ್ರಾಯಪಡುವರು. ಆದರೂ ವೇದಭಾಷ್ಯಕಾರರ ಅಭಿಮತದಂತೆ ಸೋಪಪದಕವಾದ ಯುಜ್‌ನ ಮುಂದೆ ಕ್ವಿನ್ ಪ್ರತ್ಯಯ ಉತ್ಪಾದಿಸಲ್ಪಟ್ಟಿರುವುದು.

**ತ್ವಾ-ತ್ವಾಮ್**—ಎಂಬ ಯುಷ್ಮದ್ ಶಬ್ದದ ದ್ವಿತೀಯಾ ಏಕವಚನಾಂತಕ್ಕೆ **ತ್ವಾಮೌದ್ವಿತೀಯಾಯಾಃ** (ಪಾ. ಸೂ. ೮-೧-೨೩) ಎಂಬುದರಿಂದ ಅನುದಾತ್ತವಾದ ತ್ವಾ ಆದೇಶ ಬರುವುದು.

**ವಹನ್ತಿ**—ವಹ ಪ್ರಾಪಣೇ ಲಟ್, ಝಿ ಝೋಽನ್ತಃ (ಪಾ.ಸೂ. ೭-೧-೩) ಎಂಬುದರಿಂದ ಅಂತಾದೇಶ. ಶಪ್, ಅತೋಗುಣೇ, ಪರರೂಪ, ಶಪ್ಪು ಪಿತ್. ಆದ್ದರಿಂದ **ಅನುದಾತ್ತೌ ಸುಪ್ಪಿತೌ** (ಪಾ.ಸೂ. ೩-೧-೪) ಎಂಬುದರಿಂದ ಅನುದಾತ್ತ. ಅನ್ತಿ ಯು ಲಸ್ಥಾನಿಕವಾದ ಸಾರ್ವಧಾತುಕ, ಶಪ್ ಎಂಬ ಅದುಪದೇಶದ ಮುಂದೆ ಇರುವುದು. ಆದ್ದರಿಂದ **ತಾಸ್ಯನುದಾತ್ತೇನ್ಙಿದದುಪದೇಶಾತ್** (ಪಾ. ಸೂ. ೬-೧-೧೮) ಎಂಬುದರಿಂದ ಅನುದಾತ್ತ. ಧಾತು,

ಸ್ವರವೇ ನಿಲ್ಲುವುದು. ಯೇ ತ್ವಾ ವಹನ್ತಿ ವಹ್ನಯಃ,'ಎಂದು ಯೇ, ಎಂಬ ಯಚ್ಛಬ್ದದಿಂದ ಕೂಡಿರುವ ಪದದ ಮುಂದೆ ವಹನ್ತಿ, ಎಂಬುದು ಇರುವುದು. ಆದ್ದರಿಂದ **ಯದ್ವೃತ್ತಾನ್ನಿತ್ಯಂ** (ಪಾ. ಸೂ. ೮-೧-೬೬) ಯಾವ ಪದ ದಲ್ಲಿ ಯಚ್ಛಬ್ದವಿರುವುದೋ ಅದರ ಮುಂದೆ ಇರುವ ತಿಙಂತವು ಅನುದಾತ್ತವಾಗುವುದಿಲ್ಲ ಎಂಬುದರಿಂದ ನಿಷೇಧ ಬರುವುದು. ಆದಕಾರಣ ತಿಙ್ಙತಿಙಃ, ಎಂಬುದರಿಂದ ಅನುದಾತ್ತ ಬರುವುದಿಲ್ಲ. **ಪೂಜನಾತ್ಪೂಜಿತಮನು ದಾತ್ತಂ** (ಪಾ. ಸೂ. ೮-೧-೬೭) ಕಾಷ್ಠಾದಿಭ್ಯ ಇತಿ ವಕ್ತವ್ಯಂ, ಎಂಬ ವಾರ್ತಿಕವು ಇಲ್ಲಿರುವುದು. ಏವಂಚ ಪೂಜ ನಾರ್ಥಕವಾದ ಕಾಷ್ಠಾದಿಶಬ್ದಗಳ ಮುಂದಿರುವ ಪೂಜಿತವಾಚಕವು ಅನುದಾತ್ತ ಎಂದು ಸೂತ್ರಾರ್ಥ. ಇಲ್ಲಿ ಪೂಜ ನಾದನುದಾತ್ತಮ್ ಎಂದು ಸೂತ್ರವಿನ್ಯಾಸ ಮಾಡಿದರೂ ಪೂಜಿತಗಳು ಸಸಂಬಂಧಿಕಗಳಾದ್ದರಿಂದಲೂ ಪ್ರತ್ಯಾ ಸತ್ತಿಯಿಂದಲೂ ಸಹ ಪೂಜಿತ ಎಂಬುದು ಲಬ್ಧವಾಗುವುದು. ಹೀಗಿರುವಲ್ಲಿ ಪೂಜಿತಗ್ರಹಣವು ವ್ಯರ್ಥವಾಗಿ ಅತ್ರಪ್ರಕರಣೇ ಪಂಚಮೀನಿರ್ದೇಶೇಪಿ ನಾನನ್ತರ್ಯಮಾಶ್ರೀಯತೇ,– ಈ ಪ್ರಕರಣದಲ್ಲಿ ಪಂಚಮೀನಿರ್ದೇಶವಿದ್ದರೂ ಆನಂತರ್ಯವು ಆಶ್ರಯಿಸಲ್ಪಡುವುದಿಲ್ಲ ಎಂದು ಜ್ಞಾಪಿಸುವುದು. ಈಗ ಪೂಜನಾತ್ ಎಂಬ ಪಂಚಮೀ ನಿರ್ದೇಶ ದಿಂದ ಆನಂತರ್ಯಾರ್ಥವು ಲಭಿಸುವುದಿಲ್ಲ. ಪೂಜಿತ ಗ್ರಹಣವಿದ್ದರೆ ಕಮಲಾನಿಕಮಲಾನಿ. ಎಂಬಲ್ಲಿ ದ್ವಿರುಕ್ತಿಯಿಂದ ಪ್ರಶಸ್ತಕಮಲವೆಂದು ಅರ್ಥವೇರ್ಪಡುವಂತೆ ಸೂತ್ರೋಪಾತ್ತವಾದ ಪೂಜಿತಪದಪ್ರತ್ಯಾಸತ್ತಿಲಬ್ಧವಾದ ಪೂಜಿತ ಪದಗಳೆರಡರಿಂದ ಪ್ರಶಸ್ತ ಪೂಜಿತ ಎಂಬ ಅರ್ಥವು ಬೋಧಿತವಾಗುವುದು. ಇಲ್ಲಿ ಪ್ರಾಶಸ್ತ್ಯವು ಆನಂತರ್ಯರೂಪ ವಾದುದು. ಇತ್ಥಂ ಚ ಆನಂತರ್ಯಲಾಭಕ್ಕಾಗಿ ಪೂಜಿತಗ್ರಹಣವು ಸಾರ್ಥಕವಾಗುವುದು. ಈ ಜ್ಞಾಪಿತವಚನ ವಿಲ್ಲದೇ ಇದ್ದರೆ ಪೂಜನಾತ್ ಪಂಚಮೀ ನಿರ್ದೇಶವಿರುವುದರಿಂದ **ತಸ್ಮಾದಿತ್ಯುತ್ತರಸ್ಯ** (ಪಾ. ಸೂ. ೧-೧-೬೭) ಎಂಬುದರಿಂದ ಆನಂತರ್ಯಾರ್ಥವು ಸಿದ್ಧವಾಗುವುದರಿಂದ ಪೂಜಿತಗ್ರಹಣಕ್ಕೆ ವೈಯರ್ಥವು ಬಂದೇ ಬರುವುದು. ಆದ್ದರಿಂದ ಈ ಪ್ರಕರಣದಲ್ಲಿ ಪಂಚಮೀನಿರ್ದೇಶವಿದ್ದರೂ ಆನಂತರ್ಯವು ಆಶ್ರಯಿಸಲ್ಪಡುವುದಿಲ್ಲ ಎಂದು ಒಪ್ಪಲೇ ಬೇಕು. ಪ್ರಕೃತದಲ್ಲಿ ಯೇ ತ್ವಾ ವಹನ್ತಿ, ಎಂಬಲ್ಲಿ ತ್ವಾ ಪದವ್ಯವಧಾನವಿದ್ದರೂ **ಯದ್ವೃತ್ತಾನ್ನಿತ್ಯಂ** ಎಂಬ ನಿಷೇಧವು ಬಂದೇಬರುವುದು. ಆದ್ದರಿಂದ ಸರ್ವಾನುದಾತ್ತ ಬರುವುದಿಲ್ಲ.

**ವಹ್ನಯಃ**— ವಹಿ ಶ್ರಿ ಶ್ರುಯುದ್ರುಗ್ಲಾಹಾತ್ವರಿಭ್ಯೋನಿತ್ (ಉ. ಸೂ. ೪-೪೯೧) ಇಲ್ಲಿ ವೀಜ್ಯಾ ಜ್ವರಿಭ್ಯೋನಿಃ (ಉ. ಸು. ೪-೪೮೮) ಎಂಬ ಸೂತ್ರದಿಂದ ನಿಃ, ಎಂಬುದು ಅನುವೃತ್ತವಾಗುವುದು. ವಹ ಪ್ರಾ- ಪಣೇ. ಶ್ರಿಞ್ ಸೇವಾಯಾಂ, ಶ್ರು ಶ್ರವಣೇ, ಯುಮಿಶ್ರಣೇ ದ್ರು ಗತೌ, ಗ್ಲೈಮ್ಲೈ ಹರ್ಷಕ್ಷಯೇ, ಓಹಾಕ್ ತ್ಯಾಗೇ, ಞಿತ್ವರಾಸಂಭ್ರಮೇ ಈ ಧಾತುಗಳ ಮುಂದೆ ನಿ ಪ್ರತ್ಯಯ ಬರುವುದು. ಅದು ನಿತ್ತೂ ಆಗುವುದು ಎಂಬು ದರಿಂದ ವಹ ಧಾತುವಿನ ಮುಂದೆ ನಿ ಪ್ರತ್ಯಯ ಬರುವುದು. ಅದು ನಿತ್ತಾದ್ದರಿಂದ **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದರಿಂದ ವಹ್ನಿ ಶಬ್ದವು ಆದ್ಯುದಾತ್ತ.

**ಸೋಮಪೀತಯೇ**— ಇದೇ ಸೂಕ್ತದ ಮೊದಲನೇ ಋಕ್ಕಿನಲ್ಲಿ ಇದಕ್ಕೆ ಪ್ರಕ್ರಿಯೆಯು ಉಕ್ತವಾಗಿರು ವುದು. ದೇವಾನ್ ಸೋಮಪೀತಯೇ, ಎಂಬಲ್ಲಿ ಸಂಹಿತಾಕಾಲದಲ್ಲಿ ನಕಾರಕ್ಕೆ ಪರದಲ್ಲಿ ಸಕಾರವು ಇರುವುದು, ಆದ್ದರಿಂದ **ನಶ್ಚ** ( ಪಾ. ಸೂ. ೮-೩-೩೦ ) ನಕಾರಾಂತವಾದ ಪದದಮುಂದೆ ಇರುವ ಸಕಾರಕ್ಕೆ ಧುಡಾಗಮ ಬರುವುದು ಎಂಬುದರಿಂದ ಸಕಾರಕ್ಕೆ ಧುಡಾಗಮ ಬರುವುದು. ಅದು ಟಿತ್ತಾದ್ದರಿಂದ ಸಕಾರಕ್ಕೆ ಆದಿಯಾಗಿ ಬರುವುದು. ದೇವಾನ್+ಧ್ ಸೋಮ ಎಂದಾಯ್ತು. **ಖರಿಚ** (ಪಾ. ಸೂ. ೮-೪-೫೫) ಖರ್ ವರ್ಣಪರದಲ್ಲಿರುವಾಗ ಝಲ್ ಪ್ರತ್ಯಾಹಾರ ಬೋಧ್ಯವಾದ ವರ್ಣಗಳಿಗೆ ಚರ್‌ವರ್ಣಗಳು ಬರುವುವು ಎಂಬುದ ರಿಂದ ಖರ್ ಆದ ಸಕಾರ ಪರದಲ್ಲಿರುವುದರಿಂದ ಧ್ ಎಂಬ ಝಲ್ಲಿಗೆ ಚರ್ ಬರುವುದು. ಚರ್ ಎಂದರೆ ಚ, ಟ, ತ, ಕ, ಪ, ಶ, ಷ, ಸಗಳು ಇವೆಲ್ಲಕ್ಕೂ ಪ್ರಾಪ್ತಿ ಇದ್ದರೂ **ಸ್ಥಾನೇಂತರತಮಃ** (ಪಾ. ಸೂ. ೧.೧-೫೦) ದಂತ

ಸ್ಥಾನದಲ್ಲಿ ಹುಟ್ಟಿದ ಚರ್ ಪ್ರತ್ಯಾಹಾರಬೋಧ್ಯವಾದ ತ್ ಎಂಬುದೇ ಬರುವುದು. ದೇವಾ೯+ತ್+ಸೋಮ **ಚಯೋದ್ವಿತೀಯಾಃ ಶರಿ ಪೌಷ್ಕರಸಾದೇಃ** (ಪಾ. ಸೂ. ವಾ. ೮-೪-೪೮-೩) ಪೌಷ್ಕರಸಾದಿ ಎಂದು ಆಚಾರ್ಯರ ಹೆಸರು. ಇವರ ಮತದಲ್ಲಿ ಶರ್ ವರ್ಣಗಳ ಹಿಂದೆ ಇರುವ ಚಯ್ ವರ್ಣಗಳಿಗೆ ಆಯಾ ವರ್ಗದ ಎರಡನೇ ವರ್ಣವು ಬರುವುದು ಎಂಬುದರಿಂದ ಸಕಾರ ರೂಪ ಶರ್ ಪ್ರತ್ಯಾಹಾರದ ಹಿಂದೆ ಇರುವ ತ್ ಎಂಬ ಚಯ್ ವರ್ಣಕ್ಕೆ ತವರ್ಗದ ಎರಡನೇ ವರ್ಣ ಥ್ ಬರುವುದು ದೇವಾನ್+ಥ್+ಸೋಮ ಎಂದಾಗುವುದು. ಈ ಉಪಪಾದನೆಯ ಪ್ರಕಾರ ದೇವಾನ್ಥ್ಸೋಮಪೀತಯೇ, ಎಂದು ಮಂತ್ರದಲ್ಲಿರಬೇಕು ॥೬॥

॥ ಸಂಹಿತಾಪಾಠಃ ॥

ತಾನ್ಯಜತ್ರಾಁ ಋತಾವೃಧೋಽಗ್ನೇ ಪತ್ನೀವತಸ್ಕೃಧಿ ।
ಮಧ್ವಃ ಸುಜಿಹ್ವ ಪಾಯಯ ॥ ೭ ॥

॥ ಪದಪಾಠಃ ॥

ತಾನ್ । ಯಜತ್ರಾನ್ । ಋತಽವೃಧಃ । ಅಗ್ನೇ । ಪತ್ನೀಽವತಃ । ಕೃಧಿ ॥
ಮಧ್ವಃ । ಸುಽಜಿಹ್ವ । ಪಾಯಯ ॥ ೭ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತಾನಿಂದ್ರಾದೀನ್ದೇವಾನ್ಯಜತ್ರಾನ್ಯಜನೀಯಾನ್ ಋತಾವೃಧಃ ಸತ್ಯಸ್ಯ ಯಜ್ಞಸ್ಯ ವಾ ವರ್ಧಕಾನ್ ಪತ್ನೀವತಃ ಪತ್ನೀಯುಕ್ತಾನ್ಕೃಧಿ । ಕುರು । ಹೇ ಸುಜಿಹ್ವ । ಶೋಭನಜಿಹ್ವೋಪೇತ ಮಧ್ವೋ ಮಧುರಸ್ಯ ಸೋಮಸ್ಯ ಭಾಗಂ ದೇವಾನ್ಪಾಯಯ ॥ ಯಜತ್ರಾ೯ । ಅಮಿನಕ್ಷಿಯಜಿಬಂಧಿಪತಿಭ್ಯೋಽತ್ರನ್। ಉ. ೩-೧೦೫ । ಇತಿ ಯಜೇರತ್ರನ್ಪ್ರತ್ಯಯಃ। ಋತಾವೃಧಃ । ವೃಧುವೃದ್ಧೌ । ಅಂತರ್ಭಾವಿತಣ್ಯರ್ಥಾತ್ ಕ್ವಿಪ್ಚೇತಿ ಕ್ವಿಪ್ । ಅನ್ಯೇಷಾಮಪಿ ದೃಶ್ಯತ ಇತಿ ಪೂರ್ವಪದಸ್ಯ ದೀರ್ಘತ್ವಂ । ವೃದ್ಧೇರ್ಧಾತುಸ್ವರಃ । ಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವಂ । ಅಗ್ನೇ । ಪಾದಾದಿತ್ವಾನ್ನಾಮಂತ್ರಿತನಿಘಾತಃ। ಷಾಷ್ಠಿಕಮಾದ್ಯುದಾತ್ತತ್ವಂ । ಪತ್ನೀವತಃ । ಪತ್ಯುರ್ನೋ ಯಜ್ಞಸಂಯೋಗೇ । ಪಾ. ೪-೧-೩೩ । ಇತಿ ಙೀಪ್ । ಇಕಾರಸ್ಯ ಚ ನಕಾರಃ । ತಾ ಏಷಾಂ ಸಂತೀತಿ ಮತುಪ್ । ಛಂದಸೀರ ಇತಿ ವತ್ವಂ । ಪತಿಶಬ್ದೋ ಡತಿಪ್ರತ್ಯಯಾಂತತ್ವಾದಾದ್ಯುದಾತ್ತಃ । ಙೀಮ್ಮತುಪೋರನುದಾತ್ತತ್ವಾತ್ಸ ಏವ ಶಿಷ್ಯತೇ । ಕೃಧಿ । ಕೃಞೋ ಲೋಟಃ ಸಿಃ । ಸೇರ್ಹ್ಯಪಿಚ್ಚೇತಿ ಹಿಃ । ಬಹುಲಂ ಛಂದಸೀತಿ ವಿಕರಣಲುಕ್ । ಶ್ರುಶೃಣು-

ಸ್ಯಾಕೃವೃಭೃಶೃಂದಸಿ । ಪಾ. ೬-೪-೧೦೨ । ಇತಿ ಹೇರ್ಧಿರಾದೇಶಃ । ಜಿತ್ವಾದ್ಗುಣಾಭಾವಃ । ಮಧ್ವಃ । ಉಕ್ತಂ । ಸುಜಿಹ್ವ । ಆಮಂತ್ರಿತ ನಿಘಾತಃ । ಪಾಯಯ । ಪಾಪಾನೇ । ಪಿಬಂತಂ ಪ್ರಯುಂಕ್ತೆ ಇತಿ ಹೇತುಮತಿ ಚೇತಿ ಣಿಚ್। ಶಾಛಾಸಾಹ್ವಾವ್ಯಾವೇಪಾಂ ಯುಕ್। ಪಾ-೭-೩-೩೭ । ಇತಿ ಯುಕ್ । ಪೂರ್ವಸ್ಯಾಮಂತ್ರಿತಸ್ಯಾವಿದ್ಯಮಾನವತ್ತ್ವಂ । ಅತ ಏವಾವ್ಯವಧಾಯಕತ್ವಾನ್ಮಧ್ವ ಇತ್ಯಪೇಕ್ಷ್ಯ ತಿಙ್ಙತಿಙ ಇತಿ ನಿಘಾತಃ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ, । ಯಜತ್ರಾನ್—ಪೂಜಾರ್ಹರಾದ । ಪತ್ನೀವತಃ—ಪತ್ನಿಯೊಡಗೂಡಿದ ತಾನ್—ಆ ಇಂದ್ರಾದಿದೇವತೆಗಳನ್ನು । ಋತಾವೃಧಃ—ಯಜ್ಞವನ್ನು (ಸತ್ಯವನ್ನು) ವೃದ್ಧಿಪಡಿಸುವವರಾಗಿ । ಕೃಧಿ—ಮಾಡು । ಸುಜಿಹ್ವ—ಪ್ರಕಾಶಮಾನವಾದ ನಾಲಿಗೆಯುಳ್ಳ ಅಗ್ನಿಯೇ । ಮಧ್ವಃ—ಮಧುರವಾದ ಸೋಮರಸವನ್ನು । ಪಾಯಯ—(ಅವರಿಗೆ) ಕುಡಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಇಂದ್ರಾದಿ ದೇವತೆಗಳು ಪೂಜಾರ್ಹರು. ಸಪತ್ನೀಕರಾದ ಅವರನ್ನು ಕರೆತಂದು ನಮ್ಮ ಯಜ್ಞವು ಬೆಳೆಯುವಂತೆ ಸಹಾಯಮಾಡು. ಮಾಧುರ್ಯವನ್ನು ಸವಿಯಬಲ್ಲ ನಾಲಿಗೆಯುಳ್ಳ ಎಲೈ ಅಗ್ನಿಯೇ ಮಧುರವಾದ ಸೋಮರಸವನ್ನು ಇಂದ್ರಾದಿದೇವತೆಗಳಿಗೂ ಕುಡಿಸು.

English Translation.

O sweet tongued Agni, put those adorable gods with their wives here and make them drink of the sweet Soma

॥ ವಿಶೇಷವಿಷಯಗಳು ॥

ಯಜತ್ರಾನ್—ಯಜನೀಯಾನ್—ಪೂಜಾರ್ಹರು.

ಪತ್ನೀವತಃ— ಪತ್ನಿಯರಿಂದ ಸಹಿತರಾದವರು.

ಋತಾವೃಧಃ— ಋತಸ್ಯ ಸತ್ಯಸ್ಯ ವಾ ಯಜ್ಞಸ್ಯ ವರ್ಧಕಾನ್-ಯಜ್ಞಕರ್ಮವನ್ನು ವೃದ್ಧಿಗೊಳಿಸುವವರು. ನಿರ್ವಿಘ್ನವಾಗಿ ನಡೆಯುವಂತೆ ಮಾಡುವವರು.

ಮಧ್ವಃ—ಎಂದರೆ ಸೋಮರಸದ ಎಂದರ್ಥ. ಇದಕ್ಕೆ ಭಾಗಂ ಎಂಬ ಶಬ್ದವನ್ನು ಅಧ್ಯಾಹಾರಮಾಡಿ ಸೇರಿಸಿದರೆ ಸೋಮರಸದ ಭಾಗವನ್ನು ಎಂದರ್ಥವಾಗುವುದು.

‖ ವ್ಯಾಕರಣಪ್ರಕ್ರಿಯಾ ‖

**ಯಜತ್ರಾನ್**— **ಅಮಿನಕ್ಷಿಯಜಿವಧಿಪತಿಭ್ಯೋಽತ್ರನ್** (ಉ. ಸೂ. ೩-೩೮೫) ಅಮ ಗತ್ಯಾದಿಷು, ನಕ್ಷ ಗತೌ, ಯಜ ದೇವಪೂಜಾದೌ, ವಧ ಹಿಂಸಾಯಾಂ, ಪತ್ಲೃ ಗತೌ ಈ ಧಾತುಗಳ ಮುಂದೆ ಅತ್ರನ್ ಪ್ರತ್ಯಯ ಬರುವುದು ಎಂಬುದರಿಂದ ಯಜ ಧಾತುವಿನ ಮುಂದೆ ಅತ್ರನ್ ಪ್ರತ್ಯಯ. ಪ್ರತ್ಯಯವು ನಿತ್ತಾದ್ದರಿಂದ ಯಜತ್ರ ಎಂಬುದು ನಿತ್ಸ್ವರದಿಂದ ಆದ್ಯುದಾತ್ತ. ದ್ವಿತೀಯಾ ಬಹುವಚನದಲ್ಲಿ ಯಜತ್ರಾನ್ ಎಂದಾಗುವುದು. ಸಂಹಿತಾ ಕಾಲದಲ್ಲಿ ಋಕಾರ ಪರದಲ್ಲಿರುವಾಗ **ದೀರ್ಘಾದಟಿಸಮಾನಪಾದೇ** (ಪಾ. ಸೂ. ೮-೩-೯) ಎಂಬುದರಿಂದ ನಕಾರಕ್ಕೆ ರುತ್ವ. **ಆತೋಽಟಿನಿತ್ಯಂ** (ಪಾ. ಸೂ. ೮-೩-೩) ಎಂಬುದರಿಂದ ಆಕಾರಕ್ಕೆ ಅನುನಾಸಿಕ ಆಕಾರ.

**ಋತಾವೃಧಃ**— ಋತಂ ವರ್ಧಯನ್ತಿ ಎಂಬ ಅರ್ಥದಲ್ಲಿ ಋತಶಬ್ದೋಪಪದಕವಾಗಿ ಅಂತರ್ಭಾವಿತ ಣಿಚ್ ಪ್ರತ್ಯಯಾಂತವಾದ ವೃಧುಧಾತುವಿನ ಮುಂದೆ **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂದು ಕ್ವಿಪ್ ಪ್ರತ್ಯಯ, ಸುಪ್ಪಿಗೆ ಲುಕ್. **ಅನ್ಯೇಷಾಮಪಿದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ಋತ ಎಂಬ ಪೂರ್ವಪದಕ್ಕೆ ದೀರ್ಘ. ದ್ವಿತೀಯಾ ಬಹುವಚನಾಂತ. ಋತಾವೃಧಃ ಎಂಬಲ್ಲಿ **ಧಾತೋಃ** (ಪಾ. ಸೂ. ೩-೧-೯೧) ಎಂಬುದರಿಂದ ಅಂತೋದಾತ್ತಸ್ವರ ಬರುವುದು. ಸಮಾಸ ಬಂದಮೇಲೆ ಕೃದುತ್ತರಪದಪ್ರಕೃತಿಸ್ವರ ಬಂದು ಅದೇ ಸ್ವರ ನಿಲ್ಲುವುದು.

**ಅಗ್ನೇ**— ಇದು ಪಾದಾದಿಯಲ್ಲಿರುವುದು. ಆದ್ದರಿಂದ **ಆಮನ್ತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬ ಎಂಟನೇ ಅಧ್ಯಾಯದ ಸೂತ್ರದಿಂದ ಅನುದಾತ್ತ ಬರುವುದಿಲ್ಲ. **ಆಮನ್ತ್ರಿತಸ್ಯ ಚ** (ಪಾ. ಸೂ. ೬-೧-೧೯೮) ಎಂಬ ಆರನೇ ಅಧ್ಯಾಯದ ಸೂತ್ರದಿಂದ ಆದ್ಯುದಾತ್ತ ಬರುವುದು.

**ಪತ್ನೀವತಃ**— **ಪತ್ಯುರ್ನೋಯಜ್ಞಸಂಯೋಗೇ** (ಪಾ. ಸೂ. ೪-೧-೩೩) ಸ್ತ್ರೀಲಿಂಗದಲ್ಲಿ ಯಜ್ಞ ಸಂಬಂಧ ತೋರುವಾಗ ಪತಿಶಬ್ದದ ಕೊನೆಯ ವರ್ಣಕ್ಕೆ ನಕಾರಾದೇಶವು ಬರುವುದು ಎಂಬುದರಿಂದ ಇಕಾರಕ್ಕೆ ನಕಾರಾದೇಶ. ಪತ್ನ್ ಈಗ ನಾಂತವಾದ್ದರಿಂದ **ಋನ್ನೇಭ್ಯೋಙೀಪ್** (ಪಾ. ಸೂ. ೪.೧-೫) ಸ್ತ್ರೀಲಿಂಗದಲ್ಲಿ ಋಕಾರಾಂತ ನಕಾರಾಂತ ಶಬ್ದಗಳ ಮುಂದೆ ಙೀಪ್ ಬರುವುದು ಎಂಬುದರಿಂದ ಙೀಪ್ ಬರುವುದು ಪತ್ನೀ ಎಂದಾಗುವುದು. ವೇದಾಭ್ಯಾಸದಲ್ಲಿ **ಪ್ರತ್ಯುರ್ನೋಯಜ್ಞಸಂಯೋಗೇ** (೪-೧-೩೩) ಎಂಬುದಕ್ಕೆ ಸ್ತ್ರೀಲಿಂಗದಲ್ಲಿ ಪತಿಶಬ್ದದ ಮುಂದೆ ಙೀಪ್ ಬರುವುದು. ಇಕಾರಕ್ಕೆ ನಕಾರವೂ ಬರುವುದು ಎಂದು ಈ ಸೂತ್ರಕ್ಕೆ ಅರ್ಥವರ್ಣನೆ ಇರುವುದು. ಈ ಪಕ್ಷದಲ್ಲಿ ವಿಧೇಯ ಭೇದದಿಂದ ವಾಕ್ಯಭೇದಾದಿದೋಷಗಳು ಬರುವುದರಿಂದ ಮಿಕ್ಕ ವೈಯ್ಯಾಕರಣರು ಈ ಅರ್ಥವನ್ನು ಒಪ್ಪುವುದಿಲ್ಲ. ಇಲ್ಲಿ ಸ್ವರ್ಗಕಾಮೋ ಯಜೇತ ಇತ್ಯಾದಿ ಶ್ರುತಿಗಳಲ್ಲಿ ಸ್ವರ್ಗಕಾಮಃ ಎಂದು ಪುಲ್ಲಿಂಗವೇ ಇರುವುದು. ಆದ್ದರಿಂದ ಯಾಗಾನುಷ್ಠಾನವೂ, ಅದರಿಂದ ಉಂಟಾಗುವ ಫಲಾನುಭವವೂ, ಪುರುಷನಿಗೆ ಬರುವುದು. ಆದ್ದರಿಂದ ಯಜ್ಞಸಂಬಂಧವು ಸ್ತ್ರೀಗೆ ಹೇಗೆ? ಯಜ್ಞಸಂಬಂಧವಿಲ್ಲದಿದ್ದರೆ, ಯಜ್ಞಸಂಯೋಗೇ ಎಂದು ನಕಾರ ವಿಧಿಯು ಹೇಗೆ ಸರಿಹೋಗುವುದು? ಎಂದರೆ ಯಾಗದಲ್ಲಿ ದಂಪತಿಗಳಿಗೇ ಅಧಿಕಾರವು. ಪುರುಷನಾದಾಗ್ಯೂ ವಿಧುರನಿಗೆ ಯಾಗಾನುಷ್ಠಾನದಲ್ಲಿ ಅಧಿಕಾರವಿಲ್ಲ. ಇದೇ ಸೂತ್ರದಲ್ಲಿ ಕೈಯ್ಯಟದಲ್ಲಿ ಪತ್ನ್ಯಾಶ್ಚ ದಂಪತ್ಯೋಸ್ಸಹಾಧಿಕಾರಾದ್ಯಜ್ಞೇಽಧಿಕಾರಾತ್ಕರ್ತೃತ್ವಾತ್ತತ್ಫಲಸಂಬಂಧಾದ್ಯಜ್ಞಸಂಯೋಗಃ, ಎಂದುನಿರೂಪಿತವಾಗಿರುವುದು. ಪೂರ್ವಮೀಮಾಂಸೆಯಲ್ಲಿಯೂ ಆರನೇ ಅಧ್ಯಾಯ ಮೊದಲನೇ ಪಾದದಲ್ಲಿ ಲಿಂಗ ವಿಶೇಷನಿರ್ದೇಶಾತ್ಪುಂಯುಕ್ತಮೈತಿಶಾಯನಃ ಎಂಬ ಅಧಿಕರಣದಲ್ಲೂ ಸ್ವವತೋಸ್ತುವಚನಾದೈಕಕರ್ಮ್ಯಂಸ್ಯಾತ್ ಎಂಬ ಅಧಿಕರಣದಲ್ಲಿಯೂ ಸಹ ದಂಪತಿಗಳಿಗೆ ಸಹಾಧಿಕಾರವು ಸ್ಥಾಪಿತವಾಗಿರುವುದು 'ಪತಿಶಬ್ದೋಯಮೈಶ್ವರ್ಯ-

ವಾಚಿ ಎಂದು ಮಹಾಭಾಷ್ಯದಲ್ಲಿ ಈ ಸೂತ್ರದ ಪತಿಶಬ್ದವು ಐಶ್ವರ್ಯಾರ್ಥಕವೆಂದು ನಿರೂಪಿತವಾಗಿರುವುದು. ಆಗ ಯಜ್ಞಸಂಯೋಗೇ ಎಂಬುದು ಸತಿಸಪ್ತಮಿ. ಯಜ್ಞಸಂಬಂಧವಿರಲಾಗಿ ಪ್ರತ್ಯಾಸತ್ತ್ಯಾ ಆ ಯಜ್ಞದಿಂದ ಉಂಟಾಗುವ ಯಾವ ಐಶ್ವರ್ಯವಿದೆಯೋ ಆ ಐಶ್ವರ್ಯವಾಚಕವಾದ ಪತಿಶಬ್ದಕ್ಕೆ ಸ್ತ್ರೀಲಿಂಗದಲ್ಲಿ ನಕಾರಾದೇಶ ಬರುವುದು ಎಂದು ಸೂತ್ರಾರ್ಥವು ಏರ್ಪಡುವುದು. ಪತ್ನ್ಯಃ ಏಷಾಂ ಸನ್ತಿ ಎಂದು ವಿಗ್ರಹ ಮಾಡಿದರೆ **ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್** (ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಬರುವುದು. ಮಕಾರಕ್ಕೆ ಛಂದಸೀರಃ (ಪಾ. ಸೂ. ೮-೨-೧೫) ಎಂಬುದರಿಂದ ವಕಾರ. ಪತ್ನೀವತ್ ಎಂದಾಯ್ತು. **ಪಾತೇರ್ಡತಿಃ** (ಉ. ಸೂ. ೪-೪೯೭) ಎಂಬುದರಿಂದ ಪತಿಶಬ್ದ ಡತಿಪ್ರತ್ಯಯಾಂತ. ಆದ್ದರಿಂದ ಪ್ರತ್ಯಯಸ್ವರದಿಂದ ಆದ್ಯುದಾತ್ತ, ಙೀಪ್ ಮತುಪ್ ಎರಡೂ ಪಿತ್ತಾದ್ದರಿಂದ **ಅನುದಾತ್ತೌ ಸುಪ್ಪಿತೌ** (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತ. ಆದ್ಯುದಾತ್ತವೇ ನಿಲ್ಲುವುದು. ದ್ವಿತೀಯಾಬಹುವಚನದಲ್ಲಿ ಪತ್ನೀವತಃ ಎಂದಾಗುವುದು.

**ಕೃಧಿ**—ಡುಕೃಞ್ ಕರಣೇ ಧಾತು. ಲೋಟ್, ಅದಕ್ಕೆ ಮಧ್ಯಮಪುರುಷ ಏಕವಚನ ಸಿಪ್. **ಸೇರ್ಹ್ಯಪಿಚ್ಚ** (ಪಾ ಸೂ. ೩-೪-೮೭) ಎಂಬುದರಿಂದ ಸಿಗೆ ಹಿ ಆದೇಶ. **ತನಾದಿಕೃಞ್‌ಭ್ಯ ಉಃ** (ಪಾ. ಸೂ. ೩-೧-೭೯) ಎಂಬುದರಿಂದ ಬಂದ ಉ ವಿಕರಣಕ್ಕೆ ಬಹುಲಂ ಛಂದಸಿ (ಪಾ. ಸೂ. ೯-೪-೭೩) ಎಂಬುದರಿಂದ ಲುಕ್. **ಶ್ರುಶೃಣುಪೃಕೃವೃಭ್ಯಶ್ಛಂದಸಿ** ( ಪಾ. ಸೂ. ೬-೪-೧೦೨ ) ಇವುಗಳ ಮುಂದೆ ಇರುವ ಹಿ ಗೆ ಧಿ ಆದೇಶ ಬರುವುದು ಎಂಬುದರಿಂದ ಹಿಗೆ ಧಿ ಆದೇಶ. **ಸಾರ್ವಧಾತುಕಮಪಿತ್** (ಪಾ. ಸೂ. ೧-೨-೪) ಎಂಬುದರಿಂದ ಪ್ರತ್ಯಯ ಙಿತ್. **ಕ್ಙಿತಿಚ** (ಪಾ. ಸೂ. ೧-೧-೫) ಎಂಬುದರಿಂದ ಗುಣಕ್ಕೆ ನಿಷೇಧ. ಕೃಧಿ ಎಂದಾಗುವುದು. **ತಿಙ್ಙತಿಙಃ** ಎಂಬುದರಿಂದ ಸರ್ವಾನುದಾತ್ತ.

**ಮಧ್ವಃ**–೧೩. ಸೂ. ೨ ಋಕ್ಕಿನಲ್ಲಿ ಮಧುಶಬ್ದವು ಆದ್ಯುದಾತ್ತವೆಂದು ಪ್ರತಿಪಾದಿತವಾಗಿರುವುದು. ಅದು ನಪುಂಸಕಲಿಂಗವಾದರೂ ಇಲ್ಲಿ ವ್ಯತ್ಯಯದಿಂದ ಪುಲ್ಲಿಂಗ. ಅದರ ಮುಂದೆ ಷಷ್ಠೀಏಕವಚನ ಙಸ್. ಮಧುಶಬ್ದಕ್ಕೆ **ಶೇಷೋಘ್ಯಸಖಿ** (ಪಾ. ಸೂ. ೧-೪-೭) ಸಖಿ ಶಬ್ದವನ್ನುಳಿದು ನದೀಸಂಜ್ಞೆಯನ್ನು ಹೊಂದದೇ ಇರುವ ಹ್ರಸ್ವ ಇ ಉ ವರ್ಣಾಂತ ಶಬ್ದಗಳು ಘಿ ಸಂಜ್ಞೆಯನ್ನು ಹೊಂದುವುವು ಎಂಬುದರಿಂದ ಘಿ ಸಂಜ್ಞೆ ಇರುವುದು. ಆದ್ದರಿಂದ **ಘೇರ್ಙಿತಿ** (ಪಾ. ಸೂ. ೭-೩-೧೧) ಙಿತ್ತಾದ ಸುಪ್ಪು ಪರದಲ್ಲಿರುವಾಗ ಘಿ ಸಂಜ್ಞೆಯನ್ನು ಹೊಂದಿರುವ ಅಂಗಕ್ಕೆ ಗುಣ ಬರುವುದು ಎಂಬುದರಿಂದ ಗುಣವು ಪ್ರಾಪ್ತವಾಗುವುದು. ಆದರೂ **ಸಂಜ್ಞಾಪೂರ್ವಕೋವಿಧಿರನಿತ್ಯಃ** (ಪರಿಭಾಷಾ) ಎಂಬುದರಿಂದ ಗುಣ ಬರುವುದಿಲ್ಲ. ಯಣಾದೇಶ, ರುತ್ವ, ವಿಸರ್ಗ. ಮಧ್ವಃ ಎಂದಾಗುವುದು.

**ಸುಜಿಹ್ವ**— ಆಮನ್ತ್ರಿತಾನುದಾತ್ತ ಬರುವುದು.

**ಪಾಯಯ**- ಪಾ ಪಾನೇ, ಧಾತು. ಪಿಬಂತಂ ಪ್ರಯುಙ್ಕ್ತೇ=(ಕುಡಿಯುತ್ತಿರುವವನನ್ನು ಪ್ರೇರಿಸುವವನು) ಎಂದು ವಿವಕ್ಷಿಸಿದಾಗ **ಹೇತುಮತಿಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್ **ಶಾಚ್ಛಾಸಾಹ್ವಾವ್ಯಾವೇಪಾಂಯುಕ್** (ಪಾ.ಸೂ. ೭-೩-೩೭) ಶೋ ತನೂಕರಣೇ, ಛೋ ಛೇದನೇ, ಷೋಽನ್ತಕರ್ಮಣಿ, ಹ್ವೇಞ್ ಸ್ಪರ್ಧಾಯಾಂ, ವ್ಯೇಞ್ ಸಂವರಣೇ, ವೇಞ್ ತನ್ತುಸಂತಾನೇ, ಪಾ ಪಾನೇ, ಈ ಧಾತುಗಳಿಗೆ ಣಿ ಪ್ರತ್ಯಯ ಪರದಲ್ಲಿರುವಾಗ ಯುಗಾಗಮ ಬರುವುದು ಎಂಬುದರಿಂದ ಪಾ ಗೆ ಯುಗಾಗಮ ಪಾಯ್+ಇ ಎಂದಾಯ್ತು. ಪಾ ರಕ್ಷಣೇ ಅದಾದಿ ಲುಗ್ವಿಕರಣ, ಪಾಪಾನೇ ಭ್ವಾದಿ ಅಲುಗ್ವಿಕರಣ, ಈ ಎರಡು ಧಾತುಗಳು ಯದ್ಯಪಿ ಇರುವುವು. **ಲುಗ್ವಿಕರಣಾಲುಗ್ವಿಕರಣಯೋರಲುಗ್ವಿಕರಣಸ್ಯ** ( ಪರಿಭಾ ೯೩ ) ಲುಗ್ವಿಕರಣಕ್ಕೂ ಅಲುಗ್ವಿಕರಣಕ್ಕೂ

ಗ್ರಹಣ ಪ್ರಾಪ್ತವಾದರೆ ಅಲುಗ್ವಿಕರಣಕ್ಕೇ ಗ್ರಹಣ ಬರುವುದು ಎಂಬುದರಿಂದ ಭ್ವಾದಿಧಾತುವಿಗೇ ಗ್ರಹಣ ಬರುವುದು. ಪಾಯಿ ಎಂಬುದರ ಮುಂದೆ ಲೋಟ್, ಅದಕ್ಕೆ ಶಿಪ್ ವಿಕರಣ, ಶಪ್ ಗುಣ, ಆಯಾದೇಶ, ಸಿ ಗೆ ಹಿ ಆದೇಶ, ಅದಕ್ಕೆ ಲುಕ್, ಪಾಯಯ ಎಂದಾಗುವುದು. ಇದರ ಹಿಂದೆ ಇರುವ ಸುಜಿಹ್ವ ಎಂಬ ಅಮಂತ್ರಿತಕ್ಕೆ **ಆಮನ್ತ್ರಿತಂಪೂರ್ವಮವಿದ್ಯಮಾನವತ್** (ಪಾ. ಸೂ. ೮-೧-೭೨) ಎಂಬುದರಿಂದ ಅವಿದ್ಯಮಾನವದ್ಭಾವ ಬರುವುದು. ಇದಕ್ಕೆ ಅವಿದ್ಯಮಾನವದ್ಭಾವ ಬರುವುದರಿಂದಲೇ ಇದು ವ್ಯವಧಾಯಕವಾಗುವುದಿಲ್ಲ. ಆದ್ದರಿಂದ ಮಧ್ವಃ ಎಂಬ ಪದವನ್ನು ನಿಮಿತ್ತ ಮಾಡಿಕೊಂಡು ತಿಙ್ಙತಿಙಃ (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ ಬರುವುದು || ೭ ||

|| ಸಂಹಿತಾಪಾಠಃ ||

ಯೇ ಯಜತ್ರಾ ಯ ಈಡ್ಯಾಸ್ತೇ ತೇ ಪಿಬಂತು ಜಿಹ್ವಯಾ |
ಮಧೋರಗ್ನೇ ವಷಟ್ಕೃತಿ || ೮ ||

|| ಪದಪಾಠಃ ||

ಯೇ | ಯಜತ್ರಾಃ | ಯೇ | ಈಡ್ಯಾಃ | ತೇ | ತೇ | ಪಿಬಂತು | ಜಿಹ್ವಯಾ ||
ಮಧೋಃ | ಅಗ್ನೇ | ವಷಟ್ऽಕೃತಿ ||

|| ಸಾಯಣಭಾಷ್ಯಂ ||

ಯೇ ದೇವಾ ಯಜತ್ರಾ ಯಷ್ಟವ್ಯಾಃ | ತಥಾ ಯೇ ದೇವಾ ಈಡ್ಯಾಃ ಸ್ತುತ್ಯಾಃ | ತೇ ಸರ್ವೇಽಪಿ ವಷಟ್ಕೃತಿ ವಷಟ್ಕಾರಕಾಲೇ ವಷಟ್ಕಾರಯುಕ್ತೇ ಯಾಗೇ ವಾ ಹೇ ಅಗ್ನೇ ತೇ ತ್ವದೀಯಯಾ ಜಿಹ್ವಯಾ ಮಧೋರ್ಮಧುರಸ್ಯ ಸೋಮಸ್ಯ ಭಾಗಂ ಪಿಬಂತು || ಯಜತ್ರಾಃ | ಗತಂ | ಈಡ್ಯಾಃ | ಈಡ ಸ್ತುತೌ | ಋಹಲೋರ್ಣ್ಯತ್ | ತಿತ್ಸ್ವರಿತೇ ಪ್ರಾಪ್ತೆ ಈಡವಂದವೃಶಂಸದುಹಾಂ ಣ್ಯತ ಇತ್ಯಾದ್ಯುದಾತ್ತತ್ವಂ | ದ್ವಿತೀಯಸ್ಯ ತೇಶಬ್ದಸ್ಯ ಯುಷ್ಮದಾದೇಶಸ್ಯ ಸರ್ವಾನುದಾತ್ತತ್ವಂ | ಮಧೋಃ | ಉಪ್ರತ್ಯಯಸ್ಯ ನಿತ್ತ್ವಾದಾದ್ಯುದಾತ್ತತ್ವಮುಕ್ತಂ | ಅಗ್ನೇ | ಆಮಂತ್ರಿತನಿಘಾತಃ | ವಷಟ್ಕೃತಿ | ಕರೋತೇಃ ಸಂಪದಾದಿಭ್ಯೋ ಭಾವೇ ಕ್ವಿಪ್ | ವಷಡಿತ್ಯಸ್ಯ ಕರಣಂ ಯಸ್ಮಿನ್ಯಾಗ ಇತಿ ಬಹುವ್ರೀಹಿಃ | ವಷಡಿತ್ಯಸ್ಯ ನಿಪಾತತ್ವಾದಾದ್ಯುದಾತ್ತತ್ವಂ | ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ||

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ, | **ಯೇ**—ಯಾವ ದೇವತೆಗಳು | **ಯಜತ್ರಾಃ**— ಯಜ್ಞಭಾಗಾರ್ಹರೋ (ಮತ್ತು ಹಾಗೆಯೇ) | **ಯೇ**—ಯಾವ ದೇವತೆಗಳು | **ಈಡ್ಯಾಃ**—ಸ್ತುತಿಪಾತ್ರರೋ | **ತೇ**—ಅವರೆಲ್ಲರೂ | **ವಷಟ್ಕೃತಿ**—ಯಜ್ಞದ ವಷಟ್ಕಾರಕಾಲದಲ್ಲಿ ( ಆಹುತಿಪ್ರದಾನಕಾಲದಲ್ಲಿ ) | **ತೇ**— ನಿನ್ನ | **ಜಿಹ್ವಯಾ**—ನಾಲಿಗೆಯಿಂದ (ಅಗ್ನಿಯಲ್ಲಿ ಹೋಮಮಾಡುವುದರಿಂದ) | **ಮಧೋಃ**—ಮಧುರವಾದ ಸೋಮರಸಭಾಗವನ್ನು | **ಪಿಬಂತು**—ಪಾನಮಾಡಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಾವ ಯಾವ ದೇವತೆಗಳು ಯಜ್ಞಭಾಗಾರ್ಹರೋ ಮತ್ತು ಯಾರು ಯಾರು ಸ್ತೋತ್ರಾರ್ಹರೋ ಅವರೆಲ್ಲರೂ ಸಹ ವಷಟ್ಕಾರಪೂರ್ವಕವಾದ ಆಹುತಿಪ್ರದಾನಕಾಲದಲ್ಲಿ ನಿನ್ನ ಮುಖದಿಂದಲೇ ಎಂದರೆ ಅಗ್ನಿಯಲ್ಲಿ ಹೋಮಮಾಡುವುದರಿಂದಲೇ ಮಧುರವಾದ ಸೋಮರಸಭಾಗವನ್ನು ಕುಡಿಯಲಿ.

English Translation.

O Agni, those gods that deserve to be sacrificed and those that deserve to be praised, may they drink of the sweet soma with your tongue as soon as (the word) Vashat is pronounced

॥ ವಿಶೇಷವಿಷಯಗಳು ॥

**ಯಜತ್ರಾಃ**—ಯಜನೀಯಾಃ— ಪೂಜಾರ್ಹರು, ಯಜ್ಞಭಾಗಾರ್ಹರು.

**ಈಡ್ಯಾಃ**—ಸ್ತುತ್ಯರ್ಹರು, ಪ್ರಶಂಸಾರ್ಹರು.

**ವಷಟ್ಕೃತಿ**—ವಷಟ್ಕಾರಕಾಲದಲ್ಲಿ ಅಥವಾ ವಷಟ್ಕಾರಯುಕ್ತವಾದ ಯಾಗದಲ್ಲಿ, ಯಜ್ಞದಲ್ಲಿ ಕೆಲವು ಮಂತ್ರಗಳಿಂದ ಹೋಮಮಾಡುವಾಗ ಮಂತ್ರಾಂತ್ಯದಲ್ಲಿ ವೌಷಟ್ ಎಂಬ ಶಬ್ದವನ್ನು ಸೇರಿಸಿ ಸ್ವಾಹಾಕಾರವನ್ನು ಉಚ್ಚರಿಸುವಂತೆ ಉಚ್ಚರಿಸುವರು. ಇದಕ್ಕೆ ವಷಟ್ಕೃತಿ ಅಥವಾ ವಷಟ್ಕಾರವೆಂದು ಹೇಳುವರು.

॥ ವ್ಯಾಕರಣಪ್ರಕ್ರಿಯಾ ॥

**ಯಜತ್ರಾಃ**—ಹಿಂದಿನ ಮಂತ್ರದಲ್ಲಿ ವ್ಯಾಖ್ಯಾತವಾಗಿರುವುದು.

**ಈಡ್ಯಃ**—ಈಡಸ್ತುತೌ ಧಾತು, ಹಲಂತ. **ಋಹಲೋರ್ಣ್ಯತ್** (ಪಾ.ಸೂ ೩-೧-೧೨೪) ಋಕಾರಾಂತ ವ್ಯಂಜನಾಂತವಾದ ಧಾತುಗಳ ಮುಂದೆ ಣ್ಯತ್ ಪ್ರತ್ಯಯ ಬರುವುದು ಎಂಬುದರಿಂದ ಈಡ್ ಧಾತುವಿನ ಮುಂದೆ ಣ್ಯತ್- ಪ್ರತ್ಯಯವು ತಕಾರೇತ್ಸಂಜ್ಞಕ. ಆದ್ದರಿಂದ **ತಿತ್ಸ್ವರಿತಂ** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತವು ಪ್ರಾಪ್ತವಾಗುವುದು. ಆದರೂ ಅದನ್ನು ಬಾಧಿಸಿ **ಈಡವಂದವೃಶಂಸದುಹಾಂಣ್ಯತಃ** (ಪಾ. ಸೂ.

೬-೧-೨೧೪) ಞ್ನಿತ್ ಪ್ರತ್ಯಯಾನ್ತವಾದ ಈ ಧಾತುಗಳ ಆದಿಯು ಉದಾತ್ತವಾಗುವುದು ಎಂಬುದರಿಂದ ಈಡ್ಯ ಎಂಬಲ್ಲಿ ಆದ್ಯುದಾತ್ತ ಬರುವುದು.

**ತೇ**— ತಚ್ಛಬ್ದದ ಮುಂದೆ ಜಸ್. **ತ್ಯದಾದೀನಾಮಃ** (ಪಾ. ಸೂ. ೭-೨-೧೦೨) ವಿಭಕ್ತಿ ಪರದಲ್ಲಿರುವಾಗ ತ್ಯದಾದಿಗಣಪಠಿತಶಬ್ದಗಳ ಕೊನೆಯ ವರ್ಣಕ್ಕೆ ಅಕಾರದೇಶ ಬರುವುದು ಎಂಬುದರಿಂದ ತದ್ ಶಬ್ದದ ದಕಾರಕ್ಕೆ ಅಕಾರ. **ಅತೋಗುಣೇ** (ಪಾ. ಸೂ. ೬-೧-೯೭) ಎಂಬುದರಿಂದ ಪರರೂಪ. **ಜಸಶ್ಶೀ** (ಪಾ. ಸೂ. ೭-೧-೧೭) ಅವರ್ಣಾಂತವಾದ ಸರ್ವನಾಮ ಶಬ್ದದ ಮುಂದೆ ಇರುವ ಜಸ್ಸಿಗೆ ಶೀ ಆದೇಶ ಬರುತ್ತೆ ಎಂದು ಶೀ ಆದೇಶ. ಶೀಯು ಅನೇಕಾಲ್ಲಾದ್ದರಿಂದ **ಅನೇಕಾಲ್‌ಶಿತ್ಸರ್ವಸ್ಯ** (ಪಾ.ಸೂ. ೧-೧-೫೫) ಎಂಬುದರಿಂದ ಸರ್ವಾದೇಶವಾಗಿ ಬರುವುದು. **ಆದ್ಗುಣಃ** (ಪಾ. ಸೂ. ೬-೧-೮೭) ಎಂಬುದರಿಂದ ಗುಣ, ತೇ ಎಂದಾಗುವುದು. **ಫಿಷೋಽನ್ತ ಉದಾತ್ತಃ** (ಫಿ.ಸೂ. ೧) ಎಂಬುದರಿಂದ ತಚ್ಛಬ್ದ ಅನ್ತೋದಾತ್ತ. ಪರರೂಪ ಗುಣ ಈ ಎರಡು ಏಕಾದೇಶಗಳು. ಏಕಾದೇಶ ಉದಾತ್ತೇನೋದಾತ್ತಃ, ಎಂಬುದರಿಂದ ಉದಾತ್ತ.

**ತೇ**—ಇದು ಷಷ್ಠೀಭಕ್ತಿಏಕವಚನಾಂತವಾದ ಯುಷ್ಮದ್ ಶಬ್ದದ ತವ, ಎಂಬುದಕ್ಕೆ ಆದೇಶವಾಗಿ ಬಂದಿರುವುದು. ಆದ್ದರಿಂದ ಇದು ಸರ್ವಾನುದಾತ್ತ.

**ಮಧೋಃ**—ಉಪ್ರತ್ಯಯವು ಅತಿದೇಶದಿಂದ ನಿತ್ತಾಗುವುದರಿಂದ ಮಧು ಶಬ್ದವು ಆದ್ಯುದಾತ್ತವೆಂದು ಸೂ. ೧೩. ಋ. ೨ರಲ್ಲಿ ಪ್ರತಿಪಾದಿತವಾಗಿರುವುದು. ಇದು ವ್ಯತ್ಯಯದಿಂದ ಇಲ್ಲಿಪುಲ್ಲಿಂಗ. ಷಷ್ಠೀ ಏಕವಚನದ ಙಸ್ಸನ್ನಿಟ್ಟರೆ ಘ್ಯ ಶೇಷೋಽಸಖಿ ಎಂಬುದರಿಂದ ಘಿ ಸಂಜ್ಞೆ ಇರುವುದರಿಂದ ಘೇರ್ಙಿತಿ, ಎಂಬುದರಿಂದ ಗುಣ. ಉಕಾರಕ್ಕೆ ಓಕಾರ ಬರುವುದು. **ಙಸಿಙಸೋಶ್ಚ** (ಪಾ. ಸೂ. ೬-೧-೧೧೦) ಏ ಓ ಗಳ ಮುಂದೆ ಙಸಿ, ಙಸ್ ಇವುಗಳ ಅಕಾರವಿದ್ದರೆ ಪೂರ್ವರೂಪವು ಏಕಾದೇಶವಾಗಿ ಬರುವುದು ಎಂಬುದರಿಂದ ಪೂರ್ವರೂಪ ರುತ್ವ ವಿಸರ್ಗಗಳು

**ಅಗ್ನೇ**—ಆಷ್ಟಮಿಕಸೂತ್ರದಿಂದ ಆಮನ್ತ್ರಿತಾನುದಾತ್ತ ಬರುವುದು.

**ವಷಟ್ಕೃತಿ**—**ಸಂಪದಾದಿಭ್ಯಃ ಕ್ವಿಪ್** ( ಪಾ. ಸೂ. ೩-೩-೧೦೮-೯ ) ಎಂಬುದರಿಂದ ಭಾವಾರ್ಥದಲ್ಲಿ ಕೃಞ್ ಧಾತುವಿನ ಮುಂದೆ ಕ್ವಿಪ್ ಬರುವುದು. ಕ್ವಿಪ್ಪು ಪಿತ್ತಾದ ಕೃತ್ತೇ ಆದ್ದರಿಂದ ಅದು ಪರವಾಗಿರುವಾಗ ಹ್ರಸ್ವಸ್ಯಪಿತಿಕೃತಿತುಕ್ ಎಂಬುದರಿಂದ ಕೃಗೆ ತುಗಾಗಮ ಬರುವುದು- ಕೃತ್ ಎಂದಾಗುವುದು. ವಷಟಃ ಕೃತ್ ಯಸ್ಮಿನ್ ಸಃ, ಯಾವ ಯಾಗದಲ್ಲಿ ವಷಟ್ ಎಂಬುದಕ್ಕೆ ಕರಣವಿದೆಯೋ ಅದು ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುವುದು. ವಷಟ್ ಎಂಬ ಪೂರ್ವಪದವು ನಿಪಾತ. ಆದ್ದರಿಂದ **ನಿಪಾತಾ ಆದ್ಯುದಾತ್ತಾಃ** (ಫಿ. ಸೂ. ೮೦) ಎಂಬುದರಿಂದ ಆದ್ಯುದಾತ್ತ. ಸಪ್ತಮೀಏಕವಚನದಲ್ಲಿ ವಷಟ್ಕೃತಿ ಎಂದಾಗುವುದು ||೮||

॥ ಸಂಹಿತಾಪಾಠಃ ॥

ಆಕೀಂ ಸೂರ್ಯಸ್ಯ ರೋಚನಾದ್ವಿಶ್ವಾನ್ದೇವಾ ಉಷರ್ಬುಧಃ ।
ವಿಪ್ರೋ ಹೋತೇಹ ವಕ್ಷತಿ ॥ ೯ ॥

॥ ಪದಪಾಠಃ ॥

ಆ । ಈಂ । ಸೂರ್ಯಸ್ಯ । ರೋಚನಾತ್ । ವಿಶ್ವಾನ್ । ದೇವಾನ್ । ಉಷಃಽಬುಧಃ ॥
ವಿಪ್ರಃ । ಹೋತಾ । ಇಹ । ವಕ್ಷತಿ ॥ ೯ ॥

॥ ಸಾಯಣಭಾಷ್ಯಂ ॥

ವಿಪ್ರೋ ಮೇಧಾವೀ ಹೋತಾ ಹೋಮನಿಷ್ಪಾದಕೋಽಗ್ನಿರುಷರ್ಬುಧ ಉಷಃಕಾಲೇ ಯಾಗಮನಾಯ ಪ್ರಬುಧ್ಯಮಾನಾನ್ವಿಶ್ವಾನ್ದೇವಾನ್ಸೂರ್ಯಸ್ಯ ಸಂಬಂಧಿನೋ ರೋಚನಾತ್ಸ್ವರ್ಗಲೋಕಾದಿಹ ಕರ್ಮಣ್ಯಾಕೀಂ ವಕ್ಷತಿ। ಆವಹತು ॥ ಆಕೀಂ। ನಿಪಾತ ಆದ್ಯುದಾತ್ತಃ । ಸೂರ್ಯಸ್ಯ । ಸೂರ್ಯಶಬ್ದೋ ರಾಜಸೂಯಸೂರ್ಯೇತ್ಯಾದಿನಾ । ಪಾ- ೩. ೧. ೧೧೪ । ಕ್ಯಪ್ರತ್ಯಯಾಂತೋ ನಿಪಾತಿತಃ। ಕ್ಯಪಃ ಪಿತ್ತ್ವಾದ್ಧಾತುಸ್ವರೇಣಾದ್ಯುದಾತ್ತಃ । ರೋಚನಾತ್ । ರೋಚಮಾನಾತ್ । ರುಚ ದೀಪ್ತೌ । ಅನುದಾತ್ತೇತಶ್ಚ ಹಲಾದೇಃ । ಪಾ. ೩-೨-೧೪೯ । ಇತಿ ಕರ್ತರಿ ಯುಚ್ । ಚಿತ ಇತ್ಯಂತೋದಾತ್ತತ್ವಂ । ವಿಶ್ವಾನ್ । ವಿಶೇಃ ಕ್ವನಂತೋ ನಿತ್ತ್ವಾದಾದ್ಯುದಾತ್ತಃ। ಉಷರ್ಬುಧಃ । ಉಷರ್ಬುಧ್ಯಂತ ಇತ್ಯುಷರ್ಬುಧಃ। ಕ್ವಿಪ್ಚೇತಿ ಕ್ವಿಪ್ ಧಾತುಸ್ವರೇಣೋಕಾರ ಉದಾತ್ತಃ । ಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವಂ । ವಿಪ್ರಃ । ಋಜ್ರೇಂದ್ರೇತ್ಯಾದಿನಾರನ್। ನಿತ್ತ್ವಾದಾದ್ಯುದಾತ್ತಃ । ಹೋತಾ । ಹ್ವಯತೇಸ್ತ್ರಾಚ್ಛೀಲ್ಯೇ ತೃನ್ । ಬಹುಲಂ ಛಂದಸೀತಿ ಸಂಪ್ರಸಾರಣಂ । ಪರಪೂರ್ವತ್ವಂ । ಗುಣಃ । ನಿತ್ತ್ವಾದಾದ್ಯುದಾತ್ತಃ । ಇಹ । ಇದಮೋ ಹ ಇತಿ ಹಪ್ರತ್ಯಯಃ । ಇದಮ ಇಶಿತೀಶ್ । ಶಿತ್ತ್ವಾತ್ಸರ್ವಾದೇಶಃ । ಪ್ರತ್ಯಯಸ್ವರಃ। ವಕ್ಷತಿ । ವಹೇಃ ಪ್ರಾರ್ಥನಾಯಾಂ ಲಿಙರ್ಥೇ ಲೇಟ್। ತಸ್ಯ ತಿಪ್ । ಕರ್ತರಿ ಶಪ್ । ಶಪಿ ಪರತಃ ಸಿಬ್ಬಹುಲಂ ಲೇಟೀತಿ ಸಿಪ್। ಢತ್ವಕತ್ವಷತ್ವಾನಿ । ತಿಙ್ಙತಿಙ ಇತಿ ನಿಘಾತಃ ॥

॥ ಪ್ರತಿಪದಾರ್ಥ ॥

**ವಿಪ್ರಃ**—ಪ್ರಾಜ್ಞನಾದ (ಮತ್ತು) । **ಹೋತಾ**—ಹೋಮಸಂಪಾದಕನಾದ ಅಗ್ನಿಯು । **ಉಷರ್ಬುಧಃ**—ಯಾಗ ಗಮನಕ್ಕಾಗಿ ಉಷಃಕಾಲದಲ್ಲಿಯೇ ಎಬ್ಬಿಸಲ್ಪಟ್ಟ । **ವಿಶ್ವಾನ್ ದೇವಾನ್**—ಎಲ್ಲ ದೇವತೆಗಳನ್ನೂ । **ಸೂರ್ಯಸ್ಯ**—ಸೂರ್ಯನ । **ರೋಚನಾತ್** – ದಿವ್ಯಮಂಡಲದಿಂದ ಅಥವಾ ಸ್ವರ್ಗದಿಂದ । **ಇಹ**—ಈ ಕರ್ಮಕ್ಕೆ (ಯಜ್ಞಕ್ಕೆ) । **ಆಕೀಂ ವಕ್ಷತಿ**-ಕರೆತರಲಿ.

॥ ಭಾವಾರ್ಥ ॥

ಅಗ್ನಿಯು ಮೇಧಾವಿಯು. ಹೋಮಸಂಪಾದಕನು. ಯಾಗಾರ್ಥವಾಗಿ ಬರಲು ಎಲ್ಲ ದೇವತೆಗಳನ್ನೂ ಉಷಃಕಾಲದಲ್ಲಿಯೇ ಎಬ್ಬಿಸುತ್ತಾನೆ. ಅವನು ಅವರನ್ನೆಲ್ಲಾ ಸೂರ್ಯನ ಸಂಬಂಧವಾದ ಪ್ರಕಾಶಮಾನವಾದ ಸ್ವರ್ಗಲೋಕದಿಂದ ಈ ಯಾಗ ಕರ್ಮಕ್ಕೆ ಕರೆತರಲಿ.

## English Translation.

Let the wise invoker of the gods bring hither, from the region of solar light the Visve Devas (all the gods) that awake with the dawn.

|| ವಿಶೇಷವಿಷಯಗಳು ||

**ಆಕೀಂ**—ಹಿಕಂ ನುಕಂ ಸುಕಂ ಆಹಿಕಂ ಆಕೀಂ ಮೊದಲಾದ ಒಂಭತ್ತು ಶಬ್ದಗಳು ಸರ್ವಪದ ಸಮಾಮ್ನಾಯ ಎಂದು ಯಾಸ್ಕರು ಹೇಳಿರುವುದರಿಂದ ( ನಿ. ೩-೧೩ ) ಆಕೀಂ ಎಂಬ ಶಬ್ದಕ್ಕೆ ಸರ್ವಪದಶಬ್ದಾರ್ಥವು. ಇದನ್ನು ಉಪಸರ್ಗವನ್ನಾಗಿ ಉಪಯೋಗಿಸುವರು. ಆದುದರಿಂದ ಇಲ್ಲಿ **ಆಕೀಂ ವಕ್ಷತಿ** ಎಂದರೆ **ಆ ವಕ್ಷತಿ** ಎಂದರ್ಥವು.

**ಉಷರ್ಬುಧಃ**--**ಉಷಃಕಾಲೇ ಯಾಗಗಮನಾಯ ಪ್ರಬುಧ್ಯಮಾನಾನ್| ಉಷಃ ಬುಧ್ಯಂತ ಇತಿ ಉಷರ್ಬುಧಃ** || ಉಷಃಕಾಲದಲ್ಲಿ ಎಬ್ಬಿಸಲ್ಪಟ್ಟ.

**ಹೋತಾ**—ಇಲ್ಲಿ ಹೋತಾ ಎಂದರೆ ದೇವತೆಗಳನ್ನು ಆಹ್ವಾನ ಮಾಡುವ ಅಗ್ನಿಯು,

|| ವ್ಯಾಕರಣಪ್ರಕ್ರಿಯಾ ||

**ಆಕೀಮ್**—ನಿಪಾತವಾದ್ದರಿಂದ ಆದ್ಯುದಾತ್ತ.

**ಸೂರ್ಯರ್ಸ್ಯ, ರಾಜಸೂಯ, ಸೂರ್ಯ, ಮೃಷೋದ್ಯ, ರುಚ್ಯ, ಕುಪ್ಯ, ಕೃಷ್ಟಪಚ್ಯಾಽವ್ಯಥ್ಯಾಃ** ( ಪಾ. ಸೂ. ೩-೧-೧೧೪ ) ಈ ಏಳು ಶಬ್ದಗಳು ಕ್ಯಬಂತವಾಗಿ ನಿಪಾತಿಸಲ್ಪಡುವುವು ಎಂಬುದರಿಂದ ಕ್ಯಪ್ ಪ್ರತ್ಯಯಾಂತವಾಗಿ ಸೂರ್ಯಶಬ್ದವು ನಿಪಾತಿತವಾಗಿರುವುದು. **ಸರತಿ ಆಕಾಶೇ**=ಆಕಾಶದಲ್ಲಿ ಹೋಗುತ್ತಾನೆ ಎಂದು ವಿವಕ್ಷಿಸಿದರೆ ಸೃ ಗತೌ ಧಾತುವಿನ ಮುಂದೆ ಕ್ಯಪ್ ಬಂದಾಗ ಸೃಧಾತುವಿನ ಋಕಾರಕ್ಕೆ ಉಕಾರವು ನಿಪಾತಿತವಾಗುವುದು. ಅದು ಉರಣ್ರಪರಃ ಎಂಬುದರಿಂದ ರ ಪರವಾಗಿ ಬರುವುದು. ಸುರ್+ಯ. **ಹಲಿಚ** (ಪಾ. ಸೂ. ೮-೨-೭೭) ಹಲ್ ವರ್ಣಪರವಾಗಿರುವಾಗ ರೇಫಾಂತ ಅಥವಾ ವಕಾರಾಂತ ಧಾತುಗಳ ಉಪಾಂತ್ಯದಲ್ಲಿರುವ ಇ, ಉ, ಋ, ಲೃ ಗಳಿಗೆ ದೀರ್ಘ ಬರುವುದು ಎಂಬುದರಿಂದ ದೀರ್ಘ ಬರುವುದು, ಅಥವಾ **ಸುವತಿ ಕರ್ಮಣಿ ಲೋಕಂ ಪ್ರೇರಯತಿ**, ಜನರನ್ನು ಉದ್ಯೋಗ ಮಾಡುವಂತೆ ಪ್ರೇರಿಸುವನು ಎಂದು ವಿವಕ್ಷಿಸಿದರೆ ಷೂ ಪ್ರೇರಣೇ ಎಂದು ತುದಾದಿಗಣದ ಧಾತುವಿನ ಮುಂದೆ ಕ್ಯಪ್ ಬಂದಾಗ ಅದಕ್ಕೆ ರುಡಾಗಮವು ನಿಪಾತಿತವಾಗುವುದು, ಸೂರ್ಯ ಎಂದಾಗುವುದು. ಕ್ಯಪ್ ಪ್ರತ್ಯಯವು ಪಿತ್ತಾದ್ದರಿಂದ ಅನುದಾತ್ತ. ಆದ್ದರಿಂದ ಧಾತುಸ್ವರ ಬಂದು ಸೂರ್ಯಶಬ್ದವು ಆದ್ಯುದಾತ್ತವಾಗುವುದು.

**ರೋಚನಾತ್**—ರುಚ ದೀಪ್ತೌ, ಧಾತು. ಅನುದಾತ್ತೇತ್ತು. **ಅನುದಾತ್ತೇತಶ್ಚ ಹಲಾದೇಃ** (ಪಾ.ಸೂ. ೩-೨-೧೪೯) ಅಕರ್ಮಕವೂ ಅನುದಾತ್ತೇತ್ತೂ ಹಲಾದಿಯೂ ಆದ ಧಾತುವಿನ ಮುಂದೆ ಯುಚ್ ಬರುವುದು ಎಂಬುದರಿಂದ ಕರ್ತ್ರರ್ಥದಲ್ಲಿ ಯುಚ್. ಯುಗೆ **ಯುವೋರನಾಕೌ**, (ಪಾ. ಸೂ. ೭-೧-೧) ಎಂಬುದರಿಂದ ಅನಾದೇಶ, ಲಘೂಪಧ ಗುಣ. ರೋಚನ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತ,

**ವಿಶ್ವಾನ್**—ವಿಶ ಪ್ರವೇಶನೇ ಧಾತುವಿನ ಮುಂದೆ **ಅಶೂಪುಷಿ** (ಉ.ಸೂ. ೧-೧೪೯ ) ಎಂಬುದರಿಂದ ಕ್ವನ್ ಪ್ರತ್ಯಯ, ನಿತ್ತಾದ್ದರಿಂದ ಆದ್ಯುದಾತ್ತ

**ಉಷರ್ಬುಧಃ**—ಉಷಸಿ ಬುಧ್ಯಸ್ತೇ ಇತ್ಯುಷರ್ಬುಧಃ, ಉಷಸ್ ಶಬ್ದೋಪಪದಕವಾದ ಬುಧ ಅವಗಮನೇ ಧಾತುವಿನ ಮುಂದೆ **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಧಾತುಸ್ವರದಿಂದ ಬುಧ್ ಶಬ್ದದ ಉಕಾರವು ಉದಾತ್ತ. ಸಮಾಸಾನಂತರವೂ ಗತಿಕಾರಕೋಪಪದಾತ್ಕೃತ್ ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬಂದು ಅದೇ ನಿಲ್ಲುವುದು.

**ವಿಪ್ರಃ— ಋಜ್ರೇನ್ದ್ರಾಗ್ರವಿಪ್ರ** (ಉ. ಸೂ. ೨-೧೮೬) ಎಂಬುದರಿಂದ ಡುವಪ್ ಬೀಜಸಂತಾನೇ, ಎಂಬ ಧಾತುವಿನ ಮುಂದೆ ರನ್ ಪ್ರತ್ಯಯ ಬಂದಾಗ ಉಪಧಾಭೂತ ಅವರ್ಣಕ್ಕೆ ಇತ್ವವು ನಿಪಾತಿತವಾಗುವುದು. ನಿತ್ಸ್ವರದಿಂದ ಆದ್ಯುದಾತ್ತ.

**ಹೋತಾ**— ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಇದರ ಮುಂದೆ ತೃನ್, (ಪಾ.ಸೂ ೩-೨-೧೩೫) ಎಂಬುದರಿಂದ ತಾಚ್ಛೀಲ್ಯಾರ್ಥದಲ್ಲಿ ತೃನ್ ಬರುವುದು. **ಹ್ವಸ್ಸಂಪ್ರಸಾರಣಮ್** (ಪಾ. ಸೂ. ೬-೧-೩೨) ಎಂದು ಅನುವೃತ್ತವಾಗಲಾಗಿ **ಬಹುಲಂಛಂದಸಿ** (ಪಾ.ಸೂ. ೬-೧-೩೪)ಎಂಬುದರಿಂದ ಸಂಪ್ರಸಾರಣ. **ಸಂಪ್ರಸಾರಣಾಚ್ಚ** (ಪಾ. ಸೂ. ೬-೧-೧೦೮) ಎಂಬುದರಿಂದ ಪೂರ್ವರೂಪ, ಸಾರ್ವಧಾತುಕಾರ್ಧಧಾತುಕಯೋಃ (ಪಾ. ಸೂ. ೭-೩-೮೪) ಎಂಬುದರಿಂದ ಗುಣ, ಹೋತೃ. ನಿತ್ಸ್ವರದಿಂದ ಆದ್ಯುದಾತ್ತ.

**ಇಹ— ಇದಮೋಹಃ** (ಪಾ. ಸೂ. ೫-೩-೧೧) ಇದಂ ಶಬ್ದಪ್ರಕೃತಿಕವಾದ ಸಪ್ತಮ್ಯಂತ್ಯದ ಮುಂದೆ ಹ ಪ್ರತ್ಯಯ ಬರುವುದು ಎಂಬುದರಿಂದ ಹ ಪ್ರತ್ಯಯ ಬಂದರೆ ಇದಂ+ಙಿ. ಹ ತದ್ಧಿತಾಂತವಾದ್ದರಿಂದ **ಕೃತ್ತದ್ಧಿತಸಮಾಸಾಶ್ಚ** (ಪಾ ಸೂ. ೧-೨-೪೬) ಎಂಬುದರಿಂದ ಪ್ರಾತಿಪದಿಕ ಸಂಜ್ಞೆ ಬರುವುದು. **ಸುಪೋಧಾತುಪ್ರಾತಿಪದಿಕಯೋಃ** (ಪಾ.ಸೂ. ೨-೪-೭೧) ಎಂಬುದರಿಂದ ಸುಪ್ಪಾದ ಙಿಗೆ ಲುಕ್. **ಇದಮ್‌ಇಶ್**(ಪಾ.ಸೂ. ೫-೩-೩) ಪ್ರಾಗ್ದಿಶೀಯಪ್ರತ್ಯಯ ಪರವಾಗಿರುವಾಗ ಇದಂ ಶಬ್ದಕ್ಕೆ ಇಶಾದೇಶ ಬರುವುದು ಎಂಬುದರಿಂದ ಇದಂ ಗೆ ಇಶ್. ಅದು ಶಿತ್ತಾದ್ದರಿಂದ **ಅನೇಕಾಲ್ಶಿತ್ಸರ್ವಸ್ಯ** (ಪಾ. ಸೂ. ೧-೧-೫೫) ಎಂಬುದರಿಂದ ಸರ್ವಾದೇಶವಾಗಿ ಬರುವುದು. ಇಹ ಎಂದಾಗುವುದು. ಪ್ರತ್ಯಯ ಸ್ವರ ಬರುವುದು.

**ವಕ್ಷತಿ**— ವಹ ಪ್ರಾಪಣೇ ಧಾತು. **ಲಿಙರ್ಥೇಲೇಟ್** ( ಪಾ. ಸೂ. ೩-೪-೭ ) ಎಂಬುದರಿಂದ ಪ್ರಾರ್ಥನಾರೂಪವಾದ ಅರ್ಥದಲ್ಲಿ ಲೇಟ್, ಅದಕ್ಕೆ ತಿಪ್ ವಹ್+ತಿ. ಕರ್ತರಿ ಶಪ್ ಎಂಬುದರಿಂದ ಶಪ್. **ಸಿಬ್ಬಹುಲಂಲೇಟಿ** (ಪಾ. ಸೂ. ೩-೧-೩೪) ಎಂಬುದರಿಂದ ಶಪ್ ಪರದಲ್ಲಿರುವಾಗ ಧಾತುವಿನ ಮುಂದೆ ಸಿಪ್ ಬರುತ್ತೆ. ವಹ್+ಸ್+ಅ+ತಿ ಹೋಢಃ (ಪಾ. ಸೂ. ೮-೨-೩೧) ಪದಾಂತ ವಿಷಯದಲ್ಲೂ ಝಲ್ ಪರದಲ್ಲಿರುವಾಗಲೂ ಹಕಾರಕ್ಕೆ ಢಕಾರಾದೇಶ ಬರುವುದು ಎಂಬುದರಿಂದ ಹಕಾರಕ್ಕೆ ಢಕಾರ. **ಷಢೋಃಕಸ್ಸಿ** (ಪಾ.ಸೂ. ೮-೨-೪೧) ಸಕಾರ ಪರದಲ್ಲಿರುವಾಗ ಷಕಾರ ಢಕಾರಗಳಿಗೆ ಕಕಾರ ಬರುವುದು ಎಂಬುದರಿಂದ ಕ. **ಆದೇಶಪ್ರತ್ಯಯಯೋಃ** (ಪಾ. ಸೂ. ೮-೩-೫೯) ಎಂಬುದರಿಂದ ಸಕಾರಕ್ಕೆ ಷಕಾರ, ವಕ್ಷತಿ ಎಂದಾಗುವುದು. ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತ ಬರುವುದು ॥ ೯ ॥

॥ ಸಂಹಿತಾಪಾಠಃ ॥

ವಿಶ್ವೇಭಿಃ ಸೋಮ್ಯಂ ಮಧ್ವಗ್ನ ಇಂದ್ರೇಣ ವಾಯುನಾ ।
ಪಿಬಾ ಮಿತ್ರಸ್ಯ ಧಾಮಭಿಃ ॥ ೧೦ ॥

॥ ಪದಪಾಠಃ ॥

ವಿಶ್ವೇಭಿಃ । ಸೋಮ್ಯಂ । ಮಧು । ಅಗ್ನೇ । ಇಂದ್ರೇಣ । ವಾಯುನಾ ।
ಪಿಬ । ಮಿತ್ರಸ್ಯ । ಧಾಮಽಭಿಃ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ವಿಶ್ವೇಭಿಃ ಸರ್ವೈಃ ಪೂಷಭಗಾದಿಭಿರ್ದೇವೈರಿಂದ್ರೇಣ ವಾಯುನಾ ಮಿತ್ರಸ್ಯ ಸಂಬಂಧಿಭಿರ್ಧಾಮಭಿಸ್ತೇಜೋಭಿರ್ಮೂರ್ತಿವಿಶೇಷರೂಪೈಶ್ಚ ಸಹ ಸೋಮ್ಯಂ ಸೋಮಸಂಬಂಧಿ ಮಧು ಮಧುರಂ ಭಾಗಂ ಪಿಬ ॥ ವಿಶ್ವೇಭಿಃ ಬಹುಲಂ ಛಂದಸೀತಿ ಭಿಸ ಐಸಾದೇಶಾಭಾವಃ । ಸೋಮ್ಯಂ । ಸೋಮಮರ್ಹತಿ ಯ ಇತ್ಯನುವೃತ್ತೌ ಮಯೇ ಚ । ಪಾ. ೪-೪ ೧೩೮ । ಇತಿ ಯಪ್ರತ್ಯಯಃ ಸೋಮಸ್ಯ ವಿಕಾರ ಇತ್ಯರ್ಥೇ । ಯಸ್ಯೇತಿ ಚೇತ್ಯಕಾರಲೋಪಃ । ಪ್ರತ್ಯಯಸ್ವರಃ । ಫಲಿಪಾಟಿನಮಿಮನೀತ್ಯಾದಿನಾ । ಉ. ೧-೧೯ । ಉಪ್ರತ್ಯಯಃ । ನಿದಿತ್ಯನುವೃತ್ತೇರ್ನಿತ್ತ್ವಾದಾದ್ಯುದಾತ್ತಃ । ವಾಯುನಾ । ಕೃವಾಪಾಜೀತ್ಯಾದಿನಾ ಉಣ್ । ಆತೋ ಯುಕ್ ಚಿಣ್ಕೃತೋಃ । ಪಾ- ೭-೩-೩೩ । ಇತಿ ಯುಕ್ । ಪ್ರತ್ಯಯಸ್ವರಃ । ಪಿಬ ಪಾ ಪಾನೇ । ಲೋಟಃ ಸೇರ್ಹಿರಾದೇಶಃ । ಶಪಿ ಪಾಘ್ರೇತ್ಯಾದಿನಾ ಪಿಬಾದೇಶಃ । ಅತೋ ಹೇರಿತಿ ಹೇರ್ಲುಕ್ । ಶಪಃ ಪಿತ್ತ್ವಾದ್ಧಾತುಸ್ವರಃ । ಪಾದಾದಿತ್ವಾನ್ನ ನಿಘಾತಃ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘಃ । ಧಾಮಭಿಃ । ಧಾಞ್ । ಆತೋ ಮನಿನ್ನಿತಿ ಮನಿನ್ । ನಿತ್ಸ್ವರಃ ॥

॥ ಪ್ರತಿಪದಾರ್ಥ ॥

**ಅಗ್ನೇ**— ಎಲೈ ಅಗ್ನಿಯೇ । **ವಿಶ್ವೇಭಿಃ**— ಪೂಷ, ಭಗ ಮುಂತಾದ ಸಕಲ ದೇವತೆಗಳೊಡನೆಯೂ । **ಇಂದ್ರೇಣ**— ಇಂದ್ರನೊಡನೆಯೂ । **ವಾಯುನಾ**— ವಾಯುವಿನೊಡನೆಯೂ । **ಮಿತ್ರಸ್ಯ ಧಾಮಭಿಃ**— ಮಿತ್ರನ ಮೂರ್ತಿವಿಶೇಷರೂಪಗಳೊಡನೆಯೂ ತೇಜಸ್ಸುಗಳೊಡನೆಯೂ ಸಹ । **ಸೋಮ್ಯಂ ಮಧು**— ಮಧುರವಾದ ಸೋಮರಸವನ್ನು । **ಪಿಬ**— ಪಾನಮಾಡು.

॥ ಭಾವಾರ್ಥ ॥

ಎಲೈ ಅಗ್ನಿಯೇ ನೀನು ಇಂದ್ರನೊಡನೆಯೂ, ವಾಯುವಿನೊಡನೆಯೂ, ಪೂಷ, ಭಗ ಮುಂತಾದ ಇತರ ಎಲ್ಲ ದೇವತೆಗಳೊಡನೆಯೂ ಮತ್ತು ತೇಜೋರೂಪಗಳಾದ ಮಿತ್ರನ ಮೂರ್ತಿವಿಶೇಷಗಳೊಡನೆಯೂ ಸಹ ಮಧುರವಾದ ಸೋಮರಸವನ್ನು ಪಾನಮಾಡು.

## English Translation.

O Agni, drink this sweet soma juice with the Visve devas, Indra, Vayu, and the various forms of Mitra.

॥ ವಿಶೇಷವಿಷಯಗಳು ॥

ಈ ಋಕ್ಕನ್ನು ಅಗ್ನಿಷ್ಟೋಮಯಾಗದಲ್ಲಿ ಪ್ರಉಗಶಸ್ತ್ರಮಂತ್ರಪಠನದ ಯಾಜ್ಯಾಮಂತ್ರವನ್ನಾಗಿ ಉಪಯೋಗಿಸುವರು. ಆಶ್ವಲಾಯನ ಶ್ರೌತಸೂತ್ರದಲ್ಲಿ ಸ್ತೋತ್ರಮಗ್ರೇ ಶಸ್ತ್ರಾತ್ ಎಂಬ ಖಂಡದಲ್ಲಿ **ವಿಶ್ವೇಭಿಃ ಸೋಮ್ಯಂ ಮಧು** ಎಂಬ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಹೇಳಿರುವುದು. (ಆ. ೫-೧೦).

ಪಿಬ—ಛಂದಸ್ಸಿನ ಅನುಕೂಲಕ್ಕಾಗಿ ಸಂಹಿತಾಪಾಠದಲ್ಲಿ ಅಂತ್ಯಾಕ್ಷರವು ದೀರ್ಘವಾಗಿರುವುದು.

**ಮಿತ್ರಸ್ಯ ಧಾಮಭಿಃ—ಮಿತ್ರಸ್ಯ ಸಂಬಂಧಿಭಿರ್ಧಾಮಭಿಸ್ತೇಜೋಮೂರ್ತಿವಿಶೇಷರೂಪೈಃ**—ಮಿತ್ರನ ಸಂಬಂಧವಾದ ತೇಜೋಮೂರ್ತಿರೂಪಗಳಿಂದ with various forms of Mitra. **ಧಾಮಭಿಃ**—ಎಂದರೆ ತೇಜಸ್ಸುಗಳಿಂದ ಅಥವಾ ತೇಜೋಮೂರ್ತಿಗಳಿಂದ, Rays, ಇಲ್ಲಿ ಮಿತ್ರನ ತೇಜೋಮೂರ್ತಿಗಳು ಯಾವವು ಎಂಬುದು ಸ್ಪಷ್ಟವಾಗಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ವಿಶ್ವೇಭಿಃ—ಬಹುಲಂ ಛಂದಸಿ** (ಪಾ. ಸೂ. ೭-೧-೧೦) ಎಂಬುದರಿಂದ ಭಿಸ್ ಪ್ರತ್ಯಯಕ್ಕೆ **ಅತೋ ಭಿಸಐಸ್** (ಪಾ. ಸೂ. ೭-೧-೯) ಎಂಬುದರಿಂದ ಪ್ರಾಪ್ತವಾದ ಐಸ್ ಆದೇಶ ಬರುವುದಿಲ್ಲ.

**ಸೋಮ್ಯಂ—ಮಯೇ ಚ** (ಪಾ.ಸೂ. ೪-೪-೧೩೮) **ಸೋಮಮರ್ಹತಿ ಯಃ** (ಪಾ.ಸೂ. ೪-೪-೧೩೭) ಎಂಬುದರಿಂದ ಸೋಮಂ, ಯಃ ಎಂಬ ಪದಗಳು ಅನುವೃತ್ತವಾಗುವುವು. ಸೋಮಶಬ್ದಪ್ರಕೃತಿಕವಾದ ಸಮರ್ಥ ವಿಭಕ್ತ್ಯಂತದ ಮುಂದೆ ಆಗತ, ವಿಕಾರ, ಅವಯವ, ಪ್ರಕೃತವಚನ, ಎಂಬ ಮಯಡರ್ಥಗಳಲ್ಲಿ ಯಪ್ರತ್ಯಯ ಬರುವುದು ಎಂದು ಸೂತ್ರಾರ್ಥ. ಆಗತಾರ್ಥದಲ್ಲಿ ಪಂಚಮಿಯು ಸಮರ್ಥ ವಿಭಕ್ತಿ, ವಿಕಾರ, ಅವಯವ, ಈ ಅರ್ಥಗಳಲ್ಲಿ ಷಷ್ಠಿಯು ಸಮರ್ಥ ವಿಭಕ್ತಿ. ಪ್ರಕೃತ ವಚನದಲ್ಲಿ ಪ್ರಥಮಾವಿಭಕ್ತಿಯು ಸಮರ್ಥವಾದುದು. ಇಲ್ಲಿ ಸೋಮಸ್ಯ ವಿಕಾರಃ ಎಂದು ವಿವಕ್ಷಿಸಿದಾಗ ವಿಕಾರಾರ್ಥದಲ್ಲಿ ಷಷ್ಠ್ಯಂತದ ಮುಂದೆ ಯಪ್ರತ್ಯಯ ಬರುವುದು. ತದ್ಧಿತಾಂತವಾದ್ದರಿಂದ ಪ್ರಾತಿಪದಿಕ, ಸುಬ್ಲುಕ್, ಸೋಮ+ಯ **ಯಸ್ಯೇತಿ ಚ** (ಪಾ.ಸೂ. ೬-೪-೧೪೮) ಎಂಬುದರಿಂದ ಅಕಾರಕ್ಕೆ ಲೋಪ, ಪ್ರತ್ಯಯ ಸ್ವರ ಬರುವುದು. ದ್ವಿತೀಯಾ ಏಕವಚನದಲ್ಲಿ ಸೋಮ್ಯಂ ಎಂದಾಗುತ್ತೆ.

**ಮಧು**—ಫಲಿಪಾಟಿನಮಿಮನಿ (ಉ ಸೂ. ೧-೧೮) ಎಂಬುದರಿಂದ ಉಪ್ರತ್ಯಯ. ಇಲ್ಲಿ ನಿತ್ ಎಂದು ಅನುವೃತ್ತವಾಗುವುದರಿಂದಪ್ರತ್ಯಯವು ನಿತ್ತಾಗುವುದು. ಆದ್ದರಿಂದ ನಿತ್ಸ್ವರ ಬರುವುದು. **ವಾಯೋನಾ-ಕೃವಾ-ಪಾಜಿ** (ಉ ಸೂ ೧-೧) ಎಂಬುದರಿಂದ ವಾಧಾತುವಿನ ಮುಂದೆ ಉಣ್. **ಆತೋಯುಕ್ ಚಿಣ್‌ಕೃತೋಃ**

(ಪಾ. ಸೂ. ೭-೩-೭೮) ಚಿಣ್‌ಕೃತ್ಪ್ರತ್ಯಯಗಳು ಪರದಲ್ಲಿರುವಾಗ ಆಕಾರಾಂತ ಧಾತುವಿಗೆ ಯುಗಾಗಮ ಬರುವುದು. ಯುಕ್ ಕಿತ್ತಾದ್ದರಿಂದ ಅಂತಾವಯವವಾಗಿ ಬರುವುದು. ಪ್ರತ್ಯಯಸ್ವರ ಬರುವುದು.

ಪಿಬ—ಪಾ ಪಾನೇ, ಲೋಟ್ ಮಧ್ಯಮಪುರುಷ ಏಕವಚನ ಸಿಪ್, ಸಿಗೆ ಸೇರ್ಹ್ಯಪಿಚ್ಚ (ಪಾ. ಸೂ. ೩-೪-೮೭) ಎಂಬುದರಿಂದ ಹಿ ಆದೇಶ. ಕರ್ತರಿಶಪ್ (ಪಾ. ಸೂ. ೩-೧-೬೮) ಎಂಬುದರಿಂದ ವಿಕರಣ ಶಪ್ ಪಾಘ್ರಾಧ್ಮಾ (ಪಾ. ಸೂ. ೭-೩-೭೮) ಎಂಬುದರಿಂದ ಪಾಗೆ ಪಿಬ ಆದೇಶ, ಅತೋಹೇಃ (ಪಾ. ಸೂ. ೬-೪-೧೦೫) ಎಂಬುದರಿಂದ ಹಿಗೆ ಲುಕ್ ಶಪ್ ಪಿತ್ತಾದ್ದರಿಂದ ಧಾತುಸ್ವರವೇ ನಿಲ್ಲುವುದು. ಪಾದದ ಆದಿಯಲ್ಲಿರುವುದರಿಂದ ತಿಙ್ಙತಿಙಃ (ಪಾ. ಸೂ. ೮-೧-೨೮) ಎಂಬುದರಿಂದ ಅನುದಾತ್ತ ಬರುವುದಿಲ್ಲ. ದ್ವ್ಯಚೋಽತಸ್ತಿಙಃ (ಪಾ. ಸೂ. ೬-೩-೧೩೫) ಮಂತ್ರದಲ್ಲಿ ಎರಡು ಅಚ್ಚನ್ನು ಹೊಂದಿರುವ ತಿಙಂತದ ಕೊನೆಯ ಅಕಾರಕ್ಕೆ ದೀರ್ಘ ಬರುವುದು ಎಂಬುದರಿಂದ ಸಂಹಿತಾಕಾಲದಲ್ಲಿ ಪಿಬ ಎಂಬುದರ ಅಕಾರಕ್ಕೆ ದೀರ್ಘ ಬರುವುದು.

ಧಾಮಭಿಃ—ಡುಧಾಞ್ ಧಾರಣಪೋಷಣಯೋಃ, ಧಾತು. ಆತೋಮನಿನ್ ಕ್ವನಿಬ್ವನಿಪಶ್ಚ (ಪಾ. ಸೂ. ೩-೨-೭೪) ಎಂಬುದರಿಂದ ಮನಿನ್ ಪ್ರತ್ಯಯ. ಪ್ರತ್ಯಯವು ನಿತ್ತಾದ್ದರಿಂದ ನಿತ್ಸ್ವರ ಬಂದು ಧಾಮನ್ ಶಬ್ದವು ಆದ್ಯುದಾತ್ತವಾಗುವುದು ॥ ೧೦ ॥

॥ ಸಂಹಿತಾಪಾಠಃ ॥

ತ್ವಂ ಹೋತಾ ಮನುರ್ಹಿತೋಽಗ್ನೇ ಯಜ್ಞೇಷು ಸೀದಸಿ ।
ಸೇಮಂ ನೋ ಅಧ್ವರಂ ಯಜ ॥ ೧೧ ॥

॥ ಪದಪಾಠಃ ॥

ತ್ವಂ । ಹೋತಾ । ಮನುಃ ಽ ಹಿತಃ । ಅಗ್ನೇ । ಯಜ್ಞೇಷು । ಸೀದಸಿ ।
ಸಃ । ಇಮಂ । ನಃ । ಅಧ್ವರಂ । ಯಜ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಮನುರ್ಹಿತೋ ಮನುಷಾ ಹೋತ್ರಾದಿರೂಪೇಣ ಮನುಷ್ಯೇಣ ಹಿತಃ ಸಂಪಾದಿತೋ ಹೋಮನಿಷ್ಪಾದಕೋ ಯಸ್ತ್ವಂ ಯಜ್ಞೇಷು ಸೀದಸಿ ತಿಷ್ಠಸಿ ಸ ತ್ವಂ ನೋಽಸ್ಮದೀಯಮಿಮಮಧ್ವರಂ ಯಜ್ಞಂ ಯಜ ನಿಷ್ಪಾದಯ ॥ ಮನುರ್ಹಿತಃ । ಮನ್ಯತ ಇತಿ ಮನುಃ । ನಿಚ್ಚೇತ್ಯನುವೃತ್ತೌ ಬಹುಲಮನ್ಯತ್ರಾಪಿ । ಉ. ೨-೧೨೨ । ಉಸ್ । ನಿತ್ತ್ವಾದಾದ್ಯುದಾತ್ತಃ । ಹಿತಃ । ಧಾಞೋ ಧಾತೋ-

ನಿಷ್ಠೇತಿ ಕ್ತ ಪ್ರತ್ಯಯಃ | ದಧಾತೇರ್ಹಿರಿತಿ ಹಿರಾದೇಶಃ | ಮನುಷಾ ಹಿತೋ ಮನುರ್ಹಿತಃ | ಕರ್ತೃಕರಣೇ ಕೃತಾ ಬಹುಲಮಿತಿ ಸಮಾಸಃ | ಕೃತ್ಸ್ವರಾಪವಾದೇನ ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ | ಸೀದಸಿ | ಷದ್ಲೃ ವಿಶರಣಗತ್ಯವಸಾದನೇಷು | ಲಟಃ ಸಿಪ್ | ಶಪಿ ಪಾಘ್ರಾಧ್ಮೇತ್ಯಾದಿನಾ ಸೀದಾದೇಶಃ | ನಿಘಾತಃ | ಸೇಮಮಿತ್ಯತ್ರ ಸಂಹಿತಾಯಾಂ ಸೋಽಚಿ ಲೋಪೇ ಚೇತ್ಪಾದಪೂರಣಂ | ಪಾ. ೬-೧-೧೩೪ || ಇತಿ ಸೋರ್ಲೋಪೇ ಗುಣಃ | ಅಧ್ವರಂ | ನ ವಿದ್ಯತೇ ಧ್ವರೋ ಹಿಂಸಾ ಯಸ್ಮಿನ್ನಸಾವಧ್ವರಃ | ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ | ನೋಽಧ್ವರಮಿತ್ಯತ್ರ ಸಂಹಿತಾಯಾಮೇಙಃ ಪದಾಂತಾದತಿ| ಪಾ. ೬-೧-೧೦೯ | ಇತಿ ಪೂರ್ವಂ ರೂಪಂ ಪ್ರಾಪ್ತಂ ಪ್ರಕೃತ್ಯಾಂತಃಪಾದಮವ್ಯಪರ ಇತಿ ಪ್ರಕೃತಿಭಾವಾನ್ನಿವರ್ತತೇ ||

|| ಪ್ರತಿಪದಾರ್ಥ ||

ಅಗ್ನೇ—ಎಲೈ ಅಗ್ನಿಯೇ, ( ಯಾವ ) | ತ್ವಂ—ನೀನು | ಮನುರ್ಹಿತಃ—ಹೋತ್ರಾದಿಮಾನವರಿಂದ ನಿಯಮಿತನಾಗಿಯೂ | ಹೋತಾ—ಹೋಮನಿಷ್ಪಾದಕನಾಗಿಯೂ | ಯಜ್ಞೇಷು—ನಮ್ಮ ಯಜ್ಞಕಾಲಗಳಲ್ಲಿ ಸೀದಸಿ—(ನಮ್ಮೊಡನೆ) ಇರುತ್ತೀಯೋ | ಸಃ—ಅಂತಹ ನೀನು | ನಃ—ನಮ್ಮ | ಇಮಂ ಅಧ್ವರಂ—ಈ ಯಜ್ಞವನ್ನು | ಯಜ—ನೆರವೇರಿಸು.

|| ಭಾವಾರ್ಥ ||

ಎಲೈ ಅಗ್ನಿಯೇ, ನೀನು ದೇವತೆಗಳನ್ನು ಯಜ್ಞಕ್ಕೆ ಕರೆದುಕೊಂಡುಬಂದು ಮಾನವರಾದ ನಮ್ಮಿಂದ ಮಾಡಲ್ಪಡುವ ನಮ್ಮ ಯಜ್ಞಕಾಲದಲ್ಲಿ ನಮ್ಮೊಡನೆ ಇರುತ್ತೀಯೆ. ಅಂತಹ ನೀನು ನಮ್ಮ ಯಜ್ಞವನ್ನು ನೆರವೇರಿಸು.

## English Translation.

O Agni, appointed by man as the invoker of the gods you are present at the sacrifice. Therefore perform this our sacrifice.

|| ವಿಶೇಷವಿಷಯಗಳು ||

ಮನುರ್ಹಿತಃ--ಮನ್ಯತ ಇತಿ ಮನುಃ | ಮನುಷಾ ಹೋತ್ರಾದಿರೂಪೇಣ ಮನುಷ್ಯೇಣ ಹಿತಃ | ಸಂಪಾದಿತಃ | ಮನುಷ್ಯನಾದ ಯಜಮಾನನು ಯಜ್ಞಕರ್ಮದಲ್ಲಿ ಭಾಗವಹಿಸುವುದಕ್ಕಾಗಿ ನಿಯಮಿಸಿರುವ ಅಥವಾ ಯಜ್ಞದಲ್ಲಿ ಮುಖ್ಯಪಾತ್ರವನ್ನು ವಹಿಸುವನಾದುದರಿಂದ ಅಗ್ನಿಕುಂಡದಲ್ಲಿ ಇಡಲ್ಪಟ್ಟಿರುವವನು.

‖ ವ್ಯಾಕರಣಪ್ರಕಿಯಾ ‖

**ಮನುರ್ಹಿತಃ**—ಮನ್ಯತೇ ಇತಿ ಮನುಃ—ಮನ ಜ್ಞಾನೇ ದಿವಾದಿಧಾತು. **ಬಹುಲಮನ್ಯತ್ರಾಪಿ** (ಉ. ಸೂ. ೨-೨೭೮) **ನಿತ್** (ಉ. ಸೂ. ೨-೨-೬೪) ಎಂಬುದರಿಂದ ಇಲ್ಲಿ ನಿತ್ ಎಂದು ಅನುವೃತ್ತವಾಗುವುದು. ಬೇರೆ ಧಾತುಗಳ ಮುಂದೆಯೂ ಬಹುಲವಾಗಿ ಉಸ್ ಬರುವುದು. ಅದು ನಿತ್ತಾಗುವುದು ಎಂಬುದರಿಂದ ಮನಧಾತುವಿನ ಮುಂದೆ ಉಸ್ ಪ್ರತ್ಯಯ, ಮನ್+ಉಸ್, ಮನುಃ. ಪ್ರತ್ಯಯವು ನಿತ್ತಾದ್ದರಿಂದ ಇದು ಆದ್ಯುದಾತ್ತ.

**ಹಿತಃ**—ಡುಧಾಞ್ ಧಾರಣಪೋಷಣಯೋಃ ಧಾತು. ಇದರ ಮುಂದೆ **ನಿಷ್ಠಾ** (ಪಾ ಸೂ- ೩-೨-೧೦೨) ಎಂಬುದರಿಂದ ಕರ್ಮಣಿಕ್ತಪ್ರತ್ಯಯ. ಧಾ+ತ **ದಧಾತೇರ್ಹಿಃ** (೭.೪-೪೨) ಎಂಬುದರಿಂದ ಧಾಗೆ ಹಿ ಆದೇಶ. ಮನುಷಾ ಹಿತಃ ಮನುರ್ಹಿತಃ **ಕರ್ತೃಕರಣೇ ಕೃತಾಬಹುಲಮ್** (ಪಾ. ಸೂ. ೨-೧-೩೯) ಕರ್ತೃಕರಣಗಳಲ್ಲಿ ಯಾವುದಾದರೂ ಒಂದು ಅರ್ಥವನ್ನು ಹೇಳುವ ತೃತೀಯಾವಿಭಕ್ತಿಯನ್ನು ಕೊನೆಯಲ್ಲಿ ಹೊಂದಿರುವ ಶಬ್ದವು ಸಮರ್ಥವಾದ ಕೃದಂತದೊಂದಿಗೆ ಬಹುಲವಾಗಿ ಸಮಾಸವನ್ನು ಹೊಂದುವುದು ಎಂಬುದರಿಂದ ಸಮಾಸ. ಇಲ್ಲಿ **ಸಮಾಸಸ್ಯ** (ಪಾ. ಸೂ. ೬-೧-೨೨೩) ಎಂಬುದರಿಂದ ಅನ್ತೋದಾತ್ತ ಪ್ರಾಪ್ತವಾದರೆ ಅದನ್ನು ಬಾಧಿಸಿ **ತತ್ಪುರುಷೇ ತುಲ್ಯಾರ್ಥತೃತೀಯಾ** ( ಪಾ. ಸೂ. ೬-೨-೨ ) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಪ್ರಾಪ್ತವಾದರೆ ಅದನ್ನು ಬಾಧಿಸಿ **ಗತಿಕಾರಕೋಪಪದಾತ್ಕೃತ್** ( ಪಾ. ಸೂ. ೬-೨-೧೩೯ ) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಪ್ರಾಪ್ತವಾದರೆ ಅದನ್ನು ಬಾಧಿಸಿ **ಥಾಥಘಞ್ಕ್ತಾಜಬಿತ್ರಕಾಣಾಮ್** (ಪಾ. ಸೂ. ೬-೨-೧೪೪) ಎಂಬುದರಿಂದ ಅಂತೋದಾತ್ತ ಪ್ರಾಪ್ತವಾದರೆ ಅದನ್ನೂ ಬಾಧಿಸಿ, **ತೃತೀಯಾಕರ್ಮಣಿ** (ಪಾ. ಸೂ. ೬-೨-೪೮) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುವುದು. ಕೃತ್ಸ್ವರಾಪವಾದೇನ ಎಂಬ ವೇದಭಾಷ್ಯದ ಮುಂದೆ ಥಾಥಾದಿ ಸೂತ್ರೇಣಾನ್ತೋದಾತ್ತೇ ಪ್ರಾಪ್ತೇ ತದಪವಾದೇನ ಎಂದು ಸೇರಿಸಿಕೊಳ್ಳಬೇಕು. ಆದುದರಿಂದಲೇ ಶೇಖರಕಾರರು ತೃತೀಯಾಕರ್ಮಣಿ ಎಂಬ ಸೂತ್ರದಲ್ಲಿ ಅಯಮಪಿ ಥಾಥಾದಿ ಸ್ವರಾಪವಾದಃ ಅಂದರೆ ಇದೂ ದಾಥಘಞ್ ಎಂಬ ಸೂತ್ರದಿಂದ ವಿಹಿತವಾದ ಸ್ವರಕ್ಕೆ ಅಪವಾದ ಎಂದು ಕಂಠೋಕ್ತವಾಗಿ ಹೇಳಿರುವರು.

**ಸೀದಸಿ**—ಷದ್ಲೃ ವಿಶರಣಗತ್ಯವಸಾದನೇಷು, ಧಾತು. ಇದರ ಮುಂದೆ ಲಟ್ಮಧ್ಯಮಪುರುಷ ಏಕವಚನ ಸಿಪ್. ಧಾತ್ವಾದೇಃ ಷಃಸಃ, ಎಂಬುದರಿಂದ ಷಕಾರಕ್ಕೆ ಸಕಾರ ಸದ್+ಸಿ ಕರ್ತರಿಶಪ್, ಎಂಬುದರಿಂದ ಶಪ್ ವಿಕರಣ. **ಪಾಘ್ರಾಧ್ಮಾ** (ಪಾ. ಸೂ. ೭-೩-೩೮) ಎಂಬುದರಿಂದ ಸದ್ ಗೆ ಸೀದಾದೇಶ. ಸೀದಸಿ ಎಂದಾಗುವುದು. ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತ ಬರುವುದು.

**ಸೇಮಮ್**—ಸಸ್+ಇಮಮ್ ಎಂದಿರುವಾಗ **ಸೋಽಚಿಲೋಪೇಚೇತ್ಪಾದಪೂರಣಮ್** (ಪಾ. ಸೂ. ೬-೧-೧೩೪) ಲೋಪವು ಬಂದರೇನೇ ಪಾದ ಪೂರಣವಾಗುವ ಪಕ್ಷಕ್ಕೆ ಸಸ್ ಎಂಬುದರ ಸುಪ್ರತ್ಯಯಕ್ಕೆ ಅಚ್ಪರ್ಣ ಪರದಲ್ಲಿರುವಾಗ ಲೋಪ ಬರುವುದು ಎಂಬುದರಿಂದ ಸ್‌ಗೆ ಲೋಪ. ಇಲ್ಲಿ ಸ್ ಗೆ ಲೋಪ ಬರದೇ ಇದ್ದರೆ ಸಸ್+ಇಮಮ್ಎಂದಿರುವಾಗ **ಸಸಜುಷೋರುಃ** (ಪಾ.ಸೂ. ೮-೨-೬೬) ಎಂಬುದರಿಂದ ಸ್‌ಗೆ ರುತ್ವ. **ಭೋಭಗೋ** (ಪಾ. ಸೂ. ೮-೩-೧೭) ಎಂಬುದರಿಂದ ರುಗೆ ಯಾದೇಶ, ಸಯ್+ಇಮಮ್. **ಲೋಪಶ್ಶಾಕಲ್ಯಸ್ಯ** (ಪಾ.ಸೂ ೮-೩-೧೯) ಎಂಬುದರಿಂದ ಯತ್ವ. ನಂತರ ಯ.ಲೋಪ ಸ+ಇಮಮ್ ಎಂದಾಗುವುದು. ಈಗ ಆದ್ಗುಣಃ (ಪಾ ಸೂ. ೬-೧-) ಎಂಬುದರಿಂದ ಗುಣವನ್ನು ಮಾಡುವಾಗ ಲೋಪಶ್ಶಾಕಲ್ಯಸ್ಯ ಎಂಬುದರಿಂದ ಬಂದ ಯಲೋಪವು **ಪೂರ್ವತ್ರಾಸಿ**–

ದ್ಧಮ್ (ಪಾ. ಸೂ. ೮-೨-೧) ಎಂಬುದರಿಂದ ಅಸಿದ್ಧವಾಗುವುದು. ಏವಂಚ ಗುಣವಿಧಾಯಕಶಾಸ್ತ್ರದೃಷ್ಟಿಯಿಂದ ಸಯ್ ಇಮಮ್ ಎಂದು ಇರುವುದು. ಈಗ ಅವರ್ಣಕ್ಕೆ ಇಕಾರ ಪರವಾಗುವುದಿಲ್ಲವಾದ್ದರಿಂದ ಗುಣ ಬರುವುದಿಲ್ಲ. ಸ+ಇಮಮ್ ಎಂದೇ ಇರಬೇಕಾಗುವುದು. ಹೀಗಾದರೆ ಸೇಮಂನೋ ಅಧ್ವರಂ ಯಜ, ಎಂಬಲ್ಲಿ ಸ ಇಮಂ ನೋ ಅಧ್ವರಂ ಯಜ, ಎಂದಿರಬೇಕಾಗುವುದು. ಈಗ ಪಾದದಲ್ಲಿ ಒಂಭತ್ತು ಅಕ್ಷರಗಳಾಗುವುವು. ಅಂದರೆ ಪಾದಪೂರ್ತಿಗೆ ಸಾಕಾದ ೮ ಅಕ್ಷರಗಳಿಗಿಂತ ೧ ಅಕ್ಷರ ಜಾಸ್ತಿಯಾಗುವುದು. ಆದ್ದರಿಂದ ಪಾದ ಪೂರಣವಾಗುವುದಿಲ್ಲ. **ಸೋಽಚಿ** (ಪಾ. ಸೂ. ೬-೧-೧೩೪) ಎಂಬುದರಿಂದ ಸ್ ಗೆ ಲೋಪ ಬಂದರೆ **ಪೂರ್ವತ್ರಾಸಿದ್ಧಮ್** ಎಂಬುದು ಬರುವುದಿಲ್ಲವಾದರಿಂದ ಗುಣ ಬರುವುದು, ಸೇಮಮ್ ಎಂದಾಗುವುದು. ಸೇಮಂ ನೋ ಅಧ್ವರಂ ಯಜ, ಎಂಬಲ್ಲಿ ೮ ಅಕ್ಷರಗಳಾಗುವುವು. ಆದ್ದರಿಂದ ಪಾದ ಪೂರಣೆಯಾಗುವುದು.

**ಅಧ್ವರಮ್**—ನ ವಿದ್ಯತೇ ಧ್ವರಃ ಹಿಂಸಾ ಯಸ್ಮಿನ್ ಸಃ ಅಧ್ವರಃ, ಯಾವುದರಲ್ಲಿ ಹಿಂಸೆ ಇಲ್ಲವೋ ಅದು ಎಂದರ್ಥ, ಬಹುವ್ರೀಹಿಯಾದ್ದರಿಂದ ಪೂರ್ವಪದಪ್ರಕೃತಿಸ್ವರ ಪ್ರಾಪ್ತವಾದರೆ ಅದನ್ನು ಬಾಧಿಸಿ **ನಞ್-ಸುಭ್ಯಾಮ್** (ಪಾ. ಸೂ. ೬-೨-೧೭೨ ) ಎಂಬುದರಿಂದ ಉತ್ತರಪದಕ್ಕೆ ಅಂತೋದಾತ್ತ ಬರುವುದು. ನಸ್+ ಅಧ್ವರಮ್ ಎಂದಿರುವಾಗ **ಸಸಜುಷೋರುಃ** (ಪಾ. ಸೂ. ೮-೨-೬೬) ಎಂಬುದರಿಂದ ಸ್ ಗೆ ರು ಆದೇಶ. **ಅತೋ-ರೋರಪ್ಲುತಾದಪ್ಲುತೇ** (ಪಾ. ಸೂ. ೬-೧-೧೧೩) ಎಂಬುದರಿಂದ ರುಗೆ ಉತ್ವ, ನ+ಉ+ಅಧ್ವರಮ್. **ಆದ್ಗುಣಃ** (ಪಾ. ಸೂ. ೬-೧-೮೭) ಎಂಬುದರಿಂದ ಗುಣ, ನೋ+ಅಧ್ವರಮ್ ಎಂದಾಗುವುದು. ಈಗ ಸಂಹಿತಾಕಾಲದಲ್ಲಿ **ಏಙಃಪದಾಂತಾದತಿ** (ಪಾ. ಸೂ. ೬-೧-೧೦೯) ಪದದಕೊನೆಯಲ್ಲಿರುವ ಏ ಓ ಗಳಿಗೆ ಹ್ರಸ್ವಾಕಾರ ಪರದಲ್ಲಿರುವಾಗ ಪೂರ್ವರೂಪ ಬರುವುದು ಎಂಬುದರಿಂದ ಪೂರ್ವರೂಪವು ಪ್ರಾಪ್ತವಾಗುವುದು. ಆದರೂ **ಪ್ರಕೃತ್ಯಾಂತಃಪಾದಮವ್ಯಪರೇ** (ಪಾ. ಸೂ. ೬-೧-೧೧೫) ಋಕ್ಪಾದದ ಮಧ್ಯದಲ್ಲಿರುವ ಏ ಓ ಗಳಿಗೆ ವಕಾರ ಯಕಾರಗಳ ಹಿಂದಿಲ್ಲದ ಹ್ರಸ್ವಾಕಾರ ಪರದಲ್ಲಿದ್ದರೆ ಪ್ರಕೃತಿಭಾವ ಬರುವುದು ಎಂಬುದರಿಂದ ಪ್ರಕೃತಿಭಾವ ಬರುವುದು. ಆದ್ದರಿಂದ ಪೂರ್ವರೂಪವು ಬರುವುದಿಲ್ಲ. ನೋ ಅಧ್ವರೇ ಎಂದೇ ಇರುವುದು ॥ ೧೧ ॥

॥ ಸಂಹಿತಾಪಾಠಃ ॥

ಯುಕ್ಷ್ವಾ ಹ್ಯರುಷೀ ರಥೇ ಹರಿತೋ ದೇವ ರೋಹಿತಃ ।
ತಾಭಿರ್ದೇವಾँ ಇಹಾ ವಹ ॥ ೧೨ ॥

॥ ಪದಪಾಠಃ ॥

ಯುಕ್ಷ್ವ । ಹಿ । ಅರುಷೀಃ । ರಥೇ । ಹರಿತಃ । ದೇವ । ರೋಹಿತಃ ॥
ತಾಭಿಃ । ದೇವಾನ್ । ಇಹ । ಆ । ವಹ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ದೇವಾಗ್ನೇ ರೋಹಿತೋ ರೋಹಿಚ್ಛಬ್ದಾಭಿಧೇಯಾಸ್ತ್ವದೀಯಾ ವಡವಾ ರಥೇ ಯುಕ್ಷ್ವ । ಯೋಜಯ । ಹಿಶಬ್ದಃ ಪಾದಪೂರಣಾರ್ಥಃ । ಕೀದೃಶೀಃ । ಅರುಷೀರ್ಗತಿಮತೀರ್ಹರಿತೋ ಹರ್ತುಂ ರಥಾರೂಢಾನ್ಪುರುಷಾನ್ನೇತುಂ ಸಮರ್ಥಾಃ । ತಾಭಿರ್ವಡವಾಭಿರಿಹಾಸ್ಮಿನ್ಕರ್ಮಣಿ ದೇವಾನಾ ವಹ॥ ಯುಕ್ಷ್ವ। ಯುಜಿರ್ ಯೋಗೇ । ಲೋಟ್ । ಸ್ವರಿತೇತ್ವಾದಾತ್ಮನೇಪದಂ । ಥಾಸಃ ಸೇ । ಸವಾಭ್ಯಾಂ ವಾಮೌ । ರುಧಾದಿಭ್ಯಃ ಶ್ನಮ್ । ತಸ್ಯ ಬಾಹುಲಕಾಲ್ಲುಕ್ । ಕುತ್ವಷತ್ವೇ । ಪ್ರತ್ಯಯಸ್ವರೇಣಾಂತೋದಾತ್ತಃ । ಸಂಹಿತಾಯಾಂ ದ್ವ್ಯಚೋಽತಸ್ತಿಙ ಇತಿ ದೀರ್ಘ । ಅರುಷೀಃ । ಋ ಗತೌ । ಋಂತಿ ಗಚ್ಛಂತೀತ್ಯರುಷ್ಯೋ ವಡವಾಃ । ಋಹನಿಭ್ಯಾಮುಷನ್ । ಉ. ೪-೭೩ । ಧಾತೋರ್ಗುಣೋ ರಪರತ್ವಂ । ನಿತ್ತ್ವಾದಾದ್ಯುದಾತ್ತೋಽರುಷಶಬ್ದಃ। ತಸ್ಮಾತ್ಸ್ತ್ರಿಯಾಂ ಛಾಂದಸೋ ಙೀಪ್। ಶಸಿ ಪ್ರಥಮಯೋಃ ಪೂರ್ವಸವರ್ಣಃ। ಪಾ ೬-೧-೧೦೨ । ಇತಿ ದೀರ್ಘಃ । ರಥೇ । ರಮೇರೌಣಾದಿಕಃ ಕ್ಥನ್ಪ್ರತ್ಯಯಃ । ನಿತ್ವಾದಾದ್ಯುದಾತ್ತಃ । ಹರಿತಃ। ಹೃಸೃರುಹಿಯುಷಿಭ್ಯ ಇತಿಃ । ಉ. ೧-೯೭ । ಇತಿ ಹರತೇರಿತಿಪ್ರತ್ಯಯಃ । ಇಕಾರಃ ಪ್ರತ್ಯಯಸ್ವರೇಣೋದಾತ್ತಃ । ರೋಹಿತಃ । ರುಹೇರಪಿ ತೇನೈವ ಸೂತ್ರೇಣೇತಿಃ । ಇಕಾರಃ ಪ್ರತ್ಯಯಸ್ವರೇಣೋದಾತ್ತಃ । ತಾಭಿಃ । ಸಾವೇಕಾಚ ಇತಿ ವಿಭಕ್ತೇಃ ಪ್ರಾಪ್ತಮುದಾತ್ತತ್ವಂ ಸಾವವರ್ಣೇತಿ ನಿಷಿಧ್ಯತೇ । ದೇವಾನಿತ್ಯತ್ರ ಪೂರ್ವವದ್ರುತ್ವಾನುನಾಸಿಕೌ ॥ ೨೭ ॥

॥ ಪ್ರತಿಪದಾರ್ಥ ॥

**ದೇವ**—ಪ್ರಕಾಶಮಾನನಾದ ಅಗ್ನಿಯೇ । **ಅರುಷೀಃ**—ವೇಗವಾಗಿ ಓಡಬಲ್ಲ । **ಹರಿತಃ**—ಎಳೆಯಲು ಸಮರ್ಥಗಳಾದ । **ರೋಹಿತಃ**—ರೋಹಿತ್ ಎಂಬ ಹೆಸರುಳ್ಳ ನಿನ್ನ ಹೆಣ್ಣು ಕುದುರೆಗಳನ್ನು । **ರಥೇ**—ರಥಕ್ಕೆ **ಯುಕ್ಷ್ವ**—ಸೇರಿಸು (ನೊಗಕ್ಕೆ ಕಟ್ಟು) । **ತಾಭಿಃ**—ಆ ಹೆಣ್ಣು ಕುದುರೆಗಳ ಸಹಾಯದಿಂದ । **ಇಹ**—ಈ ನಮ್ಮ ಯಜ್ಞಕರ್ಮನಿಮಿತ್ತವಾಗಿ । **ದೇವಾನ್**—ದೇವತೆಗಳನ್ನು । **ಆ ವಹ**—ಕರೆದುಕೊಂಡು ಬಾ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ದೇವತಾತ್ಮನು. ರೋಹಿತ್ ಎಂಬ ನಿನ್ನ ಹೆಣ್ಣುಕುದುರೆಗಳು ಬಲಶಾಲಿಗಳು. ವೇಗವಾಗಿ ಓಡಬಲ್ಲವು. ಕುಳಿತಿರುವವರನ್ನು ಅನಾಯಾಸವಾಗಿ ಎಳೆಯಬಲ್ಲವು. ಆ ಕುದುರೆಗಳನ್ನು ನಿನ್ನ ರಥಕ್ಕೆ ಕಟ್ಟಿ ಅವುಗಳ ಸಹಾಯದಿಂದ ನಮ್ಮ ಈ ಯಜ್ಞಕರ್ಮನಿಮಿತ್ತವಾಗಿ ದೇವತೆಗಳನ್ನು ಕರೆದುಕೊಂಡುಬಾ.

English Translation.

Agni, harness your twany red mares to your chariot and by means of them bring the gods hither.

॥ ವಿಶೇಷವಿಷಯಗಳು ॥

**ಯುಕ್ಷ್ವ**— ಛಂದಸ್ಸಿನ ಅನುಕೂಲಕ್ಕಾಗಿ ಅಂತ್ಯಾಕ್ಷರವು ಸಂಹಿತಾಪಾಠದಲ್ಲಿ ದೀರ್ಘವಾಗಿರುವುದು.

**ಅರುಷೀಃ— ಋ ಗತೌ । ರಂತಿ ಗಚ್ಛಂತೀತ್ಯರುಷ್ಯೋ ವಡವಾಃ ॥**

ಋ ಎಂಬ ಧಾತುವಿಗೆ ಗಮನಾರ್ಥವಿರುವುದು. ಅಶ್ವಗಳು ಗತಿಯುಕ್ತವಾದವುಗಳಾದುದರಿಂದ ಅರುಷ್ಯಃ ಎಂದು ಹೇಳಲ್ಪಡುವವು, ಅರುಷೀಃ ಎಂಬದು ದ್ವಿತೀಯಾ ಬಹುವಚನವು.

॥ ವ್ಯಾಕರಣಪ್ರಕ್ರಿಯಾ ॥

**ಯುಕ್ಷ್ವ**— ಯುಜಿರ್ ಯೋಗೇ ಧಾತು. ಲೋಟ್. ಧಾತುವು ಸ್ವರಿತೇತ್ತಾದ್ದರಿಂದ ಆತ್ಮನೇಪದ ಪ್ರತ್ಯಯ ಬರುವುದು. ಮಧ್ಯಮಪುರುಷ ಏಕವಚನ ಥಾಸ್. ಥಾಸ್‌ಗೆ **ಥಾಸಸ್ಸೇ** (ಪಾ. ಸೂ. ೩-೪-೮೦) ಎಂಬುದರಿಂದ ಸೇ ಆದೇಶ. **ಸವಾಭ್ಯಾಂವಾಮೌ** (ಪಾ. ಸೂ. ೩-೪-೯೧) ಎಂಬುದರಿಂದ ಏಕಾರಕ್ಕೆ ವಕಾರಾದೇಶ **ರುಧಾದಿಭ್ಯಃಶ್ನಮ್** (ಪಾ. ಸೂ. ೩-೧-೭೮) ಎಂಬುದರಿಂದ ಶ್ನಮ್ ವಿಕರಣ. ಅದಕ್ಕೆ **ಬಹುಲಂಛಂದಸಿ** ( ಪಾ. ಸೂ. ೨.೪-೭೩ ) ಎಂಬುದರಿಂದ ಲುಕ್. ಯುಜ್+ಸ್ವ **ಚೋಃಕುಃ** (ಪಾ. ಸೂ. ೮-೨-೩೦) ಎಂಬುದರಿಂದ ಚವರ್ಗದ ತೃತೀಯವರ್ಣವಾದ ಜಕಾರಕ್ಕೆ ಕವರ್ಗದ ತೃತೀಯವರ್ಣ ಗಕಾರ. ಯುಗ್+ಸ್ವ ಖರಿಚ (ಪಾ. ಸೂ. ೮-೪-೫೫) ಎಂಬುದರಿಂದ ಚರ್ತ್ವಬಂದರೆ ಗಕಾರಕ್ಕೆ ಕಕಾರ. **ಆದೇಶ ಪ್ರತ್ಯಯಯೋಃ** (ಪಾ. ಸೂ. ೮-೩-೫೯) ಎಂಬುದರಿಂದ ಸಕಾರಕ್ಕೆ ಷಕಾರ. ಯುಕ್ಷ್ವ ಎಂದಾಗುವುದು. ಪಾದಾದಿಯಲ್ಲಿರುವುದರಿಂದಲೂ ಪದದ ಮುಂದೆ ಇಲ್ಲದೇ ಇರುವುದರಿಂದಲೂ **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ- ಪ್ರತ್ಯಯಸ್ವರ ಬರುವುದು. ಆದ್ದರಿಂದ ಯುಕ್ಷ್ವ ಎಂಬುದು ಅಂತೋದಾತ್ತ. ಸಂಹಿತಾ ಕಾಲದಲ್ಲಿ **ದ್ವ್ಯಚೋಽತಸ್ತಿಙಃ** (ಪಾ. ಸೂ ೬-೩-೧೩೫) ಎಂಬುದರಿಂದ ಯುಕ್ಷ್ವ ಎಂಬುದರ ಅಕಾರಕ್ಕೆ ದೀರ್ಘ.

**ಅರುಷೀಃ**— ಋ ಗತೌ ಧಾತು. ಋ ಧಾತುವು ಭ್ವಾದಿಯಲ್ಲಿ ಋ ಗತಿಪ್ರಾಪಣಯೋಃ ಎಂದು ಪಠಿತವಾಗಿರುವುದು. ಇದರ ಮುಂದೆ ಲಟ್ ಪ್ರಥಮಪುರುಷ ಬಹುವಚನ ಝಿ. **ಝೋಽನ್ತಃ** ಎಂಬುದರಿಂದ ಝಕಾರಕ್ಕೆ ಅನ್ತಾದೇಶ **ಕರ್ತರಿಶಪ್** (ಪಾ. ಸೂ. ೪-೧-೬೮) ಎಂಬುದರಿಂದ ಶಪ್, ಋ+ಅ-ಅನ್ತಿ. ಈಗ ಪಾಘ್ರಾಧ್ಮಾ ಎಂಬುದರಿಂದ ಋಗೆ ಋಚ್ಛಾದೇಶ ಬಂದರೆ ಋಚ್ಛನ್ತಿ ಎಂದಾಗುವುದು. ಇನ್ನೊಂದು ಋ ಧಾತುವು ಜುಹೋತ್ಯಾದಿಯಲ್ಲಿ ಋಸೃಗತೌ ಎಂದು ಪಠಿತವಾಗಿರುವುದು. ಇದರ ಮುಂದೆ ಲಟ್, ಅದಕ್ಕೆ ಝಿ. **ಕರ್ತರಿಶಪ್** ( ಪಾ. ಸೂ. ೩-೧-೬೮ ) ಎಂಬುದರಿಂದ ಶಪ್. ಅದಕ್ಕೆ **ಜುಹೋತ್ಯಾದಿಭ್ಯಃ ಶ್ಲುಃ** (೭-೪-೩೫) ಶ್ಲುಲೋಪ ಬರುವುದು **ಶ್ಲೌ** ಎಂಬುದರಿಂದ ದ್ವಿತ್ವ ಋ+ಋ+ಝಿ **ಉರತ್** (ಪಾ. ಸೂ. ೭.೪-೬೬) ಎಂಬುದರಿಂದ ಅಭ್ಯಾಸದಲ್ಲಿರುವ ಋಕಾರಕ್ಕೆ ಅತ್ವವು ರ ಪರವಾಗಿ ಬರುತ್ತೆ. ಅಕಾರಕ್ಕೆ ಇತ್ವ. **ಅರ್ತಿಪಿಪರ್ತ್ಯೋಶ್ಚ** ಎಂಬುದರಿಂದ ಅಕಾರಕ್ಕೆ ಇತ್ವ ಬರುವುದು. ಇರ್+ಋ+ಝಿ. ಹಲಾದಿಃಶೇಷಃ ಎಂಬುದರಿಂದ ರೇಫಕ್ಕೆ ನಿವೃತ್ತಿ. ಝಿಯು **ಸಾರ್ವಧಾತುಕಮಪಿತ್** ಎಂಬುದರಿಂದ ಙಿತ್ತಾಗುವುದರಿಂದ ಉತ್ತರಖಂಡವಾದ ಋಗೆ ಗುಣ ಬರುವುದಿಲ್ಲ. ಅಭ್ಯಾಸಸ್ಯಾಸವರ್ಣೇ ಎಂಬುದರಿಂದ ಇಗೆ ಇಯಙಾದೇಶ, ಇಯ್+ಋ+ಝಿ **ಅದಭ್ಯಸ್ತಾತ್** (ಪಾ. ಸೂ. ೭-೧-೪) ಅಭ್ಯಸ್ತದ ಮುಂದೆ ಇರುವ ಝಕಾರಕ್ಕೆ ಅತ್ ಆದೇಶ ಬರುವುದು ಎಂಬುದರಿಂದ ಅತ್ ಆದೇಶವು ಝಕಾರಕ್ಕೆ

ಬರುವುದು. **ಇಕೋ ಯಣಚಿ** (ಪಾ. ಸೂ. ೬-೧-೭೭) ಎಂಬುದರಿಂದ ಯಣಾದೇಶ. ಋಕಾರಕ್ಕೆ ರೇಫ ಬರುವುದು. ಇಯರ್ತಿ ಎಂದಾಗುವುದು. ಏವಂಚ ಋ ಧಾತುವಿನಲ್ಲಿ ರನ್ತಿ ಎಂದು ರೂಪವು ಆಗುವುದಿಲ್ಲ. ಇಲ್ಲಿ ಇಯ್ರತಿ ಅಥವಾ ಋಚ್ಛನ್ತಿ ಗಚ್ಛನ್ತಿ ಇತಿ ಅರುಷ್ಯಃ ಹಡವಾಃ ಎಂದು ವಿಗ್ರಹವು ಯುಕ್ತವು. **ಋಹನಿಭ್ಯಾಮುಷನ್** (ಉ. ಸೂ. ೪-೫೧೩) ಋ ಗತೌ, ಹನ ಹಿಂಸಾಗತ್ಯೋಃ ಈ ಧಾತುಗಳ ಮುಂದೆ ಉಷನ್ ಪ್ರತ್ಯಯ ಬರುವುದು ಎಂಬುದರಿಂದ ಋ ಧಾತುವಿನ ಮುಂದೆ ಉಷನ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಋಕಾರಕ್ಕೆ ಗುಣ. ಅದು ರ ಪರವಾಗಿ ಬರುವುದು. ಅರುಷ ಎಂದಾಗುವುದು. ಈಗ ಉಪಲಬ್ಧವಾಗುವ ಉಣಾದಿ ಸೂತ್ರಪಾಠದಲ್ಲಿ ಋಹನಿಭ್ಯಾಮೂಷನ್ ದೀರ್ಘಪಾಠವು ಇರುವುದು. ಆ ಪಕ್ಷದಲ್ಲಿ ಇಲ್ಲಿ ಊಕಾರಕ್ಕೆ ಹ್ರಸ್ವವು ಛಾಂದಸವಾಗಿ ಬರುವುದು. ಅರುಷ ಎಂಬುದು ನಿತ್ಸ್ವರದಿಂದ ಆದ್ಯುದಾತ್ತ. ಇದರ ಮುಂದೆ ಛಾಂದಸವಾಗಿ ಜೀಪ್. **ಯಸ್ಯೇತಿಚ** (ಪಾ. ಸೂ. ೬-೪-೧೪೮) ಎಂಬುದರಿಂದ ಅಕಾರ ಲೋಪ, ಅರುಷೀ ಎಂದಾಯ್ತು. ದ್ವಿತೀಯಾ ಬಹುವಚನ ಶಸ್. **ಪ್ರಥಮಯೋಃ ಪೂರ್ವಸವರ್ಣಃ** (ಪಾ. ಸೂ. ೬-೧-೧೦೨) ಎಂಬುದರಿಂದ ಪೂರ್ವಸವರ್ಣ ದೀರ್ಘ, ರುತ್ವ ವಿಸರ್ಗಗಳು. ಅರುಷೀಃ ಎಂದಾಗುವುದು.

**ರಥೇ**— ರಮು ಕ್ರೀಡಾಯಾಮ್. ರಮನ್ತೇ ಅಸ್ಮಿನ್ನಿತಿ ರಥಃ । **ಹನಿಕುಷಿನೀರಮಿಕಾಶಿಭ್ಯಃಕ್ಥನ್** (ಉ. ಸೂ. ೨-೧೫೯) ಎಂಬುದರಿಂದ ಕ್ಥನ್ ಪ್ರತ್ಯಯ. **ಏಕಾಚ ಉಪದೇಶೇऽನುದಾತ್ತಾತ್** (೭-೨-೧೦) ಎಂಬುದರಿಂದ ಇಡಾಗಮಕ್ಕೆ ನಿಷೇಧ. **ಅನುದಾತ್ತೋಪದೇಶ** ( ಪಾ. ಸೂ. ೬-೪-೩೭ ) ಎಂಬುದರಿಂದ ಮಕಾರಕ್ಕೆ ಲೋಪ. ನಿತ್ಸ್ವರದಿಂದ ಆದ್ಯುದಾತ್ತ.

**ಹರಿತಃ**— **ಹೃಸೃರುಹಿಯುಷಿಭ್ಯಃ ಇತಿಃ** (ಉ.ಸೂ. ೧-೯೬) ಹೃಞ್ ಹರಣೇ, ಸೃ ಗತೌ, ರುಹ ಬೀಜಜನ್ಮನಿ, ಯುಷ್ ಸೌತ್ರಧಾತು ಇವುಗಳ ಮುಂದೆ ಇತಿ ಪ್ರತ್ಯಯ ಬರುವುದು ಎಂಬುದರಿಂದ ಹೃ ಧಾತುವಿನ ಮುಂದೆ ಇತಿ ಪ್ರತ್ಯಯ ಹೃ+ಇತ್. ಸಾರ್ವಧಾತುಕಾರ್ಧಧಾತುಕಯೋಃ ಎಂಬುದರಿಂದ ಗುಣ, ರಪರ ಹರಿತ್ ಎಂದಾಯ್ತು. ಪ್ರತ್ಯಯ ಸ್ವರದಿಂದ ಇಕಾರವು ಉದಾತ್ತ. ದ್ವಿತೀಯಾ ಬಹುವಚನಾಂತ.

**ರೋಹಿತಃ**— ರುಹ ಬೀಜಜನ್ಮನಿ ಧಾತು. ರುಹಧಾತುವಿನ ಮುಂದೆಯೂ **ಹೃಸೃ** (ಉ. ಸೂ. ೧-೮೭) ಎಂಬುದರಿಂದ ಇತಿ ಪ್ರತ್ಯಯ. ಇಕಾರವು ಪ್ರತ್ಯಯಸ್ವರದಿಂದ ಉದಾತ್ತ . **ಪುಗಂತಲಘೂಪಧಸ್ಯಚ** ( ಪಾ. ಸೂ. ೭-೩-೮೬ ) ಎಂಬುದರಿಂದ ಲಘೂಪದಗುಣ. ಉಕಾರಕ್ಕೆ ಓಕಾರ, ದ್ವಿತೀಯಾಬಹುವಚನದಲ್ಲಿ **ರೋಹಿತಃ** ಎಂದಾಗುವುದು.

**ತಾಭಿಃ**— ತದ್ ಶಬ್ದದ ಮುಂದೆ ಭಿಸ್. **ತ್ಯದಾದೀನಾಮಃ** (ಪಾ. ಸೂ. ೭-೨-೧೦೨) ಎಂಬುದರಿಂದ ದಕಾರಕ್ಕೆ ಅಕಾರ. **ಅತೋಗುಣೇ** (ಪಾ. ಸೂ. ೬-೧-೯೭) ಎಂಬುದರಿಂದ ಪರರೂಪ. ಅಜಾದ್ಯತಷ್ಟಾಪ್ (ಪಾ. ಸೂ. ೪-೧-೪) ಎಂಬುದರಿಂದ ಟಾಪ್ ಸವರ್ಣದೀರ್ಘ ತಾಭಿಃ ಎಂದಾಗುವುದು. **ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಪ್ರಾಪ್ತವಾಗುವ ಉದಾತ್ತಸ್ವರಕ್ಕೆ **ಸಗೋಶ್ವನ್ಸಾವವರ್ಣ** (ಪಾ. ಸೂ. ೬-೧-೧೮೨) ಎಂಬುದರಿಂದ ಪ್ರತಿಷೇಧ ಬರುವುದು. ಆದ್ದರಿಂದ **ಅನುದಾತ್ತೌ ಸುಪ್ಪಿತೌ** (ಪಾ. ಸೂ. ೩-೧-೪) ಎಂಬುದರಿಂದ ವಿಭಕ್ತಿಯು ಅನುದಾತ್ತ.

**ದೇವಾನ್+ಇಹ** ಎಂದಿರುವಾಗ ಸಂಹಿತಾಕಾಲದಲ್ಲಿ **ದೀರ್ಘಾದಟಿ ಸಮಾನಪಾದೇ** ( ಪಾ. ಸೂ. ೮-೪-೫೨) ಎಂಬುದರಿಂದ ನಕಾರಕ್ಕೆ ರುತ್ವ. **ಆತೋऽಟಿನಿತ್ಯಮ್** ( ಪಾ. ಸೊ. ೮-೩-೩ ) ಎಂಬುದರಿಂದ

ಅಕಾರಕ್ಕೆ ಅನುನಾಸಿಕ. ಭೋಭಗೋ ಎಂಬುದರಿಂದ ರುಗೆ ಯಾದೇಶ. ಲೋಪಶ್ಶಾಕಲ್ಯಸ್ಯ ( ಪಾ. ಸೂ-೮-೩-೧೯) ಎಂಬುದರಿಂದ ಯಲೋಪ. ಪೂರ್ವತ್ರಾಸಿದ್ಧಮ್ ಎಂಬುದರಿಂದ ಯಲೋಪವು ಅಸಿದ್ಧವಾಗುವುದ ರಿಂದ ಆದ್ಗುಣಃ ಎಂಬುದರಿಂದ ಗುಣಬರುವುದಿಲ್ಲ. ದೇವಾಁ ಇಹ ಎಂದಾಗುವುದು ॥ ೧೨ ॥

# ಹದಿನೈದನೆಯ ಸೂಕ್ತವು.



॥ ಸಾಯಣಭಾಷ್ಯಂ ॥

ಇಂದ್ರ ಸೋಮಮಿತ್ಯಾದಿಕಸ್ಯ ದ್ವಾದಶರ್ಚಸ್ಯ ಚತುರ್ಥಸ್ಯ ಸೂಕ್ತಸ್ಯ ಋಷಿಚ್ಛಂದಸೀ ಪೂರ್ವ-ವತ್ । ಯದ್ಯಪ್ಯೇತತ್ಸೂಕ್ತಂ ಕೃತ್ಸ್ನಮೃತುದೇವತಾಕಂ ತಥಾಪಿ ಪ್ರತ್ಯೃಚಮಿಂದ್ರಾದಿದೇವತಾಂತ-ರಾಣಿ ಮಿಲಿತಾನಿ। ತಥಾ ಚಾನುಕ್ರಮ್ಯತೇ। ಇಂದ್ರ ಸೋಮಮೃತವ್ಯಂ ತತ್ರ್ಯೈಂದ್ರೀ ಮಾರುತೀ ತ್ವಾಷ್ಟ್ರ್ಯಾ-ಗ್ನೇಯ್ಯೈಂದ್ರೀ ಮೈತ್ರಾವರುಣೀ ಚತಸ್ರೋ ದ್ರವಿಣೋದಸ ಆಶ್ವಿನ್ಯಾಗ್ನೇಯ್ಯೃತುದೇವತಾಃ ಸರ್ವತ್ರೇತಿ॥ ವಿನಿಯೋಗಸ್ತು ಸ್ಮಾರ್ತೋ ದ್ರಷ್ಟವ್ಯಃ ॥

ಅನುವಾದವು— ಈ ಅನುವಾಕದ ನಾಲ್ಕನೆಯ ಸೂಕ್ತವಾದ ಇಂದ್ರ ಸೋಮಂ ಪಿಬ ಎಂಬ ಸೂಕ್ತದಲ್ಲಿ ಹನ್ನೆರಡು ಋಕ್ಕುಗಳಿರುವವು. ಋಷಿ ಮತ್ತು ಛಂದಸ್ಸು ಹಿಂದಿನ ಸೂಕ್ತದಂತೆಯೇ. ಈ ಸೂಕ್ತದ ಋಕ್ಕುಗಳೆಲ್ಲಾ ಋತು ದೇವತಾಕವಾಗಿದ್ದರೂ ಆ ಋತುವಿನೊಡನೆ ಪ್ರತಿ ಋಕ್ಕಿನಲ್ಲಿಯೂ ಇಂದ್ರಾದಿದೇವತೆಗಳು ಮಿಳಿತರಾಗಿರುವರು. ಅನುಕ್ರಮಣಿಕೆಯಲ್ಲಿ--ಇಂದ್ರ ಸೋಮಮೃತವ್ಯಂ ತತ್ರ್ಯೈಂದ್ರೀ ಮಾರುತೀ ತ್ವಾಷ್ಟ್ರ್ಯಾಗ್ನೇ-ಯ್ಯೈಂದ್ರೀ ಮೈತ್ರಾವರುಣೀ ಚತಸ್ರೋ ದ್ರವಿಣೋದಸ ಆಶ್ವಿನಾಗ್ನೇಯ್ಯ ತುದೇವತಾಃ ಸರ್ವತ್ರೇತಿ-ಎಂದರೆ ಈ ಸೂಕ್ತವೆಲ್ಲವೂ ಋತುದೇವತೆಗಳ ಪರವಾಗಿರುವವು. ಆ ಋತುವಿನೊಡನೆ ಇಂದ್ರ, ಮರುತಃ, ತ್ವಷ್ಟಾ, ಅಗ್ನಿಃ, ಇಂದ್ರಃ ಮಿತ್ರಾವರುಣೌ ಎಂಬ ದೇವತೆಗಳು ಒಂದೊಂದು ಋಕ್ಕಿಗೂ, ಅಲ್ಲಿಂದ ಮುಂದಕ್ಕೆ ನಾಲ್ಕು ಋಕ್ಕುಗಳಿಗೆ ದ್ರವಿಣೋದಾಃ ಎಂಬ ದೇವತೆಯೂ, ಅನಂತರ ಉಳಿದ ಎರಡು ಋಕ್ಕುಗಳಿಗೆ ಕ್ರಮವಾಗಿ ಅಶ್ವಿನಾ, ಅಗ್ನಿಃ ಎಂಬ ದೇವತೆಗಳೂ ಇರುವರು. ವಿನಿಯೋಗವು ಸ್ಮಾರ್ತಪ್ರಯೋಗದಲ್ಲಿ ಇರುವುದನ್ನು ನೋಡಿ ತಿಳಿದು ಕೊಳ್ಳಬೇಕು.



॥ ಓಂ ॥

## ಸೂಕ್ತ—೧೫

॥ ಮಂಡಲ—೧ ॥ ಅನುವಾಕ—೪ ॥ ಸೂಕ್ತ—೧೫ ॥

॥ ಅಷ್ಟಕ —೧ ॥ ಅಧ್ಯಾಯ—೧ ॥ ವರ್ಗ— ೨೮, ೨೯ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೧-೧೨ ॥

॥ ಋಷಿಃ—ಮೇಧಾತಿಥಿಃ ಕಾಣ್ವಃ ॥

॥ ದೇವತಾ— ॥ ಋತವಃ ॥ ೧-ಇಂದ್ರಃ । ೨-ಮರುತಃ । ೩-ತ್ವಷ್ಟಾ । ೪-ಅಗ್ನಿಃ । ೫-ಇಂದ್ರಃ । ೬-ಮಿತ್ರಾವರುಣೌ । ೭-೧೦-ದ್ರವಿಣೋದಾಃ । ೧೧-ಅಶ್ವಿನೌ । ೧೨-ಅಗ್ನಿಃ ।

॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಇಂದ್ರ ಸೋಮಂ ಪಿಬ ಋತುನಾ ತ್ವಾ ವಿಶಂತ್ವಿಂದವಃ ।
ಮತ್ಸರಾಸಸ್ತದೋಕಸಃ ॥ ೧ ॥

॥ ಪದಪಾಠಃ ॥

ಇಂದ್ರ । ಸೋಮಂ । ಪಿಬ । ಋತುನಾ । ಆ । ತ್ವಾ । ವಿಶಂತು । ಇಂದವಃ ॥
ಮತ್ಸರಾಸಃ । ತತ್ಽಓಕಸಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಋತುನಾ ಸಹ ಸೋಮಂ ಪಿಬ । ಇಂದವಃ ಪೀಯಮಾನಾಃ ಸೋಮಾಸ್ತ್ವಾ ತ್ವಾಮಾ ವಿಶಂತು । ಕೀದೃಶಾಃ । ಮತ್ಸರಾಸಸ್ತೃಪ್ತಿಕರಾಃ ತದೋಕಸಸ್ತನ್ನಿವಾಸಾಃ । ಸರ್ವದಾ ತ್ವದುದರಸ್ಥಾಯಿನ ಇತ್ಯರ್ಥಃ ॥ ಇಂದ್ರ । ಪಾಷ್ಠಿಕಮಾಮಂತ್ರಿತಾದ್ಯುದಾತ್ತತ್ವಂ । ಸೋಮಂ । ಅರ್ತಿಸ್ತುಸ್ತ್ವಿತ್ಯಾ-

ದಿನಾ ಮನ್ | ನಿತ್ಯಾತ್ವದಾದ್ಯುದಾತ್ತಃ | ಪಿಬ | ಪಿಬಾ ಮಿತ್ರಸ್ಯ | ಋಗ್ವೇ ೧.೧೪.೧೦ | ಇತ್ಯತ್ರೋಕ್ತಂ| ಅಸ್ಯ ತ್ವಾ ವಿಶಂತ್ವಿತ್ಯುತ್ತರವಾಕ್ಯಗತಾಖ್ಯಾತಾರ್ಥೇನ ಸಹ ಸಮುಚ್ಚಯಾರ್ಥಶ್ಚಶಬ್ದೋ ಲುಪ್ತಃ | ಅತ-ಶ್ಚಾದಿಲೋಪೇ ವಿಭಾಷೇತೀಯಂ ಪ್ರಥಮಾ ತಿಙ್ವಿಭಕ್ತಿರ್ನ ನಿಹನ್ಯತೇ ವಿಂಶತ್ವಿತಿ | ಚಲೋಪಸಾಮ್ಯೇಽಪಿ ದ್ವಿತೀಯತ್ವಾನ್ನಿಹನ್ಯತ ಏವ | ಸಂಹಿತಾಯಾಮಾದ್ಗುಣ ಇತಿ ಪ್ರಾಪ್ತಸ್ಯ ಗುಣಸ್ಯ ಋತ್ಯಕಃ | ಪಾ. ೬.೧ ೧೨೮ | ಇತಿ ಶಾಕಲ್ಯಮತೇ ಪ್ರಕೃತಿಭಾವಾದಭಾವಃ | ಇಂದವಃ | ಪ್ರ ವೋ ಭ್ರಿಯಂತೇ | ಋಗ್ವೇ ೧.೧೪.೪. | ಇತ್ಯತ್ರೋಕ್ತಂ | ಮತ್ಸರಾಸಃ | ತತ್ರೈವೋಕ್ತಂ | ಆಜ್ಜಸೇರಸುಗಿತ್ಯಸುಕ್ | ತದೋಕಸಃ | ತದೇವೌಕಃ ಸ್ಥಾನಂ ಯೇಷಾಂ ತೇ ತಥೋಕ್ತಾಃ | ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ||

|| ಪ್ರತಿಪದಾರ್ಥ ||

ಇಂದ್ರ—ಎಲೈ ಇಂದ್ರನೇ | ಋತುನಾ ಸಹ—ಋತುದೇವತೆಯೊಂದಿಗೆ | ಸೋಮಂ--ಸೋಮರಸವನ್ನು | ಪಿಬ—ಪಾನಮಾಡು | ಮತ್ಸರಾಸಃ—ತೃಪ್ತಿಯನ್ನು ಕೊಡತಕ್ಕ | ಇಂದವಃ—ಸೋಮರಸಗಳು | ತದೋಕಸಃ—ನಿನ್ನ ಉದರವೆಂಬ ಅದೇಸ್ಥಾನವುಳ್ಳವುಗಳಾಗಿ | ತ್ವಾಂ—ನಿನ್ನನ್ನು (ನಿನ್ನ ಉದರವನ್ನು) ಆ ವಿಶಂತು—ಪ್ರವೇಶಿಸಲಿ.

|| ಭಾವಾರ್ಥ ||

ಎಲೈ ಇಂದ್ರನೇ, ಋತುದೇವತೆಯೊಡನೆ ಸೋಮರಸವನ್ನು ಕುಡಿ. ಅದು ನಿನಗೆ ತೃಪ್ತಿಯನ್ನುಂಟು ಮಾಡುತ್ತದೆ. ಮತ್ತು ಶಾಶ್ವತವಾಗಿ ನಿನ್ನ ಉದರದಲ್ಲೇ ನೆಲೆಯಾಗಿ ನಿಲ್ಲುವಂತಹುದಾಗಿ ನಿನ್ನ ಉದರವನ್ನು ಪ್ರವೇಶಿಸಲಿ.

## English Translation.

Indra, drink with the Ritu (season) the Soma juice; let the satisfying drops enter your stomach and stay there (as if that were their home).

|| ವಿಶೇಷವಿಷಯಗಳು ||

ತದೋಕಸಃ—ತನ್ನಿವಾಸಾಃ | ಸರ್ವದಾ ತ್ವದುದರಸ್ಥಾಯಿನ ಇತ್ಯರ್ಥಃ | ತದೈವೋಕಃ ಸ್ಥಾನಂ ಯೇಷಾಂ ತೇ ತದೋಕಸಃ || ಎಂದರೆ ಅದೇ ಸ್ಥಾನವಾಗಿ ಉಳ್ಳ, ನಿನ್ನ ಉದರವೇ ಸೋಮರಸಕ್ಕೆ ಸರ್ವದಾ ಸ್ಥಾನವಾಗಿರುವುದು. ನಿನ್ನ ಉದರದಲ್ಲಿ ಸೋಮರಸವು ಯಾವಾಗಲೂ ಇರಲಿ ಎಂದರೆ ನೀನು ಸರ್ವದಾ ಸೋಮಪಾನ ಮಾಡುತ್ತಿರುವೆ ಎಂದಭಿಪ್ರಾಯವು.

|| ವ್ಯಾಕರಣಪ್ರಕ್ರಿಯಾ ||

ಇನ್ದ್ರ—ಆಮನ್ತ್ರಿತಸ್ಯ ಚ (ಪಾ. ಸೂ. ೬.೧.೧೯೮) ಎಂಬ ಆರನೇ ಅಧ್ಯಾಯದ ಸೂತ್ರದಿಂದ ಆದ್ಯು ದಾತ್ತ.

**ಸೋಮಮ್**—**ಅರ್ತಿಸ್ತುಸು** (ಉ. ಸೂ. ೧-೧-೩೭) ಎಂಬುದರಿಂದ ಮನ್ ಪ್ರತ್ಯಯ. ಪ್ರತ್ಯಯವು ನಿತ್ತಾದ್ದರಿಂದ ನಿತ್ಸ್ವರ ಆದ್ಯುದಾತ್ತ ಬರುವುದು.

**ಪಿಬ**—**ಪಿಬಾ ಮಿತ್ರಸ್ಯ** (ಋ. ಸಂ. ೧-೧೪-೧೦) ಎಂಬಲ್ಲಿ ವಿವೃತವಾಗಿರುವುದು. ಇವಕ್ಕೆ ಆತ್ವಾ ವಿಶನ್ತು ಎಂಬ ಉತ್ತರ ವಾಕ್ಯದಲ್ಲಿರುವ ಆಖ್ಯಾತ (ತಿಙಂತ)ದೊಂದಿಗೆ ಸಮುಚ್ಚಯವನ್ನು ಪ್ರತಿಪಾದಿಸುವ ಚ ಶಬ್ದವು ಲುಪ್ತವಾಗಿರುವುದು ಅಂದರೆ ಪ್ರಯುಕ್ತವಾಗಿಲ್ಲ. ಆದ್ದರಿಂದ **ಚಾದಿಲೋಪೇ ವಿಭಾಷಾ** (ಪಾ. ಸೂ. ೮-೧-೬೩) ಚ, ವಾ, ಹಾ, ಅಹ, ಏವ ಇವುಗಳಿಗೆ ಲೋಪಬಂದಿದ್ದರೆ ಮೊದಲನೆಯ ತಿಙಂತವು ಅನುದಾತ್ತವಾಗುವುದಿಲ್ಲ ಎಂದು ಅರ್ಥ. ಶಾಸ್ತ್ರದಲ್ಲಿ ಚ, ವಾ ಮೊದಲಾದವುಗಳಿಗೆ ಲೋಪವನ್ನು ವಿಧಿಸಿಲ್ಲ. ಆದ್ದರಿಂದ ಇಲ್ಲಿ ಲೋಪವೆಂದರೆ ಪ್ರಯೋಗಮಾಡದೇ ಇರುವುದು. ಅರ್ಥಪ್ರಕರಣಾದಿಗಳಿಂದ ಚಾರ್ಥವು ಗಮ್ಯಮಾನವಾಗುವುದರಿಂದ ಚಾದಿಗಳನ್ನು ಪ್ರಯೋಗ ಮಾಡುವುದಿಲ್ಲ. ಚ ಶಬ್ದಕ್ಕೆ ಸಮುಚ್ಚಯ ಎಂದರ್ಥ. ಅಹ ಶಬ್ದಕ್ಕೆ ಕೇವಲ ಎಂದರ್ಥ. ಎರಡು ತಿಙಂತಗಳಿಗೂ ಕರ್ತೃವು ಒಂದೇ ಆಗಿದ್ದರೆ ಅಲ್ಲಿ ಚ ಶಬ್ದಕ್ಕೆ ಲೋಪ. ಕರ್ತೃವು ಬೇರೆ ಬೇರೆಯಾಗಿದ್ದರೆ ಅಹ ಶಬ್ದಕ್ಕೆ ಲೋಪವೆಂದು ತಿಳಿಯಬೇಕು. ಈ ನಿಯಮವು ಅವಧಾರಣಾರ್ಥಕವಾದ ಏವ ಶಬ್ದಕ್ಕೆ ಪ್ರಯೋಗವಿರುವಾಗ ಮಾತ್ರ. ಎಲ್ಲೆಡೆಗಳಲ್ಲಿಯೂ ಅಲ್ಲ. ಹೀಗೆ ಪ್ರಯೋಗ ಮಾಡದೇ ಇರುವೆಡೆಗಳಲ್ಲಿ ತಿಙಂತಕ್ಕೆ ಅನುದಾತ್ತ ಬರುವುದಿಲ್ಲ. ವಿಶನ್ತು ಎಂಬಲ್ಲಿಯೂ ಚ ಲೋಪವು ಸಮಾನವೇ ಆದರೂ ಅದು ಪ್ರಥಮ ತಿಙಂತವಲ್ಲ. ಆದ್ದರಿಂದ ಅನುದಾತ್ತ ಬಂದೇಬರುವುದು. ಪಿಬ+ಋತುನಾ. ಇಲ್ಲಿ ಸಂಹಿತಾಕಾಲದಲ್ಲಿ **ಆದ್ಗುಣಃ** (ಪಾ.ಸೂ. ೬-೧-೮೭) ಎಂಬುದರಿಂದ ಗುಣಕ್ಕೆ ಯದ್ಯಪಿ ಪ್ರಾಪ್ತಿ ಇರುವುದು. ಆದರೂ **ಋತ್ಯಕಃ** (ಪಾ. ಸೂ. ೬-೧೨೮) ಪದದ ಕೊನೆಯಲ್ಲಿರುವ ಅ, ಇ, ಉ, ಋ, ಇವುಗಳಿಗೆ ಹ್ರಸ್ವವಾದ ಋಕಾರವು ಪರದಲ್ಲಿದ್ದರೆ ಶಾಕಲ್ಯರ ಮತದಲ್ಲಿ (ಪ್ರಕೃತಿಭಾವ ಬರುವುದು) ಹ್ರಸ್ವ ಬರುವುದು ಎಂಬುದರಿಂದ ಪಿಬ ಶಬ್ದದ ಅಕಾರಕ್ಕೆ ಹ್ರಸ್ವ. ಈ ಹ್ರಸ್ವವಿಧಿ ಸಾಮರ್ಥ್ಯದಿಂದ ಗುಣ ಬರುವುದಿಲ್ಲ. ಈ ಫಲಿತಾರ್ಥವನ್ನಿಟ್ಟುಕೊಂಡು ಪ್ರಕೃತಿಭಾವ ಬರುವುದು ಎಂದು ವಾಖ್ಯಾನ ಮಾಡುವರು.

**ಇನ್ದವಃ**—**ಪ್ರ ವೋ ಭ್ರಿಯನ್ತ ಇನ್ದವಃ** (ಋ. ಸಂ. ೧-೧೪-೪) ಎಂಬ ಮಂತ್ರದಲ್ಲಿ ಇದರ ಪ್ರಕ್ರಿಯೆಯು ಉಪಪಾದಿತವಾಗಿರುವುದು. ಇಲ್ಲಿ **ಆಜ್ಜಸೇರಸುಕ್** (ಪಾ. ಸೂ, ೭-೧-೫೦) ಎಂಬುದರಿಂದ ಅಸುಕ್ ಆಗಮವು ಬರುವುದು.

**ತದೋಕಸಃ**—**ತತ್ ಓಕಃ ಸ್ಥಾನಂ ಯೇಷಾಂ ತೇ ತದೋಕಸಃ** ಯಾವ ಸೋಮಗಳಿಗೆ ಇನ್ದ್ರನ ಉದರವೇ ವಾಸಸ್ಥಾನವಾಗಿರುವುದೋ ಅವು. ಬಹುವ್ರೀಹಿಸಮಾಸವಾದ್ದರಿಂದ (ಪಾ. ಸೂ. ೬-೨-೧) **ಬಹುವ್ರೀಹೌಪ್ರಕೃತ್ಯಾಪೂರ್ವಪದಂ** ಎಂಬುದರಿಂದ ಪೂರ್ವಪದಪ್ರಕೃತಿಸ್ವರವು ಬರುವುದು ‖ ೧ ‖

‖ ಸಂಹಿತಾಪಾಠಃ ‖

ಮರುತಃ ಪಿಬತ ಋತುನಾ ಪೋತ್ರಾದ್ಯಜ್ಞಂ ಪುನೀತನ ।
ಯೂಯಂ ಹಿ ಷ್ಠಾ ಸುದಾನವಃ ‖ ೨ ‖

॥ ಪದಪಾಠಃ ॥

ಮರುತಃ । ಪಿಬತ । ಋತುನಾ । ಪೋತ್ರಾತ್ । ಯಜ್ಞಂ । ಪುನೀತನ ॥
ಯೂಯಂ । ಹಿ । ಸ್ಥ । ಸುಽದಾನವಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ಮರುತಃ ಋತುನಾ ಸಹ ಪೋತ್ರಾತ್ಪೋತೃನಾಮಕಸ್ಯ ಋತ್ವಿಜಃ ಪಾತ್ರಾತ್ಸೋಮಂ ಪಿಬತ । ತತೋಽಸ್ಮದೀಯಂ ಯಜ್ಞಂ ಪುನೀತನ । ಶೋಧಯತ । ಹೇ ಸುದಾನವಃ ಶೋಭನದಾತಾರೋ ಮರುತಃ । ಹಿ ಯಸ್ಮಾದ್ಯೂಯಂ ಸ್ಥ ಯುಷ್ಮಾಕಂ ಶೋಧಯಿತೃತ್ವಂ ಪ್ರಸಿದ್ಧಂ । ತಸ್ಮಾಚ್ಛೋಧಯತೇತ್ಯರ್ಥಃ ॥ ಪಿಬತ । ಅತ್ರ ತಿಙೋಽದುಪದೇಶಾಚ್ಛಪಃ ಪರತ್ವಾಲ್ಲಸಾರ್ವಧಾತುಕಾನುದಾತ್ತತ್ವಂ । ಧಾತುಸ್ವರಃ । ಪೂರ್ವಾಮಂತ್ರಿತಸ್ಯಾವಿದ್ಯಮಾನವತ್ತ್ವೇನ ಪದಾದಪರತ್ವಾನ್ನಿಘಾತಾಭಾವಃ । ಪೂರ್ವವತ್ಪ್ರಕೃತಿಭಾವಃ । ಪೋತ್ರಾತ್ । ಪೋತುಃ ಸಂಬಂಧಿ ಪಾತ್ರಂ ಪೋತ್ರಂ । ತಸ್ಯೇದಮಿತ್ಯಣ್ । ತದ್ಧಿತೇಷ್ವಚಾಮಾದೇಃ । ಪಾ. ೭-೨-೧೧೭ । ಇತಿ ಪ್ರಾಪ್ತಾ ವೃದ್ಧಿಃ ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತ ಇತಿ ನ ಭವತಿ । ನನ್ವೇವಮಂತ್ಯಸ್ಯ ಋಕಾರಸ್ಯಾಚೋ ಞ್ಣಿತಿ । ಪಾ. ೭-೨-೧೧೫ । ಇತಿ ವೃದ್ಧಿಃ ಪ್ರಾಪ್ನೋತಿ । ತ್ವಾಷ್ಟ್ರೀ ಜಾಗತ ಇತ್ಯತ್ರ ಹಿ ವಿಪ್ರತಿಷೇಧೇ ಪರಂ ಕಾರ್ಯಂ । ಪಾ. ೧-೪-೨ । ಇತಿ ಪರಯಾದಿವೃದ್ಧ್ಯಾಂತ್ಯೋಪಧಲಕ್ಷಣಾ ವೃದ್ಧಿರ್ಬಾಧ್ಯತ ಇತ್ಯುಕ್ತಂ। ಇಹ ತು ಪರಸ್ಯಾ ಆದಿವೃದ್ಧೇಶ್ಛಂದಸತ್ವೇನ ನಿವೃತ್ತತ್ವಾದಂತ್ಯವೃದ್ಧಿಃ ಪ್ರಾಪ್ನೋತ್ಯೇವೇತಿ । ಏವಂ ತರ್ಹ್ಯತ್ರಾಪ್ಯಾದಿವೃದ್ಧಿರೌಕಾರಃ ಕ್ರಿಯತಾಂ । ತಸ್ಯ ತು ಛಾಂದಸ ಓಕಾರೋ ಭವಿಷ್ಯತಿ । ಪುನೀತನ । ಪೂಞ್ ಪವನೇ । ಲೋಟ್ । ಲೋಟೋ ಲಙ್ವತ್। ಪಾ ೩-೪-೮೫ । ಇತಿ ಲಙ್ವದ್ಭಾವಾತ್ತಸ್ಯ ತಸ್ಥಸ್ಥಮಿಪಾಮಿತಿ ತಾದೇಶಃ । ಕ್ರ್ಯಾದಿಭ್ಯಃ ಶ್ನಾ । ಈ ಹಲ್ಯಘೋರಿತೀಕಾರಃ । ತಪ್ತನಪ್ತನಥನಾಶ್ಚೇತಿ ತನಾದೇಶಃ । ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವಃ । ಪ್ರತ್ಯಯದ್ವಯಸ್ಯಾಪಿ ಸಾರ್ವಧಾತುಕಮಪಿದಿತಿ ಙಿತ್ತ್ವಾತ್ಸ್ವಸ್ವಪೂರ್ವಯೋರಿಕೋರ್ಗುಣಾಭಾವಃ । ಯೂಯಂ । ಯುಷ್ಮದಃ । ಪರಸ್ಯ ಜಸೋ ಙೇಪ್ರಥಮಯೋರಂ । ಪಾ. ೭-೧-೨೮। ಇತ್ಯಮಾದೇಶಃ । ನ ವಿಭಕ್ತೌ ತುಸ್ಮಾಃ । ಪಾ. ೧-೩-೪ । ಇತಿ ಮಕಾರಸ್ಯೇತ್ಸಂಜ್ಞಾಪ್ರತಿಷೇಧಃ । ಯೂಯವಯೌ ಜಸಿ । ಪಾ. ೭-೨-೯೩ । ಇತಿ ಮಪರ್ಯಂತಸ್ಯ ಯೂಯಾದೇಶಃ । ಶೇಷೇ ಲೋಪಃ । ಅತ್ರ ಯೂಯಾದೇಶಾತ್ಪ್ರಾಗೇವಾಂಗತ್ವಾತ್ಪ್ರಾತಿಪದಿಕಸ್ಯಾಂತೋದಾತ್ತತ್ವಂ । ಶೇಷನಿಘಾತಃ । ತತೋ ಯೂಯಾದೇಶಃ ಸ್ಥಾನೇಽಂತರತಮಃ । ಪಾ. ೧-೧-೫೦ । ಇತಿ ಸರ್ವಾನುದಾತ್ತಃ । ತತ್ರ ಶೇಷೇ ಲೋಪೋಽಂತ್ಯಲೋಪ ಇತಿ ಪಕ್ಷೇ ಪೂರ್ವಸವರ್ಣದೀರ್ಘತ್ವಂ ಬಾಧಿತ್ವಾ ಯೋಽಯಮಮಿ ಪೂರ್ವಃ । ಪಾ. ೬-೧-೧೦೭ । ಇತಿ ಪ್ರಾತಿಪದಿಕಾಂತೇನೋದಾತ್ತೇನ ಸಹಾನುದಾತ್ತಸ್ಯ ಸುಪ ಏಕಾದೇಶಃ ಸ ಏಕಾದೇಶ ಉದಾತ್ತೇನೋದಾತ್ತ ಇತ್ಯುದಾತ್ತಃ । ಟಿಲೋಪಪಕ್ಷೇ ತೂದಾತ್ತನಿವೃತ್ತಿಸ್ವರೇಣ ವಿಭಕ್ತೇರುದಾತ್ತತ್ವಂ । ಸ್ಥ । ಅಸ ಭುವಿ । ಲಟೋ ಮಧ್ಯಮಬಹುವಚನಂ ಥ । ಅದಿಪ್ರಭೃತಿಭ್ಯಃ ಶಪ ಇತಿ ಶಪೋ ಲುಕ್ । ಶ್ನಸೋರಲ್ಲೋಪ ಇತ್ಯಕಾರಲೋಪಃ । ವ್ಯತ್ಯಯೇನ ಷತ್ವಂ । ಹಿ ಚೇತಿ ನಿಷೇಧಾತ್ತಿಙ್ಙತಿಙ ಇತಿ ನಿಘಾತೋ ನ ಭವತಿ । ಸಂಹಿತಾ-

ಯೊಮನ್ಯೇಷಾಮಪಿ ದೃಶ್ಯತ ಇತಿ ದೀರ್ಘತ್ವಂ । ಅತ್ರ ಹೇ ಸುದಾನವೋ ಯೂಯಂ ಹಿ ಸ್ಥೇತಿ ವಿವಕ್ಷಿತಂ । ಸುದಾನವಃ । ದಾಭಾಭ್ಯಾಂ ನುಃ । ಉ. ೩-೩೨ । ಸೋಃ ಪ್ರಾದಿಸಮಾಸಃ । ಆಮಂತ್ರಿತನಿಘಾತಃ । ಅತ್ರ ಯೂಯಮಿತ್ಯುದ್ದಿಶ್ಯ ಸುದಾನವಃ ಸ್ಥೇತಿ ನ ವಿಧೀಯತೇ ಯೇನಾನಾಮಂತ್ರಿತತ್ವಾನ್ನಿಘಾತೋ ನ ಸ್ಯಾತ್ । ಕಿಂತು ಸುದಾನವ ಇತಿ ಸಿದ್ಧವದ್ದಾತೃತ್ವೇನ ಸಂಬೋಧ್ಯ ತೇಷು ತೇಷು ಮಾರುತಸೂಕ್ತೇಷು ಮರುತಾಂ ಪ್ರಸಿದ್ಧಾತ್ಪ್ರಭಾವಾತಿಶಯೋದ್ಯೂಯಂ ಸ್ಥೇತಿ ಯುಷ್ಮಚ್ಛಬ್ದೇನ ಪ್ರತಿನಿರ್ದೇಶ್ಯ ಪುನೀತನೇತಿ ಪ್ರಾರ್ಥನೇ ಪವನೇ ತೇಷಾಂ ಹೇತುತ್ವಂ ಹಿಶಬ್ದೇನೋಚ್ಯತೇ ॥

॥ ಪ್ರತಿಪದಾರ್ಥ ॥

ಮರುತಃ—ಎಲೈ ಮರುತ್ತುಗಳೇ । ಋತುನಾ—ಋತುದೇವತೆಯೊಂದಿಗೆ । ಪೋತ್ರಾತ್—ಪೋತೃವೆಂಬ ಋತ್ವಿಕ್ಕಿನ ಪಾತ್ರೆಯಿಂದ । ಪಿಬತ—(ಸೋಮರಸವನ್ನು) ಕುಡಿಯಿರಿ, (ಅನಂತರ) । ಯಜ್ಞಂ—ನಮ್ಮ ಯಜ್ಞವನ್ನು । ಪುನೀತನ—ಪವಿತ್ರಗೊಳಿಸಿ । ಸುದಾನವಃ—ಚೆನ್ನಾಗಿ ಇಷ್ಟಾರ್ಥಗಳನ್ನು ಕೊಡುವ ಮರುದ್ದೇವತೆಗಳೇ । ಯೂಯಂ—ನೀವು । ಹಿ ಸ್ಥ—ಮನ್ತ್ರಗಳಲ್ಲಿ ಅಂತಹವರೆಂದು ಪ್ರಸಿದ್ಧರಲ್ಲವೇ ?

॥ ಭಾವಾರ್ಥ ॥

ಎಲೈ ಮರುತ್ತುಗಳೇ, ಮೊದಲು ಋತುದೇವತೆಯೊಂದಿಗೆ ಪೋತೃವೆಂಬ ಋತ್ವಿಕ್ಕಿನ ಪಾತ್ರೆಯಿಂದ ನಮ್ಮ ಯಜ್ಞದ ಸೋಮರಸವನ್ನು ಕುಡಿದು ಅನಂತರ ನಮ್ಮ ಯಜ್ಞವನ್ನು ಪವಿತ್ರವನ್ನಾಗಿ ಮಾಡಿ. ಎಲೈ ಇಷ್ಟಾರ್ಥಗಳನ್ನು ಕೊಡುವ ಮರುತ್ತುಗಳೇ, ಅಂತಹ ಪ್ರಭಾವಶಾಲಿಗಳೆಂದು ಮಂತ್ರಗಳಲ್ಲಿ ಪ್ರಸಿದ್ಧರಾದವರು ನೀವೇ ಆಗಿದ್ದೀರಲ್ಲವೇ ?

English Translation.

O Maruts, drink with Ritu from the Potri's sacrificial cup; consecrate the sacrifice, for you are great givers.

॥ ವಿಶೇಷವಿಷಯಗಳು ॥

ಪೋತ್ರಾತ್—ಯಜ್ಞದಲ್ಲಿ ಭಾಗವಹಿಸುವ ಹದಿನಾರು ಜನ ಋತ್ವಿಜರಲ್ಲಿ ಪೋತೃನೆಂಬುವನೂ ಒಬ್ಬನು. ಇವನು ಸಾಧಾರಣವಾಗಿ ನೇಷ್ಟಾ ಎಂಬ ಋತ್ವಿಜನೊಡನೆ ಸಹಕರಿಸಿ ಕೆಲಸಮಾಡುವನು. ಇಲ್ಲಿ ಪೋತ್ರಾತ್ ಪಿಬತ ಎಂಬ ಶಬ್ದಕ್ಕೆ ಪೋತುಃ ಸಂಬಂಧಿಪಾತ್ರಾತ್ ಸೋಮಂ ಪಿಬತ ಎಂದರೆ ಪೋತೃನ ಪಾತ್ರೆಯಲ್ಲಿರುವ ಸೋಮರಸವನ್ನು ಪಾನಮಾಡು ಎಂದು ಭಾಷ್ಯಕಾರರು ಅರ್ಥವಿವರಣೆ ಮಾಡಿರುವರು.

ಸುದಾನವಃ—ಶೋಭನದಾತಾರಃ, ಅಥವಾ ಸುಷ್ಠು ದಾತಾರಃ—ಒಳ್ಳೆಯ ಪದಾರ್ಥಗಳನ್ನು ಕೊಡುವವರು ಅಥವಾ ಚೆನ್ನಾಗಿ (ಬಹಳವಾಗಿ) ಕೊಡುವವರು ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಪಿಬತ**--ಪಾ ಪಾನೇ ಧಾತು. ಲೋಟ್ ಮಧ್ಯಮಪುರುಷ ಬಹುವಚನ ಥ. **ಲೋಟೋಲಙ್ವತ್** (ಪಾ. ಸೂ. ೩-೪-೮೫) ಲೋಟಿಗೆ ಲಙ್‌ಗೆ ಕಾರ್ಯ ಬರುವಂತೆ ಕಾರ್ಯ ಬರುವುದು ಎಂಬುದರಿಂದ ಲಙ್ವದ್ಭಾವಾತಿದೇಶ ಬರುವುದು. ಅತಿದೇಶ ಎಂದರೆ ತದ್ಧರ್ಮಾಭಾವವತಿ ತದ್ಧರ್ಮಬೋಧಕತ್ವಮ್. ಆ ಧರ್ಮವಿಲ್ಲದೇ ಇರುವುದರಲ್ಲಿ ಆಧರ್ಮವನ್ನು ಬೋಧಿಸುವಿಕೆ, ಇಲ್ಲಿ ಲೋಟನಲ್ಲಿ ಲಙ್‌ತ್ವರೂಪ ಧರ್ಮವಿಲ್ಲ. ಆದ್ದರಿಂದ ಲಙ್ಙಿಗೆ ಕಾರ್ಯ ಬರಲಾ ಸಾಧ್ಯವಲ್ಲ. ಆದರೂ ಈ ಸೂತ್ರದಿಂದ ಲಙ್‌ಕಾರ್ಯವು ಬರುವುದು. **ತಸ್ಥಸ್ಥಮಿಪಾಂತಾಂತಂತಾಮಃ** (ಪಾ. ಸೂ. ೩-೪-೧೦೧) ಎಂಬುದರಿಂದ ಥ.ಗೆ ತ ಆದೇಶ. ವಿಕರಣ ಶಪ್. **ಪಾಘ್ರಾಧ್ಮಾ** (ಪಾ.ಸೂ. ೭-೩-೭೮) ಎಂಬುದರಿಂದ ಪಾ ಗೆ ಪಿಬಾದೇಶ, ಪಿಬತ ಎಂದಾಗುವುದು. ಶಪ್ ಪಿತ್ತಾದ್ದರಿಂದ ಅನುದಾತ್ತ. ಅಕಾರಾಂತೋಪದೇಶವಾದ ಶಪ್‌ನ ಮುಂದೆ ಲಸ್ಥಾನಿಕಸಾರ್ವಧಾತುಕವಾದ ತ ಎಂಬುದು ಇರುವುದು. ಆದ್ದರಿಂದ **ತಾಸ್ಯನುದಾತ್ತೇನ್ಙಿದದುಪದೇಶಾತ್** (ಪಾ. ಸೂ. ೬-೧-೧೮೬) ಎಂಬುದರಿಂದ ತ ಗೆ ಅನುದಾತ್ತ ಬರುವುದು. ಧಾತುಸ್ವರವೇ ನಿಲ್ಲುವುದು. ಇದಕ್ಕಿಂತ ಪೂರ್ವದಲ್ಲಿ ಮರುತಃ ಎಂಬ ಆಮಂತ್ರಿತವು, ಆಮನ್ತ್ರಿತಂಪೂರ್ವಮವಿದ್ಯಮಾನವತ್ (ಪಾ. ಸೂ. ೮-೧-೭೨) ಎಂಬುದರಿಂದ ಅವಿದ್ಯಮಾನವದ್ಭಾವವನ್ನು ಹೊಂದುವುದು. ಆದ್ದರಿಂದ ಪಿಬತ ಎಂಬುದು ಪದಾತ್ಪರವಾಗುವುದಿಲ್ಲ. ಪಾದಾದಿಗತವೂ ಆಗುವುದು. ಆದಕಾರಣ ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ.

**ಪೋತ್ರಾತ್**- ಪೋತುಃ ಇದಮ್ (ಪೋತೃವಿನ ಸಂಬಂಧಿಯಾದ ಪಾತ್ರೆ) ಎಂದು ವಿಗ್ರಹ **ತಸ್ಯೇದಮ್** ( ಪಾ. ಸೂ. ೪-೩-೧೨೦ ) ಸಮರ್ಥಗಳ ಮಧ್ಯದಲ್ಲಿ ತದ್ಧಿತಪ್ರತ್ಯಯವಿಧಾಯಕಶಾಸ್ತ್ರದಲ್ಲಿ ಪ್ರಥಮೋಚ್ಚರಿತವಾದ ಪದದಿಂದ ಬೋಧಿತವಾದ ಯಾವ ಪ್ರಾತಿಪದಿಕಪ್ರಕೃತಿಕಷಷ್ಠ್ಯಂತವಿದೆಯೋ ಅದರ ಮುಂದೆ ಇದಮ್ ಎಂಬ ಅರ್ಥದಲ್ಲಿ ಅಣ್ ಬರುವುದು. ಅದು ಪ್ರತ್ಯಯವಾಗುವುದು. ಅದು ಪರದಲ್ಲಿಯೇ ಬರುವುದು. ಅದು ಆದ್ಯುದಾತ್ತವಾಗುವುದು ಎಂದು ಸೂತ್ರಾರ್ಥ. ಪೋತುಃ ಇದಮ್ ಎಂಬಿವು ಎರಡು ಸಮರ್ಥಗಳು. ಇವುಗಳಲ್ಲಿ ತದ್ಧಿತಪ್ರತ್ಯಯವಿಧಾಯಕವಾದ ತಸ್ಯೇದಮ್, ಎಂಬ ಶಾಸ್ತ್ರದಲ್ಲಿ ಮೊದಲು ಉಚ್ಚರಿತವಾದ ಪದ ತಸ್ಯ ಎಂಬುದು. ಅದರಿಂದ ಬೋಧಿತವಾದ ಪ್ರಾತಿಪದಿಕಪ್ರಕೃತಿಕಷಷ್ಠ್ಯಂತ ಪೋತುಃ, ಅದರ ಮುಂದೆ ಇದಮ್ ಎಂಬ ಅರ್ಥದಲ್ಲಿ ಅಣ್ ಬರುವುದು. ಪೋತೃ+ಅಸ್+ಅ ತದ್ಧಿತಾಂತವಾದ್ದರಿಂದ **ಕೃತ್ತದ್ಧಿತಸಮಾಸಾಶ್ಚ** (ಪಾ. ಸೂ. ೧-೨-೪೬) ಎಂಬುದರಿಂದ ಪ್ರಾತಿಪದಿಕ ಸಂಜ್ಞೆ ಬರುವುದು. **ಸುಪೋಧಾತು ಪ್ರಾತಿಪದಿಕಯೋಃ** (ಪಾ. ಸೂ. ೨-೪-೩೧) ಎಂಬುದರಿಂದ ಸುಪ್ ಗೆ ಲುಕ್, ಪೋತೃ+ಅ. ಈಗ **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಞಿತ್ತು ಅಥವಾ ಣಿತ್ತು ಆದ ತದ್ಧಿತಪ್ರತ್ಯಯ ಪರದಲ್ಲಿರುವಾಗ ಅಚ್ಸಮುದಾಯದಲ್ಲಿ ಮೊದಲನೆಯದಾದ ಅಚ್ಚಿಗೆ ವೃದ್ಧಿ ಬರುವುದು ಎಂಬುದರಿಂದ ವೃದ್ಧಿಯು ಓಕಾರಕ್ಕೆ ಪ್ರಾಪ್ತವಾಗುವುದು. **ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ** (ಪರಿಭಾ-೩೫) ಎಲ್ಲಾ ಶಾಸ್ತ್ರಗಳೂ ಛಂದಸ್ಸಿನಲ್ಲಿ ವಿಕಲ್ಪವಾಗಿ ಬರುವುವು ಎಂಬುದರಿಂದ ಈ ವೃದ್ಧಿವಿಧಾಯಕವೂ ವಿಕಲ್ಪವಾದ್ದರಿಂದ ಇಲ್ಲಿ ಬರುವುದಿಲ್ಲ. ಹೀಗೆ ವೃದ್ಧಿಯು ಬರದೇ ಇದ್ದರೆ **ಅಚೋಞ್ಣಿತಿ** (ಪಾ. ಸೂ. ೭-೨-೧೧೫) ಞಿತ್ತು ಣಿತ್ತು ಆದ ಪ್ರತ್ಯಯ ಪರದಲ್ಲಿರುವಾಗ ಅಜನ್ತವಾದ ಅಙ್ಗಕ್ಕೆ ವೃದ್ಧಿಯು ಬರುವುದು ಎಂಬುದರಿಂದ ಪೋತೃ ಎಂಬಲ್ಲಿ ಕೊನೆಯಲ್ಲಿರುವ ಋಕಾರಕ್ಕೆ ವೃದ್ಧಿಯು ಪ್ರಾಪ್ತವಾಗುವುದು. ಹೇಗೆಂದರೆ ಗೋಶಬ್ದದ ಮುಂದೆ ಸುಪ್ರತ್ಯಯವನ್ನಿಟ್ಟರೆ ಆದಕ್ಕೆ **ಗೋತೋಣಿತ್** (ಪಾ.ಸೂ. ೭-೧-೯೦) ಎಂಬುದರಿಂದ ಣಿದ್ವದ್ಭಾವ ಬರುವುದು. ಸುಪ್ರತ್ಯಯವು ತದ್ಧಿತವಲ್ಲದುದರಿಂದ ಆದಿವೃದ್ಧಿ ಬರುವುದಿಲ್ಲ. **ಅಚೋಞ್ಣಿತಿ**(ಪಾ. ಸೂ. ೭-೨-೧೧೫) ಎಂಬುದರಿಂದ ಅನ್ತ್ಯವೃದ್ಧಿಯು ಇಲ್ಲಿ ಬಂದು ಸಾವಕಾಶವಾಗುವುದು. ಪಚ್ ಧಾತುವಿನ ಮುಂದೆ ಣ್ವುಲ್

ಆದಕ್ಕೆ ಆಕಾದೇಶ ಪಚ್+ಆಕ ಇಲ್ಲಿ ಆದಿವೃದ್ಧಿ ಅನ್ತ್ಯವೃದ್ಧಿಗಳಿಗೆ ಪ್ರಾಪ್ತಿ ಇಲ್ಲ. **ಅತ ಉಪಧಾಯಾಃ**(ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ ಬಂದು ಪಾಚಕ ಎಂದಾಗುವುದು. ಹೀಗೆ ಇಲ್ಲಿ ಉಪಧಾವೃದ್ಧಿಯು ಸಾವಕಾಶವಾಗಿರುವುದು. ಶೌಶ್ರುತಃ--ಸುಶ್ರುತಃ ಅಪತ್ಯಂ ಪುಮಾನ್ ಎಂದು ವಿಗ್ರಹ. **ತಸ್ಯಾಪತ್ಯಂ** (ಪಾ. ಸೂ. ೪-೧-೯೨) ಎಂಬುದರಿಂದ ಅಣ್. ಸುಶ್ರುತ್+ಅ ಇಲ್ಲಿ ಅಂಗವು ಅಜನ್ತವಲ್ಲದುದರಿಂದ **ಅಚೋಞ್ಣಿತಿ** ( ಪಾ-ಸೂ. ೨. ೭-೧೧೫) ಎಂದು ಅಂತ್ಯವೃದ್ಧಿ ಬರುವುದಿಲ್ಲ. ಉಪಧಾವರ್ಣವು ಅಕಾರವಲ್ಲದುದರಿಂದ ಅತ ಉಪಧಾಯಾಃ ಎಂಬುದರಿಂದ ಉಪಧಾವೃದ್ಧಿಯೂ ಬರುವುದಿಲ್ಲ. ಹೀಗೆ ಅನ್ತ್ಯೋಪಧಾವೃದ್ಧಿಗಳು ಬರದೇ ಇರುವ ಸ್ಥಳದಲ್ಲಿ ಆದಿವೃದ್ಧಿಯು ಬಂದು ಸಾವಕಾಶವಾಗುವುದು. ಈ ರೀತಿಯಲ್ಲಿ ಆದಿವೃದ್ಧಿ ಅಂತ್ಯವೃದ್ಧಿ ಉಪಧಾವೃದ್ಧಿ ಇವುಗಳು ಪ್ರತ್ಯೇಕ ಲಕ್ಷ್ಯಗಳಲ್ಲಿ ಸಾವಕಾಶವಾಗಿರುವುವು. ತ್ವಷ್ಟುಃ ಅಪತ್ಯಂ ಪುಮಾನ್ ತ್ವಾಷ್ಟ್ರಃ, ಇಲ್ಲಿ ತ್ವಷ್ಟೃ ಶಬ್ದದ ಮುಂದೆ ಅಪತ್ಯಾರ್ಥದಲ್ಲಿ ಅಣ್ ಬಂದು ತ್ವಷ್ಟೃ+ಅ ಎಂದಿರುವಾಗ ಅಂತ್ಯವೃದ್ಧಿ ಆದಿ ವೃದ್ಧಿಗಳೆರಡೂ ಪ್ರಾಪ್ತವಾಗುವುವು. ಜಗತ್+ಅ, ಎಂದಿರುವಾಗ ಉಪಧಾವೃದ್ಧಿ ಆದಿವೃದ್ಧಿಗಳೆರಡೂ ಪ್ರಾಪ್ತವಾಗುವುವು. ಹೀಗೆ ಪ್ರಾಪ್ತವಾದರೆ **ವಿಪ್ರತಿಷೇಧೇ ಪರಂ ಕಾರ್ಯಮ್**, (ಪಾ.ಸೂ. ೧-೪-೨) ಬೇರೆ ಬೇರೆ ಲಕ್ಷ್ಯಗಳಲ್ಲಿ ಸಾವಕಾಶವಾದ ಶಾಸ್ತ್ರಗಳಿಗೆ ಒಂದು ಲಕ್ಷ್ಯದಲ್ಲಿ ಒಂದೇಕಾಲದಲ್ಲಿ ಪ್ರಾಪ್ತಿಯಾಗುವುದಕ್ಕೆ ವಿಪ್ರತಿಷೇಧ ಎನ್ನಲಾಗುವುದು. ಈ ವಿಪ್ರತಿಷೇಧವಿದ್ದರೆ ಯಾವುದು ಪರಶಾಸ್ತ್ರವೋ ಅದೇ ಬರುವುದು ಎಂಬುದರಿಂದ ಎರಡು ಕಡೆಯಲ್ಲಿ ಕ್ರಮವಾಗಿ ಅಂತ್ಯೋಪಧಾವೃದ್ಧಿಗಳನ್ನು ಬಾಧಿಸಿ ಪರವಾದ ಆದಿವೃದ್ಧಿಯೇ ಬರುವುದು. ಆದಿವೃದ್ಧಿ ಬಂದಮೇಲೆ **ಸಕೃದ್ಗತೌ ವಿಪ್ರತಿಷೇಧೇನ ಯದ್ಬಾಧಿತಂ ತದ್ಬಾಧಿತಮೇವ** (ಪರಿಭಾ. ೪೦ ) ಎಂಬುದರಿಂದ ಪುನಃ ಅಂತ್ಯೋಪಧಾವೃದ್ಧಿಗಳು ಬರುವುದಿಲ್ಲ. ಅನುಶತಿಕಾದಿ ಗಣದಲ್ಲಿ ಉಭಯಪದವೃದ್ಧಿಗಾಗಿ ಪುಷ್ಕರಸಾದಿ ಶಬ್ದವನ್ನು ಪಾಠ ಮಾಡಿರುವುದರಿಂದ ಇಲ್ಲಿ **ಪುನಃಪ್ರಸಂಗವಿಜ್ಞಾನಾತ್ಸಿದ್ಧಮ್** ( ಪರಿಭಾ. ೩೯ ) ಎಂಬುದು ಬರುವುದಿಲ್ಲ. ಈ ಪರಿಭಾಷೆಯನ್ನು ಆಶ್ರಯಿಸುವ ಪಕ್ಷದಲ್ಲಿ ಪುಷ್ಕರಸದ್+ಇ ಎಂದಿರುವಾಗ ಆದಿವೃದ್ಧಿ ಉಪಧಾವೃದ್ಧಿಗಳೆರಡೂ ಬಂದರೆ ಪೌಷ್ಕರಸಾದಿ ಎಂಬ ರೂಪವು ಸಿದ್ಧವಾಗುವುದರಿಂದ **ಅನುಶತಿಕಾದೀನಾಂಚ** (ಪಾ. ಸೂ. ೭-೩-೨೦) ಎಂಬುದರಿಂದ ಉಭಯ ಪದವೃದ್ಧಿಗಾಗಿ ಅನುಶತಿಕಾದಿಯಲ್ಲಿ ಪುಷ್ಕರಸದ್ ಶಬ್ದಕ್ಕೆ ಪಾಠವು ವ್ಯರ್ಥವಾಗುವುದು. ಆದ್ದರಿಂದ ಸಕೃದ್ಗತೌ—ಎಂಬುದು ಇಲ್ಲಿ ಪ್ರವೃತ್ತಿಸುವುದೇ ವಿನಾ ಪುನಃಪ್ರಸಂಗ, ಎಂಬುದು ಇಲ್ಲಿ ಪ್ರವೃತ್ತಿಸುವುದಿಲ್ಲ. ಏವಂಚ ಆದಿವೃದ್ಧಿಯು ಅಂತ್ಯವೃದ್ಧಿಉಪಧಾವೃದ್ಧಿಗಳಿಗೆ ಬಾಧಕವಾಗುವುದು. ಈ ಅಂಶವನ್ನು ಆದಿವೃದ್ಧಿರನ್ತ್ಯೋಪಧಾವೃದ್ಧೀ ಬಾಧತೇ, ಎಂದು ಕೌಮುದಿಯಲ್ಲಿ ಹೇಳಲಾಗಿರುವುದು. ಪ್ರಕೃತದಲ್ಲಿ ಬಾಧಕವಾದ ಆದಿವೃದ್ಧಿಯು ಛಾಂದಸವಾಗಿ ಬರದ ಮೇಲೆ ಆದರಿಂದ ಅಂತ್ಯವೃದ್ಧಿಯು ಬಾಧಿತವಾಗುವುದಿಲ್ಲ. ಆದ್ದರಿಂದ ಅಂತ್ಯವೃದ್ಧಿಯು ಬರಲಿ ಎನ್ನಬಹುದು. ಹೀಗಾದ ಪಕ್ಷದಲ್ಲಿ ಇಲ್ಲಿಯೂ ಆದಿವೃದ್ಧಿಯು ಬರಲಿ. ಪೌತ್ರ ಎಂದಿರುವಾಗ ಔ ಕಾರಕ್ಕೆ ಓ ಕಾರವು ಛಾಂದಸವಾಗಿ ಬರುವುದು ಎಂದು ಹೇಳುತ್ತೇವೆ. ಈಗ ಆದಿವೃದ್ಧಿಯಿಂದ ಬಾಧಿತವಾಗುವುದರಿಂದ ಅಂತ್ಯ ವೃದ್ಧಿಯು ಬರುವುದಿಲ್ಲ.

**ಪುನೀತನ**—ಪೂಞ್ ಪವನೇ, ಕ್ರ್ಯಾದಿ ಧಾತು ಲೋಟ್ ಪರಸ್ಮೈಪದ ಮಧ್ಯಮಪುರುಷ ಬಹುವಚನ ಥ. ಆದೇಶ ಪೂ+ಥ **ಲೋಟೋ ಲಙ್ವತ್** ( ಪಾ. ಸೂ. ೩-೪-೮೫ ) ಎಂಬುದರಿಂದ ಲಙ್ವದ್ಭಾವ ಬರುವುದರಿಂದ **ತಸ್ಥಸ್ಥಮಿಪಾಂತಾಂತಂತಾಮಃ** ( ಪಾ. ಸೂ. ೩-೪-೧೦೧ ) ಎಂಬುದರಿಂದ ಥ ಗೆ ತ ಆದೇಶ. **ತಪ್ತನಪ್ತನಥನಾಶ್ಚ** ( ಪಾ. ಸೂ. ೭-೧-೪೫ ) ಎಂಬುದರಿಂದ ತ ಎಂಬುದಕ್ಕೆ ತನ ಆದೇಶ. ಪೂ+ತನ **ಕ್ರ್ಯಾದಿಭ್ಯಃಶ್ನಾ** (ಪಾ. ಸೂ. ೩-೧-೮೧) ಎಂಬುದರಿಂದ ವಿಕರಣ ಶ್ನಾಪ್ರತ್ಯಯ. ಪೂ+ನಾ+ತನ. **ಈಹಲ್ಯ**

ಘೋಃ (ಪಾ. ಸೂ. ೬-೪-೧೧೩) ಕಿತ್ತು ಙಿತ್ತು ಆದ ಹಲಾದಿಸಾರ್ವಧಾತುಕ ಪರದಲ್ಲಿರುವಾಗ ಶ್ನಾಪ್ರತ್ಯಯದ ಆಕಾರಕ್ಕೂ ಅಭ್ಯಸ್ತಗಳ ಆಕಾರಕ್ಕೂ ಸಹ ಈಕಾರ ಬರುವುದು ಎಂಬುದರಿಂದ ಶ್ನಾಪ್ರತ್ಯಯದ ಆಕಾರಕ್ಕೆ ಈಕಾರ, ಪೂ+ನೀ+ತನ. ಪ್ವಾದೀನಾಂ ಹ್ರಸ್ವಃ (ಪಾ. ಸೂ. ೭-೩-೮೦) ಎಂಬುದರಿಂದ ಪೂಗೆ ಹ್ರಸ್ವ ಬರುವುದು ಪುನೀತನ ಎಂದಾಗುವುದು. ನೀ ತನ ಎಂಬ ಎರಡು ಪ್ರತ್ಯಯಗಳೂ ಅಪಿತ್ತಾದ ಸಾರ್ವಧಾತುಕಗಳು. ಆದ್ದರಿಂದ ಸಾರ್ವಧಾತುಕಮಪಿತ್ (ಪಾ.ಸೂ. ೧-೨-೪) ಎಂಬುದರಿಂದ ಙಿತ್ತಾಗುವುವು. ಆದ್ದರಿಂದ ಕ್ಙಿತಿ ಚ, (ಪಾ. ಸೂ. ೧-೧-೫) ಎಂಬುದರಿಂದ ಗುಣಕ್ಕೆ ನಿಷೇಧ ಬರುವದು. ಆದಕಾರಣ ತನಪ್ರತ್ಯಯವನ್ನು ನಿಮಿತ್ತಮಾಡಿಕೊಂಡ ಈಕಾರಕ್ಕೂ ನೀ ಪ್ರತ್ಯಯವನ್ನು ನಿಮಿತ್ತಮಾಡಿಕೊಂಡ ಉಕಾರಕ್ಕೂ ಸಾರ್ವಧಾತುಕಾರ್ಧಧಾತುಕಯೋಃ (ಪಾ. ಸೂ. ೭-೩-೮೪) ಎಂಬುದರಿಂದ ಗುಣವು ಬರುವುದಿಲ್ಲ.

ಯೂಯಮ್—ಯುಷ್ಯಸಿಭ್ಯಾಂಮದಿಕ್ (ಉ. ಸೂ. ೧-೧೩೬) ಯುಷ್ ಎಂಬುದು ಸೌತ್ರವಾದ ಧಾತು. ಇದರ ಮುಂದೆ ಮದಿಕ್ ಪ್ರತ್ಯಯ, ಯುಷ್ಮದ್ ಎಂಬುದು ಪ್ರತ್ಯಯ ಸ್ವರದಿಂದ ಅಂತೋದಾತ್ತ. ಉಣಾದಯೋಽವ್ಯುತ್ಪನ್ನಾನಿ ಪ್ರಾತಿಪದಿಕಾನಿ (ಪರಿಭಾ. ೨೨) ಉಣಾದಿ ಸೂತ್ರನಿಷ್ಪನ್ನವಾದ ಶಬ್ದಗಳು ಅವ್ಯುತ್ಪನ್ನವಾದ ಅಂದರೆ ಪ್ರಕೃತಿಪ್ರತ್ಯಯವಿಭಾಗರಹಿತಗಳಾದ ಪ್ರಾತಿಪದಿಕಗಳು ಎಂಬ ಪಕ್ಷದಲ್ಲಿ ಫಿಷೋಽನ್ತ ಉದಾತ್ತಃ (ಫಿ. ಸೂ. ೧-೧) ಎಂಬುದರಿಂದ ಅಂತೋದಾತ್ತ. ಯುಷ್ಮದ್ ಶಬ್ದದ ಮುಂದೆ ಜಸ್ ಪ್ರತ್ಯಯ ಯುಷ್ಮದ್+ಜಸ್. ಙೇಪ್ರಥಮಯೋರಮ್ (ಪಾ. ಸೂ. ೭-೧-೨೮) ಯುಷ್ಮದಸ್ಮಚ್ಛಬ್ದಗಳ ಮುಂದೆ ಇರುವ ಪ್ರಥಮಾದ್ವಿತೀಯಾ ವಿಭಕ್ತಿಗಳಿಗೆ ಅಮಾದೇಶ ಬರುವುದು ಎಂಬುದರಿಂದ ಜಸ್‌ಗೆ ಅಮ್ ಆದೇಶ. ಯುಷ್ಮದ್+ ಅಮ್, ಅಮ್‌ನ ಮಕಾರಕ್ಕೆ ಹಲ್ತ್ಯಮ್ (ಪಾ. ಸೂ. ೧-೩-೩) ಉಪದೇಶದ ಕೊನೆಯಲ್ಲಿರುವ ವ್ಯಂಜನಕ್ಕೆ ಇತ್ಸಂಜ್ಞೆ ಬರುವುದು ಎಂಬುದರಿಂದ ಇತ್ಸಂಜ್ಞೆಯು ಪ್ರಾಪ್ತವಾದರೆ ಅದಕ್ಕೆ ನವಿಭಕ್ತೌತುಸ್ಮಾಃ (ಪಾ. ಸೂ. ೧-೩-೪) ವಿಭಕ್ತಿಯಲ್ಲಿ ತವರ್ಗ ಸಕಾರ ಮಕಾರಗಳಿಗೆ ಇತ್ಸಂಜ್ಞೆ ಬರುವುದಿಲ್ಲ ಎಂಬ ನಿಷೇಧವಿರುವುದರಿಂದ ಮಕಾರಕ್ಕೆ ಇತ್ಸಂಜ್ಞೆ ಬರುವುದಿಲ್ಲ ಯೂಯವಯೌ ಜಸಿ (ಪಾ. ಸೂ ೭-೨-೯೩) ಜಸ್ ಪರದಲ್ಲಿರುವಾಗ ಯುಷ್ಮದಸ್ಮಚ್ಛಬ್ದಗಳ ಮಪರ್ಯಂತಕ್ಕೆ ಕ್ರಮವಾಗಿ ಯೂಯ ವಯ ಎಂಬ ಆದೇಶಗಳು ಬರುವುವು ಎಂಬುದರಿಂದ ಮಪರ್ಯಂತಕ್ಕೆ ಯೂಯ ಆದೇಶ, ಯೂಯ+ಅದ್+ಅಮ್, ಶೇಷೇಲೋಪಃ ಎಂಬುದು ಆತ್ವ ಯತ್ವಗಳಿಗೆ ನಿಮಿತ್ತವಾಗದ ವಿಭಕ್ತಿಯನ್ನು ನಿಮಿತ್ತ ಮಾಡಿಕೊಂಡು ಬರುವುದು. ಏವಂಚ ಬಹಿರ್ಭೂತ ವಿಭಕ್ತಿ ನಿಮಿತ್ತಕವಾದ್ದರಿಂದ ಬಹಿರಂಗ. ಅತೋಗುಣೇ ಪರರೂಪವು ಅನ್ತರ್ಭೂತನಿಮಿತ್ತಕವಾದ್ದರಿಂದ ಅಂತರಂಗ. ಆದ್ದರಿಂದ ಅಸಿದ್ಧಂಬಹಿರಂಗಮಂತರಂಗೇ (ಪರಿಭಾ. ೫೦) ಎಂಬುದರಿಂದ ಶೇಷೇಲೋಪಃ ಎಂಬುದು ಅಸಿದ್ಧವಾಗುವುದರಿಂದ ಮೊದಲು ಪರರೂಪ ಬರುವುದು. ಶೇಷೇಲೋಪಃ ಎಂಬುದು ಪರವಾದಾಗ್ಯೂ ಅದು ಮೊದಲು ಬರುವುದಿಲ್ಲ. ಪರರೂಪ ಬಂದರೆ ಯುಷ್ಮದ್+ಅಮ್. ಈಗ ಶೇಷೇಲೋಪಃ (ಪಾ. ಸೂ. ೭-೨-೯೦) ಎಂಬುದು ಬರುವುದು. ಇಲ್ಲಿ ಬಹಿರಂಗವಾದ ಯೂಯ ಆದೇಶಕ್ಕಿಂತಲೂ ಮೊದಲೇ ಅಂತರಂಗವಾದ್ದರಿಂದ ಪ್ರತ್ಯಯಸ್ವರ ಅಥವಾ ಪ್ರಾತಿಪದಿಕಸ್ವರ ಬರುವುದು. ಅನುದಾತ್ತಂ ಪದಮೇಕವರ್ಜಮ್ (ಪಾ. ಸೂ. ೬-೧-೧೫೮) ಎಂಬ ಶೇಷನಿಘಾತದಿಂದ ಯುಷ್ಮ ಎಂಬುದು ಅನುದಾತ್ತ. ನಂತರ ಸ್ಥಾನೇಽನ್ತರತಮಃ (ಪಾ.ಸೂ. ೧-೧-೫೦) ಎಂಬ ಪರಿಭಾಷಾನುಸಾರ ಅನುದಾತ್ತವಾದ ಯುಷ್ಮ ಎಂಬುದರ ಸ್ಥಾನದಲ್ಲಿ ಸರ್ವಾನುದಾತ್ತವಾದ ಯೂಯ ಆದೇಶ ಬರುವುದು. ಯೂಯ+ಅದ್ ಇವುಗಳಿಗೆ ಬಂದ ಏಕಾದೇಶವಾದ ಪರರೂಪವು ಏಕಾದೇಶ ಉದಾತ್ತೇನೋದಾತ್ತಃ (ಪಾ. ಸೂ. ೮.೨೫) ಎಂಬುದರಿಂದ ಉದಾತ್ತ. ಶೇಷೇಲೋಪಃ (ಪಾ. ಸೂ. ೭-೨-೯೦) ಆತ್ವಯತ್ವ ನಿಮಿತ್ತೇತರ ವಿಭಕ್ತೌ ಪರತಃ ಯುಷ್ಮದಸ್ಮದೋಃ ಅನ್ತ್ಯಸ್ಯ ಲೋಪಃ ಎಂದು ಸೂತ್ರಾ

ರ್ಥವಾಗಿ ಅಂತ್ಯಕ್ಕೆ ಲೋಪ ಬರುವುದು ಎಂಬ ಪಕ್ಷದಲ್ಲಿ ದಕಾರಕ್ಕೆ ಲೋಪ, ಯೂಯ+ಅಮ್. **ಅಮಿ ಪೂರ್ವಃ** (ಪಾ. ಸೂ. ೬-೧-೧೦೭) ಎಂಬುದರಿಂದ ಪೂರ್ವರೂಪವು ಏಕಾದೇಶವಾಗಿ ಬರುವುದು. ಈ ಏಕಾದೇಶ ದಿಂದ ಬಂದ ಅಕಾರವು ಏಕಾದೇಶ **ಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಎಂಬುದರಿಂದ ಉದಾತ್ತ. **ಶೇಷೇಲೋಪಃ** (ಪಾ.ಸೂ. ೭-೨-೯೦) ಶೇಷ ಇತಿ ಸಪ್ತಮೀನಿರ್ದೇಶಃ ಅಧಿಕರಣತ್ವವಿವಕ್ಷಯಾ ತಥಾಚ ವಿಭಕ್ತೌ ಪರತಃ ಮಪರ್ಯನ್ತಾಚ್ಛಿಷ್ಟಸ್ಯ ಅದ್ ಇತ್ಯಸ್ಯ ಲೋಪಃ ಎಂದು ಅರ್ಥವಾದಾಗ ಯೂಯದ್+ಅಮ್ ಎಂಬಲ್ಲಿ ಅದ್ ಎಂಬುದಕ್ಕೆ ಲೋಪ, ಈ ಪಕ್ಷದಲ್ಲಿ ಅಮ್ ಎಂಬ ಅನುದಾತ್ತವನ್ನು ನಿಮಿತ್ತಮಾಡಿಕೊಂಡು ಉದಾತ್ತ ವಾದ ಅದ್‌ಗೆ ಲೋಪಬಂದಿರುವುದು. ಆದ್ದರಿಂದ **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಎಂಬ ಉದಾತ್ತನಿವೃತ್ತಿಸ್ವರದಿಂದ ವಿಭಕ್ತಿಯು ಉದಾತ್ತವಾಗುವುದು. ಪಕ್ಷದ್ವಯದಲ್ಲಿಯೂ ಯೂಯಮ್ ಎಂಬುದು ಅಂತೋದಾತ್ತ.

**ಸ್ಥ**—ಅಸ ಭುವಿ ಧಾತು. ಲಟ್ ಪರಸ್ಮೈಪದ ಮಧ್ಯಮಪುರುಷ ಬಹುವಚನ ಥ ಆದೇಶ. ಕರ್ತರಿ ಶಪ್ ಎಂಬುದರಿಂದ ಬಂದ ವಿಕರಣ ಶಪ್‌ಗೆ ಅದಿಪ್ರಭೃತಿಭ್ಯಃ ಶಪಃ ಎಂಬುದರಿಂದ ಲುಕ್. ಅಸ್+ಥ **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಶ್ನಮ್ ಪ್ರತ್ಯಯ ಅಸ್ ಧಾತು ಇವುಗಳ ಅಕಾರಕ್ಕೆ ಕಿತ್ತು ಙಿತ್ತು ಆದ ಸಾರ್ವಧಾತುಕಪರವಾಗಿರುವಾಗ ಲೋಪ ಬರುವುದು ಎಂಬುದರಿಂದ ಲೋಪ, ಸ್ಥ ಎಂದಾಗುವುದು. ವ್ಯತ್ಯಯ ದಿಂದ ಸಕಾರಕ್ಕೆ ಷಕಾರ. **ಷ್ಟುನಾಷ್ಟುಃ** (ಪಾ. ಸೂ. ೮-೪-೪೧) ಎಂಬ ಷ್ಟುತ್ವದಿಂದ ತವರ್ಗದ್ವಿತೀಯವಾದ ಥಕಾರಕ್ಕೆ ಟವರ್ಗದ್ವಿತೀಯಠಕಾರ ಷ್ಠ ಎಂದಾಯಿತು. ಹಿಚ (ಪಾ. ಸೂ. ೮-೧-೩೪) ಹಿ ಶಬ್ದದಿಂದ ಕೂಡಿರುವ **ತಿಙಂತವು** ಅನುದಾತ್ತವಾಗುವುದಿಲ್ಲ ಎಂಬುದರಿಂದ ಇಲ್ಲಿ ಹಿಷ್ಠ ಎಂದು ಹಿ ಶಬ್ದದ ಯೋಗವಿರುವುದರಿಂದ ಅನು ದಾತ್ತಕ್ಕೆ ನಿಷೇಧ ಬರುವುದು. ಆದ್ದರಿಂದ **ತಿಙ್ಙತಿಙಃ** ಎಂಬುದರಿಂದ ಅನುದಾತ್ತ ಬರುವುದಿಲ್ಲ. ಸಂಹಿತಾ ಕಾಲದಲ್ಲಿ ಅನ್ಯೇಷಾಮಪಿದೃಶ್ಯತೇ ಎಂಬುದರಿಂದ ದೀರ್ಘ ಬರುವುದು.

**ಸುದಾನವಃ**—ದಾಭಾಭ್ಯಾಂ ನುಃ (ಉ. ಸೂ. ೩-೩೧೨) ಡುದಾಞ್ ದಾನೇ, ಭಾ ದೀಪ್ತೌ ಈ ಧಾತುಗಳ ಮುಂದೆ ನು ಪ್ರತ್ಯಯ ಬರುವುದು ಎಂಬುದರಿಂದ ದಾ ಧಾತುವಿನ ಮುಂದೆ ನು ಪ್ರತ್ಯಯ ದಾನು ಎಂದಾಗು ವುದು. ಇದರೊಂದಿಗೆ ಸು ಶಬ್ದಕ್ಕೆ **ಕುಗತಿಪ್ರಾದಯಃ** (ಪಾ. ಸೂ. ೨-೨-೧೮) ಎಂಬುದರಿಂದ ಸಮಾಸ, ಸಂಬೋಧನ ಪ್ರಥಮಾ ಬಹುವಚನಾಂತ. ಇದು ಆಮಂತ್ರಿತ. ಆದ್ದರಿಂದ **ಆಮನ್ತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ಸರ್ವಾನುದಾತ್ತ ಬರುವುದು. ಇಲ್ಲಿ ಸುದಾನವಃ ಎಂಬುದನ್ನು ಪ್ರಥಮಾ ಬಹುವಚನಾಂತ ವಾಗಿ ಇಟ್ಟುಕೊಂಡು ಯೂಯಂ ಸುದಾನವಃ ಸ್ಥ ಎಂದು ಯೂಯಂ ಶಬ್ದಬೋಧಿತಗಳಾದ ಮರುತ್ತುಗಳನ್ನು ಉದ್ದೇಶಿಸಿ ಸುದಾನವಃ ಸ್ಥ=ಪ್ರಸಿದ್ಧದಾತೃಗಳಾಗಿ ಎಂದು ದಾತೃತ್ವವು ವಿಧಿಸಲ್ಪಡುವುದಿಲ್ಲ. ಏಕೆಂದರೆ ಹೀಗೆ ವಿಧಿ ಯನ್ನು ಸ್ವೀಕರಿಸಿದರೆ ಸುದಾನವಃ ಎಂದು ಆಮಂತ್ರಿತವಾಗುವುದಿಲ್ಲವಾದ್ದರಿಂದ ಆಮನ್ತ್ರಿತಾನುದಾತ್ತವು ಉಪಪನ್ನವಾಗುವುದಿಲ್ಲ. ಆದ್ದರಿಂದ ಸುದಾನವಃ ಎಂಬುದು ಸಂಬೋಧನಪ್ರಥಮಾಬಹುವಚನಾಂತ ಎಂದು ಸ್ವೀಕರಿಸಿ ಹೇ ಸುದಾನವಃ ಯೂಯಂ ಹಿ ಸ್ಥ ಎಂದು ವಿವಕ್ಷಿತವು. ಓ ಪ್ರಸಿದ್ಧ ದಾತೃಗಳಾದ ಮರುತ್ತುಗಳೇ, ನೀವು ಆಯಾಯ ಮಾರುತಸೂಕ್ತಗಳಲ್ಲಿ ಪ್ರತಿಪಾದಿತವಾಗಿರುವ ಪ್ರಭಾವಾತಿಶಯವುಳ್ಳವರು ಎಂದು ಸುದಾ ನವಃ ಎಂದು ಸಿದ್ಧವಾದ ದಾತೃತ್ವದಿಂದ ಮರುತ್ತುಗಳನ್ನು ಸಂಬೋಧನೆ ಮಾಡಿ ಯೂಯಮ್ ಎಂಬುದರಿಂದ ಆಯಾ ಮಾರುತಸೂಕ್ತಗಳಲ್ಲಿ ಪ್ರಸಿದ್ಧವಾದ ಪ್ರಭಾವಾತಿಶಯಗಳನ್ನು ಪ್ರತಿನಿರ್ದೇಶ ಮಾಡಿ ಪುನೀತನ, ಪವಿತ್ರಮಾಡಿರಿ ಎಂದು ಪ್ರಾರ್ಥಿಸಿದರೆ ಪವಿತ್ರೀಕರಣದಲ್ಲಿ ಯುಷ್ಮಚ್ಛಬ್ದಸಂಗೃಹೀತಗಳಾದಪ್ರಭಾವಾತಿಶಯಗಳಿಗೆ ಹೇತುತ್ವವು ಹಿ ಶಬ್ದದಿಂದ ಬೋಧಿತವಾಗುವುದು ॥ ೨ ॥

॥ ಸಂಹಿತಾಪಾಠಃ ॥

ಅಭಿ ಯಜ್ಞಂ ಗೃಣೀಹಿ ನೋ ಗ್ನಾವೋ ನೇಷ್ಟಃ ಪಿಬ ಋತುನಾ ।
ತ್ವಂ ಹಿ ರತ್ನಧಾ ಅಸಿ ॥ ೩ ॥

॥ ಪದಪಾಠಃ ॥

ಅಭಿ । ಯಜ್ಞಂ । ಗೃಣೀಹಿ । ನಃ । ಗ್ನಾವಃ । ನೇಷ್ಟರಿತಿ । ಪಿಬ । ಋತುನಾ ॥
ತ್ವಂ । ಹಿ । ರತ್ನಽಧಾಃ । ಅಸಿ ॥ ೩ ॥

॥ ಸಾಯಣಭಾಷ್ಯಂ ॥

ಗ್ನಾಶಬ್ದಃ ಸ್ತ್ರೀವಾಚೀ । ತಥಾ ಚ ಯಾಸ್ಕ ಆಹ । ಮೇನಾ ಗ್ನಾ ಇತಿ ಸ್ತ್ರೀಣಾಂ ಮೇನಾ ಮಾನಯಂತ್ಯೇನಾ ಗ್ನಾ ಗಚ್ಛಂತ್ಯೇನಾಃ । ನಿ. ೩-೨೧ । ಇತಿ । ಗ್ನಾ ಅಸ್ಯ ಸಂತೀತಿ ಗ್ನಾವಾನ್ । ನೇಷ್ಟೃಶಬ್ದೋಽತ್ರ ತ್ವಷ್ಟಾರಂ ದೇವಮಾಹ । ಕಸ್ಮಿಂಶ್ಚಿದ್ದೇವಸತ್ರೇ ನೇಷ್ಟೃತ್ವೇನ ತ್ವಷ್ಟುರ್ವೃತ್ತತ್ವಾತ್ । ಹೇ ಗ್ನಾವಃ ಪತ್ನೀಯುಕ್ತ ನೇಷ್ಟಃ ತ್ವಷ್ಟಃ । ನೋಽಸ್ಮದೀಯಂ ಯಜ್ಞಮಭಿ ಗೃಣೀಹಿ । ಅಭಿತೋ ದೇವಾನಾಂ ಸಮೀಪೇ ಸ್ತುಹಿ । ಋತುನಾ ಸಹ ತ್ವಂ ಸೋಮಂ ಪಿಬ । ಹಿ ಯಸ್ಮಾತ್ತ್ವಂ ರತ್ನಧಾ ಅಸಿ ರತ್ನಾನಾಂ ದಾತಾಸಿ ದಾತಾ ಭವಸಿ ತಸ್ಮಾತ್ಸೋಮಂ ಪಾತುಮರ್ಹಸೀತ್ಯರ್ಥಃ ॥ ಅಭಿ । ಉಪಸರ್ಗಾಶ್ಚಾಭಿವರ್ಜಂ । ಫಿ ೪-೧೩ । ಇತಿ ಪರ್ಯುದಾಸಾದಭೇರಂತೋದಾತ್ತತ್ವಂ। ಗೃಣೀಹಿ । ಗೄ ಶಬ್ದೇ । ಲೋಟಿ ಸಿಪೋ ಹಿಃ । ಕ್ರ್ಯಾದಿಭ್ಯಃ ಶ್ನಾ । ಈಹಲ್ಯಘೋರಿತೀತ್ವಂ । ಶ್ನಾಪ್ರತ್ಯಯಸ್ಯ ಙಿತ್ತ್ವಾದ್ಗುಣಾಭಾವಃ । ಪ್ವಾದೀನಾಂ ಹ್ರಸ್ವಃ । ತಿಙ್ಙತಿಙ ಇತಿ ನಿಘಾತಃ । [illegible]ಸ್ಯ ಸಂತೀತಿ ಮತುಪ್ । ವ್ಯತ್ಯಯೇನ ವತ್ವಂ । ಸಂಬುದ್ಧೌ ಮತುವಸೋ ರುರಿತಿ ರುತ್ವಂ । ವಿಸರ್ಗಃ । ಪಾದಾದಿತ್ವೇನಾಮಂತ್ರಿತನಿಘಾತಾಭಾವಾತ್ ಷಾಷ್ಠಿಕಮಾಮಂತ್ರಿತಾದ್ಯುದಾತ್ತತ್ವಂ । ಗ್ನಾವ ಇತ್ಯಸ್ಯ ವಿಶೇಷಣತಯಾ ವಿಶೇಷವಚನತ್ವಾನ್ನಾಮಂತ್ರಿತೇ ಸಮಾನಾಧಿಕರಣ ಇತಿ ನಿಷೇಧಾಭಾವಾದವಿದ್ಯಮಾನವತ್ತ್ವೇನೋತ್ತರಸ್ಯ ನೇಷ್ಟೃಶಬ್ದಸ್ಯ ಷಾಷ್ಠಿಕಮಾದ್ಯುದಾತ್ತತ್ವಂ । ಪಿಬ । ಶಪಃ ಪಿತ್ತ್ವಾದ್ಧಾತುಸ್ವರಃ । ಪೂರ್ವಯೋರಾಮಂತ್ರಿತಯೋರವಿದ್ಯಮಾನವತ್ತ್ವೇನ ನಿಘಾತಾಭಾವಃ । ರತ್ನಾನಿ ದಧಾತೀತಿ ರತ್ನಧಾಃ । ಕ್ವಿಪ್ಚೇತಿ ಕ್ವಿಪ್ । ಧಾತುಸ್ವರಃ । ಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವೇನ ಸ ಏವ ಶಿಷ್ಯತೇ । ಅಸಿ । ಸಿಪಃ ಪಿತ್ತ್ವಾದ್ಧಾತುಸ್ವರಃ । ತಿಙ್ಙತಿಙ ಇತಿ ನಿಘಾತೋ ನ ಭವತಿ ಹಿ ಚೇತಿ ಪ್ರತಿಷೇಧಾತ್ ॥

|| ಪ್ರತಿಪದಾರ್ಥ ||

ಗ್ನಾವಃ— ಪತ್ನೀಯುಕ್ತನಾದ | ನೇಷ್ಟಃ—ಎಲೈ ತ್ವಷ್ಟೃವೇ | ನಃ—ನಮ್ಮ | ಯಜ್ಞಂ--ಯಜ್ಞವನ್ನು | ಅಭಿ ಗೃಣೀಹಿ—(ದೇವತೆಗಳ) ಸಮಿಾಪದಲ್ಲೆಲ್ಲ ಹೊಗಳು | ಋತುನಾ—ಋತು ದೇವತೆಯೊಂದಿಗೆ | ಪಿಬ—ಸೋಮರಸವನ್ನು ಪಾನಮಾಡು| ಹಿ—ಏತಕ್ಕೆಂದರೆ | ತ್ವಂ—ನೀನು | ರತ್ನಧಾ—ಯಜ್ಞಫಲರೂಪವಾದ ರತ್ನಾದ್ಯೈಶ್ವರ್ಯವನ್ನು ಕೊಡುವವನಾಗಿ | ಅಸಿ-- ಇರುವೆ.

|| ಭಾವಾರ್ಥ ||

ಎಲೈ ತ್ವಷ್ಟೃವೇ, ನೀನು ಯಜ್ಞಫಲರೂಪವಾದ ರತ್ನಾದ್ಯೈಶ್ವರ್ಯವನ್ನು ಕೊಡುವವನು ಎಂಬುದಾಗಿ ಪ್ರಸಿದ್ಧನಾಗಿರುವೆ. ಇಂತಹ ನೀನು ಪತ್ನೀಯುಕ್ತನಾಗಿ ಬಂದು ನಮ್ಮ ಸೋಮರಸವನ್ನು ಋತು ದೇವತೆಯೊಡನೆ ಪಾನಮಾಡು. ಮತ್ತು ದೇವತೆಗಳ ಬಳಿಗೆ ಹೋಗಿ ನಮ್ಮ ಯಜ್ಞವನ್ನು ಹೊಗಳು.

English Translation.

Neshtri, (Twashtri) commend our sacrifice to the gods; drink with Ritu, for you are a giver of riches.

|| ವಿಶೇಷವಿಷಯಗಳು ||

ಗ್ನಾವಃ--ಗ್ನಾ ಶಬ್ದವು ಸ್ತ್ರೀವಾಚಕವು. ಗ್ನಾ ಗಂಚ್ಛಂತ್ಯೇನಾಃ (ನಿ. ೩-೨೧) ಎಂದು ಯಾಸ್ಕರು ಹೇಳಿರುವರು. ಗ್ನಾ ಅಸ್ಯ ಸಂತೀತಿ ಗ್ನಾವಾನ್ ತಸ್ಯ ಸಂಬುದ್ಧಿಃ | ಸ್ತ್ರೀಯೊಡನೆ ಇರುವವನಿಗೆ ಗ್ನಾವಾನ್ ಎಂದು ಹೆಸರು ಈ ಗ್ನಾವಃ ಎಂಬ ಸಂಬೋಧನ ಪ್ರಥಮೈಕವಚನವು ನೇಷ್ಟಃ ಎಂಬ ಶಬ್ದಕ್ಕೆ ವಿಶೇಷಣವು.

ನೇಷ್ಟಃ—ಕೆಲವು ಯಜ್ಞಗಳಲ್ಲಿ ತ್ವಷ್ಟೃವು ನೇಷ್ಟೃವೆಂಬ ಋತ್ವಿಕ್ಕಿನ ಭಾಗವನ್ನು ವಹಿಸಿದ್ದನೆಂದು ಪ್ರಸಿದ್ಧಿ ಇರುವುದರಿಂದ ತ್ವಷ್ಟೃವನ್ನು ನೇಷ್ಟೃಶಬ್ದದಿಂದ ಸಂಬೋಧನೆ ಮಾಡುವುದು ರೂಢಿಯಲ್ಲಿರುವುದು. ಆದುದರಿಂದ ನೇಷ್ಟೃಶಬ್ದಕ್ಕೆ ಇಲ್ಲಿ ತ್ವಷ್ಟೃದೇವತೆಯೆಂಬ ಅರ್ಥವನ್ನು ಹೇಳಬೇಕೆಂದು ಭಾಷ್ಯಕಾರರ ಅಭಿಪ್ರಾಯವು.

ರತ್ನಧಾಃ—ರತ್ನಾನಾಂ ದಾತಾ—ರತ್ನಗಳನ್ನು (ಶ್ರೇಷ್ಠ ವಸ್ತುಗಳನ್ನು) ಕೊಡುವವನು ಎಂದರ್ಥವು. ಋಗ್ವೇದದಲ್ಲಿ ಸಾಧಾರಣವಾಗಿ ದಾ ಧಾತುವಿಗೆ ಬದಲಾಗಿ ಧಾ ಧಾತುವಿನ ಪ್ರಯೋಗವು ರೂಢಿಯಲ್ಲಿರುವುದು.

|| ವ್ಯಾಕರಣಪ್ರಕ್ರಿಯಾ ||

ಅಭಿ-ಉಪಸರ್ಗಾಶ್ಚಾಭಿವರ್ಜಮ್—(ಫಿ. ಸೂ. ೮೧) ಎಂದು ಪರ್ಯುದಾಸ ಮಾಡಿರುವುದರಿಂದ ಅಭಿಗೆ ಆದ್ಯುದಾತ್ತ ಬರುವುದಿಲ್ಲ. ಫಿಷೋಽನ್ತ ಉದಾತ್ತಃ ಎಂಬುದರಿಂದ ಅಂತೋದಾತ್ತ ಬರುವುದು.

ಏವಾದಿಯಲ್ಲಿ ಅಭಿಶಬ್ದಕ್ಕೆ ಪಾಠವನ್ನು ಬಹುಜನರು ಒಪ್ಪುವರು. ಆದ್ದರಿಂದ **ಏವಾದೀನಾಮನ್ತಃ** (ಫಿ. ಸೂ. ೮೨) ಎಂಬುದರಿಂದ ಅಭಿ ಅಂತೋದಾತ್ತ. **ಮಾನೋ ಮರ್ತಾ ಅಭಿದ್ರುಹನ್** (ಋ. ಸೂ. ೬-ಋ ೧೦) ಎಂಬ ಮಂತ್ರದಲ್ಲಿಯೂ ಏಹಿಸ್ತೋಮಾ ಅಭಿ (ಸೂ. ೧೦-ಋ. ೪) ಎಂಬಲ್ಲಿಯೂ ವೇದಭಾಷ್ಯಕಾರರು ಏವಾ ದೀನಾಮಂತಃ ಎಂಬುದರಿಂದ ಅಂತೋದಾತ್ತವನ್ನು ಉಪಪಾದಿಸಿರುವರು.

**ಗೃಣೀಹಿ**— ಗೄ ಶಬ್ದೇ ಕ್ರ್ಯಾದಿ ಧಾತು. ಲೋಟ್ ಮಧ್ಯಮಪುರುಷ ಏಕವಚನ ಸಿಪ್. ಅದಕ್ಕೆ **ಸೇರ್ಹ್ಯಪಿಚ್ಚ** (ಪಾ.ಸೂ-೪-೪-೮೭ ) ಎಂಬುದರಿಂದ ಹಿ ಆದೇಶ. ಗೄ+ಹಿ. **ಕ್ರ್ಯಾದಿಭ್ಯಃಶ್ನಾ** ಎಂಬುದರಿಂದ ಶ್ನಾ ವಿಕರಣ. ಗೄ+ನಾ+ಹಿ, **ಸಾರ್ವಧಾತುಕಮಪಿತ್**, ಎಂಬುದರಿಂದ ಹಿಯು ಙಿತ್ತು. ಆದ್ದರಿಂದ **ಈಹಲ್ಯಘೋಃ** (ಪಾ-ಸೂ. ೬-೪-೧೧೩) ಎಂಬುದರಿಂದ ಶ್ನಾ ಪ್ರತ್ಯಯದ ಆಕಾರಕ್ಕೆ ಈಕಾರದೇಶ. ಗೄ+ನೀ ಹಿ, ಹಿಯು ಙಿತ್ತಾದ್ದ ರಿಂದ ಇದರ ಹಿಂದೆ ಇರುವ ಈಗೆ ಗುಣ ಬರುವುದಿಲ್ಲ. ಶ್ನಾ ಪ್ರತ್ಯವು **ಸಾರ್ವಧಾತುಕಮಪಿತ್** ಎಂಬುದರಿಂದ ಙಿತ್ತಾಗುವುದರಿಂದ ಇದರ ಹಿಂದಿನ ಋಕಾರಕ್ಕೆ ಗುಣ ಬರುವುದಿಲ್ಲ. **ಪ್ವಾದೀನಾಂ ಹ್ರಸ್ವಃ** (ಪಾ ಸೂ. ೭-೩-೮೦) ಎಂಬುದರಿಂದ ಗೄಗೆ ಹ್ರಸ್ವ, ಗೃಣೀಹಿ, ಎಂದಾಗುವುದು. **ತಿಙ್ಙತಿಙಃ** ( ಪಾ. ಸೂ. ೮-೧-೨೮) ಎಂಬುದರಿಂದ ರಿಂದ ಸರ್ವಾನುದಾತ್ತ.

**ಗ್ನಾವಃ**— **ಗ್ನಾಃಸ್ತ್ರಿಯಃ** ಅಸ್ಯ ಸನ್ತಿ ಎಂದು ವಿಗ್ರಹ ಮಾಡಿದರೆ ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್ ಎಂಬು ದರಿಂದ ಮತುಪ್ ಪ್ರತ್ಯಯ ಬರುವುದು. ಮಕಾರಕ್ಕೆ ವ್ಯತ್ಯಯದಿಂದ ವಕಾರ ಗ್ನಾವತ್. ಇದರಮುಂದೆ ಸಂಬೋಧನ ಪ್ರಥಮೈಕವಚನ ಸು ಪ್ರತ್ಯಯ. **ಉಗಿದಚಾಂಸರ್ವನಾಮಸ್ಥಾನೇಽಧಾತೋಃ** (ಪಾ.ಸೂ. ೭-೧-೭೦) ಎಂಬುದ ರಿಂದ ನುಮಾಗಮ ಗ್ನಾವನ್‌ತ್+ಸ್. **ಹಲ್ಙ್ಯಾಭ್ಯೋದೀರ್ಘಾ** (ಪಾ.ಸೂ. ೬-೧-೬೮)ಎಂಬುದರಿಂದ **ಸುಲೋಪ** **ಸಂಯೋಗಾಂತಸ್ಯಲೋಪಃ** (ಪಾ. ಸೂ. ೮-೨-೨೩) ಎಂಬುದರಿಂದ ತಕಾರ ಲೋಪ. ಗ್ನಾವನ್ ಎಂದಿರು ವಾಗ **ಮತುವಸೋರುಸಂಬುದ್ಧೌ ಛಂದಸಿ** (ಪಾ. ಸೂ. ೮.೩-೧) ಎಂಬುದರಿಂದ ನಕಾರಕ್ಕೆ ರುತ್ವ ಗ್ನಾವರ್ ರೇಫಕ್ಕೆ ಸಸಜುಷೋರುಃ ಎಂಬುದರಿಂದ ವಿಸರ್ಗ ಬಂದರೆ ಗ್ನಾವಃ ಎಂದಾಗುವುದು. ಗ್ನಾವರ್+ನೇಷ್ಟಃ ಎಂದು ಸಂಹಿತಕಾಲದಲ್ಲಿ **ಹಶಿಚ** (ಪಾ. ಸೂ. ೬-೧-೧೧೪) ಹಶ್ ವರ್ಣ ಪರದಲ್ಲಿರುವಾಗ ಪ್ಲುತವಲ್ಲದ ಹ್ರಸ್ವಾಕಾರದ ಮುಂದೆ ಇರುವ ರುಗೆ ಉತ್ವ ಬರುವುದು ಎಂಬುದರಿಂದ ಉತ್ವ. ಆದರೆ ಉತ್ವವು ಸಪಾದ ಸಪ್ತಾಧ್ಯಾಯದ ಕಾರ್ಯ ಅದನ್ನುಮಾಡುವಾಗ **ಪೂರ್ವತ್ರಾಸಿದ್ಧಮ್** (ಪಾ. ಸೂ. ೮-೨-೧) ಎಂಬುದರಿಂದ ಸಂಯೋಗಾಂತಲೋಪವು ಅಸಿದ್ಧವಾಗುವುದು. ಏವಂಚ ತಕಾರ ಪರವಾಗಿ ಬಿಡುವುದರಿಂದ ಹಶ್ ಪರವಾಗುವುದಿಲ್ಲ. ಆದ್ದರಿಂದ ಹೇಗೆ ಉತ್ವ ಬರುವುದು ಎಂದರೆ ಉತ್ವವು ಸಪಾದ ಸಪ್ತಾಧ್ಯಾಯದ ಶಾಸ್ತ್ರವಾದರೂ ಅದನ್ನು ಮಾಡುವಾಗ **ಸಂಯೋಗಾನ್ತ-ಲೋಪೋರೋರುತ್ವೇ** (ಪಾ.ಸೂ. ೮-೨-೬ ವಾ) ರುಗೆ ಉತ್ವವನ್ನು ಮಾಡುವಾಗ ಸಂಯೋಗಾನ್ತಲೋಪವು ಸಿದ್ಧ ವಾಗುವುದು ಎಂಬ ವಚನದಿಂದ ಅಸಿದ್ಧವಾಗುವುದಿಲ್ಲ. ಆದ್ದರಿಂದ ಉತ್ವ ಬರುವುದು. ಗ್ನಾವಃ+ಉ+ನೇಷ್ಟಃ ಗುಣ, ಗ್ನಾವೋನೇಷ್ಟಃ ಎಂದಾಗುವುದು. ಗ್ನಾವಃ-ಎಂಬುದು ಎರಡನೇ ಪಾದದ ಆದಿಯಲ್ಲಿರುವುದು. ಆದ್ದರಿಂದ **ಅಪಾದಾದೌ** (ಪಾ. ಸೂ. ೮-೧-೧೮) ಎಂದು ಪ್ರತಿಷೇಧ ಬರುವುದರಿಂದ **ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ. ಆರನೇ ಅಧ್ಯಾಯದ **ಆಮನ್ತ್ರಿತಸ್ಯಚ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತ ಬರುವುದು. ಗ್ನಾವಃ ಎಂಬುದು ನೇಷ್ಟಃ ಎಂಬುದಕ್ಕೆ ವಿಶೇಷಣವಾದ್ದರಿಂದ ವಿಶೇಷವಚನವಾಗುವುದು. ಸಾಮಾನ್ಯವಚನವಾಗುವುದಿಲ್ಲ. ಆದ್ದರಿಂದ **ನಾಮನ್ತ್ರಿತೇ ಸಮಾನಾಧಿಕರಣೇ ಸಾಮಾನ್ಯವಚನಂ** (ಪಾ. ಸೂ. ೮-೧-೭೩) ಎಂಬುದರಿಂದ ಅವಿದ್ಯಮಾನವದ್ಭಾವಕ್ಕೆ ಪ್ರತಿಷೇಧವು ಬರುವುದಿಲ್ಲ.

ಆದಕಾರಣ **ಆಮನ್ತ್ರಿತಂ ಪೂರ್ವಮವಿದ್ಯಮಾನವತ್** (ಪಾ.ಸೂ. ೮-೧-೭೨) ಎಂಬುದರಿಂದ ಪೂರ್ವದ ಆಮಂತ್ರಿತವಾದ ಗ್ನಾವಃ ಎಂಬುದಕ್ಕೆ ಅವಿದ್ಯಮಾನವದ್ಭಾವ ಬರುವುದು. ಏವಂಚ ನೇಷ್ಟಃ ಎಂಬ ಆಮಂತ್ರಿತವೂ ಪಾದಾದಿಗತವಾಗುವುದರಿಂದ ಆಷ್ಟಮಿಕಸರ್ವಾನುದಾತ್ತ ಬರುವುದಿಲ್ಲ. ಷಾಷ್ಠಸೂತ್ರದಿಂದ ಆದ್ಯುದಾತ್ತವೇ ಬರುವುದು.

ಪಿಬ— ಶಪ್ಪು ಪಿತ್ತಾದ್ದರಿಂದ ಧಾತುಸ್ವರ ನಿಲ್ಲುವುದು. ಇದರ ಹಿಂದೆ ಇರುವ ಆಮನ್ತ್ರಿತಗಳೆರಡಕ್ಕೂ ಅವಿದ್ಯಮಾನವದ್ಭಾವ ಬರುವುದರಿಂದ ಪಿಬ, ಎಂಬುದಕ್ಕೆ ಸರ್ವಾನುದಾತ್ತ ಬರುವುದಿಲ್ಲ. ರತ್ನಾನಿ ದಧಾತಿ ಇತಿ ರತ್ನಧಾಃ ಡುಧಾಞ್ ಧಾರಣಪೋಷಣಯೋಃ ಎಂಬುದರ ಮುಂದೆ ಕ್ವಿಪ್ಚ ಎಂಬುದರಿಂದ ಕ್ವಿಪ್. ಧಾತು ಸ್ವರವೇ ಬರುವುದು. ಸಮಾಸ ಬಂದನಂತರ **ಗತಿಕಾರಕೋಪಪದಾತ್ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬಂದು ಅದೇ ಸ್ವರ ನಿಲ್ಲುವುದು.

ಅಸಿ-ಅಸ ಭುವಿ ಲಟ್, ಮಧ್ಯಮಪುರುಷ ಏಕವಚನ ಸಿಪ್. ಶಪ್ ವಿಕರಣಕ್ಕೆ ಅದಿಪ್ರಭೃತಿಭ್ಯಃಶಪಃ ಎಂಬುದರಿಂದ ಲುಕ್. **ತಾಸಸ್ತ್ಯೋರ್ಲೋಪಃ** (ಪಾ. ಸೂ. ೭-೪-೫೦) ಎಂಬುದರಿಂದ ಸಕಾರಕ್ಕೆ ಲೋಪ. ಅಸಿ ಎಂದಾಗುವುದು. ಶಪ್ಪು ಪಿತ್ತಾದ್ದರಿಂದ ಅನುದಾತ್ತೌ ಸುಪ್ಪಿತೌ, ಎಂಬುದರಿಂದ ಅನುದಾತ್ತ. ಧಾತು ಸ್ವರ ನಿಲ್ಲುವುದು. ಹಿ ಶಬ್ದಯೋಗವಿರುವುದರಿಂದ ಹಿಚ ಎಂಬುದರಿಂದ ಪ್ರತಿಷೇಧ ಬರುವುದು. ಆದಕಾರಣ ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ. ಉದಾತ್ತಾದನುದಾತ್ತಸ್ಯ ಸ್ವರಿತಃ ಎಂಬುದರಿಂದ ಸಿಪ್ ನ ಇಕಾರ ಸ್ವರಿತವಾಗುವುದು. ॥ ೩ ॥

॥ ಸಂಹಿತಾಪಾಠಃ ॥

ಅಗ್ನೇ ದೇವಾँ ಇಹಾ ವಹ ಸಾದಯಾ ಯೋನಿಷು ತ್ರಿಷು ।
ಪರಿ ಭೂಷ ಪಿಬ ಋತುನಾ ॥ ೪ ॥

॥ ಪದಪಾಠಃ ॥

ಅಗ್ನೇ । ದೇವಾನ್ । ಇಹ । ಆ । ವಹ । ಸಾದಯ । ಯೋನಿಷು । ತ್ರಿಷು ॥
ಪರಿ । ಭೂಷ । ಪಿಬ । ಋತುನಾ ॥ ೪ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ದೇವಾನಿಹಾಸ್ಮಿನ್ಕರ್ಮಣ್ಯಾ ವಹ । ತತೋ ಯೋನಿಷು ಸ್ಥಾನೇಷು ತ್ರಿಷು ಸವನೇಷು ಸಾದಯ । ದೇವಾನುಪವೇಶಯ । ತತಸ್ತಾನ್ಪರಿ ಭೂಷ । ಅಲಂಕುರು । ಋತುನಾ ಸಹ ತ್ವಂ ಸೋಮಂ

ಪಿಬ ॥ ಅಗ್ನೇ ದೇವಾನಿತ್ಯಯಂ ಪಾದೋ ಗತಃ । ಯೋನಿಷು । ಯು ಮಿಶ್ರಣೇ । ವಹಿಶ್ರಿ೦ತ್ಯಾದಿನಾ । ಉ ೪.೫೧ । ನಿ ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತಃ । ತ್ರಿಷು । ಷಟ್ತ್ರಿಚತುರ್ಭ್ಯೋ ಹಲಾದಿಃ । ಪಾ. ೬. ೧.೧೭೯ । ಇತಿ ವಿಭಕ್ತೇರುದಾತ್ತತ್ವಂ । ಭೂಷ ಅಲಂಕಾರೇ । ತಿಙ್ಙತಿಙ ಇತಿ ನಿಘಾತಃ । ಪಿಬ ಋತುನಾ । ಗತೌ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ದೇವಾನ್**—ದೇವತೆಗಳನ್ನು । **ಇಹ**—ಈ ಯಜ್ಞಕರ್ಮನಿಮಿತ್ತವಾಗಿ । **ಆ ವಹ**—ಕರೆದುಕೊಂಡು ಬಾ । **ತ್ರಿಷು ಯೋನಿಷು**—ಮೂರು(ಪ್ರತ್ಯೇಕವಾದ) ಸ್ಥಾನಗಳಲ್ಲಿ (ಸವನಗಳಲ್ಲಿ) । **ಸಾದಯ**—ಕುಳ್ಳಿರಿಸು । **ಪರಿ ಭೂಷ**—ಅಲಂಕರಿಸು। **ಋತುನಾ**—ಋತುದೇವತೆಯೊಂದಿಗೆ । **ಪಿಬ**—(ಸೋಮರಸವನ್ನು) ಕುಡಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ದೇವತೆಗಳನ್ನು ನಮ್ಮ ಯಜ್ಞಕ್ಕೆ ಕರೆದುಕೊಂಡು ಬಾ. ಅವರನ್ನು ಪ್ರಾತಸ್ಸವನ, ಮಾಧ್ಯಂದಿನಸವನ, ತೃತೀಯಸವನಗಳೆಂಬ ಮೂರುಸವನಗಳಲ್ಲೂ ಮೂರು ಪ್ರತ್ಯೇಕವಾದ ಸ್ಥಾನಗಳಲ್ಲಿ ಕುಳ್ಳಿರಿಸು. ಯೋಗ್ಯವಾದ ಅಲಂಕಾರಗಳನ್ನು ಮಾಡು. ನೀನೂ ಸಹ ಋತುದೇವತೆಯೊಂದಿಗೆ ಸೋಮರಸವನ್ನು ಕುಡಿ.

English Translation

Agni, bring the gods hither, seat them in three places (or in the three savanas), decorate them and drink with Ritu.

॥ ವಿಶೇಷವಿಷಯಗಳು ॥

**ಸಾದಯ**—ಛಂದಸ್ಸಿನ ಅನುಕೂಲಕ್ಕಾಗಿ ಈ ಶಬ್ದದ ಅಂತ್ಯಾಕ್ಷರವು ಸಂಹಿತಾಪಾಠದಲ್ಲಿ ದೀರ್ಘವಾಗಿರುವುದು.

**ಯೋನಿಷು ತ್ರಿಷು**—ತ್ರಿಷು ಸ್ಥಾನೇಷು ಎಂದರೆ ಪ್ರಾತಸ್ಸವನ, ಮಾಧ್ಯಂದಿನಸವನ, ತೃತೀಯಸವನಗಳು. ಸವನವೆಂದರೆ ಸೋಮರಸವನ್ನು ಹಿಂಡುವ ಕರ್ಮವು. ಈ ಕರ್ಮವು ಯಜ್ಞದಲ್ಲಿ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳೆಂಬ ಮೂರು ಕಾಲಗಳಲ್ಲಿಯೂ ಮಂತ್ರಪಠನಪೂರ್ವಕವಾಗಿ ನಡೆಯುವುದರಿಂದ ಈ ಕರ್ಮಗಳಿಗೆ ಕ್ರಮವಾಗಿ ಪ್ರಾತಸ್ಸವನ, ಮಾಧ್ಯಂದಿನಸವನ, ತೃತೀಯಸವನಗಳೆಂದು ಹೆಸರಿರುವುದು.

**ಪರಿ ಭೂಷ—ಅಲಂಕುರು**—ಅಲಂಕರಿಸು ಎಂಬರ್ಥವನ್ನು ಭಾಷ್ಯಕಾರರು ಹೇಳಿರುವರು. ಭೂಷ ಶಬ್ದಕ್ಕೆ ಅಲಂಕರಿಸು ಎಂಬರ್ಥವಿದ್ದರೂ ಇಲ್ಲಿ ದೇವತೆಗಳನ್ನು ಅಲಂಕರಿಸುವ ಅವಶ್ಯಕತೆಯೇನಿರಬಹುದೆಂಬ ಸಂಶಯಕ್ಕೆ ಆಸ್ಪದವಿದೆ.

॥ ವ್ಯಾಕರಣಪ್ರಕ್ರಿಯಾ ॥

ಅಗ್ನೇದೇವಾ೯ ಇಹಾವಹ ಎಂಬೀ ಪಾದಕ್ಕೆ ೧೨ನೇ ಸೂಕ್ತ ೩, ೧೦ನೇ ಋಕ್ಕುಗಳಲ್ಲಿ ಪ್ರಕ್ರಿಯೆಯು ಉಪಪಾದಿತವಾಗಿರುವುದು.

ಸಾದಯಾ— ಷದ್ಲೃ ವಿಶರಣಗತ್ಯವಸಾದನೇಷು, ಧಾತು. ಣಿಚ್ ಧಾತ್ವಾದೇಃಷಃಸಃ ಎಂಬುದರಿಂದ ಷಕಾರಕ್ಕೆ ಸಕಾರ. ಅತ ಉಪಧಾಯಾಃ (ಪಾ. ಸೂ. ೭-೨-೧೧೬) ಉಪಧಾವೃದ್ಧಿ ಸಾದಿ. ಇದರ ಮುಂದೆ ಲೋಟ್ ಮಧ್ಯಮಪುರುಷ ಏಕವಚನ ಸಿಪ್. ಸೇರ್ಹ್ಯಪಿಚ್ಚ (ಪಾ. ಸೂ, ೩-೪-೮೭) ಎಂಬುದರಿಂದ ಹಿ ಆದೇಶ. ವಿಕರಣ ಶಪ್, ಗುಣ. ಅಯಾದೇಶ ಸಾದಯ+ಹಿ ಅತೋಹೇಃ (ಪಾ. ಸೂ. ೬-೪-೧೦೫) ಎಂಬುದರಿಂದ ಹಿಗೆ ಲುಕ್. ಣಿಜ್ಪ್ರತ್ಯಯ ಸ್ಥಾನದಲ್ಲಿ ಬಂದ ಅಕಾರ ಪ್ರತ್ಯಯಸ್ವರದಿಂದ ಉದಾತ್ತ. ಶಪ್ ಪಿತ್ತಾದ್ದರಿಂದ ಅನುದಾತ್ತ. ಸಚಸ್ಯಾನಃ ಎಂಬಲ್ಲಿ ಬಂದಂತೆ ಇಲ್ಲಿಯೂ ದೀರ್ಘ.

ಯೋನಿಷು— ಯು ಮಿಶ್ರಣೇ. ವಹಿ, ಶ್ರಿ ಶ್ರು, ಯು, ದ್ರು, ಗ್ಲಾ, ತ್ವರಿಭ್ಯೋ ನಿತ್ (ಉ. ಸೂ. ೪-೪೯೧) ಈ ಧಾತುಗಳ ಮುಂದೆ ನಿ ಪ್ರತ್ಯಯ ಬರುವುದು, ಅದು ನಿತ್ತಾಗುವುದು ಎಂಬುದರಿಂದ ಯು ಧಾತುವಿನ ಮುಂದೆ ನಿ ಪ್ರತ್ಯಯ, ಯು+ನಿ ಸಾರ್ವಧಾತುಕಾರ್ಧಧಾತುಕಯೋಃ (ಪಾ. ಸೂ. ೭-೩-೮೪) ಎಂಬುದರಿಂದ ಗುಣ, ಉಕಾರಕ್ಕೆ ಓಕಾರ, ಸಪ್ತಮೀಬಹುವಚನದಲ್ಲಿ ಯೋನಿಷು ಎಂದಾಗುವುದು. ನಿ ಪ್ರತ್ಯಯವು ನಿತ್ತಾದ್ದರಿಂದ ನಿತ್ಸ್ವರ ಆದ್ಯುದಾತ್ತ ಬರುವುದು.

ತ್ರಿಷು— ಷಟ್‌ತ್ರಿಚತುರ್ಭ್ಯೋಹಲಾದಿಃ (ಪಾ. ಸೂ. ೬-೧-೧೭೯) ಷ್ಣಾನ್ತಾಷಟ್ (ಪಾ. ಸೂ. ೧-೧-೨೪) ಷಕಾರಾಂತ ನಕಾರಾಂತವಾದ ಸಂಖ್ಯಾವಾಚಕಗಳು ಷಟ್ ಸಂಜ್ಞೆಯನ್ನು ಹೊಂದುವುವು ಎಂದು ವಿಹಿತವಾದ ಷಟ್ಸಂಜ್ಞಕ ತ್ರಿಶಬ್ದ, ಚತುರ್‌ಶಬ್ದ ಇವುಗಳ ಮುಂದೆ ಇರುವ ಹಲಾದಿಯಾದ ವಿಭಕ್ತಿಯು ಉದಾತ್ತವಾಗುವುದು ಎಂಬುದರಿಂದ ವಿಭಕ್ತಿಯು ಉದಾತ್ತವಾಗುವುದು.

ಭೂಷ— ಭೂಷ ಅಲಂಕಾರೇ ಭ್ವಾದಿಧಾತು. ಲೋಟ್ ಮಧ್ಯಮಪುರುಷ ಏಕವಚನ ಸಿಪ್. ಹಿ ಆದೇಶ ವಿಕರಣ ಶಪ್. ಅತೋಹೇಃ ಎಂಬುದರಿಂದ ಹಿಗೆ ಲುಕ್ ಭೂಷ ಎಂದಾಗುವುದು. ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತ.

ಪಿಬ ಋತುನಾ— ಇನ್ದ್ರ ಸೋಮಂ ಪಿಬ ಋತುನಾ (ಋ. ಸಂ. ಸೂ. ೧೫-ಋ. ೧) ರಲ್ಲಿ ಈ ಎರಡು ಪದಗಳೂ ವಿವರಿಸಲ್ಪಟ್ಟಿರುವುವು ॥ ೪ ॥

॥ ಸಂಹಿತಾಪಾಠಃ ॥

ಬ್ರಾಹ್ಮಣಾದಿಂದ್ರ ರಾಧಸಃ ಪಿಬಾ ಸೋಮಮೃತೂರನು ।
ತವೇದ್ಧಿ ಸಖ್ಯಮಸ್ತೃತಂ ॥ ೫ ॥

॥ ಪದಪಾಠಃ ॥

ಬ್ರಾಹ್ಮಣಾತ್ । ಇಂದ್ರ । ರಾಧಸಃ । ಪಿಬ । ಸೋಮಂ । ಋತೂನ್ । ಅನು ॥
ತವ । ಇತ್ । ಹಿ । ಸಖ್ಯಂ । ಅಸ್ತೃತಂ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಬ್ರಾಹ್ಮಣಾದ್ಬ್ರಾಹ್ಮಣಾಚ್ಛಂಸಿಸಂಬದ್ಧಾದ್ರಾಧಸೋ ಧನಭೂತಾತ್ಪಾತ್ರಾತ್ಸೋಮಂ ಪಿಬ । ಕಿಂ ಕೃತ್ವಾ । ಋತೂನನು ಋತುದೇವಾನನುಸೃತ್ಯ । ಋತವೋಽಪಿ ಪಿಬಂತ್ವಿತ್ಯರ್ಥಃ । ಹಿ ಯಸ್ಮಾತ್ತವೇತ್ತವ ಸಖ್ಯಮಸ್ತೃತಮೃತೂನಾಮವಿಚ್ಛಿನ್ನಂ ತಸ್ಮಾದೃತುಭಿಃ ಸಹ ಪಾನಂ ಯುಕ್ತಂ ॥ ಬ್ರಾಹ್ಮಣಾತ್ । ಬ್ರಹ್ಮಶಬ್ದೇನಾತ್ರ ಬ್ರಹ್ಮವರ್ಗೇ ದ್ವಿತೀಯೋ ಬ್ರಾಹ್ಮಣಾಚ್ಛಂಸೀ ಕಥ್ಯತೇ । ಸ ಚ ಪುಲ್ಲಿಂಗೇ ಶೇಷನಿಘಾತೇನಾನುದಾತ್ತಾದಿಃ । ತಸ್ಯ ಸಂಬಂಧ್ಯುತ್ತ್ರಪ್ಸ್ವಶ್ಚಮಸಃ । ಸ ಚ ತಸ್ಯೇದಮಿತ್ಯವಯವನ್ನಿಯತ ಇತ್ಯವಯವವಿವಕ್ಷಾಯಾಮನುದಾತ್ತಾದೇರಞ್ । ಪಾ. ೪-೨-೪೪ । ತೇನ ಞಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತತ್ವಮಸಹರೋಽತ್ರ ಬ್ರಾಹ್ಮಣಶಬ್ದಃ । ರಾಧಸಃ । ಸರ್ವಧಾತುಭ್ಯೋಽಸುನ್ । ನಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತಃ । ಪಿಬ । ಪಾದಾದಿತ್ವಾನ್ನಿಘಾತಾಭಾವೇ ದ್ವ್ಯಚೋಽತಸ್ತಿಙ ಇತಿ ದೀರ್ಘತ್ವಂ । ಋತೂಁ ರನ್ವಿತ್ಯತ್ರ ದೀರ್ಘಾದಟಿ ಸಮಾನಪಾದ ಇತಿ ನಕಾರಸ್ಯ ರುತ್ವಂ । ಅತ್ರಾನುನಾಸಿಕಃ ಪೂರ್ವಸ್ಯ ತು ವಾ । ಪಾ. ೮-೩-೨ । ಇತ್ಯೂಕಾರಸ್ಯಾನುನಾಸಿಕತ್ವಂ । ತವ । ಯುಷ್ಮದಸ್ಮದ್ಭ್ಯಾಂ ಙಸೋಽಶ್ । ಪಾ. ೭-೧-೨೭ । ಶಿತ್ತ್ವಾತ್ಸರ್ವಾದೇಶಃ ತವಮಮೌ ಙಸೀತಿ ತವಾದೇಶಃ। ಯುಷ್ಮದಸ್ಮದೋರ್ಙಸೀತ್ಯಾದ್ಯುದಾತ್ತತ್ವಂ । ಸಖ್ಯಂ । ಸಖ್ಯುಃ ಕರ್ಮ ಸಖ್ಯಂ। ಸಖ್ಯುರ್ಯಃ । ಯಸ್ಯೇತಿ ಲೋಪಃ । ಪ್ರತ್ಯಯಸ್ವರಃ। ಅಸ್ತೃತಂ । ಸ್ತೃಣಾತೇರ್ಹಿಂಸಾರ್ಥಸ್ಯ ಕ್ತಃ । ನಞ್ಸಮಾಸಃ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಹಿ—ಯಾವ ಕಾರಣದಿಂದ । ತವೇತ್—ನಿನ್ನದೇ ಆದ । ಸಖ್ಯಂ—ಸ್ನೇಹವು । ಅಸ್ತೃತಂ— (ಋತುದೇವತೆಗಳೊಂದಿಗೆ) ಅವಿಚ್ಛಿನ್ನವಾದುದೋ (ಅತಃ—ಆ ಕಾರಣದಿಂದ) ಬ್ರಾಹ್ಮಣಾತ್— ಬ್ರಾಹ್ಮಣಾಚ್ಛಂಸಿ ಎಂಬ ಋತ್ವಿಜನ । ರಾಧಸಃ — ಬೆಲೆಬಾಳತಕ್ಕ ಚಮಸ ಪಾತ್ರೆಯಿಂದ । ಸೋಮಃ—ಸೋಮರಸವನ್ನು । ಪಿಬ— ಕುಡಿ.

॥ ಭಾವಾರ್ಥ ॥

ಎಲೈ ಇಂದ್ರನೇ ನಿನ್ನ ಮತ್ತು ಋತುದೇವತೆಗಳ ಸ್ನೇಹವು ಶಾಶ್ವತವಾದುದೆಂದು ಲೋಕಪ್ರಸಿದ್ಧವಾಗಿರುವುದು. ಆದುದರಿಂದ ಬ್ರಾಹ್ಮಣಚ್ಛಂಸಿ ಎಂಬ ಋತ್ವಿಜನ ಬೆಲೆಬಾಳತಕ್ಕ ಚಮಸಪಾತ್ರೆಯಿಂದ ಋತುದೇವತೆಗಳೊಡನೆ ನೀನೂ ಸೋಮರಸವನ್ನು ಪಾನಮಾಡು.

## English Translation.

Drink the soma juice, Indra, from the cups of priest called Brahmanachamsi, after Ritu for whom your friendship is uninterrupted (everlasting).

॥ ವಿಶೇಷವಿಷಯಗಳು ॥

**ಬ್ರಾಹ್ಮಣಾತ್**—ಬ್ರಾಹ್ಮಣಾಚ್ಛಂಸಿ ಎಂಬ ಹೆಸರಿನ ಋತ್ವಿಕ್.

**ರಾಧಸಃ—ಧನಭೂತಾತ್ ಪಾತ್ರಾತ್**—ರಾಧಶ್ಶಬ್ದಕ್ಕೆ ಧನವೆಂದು ಮಾತ್ರ ಅರ್ಥವು. ಪಾತ್ರೆ ಎಂಬ ಅರ್ಥವಾಗುವುದಿಲ್ಲವಾದರೂ ಭಾಷ್ಯಕಾರರು ಆ ಅರ್ಥವನ್ನು ಅಧ್ಯಾಹಾರ ಮಾಡಿರುವರು. ಅಥವಾ ರಾಧಸಃ ಎಂಬ ಶಬ್ದಕ್ಕೆ ಅಮೂಲ್ಯವಾದ, ಅನರ್ಘ್ಯವಾದ ಪಾತ್ರೆಯಿಂದ, costly vessel ಎಂದು ಅರ್ಥವನ್ನು ಬೇಕಾದರೂ ಹೇಳಬಹುದು.

**ಅಸ್ತೃತಂ**—ಅವಿಚ್ಛಿನ್ನಂ, ಅವಿಚ್ಛಿನ್ನವಾದ, uninteruptedr ಕೆಲವು ಕಾಲವಿದ್ದು ನಿಂತುಹೋಗದ, ಶಾಶ್ವತವಾದ ಇತ್ಯಾದಿ.

॥ ವ್ಯಾಕರಣಪ್ರಕಿಯಾ ॥

**ಬ್ರಾಹ್ಮಣಾತ್**—ಸೋಮಸಂಸ್ಥಾಕವಾದ ಯಾಗದಲ್ಲಿ ಬ್ರಹ್ಮ, ಬ್ರಾಹ್ಮಣಾಚ್ಛಂಸೀ, ಅಗ್ನೀಧ್ರ, ಪೋತೃ ಎಂಬ ನಾಲ್ವರು ಬ್ರಹ್ಮವರ್ಗಕ್ಕೆ ಸೇರಿದವರು. ಈ ಬ್ರಹ್ಮವರ್ಗದಲ್ಲಿ ಎರಡನೆಯವನಾದ ಬ್ರಾಹ್ಮಣಾಚ್ಛಂಸಿಯು ಇಲ್ಲಿರುವ ಬ್ರಹ್ಮಶಬ್ದದಿಂದ ಬೋಧಿಸಲ್ಪಡುತ್ತಾನೆ. ಬ್ರಹ್ಮಶಬ್ದವು ಬೃಹಿ ವೃದ್ಧೌ ಧಾತುವಿನ ಮೇಲೆ ಪ್ರಾಚೀನ ಕ್ರಮದಲ್ಲಿ ಬೃಂಹೇರಮ್ ನಲೋಪಶ್ಚ ಎಂಬುದರಿಂದಲೋ, ಉಪಲಭ್ಯಮಾನವಾದ ಉಣಾದಿಸೂತ್ರ-ಕ್ರಮದಲ್ಲಿ ಬೃಂಹೇರ್ನೋಽಚ್ಚ ಎಂಬುದರಿಂದಲೋ ಮನಿನ್ ಪ್ರತ್ಯಯ ಬಂದು ನಿಷ್ಪನ್ನವಾಗುವುದು. **ಬ್ರಹ್ಮನ್ ಪುಂಸಿಚ** (ಅಂ. ಸೂ. ೧೫೦) ಎಂಬುದರಿಂದ ನಪುಂಸಕಲಿಂಗದಲ್ಲೂ, ಪುಲ್ಲಿಂಗದಲ್ಲೂ ಇರುವುದು. ನಪುಂಸಕ ಲಿಂಗದಲ್ಲಿ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಬ್ರಹ್ಮನ್ ಎಂಬುದು ಆದ್ಯುದಾತ್ತ. ಪುಲ್ಲಿಂಗದಲ್ಲಿ **ಉಞ್ಛಾದೀನಾಂಚ** (ಪಾ. ಸೂ ೬-೧-೧೬೦) ಈ ಗಣಕ್ಕೆ ಸೇರಿದ ಶಬ್ದಗಳ ಅಂತವು ಉದಾತ್ತವಾಗುವುದು ಎಂಬುದರಿಂದ ಅಂತೋದಾತ್ತ. ಈ ಪಕ್ಷದಲ್ಲಿ **ಅನುದಾತ್ತಂಪದಮೇಕವರ್ಜಮ್** (ಪಾ. ಸೂ. ೬-೧-೧೫೮) ಎಂಬ ಶೇಷನಿಘಾತದಿಂದ ಬ್ರಹ್ಮಶಬ್ದವು ಅನುದಾತ್ತಾದಿಯಾಗುವುದು. ಈ ಬ್ರಹ್ಮವರ್ಗಕ್ಕೆ ಸೇರಿದವರಿಗೂ ಇನ್ನೂ ಕೆಲವರು ಪ್ರಧಾನರಾದ ಯಾಜಮಾನಾದಿಗಳಿಗೂ ಸಹ ಸೋಮಪಾನವುಂಟು. ಸೋಮಪಾನ ಮಾಡುವ ಪಾತ್ರೆಗೆ ಚಮಸ ಎಂದು ಹೆಸರು. ಈ ಚಮಸವು ಚತುರಶ್ರ(ಚಚ್ಚೌಕ)ವಾಗಿರಬೇಕು. ಇವುಗಳ ಹಿಡಿಗಳು ನಾನಾ ವಿಧವಾಗಿರುವುವು.

ಚತುರಶ್ರೋ ಬ್ರಹ್ಮಚಮಸಃ ಹೋತುಸ್ತು ಪರಿಮಂಡಲಃ ।
ಪೃಥುಸ್ತು ಯಜಮಾನಸ್ಯ ತ್ರ್ಯಶ್ರಿರುದ್ಗಾತುರಿಷ್ಯತೇ ॥ ೧ ॥

ಪ್ರಶಾಸ್ತುರವತಸ್ಸ್ವಃ ಸ್ಯಾದುತ್ತಷ್ಟೋ ಬ್ರಹ್ಮಶಸಿಂನಃ ।
ಪೋತುರಗ್ರೇ ವಿಶಾಖೀ ಸ್ಯಾತ್ ನೇಷ್ಟುಸ್ತು ವಿಗೃಹೀತಕಃ ॥ ೨ ॥

ಅಚ್ಛಾವಾಕಸ್ಯ ರಾಸ್ನಾವಾನಾಗ್ನೀಧ್ರಸ್ಯ ಮಯೂಖಗಃ ।
ಸವ್ಯಾವೃತಸ್ಸದಸ್ಯಃ ಸ್ಯಾದೇತಚ್ಚ ಮುಸಲಕ್ಷಣಮ್ ॥ ೩ ।

ದಕ್ಷಾನಾಮೇತ ಆಕಾರಶ್ಚಮುಸಾಶ್ಚತುರಶ್ರಗಾಃ ।
ಹೋತುರ್ಬ್ರಹ್ಮಣ ಉದ್ಗಾತುರ್ಯಜುಷ್ಟ್ವಶ್ಯಾಸ್ತುಶ್ಚ ಶಂಸಿನಃ ॥ ೪ ॥

ಪೋತೃನೇಷ್ಟ್ರಚ್ಛಾವಾಕಾನಾಮಾಗ್ನೀಧ್ರಸ್ಯೇತಿ ಚ ಕ್ರಮಃ ॥ ಎಂದು ಲಕ್ಷಣವನ್ನು ಅಗ್ನಿಷ್ಟೋಮಪ್ರಯೋಗದಲ್ಲಿ ಪ್ರಾತಃಸವನದಲ್ಲಿ ಸೋಮಪಾತ್ರಾಸಾದನಪ್ರಕರಣದಲ್ಲಿ ಪ್ರಾಚೀನರು ಹೇಳಿರುವರು. ಇದರಿಂದ ಬ್ರಾಹ್ಮಣಾಚ್ಛಂಸಿಯ ಸೋಮಪಾತ್ರೆಯ ದಂಡವು ಉತ್ತಷ್ಟವಾಗಿರುವುದು ಅಂದರೆ ಮೇಲಕ್ಕೆ ಎತ್ತಿಕೊಂಡಿರುವಂತೆ ಕೆತ್ತಲ್ಪಟ್ಟಿರುವುದು ಎಂದು ಏರ್ಪಟ್ಟಿತು. ಮೇಲಕ್ಕೆ ಎತ್ತಿದ ಹಿಡಿಯುಳ್ಳ ಚಮಸಪಾತ್ರೆಯು ಬ್ರಾಹ್ಮಣಾಚ್ಛಂಸಿಗೆ ಅವಯವಿಗೆ ಅವಯವಗಳಂತೆ ನಿಯತವಾಗಿರುವುದು. ಆದುದರಿಂದ ಇದನ್ನು ಅವಯವವೆಂದು ವಿವಕ್ಷೆ ಮಾಡಬಹುದು. ಹೀಗೆ ವಿವಕ್ಷೆಮಾಡಿದಾಗ **ಅನುದಾತ್ತಾದೇರಞ್** ( ಪಾ. ಸೂ.೪-೨-೪೪ ) ಅನುದಾತ್ತಾದಿಯಾದ ಪ್ರಾತಿಪದಿಕಪ್ರಕೃತಿಕಷಷ್ಠ್ಯಂತದ ಮುಂದೆ ಅವಯವವಿಕಾರ ಸಮೂಹ ಎಂಬ ಅರ್ಥಗಳಲ್ಲಿ ಅಞ್ ಪ್ರತ್ಯಯ ಬರುವುದು ಎಂಬುದರಿಂದ ಅಞ್ ಪ್ರತ್ಯಯವು ಬ್ರಹ್ಮಣಃ ಅವಯವಃ (ಬ್ರಾಹ್ಮಣಾಚ್ಛಂಸಿಯ ಅವಯವವು) ಎಂದು ವಿಗ್ರಹವನ್ನು ಮಾಡಿದಾಗ ಬರುವುದು. ಏವಂಚ ಬ್ರಾಹ್ಮಣಾಚ್ಛಂಸಿ ಅವಯವ ಎಂದರೆ ಅವಯವದಂತೆ ನಿಯತವಾದ ಮೇಲಕ್ಕೆ ಎತ್ತಿರುವಂತೆ ಕೆತ್ತಿದ ಹಿಡಿಯುಳ್ಳ ಚಮಸಪಾತ್ರೆ ಎಂದು ಇಲ್ಲಿರುವ ಬ್ರಾಹ್ಮಣಶಬ್ದದ ಅರ್ಥವು. ಅಞ್ ಪ್ರತ್ಯಯವು ಞಿತ್ತಾದ್ದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬ ೧-೧೯೭) ಎಂಬುದರಿಂದ ಆದ್ಯುದಾತ್ತ ಬರುವುದು.

**ರಾಧಸಃ—ಸರ್ವಧಾತುಭ್ಯೋಽಸುನ್** (ಉ ಸೂ. ೪-೬೨೮) ಎಂಬುದರಿಂದ ರಾಧ, ಧಾತುವಿನ ಮುಂದೆ ಅಸುನ್ ಪ್ರತ್ಯಯ, ನಿತ್ಸ್ವರ ಆದ್ಯುದಾತ್ತ ಬರುವುದು.

**ಪಿಬ — ಪಿಬಾ ಮಿತ್ರಸ್ಯ** (ಋ. ಸಂ. ೧-೧೪-೧೦) ಎಂಬಲ್ಲಿ ಇದು ವಿವೃತವಾಗಿರುವುದು. ಪಾದದ ಆದಿಯಲ್ಲಿರುವುದು. ಆಷ್ಟಮಿಕಾನುದಾತ್ತ ಬರುವುದಿಲ್ಲ. **ದ್ವ್ಯಚೋಽತಸ್ತಿಙಃ** (ಪಾ. ಸೂ. ೬-೩-೧೩೫) ಎಂಬುದರಿಂದ ದೀರ್ಘ.

**ಋತೂಁರನು**-ಋತೂನ್+ಅನು ಎಂದಿರುವಾಗ **ದೀರ್ಘಾದಟಿಸಮಾನಪಾದೇ** (ಪಾ. ಸೂ. ೮-೪-೫೨) ಎಂಬುದರಿಂದ ನಕಾರಕ್ಕೆ ರು ಆದೇಶ ಋತೂರ್+ಅನು. **ಅತ್ರಾನುನಾಸಿಕಃ ಪೂರ್ವಸ್ಯ ತು ವಾ** (ಪಾ. ಸೂ. ೮-೩-೨ ) ರುಪ್ರಕರಣದಲ್ಲಿ ಯಾವುದು ವಿಹಿತವಾಗಿದೆಯೋ ಅದಕ್ಕಿಂತಲೂ ಪೂರ್ವದಲ್ಲಿರುವುದರ ಸ್ಥಾನದಲ್ಲಿ ಅನುನಾಸಿಕವು ವಿಕಲ್ಪವಾಗಿ ಬರುವುದು ಎಂಬುದರಿಂದ ಊಕಾರಕ್ಕೆ ಅನುನಾಸಿಕವಾದ ಊಕಾರವು ಬರುವುದು. ಋತೂಁ ಅನು.

**ತವ**—ಯುಷ್ಮದ್ ಶಬ್ದದ ಮುಂದೆ ಷಷ್ಠ್ಯೇಕವಚನ ಙಸ್. ಯುಷ್ಮದ್+ಙಸ್ **ಯುಷ್ಮದಸ್ಮದ್ಭ್ಯಾಂ ಙಸೋಽಶ್** (ಪಾ. ಸೂ. ೭-೧-೨೭) ಯುಷ್ಮದ್ ಅಸ್ಮದ್ ಶಬ್ದಗಳ ಮುಂದೆ ಇರುವ ಙಸ್‌ನ ಸ್ಥಾನದಲ್ಲಿ ಅಶ್ ಆದೇಶ ಬರುವುದು ಎಂಬುದರಿಂದ ಙಸ್‌ಗೆ ಅಶ್ ಬರುವುದು ಅದು ಶಿತ್ತಾದ್ದರಿಂದ **ಅನೇಕಾಲ್ಶಿತ್ಸರ್ವಸ್ಯ** (ಪಾ. ಸೂ. ೧-೧-೫೫) ಎಂಬುದರಿಂದ ಸರ್ವಸ್ಥಾನದಲ್ಲಿ ಬರುವುದು. ಯುಷ್ಮದ್+ಅ **ತವಮಮೌಙಸಿ** (ಪಾ. ಸೂ. ೭-೨-೯೬) ಙಸ್ ಪರದಲ್ಲಿರುವಾಗ ಯುಷ್ಮದ್ ಅಸ್ಮದ್ ಶಬ್ದಗಳ ಮಪರ್ಯಂತಕ್ಕೆ ತವ ಮಮ ಆದೇಶಗಳು ಬರುವುವು ಎಂಬುದರಿಂದ ಮಪರ್ಯಂತಕ್ಕೆ ತವ ಆದೇಶ ತವ+ಅದ್+ಅ **ಅತೋಗುಣೇ** ಪರರೂಪ, ಶೇಷೇ ಲೋಪಃ ಎಂಬುದರಿಂದ ಟಿ ಲೋಪ. **ಯುಷ್ಮದಸ್ಮದೋರ್ಙಸಿ** (ಪಾ. ಸೂ. ೬-೧-೨೧೧) ಙಸ್ ಪರದಲ್ಲಿರುವಾಗ ಯುಷ್ಮ ದಸ್ಮಚ್ಛಬ್ದಗಳ ಆದಿಯು ಉದಾತ್ತವಾಗುವುದು ಎಂಬುದರಿಂದ **ಶೇಷೇಲೋಪಃ** (ಪಾ. ಸೂ. ೭-೨-೯೦) ಎಂಬಲ್ಲಿ ಟಿಲೋಪ. **ಅನುದಾತ್ತಸ್ಯಚ ಯತ್ರೋದಾತ್ತಲೋಪಃ** ( ಪಾ ಸೂ ೬-೧- ೧೬೧ ) ಎಂಬ ಉದಾತ್ತ ನಿವೃತ್ತಿ ಸ್ವರದಿಂದಲೂ, ಶೇಷೇಲೋಪಃ, ಎಂಬಲ್ಲಿ ಅಂತ್ಯಲೋಪ ಪಕ್ಷದಲ್ಲಿ ಏಕಾದೇಶ **ಉದಾತ್ತೇ ನೋದಾತ್ತಃ** (ಪಾ. ಸೂ. ೮-೨-೫) ಎಂಬುದರಿಂದಲೂ ವಿಭಕ್ತಿಗೆ ಉದಾತ್ತವು ಪ್ರಾಪ್ತವಾದರೆ ಅದನ್ನು ಬಾಧಿಸಿ ಯುಷ್ಮದ್ ಶಬ್ದದ ಆದಿಗೆ ಉದಾತ್ತ ಬರುವುದು. ಮಿಕ್ಕ ವರ್ಣಗಳು ಶೇಷಾನುದಾತ್ತ ಸ್ವರದಿಂದ ಅನುದಾತ್ತಗಳು.

**ಸಖ್ಯಮ್**—ಸಖ್ಯುಃ ಕರ್ಮ ಎಂದು ವಿಗ್ರಹ **ಸಖ್ಯುರ್ಯಃ** (ಪಾ. ಸೂ (೫-೧-೧೨೬) ಸಖಿ ಶಬ್ದಪ್ರಕೃತಿಕ ವಾದ ಷಷ್ಠ್ಯಂತವಾದ ಸಮರ್ಥದ ಮುಂದೆ ಭಾವಕರ್ಮಾರ್ಥಗಳಲ್ಲಿ ಯಪ್ರತ್ಯಯ ಬರುವುದು ಎಂಬುದರಿಂದ, ಕರ್ಮಾರ್ಥದಲ್ಲಿ ಯಪ್ರತ್ಯಯ ಸಖಿ ಶಬ್ದದ ಮುಂದೆ ಬರುವುದು. ಸಖಿ+ಯ ಯಸ್ಯೇತಿ ಚ ( ಪಾ. ಸೂ. ೬-೪-೧೪೮) ಎಂಬುದರಿಂದ ಇಕಾರಲೋಪ. ಪ್ರತ್ಯಯಸ್ವರ ಬರುವುದು.

**ಅಸ್ತೃತಮ್**—ಸ್ತೃಞ್ ಆಚ್ಛಾದನೇ, ಸ್ವಾದಿ ಧಾತು. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಸ್ತೃ, ಧಾತುವು ಹಿಂಸಾರ್ಥದಲ್ಲಿರುವುದು. ಇದರ ಮುಂದೆ ಕ್ತಪ್ರತ್ಯಯ ಸ್ತೃ+ತ, **ಏಕಾಚಉಪದೇಶೇಽನುದಾತ್ತಾತ್** (ಪಾ. ಸೂ. ೭-೨.೧೦) ಎಂಬುದರಿಂದ ಇಡಾಗಮಕ್ಕೆ ನಿಷೇಧ, ಅಥವಾ **ಋತಶ್ಚ ಸಂಯೋಗಾದೇಃ** (ಪಾ. ಸೂ. ೭-೨-೪೩) ಸಂಯೋಗಾದಿಯಾದ ಋಕಾರವನ್ನು ಕೊನೆಯಲ್ಲಿ ಹೊಂದಿರುವ ಧಾತುವಿನ ಮುಂದೆ ಇರುವ ಲಿಙ್ ಸಿಚ್‌ಗಳಿಗೆ ಆತ್ಮನೇಪದಪ್ರತ್ಯಯ ಪರದಲ್ಲಿರುವಾಗ ಇಡಾಗಮ ವಿಕಲ್ಪವಾಗಿ ಬರುವುದು ಎಂದು ಇಡಾಗಮವು ವಿಕಲ್ಪದಿಂದ ವಿಹಿತವಾಗಿರುವುದರಿಂದ ಯಸ್ಯ ವಿಭಾಷಾ ಎಂಬುದರಿಂದ ಕ್ತ ಪ್ರತ್ಯಯಕ್ಕೆ ಇಡಾಗಮ ಬರುವುದಿಲ್ಲ. ನಸ್ತೃತಮ್ ಅಸ್ತೃತಮ್, ಎಂದು ನಞ್‌ಸಮಾಸ. **ತತ್ಪುರುಷೇತುಲ್ಯಾರ್ಥತೃತೀಯಾಸಪ್ತಮ್ಯುಪಮಾನಾವ್ಯಯದ್ವಿತೀಯಾಕೃತ್ಯಾಃ** ( ಪಾ. ಸೂ. ೬-೨-೨ ) ಎಂಬುದರಿಂದ ಅವ್ಯಯಪೂರ್ವಪದ-ಪ್ರಕೃತಿಸ್ವರ ಬರುವುದು. ಪೂರ್ವಪದವು ನಿಪಾತವಾದ್ದರಿಂದ **ನಿಪಾತಾ ಆದ್ಯುದಾತ್ತಾಃ** (ಫಿ. ಸೂ. ೮೦) ಎಂಬುದರಿಂದ ಆದ್ಯುದಾತ್ತ. ಸ್ತೄಞ್ ಆಚ್ಛಾದನೇ ಧಾತುವು ಕ್ರ್ಯಾದಿ, ಲಟ್ಟಿನಲ್ಲಿ ಸ್ತೃಣಾತಿ ಎಂದಾಗುವುದು. ಇದರ ಮುಂದೆ ಕ್ತಪ್ರತ್ಯಯವನ್ನಿಟ್ಟರೆ ಸ್ತೄ+ತ **ಲಿಙ್‌ಸಿಚೋರಾತ್ಮನೇಪದೇಷು** (ಪಾ. ಸೂ ೭-೨-೪೨) ವೃಙ್ ಧಾತು, ವೃಞ್ ಧಾತು ಋಕಾರಾಂತವಾದ ಧಾತುಗಳು. ಇವುಗಳ ಮುಂದೆ ಇರುವ ಲಿಙ್ ಸಿಚ್, ಇವುಗಳಿಗೆ ಇಡಾಗಮವು ಆತ್ಮನೇಪದ ಪ್ರತ್ಯಯ ಪರವಾಗಿರುವಾಗ ವಿಕಲ್ಪವಾಗಿ ಬರುವುದು ಎಂದು ಇಡಾಗಮವು ವಿಕಲ್ಪವಾಗಿ ವಿಹಿತವಾಗಿರುವುದು. ಆದ್ದರಿಂದ **ಯಸ್ಯ ವಿಭಾಷಾ** (ಪಾ. ಸೂ. ೭-೨-೧೫) ಎಂಬುದರಿಂದ ಕ್ತಪ್ರತ್ಯಯಕ್ಕೆ ಇಡಾಗಮ ಬರುವುದಿಲ್ಲ. **ಲ್ವಾದಿಭ್ಯಶ್ಚ** (ಪಾ.ಸೂ. ೮-೨ ೪೪) ಎಂಬುದರಿಂದ ಕ್ತಪ್ರತ್ಯಯದ ತಕಾ

ರಕ್ಕೆ ನಕಾರ. ಸ್ತೃ+ನ **ಋತ ಇದ್ಧಾತೋಃ** (ಪಾ. ಸೂ. ೭-೧-೧೦೦) ಎಂಬುದರಿಂದ ಋಕಾರಕ್ಕೆ ಇಕಾರ. **ಉರಣ್ರಪರಃ** (ಪಾ. ಸೂ. ೧-೧-೫೧) ಎಂಬುದರಿಂದ ರಪರವಾಗಿ ಬರುವುದು. **ಹಲಿಚ** (ಪಾ. ಸೂ. ೮-೨-೭೭ ಎಂಬುದರಿಂದ ದೀರ್ಘ. ಸ್ತೀರ್+ನ, **ರಷಾಭ್ಯಾಂನೋಣಸ್ಸಮಾನಪದೇ** (ಪಾ. ಸೂ.,೮.೪-೧) ಎಂಬುದರಿಂದ ನಕಾರಕ್ಕೆ ಣಕಾರ ಸ್ತೀರ್ಣ ಎಂದಾಗುವುದು. ಆದುದರಿಂದ ಅಸ್ತೃತಮ್ ಎಂಬಲ್ಲಿ ಸ್ತ್ವಾದಿಧಾತುಪನ್ನು ಇಟ್ಟುಕೊಳ್ಳುವುದು ಸೂಕ್ತವಾಗಿದೆ. ‖ ೫ ‖

‖ ಸಂಹಿತಾಪಾಠಃ ‖

ಯುವಂ ದಕ್ಷಂ ಧೃತವ್ರತ ಮಿತ್ರಾವರುಣ ದೂಳಭಂ ।
ಋತುನಾ ಯಜ್ಞಮಾಶಾಥೇ ‖ ೬ ‖

‖ ಪದಪಾಠಃ ‖

ಯುವಂ । ದಕ್ಷಂ । ಧೃತಽವ್ರತಾ । ಮಿತ್ರಾವರುಣಾ । ದುಃಽದಭಂ ‖
ಋತುನಾ । ಯಜ್ಞಂ । ಆಶಾಥೇ ಇತಿ ‖ ೬ ‖

‖ ಸಾಯಣಭಾಷ್ಯಂ ‖

ಹೇ ಧೃತವ್ರತಾ ಸ್ವೀಕೃತಕರ್ಮಾಣೌ ಮಿತ್ರಾವರುಣಾ ಹೇ ಮಿತ್ರನಾಮಕವರುಣನಾಮಕೌ ದೇವೌ ಯುವಮುಭೌ ಯುವಾಮೃತುನಾ ಸಹಾಸ್ಮದೀಯಂ ಯಜ್ಞಮಾಶಾಥೇ । ವ್ಯಾಪ್ನುಥಃ । ಕೀದೃಶಂ ಯಜ್ಞಂ। ದಕ್ಷಂ ಪ್ರವೃದ್ಧಂ ದೂಳಭಂ ದುರ್ದಹಂ ಶತ್ರುಭಿರ್ದಗ್ಧುಂ ವಿನಾಶಯಿತುಮಶಕ್ಯಮಿತ್ಯರ್ಥಃ ‖ ಯುವಂ। ಪ್ರಥಮಾದ್ವಿವಚನಸ್ಯ ಙೇಪ್ರಥಮಯೋರಮಿತ್ಯಮಾದೇಶಃ। ಯುವಾವೌ ದ್ವಿವಚನೇ। ಪಾ. ೭-೨-೯೨ । ಇತಿ ಮಪರ್ಯಂತಸ್ಯ ಯುವಾದೇಶಃ । ಶೇಷೇ ಲೋಪ ಇತಿ ಟಿಲೋಪೋಽಂತ್ಯಲೋಪೋ ವಾ। ಅಮಿ ಪೂರ್ವತ್ವಂ। ಭಾಷಾಯಾಮೇವ ಹ್ಯಾತ್ವಂ। ಟಿಲೋಪಪಕ್ಷ ಉದಾತ್ತನಿವೃತ್ತಿಸ್ವರೇಣಾಮ ಉದಾತ್ತತ್ವಂ । ಅಂತ್ಯಲೋಪಪಕ್ಷ ಏಕಾದೇಶ ಉದಾತ್ತಃ । ದಕ್ಷಂ । ದಕ್ಷ ವೃದ್ಧೌ । ದಕ್ಷಂತ್ಯನೇನೇತಿ ಕರಣೇ ಘಞ್ । ಏವಂ ಹಿ ಪುಲ್ಲಿಂಗತ್ವನಿಯಮಃ । ಅನ್ಯಸ್ಯಾನಿಯಮ ಇತಿ ನಪುಂಸಕತ್ವಂ । ಧೃತವ್ರತಾ ಮಿತ್ರಾವರುಣಾ । ಧೃತಾನಿ ವ್ರತಾನಿ ಯಾಭ್ಯಾಂ ತೌ ಧೃತವ್ರತೌ । ಮಿತ್ರಶ್ಚ ವರುಣಶ್ಚ ಮಿತ್ರಾವರುಣೌ । ಉಭಯತ್ರ ಸುಪಾಂ ಸುಲುಗಿತ್ಯಾದಿನಾ ವಿಭಕ್ತೇರಾಕಾರಃ । ಮಿತ್ರಶಬ್ದಸ್ಯ ದೇವತಾದ್ವಂದ್ವೇ ಚೇತ್ಯಾನಙಾದೇಶಃ । ಪ್ರಥಮಸ್ಯಾಮಂತ್ರಿತನಿಘಾತಃ । ದ್ವಿತೀಯಸ್ಯ ಪಾದಾದಿತ್ವಾದಾದ್ಯುದಾತ್ತತ್ವಂ । ಸಂಹಿತಾಯಾಂ

ಛಾಂದಸಂ ಹ್ರಸ್ವತ್ವಂ । ದೂಳಭಂ । ದಹ ಭಸ್ಮೀಕರಣೇ । ದುಃಖೇನ ದಹ್ಯತ ಇತಿ ದುರ್ದಹಂ । ಈಷ-ದ್ದುಃಸುಷ್ವಿತ್ಯಾದಿನಾ । ಪಾ. ೩-೩-೧೨೬ । ದುಯೋರ್ಉಪಪದೇಃ ದಗ್ಧೇಃ ಖಲ್ । ವ್ಯತ್ಯಯೋ ಬಹುಲಮಿ-ತ್ಯುಕಾರಸ್ಯ ಊಕಾರೋ ರೇಫಸ್ಯ ಲೋಪೋ ದಕಾರಸ್ಯ ಡಕಾರೋ ಹಕಾರಸ್ಯ ಚ ಭಕಾರಃ । ಲಿತೀತಿ ಪ್ರತ್ಯಯಾತ್ಪೂರ್ವಮುದಾತ್ತತ್ವಂ । ಕೃದುತ್ತರಪದತ್ವೇನ ಸ ಏವ ಶಿಷ್ಯತೇ । ಆಶಾಥೇ । ಅಶೂ ವ್ಯಾಪ್ತೌ ಛಂದಸಿ ಲುಙ್ಲಙ್ಲಿಟ ಇತಿ ವರ್ತಮಾನೇ ಲಿಟ್ । ಮಧ್ಯಮದ್ವಿವಚನಮಾಥಾಂ । ಟೇರೇತ್ವಂ । ಅತ ಆದೇಃ । ಪಾ. ೭-೪-೭೦ । ಇತ್ಯಭ್ಯಾಸಸ್ಯ ದೀರ್ಘಃ । ಅಶ್ನೋತೇಶ್ಚ । ಪಾ. ೭-೪-೭೨ । ಇತಿ ಪ್ರಾಪ್ತೋ ನುಡಾಗಮೋಽನಿತ್ಯಮಾಗಮಶಾಸನಮಿತಿ ನಿವರ್ತತೇ ॥ ೨೮ ॥

॥ ಪ್ರತಿಪದಾರ್ಥ ॥

ಧೃತವ್ರತಾ—ನಮ್ಮಿಂದ ಮಾಡಲ್ಪಡುವ ಯಜ್ಞಕರ್ಮವನ್ನಂಗೀಕರಿಸುವ । ಮಿತ್ರಾವರುಣಾ—ಎಲೈ ಮಿತ್ರಾವರುಣರೇ । ಯುವಂ—ನೀವಿಬ್ಬರೂ । ಋತುನಾ—ಋತುದೇವತೆಯೊಂದಿಗೆ । ದಕ್ಷಂ—ಪ್ರವೃದ್ಧವಾದ। ದೂಳಭಂ—(ಶತ್ರುಗಳಿಂದ) ದಹಿಸಲು (ನಾಶಮಾಡಲು) ಸಾಧ್ಯವಿಲ್ಲದೇ ಇರುವ। ಯಜ್ಞಂ ಆಶಾಥೇ—ಯಜ್ಞವನ್ನು ವ್ಯಾಪಿಸುತ್ತಿರುವಿರಿ. ನಮ್ಮ ಯಜ್ಞಕ್ಕೆ ದಯಮಾಡುತ್ತಿರುವಿರಿ.

॥ ಭಾವಾರ್ಥ ॥

ಎಲೈ ಮಿತ್ರಾವರುಣರೇ, ನಮ್ಮ ಯಜ್ಞಕರ್ಮವನ್ನಂಗೀಕರಿಸುವಿರಿ. ನಿಮ್ಮಗಳ ಅನುಗ್ರಹದಿಂದ ನಮ್ಮ ಯಜ್ಞವು ವೃದ್ಧಿಯಾಗುತ್ತಿದೆ- ಮತ್ತು ನಿಮ್ಮ ಸಹಾಯವಿರುವುದರಿಂದ ಶತ್ರುಗಳು ವಿಘ್ನವನ್ನುಂಟು ಮಾಡಲು ಸಾಧ್ಯವಿಲ್ಲ. ದಯವಿಟ್ಟು ಋತುದೇವತೆಯೊಡನೆ ನಮ್ಮ ಯಜ್ಞಕ್ಕೆ ಬನ್ನಿ.

## English Translation.

Mitra and Varuna, propitious to pious acts, be present with Ritu at our sacrifice, efficacious and undisturbed by foes.

॥ ವಿಶೇಷವಿಷಯಗಳು ॥

ಧೃತವ್ರತಾ—ಧೃತಕರ್ಮಾಣೌ ಅಥವಾ ಸ್ವೀಕೃತಕರ್ಮಾಣೌ ಎಂದರೆ ನಾವು ಮಾಡುವ ಯಜ್ಞಕರ್ಮವನ್ನು ಸ್ವೀಕಾರಮಾಡುವ, ಎಂದರ್ಥವು. ಧೃತವ್ರತಾ, ಮಿತ್ರಾವರುಣಾ ಎಂಬ ಶಬ್ದಗಳ ಅಂತ್ಯಾಕ್ಷರವು ಛಂದಸ್ಸಿನ ಅನುಕೂಲಕ್ಕಾಗಿ ಸಂಹಿತಾಕಾಲದಲ್ಲಿ ಹ್ರಸ್ವವಾಗಿರುವುದು.

ಈ ಧೃತವ್ರತಾ ಎಂಬ ಶಬ್ದವು—

ಇಂದ್ರಾವರುಣಾ ಸುತಪಾವಿಮಂ ಸುತಂ ಸೋಮಂ ಪಿಬತಂ ಮದ್ಯಂ ಧೃತವ್ರತಾ ॥
(ಋ. ಸಂ. ೬-೬೮-೧೦)

ಎಂಬ ಋಕ್ಕಿನಲ್ಲಿಯೂ ಪಠಿತವಾಗಿರುವುದು. ಇಲ್ಲಿ ಈ ಶಬ್ದವು ಇಂದ್ರಾವರುಣರ ಪರವಾಗಿರುವುದು. ಇದಲ್ಲದೆ ಧೃತವ್ರತಃ ಧೃತವ್ರತಾಃ ಧೃತವ್ರತಾಯ ಧೃತವ್ರತೇ ಎಂಬ ಶಬ್ದಗಳು ಅನೇಕ ಋಕ್ಕುಗಳಲ್ಲಿ ಪಠಿತವಾಗಿವೆ.

**ದೂಳಭಂ**— ದುಃದಭಂ, ಶತ್ರುಭಿರ್ದಗ್ಧುಂ ವಿನಾಶಯಿತುಮಶಕ್ಯಂ ॥ ಶತ್ರುಗಳಿಂದ ದಹಿಸುವುದಕ್ಕೆ ಅಶಕ್ಯವಾದ ಎಂದರ್ಥವು. ಇದೇ ಅರ್ಥವನ್ನು ಸೂಚಿಸುವ **ದೂಳಭೆ** ಎಂಬ ಶಬ್ದವು ಋ. ಸಂ. ೨-೨೮-೮ , ೭-೪೬-೪ ರಲ್ಲಿಯೂ **ದೂಳಭಃ** ಎಂಬ ಶಬ್ದವು ಋ. ಸಂ. ೩-೨-೨ ; ೪-೯.೨ ; ೪-೯೮ ರಲ್ಲಿಯೂ **ದೂಳಭಾಸಃ** ಎಂಬ ಶಬ್ದವು ಋ. ಸಂ. ೩-೫೬-೮ ; ೭-೬೦-೬ ರಲ್ಲಿಯೂ ಪಠಿತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಯುವಮ್**— ಯುಷ್ಮದ್ ಶಬ್ದದ ಮುಂದೆ ಪ್ರಥಮಾದ್ವಿವಚನ ಔ. ಪ್ರತ್ಯಯ ಯುಷ್ಮದ್+ಔ **ಯುವಾವೌದ್ವಿವಚನೇ** ( ಪಾ. ಸೂ. ೭-೨-೯೨) ವಿಭಕ್ತಿ ಪರದಲ್ಲಿರುವಾಗ ದ್ವಿತ್ವವಿಶಿಷ್ಟಾರ್ಥಪ್ರತಿಪಾದಕಗಳಾದ ಯುಷ್ಮದಸ್ಮಚ್ಛಬ್ದಗಳ ಮಪರ್ಯಂತಕ್ಕೆ ಕ್ರಮವಾಗಿ ಯುವ, ಆವ ಎಂಬ ಆದೇಶಗಳು ಬರುವುವು. ಎಂಬುದರಿಂದ ಯುಷ್ಮ್ ಎಂಬುದಕ್ಕೆ ಯುವ ಆದೇಶ, ಪರರೂಪ, ಯುವದ್+ಔ. **ಙೇಪ್ರಥಮಯೋರಮ್** (ಪಾ. ಸೂ. ೭-೧-೨೮) ಯುಷ್ಮದಸ್ಮಚ್ಛಬ್ದಗಳ ಮುಂದೆ ಇರುವ ಙೇಗೂ ಪ್ರಥಮಾ, ದ್ವಿತೀಯಾ ವಿಭಕ್ತಿಗಳಿಗೂ ಸಹ ಅಮ್ ಆದೇಶ ಬರುವುದು ಎಂಬುದರಿಂದ ಔಗೆ ಅಮ್ ಬರುವುದು. ಯುವದ್+ಅಮ್ **ಪ್ರಥಮಾಯಾಶ್ಚದ್ವಿವಚನೇ ಭಾಷಾಯಾಮ್** (ಪಾ ಸೂ. ೭-೨-೮೮) ಪ್ರಥಮಾವಿಭಕ್ತಿ ದ್ವಿವಚನ ಪರದಲ್ಲಿರುವಾಗ ಯುಷ್ಮದಸ್ಮಚ್ಛಬ್ದಗಳಿಗೆ ಆಕಾರವು ಅಂತಾದೇಶವಾಗಿ ಲೋಕದಲ್ಲಿ ಬರುವುದು ಎಂದು ಈ ಸೂತ್ರದ ಅರ್ಥ. ಭಾಷಾಯಾಂ ಲೋಕದಲ್ಲಿ ಎಂದರ್ಥ, ಈ ಸೂತ್ರದಿಂದ ಆತ್ವವು ವೇದದಲ್ಲಿ ಬರುವುದಿಲ್ಲ. **ಶೇಷೇಲೋಪಃ** (ಪಾ. ಸೂ. ೭-೨-೯೦) ಎಂಬುದರಿಂದ ಟಿಗೆ ಲೋಪ. ಅಥವಾ ಅಂತ್ಯವರ್ಣಕ್ಕೆ ಲೋಪ. ಅಂತ್ಯಲೋಪಪಕ್ಷದಲ್ಲಿ **ಅಮಿಪೂರ್ವಃ** (ಪಾ. ಸೂ. ೬-೧-೧೦೭) ಎಂಬುದರಿಂದ ಪೂರ್ವರೂಪ ಬರುವುದು. ಯುವಮ್ ಎಂದಾಗುವುದು. ಟಿಲೋಪಪಕ್ಷದಲ್ಲಿ **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಎಂಬ ಉದಾತ್ತ ನಿವೃತ್ತಿಸ್ವರದಿಂದ ಅಮ್‌ನ ಆಕಾರವು ಉದಾತ್ತ. ಅಂತ್ಯಲೋಪಪಕ್ಷದಲ್ಲಿ ಏಕಾದೇಶ **ಉದಾತ್ತೇನೋದಾತ್ತಃ** (ಪಾ ಸೂ. ೮-೨-೫) ಎಂಬುದರಿಂದ ಅಮಿಪೂರ್ವಃ ಎಂಬುದರಿಂದ ಬಂದ ಏಕಾದೇಶವು ಉದಾತ್ತ. ಹೀಗೆ ಪಕ್ಷದ್ವಯದಲ್ಲಿ ಯುವಮ್ ಎಂಬುದು ಅಂತೋದಾತ್ತವಾಗುವುದು.

**ದಕ್ಷಮ್**— ದಕ್ಷ ವೃದ್ಧೌ ದಕ್ಷನ್ತಿ ಅನೇನ ಇತಿ ದಕ್ಷಮ್. **ಹಲಶ್ಚ** (ಪಾ.ಸೂ. ೩-೩-೧೨೧) ಹಲಂತವಾದ ಧಾತುಗಳ ಮುಂದೆ ಕರಣ, ಅಧಿಕರಣ ಎಂಬ ಅರ್ಥಗಳಲ್ಲಿ ಪುಲ್ಲಿಂಗದಲ್ಲಿ ಸಂಜ್ಞೆ ತೋರುವಾಗ ಘಞ್ ಪ್ರತ್ಯಯ ಬರುವುದು ಎಂಬುದರಿಂದ ದಕ್ಷ ಧಾತುವಿನ ಮುಂದೆ ಕರಣಾರ್ಥದಲ್ಲಿ ಘಞ್ ಪ್ರತ್ಯಯ ಬರುವುದು. ಹೀಗೆ ಘಞ್ ಪ್ರತ್ಯಯವನ್ನು ಮಾಡಿದರೆ ದಕ್ಷಃ ಎಂದು ನ್ಯಾಯವಾಗಿ ಪುಲ್ಲಿಂಗವಾಗಬೇಕು. ಆದರೂ ಅನ್ಯಸ್ಯಾನಿಯಮಃ ಎಂಬುದರಿಂದ ನಪುಂಸಕಲಿಂಗವಾಗುವುದು.

**ಧೃತವ್ರತಾ, ಮಿತ್ರಾವರುಣಾ**— ಧೃತಾನಿ ವ್ರತಾನಿ ಯಾಭ್ಯಾಂ ತೌ (ಯಾವ ಮಿತ್ರ ವರುಣ ಇವರಿಬ್ಬರಿಂದ ಕರ್ಮವು ಸ್ವೀಕರಿಸಲ್ಪಟ್ಟಿತೋ ಅವರು ಎಂದು ಅರ್ಥ, ಧೃತವ್ರತೌ. ಮಿತ್ರಶ್ಚ ವರುಣಶ್ಚ ಮಿತ್ರಾವರುಣೌ, ದ್ವಂದ್ವಸಮಾಸ. ಎರಡು ಕಡೆಯಲ್ಲಿಯೂ ಸಂಬೋಧನ ಪ್ರಥಮಾದ್ವಿವಚನ ವಿಭಕ್ತಿಯಾದಔಗೆ **ಸುಪಾಂಸುಲುಕ್**

(ಪಾ. ಸೂ. ೭-೧-೩೯) ಇತ್ಯಾದಿ **ಸೂತ್ರದಿಂದ** ಆಕಾರಾದೇಶ ಬರುವುದು. ಮಿತ್ರ ಶಬ್ದಕ್ಕೆ **ದೇವತಾದ್ವಂದ್ವೇಚ** (ಪಾ. ಸೂ. ೬-೩-೨೬) ಎಂದು ಆನಙ್ ಆದೇಶ ಬರುತ್ತೆ. ಅದು ಙಿತ್ವಾದ್ದರಿಂದ **ಙಿಚ್ಚ** (ಪಾ. ಸೂ. ೧-೧-೫೩) ಙಿತ್ತಾದ ಆದೇಶವು ಅನೇಕಾಲ್ಲಾಗಿದ್ದರೂ ಕೊನೆಯ ವರ್ಣಕ್ಕೆ ನಙ್ ಬರುವುದು ಎಂಬುದರಿಂದ ಮಿತ್ರಶಬ್ದದ ಕೊನೆಯ ವರ್ಣವಾದ ಅಕಾರಕ್ಕೆ ನಙಾದೇಶ. **ನಲೋಪಃಪ್ರಾತಿಪದಿಕಾಂತಸ್ಯ** (ಪಾ. ಸೂ. ೮-೨-೭) ಎಂಬುದರಿಂದ ನಕಾರಕ್ಕೆ ಲೋಪ ಮಿತ್ರಾವರುಣಾ ಎಂದಾಗುವುದು. ಧೃತವ್ರತಾ ಎಂಬಲ್ಲಿ **ಆಮನ್ತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ಆಮನ್ತ್ರಿತಾನುದಾತ್ತ ಬರುವುದು. ಮಿತ್ರಾವರುಣಾ ಎಂಬುದು ಪಾದದ ಆದಿಯಲ್ಲಿರುವುದರಿಂದ ಇದಕ್ಕೆ ಆಮಂತ್ರಿತಾನುದಾತ್ತ ಬರುವುದಿಲ್ಲ. ಆರನೇ ಅಧ್ಯಾಯದ ಆಮನ್ತ್ರಿತಸ್ಯಚ ಎಂಬುದರಿಂದ ಆದ್ಯುದಾತ್ತ ಬರುವುದು. ಧೃತವ್ರತಾ ಎಂಬಲ್ಲಿ ಮಿತ್ರಾವರುಣಾ ಎಂಬಲ್ಲಿಯೂ **ಸಂಹಿತಾಕಾಲದಲ್ಲಿ** ಛಾಂದಸವಾಗಿ ಹ್ರಸ್ವ ಬರುವುದು.

**ದೂಳಭಮ್**-ದಹ ಭಸ್ಮೀಕರಣೇ ಧಾತು. ದುಃಖೇನ ದಹ್ಯತೇ ಇತಿ ದುರ್ದಹಮ್. **ಈಷದ್ದುಸ್ಸುಷು-ಕೃಚ್ಛ್ರಾಕೃಚ್ಛ್ರಾರ್ಥೇಷು ಖಲ್** (ಪಾ.ಸೂ. ೩-೩-೧೨೬) ಕೃಚ್ಛ್ರಾರ್ಥದಲ್ಲಿ ದುರ್ ಎಂಬ ಉಪಸರ್ಗದ ಮುಂದೆ ಇರುವ ಅಕೃಚ್ಛ್ರಾರ್ಥದಲ್ಲಿ ಈಷತ್, ಸು ಎಂಬುದರ ಮುಂದೆ ಇರುವ ಧಾತುವಿನ ಮುಂದೆ ಭಾವಕರ್ಮಾರ್ಥಗಳಲ್ಲಿ ಖಲ್ ಪ್ರತ್ಯಯ ಬರುವುದು ಎಂಬುದರಿಂದ ದುರ್ ಉಪಸರ್ಗಪೂರ್ವಕವಾದ ದಹ ಧಾತುವಿನ ಮುಂದೆ ಖಲ್ ಬರುವುದು. ಲಕಾರಖಕಾರಗಳು ಇತ್ಸಂಜ್ಞೆಯಿಂದ ನಿವೃತ್ತಗಳಾಗುವುವು. ದುರ್+ದಹ್+ಅ. **ವ್ಯತ್ಯಯೋಬಹುಲಂ** (ಪಾ. ಸೂ. ೩-೧-೮೫) ಇಲ್ಲಿ ಭಾಷ್ಯಕಾರರು ಈ ಸೂತ್ರವನ್ನು ಎರಡಾಗಿ ಭಾಗಮಾಡಿರುವರು. ವ್ಯತ್ಯಯಃ ಎಂಬುದು ಪ್ರಥಮಭಾಗ ಛಂದಸ್ಸಿನಲ್ಲಿ ಸ್ಯಾದಿವಿಕರಣ ಪ್ರತ್ಯಯಗಳು ವ್ಯತ್ಯಯವಾಗಿರುವುವು ಎಂದು ಇದರ ಅರ್ಥ. ಬಹುಲಮ್ ಎಂಬುದು ದ್ವಿತೀಯಭಾಗ ಛಂದಸ್ಸಿದಲ್ಲಿ ಎಲ್ಲಾ ವಿಧಿಗಳೂ ಬಹುಲವಾಗಿ ಬರುವುವು ಎಂದು ಇದರ ಅರ್ಥ. ಈ ಬಹುಲಗ್ರಹಣದ ಅರ್ಥವನ್ನೇ ವಾರ್ತಿಕಕಾರರು ಸಂಗ್ರಹಿಸಿರುವರು. **ಸುಪ್ತಿಙುಪಗ್ರಹಲಿಂಗನರಾಣಾಂ ಕಾಲಹಲಚ್ ಸ್ವರಕರ್ತೃಯಙಾಂಚ । ವ್ಯತ್ಯಯ ಮಿಚ್ಛತಿಶಾಸ್ತ್ರಕೃದೇಷಾಂಸೋಽಪಿಚ ಸಿಧ್ಯತಿಬಾಹುಲಕೇನ** (ಪಾ. ಸೂ. ೩-೧-೮-೫೧ ವಾ. ೧) ಇದರಿಂದ ದುರ್ ದಹ್+ಅ ಎಂಬಲ್ಲಿ ಉಕಾರಕ್ಕೆ ಊಕಾರ, ರೇಫಕ್ಕೆ ಲೋಪ, ದಕಾರಕ್ಕೆ ಡಕಾರ, ಹಕಾರಕ್ಕೆ ಭಕಾರವೂ ಸಹ ಬರುವುದು. ದೂಡಭ ಎಂದಾಗುವುದು. ಅಜ್ಮಧ್ಯಸ್ಯ ಡಕಾರಸ್ಯ ಳಕಾರಂ ಬಹ್ವೃಚಾ ಜಗುಃ, ಎಂಬುದರಿಂದ ಡಕಾರಕ್ಕೆ ಳಕಾರ. ದೂಳಭಮ್ ಎಂದಾಗುವುದು. **ಲಿತಿ** (ಪಾ. ಸೂ. ೬.೧.೧೯೩) ಎಂಬುದರಿಂದ ಪ್ರತ್ಯಯದ ಹಿಂದೆ ಇರುವ ಳ ಎಂಬುದರ ಅಕಾರವು ಉದಾತ್ತ. ದುರ್ ಎಂಬುದರೊಂದಿಗೆ ಸಮಾಸ ಬಂದರೆ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬಂದು ಅದೇ ಸ್ವರ ನಿಲ್ಲುವುದು.

**ಆಶಾಥೇ**—ಅಶೂ ವ್ಯಾಪ್ತೌ, ಧಾತು. ಇದರ ಮುಂದೆ **ಛಂದಸಿ ಲುಙ್ಲಙ್ಲಿಟಃ** (ಪಾ. ಸೂ- (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್ ಬರುವುದು. **ಲಿಟಿಧಾತೋರನಭ್ಯಾಸಸ್ಯ** (ಪಾ. ಸೂ. ೬-೧-೮) ಎಂಬುದರಿಂದ ದ್ವಿತ್ವ. ಅಶ್-ಅಶ್+ಲಿಟ್. ಲಿಟ್‌ಗೆ ಮಧ್ಯಮಪುರುಷ ದ್ವಿವಚನ ಅಥಾಮ್ ಆದೇಶ. **ಟಿತಆತ್ಮನೇಪದಾನಾಂ ಟೇರೇ** (ಪಾ. ಸೂ. ೩-೪-೭೯) ಎಂಬುದರಿಂದ ಆಮ್‌ಗೆ ಏಕಾರಾದೇಶ ಅಶ್-ಅಶ್+ಅಥೇ. **ಹಲಾದಿಃಶೇಷಃ** (ಪಾ. ಸೂ. ೭-೪-೬೦) ಯೋಗ ವಿಭಾಗ ಪಕ್ಷವನ್ನವಲಂಬಿಸಿಯೋ, ಶಾಶ ಶರ್ಪೂರ್ವಾಃಖಯಃ ಇದರಿಂದಲೋ ಈ ಸೂತ್ರದಿಂದ ಅಭ್ಯಾಸದಲ್ಲಿರುವ ಶಕಾರಕ್ಕೆ ನಿವೃತ್ತಿ. ಅತ ಆದೇಃ (ಪಾ. ಸೂ. ೭-೪-೭೦)

ಅಭ್ಯಾಸದ ಆದಿಯ ಅಕಾರಕ್ಕೆ ದೀರ್ಘ ಬರುವುದು ಎಂಬುದರಿಂದ ಆದಿ ಅಕಾರಕ್ಕೆ ದೀರ್ಘ ಆ+ಅಶ್+ಆಥೇ, ಅಶ್ನೋತೇಶ್ಚ (ಪಾ. ಸೂ. ೭-೪-೭೨) ದೀರ್ಘವಾದ ಅಭ್ಯಾಸದ ಅಕಾರದ ಮುಂದೆ ಇರುವ ಅಶ್ ಧಾತುವಿಗೆ ನುಟಾಗಮ ಬರುವುದು ಎಂಬುದರಿಂದ ಯದ್ಯಪಿ ನುಟಾಗಮವು ಪ್ರಾಪ್ತವಾಗುವುದು. ಆದರೂ ಆಗಮಶಾಸ್ತ್ರ ಮನಿತ್ಯಮ್ (ಪರಿಭಾ. ೪೯) ಎಂದರಿಂದ ಅದು ಅನಿತ್ಯವಾಗುವುದರಿಂದ ಬರುವುದಿಲ್ಲ. ಅಕಸ್ಸವರ್ಣೇದೀರ್ಘಃ (ಪಾ. ಸೂ. ೬-೧-೧೦೧) ಎಂಬುದರಿಂದ ಸವರ್ಣ ದೀರ್ಘ ಆಶಾಥೇ ಎಂದಾಗುವುದು. ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತ ॥ ೬ ॥

॥ ಸಂಹಿತಾಪಾಠಃ ॥

ದ್ರವಿಣೋದಾ ದ್ರವಿಣಸೋ ಗ್ರಾವಹಸ್ತಾಸೋ ಅಧ್ವರೇ ।
ಯಜ್ಞೇಷು ದೇವಮೀಳತೇ ॥ ೭ ॥

॥ ಪದಪಾಠಃ ॥

ದ್ರವಿಣಃ ಽ ದಾಃ । ದ್ರವಿಣಸಃ । ಗ್ರಾವ ಽ ಹಸ್ತಾಸಃ । ಅಧ್ವರೇ ।
ಯಜ್ಞೇಷು । ದೇವಂ । ಈಳತೇ ॥ ೭ ॥

॥ ಸಾಯಣಭಾಷ್ಯಂ ॥

ಅಧ್ವರೇಽಗ್ನಿಷ್ಟೋಮೇ ಪ್ರಕೃತಿರೂಪೇ ಯಜ್ಞೇಷು ವಿಕೃತಿರೂಪೇಷೂಕ್ಥ್ಯಾದಿಷು ಚ ದೇವಮಗ್ನಿಮೀಳತೇ । ಋತ್ವಿಜಃ ಸ್ತುವಂತಿ । ಕೀದೃಶಾ ಋತ್ವಿಜಃ । ದ್ರವಿಣಸೋ ಧನಾರ್ಥಿನೋ ಗ್ರಾವಹಸ್ತಾಸೋಽಭಿಷವಸಾಧನಪಾಷಾಣಧಾರಿಣಃ । ಕೀದೃಶಂ ದೇವಂ । ದ್ರವಿಣೋದಾ ಧನಪ್ರದಂ । ಯದ್ವಾ । ಧನಪ್ರದೋಽಗ್ನಿಃ ಸೋಮಂ ಪಿಬತ್ವಿತಿ ಶೇಷಃ । ತಮೇತಂ ಮಂತ್ರಂ ಯಾಸ್ಕ ಏವಂ ನಿರ್ವಕ್ತಿ । ದ್ರವಿಣೋದಾಃ ಕಸ್ಮಾದ್ಧನಂ ದ್ರವಿಣಮುಚ್ಯತೇ ಯದೇನದಭಿದ್ರವಂತಿ ಬಲಂ ವಾ ದ್ರವಿಣಂ ಯದೇನೇನಾಭಿದ್ರವಂತಿ ತಸ್ಯ ದಾತಾ ದ್ರವಿಣೋದಾಸ್ತಸ್ಯೈಷಾ ಭವತಿ । ದ್ರವಿಣೋದಾ ದ್ರವಿಣಸ ಇತ್ಯಾದಿ । ನಿ. ೮-೧ । ಸೋಽಯಂ ಯಾಸ್ಕೋಕ್ತೋ ನಿರ್ವಚನಪ್ರಪಂಚಸ್ತಸ್ಮಿನ್ನೇವ ಗ್ರಂಥೇಽವಗಂತವ್ಯಃ ॥ ದ್ರವಿಣೋದಾಃ । ದ್ರುದಕ್ಷಿಭ್ಯಾಮಿನನ್ । ಉ. ೨ ೫೦ । ನಿತ್ತ್ವಾದಾದ್ಯುದಾತ್ತೋ ದ್ರವಿಣಶಬ್ದಃ । ತದ್ದದಾತೀತಿ ದ್ರವಿಣೋದಾಃ । ಕ್ವಿಪ್ಚೇತಿ ಕ್ವಿಪ್ । ಪೂರ್ವಪದಸ್ಯ ಸಕಾರೋಪಜನಶ್ಛಾಂದಸಃ । ಋತ್ವೋತ್ವೇ । ಕೃದುತ್ತರಪದಪ್ರಕೃತಿಸ್ವರತ್ವಂ । ದೇವವಿಶೇಷಣತ್ವೇನೈಕವಾಕ್ಯತಾಪಕ್ಷೇ ದ್ವಿತೀಯಾಯಾಃ ಸ್ವಾದೇಶಃ । ಅಥವಾ ದ್ರವಿಣಮಾತ್ಮನ ಇಚ್ಛಂತಿ ದ್ರವಿಣಸ್ಯಂತಿ । ಸುಪ ಆತ್ಮನಃ ಕ್ಯಚ್ । ಸರ್ವಪ್ರಾತಿಪದಿಕೇಭ್ಯೋ

ಲಾಲಸಾಯಾಂ ಸುಗ್ವಕ್ತವ್ಯಃ । ಪಾ. ೭-೧-೫೧-೨ । ಇತಿ ಕ್ಯಚಿ ಪರತಃ ಸುಗಾಗಮಃ । ದ್ರವಿಣಸ್ಯತೇಃ ಸಂಪದಾದಿತ್ವಾದ್ಭಾವೇ ಕ್ವಿಪ್ । ಅತೋ ಲೋಪಃ । ಕ್ವೌ ಲುಪ್ತಂ ನ ಸ್ಥಾನಿವದ್ಭವತಿ । ವಾ ೧-೧-೫೮-೨ । ಇತಿ ತಸ್ಯ ಸ್ಥಾನಿವತ್ತ್ವಪ್ರತಿಷೇಧಾದ್ಯಲೋಪಃ । ಏವಂ ದ್ರವಿಣಸ್ಶಬ್ದೋ ಧನೇಚ್ಛಾವಚನಃ । ದ್ರವಿಣೇಚ್ಛಾಂ ದಸ್ಯತಿ ಯಥೇಷ್ಟಧನಪ್ರದಾನೇನೋಪಕ್ಷಪಯತೀತ್ಯರ್ಥೇ ದಸು ಉಪಕ್ಷಯೆ ಇತ್ಯಸ್ಮಾದಂತರ್ಭಾವಿತಣ್ಯರ್ಥಾತ್ಕ್ವಿಪ್ಚೇತಿ ಕ್ವಿಪ್ । ಏವಂ ದ್ರವಿಣೋದಃಶಬ್ದಃ ಸಕಾರಾಂತೋ ಭವತಿ। ತಥಾ ದ್ರವಿಣೋದಸಃ ಪ್ರವಾದಾ ಭವಂತೀತಿ ನೈರುಕ್ತೋ ವ್ಯವಹಾರ ಉಪಪದ್ಯತೇ । ನಿ. ೮-೨ । ಅತೋ ದ್ರವಿಣೋದಸ್ಶಬ್ದೋ ಭಿನ್ನವಾಕ್ಯತ್ವೇ ಸ್ವಾರ್ಥೇ ಪ್ರಥಮಾ । ಏಕವಾಕ್ಯತ್ವೇ ತು ವ್ಯತ್ಯಯೇನ ದ್ವಿತೀಯಾರ್ಥೇ ಭವತಿ । ದ್ರವಿಣಸ ಇತ್ಯತ್ರಾಪಿ ವಾಕ್ಯಭೇದಪಕ್ಷೇ ದ್ರವಿಣಸಃ ಸೋಮಸ್ಯೇತ್ಯರ್ಥೇ ಸಕಾರೋಪಜನಶ್ಛಾಂದಸಃ । ಆದ್ಯುದಾತ್ತತ್ವಂ ತು ನಿಯಮೇನ ಸ್ಥಿತಂ । ಋತ್ವಿಗ್ವಿಶೇಷಣತ್ವೇನೈಕವಾಕ್ಯತ್ವಪಕ್ಷೇ ತು ಕ್ಯಜಂತಾತ್ಕ್ವಿಪ್ । ಅತೋ ಲೋಪಾದಿ ಪೂರ್ವವತ್ । ಅತ್ರ ತು ಪಕ್ಷೇ ಕ್ಯಚಶ್ಚಿತ್ತ್ವೇನಾಂತೋದಾತ್ತತ್ವೇ ಪ್ರಾಪ್ತೇ ವ್ಯತ್ಯಯೇನಾದ್ಯುದಾತ್ತತ್ವಂ । ಗ್ರಾವಯುಕ್ತಾ ಹಸ್ತಾ ಯೇಷಾಂ ತೇ ಗ್ರಾವಹಸ್ತಾಸಃ । ಆಜ್ಜಸೇರಸುಕ್ । ಗ್ರಾವಶಬ್ದೋ ವೃಷಾದಿತ್ವಾದಾದ್ಯುದಾತ್ತಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಅಧ್ವರೇ । ನ ವಿದ್ಯತೇ ಧ್ವರೋ ಹಿಂಸಾ ಯಸ್ಮಿನ್ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಈಳತೇ । ಅನುದಾತ್ತೇತ್ತ್ವಾದಾತ್ಮನೇಪದಂ । ಅದಿಪ್ರಭೃತಿಭ್ಯ ಇತಿ ಶಪೋ ಲುಕ್ । ಝಸ್ಯಾದಾದೇಶಃ ॥

॥ ಪ್ರತಿಪದಾರ್ಥ ॥

ದ್ರವಿಣಸಃ—ಧನಾರ್ಥಿಗಳಾದ ಋತ್ವಿಕ್ಕುಗಳು । ಗ್ರಾವಹಸ್ತಾಸಃ—(ಸೋಮರಸವನ್ನು ಹಿಂಡಲು ಸಾಧನವಾದ) ಕಲ್ಲನ್ನು ಕೈಯಲ್ಲಿಟ್ಟುಕೊಂಡು । ದ್ರವಿಣೋದಾಃ—ಧನಪ್ರದನಾದ । (ಅಥವಾ ದ್ರವಿಣೋದನೆಂಬ ಹೆಸರಿನ) । ದೇವಂ—ದೇವನಾದ ಅಗ್ನಿಯನ್ನು । ಅಧ್ವರೇ—ಪ್ರಕೃತಿರೂಪವಾದ ಅಗ್ನಿಷ್ಟೋಮಯಾಗದಲ್ಲೂ । ಯಜ್ಞೇಷು — ವಿಕೃತಿರೂಪಗಳಾದ ಉಕ್ಥ್ಯಾದಿಯಾಗಗಳಲ್ಲೂ । ಈಳತೇ—ಸ್ತೋತ್ರಮಾಡುತ್ತಾರೆ.

॥ ಭಾವಾರ್ಥ ॥

ಧನಾರ್ಥಿಗಳಾದ ಋತ್ವಿಕ್ಕುಗಳು ಕೈಯಲ್ಲಿ ಸೋಮರಸವನ್ನು ಹಿಂಡಲು ಸಾಧನವಾದ ಕಲ್ಲನ್ನು ಹಿಡಿದುಕೊಂಡು ಪ್ರಕೃತಿಯಾದ ಅಗ್ನಿಷ್ಟೋಮಯಾಗದಲ್ಲೂ ವಿಕೃತಿಗಳಾದ ಉಕ್ಥ್ಯಾದಿಯಾಗಗಳಲ್ಲೂ ಸಹ ಸೋಮರಸವನ್ನು ಪಾನಮಾಡಲು ದ್ರವಿಣೋದಾ ಎಂಬ ಅಗ್ನಿಯನ್ನು ಆಹ್ವಾನಿಸಿ ಸ್ತೋತ್ರಮಾಡುತ್ತಾರೆ.

## English Translation.

The priests desirous of wealth, with the soma-pressing stones in their hands praise the divine (Agni) Dravinodas who is the giver of riches, in the Soma and other sacrifices.

‖ ವಿಶೇಷವಿಷಯಗಳು ‖

ದ್ರವಿಣೋದಾಃ—ಈ ಶಬ್ದಕ್ಕೆ ಯಾಸ್ಕರು ವಿಸ್ತಾರವಾದ ವಿವರಣೆಯನ್ನು ಬರೆದಿರುವರು—

**ದ್ರವಿಣೋದಾಃ । ದ್ರವಿಣೋದಾಃ ಕಸ್ಮಾದ್ಧನಂ ದ್ರವಿಣಮುಚ್ಯತೇ । ಯದೇನದಭಿದ್ರವಂತಿ। ಬಲಂ ವಾ ದ್ರವಿಣಂ ಯದೇನೇನಾಭಿದ್ರವಂತಿ। ತಸ್ಯ ದಾತಾ ದ್ರವಿಣೋದಾಃ।**
(ನಿ. ೮-೧)

ಇಲ್ಲಿ ದ್ರವಿಣೋದಾಃ ಎಂಬ ಶಬ್ದದ ನಿಷ್ಪತ್ತಿಯು, ದ್ರವಿಣಂ ದದಾತೀತಿ ದ್ರವಿಣೋದಾಃ. ದ್ರವಿಣಶಬ್ದಕ್ಕೆ ಧನ, ಬಲ ಎಂದು ಎರಡು ಅರ್ಥಗಳಿರುವವು. ಆದುದರಿಂದ ದ್ರವಿಣೋದಾಃ ಎಂದರೆ ಧನವನ್ನು ಅಥವಾ ಬಲವನ್ನು ಕೊಡುವವನು ಎಂದರ್ಥವು. ಇದು ಈ ಶಬ್ದದ ಅವಯವಾರ್ಥವು. ಇದಲ್ಲದೆ ಯಾಸ್ಕರು ಪ್ರಸಕ್ತವಾದ ಈ ಋಕ್ಕಿಗೆ ನಿರ್ವಚನವನ್ನು ಹೀಗೆ ಹೇಳಿರುವರು—

**ದ್ರವಿಣೋದಾ ಯಸ್ತ್ವಂ । ದ್ರವಿಣಸ ಇತಿ ದ್ರವಿಣಸಾದಿನ ಇತಿ ವಾ ದ್ರವಿಣಸಾನಿನ ಇತಿ ವಾ ದ್ರವಿಣಸಸ್ತಸ್ಮಾತ್ ಪಿಬ ತ್ವಿತಿ ವಾ । ಯಜ್ಞೇಷು ದೇವಮೀಳತೇ । ಯಾಚಂತಿ ಸ್ತುವಂತಿ, ವರ್ಧಯಂತಿ ಪೂಜಯಂತೀತಿ ವಾ ॥**

ಎಂದರೆ ಧನ, ಹವಿಸ್ಸು ಮುಂತಾದವುಗಳನ್ನು ಅಪೇಕ್ಷಿಸುವ ಋತ್ವಿಜರು ದ್ರವಿಣೋದಾ ಎಂಬ ನಿನ್ನನ್ನು ಯಜ್ಞಗಳಲ್ಲಿ ಸೋಮಪಾನ ಮಾಡುವಂತೆ, ಪ್ರಾರ್ಥಿಸುತ್ತಾರೆ ಎಂದು ಮುಖ್ಯಾರ್ಥವು. ಇಲ್ಲಿ ದ್ರವಿಣೋದಾಃ ಎಂಬದು ಪ್ರಥಮಾ ವಿಭಕ್ತಿಯ ಏಕವಚನವಾಗಿದ್ದರೂ ದೇವಂ ಎಂಬ ದ್ವಿತೀಯೈಕವಚನಕ್ಕೆ ಹೇಗೆ ವಿಶೇಷಣವಾಯಿತೆಂದರೆ—ದ್ರವಿಣೋದಾ ಯಃ ದೇವಃ ತಂ ದೇವಂ, ಯಾವ ದೇವನು ಧನದಾತನೋ ಆ ದೇವನನ್ನು ಎಂದು ಅರ್ಥವಾಗುವಂತೆ ಪದಗಳನ್ನು ಅಧ್ಯಾಹಾರಮಾಡಿಕೊಳ್ಳಬೇಕು. ದ್ರವಿಣಸಃ—ಎಂದರೆ ಧನ ಅಥವಾ ಹವಿಸ್ಸನ್ನು ದೇವತಾಯಜನಾರ್ಥವಾಗಿ ದೇವನನ್ನು ಪ್ರಾರ್ಥಿಸುವವರಾದುದರಿಂದ ದ್ರವಿಣಸಃ ಎಂಬ ಶಬ್ದಕ್ಕೆ ಋತ್ವಿಜರು ಎಂದರ್ಥವು. ಮತ್ತು ಈಳತೇ ಎಂದರೆ ಯಾಚಿಸುತ್ತಾರೆ, ಸ್ತುತಿಸುತ್ತಾರೆ, ಪ್ರಶಂಸೆಮಾಡುತ್ತಾರೆ, ಪೂಜಿಸುತ್ತಾರೆ ಎಂಬ ಅನೇಕ ಅರ್ಥಗಳನ್ನು ಹೇಳಬಹುದು.

**ತತ್ಕೋ ದ್ರವಿಣೋದಾ ಇಂದ್ರ ಇತಿ ಕ್ರೌಷ್ಟುಕಿಃ ।**
**ಸ ಬಲಧನಯೋರ್ದಾತೃತಮಸ್ತಸ್ಯ ಚ ಸರ್ವಾ ಬಲಕೃತಿಃ ॥**

ದ್ರವಿಣೋದಾಃ ಎಂಬ ಶಬ್ದದ ಅವಯವಾರ್ಥವನ್ನೇನೋ ಹೇಳಿದ್ದಾಯಿತು. ಆದರೆ ಈ ದ್ರವಿಣೋದಾಃ ಎಂಬ ದೇವತೆಯು ಯಾರು? ಎಂದರೆ, ಇಂದ್ರನೇ ದ್ರವಿಣೋದಾಃ ಎಂಬುದಾಗಿ ಹೇಳಲ್ಪಡುವನು, ಏಕೆಂದರೆ ದ್ರವಿಣ ಶಬ್ದವು ಸೂಚಿಸುವ, ಬಲ, ಧನ. ಇವುಗಳನ್ನು ಅತಿಶಯವಾಗಿ ಕೊಡುವವನು ಇಂದ್ರನೇ ಆದುದರಿಂದ ಇಂದ್ರನನ್ನೇ ದ್ರವಿಣೋದಾಃ ಎಂಬದಾಗಿ ಹೇಳಬೇಕೆಂದು ಕ್ರೌಷ್ಟುಕಿ ಎಂಬುವರ ಅಭಿಪ್ರಾಯವು.

**ಅಥಾಪ್ಯಗ್ನಿಂ ದ್ರವಿಣೋದಸಮಾಹೈಷ ಪುನರೇತಸ್ಮಾಜ್ಜಾಯತೇ ।**
**ಯೋ ಅಶ್ಮನೋರಂತರಗ್ನಿಂ ಜಜಾನ ಇತ್ಯಪಿ ನಿಗಮೋ ಭವತಿ ॥**

ಮತ್ತು ಇವರು ಈ ಶಬ್ದಕ್ಕೆ ಮತ್ತೊಂದು ಅರ್ಥವನ್ನು ಹೇಳುವರು. ಇಂದ್ರನು ದ್ಯಾವಾಪೃಥಿವಿಗಳನ್ನು ಸೃಷ್ಟಿಸಿದನು. ಅವುಗಳ ಮಧ್ಯದಲ್ಲಿ ಅಗ್ನಿಯನ್ನೂ ಸೃಷ್ಟಿಸಿದನು. ಆದುದರಿಂದ ದ್ರವಿಣೋದಾಃ ಶಬ್ದಕ್ಕೆ ಅಗ್ನಿಯೆಂದೂ ಹೇಳಬಹುದು ಎಂದು ಈ ಅರ್ಥವನ್ನು ಸಮರ್ಥಿಸುವುದಕ್ಕಾಗಿ "ಅಶ್ಮನೋರಂತರಗ್ನಿಂ ಜಜಾನ" ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು.

ಅಥಾಪ್ಯೃತುಯಾಜೇಷು ದ್ರವಿಣೋದಸಾಃ ಪ್ರವಾದಾ ಭವಂತಿ । ತೇಷಾಂ ಪುನಃ ಪಾತ್ರಸ್ಯೇಂದ್ರಪಾನಮಿತಿ ಭವತಿ ॥ ಅಥಾಪ್ಯೇನಂ ಸೋಮಪಾನೇನ ಸ್ತೌತಿ । ಅಥಾಪ್ಯಾಹ ದ್ರವಿಣೋದಾಃ ಪಿಬತು ದ್ರವಿಣೋದಸ ಇತಿ ॥

ಋತುಗಳನ್ನುದ್ದೇಶಿಸಿ ಮಾಡುವ ಯಜ್ಞಗಳಲ್ಲಿ ಋತ್ವಿಜರ ಹಸ್ತದಲ್ಲಿರುವ ಪಾತ್ರೆಯಿಂದ ಇಂದ್ರನು ಸೋಮಪಾನ ಮಾಡುವನೆಂದು ಹೇಳಿರುವದರಿಂದಲೂ ಇಂದ್ರನನ್ನು ಸೋಮಪಾನಸಂಬಂಧವಾದ ಮಂತ್ರಗಳಿಂದ ಸ್ತೋತ್ರ ಮಾಡುವುದರಿಂದಲೂ, ಋತ್ವಿಜರನ್ನು ದ್ರವಿಣೋದಸರೆಂದು ಕರೆಯುವ ರೂಢಿ ಇದೆ. ಇದೆಲ್ಲವೂ ಕ್ರೌಷ್ಟುಕಿ ಎಂಬುವರ ಮತವು.

ಅಯಮೇವಾಗ್ನಿರ್ದ್ರವಿಣೋದಾ ಇತಿ ಶಾಕಪೂಣಿಃ ಆಗ್ನೇಯೇಷ್ವೇವ ಹಿ ಸೂಕ್ತೇಷು ದ್ರವಿಣೋದಸಾಃ ಪ್ರವಾದಾ ಭವಂತಿ.

ಅಗ್ನಿಯೇ ದ್ರವಿಣೋದಾಃ ಎಂದು ಶಾಕಪೂಣಿಯವರ ಮತವು, ಏಕೆಂದರೆ ಅಗ್ನಿಸಂಬಂಧವಾದ ಸೂಕ್ತಗಳಲ್ಲಿ ಋತ್ವಿಜರು ಅಗ್ನಿಯನ್ನು ಸ್ತುತಿಸುವಾಗ ದ್ರವಿಣೋದಾಃ ಎಂಬ ಶಬ್ದವನ್ನು ಅಗ್ನಿಗೆ ವಿಶೇಷಣಪದವನ್ನಾಗಿ ಉಪಯೋಗಿಸುವರು.

ಯಥೋ ಏತತ್ಸ ಬಲಧನಯೋರ್ದಾತೃತಮ ಇತಿ ಸರ್ವಾಸು ದೇವತಾಸ್ವೈಶ್ವರ್ಯಂ ವಿದ್ಯತೇ । ಯಥೋ "ಏತದೋಜಸೋ ಜಾತಮುತಮನ್ಯ ಏನಂ" ಇತಿ ಚಾಹೇತ್ಯಯಮಪ್ಯಗ್ನಿರೋಜಸಾ ಬಲೇನ ಮಥ್ಯಮಾನೋ ಜಾಯತೇ ತಸ್ಮಾದೇನಮಾಹ ಸಹಸಸ್ಪುತ್ರಂ ಸಹಸಃ ಸೂನುಂ ಸಹಸೋ ಯಹುಂ ॥

ಸಮಸ್ತ ದೇವತೆಗಳಲ್ಲಿಯೂ ಐಶ್ವರ್ಯವಿರುವುದು. ಆದುದರಿಂದ ಅಗ್ನಿಯೂ ಬಲ, ಧನ ಇವುಗಳನ್ನು ಕೊಡುವನು. ಬಲಧನಗಳನ್ನು ಕೊಡುವುದರಿಂದ ಅಗ್ನಿಯನ್ನೂ ದ್ರವಿಣೋದಾಃ ಎಂದು ಹೇಳಬಹುದು. ಇದಲ್ಲದೆ ದ್ರವಿಣಶಬ್ದಕ್ಕೆ ಬಲವೆಂದು ಅರ್ಥವಿರುವುದಷ್ಟೆ. ಅಗ್ನಿಯನ್ನು ಉತ್ಪತ್ತಿಮಾಡುವಾಗ ಬಲವನ್ನು ಉಪಯೋಗಿಸಿ (ಬಲವಾಗಿ) ಮಥನಮಾಡುವುದರಿಂದ ಅಗ್ನಿಯು ಬಲದಿಂದ ಹುಟ್ಟಿದನೆಂದು ಹೇಳುವ ಪ್ರತೀತಿ ಇದೆ. ಆದುದರಿಂದಲೇ ಅಗ್ನಿಯನ್ನು ಸಹಸಸ್ಪುತ್ರಂ, (ಸಹಸಃ-ಬಲದ, ಪುತ್ರಂ-ಪುತ್ರನಾದ ಅಗ್ನಿಯನ್ನು) ಸಹಸಃ ಸೂನುಂ, ಸಹಸೋ ಯಹುಂ ಎಂಬ ಶಬ್ದಗಳಿಂದ ಸ್ತುತಿಸುವರು :—

ದ್ಯುಮ್ನಃ ಸರ್ಪಿರಾಸುತಿಃ ಪ್ರತ್ನೋ ಹೋತಾ ವರೇಣ್ಯಃ ।
ಸಹಸಸ್ಪುತ್ರೋ ಅದ್ಭುತಃ ॥

[ಋ. ಸಂ. ೨-೭-೬]

ತ್ವಂ ಹ ಯದ್ಯವಿಷ್ಠ್ಯ ಸಹಸಃ ಸೂನವಾಹುತಃ ।
ಋತಾವಾ ಯಜ್ಞಿಯೋ ಭುವಃ ॥
(ಋ. ಸಂ. ೮-೭೫-೩)

ಅಗ್ನೇ ವಾಜಸ್ಯ ಗೋಮತ ಈಶಾನಃ ಸಹಸೋ ಯಹೋ ।
ಅಸ್ಮೇ ಧೇಹಿ ಜಾತವೇದೋ ಮಹಿಶ್ರವಃ ॥
(ಋ. ಸಂ. ೧-೭೯-೪)

ಎಂಬ ಋಕ್ಕುಗಳಲ್ಲಿ ಕ್ರಮವಾಗಿ ಸಹಸಸ್ಪುತ್ರ, ಸಹಸಃಸೂನು, ಸಹಸೋ ಯಹು ಎಂಬ ಶಬ್ದಗಳು ಅಗ್ನಿಯನ್ನು ಸ್ತುತಿಸುವಾಗ ಉಪಯೋಗಿಸಲ್ಪಟ್ಟಿರುವವು. ಆದುದರಿಂದ ಬಲಧನಗಳನ್ನು ಇತರ ದೇವತೆಗಳು ಕೊಡುವವರಾದರೂ ಅಗ್ನಿಯೇ ವಿಶೇಷವಾಗಿ ದ್ರವಿಣೋದಾಃ ಎಂಬ ಶಬ್ದದಿಂದ ಪ್ರತಿಪಾದಿತನಾಗಿರುವನು.

ಗ್ರಾವಹಸ್ತಾಸಃ—ಸೋಮಲತೆಯನ್ನು ಜಜ್ಜುವುದಕ್ಕಾಗಿ ಕೈಯಲ್ಲಿ ಕಲ್ಲನ್ನು ಹಿಡಿದಿರುವವರು.

ಅಧ್ವರೆ, ಯಜ್ಞೇಷು--ಅಧ್ವರ ಯಜ್ಞ ಎಂಬ ಶಬ್ದಗಳು ಸಾಧಾರಣವಾಗಿ ಯಜ್ಞವೆಂಬ ಸಾಮಾನ್ಯಾರ್ಥವನ್ನು ಸೂಚಿಸುವುದಾದರೂ ಇಲ್ಲಿ ಭಾಷ್ಯಕಾರರು ದ್ವಿರುಕ್ತಿದೋಷ ಬರಬಹುದೆಂಬ ಶಂಕೆಯಿಂದ ಅಧ್ವರಶಬ್ದಕ್ಕೆ ಪ್ರಕೃತಿರೂಪವಾದ ಅಗ್ನಿಷ್ಟೋಮವೆಂದೂ, ಯಜ್ಞಶಬ್ದಕ್ಕೆ ವಿಕೃತಿರೂಪವಾದ ಉಕ್ಥ್ಯ ಮೊದಲಾದ ಯಾಗವಿಶೇಷಗಳೆಂದೂ ಅರ್ಥವಿವರಣೆಮಾಡಿರುವರು. ಪ್ರಕೃತಿಯೆಂದರೆ ಎಲ್ಲಾ ಯಜ್ಞಗಳಿಗೂ ಸಾಮಾನ್ಯವಾಗಿ ಅನ್ವಯಿಸುವ ಕಾರ್ಯಕ್ರಮಗಳನ್ನೊಳಗೊಂಡ ಮೂಲಭೂತವಾದ ಯಜ್ಞಕರ್ಮವು. ವಿಕೃತಿಯೆಂದರೆ ಪ್ರಕೃತಯಜ್ಞದಲ್ಲಿ ಸಂದರ್ಭೋಚಿತವಾಗಿ ಅಲ್ಲಲ್ಲಿ ಕೆಲವು ವ್ಯತ್ಯಾಸಗಳನ್ನು ಮಾಡಿ ನೆರವೇರಿಸುವ ಯಜ್ಞಕರ್ಮವು ಎಂದರೆ ವಿಕೃತಿಯಾಗದಲ್ಲಿ ನಡೆಯುವ ಕರ್ಮಗಳೆಲ್ಲವೂ ಪ್ರಕೃತಿಯಾಗದಂತೆಯೇ ಇದ್ದು ಒಂದೆರಡು ವಿಷಯಗಳಲ್ಲಿ ಮಾತ್ರ ಸ್ವಲ್ಪ ವ್ಯತ್ಯಾಸವಿರುವುದು. ಪ್ರಕೃತಿವಿಕೃತಿಯಾಗಗಳ ವಿಷಯವಾಗಿ ನಾವು ಹಿಂದೆಯೇ ವಿವರಣೆ ಮಾಡಿದೇವೆ.

॥ ವ್ಯಾಕರಣಪ್ರಕ್ರಿಯಾ ॥

ದ್ರವಿಣೋದಾಃ—'ದ್ರು ದಕ್ಷಿಭ್ಯಾಮಿನನ್' (ಉ. ಸೂ. ೨-೨೦೮) ದ್ರುಗತೌ, 'ದಕ್ಷ ವೃದ್ಧೌ, ಈ ಧಾತುಗಳ ಮುಂದೆ 'ಇನನ್' ಪ್ರತ್ಯಯ ಬರುವುದು, ಎಂಬುದರಿಂದ ದ್ರು ಧಾತುವಿನ ಮುಂದೆ ಇನನ್ ಬಂದರೆ ದ್ರು+ಇನ, 'ಸಾರ್ವಧಾತುಕಾರ್ಧಧಾತುಕಯೋಃ' (ಪಾ. ಸೂ. ೭-೩-೮೪) ಎಂಬುದರಿಂದ ಗುಣ=ಉಕಾರಕ್ಕೆ ಓಕಾರ, ಏಚೋಽಯವಾಯಾವಃ' (ಪಾ.ಸೂ. ೬-೧-೭೮) ಎಂಬುದರಿಂದ ಓಕಾರಕ್ಕೆ ಅವಾದೇಶ ದ್ರವಿನ. 'ಅಟ್ಕುಪ್ವಾಙ್‌ನುಮ್ ವ್ಯವಾಯೇಪಿ (ಪಾ-ಸೂ- ೮-೪ ೨) ಎಂಬುದರಿಂದ ನಕಾರಕ್ಕೆ ಣಕಾರ, ದ್ರವಿಣ ಎಂದಾಯಿತು, ದ್ರವಿಣಂ ದದಾತಿ ಇತಿ ದ್ರವಿಣೋದಾಃ, ದ್ರವಿಣಂ ಎಂಬ ಸುಬಂತವು ಉಪಪದವಾಗಿರುವಾಗ ಕ್ವಿಪ್ಚ (ಪಾ.ಸೂ. ೩-೨-೭೬) ಎಂಬುದರಿಂದ ದಾ, ಧಾತುವಿನ ಮುಂದೆ ಕ್ವಿಪ್, ಕ್ವಿಪಪ್ರತ್ಯಯಕ್ಕೆ ಲೋಪವಾದ್ದರಿಂದ ಕೃತ್ತದ್ಧಿತಸಮಾಸಾಶ್ಚ(ಪಾ.ಸೂ.೧-೨-೪೬) ಎಂಬುದರಿಂದ ಪ್ರಾತಿಪದಿಕಸಂಜ್ಞೆ ಬರುವುದು, ಸುಪೋಧಾತುಪ್ರಾತಿಪದಿಕಯೋಃ (ಪಾ.ಸೂ. ೨-೪-೭೧) ಎಂಬುದರಿಂದ ಅಮ್ ಪ್ರತ್ಯಯಕ್ಕೆ ಲುಕ್, ಪೂರ್ವಪದಕ್ಕೆ ಛಾಂದಸವಾಗಿ

ಸಕ್ ಆಗಮ ಬಂದು ಸಕಾರವು ಸೇರಿಕೊಳ್ಳುವುದು. ದ್ರವಿಣಸ್+ದಾ **ಸಸಜುಷೋರುಃ,** (ಪಾ.ಸೂ.೮-೨-೬೬) ಎಂಬುದರಿಂದ ಸಕಾರಕ್ಕೆ ರುತ್ವ ದ್ರವಿಣರ್+ದಾ **ಹಶಿಚ** (ಪಾ ಸೂ. ೬-೧-೧೧೪) ಎಂಬುದರಿಂದ ರುಗೆ ಉತ್ವ ದ್ರವಿಣ+ಉ+ದಾ, **ಆದ್ಗುಣಃ** (ಪಾ.ಸೂ, ೬-೧-೮೭) ಎಂಬುದರಿಂದ ಗುಣ, ದ್ರವಿಣೋದಾ ಎಂದು ಆಗುವುದು, ದಾ ಎಂಬುದು **ಧಾತೋಃ,** (ಪಾ. ಸೂ. ೬-೧-೧೬೨) ಎಂದು ವಿಹಿತವಾದ ಧಾತುಸ್ವರದಿಂದ ಅಂತೋದಾತ್ತ, ಸಮಾಸಾನಂತರ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯ ) ಎಂಬುದರಿಂದ ಕೃದುತ್ತರಪದಪ್ರಕೃತಿ-ಸ್ವರ ಬಂದು ಅದೇ ನಿಲ್ಲುವುದು, ದ್ರವಿಣೋದಾಃ, ಎಂಬುದು ದೇವಂ ಎಂಬ ದ್ವಿತೀಯಾಏಕವಚನಾಂತಕ್ಕೆ ವಿಶೇಷಣವು. ಆದುದರಿಂದ ಒಂದೇ ವಾಕ್ಯವಾಗುವುದು ಎಂದು ವಿವಕ್ಷಿಸಿದರೆ ದ್ರವಿಣೋದಾ ಎಂಬುದರ ಮುಂದೆ ಬರುವ ದ್ವಿತೀಯಾಏಕವಚನ ಅಮ್ ಪ್ರತ್ಯಯಕ್ಕೆ **ಸುಪಾಂಸುಲುಕ್,** (ಪಾ.ಸೂ. ೭-೧-೩೯) ಎಂಬುದರಿಂದ ಸು ಆದೇಶ ಬರುವುದು. ದ್ರವಿಣೋದಾಸ್ ರುತ್ವ ವಿಸರ್ಗಗಳು ದ್ರವಿಣೋದಾಃ ಎಂದಾಗುವುದು, ಅಥವಾ ದ್ರವಿ-ಣಂ ಆತ್ಮನ ಇಚ್ಛನ್ತಿ, ಎಂದು ವಿಗ್ರಹಮಾಡಿದರೆ ದ್ರವಿಣಸ್ಯಂತಿ, ಎಂದಾಗುವುದು, ಈ ಪಕ್ಷದಲ್ಲಿ ದ್ರವಿಣಂ ಎಂಬುದರ ಮುಂದೆ ಆತ್ಮನ ಇಚ್ಛಂತಿ ಎಂಬ ಅರ್ಥದಲ್ಲಿ ಸುಪ ಆತ್ಮನಃಕ್ಯಚ್ ಎಂಬುದರಿಂದ ಕ್ಯಚ್ ಪ್ರತ್ಯಯ, **ಸನಾದ್ಯನ್ತಾಧಾತವಃ,** (ಪಾ.ಸೂ. ೩-೧-೩೨) ಎಂಬುದರಿಂದ ಕ್ಯಜಂತಕ್ಕೆ ಧಾತುಸಂಜ್ಞೆ, **ಸುಪೋಧಾತುಪ್ರಾತಿಪದಿಕಯೋಃ,** (ಪಾ.ಸೂ. ೨.೪ ೭೧) ಎಂಬುದರಿಂದ ಧಾತ್ವವಯವವಾದ ಸುಪ್ ಗೆ ಲುಕ್, **ಸರ್ವಪ್ರಾತಿಪದಿಕೇ-ಭ್ಯೋಲಾಲಸಾಯಾಂ ಸುಗ್ವಕ್ತವ್ಯಃ,** (ಪಾ. ಸೂ. ಮ. ಭಾ. ೭-೧ ೫೧-೨) ಲಾಲಸಾ-ಎಂದರೆ, ಅತಿಶಯೇನ ಅಭ್ಯವಜಿಹೀರ್ಷಾ ಎಂದು ಕೈಯಟಕಾರರು ವಿವರಿಸಿರುವರು. ಉತ್ಕಟೇಚ್ಛಾ ಎಂದು ತತ್ವಬೋಧಿನೀ, ಕ್ಯಚ್ ಪ್ರತ್ಯಯ ಪರದಲ್ಲಿರುವಾಗ ಉತ್ಕಟೇಚ್ಛೆ ತೋರಿದರೆ ಎಲ್ಲಾ ಪ್ರಾತಿಪದಿಕಗಳಿಗೂ ಸುಗಾಗಮ ಬರುವುದು ಎಂಬುದ ರಿಂದ ಸುಕ್ ಆಗಮ. ದ್ರವಿಣಸ್ಯ ಎಂದಾಗುವುದು ಇದರ ಮುಂದೆ **ಸಂಪದಾದಿಭ್ಯಃ ಕ್ವಿಪ್** (ಪಾ.ಸೂ-ವಾರ್ತ್ತಿ. ೩-೩-೧೦೮-೯) ಎಂಬುದರಿಂದ ಭಾವಾರ್ಥದಲ್ಲಿ ಕ್ವಿಪ್ ಪ್ರತ್ಯಯ, ದ್ರವಿಣಸ್ಯ+ವ್ **ಅತೋಲೋಪಃ** (ಪಾ ಸೂ.೬-೪-೪೮) ಆರ್ಧಧಾತುಕಪ್ರತ್ಯಯೋಪದೇಶಕಾಲದಲ್ಲಿ ಯಾವುದು ಅಕಾರಾಂತವಾಗಿರುವುದೋ ಅದರ ಅಕಾರಕ್ಕೆ ಲೋಪ ಬರುವುದು ಎಂಬುದರಿಂದ ಪ್ರತ್ಯಯದ ಹಿಂದಿನ ಅಕಾರಕ್ಕೆ ಲೋಪ, ದ್ರವಿಣಸ್ಯ್+ವ್—ಈ ಅಲೋಪಕ್ಕೆ ಯ ಲೋಪವನ್ನು ಮಾಡುವಾಗ **ಅಚಃ ಪರಸ್ಮಿನ್ ಪೂರ್ವವಿಧೌ** (ಪಾ.ಸೂ. ೧-೧-೫೭) ಎಂಬುದರಿಂದ ಸ್ಥಾನಿ ವದ್ಭಾವವು ಪ್ರಾಪ್ತವಾಗುವುದು ಆದರೂ **ಕ್ವೌ ಲುಪ್ತಂ ನ ಸ್ಥಾನಿವತ್ ಭವತಿ** (ಪಾ.ಮ. ೧-೧-೫೮-೨) ಕ್ವಿಪ್ ಪ್ರತ್ಯಯವನ್ನು ನಿಮಿತ್ತಮಾಡಿಕೊಂಡು ಯಾವುದಕ್ಕೆ ಲೋಪಬಂದಿದೆಯೋ ಅದಕ್ಕೆ ಸ್ಥಾನಿವದ್ಭಾವಬರುವುದಿಲ್ಲ ಎಂಬುದರಿಂದ, ಸ್ಥಾನಿವದ್ಭಾವಕ್ಕೆ ನಿಷೇಧಬರುವುದು. **ಲೋಪೋವ್ಯೋರ್ವಲಿ** (ಪಾ.ಸೂ. ೬-೧-೬೬) ವಲ್ ವರ್ಣ ಪರದಲ್ಲಿರುವಾಗ ವಕಾರ ಯಕಾರಗಳಿಗೆ ಲೋಪ ಬರುವುದು ಎಂಬುದರಿಂದ ಯಕಾರಕ್ಕೆ ಲೋಪ. **ವೇರ-ಪೃಕ್ತಸ್ಯ** (ಪಾ.ಸೂ. ೬-೧-೬೭) ಅಪೃಕ್ತವೆಂದರೆ ಏಕವರ್ಣರೂಪವಾದ ಪ್ರತ್ಯಯ; ಅಪೃಕ್ತವಾದ ವಕಾರಕ್ಕೆ ಲೋಪಬರುವುದು ಎಂಬುದರಿಂದ ವಕಾರ ಲೋಪ, ಯದ್ಯಪಿ ಪರನಿಮಿತ್ತವಲ್ಲದುದರಿಂದ ವೇರಪೃಕ್ತಲೋಪವು ಅಂತರಂಗ, ಪರನಿಮಿತ್ತಕವಾದ್ದರಿಂದ, ವಲಿಲೋಪವು ಬಹಿರಂಗ, ಆದ್ದರಿಂದ **ಅಸಿದ್ಧಂಬಹಿರಂಗಮನ್ತರಙ್ಗೇ,** ( ಪರಿಭಾ. ೫೦ ) ಎಂಬುದರಿಂದ ವಲಿಲೋಪವು ವೇರಪೃಕ್ತಲೋಪವನ್ನು ಮಾಡುವಾಗ ಅಸಿದ್ಧವಾಗುವುದು. ಏವಂಚ ಮೊದಲು ವೇರಪೃಕ್ತಲೋಪಬಂದರೆ ಅಲ್ವಿಧಿಯಲ್ಲಿ ಸ್ಥಾನಿವದ್ಭಾವಕ್ಕೆ ಪ್ರತಿಷೇಧಬರುವುದರಿಂದ ವಲಿಲೋಪವು ಬರದೇಹೋಗುವುದು. ಆದರೆ **ವೇರಪೃಕ್ತಲೋಪಾದ್ವಲಿ ಲೋಪೋಬಲಿಯಾನ್,** ಎಂಬುದ ರಿಂದ ಮೊದಲು ವಲಿಲೋಪವೇ ಬರುವುದು, ನಂತರ ವೇರಪೃಕ್ತಲೋಪ ಬರುವುದು, ದ್ರವಿಣಸ್, ಎಂದಾಗುವುದು. ಇದಕ್ಕೆ ಧನೇಚ್ಛೆ ಎಂದು ಅರ್ಥ. ದ್ರವಿಣೇಚ್ಛಾಂ ದಸ್ಯತಿ, ಯಥೇಷ್ಟಧನ ಪ್ರದಾ

ನೇನ ಉಪಕ್ಷಪಯತಿ, ಅಂದರೆ ಯಥೇಷ್ಟವಾಗಿ ಧನವನ್ನು ಕೊಟ್ಟು ಅದರಿಂದ ಧನೇಚ್ಛೆಯನ್ನು ತೊಲಗಿಸು ವನು ಎಂಬ ಅರ್ಥವನ್ನು ವಿವಕ್ಷಿಸಿದಾಗ, ಅಂತರ್ಭಾವಿತಣಿಜ್ಪ್ರತ್ಯಯಾರ್ಥಕವಾದ ದಸು ಉಪಕ್ಷಯೇ, ಎಂಬ ಧಾತುವಿನ ಮುಂದೆ ಕ್ವಿಪ್ ಚ ಎಂಬುದರಿಂದ ಕ್ವಿಪ್ ಪ್ರತ್ಯಯ, ಕ್ವಿಪ್‌ಪ್ರತ್ಯಯಕ್ಕೆ ಲೋಪ, ಈ ರೀತಿಯಲ್ಲಿ ದ್ರವಿಣೋದಸ್ ಶಬ್ದವು ಸಕಾರಾಂತವಾಗುವುದು, ಈ ವ್ಯುತ್ಪತ್ತಿಯಿಂದ ದ್ರವಿಣೋದಸಾಃ ಪ್ರವಾದಾ ಭವನ್ತಿ, (ನಿರು. ೮-೨) ಎಂಬ ನಿರುಕ್ತದ ವ್ಯವಹಾರವು ಉಪಪನ್ನವಾಗುವುದು, ಆದ್ದರಿಂದ ದ್ರವಿಣೋದಾಃ, ಎಂಬುದು ದೇವಂ ಎಂಬುದಕ್ಕೆ ವಿಶೇಷಣವಲ್ಲ ಎಂದು ಇಟ್ಟುಕೊಂಡರೆ ಎರಡು ವಾಕ್ಯವು ಏರ್ಪಡುವುದು ಈ ಪಕ್ಷದಲ್ಲಿ ಸ್ವಾರ್ಥದಲ್ಲಿ ಪ್ರಥಮಾವಿಭಕ್ತಿ ಏಕವಚನ ಸು ಪ್ರತ್ಯಯಬಂದು ದ್ರವಿಣೋದಾಃ, ಎಂದಾಗುವುದು, ಏಕವಾಕ್ಯತಾ ಪಕ್ಷದಲ್ಲಿ ವ್ಯತ್ಯಯದಿಂದ ಪ್ರಥಮಾವಿಭಕ್ತಿಗೆ ದ್ವಿತೀಯಾವಿಭಕ್ತಿಯ ಅರ್ಥವನ್ನು ಇಟ್ಟುಕೊಳ್ಳಬೇಕು.

**ದ್ರವಿಣಸಃ**— ಇಲ್ಲಿಯೂ ವಾಕ್ಯಭೇದಪಕ್ಷದಲ್ಲಿ ದ್ರವಿಣಸಃ ಎಂಬುದಕ್ಕೆ ಸೋಮರಸದ ಎಂದರ್ಥ. ಈ ಅರ್ಥದಲ್ಲಿ ಛಾಂದಸಪ್ರಕ್ರಿಯೆಯಿಂದ ಸಗಾಗಮ ಬಂದು ದ್ರವಿಣಸಃ ಎಂದಾಗುವುದು. ಞ್ನಿತ್ಯಾದಿರ್ನಿತ್ಯಂ, ಎಂಬುದರಿಂದ ಆದ್ಯುದಾತ್ತವು ನಿಯತವಾಗಿ ಬರುವುದು. ದ್ರವಿಣಸಃ ಎಂಬುದು ಋತ್ವಿಕ್ಕುಗಳಿಗೆ ವಿಶೇಷಣವಾಗಿ ಒಂದೇ ವಾಕ್ಯವಾಗುವುದು ಎಂಬ ಪಕ್ಷದಲ್ಲಿ ಹಿಂದೆ ಹೇಳಿದಂತೆ ಕ್ಯಜಂತದ ಮುಂದೆ ಕ್ವಿಪ್, ಅತೋಲೋಪಃ, ಇತ್ಯಾದಿ ಶಾಸ್ತ್ರಗಳಿಂದ ಅಕಾರಲೋಪವೇ ಮೊದಲಾದ ಕಾರ್ಯಗಳು ಮೊದಲಿನಂತೆಯೇ ಬರುವುವು. ಈ ಪಕ್ಷದಲ್ಲಿ ಕ್ಯಚ್ ಪ್ರತ್ಯಯವು ಚಿತ್ತಾದ್ದರಿಂದ ಚಿತಃ, (ಪಾ.ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಪ್ರಾಪ್ತವಾದರೆ ವ್ಯತ್ಯಯದಿಂದ ಆದ್ಯುದಾತ್ತ ಬರುವುದು. ಅಧ್ವರೇ ಯಜ್ಞೇಷು ಚ ದ್ರವಿಣಸೋ ಗ್ರಾವಹಸ್ತಾಸೋ ಋತ್ವಿಜಃ, ದ್ರವಿಣೋದಾ ದೇವಮೀಳತೇ, ಎಂದು ಏಕವಾಕ್ಯತಾಪಕ್ಷದಲ್ಲಿ ಅನ್ವಯ. ದ್ರವಿಣಸಃ ಗ್ರಾವಹಸ್ತಾಸಃ, ಋತ್ವಿಜಃ, ಅಧ್ವರೇ, ಯಜ್ಞೇಷು ಚ ದೇವಮೀಳತೇ, ದ್ರವಿಣೋದಾಃ ಅಗ್ನಿಃ ಸೋಮಂ ಪಿಬತು, ಎಂದೂ, ಗ್ರಾವಹಸ್ತಾಸಃ ಋತ್ವಿಜಃ ಅಧ್ವರೇ ಯಜ್ಞೇಷು ಚ ದೇವಮೀಳತೇ, ದ್ರವಿಣೋದಾಃ ಅಗ್ನಿಃ ದ್ರವಿಣಸಃ ಸೋಮಸ್ಯ ಪಾತಾ ಭವತು ಎಂದೂ ಭಿನ್ನವಾಕ್ಯತಾಪಕ್ಷದಲ್ಲಿ ಅನ್ವಯವು.

**ಗ್ರಾವಹಸ್ತಾಸಃ**— ಗ್ರಾವಯುಕ್ತಾಃ ಹಸ್ತಾಃ ಯೇಷಾಂ ತೇ ಗ್ರಾವಹಸ್ತಾಸಃ ಎಂದು ಬಹುವ್ರೀಹಿಸಮಾಸ. ಗ್ರಾವಹಸ್ತಶಬ್ದದ ಮುಂದೆ ಜಸ್, ಆಜ್ಜಸೇರಸುಕ್ (ಪಾ.ಸೂ. ೭-೧-೫೦) ಎಂಬುದರಿಂದ ಜಸ್ಸಿಗೆ ಅಸುಗಾಗಮ. ಗ್ರಾವಶಬ್ದವು ವೃಷಾದಿಗಣಕ್ಕೆ ಸೇರಿದುದು, ಆದ್ದರಿಂದ ವೃಷಾದೀನಾಂಚ, (ಪಾ.ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತವಾಗುವುದು, ಸಮಾಸಬಂದಮೇಲೆಯೂ ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ, (ಪಾ.ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುವುದು.

**ಅಧ್ವರೇ**— ನ ವಿದ್ಯತೇ ಧ್ವರಃ ಹಿಂಸಾ ಯಸ್ಮಿನ್ ಸಃ ಅಧ್ವರಃ, ಪೂರ್ವಪದಪ್ರಕೃತಿಸ್ವರವನ್ನು ಬಾಧಿಸಿ ನಞ್‌ಸುಭ್ಯಾಂ (ಪಾ.ಸೂ.—೬-೨-೧೭೨) ಎಂಬುದರಿಂದ ಉತ್ತರಪದಕ್ಕೆ ಅಂತೋದಾತ್ತ ಬರುವುದು.

**ಈಳತೇ**— ಈಡ ಸ್ತುತೌ, ಧಾತು. ಅನುದಾತ್ತೇತ್ತು, ಆದ್ದರಿಂದ ಅನುದಾತ್ತಙಿತ ಆತ್ಮನೇಪದಂ, (ಪಾ.ಸೂ. ೧-೩-೧) ಎಂಬುದರಿಂದ ಆತ್ಮನೇಪದ ಬರುವುದು. ಲಟ್-ಪ್ರಥಮಪುರುಷಬಹುವಚನದಲ್ಲಿ ಝ ಬರುವುದು. ಶಪ್ ವಿಕರಣಕ್ಕೆ ಅದಿಪ್ರಭೃತಿಭ್ಯಃ ಶಪಃ (ಪಾ. ಸೂ. ೨-೪-೭೨) ಎಂಬುದರಿಂದ ಲುಕ್. ಆತ್ಮನೇಪದೇಷ್ವನತಃ (ಪಾ.ಸೂ' ೭-೧-೫) ಎಂಬುದರಿಂದ ಝಕಾರಕ್ಕೆ ಅತ್ ಆದೇಶ. ಟಿತ ಆತ್ಮನೇ ಪದಾನಾಂ ಟೇರೇ (ಪಾ.ಸೂ. ೩-೪-೭೯) ಎಂಬುದರಿಂದ ಟಿಗೆ ಏತ್ವ, ಈಡತೇ. ಡಕಾರಕ್ಕೆ ಅಜ್ಮಧ್ಯಸ್ಥಸ್ಯ ಡಕಾರಸ್ಯ—ಎಂಬುದರಿಂದ ಳಕಾರ ॥೭॥

॥ ಸಂಹಿತಾಪಾಠಃ ॥

ದ್ರವಿಣೋದಾ ದದಾತು ನೋ ವಸೂನಿ ಯಾನಿ ಶೃಣ್ವಿರೇ ।
ದೇವೇಷು ತಾ ವನಾಮಹೇ ॥ ೮ ॥

॥ ಪದಪಾಠಃ ॥

ದ್ರವಿಣಃ ಽ ದಾಃ । ದದಾತು । ನಃ । ವಸೂನಿ । ಯಾನಿ । ಶೃಣ್ವಿರೇ ॥
ದೇವೇಷು । ತಾ । ವನಾಮಹೇ ॥ ೮ ॥

॥ ಸಾಯಣಭಾಷ್ಯಂ ॥

ದ್ರವಿಣೋದಾ ದೇವೋ ನೋಽಸ್ಮಭ್ಯಂ ವಸೂನಿ ಧನಾನಿ ದದಾತು, ಯಾನಿ ಧನಾನಿ ಶೃಣ್ವಿರೇ ಹವಿರುಪಯುಕ್ತತ್ವೇನ ಶ್ರೂಯಂತೇ । ತಾ ತಾನಿ ಚ ಸರ್ವಾಣಿ ಧನಾನಿ ದೇವೇಷು ನಿಮಿತ್ತಭೂತೇಷು ವನಾಮಹೇ । ಸಂಭಜಾಮಃ । ಧನೈರ್ದೇವಾನ್ಯಷ್ಟುಂ ತಾನಿ ಸ್ವೀಕುರ್ಮ ಇತ್ಯರ್ಥಃ ॥ ದ್ರವಿಣೋದಾಃ । ಗತಂ । ವಸೂನಿ । ಶೃಸ್ವೃಸ್ನಿಹೀತ್ಯಾದಿನಾ । ಉ. ೧-೧೧ । ಉಪ್ರತ್ಯಯಃ । ನಿದಿತ್ಯನುವೃತ್ತೇರಾದ್ಯುದಾತ್ತಃ । ಶೃಣ್ವಿರೇ । ಶ್ರು ಶ್ರವಣೇ । ಛಂದಸಿ ಲುಙ್‌ಲಙ್‌ಲಿಟ ಇತಿ ವರ್ತಮಾನೇ ಲಿಟ್ । ಝು ಇರೇಚ್ । ಪಾ. ೩-೪-೮೧ । ಛಂದಸ್ಯುಭಯಥೇತಿ ಸಾರ್ವಧಾತುಕತ್ವೇ ವ್ಯತ್ಯಯೇನ ಶ್ನುಃ । ತತ್ಸಂನಿಯೋಗೇನ ಶೃಭಾವಶ್ಚ । ಉವಙಿ ಪ್ರಾಪ್ತೇ ಹುಶ್ನುವೋಃ ಸಾರ್ವಧಾತುಕೇ । ಪಾ. ೬-೪-೮೭ । ಇತಿ ಯಣಾದೇಶಃ । ಚಿತ ಇತ್ಯಂತೋದಾತ್ತತ್ವಂ । ಯದ್ವೃತ್ತಾನ್ನಿತ್ಯಮಿತಿ ನಿಘಾತಪ್ರತಿಷೇಧಃ । ತಾ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ನಲೋಪಃ ಪ್ರಾತಿಪದಿಕಾಂತಸ್ಯ । ಪಾ. ೮-೨-೭ । ಇತಿ ನಲೋಪಃ । ವನಾಮಹೇ । ವನ ಷಣ ಸಂಭಕ್ತೌ । ವ್ಯತ್ಯಯೇನಾತ್ಮನೇಪದಂ ॥

॥ ಪ್ರತಿಪದಾರ್ಥ ॥

ದ್ರವಿಣೋದಾಃ—ಧನಪ್ರದನಾದ ದೇವನು (ಅಗ್ನಿಯು)। ಯಾನಿ—ಯಾವ ಧನಗಳು । ಶೃಣ್ವಿರೇ—ಹವಿಸ್ಸಿಗೆ ಉಪಯುಕ್ತವೆಂದು ಪ್ರಸಿದ್ಧವಾಗಿವೆಯೋ । ತಾ ವಸೂನಿ—ಆ ಧನಗಳನ್ನು । ನಃ— ನಮಗೆ । ದದಾತು—ಕೊಡಲಿ । ತಾ—ಆ ಎಲ್ಲ ಧನಗಳನ್ನೂ । ದೇವೇಷು—ದೇವತೆಗಳ ನಿಮಿತ್ತವಾಗಿ । ವನಾಮಹೇ—ಸ್ವೀಕರಿಸುತ್ತೇವೆ.

॥ ಭಾವಾರ್ಥ ॥

ಯಾಗಾದಿ ದೇವತಾಕಾರ್ಯಗಳಿಗಾಗಿ ನಾವು ಧನವನ್ನಪೇಕ್ಷಿಸುತ್ತೇವೆ. ಈ ಕಾರ್ಯಗಳಿಗಾಗಿ ಪ್ರಸಿದ್ಧವಾದ ಯಾವ ಧನವಿದೆಯೋ ಅದನ್ನೆಲ್ಲ ಧನಪ್ರದನಾದ ಅಗ್ನಿಯು ನಮಗೆ ದಯಪಾಲಿಸಲಿ.

English Translation

May Dravinodas give us riches that may be heard of; we ask them towards the service of the gods.

॥ ವಿಶೇಷವಿಷಯಗಳು ॥

ಯೊನಿ ಶೃಣ್ವಿರೇ—ಯಾವ ಯಾವ ವಿಧವಾದ ಧನಾದ್ಯೈಶ್ವರ್ಯಗಳಿವೆಯೆಂದು ನಾವು ಕೇಳಿರುವೆವೋ ಅಂತಹ ವಸ್ತುಗಳೆಲ್ಲವನ್ನೂ ಎಂದರ್ಥವು. ಇಲ್ಲಿ **ದೇವೇಷು ತಾ ವನಾಮಹೇ** ಎಂದು ಹೇಳಿರುವುದರಿಂದ ಆ ವಸ್ತುಗಳು ದೇವತೆಗಳಿಗೆ ಸಮರ್ಪಿಸುವುದಕ್ಕೆ ಯೋಗ್ಯವಾದವುಗಳಾಗಿರಬೇಕು. ಆದುದರಿಂದ ಹವಿಃಪ್ರದಾನಕ್ಕೆ ಉಪಯುಕ್ತವಾದ ವಸ್ತುಗಳು ಎಂದು ಭಾಷ್ಯಕಾರರು ಹೇಳಿರುವರು.

॥ ವ್ಯಾಕರಣಪ್ರಕ್ರಿಯಾ ॥

**ದ್ರವಿಣೋದಾಃ**—ಪೂರ್ವಮಂತ್ರದಲ್ಲಿ ವ್ಯಾಖ್ಯಾತವಾಗಿರುವುದು.

**ವಸೂನಿ**—ಶೃಸ್ವೃ, ಸ್ನಿಹಿ, ತ್ರಪಿ, ಸಿ, ವಸಿ, ಹನಿ, ಕ್ಲಿದಿ, ಬನ್ಧಿ, ಮನಿಭ್ಯಶ್ಚ (ಉ. ಸೂ. ೧-೧೦) ಎಂಬುದರಿಂದ ವಸ ನಿವಾಸೇ, ಧಾತುವಿನ ಮುಂದೆ ಉ ಪ್ರತ್ಯಯ ಬರುವುದು. ಈ ಸೂತ್ರದಲ್ಲಿ **ಧಾನ್ಯೇನಿತ್** (ಉ. ಸೂ. ೧-೯) ಎಂಬುದರಿಂದ ನಿತ್ ಎಂಬುದು ಅನುವೃತ್ತವಾಗುವುದು. ಆದ್ದರಿಂದ ಉಪ್ರತ್ಯಯವು ನಿತ್ತಾಗುವುದು. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತ ಬರುವುದು.

**ಶೃಣ್ವಿರೇ**-ಶ್ರು ಶ್ರವಣೇ, ಧಾತು. **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್ ಬರುವುದು. ಪ್ರಥಮಪುರುಷ ಬಹುವಚನ ಝ. **ಲಿಟಸ್ತಝಯೋರೇಶಿರೇಚ್** (ಪಾ. ಸೂ. ೩-೪-೮೧) ಎಂಬುದರಿಂದ ಝಗೆ ಇರೇಚ್ ಬರುವುದು. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಸಾರ್ವಧಾತುಕಸಂಜ್ಞೆಯೂ ಇರುವುದು. ಆದ್ದರಿಂದ **ಶ್ರುವಃಶೃಚ** (ಪಾ. ಸೂ. ೩-೧-೭೪) ಶ್ರು ಧಾತುವಿಗೆ ಶೃ ಆದೇಶ ಬರುವುದು. ಶ್ನು ಪ್ರತ್ಯಯವೂ ಸಹ ಬರುವುದು ಎಂಬುದರಿಂದ ಶೃ ಆದೇಶವೂ, ಅದರ ಜತೆಯಲ್ಲಿ ವಿಹಿತವಾಗಿರುವ ಶ್ನು ಪ್ರತ್ಯಯವೂ ಬರುವುದು. ಶೃನು+ಇರೇ. ಈಗ **ಇಕೋಯಣಚಿ** (ಪಾ. ಸೂ. ೬-೧-೭೭) ಎಂಬುದರಿಂದ ಯಣಾದೇಶವು ಪ್ರಾಪ್ತವಾದರೆ ಅದನ್ನು ಬಾಧಿಸಿ **ಅಚಿಶ್ನುಧಾತುಭ್ರುವಾಂಯ್ವೋರಿಯಙುವಙೌ** (ಪಾ. ಸೂ. ೬-೪-೭೭) ಎಂಬುದರಿಂದ ಉವಙಾದೇಶವು ಪ್ರಾಪ್ತವಾಗುವುದು. ಅದನ್ನೂ ಬಾಧಿಸಿ '**ಹುಶ್ನುವೋಸ್ಸಾರ್ವಧಾತುಕೇ**,' (ಪಾ. ಸೂ. ೬-೪-೮೭) ಹುಧಾತು, ಶ್ನು ಪ್ರತ್ಯಯಾಂತವೂ ಅನೇಕಾ

ಚ್ಛವೂ ಆದ ಅಙ್ಗ ಇವುಗಳ ಸಂಯೋಗಪೂರ್ವಕವಲ್ಲದ ಉಕಾರಕ್ಕೆ ಅಜಾದಿಯಾದ ಸಾರ್ವಧಾತುಕಪ್ರತ್ಯಯ ಪರವಾಗಿರುವಾಗ ಯಣ್ ಬರುವುದು ಎಂಬುದರಿಂದ ಯಣಾದೇಶ. **ಋವರ್ಣಾನ್ನಸ್ಯಣತ್ವಂವಾಚ್ಯಮ್** (ಪಾ. ಸೂ. ೮-೪-೧ ವಾ ೧) ಎಂಬುದರಿಂದ ನಕಾರಕ್ಕೆ ಣಕಾರ, ಶೃಣ್ವಿರೇ ಎಂದಾಗುವುದು. ಇರೇಚ್ ಪ್ರತ್ಯಯವು ಚಿತ್ತಾದ್ದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತ ಬರುವುದು. **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ಸರ್ವಾನುದಾತ್ತಕ್ಕೆ ಪ್ರತಿಷೇಧ ಬರುವುದರಿಂದ **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ.

**ತಾ**— ತದ್‌ಶಬ್ದವು ನಪುಂಸಕಲಿಂಗವಾದಾಗ ಅದರ ಮುಂದೆ ಶಸ್. **ತ್ಯದಾದೀನಾಮಃ** ( ಪಾ. ಸೂ. ೭-೨-೧೦೨) ಎಂಬುದರಿಂದ ದಕಾರಕ್ಕೆ ಅಕಾರ, 'ಅತೋಗುಣೇ' (ಪಾ.ಸೂ. ೬-೧-೯೭) ಪರರೂಪ **ಜಶ್ಶಸೋಶ್ಶಿಃ** (ಪಾ. ಸೂ. ೭-೧-೨೦) ನಪುಂಸಕಲಿಂಗವಾದ ಅಂಗದ ಮುಂದೆ ಇರುವ ಜಸ್ ಶಸ್ ಇವುಗಳಿಗೆ ಶಿ ಆದೇಶಬರುವುದು ಎಂಬುದರಿಂದ ಶಸ್‌ಗೆ ಶಿ ಆದೇಶ. **ಶಿಸರ್ವನಾಮಸ್ಥಾನಮ್** (ಪಾ. ಸೂ. ೧-೧-೪೨) ಎಂಬುದರಿಂದ ಶಿಗೆ ಸರ್ವನಾಮಸ್ಥಾನಸಂಜ್ಞೆ ಇರುವುದು **ನಪುಂಸಕಸ್ಯಝಲಚಃ** (ಪಾ. ಸೂ. ೭-೧-೭೨) ಝಲಂತವೂ ಅಜಂತವೂ ಆದ ನಪುಂಸಕಲಿಂಗವಾದ, ಅಂಗಕ್ಕೆ ಸರ್ವನಾಮಸ್ಥಾನ ಪ್ರತ್ಯಯ ಪರದಲ್ಲಿರುವಾಗ ನುಮಾಗಮ ಬರುವುದು ಎಂಬುದರಿಂದ ನುಮಾಗಮ, ತನ್+ ಇ**ಸರ್ವನಾಮಸ್ಥಾನೇ ಚಾಸಂಬುದ್ಧೌ** (ಪಾ. ಸೂ. ೬-೪-೮) ಎಂಬುದರಿಂದ ಉಪಧಾ ದೀರ್ಘ ತಾನ್+ಇ. **ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ. **ನಲೋಪಃ ಪ್ರಾತಿಪದಿಕಾನ್ತಸ್ಯ** (ಪಾ. ಸೂ. ೮-೨-೭) ಎಂಬುದರಿಂದ ನಕಾರಕ್ಕೆ ಲೋಪ. ತಾ ಎಂದಾಗುವುದು. ಇದಕ್ಕೆ ತಾನಿ ಎಂದರ್ಥ.

**ವನಾಮಹೇ**— ವನ, ಷಣ ಸಂಭಕ್ತೌ ಧಾತು. **ವ್ಯತ್ಯಯೋಬಹುಲಮ್** (ಪಾ. ಸೂ. ೩-೧-೮೫) ಎಂಬಲ್ಲಿ 'ಸುಪ್ತಿಙುಪಗ್ರಹ' ಇತ್ಯಾದಿ ಕಾರಿಕೆಯಲ್ಲಿ ಉಪಗ್ರಹ ಎಂಬುದಕ್ಕೆ ಪರಸ್ಮೈಪದ-ಆತ್ಮನೇ ಪದ ಎಂದು ಅರ್ಥವರ್ಣಿಸಲಾಗಿರುವುದು. ಏವಂಚ ಪರಸ್ಮೈಪದಾತ್ಮನೇಪದಗಳಿಗೆ ವ್ಯತ್ಯಯ ಬರುವುದು. ವ್ಯತ್ಯಯ ಪದವು ವಿ- ಅತಿ ಎಂಬ ಎರಡು ಉಪಸರ್ಗಪೂರ್ವಕವಾದ ಇಣ್‌ಗತೌ ಧಾತುವಿನ ಮುಂದೆ ಭಾವಾರ್ಥದಲ್ಲಿ ಣಿಚ್ ಪ್ರತ್ಯಯ ಬಂದು ಸಿದ್ಧವಾಗಿರುವುದು. ಅತಿಕ್ರಮಿಸಿಹೋಗುವಿಕೆ ಎಂದು ಇದರ ಅರ್ಥ. ಪ್ರಕೃತ ಪರಸ್ಮೈಪದವು ಬರುವ ಹಾಗೆ ನಿಮಿತ್ತವಿದ್ದರೆ ಅದನ್ನು ಅತಿಕ್ರಮಿಸಿ ಆತ್ಮನೇಪದವೂ ಆತ್ಮನೇಪದ ನಿಮಿತ್ತವಿದ್ದರೆ ಅದನ್ನು ಅತಿಕ್ರಮಿಸಿ ಪರಸ್ಮೈಪದವೂ, ಸಹ ಕೆಲವೆಡೆಯಲ್ಲಿ ಬರುವುದು ಎಂದು ಏರ್ಪಟ್ಟಿತು. ವನಧಾತುವು ಪರಸ್ಮೈದಿಯಾದರೂ ಅದನ್ನು ಅತಿಕ್ರಮಿಸಿ **ವ್ಯತ್ಯಯೋಬಹುಲಂ** (೩-೧-೮೫) ಎಂಬುದರಿಂದ ಆತ್ಮನೇಪದಬರುವುದು. **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ ॥ ೮ ॥

॥ ಸಂಹಿತಾಪಾಠಃ ॥

ದ್ರವಿಣೋದಾಃ ಪಿಪೀಷತಿ ಜುಹೋತ ಪ್ರ ಚ ತಿಷ್ಠತ ।
ನೇಷ್ಟ್ರಾದೃತುಭಿರಿಷ್ಯತ ॥ ೯ ॥

॥ ಪದಪಾಠಃ ॥

ದ್ರವಿಣಃಽದಾಃ । ಪಿಪೀಷತಿ । ಜುಹೋತ । ಪ್ರ । ಚ । ತಿಷ್ಠತ ।
ನೇಷ್ಟ್ರಾತ್ । ಋತುಽಭಿಃ । ಇಷ್ಯತ ॥ ೯ ॥

॥ ಸಾಯಣಭಾಷ್ಯಂ ॥

ದ್ರವಿಣೋದಾ ದೇವ ಋತುಭಿಃ ಸಹ ನೇಷ್ಟ್ರಾನ್ನೇಷ್ಟೃಸಂಬಂಧಿಪಾತ್ರಾತ್ಪಿಪೀಷತಿ । ಸೋಮಂ ಪಾತುಮಿಚ್ಛತಿ । ತತೋ ಹೇ ಋತ್ವಿಜ ಇಷ್ಯತ । ಹೋಮಸ್ಥಾನೇ ಗಚ್ಛತ । ಗತ್ವಾ ಚ ಜುಹೋತ । ಹೋಮಂ ಕುರುತ । ಹುತ್ವಾ ಪ್ರ ತಿಷ್ಠತ ಚ । ಹೋಮಸ್ಥಾನಾತ್ಸ್ಥಾನಾಂತರಂ ಪ್ರತಿ ಪ್ರಸ್ಥಾನಮಪಿ ಕುರುತ ॥ ದ್ರವಿಣೋದಾಃ । ಗತಂ । ಪಿಪೀಷತಿ । ಪಾ ಪಾನೇ । ಪಾತುಮಿಚ್ಛತೀತಿ ಸನ್ । ಛಾಂದಸ ಈಕಾರಃ । ತಿಙ್ಙತಿಙ ಇತಿ ನಿಘಾತಃ । ಜುಹೋತ । ಲೋಣ್ಮಧ್ಯಮಬಹುವಚನಂ । ತಸ್ಯ ಲಙ್ವದ್ಭಾವಾತ್ತಾದೇಶಃ । ತಸ್ಯ ತಪ್ತನಪ್ತನಥನಾಶ್ಚೇತಿ ತಬಾದೇಶಃ । ತಸ್ಯ ಪಿತ್ತ್ವಾದ್ಗುಣಃ । ಅಭ್ಯಸ್ತಾನಾಮಾದಿರಿತ್ಯನುವೃತ್ತಾವನುದಾತ್ತೇ ಚ । ಪಾ. ೬-೧-೧೯೦ । ಇತ್ಯಾದ್ಯುದಾತ್ತತ್ವೇ ಪ್ರಾಪ್ತೇ ಭೀಹ್ರೀಭೃಹುಮದಜನಧನದರಿದ್ರಾಜಾಗರಾಂ ಪ್ರತ್ಯಯಾತ್ಪೂರ್ವಂ ಪಿತಿ । ಪಾ. ೬-೧-೧೯೨ । ಇತ್ಯೋಕಾರ ಉದಾತ್ತಃ । ತಿಷ್ಠತ । ಷ್ಠಾ ಗತಿನಿವೃತ್ತೌ । ಲೋಣ್ಮಧ್ಯಮಬಹುವಚನಸ್ಯ ಥಸ್ಯ ಲಙ್ವದ್ಭಾವಾತ್ತಾದೇಶಃ । ಶಪಿ ಪಾಘ್ರಾಧ್ಮೇತ್ಯಾದಿನಾ ತಿಷ್ಠಾದೇಶಃ । ಸಮವಪ್ರವಿಭ್ಯಃ ಸ್ಥಃ । ಪಾ. ೧-೩-೨೨ । ಇತ್ಯಾತ್ಮನೇಪದಂ ನ ಭವತಿ । ತತ್ರಾನುವೃತ್ತಸ್ಯ ನಿರ್ದಿಷ್ಟಗ್ರಹಣಸ್ಯಾನಂತರ್ಯಾರ್ಥತ್ವಾತ್ । ಅತ್ರ ಚಶಬ್ದೇನ ವ್ಯವಧಾನಾತ್ತೇ ಪ್ರಾಗ್ಧಾತೋಃ । ಪಾ. ೧-೪-೮೦ । ಇತ್ಯುಪಸರ್ಗತ್ವೇನ ಪ್ರಾಕ್ಪ್ರಯೋಕ್ತವ್ಯಸ್ಯಾಪಿ ಪ್ರಶಬ್ದಸ್ಯ ವ್ಯವಹಿತಾಶ್ಚೇತಿ ಛಂದಸಿ ವ್ಯವಹಿತಪ್ರಯೋಗಃ । ಅತ್ರ ಚಶಬ್ದೋ ಜುಹೋತೇತಿ ಪೂರ್ವೇಣ ಸಹ ಸಮುಚ್ಚಯಾರ್ಥಃ । ನ ಪುನರಿಷ್ಯತೇತ್ಯುತ್ತರೇಣ । ತೇನಾಪ್ರಥಮತ್ವಾಚ್ಚವಾಯೋಗೇ ಪ್ರಥಮಾ । ಪಾ. ೮-೧-೫೯ । ಇತಿ ನಿಷೇಧಾಭಾವಾತ್ತಿಙ್ಙತಿಙ ಇತಿ ನಿಘಾತಃ । ನೇಷ್ಟ್ರಾತ್ । ಪೋತ್ರಾದ್ಯಜ್ಞಂ ಪುನೀತನ । ಋಗ್ವೇ ೧-೧೫-೩। ಇತ್ಯತ್ರ ಪೋತ್ರಶಬ್ದೇನ ಯದುಕ್ತಂ ತದತ್ರ ದ್ರಷ್ಟವ್ಯಂ । ಇಷ್ಯತ । ಇಷ ಗತೌ । ಲೋಣ್ಮಧ್ಯಮಬಹುವಚನಂ ॥

॥ ಪ್ರತಿಪದಾರ್ಥ ॥

ದ್ರವಿಣೋದಾಃ—ಧನಪ್ರದನಾದ ಅಗ್ನಿಯು। ಋತುಭಿಃ—ಋತುದೇವತೆಗಳೊಂದಿಗೆ। ನೇಷ್ಟ್ರಾತ್—ನೇಷ್ಟೃವಿನ ಪಾತ್ರೆಯಿಂದ । ಪಿಪೀಷತಿ—(ಸೋಮರಸವನ್ನು) ಪಾನಮಾಡಲಿಚ್ಛಿಸುತ್ತಾನೆ. (ಆದ್ದರಿಂದ ಎಲೈ ಋತ್ವಿಕ್ಕುಗಳೇ) । ಇಷ್ಯತ—(ಯಜ್ಞಸ್ಥಾನಕ್ಕೆ) ನಡೆಯಿರಿ. । ಜುಹೋತ--ಹೋಮಮಾಡಿ (ಅನಂತರ)। ಪ್ರತಿಷ್ಠ ಚ--ಹೋಮಸ್ಥಾನವನ್ನು ಬಿಟ್ಟು ನಿಮ್ಮ ಸ್ವಸ್ಥಾನಗಳಿಗೆ ತೆರಳಿರಿ.

॥ ಭಾವಾರ್ಥ ॥

ಎಲೈ ಋತ್ವಿಕ್ಕುಗಳೇ, ಧನಪ್ರದನಾದ ಮತ್ತು ದೇವತಾತ್ಮನಾದ ಅಗ್ನಿಯು ನೇಷ್ಟೃವಿನ ಪಾತ್ರೆಯಿಂದ ಸೋಮರಸಪಾನಮಾಡಲು ಅಪೇಕ್ಷಿಸುತ್ತಾನೆ. ಆದುದರಿಂದ ನೀವೆಲ್ಲ ಯಜ್ಞಸ್ಥಾನಕ್ಕೆ ಬಂದು ಹೋಮ ಮಾಡಿ ನಂತರ ಹೊರಡಿರಿ.

English Translation

Dravinodas desires to drink with the Ritu's from the cup of Neshtri; hasten, priests, present the oblation and depart.

॥ ವಿಶೇಷವಿಷಯಗಳು ॥

**ಪಿಪೀಷತಿ**—ಪಾ ಪಾನೇ । ಪಾತುಮಿಚ್ಛತಿ । ಪಾನಮಾಡಬೇಕೆಂದು ಅಪೇಕ್ಷಿಸುತ್ತಾನೆ.

**ನೇಷ್ಟ್ರಾತ್**—ನೇಷ್ಟೃವೆಂಬ ಋತ್ವಿಜನ ಹಸ್ತದಲ್ಲಿರುವ ಪಾತ್ರೆಯಿಂದ ಸೋಮರಸವನ್ನು.

॥ ವ್ಯಾಕರಣಪ್ರಕ್ರಿಯಾ ॥

**ದ್ರವಿಣೋದಾಃ**—ಏಳನೇ ಮಂತ್ರದಲ್ಲಿ ವ್ಯಾಖ್ಯಾತವಾಗಿರುವುದು.

**ಪಿಪೀಷತಿ**—ಪಾ ಪಾನೇ ಧಾತು. ಪಾತುಮಿಚ್ಛತಿ, ಎಂದು ವಿಗ್ರಹ. **ಧಾತೋಃ ಕರ್ಮಣಸ್ಸಮಾನಕರ್ತೃಕಾದಿಚ್ಛಾಯಾಂವಾ** (ಪಾ.ಸೂ. ೩-೧-೭) ಇಷು ಇಚ್ಛಾಯಾಂ ಧಾತು, ಈ ಇಷುಧಾತು ಸಮಾನಕರ್ತೃಕವೂ, ಈ ಇಷುಧಾತುನಿರೂಪಿತಕರ್ಮವಾಚಕವೂ ಆದ ಯಾವ ವ್ಯಾಪಾರವಿದೆಯೋ ಆ ವ್ಯಾಪಾರವಾಚಕವಾದ ಧಾತುವಿನ ಮುಂದೆ ಇಚ್ಛಾರ್ಥದಲ್ಲಿ ಸನ್ ಪ್ರತ್ಯಯ ಬರುವುದು ಎಂದು ಸೂತ್ರಾರ್ಥ. ಇಲ್ಲಿ ಇಚ್ಛಿಸುವವನು ಅಗ್ನಿ. ಈ ಅಗ್ನಿಯು ಇಷು ಧಾತುವಿಗೆ ಕರ್ತೃವು. ಇದೇ ಅಗ್ನಿಯೇ ಪಾ ಧಾತ್ವರ್ಥವಾದ ಗಳಬಿಲಾಧಸ್ಸಂಯೋಗಾನುಕೂಲ ವ್ಯಾಪಾರದಲ್ಲಿಯೂ ಕರ್ತೃವು. ಈ ರೀತಿ ಪಾಧಾತ್ವರ್ಥ ವ್ಯಾಪಾರಕ್ಕೆ ಇಚ್ಛಾಸಮಾನಕರ್ತೃಕತ್ವವು ಇರುವುದು. ಈ ವ್ಯಾಪಾರವು ಇಷು ಧಾತುವಿಗೆ ಕರ್ಮವೂ ಆಗಿರುವುದು. ಆದ್ದರಿಂದ ಇಂತಹ ವ್ಯಾಪಾರವಾಚಕವಾದ ಪಾ ಧಾತುವಿನ ಮುಂದೆ ಇಚ್ಛಾರ್ಥದಲ್ಲಿ ಸನ್ ಬರುವುದು ಪಾ+ಸ, **ಸನ್ಯಙೋಃ**, (ಪಾ. ಸೂ. ೬-೧-೯) ಎಂಬುದರಿಂದ ದ್ವಿತ್ವ ಪಾ ಪಾ+ಸ, **ಹ್ರಸ್ವಃ**, (ಪಾ. ಸೂ. ೭-೪-೫೯) ಎಂಬುದರಿಂದ ಅಭ್ಯಾಸಕ್ಕೆ ಹ್ರಸ್ವ **ಸನ್ಯತಃ**. (ಪಾ ಸೂ. ೭-೪-೭೯) ಎಂಬುದರಿಂದ ಅಭ್ಯಾಸದ ಅಕಾರಕ್ಕೆ ಇತ್ವ, ಪಿಪಾಸತಿ ಎಂದಾಗುವುದು. ಈಗ ಆಕಾರಕ್ಕೆ ಛಾಂದಸವಾಗಿ ಈತ್ವ ಬರುವುದು. **ಆದೇಶಪ್ರತ್ಯಯಯೋಃ**. ( ಪಾ. ಸೂ. ೮-೩-೫೧ ) ಎಂಬುದರಿಂದ ಸಕಾರಕ್ಕೆ ಷತ್ವ ಪಿಪೀಷತಿ ಎಂದು ಸಿದ್ಧವಾಗುವುದು. **ತಿಙ್ಙತಿಙಃ** ( ೮-೧-೨೮) ಎಂಬುದರಿಂದ ಸರ್ವಾನುದಾತ್ತ ಬರುವುದು.

**ಜುಹೋತ**—ಹು ದಾನಾದನಯೋಃ ಜುಹೋತ್ಯಾದಿ ಧಾತು, **ಲೋಟ್**, ಮಧ್ಯಮಪುರುಷ ಬಹುವಚನ ಥ ಆದೇಶ, **ಲೋಟೋ ಲಙ್ವತ್** (ಪಾ. ಸೂ. ೩-೪-೮೫) ಎಂಬುದರಿಂದ ಲಙ್ವದ್ಭಾವವಿರುವುದು, ಆದ್ದರಿಂದ

ತಸ್ಥಸ್ಥಮಿಪಾಂ ತಾಂ ತಂ ತಾಮಃ (ಪಾ. ಸೂ. ೩-೪-೧೦೧) ಎಂಬುದರಿಂದ ಥ ಗೆ ತ ಆದೇಶ. ಇದಕ್ಕೆ ತಪ್ತನ-ಪ್ತನಥನಾಶ್ಚ (ಪಾ. ಸೂ. ೭-೧-೪೫) ಎಂಬುದರಿಂದ ತಪ್ ಆದೇಶ. ಕರ್ತರಿ ಶಪ್ ಎಂಬುದರಿಂದ ಶಪ್ ವಿಕರಣ, ಅದಕ್ಕೆ ಜುಹೋತ್ಯಾದಿಭ್ಯಃ ಶ್ಲುಃ (ಪಾ. ಸೂ. ೨-೪-೭೫) ಎಂಬುದರಿಂದ ಶ್ಲು (ಲೋಪ) ಶ್ಲೌ (ಪಾ. ಸೂ. ೬-೧-೧೦) ಎಂಬುದರಿಂದ ಧಾತುವಿಗೆ ದ್ವಿತ್ವ ಹು-ಹು+ತ ಕುಹೋಶ್ಚುಃ (ಪಾ. ಸೂ. ೭-೪-೬೨) ಘೋಷ, ಸಂವಾರನಾದ ಮಹಾಪ್ರಾಣಪ್ರಯತ್ನಕವಾದ ಹಕಾರಕ್ಕೆ ಇಂತಹ ಝಕಾರ, ಅಭ್ಯಾಸೇಚರ್ಚ (ಪಾ. ಸೂ. ೮-೪-೫೪) ಎಂಬುದರಿಂದ ಝಕಾರಕ್ಕೆ ಜಕಾರ ಜು-ಹು+ತ, ತಬಾದೇಶವು ಪಿತ್ತು. ಆದ್ದರಿಂದ ಸಾರ್ವಧಾತುಕಮಪಿತ್ (ಪಾ. ಸೂ. ೧-೨-೪) ಎಂಬುದರಿಂದ ಙಿತ್ತಾಗುವುದಿಲ್ಲ. ಕ್ಙಿತಿಚ (ಪಾ. ಸೂ. ೧-೧-೫) ಎಂಬುದರಿಂದ ಗುಣನಿಷೇಧಬರುವುದಿಲ್ಲ. ಸಾರ್ವಧಾತುಕಾರ್ಧಧಾತುಕಯೋಃ, (ಪಾ. ಸೂ. ೭-೩-೮೪) ಎಂಬುದರಿಂದ ಗುಣ. ಜುಹೋತ ಎಂದಾಗುವುದು. ತ ಎಂಬ ಲಸ್ಥಾನಿಕವಾದ ಸಾರ್ವಧಾತುಕವು ಪಿತ್ತಾದ್ದರಿಂದ ಅನುದಾತ್ತೌಸುಪ್ಪಿತೌ (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತ. ಅನುದಾತ್ತೇಚ (ಪಾ. ಸೂ. ೬-೧-೧೯೦) ಅಭ್ಯಸ್ತಾನಾಮಾದಿಃ, (ಪಾ. ಸೂ. ೬-೧-೧೮೯) ಎಂಬ ಸೂತ್ರವು ಇಲ್ಲಿ ಅನುವೃತ್ತವಾಗುವುದು. ನ ವಿದ್ಯತೇ ಉದಾತ್ತಃ ಯಸ್ಮಿನ್ ಸಃ, ಅನುದಾತ್ತಃ, ತಸ್ಮಿನ್ ಅನುದಾತ್ತೇ ಎಂದು ವಿಗ್ರಹ, ಯಾವ ಲಕಾರಸ್ಥಾನದಲ್ಲಿ ಬಂದ ಸಾರ್ವಧಾತುಕಪ್ರತ್ಯಯದಲ್ಲಿ ಉದಾತ್ತವಿರುವುದಿಲ್ಲವೋ ಅಂತಹ ಸಾರ್ವಧಾತುಕವು ಪರದಲ್ಲಿದ್ದರೆ ಅಭ್ಯಸ್ತದ ಆದಿಯು ಉದಾತ್ತವಾಗುವುದು ಎಂಬುದರಿಂದ ಆದ್ಯುದಾತ್ತವು ಪ್ರಾಪ್ತವಾಗುವುದು, ಆದರೆ ಇದನ್ನು ಬಾಧಿಸಿ ಭೀ, ಹ್ರೀ, ಭೃ ಹು ಮದ ಜನ ಧನ ದರಿದ್ರಾ ಜಾಗರಾಂ ಪ್ರತ್ಯಯಾತ್ಪೂರ್ವಂ ಪಿತಿ ( ಪಾ. ಸೂ. ೬-೧-೧೯೨ ) ಞಿಭೀ ಭಯೇ, ಹ್ರೀ ಲಜ್ಜಾಯಾಂ, ಡುಭೃಞ್ ಧಾರಣಪೋಷಣಯೋಃ, ಹು ದಾನಾದನಯೋಃ, ಮದೀ ಹರ್ಷೇ ಇದು ದಿವಾದಿಯಾದರೂ ಛಾಂದಸಪ್ರಕ್ರಿಯೆಯಿಂದ ಶಪ್‌ಗೆ ಶ್ಲು ಬರುವುದು. ಜನ ಜನನೇ, ಧನ ಧಾನ್ಯೇ, ದರಿದ್ರಾ ದುರ್ಗತೌ, ಜಾಗೃ ನಿದ್ರಾಕ್ಷಯೇ. ದರಿದ್ರಾ, ಜಾಗೃ ಧಾತುಗಳಿಗೆ ಜಕ್ಷಿತ್ಯಾದಯಃ ಷಟ್ ( ಪಾ. ಸೂ. ೬-೧-೬ ) ಜಕ್ಷ ಧಾತು ಅದರ ಮುಂದಿರುವ ಆರು ಧಾತುಗಳೂ ಸಹ ಅಭ್ಯಸ್ತಸಂಜ್ಞೆಯನ್ನು ಹೊಂದುವುವು ಎಂಬುದರಿಂದ ಅಭ್ಯಸ್ತಸಂಜ್ಞೆ ಇರುವುದು, ಮಿಕ್ಕವುಗಳಿಗೆ ಉಭೇ ಅಭ್ಯಸ್ತಂ (ಪಾ. ಸೂ. ೬-೧-೫) ಎಂಬುದರಿಂದ ಅಭ್ಯಸ್ತಸಂಜ್ಞೆ ಇರುವುದು, ಅಭ್ಯಸ್ತಸಂಜ್ಞೆಯನ್ನು ಹೊಂದಿರುವ ಭೀ ಮೊದಲಾದ ಧಾತುಗಳಿಗೆ ಪಕಾರೇತ್ಸಂಜ್ಞಕವಾದ ಲಸ್ಥಾನಿಕಸಾರ್ವಧಾತುಕವು ಪರದಲ್ಲಿದ್ದರೆ ಪ್ರತ್ಯಯದ ಹಿಂದೆ ಇರುವ ವರ್ಣವು ಉದಾತ್ತವಾಗುವುದು ಎಂಬುದರಿಂದ, ತ ಪ್ರತ್ಯಯದ ಹಿಂದಿರುವ ಓಕಾರವು ಉದಾತ್ತವಾಗುವುದು.

ತಿಷ್ಠತ— ಷ್ಠಾ ಗತಿನಿವೃತ್ತೌ ಧಾತು. ಧಾತ್ವಾದೇಃ ಷಃ ಸಃ (ಪಾ. ಸೂ. ೬-೧-೬೪) ಎಂಬುದರಿಂದ ಷಕಾರಕ್ಕೆ ಸಕಾರ. ಷ್ಟುತ್ವದಿಂದ ಬಂದ ಠಕಾರಕ್ಕೆ ನಿವೃತ್ತಿ ಸ್ಥಾ ಎಂದಿರುವುದು. ಇದರ ಮುಂದೆ ಲೋಟ್ ಮಧ್ಯಮಪುರುಷ ಬಹುವಚನ, ಥ-ಸ್ಥಾ+ಥ ಲೋಟೋಲಙ್ವತ್ ( ಪಾ. ಸೂ. ೩-೪-೮೫) ಎಂಬುದರಿಂದ ಲಙ್ವದ್ಭಾವ. ತಸ್ಥಸ್ಥಮಿಪಾಂತಾಂತಂತಾಮಃ ( ಪಾ. ಸೂ. ೩-೪-೧೦೧) ಎಂಬುದರಿಂದ ಥ ಗೆ ತ ಆದೇಶ, ಕರ್ತರಿಶಪ್ (ಪಾ. ಸೂ. ೩-೧-೬೮) ಎಂಬುದರಿಂದ ಶಪ್+ಸ್ಥಾ+ಅ+ತ ಪಾಘ್ರಾಧ್ಮಾಷ್ಠಾ—, (ಪಾ. ಸೂ. ೭-೩-೭೮) ಇತ್ಯಾದಿ ಸೂತ್ರದಿಂದ ಸ್ಥಾಗೆ ತಿಷ್ಠಾದೇಶ ತಿಷ್ಠತ ಎಂದಾಗುವುದು, ಸಮವಪ್ರವಿಭ್ಯಸ್ಥಃ (ಪಾ. ಸೂ. ೧-೩-೨೨) ಸಂ ಅವ, ಪ್ರ, ವಿ, ಈ ಉಪಸರ್ಗಗಳ ಮುಂದೆ ಇರುವ ಸ್ಥಾ ಧಾತುವಿನ ಮುಂದೆ ಇರುವ ಲಕಾರಸ್ಥಾನದಲ್ಲಿ ಆತ್ಮನೇಪದ ಬರುವುದು ಎಂಬುದರಿಂದ ಇಲ್ಲಿ ಉಪಸರ್ಗವಿದ್ದರೂ ಆತ್ಮನೇಪದ ಬರುವುದಿಲ್ಲ. ಏಕೆಂದರೆ ಇಲ್ಲಿ ಸಮವಪ್ರವಿಭ್ಯಃ ಎಂದು ಪಂಚಮೀ ನಿರ್ದೇಶವಿರುವುದು. ಆದ್ದರಿಂದ ತಸ್ಮಾದಿತ್ಯುತ್ತರಸ್ಯ (ಪಾ. ಸೂ. ೧-೧-೬೭)

ಕಾರ್ಯವಿಧಾಯಕಶಾಸ್ತ್ರದಲ್ಲಿ ಪಂಚಮ್ಯಂತವನ್ನು ಉಚ್ಚರಿಸಿ ವಿಧಿಸುವ ಕಾರ್ಯವು ಅವ್ಯವಹಿತಪರದಲ್ಲಿರುವುದಕ್ಕೆ ಬರುವುದು ಎಂದು ಈ ಪರಿಭಾಷೆಯ ಅರ್ಥ. ಈ ಪರಿಭಾಷೆಯು ಸಮಾದಿ ಉಪಸರ್ಗಗಳಿಗೆ ಅವ್ಯವಹಿತಪರದಲ್ಲಿ ಸ್ಥಾಧಾತುವಿದ್ದರೆ ಆತ್ಮನೇ ಪದವನ್ನು ವಿಧಿಸುವುದು. ಇಲ್ಲಿ ಪ್ರ ಚ ತಿಷ್ಠತ ಎಂದು ಮಧ್ಯೇ ಚ ಶಬ್ದದಿಂದ ವ್ಯವಧಾನವಿರುವುದು. ಆದ್ದರಿಂದ ಆತ್ಮನೇಪದ ಬರುವುದಿಲ್ಲ.

**ಪ್ರ**—ಎಂಬುದು ಉಪಸರ್ಗ. ಆದ್ದರಿಂದ **ತೇಪ್ರಾಗ್ಧಾತೋಃ** (ಪಾ.ಸೂ. ೧-೪-೮೦) ಗತ್ಯುಪಸರ್ಗಗಳನ್ನು ಧಾತುವಿನ ಅವ್ಯವಹಿತ ಪೂರ್ವದಲ್ಲಿ ಪ್ರಯೋಗಿಸಬೇಕು ಎಂಬುದರಿಂದ, ಧಾತುವಿಗೆ ಅವ್ಯವಹಿತಪೂರ್ವ್ವದಲ್ಲಿಯೇ ಯದ್ಯಪಿ ಪ್ರವು ಪ್ರಯುಕ್ತವಾಗಬೇಕು. ಆದರೂ **ವ್ಯವಹಿತಾಶ್ಚ** (ಪಾ.ಸೂ. ೧-೪-೮೨) ಛಂದಸ್ಸಿನಲ್ಲಿ ವ್ಯವಹಿತವಾಗಿಯೂ ಗತ್ಯುಪಸರ್ಗಗಳಿಗೆ ಪ್ರಯೋಗ ಬರುವುದು ಎಂಬುದರಿಂದ ಇಲ್ಲಿ ವ್ಯವಹಿತವಾಗಿ ಪ್ರವು ಪ್ರಯುಕ್ತವಾಗಿರುವುದು. ಇಲ್ಲಿ ಚಶಬ್ದವು ಜುಹೋತ, ಪ್ರತಿಷ್ಠತ ಚ, ಹೋಮವಮಾಡಿರಿ, ಹೋಮವಮಾಡಿ ಸ್ಥಾನಾಂತರಕ್ಕೂ ಹೋಗಿ ಎಂದು ಪೂರ್ವಕ್ರಿಯೆಯೊಂದಿಗೆಸಮುಚ್ಚಯವನ್ನು ಬೋಧಿಸುವುದು. ಇಷ್ಯತ ಎಂಬುದರೊಂದಿಗೆ ಅನ್ವಯಿಸಿ ಪ್ರತಿಷ್ಠತ, ಇಷ್ಯತ ಚ ಎಂದು ಸಮುಚ್ಚಯವನ್ನು ಬೋಧಿಸುವುದಿಲ್ಲ. ಆದ್ದರಿಂದ ಚಶಬ್ದಾನ್ವಿತಕ್ರಿಯೆಯನ್ನು ಅಪೇಕ್ಷಿಸಿ ತಿಷ್ಠತ ಎಂಬುದು ಪ್ರಥಮತಿಙ್ವಿಭಕ್ತಿಯಾಗುವುದಿಲ್ಲ. ಏವಂಚ **ಚವಾಯೋಗೇ ಪ್ರಥಮಾ** (ಪಾ. ಸೂ. ೮-೧-೫೯) ಚ ವಾ ಶಬ್ದದಿಂದ ಯೋಗವಿದ್ದರೆ ಮೊದಲನೆಯ ತಿಙಂತವು ಅನುದಾತ್ತವಾಗುವುದಿಲ್ಲ ಎಂಬುದರಿಂದ ಅನುದಾತ್ತಕ್ಕೆ ನಿಷೇಧಬರುವುದಿಲ್ಲ. **ತಿಙ್ಙತಿಙಃ** ಎಂಬುದರಿಂದ ಸರ್ವಾನುದಾತ್ತ ಬರುವುದು.

**ನೇಷ್ಟ್ರಾತ್**—**ಪೋತ್ರಾದೃತ್ವಿಜ್ಞಂ ಪುನೀತನ** (ಋ. ಸಂ. ೧-೧-೧೫-೨) ಎಂಬ ಮಂತ್ರದಲ್ಲಿ ಪೋತ್ರ ಶಬ್ದಕ್ಕೆ ಹೇಳಿರುವಂತೆ ಇಲ್ಲಿಯೂ ಪ್ರಕ್ರಿಯೆಯನ್ನು ಹೇಳಿಕೊಳ್ಳಬೇಕು.

**ಇಷ್ಯತ**—ಇಷ ಗತೌ ದಿವಾದಿ, ಲೋಟ್‌ಮಧ್ಯಮಪುರುಷಬಹುವಚನ ಥ ಆದೇಶ. **ಲೋಟೋಲಙ್ವತ್** (ಪಾ. ಸೂ. ೩-೪-೮೫ ) ಎಂಬುದರಿಂದ ಲಙ್ವದ್ಭಾವ **ತಸ್ಥಸ್ಥಮಿಪಾಂತಾಂತಂತಾಮಃ** (ಪಾ. ಸೂ. ೩-೪-೧೦೧) ಎಂಬುದರಿಂದ ಥಗೆ ತ ಆದೇಶ ದಿವಾದಿಭ್ಯಃಶ್ಯನ್ ಎಂಬುದರಿಂದ ಶ್ಯನ್ ವಿಕರಣ. ಇಷ್ಯತ ಎಂದಾಗುವುದು. **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ ಬರುವುದು ॥ ೯ ॥

॥ ಸಂಹಿತಾಪಾಠಃ ॥

ಯತ್ತ್ವಾ ತುರೀಯಮೃತುಭಿರ್ದ್ರವಿಣೋದೋ ಯಜಾಮಹೇ ।
ಅಧ ಸ್ಮಾ ನೋ ದದಿರ್ಭವ ॥ ೧೦ ॥

॥ ಪದಪಾಠಃ ॥

ಯತ್ । ತ್ವಾ । ತುರೀಯಂ । ಋತುऽಭಿಃ । ದ್ರವಿಣಃऽದಃ । ಯಜಾಮಹೇ ।
ಅಧ । ಸ್ಮ । ನಃ । ದದಿಃ । ಭವ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ದ್ರವಿಣೋದೋ ದೇವ ಯದ್ಯಸ್ಮಾತ್ಕಾರಣಾದೃತುಭಿಃ ಸಹ ತ್ವಾಂ ಯಜಾಮಹೇ । ಅಧೇತ್ಯಯಂ ನಿಪಾತಸ್ತಚ್ಛಬ್ದಾರ್ಥಃ । ತಸ್ಮಾತ್ಕಾರಣಾನ್ನೋಽಸ್ಮಭ್ಯಂ ದದಿರ್ಧನಸ್ಯ ದಾತಾ ಭವ ಸ್ಮ । ಅವಶ್ಯಂ ಭವ । ತುರೀಯಂ ಚತುರ್ಣಾಂ ಪೂರಣಂ ॥ ತುರೀಯಂ । ಚತುರಶ್ಛಯತಾವಾದ್ಯಕ್ಷರಲೋಪಶ್ಚ । ಪಾ. ೫-೨-೫೧-೧ । ಇತಿ ಛಪ್ರತ್ಯಯಃ । ತಸ್ಯ ಪ್ರತ್ಯಯಸ್ವರೇಣೋದಾತ್ತಾತ್ಪ್ರಾಗೇವಾಯನೇಯೀನೀಯಿಯಃ ಫಢಖಛಘಾಂ ಪ್ರತ್ಯಯಾದೀನಾಮಿತ್ಯಾದಿನಾ । ಪಾ- ೭-೧-೨ । ಈಯಾದೇಶಃ । ಆಯನಾದಿಷೂಪದೇಶಿವದ್ವಚನಂ ಸ್ವರಸಿದ್ಧ್ಯರ್ಥಂ । ಪಾ. ೭-೧-೨-೧ । ಇತಿ ವಚನಾತ್ಕೃತ ಆದೇಶೇ ಪ್ರತ್ಯಯಸ್ವರೇಣೇಕಾರ ಉದಾತ್ತಃ । ದ್ರವಿಣೋದಃ । ಉಕ್ತಂ । ಪಾದಾದಿತ್ವಾದಾಮಂತ್ರಿತಾದ್ಯುದಾತ್ತತ್ವಂ । ಯಜಾಮಹೇ । ಅತ್ರ ಶಪಃ ಪಿತ್ತ್ವೇನ ತಿಙಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರ ಏವ । ಪೂರ್ವಸ್ಯಾಮಂತ್ರಿತಸ್ಯಾವಿದ್ಯಮಾನವತ್ತ್ವಾದ್ಯದ್ವೃತ್ತಯೋಗಾದ್ವಾ ನ ನಿಘಾತಃ । ವ್ಯವಹಿತಯೋಗೇಽಪಿ ಹಿ ಸ ನಿಷೇಧ ಇತ್ಯುಕ್ತಂ । ಅಧ । ಛಾಂದಸೋ ಧಕಾರಃ । ಸ್ಮ । ಚಾದಿರನುದಾತ್ತಃ । ಸಂಹಿತಾಯಾಂ ನಿಪಾತಸ್ಯ ಚೇತಿ ದೀರ್ಘಃ । ದದಿಃ । ಡುದಾಞ್‌ ದಾನೇ । ಆದೃಗಮಹನಜನಃ ಕಿಕಿನೌ ಲಿಟ್ ಚ ।ಪಾ. ೩-೨-೧೭೧ । ಇತಿ ಕಿಪ್ರತ್ಯಯಃ । ಲಿಡ್ವದ್ಭಾವಾದ್ದ್ವಿರ್ವಚನಾದಿ । ಆತೋ ಲೋಪ ಇಟಿ ಚ । ಪಾ. ೬-೪-೬೪ । ಇತ್ಯಾಕಾರಲೋಪಃ । ಪ್ರತ್ಯಯಸ್ವರಃ ॥

॥ ಪ್ರತಿಪದಾರ್ಥ ॥

ದ್ರವಿಣೋದಃ— ಎಲೈ ಧನಪ್ರದನಾದ ಅಗ್ನಿಯೇ । ಯತ್— ಯಾವಕಾರಣದಿಂದ । ಋತುಭಿಃ— ಋತುದೇವತೆಗಳೊಂದಿಗೆ । ತುರೀಯಂ— ನಾಲ್ಕನೆಯ ಸಲ । ತ್ವಾ— ನಿನ್ನನ್ನು । ಯಜಾಮಹೇ— ಪೂಜಿಸುತ್ತೇವೋ । ಅಧ— ಆದ್ದರಿಂದ । ನಃ— ನಮಗೆ। ದದಿಃ— ಧನಪ್ರದನಾಗಿ । ಭವ ಸ್ಮ— ಖಂಡಿತವಾಗಿಯೂ ಆಗು.

॥ ಭಾವಾರ್ಥ ॥

ಎಲೈ ಅಗ್ನಿಯೇ ನಾವು ಧನಾಕಾಂಕ್ಷಿಗಳಾಗಿ ಋತುದೇವತೆಗಳೊಂದಿಗೆ ನಾಲ್ಕನೆಯವನಾದ ನಿನ್ನನ್ನು ಪೂಜಿಸುತ್ತಿದ್ದೇವೆ. ಆದುದರಿಂದ ನೀನು ಖಂಡಿತ ನಮ್ಮ ಪೂಜೆಯನ್ನು ಸ್ವೀಕರಿಸಿ ಧನಪ್ರದನಾಗು.

## English Translation.

Dravinodas, Since we adore you for the fourth time along with the Ritus ; therefore be a giver (of riches) to us.

॥ ವಿಶೇಷ ವಿಷಯಗಳು ॥

ತುರೀಯಂ— ನಾಲ್ಕನೆಯ ಸಲ. ಈ ಸೂಕ್ತದಲ್ಲಿ ದ್ರವಿಣೋದಾ ಎಂಬ ಅಗ್ನಿಯನ್ನು ಸ್ತುತಿಸುವ ಋಕ್ಕುಗಳು ನಾಲ್ಕು ಇವೆ (೭ ರಿಂದ ೧೦ ವರೆಗಿನ ಋಕ್ಕುಗಳು) ಅವುಗಳಲ್ಲಿ ಇದು ನಾಲ್ಕನೆಯದು. ಆದುದರಿಂದ ಇಲ್ಲಿ ತುರೀಯಂ ಎಂದರೆ ನಾಲ್ಕನೆಯ ಸಲ ಅಥವಾ ನಾಲ್ಕನೆಯ ಋಕ್ಕಿನಿಂದ ಸ್ತುತಿಸುತ್ತೇವೆ ಎಂಬರ್ಥವು,

॥ ವ್ಯಾಕರಣಪ್ರಕ್ರಿಯಾ ॥

**ತುರೀಯಂ**— ಚತುರ್ಣಾಂ ಪೂರಣಂ, ಎಂದು ವಿಗ್ರಹ. **ಚತುರಶ್ಛಯತಾವಾದ್ಯಕ್ಷರಲೋಪಶ್ಚ** (ಪಾ. ಸೂ. ೫-೨-೫೧) ಪೂರಣಾರ್ಥದಲ್ಲಿ ಚತುರ್ ಶಬ್ದದ ಮುಂದೆ ಪರ್ಯಾಯದಿಂದ ಛ-ಯತ್ ಪ್ರತ್ಯಯಗಳು ಬರುವುವು, ಅಲ್ಲದೆ ಮೊದಲನೆಯ ಅಕ್ಷರಕ್ಕೆ ಲೋಪವೂ ಬರುವುದು ಎಂಬುದರಿಂದ ಚತುರ್ ಶಬ್ದದ ಮುಂದೆ ಛ ಪ್ರತ್ಯಯ ಚತುರ್+ಛ ಈ ವಾರ್ತಿಕದಿಂದಲೇ ಆದ್ಯಕ್ಷರಕ್ಕೆ ಲೋಪ, ಅಕ್ಷರವೆಂದರೆ ಅಚ್ ಸಹಿತವಾದ ಮೊದಲನೆಯ ವ್ಯಂಜನ, ವ್ಯಂಜನಸಹಿತವಾದ ಆದಿಭೂತವಾದ ಅಚ್ಚು ಎಂದು ಅರ್ಥಹೇಳಬಾರದು. ಹೀಗೆ ಅರ್ಥವನ್ನು ಹೇಳಿದರೆ 'ನಟಭಾರ್ಯಾವದ್ವ್ಯಂಜನಾನಿಭವನ್ತಿ' ಎಂಬ ನ್ಯಾಯದಿಂದ ಪೂರ್ವಪರಗಳಲ್ಲಿರುವ ವ್ಯಂಜನಸಹಿತವಾದ ಆದಿಭೂತವಾದ ಅಚ್ಚು ಎಂದು ಅರ್ಥವೇರ್ಪಡುವುದು. ಆಗ ಚತುರ್ ಎಂಬಲ್ಲಿ ಚತ್‌ಗೆ ಲೋಪಬರಬೇಕಾಗುವುದು. ಆದ್ದರಿಂದ ಅಚ್ ಸಹಿತವಾದ ಮೊದಲನೆಯ ವ್ಯಂಜನವೆಂದೇ ಆದ್ಯಕ್ಷರ ಎಂಬುದಕ್ಕೆ ಅರ್ಥ. ಏವಂಚ ಚ ಶಬ್ದಕ್ಕೆ ಲೋಪ. ತುರ್+ಛ **ಆಯನೇಯೀನೀಯಿಯಃ ಫಢಖಛಘಾಂ ಪ್ರತ್ಯಯಾದೀನಾಮ್**... **ಆಯನ್ನಾದಿಷೂಪದೇಶಿವದ್ವಚನಂಸ್ವರಸಿದ್ಧ್ಯರ್ಥಮ್** (ಪಾ. ವಾ. ೭-೧-೨-೧) ಎಂದು ಆದ್ಯುದಾತ್ತಶ್ಚ ಎಂಬುದರಿಂದ ಆದ್ಯುದಾತ್ತ ಬರುವುದಕ್ಕಿಂತಲೂ ಮುಂಚೆಯೇ **ಆಯನೇಯೀ** (ಪಾ. ಸೂ. ೭-೧-೨) ಎಂಬುದರಿಂದ ಛ ಪ್ರತ್ಯಯಕ್ಕೆ ಈಯಾದೇಶ, ಈ ಆದೇಶ ಬಂದಮೇಲೆ ಪ್ರತ್ಯಯಸ್ವರದಿಂದ ಈಯ ಎಂಬುದರ ಈಕಾರವು ಉದಾತ್ತವಾಗುವುದು.

**ದ್ರವಿಣೋದಃ**—೭ನೇ ಮಂತ್ರದಲ್ಲಿ ಇದರ ಪ್ರಕ್ರಿಯೆಯು ಉಪಪಾದಿತವಾಗಿರುವುದು. ಇಲ್ಲಿ ದ್ರವಿಣೋದಃ ಎಂಬುದು ಸಂಬೋಧನ ಪ್ರಥಮೈಕವಚನಾಂತ. ಆದ್ದರಿಂದ ಆಮನ್ತ್ರಿತ. ಇದು ಪಾದದ ಆದಿಯಲ್ಲಿರುವುದರಿಂದ **ಆಮನ್ತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ಅನುದಾತ್ತ ಬರುವುದಿಲ್ಲ. ಆರನೇ ಅಧ್ಯಾಯದ **ಆಮನ್ತ್ರಿತಸ್ಯಚ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತ ಬರುವುದು.

**ಯಜಾಮಹೇ** — ಯಜದೇವಪೂಜಾದೌ, ಲಟ್. ಆತ್ಮನೇಪದ ಉತ್ತಮಪುರುಷಬಹುವಚನ ಮಹಿಙ್ **ಕರ್ತರಿಶಪ್** (ಪಾ ಸೂ. ೩-೧-೬೮) ಯಜ್+ಅ+ಮಹಿ. **ಟಿತ ಆತ್ಮನೇ ಪದಾನಾಂಟೇರೇ** (ಪಾ.ಸೂ. ೩-೪-೭೯) ಎಂಬುದರಿಂದ ಟಿಗೆ ಏತ್ವ. **ಅತೋದೀರ್ಘೋಯಞಿ** (ಪಾ. ಸೂ. ೭-೩-೧೦೧) ಎಂಬುದರಿಂದ ದೀರ್ಘ, ಯಜಾಮಹೇ ಎಂದಾಗುವುದು. ಇಲ್ಲಿ ಶಪ್ ಪಿತ್, ಆದ್ದರಿಂದ **ಅನುದಾತ್ತೌಸುಪ್ಪಿತೌ** (ಪಾ. ಸೂ. ೩೧೪) ಎಂಬುದರಿಂದ ಅನುದಾತ್ತ. ಮಹೇ ಎಂಬ ಲಸಾರ್ವಧಾತುಕವು ಶಪ್ ಎಂಬ ಅದುಪದೇಶದ ಮುಂದೆ ಇರುವುದು. ಆದ್ದರಿಂದ **ತಾಸ್ಯನುದಾತ್ತೇತ್**-( ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತ. ಏವಂಚ ಧಾತುಸ್ವರವೇ ನಿಲ್ಲುವುದು, ದ್ರವಿಣೋದಃ ಎಂಬ ಪೂರ್ವಾಮಂತ್ರಿತವು **ಆಮನ್ತ್ರಿತಂ ಪೂರ್ವಮವಿದ್ಯಮಾನವತ್** (ಪಾ. ಸೂ. ೮-೧-೭೨) ಎಂಬುದರಿಂದ ಅವಿದ್ಯಮಾನವದ್ಭಾವವನ್ನು ಹೊಂದುವುದು. ಆದ್ದರಿಂದ ಯಜಾಮಹೇ ಎಂಬುದು ಪಾದಾದಿಗತವಾಗುವುದರಿಂದ **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ. ಅಥವಾ **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ಪ್ರತಿಷೇಧ ಬರುವುದು. **ಪೂಜಾನಾತ್ಪೂಜಿತ**- (ಪಾ. ಸೂ. ೮-೧-೬೭) ಎಂಬಲ್ಲಿ ಪುನಃ ಪೂಜಿತ ಗ್ರಹಣವಿರುವುದರಿಂದ ' ಅತ್ರ ಪ್ರಕರಣೇ ಪಂಚಮೀನಿರ್ದೇಶೇಽಪಿ ನಾನಂತರ್ಯಮಿಷ್ಯತೇ, ಎಂದು ಜ್ಞಾಪಿತವಾಗಿರುವುದು. ಎಂದು ಹಿಂದೆಯೇ ಉಪಪಾದಿತವಾಗಿದೆ. ಆದ್ದರಿಂದ ಯತ್‌ಶಬ್ದಕ್ಕೆ ವ್ಯವಹಿತಯೋಗವಿದ್ದರೂ ಯದ್ವೃತ್ತಾನ್ನಿತ್ಯಮ್ ಎಂಬ ಪ್ರತಿಷೇಧ ಬರಲು ತಡೆ ಇಲ್ಲ.

**ಅಥ**—ಅಥ ಎಂಬುದು ನಿಪಾತ, ಥಕಾರಕ್ಕೆ ಛಾಂದಸವಾಗಿ ಧಕಾರ. **ನಿಪಾತಾ ಆದ್ಯುದಾತ್ತಾಃ** (ಫಿ. ಸೂ. ೮೦ ) ಎಂಬುದರಿಂದ ಆದ್ಯುದಾತ್ತ.

**ಸ್ಮ**—ಚಾದಯೋಽನುದಾತ್ತಾಃ (ಫಿ. ಸೂ. ೮೪ )ಎಂಬುದರಿಂದ ಅನುದಾತ್ತ. ಸಂಹಿತಾ ಕಾಲದಲ್ಲಿ **ನಿಪಾತಸ್ಯಚ** (ಪಾ. ಸೂ. ೬-೩-೧೩೬) ಎಂಬುದರಿಂದ ದೀರ್ಘ.

**ದದಿಃ**—ಡುದಾಞ್ ದಾನೇ ಧಾತು. ಇದರ ಮುಂದೆ **ಆದೃಗಮಹನಃಕಿಕಿನೌಲಿಟ್ಚ** (ಪಾ. ಸೂ. ೩-೨-೧೭೧) ಆಕಾರಾಂತ, ಋಕಾರಾಂತ, ಧಾತುಗಳು ಗಮಾದಿ ಧಾತುಗಳು ಇವುಗಳ ಮುಂದೆ ಕಿ- ಕಿನ್ ಎಂಬ ಪ್ರತ್ಯಯಗಳು ಬರವುವು- ಅವು ಲಿಟ್ಟಿನಂತೆಯೂ ಆಗುವುವು ಎಂಬುದರಿಂದ ಆಕಾರಾಂತವಾದ ದಾ ಧಾತುವಿನ ಮುಂದೆ ಕಿ ಪ್ರತ್ಯಯ. ಇದು ಲಿಟ್ಟಿನಂತೆ ಆಗುವುದರಿಂದ **ಲಿಟಿಧಾತೋರನಭ್ಯಾಸಸ್ಯ** (ಪಾ. ಸೂ. ೬-೧-೮) ಎಂಬುದರಿಂದ ದ್ವಿತ್ವ, ಹ್ರಸ್ವಃ (ಪಾ. ಸೂ. ೭-೪-೫೯) ಎಂಬುದರಿಂದ ಹ್ರಸ್ವ ದ+ದಾ+ಇ **ಆತೋಲೋಪ-ಇಟಿಚ** (ಪಾ. ಸೂ. ೬-೪-೬೪) ಎಂಬುದರಿಂದ ಆಕಾರಕ್ಕೆ ಲೋಪಬರುವುದು, ದದಿ ಎಂದು ಆಗುವುದು. ಇದು ಪ್ರತ್ಯಯಸ್ವರದಿಂದ ಅಂತೋದಾತ್ತವಾಗುವುದು ॥ ೧೦ ॥

॥ ಸಂಹಿತಾಪಾಠಃ ॥

ಅಶ್ವಿನಾ ಪಿಬತಂ ಮಧು ದೀದ್ಯಗ್ನೀ ಶುಚಿವ್ರತಾ ।

ಋತುನಾ ಯಜ್ಞವಾಹಸಾ ॥ ೧೧ ॥

॥ ಪದಪಾಠಃ ॥

ಅಶ್ವಿನಾ । ಪಿಬತಂ । ಮಧು । ದೀದ್ಯಗ್ನೀ ಇತಿ ದೀದಿಽಅಗ್ನೀ । ಶುಚಿಽವ್ರತಾ ॥

ಋತುನಾ । ಯಜ್ಞಽವಾಹಸಾ ॥ ೧೧ ॥

॥ ಸಾಯಣಭಾಷ್ಯಂ ॥

**ಹೇ ಅಶ್ವಿನೌ ಮಧು ಮಾಧುರ್ಯೋಪೇತಂ ಸೋಮಂ ಪಿಬತಂ । ಕೀದೃಶೌ । ದೀದ್ಯಗ್ನೀ ದ್ಯೋತಮಾನಾಹವನೀಯಾದ್ಯಗ್ನಿಯುಕ್ತೌ ಶುಚಿವ್ರತಾ ಶುದ್ಧಕರ್ಮಾಣೌ ಋತುನಾ ಋತುದೇವತಯಾ ಸಹ ಯಜ್ಞವಾಹಸಾ ಯಜ್ಞಸ್ಯ ನಿರ್ವಾಹಕೌ ॥ ಅಶ್ವಿನಾ । ಸಂಬೋಧನದ್ವಿವಚನಸ್ಯ ಸುಪಾಂ ಸುಲು-ಗಿತ್ಯಾಕಾರಃ । ಆಮಂತ್ರಿತಾದ್ಯುದಾತ್ತಃ । ಪಿಬತಂ । ಶಪಃ ಪಿತ್ತ್ವಾದನುದಾತ್ತತ್ವಂ । ತಿಙಶ್ಚ ಲಸಾರ್ವ-**

ಧಾತುಕಸ್ವರೇಣ ಧಾತುಸ್ವರ ಏವ ಶಿಷ್ಯತೇ । ಮಧು । ಫಲಿಪಾಟೀತ್ಯಾದಿನಾ । ಉ. ೧-೧೯ । ಉಪ್ರತ್ಯಯಃ । ನಿದಿತ್ಯನುವೃತ್ತೇರ್ನಿತ್ತ್ವಾದಾದ್ಯುದಾತ್ತಃ । ದೀದ್ಯಗ್ನೀ । ದಿವು ಕ್ರೀಡಾದೌ । ಅನ್ಯೇಭ್ಯೋऽಪಿ ದೃಶ್ಯಂತ ಇತಿ ವಿಚ್ । ವೇರಪೃಕ್ತಲೋಪಾದ್ವಲಿ ಲೋಪೋ ಬಲೀಯಾನಿತಿ ಪ್ರಥಮವಕಾರಸ್ಯ ಲೋಪಃ। ಪಾ. ೬-೧-೬೬, ೬೭ । ಪ್ರಥಮಂ ಪ್ರತ್ಯಯಲೋಪೇ ಹಿ ವರ್ಣಾಶ್ರಯವಿಧೌ ಪ್ರತ್ಯಯಲಕ್ಷಣಂ ನಾಸ್ತಿ । ಪರಿ ೨೧ । ಇತಿ ನಿಷೇಧಾದ್ವಲಿಲೋಪೋ ನ ಸ್ಯಾತ್ । ಛಾಂದಸಂ ದ್ವಿರ್ವಚನಂ । ತುಜಾದಿತ್ವಾದಭ್ಯಾಸಸ್ಯ ದೀರ್ಘತ್ವಂ । ಯಙ್ಲುಗಂತಾದ್ವಾ ಸಂಜ್ಞಾಪೂರ್ವಕೋ ವಿಧಿರನಿತ್ಯ ಇತ್ಯಭ್ಯಾಸಸ್ಯ ಗುಣಾಭಾವಃ । ದೀದಿರಗ್ನಿರ್ಯಯೋಸ್ತೌ ದೀದ್ಯಗ್ನೀ । ಆಮಂತ್ರಿತಾದ್ಯುದಾತ್ತತ್ವಂ । ಪಾದಾದಿತ್ವಾನ್ನ ನಿಘಾತಃ । ಶುಚಿವ್ರತಾ ಶುಚಿ ವ್ರತಂ ಯಯೋಸ್ತೌ । ಸುಪಾಂ ಸುಲುಗಿತ್ಯಾಕಾರಃ । ದೀದ್ಯಗ್ನಿಶಬ್ದಸ್ಯ ಸಾಮಾನ್ಯವಚನತ್ವೇನ ನಾಮಂತ್ರಿತ ಇತ್ಯವಿದ್ಯಮಾನವತ್ತ್ವಪ್ರತಿಷೇಧಾದಾಷ್ಟಮಿಕನಿಘಾತತ್ವಂ । ಪೂರ್ವಸ್ಯ ಪರಾಂಗವದ್ಭಾವಾದೈಕಸ್ವರ್ಯಂ । ಯಜ್ಞವಾಹಸಾ । ವಹ ಪ್ರಾಪಣೇ । ಯಜ್ಞಂ ವಹತ ಇತಿ ಯಜ್ಞವಾಹಸೌ । ವಹಿಹಾಧಾಞ್ ಭ್ಯಶ್ಛಂದಸಿ ಉ. ೪-೨೨೦ । ಇತ್ಯಸುನ್ । ತತ್ರ ಹಿ ಗತಿಕಾರಕಯೋರಪಿ ಪೂರ್ವಪದಪ್ರಕೃತಿಸ್ವರತ್ವಂ ಚೇತಿ ವಚನಾತ್ಪೋಪಪದಾನಾಮಪಿ ಭವತಿ । ಉ. ೪-೨೨೬ । ಇತ್ಯುಕ್ತಂ । ಣಿದಿತ್ಯನುವೃತ್ತೇರುಪಧಾವೃದ್ಧಿಃ । ಸುಪಾಂ ಸುಲುಗಿತ್ಯಾದಿನಾ ವಿಭಕ್ತೇರಾಕಾರಃ । ಆಮಂತ್ರಿತನಿಘಾತಃ । ಅಸಾಮರ್ಥ್ಯಾತ್ಪೂರ್ವಸ್ಯ ನ ಪರಾಂಗವದ್ಭಾವಃ ॥

॥ ಪ್ರತಿಪದಾರ್ಥ ॥

ದೀದ್ಯಗ್ನೀ— ಆಹವನೀಯಾದ್ಯಗ್ನಿಗಳಿಂದ ಶೋಭಿಸುತ್ತಿರುವ । ಶುಚಿವ್ರತಾ— ಶುದ್ಧವಾದ ಕರ್ಮಗಳನ್ನುಳ್ಳ । ಋತುನಾ— ಋತುದೇವತೆಯೊಂದಿಗೆ । ಯಜ್ಞವಾಹಸಾ— ಯಜ್ಞನಿರ್ವಾಹಕರಾದ । ಅಶ್ವಿನಾ— ಎಲೈ ಅಶ್ವಿನೀದೇವತೆಗಳೇ । ಮಧು— ಮಧುರವಾದ ಸೋಮರಸವನ್ನು । ಪಿಬತಂ— ಕುಡಿಯಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ಯಾವಾಗಲೂ ಆಹವನೀಯಾದಿ ಅಗ್ನಿಗಳಿಂದ ಕೂಡಿ ಪ್ರಕಾಶಿಸುತ್ತಿರುವಿರಿ. ಋತುದೇವತೆಯೊಡಗೂಡಿ ಯಜ್ಞವನ್ನು ನಿರ್ವಹಿಸುತ್ತೀರಿ. ದಯವಿಟ್ಟು ಮಧುರವಾದ ಸೋಮರಸವನ್ನು ಪಾನಮಾಡಿ.

English Translation.

Aswins, performers of pious acts, accepters of the sacrifice with the Ritus, and accompained by brilliant Agni, drink the sweet draught.

॥ ವಿಶೇಷವಿಷಯಗಳು ॥

**ದೀದ್ಯಗ್ನೀ—ದಿವು ಕ್ರೀಡಾದೌ । ದೀದಿರಗ್ನಿರ್ಯಯೋಸ್ತೌ ॥** ಪ್ರಕಾಶಮಾನವಾದ ಆಹವನೀಯಾದ್ಯಗ್ನಿಯುಕ್ತರು ಎಂದರೆ ಆಹವನೀಯಾದ್ಯಗ್ನಿಗಳಲ್ಲಿ ಈ ಅಶ್ವಿನೀದೇವತೆಗಳನ್ನುದ್ದೇಶಿಸಿ ಹೋಮ ಮಾಡುವುದರಿಂದ ಪ್ರಕಾಶಮಾನವಾದ ಅಗ್ನಿಯುಳ್ಳವರು ಎಂದು ಹೇಳಿರುವರು.

**ಶುಚಿವ್ರತಾ—ಶುಚಿ ವ್ರತಂ ಯಯೋಸ್ತೌ—**ಶುದ್ಧಕರ್ಮಗಳುಳ್ಳವರು ಎಂದರೆ, ಇವರು ಮಾಡುವ ಕರ್ಮಗಳು ಶುದ್ಧವಾದವು ಎಂದರ್ಥವು.

**ಯಜ್ಞವಾಹಸಾ—ವಹ ಪ್ರಾಪಣೇ । ಯಜ್ಞಂ ವಹತ ಇತಿ ಯಜ್ಞವಾಹಸೌ । ಯಜ್ಞಸ್ಯ ನಿರ್ವಾಹಕೌ ॥** ಯಜ್ಞವನ್ನು ನಿರ್ವಹಿಸುವವರು ನಿರ್ವಿಘ್ನವಾಗಿ ನಡೆಯುವಂತೆ ಮಾಡುವವರು.

॥ ವ್ಯಾಕರಣಪ್ರಕಿಯಾ ॥

**ಅಶ್ವಿನಾ—**ಸಂಬೋಧನದ್ವಿವಚನಕ್ಕೆ **ಸುಪಾಂಸುಲುಕ್**- ( ಪಾ.ಸೂ. ೭-೧-೩೯ ) ಎಂಬುದರಿಂದ ಆಕಾರಾದೇಶ, ಆಮನ್ತ್ರಿತಸ್ಯಚ (ಪಾ.ಸೂ ೬-೧-೧೯೮) ಎಂಬುದರಿಂದ ಆದ್ಯುದಾತ್ತ ಬರುವುದು. ಪಾದಾದಿಯಲ್ಲಿರುವುದರಿಂದ ಆಷ್ಟಮಿಕಾನುದಾತ್ತ ಬರುವುದಿಲ್ಲ.

**ಪಿಬತಂ—ಪಾ ಪಾನೇ.** ಲೋಟ್ ಮಧ್ಯಮಪುರುಷ ದ್ವಿವಚನ ಥಸ್. **ಲೋಟೋಲಙ್ವತ್** (ಪಾ.ಸೂ. ೩-೪-೮೫) ಎಂಬುದರಿಂದ ಲಙ್ವದ್ಭಾವವಿರುವುದು. ಆದ್ದರಿಂದ **ತಸ್ಥಸ್ಥಮಿಪಾಂತಾಂತಂತಾಮಃ** ( ಪಾ. ಸೂ. ೩-೪-೧೦೧) ಎಂಬುದರಿಂದ ಥಸ್ ಗೆ ತಂ ಆದೇಶ ಪಾ+ತಂ **ಕರ್ತರಿಶಪ್** (ಪಾ.ಸೂ ೩-೧-೬೮) ಎಂಬುದರಿಂದ ಶಪ್ ವಿಕರಣ, **ಪಾಘ್ರಾಧ್ಮಾ—** (ಪಾ.ಸೂ. ೭-೩-೭೮) ಎಂಬುದರಿಂದ ಪಾಗೆ ಪಿಬ ಆದೇಶ, ಪಿಬ+ಅ+ತಂ, **ಅತೋಗುಣೇ** (ಪಾ.ಸೂ. ೬-೧-೯೭) ಎಂಬುದರಿಂದ ಪರರೂಪ ಪಿಬತಂ. ಈ ರೀತಿ ಪಿಬ ಆದೇಶವು ಅದಂತ ಎಂಬ ಪಕ್ಷದಲ್ಲಿ ಪಿಬ ಎಂಬುದು ಸೂತ್ರದಲ್ಲಿ ಆದ್ಯುದಾತ್ತವಾಗಿ ನಿಪಾತಿತವಾಗಿರುವುದು. ಇದನ್ನೇ **ಧಾತೋಃ** ಪಾ.ಸೂ. ೬-೧-೧೬೨) ಎಂಬಲ್ಲಿ 'ಪಿಬೌದಾನಿಪಾತನಾತ್' ಎಂದು ವಾರ್ತಿಕಕಾರರು ಹೇಳಿರುವರು. ಈ ಪಕ್ಷದಲ್ಲಿ **ಪುಗಂತಲಘೂಪಧಸ್ಯಚ** (ಪಾ. ಸೂ. ೭-೩-೮೬) ಎಂಬುದರಿಂದ ಲಘೂಪಧ ಗುಣಕ್ಕೆ ಪ್ರಾಪ್ತಿ ಇಲ್ಲ ಇದೇ ಸಿದ್ಧಾಂತ ಪಕ್ಷವು. ಪಾಘ್ರಾಧ್ಮಾ ಎಂಬಲ್ಲಿ ವಿಹಿತವಾದ ಆದೇಶವು ಪಿಬ್ ಎಂದು ಬಾಂತ ಎಂಬ ಪಕ್ಷದಲ್ಲಿ **ಧಾತೋಃ** ( ಪಾ- ಸೂ. ೬-೧-೧೬೨ ) ಎಂಬುದರಿಂದ ಅಂತೋದಾತ್ತಸ್ವರವು ಸುಕರವಾಗಿ ಸಿದ್ಧವಾಗುವುದು. **ಅಂಗವೃತ್ತೇ ಪುನರ್ವೃತ್ತಾವವಿಧಿಃ** ( ಪರಿಭಾ. ೯೨ ) ಎಂಬುದರಿಂದ ಪಿಬಾದೇಶಾನಂತರ ಗುಣವು ಬರುವುದಿಲ್ಲ ಎಂದು ಗುಣಕ್ಕೆ ವಾರಣೆ ಮಾಡಬೇಕು. ಈ ಪಕ್ಷವೇ 'ಧಾತುಸ್ವರ ಏವ ಶಿಷ್ಯತೇ ' ಎಂದು ವೇದಭಾಷ್ಯದಲ್ಲಿ ಆಶ್ರಯಿಸಲಾಗಿರುವುದು. ಶಪ್ ಪಿತ್ತಾದ್ದರಿಂದ ಅನುದಾತ್ತ. ಲಸ್ಥಾನಿಕ ಸಾರ್ವಧಾತುಕವಾದ ತಂ ಎಂಬುದು **ತಾಸ್ಯನುದಾತ್ತೇತ್** -(ಪಾ.ಸೂ.೬-೧-೧೮೬) ಎಂಬುದರಿಂದ ಅನುದಾತ್ತ, ಏನಂಚ ಪಿಬ್ ಎಂಬುದರ ಇಕಾರವು ಧಾತುಸ್ವರದಿಂದ ಉದಾತ್ತವಾಗುವುದು.

**ಮಧು-ಮಧುಮಂತಂ** ಋ. ಸಂ. ೧-೧-೩-೨ ರಲ್ಲಿ ಇದಕ್ಕೆ ಪ್ರಕ್ರಿಯೆಯು ಉಪಪಾದಿತವಾಗಿರುವುದು. ಇಲ್ಲಿ ಸಂಗ್ರಹವಾಗಿ ಜ್ಞಾಪಿಸುವ. ಮನ ಜ್ಞಾನೇ ಧಾತುವಿನ ಮುಂದೆ **ಫಲಿಪಾಟಿ** - (ಉ. ಸೂ. ೧-೧೮) ಎಂಬುದರಿಂದ ಉ ಪ್ರತ್ಯಯು ಬರುವುದು. ಇಲ್ಲಿ ನಿತ್ ಎಂಬುದು ಅನುವೃತ್ತವಾಗಿರುವುದರಿಂದ ಉ ಪ್ರತ್ಯಯವು ನಿತ್ತಾಗುವುದು. ಆದ್ದರಿಂದ ಮಧು ಎಂಬುದು ನಿತ್ಸ್ವರದಿಂದ ಆದ್ಯುದಾತ್ತ.

**ದೀದ್ಯಗ್ನೀ**—ದಿವು ಕ್ರೀಡಾದೌ ಧಾತು, ಇದರ ಮುಂದೆ **ಅನ್ಯೇಭ್ಯೋಽಪಿದೃಶ್ಯಂತೇ** (ಪಾ.ಸೂ. ೩-೨-೭೫) ಮನಿನ್, ಕ್ವನಿಪ್, ವನಿಪ್, ವಿಚ್ ಈ ಪ್ರತ್ಯಯಗಳು ಧಾತುವಿನ ಮುಂದೆ ಬರುವುವು ಎಂಬುದರಿಂದ ದಿವ್ ಧಾತುವಿನ ಮುಂದೆ ವಿಚ್, ದಿವ್+ವ್, ವೇರಪೃಕ್ತಲೋಪಾದ್ವಲಿಲೋಪೋ ಬಲೀಯಾನ್, **ವೇರಪೃಕ್ತಸ್ಯ** (ಪಾ.ಸೂ.೬-೧-೬೭) ಎಂದು ವಿಹಿತವಾದ ವಕಾರ ಲೋಪಕ್ಕಿಂತಲೂ **ಲೋಪೋವ್ಯೋರ್ವಲಿ** (ಪಾ.ಸೂ. ೬-೧-೬೬) ಎಂದು ವಿಹಿತವಾದ ವಲಿಲೋಪವು ಪ್ರಬಲವಾದುದು ಎಂಬುದರಿಂದ ಅಪೃಕ್ತಲೋಪವು ಅಂತರಂಗವಾದಾಗ್ಯೂ ಅದಕ್ಕಿಂತ ಮೊದಲು **ಲೋಪೋವ್ಯೋರ್ವಲಿ** (ಪಾ. ಸೂ. ೬-೧-೬೬ ) ಎಂಬುದರಿಂದ ಮೊದಲನೆಯ ವಕಾರಕ್ಕೆ ಲೋಪ, ಮೊದಲು ವೇರಪೃಕ್ತಸ್ಯ, ಎಂಬುದರಿಂದ ಪ್ರತ್ಯಯಕ್ಕೆ ಲೋಪ ಬರುವ ಪಕ್ಷಕ್ಕೆ **ವರ್ಣಾಶ್ರಯೇ ನಾಸ್ತಿ ಪ್ರತ್ಯಯಲಕ್ಷಣಂ** (ಪರಿಭಾ. ೯೩-೧) ವರ್ಣಾಶ್ರಯವಾದ ಕಾರ್ಯವನ್ನು ಮಾಡುವಾಗ ಪ್ರತ್ಯಯಲಕ್ಷಣ ಬರುವುದಿಲ್ಲ ಎಂಬುದರಿಂದ ಪ್ರತ್ಯಯಲಕ್ಷಣ ಬರುವುದಿಲ್ಲ. ಆದ್ದರಿಂದ ವಲ್ ಪರಕತ್ವವು ಸಂಭವಿಸುವುದಿಲ್ಲ. ಏವಂಚ ಪ್ರಥಮ ವಕಾರಕ್ಕೆ ಲೋಪವು ಬರದೇ ಹೋಗುವುದು. ಆದ್ದರಿಂದ ಮೊದಲು ಪ್ರಥಮ ವಕಾರಕ್ಕೆ ಪೂರ್ವೋಕ್ತ ರೀತಿಯಲ್ಲಿ ಲೋಪ, ನಂತರ ವೇರಪೃಕ್ತಸ್ಯ ಎಂಬುದರಿಂದ ಎರಡನೇ ವಕಾರಕ್ಕೆ ಲೋಪ. ಛಾಂದಸವಾಗಿ ದಿಗೆ ದ್ವಿತ್ವ, ದಿದಿ ಎಂದಾಗುವುದು. ಈಗ **ತುಜಾದೀನಾಂ ದೀರ್ಘೋಽಭ್ಯಾಸಸ್ಯ** (ಪಾ.ಸೂ. ೬-೧-೭)ಎಂಬುದರಿಂದ ಮೊದಲನೆಯ ದಿಗೆ ದೀರ್ಘ ದೀದಿ ಎಂದಾಗುವುದು. ಅಥವಾ ದಿವ್ ಧಾತುವಿನ ಮುಂದೆ **ಧಾತೋರೇಕಾಚೋಹಲಾದೇಃ ಕ್ರಿಯಾಸಮಭಿಹಾರೇಯಙ್** (ಪಾ.ಸೂ. ೩.೧-೨೨) ಎಂಬುದರಿಂದ ಯಙ್, ಯಙೋಽಚಿಚ, (ಪಾ.ಸೂ. ೨-೪-೩೪) ಎಂಬುದರಿಂದ ಯಙ್‌ಗೆ ಲುಕ್, **ಸನ್ಯಙೋಃ** (ಪಾ.ಸೂ. ೬-೧-೯) ಎಂಬುದರಿಂದ ದ್ವಿತ್ವ ದಿವ್‌ದಿವ್. **ಹಲಾದಿಶ್ಶೇಷಃ** (ಪಾ.ಸೂ. ೭-೪-೬೦) ಎಂಬುದರಿಂದ ಅಭ್ಯಾಸದಲ್ಲಿರುವ ವಕಾರಕ್ಕೆ ನಿವೃತ್ತಿ, ದಿದಿವ್ **ಗುಣೋಯಙ್‌ಲುಕೋಃ** (ಪಾ.ಸೂ. ೭-೪-೮೮) ಯಙ್‌ನಲ್ಲಿಯೂ ಯಙ್ಲುಕ್ಕಿನಲ್ಲಿಯೂ ಇಗಂತವಾದ ಅಭ್ಯಾಸಕ್ಕೆ ಗುಣಬರುವುದು ಎಂಬುದರಿಂದ ಮೊದಲನೆಯ ದಿಗೆ ಯದ್ಯಪಿ ಗುಣವು ಪ್ರಾಪ್ತವಾಗುವುದು. ಆದರೂ **ಸಂಜ್ಞಾಪೂರ್ವಕೋವಿಧಿರನಿತ್ಯಃ** (ಪರಿಭಾ. ೯೩-೧) ಎಂಬುದರಿಂದ ಗುಣವಿಧಿಯು ಅನಿತ್ಯವಾಗುವುದರಿಂದ ಇಲ್ಲಿ ಬರುವುದಿಲ್ಲ. **ದೀರ್ಘೋಽಕಿತಃ** (ಪಾ.ಸೂ. ೭-೪-೮೩) ಕಿತ್ತಲ್ಲದ ಅಜಂತವಾದ ಅಭ್ಯಾಸಕ್ಕೆ ಯಙ್‌ನಲ್ಲಿಯೂ ಯಙ್‌ಲುಕ್ಕಿನಲ್ಲಿಯೂ ಸಹ ದೀರ್ಘ ಬರುವುದು ಎಂಬುದರಿಂದ ದೀರ್ಘ, ದೀದಿವ್ ಎಂದಾಗುವುದು. ಮೊದಲಿನಂತೆ ವಿಚ್ ಬಂದರೆ ದೀದಿ ಎಂದಾಗುವುದು. ದೀದಿಃ ಅಗ್ನಿಃ ಯಯೋಸ್ತೌ ದೀದ್ಯಗ್ನೀ ಎಂದು ಬಹುವ್ರೀಹಿಸಮಾಸ. ಆಷ್ಟಮಿಕಸೂತ್ರದಿಂದ ಅನುದಾತ್ತವು ಪ್ರಾಪ್ತವಾದರೂ ಇದು ಪಾದದ ಆದಿಯಲ್ಲಿರುವುದರಿಂದ ಇಲ್ಲಿ ಬರುವುದಿಲ್ಲ. ಷಾಷ್ಠಸೂತ್ರದಿಂದ ಆದ್ಯುದಾತ್ತವೇ ಬರುವುದು.

**ಶುಚಿವ್ರತಾ**—ಶುಚಿ ವ್ರತಂ ಯಯೋಸ್ತೌ ಎಂದು ವಿಗ್ರಹ. **ಸುಪಾಂಸುಲುಕ್**-(ಪಾ.ಸೂ, ೭-೧-೩೯) ಎಂಬುದರಿಂದ ಸಂಬೋಧನಪ್ರಥಮಾದ್ವಿವಚನಕ್ಕೆ ಆಕಾರಾದೇಶ. ದೀದ್ಯಗ್ನೀ, ಶುಚಿವ್ರತಾ, ಈ ಎರಡು ಆಮಂತ್ರಿತಗಳಿಗೂ ಅಶ್ವಿನಾ ಎಂಬಲ್ಲಿ ಅನ್ವಯವು ವರ್ಣಿತವಾಗಿರುವುದು. ಆದ್ದರಿಂದ ಅಶ್ವಿನಾ ಎಂಬುದು ಸಾಮಾನ್ಯ

ವಚನ, ಮಿಕ್ಕ ಎರಡು ಆಮಂತ್ರಿತಗಳೂ ಸಹ ವಿಶೇಷಣವಾದ್ದರಿಂದ ವಿಶೇಷವಚನಗಳೇ ಆಗುವುವು. ಆದ್ದರಿಂದ **ನಾಮನ್ತ್ರಿತೇಸಮಾನಾಧಿಕರಣೇ ಸಾಮಾನ್ಯವಚನಂ** (ಪಾ.ಸೂ. ೮-೧.೭೩) ಎಂಬುದಕ್ಕೆ ಪ್ರಾಪ್ತಿ ಇಲ್ಲ. ಎರಡು ಆಮಂತ್ರಿತಗಳಿಗೂ ಪರಸ್ಪರಾನ್ವಯವಿಲ್ಲದೇ ಇರುವುದರಿಂದ ಸಾಮರ್ಥ್ಯವಿಲ್ಲದ ಕಾರಣ **ಸುಬಾಮಂತ್ರಿತೇ** (ಪಾ.ಸೂ. ೨-೧-೨ ) ಎಂಬುದರಿಂದ ಪರಾಂಗವದ್ಭಾವಕ್ಕೂ ಪ್ರಾಪ್ತಿ ಇಲ್ಲ. ಏವಂಚ ಶುಚಿವ್ರತಾ ಎಂಬಲ್ಲಿ ಸರ್ವಾನುದಾತ್ತವು ಹೇಗೆ ಉಪಪನ್ನವಾಗುವುದು ಎಂದು ಶಂಕೆ ಅವತರಿಸುವುದು ಸತ್ಯವು. ಆದರೆ ಇಲ್ಲಿ ದೀದ್ಯಗ್ನೀ ಎಂಬುದನ್ನೇ ವಿಶೇಷ್ಯವನ್ನಾಗಿ ವಿವಕ್ಷೆಮಾಡುವೆವು. ಶುಚಿವ್ರತಾ ಎಂಬುದು ಅದಕ್ಕೆ ವಿಶೇಷಣವು, ಈ ವಿಶಿಷ್ಟಕ್ಕೆ ಅಶ್ವಿನಾ ಎಂಬಲ್ಲಿ ಅನ್ವಯವು ಎಂದು ವರ್ಣಿಸುವೆವು. ಈಗ ದೀದ್ಯಗ್ನೀ ಎಂಬುದು ಸಾಮಾನ್ಯ ವಚನವಾಗುವುದರಿಂದ **ನಾಮಂತ್ರಿತೇ**- (ಪಾ. ಸೂ. ೮-೧-೭೩) ಎಂಬುದರಿಂದ **ಆಮಂತ್ರಿತಂ ಪೂರ್ವಮವಿದ್ಯಮಾನವತ್** ( ಪಾ. ಸೂ. ೮-೧-೭೨ ) ಎಂದು ಪ್ರಾಪ್ತವಾದ ಅವಿದ್ಯಮಾನವದ್ಭಾವಕ್ಕೆ ಪ್ರತಿಷೇಧ ಬರುವುದು, ಆದ್ದರಿಂದ ಶುಚಿವ್ರತಾ ಎಂಬುದು ಪಾದಾದಿಯಾಗುವುದಿಲ್ಲ. ಏವಂಚ **ಆಮಂತ್ರಿತಸ್ಯಚ** (ಪಾ ಸೂ. (೮-೧-೧೯೭) ಎಂಬುದರಿಂದ ಸರ್ವಾನುದಾತ್ತ ಬರುವುದು. ಅಥವಾ ದೀದ್ಯಗ್ನೀ ಶುಚವ್ರತಾ ಎಂಬೆರಡಕ್ಕೂ ಈ ವ್ಯಾಖ್ಯಾನದಲ್ಲಿ ಪರಸ್ಪರಾನ್ವಯವಿರುವುದರಿಂದ ಸಾಮರ್ಥ್ಯವಿರುವ ಕಾರಣ **ಸುಬಾಮಂತ್ರಿತೇ ಪರಾಂಗವತ್ಸರೇ** (ಪಾ ಸೂ ೨-೧-೨) ಎಂಬುದರಿಂದ ಪರಾಂಗವದ್ಭಾವ ಬರುವುದು. ಏವಂ ಚ ದೀದ್ಯಗ್ನೀ ಶುಚಿವ್ರತಾ ಎಂಬಿವು ಒಂದೇ ಪದವೆಂಬ ಬುದ್ಧಿಯುಂಟಾಗುವುದು. ಆದ್ದರಿಂದ ಷಾಷ್ಠಸೂತ್ರವಾದ **ಆಮಂತ್ರಿತಸ್ಯಚ** (ಪಾ. ಸೂ. ೬-೧-೧೯೭) ಎಂಬುದರಿಂದ ದೀ ಎಂಬ ಆದಿವರ್ಣಕ್ಕೆ ಆದ್ಯುದಾತ್ತ ಬರುವುದು. ಅನಂತರ **ಅನುದಾತ್ತಂ ಪದಮೇಕವರ್ಜಂ** (ಪಾ ಸೂ. ೬-೧-೧೫೮) ಎಂಬುದರಿಂದ ಮಿಕ್ಕ ವರ್ಣಗಳು ಅನುದಾತ್ತಗಳಾಗುವುವು. ಉದಾತ್ತದ ಮುಂದೆ ಇರುವ ದಿ ಎಂಬ ಅನುದಾತ್ತವು **ಉದಾತ್ತಾದನುದಾತ್ತಸ್ಯಸ್ವರಿತಃ** (ಪಾ.ಸೂ.೮-೪.೬೬) ಎಂಬುದರಿಂದ ಸ್ವರಿತವಾಗುವುದು. ಸ್ವರಿತದ ಮುಂದೆ ಇರುವ ಅನುದಾತ್ತಗಳು **ಸ್ವರಿತಾತ್ಸಂಹಿತಾಯಾಮನುದಾತ್ತಾನಾಂ** ಎಂಬುದರಿಂದ ಪ್ರಚಯಗಳಾಗುವುವು.

**ಯಜ್ಞವಾಹಸಾ**--ಯಜ್ಞಂ ವಹತ ಇತಿ ಯಜ್ಞವಾಹಸೌ, ವಹ ಪ್ರಾಪಣೇ ಧಾತು. **ವಹಿಹಾಧಾಞ್-ಭ್ಯಶ್ಛಂದಸಿ** (ಉ. ಸೂ. ೪-೬೬೦) ವಹ ಪ್ರಾಪಣೇ, ಓಹಾಕ್ ತ್ಯಾಗೇ, ಡುಧಾಞ್ ಧಾರಣಪೋಷಣಯೋಃ. ಈ ಧಾತುಗಳ ಮುಂದೆ ಅಸುನ್‌ಪ್ರತ್ಯಯ ಬರುವುದು. ಅದು ಣಿತ್ತಾಗುವುದು ಎಂಬುದರಿಂದ ಯಜ್ಞಂ ಎಂಬ ಕರ್ಮಕಾರಕೋಪಪದವಾದ ವಹ್ ಧಾತುವಿನ ಮುಂದೆ ಅಸುನ್ ಪ್ರತ್ಯಯ, **ಗತಿಕಾರಕಯೋರಪಿಪೂರ್ವಪದಪ್ರಕೃತಿಸ್ವರತ್ವಂಚ** (ಉ.ಸೂ. ೪-೬೬೬) ಎಂಬುದರಿಂದ ಗತಿಕಾರಕೋಪಪದಕಗಳಾದ ಧಾತುಗಳ ಮುಂದೆಯೂ ಪ್ರತ್ಯಯಗಳು ಬರುವುವು ಎಂದು ಹೇಳಿರುವುದರಿಂದ ವಹಿಹಾ ಎಂಬ ಸೂತ್ರದಲ್ಲಿ ನಿರುಪಪದಧಾತುಗ್ರಹಣವಿದ್ದರೂ ಸೋಪಪದಕಗಳಾದ ಧಾತುಗಳ ಮುಂದೆಯೂ ಅಸುನ್ ಪ್ರತ್ಯಯ ಬರುವುದು. ಯಜ್ಞ+ಅಮ್+ಹಾ+ಅಸ್. ಪ್ರತ್ಯಯವು ಣಿತ್ತಾದ್ದರಿಂದ **ಅತ ಉಪಧಾಯಾಃ** (ಪಾ.ಸಪ. ೭-೨-೧೧೬) ಎಂಬುದರಿಂದ ಉಪಧಾ-ವೃದ್ಧಿ. ಕೃದಂತವಾದ್ದರಿಂದ ಪ್ರಾತಿಪದಿಕಸಂಜ್ಞೆ ಬರುವುದು ಆದ್ದರಿಂದ ಪ್ರಾತಿಪದಿಕಾವಯವವಾದ ಅಮ್ ವಿಭಕ್ತಿಗೆ ಲುಕ್. ಸಂಬೋಧನ ದ್ವಿವಚನ ಔ ಪ್ರತ್ಯಯಕ್ಕೆ **ಸುಪಾಂಸುಲುಕ್**(ಪಾ.ಸೂ. ೭-೧-೩೯) ಎಂಬುದರಿಂದ ಆಕಾರಾದೇಶ. ಋತುನಾ ಯಜ್ಞವಾಹಸಾ ಎಂಬ ಎರಡು ಪದಗಳಿಗೂ ಪರಸ್ಪರಾನ್ವಯವಿಲ್ಲ. ಆದಕಾರಣ **ಸುಬಾಮಂತ್ರತೇ** ಎಂಬುದರಿಂದ ಋತುನಾ ಎಂಬ ಪೂರ್ವಪದಕ್ಕೆ ಪರಾಂಗವದ್ಭಾವ ಬರುವುದಿಲ್ಲ, **ಆಮಂತ್ರಿತಸ್ಯಚ** (ಪಾ.ಸೂ. ೮-೧-೧೯) ಎಂಬುದರಿಂದ ಸರ್ವಾನುದಾತ್ತ ಬರುವುದು ||೧೧||

॥ ಸಂಹಿತಾಪಾಠಃ ॥

ಗಾರ್ಹಪತ್ಯೇನ ಸಂತ್ಯ ಋತುನಾ ಯಜ್ಞನೀರಸಿ ।
ದೇವಾನ್ದೇವಯತೇ ಯಜ ॥ ೧೨ ॥

॥ ಪದಪಾಠಃ ॥

ಗಾರ್ಹ ಽ ಪತ್ಯೇನ । ಸಂತ್ಯ । ಋತುನಾ । ಯಜ್ಞ ಽ ನೀಃ । ಅಸಿ ॥
ದೇವಾನ್ । ದೇವ ಽ ಯತೇ । ಯಜ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಸಂತ್ಯ ಫಲಪ್ರದಾಗ್ನಿದೇವ ಗಾರ್ಹ್ಯಪತ್ಯೇನ ಗೃಹಪತಿಸಂಬಂಧಿನಾ ರೂಪೇಣ ಯುಕ್ತಃ ಸನ್ ಋತುನಾ ಋತುದೇವೇನ ಸಹ ಯಜ್ಞನೀರ್ಯಜ್ಞಸ್ಯ ನಿರ್ವಾಹಕೋಽಸಿ । ತಸ್ಮಾತ್ತ್ವಂ ದೇವಯತೇ ದೇವವಿಷಯಕಾಮನಾಯುಕ್ತಾಯ ಯಜಮಾನಾಯ ದೇವಾನ್ಯಜ ॥ ಗಾರ್ಹಪತ್ಯೇನ । ಗೃಹಪತಿನಾ ಸಂಯುಕ್ತೇ ಞ್ಯಃ । ಪಾ. ೪-೪-೯೦ । ಯಸ್ಯೇತಿ ಲೋಪಃ । ಞಿತ್ವಾದಾದಿವೃದ್ಧಿರಾದ್ಯುದಾತ್ತತ್ವಂ ಚ । ಗೃಹಪತಿತ್ವಮಿತ್ಯರ್ಥೇ ಪತ್ಯಂತಪುರೋಹಿತಾದಿಭ್ಯಃ । ಪಾ. ೫-೧-೧೨೮ । ಇತಿ ಯಕಿ ತ್ವಂತೋದಾತ್ತತ್ವಂ ಸ್ಯಾತ್ । ಸಂತ್ಯ । ಸನನೇ ಭವ । ಷಣು ದಾನೇ । ಕ್ತಿಚ್ಕ್ತೌ ಚೇತಿ ಕ್ತಿಚ್ । ನ ಕ್ತಿಚಿ ದೀರ್ಘಶ್ಚ । ಪಾ. ೬-೪-೩೯ । ಇತಿ ದೀರ್ಘನಲೋಪಾಭಾವಃ । ಭವೇ ಛಂದಸಿ । ಪಾ. ೪-೪-೧೧೦ । ಇತಿ ಯತ್ । ತತ್ರ ಸಾಧುಃ । ಪಾ. ೪-೪-೯೮ । ಇತಿ ವಾ । ನಿಘಾತಃ । ಯಜ್ಞಂ ನಯತೀತಿ ಯಜ್ಞನೀಃ ಸತ್ಸೂದ್ವಿಷೇತ್ಯಾದಿನಾ ಕ್ವಿಪ್ । ಕೃದುತ್ತರಪದಪ್ರಕೃತಿಸ್ವರಃ । ದೇವಯತೇ । ದೇವಾನಾತ್ಮನ ಇಚ್ಛತೀತಿ ದೇವಯನ್ । ತಸ್ಮೈ । ಕ್ಯಚಿ ಚೇತೀತ್ವಂ ನ ಭವತಿ । ನ ಛಂದಸ್ಯಪುತ್ರಸ್ಯೇತಿ ನಿಷೇಧಾತ್ । ಅಶ್ವಾಘಸ್ಯ । ಪಾ. ೭-೪-೩೭ । ಇತ್ಯಾತ್ವವಿಧಾನಾದೀತ್ವನಿಷೇಧೇ ಪ್ರಾಪ್ತಸ್ಯ ದೀರ್ಘಸ್ಯಾಪ್ಯೇಷ ನಿಷೇಧ ಇತ್ಯುಕ್ತಂ । ಶತುರನುಮೋ ನದ್ಯಜಾದೀ ಇತಿ ವಿಭಕ್ತೇರುದಾತ್ತತ್ವಂ । ಅತ್ರ ಕ್ಯಚಶ್ಚಿತ್ತ್ವಾದಂತೋದಾತ್ತತ್ವಂ । ಶಪಃ ಪಿತ್ತ್ವಾದನುದಾತ್ತತ್ವಂ । ಶತುಶ್ಚ ಲಸಾರ್ವಧಾತುಕಸ್ವರೇಣೋಭಯೋಃ ಕ್ಯಚಾ ಸಹೈಕಾದೇಶ ಏಕಾದೇಶ ಉದಾತ್ತೇನೋದಾತ್ತ ಇತ್ಯುದಾತ್ತಃ । ತಸ್ಮಾದಂತೋದಾತ್ತತ್ವಾತ್ಪರಸ್ಯಾ ವಿಭಕ್ತೇಃ ಶತುರನುಮೋ ನದ್ಯಜಾದೀ ಇತ್ಯುದಾತ್ತತ್ವಂ ॥ ೨೯ ॥

॥ ಪ್ರತಿಪದಾರ್ಥ ॥

**ಸನ್ತ್ಯ**— ಫಲಪ್ರದಾನದಲ್ಲಿ ಸಮರ್ಥನಾದ ಎಲೈ ಅಗ್ನಿಯೇ(ನೀನು) ।**ಗಾರ್ಹಪತ್ಯೇನ**—ಗಾರ್ಹಪತ್ಯಾಗ್ನಿಯಿಂದ ಕೂಡಿದವನಾಗಿ । **ಋತುನಾ**—ಋತುದೇವನೊಡನೆ । **ಯಜ್ಞನೀಃ**—ಯಜ್ಞನಿರ್ವಾಹಕನಾಗಿ । **ಅಸಿ**—ಆಗಿದ್ದೀಯೆ (ಆದ್ದರಿಂದ) । **ದೇವಯತೇ**—ಯಜ್ಞಕ್ಕಾಗಿ ದೇವತೆಗಳನ್ನಪೇಕ್ಷಿಸುವ ಯಜಮಾನನಿಗೋಸ್ಕರ । **ದೇವಾನ್**—ದೇವತೆಗಳನ್ನು । **ಯಜ**—ಆರಾಧಿಸು.

॥ ಭಾವಾರ್ಥ ॥

ಎಲೈ ಅಗ್ನಿದೇವನೇ, ನೀನು ಇಷ್ಟಾರ್ಥಗಳನ್ನು ಕೊಡುವವನು. ಗಾರ್ಹಪತ್ಯಾಗ್ನಿರೂಪದಿಂದ ಕೂಡಿ ಯಜಮಾನನ ಯಜ್ಞಕರ್ಮಗಳನ್ನು ಋತುದೇವತೆಯೊಡನೆ ನಿರ್ವಹಿಸುತ್ತೀಯೆ. ಆದುದರಿಂದ ಯಾವಾಗಲೂ ದೇವಯಾಗಾಪೇಕ್ಷೆಯುಳ್ಳ ಯಜಮಾನನಿಗಾಗಿ ನೀನು ಯಾಗವನ್ನು ನಿರ್ವಹಿಸು.

## English Translation.

O Agni, giver of rewards, being the lord of the house, and partaker with Ritu of the sacrifice, perform the sacrifice on behalf of the worshipper.

॥ ವಿಶೇಷವಿಷಯಗಳು ॥

**ಸಂತ್ಯ**—ಷಣು ದಾನೇ । ಸನನೇ ಭವ ॥ ಷಣು ಧಾತುವಿಗೆ ಕೊಡುವುದು ಎಂದರ್ಥವು. ಆದುದರಿಂದ ಈ ಧಾತುವಿನಿಂದ ನಿಷ್ಪನ್ನವಾದ ಸಂತ್ಯ ಎಂಬ ಶಬ್ದಕ್ಕೆ ಕೊಡುವವನು ಎಂದರ್ಥವು. ಏನನ್ನು ಕೊಡುವವನು ಎಂದರೆ ಯಜ್ಞಯಾಗಾದಿಕರ್ಮಗಳಿಗೆ ಫಲವನ್ನು ಕೊಡುವವನು. ಅಥವಾ ರತ್ನಧಾತಮಃ ಮೊದಲಾದ ಶಬ್ದಗಳಲ್ಲಿ ಹೇಳಿರುವಂತೆ ಧನಾದ್ಯೈಶ್ವರ್ಯವನ್ನು ಕೊಡುವವನು.

**ಯಜ್ಞನೀಃ—ಯಜ್ಞಂ ನಯತೀತಿ ಯಜ್ಞನೀಃ । ಯಜ್ಞಸ್ಯ ನಿರ್ವಾಹಕಃ ॥** ಯಜ್ಞವನ್ನು ನಿರ್ವಹಿಸುವವನು.

**ದೇವಯತೇ**—ದೇವಾನಾತ್ಮನ ಇಚ್ಛಂತೀತಿ ದೇವಯನ್ ೩ ತಸ್ಮೈ ಯಜಮಾನಾಯ ॥ ತಾನು ಮಾಡುವ ಯಜ್ಞಕ್ಕೆ ದೇವತೆಗಳು ಬರಬೇಕೆಂದು ಅಪೇಕ್ಷಿಸುವ ಯಜಮಾನನಿಗೋಸ್ಕರ ಎಂದರ್ಥವು.

‖ ವ್ಯಾಕರಣಪ್ರಕ್ರಿಯಾ ‖

**ಗಾರ್ಹಪತ್ಯೇನ**— **ಗೃಹಪತಿನಾ ಸಂಯುಕ್ತೇ ಞ್ಯಃ** (ಪಾ ಸೂ. ೪-೪-೯೦) ಗೃಹಪತಿಶಬ್ದಪ್ರಕೃತಿಕವಾದ ತೃತೀಯಾವಿಭಕ್ತ್ಯಂತಸಮರ್ಥದ ಮುಂದೆ ಸಂಯುಕ್ತ ಎಂಬ ಅರ್ಥದಲ್ಲಿ ಞ್ಯ ಪ್ರತ್ಯಯ ಬರುವುದು ಎಂಬುದರಿಂದ ಗೃಹಪತಿನಾ ಶಬ್ದದ ಮುಂದೆ ಞ್ಯ ಪ್ರತ್ಯಯ. ಗೃಹಪತಿ+ಟಾ+ಞ್ಯ. **ಚುಟೂ** (ಪಾ. ಸೂ. ೧-೩-೭) ಎಂಬುದರಿಂದ ಪ್ರತ್ಯಯದ ಆದಿಯಲ್ಲಿರುವ ಞಕಾರಕ್ಕೆ ಇತ್ಸಂಜ್ಞೆ. **ತಸ್ಯಲೋಪಃ** (ಪಾ. ಸೂ. ೧-೩-೯) ಎಂಬುದರಿಂದ ಲೋಪ. ತದ್ಧಿತಾಂತಪ್ರಾತಿಪದಿಕಾವಯವವಾದ ಟಾ ಎಂಬ ಸುಪ್‌ಗೆ **ಸುಪೋಧಾತು-** (ಪಾ. ಸೂ. ೨-೪-೭೧) ಎಂಬುದರಿಂದ ಲುಕ್. ಗೃಹಪತಿ+ಯ. **ಯಸ್ಯೇತಿಚ** (ಪಾ. ಸೂ. ೬-೪-೧೪೮) ಎಂಬುದರಿಂದ ಇಕಾರಕ್ಕೆ ಲೋಪ, ಪ್ರತ್ಯಯವು ಞಿತ್ತಾದ್ದರಿಂದ **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ. 'ಉರಣ್ರಪರಃ' ಎಂಬುದರಿಂದ ರಪರವಾಗಿ ಬರುವುದು. ಗಾರ್ಹಪತ್ಯ ಎಂದಾಗುವುದು. ಪ್ರತ್ಯಯವು ಞಿತ್ತಾದ್ದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತ ಬರುವುದು. **ಪತ್ಯಂತಪುರೋಹಿತಾದಿಭ್ಯೋಯಕ್** ( ಪಾ, ಸೂ. ೫-೧-೧೨೮ ) ಪತಿಶಬ್ದವನ್ನು ಕೊನೆಯಲ್ಲಿ ಹೊಂದಿರುವ ಶಬ್ದಗಳು, ಪುರೋಹಿತಾದಿಗಣಪಠಿತಶಬ್ದಗಳು ಈ ಶಬ್ದಪ್ರಕೃತಿಕವಾದ ಷಷ್ಠ್ಯಂತ ಸಮರ್ಥದ ಮುಂದೆ ಭಾವ, ಕರ್ಮ ಎಂಬ ಅರ್ಥಗಳಲ್ಲಿ ಯಕ್ ಬರುವುದು ಎಂಬುದರಿಂದ ಗೃಹಪತೇರ್ಭಾವಃ ಎಂಬ ಅರ್ಥದಲ್ಲಿ ಪತ್ಯಂತವಾದ ಗೃಹಪತಿಶಬ್ದದ ಮುಂದೆ ಯಕ್ ಪ್ರತ್ಯಯ ಬರುವುದು ಎಂದು ವರ್ಣಿಸಿದರೆ ಗಾರ್ಹಪತ್ಯ ಎಂಬ ರೂಪವು ಯದ್ಯಪಿ ಸಿದ್ಧವಾಗುವುದು. ಆದರೂ ಆಗ ಪ್ರತ್ಯಯಸ್ವರ ಬಂದು ಗಾರ್ಹಪತ್ಯ ಎಂಬುದು ಅಂತೋದಾತ್ತವಾಗುವುದು. ಆದ್ಯುದಾತ್ತವು ಸಿದ್ಧವಾಗುವುದಿಲ್ಲ. ಆದ್ದರಿಂದ ಞ್ಯ ಪ್ರತ್ಯಯವು ಉಪಪಾದಿತವಾಗಿರುವುದು.

**ಸನ್ತ್ಯ**—ಸನನೇ ಭವ=ಫಲವನ್ನು ಕೊಡುವುದರಲ್ಲಿರತಕ್ಕವನೇ ಎಂದು ಅರ್ಥ. ಷಣು ದಾನೇ ಧಾತು. **ಕ್ತಿಚ್‌ಕ್ತೌ ಚ ಸಂಜ್ಞಾಯಾಮ್** (ಪಾ. ಸೂ. ೩-೩-೧೭೪) ಆಶೀರರ್ಥ ತೋರುವಾಗಲೂ, ಸಂಜ್ಞೆ ತೋರುವಾಗಲೂ ಧಾತುವಿನ ಮುಂದೆ ಕ್ತಿಚ್, ಕ್ತ, ಎಂಬ ಪ್ರತ್ಯಯಗಳು ಬರುವುವು ಎಂಬುದರಿಂದ ಕ್ತಿಚ್ ಬರುತ್ತೆ. ಧಾತ್ವಾದೇಃಷಃಸಃ ಎಂಬುದರಿಂದ ಷಕಾರಕ್ಕೆ ಸಕಾರ. ರಷಾಭ್ಯಾಂ ಎಂಬುದರಿಂದ ಬಂದ ಣತ್ವಕ್ಕೆ ನಿವೃತ್ತಿ. ಸನ್+ತಿ. **ನ ಕ್ತಿಚಿ ದೀರ್ಘಶ್ಚ** (ಪಾ. ಸೂ. ೬-೪-೩೯) ಕ್ತಿಚ್ ಪ್ರತ್ಯಯ ಪರದಲ್ಲಿರುವಾಗ ಅನುದಾತ್ತೋಪದೇಶವಾದ ಧಾತುಗಳು ಅಂದರೆ ಅನಿಟ್ಕವಾದ ಧಾತುಗಳು, ವನತಿತನೋತ್ಯಾದಿ ಧಾತುಗಳು ಇವುಗಳಿಗೆ ದೀರ್ಘವೂ, ಇವುಗಳ ಅನುನಾಸಿಕ ವರ್ಣಕ್ಕೆ ಲೋಪವೂ ಸಹ ಬರುವುದಿಲ್ಲ ಎಂದು ಸೂತ್ರಾರ್ಥ. **ಅನುನಾಸಿಕಸ್ಯಕ್ವಿಝಲೋಃಕ್ಙಿತಿ** (ಪಾ. ಸೂ. ೬-೪-೧೫) ಕ್ವಿ ಪ್ರತ್ಯಯ ಪರವಾಗಿರುವಾಗಲೂ ಝಲಾದಿಯಾದ ಕಿತ್ತು ಙಿತ್ತು ಆದ ಪ್ರತ್ಯಯ ಪರವಾಗಿರುವಾಗಲೂ ಅನುನಾಸಿಕಾಂತವಾದ ಧಾತುವಿನ ಉಪಾಂತ್ಯವರ್ಣಕ್ಕೆ ದೀರ್ಘ ಬರುವುದು ಎಂಬುದರಿಂದ ಪ್ರಾಪ್ತವಾದ ದೀರ್ಘಕ್ಕೂ **ಅನುದಾತ್ತೋಪದೇಶವನತಿತನೋತ್ಯಾದೀನಾಮನುನಾಸಿಕಲೋಪೋಝಲಿಕ್ಙಿತಿ** (ಪಾ. ಸೂ. ೬-೪-೩೭) ಅನುನಾಸಿಕ ವರ್ಣವನ್ನು ಕೊನೆಯಲ್ಲಿ ಹೊಂದಿರುವ ತನೋತ್ಯಾದಿ ಧಾತುಗಳ ಕೊನೆಯ ವರ್ಣಕ್ಕೂ ವನ್ ಧಾತುವಿನ ಕೊನೆಯ ವರ್ಣಕ್ಕೂ ಸಹ ಝಲಾದಿಯಾದ ಕಿತ್ತು. ಅಥವಾ ಙಿತ್ತು ಆದ ಪ್ರತ್ಯಯ ಪರದಲ್ಲಿರುವಾಗ ಲೋಪ ಬರುವುದು ಎಂಬುದರಿಂದ ಪ್ರಾಪ್ತವಾದ ನಕಾರ ಲೋಪಕ್ಕೂ ನಕ್ತಿಚಿದೀರ್ಘಶ್ಚ ಎಂಬುದರಿಂದ ನಿಷೇಧಬರುವುದು. ಸನ್ತಿ ಎಂದಾಗುವುದು. ವಸ್ತುತಃ ಇಲ್ಲಿ

**ಸನಃಕ್ತಿಚಿ ಲೋಪಶ್ಚಾಸ್ಯಾನ್ಯತರಸ್ಯಾಮ್** (ಪಾ. ಸೂ. ೬೪-೪೬) ಕ್ತಿಚ್ ಪ್ರತ್ಯಯ ಪರದಲ್ಲಿರುವಾಗ ಸನ್ ಧಾತುವಿನ ನಕಾರಕ್ಕೆ ಲೋಪವೂ, ಅತ್ವವೂ ಸಹ ವಿಕಲ್ಪವಾಗಿ ಬರುವುದು ಎಂಬುದರಿಂದ ಅತ್ವನಲೋಪಗಳು ವಿಕಲ್ಪವಾಗಿ ವಿಹಿತವಾಗಿರುವುದರಿಂದ ಅನೆರಡೂ ಬರದೇ ಇರುವಪಕ್ಷದಲ್ಲಿ ಸನ್ತಿ ಎಂದು ರೂಪವು ಸಿದ್ಧವಾಗುವುದು ಎಂದು ವರ್ಣನೆ ಮಾಡುವುದು ಯುಕ್ತವು. **ಸರ್ವಏವಾಯಂ ಯೋಗಶ್ಶಕ್ಯೋಽವಕ್ತುಮ್** (ಪಾ. ಮಭಾ. ೬-೪-೪೫) ಈ ಸಂಪೂರ್ಣ ಸೂತ್ರವನ್ನೂ ಬಿಡುವುದಕ್ಕೆ ಸಾಧ್ಯವು ಎಂಬ ಪ್ರತ್ಯಾಖ್ಯಾನಪಕ್ಷದಲ್ಲಿಯೂ ಕೈಯಟದಲ್ಲಿ ಸನಃ ಕ್ತಿಚಿ ಇತ್ಯೇವ ಲೋಪಸ್ಯ ಪ್ರಕರಣಾತ್ಸಿದ್ಧತ್ವಾಲ್ಲೋಪಶ್ಚೇತ್ಯಪಿ ನ ವಕ್ತವ್ಯಮಿತ್ಯರ್ಥಃ. ಬಹೂನಾಂ ಪದಾನಾಂ ಪ್ರತ್ಯಾಖ್ಯಾನಾಚ್ಚ ಸರ್ವಏವಾಯಂ ಯೋಗ ಇತ್ಯುಚ್ಯತೇ, ಎಂದು ವರ್ಣಿಸಲಾಗಿರುವುದು. ಲೋಪಃ, ಚ, ಅಸ್ಯ, ಅನ್ಯತರಸ್ಯಾಮ್ ಎಂಬ ಬಹುಪದಗಳು ಅನವಶ್ಯಕವೆಂದು ಪ್ರತ್ಯಾಖ್ಯಾನ ಮಾಡಿರುವುದರಿಂದ ' ಸರ್ವಏವಾಯಂ ' ಎಂಬ ಭಾಷ್ಯವು ಪ್ರವೃತ್ತವಾಗಿರುವುದು. ಅಲ್ಲದೆ ಸಂಪೂರ್ಣಸೂತ್ರಪ್ರತ್ಯಾಖ್ಯಾನವು ಭಾಷ್ಯಾಭಿಪ್ರಾಯವಲ್ಲ. ಸನಃ ಕ್ತಿಚಿ ಎಂದು ಇಷ್ಟುಮಾತ್ರ ಸೂತ್ರವು ಸಾಕು ಎಂದು ವರ್ಣಿತವಾಗಿರುವುದು. ಈ ಪಕ್ಷದಲ್ಲಿ ಸನಃಕ್ತಿಚಿ ಎಂದು ವಿಹಿತವಾದ ಅತ್ವಲೋಪಗಳು ವಿಕಲ್ಪಗಳಾದ್ದರಿಂದ ಅವು ಬರದೇ ಇರುವಪಕ್ಷದಲ್ಲಿ ಸನ್ತಿ ಎಂದು ರೂಪವು ಸಿದ್ಧವಾಗುವುದು ಎಂದು ವರ್ಣಿಸುವುದು ಯುಕ್ತವು. ಸನ್ತ್ಯಾಂ ಭವಃ ಎಂದು ವಿಗ್ರಹವನ್ನು ವಿವಕ್ಷಿಸಿದರೆ **ಭವೇ ಛಂದಸಿ** (ಪಾ. ಸೂ. ೪-೪೧-೦) ಪ್ರಾತಿಪದಿಕ ಪ್ರಕೃತಿಕವಾದ ಸಪ್ತಮ್ಯಂತಸಮರ್ಥದ ಮುಂದೆ ಭವಾರ್ಥದಲ್ಲಿ ಯತ್ ಪ್ರತ್ಯಯವು ಛಂದಸ್ಸಿನಲ್ಲಿ ಬರುವುದು ಎಂಬುದರಿಂದ ಯತ್ ಬಂದರೆ ಸನ್ತಿ+ಇ-ಯ ಎಂದಿರುವುದು. ಅಥವಾ ಸನ್ತ್ಯಾಂಸಾಧುಃ ಎಂದು ವಿಗ್ರಹ ಮಾಡಿದರೆ **ತತ್ರಸಾಧುಃ** (ಪಾ.ಸೂ. ೪-೪-೯೫) ಪ್ರಾತಿಪದಿಕ ಪ್ರಕೃತಿಕವಾದ ಸಪ್ತಮ್ಯಂತವಾದ ಸಮರ್ಥದ ಮುಂದೆ ಸಾಧುಃ ಎಂಬ ಅರ್ಥದಲ್ಲಿ ಯತ್ ಬರುವುದು ಎಂಬುದರಿಂದ ಯತ್ ಬಂದರೆ ಸನ್ತಿ+ಇ+ಯ. ಎರಡೆಡೆಯಲ್ಲೂ ತದ್ಧಿತಾಂತಪ್ರಾತಿಪದಿಕಾವಯವವಾದ ಸುಪ್ಪಿಗೆ ಲುಕ್. **ಯಸ್ಯೇತಿ ಚ** (ಪಾ. ಸೂ. ೬-೪-೧೪೮) ಎಂಬುದರಿಂದ ಇಕಾರ ಲೋಪ, ಸನ್ತ್ಯ ಎಂದಾಗುವುದು. ಪ್ರಥಮೈಕವಚನದಲ್ಲಿ ಸನ್ತ್ಯಃ, ಸಂಬೋಧನ ಪ್ರಥಮೈಕವಚನದಲ್ಲಿ ಸನ್ತ್ಯ ಎಂದುರೂಪವು. **ಆಮನ್ತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ಸರ್ವಾನುದಾತ್ತ ಬರುವುದು

**ಯಜ್ಞನೀಃ**-ಯಜ್ಞಂ ನಯತೀತಿ ಯಜ್ಞನೀಃ, **ಸತ್ಸೂದ್ವಿಷದ್ರುಹದುಹಯುಜವಿದಭಿದಚ್ಛಿದಜಿನೀ-ರಾಜಾಮುಪಸರ್ಗೇಽಪಿಕ್ವಿಪ್** (ಪಾ. ಸೂ. ೩-೨-೬೧) ಷದ್ಲೃ ವಿಶರಣಾದೌ, ಸೂಧಾತುವು ಷೂಙ್ ಪ್ರಾಣಿಗರ್ಭ-ವಿಮೋಚನೇ ಅದಾದಿ, ಷೂಙ್‌ಪ್ರಾಣಿಪ್ರಸವೇ ದಿವಾದಿ, ಷೂ ಪ್ರೇರಣೇ ತುದಾದಿ, ಈ ರೀತಿಯಲ್ಲಿ ಮೂರು ಇರುವುದು. ಇಲ್ಲಿ **ಸಹಚರಿತಾಸಹಚರಿತಯೋಸ್ಸಹ ಚರಿತಸ್ಯೈವಗ್ರಹಣಮ್** (ಪರಿಭಾ. ೧೦೩) ಎಂಬುದರಿಂದ ಅದಾದಿಕವಾದ ದ್ವಿಷ್ ಧಾತು ಸಾಹಚರ್ಯವಿರುವುದರಿಂದ ಅದಾದಿಕವಾದ ಧಾತುವಿಗೇ ಗ್ರಹಣ, ದ್ವಿಷ ಅಪ್ರೀತೌ, ದ್ರುಹ ಜಿಘಾಂಸಾಯಾಮ್, ದುಹ ಪ್ರಪೂರಣೇ, ಯುಜಿರ್ ಯೋಗೇ, ಯುಜ ಸಮಾಧೌ, ವಿದ ಎಂಬುದರಿಂದ ವಿದ ಜ್ಞಾನೇ ಅದಾದಿ, ವಿದ ಸತ್ತಾಯಾಂ ದಿವಾದಿ, ವಿದ ವಿಚಾರಣೇ ತುದಾದಿ, ಈ ಮೂರಕ್ಕೂ ಗ್ರಹಣವುಂಟು, ವಿದ ಎಂದು ಅಕಾರಾಂತವಾಗಿ ನಿರ್ದೇಶ ಮಾಡಿರುವುದರಿಂದ ವಿದ್ಲೃ ಲಾಭೇ ಎಂಬ ತುದಾದಿ ಧಾತುವಿಗೆ ಗ್ರಹಣವಿಲ್ಲ. ಭಿದಿರ್ ವಿದಾರಣೇ, ಛಿದಿರ್ ದ್ವೈಧೀಕರಣೇ. ಜಿ ಜಯೇ, ಜಿ ಅಭಿಭವೇ, ಣೀಞ್ ಪ್ರಾಪಣೇ, ರಾಜೃ ದೀಪ್ತೌ, ಈ ಧಾತುಗಳ ಮುಂದೆ ಉಪಸರ್ಗವಿದ್ದರೂ ಇಲ್ಲದಿದ್ದರೂ ಸುಬಂತವು ಉಪಪದವಾಗಿರುವಾಗ ಕ್ವಿಪ್ ಪ್ರತ್ಯಯ ಬರುವುದು ಎಂಬುದರಿಂದ ಯಜ್ಞಂ ಎಂಬ ಸುಬಂತವು ಉಪಪದವಾಗಿರುವಾಗ ಣೀಞ್ ಧಾತುವಿನ ಮುಂದೆ ಕ್ವಿಪ್ ಬರುವುದು **ಣೋನಃ** (ಪಾ. ಸೂ. ೬-೧-೬೫) ಎಂಬುದರಿಂದ ಣಕಾರಕ್ಕೆ ನಕಾರ. ಪ್ರಾತಿ

ಪದಿಕಾವಯವವಾದ ಸುಪ್‌ಗೆ ಲುಕ್, ಕ್ವಿಪ್‌ಗೆ ಲೋಪ, ಯಜ್ಞನೀ, ಪ್ರಥಮೈಕವಚನ ಸು ಪ್ರತ್ಯಯ. ರುತ್ವ. ವಿಸರ್ಗ, ಯಜ್ಞನೀಃ ಎಂದಾಗುವುದು, ನೀ ಎಂಬ ಉತ್ತರಪದವು ಧಾತುಸ್ವರದಿಂದ ಅಂತೋದಾತ್ತ. ಸಮಾಸಾನಂತರವೂ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯ ) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬಂದು ಅದೇಸ್ವರ ನಿಲ್ಲುವುದು.

**ದೇವಯತೇ**—ದೇವಾನ್ ಆತ್ಮನಃ ಇಚ್ಛತಿ, ದೇವತೆಗಳನ್ನು ತನಗಾಗಿ ಇಚ್ಛಿಸುವನು, ಎಂದು ವಿಗ್ರಹವಾದಾಗ ದೇವಯನ್ ಎಂದಾಗುವುದು. ಹೇಗೆಂದರೆ, **ಸುಪ ಆತ್ಮನಃ ಕ್ಯಚ್** (ಪಾ.ಸೂ. ೩-೧-೮) ಎಂಬುದರಿಂದ ದೇವಂ ಎಂಬುದರ ಮುಂದೆ ಕ್ಯಚ್, ಸನಾದ್ಯಂತಾ ಧಾತವಃ (ಪಾ.ಸೂ. ೩-೧-೩೨) ಎಂಬುದರಿಂದ ಧಾತುಸಂಜ್ಞೆ. ಧಾತ್ವವಯವವಾದ ಸುಪ್ಪಿಗೆ **ಸುಪೋಧಾತು**—(ಪಾ.ಸೂ. ೨-೪-೭೧)ಎಂಬುದರಿಂದ ಲುಕ್, ದೇವ+ ಯ ಈಗ **ಕ್ಯಚಿಚ** (ಪಾ.ಸೂ. ೭-೪-೩೩) ಕ್ಯಚ್ ಪ್ರತ್ಯಯ ಪರದಲ್ಲಿರುವಾಗ ಅಕಾರಕ್ಕೆ ಈಕಾರಾದೇಶ ಬರುವುದು ಎಂಬುದರಿಂದ ಪ್ರಾಪ್ತವಾಗುವ ಈಕಾರಾದೇಶಕ್ಕೆ **ನ ಛಂದಸ್ಯಪುತ್ರಸ್ಯ** (ಪಾ.ಸೂ. ೭-೪-೩೫) ಕ್ಯಚ್ ಪ್ರತ್ಯಯ ಪರದಲ್ಲಿರುವಾಗ ಪುತ್ರಶಬ್ದಭಿನ್ನವಾದ ಹ್ರಸ್ವ ಅಕಾರಾಂತ ಶಬ್ದಗಳಿಗೆ ಈತ್ವ ದೀರ್ಘಗಳು ಬರುವುದಿಲ್ಲ ಎಂದು ನಿಷ್ಕೃಷ್ಟಸೂತ್ರಾರ್ಥ. **ಅನಂತರಸ್ಯ ವಿಧಿರ್ವಾ ಭವತಿ ಪ್ರತಿಷೇಧೋ ವಾ** (ಪರಿಭಾ. ೬೧) ಎಂಬುದರಿಂದ ಈ ನಿಷೇಧವು ಅನಂತರವಾದ ಕ್ಯಚಿಚ ಎಂಬುದಕ್ಕೆ ಮಾತ್ರ ಯದ್ಯಪಿ ನಿಷೇಧಕವಾಗುವುದು. ಆಗ ಈತ್ವ ಬರದಿದ್ದರೂ **ಅಕೃತ್ಸಾರ್ವಧಾತುಕಯೋಃ** (ಪಾ. ಸೂ. ೭-೪-೨೫ ) ಎಂಬುದರಿಂದ ದೀರ್ಘವು ಬರಬೇಕಾಗಿ ಬರುವುದು. ಏಕೆಂದರೆ ಅಕೃತ್ಸಾರ್ವಧಾತುಕಯೋಃ ಎಂಬುದಕ್ಕೆ ಕ್ಯಚಿಚ ಎಂಬುದು ಅಪವಾದವಾದುದು. ಅಪವಾದವಾದುದು ಬರದೇ ಹೋದರೆ ಉತ್ಸರ್ಗವು ತಡೆ ಇಲ್ಲದೆ ಬರುವುದು. ಆದುದರಿಂದ, ಕ್ಯಚ್ ಪ್ರತ್ಯಯ ಪರದಲ್ಲಿರುವಾಗ ಪುತ್ರಶಬ್ದಭಿನ್ನವಾದ ಅದಂತಶಬ್ದಕ್ಕೆ ಯಾವಯಾವುದು ಪ್ರಾಪ್ತವಾಗುವುದೋ ಅದೆಲ್ಲವೂ ಬರುವುದಿಲ್ಲ ಎಂದು ನಛಂದಸಿ ಎಂಬುದಕ್ಕೆ ಅರ್ಥವನ್ನು ಹೇಳಬೇಕು. ಅನಂತರಸ್ಯ ಎಂಬುದನ್ನು ಆಶ್ರಯಿಸುವುದಿಲ್ಲ. ಈ ಅಂಶದಲ್ಲಿ ಪ್ರಮಾಣವೇನೆಂದರೆ **ಅಶ್ವಾಘಸ್ಯಾತ್** (ಪಾ.ಸೂ. ೭-೪-೩೭) ಛಂದಸ್ಸಿನಲ್ಲಿ ಕ್ಯಚ್ ಪ್ರತ್ಯಯ ಪರದಲ್ಲಿರುವಾಗ ಅಶ್ವ ಅಘ ಇವುಗಳಿಗೆ ಆತ್ವ ಬರುವುದು ಎಂದು ಆತ್ವವಿಧಾನವೇ ಪ್ರಮಾಣವು. ಅಶ್ವಾಯಂತಃ, ಅಘಾಯವಃ ಎಂಬಲ್ಲಿ ದೀರ್ಘಾಕಾರಶ್ರವಣಕ್ಕಾಗಿ ಆತ್ವವು ವಿಧಿಸಲ್ಪಟ್ಟಿರುವುದು. ನ ಛಂದಸ್ಯಪುತ್ರಸ್ಯ ಎಂಬುದು ಈತ್ವ ಮಾತ್ರಕ್ಕೆ ಅನಂತರಸ್ಯ ಎಂಬ ನ್ಯಾಯದಿಂದ ನಿಷೇಧಕ ಎಂದು ಇಟ್ಟುಕೊಂಡರೆ ಅಕೃತ್ಸಾರ್ವಧಾತುಕಯೋಃ ಎಂಬುದರಿಂದಲೇ ದೀರ್ಘ ಬಂದು ಅಶ್ವಾಯಂತಃ ಅಘಾಯವಃ ಎಂಬ ರೂಪಗಳು ಸಿದ್ಧವಾಗುವುವು. ಆಗ ಅಶ್ವಾಘಸ್ಯಾತ್ ಎಂಬ ಸೂತ್ರವು ವ್ಯರ್ಥವಾಗುವುದು. ವ್ಯರ್ಥಂ ಸತ್ ಕಿಂಚಿದರ್ಥಂ ಜ್ಞಾಪಯತಿ ಎಂಬ ನ್ಯಾಯದಿಂದ ಈ ಸೂತ್ರವು ಕ್ಯಚಿಚ ಎಂಬುದರ ಈತ್ವ ಮಾತ್ರಕ್ಕೆ ನಿಷೇಧಕವಲ್ಲ. ದೀರ್ಘಕ್ಕೂ ಸಹ ನಿಷೇಧಕವೆಂದು ಜ್ಞಾಪಿಸುವುದು. ಈಗ ಈ ಸೂತ್ರವಿಲ್ಲದಿದ್ದರೆ ಅಶ್ವಾಯಂತಃ ಇತ್ಯಾದಿ ರೂಪಗಳು ಸಿದ್ಧಿಸವು. ಆದ್ದರಿಂದ ಸೂತ್ರವು ಸಾರ್ಥಕವಾಗುವುದು. ಆದಕಾರಣ ಕ್ಯಚಿಚ ಎಂಬುದು ಈತ್ವ ದೀರ್ಘಗಳೆರಡಕ್ಕೂ ನಿಷೇಧಕವೆಂದು ಸಿದ್ಧವಾಗುವುದು. ಏವಂಚ ಪ್ರಕೃತದಲ್ಲಿ ದೇವ+ಯ ಎಂಬಲ್ಲಿ ಅಕೃತ್ಸಾರ್ವಧಾತುಕಯೋಃ ಎಂಬುದರಿಂದ ದೀರ್ಘವೂ ಬರುವುದಿಲ್ಲ. ದೇವಯ ಎಂಬುದು ಧಾತು, ಇದರ ಮುಂದೆ **ವರ್ತಮಾನೇ ಲಟ್** (ಪಾ.ಸೂ. ೩-೨-೧೨೩) ಎಂಬುದರಿಂದ ಲಟ್, ಅದರ ಸ್ಥಾನದನಲ್ಲಿ **ಲಟಶ್ಶತೃಶಾನಚೌ**- (ಪಾ.ಸೂ. ೩-೨-೧೨೪) ಎಂಬುದರಿಂದ ಶತೃ, ದೇವಯ+ಅತ್. **ಕರ್ತರಿ ಶಪ್** ಎಂಬುದರಿಂದ ಶಪ್, ದೇವಯ+ಅ+ಅತ್, **ಅತೋಗುಣೇ** (ಪಾ.ಸೂ. ೬-೧-೯೭) ಎಂಬುದರಿಂದ ಪರರೂಪವು ಎರಡಾವರ್ತಿ ಬರುವುದು ದೇವಯತ್ ಎಂದಾಗುವುದು.

ಇಲ್ಲಿ ಕ್ಯಚ್ ಪ್ರತ್ಯಯವು ಚಿತ್ತಾದ್ದರಿಂದ **ಚಿತಃ** (ಪಾ.ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತ. **ಶಪ್** ಪಿತ್ತಾದ್ದರಿಂದ **ಅನುದಾತ್ತೌ ಸುಪ್ಪಿತೌ** (ಪಾ.ಸೂ. ೩-೧-೪) ಎಂಬುದರಿಂದ ಅನುದಾತ್ತ. **ಅತ್** ಎಂಬ ಶತೃ-ಪ್ರತ್ಯಯವು ಲಟ್ ಲಕಾರಸ್ಥಾನದಲ್ಲಿ ಬಂದಿರುವುದು. ಅದು ಶಿತ್ತಾದ್ದರಿಂದ **ತಿಙ್ಶಿತ್ಸಾರ್ವಧಾತುಕಂ** (ಪಾ.ಸೂ. ೩-೪-೧೧೩) ಎಂಬುದರಿಂದ ಸಾರ್ವಧಾತುಕ. ಶಪ್ ಎಂಬ ಅಕಾರಾಂತೋಪದೇಶದ ಮುಂದೆ ಇರುವುದು. ಆದ್ದರಿಂದ **ತಾಸ್ಯನುದಾತ್ತೇನ್ಙಿದದುಪದೇಶಾತ್**- (ಪಾ.ಸೂ. ೬-೧-೧೮೬) ಎಂಬುದರಿಂದ ಅತ್ ಎಂಬುದು ಅನುದಾತ್ತ. ಶಪ್‌ನ ಅಕಾರದೊಂದಿಗೆ ಪರರೂಪೈಕಾದೇಶದಿಂದ ಬಂದ ಅಕಾರವು **ಏಕಾದೇಶ ಉದಾತ್ತೇನೋದಾತ್ತಃ** (ಪಾ.ಸೂ. ೮-೨-೫) ಎಂಬುದರಿಂದ ಉದಾತ್ತ, ಈ ಉದಾತ್ತದೊಂದಿಗೆ ಅತ್ ಎಂಬುದರ ಅನುದಾತ್ತಾಕಾರಕ್ಕೆ ಪರರೂಪದಿಂದ ಬರುವ ಅಕಾರವೂ ಪೂರ್ವೋಕ್ತರೀತಿಯಲ್ಲಿ ಉದಾತ್ತ. ಏವಂಚ ದೇವ-ಯತ್ ಎಂಬಲ್ಲಿ ಯ ಎಂಬುದು ಉದಾತ್ತವಾದ್ದರಿಂದ ಇದು ಅಂತೋದಾತ್ತ ಎಂದು ಸಿದ್ಧವಾಯಿತು. ಇದರ ಮುಂದೆ ಚತುರ್ಥೀವಿಭಕ್ತಿ ಏಕವಚನಸಂಜ್ಞಕವಾದ ಙೇಪ್ರತ್ಯಯ ದೇವಯತ್+ಏ, **ಶತುರನುಮೋನದ್ಯಜಾದೀ** (ಪಾ.ಸೂ. ೬-೧-೧೭೩) ನುಮಾಗಮವನ್ನು ಹೊಂದದೇ ಇರುವ ಯಾವ ಶತೃಪ್ರತ್ಯಯವಿದೆಯೋ ಅವನ್ನು ಕೊನೆಯಲ್ಲಿ ಹೊಂದಿ ಅಂತೋದಾತ್ತವಾಗಿರುವ ಶಬ್ದದ ಮುಂದೆ ಇರುವ ನದೀಸಂಜ್ಞಕವರ್ಣವೂ, ಅಜಾದಿಯಾದ ಶಸಾದಿವಿಭಕ್ತಿಯೂ ಸಹ ಉದಾತ್ತವಾಗುವುದು ಎಂಬುದರಿಂದ ಏ ಎಂಬ ವಿಭಕ್ತಿಯು ಉದಾತ್ತ. ||೧೨||

# ಹದಿನಾರನೆಯ ಸೂಕ್ತವು.



॥ ಸಾಯಣಭಾಷ್ಯಂ ॥

**ಆ ತ್ವಾ ವಹಂತ್ವಿತಿ ಪಂಚಮಂ ನವರ್ಚಂ ಸೂಕ್ತಂ । ಋಷಿಚ್ಛಂದಸೀ ಪೂರ್ವವತ್ । ಅನುವರ್ತತೇ ವಿಶೇಷಾದೇಶಾಭಾವಾದಿಂದ್ರೋ ದೇವತಾ ॥ ವಿನಿಯೋಗಸ್ತು । ಪ್ರಾತಃಸವನೇ ಮೈತ್ರಾವರುಣಸ್ಯೋನ್ನೀಯಮಾನೇ ಸೂಕ್ತಮಾತ್ವಾ ವಹಂತು ಹರಯ ಇತಿ । ತಥಾ ಚ ದ್ವಿದೇವತ್ಯೈಃಶ್ಚರಂತೀತಿ ಖಂಡೇ ಸೂತ್ರಿತಂ । ಉನ್ನೀಯಮಾನೇಭ್ಯೋಽನ್ವಾಹಾ ತ್ವಾವಹಂತು । ಆ. ೫-೫- । ಇತಿ ॥ ತಥಾ ಷೋಡಶಿಶಸ್ತ್ರ ಆ ತ್ವಾ ವಹಂತು ಹರಯ ಇತಿ ತಿಸ್ರಃ । ತಥಾ ಸೂತ್ರಿತಮಥ ಷೋಡಶೀತಿ ಖಂಡೇ । ಆ ತ್ವಾ ವಹಂತು ಹರಯ ಇತಿ ತಿಸ್ರೋ ಗಾಯತ್ರ್ಯಃ । ಆ. ೬-೨. । ಇತಿ ॥**

**ಅನುವಾದವು**—ಇತ್ವಾ ವಹಂತು ಎಂಬುದು ನಾಲ್ಕನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವುವು. ಋಷಿಛಂದಸ್ಸುಗಳು ಹಿಂದಿನ ಸೂಕ್ತದಂತೆ. ಇಂದ್ರನು ದೇವತೆಯು. ವಿನಿಯೋಗವು—ಪ್ರಾತಸ್ಸವನಕಾಲದಲ್ಲಿ ಮೈತ್ರಾವರುಣನೆಂಬ ಋತ್ವಿಜನು ಉನ್ನಯನವೆಂಬ ಕರ್ಮದಲ್ಲಿ ಆತ್ವಾ ವಹಂತು ಎಂಬ ಸೂಕ್ತವನ್ನು ಪಠಿಸಬೇಕು- ಆಶ್ವಲಾಯನ ಶ್ರೌತಸೂತ್ರದಲ್ಲಿ ದ್ವಿದೇವತ್ಯೈಃಶ್ಚರಂತೀತಿ ಎಂಬ ಖಂಡದಲ್ಲಿ ಉನ್ನಯನಕ್ಕಾಗಿ ಆತ್ವಾವಹಂತು ಎಂಬ ಸೂಕ್ತವನ್ನು ಪಠಿಸಬೇಕೆಂದು ಹೇಳಿರುವುದು (ಆ.ಸೂ.೫-೫). ಇದಲ್ಲದೆ ಷೋಡಶೀ ಎಂಬ ಖಂಡದಲ್ಲಿ ಷೋಡಶಿಶಸ್ತ್ರಪಠನಕ್ಕಾಗಿ ಆತ್ವಾವಹಂತು ಹರಯಃ ಎಂಬ ಗಾಯತ್ರೀ ಋಕ್ಕಿನ ತೃಚವನ್ನು ಪಠಿಸಬೇಕೆಂದು ಅದೇ ಸೂತ್ರದಲ್ಲಿಯೇ ಹೇಳಿರುವುದು. (ಆ. ೬-೨).

॥ ಓಂ ॥

## ಸೂಕ್ತ—೧೬

॥ ಮಂಡಲ—೧ ॥ ಅನುವಾಕ—೪ ॥ ಸೂಕ್ತ—೧೬ ॥

॥ ಅಷ್ಟಕ —೧ ॥ ಅಧ್ಯಾಯ—೧ ॥ ವರ್ಗ— ೩೦, ೩೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೧–೯ ॥

॥ ಋಷಿಃ—ಮೇಧಾತಿಥಿಃ ಕಾಣ್ವಃ ॥

॥ ದೇವತಾ— ಇಂದ್ರಃ ।

॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಆ ತ್ವಾ ವಹಂತು ಹರಯೋ ವೃಷಣಂ ಸೋಮಪೀತಯೇ ।
ಇಂದ್ರ ತ್ವಾ ಸೂರಚಕ್ಷಸಃ ॥ ೧ ॥

॥ ಪದಪಾಠಃ ॥

ಆ । ತ್ವಾ । ವಹಂತು । ಹರಯಃ । ವೃಷಣಂ । ಸೋಮಽಪೀತಯೇ ॥
ಇಂದ್ರ । ತ್ವಾ । ಸೂರಽಚಕ್ಷಸಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ವೃಷಣಂ ಕಾಮಾನಾಂ ವರ್ಷಿತಾರಂ ತ್ವಾಂ ಸೋಮಪೀತಯೇ ಸೋಮಪಾನಾರ್ಥಂ ಹರಯಸ್ತ್ವದೀಯಾ ಅಶ್ವಾ ಆ ವಹಂತು । ಅಸ್ಮಿನ್ಕರ್ಮಣ್ಯಾನಯಂತು । ತಥಾ ಸೂರಚಕ್ಷಸಃ ಸೂರ್ಯಸಮಾನಪ್ರಕಾಶಯುಕ್ತಾ ಋತ್ವಿಜಸ್ತ್ವಾಂ ಮಂತ್ರೈಃ ಪ್ರಕಾಶಯಂತ್ವಿತಿ ಶೇಷಃ ॥ ಹರಂತೀತಿ ಹರಯಃ । ಇನ್ ಸರ್ವಧಾತುಭ್ಯಃ । ಉ.೪-೧೧೭ । ಇತೀನ್ । ನಿತ್ತ್ವಾದಾದ್ಯುದಾತ್ತಃ । ವೃಷಣಂ । ಕನಿನ್ಯುವೃಷಿತಕ್ಷೀತ್ಯಾದಿನಾ ಕನಿನ್ । ಕಿತ್ತ್ವಾಲ್ಲಘೂಪಧಗುಣಾಭಾವಃ । ವಾ ಷಪೂರ್ವಸ್ಯ ನಿಗಮೇ । ಪಾ. ೬-೪-೯ । ಇತಿ ವಿಕಲ್ಪಿತಮುಪಧಾದೀರ್ಘತ್ವಂ । ಸೋಮಪೀತಯೇ । ಐಭಿರಗ್ನ ಇತ್ಯತ್ರೋಕ್ತಂ । ಋಗ್ವೇ ೧-೧೪-೧ .

ಸೂರಚಕ್ಷಸಃ । ಚಕ್ಷಿಙ್ ವ್ಯಕ್ತಾಯಾಂ ವಾಚಿ । ಸರ್ವಧಾತುಭ್ಯೋಽಸುನ್ । ಚಕ್ಷಿಙಃ ಖ್ಯಾಞ್ । ಪಾ ೨-೪-೫೪ । ಇತಿ ನ ಭವತಿ । ಅಸನೋಃ ಪ್ರತಿಷೇಧೋ ವಕ್ತವ್ಯ ಇತಿ ನಿಷೇಧಾತ್ । ಷೂ ಪ್ರೇರಣೇ । ಸುವತೀತಿ ಸೂರಃ । ಸುಸೂಧಾಗೃಧಿಭ್ಯಃ ಕ್ರನ್ । ಉ. ೨-೨೪ । ಇತಿ ಕ್ರನ್ । ಕಿತ್ತ್ವಾದ್ಗುಣಾಭಾವಃ । ನಿತ್ತ್ವಾದಾದ್ಯುದಾತ್ತಃ । ಸೂರವತ್ಖ್ಯಾನಂ ಪ್ರಕಾಶೋ ಯೇಷಾಂ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

ಇಂದ್ರ— ಎಲೈ ಇಂದ್ರನೇ । ವೃಷಣಂ—(ಇಷ್ಟಾರ್ಥಗಳನ್ನು) ವರ್ಷಣಮಾಡುವ (ಕೊಡುವ) । ತ್ವಾ—ನಿನ್ನನ್ನು । ಸೋಮಪೀತಯೇ—ಸೋಮಪಾನಮಾಡುವುದಕ್ಕೋಸ್ಕರ । ಹರಯಃ— (ನಿನ್ನ) ಕುದುರೆಗಳು । ಆ ವಹಂತು—( ಈ ಕರ್ಮ ನಡೆಯುತ್ತಿರುವ ಪ್ರದೇಶಕ್ಕೆ) ಕರೆದುಕೊಂಡು ಬರಲಿ । ಸೂರಚಕ್ಷಸಃ—ಸೂರ್ಯನಂತೆ ಪ್ರಕಾಶವುಳ್ಳ ತೇಜಸ್ವಿಗಳಾದ ಋತ್ವಿಜರು । ತ್ವಾ—ನಿನ್ನನ್ನು (ಸ್ತೋತ್ರಮಾಡಲಿ).

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಸಕಲ ಇಷ್ಟಾರ್ಥಗಳನ್ನು ಕೊಡುವವನು. ನಿನ್ನನ್ನು ಮಹಾತೇಜಸ್ವಿಗಳಾದ ಋತ್ವಿಜರು ಸ್ತುತಿಸುತ್ತಾರೆ. ನೀನು ನಿನ್ನ ಅಶ್ವಗಳನ್ನೇರಿ ಸೋಮಪಾನಮಾಡುವುದಕ್ಕೆ ನಮ್ಮ ಯಜ್ಞಶಾಲೆಗೆ ಬಾ.

English Translation

Indra, let your horses bring you, bestower of riches, to drink the Soma-Juice ; May the priests radiant as the Sun, praise you.

॥ ವಿಶೇಷವಿಷಯಗಳು ॥

ಸೂರಚಕ್ಷಸಃ- ಸೂರ್ಯಸಮಾನಪ್ರಕಾಶಯುಕ್ತಾ ಋತ್ವಿಜಸ್ತ್ವಾಂ ಮಂತ್ರೈಃ ಪ್ರಕಾಶಯಂತು ॥ ಸೂರ್ಯನಂತೆ ತೇಜಸ್ವಿಗಳಾದ ಋತ್ವಿಜರು ನಿನ್ನನ್ನು ಮಂತ್ರಗಳಿಂದ ಸ್ತುತಿಸಲಿ. ಪ್ರಕಾಶಪಡಿಸಲಿ ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

ಹರಯಃ—ಹೃಞ್ ಹರಣೇ, ಧಾತು. ಸರ್ವಧಾತುಭ್ಯ ಇನ್ (ಉ.ಸೂ. ೪-೫೫೭) ಎಲ್ಲಾ ಧಾತುಗಳ ಮುಂದೆಯೂ ಇನ್ ಪ್ರತ್ಯಯ ಬರುವುದು ಎಂಬುದರಿಂದ ಇನ್ ಹೃ + ಇ, ಸಾರ್ವಧಾತುಕಾರ್ಧಧಾತುಕಯೋಃ (ಪಾ. ಸೂ. ೭-೩-೮೪) ಎಂಬುದರಿಂದ ಗುಣ. ಉರಣ್ರಪರಃ, ಎಂಬುದರಿಂದ ರ ಪರವಾಗಿ ಬರುವುದು, ಹರಿ

ಎಂದಾಗುವುದು. ಇದರ ಮುಂದೆ ಜಸ್, ಜಸಿಚ, (ಪಾ. ಸೂ. ೭-೩-೧೦೯) ಎಂಬುದರಿಂದ ಗುಣ, ಹರೇ+ಅಸ್ ಏಚೋಽಯವಾಯಾವಃ, (ಪಾ. ಸೂ. ೬-೧-೭೮) ಎಂಬುದರಿಂದ ಅಯಾದೇಶ. ಹರಯಸ್ ರುತ್ವ ವಿಸರ್ಗ, ಹರಿ ಎಂಬುದು ನಿತ್ಸ್ವರದಿಂದ ಆದ್ಯುದಾತ್ತ.

ವೃಷಣಂ—ವೃಷು ಸೇಚನೇ, ಧಾತು. ಇದರ ಮುಂದೆ ಕನಿನ್ಯುವೃಷಿತಕ್ಷಿರಾಜಿಧನ್ವಿದ್ಯುಪ್ರತಿದಿವಃ (ಉ.ಸೂ. ೧-೧೫೪) ಎಂಬುದರಿಂದ ಕನಿನ್ ಪ್ರತ್ಯಯ. ಪ್ರತ್ಯಯವು ಕಿತ್, ಆದ್ದರಿಂದ ಕ್ಙಿತಿಚ, ಎಂಬುದರಿಂದ ಗುಣ ನಿಷೇಧ ಬರುವುದರಿಂದ ಪುಗಂತಲಘೂಪಧಸ್ಯಚ, ಎಂಬುದರಿಂದ ಉಪಧಾಗುಣ ಬರುವುದಿಲ್ಲ. ವೃಷನ್, ಎಂಬುದರ ಮುಂದೆ ದ್ವಿತೀಯಾ ಏಕವಚನ ಅಮ್ ಪ್ರತ್ಯಯ ವೃಷನ್+ಅಮ್. ವಾಷಪೂರ್ವಸ್ಯನಿಗಮೇ (ಪಾ. ಸೂ. ೪-೪-೯) ಸಂಬುದ್ಧಿಭಿನ್ನವಾದ ಸರ್ವನಾಮಸ್ಥಾನಪ್ರತ್ಯಯವು ಪರವಾಗಿರುವಾಗ ಷಕಾರದ ಮುಂದೆ ಇರುವ ಉಪಧಾಭೂತವಾದ ಅಚ್‌ಗೆ ದೀರ್ಘವು ವಿಕಲ್ಪವಾಗಿ ಬರುವುದು ಎಂಬುದರಿಂದ ದೀರ್ಘವು ವಿಕಲ್ಪವಾಗಿ ವಿಹಿತವಾಗಿರುವುದು. ಆದ್ದರಿಂದ ಇಲ್ಲಿ ದೀರ್ಘಬರುವುದಿಲ್ಲ. ಋವರ್ಣಾನ್ನಸ್ಯಣತ್ವಂವಾಚ್ಯಮ್ ( ಪಾ. ಸೂ. ವಾ. ೮-೪-೧-೧) ಎಂಬುದರಿಂದ ನಕಾರಕ್ಕೆ ಣಕಾರ, ವೃಷಣಮ್, ಎಂದಾಗುವುದು.

ಸೋಮಪೀತಯೇ-ಏಭಿರಗ್ನೇ (ಋ. ಸಂ. ೧-೧೪-೧) ಎಂಬಲ್ಲಿ ವಿವೃತವಾಗಿರುವುದು

ಸೂರಚಕ್ಷಸಃ—ಚಕ್ಷಿಙ್ ವ್ಯಕ್ತಾಯಾಂ ವಾಚಿ, ಧಾತು. ಸರ್ವಧಾತುಭ್ಯೋಽಸುನ್ (ಉ.ಸೂ. ೪-೭೨೮) ಎಂಬುದರಿಂದ ಅಸುನ್ ಪ್ರತ್ಯಯ, ಅಸುನ್ ಎಂಬುದು ಆರ್ಧಧಾತುಕಂಶೇಷಃ, (ಪಾ.ಸೂ. ೩-೪-೧೧೪) ಎಂಬುದರಿಂದ ಆರ್ಧಧಾತುಕವಾದ ಪ್ರತ್ಯಯ, ಆದ್ದರಿಂದ ಚಕ್ಷಿಙಃಖ್ಯಾಞ್ (ಪಾ.ಸೂ. ೨-೪-೫೪) ಆರ್ಧಧಾತುಕ ಪ್ರತ್ಯಯ ಪರದಲ್ಲಿರುವಾಗ ಚಕ್ಷಿಙ್‌ಧಾತುವಿಗೆ ಖ್ಯಾಞ್ ಆದೇಶ ಬರುವುದು, ಎಂಬುದರಿಂದ ಖ್ಯಾಞ್ ಆದೇಶವು ಯದ್ಯಪಿ ಪ್ರಾಪ್ತವಾಗುವುದು. ಆದರೂ ವರ್ಜನೇ ಪ್ರತಿಷೇಧಃ (ಪಾ.ಸೂ. ೨-೪.೫೪-೧೯)ವರ್ಜನಾರ್ಥ ತೋರುವಾಗ ಚಕ್ಷಿಙ್‌ಗೆ ಖ್ಯಾಞ್ ಬರುವುದಿಲ್ಲ ಎಂದು ಹೇಳಿ ನಂತರ- ಅಸನಯೋಶ್ಚ ( ಪಾ. ಸೂ. ವಾ. ೨-೪-೫೪-೧೦ ) ಅಸ್ ಅನ ಪ್ರತ್ಯಯಗಳು ಪರದಲ್ಲಿರುವಾಗ ಚಕ್ಷಿಙ್‌ಗೆ ಖ್ಯಾಞ್ ಬರುವುದಿಲ್ಲ ಎಂದು ವಾರ್ತಿಕಕಾರರು ಹೇಳಿರುವರು ಆದ್ದರಿಂದ ಇಲ್ಲಿ ಅಸ್ ಪ್ರತ್ಯಯ ಪರದಲ್ಲಿರುವಕಾರಣ ಚಕ್ಷಿಙ್‌ಗೆ ಖ್ಯಾಞ್ ಬರುವುದಿಲ್ಲ. ಷೂ ಪ್ರೇರಣೇ- ತುದಾದಿಧಾತು. ಸುವತಿ ಇತಿ ಸೂರಃ, ಜನರನ್ನು ಕಾರ್ಯಗಳಲ್ಲಿ ಪ್ರೇರಿಸುವವನು ಎಂದು ಅರ್ಥ. ಧಾತ್ವಾದೇಃಷಃಸಃ (ಪಾ. ಸೂ. ೬-೧-೬೪) ಎಂಬುದರಿಂದ ಷಕಾರಕ್ಕೆ ಸಕಾರ. ಸುಸೂಧಾಗೃಧಿಭ್ಯಃಕ್ರನ್ (ಉ. ಸೂ. ೨-೧೮೭) ಷುಞ್ ಅಭಿಷವೇ, ಷೂ ಪ್ರೇರಣೇ- ಡುಧಾಞ್ ಧಾರಣಪೋಷಣಯೋಃ, ಗೃಧು ಅಭಿಕಾಂಕ್ಷಾಯಾಮ್, ಈಧಾತುಗಳ ಮುಂದೆ ಕ್ರನ್ ಬರುವುದು ಎಂಬುದರಿಂದ ಸೂ ಧಾತುವಿನ ಮುಂದೆ ಕ್ರನ್.ಸೂ + ರ, ಪ್ರತ್ಯಯವು ಕಿತ್ ಆದ್ದರಿಂದ ಕ್ಙಿತಿಚ (ಪಾ.ಸೂ.೧-೧-೫) ಎಂದು ನಿಷೇಧ ಬರುವುದರಿಂದ ಸಾರ್ವಧಾತುಕಾರ್ಧಧಾತುಕಯೋಃ, (ಪಾ. ಸೂ. ೭-೪-೨೫) ಎಂಬುದರಿಂದ ಗುಣಬರುವುದಿಲ್ಲ—ಸೂರ ಎಂದಾಗುವುದು. ಇದು ನಿತ್ಸ್ವರದಿಂದ ಆದ್ಯುದಾತ್ತ. ಸೂರವತ್ ಚಕ್ಷಃ ಖ್ಯಾನಂ=ಪ್ರಕಾಶಃ ಯೇಷಾಂ ತೇ ಸೂರಚಕ್ಷಸಃ ಎಂದು ಬಹುವ್ರೀಹಿಸಮಾಸ. ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್ ( ಪಾ. ಸೂ. ೬-೧-೨ ) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುವುದು || ೧ ||

॥ ಸಂಹಿತಾಪಾಠಃ ॥

ಇಮಾ ಧಾನಾ ಘೃತಸ್ನುವೋ ಹರೀ ಇಹೋಪ ವಕ್ಷತಃ ।
ಇಂದ್ರಂ ಸುಖತಮೇ ರಥೇ ॥ ೨ ॥

॥ ಪದಪಾಠಃ ॥

ಇಮಾಃ । ಧಾನಾಃ । ಘೃತಽಸ್ನುವಃ । ಹರೀ ಇತಿ । ಇಹ । ಉಪ । ವಕ್ಷತಃ ॥
ಇಂದ್ರಂ । ಸುಖಽತಮೇ । ರಥೇ ॥ ೨ ॥

॥ ಸಾಯಣಭಾಷ್ಯಂ ॥

ಹರಿಶಬ್ದ ಇಂದ್ರರಥಸ್ಯ ವೋಢಾರಾವಶ್ವಾವಾಚಷ್ಟೇ । ತಥಾ ಚ ಶ್ರುತ್ಯಂತರಂ । ಹರ್ಯೋಃ ಸ್ಥಾತೇತಿ । ಹರಿಭ್ಯಾಂ ತ್ವೇಂದ್ರೋ ದೇವತಾಂ ಗಮಯತ್ವಿತಿ ಚ । ಏತದೇವಾಭಿಪ್ರೇತ್ಯ ನಿಘಂಟುಕಾರ ಆಹ । ಹರೀ ಇಂದ್ರಸ್ಯೇತಿ । ತಾದೃಶೌ ಹರೀ ಇಮಾ ಯಾಗಾರ್ಥಂ ವೇದ್ಯಾಮಾಸಾದಿತತ್ವೇನ ಪುರೋವರ್ತಿನೀರ್ಧಾನಾ ಭೃಷ್ಟಯವತಂಡುಲಾನುದ್ದಿಶ್ಯ ಸುಖತಮೇ ರಥ ಇಂದ್ರಮವಸ್ಥಾಪ್ಯೇಹಾಸ್ಮಿನ್ಕರ್ಮಣ್ಯುಪ ವಕ್ಷತಃ । ವೇದಿಸಮೀಪೇ ವಹತಾಂ । ಕೀದೃಶೀರ್ಧಾನಾಃ । ಘೃತಸ್ನುವೋಽಲಂಕರಣೋಪಸ್ತರಣಾಭಿಘಾರಣೇನ ಘೃತಸ್ರಾವಿಣೀಃ ॥ ಧೀಯಂತ ಇತಿ ಧಾನಾಃ । ಧಾಪೃವಸ್ಯಜ್ಯತಿಭ್ಯೋ ನಃ । ಉ. ೩.೬ । ಇತಿ ನಃ । ಪ್ರತ್ಯಯಸ್ವರಃ । ಘೃತಸ್ನುವಃ । ಘೃತಂ ಸ್ನುವಂತೀತಿ ಘೃತಸ್ನುವಃ । ಕ್ವಿಪಿ ತುಗಭಾವಶ್ಛಾಂದಸಃ । ಧಾತುಸ್ವರಃ । ಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವಂ । ಸ್ನೋಃ ಸಂಯೋಗಪೂರ್ವತ್ವೇನ ಯಣಭಾವಾದುವಙಾದೇಶಃ । ಹರೀ । ಹೃಞ್ ಹರಣೇ । ಸರ್ವಧಾತುಭ್ಯ ಇನ್ । ನಿತ್ತ್ವಾದಾದ್ಯುದಾತ್ತಃ । ಪ್ರಗೃಹ್ಯತ್ವಾತ್ಸಂಹಿತಾಯಾಂ ಪ್ರಕೃತಿಭಾವಃ । ವಕ್ಷತಃ । ಪ್ರಾರ್ಥನಾಯಾಂ ಲಿಙರ್ಥೇ ಲೇಟ್ । ತಸ್ಯ ಪ್ರಥಮಪುರುಷದ್ವಿವಚನಂ ತಸ್ । ಲೇಟೋಽಡಾಟಾವಿತ್ಯಡಾಗಮಃ । ತಪಿ ಪ್ರಾಪ್ತೇ ಸಿಬ್ಬಹುಲಂ ಲೇಟೀತಿ ಸಿಪ್। ಢತ್ವಕತ್ವಷತ್ವಾನಿ । ತಿಙ್ಙತಿಙ ಇತಿ ನಿಘಾತಃ । ಸುಖತಮೇ । ಗತಂ ॥

॥ ಪ್ರತಿಪದಾರ್ಥ ॥

ಹರೀ—ಇಂದ್ರನ ಎರಡು ಕುದುರೆಗಳು । ಇಮಾಃ—ಈ (ಯಾಗಕ್ಕೋಸ್ಕರ ವೇದಿಯ ಮೇಲೆ ಸಿದ್ಧಪಡಿಸಿರುವ) । ಘೃತಸ್ನುವಃ—ಘೃತಸಿಕ್ತವಾದ ಎಂದರೆ ತುಪ್ಪದಿಂದ ನೆನೆದಿರುವ । ಧಾನಾಃ—ಯವ, ತಂಡುಲ ಮೊದಲಾದ ಧಾನ್ಯಗಳ ಸ್ವೀಕಾರಕ್ಕಾಗಿ । ಸುಖತಮೇ—ಸುಖಕರವಾದ । ರಥೇ—ರಥದಲ್ಲಿ । ಇಂದ್ರಂ-ಇಂದ್ರನನ್ನು (ಕುಳ್ಳಿರಿಸಿಕೊಂಡು) । ಇಹ—ಇಲ್ಲಿಗೆ (ಈ ಯಜ್ಞವು ನಡೆಯುತ್ತಿರುವ ಪ್ರದೇಶಕ್ಕೆ) । ಉಪ ವಕ್ಷತಃ—ಕರೆತರಲಿ.

॥ ಭಾವಾರ್ಥ ॥

ಯಜ್ಞದಲ್ಲಿ ಹೋಮಾರ್ಥವಾಗಿ ತುಪ್ಪದಿಂದ ಚೆನ್ನಾಗಿ ನೆನೆದಿರುವ ಯವ ತಂಡುಲಾದಿ ಧಾನ್ಯಗಳು ಯಜ್ಞಕುಂಡದ ಸುತ್ತಲೂ ಅಲಂಕರಣೋಪಸ್ತರಣಗಳನ್ನು ಮಾಡುವಾಗ ಉದುರಿರುವುವು. ಅದನ್ನು ತಿನ್ನುವುದಕ್ಕಾಗಿ ಹರೀ ಎಂಬ ಇಂದ್ರನ ಎರಡು ಕುದುರೆಗಳು ಇಂದ್ರನನ್ನು ಸುಖಕರವಾದ ರಥದಲ್ಲಿ ಕುಳ್ಳಿರಿಸಿಕೊಂಡು ಈ ಯಜ್ಞಭೂಮಿಯ ಸಮೀಪಕ್ಕೆ ಕರೆತರಲಿ.

English Translation

Let the horses convey Indra in an easy-moving chariot hither where these grains of parched barely steeped in clarified butter are being prepared for the Sacrifice.

॥ ವಿಶೇಷವಿಷಯಗಳು ॥

ಧಾನಾಃ—ಅಗ್ನಿಯಲ್ಲಿ ಹೋಮಮಾಡುವುದಕ್ಕಾಗಿ ಸಿದ್ಧಪಡಿಸಿರುವ ಯವ ತಂಡುಲಾದಿ ಧಾನ್ಯಗಳು ಅಗ್ನಿಸಂಸ್ಕಾರಕಾರ್ಯದಲ್ಲಿ ಅಲಂಕರಣ, ಉಪಸ್ತರಣ ಮೊದಲಾದ ಕರ್ಮಗಳನ್ನು ಯವ ತಂಡುಲಾದಿಗಳಿಂದ ಮಾಡುವಾಗ ಆ ಧಾನ್ಯದ ಕಾಳುಗಳು ಅಗ್ನಿಕುಂಡದ ಸುತ್ತಲೂ ಉದುರಿರುವುವು. ಅವು ಇಂದ್ರನ ಅಶ್ವಗಳಿಗೆ ಸಲ್ಲಬೇಕಾದ ಯಜ್ಞಭಾಗವು. ಅದನ್ನು ತಿನ್ನುವುದಕ್ಕಾಗಿ ಇಂದ್ರನ ಕುದುರೆಗಳು ಇಂದ್ರನ ಸಹಿತವಾಗಿ ಬರಲಿ ಎಂದಭಿಪ್ರಾಯವು.

ಘೃತಸ್ನುವಃ—ಘೃತಂ ಸ್ನುವಂತೀತಿ ಘೃತಸ್ನುವಃ । ತುಪ್ಪದಿಂದ ಚೆನ್ನಾಗಿ ನೆನೆದಿರುವ ಅಥವಾ ತುಪ್ಪವು ಜಿನುಗುತ್ತಿರುವ.

॥ ವ್ಯಾಕರಣಪ್ರಕ್ರಿಯಾ ॥

ಧಾನಾಃ—ಧೀಯಂತೇ ಇತಿ ಧಾನಾಃ ಡುಧಾಞ್ ಧಾರಣಪೋಷಣಯೋಃ ಧಾತು. ಧಾಪೃವಸ್ಯಜ್ಯತಿಭ್ಯೋನಃ (ಉ. ಸೂ. ೩-೨೮೬) ಡುಧಾಞ್ ಧಾರಣಾದೌ, ಪೃ ಪಾಲನಪೂರಣಯೋಃ, ವಸ ನಿವಾಸೇ, ಅಜ ಗತೌ, ಅತ ಸಾತತ್ಯಗಮನೇ. ಈ ಧಾತುಗಳ ಮುಂದೆ ನ ಪ್ರತ್ಯಯ ಬರುವುದು ಎಂಬುದರಿಂದ ಧಾ ಧಾತುವಿನ ಮುಂದೆ ನ ಪ್ರತ್ಯಯ ಬಂದರೆ ಧಾನ, ಎಂದಾಗುವುದು. ಸ್ತ್ರೀತ್ವ ವಿವಕ್ಷೆಯಿರುವುದರಿಂದ ಅಜಾದ್ಯತಷ್ಟಾಪ್ (ಪಾ. ಸೂ. ೪-೧-೪) ಎಂಬುದರಿಂದ ಟಾಪ್ ಪ್ರತ್ಯಯ, ಧಾನ + ಆ ಸವರ್ಣದೀರ್ಘ, ದ್ವಿತೀಯಾವಿಭಕ್ತಿ ಬಹುವಚನದಲ್ಲಿ ಧಾನಾಃ ಎಂದಾಗುವುದು, ನ ಎಂಬುದಕ್ಕೆ ಆದ್ಯುದಾತ್ತಶ್ಚ (ಪಾ. ಸೂ. ೩-೧-೩) ಎಂಬುದರಿಂದ ಆದ್ಯುದಾತ್ತ ಬರುವುದು. ಟಾ ಪ್ರತ್ಯಯದೊಂದಿಗೆ ಬಂದ ಸವರ್ಣದೀರ್ಘರೂಪವಾದ ಏಕಾದೇಶವೂ ಏಕಾದೇಶ ಉದಾತ್ತೇನೋದಾತ್ತಃ, ಎಂಬುದರಿಂದ ಉದಾತ್ತ. ಏವಂಚ ಧಾನಾಶಬ್ದವು ಅಂತೋದಾತ್ತ.

ಘೃತಸ್ನುವಃ—ಷ್ಣು ಪ್ರಸ್ರವಣೇ, ಧಾತು, ಅದಾದಿ. ಘೃತಂ ಸ್ನುವನ್ತಿ ಇತಿ ಘೃತಸ್ನುವಃ ಘೃತಂ ಎಂಬ ಸುಬಂತವು ಉಪಪದವಾಗಿರುವಾಗ ಷ್ಣು ಧಾತುವಿನ ಮುಂದೆ ಕ್ವಿಪ್ ಚ (ಪಾ. ಸೂ. ೩-೨-೭೬) ಎಂಬುದರಿಂದ

ಕ್ವಿಪ್, ಕ್ವಿಪ್‌ಗೆ ಲೋಪ, **ಧಾತ್ವಾದೇಃಷಃಸಃ** (ಪಾ.ಸೂ. ೬-೧-೬೪) ಎಂಬುದರಿಂದ ಷಕಾರಕ್ಕೆ ಸಕಾರ. ಕೃದಂತ-ಪ್ರಾತಿಪದಿಕಾವಯವವಾದ ಅಮ್ ಎಂಬ ಸುಪ್ಪಿಗೆ ಲುಕ್, ಘೃತಸ್ನು ಎಂದಾಯಿತು, ಈಗ ಕ್ವಿಪ್ ಎಂಬ ಪಿತ್ತಾದ ಕೃತ್ತು ಲುಪ್ತವಾದರೂ **ಪ್ರತ್ಯಯಲೋಪೇ ಪ್ರತ್ಯಯಲಕ್ಷಣಮ್** (ಪಾ. ಸೂ. ೧-೧-೬೨) ಎಂಬುದರಿಂದ ಪರದಲ್ಲಿರುವುದು. ಆದ್ದರಿಂದ ಹ್ರಸ್ವಸ್ಯ ಪಿತಿಕೃತಿತುಕ್ ಎಂಬುದರಿಂದ ತುಗಾಗಮವು ಪ್ರಾಪ್ತವಾಗುವುದು. ಆದರೂ ಛಾಂದಸಪ್ರಕ್ರಿಯೆಯಿಂದ ಬರುವುದಿಲ್ಲ. ಅಥವಾ **ಆಗಮಶಾಸ್ತ್ರಮನಿತ್ಯಮ್** ( ಪರಿಭಾ. ೯೪ ) ಎಂಬುದರಿಂದ ಬರುವುದಿಲ್ಲ. ಸ್ನು ಎಂಬುದು ಧಾತುವಾದ್ದರಿಂದ **ಧಾತೋಃ** ( ಪಾ. ಸೂ. ೬-೧-೧೬೨) ಎಂಬುದರಿಂದ ಅಂತೋದಾತ್ತ. ಸಮಾಸಾನಂತರವೂ **ಗತಿಕಾರಕೋಪಪದಾತ್ಕೃತ್** (ಪಾ. ಸೂ ೬-೨-೧೩) ಎಂಬ ಕೃದುತ್ತರಪದಪ್ರಕೃತಿಸ್ವರದಿಂದ ಅದೇ ನಿಲ್ಲುವುದು. ಘೃತಸ್ನು ಎಂಬುದರ ಮುಂದೆ ಶಸ್. ಘೃತಸ್ನು+ಅಸ್, ಉಕಾರವು ಸ್ನ್ ಎಂಬ ಸಂಯೋಗದ ಮುಂದೆ ಇರುವುದು. ಆದ್ದರಿಂದ ಓಸ್ಸುಪಿ (ಪಾ ಸೂ. ೬-೪-೮೩) ಅಜಾದಿಯಾದ ಸುಪ್ ಪ್ರತ್ಯಯ ಪರದಲ್ಲಿರುವಾಗ, ಧಾತ್ವವಯವ ಮಾತ್ರದಿಂದ ಉಂಟಾದ ಯಾವ ಸಂಯೋಗವಿದೆಯೋ ಅದರ ಮುಂದೆ ಇಲ್ಲದೇ ಇರುವ ಯಾವ ಉಕಾರವಿದೆಯೋ ಆ ಉಕಾರವನ್ನು ಕೊನೆಯಲ್ಲಿ ಹೊಂದಿರುವ ಯಾವ ಧಾತುವಿದೆಯೋ ಆ ಧಾತುವನ್ನು ಕೊನೆಯಲ್ಲಿ ಹೊಂದಿರುವ ಅನೇಕಾಚ್ಕವಾದ ಅಂಗಕ್ಕೆ ಯಣಾದೇಶ ಬರುವುದು ಎಂಬುದರಿಂದ ಯಣಾದೇಶ ಬರುವುದಿಲ್ಲ. **ಅಚಿಶ್ನುಧಾತುಭ್ರುವಾಂಯ್ವೋರಿಯಙುವಙೌ** (ಪಾ. ಸೂ. ೬-೪-೭೭) ಎಂಬುದರಿಂದ ಉಕಾರಕ್ಕೆ ಉವಙಾದೇಶ, ಘೃತಸ್ನುವಮ್ ಎಂದಾಗುವುದು.

**ಹರೀ**—ಹೃಞ್ ಹರಣೇ, **ಸರ್ವಧಾತುಭ್ಯಇನ್** (ಉ. ಸೂ. ೪-೫-೫೫೭) ಎಂಬುದರಿಂದ ಇನ್ ಪ್ರತ್ಯಯ ಗುಣ ರಪರತ್ವ, **ಞ್ನಿತ್ಯಾದಿರ್ನಿತ್ಯಮ್** (ಪಾ.ಸೂ. ೬-೧-೧೯೭) ಎಂಬುದರಿಂದ ಹರಿ ಎಂಬುದು ಆದ್ಯುದಾತ್ತ. ಇದರ ಮುಂದೆ ಪ್ರಥಮಾದ್ವಿವಚನ ಔ ಪ್ರತ್ಯಯ ಹರಿ+ಔ, **ಪ್ರಥಮಯೋಃಪೂರ್ವಸವರ್ಣಃ** (ಪಾ. ಸೂ. ೬-೧-೧೦೨) ಎಂಬುದರಿಂದ ಪೂರ್ವಸವರ್ಣದೀರ್ಘ ಹರೀ ಎಂದಾಗುವುದು. **ಈಕಾರವು ಅಂತಾದಿವಚ್ಚ** (ಪಾ. ಸೂ ೬-೧-೮೫) ಎಂದು ಪರಾದಿವದ್ಭಾವ ಬರುವುದರಿಂದ ಈಕಾರಾಂತವಾದ ದ್ವಿವಚನವಾಗುವುದು. ಏವಂಚ ಇದಕ್ಕೆ **ಈದೂದೇ ದ್ವಿವಚನಂ ಪ್ರಗೃಹ್ಯಮ್** (ಪಾ. ಸೂ. ೧-೧-೧೧) ಈಕಾರಾಂತ, ಊಕಾರಾಂತ, ಏಕಾರಾಂತ ದ್ವಿವಚನಗಳು ಪ್ರಗೃಹ್ಯ ಸಂಜ್ಞೆಯನ್ನು ಹೊಂದುವುವು ಎಂಬುದರಿಂದ ಪ್ರಗೃಹ್ಯಸಂಜ್ಞೆ ಇರುವುದು. ಆದ್ದರಿಂದ ಸಂಹಿತಾಕಾಲದಲ್ಲಿ ಹರೀ+ಇಹ ಎಂಬಲ್ಲಿ ಸ್ವರ ಪರವಾಗಿರುವಾಗ **ಪ್ಲುತಪ್ರಗೃಹ್ಯಾ ಅಚಿನಿತ್ಯಮ್** (ಪಾ- ಸೂ. ೬-೧-೧೨೫) ಅಚ್ ಪರದಲ್ಲಿರುವಾಗ ಪ್ಲುತ ಮತ್ತು ಪ್ರಗೃಹ್ಯ ಇವು ನಿತ್ಯವಾಗಿ ಪ್ರಕೃತಿಭಾವವನ್ನು ಹೊಂದುವುವು. ಎಂಬುದರಿಂದ ಪ್ರಕೃತಿಭಾವ ಬರುವುದು. ಪ್ರಕೃತ್ಯಾ ಸ್ವಭಾವೇನ ನಿರ್ವಿಕಾರಸ್ವರೂಪೇಣ ಭಾವಃ ಭವನಂ ಸ್ಥಿತಿಃ ಪ್ರಕೃತಿಭಾವಃ, | ಪ್ರಕೃತಿಭಾವ ಎಂದರೆ ವಿಕಾರವನ್ನು ಹೊಂದದೇ ಇರುವುದು ಎಂದು ಅರ್ಥ.

**ವಕ್ಷತಃ**—ವಹ ಪ್ರಾಪಣೇ, ಧಾತು, ಇದರ ಮುಂದೆ ಲಿಙರ್ಥೇ ಲೇಟ್ (ಪಾ. ಸೂ. ೩-೪-೭) ಎಂಬುದರಿಂದ ಪ್ರಾರ್ಥನಾರೂಪವಾದ ಲಿಙರ್ಥದಲ್ಲಿ ಲೇಟ್ ಬರುವುದು, ಅದಕ್ಕೆ ಪ್ರಥಮ ಪುರುಷ ದ್ವಿವಚನ ತಸ್ ವಹ್+ತಸ್ **ಲೇಟೋಡಾಟೌ** ( ಪಾ. ಸೂ. ೩-೪-೯೪ ) ಎಂಬುದರಿಂದ ಲೇಟಿಗೆ ಅಡಾಗಮ ವಹ್+ಅತಸ್, ಕರ್ತರಿ ಶಪ್, ಎಂಬುದರಿಂದ ಶಪ್ ಪ್ರಾಪ್ತವಾದರೆ ಅದನ್ನುಬಾಧಿಸಿ **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಎಂಬುದರಿಂದ ಸಿಪ್, ವಹ್+ಸ್+ಅತಸ್. **ಹೋಢಃ** (ಪಾ. ಸೂ. ೮-೨-೩೧) ಎಂಬುದರಿಂದ ಹಕಾರಕ್ಕೆ ಢಕಾರ, **ಷಢೋಃಕಸ್ಸಿ** (ಪಾ. ಸೂ. ೮-೧-೪೧) ಎಂಬುದರಿಂದ ಢಕಾರಕ್ಕೆ ಕಕಾರ, ವಕ್ ಸ್+ಅತಸ್, ಆದೇಶ-

ಪ್ರತ್ಯಯಯೋಃ (ಪಾ. ಸೂ. ೮-೩-೫೯) ಎಂಬುದರಿಂದ ಸಕಾರಕ್ಕೆ ಷಕಾರ, ವಕ್ಷತಸ್, ರುತ್ವವಿಸರ್ಗಗಳು ವಕ್ಷತಃ ಎಂದಾಗುವುದು. ತಿಙ್ಙತಿಙಃ (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ.

ಸುಖತಮೇ— ಅಗ್ನೇ ಸುಖತಮೇ ರಥೇ (ಋ. ಸಂ. ೧-೧೩-೪) ಎಂಬಲ್ಲಿ ವಿವರಿಸಲ್ಪಟ್ಟಿರುವುದು ॥ ೨ ॥

॥ ಸಂಹಿತಾಪಾಠಃ ॥

ಇಂದ್ರಂ ಪ್ರಾತರ್ಹವಾಮಹ ಇಂದ್ರಂ ಪ್ರಯತ್ಯಧ್ವರೇ ।
ಇಂದ್ರಂ ಸೋಮಸ್ಯ ಪೀತಯೇ ॥ ೩ ॥

॥ ಪದಪಾಠಃ ॥

ಇಂದ್ರಂ । ಪ್ರಾತಃ । ಹವಾಮಹೇ । ಇಂದ್ರಂ । ಪ್ರಽಯತಿ । ಅಧ್ವರೇ ।
ಇಂದ್ರಂ । ಸೋಮಸ್ಯ । ಪೀತಯೇ ॥ ೩ ॥

॥ ಸಾಯಣಭಾಷ್ಯಂ ॥

ಪ್ರಾತಃ ಕರ್ಮಾರಂಭೇ ಪ್ರಾತಃಸವನ ಇಂದ್ರಂ ಹವಾಮಹೇ । ಆಹ್ವಯಾಮಃ । ತಥೈವಾಧ್ವರೇ ಸೋಮಯಾಗೇ ಪ್ರಯತಿ ಪ್ರಗಚ್ಛತಿ ಪ್ರಾರಭ್ಯ ವರ್ತಮಾನೇ ಸತಿ ಮಾಧ್ಯಂದಿನೇ ಸವನೇ ತಮಿಂದ್ರಂ ಹವಾಮಹೇ । ತಥಾ ಯಜ್ಞಸಮಾಪ್ತ್ಯವಸರೇ ತೃತೀಯಸವನೇ ಸೋಮಸ್ಯ ಪೀತಯೇ ಸೋಮಪಾನಾರ್ಥಂ ಹವಾಮಹೇ ॥ ಪ್ರಾತಃ । ಸ್ವರಾದಿಷ್ವಂತೋದಾತ್ತೋ ನಿಪಾತಿತಃ । ಹವಾಮಹೇ । ಹ್ವೇಞೋ ಲಟಿ ಶಪಿ ಪರತೋ ಹ್ವಃ ಸಂಪ್ರಸಾರಣಮಿತ್ಯನುವೃತ್ತೌ ಬಹುಲಂ ಛಂದಸೀತಿ ಸಂಪ್ರಸಾರಣಂ । ಪರಪೂರ್ವತ್ವಂ । ಗುಣಾವಾದೇಶೌ । ಪ್ರಯತಿ । ಇಣ್ ಗತೌ । ಲಟಃ ಶತೃ । ಅದಿಪ್ರಭೃತಿಭ್ಯಃ ಶಪ ಇತಿ ಶಪೋ ಲುಕ್ । ಶತುರ್ಙಿತ್ತ್ವಾದ್ಗುಣಾಭಾವಃ ಪ್ರಾದಿಸಮಾಸಃ । ಕೃದ್ಗ್ರಹಣೇ ಗತಿಕಾರಕಪೂರ್ವಸ್ಯಾಪಿ ಗ್ರಹಣಂ । ಪರಿ- ೨೮ । ಇತಿ ವಚನಾತ್ಪ್ರತ್ಯಯಗ್ರಹಣ ಇತಿ ನಿಯಮಾಭಾವಾತ್ ಶತುರನುಮೋ ನದ್ಯಜಾದೀ ಇತಿ ವಿಭಕ್ತೇರುದಾತ್ತತ್ವಂ । ಅಧ್ವರೇ । ಉಕ್ತಂ । ಸಂಹಿತಾಯಾಮುದಾತ್ತಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ । ಪಾ- ೮-೨-೪ । ಇತ್ಯೇಕಾರಸ್ಯ ಸ್ವರಿತತ್ವಂ । ಪೀತಯೇ । ಪಾ ಪಾನೇ । ಕ್ತಿನಿ ಛಾಂದಸಮಂತೋದಾತ್ತತ್ವಂ ॥

‖ ಪ್ರತಿಪದಾರ್ಥ ‖

**ಪ್ರಾತಃ**— (ಕರ್ಮಪ್ರಾರಂಭದಲ್ಲಿ ನಡೆಯುವ) ಪ್ರಾತಃಸವನದಲ್ಲಿ । **ಇಂದ್ರಂ**—ಇಂದ್ರನನ್ನು । **ಹವಾಮಹೇ**—ಆಹ್ವಾನಿಸುತ್ತೇವೆ । **ಅಧ್ವರೇ**—ಸೋಮಯಾಗವು । **ಪ್ರಯತಿ**—ನಡೆಯುತ್ತಿರಲು (ಪ್ರಾಪ್ತವಾಗುವ ಮಾಧ್ಯಂದಿನಸವನದಲ್ಲಿ) । **ಇಂದ್ರಂ**—ಇಂದ್ರನನ್ನು । (**ಹವಾಮಹೇ**—ಕರೆಯುತ್ತೇವೆ) । (**ತಥಾ**—ಅದೇ ರೀತಿಯಲ್ಲಿ ಯಜ್ಞಸಮಾಪ್ತಿಕಾಲದಲ್ಲಿ ನಡೆಯುವ ತೃತೀಯಸವನದಲ್ಲಿ) । **ಸೋಮಸ್ಯ**—ಸೋಮರಸದ **ಪೀತಯೇ**—ಪಾನಕ್ಕಾಗಿ (ಇಂದ್ರನನ್ನು) । (**ಹವಾಮಹೇ**—ಕರೆಯುತ್ತೇವೆ).

‖ ಭಾವಾರ್ಥ ‖

ಸೋಮಯಜ್ಞಾಂಗವಾದ, ಪ್ರಾತಸ್ಸವನ, ಮಾಧ್ಯಂದಿನಸವನ, ತೃತೀಯ ಸವನಗಳೆಂಬ ಮೂರು ಸವನ ಕಾಲಗಳಲ್ಲಿಯೂ ಇಂದ್ರನನ್ನು ಸೋಮಪಾನಮಾಡುವುದಕ್ಕೆ ಕರೆಯುತ್ತೇವೆ.

## English Translation.

We invoke Indra at the morning rite, we invoke Indra at the succeeding Sacrifice, we invoke Indra to drink the Soma-Juice.

‖ ವಿಶೇಷವಿಷಯಗಳು ‖

ಯಜ್ಞಕರ್ಮದಲ್ಲಿ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ ಎಂಬ ಮೂರು ಕಾಲಗಳಲ್ಲಿಯೂ ಸೋಮಲತೆಯನ್ನು ಜಜ್ಜಿ ಸೋಮರಸವನ್ನು ಪಾನಾರ್ಥವಾಗಿ ಸಿದ್ಧಪಡಿಸುವುದು ಪದ್ಧತಿಯು. ಈ ಕರ್ಮಗಳಿಗೆ ಕ್ರಮವಾಗಿ ಪ್ರಾತಸ್ಸವನ, ಮಾಧ್ಯಂದಿನಸವನ, ತೃತೀಯಸವನಗಳೆಂದು ಹೆಸರು. ಈ ಋಕ್ಕಿನಲ್ಲಿ ಪ್ರಾತಃಕಾಲವನ್ನು ಮಾತ್ರ ನಿರ್ದೇಶಮಾಡಿದ್ದರೂ ಮುಂದೆ ನಡೆಯುವ ಯಾಗದಲ್ಲಿಯೂ ಇಂದ್ರನನ್ನು ಸೋಮಪಾನಕ್ಕಾಗಿ ಆಹ್ವಾನಮಾಡಿರುವುದರಿಂದ ಹಿಂದೆ ಹೇಳಿದ ಮೂರು ವಿಧವಾದ ಸವನಗಳಲ್ಲಿಯೂ ಇಂದ್ರನನ್ನು ಆಹ್ವಾನಮಾಡುತ್ತೇನೆಂದು ಋಷಿಯ ಆಶಯವು.

**ಪ್ರಯತಿ—ಇಣ್ ಗತೌ** । **ಪ್ರಗಚ್ಛತಿ** । ಯಜ್ಞಕರ್ಮವು ಸಾಗುತ್ತಿರುವಾಗ ಅಥವಾ ಮುಂದುವರಿಯುತ್ತಿರುವಾಗ ಎಂದರೆ ಮಧ್ಯಾಹ್ನ ಸಾಯಂಕಾಲಗಳಲ್ಲಿ ನಡೆಯುವ ಮಾಧ್ಯಂದಿನಸವನ ಮತ್ತು ತೃತೀಯ ಸವನಗಳಲ್ಲಿ ಎಂದರ್ಥವು.

‖ ವ್ಯಾಕರಣಪ್ರಕ್ರಿಯಾ ‖

**ಪ್ರಾತಃ**—ಸ್ವರಾದಿಯಲ್ಲಿ ಅಂತೋದಾತ್ತವಾಗಿ ನಿಪಾತಿತವಾಗಿರುವುದು.

**ಹವಾಮಹೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇಚ, ಧಾತು. ಇದರ ಮುಂದೆ ಲಟ್. ಅದರ ಸ್ಥಾನದಲ್ಲಿ ಆತ್ಮನೇಪದ ಉತ್ತಮಪುರುಷ ಬಹುವಚನ ಮಹಿಙ್, ಹ್ವೇ+ಮಹಿ, ಟಿತ ಆತ್ಮನೇಪದಾನಾಂಟೇರೇ

(ಪಾ, ಸೂ. ೩-೪-೯೭) ಎಂಬುದರಿಂದ ಟಿಗೆ ಏತ್ವ. **ಕರ್ತರಿಶಪ್** ಎಂಬುದರಿಂದ ಶಪ್, ಹ್ವೇ+ಅ-ಮಹೇ **ಹ್ವಃಸಂಪ್ರಸಾರಣಂ** (ಪಾ. ಸೂ. ೬-೧-೩೨) ಎಂಬುದು ಅನುವೃತ್ತವಾಗಲಾಗಿ **ಬಹುಲಂಛಂದಸಿ** (ಪಾ. ಸೂ. ೬-೧-೩೪) ಹ್ವೇಞ್ ಧಾತುವಿಗೆ ಛಂದಸ್ಸಿನಲ್ಲಿ ಬಹುಲವಾಗಿ ಸಂಪ್ರಸಾರಣ ಬರುವುದು ಎಂಬುದರಿಂದ ಸಂಪ್ರಸಾರಣ=ವಕಾರಕ್ಕೆ ಉಕಾರ ಹು+ಏ+ಅ+ಮಹೇ **ಸಂಪ್ರಸಾರಣಾಚ್ಚ** (ಪಾ. ಸೂ. ೬-೧-೧೦೮) ಎಂಬುದರಿಂದ ಪೂರ್ವರೂಪ ಹು+ಅ+ಮಹೇ. ಸಾರ್ವಧಾತುಕಾರ್ಧಧಾತುಕಯೋಃ ಎಂಬುದರಿಂದ ಸಾರ್ವಧಾತುಕವಾದ ಶಪ್ಪನ್ನು ನಿಮಿತ್ತ ಮಾಡಿಕೊಂಡು ಉಕಾರಕ್ಕೆ ಗುಣ ಓಕಾರ ಬರುವುದು. **ಏಚೋಽಯವಾಯಾವಃ** (ಪಾ. ಸೂ. ೬-೧-೭೮) ಎಂಬುದರಿಂದ ಓಕಾರಕ್ಕೆ ಅವಾದೇಶ ಹವ+ಮಹೇ. **ಅತೋದೀರ್ಘೋಯಞಿ** (ಪಾ. ಸೂ. ೭-೩-೧೦೧) ಎಂಬುದರಿಂದ ವಕಾರದ ಮುಂದಿರುವ ಅಕಾರಕ್ಕೆ ದೀರ್ಘ. ಹವಾಮಹೇ ಎಂದಾಗುವುದು. **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ.

**ಪ್ರಯತಿ**—ಇಣ್ ಗತೌ ಅದಾದಿ ಧಾತು, ಇದರ ಮುಂದೆ ಲಟ್, ಅದರ ಸ್ಥಾನದಲ್ಲಿ **ಲಟಶ್ಶತೃಶಾನಚಾವಪ್ರಥಮಾಸಮಾನಾಧಿಕರಣೇ** (ಪಾ.ಸೂ. ೩-೨-೧೨೪) ಎಂಬುದರಿಂದ ಶತೃ, **ಕರ್ತರಿಶಪ್** ಎಂಬುದರಿಂದ ಬರುವ ಶಪ್‌ಗೆ **ಅದಿಪ್ರಭೃತಿಭ್ಯಃಶಪಃ** (ಪಾ.ಸೂ. ೨-೪-೭೨) ಎಂಬುದರಿಂದ ಲುಕ್, ಇ+ಅತ್, **ಸಾರ್ವಧಾತುಕಮಪಿತ್** (ಪಾ.ಸೂ. ೧-೨-೪) ಎಂಬುದರಿಂದ ಅತ್ ಎಂಬ ಶತೃಪ್ರತ್ಯಯವು ಙಿತ್ತಾಗುವುದು. ಆದ್ದರಿಂದ ಸಾರ್ವಧಾತುಕಾರ್ಧಧಾತುಕಯೋಃ ಎಂಬುದರಿಂದ ಪ್ರಾಪ್ತವಾಗುವ ಗುಣಕ್ಕೆ **ಕ್ಙಿತಿಚ** (ಪಾ. ಸೂ. ೧-೧-೫) ಎಂಬುದರಿಂದ ನಿಷೇಧ ಬರುವುದು. **ಇಕೋ ಯಣಚಿ** (ಪಾ.ಸೂ. ೬-೧-೭೭)ಎಂಬುದರಿಂದ ಯಣಾದೇಶವು ಪ್ರಾಪ್ತವಾದರೆ ಅದನ್ನು ಬಾಧಿಸಿ **ಅಚಿಶ್ನುಧಾತುಭ್ರುವಾಂ** (ಪಾ. ಸೂ. ೬-೪-೭೭) ಎಂಬುದರಿಂದ ಇಯಙ್ ಆದೇಶ ಪ್ರಾಪ್ತವಾದರೆ ಅದನ್ನೂ ಬಾಧಿಸಿ **ಇಣೋಯಣ್** (ಪಾ. ಸೂ. ೬-೪-೮೧) ಅಜಾದಿ ಪ್ರತ್ಯಯವು ಪರದಲ್ಲಿರುವಾಗ ಇಣ್ ಧಾತುವಿಗೆ ಯಣಾದೇಶ ಬರುವುದು ಎಂಬುದರಿಂದ ಯಣಾದೇಶ, ಯತ್ ಎಂದಾಯಿತು. **ಕುಗತಿಪ್ರಾದಯಃ** (ಪಾ. ಸೂ. ೨-೨-೧೮) ಎಂಬುದರಿಂದ ಪ್ರ ಶಬ್ದಕ್ಕೆ ಇದರೊಂದಿಗೆ ಸಮಾಸ, ಪ್ರಯತ್ ಸಪ್ತಮ್ಯೇಕವಚನ ಙಿ ಪ್ರತ್ಯಯ, ಪ್ರಯತಿ ಎಂದಾಗುವುದು. ಶತೃಪ್ರತ್ಯಯವು ಪ್ರತ್ಯಯಸ್ವರದಿಂದ ಉದಾತ್ತ. ಸಮಾಸಾನಂತರವೂ **ಗತಿಕಾರಕೋಪಪದಾತ್ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರಬಂದು ಅದೇ ಸ್ವರ ನಿಲ್ಲುವುದು. ಏವಂಚ ಪ್ರಯತ್ ಎಂಬುದು ಅಂತೋದಾತ್ತ ಆದ್ದರಿಂದ **ಶತುರನುಮೋನದ್ಯಜಾದೀ** (ಪಾ.ಸೂ. ೬-೧-೧೭೩) ನುಮಾಗಮವನ್ನು ಹೊಂದದ ಯಾವ ಶತೃಪ್ರತ್ಯಯವಿದೆಯೋ ಅದನ್ನು ಕೊನೆಯಲ್ಲಿ ಹೊಂದಿ ಅಂತೋದಾತ್ತವಾಗಿರುವ ಶಬ್ದದ ಮುಂದೆ ಇರುವ ನದೀಸಂಜ್ಞಕವರ್ಣವೂ, ಅಜಾದಿಯಾದ ಶಸಾದಿ ವಿಭಕ್ತಿಯೂ ಸಹ ಉದಾತ್ತವಾಗುವುದು ಎಂಬುದರಿಂದ ಸಪ್ತಮ್ಯೇಕವಚನ ಙಿ ಪ್ರತ್ಯಯವು ಉದಾತ್ತವಾಗುವುದು. ಆದರೆ ಪ್ರಯತ್, ಆ ಎಂಬುದು ಹೇಗೆ ಶತೃಪ್ರತ್ಯಯಾಂತ, **ಪ್ರತ್ಯಯಗ್ರಹಣೇ ಯಸ್ಮಾತ್ಸವಿಹಿತಸ್ತದಾದೇಸ್ತದಂತಸ್ಯ ಗ್ರಹಣಂ** (ಪರಿಭಾ. ೨೩) ಎಂಬುದರಿಂದ ಶತೃಪ್ರತ್ಯಯ ಪ್ರಕೃತ್ಯಾದ್ಯವಯವಕ ಶತೃಪ್ರತ್ಯಯ ಚರಮಾವಯವಕವಾದ ಶಬ್ದವು ಶತೃಪ್ರತ್ಯಯಾಂತವಾಗುವುದು. ಇಲ್ಲಿ ಇಣ್ ಧಾತುವಿನ ಮೇಲೆ ಶತೃವನ್ನು ವಿಧಿಸಿರುವುದರಿಂದ ಯತ್ ಎಂಬುದು ಶತೃಪ್ರತ್ಯಯಾಂತವಾದರೂ ಪ್ರಯತ್ ಎಂಬುದು ಶತೃಪ್ರತ್ಯಯಾಂತವಾಗುವುದಿಲ್ಲ. ಆದ್ದರಿಂದ ವಿಭಕ್ತಿಗೆ ಉದಾತ್ತವು ಹೇಗೆ ಬರುವುದು ಎಂದರೆ, ಶತೃವು ಕೃತ್ಪ್ರತ್ಯಯ, ಆದ್ದರಿಂದ **ಕೃದ್ಗ್ರಹಣೇ ಗತಿಕಾರಕಪೂರ್ವಸ್ಯಾಪಿ ಗ್ರಹಣಂ** (ಪರಿಭಾ. ೨೮) ಕೃತ್ವತದ್ವ್ಯಾಪ್ಯಾನ್ಯತರಧರ್ಮಪುರಸ್ಕಾರದಿಂದ ಎಲ್ಲಿ ಕೃತ್ತಿಗೆ ಉಪಾದಾನವಿದೆಯೋ ಅಲ್ಲಿ ಗತಿಪೂರ್ವಕಕಾರಕಪೂರ್ವಕಗಳಿಗೂ ಗ್ರಹಣ ಬರುವುದು ಎಂದು ಈ ಪರಿಭಾಷೆಯು ಬೋಧಿ

ಸುವುದು. ಶತುರನುಮೋ ಎಂಬಲ್ಲಿ ಕೃತ್ಯವ್ಯಾಪ್ಯವಾದ ಶತೃತ್ವರೂಪ ಧರ್ಮಪುರಸ್ಕಾರದಿಂದ ಕೃತ್ತಿಗೆ ಗ್ರಹಣ ವಿದೆ. ಆದ್ದರಿಂದ ಇಲ್ಲಿ ಗತಿಕಾರಕಪೂರ್ವಕಗಳಿಗೂ ಗ್ರಹಣ ಬರುವುದು, ಅಂದರೆ ಪ್ರತ್ಯಯಗ್ರಹಣಪರಿಭಾಷೆಯು ಗತಿಕಾರಕವಿಷಯದಲ್ಲಿ ಬರುವುದಿಲ್ಲ. ಏವಂಚ ಶತೃಪ್ರತ್ಯಯಾಂತ ಎಂದರೆ ಶತೃಪ್ರತ್ಯಯಚರಮಾವಯವಕ ಎಂದಿಷ್ಟೇ ಅರ್ಥವು. ಪ್ರಯತ್ ಎಂಬುದೂ ಶತೃಪ್ರತ್ಯಯಚರಮಾವಯವಕವಾಗುವುದರಿಂದ ಶತೃಪ್ರತ್ಯಯಾಂತ ವಾಗುವುದು. ಆದ್ದರಿಂದ ಅದರ ಮುಂದೆ ಇರುವ ವಿಭಕ್ತಿಗೆ ಶತುರನುಮೋ, ಎಂಬುದರಿಂದ ಉದಾತ್ತವು ಬರುವುದು, ಯತ್ ಎಂಬುದು ಶತ್ರಂತವಾದ್ದರಿಂದ ಅದರ ಮುಂದೆ ಇರುವ ವಿಭಕ್ತಿಗೆ ಕೃದ್ಗ್ರಹಣ ಪರಿಭಾಷಾ ಸಂಚಾರವಿಲ್ಲದಿದ್ದರೂ ಅಂತೋದಾತ್ತ ಬರಲು ಯದ್ಯಪಿ ತಡೆ ಇಲ್ಲ. ಆದರೂ ಇಲ್ಲಿ ನ್ಯಾಯವಾದ ಅರ್ಥವು ಉಪಪಾದಿಸಲಾಗಿರುವುದು ಎಂದು ತಿಳಿಯಬೇಕು.

**ಅಧ್ವರೇ-ದ್ರವಿಣೋದಾಃ**—(ಋ.ಸಂ.೧-೧೫-೭) ಎಂಬಲ್ಲಿ ಇದರ ಪ್ರಕ್ರಿಯೆಯು ಹೇಳಲಾಗಿರುವುದು. **ಪ್ರಯತಿ+ ಅಧ್ವರೇ** ಎಂಬಲ್ಲಿ ಸಂಹಿತಾಕಾಲದಲ್ಲಿ ಉದಾತ್ತವಾದ ಇ ಯ ಸ್ಥಾನದಲ್ಲಿ ಅನುದಾತ್ತವಾದ ಅಕಾರವನ್ನು ನಿಮಿತ್ತಮಾಡಿಕೊಂಡು **ಇಕೋಯಣಚಿ** (ಪಾ.ಸೂ. ೬-೧-೭೭) ಎಂಬುದರಿಂದ ಯಣಾದೇಶ ಬರುವುದು, ಪ್ರಯತ್ಯಧ್ವರೇ ಎಂದಾಗುವುದು. ಈಗ **ಉದಾತ್ತಸ್ವರಿತಯೋರ್ಯಣಸ್ಸ್ವರಿತೋಽನುದಾತ್ತಸ್ಯ** (ಪಾ.ಸೂ. ೨-೮-೪) ಎಂಬುದರಿಂದ ಯಕಾರದ ಮುಂದೆ ಇರುವ ಅಕಾರವು ಸ್ವರಿತವಾಗುವುದು.

**ಪೀತಯೇ**—ಪಾ ಪಾನೇ ಧಾತು, **ಸ್ತ್ರಿಯಾಂ ಕ್ತಿನ್** (ಪಾ.ಸೂ. ೩-೩-೯೪) ಎಂಬುದರಿಂದ ಕ್ತಿನ್ ಪ್ರತ್ಯಯ ಪಾ+ತಿ **ಘುಮಾಸ್ಥಾಗಾಪಾಜಹಾತಿಸಾಂಹಲಿ** (ಪಾ.ಸೂ. ೬-೪-೬೬) ಎಂಬುದರಿಂದ ಆಕಾರಕ್ಕೆ ಈಕಾರ ಪೀತಿ, ಎಂದಾಯ್ತು. ಪ್ರತ್ಯಯವು ನಿತ್ತಾದ್ದರಿಂದ, **ಞ್ನಿತ್ಯಾದಿರ್ನಿತ್ಯಮ್** (ಪಾ.ಸೂ. ೬-೧-೧೯೭) ಎಂಬುದರಿಂದ ಯದ್ಯಪಿ ಆದ್ಯುದಾತ್ತವು ಪ್ರಾಪ್ತವಾಗುವುದು. ಆದರೂ ಛಾಂದಸವಾಗಿ ಅಂತೋದಾತ್ತ ಬರುವುದು. ಇದರ ಮುಂದೆ ಚತುರ್ಥೀಏಕವಚನ ಙೇ ಪ್ರತ್ಯಯ ಪೀತಿ+ಏ **ಙಿತಿ ಹ್ರಸ್ವಶ್ಚ** (ಪಾ.ಸೂ. ೧-೪-೬) ಙಕಾರೇತ್ಸಂಜ್ಞವಾದ ಪ್ರತ್ಯಯವು ಪರದಲ್ಲಿರುವಾಗ ಇಯಙುವಙಾದೇಶಾನ್ಯತರಕರ್ತೃಕಸ್ಥಿತ್ಯಾಶ್ರಯತ್ವ-ಯೋಗ್ಯಗಳೂ, ಸ್ತ್ರೀಶಬ್ದಭಿನ್ನಗಳೂ ನಿತ್ಯಸ್ತ್ರೀತ್ವವಿಶಿಷ್ಟಾರ್ಥಪ್ರತಿಪಾದಕಗಳೂ ಆದ ಈದಂತ ಊದಂತ ಶಬ್ದಗಳೂ, ಸ್ತ್ರೀತ್ವವಿಶಿಷ್ಟಾರ್ಥಪ್ರತಿಪಾದಕಗಳಾದ ಹ್ರಸ್ವವಾದ ಇ ಉವರ್ಣಾಗಂತ ಶಬ್ದಗಳೂ ಸಹ ವಿಕಲ್ಪವಾಗಿ ನದೀಸಂಜ್ಞೆಯನ್ನು ಹೊಂದುವುವು ಎಂಬುದರಿಂದ ವಿಹಿತವಾದ ನದೀಸಂಜ್ಞೆಯು ವಿಕಲ್ಪವಾದ್ದರಿಂದ ತದಭಾವ ಪಕ್ಷದಲ್ಲಿ **ಶೇಷೋಘ್ಯಸಖಿ** (ಪಾ.ಸೂ. ೧-೪-೭) ಎಂಬುದರಿಂದ ಘಿ ಸಂಜ್ಞೆ ಬರುವುದು. **ಘೇರ್ಙಿತಿ** (ಪಾ.ಸೂ. ೧-೩-೧೧೧) ಎಂಬುದರಿಂದ ಇಕಾರಕ್ಕೆ ಗುಣ ಏಕಾರ ಪೀತೇ+ಏ, **ಏಚೋಽಯವಾಯಾವಃ** (ಪಾ.ಸೂ. ೬-೧-೭೮) ಎಂಬುದರಿಂದ ಅಯಾದೇಶ ಪೀತಯೇ ಎಂದಾಗುವುದು. ‖ ೩ ‖

‖ ಸಂಹಿತಾಪಾಠಃ ‖

ಉಪ ನಃ ಸುತಮಾ ಗಹಿ ಹರಿಭಿರಿಂದ್ರ ಕೇಶಿಭಿಃ ।
ಸುತೇ ಹಿ ತ್ವಾ ಹವಾಮಹೇ ‖ ೪ ‖

॥ ಪದಪಾಠಃ ॥

ಉಪ । ನಃ । ಸುತಂ । ಆ । ಗಹಿ । ಹರಿಽಭಿಃ । ಇಂದ್ರ । ಕೇಶಿಽಭಿಃ ॥
ಸುತೇ । ಹಿ । ತ್ವಾ । ಹವಾಮಹೇ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಕೇಶಿಭಿಃ ಕೇಸರಯುಕ್ತೈರ್ಹರಿಭಿರಶ್ವೈಸ್ತ್ವಂ ನೋಽಸ್ಮದೀಯಂ ಸುತಮಭಿಷುತಂ ಸೋಮಂ ಪ್ರತ್ಯುಪ ಸಮೀಪ ಆ ಗಹಿ। ಆಗಚ್ಛ । ಸುತೇಽಭಿಷುತೇ ಸೋಮೇ ನಿಮಿತ್ತಭೂತೇ ಸತಿ ಯಸ್ಮಾತ್ಕಾರಣಾತ್ತ್ವಾ ಹವಾಮಹೇ ತ್ವಾಮಾಹ್ವಯಾಮಃ । ತಸ್ಮಾದಾಗಚ್ಛೇತಿ ಪೂರ್ವತ್ರಾನ್ವಯಃ ॥ ಗಹಿ । ಗಮೇರ್ಲೋಟಿ ಸೇರ್ಹಿಃ । ಶಪ ಇತ್ಯನುವೃತ್ತೌ ಬಹುಲಂ ಛಂದಸೀತಿ ಶಪೋ ಲುಕ್ । ಇಷುಗಮಿಯಮಾಂ ಛಃ। ಪಾ. ೭-೩-೭೭ । ಇತಿ ಛತ್ವಂ ನ ಭವತಿ । ನ ಲುಮತಾಂಗಸ್ಯೇತಿ ಪ್ರತಿಷೇಧಾತ್ । ಅನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ । ತಸ್ಯಾಸಿದ್ಧವದತ್ರಾಭಾತ್ । ಪಾ. ೬-೪-೨೨ । ಇತ್ಯಸಿದ್ಧತ್ವಾದತೋ ಹೇರಿತಿ ಹೇರ್ಲುಗ್ನ ಭವತಿ । ಕೇಶಿಭಿಃ ಕ್ಲಿಶೇರನ್ ಲೋ ಲೋಪಶ್ಚ । ಉ. ೫-೩೩ । ಇತ್ಯನ್। ಮತ್ವರ್ಥೀಯ ಇನಿಃ । ಪ್ರತ್ಯಯಸ್ವರಃ । ಹವಾಮಹೇ । ಹ್ವ ಇತ್ಯನುವೃತ್ತೌ ಬಹುಲಂ ಛಂದಸೀತಿ ಸಂಪ್ರಸಾರಣಂ। ಶಪಃ ಪಿತ್ತ್ವಾದನುದಾತ್ತತ್ವಂ । ತಿಙಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರ ಏವ। ತಿಙ್ಙತಿಙ ಇತಿ ನ ನಿಘಾತೋ ಹಿ ಚೇತಿ ಪ್ರತಿಷೇಧಾತ್ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಸುತೇ—ಸೋಮವು ಸಿದ್ಧಪಡಿಸಲ್ಪಟ್ಟಾಗ । ತ್ವಾ—ನಿನ್ನನ್ನು । ಹವಾಮಹೇ—ಕರೆಯುತ್ತೇವೆ (ಆದ್ದರಿಂದ) । ಕೇಶಿಭಿಃ—ಕೇಸರದಿಂದ ಯುಕ್ತವಾದ । ಹರಿಭಿಃ—ಅಶ್ವಗಳಿಂದ ಸಹಿತನಾಗಿ । ನಃ—ನಮ್ಮ । ಸುತಂ—ಸಿದ್ಧವಾದ ಸೋಮವನ್ನು (ಪಾನ ಮಾಡುವುದಕ್ಕಾಗಿ) । ಉಪ ಆ ಗಹಿ—ನಮ್ಮ ಸಮೀಪಕ್ಕೆ ಬಾ.

॥ ಭಾವಾರ್ಥ ॥

ಎಲೈ ಇಂದ್ರನೇ ನಿನಗಾಗಿ ಸೋಮರಸವನ್ನು ನಾವು ಸಿದ್ಧಪಡಿಸಿ ನಿನ್ನನ್ನು ಆಹ್ವಾನ ಮಾಡುವೆವು. ಆ ಸೋಮರಸವನ್ನು ಪಾನ ಮಾಡುವುದಕ್ಕಾಗಿ ಕೇಸರಯುಕ್ತವಾದ ನಿನ್ನ ಕುದುರೆಗಳ ಸಹಿತನಾಗಿ ನಮ್ಮ ಸಮೀಪಕ್ಕೆ ಬಾ.

## English Translation

Come Indra to our extracted soma libation by means of your long-maned horses. For we invoke you as soon as the soma is prepared.

॥ ವಿಶೇಷವಿಷಯಗಳು ॥

**ಕೇಶಿಭಿಃ**—ಉದ್ದವಾದ ಕೇಸರಗಳಿಂದ ಕೂಡಿದ. ಕೇಸರವೆಂದರೆ ಕುದುರೆಗಳ ಕತ್ತಿನ ಮೇಲೆ ಉದ್ದವಾಗಿ ಬೆಳೆದಿರುವ ಕೂದಲುಗಳು.

॥ ವ್ಯಾಕರಣಪ್ರಕ್ರಿಯಾ ॥

**ಗಹಿ**—ಗಮ್ಲೃ ಗತೌ, ಧಾತು. ಲೋಟ್ ಪರಸ್ಮೈಪದ ಮಧ್ಯಮಪುರುಷ ಏಕವಚನ ಸಿಪ್ **ಸೇರ್ಹ್ಯಪಿಚ್ಚ** (ಪಾ. ಸೂ. ೩-೪-೮೭) ಲೋಟ್‌ಸ್ಥಾನದಲ್ಲಿ ಬಂದ ಸಿಗೆ ಹಿ ಆದೇಶ. ಬರುವುದು. ಅದು ಅಪಿತ್ತಾಗುವುದು ಎಂಬುದರಿಂದ ಸಿಗೆ ಹಿ, ಆದೇಶ **ಕರ್ತರಿ ಶಪ್** ( ಪಾ. ಸೂ. ೩-೧-೬೮ ) ಎಂಬುದರಿಂದ ಶಪ್, ಗಮ್+ಅ+ಹಿ **ಬಹುಲಂ ಛಂದಸಿ** (ಪಾ. ಸೂ. ೨-೪-೭೩) ಅದಿಪ್ರಭೃತಿಭ್ಯಃ, ಎಂಬುದರಿಂದ ಶಪಃ ಎಂಬುದು ಅನುವೃತ್ತವಾಗುವುದು. ಶಪ್‌ಗೆ ಬಹುಲವಾಗಿ ಲುಕ್ ಬರುವುದು ಎಂಬುದರಿಂದ ಶಪ್‌ಗೆ ಲುಕ್ ಬರುವುದು. **ಪ್ರತ್ಯಯಲೋಪೇಪ್ರತ್ಯಯಲಕ್ಷಣಮ್** (ಪಾ. ಸೂ. ೧-೧-೬೨) ಎಂಬುದರಿಂದ ಪ್ರಾಪ್ತವಾಗುವ ಪ್ರತ್ಯಯ ಲಕ್ಷಣಕ್ಕೆ **ನಲುಮತಾಂಗಸ್ಯ** (ಪಾ. ಸೂ. ೧-೧-೬೩) ಎಂಬುದರಿಂದ ನಿಷೇಧ ಬರುವುದು. ಆದ್ದರಿಂದ ಶಿತ್ತಾದ ಪ್ರತ್ಯಯ ಪರವಾಗುವುದಿಲ್ಲ. ಆದಕಾರಣ **ಇಷುಗಮಿಯಮಾಂಛಃ** (ಪಾ. ಸೂ. ೭-೩-೭೭) ಶಕಾರೇತ್ಸಂಜ್ಞಕವಾದ ಪ್ರತ್ಯಯವು ಪರದಲ್ಲಿರುವಾಗ ಇಷು ಇಛ್ಛಾಯಾಂ, ಗಮ್ಲೃ ಗತೌ, ಯಮ ಉಪರಮೇ ಈ ಧಾತುಗಳ ಕೊನೆಯ ವರ್ಣಕ್ಕೆ ಛಕಾರ ಬರುವುದು ಎಂಬುದರಿಂದ ಛತ್ವ ಬರುವುದಿಲ್ಲ. **ಅನುದಾತ್ತೋಪದೇಶವನತಿ ತನೋತ್ಯಾದಿನಾಮನುನಾಸಿಕೆ ಲೋಪೋಝಲಿಕ್ಙಿತಿ** (ಪಾ. ಸೂ. ೬-೪-೩೭) ಅನುನಾಸಿಕ ಎಂಬುದು ಲುಪ್ತಷಷ್ಟ್ಯಂತ ಇದು ವನತಿ ವ್ಯತಿರಿಕ್ತವಾದುವುಗಳಿಗೆ ವಿಶೇಷಣ, ಇತರ ವ್ಯಾವೃತ್ತಿ ಇಲ್ಲದ ಕಾರಣ ವನತಿಗೆ ವಿಶೇಷಣವಾಗುವುದಿಲ್ಲ ಸಂಭವವ್ಯಭಿಚಾರಾಭ್ಯಾಂ ಸ್ಯಾದ್ವಿಶೇಷಣಮರ್ಥವತ್ ಎಂದು ನ್ಯಾಯವಿರುವುದು. ಸಂಭವ ಎಂದರೆ ಯೋಗ್ಯತೆ, ವ್ಯಭಿಚಾರ ಎಂದರೆ ಇತರ ವ್ಯಾವೃತ್ತಿ, ಕೃಷ್ಣಃಹಂಸಃ, ಇಲ್ಲಿ ಹಂಸವು ಬಿಳುಪೇ ವಿನಾ ಕಪ್ಪಲ್ಲ. ಆದ್ದರಿಂದ ಯೋಗ್ಯತೆ ಇಲ್ಲದ ಕಾರಣ ಹಂಸಃ ಎಂಬುದಕ್ಕೆ ಕೃಷ್ಣಃ ಎಂದು ವಿಶೇಷವನ್ನು ಕೊಡಲಾಗುವುದಿಲ್ಲ. ಕೃಷ್ಣಕಾಕಃ, ಇಲ್ಲಿ ಕಾಗೆಗಳೆಲ್ಲವೂ ಕಪ್ಪೇ. ಆದ್ದರಿಂದ ಕಾಗೆಗೆ ಕೃಷ್ಣಃ ಎಂಬ ಪದಾರ್ಥಾನ್ವಯಯೋಗ್ಯತೆಯು ಯದ್ಯಪಿ ಇದೆ, ಆದರೂ ಇತರ ವ್ಯಾವೃತ್ತಿ ಇಲ್ಲ. ಆದಕಾರಣ ಕಾಕಃ ಎಂಬಲ್ಲಿ ಕೃಷ್ಣಃ ಎಂಬ ವಿಶೇಷಣವು ಅನವಶ್ಯಕ, ಇದರಂತೆ ಇಲ್ಲಿಯೂ ವನತಿಗೆ ಅನುನಾಸಿಕ ವಿಶೇಷಣವು ಅನವಶ್ಯಕ. ಝಲಾದಿಯಾದ ಕಿತ್ತು ಅಥವಾ ಙಿತ್ತು ಆದ ಪ್ರತ್ಯಯವು ಪರದಲ್ಲಿರುವಾಗ ಅನುನಾಸಿಕಾನ್ತಗಳಾದ ಅನುದಾತ್ತೋಪದೇಶ, ತನೋತ್ಯಾದಿಧಾತು ಇವುಗಳ ಅನುನಾಸಿಕಕ್ಕೂ ವನಧಾತುವಿನ ಅನುನಾಸಿಕಕ್ಕೂ ಲೋಪ ಬರುವುದು ಎಂಬುದರಿಂದ ಅನುನಾಸಿಕವಾದ ಮಕಾರಕ್ಕೆ ಲೋಪ. ಗಮ್, ನಮ್, ಯಮೋರಮಿಃ ಎಂದು ಅನುದಾತ್ತೋಪದೇಶ ಪರಿಗಣನ ಕಾರಿಕೆಯಲ್ಲಿ ಗಮ್ ಧಾತುವು ಪಠಿತವಾಗಿರುವುದರಿಂದ ಇದು ಅನುದಾತ್ತೋಪದೇಶ, ಗಹಿ+ಎಂದಿರುವಾಗ **ಅತೋಹೇಃ** (ಪಾ. ಸೂ. ೬-೪-೧೦೫) ಅದಂತವಾದ ಅಂಗದ ಮುಂದೆ ಇರುವ ಹಿಗೆ ಲುಕ್ ಬರುವುದು ಎಂಬುದರಿಂದ ಯದ್ಯಪಿ ಹಿಗೆ ಲುಕ್ ಪ್ರಾಪ್ತವಾಗುವುದು. ಆದರೂ **ಅಸಿದ್ಧವದತ್ರಾಭಾತ್** (ಪಾ. ಸೂ. ೬-೪-೨೧) ಸಮಾನಾಶ್ರಯವಾದ ಅಭೀಯ ಕಾರ್ಯವನ್ನು ಮಾಡುವಾಗ ಸಮಾನಾಶ್ರಯವಾದ ಅಭೀಯ ಕಾರ್ಯವು ಅಸಿದ್ಧವಾಗುವುದು ಎಂಬುದರಿಂದ ಹಿಯನ್ನು ಆಶ್ರಯಿಸಿಕೊಂಡು ಲುಕ್ಕನ್ನು ಮಾಡುವಾಗ ಹಿಯನ್ನು ಆಶ್ರಯಿಸಿಕೊಂಡು ಬಂದ ಅನುದಾತ್ತೋಪದೇಶ, ಎಂಬುದರಿಂದ ಮಕಾರಲೋಪವು ಅಸಿದ್ಧವಾಗುವುದು. ಏವಂಚ ಅಂಗವು ಮಾಂತವಾಗುವುದು, ಅದಂತವಾಗುವುದಿಲ್ಲ. ಆದ್ದರಿಂದ ಹಿಗೆ ಲುಕ್ ಬರುವುದಿಲ್ಲ.

**ಕೇಶಿಭಿಃ—ಕ್ಲಿಶೇರನ್ ಲೋಲೋಪಶ್ಚ** (ಉ. ಸೂ. ೫-೭-೧೧) **ಕ್ಲಿಶೂ ವಿಬಾಧನೇ, ಈ** ಧಾತುವಿನ ಮುಂದೆ ಅನ್ ಪ್ರತ್ಯಯು ಬರುವುದು. ಧಾತುವಿನ ಲಕಾರಕ್ಕೆ ಲೋಪ ಬರುವುದು ಎಂಬುದರಿಂದ ಕ್ಲಿಶ್ ಎಂಬುದರ ಮುಂದೆ ಅನ್ ಪ್ರತ್ಯಯು ಲಕಾರ ಲೋಪಗಳು ಬಂದರೆ ಕಿಶ್+ಅ=ಪುಗನ್ತ ಲಘೂಪಧಸ್ಯಚ, ಎಂಬುದರಿಂದ ಲಘೂಪಧಗುಣ, ಕೇಶ ಎಂದಾಗುವುದು. **ಅತಇನಿಠನೌ** (ಪಾ. ಸೂ. ೫-೨-೧೧೫) ಎಂಬುದರಿಂದ ಇನಿ ಪ್ರತ್ಯಯು ಕೇಶ+ಇನ್. **ಯಸ್ಯೇತಿಚ** (ಪಾ. ಸೂ. ೬-೪-೧೪೮) ಎಂಬುದರಿಂದ ಅಕಾರ ಲೋಪ ಕೇಶಿನ್ ಎಂದಾಗುವುದು. ಇದು ಪ್ರತ್ಯಯಸ್ವರದಿಂದ ಅಂತೋದಾತ್ತ. ಇದರ ಮುಂದೆ ತೃತೀಯಾ ವಿಭಕ್ತಿ ಬಹುವಚನ ಭಿಸ್, ಕೇಶಿನ್+ಭಿಸ್. **ಸ್ವಾದಿಷ್ವಸರ್ವನಾಮಸ್ಥಾನೇ** (ಪಾ. ಸೂ. ೮-೧-೧೭) ಎಂಬುದರಿಂದ ಕೇಶಿನ್ ಎಂಬುದಕ್ಕೆ ಪದ ಸಂಜ್ಞೆ ಇದೆ. ಆದ್ದರಿಂದ **ನಲೋಪಃಪ್ರಾತಿಪದಿಕಾಂತಸ್ಯ** (ಪಾ. ಸೂ. ೮-೨-೭) ಎಂಬುದರಿಂದ ನಕಾರಕ್ಕೆ ಲೋಪ ರುತ್ವ ವಿಸರ್ಗಗಳು ಬಂದರೆ ಕೇಶಿಭಿಃ ಎಂದಾಗುವುದು.

**ಹವಾಮಹೇ—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ,** ಧಾತು. ಇದರ ಮುಂದೆ ಲಟ್, ಆತ್ಮನೇಪದ ಉತ್ತಮಪುರುಷಬಹುವಚನ ಮಹಿಙ್. **ಟಿತಆತ್ಮನೇಪದಾನಾಂಟೇರೇ** (ಪಾ. ಸೂ. ೩-೪-೭೮) ಎಂಬುದರಿಂದ ಟಿಗೆ ಏಕಾರ, ಕರ್ತರಿ ಶಪ್, ಹ್ವೇ+ಅ+ಮಹೇ **ಹ್ವಸ್ಸಂಪ್ರಸಾರಣಂ** (ಪಾ. ಸೂ. ೬-೧-೩೨) ಎಂಬುದು ಅನುವೃತ್ತವಾಗಲಾಗಿ **ಬಹುಲಂ ಛಂದಸಿ** (ಪಾ.ಸೂ ೬-೧-೩೪ ) ಎಂಬುದರಿಂದ ಸಂಪ್ರಸಾರಣ, **ಸಂಪ್ರಸಾರಣಾಚ್ಚ** (ಪಾ.ಸೂ. ೬-೧-೧೦೮) ಎಂಬುದರಿಂದ ಪೂರ್ವರೂಪ, **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಗುಣ, **ಏಚೋಽಯವಾಯಾವಃ** (ಪಾ. ಸೂ. ೬-೧-೭೮ ) ಎಂಬುದರಿಂದ ಅವಾದೇಶ ಹವ್+ಅ+ಮಹೇ, **ಅತೋದೀರ್ಘೋಯಞಿ** (ಪಾ.ಸೂ. ೭-೩-೧೦೧) ಎಂಬುದರಿಂದ ಅಕಾರಕ್ಕೆ ದೀರ್ಘ, **ಹವಾಮಹೇ** ಎಂದಾಗುವುದು. ಶಪ್ ಪಿತ್ತಾದ್ದರಿಂದ **ಅನುದಾತ್ತೌ ಸುಪ್ಪಿತೌ** ಎಂಬುದರಿಂದ ಅನುದಾತ್ತ, ಅದುಪದೇಶವಾದ ಶಪ್ ನ ಮುಂದೆ ಇರುವ ಮಹೇ ಎಂಬ ತಿಙ್ ಪ್ರತ್ಯಯವು **ತಾಸ್ಯನುದಾತ್ತೇತ್** (ಪಾ.ಸೂ. ೬-೧-೧೮೬) ಎಂಬುದರಿಂದ ಅನುದಾತ್ತ. ಏವಂಚ ಧಾತುಸ್ವರವೇ ನಿಲ್ಲುವುದು. **ಹಿಚ** ( ಪಾ. ಸೂ. ೮-೪-೩೪ ) ಹಿ ಶಬ್ದದಿಂದ ಕೂಡಿರುವ ತಿಙಂತವು ಅನುದಾತ್ತವಾಗುವುದಿಲ್ಲ ಎಂದು ನಿಷೇಧವಿರುವುದರಿಂದಲೂ ಪ್ರಕೃತ **ಸುತೇಹಿ ತ್ವಾ ಹವಾಮಹೇ** ಎಂಬಲ್ಲಿ ಹಿಶಬ್ದಯೋಗವಿರುವುದರಿಂದಲೂ **ತಿಙ್ಙತಿಙಃ** ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ. **ಪೂಜನಾತ್ಪೂಜಿತ** ಎಂಬ ಸೂತ್ರದಲ್ಲಿ ಪೂಜಿತಗ್ರಹಣದಿಂದ ಅತ್ರ ಪ್ರಕರಣೇ ಪಂಚಮೀನಿರ್ದೇಶೇಽಪಿ ನಾನಂತರ್ಯಮಿಷ್ಯತೇ ಎಂದು ಜ್ಞಾಪಿತವಾಗಿರುವುದು. ಆದ್ದರಿಂದ **ತ್ವಾ** ಎಂಬುದರಿಂದ ವ್ಯವಧಾನವಿದ್ದರೂ ಹಿಚ ಎಂಬ ನಿಷೇಧ ಬರಲು ತಡೆ ಇಲ್ಲ. ಈ ಅಂಶವು ಹಿಂದೆಯೇ ಉಪಪಾದಿತವಾಗಿರುವುದು. ॥ ೪ ॥

॥ ಸಂಹಿತಾಪಾಠಃ ॥

ಸೇಮಂ ನಃ ಸ್ತೋಮಮಾ ಗಹ್ಯುಪೇದಂ ಸವನಂ ಸುತಂ ।
ಗೌರೋ ನ ತೃಷಿತಃ ಪಿಬ ॥ ೫ ॥

॥ ಪದಪಾಠಃ ॥

ಸಃ । ಇಮಂ । ನಃ । ಸ್ತೋಮಂ । ಆ । ಗಹಿ । ಉಪ । ಇದಂ । ಸವನಂ । ಸುತಂ । ಗೌರಃ । ನ । ತೃಷಿತಃ । ಪಿಬ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಸ ತ್ವಂ ನೋಽಸ್ಮದೀಯಮಿಮಂ ಸ್ತೋಮಂ ಸ್ತುತಿಂ ಪ್ರತ್ಯಾ ಗಹಿ । ಆಗಚ್ಛ । ಆಗಮನೇ ಹೇತುರುಚ್ಯತೇ । ಉಪ ದೇವಯಜನಸಮೀಪೇ ಸುತಮಭಿಷುತಸೋಮಯುಕ್ತಮಿದಾನೀಮನುಷ್ಠೀಯಮಾನಂ ಸವನಂ ಪ್ರಾತಃಸವನಾದಿರೂಪಂ ಕರ್ಮ ವರ್ತತೇ । ತಸ್ಮಾದ್ಗೌರೋ ನ ಗೌರಮೃಗ ಇವ ತೃಷಿತಃ ಸನ್ನಿಮಂ ಸೋಮಂ ಪಿಬ ॥ ಸಃ ಇಮಮಿತ್ಯತ್ರ ಸಂಹಿತಾಯಾಂ ಸೋಽಚಿ ಲೋಪೇ ಚೇತ್ಪಾದಪೂರಣಂ । ಪಾ ೬-೧-೧೩೪ । ಇತಿ ಸುಲೋಪಃ । ಗಹಿ । ಗತಂ । ಸವನಂ । ಸೂಯತೇಽಸ್ಮಿನ್ಸೋಮ ಇತ್ಯಧಿಕರಣೇ ಲ್ಯುಟ್ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಉಡಂತಾತ್ಸಪ್ತಮ್ಯಾಃ ಸುಪಾಂ ಸುಪೋ ಭವಂತೀತಿ ವಕ್ತವ್ಯಂ । ಮ. ೭-೧-೩೯ । ಇತಿ ವಚನಾದ್ದ್ವಿತೀಯಾ । ಅಭಿಷುತಸೋಮಯುಕ್ತಮಿದಂ ಸವನಮಿತಿ ಕರ್ಮಣ್ಯೇವ ವಾ ದ್ವಿತೀಯಾ। ತದಾ ಸುತಶಬ್ದಾದರ್ಶಆದಿತ್ವಾದಚ್ । ಪಾ. ೫-೨-೧೨೭ । ತೃಷಿತಃ । ಞಿತೃಷ ಪಿಪಾಸಾಯಾಂ । ನಿಷ್ಠೇತಿ ಕ್ತಃ । ಪ್ರತ್ಯಯಸ್ವರೇಣೋದಾತ್ತಃ । ಪಶ್ಚಾದಿಟ ಆಗಮಾ ಅನುದಾತ್ತಾ ಇತ್ಯನುದಾತ್ತತ್ವಂ ॥ ೩೦ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ। ಸಃ—(ಅ) ನೀನು। ನಃ—ನಮ್ಮ । ಇಮಂ—ಈ । ಸ್ತೋಮಂ—ಸ್ತುತಿಯನ್ನು (ಕೇಳುವುದಕ್ಕಾಗಿ) । ಆ ಗಹಿ—ಬಾ । ಉಪ—(ಯಜ್ಞವೇದಿಯ) ಸಮೀಪದಲ್ಲಿ । ಸುತಂ—ಸಿದ್ಧಪಡಿಸಿದ ಸೋಮರಸದಿಂದ ಯುಕ್ತವಾದ । ಇದಂ—ಈ (ಈಗ ನಡೆಸಬೇಕಾಗಿರುವ) । ಸವನಂ—ಪ್ರಾತಸ್ಸವನರೂಪವಾದ ಕರ್ಮವು (ನಡೆಯುತ್ತಿದೆ) । ತೃಷಿತಃ—ಬಾಯಾರಿದ । ಗೌರೋ ನ — ಗೌರವರ್ಣವುಳ್ಳ ಜಿಂಕೆಯಂತೆ । ಪಿಬ—(ಸೋಮರಸವನ್ನು) ಪಾನಮಾಡು ।

॥ ಭಾವಾರ್ಥ ॥

ಪ್ರಾತಸ್ಸವನಕ್ಕೆ ಬೇಕಾದ ಸೋಮರಸವು ಸಿದ್ಧವಾಗಿದೆ. ಆ ಸವನಾಂಗವಾಗಿ ನಾವು ಮಾಡುವ ಸ್ತುತಿಯಿಂದ ತುಷ್ಟನಾಗಿ ಬಂದು, ಬಾಯಾರಿದ ಮೃಗವು (ಜಿಂಕೆಯು) ನೀರನ್ನು ಕುಡಿಯುವಂತೆ, ಸೋಮರಸವನ್ನು ಪಾನಮಾಡು.

English Translation.

O Indra, accept this our praise and come to this our sacrifice of the expressed soma ; drink like a thirsty stag.

॥ ವಿಶೇಷವಿಷಯಗಳು ॥

**ಗೌರಃ**— ಗೌರವರ್ಣವಾದ ಜಿಂಕೆಯು. ಇಲ್ಲಿ ನ ಎಂಬ ಶಬ್ದವು ಉಪಮಾನಾರ್ಥಸೂಚಕವು. **ಗೌರೋ ನ**— ಎಂದರೆ ಜಿಂಕೆಯಂತೆ.

**ತೃಷಿತಃ**— ಬಾಯಾರಿದ. ಬಾಯಾರಿಕೆಯಿಂದ ಬಳಲಿದ ಮೃಗವು ಆತುರದಿಂದ ನೀರು ಕುಡಿಯುವಂತೆ ನಮ್ಮ ಸೋಮರಸವನ್ನು ಆಸಕ್ತಿಯಿಂದ ಯಥೇಚ್ಛವಾಗಿ ಪಾನಮಾಡಬೇಕೆಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಸಃ**— ಇಮಮ್, ಇಲ್ಲಿ ಸಸ್+ಇಮಮ್ ಎಂದಿರುವಾಗ ಸಂಹಿತಾಕಾಲದಲ್ಲಿ **ಸೋಽಚಿಲೋಪೇಚೇತ್ಪಾದಪೂರಣಮ್** (ಪಾ. ಸೂ. ೬-೧-೧೩೪) ಲೋಪ ಬಂದೇ ಪಾದಪೂರಣೆಯಾಗುವ ಪಕ್ಷದಲ್ಲಿ ಅಜ್ವರ್ಣಪರದಲ್ಲಿರುವಾಗ ಸಸ್ ಎಂಬುದರ ಸುಪ್ರತ್ಯಯಕ್ಕೆ ಲೋಪಬರುವುದು ಎಂಬುದರಿಂದ ಸುಗೆ ಲೋಪ ಸ+ಇಮಮ್ **ಆದ್ಗುಣಃ** (ಪಾ. ಸೂ. ೬-೧-೮೭) ಎಂಬುದರಿಂದ ಕ್ರಮವಾಗಿ ಕಂಠತಾಲುಸ್ಥಾನಗಳಲ್ಲಿ ಹುಟ್ಟುವ ಅಕಾರ ಇಕಾರ ಸ್ಥಾನಗಳಲ್ಲಿ ಕಂಠತಾಲುಸ್ಥಾನದಲ್ಲಿ ಹುಟ್ಟತಕ್ಕದ್ದೂ ಗುಣಸಂಜ್ಞಕವೂ ಆದ ಏಕಾರ ಬರುವುದು. ಸೇಮಮ್ ಎಂದಾಗುವುದು. ಕಂಠ್ಯಾವಹಾವಿಚುಯಶಾಸ್ತಾಲವ್ಯಾವೋಷ್ಠಜಾವುಪೂ । ಸ್ಯುಮೂರ್ಧನ್ಯಾ ಋಟುರಷಾದನ್ತ್ಯಾ ಲೃತುಲಸಾಃಸ್ಮೃತಾಃ॥೧೭॥ ಜಿಹ್ವಾಮೂಲೇ ತು ಕುಃ ಪ್ರೋಕ್ತಃ ದನ್ತ್ಯೋಷ್ಠ್ಯೋ ವಸ್ಸ್ಮೃತೋ ಬುಧೈಃ । ಏ ಐ ತು ಕಂಠತಾಲವ್ಯಾವೋ ಔ ಕಂಠೋಷ್ಠಜೌಸ್ಮೃತೌ ॥೧೮॥ ಎಂಬ ಪಾಣಿನೀಯ ಶಿಕ್ಷಾವಚನದಿಂದ ಅ ಕಂಠಸ್ಥಾನಿಕ, ಇ ತಾಲುಸ್ಥಾನಿಕ ಏ ಕಂಠತಾಲುಸ್ಥಾನಿಕ ಎಂದು ಸಿದ್ಧವಾಗುವುದು. ಇಲ್ಲಿ **ಸೋಽಚಿಲೋಪೇ**(ಪಾ. ಸೂ. ೬-೧-೧೩೪) ಎಂಬುದರಿಂದ ಸುಲೋಪವು ಬರದೇ ಇರುವ ಪಕ್ಷಕ್ಕೆ ಸಸ್+ಇಮಮ್ ಎಂಬಲ್ಲಿ **ಸಸಜುಷೋರುಃ** (ಪಾ. ಸೂ. ೮-೨-೬೬) ಎಂಬುದರಿಂದ ರುತ್ವವೂ, ಅದಕ್ಕೆ **ಭೋಭಗೋ ಅಘೋ ಅಪೂರ್ವಸ್ಯಯೋಽಶಿ** (ಪಾ. ಸೂ. ೬-೩-೧೭) ಎಂಬುದರಿಂದ ಯತ್ವವೂ ಬರುವುದು. ನಂತರ **ಲೋಪಶ್ಶಾಕಲಸ್ಯ** (ಪಾ. ಸೂ. ೮-೩-೧೯) ಎಂಬುದರಿಂದ ಯಕಾರಕ್ಕೆ ಲೋಪ. **ಪೂರ್ವತ್ರಾಸಿದ್ಧಂ** (ಪಾ. ಸೂ. ೮-೨-೧) ಎಂಬುದರಿಂದ ಆದ್ಗುಣಃ, ಎಂದು ಗುಣವನ್ನು ಮಾಡುವಾಗ, ಯ ಲೋಪವು ಅಸಿದ್ಧವಾಗುವುದು. ಆದ್ದರಿಂದ ಗುಣ ಬರಲು ಅವಕಾಶವಾಗುವುದಿಲ್ಲ. ಏವಂಚ ಸ ಇಮಮ್ ಎಂದೇ ಇರಬೇಕಾಗುವುದು. ಆದ್ದರಿಂದ ಪಾದಪೂರಣೆಯಾಗುವುದಿಲ್ಲ.

**ಗಹಿ**— ಪೂರ್ವ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ.

**ಸವನಮ್**— ಸೂಯತೇ ಅಸ್ಮಿನ್ ಸೋಮಃ ಎಂದು ವಿವಕ್ಷಿಸಿದಾಗ ಷೂಞ್ ಪ್ರಾಣಿಪ್ರಸವೇ, ಧಾತು. **ಧಾತ್ವಾದೇಃಷಃಸಃ** ಎಂಬುದರಿಂದ ಷಕಾರಕ್ಕೆ ಸಕಾರ, ಸೂ ಎಂಬುದರ ಮುಂದೆ ಅಧಿಕರಣಾರ್ಥದಲ್ಲಿ **ಕರಣಾಧಿಕರಣಯೋಶ್ಚ** (ಪಾ. ಸೂ. ೩-೩-೧೧೭) ಎಂಬುದರಿಂದ ಲ್ಯುಟ್, ಯುವೋರನಾಕೌ (ಪಾ. ಸೂ. ೭-೧-೧) ಎಂಬುದರಿಂದ ಅನ ಆದೇಶ ಸೂ+ಅನ **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಗುಣ, **ಏಚೋಽಯವಾಯಾವಃ** (ಪಾ. ಸೂ. ೬-೧-೭೮) ಎಂಬುದರಿಂದ ಅವಾದೇಶ ಸವನ ಎಂದಾಗುವುದು. ಅನ ಪ್ರತ್ಯಯದ ಹಿಂದೆ ಇರುವ ಅಕಾರವು **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಉದಾತ್ತ. **ಸವನ** ಎಂಬುದು ಅಧಿಕರಣಾರ್ಥಕ ಲ್ಯುಡಂತ. ಇದರ ಮುಂದೆ ಸಪ್ತಮೀ ಏಕವಚನ ಙಿ ಪ್ರತ್ಯಯಬರುವುದು.

ಅದರ ಸ್ಥಾನದಲ್ಲಿ **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬ ಸೂತ್ರದಲ್ಲಿ ಉಕ್ತವಾಗಿರುವ **ಸುಪಾಂಸು-ಪೋಭವನ್ತಿ** (ಪಾ. ಸೂ. ವಾ. ೩-೧-೩೯-೧) ಸುಪ್ಪುಗಳ ಸ್ಥಾನದಲ್ಲಿ ವಿವಕ್ಷಿತಗಳಾದ ಸುಪ್‌ಗಳು ಬರುವುವು. ಎಂಬುದರಿಂದ ದ್ವಿತೀಯಾ ಏಕವಚನ ಅಮ್ ಬರುವುದು. ಸವನ+ಅಮ್ **ಅಮಿಪೂರ್ವಃ** (ಪಾ. ಸೂ. ೬-೧-೧೦೭) ಎಂಬುದರಿಂದ ಪೂರ್ವರೂಪ ಸವನಮ್ ಎಂದಾಗುವುದು. ಸವನೇ ಸುತಂ ಇದಂ ಪಿಬ ಎಂದು ಪ್ರಾತಸ್ಸವನಾದಿರೂಪವಾದ ಕರ್ಮದಲ್ಲಿ ಹಿಂಡಲ್ಪಟ್ಟ ಸೋಮವನ್ನು ಇಂದ್ರನೇ, ಪಾನಮಾಡು ಎಂದು ಈ ಪಕ್ಷದಲ್ಲಿ ಅರ್ಥವು. ಅಥವಾ, ಸುತಮಸ್ಯ ಅಸ್ತಿ ಎಂದು ವಿವಕ್ಷಿಸಿದಾಗ **ಅರ್ಶಆದಿಭ್ಯೋಽಚ್** (ಪಾ.ಸೂ. ೫-೨-೧೨೭) ಎಂಬುದರಿಂದ ಅಚ್ ಪ್ರತ್ಯಯ ಸುತ+ಅ. **ಯಸ್ಯೇತಿಚ** (ಪಾ ಸೂ. ೬-೪-೧೪೮) ಎಂಬುದರಿಂದ ಅಕಾರ ಲೋಪ. ಸುತಮ್ ಎಂದರೆ ಹಿಂಡಿದ ಸೋಮರಸದಿಂದ ಕೂಡಿರುವ ಎಂದರ್ಥ. ಈ ಪಕ್ಷದಲ್ಲಿ ಸುತಂ ಇದಂ ಸವನಂ ಪಿಬ, ಹಿಂಡಿದ ಸೋಮರಸದಿಂದ ಕೂಡಿರುವ ಈ ಪ್ರಾತಸ್ಸವನಾದಿರೂಪ ಕರ್ಮವನ್ನು ಅನುಭವಿಸು ಎಂದು ಅರ್ಥ. ಸವನ ಎಂಬುದು ಪಾಧಾತೂಪಸ್ಥಾಪ್ಯಕ್ರಿಯಾನಿರೂಪಿತಕರ್ಮವಾಚಕವಾಗುವುದರಿಂದ **ಕರ್ಮಣಿ ದ್ವಿತೀಯಾ** (ಪಾ. ಸೂ. ೨-೩-೨) ಎಂಬುದರಿಂದ ದ್ವಿತೀಯಾವಿಭಕ್ತಿ ಬರುವುದು ಎಂದು ಉಪಪತ್ತಿಹೇಳಬಹುದು. ವೇದಭಾಷ್ಯದಲ್ಲಿ ಅರ್ಥವಿವರಣೆ ಮಾಡುವಾಗ **ಸವನಂ** ಎಂಬುದು ಪ್ರಥಮಾಂತ ಎಂದು ಇಟ್ಟುಕೊಂಡು ಕ್ರಿಯಾಪದ ವನ್ನು ಅಧ್ಯಾಹಾರಮಾಡಿಕೊಂಡು ವ್ಯಾಖ್ಯಾಮಾಡಿರುವರು. ಆ ಪಕ್ಷದಲ್ಲಿ **ಸುಪಾಂ ಸುಲುಕ್** ಎಂಬುದರಿಂದ ಪ್ರಥಮೈಕವಚನಪ್ರತ್ಯಯಕ್ಕೆ ಅಮ್ ಆದೇಶ ಎಂದು ವರ್ಣಿಸಬೇಕು.

**ತೃಷಿತಃ**— ಞಿತೃಷ ಪಿಪಾಸಾಯಾಂ, ಧಾತು. **ನಿಷ್ಠಾ** ( ಪಾ. ಸೂ. ೩-೨-೩೬ ) ಎಂಬುದರಿಂದ ಕರ್ಮಣಿ ಕ್ತ ಪ್ರತ್ಯಯ. **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂಬುದರಿಂದ ಇಡಾಗಮ. ತೃಷಿತ ಎಂದಾಗುವುದು. ಕ್ತ ಪ್ರತ್ಯಯಕ್ಕೆ ಆದ್ಯುದಾತ್ತಶ್ಚ ಎಂಬುದರಿಂದ ಆದ್ಯುದಾತ್ತ ಬಂದಮೇಲೆ ಬಂದ ಇಡಾಗಮವು ಆಗಮಾ **ಅನುದಾತ್ತಾಃ** ಎಂಬುದರಿಂದ ಅನುದಾತ್ತ ॥ ೫ ॥

॥ ಸಂಹಿತಾಪಾಠಃ ॥

ಇಮೇ ಸೋಮಾಸ ಇಂದವಃ ಸುತಾಸೋ ಅಧಿ ಬರ್ಹಿಷಿ ।
ತಾँ ಇಂದ್ರ ಸಹಸೇ ಪಿಬ ॥ ೬ ॥

॥ ಪದಪಾಠಃ ॥

ಇಮೇ । ಸೋಮಾಸಃ । ಇಂದವಃ । ಸುತಾಸಃ । ಅಧಿ । ಬರ್ಹಿಷಿ ॥
ತಾನ್ । ಇಂದ್ರ । ಸಹಸೇ । ಪಿಬ ॥ ೬ ॥

॥ ಸಾಯಣಭಾಷ್ಯಂ ॥

ಇಂದುಶಬ್ದ ಉಂದೀ ಕ್ಲೇದನ ಇತಿ ಧಾತೋರುತ್ಪನ್ನಃ। ಇಂದವಃ ಕ್ಲೇದನಯುಕ್ತಾ ಇಮೇ ವೇದ್ಯಾಮುವಸ್ಥಿತಾಃ ಸೋಮಾಸಸ್ತತ್ತತ್ಪಾತ್ರಗತಾಃ ಸೋಮಾ ಬರ್ಹಿಷಿ ಯಜ್ಞೇಽಧ್ಯಾಧಿಕ್ಯೇನ ಸುತಾಸಃ । ಅಭಿಷುತಾಃ । ಹೇ ಇಂದ್ರ ಸಹಸೇ ಬಲಾರ್ಥಂ ತಾನ್ ಸೋಮಾನ್ ಪಿಬ ॥ ಸೋಮಾಸಃ । ಆಜ್ಜಸೇರಸುಗಿತಿ ಜಸೋಽಸುಗಾಗಮಃ । ಇಂದವಃ । ಉಕ್ತಂ । ಸುತಾಸಃ । ಪೂರ್ವವದಸುಕ್ । ಸಂಹಿತಾಯಾಂ ಪ್ರಕೃತ್ಯಾಂತಃಪಾದಮವ್ಯಪರ ಇತಿ ಪ್ರಕೃತಿಭಾವಾತ್ಪರಪೂರ್ವತ್ವಂ ನ ಭವತಿ । ಬರ್ಹಿಷಿ। ಬೃಂಹೇರ್ನಲೋಪಶ್ಚ। ಉ ೨-೧೧೦ । ಇತೀಸ್ । ಪ್ರತ್ಯಯಸ್ವರಃ । ತಾँ ಇಂದ್ರೇತ್ಯತ್ರ ದೀರ್ಘಾದಟಿ ಸಮಾನಪಾದ ಇತಿರುತ್ವಂ । ಯತ್ವಯಲೋಪೌ । ಅನುನಾಸಿಕಃ । ಸಹಸೇ । ಷಹ ಮರ್ಷಣೇ । ಅಸುನಂತೋ ನಿತ್ತ್ವಾದಾದ್ಯುದಾತ್ತಃ॥

॥ ಪ್ರತಿಪದಾರ್ಥ ॥

**ಸುತಾಸಃ**—ಸಿದ್ಧಪಡಿಸಲ್ಪಟ್ಟ । **ಇಂದವಃ**—ದ್ರವಯುಕ್ತವಾದ (ಅಥವಾ ಜಿನುಗುತ್ತಿರುವ) । **ಇಮೇ**—ಈ (ವೇದಿಯ ಮೇಲಿರುವ) । **ಸೋಮಾಸಃ**—(ಬೇರೆ ಬೇರೆ ಪಾತ್ರೆಗಳಲ್ಲಿರುವ) ಸೋಮರಸಗಳು । **ಬರ್ಹಿಷಿ**—ಯಜ್ಞದಲ್ಲಿ । **ಅಧಿ**—ಅಧಿಕ ಪ್ರಮಾಣದಲ್ಲಿ (ಪವಿತ್ರವಾದ, ವಿಶೇಷವಾದ ರೀತಿಯಲ್ಲಿ) ಇಡಲ್ಪಟ್ಟಿರುವುದು । **ಇಂದ್ರ**—ಎಲೈ ಇಂದ್ರನೇ । **ಸಹಸೇ**—ಬಲಾಭಿವೃದ್ಧಿಗಾಗಿ । **ತಾನ್**—ಆ ಸೋಮರಸಗಳನ್ನು । **ಪಿಬ**—ಪಾನಮಾಡು ।

॥ ಭಾವಾರ್ಥ ॥

ಈ ವೇದಿಯಮೇಲೆ ನಾನಾ ಪಾತ್ರೆಗಳಲ್ಲಿರುವ ಸೋಮರಸವು ಸಾಧಾರಣವಾಗಿ ಹಿಂಡಿ ತೆಗೆದುದಲ್ಲ. ಯಜ್ಞಾಂಗವಾಗಿ ಮಂತ್ರಪೂರ್ವಕವಾಗಿ ಸಿದ್ಧಪಡಿಸಲ್ಪಟ್ಟವೆ. ಎಲೈ ಇಂದ್ರನೇ, ಅದನ್ನು ಬಲಾಭಿವೃದ್ಧಿಗಾಗಿ ಪಾನ ಮಾಡು.

## English Translation

These dripping Soma juices are effused upon the sacred grass; drink them Indra, to recruit your strength.

॥ ವಿಶೇಷವಿಷಯಗಳು ॥

ಇಂದವಃ—ಸೋಮಲತೆಯನ್ನು ಕಲ್ಲಿನಿಂದ ಜಜ್ಜಿ ರಸವನ್ನು ಹಿಂಡುವಾಗ ಆ ರಸವು ತೊಟ್ಟುತೊಟ್ಟುಗಳಾಗಿ ಜಿನುಗುವುದು. ಆರೀತಿ ತೊಟ್ಟಿಕ್ಕುತ್ತಿರುವ ಸೋಮರಸಕ್ಕೆ ಇಂದವಃ ಎಂದು ಹೇಳುವ ರೂಢಿಯಿದೆ. ಈ ಶಬ್ದವು ಉನ್ದೀ ಕ್ಲೇದನೇ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ.

||ವ್ಯಾಕರಣಪ್ರಕ್ರಿಯಾ||

**ಸೋಮಾಸಃ**— ಷುಞ್ ಅಭಿಷವೇ ಧಾತ್ವಾದೇಃಷಃಸಃ (ಪಾ. ಸೂ. ೬.೧-೬೪) ಎಂಬುದರಿಂದ ಷಕಾರಕ್ಕೆ ಸಕಾರ. ಸು ಎಂಬುದರ ಮುಂದೆ **ಅರ್ತಿಸ್ತುಸು**- ( ಉ. ಸೂ. ೧.೧೩೭) ಎಂಬುದರಿಂದ ಮನ್. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಗುಣ, ಸೋಮ ಎಂದಾಗುವುದು. ಇದು ನಿತ್ಸ್ವರದಿಂದ ಆದ್ಯುದಾತ್ತ. ಇದರ ಮುಂದೆ ಜಸ್, ಸೋಮ+ಜಸ್=ಸೋಮ+ಅಸ್. **ಆಜ್ಜಸೇರಸುಕ್** (ಪಾ.ಸೂ. ೭-೧-೫೦) ಎಂಬುದರಿಂದ ಜಸ್‌ಗೆ ಅಸುಕ್ ಆಗಮ. ಅದು ಕಿತ್ತಾದ್ದರಿಂದ **ಆದ್ಯನ್ತೌಟಕಿತೌ** (ಪಾ. ಸೂ- ೧-೧-೪೬) ಎಂಬುದರಿಂದ ಜಸ್‌ಗೆ ಅಂತಾವಯವವಾಗಿ ಬರುವುದು. ಸೋಮ+ಅಸಸ್, ಪೂರ್ವಸವರ್ಣದೀರ್ಘ. ಸೋಮಾಸಸ್ ರುತ್ವ ವಿಸರ್ಗಗಳು.

**ಇನ್ದವಃ**— ಪ್ರ ವೋ ಭ್ರಿಯನ್ತ ಇನ್ದವಃ (ಋ. ಸಂ. ೧-೧೪-೪) ಎಂಬ ಮಂತ್ರದಲ್ಲಿ ವಿವೃತವಾಗಿರುವುದು.

**ಸುತಾಸಃ**— ಷುಞ್ ಧಾತು. ಷಕಾರಕ್ಕೆ ಸಕಾರ, ನಿಷ್ಠಾ ಎಂಬುದರಿಂದ ಕ್ತ ಪ್ರತ್ಯಯ. **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಇಡಾಗಮವು ಪ್ರಾಪ್ತವಾದರೆ ಏಕಾಚ **ಉಪದೇಶೇಽನುದಾತ್ತಾತ್** ಎಂಬುದರಿಂದ ನಿಷೇಧ. ಸುತ ಎಂಬುದರ ಮುಂದೆ ಜಸ್. ಮೊದಲಿನಂತೆ ಜಸ್‌ಗೆ ಅಸುಕ್ ಆಗಮ. ಪೂರ್ವಸವರ್ಣದೀರ್ಘ. ರುತ್ವ ವಿಸರ್ಗಗಳು. ಸುತಾಸಃ ಎಂದಾಗುವುದು ಸಂಹಿತಾಕಾಲದಲ್ಲಿ ಸುತಾಸಸ್ ಅಧಿ. ಎಂದಿರುವಾಗ **ಸಸಜುಷೋರುಃ** (ಪಾ. ಸೂ. ೮-೨-೬೯) ಎಂಬುದರಿಂದ ಸಕಾರಕ್ಕೆ ರುತ್ವ, ಸುತಾಸರ್+ಅಧಿ ಅತೋರೋರಪ್ಲುತಾದಪ್ಲುತೇ ಎಂಬುದರಿಂದ ರುಗೆ ಉತ್ವ, ಆದ್ಗುಣಃ ಎಂಬುದರಿಂದ ಗುಣ, ಸುತಾಸೋ+ಅಧಿ. **ಏಙಃಪದಾನ್ತಾದತಿ** (ಪಾ. ಸೂ. ೬.೧-೧೦೯) ಎಂಬುದರಿಂದ ಪೂರ್ವರೂಪವು ಪ್ರಾಪ್ತವಾಗುವುದು. ಆದರೆ ಅದಕ್ಕೆ **ಪ್ರಕೃತ್ಯಾನ್ತಃಪಾದಮವ್ಯಪರೇ** ( ಪಾ. ಸೂ. ೬-೧-೧೧೫ ) ಋಕ್ಪಾದಮಧ್ಯದಲ್ಲಿರುವ ಏ ಓ ಗಳು ಸ್ವರಪರದಲ್ಲಿರುವಾಗ ಪ್ರಕೃತಿಭಾವವನ್ನು ಹೊಂದುವುವು. ಆದರೆ ಆ ಸ್ವರವು ವಕಾರ ಯಕಾರ ಪರಕವಾಗಿದ್ದರೆ ಈ ಪ್ರಕೃತಿಭಾವವು ಬರುವುದಿಲ್ಲ ಎಂಬುದರಿಂದ ಇಲ್ಲಿ ಪ್ರಕೃತಿಭಾವ ಬರುವುದು. ಆದ್ದರಿಂದ ಪೂರ್ವರೂಪವು ಬರುವುದಿಲ್ಲ.

**ಬರ್ಹಿಷಿ**— ಬೃಹಿ ವೃದ್ಧೌ, ಧಾತು. ಇದು ಇದಿತ್ತಾದ್ದರಿಂದ **ಇದಿತೋನುಮ್‌ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ ಬರುವುದು. ಬೃನ್‌ಹ್, ಇದರ ಮುಂದೆ **ಬೃಂಹೇರ್ನಲೋಪಶ್ಚ** (ಉ. ಸೂ. ೨-೨೬೬) ಬೃಹಿ ಧಾತುವಿನ ಮುಂದೆ ಇಸಿ ಪ್ರತ್ಯಯ ಬರುವುದು. ನಕಾರಕ್ಕೆ ಲೋಪವೂ ಬರುವುದು ಎಂಬುದರಿಂದ ಬೃನ್‌ಹ್ ಎಂಬುದರ ಮುಂದೆ ಇಸ್ ಬಂದು ನಕಾರಕ್ಕೆ ಲೋಪ ಬರುವುದು. ಬೃಹ್+ಇಸ್, ಪುಗಂತಲಘೂಪಧಸ್ಯಚ, ಎಂಬುದರಿಂದ ಲಘೂಪಧಗುಣವು. ಉರಣ್ರಪರಃ ಎಂಬುದರಿಂದ ರ ಪರವಾಗಿ ಬರುವುದು. ಬರ್‌ಹಿಸ್ ಎಂದಾಗುವುದು. ಪ್ರತ್ಯಯಸ್ವರದಿಂದ ಇದು ಅಂತೋದಾತ್ತ, ಸಪ್ತಮೀವಿಭಕ್ತಿಏಕವಚನ ಙಿ ಪ್ರತ್ಯಯ. ಆದೇಶಪ್ರತ್ಯಯಯೋಃ ( ಪಾ. ಸೂ. ೮-೩-೫೯ ) ಎಂಬುದರಿಂದ ಪ್ರತ್ಯಯಾವಯವವಾದ ಸಕಾರಕ್ಕೆ ಷಕಾರ ಬರ್ಹಿಷಿ ಎಂದಾಗುವುದು.

**ತಾಂ ಇಂದ್ರ**— ಇಲ್ಲಿ ತಾನ್+ಇನ್ದ್ರ ಎಂದಿರುವಾಗ ಸಂಹಿತಾಕಾಲದಲ್ಲಿ **ದೀರ್ಘಾದಟಿಸಮಾನಪಾದೇ** (ಪಾ. ಸೂ. ೮-೩-೯) ಎಂಬುದರಿಂದ ಸಕಾರಕ್ಕೆ ರುತ್ವ. **ಆತೋಽಟಿನಿತ್ಯಮ್** (ಪಾ. ಸೂ. ೮-೩-೩) ಎಂಬುದ

ರಿಂದ ಆಕಾರಕ್ಕೆ ಅನುನಾಸಿಕ. ಭೋಭಗೋ ಅಘೋ ಅಪೂರ್ವಸ್ಯಯೋಽಶಿ (ಪಾ. ಸೂ. ೮-೩-೧೭) ಎಂಬುದರಿಂದ ರುಗೆ ಯಾದೇಶ, ತಾ॰ಯ್+ಇನ್ದ್ರ ಲೋಪಶ್ಶಾಕಲ್ಯಸ್ಯ ಎಂಬುದರಿಂದ ಯಕಾರಕ್ಕೆ ಲೋಪ ತಾ॰ಇಂದ್ರ ಎಂದಾಗುವುದು.

ಸಹಸೇ—ಷಹ ಮರ್ಷಣೇ. ಧಾತ್ವಾದೇಃಷಃಸಃ (ಪಾ. ಸೂ. ೬-೧-೬೪) ಎಂಬುದರಿಂದ ಷಕಾರಕ್ಕೆ ಸಕಾರ. ಸರ್ವಧಾತುಭ್ಯೋಽಸುನ್ (ಉ. ಸೂ.೪-೬೨೮) ಎಂಬುದರಿಂದ ಅಸುನ್ ಪ್ರತ್ಯಯ ಸಹಸ್, ನಿತ್ಸ್ವರದಿಂದ ಇದು ಆದುದ್ಯಾತ್ತ. ಚತುರ್ಥೀ ಏಕವಚನ ಙೇಪ್ರತ್ಯಯ, ಸಹಸೇ ಎಂದಾಗುವುದು ॥ ೬ ॥

॥ ಸಂಹಿತಾಪಾಠಃ ॥

ಅ॒ಯಂ ತೇ॒ ಸ್ತೋಮೋ॑ ಅಗ್ರಿ॒ಯೋ ಹೃ॑ದಿ॒ಸ್ಪೃಗ॑ಸ್ತು॒ ಶಂತ॑ಮಃ ।
ಅಥಾ॒ ಸೋಮಂ॑ ಸು॒ತಂ ಪಿ॑ಬ ॥ ೭ ॥

॥ ಪದಪಾಠಃ ॥

ಅ॒ಯಂ । ತೇ॒ । ಸ್ತೋಮಃ॑ । ಅ॒ಗ್ರಿ॒ಯಃ । ಹೃ॒ದಿ॒ऽಸ್ಪೃಕ್ । ಅ॒ಸ್ತು॒ । ಶಂऽತ॑ಮಃ ।
ಅಥ॑ । ಸೋಮ॑ಂ । ಸು॒ತಂ । ಪಿ॒ಬ॒ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಅಯಮಸ್ಮಾಭಿಃ ಕ್ರಿಯಮಾಣಃ ಸ್ತೋಮಃ ಸ್ತೋತ್ರವಿಶೇಷೋಽಗ್ರಿಯಃ ಶ್ರೇಷ್ಠಃ ಸನ್ ತೇ ತವ ಹೃದಿಸ್ಪೃಕ್ ಮನಸ್ಯಂಗೀಕೃತಃ ಶಂತಮಃ ಸುಖತಮೋಽಸ್ತು । ಅಥ ಸ್ತುತೇರನಂತರಂ ಸುತಮಭಿಷುತಂ ಸೋಮಂ ಪಿಬ ॥ ಅಗ್ರಿಯಃ । ಅಗ್ರಾದಿತ್ಯನುವೃತ್ತೌ ಘಚ್ಛೌ ಚ । ಪಾ. ೪-೪-೧೧೭ । ಇತಿ ಘಚ್ । ಚಿತ್ತ್ವಾದಂತೋದಾತ್ತಃ । ಹೃದಿ ಸ್ಪೃಶತೀತಿ ಹೃದಿಸ್ಪೃಕ್ । ಸ್ಪೃಶೋಽನುದಕೇ ಕ್ವಿನ್ । ಪಾ. ೩-೨-೫೮ । ತತ್ಪುರುಷೇ ಕೃತಿ ಬಹುಲಂ । ಪಾ. ೬-೩-೧೪ । ಇತ್ಯಲುಕ್ । ಕ್ವಿನ್ಪ್ರತ್ಯಯಸ್ಯ ಕುಃ । ಪಾ. ೮-೨-೬೨ । ಇತಿ ಶಕಾರಸ್ಯ ಕುತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ । ಶಂತಮಃ । ಸುಖಕರದ್ರವ್ಯವಚನೋಽತ್ರ ಶಂಶಬ್ದಃ ತತಸ್ತಮಪ್ । ಅತ್ರ ಸುಖಪ್ರಕರ್ಷಸ್ಯ ಗುಣದ್ವಾರಾ ಗುಣನಿಷ್ಠದ್ರವ್ಯೇ ಸಂಕ್ರಾಂತತ್ವಾದದ್ರವ್ಯಪ್ರಕರ್ಷ ಇತಿ ನಿಷೇಧಾತ್ ಕಿಮೇತ್ತಿಙವ್ಯಯೇತ್ಯಾದಿನಾ । ಪಾ. ೫-೪-೧೧ । ಆಮ್ ನ ಭವತಿ ದ್ರವ್ಯಸ್ಯ ಸ್ವತಃ ಪ್ರಕರ್ಷಾಭಾವಾತ್ । ಉದ್ಭೂತಗರ್ಭ ಏವ ಹಿ ಸ ನಿಷೇಧಃ । ಅಥಾ ಸೋಮಂ । ಸಂಹಿತಾಯಾಂ ನಿಪಾತಸ್ಯೇತಿ ದೀರ್ಘಃ ॥

॥ ಪ್ರತಿಪದಾರ್ಥ ॥

(ಹೇ ಇಂದ್ರ—ಎಲೈ ಇಂದ್ರನೇ) । ಅಗ್ರಿಯಃ—ಶ್ರೇಷ್ಠವಾದ । ಅಯಂ—ಈ (ನಮ್ಮಿಂದ ಮಾಡಲ್ಪಡುವ) । ಸ್ತೋಮಃ—ಸ್ತೋತ್ರವು । ತೇ—ನಿನ್ನ । ಹೃದಿಸ್ಪೃಕ್—ಹೃದಯವನ್ನು ಸ್ಪರ್ಶಮಾಡುವುದಾಗಿಯೂ (ಮನಸ್ಸಿಗೆ ಒಪ್ಪಿಗೆಯಾಗಿಯೂ) । ಶಂತಮಃ—ಸುಖಕಾರಕವಾಗಿಯೂ । ಅಸ್ತು—ಆಗಲಿ । ಅಥ—ಸ್ತುತಿಯು ಮುಗಿದ ಮೇಲೆ । ಸುತಂ—ಸಿದ್ಧವಾಗಿರುವ । ಸೋಮಂ—ಸೋಮರಸವನ್ನು । ಪಿಬ — ಪಾನ ಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ನಾವು ನಿನ್ನ ವಿಷಯವಾಗಿ ಮಾಡುತ್ತಿರುವ ಈ ಸ್ತೋತ್ರವು ನಿನ್ನ ಹೃದಯವನ್ನು ಮುಟ್ಟಿ ನಿನಗೆ ಆಹ್ಲಾದಕರವಾಗಿ ಸಂತೋಷವನ್ನುಂಟುಮಾಡಲಿ. ಬಳಿಕ ನಾವು ಸಿದ್ಧಪಡಿಸಿರುವ ಈ ಸೋಮ ರಸವನ್ನು ಪಾನಮಾಡು.

English Translation.

May this excellent hymn touching you heart be most agreeable to you. Drink, then Indra, the extracted Soma-juice.

॥ ವಿಶೇಷವಿಷಯಗಳು ॥

ಅಗ್ರಿಯಃ—ಶ್ರೇಷ್ಠಃ (ಅಗ್ರೇ ಭವಃ), ಶ್ರೇಷ್ಠವಾದ, ಉತ್ತಮವಾದ.

ಹೃದಿಸ್ಪೃಕ್—ಹೃದಿ ಸ್ಪೃಶತೀತಿ ಹೃದಿಸ್ಪೃಕ್ ॥ ಹೃದಯವನ್ನು ಮುಟ್ಟುವ, ಹೃದಯವನ್ನು ಕರಗಿಸುವ, ಮನಸ್ಸಿಗೆ ನಾಟುವ, touching your heart, etc , ನಾವು ಮಾಡುವ ಸ್ತೋತ್ರವು ನಿನ್ನ ಮನಸ್ಸಿಗೆ ನಾಟಲಿ ಎಂದಭಿಪ್ರಾಯವು.

ಶಂತಮಃ—ಸುಖವನ್ನುಂಟುಮಾಡುವ, ನಾವು ಮಾಡುವ ಸ್ತೋತ್ರವು ನಿನಗೆ ಸಂತೋಷವನ್ನುಂಟು ಮಾಡಲಿ ಎಂದರ್ಥವು.

ಅಥ—ಈ ಶಬ್ದದ ಅಂತ್ಯಾಕ್ಷರವು ಛಂದಸ್ಸಿನ ಅನುಕೂಲಕ್ಕಾಗಿ ಸಂಹಿತಾಪಾಠದಲ್ಲಿ ದೀರ್ಘವಾಗಿರುವುದು.

॥ ವ್ಯಾಕರಣಪ್ರಕ್ರಿಯಾ ॥

ಅಗ್ರಿಯಃ—ಘಚ್ಛೌಚ (ಪಾ. ಸೂ. ೪-೪-೧೧೭) ಅಗ್ರಾದ್ಯತ್ (ಪಾ. ಸೂ. ೪-೪-೧೧೬) ಎಂಬ ಹಿಂದಿನ ಸೂತ್ರದಿಂದ ಅಗ್ರಾತ್ ಎಂಬ ಪದವು ಅನುವೃತ್ತವಾಗುವುದು. ಅಗ್ರ ಎಂಬ ಪ್ರಾತಿಪದಿಕಪ್ರಕೃತಿಕ ಸಪ್ತ

ಷ್ಯಂಶದ ಮುಂದೆ ಭವ ಎಂಬ ಅರ್ಥದಲ್ಲಿ ಘಚ್-ಛ-ಯತ್ ಎಂಬ ಪ್ರತ್ಯಯಗಳು ಬರುವುವು ಎಂಬುದರಿಂದ ಇಲ್ಲಿ ಅಗ್ರೇ ಭವಃ ಎಂದು ವಿವಕ್ಷಿಸಿದಾಗ ಘಚ್ ಬರುವುದು. ತದ್ಧಿತಾಂತಪ್ರಾತಿಪದಿಕಾವಯವವಾದ ಸುಪ್‌ಗೆ ಲುಕ್. **ಆಯನೇಯೀನೀಯಿಯಃ ಫಢ ಖಛ ಘಾಂ ಪ್ರತ್ಯಯಾದೀನಾಮ್** (ಪಾ. ಸೂ ೧-೩-೬) ಪ್ರತ್ಯಯದ ಆದಿಯಲ್ಲಿರುವ ಫ್‌ಗೆ, ಆಯನ್ ಆದೇಶ, ಢ್‌ಗೆ-ಏಯ್, ಖ್‌ಗೆ-ಈನ್, 'ಛಗೆ-ಈಯ್, ಘ್‌ಗೆ ಇಯ್ ಆದೇಶ ಬರುವುದು ಎಂಬುದರಿಂದ ಘ್‌ಗೆ ಇಯಾದೇಶ ಅಗ್ರ+ಇಯ, ಯಸ್ಯೇತಿಚ ಎಂಬುದರಿಂದ ಅಕಾರ ಲೋಪ ಅಗ್ರಿಯ, ಘಚ್ ಪ್ರತ್ಯಯವು ಚಿತ್. ಆದ್ದರಿಂದ ಚಿತಃ (ಪಾ. ಸೂ. ೬-೧-೧೬೩) ಎಂಬುದರಿಂದ ಅಗ್ರಿಯ ಎಂಬುದು ಅಂತೋದಾತ್ತ. ಪ್ರಥಮೈಕವಚನ ಸುಪ್ರತ್ಯಯ. ರುತ್ವ ವಿಸರ್ಗಗಳು. ಅಗ್ರಿಯಃ ಎಂದಾಗುವುದು.

**ಹೃದಿಸ್ಪೃಕ್**--ಹದಿ ಸ್ಪೃಶತಿ ಇತಿ ಹೃದಿಸ್ಪೃಕ್. **ಸ್ಪೃಶೋಽನುದಕೇಕ್ವಿನ್** (ಪಾ. ಸೂ. ೩-೨-೫೮) ಉದಕಶಬ್ದವನ್ನುಳಿದ ಸುಬಂತವು ಉಪಪದವಾಗಿರುವಾಗ ಸ್ಪೃಶ್ ಧಾತುವಿನ ಮುಂದೆ ಕ್ವಿನ್ ಪ್ರತ್ಯಯ ಬರುವುದು ಎಂಬುದರಿಂದ ಕ್ವಿನ್ ಪ್ರತ್ಯಯ. ವರ್ಣಗಳೆಲ್ಲಕ್ಕೂ ಲೋಪ. **ತತ್ಪುರುಷೇಕೃತಿಬಹುಲಂ** (ಪಾ. ಸೂ. ೬-೩-೧೪) ಕೃದಂತ ಉತ್ತರಪದ ಪರವಾಗಿದ್ದರೆ ತತ್ಪುರುಷ ಸಮಾಸದಲ್ಲಿ ಸಪ್ತಮೀವಿಭಕ್ತಿಗೆ ಅಲುಕ್ ಬರುವುದು ಎಂಬುದರಿಂದ 'ಸುಪೋಧಾತು ಪ್ರಾತಿಪದಿಕಯೋಃ' ಎಂಬುದರಿಂದ ಪ್ರಾಪ್ತವಾದ ಲುಕ್ ಬರುವುದಿಲ್ಲ. ಹೃದಿ ಸ್ಪೃಶ್ ಎಂಬುದರ ಮುಂದೆ ಸುಪ್ರತ್ಯಯ. ಅದಕ್ಕೆ ಹಲ್‌ಙ್ಯಾಭ್ಯೋದೀರ್ಘಾತ್- (ಪಾ. ಸೂ. ೬-೧-೬೮) ಎಂಬುದರಿಂದ ಲೋಪ. ಕ್ವಿನ್‌ಪ್ರತ್ಯಯಸ್ಯಕುಃ (ಪಾ.ಸೂ. ೮-೨-೬೨)ಯಾವ ಶಬ್ದದ ಮುಂದೆ ಕ್ವಿನ್ ಪ್ರತ್ಯಯವು ಬಂದಿರುವುದೋ ಅದಕ್ಕೆ ಪದಾಂತ ವಿಷಯದಲ್ಲಿ ಕವರ್ಗವು ಅಂತಾದೇಶವಾಗಿ ಬರುವುದು ಎಂಬುದರಿಂದ ವಿಹಿತವಾದ ಕುತ್ವವು.--ವ್ರಶ್ಚಭ್ರಸ್ಜಸೃಜಮೃಜಯಜರಾಜಭ್ರಾಜ **ಚ್ಛಶಾಂ ಷಃ** (ಪಾ.ಸೂ. ೮-೨-೩೬) ಎಂಬುದರಿಂದ ಶಾಂತಲಕ್ಷಣವಾದ ಷತ್ವವನ್ನು ಮಾಡುವಾಗ ಅಸಿದ್ಧವಾಗುವುದು. ಆದ್ದರಿಂದ ಮೊದಲು ಈ ಸೂತ್ರದಿಂದ ಷತ್ವ ಬರುವುದು. ಸ್ಪೃಷ್ ಎಂದಾಗುತ್ತೆ ಝಲಾಂಜಶೋಽನ್ತೇ (ಪಾ. ಸೂ. ೮-೨-೩೯) ಎಂಬುದರಿಂದ ಜಶ್ತ್ವ ಬಂದು ಷಕಾರಕ್ಕೆ ಡಕಾರ ಬರುವುದು. ಈಗ ಕ್ವಿನ್‌ಪ್ರತ್ಯಯಸ್ಯಕುಃ ಎಂಬುದರಿಂದ ಕುತ್ವ ಟವರ್ಗ ತೃತೀಯವರ್ಣಡಕಾರಕ್ಕೆ ಕವರ್ಗತೃತೀಯ ಗಕಾರ, ಘೃತಸ್ಪೃಗ್ ವಾಽವಸಾನೇ (ಪಾ. ಸೂ. ೮-೪-೫೬) ಎಂಬುದರಿಂದ ವಿಕಲ್ಪದಿಂದ ಚರ್ತ್ವ ಬರುವುದು. ಘೃತಸ್ಪೃಕ್ ಎಂದಾಗುವುದು. ಸ್ಪೃಕ್ ಎಂಬುದು ಧಾತುಸ್ವರದಿಂದ ಅಂತೋದಾತ್ತ. ಸಮಾಸಾನಂತರವೂ ಗತಿಕಾರಕೋಪಪದಾತ್ಕೃತ್ (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುವುದು, ಆದೇಸ್ವರ ನಿಲ್ಲುವುದು.

**ಶಂತಮಃ**— ಸುಖಕರವಾದ ದ್ರವ್ಯ ಎಂಬ ಅರ್ಥವನ್ನು ಶಂ ಎಂಬ ಪದವು ಬೋಧಿಸುವುದು. ಅತಿಶಯಿತಃ ಶಮ್ ಎಂದು ವಿವಕ್ಷಿಸಿದಾಗ **ಅತಿಶಾಯನೇತಮಬಿಷ್ಠನೌ** (ಪಾ. ಸೂ. ೫-೩-೫೫) ಎಂಬುದರಿಂದ ತಮಪ್ ಬರುವುದು. ಶಮ್+ತಮ ಇಲ್ಲಿ ಸುಖದ ಪ್ರಕರ್ಷ (ಅತಿಶಯ)ವು ಸುಖರೂಪ. ಗುಣದ್ವಾರದಿಂದ ಸುಖರೂಪ ಗುಣವಿಶಿಷ್ಟ ದ್ರವ್ಯಪ್ರಕರ್ಷದಲ್ಲಿ ವಿಶ್ರಾಂತವಾಗುವುದು. ಆದ್ದರಿಂದ ಅದ್ರವ್ಯಪ್ರಕರ್ಷೇ, ಎಂದು ನಿಷೇಧವಿರುವುದರಿಂದ ಕಿಮೇತ್ತಿಙವ್ಯಯಘಾದಾಮ್ವದ್ರವ್ಯಪ್ರಕರ್ಷೇ (ಪಾ.ಸೂ. ೫-೪-೧೧) ಕಿಮ್‌ಶಬ್ದ, ಏದನ್ತ ಶಬ್ದ, ತಿಙಂತ, ಅವ್ಯಯ ಇವುಗಳ ಮುಂದೆ ಇರುವ ಯಾವ ಘಸಂಜ್ಞಕ ಪ್ರತ್ಯಯವಿದೆಯೋ ಅದನ್ನು ಕೊನೆಯಲ್ಲಿ ಹೊಂದಿರುವ ಶಬ್ದದ ಮುಂದೆ ಆಮು, ಬರುವುದು. ಆದರೆ ದ್ರವ್ಯಪ್ರಕರ್ಷ ತೋರುವಾಗ ಈ ಆಮು ಪ್ರತ್ಯಯ ಬರುವುದಿಲ್ಲ ಎಂಬುದರಿಂದ ಇಲ್ಲಿ ಆಮು ಪ್ರತ್ಯಯ ಬರುವುದಿಲ್ಲ. ದ್ರವ್ಯಕ್ಕೆ ಸ್ವತಃ ಪ್ರಕರ್ಷವಿಲ್ಲ. ಆದ್ದರಿಂದ ಗುಣಾದಿ

ಪ್ರಕರ್ಷವನ್ನು ಮುನ್ನಿಟ್ಟುಕೊಂಡೇ ದ್ರವ್ಯಕ್ಕೆ ಪ್ರಕರ್ಷವನ್ನು ಉಪಪಾದಿಸಬೇಕು. ಈ ಅಂಶವನ್ನು (ಅದ್ರವ್ಯಪ್ರಕರ್ಷೇ, ಇತಿ ನಿಷೇಧ ಉಪಚರಿತಗುಣಕ್ರಿಯಾಗತಪ್ರಕರ್ಷದ್ರವ್ಯವಿಷಯೋ ದ್ರಷ್ಟವ್ಯಃ) ಎಂದು ತಮಪ್ ಸೂತ್ರದಲ್ಲಿ ಕೈಯಟಕಾರರು ಹೇಳಿರುವರು. ಪ್ರಕೃತದಲ್ಲಿ ಸುಖರೂಪ ಗುಣಪ್ರಕರ್ಷದ್ವಾರಾ ಸುಖಾಶ್ರಯದ್ರವ್ಯಪ್ರಕರ್ಷ ತೋರುವುದರಿಂದ ಅದ್ರವ್ಯಪ್ರಕರ್ಷೇ ಎಂದು ನಿಷೇಧ ಬರುವುದರಿಂದ ಆಮ್ ಪ್ರತ್ಯಯ ಬರುವುದಿಲ್ಲ. **ತರಪ್ತಮಪೌ ಘಃ** (ಪಾ.ಸೂ. ೧-೧-೨೨) ತರಪ್ ತಮಪ್ ಪ್ರತ್ಯಯಗಳು ಘ ಸಂಜ್ಞೆಯನ್ನು ಹೊಂದುವುವು ಎಂದು ಘ ಸಂಜ್ಞೆಯು ಉಕ್ತವಾಗಿದೆ.

**ಅಥಾ ಸೋಮಮ್**—ಸಂಹಿತಾಕಾಲದಲ್ಲಿ **ನಿಪಾತಸ್ಯ ಚ** (ಪಾ.ಸೂ. ೬-೩-೧೩೬) ಎಂಬುದರಿಂದ ದೀರ್ಘ. ॥ ೭ ॥

। ಸಂಹಿತಾಪಾಠಃ ।

ವಿಶ್ವಮಿತ್ಸವನಂ ಸುತಮಿಂದ್ರೋ ಮದಾಯ ಗಚ್ಛತಿ ।
ವೃತ್ರಹಾ ಸೋಮಪೀತಯೇ ॥ ೮ ॥

। ಪದಪಾಠಃ ।

ವಿಶ್ವಂ । ಇತ್ । ಸವನಂ । ಸುತಂ । ಇಂದ್ರಃ । ಮದಾಯ । ಗಚ್ಛತಿ ॥
ವೃತ್ರಽಹಾ । ಸೋಮಽಪೀತಯೇ ॥ ೮ ॥

। ಸಾಯಣಭಾಷ್ಯಂ ।

ವೃತ್ರಹಾ ಶತ್ರುಘಾತಕ ಇಂದ್ರಃ ಸೋಮಪೀತಯೇ ಸೋಮಪಾನಾಯ ಮದಾಯ ತತ್ಪಾನಜನ್ಯಹರ್ಷಾಯ ಚ ವಿಶ್ವಮಿತ್ಸರ್ವಮಪಿ ಸುತಮಭಿಷುತಸೋಮಯುಕ್ತಂ ಸವನಂ ಪ್ರಾತಃಸವನಾದಿರೂಪಂ ಕರ್ಮ ಗಚ್ಛತಿ ॥ ವಿಶ್ವಂ । ಅಶಿಪ್ರುಷೀತ್ಯಾದಿನಾ ಕ್ವನ್ । ನಿತ್ತ್ವಾದಾದ್ಯುದಾತ್ತಃ । ಸವನಂ ಸುತಂ । ಪೂರ್ವವತ್ । ಮದಾಯ । ಮದೋಽನುಪಸರ್ಗೇ । ಪಾ. ೩-೩-೬೭ । ಇತ್ಯಪ್ಪ್ರತ್ಯಯಃ । ಪಿತ್ತ್ವಾದ್ಧಾತುಸ್ವರಃ । ಗಚ್ಛತಿ । ಇಷುಗಮಿಯಮಾಂ ಛಃ । ವೃತ್ರಹಾ । ವೃತ್ರಂ ಹತವಾನ್ । ಬ್ರಹ್ಮಭ್ರೂಣವೃತ್ರೇಷು ಕ್ವಿಪ್ । ಪಾ. ೩-೨-೮೭ । ಇನ್ಹನ್ನಿತ್ಯಾದಿನಾ ನಿವೃತ್ತಂ ದೀರ್ಘತ್ವಂ ಸೌ ಚ । ಪಾ. ೬-೪-೧೨, ೧೩ । ಇತಿ ಪ್ರತಿಪ್ರಸವಾದ್ಭವತಿ । ಕೃದುತ್ತರಪದಪ್ರಕೃತಿಸ್ವರತ್ವಂ । ಸೋಮಪೀತಯೇ । ವ್ಯಧಿಕರಣಬಹುವ್ರೀಹಿರಿತ್ಯುಕ್ತಂ । ತತ್ಪುರುಷೇ ವಾ ದಾಸೀಭಾರಾದಿತ್ವಾತ್ । ಪಾ. ೬-೨-೪೨ । ಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ವೃತ್ರಹಾ**—ಶತ್ರುಗಳನ್ನು ಸಂಹಾರಮಾಡುವ ಅಥವಾ ವೃತ್ರಾಸುರನನ್ನು ಸಂಹಾರಮಾಡಿದ । **ಇಂದ್ರಃ**— ಇಂದ್ರನು। **ಸೋಮಪೀತಯೇ**—ಸೋಮಪಾನಮಾಡುವುದಕ್ಕೋಸ್ಕರಲೂ । **ಮದಾಯ**—(ಸೋಮ ಪಾನದಿಂದಾಗುವ) ಹರ್ಷಕ್ಕೋಸ್ಕರಲೂ। **ವಿಶ್ವಂ**—ಸಮಸ್ತವಾದ । **ಸುತಂ**—ಸೋಮರಸವನ್ನುಸಿದ್ಧಮಾಡುವ । **ಸವನಂ**—(ಪ್ರಾತಸ್ಸವನಾದಿ ರೂಪವಾದ) ಕರ್ಮಗಳಿಗೆ । **ಗಚ್ಛತಿ ಇತ್**—ಹೋಗಿಯೇ ಹೋಗುತ್ತಾನೆ

॥ ಭಾವಾರ್ಥ ॥

ರಾಕ್ಷಸರನ್ನು ಅಥವಾ ವೃತ್ರನನ್ನು ಸಂಹಾರಮಾಡುವ ಇಂದ್ರನು ಸೋಮರಸವನ್ನು ಹಿಂಡಿ ತೆಗೆಯುವ ಎಲ್ಲಾ ಪ್ರಾತಸ್ಸವನಾದಿ ಕರ್ಮಗಳಿಗೂ ಹೋಗಿ ಸೋಮಪಾನಮಾಡಿ, ಅದರಿಂದ ತುಷ್ಟನಾಗುತ್ತಾನೆ.

English Translation.

Indra, the killer of Vritra (or of enemies) goes to every ceremoney where Soma is prepared that he may drink the Soma and be intoxicated.

॥ ವಿಶೇಷವಿಷಯಗಳು ॥

**ವೃತ್ರಹಾ**—ವೃತ್ರಶಬ್ದವು, ಮೇಘ, ಬಲ, ಉದಕ, ವೃತ್ರಾಸುರ ಮೊದಲಾದ ಅನೇಕ ಅರ್ಥಗಳನ್ನು ಸೂಚಿಸುವುದಾದರೂ ಇಲ್ಲಿ ಭಾಷ್ಯಕಾರರು ವೃತ್ರಶಬ್ದಕ್ಕೆ ಶತ್ರುವೆಂದು ಅರ್ಥಮಾಡಿರುವರು. ವೃತ್ರಾಸುರನೆಂದು ಬೇಕಾದರೂ ಅರ್ಥಮಾಡಬಹುದು. ಅದರಂತೆ ವೃತ್ರಹಾ ಎಂದರೆ ಶತ್ರುನಾಶಕನು ಅಥವಾ ವೃತ್ರಾಸುರಸಂಹಾರ ಕನು ಎಂದರ್ಥವಾಗುವುದು.

**ಮದಾಯ**—ಸೋಮಪಾನದಿಂದ ಉಂಟಾಗುವ ಮದ (ಮತ್ತು) ಅಥವಾ ಹರ್ಷಕ್ಕಾಗಿ, Intoxication.

॥ ವ್ಯಾಕರಣಪ್ರಕ್ರಿಯಾ ॥

**ವಿಶ್ವಮ್**—ವಿಶ ಪ್ರವೇಶನೇ ಧಾತು. ಇದರ ಮುಂದೆ **ಅಶೂಪ್ರುಷಿಲಟಿಕಣಿಖಟಿವಿಶಿಭ್ಯಃ ಕ್ವನ್** (ಉ.ಸೂ. ೧-೧೪೯) ಎಂಬುದರಿಂದ ಕ್ವನ್ ಪ್ರತ್ಯಯ, **ಞ್ನಿತ್ಯಾದಿರ್ನಿತ್ಯಮ್** (ಪಾ.ಸೂ. ೬-೧-೧೯೭) ಎಂಬುದ ರಿಂದ ನಿತ್ಸ್ವರ ಬಂದು ವಿಶ್ವನ್ ಎಂಬುದು ಆದ್ಯುದಾತ್ತ. ಸವನಂ ಸುತಮ್, **ಸೋಮಂ ನಃ** (ಋ.ಸಂ. ೧-೧೬-೫) ಎಂಬಲ್ಲಿ ಇವು ವಿವೃತಗಳಾಗಿರುವುವು.

**ಮದಾಯ-ಮದೋಽನುಪಸರ್ಗೇ** (ಪಾ.ಸೂ. ೩-೩-೬೭) ಉಪಸರ್ಗವಲ್ಲದ ಸುಬಂತವು ಉಪಪದ ವಾಗಿರುವಾಗ ಮದಧಾತುವಿನ ಮುಂದೆ ಅಪ್ ಪ್ರತ್ಯಯ, ಬರುವುದು ಎಂದು ಮದ್ ಧಾತುವಿನ ಮುಂದೆ

ಅಪ್ ಪ್ರತ್ಯಯವು ಪಿತ್ ಅಂದರೆ ಪಕಾರೇತ್ಸಂಜ್ಞಕ. ಆದ್ದರಿಂದ ಅನುದಾತ್ತೌಸುಪ್ಪಿತೌ (ಪಾ. ಸೂ. ೩.೧-೪) ಎಂಬುದರಿಂದ ಅನುದಾತ್ತ, ಧಾತುಸ್ವರವೇ ನಿಲ್ಲುವುದು.

ಗಚ್ಛತಿ--ಗಮ್ಲೃ ಗತೌ. ಇಷು ಗಮಿಯಮಾಂಛಃ (ಪಾ ಸೂ. ೭-೩-೭೭) ಎಂಬುದರಿಂದ ಗಮ್ ಧಾತು ವಿನಮುಂದೆ ಲಟ್ ತಿಪ್ ಶಪ್ ಬಂದಾಗ ಛಕಾರಾದೇಶ.

ವೃತ್ರಹಾ—ವೃತ್ರಂ ಹತವಾನ್ ಎಂದು ವಿಗ್ರಹ, ಹನ ಹಿಂಸಾಗತ್ಯೋಃ, ಧಾತು. ಬ್ರಹ್ಮಭ್ರೂಣವೃತ್ರೇಷುಕ್ವಿಪ್ (ಪಾ.ಸೂ. ೩-೨-೮೭) ಕರ್ಮವಾಚಕಗಳಾದ ಬ್ರಹ್ಮ, ಭ್ರೂಣ, ವೃತ್ರ ಎಂಬ ಪದಗಳು ಉಪಪದವಾಗಿರುವಾಗ ಭೂತಾರ್ಥದಲ್ಲಿ ಹನ ಧಾತುವಿನ ಮುಂದೆ ಕ್ವಿಪ್ ಪ್ರತ್ಯಯ ಬರುವುದು ಎಂಬುದರಿಂದ ಕ್ವಿಪ್, ಇಲ್ಲಿ ಯದ್ಯಪಿ ಕ್ವಿಪ್‌ಚ (ಪಾ. ಸೂ. ೩-೨-೭೬) ಎಂಬುದರಿಂದಲೇ ಕ್ವಿಪ್ ಬರುವುದು, ಆದ್ದರಿಂದ ಸಿದ್ಧೇಸತ್ಯಾರಭ್ಯಮಾಣೋವಿಧಿರ್ನಿಯಮಾಯ ಭವತಿ, ಎಂಬ ನ್ಯಾಯದಿಂದ ನಿಯಮಕ್ಕಾಗಿ ಈ ಸೂತ್ರವು ಆವಶ್ಯಕವು. ಇಲ್ಲಿ ಕಾಶಿಕಾಕಾರರು ನಾಲ್ಕು ವಿಧವಾಗಿ ನಿಯಮವನ್ನು ಹೇಳುವರು, ಸೂತ್ರದಲ್ಲಿ ಶ್ರುತವಾಗಿರುವುದರಿಂದ ಮೊದಲು ಬ್ರಹ್ಮಾದಿಪದಗಳನ್ನು ಪ್ರಯೋಗಿಸಬೇಕು, ನಂತರ ಪ್ರಕೃತಿಭೂತವಾದ್ದರಿಂದ ಹನ್‌ಧಾತು, ನಂತರ ಪರಿಶೇಷದಿಂದ ಭೂತೇ ಎಂಬುದು ಪ್ರಯುಕ್ತವಾಗುವುದು ಕ್ವಿಪ್, ವಿಧೇಯವಾದ್ದರಿಂದ ಎಲ್ಲದಕ್ಕೂ ಕೊನೆಯಲ್ಲಿ ಪ್ರಯುಕ್ತವಾಗುವುದು, ಏವಂಚ ಹೀಗೆ ಹೇಳಿದ ಹಾಗಾಯಿತು. ಬ್ರಹ್ಮಾದಿಷು ಉಪಪದೇಷು, ಹನ್ತೇಃ ಭೂತೇ ಕ್ವಿಪ್ । ಹೀಗಿರಲು 'ಯತ ಏವಕಾರಸ್ತತೋಽನ್ಯತ್ರ ನಿಯಮಃ, ಏವಕಾರವು ಯಾವ ಪದದ ಮುಂದೆ ಇರುವುದೋ ಅದಕ್ಕಿಂತಲೂ ಬೇರೆಕಡೆಯಲ್ಲಿ ನಿಯಮವು (ವ್ಯಾವೃತ್ತಿ) ಬರುವುದು ಎಂಬ ನ್ಯಾಯದಿಂದ ಬರತಕ್ಕ ನಿಯಮವು ತನಗೆ ಅವ್ಯವಹಿತಸಮೀಪಪದದಲ್ಲಿರುವುದಕ್ಕೆ ಬರುವುದು, ಏವಂಚ 'ಬ್ರಹ್ಮಾದಿಷ್ವೇವ ಹನ್ತೇಃಭೂತೇಕ್ವಿಪ್, ಎಂದು ನಿಯಮವನ್ನು ಹೇಳಿದರೆ, ಅದಕ್ಕೆ ಸಮೀಪಪದದಲ್ಲಿರುವುದು ಹನ್ ಧಾತುವಾದ್ದರಿಂದ, ಆ ಧಾತುವಿನ ಉಪಪದಾನ್ತರನಿವೃತ್ತಿಫಲಕವಾದ ಪ್ರಕೃತಿನಿಯಮವಾಗುವುದು, 'ಸ್ವಸಜಾತೀಯೇತರವ್ಯಾವರ್ತಕತ್ವಂ ನಿಯಮತ್ವಂ, ಈ ನಿಯಮದಿಂದ ಬ್ರಹ್ಮಾದಿಗಳಿಗಿಂತಲೂ ಬೇರೆ ಉಪಪದಯೋಗವಿದ್ದರೆ ಹನ್‌ಧಾತುವಿನ ಮುಂದೆ ಭೂತಾರ್ಥದಲ್ಲಿ ಕ್ವಿಪ್ ಬರುವುದಿಲ್ಲ ಎಂದು ಏರ್ಪಡುವುದು. ಉದಾಹರಣೆ : ಪುರುಷಂ ಹತವಾನ್ ಎಂದು ವಿವಕ್ಷಿಸಿದಾಗ ಪುರುಷಹಾ, ಎಂದು ಪ್ರಯೋಗ ಬರುವುದಿಲ್ಲ. ಭೂತಾರ್ಥದಲ್ಲಿ ಪ್ರಯೋಗವಿಲ್ಲದಿದ್ದರೂ ವರ್ತಮಾನಭವಿಷ್ಯದರ್ಥಗಳಲ್ಲಿ ಪುರಷಂ ಹನ್ತಿ-ಪುರುಷಂ ಹನಿಷ್ಯತಿ, ಎಂದು ವಿವಕ್ಷಿಸಿದಾಗ ಕ್ವಿಪ್ ಬಂದೇ ಬರುವುದು, ಈ ಅರ್ಥಗಳಲ್ಲಿ ಪುರುಷಹಾ ಎಂಬುದು ಸಾಧುವೇ ಆಗುವುದು. ಈ ನಿಯಮಕ್ಕೆ ಪ್ರಕೃತಿನಿಯಮವೆಂದು ಹೆಸರು. ಪ್ರಕೃತಿಗೆ ಉಪಪದಾಂತರ ವ್ಯಾವೃತ್ತಿ ಫಲಕವಾದ್ದರಿಂದ ಇದಕ್ಕೆ ಈ ಹೆಸರು ಬಂದಿದೆ. ಇನ್ನು ಬ್ರಹ್ಮಾದಿಷು ಉಪಪದೇಷು ಹನ್ತೇರೇವ ಭೂತೇ ಕ್ವಿಪ್ ಎಂದು ನಿಯಮವಾದಾಗ ಉಪಪದದ ಕಾಲವಾಚಕವಾದ ಭೂತೇ ಎಂಬೀ ಎರಡಕ್ಕೂ ಸಾಮೀಪ್ಯವು ಅವಿಶಿಷ್ಟ (ಒಂದೇ) ಆಗಿರುವದು. ಆದರೂ ಉಪಪದವು ಮೊದಲು ನಿರ್ದಿಷ್ಟವಾಗಿರುವುದರಿಂದ ಉಪಪದದ ನಿಯಮವೆನ್ನುವರು, ಈ ನಿಯಮದಿಂದ ಈ ಉಪಪದಕ್ಕೆ ಸಂಬಂಧವಿರುವಾಗ ಬೇರೆ ಧಾತುಗಳ ಮುಂದೆ ಭೂತಾರ್ಥದಲ್ಲಿ ಕ್ವಿಪ್ ಬರುವುದಿಲ್ಲ. ಉದಾಹರಣೆ : ವೃತ್ರಂಜಿತವಾನ್, ಎಂದು ವಿವಕ್ಷಿಸಿದಾಗ ವೃತ್ರಶಬ್ದವು ಉಪಪದವಾಗಿರುವಾಗ ಜಿ ಧಾತುವಿನ ಮುಂದೆ ಭೂತಾರ್ಥದಲ್ಲಿ ಕ್ವಿಪ್ ಬರುವುದಿಲ್ಲ. ಆದ್ದರಿಂದ ಈ ಅರ್ಥದಲ್ಲಿ ವೃತ್ರಜಿತ್ ಎಂದು ಪ್ರಯೋಗವು ಸಾಧುವಲ್ಲ. ವೃತ್ರಂ ಜಯತಿ, ವೃತ್ರಂ ಜೇಷ್ಯತಿ, ಎಂದು ವರ್ತಮಾನ ಭವಿಷ್ಯತ್ಕಾಲಗಳನ್ನು ವಿವಕ್ಷಿಸಿದಾಗ, ಬ್ರಹ್ಮಾದಿಗಳು ಉಪಪದ

ವಾದ ಹನಧಾತು ವ್ಯತಿರಿಕ್ತಧಾತುವಿನ ಮುಂದೆ ಭೂತಾರ್ಥದಲ್ಲಿ ಕ್ವಿಪ್ ಬರುವುದಿಲ್ಲ ಎಂದು ವ್ಯಾವರ್ತ್ಯಕಾರವು ಏರ್ಪಡುತ್ತದರಿಂದ, ವೃತ್ರಜಿತ್ ಎಂಬ ಪ್ರಯೋಗವು ಸಾಧುವೇ ಆಗುವುದು, ಹೀಗೆ ಪ್ರಕೃತಿನಿಯಮ, ಉಪಪದನಿಯಮ ಎಂದು ಎರಡು ನಿಯಮಗಳಾದುವು. ಇನ್ನು ಬ್ರಹ್ಮಾದಿಷು ಉಪಪದೇಷು ಹನ್ತೇಃ ಭೂತೇ-ಏವ ಕ್ವಿಪ್ ಎಂದು ನಿಯಮಾಕಾರವಾದರೆ, ಇಲ್ಲಿ ಹನ್ತೇಃ -- ಕ್ವಿಪ್ ಎಂಬೀ ಎರಡಕ್ಕೂ ಸಾಮಾನ್ಯವು. ಯದ್ಯಪಿ ಅವಿಶಿಷ್ಟ (ಒಂದೇ) ಆದರೂ ಪ್ರತ್ಯಯವು ಪ್ರಧಾನವಾದ್ದರಿಂದ ಇದು ಪ್ರತ್ಯಯನಿಯಮವಾಗುವುದು. ಈ ನಿಯಮದಿಂದ ಬ್ರಹ್ಮಾದಿಗಳು ಉಪಪದವಾಗಿರುವಾಗ ಹನ್ ಧಾತುವಿನ ಮುಂದೆ ಭೂತಕಾಲಾತಿರಿಕ್ತಕಾಲದಲ್ಲಿ ಕ್ವಿಪ್ ಬರುವುದಿಲ್ಲ ಎಂದು ವ್ಯಾವರ್ತ್ಯಕಾರವು ಏರ್ಪಡುತ್ತದು. ಉದಾಹರಣೆ—ಬ್ರಹ್ಮಾಣಂ ಹನ್ತಿ, ಬ್ರಹ್ಮಾಣಂ ಹನಿಷ್ಯತಿ ಎಂಬೀ ಅರ್ಥಗಳಲ್ಲಿ ವರ್ತಮಾನಕಾಲ, ಭವಿಷ್ಯತ್ಕಾಲಗಳು ಪ್ರತೀತವಾಗುವುದರಿಂದ ಕ್ವಿಪ್ ಬರುವುದಿಲ್ಲ. ಆದ್ದರಿಂದ ಈ ಅರ್ಥಗಳಲ್ಲಿ ಬ್ರಹ್ಮಹಾ ಎಂದಾಗುವುದಿಲ್ಲ. ಈ ಉಪಪದಗಳಿದ್ದರೆ ಭೂತಾರ್ಥದಲ್ಲಿ ಹನ್ ಧಾತುವಿನ ಮುಂದೆ ಕ್ವಿಪ್ ಬರದೇ ಇದ್ದರೂ ಉಪಪದಾಂತರಯೋಗವಿರುವಾಗ ಹನ್ ಧಾತುವಿನ ಮುಂದೆ ಭೂತಾರ್ಥದಲ್ಲಿ· ಕ್ವಿಪ್ ಬಂದೇ ಬರುವುದು. ಪುರುಷಂ ಹನ್ತಿ, ಹನಿಷ್ಯತಿ ವಾ ಎಂದು ವಿವಕ್ಷಿಸಿದಾಗ ಪುರುಷಹಾ ಎಂದಾಗಿಯೇ ಆಗುವುದು. ಬ್ರಹ್ಮಾದಿಷು ಉಪಪದೇಷು ಹನ್ತೇಃ ಭೂತೇ ಕ್ವಿಬೇವ, ಎಂದು ನಿಯಮವಾದಾಗ ಭೂತೇ ಎಂಬುದು ಇದರ ಸಮೀಪದಲ್ಲಿರುವುದರಿಂದ, ಯತ ಏವಕಾರಃ ಎಂಬ ನ್ಯಾಯದಿಂದ ಕಾಲನಿಯಮವಾಗುವುದು. ಈ ನಿಯಮದಲ್ಲಿ ಬ್ರಹ್ಮಾದಿಗಳು ಉಪಪದವಾಗಿರುವಾಗ ಹನ್ ಧಾತುವಿನ ಮುಂದೆ ಭೂತಾರ್ಥದಲ್ಲಿ ಕ್ವಿಪ್ ಗಿಂತಲೂ ಬೇರೆ ಪ್ರತ್ಯಯ ಬರುವುದಿಲ್ಲ ಎಂದು ಏರ್ಪಡುವುದು. ಆದ್ದರಿಂದ ಬ್ರಹ್ಮಾಣಂ ಹತವಾನ್ ಎಂದು ವಿವಕ್ಷಿಸಿದರೆ **ಕರ್ಮಣಿ ಹನಃ** (ಪಾ. ಸೂ. ೩-೨-೮೬) ಎಂಬುದರಿಂದ ಭೂತಾರ್ಥದಲ್ಲಿ ಣಿನಿ ಪ್ರತ್ಯಯ ಬರುವುದಿಲ್ಲ. ಆದಕಾರಣ ಬ್ರಹ್ಮಘಾತೀ ಎಂದು ಪ್ರಯೋಗವು ಸಾಧುವಾಗುವುದಿಲ್ಲ. ಆದರೆ ಬ್ರಹ್ಮಾದಿಷು ಎಂದು ನಿಯಮದಲ್ಲಿ ಸೇರಿರುವುದರಿಂದ ಬೇರೆಪದಗಳು ಉಪಪದಗಳಾಗಿದ್ದರೆ ಹನ್ ಧಾತುವಿನ ಮುಂದೆ ಭೂತಾರ್ಥದಲ್ಲಿ ಕ್ವಿಪ್ ಬಂದೇಬರುವುದು, ಪಿತೃವ್ಯಂ ಹತವಾನ್ ಪಿತೃವ್ಯಘಾತೀ ಎಂದು ಉದಾಹರಣೆ. ಈ ರೀತಿ ಪ್ರಕೃತಿನಿಯಮ ಉಪಪದನಿಯಮ ಪ್ರತ್ಯಯನಿಯಮ ಕಾಲನಿಯಮರೂಪವಾದ ನಾಲ್ಕುವಿಧ ನಿಯಮ ಲಾಭಕ್ಕಾಗಿ **ಬ್ರಹ್ಮಭ್ರೂಣವೃತ್ರೇಷು ಕ್ವಿಪ್** (ಪಾ. ಸೂ. ೩-೨-೮೭) ಎಂಬ ಸೂತ್ರವು ಆವಶ್ಯಕವೆಂದು ಕಾಶಿಕಾರರ ಅಭಿಪ್ರಾಯ. ಮಹಾಭಾಷ್ಯದಲ್ಲಿ ಉಭಯತೋ ನಿಯಮೋಽಯಮ್ | ಬ್ರಹ್ಮಾದಿಷ್ವೇವ | ಕ್ವಿಬೇವ | ಎಂದು ಇರುವುದು. ಆದ್ದರಿಂದ ಪ್ರಕೃತಿನಿಯಮ, ಕಾಲನಿಯಮಗಳೆರಡೇ ಭಾಷ್ಯಾಭಿಮತವಾದ ನಿಯಮಗಳು- ಹೀಗೆ ಎರಡು ನಿಯಮಗಳನ್ನು ಆಶ್ರಯಿಸುವ ಭಾಷ್ಯಕಾರರ ಅಭಿಪ್ರಾಯವೇನಿರಬಹುದು ಎಂದು ವಾಚಕರು ಕೇಳದೆ ಬಿಡರು. **ಬ್ರಹ್ಮಭ್ರೂಣವೃತ್ರೇಷು ಕ್ವಿಪ್**, (ಪಾ.ಸೂ. ೩-೨-೮೭) ಎಂಬ ಸೂತ್ರದಲ್ಲಿ ಉಪಪದವೂ ಪ್ರತ್ಯಯವೂ ಸಹ ಶ್ರುತವಾಗಿರುವುದು. ಹನ್ ಧಾತುವೂ ಭೂತೇ ಎಂಬ ಕಾಲವಾಚಕವೂ ಸಹ ಶ್ರುತವಾಗಿಲ್ಲ. ಅವು ಪ್ರಕರಣದಿಂದ ಲಬ್ಧವಾಗುವುವು, ಶ್ರುತಿಲಿಂಗವಾಕ್ಯಪ್ರಕರಣಸ್ಥಾನಸಮಾಖ್ಯಾನಾಂ ಪಾರದೌರ್ಬಲ್ಯಮರ್ಥವಿಪ್ರಕರ್ಷಾತ್, ಎಂಬುದರಿಂದ ಶ್ರುತಿಪ್ರಮಾಣಕ್ಕಿಂತಲೂ ಪ್ರಕರಣವು ಬಹು ದುರ್ಬಲವಾದುದು. ಆದ್ದರಿಂದ ದುರ್ಬಲಪ್ರಮಾಣೋಪಸ್ಥಾಪಿತಗಳಾದ ಪ್ರಕೃತಿಕಾಲಗಳಿಗೆ ಉಪರೋಧವು ನ್ಯಾಯವು, ಶ್ರುತವಾದ ಉಪಪದ ಪ್ರತ್ಯಯಗಳಿಗೆ ಉಪರೋಧವು ನ್ಯಾಯವಲ್ಲವು ಎಂದು ಮಹಾಭಾಷ್ಯಕಾರ ಅಭಿಪ್ರಾಯ. ಏವಂಚ ಈ ನ್ಯಾಯಯುಕ್ತವಾದ ಭಾಷ್ಯಕ್ಕೆ ವಿರೋಧಬರುವುದರಿಂದ ವೃತ್ತಿಕಾರರಮತವು ಉಪೇಕ್ಷಿಸತಕ್ಕದ್ದು ಎಂದು ಕೈಯಟಕಾರರು ಸ್ಪಷ್ಟಪಡಿಸಿರುವರು. ಇಲ್ಲಿ ಧಾತೂಪಪದವಿಷಯಂ ನಿಯಮದ್ವಯಂ ಭಾಷ್ಯೇ ಪ್ರದರ್ಶಿತಂ ಎಂದು ಹರದತ್ತರು ಹೇಳಿರುವರು. ಇಲ್ಲಿ ಧಾತುಕಾಲವಿಷಯಂ, ಎಂದು ಹೇಳುವುದಕ್ಕೆ ಬದಲಾಗಿ

ಉಪಪದಪದವು ಪ್ರಾವಾದಿಕವಾಗಿ ಬಿದ್ದಿರುವುದು ಎಂದು ಜ್ಞಾನೇನ್ದ್ರ ಸರಸ್ವತಿಗಳು (ಭಿಕ್ಷುಗಳು) ನಿರೂಪಿಸಿರುವರು. ಏವಂಚ ನಿಯಮಲಾಭಕ್ಕಾಗಿ ಬ್ರಹ್ಮಭ್ರೂಣ ಎಂಬ ಸೂತ್ರವು ಆವಶ್ಯಕವು. ವೃತ್ರಂ ಹತವಾನ್ ಎಂಬಲ್ಲಿ ಇದರಿಂದ ಕ್ವಿಪ್-ಕ್ವಿಬಂತವಾದಾಗ ಕೃತದ್ಧಿತಸಮಾಸಾಶ್ಚ (ಪಾ.ಸೂ.೧-೨-೪೬) ಎಂಬುದರಿಂದ ಪ್ರಾತಿಪದಿಕ ಸಂಜ್ಞೆ, **ಸುಪೋಧಾತುಪ್ರಾತಿಪದಿಕಯೋಃ** (ಪಾಸೂ. ೨-೪-೭೧) ಎಂಬುದರಿಂದ ಪ್ರಾತಿಪದಿಕಾವಯವವಾದ ಅಮ್‌ಗೆ ಲುಕ್- ಕ್ವಿಪಸ್ಸರ್ವಸ್ಯಾಪಿಲೋಪಃ. ವೃತ್ರಹನ್ ಇದರ ಮುಂದೆ ಪ್ರಥಮಾವಿಭಕ್ತಿ ಏಕವಚನ ಸುಪ್ರತ್ಯಯ, ವೃತ್ರ-ಹನ್+ಸು, **ಸರ್ವನಾಮಸ್ಥಾನೇಚಾಸಂಬುದ್ಧೌ** (ಪಾ.ಸೂ. ೬-೪-೮) ಸಂಬುದ್ಧಿಯನ್ನುಳಿದ ಸರ್ವನಾಮಸ್ಥಾನ-ಪ್ರತ್ಯಯವು ಪರವಾಗಿರುವಾಗ ನಕಾರಾಂತವಾದ ಅಂಗದ ಉಪಾನ್ತ್ಯವರ್ಣಕ್ಕೆ ದೀರ್ಘಬರುವುದು ಎಂಬುದರಿಂದ ದೀರ್ಘವು ಪ್ರಾಪ್ತವಾಗುವುದು. ಆದರೆ **ಇನ್‌ಹನ್ ಪೂಷಾರ್ಯಮ್ಣಾಂಶೌ** (ಪಾ.ಸೂ. ೬-೪-೧೨) ಶಿ ಪ್ರತ್ಯಯ ಪರವಾಗಿರುವಾಗ ಇನ್, ಹನ್, ಪೂಷನ್, ಅರ್ಯಮನ್ ಈ ಶಬ್ದಗಳನ್ನು ಕೊನೆಯಲ್ಲಿ ಹೊಂದಿರುವ ಅಂಗದ ಉಪಾಂತ್ಯವರ್ಣಕ್ಕೆ ದೀರ್ಘಬರುವುದು ಎಂದು ಈ ಸೂತ್ರಾರ್ಥ. **ಸರ್ವನಾಮಸ್ಥಾನೇ ಚಾಸಂಬುದ್ಧೌ** (ಪಾ.ಸೂ. ೬-೪-೮) ಎಂಬುದರಿಂದಲೇ ಇವುಗಳ ಉಪಾಂತ್ಯವರ್ಣಕ್ಕೆ ದೀರ್ಘವುಬರುವುದು ಸಿದ್ಧವಾಗುವುದು. ಆದ್ದರಿಂದ ಸಿದ್ಧೇ ಸತ್ಯಾರಭ್ಯಮಾಣೋವಿಧಿರ್ನಿಯಮಾಯ ಭವತಿ ಎಂಬುದರಿಂದ ಈ ಸೂತ್ರವು ನಿಯಾಮಕವಾಗುವುದು. ಇನ್, ಹನ್, ಪೂಷನ್, ಅರ್ಯಮನ್ ಏತದಂತವಾದ ಅಂಗದ ಉಪಾಂತ್ಯವರ್ಣಕ್ಕೆ ದೀರ್ಘ ಬರುವ ಪಕ್ಷದಲ್ಲಿ ಶಿ ಪ್ರತ್ಯಯ ಪರವಾಗಿರುವಾಗಲೇ ಬರುವುದು ಎಂದು ನಿಯಮಾಕಾರ. ಇದರಿಂದ ಶಿ ಪ್ರತ್ಯಯವು ಪರದಲ್ಲಿ ಇಲ್ಲದೇ ಇದ್ದರೆ ಇನ್ನಾದ್ಯಂತಾಂಗದ ಉಪಾಂತ್ಯವರ್ಣಕ್ಕೆ ದೀರ್ಘ ಬರುವುದಿಲ್ಲ ಎಂದು ಏರ್ಪಡುವುದು. ಆದ್ದರಿಂದ ವೃತ್ರಹನ್+ಸು ಎಂಬಲ್ಲಿ ಶಿಯು ಪರದಲ್ಲಿ ಇಲ್ಲದ ಕಾರಣ ದೀರ್ಘ ಬರದೇ ಹೋಗುವುದು. ಆದರೂ **ಸೌಚ** (ಪಾ.ಸೂ. ೬-೪-೧೩) ಸು ಪ್ರತ್ಯಯ ಪರದಲ್ಲಿರುವಾಗ ಇನ್, ಹನ್, ಪೂಷನ್, ಅರ್ಯಮನ್, ಇವುಗಳನ್ನು ಕೊನೆಯಲ್ಲಿ ಹೊಂದಿರುವ ಅಂಗದ ಉಪಾಂತ್ಯವರ್ಣಕ್ಕೆ ದೀರ್ಘ ಬರುವುದು ಎಂಬುದರಿಂದ ದೀರ್ಘ ಬರುವುದು, ಪ್ರತಿಪ್ರಸವ ಎಂದರೆ ನಿಷೇಧಕ್ಕೆ ನಿಷೇಧಕ ಎಂದು ಅರ್ಥ. ಇಲ್ಲಿ ಸರ್ವನಾಮಸ್ಥಾನೇಚ ಎಂಬುದರಿಂದ ಪ್ರಾಪ್ತವಾದ ದೀರ್ಘಕ್ಕೆ ಇನ್, ಹನ್, ಪೂಷಾ ಎಂಬುದು ಫಲತಃ ನಿಷೇಧಕವಾಯಿತು. ಇದಕ್ಕೆ **ಸೌಚ** (ಪಾ.ಸೂ. ೬-೪-೧೩) ಎಂಬುದು ಫಲತಃ ನಿಷೇಧವಾಯಿತು. ಆದ್ದರಿಂದ ದೀರ್ಘತ್ವಂ **ಸೌಚೇತಿ** ಪ್ರತಿಪ್ರಸವಾದ್ಭವತಿ ಎಂದು! ಭಾಷ್ಯದಲ್ಲಿ ವರ್ಣಿತವಾಗಿರುವುದು. ವೃತ್ರಹಾನ್+ಸು ಎಂದಿರುವಾಗ **ಹಲ್‌ಙ್ಯಾಭ್ಯಃ**-(ಪಾ.ಸೂ. ೬-೧-೬೮) ಎಂಬುದರಿಂದ ಸುಲೋಪ. **ನ ಲೋಪಃ ಪ್ರಾತಿಪದಿಕಾಂತಸ್ಯ** (ಪಾ.ಸೂ. ೮-೨-೭) ಎಂಬುದರಿಂದ ನಲೋಪ, ವೃತ್ರಹಾ ಎಂದಾಗುವುದು. ಹಾ ಎಂಬುದು ಧಾತುಸ್ವರದಿಂದ ಉದಾತ್ತ, ಸಮಾಸಾನಂತರವೂ ಕೃದುತ್ತರಪದಪ್ರಕೃತಿಸ್ವರದಿಂದ ಎಂದರೆ **ಗತಿಕಾರಕೋಪಪದಾತ್ಕೃತ್** (ಪಾ.ಸೂ. ೬-೨-೧೩೯) ಎಂಬುದರಿಂದ ಅದೇ ಸ್ವರ ಬರುವುದು.

**ಸೋಮಪೀತಯೇ**— ಪ್ರಥಮಾವಿಭಕ್ತ್ಯಂತಪದಗಳಿಗೆ ಬಹುವ್ರೀಹಿಸಮಾಸವು ಬರುವುದು. ಬೇರೆ ವಿಭಕ್ತ್ಯಂತಗಳು ಬಹುವ್ರೀಹಿಸಮಾಸದಲ್ಲಿ ಸೇರಿದ್ದರೆ ಅದನ್ನು ವ್ಯಧಿಕರಣಬಹುವ್ರೀಹಿ ಎನ್ನುವರು. ಏಭಿ-ರಗ್ನೇದುವೋಗಿರಃ (ಋ.ಸಂ. ೧-೧೪-೧)ರಲ್ಲಿ ಸೋಮಪೀತಯೇ ಎಂಬುದಕ್ಕೆ ವ್ಯಧಿಕರಣಬಹುವ್ರೀಹಿಸಮಾಸವು ನಿರೂಪಿತವಾಗಿರುವುದು. ಸೋಮಶಬ್ದವು ನಿತ್ಸ್ವರದಿಂದ ಆದ್ಯುದಾತ್ತ. ಬಹುವ್ರೀಹಿಯಲ್ಲಿ **ಬಹುವ್ರೀಹೌ ಪ್ರಕೃತ್ಯಾಪೂರ್ವಪದಂ** (ಪಾ.ಸೂ. ೬-೨-೧) ಎಂಬುದರಿಂದ ಅದೇ ಸ್ವರ ಬರುವುದು. ಸೋಮಸ್ಯ ಪೀತಿಃ **ಸೋಮಪೀತಿಃ ತಸ್ಯೈ ಸೋಮಪೀತಯೇ ಎಂದು ತತ್ಪುರುಷವನ್ನು ಮಾಡಿದರೂ ಸಮಾಸಸ್ಯ ಎಂಬುದರಿಂದ**

ಪ್ರಾಪ್ತವಾಗುವ ಅಂತೋದಾತ್ತವನ್ನು ಬಾಧಿಸಿ, ದಾಸೀಭಾರಾದಿಯು ಆಕೃತಿಗಣವಾದ್ದರಿಂದ ಆ ಗಣಕ್ಕೆ ಸೇರುವ ಸೋಮಪೀತಿ ಎಂಬುದಕ್ಕೆ ಕುರುಗಾರ್ಹಪತರಿಕ್ತಗುರ್ವಸೂತಜರತ್ಯಶ್ಲೀಲ ದೃಢರೂಪಾ ಪಾರೇವಡವಾತೈ-ತಿಲಕದ್ರೂಃ ಪಣ್ಯಕಂಬಲೋ ದಾಸೀಭಾರಾಣಾಂಚ (ಪಾ.ಸೂ. ೬-೨-೪೨) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರವು ಬರುವುದು. ವ್ಯಧಿಕರಣಬಹುವ್ರೀಹಿಸಮಾಸಾಶ್ರಯಣವು ಅಗತಿಕ ಗತಿಯಾದ್ದರಿಂದ ತತ್ಪುರುಷವು ವರ್ಣಿಸಲಾಗಿರುವುದು. || ೮ ||

॥ ಸಂಹಿತಾಪಾಠಃ ॥

ಸೇಮಂ ನಃ ಕಾಮಮಾ ಪೃಣ ಗೋಭಿರಶ್ವೈಃ ಶತಕ್ರತೋ ।
ಸ್ತವಾಮ ತ್ವಾ ಸ್ವಾಧ್ಯಃ ॥ ೯ ॥

॥ ಪದಪಾಠಃ ॥

ಸಃ । ಇಮಂ । ನಃ । ಕಾಮಂ । ಆ । ಪೃಣ । ಗೋಭಿಃ । ಅಶ್ವೈಃ । ಶತಕ್ರತೋ
ಇತಿ ಶತಽಕ್ರತೋ ॥
ಸ್ತವಾಮ । ತ್ವಾ । ಸುಽಆಧ್ಯಃ ॥ ೯ ॥

॥ ಸಾಯಣಭಾಷ್ಯಂ ॥

ಹೇ ಶತಕ್ರತೋ ಸ ತ್ವಂ ನೋಽಸ್ಮದೀಯಮಿಮಂ ಕಾಮಂ ಕಾಮ್ಯಮಾನಂ ಫಲಂ ಗೋಭಿರಶ್ವೈಶ್ಚ ಸಹಾ ಪೃಣ । ಸರ್ವತಃ ಪೂರಯ । ವಯಮಪಿ ಸ್ವಾಧ್ಯಃ ಸುಷ್ಠು ಸರ್ವತೋ ಧ್ಯಾನಯುಕ್ತಾಃ ಸಂತಸ್ತ್ವಾ ತ್ವಾಂ ಸ್ತವಾಮ ॥ ಸೇಮಂ । ಸಂಹಿತಾಯಾಂ ಸೋಽಚಿ ಲೋಪೇ ಚೇತ್ಪಾದಪೂರಣಮಿತಿ ಸುಲೋಪಃ । ಕಾಮಂ । ಕಮೇರ್ಘಞ್ । ಕರ್ಷಾತ್ವತೋ ಘಞೋಽಂತ ಉದಾತ್ತಃ । ಪಾ. ೬-೧-೧೫೯ । ಇತ್ಯಂತೋದಾತ್ತತ್ವೇ ಪ್ರಾಪ್ತೇ ವೃಷಾದಿಷು ಪಾಠಾದಾದ್ಯುದಾತ್ತತ್ವಂ । ಪೃಣ । ಪೃಣ ಪ್ರೀಣನೇ । ಲೋಟಃ ಸೇರ್ಹಿಃ । ತುದಾದಿಭ್ಯಃ ಶಃ । ತಸ್ಯ ಙಿತ್ತ್ವಾದ್ಗುಣಾಭಾವಃ । ಅತೋಹೇರಿತಿ ಹೇರ್ಲುಕ್ । ಗೋಭಿಃ । ಸಾವೇಕಾಚ ಇತಿ ಪ್ರಾಪ್ತಂ ವಿಭಕ್ತೇರುದಾತ್ತತ್ವಂ ನ ಗೋಶ್ವನ್ಸಾವವರ್ಣೇತಿ ಪ್ರತಿಷಿಧ್ಯತೇ । ಅಶ್ವೈಃ । ಕ್ವನಂತ ಇತ್ಯುಕ್ತಂ । ಅಸಾಮರ್ಥ್ಯಾನ್ನ ಪರಾಂಗವದ್ಭಾವಃ । ಸ್ತವಾಮ । ಷ್ಟುಞ್ ಸ್ತುತೌ । ಧಾತ್ವಾದೇಃ ಷಃ ಸಃ । ಲೋಡುತ್ತಮಬಹುವಚನಸ್ಯ ಲೋಟೋ ಲಙ್ವದಿತಿ ಲಙ್ವದ್ಭಾವಾನ್ನಿತ್ಯಂ ಙಿತಃ ।

ಪಾ. ೩-೪-೯೯ । ಇತಿ ಸಕಾರಸ್ಯ ಲೋಪಃ । ಅದುತ್ತಮಸ್ಯ ಪಿಚ್ಚ । ಪಾ. ೩-೪-೯೨ । ಇತ್ಯಾಡಾಗಮಃ ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವಂ । ಧಾತುಸ್ವರ ಏವ । ಸ್ವಾಧ್ಯಃ । ಧ್ಯೈ ಚಿಂತಾಯಾಂ । ಸ್ವಾಙ್ಪೋ ರುಪಸರ್ಗಯೋಃ ಪ್ರಾಕ್ಪ್ರಯೋಗಃ । ಅನ್ಯೇಭ್ಯೋಽಪಿ ದೃಶ್ಯತೇ । ಪಾ. ೩-೨-೧೭೮ । ಇತಿ ಕ್ವಿಪ್ ವೃತಿಗ್ರಹಣಸ್ಯ ವಿಧ್ಯಂತರೋಪಸಂಗ್ರಹಣಾರ್ಥತ್ವಾದತ್ರ ಸಂಪ್ರಸಾರಣೇ ಸತಿ ಪರಪೂರ್ವತ್ವಂ । ಹಲ ಇ ದೀರ್ಘಃ । ಜಸ್ಯೇರನೇಕಾಚಃ । ಪಾ. ೬-೪-೮೨ । ಇತಿ ಯಣಾದೇಶಃ । ಗತಿಕಾರಕೋಪಪದಾತ್ಕೃದಿ ತ್ಯುತ್ತರಪದಪ್ರಕೃತಿಸ್ವರತ್ವಂ । ಉದಾತ್ತಯಣೋ ಹಲ್ಪೂರ್ವಾದಿತಿ ಜಸ ಉದಾತ್ತತ್ವಂ ನ ಭವತಿ ತತ್ರಾಸರ್ವನಾಮಸ್ಥಾನಮಿತ್ಯನುವೃತ್ತೇಃ । ಅತ ಉದಾತ್ತಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯೇ ಸ್ವರಿತತ್ವಮೇವ ಭವತಿ ॥ ೩೧ ॥

॥ ಪ್ರತಿಪದಾರ್ಥ ॥

ಹೇ ಶತಕ್ರತೋ—ಎಲೈ ಇಂದ್ರನೇ । ಸಃ ತ್ವಂ—ಆ ನೀನು । ನಃ—ನಮ್ಮ । ಇಮಂ—ಈ ಕಾಮಂ—ಅಪೇಕ್ಷಿತವಾದ ಫಲವನ್ನು (ಇಷ್ಟಾರ್ಥವನ್ನು) । ಗೋಭಿರಶ್ವೈಃ—ಗೋವುಗಳು ಮತ್ತು ಅಶ್ವಗಳಿಂದ ಆಪೃಣ—ಪೂರ್ಣಮಾಡು । (ವಯಮಪಿ—ನಾವೂ) । ಸ್ವಾಧ್ಯಃ—ಒಳ್ಳೆಯ ಧ್ಯಾನಶೀಲರಾಗಿ । ತ್ವಾ—ನಿನ್ನನ್ನು । ಸ್ತವಾಮ—ಸ್ತೋತ್ರಮಾಡುತ್ತೇವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಗೋವು, ಅಶ್ವ ಮೊದಲಾದವುಗಳನ್ನು ಕೊಟ್ಟು ನಮ್ಮ ಇಷ್ಟಾರ್ಥವನ್ನು ಪೂರ್ತಿಗೊಳಿಸು. ನಾವೂ ಸದಾ ಧ್ಯಾನಶೀಲರಾಗಿ ನಿನ್ನನ್ನು ಸ್ತುತಿಸುತ್ತೇವೆ.

## English Translation

O Satakratu (Indra) fulfil this our desire by giving us cows and horses Profoundly meditating we praise you.

॥ ವಿಶೇಷವಿಷಯಗಳು ॥

ಗೋಭಿರಶ್ವೈಃ ಆಪೃಣ—ಗೋವುಗಳು ಮತ್ತು ಅಶ್ವಗಳಿಂದ ಪೂರ್ತಿಮಾಡು ಎಂದರೆ ನಮಗೆ ಗೋವು ಗಳನ್ನೂ ಅಶ್ವಗಳನ್ನೂ ಕೊಟ್ಟು ನಮ್ಮ ಇಷ್ಟಾರ್ಥವನ್ನು ಪೂರ್ಣಗೊಳಿಸು ಎಂದರ್ಥವು.

ಸ್ವಾಧ್ಯಃ—ಧ್ಯೈ ಚಿಂತಾಯಾಂ । ಸುಷ್ಟು ಸರ್ವತೋ ಧ್ಯಾನಯುಕ್ತಾಃ ಸಂತಃ ॥ ನಿನ್ನನ್ನು ಇಂದ್ರನನ್ನು) ಮನಸ್ಸಿನಲ್ಲಿ ಚೆನ್ನಾಗಿ ಧ್ಯಾನಮಾಡುತ್ತಾ ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಸೋಮಮ್**—ತದ್ ಶಬ್ದದ ಮುಂದೆ ಪ್ರಥಮಾವಿಭಕ್ತಿ ಏಕವಚನ ಸು ಪ್ರತ್ಯಯ. **ತದೋಸ್ಸಸ್ಸಾವನಂತ್ಯಯೋಃ** (ಪಾ. ಸೂ. ೭-೨-೧೦೬) ತ್ಯದಾದಿಗಣಪಠಿತವಾದ ಶಬ್ದಗಳ ಕೊನೆಯಲ್ಲಿಲ್ಲದ ತಕಾರ ದಕಾರಗಳಿಗೆ ಸು ಪ್ರತ್ಯಯ ಪರವಾಗಿರುವಾಗ ಸಕಾರಾದೇಶಬರುವುದು ಎಂಬುದರಿಂದ ತಕಾರಕ್ಕೆ ಸಕಾರ, ಸದ್+ಸ್ **ತ್ಯದಾದೀನಾಮಃ** (ಪಾ. ಸೂ. ೭-೨-೧೦೨) ಎಂಬುದರಿಂದ ದಕಾರಕ್ಕೆ ಅಕಾರ, ಸ+ಅ+ಸ್ **ಅತೋಗುಣೇ,** (ಪಾ. ಸೂ. ೬-೧-೯೭) ಎಂಬುದರಿಂದ ಪರರೂಪ. ಇಷ್ಟು ಅಂಶಗಳನ್ನು **ಸೋಮಂ ನಸ್ತೋಮಮಾ** (ಋ. ಸಂ. ೧-೧೬-೫) ಎಂಬಲ್ಲಿಯೂ ಇಟ್ಟುಕೊಳ್ಳುವುದು. ಸಸ್+ಇಮಮ್. **ಸೋಚಿಲೋಪೇಚೇತ್ಪಾದಪೂರಣಮ್** (ಪಾ. ಸೂ. ೬-೧-೧೩೪) ಎಂಬುದರಿಂದ ಸ್‌ಗೆ ಲೋಪ. ಗುಣ- ಸೇಮಮ್ ಎಂದಾಗುವುದು. ಇದರ ಮಿಕ್ಕ ವಿವರಣೆಯು **ಸೋಮಂ ನಸ್ತೋಮಮಾ** ಎಂಬ ಮಂತ್ರದಲ್ಲಿರುವುದು.

**ಕಾಮಮ್**— ಕಮು ಕಾಂತೌ ಧಾತು, ಇದರ ಮುಂದೆ **ಹಲಶ್ಚ** (ಪಾ.ಸೂ.೩-೩-೧೨೧) ಎಂಬುದರಿಂದ ಘಞ್ ಪ್ರತ್ಯಯ. ಕಮ್+ಅ ಅತ **ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ ಕಾಮ, ಎಂದಾಯಿತು. ಘಞ್ ಪ್ರತ್ಯಯವು ಞಿತ್ತಾದ್ದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಅದ್ಯುದಾತ್ತವು ಪ್ರಾಪ್ತವಾದರೆ ಅದನ್ನು ಬಾಧಿಸಿ **ಕರ್ಷಾತ್ವತೋಘಞಾನ್ತ ಉದಾತ್ತಃ** (ಪಾ. ಸೂ. ೬-೧-೧೫೯) ಕರ್ಷಧಾತು ಮತ್ತು ಆಕಾರವನ್ನು ಹೊಂದಿರುವ ಧಾತುಗಳು ಇವುಗಳ ಮುಂದೆ ಘ-ಞ್ ಬಂದರೆ ಘಞ್ ಪ್ರತ್ಯಯಾನ್ತದ ಕೊನೆಯ ವರ್ಣವು ಉದಾತ್ತವಾಗುವುದು ಎಂಬುದರಿಂದ ಉದಾತ್ತವು ಪ್ರಾಪ್ತವಾಗುವುದು. ಅದನ್ನೂ ಬಾಧಿಸಿ **ವೃಷಾದೀನಾಂಚ** (ಪಾ. ಸೂ. ೬-೧-೨೦೩) ವೃಷಾದಿಗಣಪಠಿತವಾದ ಶಬ್ದಗಳ ಆದಿಯು ಉದಾತ್ತವಾಗುವುದು ಎಂಬುದರಿಂದ ವೃಷಾದಿ ಗಣದಲ್ಲಿ ಪಠಿತವಾಗಿರುವ ಕಾಮ ಎಂಬುದು ಆದ್ಯುದಾತ್ತವಾಗುವುದು.

**ಪೃಣ**— ಪೃಣ ಪ್ರೀಣನೇ ತುದಾಯಲ್ಲಿರುವ ಧಾತು ; ಇದರ ಮುಂದೆ ಲೋಟ್. ಮಧ್ಯಮಪುರುಷ ಏಕವಚನ ಸಿಪ್. **ಸೇರ್ಹ್ಯಪಿಚ್ಚ** (ಪಾ.ಸೂ. ೩-೪-೮೭) ಎಂಬುದರಿಂದ ಹಿ ಆದೇಶ **ತುದಾದಿಭ್ಯಶ್ಶಃ** (ಪಾ. ಸೂ. ೩-೧-೭೭) ಎಂಬುದರಿಂದ ಶ ವಿಕರಣ ಪೃಣ್+ಅ ಹಿ **ಸಾರ್ವಧಾತುಕ ಮಪಿತ್** (ಪಾ. ಸೂ. ೧-೨-೪) ಪಕಾರೇತ್ಸಜ್ಞಕವಲ್ಲದ ಸಾರ್ವಧಾತುಕವು ಙಿತ್ತಾಗುವುದು ಎಂಬುದರಿಂದ ಶ ಪ್ರತ್ಯಯ ಙಿತ್ತು. ಅದ್ದರಿಂದ **ಕ್ಙಿತಿಚ** (ಪಾ. ಸೂ. ೧-೧-೫) ಎಂಬುದರಿಂದ ಗುಣಕ್ಕೆ ನಿಷೇಧ ಬರುವುದು. ಆದಕಾರಣ **ಪುಗಂತಲಘೂಪಧಸ್ಯಚ** (ಪಾ ಸೂ. ೭-೩-೮೬) ಎಂಬುದರಿಂದ ಗುಣ ಬರುವುದಿಲ್ಲ. **ಅತೋಹೇಃ** (ಪಾ. ಸೂ. ೬-೪-೧೦೫) ಎಂಬುದರಿಂದ ಹಿಗೆ ಲುಕ್ ಬರುತ್ತೆ, ಪೃಣ ಎಂದಾಗುತ್ತೆ. **ತಿಙ್ಙತಿಙ** (ಪಾ. ಸೂ-೮-೧-೨೮) ಎಂಬುದರಿಂದ ಸರ್ವಾನುದಾತ್ತ. ಸಂಹಿತಾಕಾಲದಲ್ಲಿ ಆ ಎಂಬ ಉದಾತ್ತದ ಮುಂದೆ ಇರುವ ಪೃಗೆ **ಉದಾತ್ತಾನುದಾತ್ತಸ್ಯಸ್ವರಿತಃ** (ಪಾ.ಸೂ. ೮-೪-೬೬) ಎಂಬುದರಿಂದ ಸ್ವರಿತ ಬರುವುದು. ಇದರ ಮುಂದೆ ಇರುವ ಣ ಎಂಬ ಅನುದಾತ್ತಕ್ಕೆ ಗೋ ಎಂಬ ಉದಾತ್ತವು ಪರದಲ್ಲಿರುವುದರಿಂದ **ಉದಾತ್ತಸ್ವರಿತಪರಸ್ಯಸನ್ನತಃ** ( ಪಾ. ಸೂ. ೧-೨-೪೦ ) ಎಂಬುದರಿಂದ ಅನುದಾತ್ತಸ್ವರವು ಬರುವುದು.

**ಗೋಭಿಃ**— **ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ** (ಪಾ. ಸೂ. ೬-೧-೧೬೮) ಸಪ್ತಮೀ ಬಹುವಚನ ಸುಪ್ ಪ್ರತ್ಯಯಪರದಲ್ಲಿರುವಾಗ ಒಂದೇ ಅಚ್ಚನ್ನು ಹೊಂದಿರುವ ಯಾವ ಶಬ್ದವಿದೆಯೋ ಅದರ ಮುಂದೆ

ಇರುವ ತೃತೀಯಾದಿ ವಿಭಕ್ತಿಯು ಉದಾತ್ತವಾಗುವುದು ಎಂಬುದರಿಂದ ಗೋಷು ಎಂಬಲ್ಲಿ ಗೋ ಎಂಬ ಪ್ರಕೃತಿಯು ಏಕಾಚ್ಚವಾಗಿರುವುದರಿಂದ ಅದರ ಮುಂದೆ ಇರುವ ಭಿಸ್‌ಗೆ ಉದಾತ್ತವು ಪ್ರಾಪ್ತವಾಗುವುದು. ಆದರೆ **ನಗೋಶ್ವನ್ಸಾವವರ್ಣರಾಡಙ್ಕ್ರುಙ್ಕ್ರುದ್ಭ್ಯಃ** (ಪಾ.ಸೂ. ೬-೧-೧೮೨) ಗೋ ಶಬ್ದಾದಿಗಳ ಮುಂದೆ ಇರುವ ವಿಭಕ್ತಿಗೂ ಮತುಪ್ಪಿಗೂ ಸಹ ಹಿಂದೆ ಹೇಳಿದ ಸ್ವರವು ಬರುವುದಿಲ್ಲ ಎಂದು ನಿಷಿದ್ಧವಾಗಿರುವುದರಿಂದ ವಿಭಕ್ತಿಯು ಉದಾತ್ತವಾಗುವುದಿಲ್ಲ.

**ಅಶ್ವೈಃ**—ಅಶ್ವ ಎಂಬುದು **ಅಶೂಪ್ರುಷಿ** (ಉ. ಸೂ. ೧-೧೪೯) ಎಂಬುದರಿಂದ ಕ್ವನ್ ಪ್ರತ್ಯಯಾಂತ. ನಿತ್ಸ್ವರದಿಂದ ಆದ್ಯುದಾತ್ತ, ಇದರ ಮುಂದೆ ಶತಕ್ರತೋ ಎಂಬ ಆಮಂತ್ರಿತವು ಇರುವುದು. ಅಶ್ವೈಃ ಎಂಬುದಕ್ಕೂ ಶತಕ್ರತೋ ಎಂಬುದಕ್ಕೂ ಪರಸ್ಪರಾನ್ವಯವಿಲ್ಲ. ಆದ್ದರಿಂದ ಸಾಮರ್ಥ್ಯವಿಲ್ಲ. ಆದ ಕಾರಣದಿಂದ **ಸುಬಾಮಂತ್ರಿತೇಪರಾಂಗವತ್ಸ್ವರೇ** (ಪಾ.ಸೂ. ೨-೧-೨) ಎಂಬುದರಿಂದ ಪರಾಂಗವದ್ಭಾವದಿಂದ ಒಂದೇ ಪದವೆಂದು ಭಾವಿಸಿ ಅಷ್ಟಮಿಕವಾದ ಆಮಂತ್ರಿತಸ್ಯಚ ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ.

**ಸ್ತವಾಮ** —ಷ್ಟುಇಞ್ ಸ್ತುತೌ, ಧಾತು, **ಧಾತ್ವಾದೇಃಷಃಸಃ** (ಪಾ ಸೂ. ೬-೧-೬೪) ಎಂಬುದರಿಂದ ಷಕಾರಕ್ಕೆ ಸಕಾರ, ಲೋಟ್ ಉತ್ತಮಪುರುಷ ಬಹುವಚನ ಮಸ್. ಸ್ತು+ಮಸ್, **ಲೋಟೋ ಲಙ್ವತ್** (ಪಾ. ಸೂ. ೩-೪-೮೫) ಎಂಬುದರಿಂದ ಲಙ್ವದ್ಭಾವ ಬರುವುದು. ಆದ್ದರಿಂದ **ನಿತ್ಯಂಙಿತಃ** (ಪಾ.ಸೂ. ೩-೪-೯೯) ಸಕಾರಾಂತವಾದ ಙಕಾರೇತ್ಸಂಜ್ಞಕ ಉತ್ತಮಪುರುಷದ ಕೊನೆಯ ವರ್ಣಕ್ಕೆ ಲೋಪ ಬರುವುದು ಎಂಬುದರಿಂದ ಸಕಾರಕ್ಕೆ ಲೋಪ. ಕರ್ತರಿಶಪ್ (ಪಾ.ಸೂ. ೩-೧-೬೮) ಎಂಬುದರಿಂದ ಶಪ್. ಅದಕ್ಕೆ **ಅದಿಪ್ರಭೃತಿಭ್ಯಃ ಶಪಃ** (ಪಾ ಸೂ. ೨-೪-೭೨) ಎಂಬುದರಿಂದ ಲುಕ್. **ಆಡುತ್ತಮಸ್ಯಪಿಚ್ಚ** (ಪಾ ಸೂ. ೩-೪-೯೨) ಎಂಬುದರಿಂದ ಮಗೆ ಆಡಾಗಮ ಸ್ತು+ಆಮ, ತಿಙ್ಙಾದ ಆಮ ಎಂಬುದು ಅಜಾದಿಯಾಯಿತು. ಆದ್ದರಿಂದ **ತುರುಸ್ತು ಶಮ್ಯಮಸ್ಸಾರ್ವಧಾತುಕೇ** (ಪಾ.ಸೂ. ೭-೩-೯೫) ಈ ಧಾತುಗಳ ಮುಂದಿರುವ ಸಾರ್ವಧಾತುಕಸಂಜ್ಞಕವಾದ ಹಲಾದಿಯಾದ ತಿಙ್ ಪ್ರತ್ಯಯಕ್ಕೆ ಈಡಾಗಮವು ವಿಕಲ್ಪವಾಗಿ ಬರುವುದು ಎಂದು ವಿಹಿತವಾದ ಈಡಾಗಮವು ಬರುವುದಿಲ್ಲ. **ಸಾರ್ವಧಾತುಕಾರ್ಧಧಾತುಕಯೋಃ** (ಪಾ.ಸೂ. ೭-೩-೮೪) ಎಂಬುದರಿಂದ ಗುಣ, ಉಕಾರಕ್ಕೆ ಓಕಾರ—ಅದಕ್ಕೆ **ಏಚೋಽಯವಾಯಾವಃ** (ಪಾ.ಸೂ. ೬-೧-೭೮) ಎಂಬುದರಿಂದ ಅವಾದೇಶ, ಸ್ತವಾಮ ಎಂದಾಗುವುದು. ಇಲ್ಲಿ ಪ್ರತ್ಯಯವು ಪಿತ್ತಾದ್ದರಿಂದ **ಅನುದಾತ್ತೌ ಸುಪ್ಪಿತೌ** (ಪಾ.ಸೂ. ೩-೧-೪) ಎಂಬುದರಿಂದ ಅನುದಾತ್ತ. ಆದ್ದರಿಂದ ಧಾತುಸ್ವರವೇ ನಿಲ್ಲುವುದು.

**ಸ್ವಾಧ್ಯಃ**—ಧ್ಯೈ ಚಿನ್ತಾಯಾಮ್, ಧಾತು. ಸು ಆಙ್ ಎಂಬ ಉಪಸರ್ಗಗಳಿಗೆ ಪೂರ್ವಭಾಗದಲ್ಲಿ ಪ್ರಯೋಗ, ಆದೇಶ **ಉಪದೇಶೇಽಶಿತಿ** (ಪಾ. ಸೂ. ೬-೧-೪೫) ಎಂಬುದರಿಂದ ಆತ್ವ ಸು+ಆ-ಧ್ಯಾ, ಯಣಾದೇಶ ಸ್ವಾ+ಧ್ಯಾ **ಅನ್ಯೇಭ್ಯೋಽಪಿದೃಶ್ಯತೇ** (ಪಾ. ಸೂ. ೩-೨-೧೭೮) ಭ್ರಾಜಾದಿಗಳಿಗಿಂತಲೂ ಬೇರೆ ಧಾತುಗಳ ಮುಂದೆಯೂ ಕ್ವಿಪ್ ಪ್ರತ್ಯಯವು ಕಾಣಲ್ಪಡುವುದು, ಎಂಬುದರಿಂದ, ಕ್ವಿಪ್, ಅದಕ್ಕೆ ಅವಯವಶಃ ಲೋಪ, ಇಲ್ಲಿ ಸೂತ್ರದಲ್ಲಿ ದೃಶ್ಯತೇ ಎಂಬ ದೃಶಿಗ್ರಹಣವು ಶಾಸ್ತ್ರಾಂತರಾಪ್ರಾಪ್ತಕಾರ್ಯಸಂಗ್ರಹಕ್ಕಾಗಿ ಇರುವುದು. ಆದ್ದರಿಂದ ಪ್ರಕೃತದಲ್ಲಿ ಸಂಪ್ರಸಾರಣ ಬರುವುದು ಸ್ವಾಧ್+ಇ+ಆ. **ಸಾಂಪ್ರಸಾರಣಾಚ್ಚ** (ಪಾ. ಸೂ. ೬-೧-೧೦೮) ಎಂಬುದರಿಂದ ಇ+ಅ ಗಳಿಗೆ ಪೂರ್ವರೂಪ, ಸ್ವಾಧಿ, ಲುಪ್ತವಾದ ಕ್ವಿ ಪ್ರತ್ಯಯವನ್ನು ನಿಮಿತ್ತವಾಗಿಕೊಂಡು **ಯಸ್ಮಾತ್ಪ್ರತ್ಯಯವಿಧಿಸ್ತದಾದಿಪ್ರತ್ಯಯೇಽಙ್ಗಮ್** (ಪಾ. ಸೂ. ೧-೪-೧೩) ಯಾವ ಪ್ರಕೃತಿ ವಿಶೇಷದ ಮುಂದೆ ಯಾವ ಪ್ರತ್ಯಯವು ವಿಧಿಸಲ್ಪಡುವುದೋ ಆ ಪ್ರತ್ಯಯವು ಪರವಾಗಿರುವಾಗ ಪ್ರತ್ಯಯವಿಧಾನಾವಧಿಭೂತಪ್ರಕೃತಿ .

ವಿಶೇಷಾದ್ಯವಯವಕವಾದ ಶಬ್ದವು ಅಂಗಸಂಜ್ಞೆಯನ್ನು ಹೊಂದುವುದು, ಎಂಬುದರಿಂದ ಅಂಗಸಂಜ್ಞೆ ಇರುವುದು. ಆದ್ದರಿಂದ ಹಲಃ (ಪಾ. ಸೂ. ೬-೪-೨) ಅಂಗಾವಯವವಾದ ವ್ಯಂಜನದ ಮುಂದಿರುವ ಯಾವ ಸಂಪ್ರಸಾರಣವಿದೆಯೋ ಅದನ್ನು ಕೊನೆಯಲ್ಲಿ ಹೊಂದಿರುವ ಅಂಗಕ್ಕೆ ದೀರ್ಘಬರುವುದು ಎಂಬುದರಿಂದ ದೀರ್ಘ, ಸ್ವಾಧೀ ಎಂದಾಯಿತು. ಇದರ ಮುಂದೆ ಜಸ್ ಸ್ವಾಧೀ+ಅಸ್. ಈಗ **ಅಚಿಶ್ನುಧಾತು**- (ಪಾ. ಸೂ. ೬-೪-೭೭) ಎಂಬುದರಿಂದ ಇಯಙಾದೇಶವು ಪ್ರಾಪ್ತವಾದರೆ ಅದನ್ನು ಬಾಧಿಸಿ **ಏರನೇಕಾಚೋಽಸಂಯೋಗಪೂರ್ವಸ್ಯ** (ಪಾ. ಸೂ. ೬-೪-೮೨) ಧಾತ್ವವಯವಮಾತ್ರದಿಂದಾದ ಸಂಯೋಗದ ಮುಂದೆ ಇಲ್ಲದೇ ಇರುವ ಯಾವ ಇಕಾರವಿದೆಯೋ ಅದನ್ನು ಕೊನೆಯಲ್ಲಿ ಹೊಂದಿರುವ ಯಾವ ಧಾತುವು ಇದೆಯೋ ಅದನ್ನು ಕೊನೆಯಲ್ಲಿ ಹೊಂದಿರುವ ಅನೇಕಾಚ್ಕವಾದ ಅಂಗಕ್ಕೆ ಅಜಾದಿಪ್ರತ್ಯಯಪರವಾಗಿರುವಾಗ ಯಣಾದೇಶಬರುವುದು ಎಂಬುದರಿಂದ ಯಣಾದೇಶ ಬರುವುದು. ಹೇಗೆಂದರೆ ಸ್ವಾಧೀ ಎಂಬಲ್ಲಿ ಈ ಎಂಬುದು ಸಂಯುಕ್ತಾಕ್ಷರದ ಮುಂದೆ ಇಲ್ಲ ಅಂದಮೇಲೆ ಧಾತ್ವವಯವಮಾತ್ರದಿಂದುಂಟಾದ ಸಂಯೋಗದ ಮುಂದೆ ಸುತರಾಂ ಇಲ್ಲ, ಅದನ್ನು ಕೊನೆಯಲ್ಲಿ ಹೊಂದಿರುವ ಧಾತು ಧೀ, ಎಂಬುದು. ಅದನ್ನು ಕೊನೆಯಲ್ಲಿ ಹೊಂದಿರುವ ಅಂಗ, ಸ್ವಾಧೀ ಎಂಬುದು. ಅದು ಅನೇಕವಾಗಿಯೂ ಇರುವುದು. ಆದ್ದರಿಂದ ಅದಕ್ಕೆ ಯಣಾದೇಶ ಬರುವುದು. ಅದು **ಅಲೋಽನ್ತ್ಯಸ್ಯ** ( ಪಾ. ಸೂ. ೧-೧-೫೨ ) ಎಂಬ ಪರಿಭಾಷೆಯಿಂದ ಕೊನೆಯ ಈ ಕಾರಕ್ಕೆ ಬರುವುದು, ಸ್ವಾಧ್ಯಸ್-ರುತ್ವ ವಿಸರ್ಗಗಳು ಸ್ವಾಧ್ಯಃ, ಎಂದಾಗುವುದು. ಧೀ ಎಂಬುದು ಧಾತುಸ್ವರದಿಂದ ಅಂತೋದಾತ್ತ ಉಪಸರ್ಗಗಳೊಂದಿಗೆ ಸಮಾಸಾನಂತರ, **ಗತಿಕಾರಕೋಪಪದಾತ್ಕೃತ್** (ಪಾ. ಸೂ ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರಬಂದು ಅದೇ ನಿಲ್ಲುವುದು. ಉದಾತ್ತವಾದ ಈಕಾರದ ಸ್ಥಾನದಲ್ಲಿ ಯಣ್ ಬಂದಿರುವುದು. ಅದು ಹಲ್+(ವ್ಯಂಜನ) ಪೂರ್ವಕವಾಗಿಯೂ ಇರುವುದು. ಆದರೂ **ಉದಾತ್ತಯಣೋಹಲ್ಪೂರ್ವಾತ್** (ಪಾ.ಸೂ. ೬-೧-೧೭೪) ಎಂಬುದರಿಂದ ಜಸ್ ವಿಭಕ್ತಿಗೆ ಉದಾತ್ತ ಬರುವುದಿಲ್ಲ. ಏಕೆಂದರೆ, ಈ ಸೂತ್ರಕ್ಕೆ **ಅಞ್ಚೇಶ್ಛಂದಸ್ಯಸ್ಸರ್ವನಾಮಸ್ಥಾನಮ್** (ಪಾ.ಸೂ. ೬-೧-೧೭೦) ಎಂಬುದರಿಂದ ಅಸರ್ವನಾಮಸ್ಥಾನಮ್ ಎಂಬುದು ಅನುವೃತ್ತವಾಗುವುದು. ಆದ್ದರಿಂದ ಉದಾತ್ತದ ಸ್ಥಾನದಲ್ಲಿ ಬಂದುದೂ ವ್ಯಂಜನಪೂರ್ವಕವೂ ಆದ ಯಾವ ಯಣ್ ಇದೆಯೋ ಅದರ ಮುಂದೆ ಇರುವ ನದೀಸಂಜ್ಞಕವೂ, ಅಸರ್ವನಾಮವಿಭಕ್ತಿಯೂ ಸಹ ಉದಾತ್ತವಾಗುವುದು ಎಂದು ಉದಾತ್ತಯಣೋಹಲ್ಪೂರ್ವಾತ್ ಎಂಬುದಕ್ಕೆ ಅರ್ಥವಾಗುವುದು. ಪ್ರಕೃತ ಜಸ್ ಎಂಬುದು **ಸುಡನಪುಂಸಕಸ್ಯ** (ಪಾ.ಸೂ. ೧-೧-೪೩) ನಪುಂಸಕ ಶಬ್ದದ ಮುಂದೆ ಇಲ್ಲದೇ ಇರುವ, ಸು, ಔ, ಜಸ್, ಅಮ್, ಔಟ್ ಈ ಐದು ಪ್ರತ್ಯಯಗಳು ಸರ್ವನಾಮಸ್ಥಾನ ಸಂಜ್ಞೆಯನ್ನು ಹೊಂದುವುವು ಎಂಬುದರಿಂದ ಸರ್ವನಾಮಸ್ಥಾನವಾಗುವುದು. ಅಸರ್ವನಾಮಸ್ಥಾನವಾಗುವುದಿಲ್ಲ. ಆದ್ದರಿಂದ ಉದಾತ್ತಯಣಃ ಎಂಬುದರಿಂದ ಜಸ್‌ಗೆ ಉದಾತ್ತಸ್ವರಬರುವುದಿಲ್ಲ. ಉದಾತ್ತಸ್ವರಿತಯೋರ್ಯಣಸ್ಸ್ವರಿತೋಽನುದಾತ್ತಸ್ಯ, ಉದಾತ್ತ ಅಥವಾ ಸ್ವರಿತ ಇವುಗಳ ಸ್ಥಾನದಲ್ಲಿ ಬಂದ ಯಾವ ಯಣ್ ಇದೆಯೋ ಅದರ ಮುಂದೆ ಇರುವ ಅನುದಾತ್ತದ ಸ್ಥಾನದಲ್ಲಿ ಸ್ವರಿತವು ಬರುವುದು ಎಂಬುದರಿಂದ ಅನುದಾತ್ತೌ ಸುಪ್ಪಿತೌ ಎಂಬುದರಿಂದ ಅನುದಾತ್ತವಾದ ಜಸ್‌ಗೆ ಸ್ವರಿತ ಸ್ವರವೇ ಬರುವುದು ॥ ೯ ॥



# ಹದಿನೇಳನೆಯ ಸೂಕ್ತವು.



॥ ಸಾಯಣಭಾಷ್ಯಂ ॥

ಇಂದ್ರಾವರುಣಯೋರಿತ್ಯಾದಿಕಂ ನವರ್ಚಂ ಷಷ್ಠಂ ಸೂಕ್ತಂ । ಅತ ಏವ ನವೇತಬ್ದಾನುವೃತ್ತಾವನುಕ್ರಮ್ಯತೇ । ಇಂದ್ರಾವರುಣಯೋರ್‍ಯೈಂದ್ರಾವರುಣಂ ಯುವಾಕು ಪಾದನಿಚೃತಾವಿತಿ । ಅತ್ರ ದೇವತಾ ವಿಸ್ಪಷ್ಟಾ । ಋಷಿಚ್ಛಂದಸೀ ತು ಪೂರ್ವವದನುವರ್ತೇತೇ । ಅಯಂ ತು ವಿಶೇಷಃ । ಯುವಾಕು ಹೀತ್ಯಾದಿಕೇ ದ್ವೇ ಋಚೌ ಪಾದನಿಚೃನ್ನಾಮಕಚ್ಛಂದೋಯುಕ್ತೇ ॥ ವಿನಿಯೋಗಸ್ತು ಸ್ಮಾರ್ತೋ ಲೈಂಗಿಕೋ ವಾ ಕಶ್ಚಿದವಗಂತವ್ಯಃ ॥

**ಅನುವಾದ—**ಇಂದ್ರಾವರುಣಯೋಃ ಎಂಬುದು ಈ ನಾಲ್ಕನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ ೪-೫ನೇ ಋಕ್ಕುಗಳು ಪಾದನಿಚೃತ್ ಎಂಬ ಛಂದಸ್ಸಿನ ಋಕ್ಕುಗಳೆಂದು ಹೇಳಲ್ಪಟ್ಟಿದೆ. ಇಂದ್ರಾವರುಣರು ದೇವತೆಗಳು. ಋಷಿಛಂದಸ್ಸುಗಳು ಹಿಂದಿನ ಸೂಕ್ತದಂತೆ. ಆದರೆ ಯುವಾಕು ಹಿ ಶಚೀನಾಂ, ಇಂದ್ರಃ ಸಹಸ್ರದಾವ್ನಾಂ ಎಂಬ ಎರಡು ಋಕ್ಕುಗಳು ಮಾತ್ರ ಪಾದನಿಚೃತ್ ಎಂಬ ಹೆಸರಿನ ಛಂದಸ್ಸುಗಳುಳ್ಳ ಋಕ್ಕುಗಳು. ವಿನಿಯೋಗವನ್ನು ಸ್ಮಾರ್ತಪ್ರಯೋಗದಲ್ಲಿ ನೋಡಿ ತಿಳಿದುಕೊಳ್ಳಬಹುದು.

॥ ಓಂ ॥

## ಸೂಕ್ತ—೧೭

॥ ಮಂಡಲ—೧ ॥ ಅನುವಾಕ—೪ ॥ ಸೂಕ್ತ—೧೭ ॥

॥ ಅಷ್ಟಕ —೧ ॥ ಅಧ್ಯಾಯ—೧ ॥ ವರ್ಗ— ೩೨, ೩೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೧-೯ ॥

॥ ಋಷಿಃ—ಮೇಧಾತಿಥಿಃ ಕಾಣ್ವಃ ॥

॥ ದೇವತಾ— ಇಂದ್ರಾವರುಣೌ ।

॥ ಛಂದಃ—೧-೩, ೬-೯, ಗಾಯತ್ರೀ । ೪, ೫, ಪಾದನಿಚೃತ್ ॥

॥ ಸಂಹಿತಾಪಾಠಃ ॥

ಇಂದ್ರಾವರುಣಯೋರಹಂ ಸಮ್ರಾಜೋರವ ಆ ವೃಣೇ ।
ತಾ ನೋ ಮೃಳಾತ ಈದೃಶೇ ॥ ೧ ॥

॥ ಪದಪಾಠಃ ॥

ಇಂದ್ರಾವರುಣಯೋಃ । ಅಹಂ । ಸಂಽರಾಜೋಃ । ಅವಃ । ಆ । ವೃಣೇ ॥
ತಾ । ನಃ । ಮೃಳಾತಃ । ಈದೃಶೇ ॥ ೧ ॥

॥ ಸಾಯಣಭಾಷ್ಯಂ ॥

ಅಹಮನುಷ್ಠಾತಾ ಸಮ್ರಾಜೋಃ ಸಮೀಚೀನರಾಜ್ಯೋಪೇತಯೋಃ ಸಮ್ಯಗ್ದೀಪ್ಯಮಾನಯೋ-ರ್ವೇಂದ್ರಾವರುಣಯೋರ್ದೇವಯೋಃ ಸಂಬಂಧ್ಯವೋ ರಕ್ಷಣಮಾ ವೃಣೇ । ಸರ್ವತಃ ಪ್ರಾರ್ಥಯೇ । ತಾ ತೌ ದೇವಾವೀದೃಶೇ ಏವಂವಿಧೇಽಸ್ಮದೀಯವರಣೇ ನಿಮಿತ್ತಭೂತೇ ಸತಿ ಮೃಳಾತಃ । ಅಸ್ಮಾನ್ಸುಖಯತಃ॥ ಇಂದ್ರಶಬ್ದೋ ರನ್ಪ್ರತ್ಯಯಾಂತಃ । ವರುಣಶಬ್ದ ಉನನ್ಪ್ರತ್ಯಯಾಂತಃ । ಉಭೌ ನಿತ್ತ್ವಾದಾದ್ಯುದಾತ್ತೌ । ಸಮಾಸೇ ದೇವತಾದ್ವಂದ್ವೇ ಚೇತಿ ಪೂರ್ವಪದಸ್ಯಾನಙಾದೇಶಃ । ಉಭೇ ಯುಗಪದಿತ್ಯನುವೃತ್ತೌ ದೇವ-ತಾದ್ವಂದ್ವೇ ಚೇತಿ ಯುಗಪದುಭಯಪದ ಪ್ರಕೃತಿಸ್ವರತ್ವಂ । ಸಮ್ರಾಜೋಃ । ರಾಜೃ ದೀಪ್ತೌ । ಸತ್ಸೂ-ದ್ವಿಷೇತ್ಯಾದಿನಾ ಕ್ವಿಪ್ । ಸಮೋ ಮೋಽನುಸ್ವಾರಃ । ಪಾ. ೮-೩-೨೩ । ಇತ್ಯನುಸ್ವಾರೇ ಪ್ರಾಪ್ತೇ ಮೋ ರಾಜಿ ಸಮಃ ಕ್ವೌ । ಪಾ- ೮-೩-೨೫ । ಇತಿ ಮಕಾರಾದೇಶಃ । ಕೃದುತ್ತರಪದಪ್ರಕೃತಿಸ್ವರತ್ವಂ । ಕರ್ತೃಕ-ರ್ಮಣೋಃ ಕೃತಿ । ಪಾ.೨-೩-೬೫ । ಇತಿ ಕರ್ತರಿ ಷಷ್ಠೀ । ಅವಃ । ಅವ ರಕ್ಷಣಾದಿಷು । ಭಾವೇಽಸುನ್ । ನಿತ್ತ್ವಾದಾದ್ಯುದಾತ್ತಃ । ತಾ । ಸುಪಾಂ ಸುಲುಗಿತ್ಯಾದಿನಾ ದ್ವಿವಚನಸ್ಯ ಡಾದೇಶಃ । ಟಿಲೋಪೇ ವಿಭ-ಕ್ತೇರುದಾತ್ತನಿವೃತ್ತಿಸ್ವರಃ । ಮೃಳಾತಃ । ಮೃಡ ಸುಖನೇ । ಪ್ರಾರ್ಥನಾಯಾಂ ಲಿಙರ್ಥೇ ಲೇಟ್ । ದ್ವಿವಚನಂ ತಸ್ । ಲೇಟೋಽಡಾಟಾವಿತ್ಯಾಡಾಗಮಃ । ತುದಾದಿಭ್ಯಃ ಶಃ । ಙಿತ್ತ್ವಾಲ್ಲಘೂಪಧಗುಣಾ-ಭಾವಃ । ಈದೃಶೇ । ತ್ಯದಾದಿಷು ದೃಶೋಽನಾಲೋಚನೇ ಕಞ್ ಚ । ಪಾ- ೩-೨-೬೦ । ಇತೀದಂಶಬ್ದ ಉಪಪದೇ ದೃಶೇಃ ಕಞ್ । ಉಪಪದಸಮಾಸ ಇದಂಕಿಮೋರೀಶ್ಕೀ । ಪಾ. ೬-೩-೯೦ । ಇತೀದಮ ಈಶ್ । ಶಿತ್ತ್ವಾತ್ಸರ್ವಾದೇಶಃ । ಕಞಃ ಕಿತ್ತ್ವಾದ್ಗುಣಾಭಾವಃ । ಞಿತ್ತ್ವಾದುತ್ತರಪದಸ್ಯಾದ್ಯುದಾತ್ತತ್ವಂ । ಉಪಪದಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವೇನ ತದೇವ ಶಿಷ್ಯತೇ ॥

॥ ಪ್ರತಿಪದಾರ್ಥ ॥

ಅಹಂ—(ಯಾಗಕರ್ತೃವಾದ) ನಾನು । ಸಮ್ರಾಜೋಃ—ಚೆನ್ನಾಗಿ ಪ್ರಕಾಶಿಸುತ್ತಿರುವ ಅಥವಾ ಒಳ್ಳೆಯ ರಾಜ್ಯದಿಂದ ಕೂಡಿರುವ । ಇಂದ್ರಾವರುಣಯೋಃ—ಇಂದ್ರ ಮತ್ತು ವರುಣರ । ಅವಃ—ರಕ್ಷಣೆಯನ್ನು । ಆ ವೃಣೇ—(ಎಲ್ಲೆಡೆಗಳಲ್ಲಿಯೂ) ಪ್ರಾರ್ಥಿಸುತ್ತೇನೆ । ತಾ—ಆ ಇಬ್ಬರು ದೇವತೆಗಳು । ಈದೃಶೇ—ಈ ನಮ್ಮ ಪ್ರಾರ್ಥನೆಯ ವಿಷಯದಲ್ಲಿ । ನಃ—ನಮಗೆ । ಮೃಳಾತೆ—ಸುಖವನ್ನುಂಟುಮಾಡಲಿ ।

॥ ಭಾವಾರ್ಥ ॥

ಯಾಗವನ್ನಾರಂಭಿಸಿರುವ ನಾನು ನನ್ನ ಯಜ್ಞವು ಸಾಂಗವಾಗಿ ನೆರವೇರುವ ಉದ್ದೇಶದಿಂದ ಮಹಾ ತೇಜಸ್ವಿಗಳಾದ ಮತ್ತು ರಾಜ್ಯಯುಕ್ತರಾದ ಇಂದ್ರ ಮತ್ತು ವರುಣರನ್ನು ಮರೆಹೋಗುತ್ತೇನೆ. ಅವರು ನನ್ನ ಈ ಪ್ರಾರ್ಥನೆಯನ್ನು ಈಡೇರಿಸಿ ನನಗೆ ಸಂತೋಷವನ್ನುಂಟುಮಾಡಲಿ.

## English Translation.

I seek the protection of the sovereign rulers Indra and Varuna; may they both favour us accordingly.

॥ ವಿಶೇಷ ವಿಷಯಗಳು ॥

ಈ ಸೂಕ್ತಕ್ಕೆ ಇಂದ್ರ ಮತ್ತು ವರುಣರೆಂಬ ಇಬ್ಬರು ದೇವತೆಗಳು. ಋಗ್ವೇದದಲ್ಲಿ ಇಬ್ಬಿಬ್ಬರು ದೇವತೆಗಳನ್ನು ಒಟ್ಟಾಗಿ ಸೇರಿಸಿ ಆಹ್ವಾನ ಮಾಡುವುದೂ, ಸ್ತೋತ್ರಮಾಡುವುದೂ ವಿಶೇಷವಾಗಿ ಕಂಡುಬರುವುದು. ಈ ವಿಧವಾದ ಎರಡು ದೇವತೆಗಳನ್ನು (ದೇವತಾದ್ವಂದ್ವಗಳನ್ನು) ಪ್ರತಿಪಾದಿಸುವ ಮಂತ್ರಗಳಿಗೆ ಸಂಸ್ತವಿಕ ಮಂತ್ರವೆಂದು ಹೆಸರು. ಇವುಗಳಲ್ಲಿ ಮುಖ್ಯವಾದ ದೇವತೆಗಳು—ಅಗ್ನಿಃ, ಸೋಮಃ, ವರುಣಃ, ಪೂಷಾ, ಬೃಹಸ್ಪತಿಃ, ಬ್ರಹ್ಮಣಸ್ಪತಿಃ, ಪರ್ವತಃ, ಕುತ್ಸಃ, ವಿಷ್ಣುಃ, ವಾಯುಃ, ಮಿತ್ರಃ, ರುದ್ರಃ, ವಾತಃ, ಪರ್ಜನ್ಯ ಎಂದು ಹದಿನಾಲ್ಕು ಮಂದಿ ದೇವತೆಗಳಿರುವರು. ಹೇಗೆಂದರೆ—

ಇಂದ್ರಾಗ್ನೀ—(ಇಂದ್ರ+ಅಗ್ನಿ)--

ಇಂದ್ರಾಗ್ನೀ ರೋಚನಾ ದಿವಃ (ಋ. ಸಂ. ೩-೧೨-೯).

ಇಂದ್ರಾಸೋಮಾ—(ಇಂದ್ರ+ಸೋಮ)—

ಇಂದ್ರಾಸೋಮಾ ಸಮಘಶಂಸಂ (ಋ. ಸಂ. ೭-೧೦೪-೨).

ಇಂದ್ರಾವರುಣಾ— (ಇಂದ್ರ+ವರುಣ)—

ಇಂದ್ರಾವರುಣಾ ಯುವಮಧ್ವರಾಯ ನಃ (ಋ. ಸಂ. ೭-೮೨-೧).

ಇಂದ್ರಾಪೂಷಣಾ (ಇಂದ್ರ+ಪೂಷಾ)—

ಇಂದ್ರಪೂಷಣಾ ವಯಂ (ಋ. ಸಂ. ೬-೫೭-೧).

ಇಂದ್ರಾಬೃಹಸ್ಪತೀ (ಇಂದ್ರ+ಬೃಹಸ್ಪತಿ)—

ಇದಂ ವಾಮಾಸ್ಯೇ ಹವಿಃ ಪ್ರಿಯಮಿಂದ್ರಾಬೃಹಸ್ಪತೀ | (ಋ. ಸಂ. ೪-೪೯-೧).

ಇಂದ್ರಾಬ್ರಹ್ಮಣಸ್ಪತೀ (ಇಂದ್ರ+ಬ್ರಹ್ಮಣಸ್ಪತಿ)—

ಅಚ್ಛೇಂದ್ರಾಬ್ರಹ್ಮಣಸ್ಪತೀ ಹವಿರ್ನಃ (ಋ. ಸಂ. ೨-೨೪-೧೨)।

ಇಂದ್ರಾಪರ್ವತಾ(ಇಂದ್ರ+ಪರ್ವತಾ)—

ಇಂದ್ರಾಪರ್ವತಾ ಬೃಹತಾ ರಥೇನ (ಋ. ಸಂ ೩-೫೩-೧).

ಇಂದ್ರಾಕುತ್ಸಾ (ಇಂದ್ರ+ಕುತ್ಸ)—

ಇಂದ್ರಾಕುತ್ಸಾ ವಹಮಾನಾ ರಥೇನ (ಋ. ಸಂ. ೫-೩೧-೯)

ಇಂದ್ರಾವಿಷ್ಣೂ (ಇಂದ್ರ+ವಿಷ್ಣು)—

ಇಂದ್ರಾವಿಷ್ಣೂ ದೃಂಹಿತಾಃ ಶಂಬರಸ್ಯ (ಋ. ಸಂ. ೭-೯೯-೫).

ಇಂದ್ರವಾಯೂ (ಇಂದ್ರ+ವಾಯು)—

ಇಂದ್ರವಾಯೂ ಇಮೇ ಸುತಾಃ (ಋ. ಸಂ. ೧-೨-೪).

ಮಿತ್ರಾವರುಣಾ (ಮಿತ್ರ+ವರುಣ)—

ಆ ನೋ ಮಿತ್ರಾವರುಣಾ (ಋ. ಸಂ. ೩-೬೨-೧೬).

ಸೋಮಾಪೂಷಣಾ (ಸೋಮ+ಪೂಷಾ)—

ಸೋಮಾಪೂಷಣಾ ಜನನಾ ರಯೀಣಾಂ (ಋ. ಸಂ. ೨-೪೦-೧).

ಸೋಮಾರುದ್ರಾ (ಸೋಮ+ರುದ್ರ)—

ಸೋಮಾರುದ್ರಾ ಯುವಮೇತಾನ್ಯಸ್ಮೆ (ಋ. ಸಂ. ೬-೭೪-೩).

ವಾತಾಪರ್ಜನ್ಯಾ (ವಾತ+ಪರ್ಜನ್ಯ)—

ಧರ್ತಾರೋ ದಿವ ಋಭವಃ ಸುಹಸ್ತಾ ವಾತಾಪರ್ಜನ್ಯಾ ಮಹಿಷಸ್ಯ ತನ್ಯತೋಃ (ಋ. ಸಂ. ೧೦-೬೬-೧೦).

ಅಗ್ನೀಷೋಮಾ (ಅಗ್ನಿ+ಸೋಮ)—

ಅಗ್ನೀಷೋಮಾವಿಮಂ ಸು ಮೇ (ಋ. ಸಂ. ೧-೯೩-೧).

ಅಗ್ನೀಪರ್ಜನ್ಯಾ (ಅಗ್ನಿ+ಪರ್ಜನ್ಯ).

ಅಗ್ನೀಪರ್ಜನ್ಯಾವವತಂ ಧಿಯಂ ಮೇ (ಋ. ಸಂ. ೬-೫೨-೧೬).

ಅಗ್ನಾವಿಷ್ಣೂ (ಅಗ್ನಿ+ವಿಷ್ಣು)—

ಅಗ್ನಾವಿಷ್ಣೂ ಸಜೋಷಸಾ (ತೈ. ಸಂ. ೪-೭-೧).

ಇಂತಹ ಸಂಸ್ತವ ಮಂತ್ರಗಳು ಋಗ್ವೇದದಲ್ಲಿ ಬಹಳವಾಗಿವೆ. ಅನೇಕ ಸಂದರ್ಭಗಳಲ್ಲಿ ದೇವತಾದ್ವಂದ್ವವನ್ನು ನಿರ್ದೇಶಿಸುವಾಗ ದ್ವಿವಚನವನ್ನು ಉಪಯೋಗಿಸದೆ ಪ್ರತ್ಯೇಕವಾಗಿ ಏಕವಚನವನ್ನು ಉಪಯೋಗಿಸಿರುವ ಋಕ್ಕುಗಳೂ ಅನೇಕವಾಗಿವೆ. ಉದಾಹರಣೆಗಾಗಿ—

ಅಗ್ನ ಇಂದ್ರಶ್ಚ ದಾಶುಷೋ ದುರೋಣೇ (ಋ. ಸಂ. ೩-೨೫-೪).
ತ್ವಂ ನೋ ಅಗ್ನೇ ವರುಣಸ್ಯ ವಿದ್ವಾನ್ (ಋ. ಸಂ. ೪-೧-೪).
ಮರುತಃ ಪಿಬತ ಋತುನಾ (ಋ. ಸಂ. ೧-೧೫-೨).

ಇತ್ಯಾದಿ. ಈ ಋಕ್ಕುಗಳಲ್ಲಿ ಅಗ್ನಿ+ಇಂದ್ರ, ಅಗ್ನಿ+ವರುಣ, ಮರುತಃ+ಋತು ಎಂಬ ದೇವತಾದ್ವಂದ್ವಗಳನ್ನು ನಿರ್ದೇಶಿಸಿದ್ದರೂ ದ್ವಿವಚನ ಪ್ರಯೋಗವನ್ನು ಮಾಡಿಲ್ಲ. ಪ್ರತ್ಯೇಕ ಪ್ರತ್ಯೇಕವಾಗಿ ಏಕವಚನದಲ್ಲಿಯೇ ದೇವತೆಗಳನ್ನು ನಿರ್ದೇಶಿಸಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಇಂದ್ರಾವರುಣಯೋಃ**—ಇನ್ದ್ರಶ್ಚ, ವರುಣಶ್ಚ-ಇನ್ದ್ರಾವರುಣೌ, ತಯೋಃ, ಎಂದು ದ್ವಂದ್ವಸಮಾಸ, ಇದಿ ಪರಮೈಶ್ವರ್ಯೇ ಧಾತುವಿನ ಮುಂದೆ ಋಜ್ರೇನ್ದ್ರಾಗ್ರ........(ಉ.ಸೂ.೨-೧೮೬) ಎಂಬುದರಿಂದ ರನ್‌ಪ್ರತ್ಯಯ, ಧಾತುವು ಇದಿತ್ತಾದ್ದರಿಂದ **ಇದಿತೋನುಮ್ ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗವು ಇನ್ದ್ರ ಎಂದಾಗುವುದು. **ಕೃವೃದಾರಿಭ್ಯಉನನ್** (ಉ.ಸೂ. ೩-೫೩) ಕೄ ವಿಕ್ಷೇಪೇ, ವೃಞ್ ವರಣೇ ದೄವಿದಾರಣೇ ಣಿಜನ್ತ, ಇವುಗಳ ಮುಂದೆ ಉನನ್ ಪ್ರತ್ಯಯ ಬರುವುದು ಎಂಬುದರಿಂದ ವೃಞ್‌ಧಾತುವಿನ ಮುಂದೆ ಉನನ್, ವೃ+ಉನ **ಸಾರ್ವಧಾತುಕಾರ್ಧಧಾತುಕಯೋಃ** (ಪಾ.ಸೂ. ೭-೩-೮೪) ಎಂಬುದರಿಂದ ಗುಣ, **ಉರಣ್ರಪರಃ** (ಪಾ.ಸೂ.೧-೧-೫೧) ಎಂಬುದರಿಂದ ರಪರವಾಗಿ ಬರುವುದು. ವರುನ **ಅಟ್ಕುಪ್ವಾಙ್‌ನುಮ್ವ್ಯವಾಯೇಽಪಿ** (ಪಾ.ಸೂ. ೮-೪-೨) ಎಂಬುದರಿಂದ ನಕಾರಕ್ಕೆ ಣಕಾರ ವರುಣ ಎಂದಾಗುವುದು. ಈ ಎರಡು ಪದಗಳೂ ನಕಾರೇತ್ಸಂಜ್ಞಕವಾದ ಪ್ರತ್ಯಯವನ್ನು ಕೊನೆಯಲ್ಲಿ ಹೊಂದಿರುವುವು. ಆದ್ದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ.ಸೂ. ೬-೧-೧೯೭) ಎಂಬುದರಿಂದ ಎರಡೂ ಆದ್ಯುದಾತ್ತಗಳು. ಇವುಗಳಿಗೆ ದ್ವಂದ್ವಸಮಾಸದಲ್ಲಿ **ದೇವತಾದ್ವಂದ್ವೇಚ** (ಪಾ. ಸೂ. ೬-೩-೨೬) ದೇವತಾವಾಚಕವಾದ ಎರಡು ಪದಗಳನ್ನೊಳಗೊಂಡ ದ್ವಂದ್ವಸಮಾಸದಲ್ಲಿ ಉತ್ತರಪದ ಪರವಾಗಿರುವಾಗ ಪೂರ್ವಪದಕ್ಕೆ ಆನಙ್ ಆದೇಶ ಬರುವುದು. ಆನಙ್ ಆದೇಶವು ಙಿತ್ತಾದ್ದರಿಂದ ಙಿಚ್ಚ ( ಪಾ- ಸೂ. ೧-೧-೫೩ ) ಎಂಬುದರಿಂದ ಅಂತಾದೇಶವಾಗಿ ಬರುವುದು. **ನಲೋಪಃ ಪ್ರಾತಿಪದಿಕಾಂತಸ್ಯ** ( ಪಾ. ಸೂ. ೮-೨-೭ ) ಎಂಬುದರಿಂದ ನಕಾರಕ್ಕೆ ಲೋಪ. **ದೇವತಾದ್ವಂದ್ವೇಚ** (ಪಾಸೂ. ೬-೨-೧೪೧) ಇಲ್ಲಿ **ಉಭೇ ವನಸ್ಪತ್ಯಾದಿಷು ಯುಗಪತ್** (ಪಾ.ಸೂ. ೬-೨-೧೪೦) ಎಂಬುದರಿಂದ ಉಭೇ ಯುಗಪತ್ ಎಂಬ ಎರಡು ಪದಗಳು ಅನುವೃತ್ತಗಳಾಗುವುವು. ಏವಂಚ ದೇವತಾವಾಚಕಪದಗಳಿಂದ ಕೂಡಿದ ದ್ವಂದ್ವಸಮಾಸದಲ್ಲಿ ಪೂರ್ವಪದ ಉತ್ತರಪದಗಳೆರಡೂ ಒಂದೇ ಕಾಲದಲ್ಲಿ ಪ್ರಕೃತಿಸ್ವರವನ್ನು ಹೊಂದುವುವು ಎಂದು ಸೂತ್ರಾರ್ಥವಾಗುವುದು, ಇದರಿಂದ ಉಭಯಪದಪ್ರಕೃತಿಸ್ವರ ಬರುವುದು.

**ಸಮ್ರಾಜೋಃ**— ರಾಜೃ ದೀಪ್ತೌ ಧಾತು. **ಸುತ್ಸೂದ್ವಿಷ.........ಜನೀರಾಜಾಮುಪಸರ್ಗೇಽಪಿ ಕ್ವಿಪ್** (ಪಾ.ಸೂ. ೩-೨-೬೧) ಎಂಬುದರಿಂದ ಕ್ವಿಪ್ ಪ್ರತ್ಯಯ, ಸಮ್+ರಾಜ್+ ಎಂದಿರುವಾಗ ಸಮ್ ಎಂಬುದರ ಮಕಾರಕ್ಕೆ **ಮೋಽನುಸ್ವಾರಃ** (ಪಾ.ಸೂ. ೮-೩-೨೩) ವ್ಯಂಜನಪರದಲ್ಲಿರುವಾಗ ಮಕಾರಾಂತವಾದ ಪದದ ಕೊನೆಯಲ್ಲಿರುವ ಮಕಾರಕ್ಕೆ ಅನುಸ್ವಾರ ಬರುವುದು ಎಂಬುದರಿಂದ ಅನುಸ್ವಾರವು ಪ್ರಾಪ್ತವಾಗುವುದು. ಆದರೆ **ಮೋರಾಜಿಸಮಃಕ್ವೌ** (ಪಾ.ಸೂ. ೮-೩-೨೫) ಕ್ವಿಬಂತವಾದ ರಾಜೃಧಾತುವು ಪರದಲ್ಲಿರುವಾಗ ಸಮ್ ಶಬ್ದದ ಮಕಾರಕ್ಕೆ ಮಕಾರವೇ ಬರುವುದು ಎಂಬುದರಿಂದ ಮಕಾರವೇ ಬರುವುದು, ಸಮ್ರಾಜ್ ಎಂದಿರುವುದು.

**ಅವಃ**— ಅವ ರಕ್ಷಣಾದೌ, ಧಾತು. **ಸರ್ವಧಾತುಭ್ಯೋಽಸುನ್** (ಉ. ಸೂ. ೪-೬೨೮) ಎಂಬುದರಿಂದ ಭಾವಾರ್ಥದಲ್ಲಿ ಅಸುನ್ ಪ್ರತ್ಯಯ, ನಿತ್ಸ್ವರದಿಂದ ಆದ್ಯುದಾತ್ತ. ಏವಂಚ **ಅವಃ** ಎಂಬುದು ಕೃದಂತ, ಈ

ಕೃದಂತದ ಯೋಗವಿರುವುದರಿಂದ ಇಂದ್ರಾವರುಣಯೋಃ, ಎಂಬಲ್ಲಿ **ಕರ್ತೃಕರ್ಮಣೋಃಕೃತಿ** (ಪಾ.ಸೂ. ೨-೩-೬೫) ಕೃತ್ ಪ್ರತ್ಯಯಕ್ಕೆ ಪ್ರಕೃತಿಭೂತವಾದ ಯಾವ ಧಾತುವಿದೆಯೋ ಆ ಧಾತುವಾಚ್ಯವಾದ ಕ್ರಿಯೆಯಲ್ಲಿ ಕರ್ತೃ ಅಥವಾ ಕರ್ಮ ಆಗಿರುವ ಪದದ ಮುಂದೆ ಷಷ್ಠೀವಿಭಕ್ತಿ ಬರುವುದು ಎಂಬುದರಿಂದ ಇಂದ್ರಾವರುಣಯೋಃ ಎಂಬಲ್ಲಿ ಷಷ್ಠೀ ಬಂದಿರುವುದು, ಹೇಗೆಂದರೆ ಕೃತ್ ಅಸುನ್ ಪ್ರತ್ಯಯ, ಅದಕ್ಕೆ ಪ್ರಕೃತಿ ಅವಧಾತು, ಅದರ ಅರ್ಥಭೂತ ವಾದ ಕ್ರಿಯೆ, ಅನಿಷ್ಟನಿವೃತ್ತಿಪೂರ್ವಕ ಇಷ್ಟಪ್ರಾಪ್ತ್ಯನುಕೂಲ ವ್ಯಾಪಾರ, ಈ ವ್ಯಾಪಾರಾಶ್ರಯತ್ವವು ಇಂದ್ರ ವರುಣರಿಗೆ ಇರುವುದರಿಂದ ಅವರು ಅವಧಾತ್ವರ್ಥ ಕ್ರಿಯೆಯಲ್ಲಿ ಕರ್ತೃಭೂತರು, ಈ ಕರ್ತೃವಾಚಕವಾದ ಇಂದ್ರಾ ವರುಣ ಪದದ ಮುಂದೆ, ಪೂರ್ವೋಕ್ತ ಸೂತ್ರದಿಂದ ಷಷ್ಠೀವಿಭಕ್ತಿ ಬರುವುದು, ಕಾರಕಾಣಾಂ ಕ್ರಿಯೈವಾನ್ವಯಃ, ಎಂಬ ಪಕ್ಷದಲ್ಲಿ ಸಮ್ರಾಜೋಃ ಎಂಬಲ್ಲಿಯೂ ಇದೇರೀತಿಯಲ್ಲಿ ಷಷ್ಠೀವಿಭಕ್ತಿ ಬರುವುದು.

**ತಾ**—ತದ್ ಶಬ್ದದ ಮುಂದೆ ಪ್ರಥಮಾ ದ್ವಿವಚನ ಔ ಪ್ರತ್ಯಯ. ತದ್+ಔ, **ಸುಪಾಂಸುಲುಕ್** (ಪಾ.ಸೂ. ೭-೧-೩೯) ಎಂಬುದರಿಂದ ಔಗೆ ಡಾ ಆದೇಶ, ಡಿತ್ಕರಣ ಸಾಮರ್ಥ್ಯದಿಂದ ಭಸಂಜ್ಞೆ ಇಲ್ಲದೇ ಇದ್ದರೂ ಅದ್ ಎಂಬ ಟಿಗೆ ಲೋಪ, **ಅನುದಾತ್ತಸ್ಯಚಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಎಂಬ ಉದಾತ್ತನಿವೃತ್ತಿ ಸ್ವರದಿಂದ, ಆ ಎಂಬ ವಿಭಕ್ತಿಯು ಉದಾತ್ತವಾಗುವುದು,

**ಮೃಳಾತಃ**,—ಮೃಡ ಸುಖನೇ ಧಾತು, ಈ ಮೃಡ್ ಧಾತುವಿನ ಮುಂದೆ **ಲಿಙರ್ಥೇಲೇಟ್** (ಪಾ ಸೂ. ೩-೪-೭) ಎಂಬುದರಿಂದ ಪ್ರಾರ್ಥನಾರೂಪವಾದ ಲಿಙರ್ಥದಲ್ಲಿ ಲೇಟ್ ಬರುವುದು, ಅದರ ಸ್ಥಾನದಲ್ಲಿ ಪ್ರಥಮ ಪುರುಷ ದ್ವಿವಚನ ತಸ್, ಮೃಡ್+ತಸ್. **ಲೇಟೋಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಆಡಾಗಮ, ಆಗಮವು ಟಿತ್ತಾದ್ದರಿಂದ **ಆದ್ಯಂತೌಟಕಿತೌ** (ಪರಿಭಾ ಪಾ. ಸೂ. ೧-೧-೪೬) ಎಂಬುದರಿಂದ ಆದ್ಯವಯವ ವಾಗಿ ಬರುವುದು. ಮೃಡ್+ಆತಸ್ **ತುದಾದಿಭ್ಯಃ ಶಃ** (ಪಾ.ಸೂ. ೩-೧-೭೭) ಎಂಬುದರಿಂದ ಶ ವಿಕರಣ ಪ್ರತ್ಯಯ, ಇದು ಅಪಿತ್ತಾದ ಸಾರ್ವಧಾತುಕ, ಅದ್ದರಿಂದ **ಸಾರ್ವಧಾತುಕಮಪಿತ್** ( ಪಾ. ಸೂ. ೧-೨-೪ ) ಎಂಬುದ ರಿಂದ ಙಿತ್ತಾಗುವುದು. **ಕ್ಙಿತಿಚ** (ಪಾ. ಸೂ. ೧-೧-೫) ಎಂಬುದರಿಂದ ಗುಣಕ್ಕೆ ನಿಷೇಧಬರುವುದು. ಆದ ಕಾರಣ **ಪುಗನ್ತಲಘೂಪಧಸ್ಯಚ**(ಪಾ. ಸೂ. ೭-೩-೮೬) ಎಂಬುದರಿಂದ ಲಘೂಪಧ ಗುಣ ಬರುವುದಿಲ್ಲ, ಸವರ್ಣ ದೀರ್ಘ, ಈಗಲೂ **ಅಂತಾದಿವಚ್ಚ** (ಪಾ.ಸೂ. ೬-೧-೮೫) ಎಂಬುದರಿಂದ ಪೂರ್ವಾಂತವದ್ಭಾವ ಬರುವುದರಿಂದ, ಶ ವಿಕರಣ ಪರಕತ್ವ ಸಂಭವಿಸುವುದರಿಂದ ಗುಣಬರುವುದಿಲ್ಲ ಮೃಡಾತಃ-ಅಜ್ಮಧ್ಯಸ್ಥಡಕಾರಸ್ಯ ಳಕಾರಂ ಬಹ್ವೃಚಾ ಜಗುಃ, ಎಂಬುದರಿಂದ ಡಕಾರಕ್ಕೆ ಳಕಾರ.

**ಈದೃಶೇ**—ಇದಮಿವ ಪಶ್ಯತಿ ಇತಿ ಈದೃಶಃ. ತಸ್ಮಿನ್. ಈದೃಶೇ, **ತ್ಯದಾದಿಷುದೃಶೋಽನಾ ಲೋಚನೇಕಙ್ಚ** (ಪಾ. ಸೂ. ೩-೨-೬೦) ತ್ಯದಾದಿಗಣಪಠಿತವಾದ ಶಬ್ದಗಳು ಉಪಪದವಾಗಿರುವಾಗ ಜ್ಞಾನಾ ಥರ್ಕವಲ್ಲದ ದೃಶ್ ಧಾತುವಿನ ಮುಂದೆ ಕಙ್ ಪ್ರತ್ಯಯ ಬರುವುದು, ಕಙ್ ಎಂಬಲ್ಲಿ ಚ ಗ್ರಹಣದಿಂದ ಪಾಕ್ಷಿಕ ವಾಗಿ ಕ್ವಿನ್ ಪ್ರತ್ಯಯವೂ ಬರುವುದು ಎಂಬುದರಿಂದ ಇದಮ್ ಶಬ್ದೋಪಪದಕವಾದ ದೃಶ್ ಧಾತುವಿನ ಮುಂದೆ ಕಙ್ ಪ್ರತ್ಯಯ, **ಉಪಪದಮತಿಙ್** (ಪಾ. ಸೂ. ೨ ೨-೧೯) ಎಂಬುದರಿಂದ ಸಮಾಸ, ಸಮಾಸಾವ ಯವವಾದ ಸುಪ್‌ಗೆ ಲುಕ್ ಇದಮ್+ದೃಶ, **ಇದಂಕಿಮೋರೀಶ್‌ಕೀ** (ಪಾ. ಸೂ. ೬-೩-೯೦) ದೃಕ್-ದೃಶ, ವತು ಇವು ಪರದಲ್ಲಿರುವಾಗ ಇದಮ್ ಶಬ್ದಕ್ಕೆ ಈಶ್ ಆದೇಶವೂ, ಕಿಮ್ ಶಬ್ದಕ್ಕೆ ಕೀ ಆದೇಶವೂ ಸಹ ಬರುವುದು. ಎಂಬುದರಿಂದ ಇದಮ್ ಶಬ್ದಕ್ಕೆ ಈಶ್ ಆದೇಶ, ಅದು ಶಿತ್ತಾದ್ದರಿಂದ **ಅನೇಕಾಲ್‌ಶಿತ್ಸರ್ವಸ್ಯ** (ಪಾ. ಸೂ.

೧-೧-೫೫) ಎಂಬುದರಿಂದ ಸರ್ವಾದೇಶವಾಗಿ ಬರುವುದು. ಈದೃಶ ಎಂದಾಯಿತು, ಸಪ್ತಮೀ ಏಕವಚನದಲ್ಲಿ ಈದೃಶೇ ಎಂದಾಗುವುದು. ಕಞ್ ಪ್ರತ್ಯಯವು ಕಿತ್ತಾದ್ದರಿಂದ, ದೃಶ ಎಂಬಲ್ಲಿ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯವು ಞಿತ್, ಆದ್ದರಿಂದ ಞ್ನಿತ್ಯಾದಿರ್ನಿತ್ಯಮ್, ಎಂಬುದರಿಂದ ದೃಶ ಎಂಬುದು ಆದ್ಯುದಾತ್ತ. ಸಮಾಸ ಬಂದಮೇಲೂ, ಗತಿಕಾರಕೋಪಪದಾತ್ಕೃತ್ (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿ ಸ್ವರ ಬಂದರೆ ದೃಶ ಎಂಬುದರ ಆದ್ಯುದಾತ್ತವೇ ಬರುವುದು. ಆದ್ದರಿಂದ ಈದೃಶೇ, ಎಂಬುದು ಮಧ್ಯೋದಾತ್ತ || ೧ ||

|| ಸಂಹಿತಾಪಾಠಃ ||

ಗಂತಾರಾ ಹಿ ಸ್ಥೋವಸೇ ಹವಂ ವಿಪ್ರಸ್ಯ ಮಾವತಃ |
ಧರ್ತಾರಾ ಚರ್ಷಣೀನಾಂ || ೨ ||

|| ಪದಪಾಠಃ ||

ಗಂತಾರಾ | ಹಿ | ಸ್ಥಃ | ಅವಸೇ | ಹವಂ | ವಿಪ್ರಸ್ಯ | ಮಾ೨ವತಃ ||
ಧರ್ತಾರಾ | ಚರ್ಷಣೀನಾಂ || ೨ ||

|| ಸಾಯಣಭಾಷ್ಯಂ ||

ಹೇ ಇಂದ್ರಾವರುಣೌ ಅವಸೇಽವಿತುಮನುಷ್ಠಾತಾರಂ ರಕ್ಷಿತುಂ ಮಾವತೋ ಮದ್ವಿಧಸ್ಯ ವಿಪ್ರಸ್ಯ ಬ್ರಾಹ್ಮಣರ್ತ್ವಿಜೋ ಹವಮಾಹ್ವಾನಂ ಗಂತಾರೌ ಸ್ಥೋ ಹಿ | ಪ್ರಾಪ್ತಿಶೀಲೌ ಭವಥಃ ಖಲು | ಕೀದೃಶೌ | ಚರ್ಷಣೀನಾಂ ಮನುಷ್ಯಾಣಾಂ ಧರ್ತಾರೌ ಯೋಗಕ್ಷೇಮಸಂಪಾದನೇನ ಧಾರಯಿತಾರೌ || ಗಂತಾರಾ | ಗಮೇಸ್ತಾಚ್ಛೀಲ್ಯೇ ತೃನ್ | ದ್ವಿವಚನಸ್ಯ ಸುಪಾಂ ಸುಲುಗಿತ್ಯಾದಿನಾಕಾರಾದೇಶಃ | ಋದೃಶೋಽಙಿ ಗುಣಃ | ಪಾ. ೭-೪-೧೬ | ಅಪ್ತೃನ್ನಿತ್ಯಾದಿನೋಪಧಾದೀರ್ಘತ್ವಂ | ತೃನೋ ನಿತ್ತ್ವಾದಾದ್ಯುದಾತ್ತತ್ವಂ | ಸ್ಥಃ | ಅಸ ಭುವಿ | ಲಟ್ ಮಧ್ಯಮಪುರುಷದ್ವಿವಚನಂ ಥಸ್ | ಅದಿಪ್ರಭೃತಿಭ್ಯಃ ಶಪ ಇತಿ ಶಪೋ ಲುಕ್ ಹಿ ಚೇತಿ ನಿಘಾತಪ್ರತಿಷೇಧಃ | ಅವಸೇ | ಅವ ರಕ್ಷಣೇ | ತುಮರ್ಥೇ ಸೇಸೇನ್ನಿತ್ಯಸೇನ್ | ಪಾ. ೩-೪-೯ | ನಿತ್ತ್ವಾದಾದ್ಯುದಾತ್ತಃ | ಹವಂ | ಹ್ವೇಞಿತೋ ಬಹುಲಂ ಛಂದಸೀತ್ಯನೈಮಿತ್ತಿಕೇ ಸಂಪ್ರಸಾರಣೇ ಪರಪೂರ್ವತ್ವೇ ಚ ಋದೋರಬಿತ್ಯಪ್ | ಗುಣಾವಾದೇಶೌ | ಅಪಃ ಪಿತ್ತ್ವಾದನುದಾತ್ತತ್ವಂ | ಧಾತುಸ್ವರ ಏವ | ವಿಪ್ರಸ್ಯ | ಡುವಪ್ ಬೀಜತಂತುಸಂತಾನೇ | ಅಸ್ಯ ಋಜ್ರೇಂದ್ರೇತ್ಯಾದಿನಾ ರನ್ ನಿಪಾತಿತಃ | ನಿತ್ತ್ವಾ

ಪಾದ್ಯುದಾತ್ತಃ । ಮಾವತಃ । ವತುಪ್ಪ್ರಕರಣೇ ಯುಷ್ಮದಸ್ಮದ್ಭ್ಯಾಂ ಛಂದಸಿ ಸಾದೃಶ್ಯ ಉಪಸಂಖ್ಯಾನಂ । ಪಾ. ೫-೨-೩೯-೧ । ವತುಪ್ । ಪ್ರತ್ಯಯೋತ್ತರಪದಯೋಶ್ಚ ಮಪರ್ಯಂತಸ್ಯ ಮಾದೇಶಃ । ಪಾ. ೭-೨-೯೮ । ಆ ಸರ್ವನಾಮ್ನಃ । ಪಾ. ೬-೩-೯೧ । ಇತಿ ದಕಾರಸ್ಯಾಕಾರಃ । ಸವರ್ಣದೀರ್ಘಃ । ಮತುಪಃ ಪಿತ್ತ್ವಾದನುದಾತ್ತತ್ವಂ । ಪ್ರಾತಿಪದಿಕಾಂತೋದಾತ್ತತ್ವೇ ಸ ಏವ ಶಿಷ್ಯತೇ । ಧರ್ತಾರಾ । ಧೃಞ್ ಧಾರಣೇ । ಣ್ವುಲ್ತೃಚೌ । ಪಾ. ೩-೧-೧೩೩ । ಇತಿ ತೃಚ್ । ಏಕಾಚ ಉಪದೇಶ ಇತೀಟ್ಪ್ರತಿಷೇಧಃ । ಗುಣೋ ರಪರತ್ವಂ । ಅಪ್ತೃನ್ತೃಚ್ಸ್ವಸ್ರಾದಿನೋಪಧಾದೀರ್ಘಃ । ಸುಪಾಂ ಸುಲುಗಿತ್ಯಾಕಾರಃ । ತೃಚಶ್ಚಿತ್ತ್ವಾ-ದಂತೋದಾತ್ತತ್ವಂ । ಚರ್ಷಣೀನಾಂ । ಕೃಷೇರಾದೇಶ್ಚ ಚಃ । ಉ. ೨-೧೦೫ । ಇತ್ಯನಿಪ್ರತ್ಯಯಃ । ತತ್ಸಂನಿಯೋಗೇನ ಕಕಾರಸ್ಯ ಚಕಾರಃ । ಪ್ರತ್ಯಯಾದ್ಯುದಾತ್ತತ್ವಂ ಬಾಧಿತ್ವಾ ಛಾಂದಸಮಂತೋದಾತ್ತತ್ವಂ । ಅತ ಏವ ನಾಮನ್ಯತರಸ್ಯಾಮಿತಿ ವಿಭಕ್ತೇರುದಾತ್ತತ್ವಂ । ತತ್ರ ಹಿ ಮತುಪಿ ಯೋ ಹ್ರಸ್ವಾಂತಸ್ತತ ಉತ್ತರಸ್ಯ ನಾಮ ಉದಾತ್ತತ್ವಮಿತಿ ವ್ಯಾಖ್ಯಾತಂ ॥

॥ ಪ್ರತಿಪದಾರ್ಥ ॥

( ಹೇ ಇಂದ್ರಾವರುಣಾ — ಎಲೈ ಇಂದ್ರ ವರುಣರೇ ) । ಚರ್ಷಣೀನಾಂ — ಮನುಷ್ಯರ । ಧರ್ತಾರಾ — (ಯೋಗಕ್ಷೇಮದ) ಧಾರಕರಾದ (ನೀವು) । ಅವಸೇ — (ಯಾಗಕರ್ತೃವಿನ) ರಕ್ಷಣಾರ್ಥವಾಗಿ । ಮಾವತಃ — ನನ್ನಂತಹ । ವಿಪ್ರಸ್ಯ — (ಬ್ರಾಹ್ಮಣನಾದ) ಋತ್ವಿಜನ । ಹವಂ — ಆಹ್ವಾನವನ್ನು (ಮನ್ನಿಸಿ) । ಗಂತಾರಾ ಸ್ಥಃ ಹಿ — ಬರುವ ಸ್ವಭಾವವುಳ್ಳವರಷ್ಟೇ.

॥ ಭಾವಾರ್ಥ ॥

ಎಲೈ ಇಂದ್ರಾವರುಣರೇ, ನೀವು ಮನುಷ್ಯರ ಯೋಗಕ್ಷೇಮವನ್ನು ನೋಡಿಕೊಳ್ಳುವವರು. ಆದುದರಿಂದ ನನ್ನಂತಹ ಋತ್ವಿಜನ ರಕ್ಷಣೆಗಾಗಿ ನನ್ನ ಆಹ್ವಾನವನ್ನು ಮನ್ನಿಸಿ ಇಲ್ಲಿಗೆ ಅವಶ್ಯಕವಾಗಿ ಬರುವ ಸ್ವಭಾವವುಳ್ಳವರು.

## English Translation

O Indra and Varuna, you are the protectors of the people and you go at the call of a minister like me to protect him.

॥ ವಿಶೇಷವಿಷಯಗಳು ॥

ವಿಪ್ರಸ್ಯ — ವಿಪ್ರಶಬ್ದಕ್ಕೆ ಮೇಧಾವಿ ಎಂಬ ಅರ್ಥವಿದ್ದರೂ ಇಲ್ಲಿ ಸ್ತೋತ್ರಮಾಡುತ್ತಿರುವ ಎಂಬ ಅರ್ಥವು ಸರಿಯಾಗಿ ಹೊಂದುವುದು.

ಮಾವತಃ — ಮದ್ವಿಧಸ್ಯ । ನನ್ನಂತಹ, ಎಂದರೆ ನನ್ನಂತೆ ನಿಮ್ಮನ್ನು ಸ್ತೋತ್ರಮಾಡುವ ಯಜಮಾನನಿಗೆ ಎಂದರ್ಥವು.

ಧರ್ತಾರಾ — ಧೃಞ್ ಧಾರಣೇ । ಯೋಗಕ್ಷೇಮಸಂಪಾದನೇನ ಧಾರಯಿತಾರೌ । ಮನುಷ್ಯರ ಯೋಗಕ್ಷೇಮವನ್ನು ಧರಿಸುವವರು ಎಂದರೆ ಅದರಲ್ಲಿ ಆಸಕ್ತಿಯುಳ್ಳವರು, ಯೋಗಕ್ಷೇಮದ ಭಾರವನ್ನು ಹೊತ್ತಿರುವವರು.

|| ವ್ಯಾಕರಣಪ್ರಕ್ರಿಯಾ ||

**ಗನ್ತಾರಾ**— ಗಮ್ಲೃ ಗತೌ, ಧಾತು. ಇದರ ಮುಂದೆ **ತೃನ್** (ಪಾ ಸೂ. ೩-೨-೧೩೫) ಎಂಬುದರಿಂದ ತಚ್ಛೀಲ ಎಂಬ ಅರ್ಥದಲ್ಲಿ ತೃನ್ ಬರುವುದು. ಗಮ್+ತೃ. **ನಶ್ಚಾಪದಾಂತಸ್ಯ ಝಲಿ** (ಪಾ.ಸೂ. ೮-೩-೨೪) ಎಂಬುದರಿಂದ ಮ್‌ಗೆ ಅನುಸ್ವಾರ. **ಅನುಸ್ವಾರಸ್ಯಯಯಿಪರಸವರ್ಣಃ** (ಪಾ.ಸೂ. ೮-೪-೫೮) ಎಂಬುದರಿಂದ ಅನುಸ್ವಾರದ ಸ್ಥಾನದಲ್ಲಿ ಸ್ಥಾನೇಂತರತಮಃ ಎಂಬ ಪರಿಭಾಷಾ ಸಹಕಾರದಿಂದ ಪರಸವರ್ಣವೂ ಅನುನಾಸಿಕವೂ ಆದ ನಕಾರ ಬರುವುದು. ಗನ್ತೃ ಎಂದಾಗುವುದು. ಇದರ ಮುಂದೆ ಪ್ರ. ದ್ವಿ ಔ ಪ್ರತ್ಯಯ. ಇದಕ್ಕೆ **ಸುಪಾಂಸು-ಲುಕ್**-(ಪಾ ಸೂ. ೭-೧-೩೯) ಎಂಬುದರಿಂದ ಆಕಾರಾದೇಶ. ಗನ್ತೃ+ಆ. **ಋತೋ ಙಿ ಸರ್ವನಾಮಸ್ಥಾನ-ಯೋಃ** (ಪಾ ಸೂ. ೭-೩-೧೧೦) ಎಂಬುದರಿಂದ ಗುಣ. **ಉರಣ್ರಪರಃ** ಎಂಬುದರಿಂದ ರ ಪರವಾಗಿ ಬರುವುದು. ಗನ್ತರ್+ಆ ಎಂದಾಗುವುದು. ಇಲ್ಲಿ **ಋದೃಶೋಽಙಿಗುಣಃ** (ಪಾ.ಸೂ. ೭-೪-೧೬) ಋಕಾರಾಂತವಾದ ಧಾತು, ದೃಶ್ ಧಾತು ಇವುಗಳಿಗೆ ಅಙ್ ಪರದಲ್ಲಿರುವಾಗ ಗುಣವು ಬರುವುದು ಎಂಬುದರಿಂದ ವಿಹಿತವಾದ ಗುಣವು ಅಙ್ ಪರದಲ್ಲಿರುವಾಗ ಬರುವುದು ಇಲ್ಲಿ ಅಙ್ ಪ್ರತ್ಯಯವು ಇಲ್ಲದ ಕಾರಣ ಈ ಸೂತ್ರವು ಇಲ್ಲಿ ಬರುವುದಿಲ್ಲ. ಆದ್ದರಿಂದ ಇಲ್ಲಿ ಋದೃಶೋಽಙಿ ಎಂಬ ಸೂತ್ರದಿಂದ ಗುಣೋಪಪಾದನೆಯು ಪ್ರಾಮಾದಿಕವೆಂದು ತಿಳಿಯಬೇಕು. **ಅಪ್‌ತೃನ್ ತೃಚ್**- (ಪಾ.ಸೂ. ೬-೪-೧೧) ಎಂಬುದರಿಂದ ಉಪಧಾದೀರ್ಘ, ಗನ್ತಾರಮ್ ಎಂದಾಗುವುದು. ತೃನ್ ಪ್ರತ್ಯಯವು ನಿತ್. ಆದ್ದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಗನ್ತೃ ಎಂಬುದು ಆದ್ಯುದಾತ್ತ.

**ಸ್ಥಃ**-ಅಸ-ಭುವಿ, ಧಾತು. ಅದಾದಿ. ಇದರ ಮುಂದೆ ಲಟ್, ಮಧ್ಯಮಪುರುಷ ದ್ವಿವಚನ ಥಸ್, ಅಸ್+ಥಸ್ **ಕರ್ತರಿಶಪ್** (ಪಾ ಸೂ. ೩-೧-೬೮) ಎಂಬುದರಿಂದ ಶಪ್, **ಅದಿಪ್ರಭೃತಿಭಿಶ್ಶಪಃ** (ಪಾ.ಸೂ. ೨-೪-೭೨) ಎಂಬುದರಿಂದ ಅದಕ್ಕೆ ಲುಕ್, **ಸಾರ್ವಧಾತುಕಮಪಿತ್** (ಪಾ. ಸೂ. ೧-೨-೪) ಎಂಬುದರಿಂದ ಥಸ್ ಙಿತ್ ಆಗುವುದು. **ಶ್ನಸೋರಲ್ಲೋಪಃ** (ಪಾ.ಸೂ ೬-೪-೧ ) ಎಂಬುದರಿಂದ ಅಸ್‌ನ ಅಗೆ ಲೋಪ, ರುತ್ವ, ವಿಸರ್ಗ, ಸ್ಥಃ ಎಂದಾಗುವುದು. **ಹಿಚ** (ಪಾ. ಸೂ ೮-೧-೩೪) ಹಿ ಎಂಬುದರಿಂದ ಕೂಡಿಕೊಂಡಿರುವ **ತಿಙಂತವು** ಅನುದಾತ್ತವಾಗುವುದಿಲ್ಲ ಎಂಬುದರಿಂದ ಹಿಸ್ಥ ಎಂದು ಹಿಯುಕ್ತವಾದ ಸ್ಥಗೆ ಸರ್ವಾನುದಾತ್ತ ನಿಷೇಧ ಬರುವುದರಿಂದ, **ತಿಙ್ಙತಿಙಃ** ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ.

**ಅವಸೇ**—ಅವ ರಕ್ಷಣೇ ಧಾತು. **ತುಮರ್ಥೇ ಸೇ, ಸೇನ ಸೇ, ಅಸೇನ್, ಕ್ಸೇ, ಕಸೇನ್, ಅಧ್ಯೈ, ಅಧ್ಯೈನ್, ಕಧ್ಯೈ, ಕಧ್ಯೈನ್, ಶಧ್ಯೈ, ಶಧ್ಯೈನ್ ತವೈ, ತವೇಙ್, ತವೇನಃ** (ಪಾ.ಸೂ, ೩-೪-೯) ಅವ್ಯಯ ಕೃತೋಭಾವೇ, ಎಂಬ ವಚನದಿಂದ ತುಮರ್ಥವು ಭಾವ. ಈ ಅರ್ಥದಲ್ಲಿ ಈ ನಿರ್ದಿಷ್ಟವಾದ ಪ್ರತ್ಯಯಗಳು ಬರುವುವು ಎಂಬುದರಿಂದ ಅಸೇನ್, ಪ್ರತ್ಯಯ. ಅವ್+ಅಸೇ=ಅವಸೇ, ಇದು ನಿತ್ಸ್ವರದಿಂದ ಆದ್ಯುದಾತ್ತ.

**ಹವಮ್**--ಹ್ವೇಞ್ ಸ್ಪರ್ಧಾಯಾಂ ಶಬ್ದೇಚ ಧಾತು, **ಹ್ವಸ್ಸಂಪ್ರಸಾರಣಯೋಃ** (ಪಾ.ಸೂ.೬-೧-೩೨) ಎಂಬುದು ಅನುವೃತ್ತವಾಗಲು **ಬಹುಲಂ ಛಂದಸಿ** (ಪಾ. ಸೂ ೬-೧-೩೪) ಎಂಬುದರಿಂದ ಅನೈಮಿತ್ತಿಕವಾಗಿ ಸಂಪ್ರಸಾರಣ ಅಂದರೆ ವಕಾರಕ್ಕೆ ಉಕಾರ **ಸಂಪ್ರಸಾರಣಾಚ್ಚ** (ಪಾ ಸೂ ೬-೧-೧೦೮) ಎಂಬುದರಿಂದ ಪೂರ್ವರೂಪ ಹು ಎಂದಿರುವಾಗ **ಋದೋರಪ್** (ಪಾ.ಸೂ. ೩-೩-೫೭) ಋಕಾರಾಂತ, ಉಕಾರಾಂತಗಳಾದ ಧಾತುಗಳ ಮುಂದೆ ಅಪ್ ಪ್ರತ್ಯಯ ಬರುವುದು. ಎಂಬುದರಿಂದ ಹು ಎಂಬುದರ ಮುಂದೆ ಅಪ್ ಪ್ರತ್ಯಯ, **ಸಾರ್ವ-ಧಾತುಕಾರ್ಧಧಾತುಕಯೋಃ** (ಪಾ.ಸೂ. ೭-೩-೮೪) ಎಂಬುದರಿಂದ ಗುಣ ಉಕಾರಕ್ಕೆ ಓಕಾರ. **ಏಚೋಽಯ-**

**ವಾಯೋವಃ** (ಪಾ.ಸೂ. ೬-೧-೭೮ ) ಎಂಬುದರಿಂದ ಅವಾದೇಶ ಹವ ಎಂದಾಯ್ತು. **ಅಪ್** ಪ್ರತ್ಯಯವು ಪಿತ್ತಾದ್ದರಿಂದ ಅನುದಾತ್ತೌ ಸುಪ್ಪಿತೌ ಎಂಬುದರಿಂದ ಅನುದಾತ್ತ. ಆದಕಾರಣ ಧಾತುಸ್ವರವೇ ನಿಲ್ಲುವುದು. ಇದರ ಮುಂದೆ ಅಮ್ ಪ್ರತ್ಯಯ, **ಅಮಿಪೂರ್ವಃ** (ಪಾ.ಸೂ. ೬-೧-೧೦೭) ಎಂಬುಧರಿಂದ **ಪೂರ್ವರೂಪ, ಹವಮ್** ಎಂದಾಗುವುದು.

ವಿಪ್ರಸ್ಯ—ಡುವಪ್ ಬೀಜಸನ್ತಾನೇ, ಧಾತು. ಇದಕ್ಕೆ ಋಜ್ರೇನ್ದ್ರಾಗ್ರ ವಿಪ್ರ-(ಉ ಸೂ ೨-೧೮೬) ಇತ್ಯಾದಿ ಸೂತ್ರದಿಂದ ರನ್ ಪ್ರತ್ಯಯವು ನಿಪಾತಿತವಾಗಿರುವುದು. ನಿತ್ಸ್ವರದಿಂದ ಆದ್ಯುದಾತ್ತ.

**ಮಾವತಃ—ಯತ್ತದೇತೇಭ್ಯಃ ಪರಿಮಾಣೇವತುಪ್** ( ಪಾ.ಸೂ. ೫ ೨-೬೯). ಈ ಸೂತ್ರದಲ್ಲಿ **ವತುಪ್ ಪ್ರಕರಣೇ ಯುಷ್ಮದಸ್ಮಭ್ಯಾಂ ಛಂದಸಿಸಾದೃಶ್ಯ ಉಪಸಂಖ್ಯಾನಮ್** (ಪಾ ಸೂ. ೫-೨-೩೯-೧) ಛಂದಸ್ಸಿನಲ್ಲಿ ಯುಷ್ಮದ್-ಅಸ್ಮದ್ ಶಬ್ದಗಳ ಮುಂದೆ ಸಾದೃಶ್ಯಾರ್ಥದಲ್ಲಿ ವತುಪ್ ಪ್ರತ್ಯಯ ಬರುವುದು ಎಂದು ವಚನವನ್ನು ವತುಪ್ ಪ್ರಕರಣದಲ್ಲಿ ಮಾಡಬೇಕು ಎಂಬುದರಿಂದ ಅಸ್ಮದ್ ಎಂಬುದರ ಮುಂದೆ ಸಾದೃಶ್ಯಾರ್ಥದಲ್ಲಿ ವತುಪ್ ಬರುತ್ತೆ. ಅಸ್ಮದ್+ವತ್, **ಪ್ರತ್ಯಯೋತ್ತರಪದಯೋಶ್ಚ** (ಪಾ.ಸೂ. ೭-೨-೯೮) ಪ್ರತ್ಯಯ ಅಥವಾ ಉತ್ತರಪದ ಪರವಾಗಿದ್ದರೆ ಯುಷ್ಮದ್, ಅಸ್ಮದ್ ಶಬ್ದಗಳ ಮಪರ್ಯಂತಕ್ಕೆ ಕ್ರಮವಾಗಿ ತ್ವ-ಮ, ಎಂಬ ಆದೇಶಗಳು ಬರುವುವು ಎಂಬುದರಿಂದ, ಅಸ್ಮ ಎಂಬುದಕ್ಕೆ ಮ, ಆದೇಶ, ಮ+ಅದ್+**ವತ್** ಎಂದಾಯಿತು. **ಅತೋಗುಣೇ** (ಪಾ. ಸೂ. ೬-೧-೯೭) ಎಂಬುದರಿಂದ ಪರರೂಪ, ಮದ್+ವತ್, **ಆಸರ್ವನಾಮ್ನಃ** (ಪಾ.ಸೂ. ೬-೩-೯೧) ದೃಕ್, ದೃಶ, ವತು, ಇವುಗಳು ಪರದಲ್ಲಿರುವಾಗ ಸರ್ವನಾಮಶಬ್ದದ ಕೊನೆಯ ವರ್ಣಕ್ಕೆ ಆಕಾರಾದೇಶ ಬರುವುದು. ಮ+ಆ+**ವತ್ ಅಕಸ್ಸವರ್ಣೇ ದೀರ್ಘಃ** ( ಪಾ. ಸೂ. ೬-೧-೧೦೧) ಎಂಬುದರಿಂದ ಸವರ್ಣದೀರ್ಘ **ಮಾವತ್**. ವತುಪ್ ಪ್ರತ್ಯಯವು ಪಿತ್ತು ಆದ್ದರಿಂದ ಅನುದಾತ್ತೌಸುಪ್ಪಿತೌ ಎಂಬುದರಿಂದ ಅನುದಾತ್ತ. ಮಾ ಎಂಬುದು ಪ್ರಾತಿಪದಿಕಸ್ವರದಿಂದ ಅಂತೋದಾತ್ತ. ಇದೇ ಸ್ವರವೇ ನಿಲ್ಲುವುದು.

**ಧರ್ತಾರಾ—ಧೃಞ್ ಧಾರಣೇ, ಧಾತು, ಣ್ವುಲ್ ತೃಚೌ** (ಪಾ. ಸೂ. ೩-೧-೧೩೩) ಎಂಬುದರಿಂದ ತೃಚ್, ಧೃ ಧಾತುವು ಉಪದೇಶದಲ್ಲಿ ಅನುದಾತ್ತವಾಗಿಯೂ, ಏಕಾಚ್ಕವಾಗಿಯೂ ಇರುವುದು. ಆದ್ದರಿಂದ **ಏಕಾಚ ಉಪದೇಶೇಽನುದಾತ್ತಾತ್** (ಪಾ.ಸೂ. ೭-೨-೧೦ ) ಎಂಬುದರಿಂದ ತೃಗೆ **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಪ್ರಾಪ್ತವಾಗುವ ಇಡಾಗಮಕ್ಕೆ ಪ್ರತಿಷೇಧ ಬರುವುದು. ತೃಚ್ ಪ್ರತ್ಯಯವನ್ನು ನಿಮಿತ್ತಮಾಡಿಕೊಂಡು ಧೃಗೆ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಗುಣ. ಅದು ರಪರವಾಗಿ ಬರುವುದು, ಧರ್ತೃ ಎಂದಾಗುವುದು. ಇದರ ಮುಂದೆ ಔ ಪ್ರತ್ಯಯ. ಅದಕ್ಕೆ **ಸುಪಾಂಸುಲುಕ್**-(ಪಾ ಸೂ.೭-೧-೩೯) ಎಂಬುದರಿಂದ ಆಕಾರಾದೇಶ, ಧರ್ತೃ ಎಂಬಲ್ಲಿ **ಋತೋಙಿ ಸರ್ವನಾಮಸ್ಥಾನಯೋಃ** ಎಂಬುದರಿಂದ ಗುಣ, ರಪರತ್ವ, ಅಪ್ತೃನ್ತೃಚ್, ಇತ್ಯಾದಿ ಸೂತ್ರದಿಂದ ಉಪಧಾದೀರ್ಘ. ಧರ್ತಾರಾ ತೃಚ್ ಪ್ರತ್ಯಯವು ಚಿತ್ತಾದ್ದರಿಂದ ಚಿತಃ, ಎಂಬುದರಿಂದ ಧರ್ತೃ ಎಂಬುದು ಅಂತೋದಾತ್ತ.

**ಚರ್ಷಣೀನಾಮ್**—ಕೃಷ ವಿಲೇಖನೇ ಧಾತು. ಇದರ ಮುಂದೆ **ಕೃಷೇರಾದೇಶ್ಚ ಚಃ** (ಉ ಸೂ. ೨-೨೬) ಕೃಷ ಧಾತುವಿನ ಮುಂದೆ ಅನಿ ಪ್ರತ್ಯಯ ಬರುವುದು. ಧಾತುವಿನ ಮೊದಲನೆಯ ವರ್ಣವಾದ ಕಕಾರಕ್ಕೆ ಚಕಾರ ಬರುವುದು ಎಂಬುದರಿಂದ ಅನಿಪ್ರತ್ಯಯವೂ ಕಕಾರಕ್ಕೆ ಚವೂ ಬಂದರೆ ಚೃಷ್+ಅನಿ, **ಪುಗನ್ತ**

**ಲಘೂಪಧಸ್ಯಚ** (ಪಾ. ಸೂ. ೭-೩-೮೬) ಎಂಬುದರಿಂದ **ಲಘೂಪಧಗುಣ** ರಪರವಾಗಿ ಬರುವುದು. **ಚರ್ಷನಿ, ಅಟ್ಕುಪ್ವಾಙ್ನುಮ್ವ್ಯವಾಯೇಽಪಿ** (ಪಾ. ಸೂ. ೮-೪-೨) ಎಂಬುದರಿಂದ ನಕಾರಕ್ಕೆ ಣಕಾರ ಚರ್ಷಣಿ, ಇದರ ಮುಂದೆ ಷಷ್ಠೀಬಹುವಚನ ಆಮ್. ಚರ್ಷಣಿ+ಆಮ್. **ಹ್ರಸ್ವನದ್ಯಾಪೋನುಟ್** (ಪಾ ಸೂ. ೭-೧-೫೪) ಎಂಬುದರಿಂದ ನುಡಾಗಮ. **ನಾಮಿ** (ಪಾ. ಸೂ. ೬-೪-೩) ನಾಮ್ ಪರದಲ್ಲಿರುವಾಗ ಅಜನ್ತವಾದ ಅಂಗಕ್ಕೆ ದೀರ್ಘಬರುವುದು ಎಂಬುದರಿಂದ ದೀರ್ಘ, ಚರ್ಷಣೀನಾಮ್ ಅನಿ ಎಂಬುದಕ್ಕೆ ಆದ್ಯುದಾತ್ತಶ್ಚ ಎಂಬುದರಿಂದ ಪ್ರತ್ಯಯಾದ್ಯುದಾತ್ತವು ಪ್ರಾಪ್ತವಾದರೆ ಛಾಂದಸವಾಗಿ ಅಂತೋದಾತ್ತ ಬರುವುದು. ಇದು ಅಂತೋದಾತ್ತವಾದ್ದರಿಂದಲೇ **ನಾಮನ್ಯತರಸ್ಯಾಮ್.** (ಪಾ.ಸೂ. ೬-೧-೭೭) ಎಂಬುದರಿಂದ ವಿಭಕ್ತಿಗೆ ಉದಾತ್ತ ಬರುವುದು. ಚರ್ಷಣೀ ಎಂಬುದು ಅಂತೋದಾತ್ತವಾದರೂ ಹ್ರಸ್ವಾಂತವಲ್ಲ. ಆದ್ದರಿಂದ ಹೇಗೆ ಉದಾತ್ತ ಬರುವುದು? ಎಂದರೆ ನಾಮನ್ಯತರಸ್ಯಾಮ್ ಎಂಬುದಕ್ಕೆ ಮತುಪ್ಪ್ರತ್ಯಯ ಪರದಲ್ಲಿರುವಾಗ ಯಾವುದು ಹ್ರಸ್ವಾಂತವಾಗಿಯೂ ಅಂತೋದಾತ್ತವಾಗಿಯೂ ಇರುವುದೋ ಅದರ ಮುಂದೆ ಇರುವ ನಾಮ್ ಎಂಬುದು ವಿಕಲ್ಪವಾಗಿ ಉದಾತ್ತವಾಗುವುದು ಎಂದು ಅರ್ಥ. ಚರ್ಷಣಿ ಎಂಬುದರ ಮುಂದೆ ಮತುಪ್ಪನ್ನು ಇಟ್ಟರೆ, ಅದು ಹ್ರಸ್ವಾಂತವಾಗಿಯೂ ಅಂತೋದಾತ್ತವಾಗಿಯೂ ಇರುವುದು. ಆದ್ದರಿಂದ ಈಗ ದೀರ್ಘಾಂತವಾದರೂ ವಿಭಕ್ತಿಗೆ ಉದಾತ್ತ ಬರಬಹುದು ॥ ೨ ॥

॥ ಸಂಹಿತಾಪಾಠಃ ॥

ಅನುಕಾಮಂ ತರ್ಪಯೇಥಾಮಿಂದ್ರಾವರುಣ ರಾಯ ಆ ।
ತಾ ವಾಂ ನೇದಿಷ್ಠಮೀಮಹೇ ॥ ೩ ॥

॥ ಪದಪಾಠಃ ॥

ಅನುಽಕಾಮಂ । ತರ್ಪಯೇಥಾಂ । ಇಂದ್ರಾವರುಣಾ । ರಾಯಃ । ಆ ॥
ತಾ । ವಾಂ । ನೇದಿಷ್ಠಂ । ಈಮಹೇ ॥ ೩ ॥

॥ ಸಾಯಣಭಾಷ್ಯಂ ॥

ಇಂದ್ರಾವರುಣಾ ಹೇ ಇಂದ್ರಾವರುಣೌ ಅನುಕಾಮಮಸ್ಮದೀಯಾಭಿಲಾಷಮನು ರಾಯೋ ಧನಸ್ಯ ಪ್ರದಾನೇನಾ ತರ್ಪಯೇಥಾಂ । ಸರ್ವತೋಽಸ್ಮಾಂಸ್ತೃಪ್ತಾನ್ ಕುರುತಂ । ವಯಂ ಯದಾ ಯದಾ ಧನಂ ಕಾಮಯಾಮಹೇ ತದಾ ತದಾ ಪ್ರಯಚ್ಛತಮಿತ್ಯರ್ಥಃ । ತಾ ವಾಂ ತಾದೃಶೌ ಯುವಾಂ ನೇದಿಷ್ಠ-

ಮತಿಶಯೇನ ಸಾಮೀಪ್ಯಂ ಯಥಾ ಭವತಿ ತಥಾ ಈಮಹೇ । ಯಾಚಾಮಹೇ ಕಾಲವಿಲಂಬಮಂತರೇಣ ಧನಂ ದಾತವ್ಯಮಿತ್ಯರ್ಥಃ । ಸಪ್ತದಶಸು ಯಾ ಚ್ಞಾ ಕರ್ಮಸ್ವೀಮಹ ಇತಿ ಪಠಿತಂ ॥ ಅನುಕಾಮಂ । ಕಾಮಸ್ಯ ಪಶ್ಚಾದನುಕಾಮಂ । ಅಥವಾ ಕಾಮೇ ಕಾಮೇಽನುಕಾಮಂ । ಅನುರಿಹ ಪಶ್ಚಾದರ್ಥೇ । ಅಥವಾ ವೀಪ್ಸಾಲಕ್ಷಣೇ ಯಥಾರ್ಥೇ । ಯೋಗ್ಯತಾ ವೀಪ್ಸಾ ಪದಾರ್ಥಾನತಿವೃತ್ತಿಃ ಸಾದೃಶ್ಯಂ ಚೇತಿ ಚತ್ವಾರೋ ಹಿ ಯಥಾರ್ಥಾ ಗೃಹೀತಾಃ । ಅವ್ಯಯಂ ವಿಭಕ್ತೀತ್ಯಾದಿನಾ । ಪಾ. ೨-೧-೬ । ಅವ್ಯಯೀಭಾವಸಮಾಸಃ । ಅವ್ಯಯೀಭಾವಶ್ಚ । ಪಾ. ೧-೧-೪೧ । ಇತ್ಯವ್ಯಯಸಂಜ್ಞಾಯಾಮವ್ಯಯಾದಾಪ್ಸುಪಃ । ಪಾ. ೨-೪-೮೨ । ಇತಿ ಪ್ರಾಪ್ತಸ್ಯ ಲುಕೋಽಪವಾದೋ ನಾವ್ಯಯೀಭಾವಾದತೋಽಮ್ ತ್ವಪಂಚಮ್ಯಾಃ । ಪಾ. ೨-೪-೮೩ । ಇತಿ ವಿಭಕ್ತೇರಮಾದೇಶಃ । ಸಮಾಸಸ್ಯೇತ್ಯಂತೋದಾತ್ತತ್ವಂ । ತರ್ಪಯೇಥಾಂ । ತೃಪೇರ್ಣ್ಯಂತಾಲ್ಲೋಟೋ ಣಿಚಶ್ಚ । ಪಾ. ೧ ೩-೭೪ । ಇತ್ಯಾತ್ಮನೇಪದಂ । ಮಧ್ಯಮದ್ವಿವಚನಮಾಥಾಂ । ಟೇರೇತ್ವೇ ಆಮೇತಃ । । ಪಾ. ೩-೪-೯೦ । ಇತ್ಯಾಮಾದೇಶಃ । ಶಪಿ ಸತ್ಯತೋ ಯೇಯಃ । ಪಾ. ೭-೨-೮೦ । ಇತ್ಯಾಕಾರಸ್ಯೇಯಾದೇಶಃ । ಅದುಪದೇಶೋ ಯಲೋಪಶ್ಚ । ಇಂದ್ರಾವರುಣಾ । ಸುಪಾಂ ಸುಲುಗಿತಿ ದ್ವಿವಚನಸ್ಯಾಕಾರಃ । ಆಮಂತ್ರಿತಾದ್ಯುದಾತ್ತತ್ವಂ । ಸಂಹಿತಾಯಾಮಾಕಾರಸ್ಯ ಹ್ರಸ್ವತ್ವಂ । ರಾಯಃ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ । ತಾ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ಪದಾತ್ಪರತ್ವಾದ್ಯುವಾಮಿತ್ಯಸ್ಯ ವಾಮಾದೇಶೋಽನುದಾತ್ತಃ । ನೇದಿಷ್ಠಂ । ಅತಿಶಯೇನಾಂತಿಕಂ । ಅತಿಶಾಯನ ಇಷ್ಠನ್ । ಅಂತಿಕಬಾಢಯೋರ್ನೇದಸಾಧೌ । ಪಾ. ೫-೩-೬೩ । ಇತಿ ನೇದಾದೇಶಃ । ಯಸ್ಯೇತಿ ಲೋಪಃ । ಇಷ್ಠನೋ ನಿತ್ತ್ವಾದಾದ್ಯುದಾತ್ತತ್ವಂ । ಈ ಮಹೇ । ಈಙ್ ಗತೌ । ಙಿತ್ತ್ವಾದಾತ್ಮನೇಪದಂ । ಬಹುಲಂ ಛಂದಸೀತಿ ಶ್ಯನೋ ಲುಕ್ । ನಿಘಾತಃ ॥

॥ ಪ್ರತಿಪದಾರ್ಥ ॥

ಇಂದ್ರಾವರುಣಾ—ಎಲೈ ಇಂದ್ರವರುಣರೇ । ಅನುಕಾಮಂ—ನಮ್ಮ ಇಷ್ಟಾರ್ಥಕ್ಕನುಸಾರವಾಗಿ ಅಥವಾ ನಮ್ಮ ಇಷ್ಟಾರ್ಥಗಳನ್ನು ಒಂದೊಂದಾಗಿ । ರಾಯಃ—ಧನಪ್ರದಾನದಿಂದ । ಆ ತರ್ಪಯೇಥಾಂ—(ನಮ್ಮನ್ನು) ತೃಪ್ತಿಪಡಿಸಿ । ತಾ—ಅಂತಹ । ವಾಂ—ನಿಮ್ಮಿಬ್ಬರನ್ನು । ನೇದಿಷ್ಠಂ—ಅತ್ಯಂತ ಸಮೀಪವಾಗಿ (ಕಾಲವಿಳಂಬವಿಲ್ಲದಂತೆ) । ಈಮಹೇ—ಸ್ತುತಿಸುತ್ತೇವೆ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವರುಣರೇ, ನಾವು ನಿಮ್ಮನ್ನು ಐಶ್ವರ್ಯಾದಿಗಳಿಗಾಗಿ ನಮ್ಮ ಸಮೀಪದಲ್ಲಿರುವಂತೆ ಸ್ತೋತ್ರಮಾಡುತ್ತೇವೆ. ನಾವು ಪ್ರಾರ್ಥಿಸಿದಕೂಡಲೇ ನೀವು ನಮಗೆ ಬೇಕಾದ ಧನವನ್ನು ಕೊಡಿ.

## English Translation.

Indra and Varuna, satisfy us with wealth according to our desires. We therefore pray you to be nearest to us.

॥ ವಿಶೇಷವಿಷಯಗಳು ॥

**ಅನುಕಾಮಂ**—ಕಾಮಸ್ಯ ಪಶ್ಚಾದನುಕಾಮಂ । ಅಥವಾ ಕಾಮೇಕಾಮೇಽನುಕಾಮಂ । ಅನು-ರಿಹ ಪಶ್ಚಾದರ್ಥೇ ಅಥವಾ ವೀಪ್ಸಾಲಕ್ಷಣೇ ಯಥಾರ್ಥೇ ॥ ಅಸ್ಮದೀಯಮಭಿಲಾಷಮನು ॥ ನಮ್ಮ ಇಷ್ಟಾನುಸಾರವಾಗಿ ಅಥವಾ ನಾವು ಅಪೇಕ್ಷಿಸುವ ಪ್ರತಿಯೊಂದು ಇಷ್ಟವನ್ನೂ ಎಂದರ್ಥವು.

**ನೇದಿಷ್ಠಂ**—ಅತಿಶಯೇನ ಸಾಮೀಪ್ಯಂ ಯಥಾ ಭವತಿ ತಥಾ । ಅತಿಶಯೇನಾಂತಿಕಂ । ಅತ್ಯಂತ ಸಮೀಪದಲ್ಲಿರುವಂತೆ, ನಮಗೆ ಇಷ್ಟಾರ್ಥಗಳನ್ನು ಕೊಡುವುದಕ್ಕಾಗಿ ನೀವು ನಮಗೆ ಅತ್ಯಂತ ಸಮೀಪದಲ್ಲಿರ ಬೇಕೆಂದರ್ಥವು.

**ಈಮಹೇ**—ಈಮಹೇ, ಯಾಮಿ ಮೊದಲಾದ ಹದಿನೇಳು ಯಾಚ್ಞಾಕರ್ಮವಾಚಕಶಬ್ದಗಳ ಮಧ್ಯದಲ್ಲಿ ಈಮಹೇ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೧೯) ಈಮಹೇ ಎಂದರೆ ಯಾಚಿಸುತ್ತೇನೆ, ಪ್ರಾರ್ಥಿಸುತ್ತೇವೆ ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಅನುಕಾಮಮ್**—ಕಾಮಸ್ಯ ಪಶ್ಚಾತ್-ಅನುಕಾಮಮ್ ಎಂದು ವಿಗ್ರಹ. ಅನು ಎಂಬ ಉಪಸರ್ಗಕ್ಕೆ ಇಲ್ಲಿ ಪಶ್ಚಾತ್ ಎಂದು ಅರ್ಥ. ಅಥವಾ ಕಾಮೇಕಾಮೇ ಅನುಕಾಮಮ್ ಎಂದು ವಿಗ್ರಹ. ಇಲ್ಲಿ ಅನು ಎಂಬುದಕ್ಕೆ ವೀಪ್ಸೆ ಎಂದರ್ಥ. ಈ ವೀಪ್ಸೆಯು ಯಥಾ ಶಬ್ದಾರ್ಥಗಳಲ್ಲಿ ಸೇರಿರುವುದು. ಯೋಗ್ಯತೆ, ವೀಪ್ಸೆ, ಪದಾರ್ಥಾನತಿವೃತ್ತಿ, ಸಾದೃಶ್ಯ ಎಂದು ಯಥಾಶಬ್ದಕ್ಕೆ ನಾಲ್ಕು ಅರ್ಥಗಳಿರುವುವು. ಮೊದಲನೇ ಅರ್ಥದಲ್ಲಿ ಅನು ಎಂಬ ಅವ್ಯಯವು ಪಶ್ಚಾದ್ವಚನವಾಗುವುದು. ಎರಡನೇ ಅರ್ಥದಲ್ಲಿ ಅದು ಯಥಾರ್ಥವಾಚಕವಾಗುವುದು. ಈ ಎರಡು ಪಕ್ಷಗಳಲ್ಲಿಯೂ **ಅವ್ಯಯಂ ವಿಭಕ್ತಿ ಸಮೀಪ, ಸಮೃದ್ಧಿ, ವೃದ್ಧ್ಯರ್ಥಾಭಾವಾ, ಸಂಪ್ರತಿ, ಶಬ್ದ ಪ್ರಾದುರ್ಭಾವ, ಪಶ್ಚಾ, ದ್ಯಥಾ, ನುಪೂರ್ವ್ಯ ಯೌಗಪದ್ಯ, ಸಾದೃಶ್ಯ, ಸಂಪತ್ತಿ, ಸಾಕಲ್ಯಾನ್ತವಚನೇಷು** (ಪಾ. ಸೂ. ೨-೧-೬) ವಿಭಕ್ತಿಶಬ್ದ ಮೊದಲುಗೊಂಡು ಅಂತಶಬ್ದ ಪರ್ಯಂತಕ್ಕೆ ಇರುವ ಹದಿನಾರು ಶಬ್ದಗಳಿಗೂ ದ್ವಂದ್ವ, ಅಂತಾಶ್ಚತೇ ವಚನಾಶ್ಚ ಅನ್ತವಚನಾಃ ತೇಷು ವಿಭಕ್ತೀತ್ಯಾದಿ ಅಂತವಚನೇಷು ಎಂದು ವಿಗ್ರಹ, ವಿಭಕ್ತ್ಯರ್ಥವೇ ಮೊದಲಾದ ಅರ್ಥಪ್ರತಿಪಾದಕವಾದ ಅವ್ಯಯವು ಸಮರ್ಥವಾದ ಸುಬಂತದೊಂದಿಗೆ ಸಮಾಸವನ್ನು ಹೊಂದುವುದು. ಅದು ಅವ್ಯಯೀಭಾವವಾಗುವುದು ಎಂಬುದರಿಂದ, ಅವ್ಯಯೀಭಾವಸಮಾಸಬರುವುದು. **ಅವ್ಯಯೀಭಾವಶ್ಚ** (ಪಾ. ಸೂ. ೧೧-೪೧) ಅವ್ಯಯೀಭಾವಸಮಾಸವೂ ಸಹ ಅವ್ಯಯಸಂಜ್ಞೆಯನ್ನು ಹೊಂದುವುದು ಎಂಬುದರಿಂದ ಅನುಕಾಮ ಎಂಬುದಕ್ಕೆ ಅವ್ಯಯಸಂಜ್ಞೆ ಇರುವುದು. ಆದ್ದರಿಂದ ಅನುಕಾಮ ಎಂಬುದರ ಮುಂದೆ ಸುಪ್ ಪ್ರತ್ಯಯವು ಬಂದರೆ ಅದಕ್ಕೆ **ಅವ್ಯಯಾದಾಪ್‌ಸುಪಃ** (ಪಾ ಸೂ. ೨-೪-೮೨) ಅವ್ಯಯದ ಮುಂದೆ ಇರುವ ಆಪ್‌ಗೂ ಸುಪ್ಪಿಗೂ ಲುಕ್ ಬರುವುದು ಎಂಬುದರಿಂದ ಲುಕ್ ಪ್ರಾಪ್ತವಾದರೆ **ನಾವ್ಯಯೀಭಾವಾದತೋಽಮ್ತ್ವಪಂಚಮ್ಯಾಃ** (ಪಾ.ಸೂ. ೨-೪-೮೩) ಎಂಬುದರಿಂದ ನಿಷೇಧವೂ, ಅಮಾದೇಶವೂ ಬರುವುದು. ಈ ಸೂತ್ರದಲ್ಲಿ ನಾವ್ಯಯೀಭಾವಾದತಃ ಎಂದು ಒಂದು ವಾಕ್ಯ. ಅಕಾರಾಂತವಾದ ಅವ್ಯಯೀಭಾವದ ಮುಂದೆ ಇರುವ ಸುಪ್ಪಿಗೆ ಲುಕ್ ಬರುವುದಿಲ್ಲ ಎಂದು ಇದರ ಅರ್ಥ. ಅನುಕಾಮ ಎಂಬುದು ಅಕಾರಾಂತ

ವಾದ ಅವ್ಯಯೀಭಾವ. ಆದ್ದರಿಂದ ಇದರ ಮುಂದೆ ಬರುವ ಸುಬ್ವಿಭಕ್ತಿಗೆ ಈ ವಾಕ್ಯದಿಂದ ಲುಕ್ ಬರುವುದಿಲ್ಲ. ಅಮ್ತ್ವಪಂಚಮ್ಯಾಃ ಎಂಬುದು ಎರಡನೇ ವಾಕ್ಯ. ಅಕಾರಾಂತವಾದ ಅವ್ಯಯೀಭಾವದ ಮುಂದೆ ಇರುವ ಪಂಚಮೀ ಭಿನ್ನವಾದ ಸುಪ್‌ಗೆ ಅಮ್ ಬರುವುದು ಎಂದು ಇದರ ಅರ್ಥ. ಇದರಿಂದ ಅನುಕಾಮ ಎಂಬುದರ ಮುಂದೆ ಪಂಚಮೀಭಿನ್ನವಾದ ದ್ವಿತೀಯಾ, ಸಪ್ತಮೀ ವಿಭಕ್ತಿಗಳನ್ನಿಟ್ಟಾಗ ಅವಕ್ಕೆ ಪೂರ್ವವಾಕ್ಯದಿಂದ ಲುಕ್ ಬರುವುದಿಲ್ಲ. ಈ ವಾಕ್ಯದಿಂದ ಅಮ್ ಆದೇಶ ಬರುವುದು. ಅನುಕಾಮ+ಅಮ್ **ಅಮಿಪೂರ್ವಃ** (ಪಾ. ಸೂ. ೬-೧-೧೦೭) ಎಂಬುದರಿಂದ ಪೂರ್ವರೂಪ ಅನುಕಾಮಮ್ ಎಂದಾಗುವುದು. **ಸಮಾಸಸ್ಯ** (ಪಾ. ಸೂ. ೬-೧-೨೨೩) ಸಮಾಸದ ಕೊನೆಯ ವರ್ಣವು ಉದಾತ್ತವಾಗುವುದು ಎಂಬುದರಿಂದ ಅನುಕಾಮ ಎಂಬುದು ಅಂತೋದಾತ್ತ. **ಅನುದಾತ್ತೌ ಸುಪ್ಪಿತೌ** ಎಂಬುದರಿಂದ ಅಮ್ ಅನುದಾತ್ತ. ಏಕಾದೇಶವು **ಏಕಾದೇಶಉದಾತ್ತೇನೋದಾತ್ತಃ** ಎಂಬುದರಿಂದ ಉದಾತ್ತ. ಏವಂಚ ಅನುಕಾಮಂ ಎಂಬುದು ಅಂತೋದಾತ್ತ.

**ತರ್ಪಯೇಥಾಮ್**—ತೃಪ ಪ್ರೀಣನೇ ಧಾತು. **ತತ್ಪ್ರಯೋಜಕೋಹೇತುಶ್ಚ** (ಪಾ. ಸೂ. ೧-೪-೫೫) ಎಂಬುದರಿಂದ ಹೇತುಸಂಜ್ಞೆ. **ಹೇತುಮತಿಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್, **ಣಿಚಶ್ಚ** (ಪಾ. ಸೂ. ೧-೩-೭೪) ಕ್ರಿಯಾಫಲವು ಕರ್ತೃವಿಗೆ ಸೇರುವಾಗ ಣಿಚ್ ಪ್ರತ್ಯಯಾಂತವಾದ ಧಾತುವಿನ ಮುಂದೆ ಆತ್ಮನೇಪದ ಬರುವುದು ಎಂಬುದರಿಂದ, ತೃಪ್+ಇ ಎಂಬ ಣಿಜನ್ತ ಧಾತುವಿನ ಮುಂದೆ ಬರುವ ಲೋಟ್ ಲಕಾರಸ್ಥಾನದಲ್ಲಿ ಆತ್ಮನೇಪದ ಪ್ರತ್ಯಯ ಬರುವುದು. ಪ್ರಥಮಪುರುಷದ್ವಿವಚನವನ್ನು ವಿವಕ್ಷಿಸಿದಾಗ ಆಥಾಮ್ ಎಂಬುದು ಬರುವುದು. ತೃಪ್+ಇ+ಆಥಾಮ್. **ಟಿತಆತ್ಮನೇಪದಾನಾಂಟೇರೇ** (ಪಾ. ಸೂ. ೩-೪-೭೯) ಎಂಬುದರಿಂದ ಆಮ್ ಎಂಬ ಟಿಗೆ ಏತ್ವ. **ಆಮೇತಃ** (ಪಾ. ಸೂ. ೩-೪-೯೦) ಲೋಟ್ ಸಂಬಂಧಿಯಾದ ಏಕಾರಕ್ಕೆ ಆಮ್ ಬರುವುದು ಎಂಬುದರಿಂದ ಆಮ್, ತೃಪ್+ಇ+ಆಥಾಮ್, ಣಿಚ್ಚನ್ನು ನಿಮಿತ್ತ ಮಾಡಿಕೊಂಡು **ಪುಗಂತಲಘೂಪಧಸ್ಯಚ** ಎಂಬುದರಿಂದ ತೃಪ್‌ಗೆ ಲಘೂಪಧಗುಣ, ಉರಣ್ರಪರಃ ಎಂಬುದರಿಂದ ರ ಪರವಾಗಿ ಬರುವುದು. ತರ್ಪಿ+ಆಥಾಮ್ **ಕರ್ತರಿಶಪ್** ಎಂಬುದರಿಂದ ಶಪ್, ತರ್ಪಿ+ಅ+ಆಥಾಮ್, ಶಪ್ಪನ್ನು ನಿಮಿತ್ತಮಾಡಿಕೊಂಡು ಸಾರ್ವಧಾತುಕಾರ್ಧಧಾತುಕಯೋಃ (ಪಾ. ಸೂ. ೭-೩-೮೪) ಎಂಬುದರಿಂದ ಗುಣ. **ಏಚೋಽಯವಾಯಾವಃ** (ಪಾ. ಸೂ ೬-೧-೭೮) ಅಯಾದೇಶ, ತರ್ಪಯ+ಆಥಾಮ್. ಆಥಾಮ್ ಎಂಬುದು ಪಿತ್ತಲ್ಲದ ಸಾರ್ವಧಾತುಕ. ಆದ್ದರಿಂದ **ಸಾರ್ವಧಾತುಕಮಪಿತ್** (ಪಾ. ಸೂ. ೧-೨-೪) ಎಂಬುದರಿಂದ ಙಿತ್ತಾಗುವುದು. ಏವಂಚ ಆತೋಙಿತಃ (ಪಾ. ಸೂ. ೭-೨-೮೧) ಹ್ರಸ್ವಾಕಾರದ ಮುಂದೆ ಇರುವ ಙಕಾರೇತ್ಸಂಜ್ಞಕವಾದ ಪ್ರತ್ಯಯ ಸಂಬಂಧಿಯಾದ ಆಕಾರಕ್ಕೆ ಇಯ್ ಬರುವುದು ಎಂಬುದರಿಂದ ಆಕಾರಕ್ಕೆ ಇಯ್ ಆದೇಶ ತರ್ಪಯ+ಇಯ್+ಥಾಮ್. **ಆದ್ಗುಣಃ** (ಪಾ. ಸೂ. ೬-೧-೮೭ ) ಎಂಬುದರಿಂದ ಅಕಾರ ಇಕಾರಗಳಿಗೆ ಏಕಾರ ತರ್ಪಯೇಯ್+ಥಾಮ್. ವಕಾರ ವಲ್, ಅದು ಪರದಲ್ಲಿರುವುದರಿಂದ **ಲೋಪೋವ್ಯೋರ್ವಲಿ** (ಪಾ. ಸೂ. ೬-೧-೬೬) ಎಂಬುದರಿಂದ ಯಕಾರಕ್ಕೆ ಲೋಪ. ತರ್ಪಯೇಥಾಮ್ ಎಂದಾಗುವುದು. **ಅತೋಯೇಯಃ** ( ಪಾ. ಸೂ. ೭-೨-೮೦) ಇಲ್ಲಿ ಯಾ, ಇಯಃ, ಅಥವಾ ಯಾಸ್ ಇಯಃ ಎಂದು ಎರಡುವಿಧವಾಗಿ ಪದವಿಭಾಗ ಮಾಡುವರು. ಎರಡನೇ ಪಕ್ಷದಲ್ಲಿ ಯಾಸ್+ಇಯ ಎಂದಿರುವಾಗ ಸಕಾರಕ್ಕೆ **ಸಸಜುಷೋರುಃ**, ಎಂಬುದರಿಂದ ರುತ್ವ, **ಭೋಭಗೋ** ಎಂಬುದರಿಂದ ಅದಕ್ಕೆ ಯತ್ವ, **ಲೋಪಶ್ಶಾಕಲ್ಯಸ್ಯ** ಎಂಬುದರಿಂದ ಯ ಲೋಪ ಬಂದ ಮೇಲೆ ಯಾ+ಇಯ ಎಂದಿರುವಾಗ **ಪೂರ್ವತ್ರಾಸಿದ್ಧಮ್**, ಎಂಬುದರಿಂದ ಗುಣವನ್ನು ಮಾಡುವಾಗ ಯ ಲೋಪವು ಅಸಿದ್ಧವಾಗುವುದು. ಆದ್ದರಿಂದ ಯದ್ಯಪಿ ಗುಣಸಂಧಿ ಬರುವುದಿಲ್ಲ. ಆದರೂ ಇದು ಋಷಿ

ಪ್ರಯೋಗವಾದ್ದರಿಂದ ಆರ್ಷವಾಗಿ ಸಂಧಿ ಬಂದಿರುವುದು ಎಂದು ಹೇಳಬಹುದು. ಅಂತು ಈ ಎರಡು ಪ್ರಕಾರ ಗಳಲ್ಲಿ ಯಾವುದಾದರೂ ಇರಲಿ, ಹ್ರಸ್ವ ಅಕಾರದ ಮುಂದೆ ಇರುವ ಸಾರ್ವಧಾತುಕಪ್ರತ್ಯಯಾವಯವವಾದ ಯಾ ಅಥವಾ ಯಾಸ್ ಗೆ ಇಯ ಆದೇಶ ಬರುವುದು ಎಂದು ಅತೋಯೇಯಃ ಎಂಬ ಸೂತ್ರಕ್ಕೆ ಅರ್ಥವು, ತರ್ಪ+ಯ+ಅಥಾಮ್ ಎಂಬಲ್ಲಿ ಯಾ, ಅಥವಾ ಯಾಸ್, ಎಂಬುದು ಇಲ್ಲದೇ ಇರುವುದರಿಂದ ಈ ಸೂತ್ರದಿಂದ ಇಲ್ಲಿ ಇಯಾದೇಶ ಬರುವುದಿಲ್ಲ. ಆದ್ದರಿಂದ ಈ ಸೂತ್ರದಿಂದ ಇಯಾದೇಶೋಪವರ್ಣನೆಯು ಪ್ರಾಮಾದಿಕ ವೆಂದು ಹೇಳಬಹುದು.

**ಇನ್ದ್ರಾವರುಣಾ**—ಇಂದ್ರಶ್ಚ ವರುಣಶ್ಚ ಇಂದ್ರಾವರುಣಾ, ಎಂದು ದ್ವಂದ್ವಸಮಾಸ. ಇದರ ವಿವರಣೆಯು **ಇಂದ್ರಾವರುಣಯೋರಹಮ್** (ಋ. ಸಂ. ೧-೧೭-೧) ರಲ್ಲಿ ಇರುವುದು, ಇಲ್ಲಿ ಇಂದ್ರ ವರುಣ ಎಂಬುದರ ಮುಂದೆ ಸಂಬೋಧನಪ್ರಥಮಾ ದ್ವಿವಚನ ಔ ಪ್ರತ್ಯಯ. ಅದಕ್ಕೆ **ಸುಪಾಂಸುಲುಕ್**-. (ಪಾ. ಸೂ. ೭-೧-೩೯) ಎಂಬುದರಿಂದ ಆಕಾರ, ಸವರ್ಣದೀರ್ಘ. ಇಂದ್ರಾವರುಣಾ, ಇದು ಪಾದಾದಿಯಲ್ಲಿರುವುದರಿಂದ ಅಷ್ಟಮಿಕಾನುದಾತ್ತ ಬರುವುದಿಲ್ಲ. ಷಾಷ್ಠಸೂತ್ರವಾದ ಆಮನ್ತ್ರಿತಸ್ಯಚ, ಎಂಬುದರಿಂದ ಆದ್ಯುದಾತ್ತ ಬರುವು ದು, ಸಂಹಿತಾಕಾಲದಲ್ಲಿ ಆಕಾರಕ್ಕೆ ಹ್ರಸ್ವಬರುವುದು.

**ರಾಯಃ**—ರೈ ಶಬ್ದವು ಧನವಾಚಕ, ಇದರ ಮುಂದೆ ಷಷ್ಠೀವಿಭಕ್ತ್ಯೇಕವಚನ ಙಸ್, ರೈ+ಅಸ್ ಆಯಾದೇಶ, ರುತ್ವ, ವಿಸರ್ಗ. **ಊಡಿದಮ್‌ಪದಾದ್ಯಪ್ಪುಮ್‌ರೈದ್ಯುಭ್ಯಃ** (ಪಾ. ಸೂ. ೬-೧-೧೭೧) ಎಂಬು ದರಿಂದ ವಿಭಕ್ತಿಯು ಉದಾತ್ತವಾಗುವುದು.

**ತಾ**-ತದ್-ಶಬ್ದದ ಮುಂದೆ ದ್ವಿತೀಯಾದ್ವಿವಚನ ಔಟ್, ಅದಕ್ಕೆ ಸುಪಾಂಸುಲುಕ್ ಎಂಬುದರಿಂದ ಆಕಾರಾದೇಶ. **ತ್ಯದಾದೀನಾಮಃ** (ಪಾ. ಸೂ. ೭-೨-೧೦೨) ಎಂಬುದರಿಂದ ದಕಾರಕ್ಕೆ ಅಕಾರ, ಅತೋಗುಣೇ, ಎಂಬುದರಿಂದ ಪರರೂಪ, ಸವರ್ಣದೀರ್ಘ, ತಾ, ಎಂದಾಗುವುದು.

**ವಾಂ**—ಇದು ಪದದ ಮುಂದೆ ಇರುವುದು. ಆದ್ದರಿಂದ ಯುವಾಮ್, ದ್ವಿತೀಯಾ ದ್ವಿವಚನಾಂತಕ್ಕೆ **ಯುಷ್ಮದಸ್ಮದೋಃ ಷಷ್ಠೀಚತುರ್ಥೀದ್ವಿತೀಯಾಸ್ಥಯೋರ್ವಾಂನಾವೌ** (ಪಾ. ಸೂ. ೮-೧-೨೦) ಎಂಬು ದರಿಂದ ಅನುದಾತ್ತವಾದ ವಾಮ್ ಆದೇಶ.

**ನೇದಿಷ್ಠಮ್**— ಅತಿಶಯೇನ ಅಂತಿಕಮ್, ಎಂದು ವಿಗ್ರಹ. **ಅತಿಶಾಯನೇತಮಬಿಷ್ಠನೌ** (ಪಾ. ಸೂ. ೫-೩-೫೫) ಎಂಬುದರಿಂದ ಇಷ್ಠನ್ ಪ್ರತ್ಯಯ ಬರುವುದು, ಅನ್ತಿಕ+ಇಷ್ಠ, **ಅನ್ತಿಕ ಬಾಢಯೋರ್ನೇ- ದ ಸಾದೌ** (ಪಾ. ಸೂ. ೫-೩-೬೩) ಇಷ್ಠನ್, ಈಯಸುನ್ ಪ್ರತ್ಯಯಗಳು ಪರದಲ್ಲಿರುವಾಗ ಅನ್ತಿಕ ಶಬ್ದಕ್ಕೆ ನೇದ ಆದೇಶವೂ, ಬಾಢ ಶಬ್ದಕ್ಕೆ ಸಾಧ ಆದೇಶವೂ ಸಹ ಬರುವುದು ಎಂಬುದರಿಂದ ನೇದಾದೇಶ ಬಂದರೆ ನೇದ+ಇಷ್ಠ **ಯಸ್ಯೇತಿಚ** (ಪಾ. ಸೂ. ೬-೪-೧೪೮) ಎಂಬುದರಿಂದ ಅಕಾರಕ್ಕೆ ಲೋಪ, ನೇದಿಷ್ಠ ಎಂದಾಗು ವುದು. ಇಷ್ಠನ್ ಪ್ರತ್ಯಯವು ನಿತ್ತು, ಆದ್ದರಿಂದ ಞ್ನಿತ್ಯಾದಿರ್ನಿತ್ಯಮ್ ಎಂಬುದರಿಂದ ನೇದಿಷ್ಠ ಎಂಬುದು ಆದ್ಯುದಾತ್ತ.

**ಈಮಹೇ**—ಈಜ್ ಗತೌ, ಧಾತು, ಙಿತ್, ಆದ್ದರಿಂದ **ಅನುದಾತ್ತಙಿತ ಆತ್ಮನೇಪದಮ್** (ಪಾ ಸೂ. ೧-೩-೧೨ ) ಎಂಬುದರಿಂದ ಆತ್ಮನೇಪದ ಬರುವುದು. **ಲಟ್ ಉತ್ತಮಪುರುಷಬಹುವಚನ ಮಹಿಙ್**

ಈ+ಮಹಿ, ಟಿತಆತ್ಮನೇಪದಾನಾಮ್, ಎಂಬುದರಿಂದ ಟಿಗೆ ಏಕಾರ, ದಿವಾದಿಭ್ಯಃಶ್ಯನ್ (ಪಾ. ಸೂ. ೩-೧.೬೯) ಎಂಬುದರಿಂದ ಶ್ಯನ್, ಬಹುಲಂಛಂದಸಿ (ಪಾ. ಸೂ. ೨-೪-೭೩) ಎಂಬುದರಿಂದ ಲುಕ್. ಈಮಹೇ ಎಂದಾಗುವುದು, ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತ ಬರುವುದು ॥ ೩ ॥

। ಸಂಹಿತಾಪಾಠಃ ।

ಯು॒ವಾಕು॑ ಹಿ ಶಚೀ॑ನಾಂ ಯು॒ವಾಕು॑ ಸುಮ॒ತೀ॒ನಾಂ ।
ಭೂ॒ಯಾಮ॑ ವಾ॒ಜ॒ದಾವ್ನಾ॑ಂ ॥ ೪ ॥

ಯು॒ವಾಕು॑ । ಹಿ । ಶಚೀ॑ನಾಂ । ಯು॒ವಾಕು॑ । ಸು॒ಽಮ॒ತೀ॒ನಾಂ ।
ಭೂ॒ಯಾಮ॑ । ವಾ॒ಜ॒ಽದಾವ್ನಾ॑ಂ ॥ ೪ ॥

॥ ಸಾಯಣಭಾಷ್ಯಂ ॥

ಹಿ ಯಸ್ಮಾತ್ಕಾರಣಾಚ್ಛಚೀನಾಮಸ್ಮದೀಯಕರ್ಮಣಾಂ ಸಂಬಂಧಿ ಸೋಮರೂಪಂ ಹವಿರ್ಯುವಾಕು ವಸತೀವರ್ಯೇಕಧನಾತ್ಮಕೈರುದಕೈಃ ಪಯಃಸಕ್ತ್ವಾದಿದ್ರವ್ಯಾಂತರೈಶ್ಚ ಮಿಶ್ರಿತಂ । ತಥಾ ಸುಮತೀನಾಂ ಶೋಭನಬುದ್ಧಿಯುಕ್ತಾನಾಮೃತ್ವಿಜಾಂ ಸ್ತೋತ್ರರೂಪಂ ವಚನಮಪಿ ಯುವಾಕು ನಾನಾವಿಧೈಃ ಸ್ತುತ್ಯಗುಣೈರ್ಮಿಶ್ರಿತಂ । ತಸ್ಮಾತ್ಕಾರಣಾತ್ ಹೇ ಇಂದ್ರಾವರುಣೌ ತಥಾವಿಧಂ ಹವಿಃ ಸ್ವೀಕುರ್ವತೋರ್ಯುವಯೋಃ ಪ್ರಸಾದಾದ್ವಯಂ ವಾಜದಾವ್ನಾಮನ್ನಪ್ರದಾನಾಂ ಪುರುಷಾಣಾಂ ಮಧ್ಯೇ ಮುಖ್ಯಾ ಭೂಯಾಮ । ಭವೇಮ । ಅಪೋಽಪ್ನ ಇತ್ಯಾದಿಷು ಷಡ್ವಿಂಶತಿಸಂಖ್ಯಾಕೇಷು ಕರ್ಮನಾಮಸು ಶಚೀ ಶಮೀತಿ ಪಠಿತಂ ॥ ಯುವಾಕು । ಯು ಮಿಶ್ರಣೇ । ಕಟಿಕುಷಿಭ್ಯಾಂ ಕಾಕುಃ । ಉ.೩-೭೭ । ಇತ್ಯತ್ರ ಬಾಹುಲಕಾದ್ಯೌತೇರಪಿ ಕಾಕುಃ ಪ್ರತ್ಯಯಃ । ಕಿತ್ತ್ವೇನ ಗುಣಾಭಾವಾದುಕಾರಸ್ಯೋವಙಾದೇಶಃ । ಪ್ರತ್ಯಯಸ್ವರೇಣ ಮಧ್ಯೋದಾತ್ತತ್ವಂ । ಶಚೀಶಬ್ದಃ ಕೇಷಾಂಚಿನ್ಮತೇ ಶಾರ್ಙ್ಗರವಾದಿಃ । ಙೀನಂತೋ ನಿತ್ತ್ವಾದಾದ್ಯುದಾತ್ತಃ । ಪಾ. ೪-೧-೭೩ । ಇತ್ಯುಭೇ ವನಸ್ಪತ್ಯಾದಿಷು ಯುಗಪದಿತ್ಯತ್ರ । ಕಾ. ೬-೨-೧೪೦ । ವೃತ್ತಿಕೃತೋಕ್ತಂ । ಸುಮತೀನಾಂ । ವಿದ್ಯಾಮ ಸುಮತೀನಾಂ । ಋಗ್ವೇ ೧-೪-೩ । ಇತ್ಯತ್ರೋಕ್ತಂ । ಭೂಯಾಮ । ಪ್ರಾರ್ಥನಾಯಾಂ ಲಿಙ್ । ಉತ್ತಮಬಹುವಚನೇ ನಿತ್ಯಂ ಙಿತ ಇತಿ ಸಕಾರಲೋಪಃ । ಯಾಸುಟ್ ಪರಸ್ಮೈಪದೇಷೂದಾತ್ತೋ ಙಿಚ್ಚ । ಪಾ. ೩-೪-೧೦೩ । ಇತ್ಯುದಾತ್ತೋ ಯಾಸುಡಾಗಮಃ । ಲಿಙಃ ಸಲೋಪೋಽನಂತ್ಯಸ್ಯ । ಪಾ. ೭-೨-೭೯ । ಇತಿ ಸಕಾರಲೋಪಃ । ಬಹುಲಂ ಛಂದಸೀತಿ ಶಪೋ ಲುಕ್ । ಸತಿ ಶಿಷ್ಟತ್ವಾದ್ಯಾಸುಡುದಾತ್ತ ಏವ ಶಿಷ್ಯತೇ । ವಾಜದಾವ್ನಾಂ । ವಾಜಂ ದದಾತೀತಿ ವಾಜದಾವಾನಃ । ಆತೋ ಮನಿ-

ನ್ನಿತ್ಯಾದಿನಾ ವನಿಪ್ । ತಸ್ಯ ಪಿತ್ತ್ವಾದ್ಧಾತುಸ್ವರ ಏವ ಶಿಷ್ಯತೇ । ಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವೇನ ಸ ಏವ ಶಿಷ್ಯತೇ । ಆಮ್ಯಲ್ಲೋಽಪೋಽನಃ । ಪಾ. ೬-೪-೧೩೪ । ಇತ್ಯಕಾರಲೋಪಃ । ತಸ್ಯಾಚಃ ಪರಸ್ಮಿನ್ನಿತಿ ಸ್ಥಾನಿವದ್ಭಾವಾಲ್ಲೋಪೋ ವ್ಯೋರ್ವಲೀತಿ ವಕಾರಲೋಪೋ ನ ಭವತಿ ॥

॥ ಪ್ರತಿಪದಾರ್ಥ ॥

ಹಿ—ಯಾವ ಕಾರಣದಿಂದ । ಶಚೀನಾಂ—(ನಾವು ಮಾಡುವ) ಕರ್ಮಗಳ (ಸಂಬಂಧಿಯಾದ ಸೋಮ ರೂಪವಾದ ಹವಿಸ್ಸು) । ಯೊವಾಕು--ಪಯಃ ಸಕ್ತ್ವಾದಿ ಪದಾರ್ಥಗಳಿಂದ ಯುಕ್ತವಾದದ್ದೋ । ಸುಮತೀನಾಂ-ಶುದ್ಧವಾದ ಬುದ್ಧಿಯುಳ್ಳವರ (ಋತ್ವಿಜರ ಸ್ತುತಿಯು) । ಯೊವಾಕು--(ಸೋತ್ರಗಳಲ್ಲಿರಬೇಕಾದ) ನಾನಾ ಗುಣಗಳಿಂದ ಯುಕ್ತವಾದದ್ದೋ (ಅದ್ದರಿಂದ ನಾವು) । ವಾಜದಾವ್ನಾಂ--ಅನ್ನವನ್ನು (ಹವಿಸ್ಸನ್ನು) ಕೊಡುವವರಲ್ಲಿ (ಅಗ್ರಗಣ್ಯರಾಗಿ) । ಭವೇಮ—(ನಾವು ಕೊಟ್ಟ ಹವಿಸ್ಸನ್ನು ಸ್ವೀಕರಿಸಿದ ನಿಮ್ಮ ಪ್ರಸಾದದಿಂದ) ಆಗೋಣ.

॥ ಭಾವಾರ್ಥ ॥

ನಾವು ನಿಮಗೆ ಹವಿಸ್ಸಾಗಿ ಅರ್ಪಿಸುವುದು ಪಯಃಸಕ್ತುವೇ ಮೊದಲಾದ ಪದಾರ್ಥಗಳಿಂದ ಯುಕ್ತವಾದದ್ದು. ಮತ್ತು ಋತ್ವಿಜರು ನಿಮ್ಮನ್ನು ನಾನಾ ವಿಧವಾದ ಉತ್ತಮಗುಣಯುಕ್ತರನ್ನಾಗಿ ಸ್ತುತಿಸುತ್ತಾರೆ. ಇವೆರಡರಿಂದ ತೃಪ್ತರಾಗಿ ನೀವು ನಮ್ಮನ್ನು ಅನ್ನದಾತೃಗಳಲ್ಲಿ ಮುಖ್ಯರಾಗಿ ಅಥವಾ ಉತ್ತಮರನ್ನಾಗಿ ಮಾಡಬೇಕು.

## English Translation

The mingled libations of our pious rites, the different praises of our right-minded priests are prepared; may we be included among the givers of food.

॥ ವಿಶೇಷವಿಷಯಗಳು ॥

ಯೊವಾಕು--ಪಸತೀವರ್ಯೋಽಕಥಾನಾತ್ಮಕ್ಯೈರುದಕ್ಯೈಃ ಪಯಃಸಕ್ತ್ವಾದಿದ್ರವ್ಯಾಂತರೈಶ್ಚ ಮಿಶ್ರಿತಂ। ನೀರು, ಹಾಲು, ಸಕ್ತು (ಹಿಟ್ಟು) ಇವುಗಳನ್ನು ಮಿಶ್ರಮಾಡಿ ಹೋಮಾರ್ಥವಾಗಿ ಸಿದ್ಧಪಡಿಸಿರುವ ಹವಿಸ್ಸೆಂದು ಭಾಷ್ಯಕಾರರು ಈ ಶಬ್ದಕ್ಕೆ ಇಲ್ಲಿ ಅರ್ಥವಿವರಣೆ ಮಾಡಿರುವರು. ಎರಡನೆಯ ಆವರ್ತಿ ಬರುವ ಈ ಯುವಾಕು ಶಬ್ದಕ್ಕೆ ಸೋತ್ರಗಳ ಮಿಶ್ರಣ. ಅಥವಾ ನಾನಾ ವಿಧವಾದ ಸ್ತೋತ್ರಗಳ ಸಮೂಹವೆಂದು ವಿವರಣೆ ಮಾಡಿರುವರು. ಮತ್ತು—

ಅಶ್ವಿನಾ ಮಧುಷುತ್ತಮೋ ಯುವಾಕುಃ ಸೋಮಸ್ತಂ ಪಾತಮಾ ಗತಂ ದುರೋಣೇ ।

(ಋ. ಸಂ. ೩-೫೮-೯)

ಎಂಬ ಋಕ್ಕಿನಲ್ಲಿರುವ ಯುವಾಕುಃ ಎಂಬ ಶಬ್ದಕ್ಕೆ ಯುವಾಂ ಕಾಮಯಮಾನೋ ವರ್ತತೇ । ಯದ್ವಾ । ಯುವಾಕುರ್ವಸತೀವರೀಪ್ರಭೃತಿಭಿರ್ಮಿಶ್ರಿತ ಇತ್ಯರ್ಥಃ ॥ ಎಂದರೆ ನಿಮ್ಮನ್ನು ಅಪೇಕ್ಷಿಸುವ ಅಥವಾ ನಿಮಗೆ ಬೇಕಾದ ಎಂದು ಅರ್ಥವನ್ನೂ ಮೇಲೆ ಹೇಳಿದ ಮಿಶ್ರಣವೆಂಬ ಅರ್ಥವನ್ನೂ ಹೇಳಿರುವರು. ಮತ್ತು—

ತಾ ವಿದ್ವಾಂಸಾ ಹವಾಮಹೇ ವಾಂ ತಾ ನೋ ವಿದ್ವಾಂಸಾ ಮನ್ಮ ವೋಚೇತಮದ್ಯ ।
ಪ್ರಾರ್ಚದ್ದಯಮಾನೋ ಯುವಾಕುಃ ॥

(ಋ. ಸಂ. ೧-೧೨೦-೩)

ದುಹೀಯನ್ಮಿತ್ರಧಿತಯೇ ಯುವಾಕು ರಾಯೇ ಚ ನೋ ಮಿಮೀತಂ ವಾಜವತ್ಯೈ ।

(ಋ. ಸಂ.೧-೧೨೦-೯)

ಧಾಮಾನಿ ಮಿತ್ರಾವರುಣಾ ಯುವಾಕುಃ ಸಂ ಯೋ ಯೂಥೇವ ಜನಿಮಾನಿ ಚಷ್ಟೇ ।

(ಋ. ಸಂ. ೭-೬೦-೩)

ಅವೋರ್ವಾಂ ನೂನಮಶ್ವಿನಾ ಯುವಾಕುರ್ಹುವೇ ಯದ್ವಾಂ ಸುತೇ ಮಾಧ್ವೀ ವಸೂಯುಃ ।

(ಋ. ಸಂ. ೭-೬೭-೪)

ಉತ ತ್ಯಂ ಭುಜ್ಯುಮಶ್ವಿನಾ ಸಖಾಯೋ ಮಧ್ಯೇ ಜಹುರ್ದುರೇವಾಸಃ ಸಮುದ್ರೇ ।
ನಿರೀಂ ಪರ್ಷದರಾವಾ ಯೋ ಯುವಾಕುಃ ॥

(ಋ. ಸಂ. ೭-೬೮-೭)

ಈ ಋಕ್ಕುಗಳಲ್ಲಿರುವ ಯುವಾಕುಃ ಎಂಬ ಶಬ್ದಕ್ಕೆ ಭಾಷ್ಯಕಾರರು ಯುವಾಂ ಕಾಮಯಮಾನಃ. ನಿಮ್ಮನ್ನು ಅಪೇಕ್ಷಿಸುವ ಅಥವಾ ನಿಮಗೆ ಇಷ್ಟವಾದ ಎಂಬ ಅರ್ಥವನ್ನೇ ಹೇಳಿರುವರು. ಆದರೂ ಈ ಶಬ್ದಕ್ಕೆ ಯಾವುದೋ ಒಂದು ನಿರ್ದಿಷ್ಟವಾದ ಅರ್ಥವಿರಬೇಕೆಂದು ತೋರುತ್ತದೆ.

ಶಚೀನಾಂ—ಶ್ಲೋಕಃ ಧರಾ ಮೊದಲಾದ ಐವತ್ತೇಳು ವಾಙ್ನಾಮಗಳ ಮಧ್ಯದಲ್ಲಿ ಶಚೀಶಬ್ದವು ಪಠಿತ ವಾಗಿರುವುದರಿಂದ (ನಿ. ೨-೨೩) ಶಚೀಶಬ್ದಕ್ಕೆ ವಾಕ್ಯವು ಎಂದರ್ಥವು. ಮತ್ತು ಅಪಃ ಅಪ್ನಃ ಮೊದಲಾದ ಇಪ್ಪತ್ತಾರು ಕರ್ಮನಾಮಗಳಲ್ಲಿ ಶಚೀಶಬ್ದವು ಪಠಿತವಾಗಿರುವುದರಿಂದ (ನಿ. ೩-೨) ಶಚೀಶಬ್ದಕ್ಕೆ ಕರ್ಮವೆಂದೂ ಅರ್ಥವು. ಕೇತಃ ಕೇತು ಮೊದಲಾದ ಹನ್ನೊಂದು ಪ್ರಜ್ಞಾನಾಮಗಳ ಮಧ್ಯದಲ್ಲಿ ಶಚೀಶಬ್ದವು ಪಠಿತವಾಗಿರು ವುದರಿಂದ (ನಿ. ೩-೧೩) ಶಚೀ ಶಬ್ದಕ್ಕೆ ಪ್ರಜ್ಞೆಯೆಂದೂ ಅರ್ಥವು. ಅದುದರಿಂದ ಶಚೀಶಬ್ದಕ್ಕೆ, ವಾಕ್ಯ, ಕರ್ಮ ಪ್ರಜ್ಞೆ ಎಂಬ ಮೂರು ವಿಧವಾದ ಅರ್ಥಗಳಿದ್ದರೂ ಇಲ್ಲಿ ಭಾಷ್ಯಕಾರರು ಕರ್ಮವೆಂಬ ಅರ್ಥಕ್ಕೇ ಪ್ರಾಧಾನ್ಯವನ್ನು ಕೊಟ್ಟಿರುವರು. ಯಾಸ್ಕರು ಸಹ—

ತ್ರಯಃ ಕೇಶಿನ ಋತುಥಾ ವಿಚಕ್ಷತೇ ಸಂವತ್ಸರೇ ವಪತ ಏಕ ಏಷಾಂ ।
ವಿಶ್ವಮೇಕೋ ಅಭಿ ಚಷ್ಟೇ ಶಚೀಭಿರ್ಧ್ರಾಜಿರೇಕಸ್ಯ ದದೃಶೇ ನ ರೂಪಂ ॥

(ಋ. ಸಂ. ೧-೧೬೪-೪೪)

ಎಂಬ ಋಕ್ಕಿಗೆ ವ್ಯಾಖ್ಯಾನಮಾಡುವಾಗ **ವಿಶ್ವಮೇಕೋ ಅಭಿ ಚಷ್ಟೇ ಶಚೀಭಿಃ** ಎಂದರೆ **ಸರ್ವಮೇಕೋಽಭಿ-ವಿಪಶ್ಯತಿ ಕರ್ಮಭಿರಾದಿತ್ಯಃ** ಎಂದು ಶಚೀ ಶಬ್ದಕ್ಕೆ ಕರ್ಮವೆಂಬ ಅರ್ಥವನ್ನೇ ಹೇಳಿರುವರು (ನಿ ೧೨-೨೭) ಪ್ರಸಕ್ತವಾದ ಋಕ್ಕಿಗೆ ಅರ್ಥಮಾಡುವಾಗ ಶಚೀಶಬ್ದದ ಮೂರು ಅರ್ಥಗಳಲ್ಲಿ ಯಾವುದನ್ನು ಬೇಕಾದರೂ ಹೇಳ ಬಹುದು.

**ಸುಮತೀನಾಂ—ಶೋಭನಬುದ್ಧಿಯುಕ್ತಾನಾಮೃತ್ವಿಜಾಂ** | ಒಳ್ಳೆಯ ಬುದ್ಧಿವಂತರಾದ ಋತ್ವಿಗ್ಜನರ, ಅಥವಾ ಬುದ್ಧಿವಂತರಾದ ಜನರ.

**ವಾಜದಾವ್ನಾಂ—ವಾಜಂ ಅನ್ನಂ ದದತ್ರೀತಿ ವಾಜದಾವಾನಃ ತೇಷಾಂ** | ಅನ್ನವನ್ನು ಅಥವಾ ಹವಿಸ್ಸನ್ನು ಕೊಡುವವರಲ್ಲಿ (ಸಮರ್ಪಿಸುವವರಲ್ಲಿ) ಮುಖ್ಯರಾದವರು ಎಂದು ಮುಖ್ಯಶಬ್ದವನ್ನು ಅರ್ಥವನ್ನು ಹೊಂದಿಸುವುದಕ್ಕಾಗಿ ಭಾಷ್ಯಕಾರರು ಅಧ್ಯಾಹಾರ ಮಾಡಿರುವರು. ಒಟ್ಟಿನಲ್ಲಿ ಈ ಋಕ್ಕಿನ ಅರ್ಥವು ವಿಶೇಷ ತೊಡಕಿನಿಂದ ಕೂಡಿರುವುದು. ಅರ್ಥವು ಸ್ಪಷ್ಟವಾಗಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ಯುವಾಕು—** ಯು ಮಿಶ್ರಣೇ, ಧಾತು. **ಕಟಿಕುಷಿಭ್ಯಾಂಕಾಕುಃ** (ಉ. ಸಾ. ೩-೩೫೭) ಕಟೆ ವರ್ಷಾ ವರಣಯೋಃ, ಕುಷ ನಿಷ್ಕರ್ಷೇ, ಈ ಧಾತುಗಳ ಮುಂದೆ ಕಾಕು ಪ್ರತ್ಯಯ ಬರುವುದು ಎಂದು ಈ ಸೂತ್ರಕ್ಕೆ ಅರ್ಥ. ಕೆಲವರು ಕರಿ ಕುಷಿಭ್ಯಾಂಕಾಕುಃ ಎಂದು ಈ ಸೂತ್ರವನ್ನು ಪಠಿಸುವರು. ಅವರ ಮತದಲ್ಲಿ ಕಠ ಕೃಚ್ಛ್ರ-ಜೀವನೇ ಎಂಬ ಧಾತುವನ್ನು ಗ್ರಹಿಸಬೇಕು ಇಲ್ಲಿ ಉಜ್ವಲದತ್ತರು ಕಟಿಕಷಿಭ್ಯಾಂ ಎಂದು ಪಾಠವನ್ನು ಇಟ್ಟು ಕೊಂಡು ಕಷ ಶಿಷ ಎಂಬ ದಂಡಕಪಠಿತವಾದ ಧಾತುವಿಗೆ ಗ್ರಹಣವೆನ್ನುವರು. ಕಷಾಕುಃ ಎಂದು ಉದಾಹರಣೆಯನ್ನೂ ತೋರುವರು. ಕುಷಾಕುಃ ಕಪಿವಹ್ನ್ಯರ್ಕೇ ಎಂಬ ಮೇದಿನೀಕೋಶಕ್ಕೆ ವಿರುದ್ಧವಾಗಿರುವುದು. ಇದಿಂತಿರಲಿ. ಇಲ್ಲಿ ಬಹುಲಗ್ರಣದಿಂದ ಯು ಧಾತುವಿನ ಮುಂದೆಯೂ ಕಾಕು ಪ್ರತ್ಯಯ ಬರುವುದು. ಪ್ರತ್ಯಯದಲ್ಲಿ ಕಕಾರವು ಇತ್ ಆದ್ದರಿಂದ ಗುಣಬರುವುದಿಲ್ಲ. ಯು+ಆಕು **ಅಚಿಶ್ನುಧಾತು.** (ಪಾ. ಸೂ. ೬-೪-೭೭) ಎಂಬುದರಿಂದ ಉವ-ಜಾದೇಶ, ಯುವಾಕು. **ಆದ್ಯುದಾತ್ತಶ್ಚ** (ಪಾ. ಸೂ. ೩-೧-೩) ಎಂಬುದರಿಂದ ಪ್ರತ್ಯಯದ ಆದಿಯಲ್ಲಿರುವ ಆಕಾರವು ಉದಾತ್ತವಾಗುವುದು. ಏವಂಚ ಯುವಾಕು ಎಂಬುದು ಮಧ್ಯೋದಾತ್ತ.

**ಶಚೀನಾಮ್—** ಶಚೀಶಬ್ದಃ ಕೇಷಾಂಚಿನ್ಮತೇ ಶಾರ್ಙ್ಗರವಾದಿಃ ಙೀನನ್ತಃ ನಿತ್ವಾದಾದ್ಯುದಾತ್ತಃ **ಇತಿ ಉಭೇವನಸ್ಪತ್ಯಾದಿಷುಯುಗಪತ್** (ಪಾ. ಸೂ. ೬-೨.೧೪೦) ಇತ್ಯತೋ ವೃತ್ತಿಕೃತೋಕ್ತಮ್. ಶಚಿಶಬ್ದವನ್ನು ಕೆಲವರು ಶಾರ್ಙ್ಗರವಾದಿಗಣಪಠಿತವಾದ ಶಬ್ದಗಳ ಮುಂದೆ ಙೀನ್ ಪ್ರತ್ಯಯ ಬರುವುದು ಎಂಬುದರಿಂದ ಙೀನ್ ಬರುತ್ತೆ. ಪ್ರತ್ಯಯವು ಞ್ನಿತ್ತು. ಆದ್ದರಿಂದ ಶಚೀ ಎಂಬ ಪ್ರತ್ಯಯಾಂತವು **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ.೬-೧-೧೯೭) ಎಂಬುದರಿಂದ ಆದ್ಯುದಾತ್ತ ಎಂದು ಕಾಶಿಕಾ ವೃತ್ತಿಕಾರರು ಉಭೇವನಸ್ಪತ್ಯಾದಿಷು ಯುಗಪತ್ ಎಂಬ ಸೂತ್ರದಲ್ಲಿ ಹೇಳಿರುವರು. ಆದ್ದರಿಂದ ಶಚೀಶಬ್ದ ಆದ್ಯುದಾತ್ತ-

**ಸುಮತೀನಾಮ್—ವಿದ್ಯಾಮ ಸುಮತೀನಾಮ್** (ಋ. ಸಂ. ೧-೪-೩) ಎಂಬಲ್ಲಿ ಇದು ವಿವರಿಸಲಾಗಿ ರುವುದು.

**ಭೂಯಾಮ**—ಭೂ ಸತ್ತಾಯಾಮ್ ಧಾತು ಇದರ ಮುಂದೆ ಪ್ರಾರ್ಥನೆ ಎಂಬ ಅರ್ಥದಲ್ಲಿ **ಲಿಙ್** ಉತ್ತಮಪುರುಷಬಹುವಚನ ಮಸ್ ಭೂ+ಮಸ್ **ನಿತ್ಯಂಙಿತಃ** ( ಪಾ. ಸೂ ೩-೪-೯೯) ಎಂಬುದರಿಂದ ಸಕಾರಕ್ಕೆ ಲೋಪ. **ಯಾಸುಟ್ ಪರಸ್ಮೈಪದೇಷೂದಾತ್ತೋ ಙಿಚ್ಚ** (ಪಾ. ಸೂ. ೩-೪-೧೦೩) ಎಂಬುದರಿಂದ **ಲಿಙ್**ಗೆ ಯಾಸುಟ್ ಆಗಮ. ಅದು ಟಿತ್ತಾದ್ದರಿಂದ **ಆದ್ಯನ್ತೌಟಕಿತೌ** (ಪಾ. ಸೂ. ೧-೧-೪೬) ಎಂಬುದರಿಂದ ಆದ್ಯವಯವವಾಗಿ ಬರುವುದು. ಭೂ+ಯಾಸ್‌ಮ ಲಿಙಸ್ಸಲೋಪೋಽನನ್ತ್ಯಸ್ಯ (ಪಾ. ಸೂ. ೭-೨-೭೬) ಸಾರ್ವಧಾತುಕಸಂಜ್ಞಕವಾದ ಲಿಙ್ ಸಂಬಂಧಿಯಾದ ಕೊನೆಯಲ್ಲಿಲ್ಲದ ಸಕಾರಕ್ಕೆ ಲೋಪ ಬರುವುದು ಎಂಬುದರಿಂದ ಸಕಾರಕ್ಕೆ ಲೋಪ ಭೂ+ಯಾಮ ಕರ್ತರಿಶಪ್ ಎಂಬುದರಿಂದ ಬಂದ ವಿಕರಣ ಶಪ್‌ಗೆ ಬಹುಲಂಛಂದಸಿ ಎಂಬುದರಿಂದ ಲುಕ್. ಯಾಸುಟ್ ಆಗಮಕ್ಕೆ ವಿಹಿತವಾದ ಉದಾತ್ತವು ಸತಿಶಿಷ್ಟ. **ಸತಿಶಿಷ್ಟಸ್ವರಬಲೀಯಸ್ತ್ವಂಚ** (ಪಾ. ಮ. ೬-೧-೧೫೮) ಎಂಬುದರಿಂದ ಅದು ಪ್ರಬಲವಾದ ಕಾರಣ ಅದೇ ನಿಲ್ಲುವುದು.

**ವಾಜದಾವ್ನಾಮ್**—ವಾಜಂ ದದತಿ ಇತಿ ವಾಜದಾವಾನಃ. ವಾಜ ಎಂಬ ಕರ್ಮವಾಚಕವು ಉಪಪದವಾಗಿರುವಾಗ ದಾಞ್ ಧಾತುವಿನ ಮುಂದೆ **ಆತೋಮನಿನ್ ಕ್ವನಿಬ್ವನಿಪಶ್ಚ**(ಪಾ.ಸೂ.೩-೨-೭೪)ಆಕಾರಾಂತವಾದ ಧಾತುವಿನ ಮುಂದೆ ಛಂದಸ್ಸಿನಲ್ಲಿ ಮನಿನ್, ಕ್ವನಿಪ್, ವನಿಪ್ ಪ್ರತ್ಯಯಗಳು ಸುಬಂತ ಉಪಪದವಾಗಿರುವಾಗಲೂ ಉಪಸರ್ಗ ಉಪಪದವಾಗಿರುವಾಗಲೂ ಬರುವುವು ಎಂಬುದರಿಂದ ವನಿಪ್ ಬರುವುದು. ವಾಜ+ಅಮ್+ದಾ ವನ್ ಇದು ಕೃದಂತ, ಕೃತ್ತದ್ಧಿತ ಸಮಾಸಾಶ್ಚ, ಎಂದು ಪ್ರಾತಿಪದಿಕ ಸಂಜ್ಞೆ ಸುಪೋಧಾತು ಪ್ರಾತಿಪದಿಕಯೋಃ ಎಂಬುದರಿಂದ ಅಮ್‌ಗೆ ಲುಕ್. ವನಿಪ್ಪು ಪಿತ್ತಾದ್ದರಿಂದ **ಅನುದಾತ್ತೌಸುಪ್ಪಿತೌ** ಎಂಬುದರಿಂದ ಅನುದಾತ್ತ. ದಾ+ಎಂಬುದು ಧಾತು ಸ್ವರದಿಂದ ಉದಾತ್ತ. ವಾಜಂ ಎಂಬುದು ದಾವನ್ ಎಂಬ ಕೃದಂತದೊಂದಿಗೆ **ಉಪಪದಮತಿಙ್** (ಪಾ. ಸೂ. ೨-೨-೧೯) ಎಂಬುದರಿಂದ ಸಮಾಸವನ್ನು ಹೊಂದಿದ ಮೇಲೆ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೯-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬಂದು ಅದೇ ಸ್ವರ ನಿಲ್ಲುವುದು. ಇದರ ಮುಂದೆ ಷಷ್ಠೀ ಬಹುವಚನ ಆಮ್ ಪ್ರತ್ಯಯ ವಾಜದಾವನ್+ಆಮ್. ಈ ಪ್ರತ್ಯಯದ ಪೂರ್ವಭಾಗಕ್ಕೆ **ಯಚಿಭಮ್** (ಪಾ. ಸೂ. ೧-೪-೧೮) ಎಂಬುದರಿಂದ ಭ ಸಂಜ್ಞೆ ಇದೆ. **ಅಲ್ಲೋಪೋಽನಃ** (ಪಾ. ಸೂ. ೬-೪-೧೩೪) ಸರ್ವನಾಮಸ್ಥಾನಸಂಜ್ಞೆಯನ್ನು ಹೊಂದದ ಯಾದ್ಯಜಾದಿಸ್ವಾದಿಪ್ರತ್ಯಯಾವ್ಯವಹಿತಪೂರ್ವವರ್ತಿಯೂ, ಅಂಗಾವಯವವೂ ಆದ ಯಾವ ಅನ್ ಇದೆಯೋ ಅದರ ಹ್ರಸ್ವಾಕಾರಕ್ಕೆ ಲೋಪ ಬರುವುದು ಎಂಬುದರಿಂದ ವಾಜದಾವನ್ ಎಂಬಲ್ಲಿ ಕೊನೆಯಲ್ಲಿರುವ ಅನ್ ನ ಅಕಾರಕ್ಕೆ ಲೋಪ. ವಾಜದಾವ್+ನ್+ಆಮ್, ಈಗ ನ್ ಎಂಬ ವಲ್ ಪರದಲ್ಲಿರುವುದರಿಂದ ವಕಾರಕ್ಕೆ **ಲೋಪೋವ್ಯೋರ್ವಲಿ** (ಪಾ. ಸೂ. ೬-೧-೬೬) ಎಂಬುದರಿಂದ ವಕಾರಕ್ಕೆ ಲೋಪವು ಯದ್ಯಪಿ ಪ್ರಾಪ್ತವಾಗುವುದು. ಆದರೂ ಇಲ್ಲಿ ಬಂದಿರುವ ಅಕಾರಲೋಪಕ್ಕೆ **ಅಚಃಪರಸ್ಮಿನ್ಪೂರ್ವವಿಧೌ** (ಪಾ. ಸೂ. ೧-೧-೫೭) ಎಂಬುದರಿಂದ ಸ್ಥಾನಿವದ್ಭಾವ ಬರುವುದು. ಹೇಗೆಂದರೆ ಸ್ಥಾನಿಭೂತವಾದ ಅಚ್ಚಿಗಿಂತಲೂ ಪೂರ್ವದಲ್ಲಿ ದೃಷ್ಟವಾದುದಕ್ಕೆ ಕಾರ್ಯವನ್ನು ಮಾಡುವಾಗ ಪರನಿಮಿತ್ತಕವೂ ಅಚ್ಚಿನ ಸ್ಥಾನದಲ್ಲಿ ಬಂದುದೂ ಆದ ಆದೇಶವು ಸ್ಥಾನಿವದ್ಭಾವವನ್ನು ಹೊಂದುವುದು ಎಂದು ಈ ಸೂತ್ರಕ್ಕೆ ಅರ್ಥ. ಇಲ್ಲಿ ಸ್ಥಾನಿಯು ಅಕಾರ, ಅದರ ಹಿಂದೆ ದೃಷ್ಟವಾದುದು ವಕಾರ, ಅದಕ್ಕೆ ಲೋಪ ಕಾರ್ಯವನ್ನು ಮಾಡುವಾಗ, ಅ ಎಂಬ ಅಚ್‌ನ ಸ್ಥಾನದಲ್ಲಿ ಬಂದುದೂ, ಆಮ್ ಎಂಬ ಪರವನ್ನು ನಿಮಿತ್ತ ಮಾಡಿಕೊಂಡು ಬಂದುದೂ ಆದ ಲೋಪಕ್ಕೆ ಸ್ಥಾನಿವದ್ಭಾವ ಬರುವುದು. ಅಂದರೆ ಸ್ಥಾನಿ ಇದ್ದಂತೆ ಆಗುವುದು. ಏವಂಚ ಅಕಾರದಿಂದ ವ್ಯವಧಾನ ಬರುವಕಾರಣ **ಲೋಪೋವ್ಯೋರ್ವಲಿ** ಎಂಬುದರಿಂದ ವಕಾರಕ್ಕೆ ಲೋಪ ಬರುವುದಿಲ್ಲ. ವಾಜದಾವ್ನಾಮ್ ಎಂದಾಗುವುದು ॥ ೪ ॥

॥ ಸಂಹಿತಾಪಾಠಃ ॥

ಇಂದ್ರಃ ಸಹಸ್ರದಾವ್ನಾಂ ವರುಣಃ ಶಂಸ್ಯಾನಾಂ ।
ಕ್ರತುರ್ಭವತ್ಯುಕ್ಥ್ಯಃ ॥ ೫ ॥

॥ ಪದಪಾಠಃ ॥

ಇಂದ್ರಃ । ಸಹಸ್ರಽದಾವ್ನಾಂ । ವರುಣಃ । ಶಂಸ್ಯಾನಾಂ ॥
ಕ್ರತುಃ । ಭವತಿ । ಉಕ್ಥ್ಯಃ ॥ ೫ ॥

॥ ಸಾಯಣಭಾಷ್ಯಂ ॥

ಅಯಮಿಂದ್ರಃ ಸಹಸ್ರದಾವ್ನಾಂ ಸಹಸ್ರಸಂಖ್ಯಾಕಧನಪ್ರದಾನಾಂ ಮಧ್ಯೇ ಕ್ರತುರ್ಧನದಾನಸ್ಯ ಕರ್ತಾ ಭವತಿ । ಪ್ರಭೂತಂ ದದಾತೀತ್ಯರ್ಥಃ । ತಥಾ ವರುಣಃ ಶಂಸ್ಯಾನಾಂ ಸ್ತುತ್ಯಾನಾಂ ಮಧ್ಯ ಉಕ್ಥ್ಯಃ ಸ್ತುತ್ಯೋ ಭವತಿ । ಅತಿಶಯೇನ ಸ್ತುತ್ಯ ಇತ್ಯರ್ಥಃ ॥ ವರುಣಃ ಉನನ್ಪ್ರತ್ಯಯೋ ನಿತ್ತ್ವಾದಾದ್ಯುದಾತ್ತಃ । ಶಂಸ್ಯಾನಾಂ । ಶನ್ಸು ಸ್ತುತೌ । ಋಹಲೋರ್ಣ್ಯತ್ । ತಿತ್ಸ್ವರಿತ ಮಿತಿ ಪ್ರಾಪ್ತ ಈಡವಂದವೃಶಂಸದುಹಾಂ ಣ್ಯತ ಇತ್ಯಾದ್ಯುದಾತ್ತಃ । ಕ್ರತುಃ । ಕೃಞಃ ಕತುಃ । ಉ. ೧-೭೮ । ಇತಿ ಕತುಃ । ಕಿತ್ತ್ವಾದ್ಗುಣಾಭಾವೇ ಯಣಾದೇಶಃ । ಪ್ರತ್ಯಯಸ್ವರೇಣಾದ್ಯುದಾತ್ತಃ । ಉಕ್ಥ್ಯಃ । ಉಕ್ಥಂ ಶಸ್ತ್ರಂ । ತೇನ ಸ್ತುತ್ಯತ್ವೇನ ತತ್ರ ಭವ ಉಕ್ಥ್ಯಃ । ಭವೇ ಛಂದಸಿ । ಪಾ. ೪-೪-೧೧೦ । ಇತಿ ಯತ್ । ಯಸ್ಯೇತಿ ಲೋಪಃ । ಅತ್ರ ತಿತ್ಸ್ವರಿತಮಿತ್ಯೇತದ್ಬಾಧಿತ್ವಾ ತೀರ್ಥ್ಯಾಯ ಕೂಪ್ಯಾಯೇತ್ಯಾದಿವತ್ ದ್ವ್ಯಚ್ತ್ವಾದ್ಯತೋಽನಾವ ಇತಿ ಪ್ರಾಪ್ತಮಾದ್ಯುದಾತ್ತತ್ವಂ ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತ ಇತಿ ನ ಕ್ರಿಯತೇ । ನನು ಯಸ್ಯೇತಿ ಲೋಪಾತ್ಪ್ರಾಗೇವ ತಿತ್ಸ್ವರಿತತ್ವಮಸ್ತು ನ ಹಿ ತದಾ ಯತೋಽನಾವ ಇತ್ಯೇತದಸ್ತಿ ದ್ವ್ಯಚ್ತ್ವಾಭಾವಾತ್ । ಅತ ಏವ ಹ್ರವ್ಯಾರ್ಯ ಚ ಸೂರ್ವ್ಯಾಯ ಚೇತ್ಯಾದೌ ಸ್ವರಿತತ್ವಂ ದೃಶ್ಯತೇ । ನ ಚ ಪರತ್ವಾನ್ನಿತ್ಯತ್ವಾಚ್ಚ ಯಸ್ಯೇತಿ ಲೋಪೇನ ಪ್ರಥಮತೋ ಭಾವ್ಯಮಿತಿ ವಾಚ್ಯಂ । ಪ್ರಕೃತಿಪ್ರತ್ಯಯಾಶ್ರಯಾದ್ಬಹಿರಂಗಾದ್ಯಸ್ಯೇತಿ ಲೋಪಾತ್ಪ್ರತ್ಯಯಮಾತ್ರಾಶ್ರಯತಯಾಂತರಂಗತ್ವೇನ ತಿತ್ಸ್ವರಿತಮಿತ್ಯೇತಸ್ಯ ಪ್ರಾಬಲ್ಯಾತ್ । ಅತ ಊರ್ವ್ಯಾಯೇತ್ಯಾದಿವದುಕ್ಥ್ಯ ಇತ್ಯತ್ರಾಪಿ ಲಕ್ಷಣತ ಏವ ಸ್ವರಿತತ್ವಂ ಭವಿಷ್ಯತೀತಿ । ಕಿಂ ಛಾಂದಸ್ಯೇನ । ಯತ್ರ ಹಿ ಲೋಪಮಂತರೇಣೈವ ದ್ವ್ಯಚ್ತ್ವಂ ತತ್ರ ಯತೋಽನಾವ ಇತ್ಯೇತದ್ಭವತಿ । ಯಥಾ ಚೇಯಂ ಯೇಯಮಿತಿ । ಲೋಪನಿಬಂಧನದ್ವ್ಯಚ್ತ್ವಪ್ರದೇಶೇಷು ತು ಸ್ವರಿತೇನೈವ ಭವಿತವ್ಯಮಿತಿ । ಏವಂ ತರ್ಹಿ ತೀರ್ಥ್ಯಾಯ ಕೂಪ್ಯಾಯೇತ್ಯಾದೌ ಯದಾದ್ಯುದಾತ್ತತ್ವಂ ತದೇವ ಛಾಂದಸಮಸ್ತು ಅಥಾತ್ರ ತು ವರ್ಣಾದಾಂಗಂ ಬಲೀಯಃ । ಪರಿ. ೫೫ । ಇತ್ಯಂತರಂಗತ್ವೇಽಪಿ ಸ್ವರಿತತ್ವಂ ಬಾಧಿತ್ವಾ ಲೋಪ ಏವ ಭವಿಷ್ಯತಿ । ತರ್ಹ್ಯುಕ್ಥ್ಯ ಊರ್ವ್ಯಾಯ ಸೂರ್ವ್ಯಾಯೇತ್ಯಾದೌ ಚ ಛಾಂದಸ್ಯಮಸ್ತು । ಸರ್ವಥೈಕತ್ರ ಛಾಂದಸ್ಯಾನ್ನ ಮುಚ್ಯತೇ ॥ ೩೨ ॥

॥ ಪ್ರತಿಪದಾರ್ಥ ॥

(ಅಯಂ) ಇಂದ್ರಃ—(ಈ ಮೇಲೆ ಹೇಳಿದ ಹವಿರಾದಿಗಳನ್ನು ಸ್ವೀಕರಿಸಿ ನಮಗೆ ಶ್ರೇಯಸ್ಸನ್ನುಂಟು ಮಾಡುವ) ಇಂದ್ರನು । ಸಹಸ್ರದಾವ್ನಾಂ—ಸಾವಿರಗಟ್ಟಲೆ (ಧನವನ್ನು) ಕೊಡುವವರಲ್ಲಿ । ಕ್ರತುಃ—(ಧನ ದಾನದ) ಕರ್ತೃವು । ಭವತಿ—ಆಗುತ್ತಾನೆ । ವರುಣಃ—ವರುಣನು । ಶಂಸ್ಯಾನಾಂ—ಸ್ತುತಿಸಲ್ಪಡುವವರಲ್ಲಿ । ಉಕ್ಥ್ಯಃ—(ವಿಶೇಷವಾಗಿ) ಸ್ತುತ್ಯನು । ಭವತಿ—ಆಗುತ್ತಾನೆ.

॥ ಭಾವಾರ್ಥ ॥

ಇಂದ್ರನು ಹಿಂದೆ ವರ್ಣಿತವಾದಂತೆ ತೃಪ್ತನಾಗಿ ನಮಗೆ ಬೇಕಾದಷ್ಟು ಧವವನ್ನು ಕೊಡುತ್ತಾನೆ. ಅದೇ ರೀತಿ ವರುಣನೂ ನಮ್ಮಿಂದ ವಿಶೇಷವಾಗಿ ಸ್ತುತಿಸಲ್ಪಡುವವನಾಗಿರುವನು.

English Translation

Indra is a giver among the givers of thousands; Varuna is to be praised among those who deserve to be praised.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಮೇಲೆ ಹೇಳಿದ ಅರ್ಥವನ್ನು ಸ್ವಲ್ಪ ವ್ಯತ್ಯಾಸ ಮಾಡಿದಲ್ಲಿ ಅಭಿಪ್ರಾಯವು ಚೆನ್ನಾಗಿ ಹೊಂದುವುದು.

ಸಾವಿರಗಟ್ಟಲೆ ಧನಾದಿಗಳನ್ನು ಕೊಡುವವರಲ್ಲಿ ಇಂದ್ರನೂ, ಬಹಳವಾಗಿ ಸ್ತುತಿಸಲ್ಪಡುವವರಲ್ಲಿ ವರುಣನೂ ಹೆಸರಾದವರು. ಇವರ ಕಾರ್ಯವು ಸ್ತುತ್ಯರ್ಹವಾದುದು ಎಂದು.

ಕ್ರತುಃ— ಅಪಃ ಅಪ್ನಃ—ಮೊದಲಾದ ಇಪ್ಪತ್ತಾರು ಕರ್ಮನಾಮಗಳ ಮಧ್ಯದಲ್ಲಿ ಕ್ರತುಶಬ್ದವು ಪಠಿತವಾಗಿರುವುದರಿಂದ (ನಿ. ೩-೨) ಕ್ರತುವೆಂದರೆ ಕರ್ಮವು. ಇಲ್ಲಿ ಇಂದ್ರ ಮತ್ತು ವರಣ ಇವರು ಮಾಡುವ ಸಾಹಸಕರ್ಮವು ಅಥವಾ ಜನರಿಗೆ ಧನಾದಿಗಳನ್ನು ಕೊಡುವ ಕರ್ಮವು.

ಉಕ್ಥ್ಯಃ—ಉಕ್ಥಂ ಶಸ್ತ್ರಂ । ತೇನ ಸ್ತುತ್ಯಸ್ತೇನ ತತ್ರ ಭವ ಉಕ್ಥ್ಯಃ । ಉಕ್ಥವೆಂದರೆ ಶಸ್ತ್ರ ಮಂತ್ರವು. ಆ ಮಂತ್ರವನ್ನು ಪಠಿಸಿ ಸೋತ್ರಮಾಡುವುದಕ್ಕೆ ಉಕ್ಥ್ಯವೆಂದು ಅರ್ಥವು. ಇಲ್ಲಿ ಇಂದ್ರಾವರುಣರು ಧನಾದಿಗಳನ್ನು ಕೊಡುವ ಕಾರ್ಯವು ಪ್ರಶಂಸನೀಯವು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

ವರುಣಃ—ಕೃವೃದಾರಿಭ್ಯ ಉನನ್ (ಉ. ಸೂ. ೩-೫೩) ಎಂಬುದರಿಂದ ವೃ, ಧಾತುವಿನ ಮುಂದೆ ಉನನ್ ಪ್ರತ್ಯಯು ಬಂದು ನಿಷ್ಪನ್ನವಾಗಿದೆ. ನಿತ್ಸ್ವರದಿಂದ ಆದ್ಯುದಾತ್ತ.

ಶಂಸ್ಯಾನಾಮ್—ಶಂಸು ಸ್ತುತೌ ಧಾತು. ಋಹಲೋರ್ಣ್ಯತ್ (ಪಾ.ಸೂ. ೩-೧-೧೨೪) ಎಂಬುದರಿಂದ ಣ್ಯತ್ ಬರುವುದು. ತಿತ್ಸ್ವರಿತಮ್ (ಪಾ ಸೂ.೬-೧-೧೮೫ ) ಎಂಬುದರಿಂದ ಸ್ವರಿತವು ಪ್ರಾಪ್ತವಾದರೆ ಇದಕ್ಕೆ ಅಪವಾದ ಈಡವನ್ದವೃಶಂಸದುಹಾಂಣ್ಯತಃ (ಪಾ.ಸೂ. ೬-೧-೧೨೪) ಎಂಬುದರಿಂದ ಣ್ಯತ್ ಪ್ರತ್ಯಯಾಂತ ವಾದ ಶಂಸ್ಯ ಎಂಬುದು ಆದ್ಯುದಾತ್ತ.

ಕ್ರತುಃ—ಕೃಞಃ ಕತುಃ (ಉ. ಸೂ. ೧-೭೭) ಡುಕೃಞ್ ಕರಣೇ, ಎಂಬುದರ ಮುಂದೆ ಕತು ಪ್ರತ್ಯಯ ಬರುವುದು, ಎಂಬುದರಿಂದ ಕೃ, ಧಾತುವಿನ ಮುಂದೆ ಕತು ಪ್ರತ್ಯಯ, ಲಶಕ್ವತದ್ಧಿತೇ, ಎಂಬುದರಿಂದ ಪ್ರತ್ಯಯದ ಆದಿಯಲ್ಲಿರುವ ಕಕಾರಕ್ಕೆ ಇತ್ಸಂಜ್ಞೆ, ಲೋಪ, ಪ್ರತ್ಯಯವು ಕಿತ್ತಾದ್ದರಿಂದ ಗುಣ ಬರುವುದಿಲ್ಲ. ಇಕೋಯಣಚಿ ( ಪಾ. ಸೂ. ೬-೧-೭೭ ) ಎಂಬುದರಿಂದ ಯಣಾದೇಶ, ಅಂದರೆ ಋಗೆ ರೇಫ. ಕ್ರತು ಎಂದಾ ಗುವುದು. ಇದು ಪ್ರತ್ಯಯಸ್ವರದಿಂದ ಅಂತೋದಾತ್ತ.

ಉಕ್ಥ್ಯಃ—ಉಕ್ಥ ಅಂದರೆ ಶಸ್ತ್ರ, ಅಪ್ರಗೀತಮನ್ತ್ರಸಾಧ್ಯಗುಣಿನಿಷ್ಠಗುಣಾಭಿಧಾನಂ ಶಸ್ತ್ರಂ ಎಂದು ಶಸ್ತ್ರಕ್ಕೆ ಲಕ್ಷಣವನ್ನು ಯಾಜ್ಞಿಕರು ಹೇಳುವರು. ವರುಣನು ಈ ಶಸ್ತ್ರದಿಂದ ಸ್ತುತಿಸಲ್ಪಡುತ್ತಾನೆ, ಏವಂಚ ಉಕ್ಥೇ ಭವಃ ಎಂದು ವಿಗ್ರಹವನ್ನು ಮಾಡಿದರೆ, ಭವೇಛಂದಸಿ ( ಪಾ. ಸೂ. ೪-೪-೧೧೦) ಸಪ್ತಮ್ಯಂತದ ಮುಂದೆ ಭವಾರ್ಥದಲ್ಲಿ ಯತ್ ಪ್ರತ್ಯಯ ಬರುವುದು ಎಂಬುದರಿಂದ ಯತ್, ಪ್ರಾತಿಪದಿಕಾವಯವವಾದ ಸಪ್ತಮ್ಯೇಕವಚನಪ್ರತ್ಯಯಕ್ಕೆ ಲುಕ್, ಉಕ್ಥ+ಯ ಯಸ್ಯೇತಿಚ (ಪಾ. ಸೂ. ೬-೪-೧೪೮ ) ಈಕಾರ ಅಥವಾ ತದ್ಧಿತ ಪರದಲ್ಲಿರುವಾಗ ಭ ಸಂಜ್ಞಕಾಂಗಾವಯವವಾದ ಇಕಾರ ಅಕಾರಗಳಿಗೆ ಲೋಪ ಬರುವುದು ಎಂಬುದರಿಂದ ಯತ್ ಎಂಬ ತದ್ಧಿತ ಪರವಾಗಿರುವಾಗ ಅಕಾರಕ್ಕೆ ಲೋಪ, ಉಕ್ಥ್ಯ, ಎಂದಾಗುವುದು. ಯತ್ ಪ್ರತ್ಯಯವು ತಕಾರೇತ್ಸಂಜ್ಞಕ, ಆದ್ದರಿಂದ ತಿತ್ಸ್ವರಿತಮ್ ( ಪಾ. ಸೂ. ೬-೧-೧೮೫ ) ತಕಾರೇತ್ಸಂಜ್ಞಕ ಪ್ರತ್ಯಯದ ಕೊನೆಯ ವರ್ಣವು ಸ್ವರಿತವಾಗುವುದು ಎಂಬುದರಿಂದ ಸ್ವರಿತಸ್ವರ ಬರುವುದು. ಯದ್ಯಪಿ ಇಲ್ಲಿ ಉಕ್ಥ್ಯ ಎಂಬ ಯತ್ಪ್ರತ್ಯಯಾಂತವು ದ್ವ್ಯಚ್ಕ ಅಂದರೆ ಎರಡು ಸ್ವರ (ಅಚ್) ಗಳನ್ನು ಹೊಂದಿರುವುದು- ಆದ್ದರಿಂದ ತೀರ್ಥ್ಯಾಯ ಎಂಬಲ್ಲಿಯ ತೀರ್ಥ್ಯ, ಕೂಪ್ಯಾಯ ಎಂಬಲ್ಲಿಯ ಕೂಪ್ಯ ಇವುಗಳಲ್ಲಿ ತಿತ್ಸ್ವರಿತಮ್ ಎಂಬುದಕ್ಕೆ ಅಪವಾದವಾದ ಯತೋಽನಾವಃ (ಪಾ.ಸೂ, ೬-೧-೨೧೩) ನೌಶಬ್ದ ಭಿನ್ನವಾದ ಶಬ್ದದ ಮುಂದೆ ವಿಹಿತವಾದ ಯಾವ ಯತ್ ಪ್ರತ್ಯಯವಿದೆಯೋ ಅದನ್ನು ಕೊನೆಯಲ್ಲಿ ಹೊಂದಿರುವ ದ್ವ್ಯಚ್ಕ ಶಬ್ದದ ಆದಿಯು ಉದಾತ್ತ ವಾಗುವುದು ಎಂಬುದರಿಂದ ಆದ್ಯುದಾತ್ತವು ಬಂದಿರುವಂತೆ ಇಲ್ಲಿಯೂ ಯತೋಽನಾವಃ ಎಂಬುದರಿಂದ ಆದ್ಯುದಾ ತ್ತವು ಪ್ರಾಪ್ತವಾಗುವುದು. ಆದರೂ ಸರ್ವೇವಿಧಯಶ್ಛಂದಸಿವಿಕಲ್ಪ್ಯನ್ತೇ (ಪಂಭಾ, ೩೫) ಛಂದಸ್ಸಿನಲ್ಲಿ ಎಲ್ಲಾ ವಿಧಿಗಳಿಗೂ ವಿಕಲ್ಪವಿರುವುದು ಎಂಬುದರಿಂದ ಯತೋಽನಾವಃ ಎಂಬುದೂ ವಿಕಲ್ಪವಾಗುವುದರಿಂದ ಇಲ್ಲಿ ಬರುವುದಿಲ್ಲ.

ಅದರೆ ಉಕ್ಥ+ಯ ಎಂದಿರುವಾಗ ಯಸ್ಯೇತಿಚ ಎಂಬುದರಿಂದ ಅಕಾರಕ್ಕೆ ಲೋಪ ಬರುವುದಕ್ಕಿಂ ತಲೂ ಮೊದಲೇ ತಿತ್ಸ್ವರಿತಮ್ ಎಂಬ ಸ್ವರಿತವು ಬರಲಿ. ಈಗ ಇಲ್ಲಿ ಮೂರು ಸ್ವರಗಳು (ಅಚ್) ಇರುವುದ ರಿಂದ ಅಪವಾದವಾದ ಯತೋಽನಾವಃ ಎಂಬುದಕ್ಕೆ ಪ್ರಾಪ್ತಿಯೇ ಇಲ್ಲ. ಅದರೆ ತಿತ್ಸ್ವರಿತಮ್ ಎಂಬುದ ಕ್ಕಿಂತಲೂ ಯಸ್ಯೇತಿಚ ಎಂಬುದು ಅಷ್ಟಾಧ್ಯಾಯಿಯಲ್ಲಿ ಪರದಲ್ಲಿ ಪಠಿತವಾಗಿರುವುದು. ಆದ್ದರಿಂದ ವಿಪ್ರತಿಷೇಧೇ-ಪರಂಕಾರ್ಯಮ್ (ಪಾ. ಸೂ. ೧-೪-೨ ) ಎಂಬುದರಿಂದ ಪರವಾದ ಯಸ್ಯೇತಿ ಲೋಪವೇ ಮೊದಲು ಬರಬೇಕಾ-ಗುವುದು. ಅಲ್ಲದೆ ಯಸ್ಯೇತಿಚ, ಎಂಬುದು ನಿತ್ಯ ಅಂದರೆ ಕೃತಾಕೃತಪ್ರಸಂಗಿ, ತಿತ್ಸ್ವರಿತಮ್ ಎಂಬ

ಶಾಸ್ತ್ರವು ಪ್ರವರ್ತಿಸಿದರೂ ಪ್ರವರ್ತಿಸದೇ ಇದ್ದರೂ ಬರುವುದು. ತಿತ್ಸ್ವರಿತಮ್ ಎಂಬುದು ಯಸ್ಯೇತಿಚ ಲೋಪ ಬರದೇ ಇದ್ದರೆ ಬರುವುದು. ಲೋಪ ಬಂದರೆ ಬಾಧಕವಾದ ಯತೋಽನಾವಃ ಎಂಬುದರಿಂದ ಬಾಧಿತ ವಾಗುವುದರಿಂದ ಬರುವುದಿಲ್ಲ. ಆದ್ದರಿಂದ ಕೃತಾಕೃತ ಪ್ರಸಂಗಿಯಾಗುವುದಿಲ್ಲ. ಯಸ್ಯ ಚ ಲಕ್ಷಣಾಂತರೇಣ ನಿಮಿತ್ತಂ ವಿಹನ್ಯತೇ ತದಪ್ಯನಿತ್ಯಮ್ (ಎಂಬ ಪರಿಭಾಷಾನುಸಾರ ಇಲ್ಲಿ ಅನಿತ್ಯತ್ವವು ಉಪಪಾದಿತವಾಗಿದೆ.) ಅದ ಕಾರಣ ನಿತ್ಯವಾಗುವುದಿಲ್ಲ. ಹೀಗೆ ನಿತ್ಯವಾದ್ದರಿಂದಲೂ ಪರವಾದ್ದರಿಂದಲೂ ಯಸ್ಯೇತಿಚ ಎಂಬುದು ಪ್ರಬಲ. ಆದ್ದರಿಂದ ಮೊದಲು ಯಸ್ಯೇತಿಚ ಎಂಬುದರಿಂದ ಲೋಪ ಬರಬೇಕೇ ಹೊರತು ತಿತ್ಸ್ವರಿತಮ್ ಎಂಬುದು ಬರಲು ಅವಕಾಶವಿಲ್ಲ ಎನ್ನಬಹುದು. ಆದರೂ ತಿತ್ಸ್ವರಿತಮ್ ಎಂಬುದು ಪ್ರತ್ಯಯಮಾತ್ರವನ್ನು ಅಪೇಕ್ಷಿಸಿ ಬರುವುದರಿಂದ ಅಲ್ಪಾಪೇಕ್ಷವಾದ್ದರಿಂದ ಅಥವಾ ಪರನಿಮಿತ್ತಕವಲ್ಲದುದರಿಂದ ಅಂತರಂಗ, ಯಸ್ಯೇತಿಚ ಎಂಬುದು ಪ್ರಕೃತಿ ಪ್ರತ್ಯಯಗಳೆರಡನ್ನೂ ಆಶ್ರಯಿಸಿಕೊಂಡು ಬರುವುದು. ಏವಂಚ ಬಹ್ವಪೇಕ್ಷವಾಗುವುದರಿಂದ ಅಥವಾ ಪರನಿಮಿತ್ತಕವಾದ್ದರಿಂದ ಬಹಿರಂಗ. ಪರನಿತ್ಯಾನ್ತರಙ್ಗಾಪವಾದಾನಾಮುತ್ತರೋತ್ತರಂ ಬಲೀಯಃ (ಪರಿಭಾ. ೩೮ )ಎಂಬುದರಿಂದ ಪರ, ನಿತ್ಯ ಇವುಗಳೆರಡಕ್ಕಿಂತಲೂ ಅಂತರಂಗಶಾಸ್ತ್ರವು ಪ್ರಬಲ. ಆದ್ದರಿಂದ ಅಸಿದ್ಧಂ ಬಹಿರಙ್ಗಮನ್ತರಙ್ಗೇ ( ಪರಿಭಾ. ೫೦ ) ಎಂಬುದರಿಂದ ಅಂತರಙ್ಗವಾದ ತಿತ್ಸ್ವರಿತಮ್ ಎಂಬುದನ್ನು ಮಾಡು ವಾಗ ಬಹಿರಂಗವಾದ ಯಸ್ಯೇತಿಚ ಎಂಬುದು ಅಸಿದ್ಧವಾಗುವುದು. ಏವಂಚ ಯಸ್ಯೇತಿಚ ಬರುವುದಕ್ಕಿಂತಲೂ ಮೊದಲೇ ತಿತ್ಸ್ವರಿತಮ್ ಎಂಬುದು ಬರುವುದು. ಆದ್ದರಿಂದಲೇ ಊನರ್ವ್ಯಾಯಚ ಸೂನರ್ವ್ಯಾಯಚ ಇತ್ಯಾದಿ ಸ್ಥಳಗಳಲ್ಲಿ ಸ್ವರಿತವೇ ಇರುವುದು. ಇದರಂತೆಯೇ ಉಕ್ಥ್ಯ ಎಂಬಲ್ಲಿ ಪಾಣಿನಿಸೂತ್ರದಿಂದಲೇ ಸ್ವರಿತವು ಸಿದ್ಧವಾ ಗುವುದು. ಹೀಗಿರುವಾಗ ಏತಕ್ಕಾಗಿ ಸರ್ವೇವಿಧಯಶ್ಛಂದಸಿ ಎಂಬ ಪರಿಭಾಷೆಯನ್ನು ಆಶ್ರಯಿಸಿ, ಉಕ್ಥ್ಯ ಎಂಬಲ್ಲಿ ಸ್ವರಿತವನ್ನು ಸಾಧಿಸಬೇಕು ? ಎಂದರೆ ಎಲ್ಲಿ ಯಸ್ಯೇತಿಚ ಲೋಪ ಬರದೇ ಎರಡು ಸ್ವರದಿಂದ ಕೂಡಿದ ಯತ್ಪ್ರಯಾಂತವಿದೆಯೋ ಅಂತಹ ಚೇಯಂ, ಜೇಯಂ ಇತ್ಯಾದಿ ಸ್ಥಳಗಳಲ್ಲಿ ಯತೋಽನಾವಃ ಎಂಬ ಸೂತ್ರವು ಸಾವಕಾಶವಾಗುವುದು. ಲೋಪ ಬಂದನಂತರ ಎರಡು ಸ್ವರ ಸಿಗುವ (ಪ್ರದೇಶ) ಲಕ್ಷ್ಯಗಳಲ್ಲಿ ಸ್ವರಿತವೇ ಯುಕ್ತವು ಎಂದು ಹೇಳಬಹುದು. ಹೀಗೆ ಇಲ್ಲಿ ಸ್ವರಿತವನ್ನು ನ್ಯಾಯವಾದ ರೀತಿಯಲ್ಲಿ ಉಪಪಾದಿಸಿದರೆ ತೀರ್ಥ್ಯಾಯ, ಕೂಪ್ಯಾಯ, ಎಂಬಲ್ಲಿಯೂ ಲೋಪಾನಂತರ ಎರಡು ಸ್ವರಗಳಿರುವುದರಿಂದ ಸ್ವರಿತ ಬರಬೇ ಕಾಗುವುದು. ಆದ್ದರಿಂದ ಇಲ್ಲಿ ಛಾಂದಸವಾಗಿ ಆದ್ಯುದಾತ್ತ ಬರುವುದು ಎಂದು ಹೇಳಿಕೊಳ್ಳಬೇಕಾ ಗುವುದು. ಆದಕ್ಕಾಗಿ ಇಲ್ಲಿ ವಾರ್ಣಾದಾಙ್ಗಂ ಬಲೀಯಃ ( ಪರಿಭಾ. ೫೫ ) ವರ್ಣನಿಮಿತ್ತಕವಾದ ಶಾಸ್ತ್ರ ಕ್ಕಿಂತಲೂ ಅಙ್ಗಾಧಿಕಾರದಲ್ಲಿರುವ ಶಾಸ್ತ್ರವು ಬಲವಾದುದು. ಏವಂಚ ಯಸ್ಯೇತಿಚ ಎಂಬುದು ಅಂಗಾಧಿಕಾರ ದಲ್ಲಿರುವುದರಿಂದ, ತಿತ್ಸ್ವರಿತಮ್ ಎಂಬುದಕ್ಕಿಂತಲೂ ಬಲವಾಗಿರುವುದು. ಆದ್ದರಿಂದ ಮೊದಲು ಯಸ್ಯೇತಿಚ ಎಂಬುದರಿಂದ ಅಕಾರಲೋಪ, ನಂತರ ತಿತ್ಸ್ವರಿತಮ್ ಎಂಬುದಕ್ಕೆ ಅಪವಾದವಾದ ಯತೋಽನಾವಃ ಎಂಬುದ ರಿಂದ ಆದ್ಯುದಾತ್ತವು ಸಿದ್ಧಿಸುವುದು. ಇಲ್ಲಿ ಛಾಂದಸವನ್ನು ಹೇಳಬೇಕಾದುದಿಲ್ಲ ಎಂದು ಹೇಳಬಹುದು. ಹೀಗಾದರೆ ಉಕ್ಥ್ಯಃ ಊನರ್ವ್ಯಾಯ ಸೂನರ್ವ್ಯಾಯ ಇತ್ಯಾದಿ ಲಕ್ಷ್ಯಗಳಲ್ಲಿ ಛಾಂದಸವಾಗಿ ಯತೋಽನಾವಃ ಎಂಬುದಕ್ಕೆ ಅಪ್ರವೃತ್ತಿಯನ್ನು ಹೇಳಿ ಸ್ವರಿತವನ್ನು ಉಪಪಾದಿಸಬೇಕಾಗುವುದು. ಸರ್ವಥಾ ಒಂದು ಕಡೆಯಲ್ಲಿ ಛಾಂದಸತ್ವವನ್ನು ಸ್ವೀಕರಿಸಿಯೇ ಸ್ವೀಕರಿಸಬೇಕು. ಉಕ್ಥ್ಯಾಯ, ಸೂನರ್ವ್ಯಾಯ, ಇತ್ಯಾದಿಗಳಲ್ಲಿ ಸ್ವರಿತವು ಶಾಸ್ತ್ರಸಿದ್ಧವೆಂದು ಉಪಪಾದಿಸಿದರೆ ತೀರ್ಥ್ಯಾಯ, ಇತ್ಯಾದಿಗಳಲ್ಲಿ ಆದ್ಯುದಾತ್ತವು ಛಾಂದಸವೆಂದು ಉಪಪಾದಿಸ ಬೇಕಾಗುವುದು. ತೀರ್ಥ್ಯಾಯ ಇತ್ಯಾದಿ ಸ್ಥಳಗಳಲ್ಲಿ ಆದ್ಯುದಾತ್ತವು ಶಾಸ್ತ್ರಸಿದ್ಧವೆಂದು ಉಪಪಾದಿಸಿದರೆ

ಉಕ್ಥ್ಯಯು, ಸೂವರ್ಗ್ಯಯು, ಇತ್ಯಾದಿಸ್ಥಳಗಳಲ್ಲಿ ಸ್ವರಿತವನ್ನು ಛಾಂದಸವಾಗಿ ಉಪಪಾದಿಸಬೇಕು. ಸರ್ವಪ್ರಕಾರದಿಂದಲೂ ಈ ಎರಡುಕಡೆಗಳಲ್ಲಿ ಯಾವುದಾದರೂ ಒಂದು ಕಡೆಯಲ್ಲಿ ಛಾಂದಸತ್ವವನ್ನು ಹೇಳದೆ ತಪ್ಪಿಸಿಕೊಳ್ಳಲಾಗುವುದಿಲ್ಲ. ॥ ೫ ॥

॥ ಸಂಹಿತಾಪಾಠಃ ॥

ತಯೋರಿದವಸಾ ವಯಂ ಸನೇಮ ನಿ ಚ ಧೀಮಹಿ ।
ಸ್ಯಾದುತ ಪ್ರರೇಚನಂ ॥ ೬ ॥

॥ ಪದಪಾಠಃ ॥

ತಯೋಃ । ಇತ್ । ಅವಸಾ । ವಯಂ । ಸನೇಮ । ನಿ । ಚ । ಧೀಮಹಿ ।
ಸ್ಯಾತ್ । ಉತ । ಪ್ರಽರೇಚನಂ ॥ ೬ ॥

॥ ಸಾಯಣಭಾಷ್ಯಂ ॥

ತಯೋರಿತ್ಯೂರ್ವೋಕ್ತಯೋರಿಂದ್ರಾವರುಣಯೋರೇವಾವಸಾ ರಕ್ಷಣೇನ ವಯಮನುಷ್ಠಾತಾರಃ ಸನೇಮ । ಸಂಭಜೇಮ ಧನಮಿತಿ ಶೇಷಃ । ನಿ ಧೀಮಹಿ ಚ । ಪ್ರಾಪ್ತೇ ಧನೇ ಯಾವದಪೇಕ್ಷಿತಂ ತಾವದ್ಭುಕ್ತ್ವಾ ತತೋಽವಶಿಷ್ಟಂ ಧನಂ ಕ್ವಚಿನ್ನಿಧಿರೂಪೇಣ ಸ್ಥಾಪಯಾಮಶ್ಚ । ಉತಾಪಿ ಚ ಪ್ರರೇಚನಂ ಭುಕ್ತಾನ್ನಿಹಿತಾಚ್ಚ ಪ್ರಕರ್ಷೇಣಾಧಿಕಂ ಧನಂ ಸ್ಯಾತ್ । ಸಂಪದ್ಯತಾಂ ॥ ಅವಸಾ । ಅಸುನ್ । ನಿತ್ತ್ವಾದಾದ್ಯುದಾತ್ತಃ । ವಯಂ । ಯೂಯಂ ಹಿ ಷ್ಠಾ । ಋಗ್ವೇ. ೧-೧೫-೨ । ಇತ್ಯತ್ರ ಯದುಕ್ತಂ ತದತ್ರ ದ್ರಷ್ಟವ್ಯಂ । ಸನೇಮ । ಆಶಿಷಿ ಲಿಙ್ । ತಸ್ಯ ಮಸ್ । ನಿತ್ಯಂ ಙಿತ ಇತಿ ಸಕಾರ ಲೋಪಃ । ಕಿದಾಶಿಷಿ । ಪಾ. ೩-೪-೧೦೪ । ಇತಿ ಯಾಸುಟ್ । ಛಂದಸ್ಯುಭಯಥೇತಿ ಸಾರ್ವಧಾತುಕಮಪ್ಯಸ್ತೀತಿ ಲಿಙಃ ಸಲೋಪೋಽನಂತ್ಯಸ್ಯೇತಿ ಸಕಾರಲೋಪಃ । ಅತೋ ಯೇಯ ಇತೀಯಾದೇಶಃ । ಲೋಪೋ ವ್ಯೋರ್ವಲೀತಿ ಯಲೋಪಃ । ಲಙ್ಯಾಶಿಷ್ಯಙ್ । ಪಾ. ೩-೧-೮೬ । ಇತ್ಯಙ್ । ಆದ್ಗುಣಃ । ಪಾದಾದಿತ್ವಾನ್ನ ನಿಘಾತಃ । ಧೀಮಹಿ । ಡುಧಾಞ್ ಧಾರಣಪೋಷಣಯೋಃ । ಆಶಿಷಿ ಲಿಙೋ ಮಹಿಙ್ । ತಸ್ಯ ಛಂದಸ್ಯುಭಯಥೇತಿ ಸಾರ್ವಧಾತುಕಾರ್ಧಧಾತುಕಸಂಜ್ಞೇ । ತತ್ರ ಸಾರ್ವಧಾತುಕತ್ವೇನ ಲಿಙಃ ಸಲೋಪೋಽನಂತ್ಯಸ್ಯೇತಿ ಸಕಾರಲೋಪಃ । ಸಾರ್ವಧಾತುಕಮಪಿದಿತಿ ಙಿತ್ವಂ ಶಪ್ ಚ । ಬಹುಲಂ ಛಂದಸೀತಿ ಜುಹೋತ್ಯಾದೇರಪಿ ಶಪೋ ಲುಕ್ । ಅರ್ಧಧಾತುಕತ್ವಾದಾತೋ ಲೋಪ ಇಟಿ ಚ । ಪಾ. ೬-೪-೬೪ ।

ಇತ್ಯಾಕಾರಲೋಪಃ | ನಿಘಾತಃ | ಸನೇಮೇತ್ಯಪೇಕ್ಷಯಾ ದ್ವಿತೀಯತ್ವಾದತ್ರ ಚವಾಯೋಗೇ ಪ್ರಥಮೇತಿ ನ ನಿಷೇಧಃ | ಸ್ಯಾತ್ | ಅಸ್ತೇಃ | ಪ್ರಾರ್ಥನಾಯಾಂ ಲಿಙ್ | ತಿಪ್ | ಇತಶ್ಚೇತೀಕಾರ ಲೋಪಃ | ಯಾಸುಟ್ ಪರಸ್ಮೈಪದೇಷೂದಾತ್ತೋ ಙಿಚ್ಚೇತಿ ಯಾಸುಡ್ಙಿತ್ತ್ವೇ | ಅದಿಪ್ರಭೃತಿಭ್ಯಃ ಶಪ ಇತಿ ಶಪೋ ಲುಕ್ | ಶ್ನಸೋರಲ್ಲೋಪ ಇತ್ಯಕಾರಲೋಪಃ | ಪಾದಾದಿತ್ವಾದನಿಘಾತಃ | ಉತ | ಏವಮಾದೀನಾಮಂತ ಇತ್ಯಂತೋದಾತ್ತಃ | ಪ್ರರೇಚನಂ | ರಿಚಿರ್ ವಿರೇಚನೇ | ಭಾವೇ ಲ್ಯುಟ್ | ಯೋರನಾದೇಶಃ | ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ | ಪ್ರಾದಿಸಮಾಸಃ | ಕೃದುತ್ತರಪದಪ್ರಕೃತಿಸ್ವರತ್ವಂ ||

|| ಪ್ರತಿಪದಾರ್ಥ ||

**ತಯೋಃ**—ಆ ಇಂದ್ರಾವರುಣರ | **ಅವಸಾ ಇತ್**—ರಕ್ಷಣೆಯಿಂದಲೇ | **ವಯಂ**—(ಅನುಷ್ಠಾತೃಗಳಾದ) ನಾವು | **ಸನೇಮ**—(ಧನವನ್ನು) ಸಂಗ್ರಹ ಮಾಡೋಣ | **ನಿ ಧೀಮಹಿ ಚ**—ಶೇಖರಿಸಿಯೂ ಇಡೋಣ | **ಉತ**—ಮತ್ತು | (ಆಧನವು) **ಪ್ರರೇಚನಂ**—(ಅನುಭವಿಸಿದ ಮತ್ತು ಶೇಖರಿಸಿದುದಕ್ಕಿಂತಲೂ) ಹೆಚ್ಚಾಗುವಂತೆ | **ಸ್ಯಾತ್**—ಆಗಲಿ.

|| ಪದಪಾಠಃ ||

ನಾವು ಇಂದ್ರ ಮತ್ತು ವರುಣರ ಕೃಪೆಯಿಂದ ಅಪಾರವಾದ ಧನವನ್ನು ಸಂಗ್ರಹಮಾಡಿ ಯಥೇಚ್ಛವಾಗಿ ಆ ಧನವನ್ನನುಭವಿಸಿ ಉಳಿದುದನ್ನು ಶೇಖರಿಸೋಣ ಮತ್ತೂ ನಾವು ಅನುಭವಿಸಿದ ಹಾಗೆಲ್ಲಾ ಆ ಧನವು ಹೆಚ್ಚುವಂತಾಗಲಿ.

## English Translation.

Through their protection we enjoy riches and heap them up ; still may we have even a surplus.

|| ವಿಶೇಷವಿಷಯಗಳು ||

**ನಿ ಧೀಮಹಿ**—ಶೇಖರಿಸಿ ಇಡೋಣ, ಕೂಡಿಹಾಕೋಣ lay by.

**ಉತ**—ಅಷ್ಟೇ ಅಲ್ಲ, ಅಥವಾ ಮತ್ತು ಎಂಬ ಯಾವ ಅರ್ಥವನ್ನು ಬೇಕಾದರೂ ಹೇಳಬಹುದು.

**ಪ್ರರೇಚನಂ**—ಭುಕ್ತಾನ್ನಿಹಿತಾಚ್ಚ ಪ್ರಕರ್ಷೇಣಾಧಿಕಂ ಧನಂ. ನಾವು ಯಥೇಷ್ಟವಾಗಿ ಅನುಭವಿಸಿ ಕೂಡಿಹಾಕಿದುದಕ್ಕಿಂತಲೂ ಅಧಿಕವಾದ ಧನವು ಎಂದರೆ ಇಂದ್ರಾವರುಣರು ಕೊಡುವ ಧನವು ಅವರ ಅನುಗ್ರಹದಿಂದ ಅಧಿಕವಾಗಿ ವೃದ್ಧಿಗೊಳ್ಳಲಿ ಎಂದಭಿಪ್ರಾಯವು.

|| ವ್ಯಾಕರಣಪ್ರಕ್ರಿಯಾ ||

**ಅವಸಾ**—**ಸರ್ವಧಾತುಭ್ಯೋಽಸುನ್** (ಉ. ಸೂ. ೪-೬೨೮) ಎಂಬುದರಿಂದ ಅವ, ಧಾತುವಿನ ಮುಂದೆ ಅಸುನ್ ಪ್ರತ್ಯಯ, ನಿತ್ಸ್ವರದಿಂದ ಆದ್ಯುದಾತ್ತ, ತೃತೀಯೈಕವಚನಾನ್ತ.

**ವಯಮ್**—**ಯೂಯಂ ಹಿ ಷ್ಠಾ** ( ಋ. ಸಂ. ೧-೧೫-೨ ) ಎಂಬ ಮಂತ್ರದಲ್ಲಿ ಯೂಯಂ ಎಂಬುದಕ್ಕೆ ಹೇಳಿದಂತೆ ಪ್ರಕ್ರಿಯೆಯನ್ನು ವಯಂ ಎಂಬಲ್ಲಿಯೂ ಹೇಳಿಕೊಳ್ಳುವುದು. ಯೂಯಮ್ ಎಂಬಲ್ಲಿ ಯುಷ್ಮಚ್ಛಬ್ದಪ್ರಕೃತಿ. ವಯಮ್ ಎಂಬಲ್ಲಿ ಅಸ್ಮಚ್ಛಬ್ದಪ್ರಕೃತಿ, ಇಷ್ಟೇ ವಿಶೇಷ.

**ಸನೇಮ**—ವನ ಷಣ ಸಂಭಕ್ತೌ. ಧಾತ್ವಾದೇಃಷಃಸಃ, ಎಂಬುದರಿಂದ ಷಕಾರಕ್ಕೆ ಸಕಾರ. ಇದರ ಮುಂದೆ ಆಶೀರ್ಲಿಙ್ ಉತ್ತಮಪುರುಷ ಬಹುವಚನ ಮಸ್ ಸನ್+ಮಸ್, **ನಿತ್ಯಂಙಿತಃ** (ಪಾ ಸೂ. ೩-೪-೯೯) ಎಂಬುದರಿಂದ ಮಸ್, ಸಕಾರಕ್ಕೆ ಲೋಪ. **ಯಾಸುಟ್ ಪರಸ್ಮೈಪದೇಷೂದಾತ್ತೋಙಿಚ್ಚ** (ಪಾ ಸೂ. ೩-೪-೧೦೩ ಎಂಬುದರಿಂದ ಯಾಸುಡಾಗಮ. ಟಿತ್ತಾದ್ದರಿಂದ ಆದ್ಯನ್ತೌಟಕಿತೌ ಎಂಬುದರಿಂದ ಆದ್ಯವಯವವಾಗಿ ಬರುವುದು. **ಕಿದಾಶಿಷಿ** (ಪಾ. ಸೂ. ೩-೪-೧೦೪) ಎಂಬುದರಿಂದ ಅದು ಕಿತ್ತಾಗುವುದು. ಇದು ಯಾಸುಡಾಗಮಕ್ಕೆ ವಿಧಾಯಕವಲ್ಲವೆಂದು ಹಿಂದೆಯೇ ಹೇಳಲಾಗಿದೆ. ಸನ್+ಯಾಸ್+ಮ **ಛಂದಸ್ಯುಭಯಥಾ** (ಪಾ.ಸೂ. ೩-೪-೧೧೭)ಎಂಬುದರಿಂದ ಯಾಸ್ಮ ಎಂಬುದಕ್ಕೆ ಸಾರ್ವಧಾತುಕಸಂಜ್ಞೆ ಆರ್ಧಧಾತುಕಸಂಜ್ಞೆ ಎರಡೂ ಇರುವುದು. ಆದ್ದರಿಂದ ಸಾರ್ವಧಾತುಕಸಂಜ್ಞೆಯನ್ನು ಪುರಸ್ಕರಿಸಿಕೊಂಡು ಸಕಾರಕ್ಕೆ ಲೋಪ, **ಲಿಙ್ಯಾಶಿಷ್ಯಙ್** (ಪಾ.ಸೂ. ೩-೧-೮೬) ಆಶೀರರ್ಥವಾದ ಲಿಙ್ ಪರದಲ್ಲಿರುವಾಗ ಧಾತುವಿನ ಮುಂದೆ ಲಿಙ್ ಬರುವುದು ಎಂಬುದರಿಂದ ಅಙ್. ಸನ್+ಅ+ಯಾ+ಮ **ಆತೋಯೇಯಃ** (ಪಾ. ಸೂ. ೭-೨-೮೦) ಎಂಬುದರಿಂದ ಯಾ ಗೆ ಇಯ್ ಆದೇಶ, ಸನ + ಇಯ್ + ಮ **ಲೋಪೋವ್ಯೋರ್ವಲಿ** (ಪಾ. ಸೂ. ೬-೧-೬೬) ಎಂಬುದರಿಂದ ಯ ಗೆ ಲೋಪ, **ಆದ್ಗುಣಃ** (ಪಾ. ಸೂ. ೬.೧-೮೭ ) ಎಂಬುದರಿಂದ ಗುಣ ಸನೇಮ ಎಂದಾಗುವುದು, ಇದು ಪಾದದ ಆದಿಯಲ್ಲಿರುವುದರಿಂದ ತಿಙ್ಙತಿಙಃ ಎಂಬುದರಿಂದ ಅನುದಾತ್ತ ಬರುವುದಿಲ್ಲ, ಏ ಎಂಬ ಏಕಾದೇಶವು ಉದಾತ್ತವಾಗಿ ನಿಲ್ಲುವುದು.

**ಧೀಮಹಿ**—ಡುಧಾಞ್ ಧಾರಣಪೋಷಣಯೋಃ, ಧಾತು. ಆಶೀರರ್ಥದಲ್ಲಿ ಲಿಙ್. ಲಿಙಸ್ಸೀಯುಟ್ ಎಂಬುದರಿಂದ ಸೀಯುಡಾಗಮ ಉತ್ತಮಪುರುಷ ಬಹುವಚನ ಮಹಿಙ್, ಇದಕ್ಕೆ ಛಂದಸ್ಯುಭಯಥಾ, ಎಂಬುದರಿಂದ ಸಾರ್ವಧಾತುಕ ಸಂಜ್ಞೆಯೂ ಸಹ ಇರುವುದು. ಸಾರ್ವಧಾತುಕಸಂಜ್ಞೆ ಇರುವುದರಿಂದ **ಲಿಙಸ್ಸಲೋಪೋನನ್ತ್ಯಸ್ಯ**, ಎಂಬುದರಿಂದ ಸೀಯುಟ್‌ನ ಸಕಾರಕ್ಕೆ ಲೋಪ, **ಸಾರ್ವಧಾತುಕಮಪಿತ್** (ಪಾ. ಸೂ. ೧-೨-೪) ಎಂಬುದರಿಂದ ಙಿತ್ವ ಇವು ಬರುವುವು. **ಕರ್ತರಿ ಶಪ್** ಎಂಬುದರಿಂದ ಶಪ್ಪು ಬರುವುದು. ಆದರೆ ಅದಕ್ಕೆ **ಬಹುಲಂಛಂದಸಿ** ( ಪಾ. ಸೂ. ೨-೪-೭೩ ) ಎಂಬುದರಿಂದ ಧಾಞ್ ಧಾತುವು ಜುಹೋತ್ಯಾದಿಯಾದಾಗ್ಯೂ ಲುಕ್ ಬರುವುದು. ಅಥವಾ ಶಪ್ಪನ್ನು ಮಾಡುವಾಗ ಆರ್ಧಧಾತುಕಸಂಜ್ಞೆಯನ್ನೇ ಇಟ್ಟುಕೊಂಡು ಶಪ್ ಬರುವುದಿಲ್ಲ ಎಂದು ಹೇಳಿದರೂ ಹೇಳಬಹುದು. ಧಾ+ಈಯ್+ಮಹಿ ಆರ್ಧಧಾತುಕಸಂಜ್ಞೆ ಇರುವುದರಿಂದ **ಆತೋಲೋಪಇಟಿಚ** (ಪಾ. ಸೂ. ೬-೪-೬೪) ಎಂಬುದರಿಂದ ಆಕಾರಕ್ಕೆ ಲೋಪ, **ಲೋಪೋವ್ಯೋರ್ವಲಿ** ಎಂಬುದರಿಂದ ಯ ಲೋಪ ಧೀಮಹಿ ಎಂದಾಗುವುದು. ಇಲ್ಲಿ ಪ್ರತ್ಯಯದಲ್ಲಿ ಸ್ವತಃ ಙಿತ್ವವಿರುವುದರಿಂದ ' ಸಾರ್ವಧಾತುಕಮಪಿತ್ ' ಎಂಬುದರಿಂದ ಆತಿದೇಶಿಕ ಙಿತ್ವೋಪಪಾದನಕ್ಕೆ ಫಲವಿಲ್ಲ, ಸಾರ್ವಧಾತುಕಸಂಜ್ಞೆಗೆ ಇದೂ ಒಂದು ಫಲವೆಂದು ಅಭಿಪ್ರಾಯದಿಂದ ಙಿತ್ವವು ಉಪಪಾದಿತವಾಗಿರುವುದು, ನಿ ಚ ಧೀಮಹಿ, ಎಂದು ಚ ಶಬ್ದಯೋಗವಿದೆ. ಆದರೂ ಸನೇಮ ಎಂಬ ತಿಙನ್ತವು ಮೊದಲು ಇರುವುದರಿಂದ ಅದನ್ನು ಅಪೇಕ್ಷಿಸಿ ಧೀಮಹಿ ಎಂಬುದು ಎರಡನೆಯದಾಗುವುದು. ಆದ್ದರಿಂದ **ಚವಾಯೋಗೇ ಪ್ರಥಮಾ** ( ಪಾ.ಸೂ. ೮-೧-೫೯ ) ಎಂಬುದರಿಂದ ಅನುದಾತ್ತಕ್ಕೆ ನಿಷೇಧಬರುವುದಿಲ್ಲ. ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತ ಬರುವುದು.

ಸ್ಯಾತ್-ಅಸ ಭುವಿ, ವಿಧಿನಿಮನ್ತ್ರಣಾಮನ್ತ್ರಣಾಧೀಷ್ಟಸಂಪ್ರಶ್ನಪ್ರಾರ್ಥನೇಷು ಲಿಙ್ (ಪಾ. ಸೂ. ೩-೩-೧೬೧) ಎಂಬುದರಿಂದ ಪ್ರಾರ್ಥನಾರೂಪವಾದ ಅರ್ಥದಲ್ಲಿ ಲಿಙ್, ತಿಪ್. ಇತಶ್ಚ (ಪಾ ಸೂ. ೩-೪-೧೦೦) ಎಂಬುದರಿಂದ ಯಾಸುಡಾಗಮ. ಇದರಿಂದಲೇ ಅದು ಙಿತ್ತೂ ಆಗುವುದು. ಅಸ್+ಯಾಸ್+ತ್, ಕರ್ತರಿಶಪ್ ಎಂಬುದರಿಂದ ಶಪ್ ಅದಕ್ಕೆ ಅದಿಪ್ರಭೃತಿಭ್ಯಃಶಪಃ (ಪಾ. ಸೂ. ೨-೪-೭೨) ಎಂಬುದರಿಂದ ಲುಕ್. ಶ್ನಸೋರಲ್ಲೋಪಃ (ಪಾ. ಸೂ. ೬-೪-೧೧೧) ಎಂಬುದರಿಂದ ಧಾತುಸಂಬಂಧಿಯಾದ ಅಕಾರಕ್ಕೆ ಲೋಪ, ಲಿಙಸ್ಸಲೋಪೋನನ್ತ್ಯಸ್ಯ ಎಂಬುದರಿಂದ ಯಾಸುಡಾಗಮದ ಸಕಾರಕ್ಕೆ ಲೋಪ ಏವಂಚ ಸ್ಯಾತ್ ಎಂದಾಗುವುದು. ಪಾದದ ಆದಿಯಲ್ಲಿರುವುದರಿಂದ ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ.

ಉತ—ನಿಪಾತಾದೀನಾಮನ್ತಃ (ಫಿ. ಸೂ. ೪-೮೨) ಎಂಬುದರಿಂದ ಅಂತೋದಾತ್ತ.

ಪ್ರರೇಚನಮ್—ರಿಚಿರ್ ವಿರೇಚನೇ ಧಾತು. ಇರಇತ್ಸಂಜ್ಞಾವಾಚ್ಯಾ (ವಾದಿಕ. ೧-೩-೭) ಎಂಬುದರಿಂದ ಇರ್‌ಗೆ ಇತ್ಸಂಜ್ಞೆ ಲೋಪ. ಲ್ಯುಟ್ಚ (ಪಾ.ಸೂ. ೩-೩-೧೧೫) ನಪುಂಸಕಲಿಂಗದಲ್ಲಿ ಭಾವಾರ್ಥದಲ್ಲಿ ಧಾತುವಿನ ಮುಂದೆ ಕ್ತ, ಲ್ಯುಟ್ ಪ್ರತ್ಯಯಗಳು ಬರುವುವು ಎಂಬುದರಿಂದ ಲ್ಯುಟ್ ಪ್ರತ್ಯಯ, ಯುವೋರನಾಕೌ (ಪಾ.ಸೂ. ೭-೧-೧ ) ಎಂಬುದರಿಂದ ಯುಗೆ ಅನ ಆದೇಶ ರಿಚ್+ಅನ ಪುಗನ್ತಲಘೂಪಧಸ್ಯಚ (ಪಾ. ಸೂ. ೭-೩-೮೬) ಎಂಬುದರಿಂದ ಲಘೂಪಧಗುಣ, ರೇಚನ, ಲಿತಿ (ಪಾ. ಸೂ. ೬-೧-೧೯೩) ಎಂಬುದರಿಂದ ಅನ ಪ್ರತ್ಯಯದ ಹಿಂದೆ ಇರುವುದು ಉದಾತ್ತ, ಪ್ರಶಬ್ದದೊಂದಿಗೆ ಕುಗತಿಪ್ರಾದಯಃ ( ಪಾ. ಸೂ. ೨-೨-೧೮ ) ಎಂಬುದರಿಂದ ಪ್ರಾದಿಸಮಾಸ. ಗತಿಕಾರಕೋಪಪದಾತ್ಕೃತ್ ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುವುದು. ॥ ೬ ॥

॥ ಸಂಹಿತಾಪಾಠಃ ॥

ಇಂದ್ರಾವರುಣ ವಾಮಹಂ ಹುವೇ ಚಿತ್ರಾಯ ರಾಧಸೇ ।
ಅಸ್ಮಾನ್ತ್ಸು ಜಿಗ್ಯುಷಸ್ಕೃತಂ ॥ ೭ ॥

॥ ಪದಪಾಠಃ ॥

ಇಂದ್ರಾವರುಣಾ । ವಾಂ । ಅಹಂ । ಹುವೇ । ಚಿತ್ರಾಯ । ರಾಧಸೇ ॥
ಅಸ್ಮಾನ್ । ಸು । ಜಿಗ್ಯುಷಃ । ಕೃತಂ ॥ ೭ ॥

॥ ಸಾಯಣಭಾಷ್ಯಂ ॥

ಇಂದ್ರಾವರುಣಾ ಹೇ ಇಂದ್ರಾವರುಣೌ ವಾಂ ಯುವಾಮುಭಾವಹಂ ಹುವೇ । ಆಹ್ವಯಾಮಿ । ಕಿಮರ್ಥಂ । ಚಿತ್ರಾಯ ಮಣಿಮುಕ್ತಾದಿರೂಪೇಣ ವಿವಿಧಾಯ ರಾಧಸೇ ಧನಾಯ । ತತ ಆಹುತೌ ಯುವಾಮಸ್ಮಾನನುಷ್ಠಾತೄನ್ ಸು ಜಿಗ್ಯುಷಃ । ಶತ್ರುವಿಷಯೇ ಸುಷ್ಠು ಜಯಯುಕ್ತಾನ್ ಕೃತಂ ಕುರುತಂ ॥ ಇಂದ್ರಾವರುಣಾ । ಸುಪಾಂ ಸುಲುಗಿತ್ಯಾದಿನಾ ಸಂಬೋಧನಸ್ಯಾಕಾರಃ । ದೇವತಾದ್ವಂದ್ವೇ ಚೇತಿ ಪೂರ್ವಪದಸ್ಯಾನಙ್ । ಆಮಂತ್ರಿತಾದ್ಯುದಾತ್ತತ್ವಂ । ಸಂಹಿತಾಯಾಂ ಛಾಂದಸಂ ಹ್ರಸ್ವತ್ವಂ । ಹುವೇ । ಹ್ವಯತೇರ್ಲಟ್ಯುತ್ತಮೈಕವಚನಮಿಟ್ । ಶಪ ಇತ್ಯನುವೃತ್ತೌ ಬಹುಲಂ ಛಂದಸೀತಿ ಲುಕ್ । ಹ್ವ ಇತ್ಯನುವೃತ್ತೌ ಬಹುಲಂ ಛಂದಸೀತಿ ಸಂಪ್ರಸಾರಣಂ ಪರಪೂರ್ವತ್ವಂ । ಅಚಿ ಶ್ನುಧಾತ್ವಿತ್ಯಾದಿನೋವಙ್ । ಪಾ. ೬-೪-೭೭ । ನ ಚ ಹುಶ್ನುವೋರಿತ್ಯಾದಿನಾ । ಪಾ. ೬-೪-೮೭ । ಯಣಾದೇಶಃ । ಜುಹೋತೇರೇವ ಹಿ ಪ್ರತಿಪದೋಕ್ತಸ್ಯ ತತ್ । ನ ಪುನರಸ್ಯ ಲಾಕ್ಷಣಿಕತ್ವಾತ್ । ಇಟಃ ಪ್ರತ್ಯಯಸ್ವರೇಣೋದಾತ್ತತ್ವಂ । ಪಾದಾದಿತ್ವಾನ್ನನಿಘಾತಃ । ರಾಧಸೇ । ಅಸುನ್ । ನಿತ್ತ್ವಾದಾದ್ಯುದಾತ್ತತ್ವಂ । ಅಸ್ಮಾನ್ । ಶಸಿ ದ್ವಿತೀಯಾಯಾಂ ಚ । ಪಾ. ೭-೨-೮೭ । ಇತ್ಯಾತ್ವಂ । ಶಸೋ ನಃ । ಪಾ. ೭-೧-೨೯ । ಇತಿ ನತ್ವಂ । ಜಿಗ್ಯುಷಃ । ಜಿ ಜಯೇ । ಲಿಟಃ ಕ್ವಸುಶ್ಚೇತಿ ಕ್ವಸುಃ । ದ್ವಿರ್ಭಾವಃ । ಸನ್‌ಲಿಟೋರ್ಜೇಃ । ಪಾ. ೭-೩-೫೭ । ಇತಿ ದ್ವಿತೀಯಸ್ಯ ಕುತ್ವಂ । ಕ್ವಸೋಃ ಕಿತ್ತ್ವಾದ್ಗುಣಾಭಾವಃ । ಕ್ರಾದಿನಿಯಮಾತ್ಪ್ರಾಪ್ತಸ್ಯೇಟೋ ವಸ್ವೇಕಾಜಾದ್ಘಸಾಮಿತಿ ನಿಯಮೇನ ನಿವೃತ್ತಿಃ । ದ್ವಿತೀಯಾ ಬಹುವಚನಂ ಶಸ್ । ಭಸಂಜ್ಞಾಯಾಂ ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ । ಪರಪೂರ್ವತ್ವಂ । ಏರನೇಕಾಚ ಇತಿ ಯಣಾದೇಶಃ । ಶಾಸಿವಸಿಘಸೀನಾಂ ಚೇತಿ ಷತ್ವಂ । ಪ್ರತ್ಯಯಸ್ವರೇಣೋಕಾರ ಉದಾತ್ತಃ । ಕೃತಂ । ಡುಕೃಞ್ ಕರಣೇ । ಲೋಣ್ಮಧ್ಯಮದ್ವಿವಚನಸ್ಯ ಲಙ್ವದ್ಭಾವಾತ್ತಮಾದೇಶಃ । ಶಪೋ ಬಹುಲಂ ಛಂದಸೀತಿ ಲುಕ್ । ತಿಙ್ಙತಿಙ ಇತಿ ನಿಘಾತಃ ॥

॥ ಪ್ರತಿಪದಾರ್ಥ ॥

ಇಂದ್ರಾವರುಣಾ—ಇಂದ್ರ ಮತ್ತು ವರುಣರೇ । ವಾಂ—ನಿಮ್ಮಿಬ್ಬರನ್ನೂ । ಅಹಂ—(ಅನುಷ್ಠಾತೃವಾದ) ನಾನು । ಚಿತ್ರಾಯ—(ವಜ್ರ, ವೈಢೂರ್ಯಾದಿ) ನಾನಾ ರೂಪವಾದ । ರಾಧಸೇ—ಧನಕ್ಕೋಸ್ಕರ । ಹುವೇ—ಆಹ್ವಾನಿಸುತ್ತೇನೆ (ಹೀಗೆ ಆಹ್ವಾನಿಸಲ್ಪಟ್ಟ ನೀವು) । ಅಸ್ಮಾನ್—(ಅನುಷ್ಠಾತೃಗಳಾದ) ನಮ್ಮನ್ನು । ಸು ಜಿಗ್ಯುಷಃ—ಒಳ್ಳೆಯ ಜಯಶಾಲಿಗಳನ್ನಾಗಿ । ಕೃತಂ—ಮಾಡಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವರುಣರೇ, ನಾವು ನಿಮ್ಮನ್ನು ಸ್ತೋತ್ರಗಳಿಂದ ಸ್ತುತಿಸಿ ಆಹ್ವಾನಿಸುತ್ತೇವೆ. ನೀವು ನಮಗೆ ವಜ್ರವೈಢೂರ್ಯಾದಿ ನಾನಾವಿಧವಾದ ದ್ರವ್ಯವನ್ನು ಕೊಡಿ ಮತ್ತು ಶತ್ರುಗಳನ್ನು ಜಯಿಸುವಂತೆ ಮಾಡಿ.

## English Translation.

Indra and Varuna, I invoke you for several kinds of wealth; make us victorious (over our enemies).

॥ ವಿಶೇಷ ವಿಷಯಗಳು ॥

ಇಂದ್ರಾವರುಣಾ—ಈ ಶಬ್ದದ ಅಂತ್ಯಾಕ್ಷರವು ದೀರ್ಘವಾಗಿದ್ದರೂ ಸಂಹಿತಾಪಾಠದಲ್ಲಿ ಛಂದಸ್ಸಿನ ಅನುಕೂಲಕ್ಕೋಸ್ಕರ ಹ್ರಸ್ವವಾಗಿರುವುದು. ಇದರಂತೆ ಈ ಸೂಕ್ತದ ೩ನೆಯ ಋಕ್ಕಿನಲ್ಲಿಯೂ ೮, ೯ ನೆಯ ಋಕ್ಕುಗಳಲ್ಲಿಯೂ ಈ ಶಬ್ದದ ಅಂತ್ಯಾಕ್ಷರವು ಸಂಹಿತಾಪಾಠದಲ್ಲಿ ಹ್ರಸ್ವವಾಗಿಯೇ ಇರುವುದು.

ಚಿತ್ರಾಯ—ಮಣಿಮುಕ್ತಾದಿರೂಪೇಣ ವಿವಿಧಾಯ ಎಂದು ಭಾಷ್ಯಕಾರರು ಹೇಳಿರುವರು. ಹೀಗೆ ಹೇಳುವುದಕ್ಕಿಂತಲೂ ಧನ, ಪಶುಸಂಪತ್ತು, ಆಹಾರ ಮುಂತಾದ ಉಪಯುಕ್ತವಾದ ನಾನಾವಿಧ ಸಂಪತ್ತುಗಳು ಎಂದು ಹೇಳುವುದು ಸಮಂಜಸವಾಗಿರುವುದು. ಆ ಕಾಲದ ಋಷಿಗಳಿಗೆ ಮಣಿಮುಕ್ತಾದಿ ಧನಗಳಿಗಿಂತ ಗೋವುಗಳು, ಆಹಾರಗಳು, ಶತ್ರುಜಯ ಮುಂತಾದವುಗಳ ಅವಶ್ಯಕತೆಯು ಹೆಚ್ಚಾಗಿತ್ತೆಂದು ಧಾರಾಳವಾಗಿ ಹೇಳಬಹುದು.

ಜಿಗ್ಯುಷಃ—ಜಿ ಜಯೇ । ಶತ್ರುವಿಷಯೇ ಸುಷ್ಠು ಜಯಯುಕ್ತಾನ್ ॥ ಶತ್ರುಗಳನ್ನು ಜಯಿಸುವ ಶಕ್ತಿಯುಳ್ಳವರನ್ನಾಗಿ ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

ಇನ್ದ್ರಾವರುಣಾ-ಇನ್ದ್ರಶ್ಚ ವರುಣಶ್ಚ ಎಂದು ದ್ವಂದ್ವಸಮಾಸ. ಸಂಬೋಧನ ದ್ವಿವಚನ ಔ ಪ್ರತ್ಯಯಕ್ಕೆ **ಸುಪಾಂ ಸುಲುಕ್—,** (ಪಾ.ಸೂ.೭-೧-೩೯) ಎಂಬುದರಿಂದ ಆಕಾರಾದೇಶ. **ದೇವತಾದ್ವಂದ್ವೇ ಚ** (ಪಾ.ಸೂ. ೬-೩-೨೬) ಎಂಬುದರಿಂದ ಪೂರ್ವಪದಕ್ಕೆ ಆನಙ್ ಆದೇಶ. ಪಾದಾದಿಯಲ್ಲಿರುವುದರಿಂದ ಅಷ್ಟಮಿಕಾಮನ್ತ್ರಿತಾನುದಾತ್ತ ಬರುವುದಿಲ್ಲ. ಷಾಷ್ಠವಾದ ಆಮನ್ತ್ರಿತಸ್ಯಚ ಎಂಬುದರಿಂದ ಆದ್ಯುದಾತ್ತ ಬರುವುದು. ಸಂಹಿತಾಕಾಲದಲ್ಲಿ ಛಾಂದಸವಾಗಿ ಹ್ರಸ್ವ ಬರುವುದು.

ಹುವೇ—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಇದು ಞಿತ್ತಾದ್ದರಿಂದ ಫಲವು ಕರ್ತೃವಿಗೆ ಸೇರುವಾಗ ಆತ್ಮನೇಪದಿ, ಲಟ್, ಅದರ ಸ್ಥಾನದಲ್ಲಿ ಉತ್ತಮಪುರುಷ ಏಕವಚನ ಇಟ್. ಹ್ವೇ+ಇ ಕರ್ತರಿಶಪ್ ಎಂಬುದರಿಂದ ಶಪ್. ಬಹುಲಂಛಂದಸಿ (ಪಾ.ಸೂ. ೨-೪-೭೩) ಅದಿಪ್ರಭೃತಿಭ್ಯಃ ಶಪಃ ಎಂಬುದರಿಂದ ಶಪಃ ಎಂಬುದು ಇಲ್ಲಿ ಅನುವೃತ್ತವಾಗುವುದು. ಏವಂಚ ಛಂದಸ್ಸಿನಲ್ಲಿ ಶಪ್‌ಗೆ ಬಹುಲವಾಗಿ ಲುಕ್ ಬರುವುದು ಎಂಬುದರಿಂದ ಶಪ್‌ಗೆ ಲುಕ್ ಬರುವುದು. ಬಹುಲಂ ಛಂದಸಿ (ಪಾ.ಸೂ. ೬-೧-೩೪) ಇಲ್ಲಿ ಹ್ವಃಸ್ಸಂಪ್ರಸಾರಣಮ್ (ಪಾ. ಸೂ. ೬-೧-೩೨) ಎಂಬ ಸೂತ್ರವು ಅನುವೃತ್ತವಾಗುವುದು. ಛಂದಸ್ಸಿನಲ್ಲಿ ಹ್ವೇಞ್ ಧಾತುವಿಗೆ ಬಹುಲವಾಗಿ ಸಂಪ್ರಸಾರಣ ಬರುವುದು ಎಂಬುದರಿಂದ ಸಂಪ್ರಸಾರಣ, ವಕಾರಕ್ಕೆ ಉಕಾರ. **ಸಂಪ್ರಸಾರಣಾಚ್ಚ** (ಪಾ. ಸೂ. ೬-೧-೧೦೮) ಎಂಬುದರಿಂದ ಪೂರ್ವರೂಪ, ಹು+ಇ **ಅಚಿಶ್ನುಧಾತು- ಭ್ರುವಾಂಯ್ವೋರಿ- ಯುಙುವ ಙೌ** (ಪಾ.ಸೂ. ೬-೪-೭೭) ಎಂಬುದರಿಂದ ಉವಙಾದೇಶ. ಹುವೇ ಎಂದಾಗುವುದು. ಇಲ್ಲಿ ಹು+ಇ ಎಂದಿರುವಾಗ **ಹುಶ್ನುವೋಸ್ಸಾರ್ವಧಾತುಕೇ** (ಪಾ. ಸೂ. ೬-೪-೮೭) ಅಜಾದಿಯಾದ ಸಾರ್ವಧಾತುಕ ಪ್ರತ್ಯಯ ಪರದಲ್ಲಿರುವಾಗ ಹು ಧಾತು, ಶ್ನು ಪ್ರತ್ಯಯಾಂತವಾದ ಅನೇಕಾಚ್ಕವಾದ ಅಙ್ಗ ಇವುಗಳ ಸಂಯೋಗ

ಪೂರ್ವಕವಲ್ಲದ ಉಕಾರಕ್ಕೆ ಯಣಾದೇಶ ಬರುವುದು ಎಂಬುದರಿಂದ ಯಣಾದೇಶವು ಬರಲಿ ಎಂದು ಶಂಕಿಸಬಹುದು. ಆದರೆ ಹುಶ್ನುವೋಃ ಎಂಬ ಸೂತ್ರದಲ್ಲಿ ಪ್ರತಿಪದೋಕ್ತವಾದ ಹುವಿಗೆ ಗ್ರಹಣವೇ ಹೊರತು ಲಾಕ್ಷಣಿಕವಾದ ಹುವಿಗೆ ಗ್ರಹಣವಿಲ್ಲ. ಲಕ್ಷಣವೆಂದರೆ ಸೂತ್ರ. ಲಕ್ಷಣೇನ ನಿವೃತ್ತಂ ಲಾಕ್ಷಣಿಕಮ್ ಅಂದರೆ ಸೂತ್ರಸಹಾಯದಿಂದ ನಿಷ್ಪನ್ನವಾದುದಕ್ಕೆ ಲಾಕ್ಷಣಿಕವೆಂದು ಹೆಸರು. ಇಲ್ಲಿಯು ಹುವು, ಹ್ವೇ ಧಾತುವಿನ ಮೇಲೆ ಬಹುಲಂಛಂದಸೀ ತ್ಯಾದಿ ಸೂತ್ರಸಹಾಯದಿಂದ ನಿಷ್ಪನ್ನವಾಗಿರುವುದು. ಆದ್ದರಿಂದ ಲಾಕ್ಷಣಿಕ. ಹು ದಾನಾದನಯೋಃ ಎಂಬ ಹು ಧಾತುವು ಹೀಗೆ ಸೂತ್ರಸಹಾಯದಿಂದ ನಿಷ್ಪನ್ನವಾಗುವುದಿಲ್ಲ. ಆದ್ದರಿಂದ ಅದು ಲಾಕ್ಷಣಿಕವಲ್ಲ. ಹುಶ್ನುವೋಃ ಎಂಬಲ್ಲಿ ಹು ಎಂಬುದರಿಂದ ಹು ದಾನಾದನಯೋಃ ಎಂಬ ಪ್ರತಿಪದೋಕ್ತವಾದ ಧಾತುವಿಗೆ ಗ್ರಹಣವು **ಲಕ್ಷಣ-ಪ್ರತಿಪದೋಕ್ತಯೋಃಪ್ರತಿಪದೋಕ್ತಸ್ಯಗ್ರಹಣಮ್** (ಪರಿಭಾ. ೧೧೫) ಎಂಬುದರಿಂದ ಬರುವುದು. ಆದ್ದರಿಂದ ಲಾಕ್ಷಣಿಕವಾದ ಹ್ವೇಞ್ ಧಾತುವಿನಿಂದ ಉಂಟಾದ ಹುಗೆ ಹುಶ್ನುವೋಃ ಎಂಬುದರಿಂದ ಯಣ್ ಬರುವುದಿಲ್ಲ. **ಏರನೇಕಾಚಃ** ಎಂಬುದರಿಂದ ಅನುವೃತ್ತವಾದ ಅನೇಕಾಚಃ ಎಂಬುದು ಅಂಗಕ್ಕೆ ವಿಶೇಷಣ, ಶ್ನು ಪ್ರತ್ಯಯವಾದ್ದರಿಂದ ತದಂತಲಾಭ. ಹುಶ್ನುವೋಃ ಎಂಬುದು ಅಂಗಸ್ಯ ಎಂದು ಅನುವೃತ್ತವಾಗಿ ವಿಪರಿಣತವಾದ ಅಂಗಯೋಃ ಎಂಬುದಕ್ಕೆ ವಿಶೇಷಣ. **ಯೇನವಿಧಿಸ್ತದಂತಸ್ಯ** (ಪಾ ಸೂ. ೧-೧-೭೨) ಎಂಬುದರಿಂದ ತದನ್ತಲಾಭ. ತಥಾಚ ಹು ಧಾತ್ವಂತವೂ, ಶ್ನು ಪ್ರತ್ಯಯಾಂತವೂ, ಶ್ನು ಪ್ರತ್ಯಯಾಂತಾಂತವೂ ಅನೇಕಾಚ್ಕವೂ ಆದ ಯಾವ ಅಂಗವಿದೆಯೋ ಆ ಅಂಗದ ಸಂಯೋಗಪೂರ್ವಕವಲ್ಲದ ಉಕಾರಕ್ಕೆ ಯಣಾದೇಶ ಬರುವುದು ಎಂದು ಹುಶ್ನುವೋಃ ಎಂಬುದಕ್ಕೆ ಅರ್ಥವು. ಏವಂಚ ಹು+ಇ ಎಂದಿರುವಾಗ ಅಂಗವು ಅನೇಕಾಚ್ಕವಾಗುವುದಿಲ್ಲವಾದ್ದರಿಂದ ಹುಶ್ನುವೋಃ ಎಂದು ವಿಹಿತವಾದ ಯಣಾದೇಶಕ್ಕೆ ಪ್ರಾಪ್ತಿಯೇ ಇಲ್ಲವು. ಉಪಾಯಸ್ಯ ಉಪಾಯಾಂತರಾದೂಷಕತ್ವಮ್ ಎಂಬ ನ್ಯಾಯದಿಂದಲೋ ಅನೇಕಾಚ್ಕಗ್ರಹಣಪ್ರತ್ಯಾಖ್ಯಾನಪಕ್ಷದಿಂದಲೋ ವೇದಭಾಷ್ಯಕಾರರು ಲಕ್ಷಣಪ್ರತಿಪದೋಕ್ತ ಪರಿಭಾಷೆಯಿಂದ ಯಣಾದೇಶಕ್ಕೆ ವಾರಣೆ ಮಾಡಿರುವರು ಎಂದು ಹೇಳಿದರೆ ಸರಿಹೋಗಬಹುದು. ಇಟ್ ಪ್ರತ್ಯಯ ಆದ್ದರಿಂದ ಪ್ರತ್ಯಯಸ್ವರದಿಂದ ಉದಾತ್ತ. **ಅನುದಾತ್ತಂಸರ್ವಮಪಾದಾದೌ** (ಪಾ.ಸೂ. ೮-೧-೧೮) ಎಂದು ಪರ್ಯುದಾಸ ಮಾಡಿರುವುದರಿಂದ ಪಾದಾದಿಯಲ್ಲಿರುವ ಹುವೇ ಎಂಬುದಕ್ಕೆ **ತಿಙ್ಙತಿಙಃ** ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ.

**ರಾಧಸೇ**—ರಾಧ ಸಂಸಿದ್ಧೌ. ಇದರ ಮುಂದೆ **ಸರ್ವಧಾತುಭ್ಯೋऽಸುನ್** (ಉ. ಸೂ. ೪-೭೨೮) ಎಂಬುದರಿಂದ ಅಸುನ್. **ಞ್ನಿತ್ಯಾದಿರ್ನಿತ್ಯಮ್** ಎಂಬ ನಿತ್ಸ್ವರದಿಂದ ಆದ್ಯುದಾತ್ತ.

**ಅಸ್ಮಾನ್**—ಅಸ್ಮದ್ ಶಬ್ದದ ಮುಂದೆ ದ್ವಿತೀಯಾಬಹುವಚನ ಶಸ್, ಅಸ್ಮದ್+ಶಸ್ ಶಕಾರಕ್ಕೆ ಇತ್ಸಂಜ್ಞೆ ಲೋಪ. ಅಸ್ಮದ್+ಅಸ್. **ದ್ವಿತೀಯಾಂಚ** (ಪಾ.ಸೂ. ೭-೨-೮೭) ದ್ವಿತೀಯಾ ವಿಭಕ್ತಿಪರದಲ್ಲಿರುವಾಗ ಯುಷ್ಮದ್ ಅಸ್ಮದ್ ಶಬ್ದಗಳ ಕೊನೆಯ ವರ್ಣಕ್ಕೆ ಆಕಾರ ಬರುವುದು ಎಂಬುದರಿಂದ ದಕಾರಕ್ಕೆ ಆಕಾರ ಅಸ್ಮ+ಆ+ಅಸ್, ಸವರ್ಣದೀರ್ಘ ಅಸ್ಮಾ+ಅಸ್ **ಶಸೋನ** (ಪಾ. ಸೂ. ೭-೧-೨೯) ಯುಷ್ಮದ್ ಅಸ್ಮದ್ ಶಬ್ದಗಳ ಮುಂದೆ ಇರುವ ಶಸ್‌ಗೆ ನಕಾರಾದೇಶ ಬರುವುದು ಎಂಬುದರಿಂದ ಬರುವ ನಕಾರಾದೇಶವು ಅಲೋನ್ತ್ಯಸ್ಯ ಎಂಬುದಕ್ಕೆ ಅಪವಾದವಾದ **ಆದೇಃಪರಸ್ಯ** (ಪಾ. ಸೂ. ೧-೧-೫೪) ಎಂಬುದರಿಂದ ಅಸ್‌ನ ಅಕಾರಕ್ಕೆ ಬರುವುದು. 'ಅಸ್ಮಾ ನ್ ಸ್ **ಸಂಯೋಗಾನ್ತಸ್ಯಲೋಪಃ** (ಪಾ. ಸೂ. ೮-೨-೨೩) ಎಂಬುದರಿಂದ ಸಕಾರಕ್ಕೆ ಲೋಪ ಅಸ್ಮಾನ್ ಎಂದಾಗುವುದು.

**ಜಿಗ್ಯುಷಃ**—ಜಿ ಜಯೇ ಧಾತು. ಲಿಟ್ ಅದಕ್ಕೆ **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಕ್ವಸು ಆದೇಶ. **ಲಿಟಿಧಾತೋರನಭ್ಯಾಸಸ್ಯ** (ಪಾ. ಸೂ. ೬-೧-೮) ಎಂಬುದರಿಂದ ದ್ವಿತ್ವ. ಜಿ+ಜಿ+ವಸ್ **ಸನ್ ಲಿಟೋರ್ಜೇಃ** (ಪಾ. ಸೂ. ೭-೩-೫೭) ಸನ್, ಲಿಟ್ ಏತನ್ನಿಮಿತ್ತಕವಾದ ಜಿ ಧಾತು ಸಂಬಂಧಿಯಾದ ಯಾವ ಅಭ್ಯಾಸವಿದೆಯೋ ಅದರ ಮುಂದೆ ಇರುವುದಕ್ಕೆ ಕುತ್ವ (ಕವರ್ಗ) ಬರುವುದು ಎಂಬುದರಿಂದ ಜಕಾರಕ್ಕೆ ಗಕಾರ, ಜಿ+ಗಿ+ವಸ್, ವಸ್ ಪ್ರತ್ಯಯವು ವಲಾದಿಯಾದ ಆರ್ಧಧಾತುಕ. ಆದ್ದರಿಂದ **ಆರ್ಧಧಾತುಕ-ಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂಬುದರಿಂದ ಇಡಾಗಮವುಪ್ರಾಪ್ತವಾಗುವುದು. ಅದಕ್ಕೆ ಏಕಾಚ ಉಪದೇಶೇಽನುದಾತ್ತಾತ್ (ಪಾ.ಸೂ. ೭-೨-೧೦) ಎಂಬುದರಿಂದ ನಿಷೇಧ ಬರುವುದು. ಪುನಃ **ಕೃಸೃಭೃ-ವೃಸ್ತುದ್ರುಸ್ರುಶ್ರುವೋ ಲಿಟಿ,** (ಪಾ ಸೂ. ೭-೨-೧೩) ಪ್ರಕೃತ್ಯಾಶ್ರಯ ಪ್ರತ್ಯಯಾಶ್ರಯಗಳಾದ ಎಷ್ಟು ಇಣ್ನಿಷೇಧ-ಗಳಿರುವುವೋ ಅವು ಲಿಟ್ಟಿನಲ್ಲಿ ಬರುವುದಾದರೆ ಕೃಸೃ ಮೊದಲಾದ ಧಾತುಗಳಿಗೇ ಬರುವುವು. ಕ್ರ್ಯಾದಿ ಭಿನ್ನ ವಾದ ಧಾತುಗಳ ಮುಂದೆ ಇರುವ ಲಿಟ್ಟಿಗೆ ಇಡಾಗಮನಿಷೇಧ ಬರುವುದಿಲ್ಲ ಎಂಬ ಕ್ರಾದಿನಿಯಮದಿಂದ ಕ್ರಾದಿ ಯಲ್ಲದೇ ಇರುವ ಜಿ ಧಾತುವಿನ ಮುಂದೆ ಇರುವ ವಸ್ ಎಂಬ ಲಿಟ್ಟಿಗೆ ಇಡಾಗಮಕ್ಕೆ ನಿಷೇಧಬರುವುದಿಲ್ಲ. ಏವಂಚ ಇಡಾಗಮವು ಪ್ರಾಪ್ತವಾಗುವುದು. ಇದಕ್ಕೆ **ವಸ್ವೇಕಾಜಾದ್ಘಸಾಮ್** (ಪಾ ಸೂ. ೭-೨-೬೭) ವಸ್‌ಗೆ ಇಡಾ ಗಮ ಬರುವ ಪಕ್ಷಕ್ಕೆ ದ್ವಿತ್ವಾನಂತರ ಏಕಾಚ್ಕವಾದ ಧಾತು, ಆದಂತಧಾತು, ಘಸ್ಲೃ ಧಾತು ಇವುಗಳ ಮುಂದೆ ಇರುವ ವಸ್‌ಗೆ ಮಾತ್ರ ಇಡಾಗಮ ಬರುವುದು. ಇವುಗಳಿಗಿಂತಲೂ ಬೇರೆ ಧಾತುವಿನ ಮುಂದೆ ಇರುವ ವಸ್‌ಗೆ ಇಡಾ ಗಮ ಬರುವುದಿಲ್ಲ ಎಂಬ ನಿಯಮದಿಂದ ನಿವೃತ್ತಿ ಬರುವುದು. ಜಿಗಿವಸ್ ಎಂಬುದರ ಮುಂದೆ ದ್ವಿತೀಯಾಬಹು ವಚನ ಶಸ್, ಜಿಗಿವಸ್+ಅಸ್ **ಯಚಿಭಮ್** (ಪಾ ಸೂ. ೧-೪-೧೮) ಎಂಬುದರಿಂದ ಭ ಸಂಜ್ಞೆ ಬರುವುದು. **ವಸೋಸ್ಸಂಪ್ರಸಾರಣಮ್** (ಪಾ.ಸೂ. ೬-೪-೩೧) ವಸುಪ್ರತ್ಯಯಾಂತವಾದ ಭಸಂಜ್ಞಕಾಂಗಕ್ಕೆ ಸಂಪ್ರಸಾರಣ ಬರುವುದು ಎಂಬುದರಿಂದ ಸಂಪ್ರಸಾರಣ, ವಕಾರಕ್ಕೆ ಉಕಾರ, **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವ ರೂಪ, ಜಿಗಿ+ಉಸ್+ಅಸ್ **ಏರನೇಕಾಚಃ** (ಪಾ.ಸೂ. ೬-೪-೮೨) ಎಂಬುದರಿಂದ, ಯಣಾದೇಶ, ಇಕಾ ರಕ್ಕೆ ಯಕಾರ, **ಆದೇಶಪ್ರತ್ಯಯಯೋಃ** (ಪಾ.ಸೂ. ೮-೩-೫೯) ಎಂಬುದರಿಂದ ಸಕಾರಕ್ಕೆ ಷಕಾರ, ವಸ್ ಪ್ರತ್ಯಯದ ಸಕಾರಕ್ಕೆ **ಶಾಸಿವಸಿಘಸೀನಾಂಚ** (ಪಾ. ಸೂ. ೮-೩-೬೦) ಎಂಬುದರಿಂದ ಷತ್ವ ಬರುವುದಿಲ್ಲ ವೆಂದು ಹಿಂದೆಯೇ ಸ್ಪಷ್ಟಪಡಿಸಲಾಗಿರುವುದು. ರುತ್ವ ವಿಸರ್ಗಗಳು. ಜಿಗ್ಯುಷಃಕೃತಮ್ ಎಂದಿರುವಾಗ **ಕಃಕರ, ತ್ಕರತಿ, ಕೃಧಿ, ಕೃತೇಷ್ವನದಿತೇಃ** (ಪಾ. ಸೂ. ೮-೩-೫೦) ಅದಿತಿ ಶಬ್ದದ ಮುಂದೆ ಇಲ್ಲದೇ ಇರುವ ವಿಸರ್ಗಕ್ಕೆ ಕಃ ಮೊದಲಾದುವು ಪರದಲ್ಲಿರುವಾಗ ಸತ್ವ ಬರುವುದು ಎಂಬುದರಿಂದ ಸತ್ವ. ಯದ್ಯಪಿ ವ್ಯಾಖ್ಯಾನಕಾರರು ಕೃತ ಎಂಬುದು ಕ್ತಪ್ರತ್ಯಯಾಂತ ಎಂದು ವ್ಯಾಖ್ಯಾನಮಾಡಿರುವರು. ಇದನ್ನೂ ಗ್ರಹಿಸಿದರೆ ಬಾಧಕವೇನೂ ಇಲ್ಲ. ಕ್ತಾಂತವನ್ನೇ ಗ್ರಹಿಸಬೇಕು ಎಂಬುದಕ್ಕೆ ಪರ್ಯಾಪ್ತವಾದ ಪ್ರಮಾ ಣವು ದೊರೆಯದು. ಕೃತ ಎಂಬುದಕ್ಕೆ ಕೃತ ಎಂಬ ಆನುಪೂರ್ವಿಕವಾದ ಶಬ್ದ ಎಂದರ್ಥ. ಇಂತಹ ಆನುಪೂರ್ವಿಯುಕ್ತ ಪ್ರತ್ಯಯ ಬಂದಾಗಲೂ ಇರುವುದು, ಮುಂದೆ ವಿವರಿಸುವಂತೆ ಪ್ರಕ್ರಿಯೆಯಾದಾಗಲೂ ಇರು ವುದು. ಇಲ್ಲಿ ಅವಿಶೇಷಾತ್ ಎರಡಕ್ಕೂ ಗ್ರಹಣವು—ಜಿಗ್ಯುಷಃ : ಎಂಬಲ್ಲಿ ಪ್ರತ್ಯಯಸ್ವರದಿಂದ ಉಕಾರ ಉದಾತ್ತ.

**ಕೃತಮ್**—ಡುಕೃಞ್ ಕರಣೇ, ಧಾತು. ಲೋಟ್, ಮಧ್ಯಮಪುರುಷದ್ವಿವಚನ ಥಸ್ **ಲೋಟೋ ಲಙ್ವತ್** (ಪಾ.ಸೂ. ೩-೪-೮೫) ಎಂಬುದರಿಂದ ಲಙ್ವದ್ಭಾವ, **ತಸ್ಥಸ್ಥಮಿಪಾಂತಾಂತಂತಾಮಃ** (ಪಾ.ಸೂ.

೩-೪-೧೦೧) ಎಂಬುದರಿಂದ ಥಸ್‌ಗೆ ತಮ್ ಆದೇಶ, ಕೃತಮ್ ಕರ್ತರಿಶಪ್ ಎಂಬುದರಿಂದ ಬರುವ ಶಪ್‌ಗೆ ಬಹುಲಂ ಛಂದಸಿ (ಪಾ.ಸೂ. ೨-೪-೭೩) ಎಂಬುದರಿಂದ ಲುಕ್. ಯದ್ಯಪಿ ಇಲ್ಲಿ ಕರ್ತರಿ ಶಪ್ ಎಂಬುದಕ್ಕೆ ಅಪವಾದ ತನಾದಿಕೃಞ್ಭ್ಯ ಉಃ (ಪಾ.ಸೂ. ೩-೧-೭೯) ಎಂಬುದರಿಂದ ಉವಿಕರಣ ಪ್ರಾಪ್ತವಾಗುವುದು. ಆದರೆ ಸರ್ವೇವಿಧಯಶ್ಛಂದಸಿ ವಿಕಲ್ಪ್ಯಂತೇ (ಪರಿಭಾ. ೭೫) ಎಂಬುದರಿಂದ ವಿಕಲ್ಪವಾದ್ದರಿಂದ ಬರುವುದಿಲ್ಲ. ಈ ಕ್ಲೇಶಗಳನ್ನು ಪರಿಹರಿಸಲು ಕ್ತಾಂತವೆಂದು ಹೇಳಬಹುದು. ಆ ಪಕ್ಷದಲ್ಲಿ ವಿವಕ್ಷಿತವಾದ ಸರ್ವಾನುದಾತ್ತ ಸಿದ್ಧವಾಗುವುದಿಲ್ಲ. ಆದ್ದರಿಂದ ಕ್ತಾಂತವೆಂದು ವರ್ಣಿಸಲಾಗುವುದಿಲ್ಲ. ತಿಙನ್ತವೆಂದು ಪೂರ್ವೋಕ್ತ ರೀತಿಯಲ್ಲಿ ಉಪಪಾದಿಸಿದರೆ ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತ ಬರುವುದು. ॥ ೭ ॥

॥ ಸಂಹಿತಾಪಾಠಃ ॥

ಇಂದ್ರಾ॑ವರುಣ॒ ನೂ ನು ವಾ॒ಂ ಸಿಷಾ॑ಸಂತೀಷು ಧೀ॒ಷ್ವಾ ।
ಅ॒ಸ್ಮಭ್ಯಂ॒ ಶರ್ಮ॑ ಯಚ್ಛತಂ ॥ ೮ ॥

॥ ಪದಪಾಠಃ ॥

ಇಂದ್ರಾ॑ವರುಣಾ । ನು । ನು । ವಾ॒ಂ । ಸಿಸಾ॑ಸಂತೀಷು । ಧೀ॒ಷು । ಆ ॥
ಅ॒ಸ್ಮಭ್ಯ॑ಂ । ಶರ್ಮ॑ । ಯ॒ಚ್ಛ॒ತ॒ಂ ॥ ೮ ॥

॥ ಸಾಯಣಭಾಷ್ಯಂ ॥

ಇಂದ್ರಾವರುಣಾ ಹೇ ಇಂದ್ರಾವರುಣೌ ಧೀಷ್ವಸ್ಮದೀಯಬುದ್ಧಿಷು ವಾಂ ಯುವಾಂ ಸಿಷಾಸಂತೀಷು ಸನಿತುಂ ಸಂಭಕ್ತುಂ ಸಮ್ಯಕ್ ಸೇವಿತುಮಿಚ್ಛಂತೀಷು ತದಾನೀಮಾಙ್ಸಮಂತಾದಸ್ಮಭ್ಯಂ ಶರ್ಮ ಸುಖಂ ನೂ ನು ಅತಿಶಯೇನ ಕ್ಷಿಪ್ರಂ ಯಚ್ಛತಂ । ದತ್ತಂ । ಷಡ್ವಿಂಶತಿಸಂಖ್ಯಾಕೇಷು ಕ್ಷಿಪ್ರನಾಮಸು ನು ಮಕ್ಷ್ವಿತಿ ಪಠಿತಂ । ತಸ್ಯ ದ್ವಿರಾವೃತ್ತಿಬಲಾದತಿಶಯೋ ಲಭ್ಯತೇ ॥ ಇಂದ್ರಾವರುಣಾ । ಉಕ್ತಂ । ನೂ ನು । ಋಚಿ ತುನುಘಮಕ್ಷುತಙ್ಕುತ್ರೋರುಷ್ಯಾಣಾಂ । ಪಾ । ೬-೩-೧೩೩ । ಇತಿ ಪೂರ್ವಸ್ಯ ದೀರ್ಘತ್ವಂ । ಸಿಷಾಸಂತೀಷು । ವನ ಷಣ ಸಂಭಕ್ತೌ । ಧಾತ್ವಾದೇಃ ಷಃ ಸಃ । ಇಚ್ಛಾಯಾಂ ಸನ್ । ದ್ವಿರ್ಭಾವೋ ಹಲಾದಿಶೇಷಃ । ಸನ್ಯತ ಇತೀತ್ವಂ । ಆದೇಶಪ್ರತ್ಯಯಯೋರಿತಿ ಷತ್ವಂ । ಸನೀವಂತೇತ್ಯಾದಿನಾ । ಪಾ. ೭-೨-೪೯ । ವಿಕಲ್ಪಾದಿಡಭಾವಃ । ಜನಸನಖನಾಂ ಸಞ್ಝಲೋಃ । ಪಾ. ೬-೪-೪೨ । ಇತಿ ನಕಾರಸ್ಯಾಕಾರಃ । ಉಪರಿ ಲಟಃ ಶತೃ । ಕರ್ತರಿ ಶಪ್ । ಉಗಿತಶ್ಚೇತಿ ಙೀಪ್ । ಶಪ್ಶ್ಯನೋರ್ನಿತ್ಯಂ । ಪಾ. ೭-೧-೮೧ । ಇತಿ ನುಮ್ । ಙೀಪಃ ಶಪಶ್ಚ ಪಿತ್ತ್ವಾಚ್ಛತುಶ್ಚ ಲಸಾರ್ವಧಾತುಕತ್ವೇನಾನುದಾತ್ತತ್ವೇ

ಸನೋ೯ ನಿತ್ಸ್ವರದಾದ್ಯುದಾತ್ತತ್ವಂ । ತದೇವ ಶಿಷ್ಯತೇ । ಧೀಷು । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಅಸ್ಮಭ್ಯಂ । ಅಸ್ಮಭ್ಯಮಪ್ರತಿಷ್ಕುತಃ । ಋಗ್ವೇ. ೧-೭-೬ । ಇತ್ಯತ್ರೋಕ್ತಂ । ಯಚ್ಛತಂ । ದಾಣ್ ದಾನೇ । ಶಪಿ ಪಾಘ್ರೇತ್ಯಾದಿನಾ ಯಚ್ಛಾದೇಶಃ ॥

॥ ಪ್ರತಿಪದಾರ್ಥ ॥

ಇಂದ್ರಾವರುಣಾ—ಎಲೈ ಇಂದ್ರವರುಣರೇ । ಧೀಷು—(ನಮ್ಮ) ಬುದ್ಧಿಗಳು। ವಾಂ—ನಿಮ್ಮಿಬ್ಬರನ್ನು ಸಿಷಾಸಂತೀಷು—ಸೇವಿಸಲು ಇಚ್ಛಿಸುತ್ತಿರಲು । ಅಸ್ಮಭ್ಯಂ—ನಮಗೆ । ಆ—ಎಲ್ಲಾ ದೃಷ್ಟಿಯಿಂದಲೂ । ಶರ್ಮ—ಸುಖವನ್ನು । ನೂ ನು—ಬಹಳ ಶೀಘ್ರವಾಗಿ । ಯಚ್ಛತಂ—ಕೊಡಿ।

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವರುಣರೇ ನಮ್ಮ ಮನಸ್ಸುಗಳು ಸದಾ ನಿಮ್ಮನ್ನು ಸೇವಿಸುವುದರಲ್ಲಿಯೇ ಮಗ್ನವಾಗಿರುತ್ತವೆ. ಎಂದರೆ ನಾವು ನಿಮ್ಮನ್ನು ಸತತವಾಗಿ ಸೇವಿಸುತ್ತಿದ್ದೇವೆ. ಆದ್ದರಿಂದ ನೀವು ಪ್ರಸನ್ನರಾಗಿ ನಮಗೆ ಎಲ್ಲ ವಿಧದಲ್ಲಿಯೂ ಸುಖವನ್ನುಂಟುಮಾಡಿ.

English Translation.

Indra and Varuna, quickly bestow happiness upon us, for our minds are devoted to you both.

॥ ವಿಶೇಷವಿಷಯಗಳು ॥

ನೂ ನು—ನು ಮಂಕ್ಷು ಮೊದಲಾದ ಇಪ್ಪತ್ತಾರು ಕ್ಷಿಪ್ರವಾಚಕಶಬ್ದಗಳ ಮಧ್ಯದಲ್ಲಿ ನು ಎಂಬ ಶಬ್ದವು ಪಠಿತವಾಗಿರುವುದರಿಂದ ನು ಎಂದರೆ ಬೇಗನೆ, ಶೀಘ್ರವಾಗಿ ಎಂದರ್ಥವು. ಇಲ್ಲಿ ನು ಎಂಬ ಶಬ್ದವು ಎರಡಾವರ್ತಿ ಪಠಿತವಾಗಿರುವುದರಿಂದ ಬಹುಬೇಗನೆ, ಸ್ವಲ್ಪವೂ ಕಾಲವಿಳಂಬಮಾಡದೆ ಎಂದರ್ಥವು. ಛಂದಸ್ಸಿನ ಅನುಕೂಲಕ್ಕಾಗಿ ನು ಎಂಬ ಶಬ್ದವು ಪ್ರಥಮದಲ್ಲಿ ದೀರ್ಘವಾಗಿರುವುದು. ಇದಲ್ಲದೆ ಯಾಸ್ಕರು ನು ಎಂಬ ಶಬ್ದಕ್ಕೆ ಇನ್ನೂ ಕೆಲವು ಅರ್ಥಗಳನ್ನು ಹೇಳಿರುವರು—

ನು ಇತ್ಯೇಷೋಽನೇಕಕರ್ಮಾ ।
ಇದಂ ನು ಕರಿಷ್ಯತೀತಿ ಹೇತ್ವಪದೇಶೇ ।
ಅಥಾಪ್ಯುಪಮಾರ್ಥೇ ಭವತಿ ॥ (ನಿ. ೧-೪)

ನು ಎಂಬ ಶಬ್ದವು ಅನೇಕ ಕರ್ಮಗಳನ್ನೂ ಕಾರಣವನ್ನೂ ಸೂಚಿಸುವುದು ಮತ್ತು ಉಪಮಾರ್ಥದಲ್ಲಿಯೂ ಉಪಯೋಗಿಸಲ್ಪಡುವುದು. ಹೇಗೆಂದರೆ—ವೃಕ್ಷಸ್ಯ ನು ತೇ (ಋ. ಸಂ. ೬-೨೪-೩) ಎಂದರೆ ವೃಕ್ಷಸ್ಯೇವ ತೇ ಎಂದು.

**ಸಿಷಾಸಂತೀಷು ಧೀಷು**—ನಮ್ಮ ಬುದ್ಧಿಗಳು ಅಥವಾ ಮನಸ್ಸು ನಿಮ್ಮನ್ನು ಸೇವಿಸಲು ಹಾತೊರೆಯುತ್ತಿರುವವು, ಅಪೇಕ್ಷಿಸುತ್ತಿರುವವು. ಇಲ್ಲಿ ಪ್ರಥಮಾವಿಭಕ್ತ್ಯರ್ಥದಲ್ಲಿ ಸಪ್ತಮೀವಿಭಕ್ತಿಪ್ರಯೋಗವು. ಇಂತಹ ಪ್ರಯೋಗವು ಆಧುನಿಕಸಂಸ್ಕೃತದಲ್ಲಿಯೂ ವಿಶೇಷವಾಗಿ ಬಳಕೆಯಲ್ಲಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಇನ್ದ್ರಾವರುಣಾ**—ಪೂರ್ವಮಂತ್ರದಲ್ಲಿ ವ್ಯಾಖ್ಯಾತವಾಗಿದೆ.

**ನೂ ನು**—**ಋಚಿತುನುಘಮಕ್ಷುತಙ್ಕುತ್ರೋರುಷ್ಯಾಣಾಮ್** (ಪಾ.ಸೂ. ೬-೩-೧೩೩) ಎಂಬುದರಿಂದ ಮೊದಲನೆಯ ನುಗೆ ದೀರ್ಘ.

**ಸಿಷಾಸನ್ತೀಷು** – ವನ ಷಣ ಸಂಭಕ್ತೌ ಧಾತು, **ಧಾತ್ವಾದೇಃ ಷಃಸಃ** ಎಂಬುದರಿಂದ ಷಣ ಧಾತುವಿನ ಷಕಾರಕ್ಕೆ ಸಕಾರ, ಣತ್ವಕ್ಕೆ ನಿವೃತ್ತಿ. **ಧಾತೋಃ ಕರ್ಮಣಃಸಮಾನಕರ್ತೃಕಾದಿಚ್ಛಾಯಾಂವಾ** (ಪಾ. ಸೂ. ೩-೧-೭) ಎಂಬುದರಿಂದ ಸನಿತುಮಿಚ್ಛತಿ ಎಂದು ವಿವಕ್ಷಿಸಿದಾಗ ಸನ್‌ಧಾತುವಿನ ಮುಂದೆ ಸನ್‌ಪ್ರತ್ಯಯ ಸನ್+ಸ. ಸನ್ಯಙೋಃ (ಪಾ.ಸೂ. ೬-೧-೯) ಎಂಬುದರಿಂದ ದ್ವಿತ್ವ, ಸನ್ ಸನ್ + ಸ **ಹಲಾದಿಃ ಶೇಷಃ** (ಪಾ. ಸೂ. ೭-೪-೬೦) ಎಂಬುದರಿಂದ ಅಭ್ಯಾಸದ ಮೊದಲನೆಯ ಸನ್‌ನ ನಕಾರಕ್ಕೆ ನಿವೃತ್ತಿ, **ಸನ್ಯತಃ** (ಪಾ. ಸೂ. ೭-೪-೯) ಎಂಬುದರಿಂದ ಅಭ್ಯಾಸದ ಅಕಾರಕ್ಕೆ ಇತ್ವ ಸಿಸನ್+ಸ, ಸನ್ ಪ್ರತ್ಯಯವು ಆರ್ಧಧಾತುಕ, ಆದ್ದರಿಂದ **ಆರ್ಧಧಾತುಕಸ್ಯೇಡ್ವಲಾದೇಃ** (ಪಾ.ಸೂ. ೩-೨-೩೫) ಎಂಬುದರಿಂದ ಇಡಾಗಮ ಪ್ರಾಪ್ತವಾಗುವುದು. ಆದರೂ **ಸನೀವನ್ತರ್ಧಭ್ರಸ್ಜದಮ್ಭುಶ್ರಿಸ್ವೃಯೂರ್ಣುಭರಜ್ಞಪಿಸನಾಮ್** (ಪಾ. ಸೂ ೭-೨-೪೯) ಇವ್ ಎಂಬುದನ್ನು ಕೊನೆಯಲ್ಲಿ ಹೊಂದಿರುವ ಧಾತುಗಳು ಋಧ, ಭ್ರಸ್ಜ, ದಮ್ಭು, ಶ್ರಿ, ಸ್ವೃ, ಯು, ಊರ್ಣು, ಭರ, ಜ್ಞಪಿ, ಸನ್, ಈ ಧಾತುಗಳ ಮುಂದೆ ಇರುವ ಸನ್‌ಗೆ ಇಡಾಗಮವು ವಿಕಲ್ಪವಾಗಿ ಬರುವುದು ಎಂಬುದರಿಂದ ಸನ್ ಧಾತುವಿನ ಮುಂದೆ ಇರುವ ಸನ್ ಪ್ರತ್ಯಯಕ್ಕೆ ಇಡಾಗಮವು ವಿಕಲ್ಪವಾಗಿ ವಿಹಿತವಾಗಿರುವುದು. ಆದ್ದರಿಂದ ಪಾಕ್ಷಿಕವಾಗಿ ಇಡಾಗಮ ಬರುವುದಿಲ್ಲ. **ಜನಸನಖನಾಂಸನ್‌ಝಲೋಃ** (ಪಾ.ಸೂ. ೬-೪-೪೨) ಝಲಾದಿಯಾದ ಸನ್ ಪ್ರತ್ಯಯ ಪರದಲ್ಲಿರುವಾಗಲೂ, ಝಲಾದಿಯಾದ ಕಿತ್ ಅಥವಾ ಙಿತ್ ಆದ ಪ್ರತ್ಯಯ ಪರದಲ್ಲಿರುವಾಗಲೂ ಜನ್, ಸನ್, ಖನ್ ಈ ಮೂರು ಧಾತುಗಳ ಕೊನೆಯ ವರ್ಣಕ್ಕೆ ಆಕಾರಾದೇಶ ಬರುವುದು ಎಂಬುದರಿಂದ ನಕಾರಕ್ಕೆ ಆಕಾರ, ಸವರ್ಣದೀರ್ಘ, ಸಿಸಾ+ಸ. **ಆದೇಶಪ್ರತ್ಯಯಯೋಃ** (ಪಾ.ಸೂ. ೮-೩-೫೯) ಎಂಬುದರಿಂದ ಎರಡನೆಯ ಸಕಾರಕ್ಕೆ ಷಕಾರ ಸಿಷಾಸ, ಇದಕ್ಕೆ **ಸನಾದ್ಯನ್ತಾಧಾತವಃ** (ಪಾ.ಸೂ. ೩-೧-೩೨) ಎಂಬುದರಿಂದ ಧಾತುಸಂಜ್ಞೆ ಇದೆ. ಇದರ ಮುಂದೆ **ಲಟ್ ಲಟಶ್ಶತೃಶಾನಚಾವಪ್ರಥಮಾಸಮಾನಾಧಿಕರಣೇ** (ಪಾ.ಸೂ. ೩-೨-೧೨೪) ಎಂಬುದರಿಂದ ಶತೃಪ್ರತ್ಯಯ, ಕರ್ತರಿಶಪ್ ಎಂಬುದರಿಂದ ಶಪ್ ಸಿಷಾಸ+ಅ+ಅತ್ **ಅತೋಗುಣೇ** ಎಂಬುದರಿಂದ ಎರಡಾವರ್ತಿ ಪರರೂಪ, ಸಿಷಾಸತ್. **ಉಗಿತಶ್ಚ** (ಪಾ.ಸೂ. ೪-೧-೬) ಎಂಬುದರಿಂದ ಙೀಪ್ ಸಿಷಾಸತ್ + ಈ, **ಶಪ್‌ಶ್ಯನೋರ್ನಿತ್ಯಮ್** (ಪಾ.ಸೂ. ೭-೧-೮೧) ಶಪ್ ಶ್ಯನ್ ಇವುಗಳ ಸಂಬಂಧಿಯಾದ ಯಾವ ಅಕಾರವಿದೆಯೋ ಅದರ ಮುಂದೆ ಇರುವ ಯಾವ ಶತೃಪ್ರತ್ಯಯಾವಯವವಿದೆಯೋ ಅದನ್ನೇ ಕೊನೆಯಲ್ಲಿ ಹೊಂದಿರುವ ಅಂಗಕ್ಕೆ ಶೀ ಪರವಾಗಿರುವಾಗಲೂ ನದೀಸಂಜ್ಞಕವಾದ ವರ್ಣ ಪರವಾಗಿರುವಾಗಲೂ ನಿತ್ಯವಾಗಿ ನುಮಾಗಮ ಬರು

ವುದು ಎಂಬುದರಿಂದ ನುವಾಗನು. ಅದು ಮಿದಚೋಽನ್ತ್ಯಾತ್ಪರಃ (ಪಾ.ಸೂ. ೧-೧-೪೭) ಎಂಬುದರಿಂದ ಅಂತ್ಯವಾದ ಸ್ವರದ ಮುಂದೆ ಬರುವುದು. ಸಿಷಾಸನ್ತೀ ಎಂದಾಗುವುದು ಙೀಪ್, ಶಪ್ ಎರಡೂ ಪಿತ್ತಾದ್ದರಿಂದ ಅನುದಾತ್ತೌ ಸುಪ್ಪಿತೌ ಎಂಬುದರಿಂದ ಅನುದಾತ್ತ. ಶತೃಪ್ರತ್ಯಯವು ಅದುಪದೇಶವಾದ ಶಪ್ ಗಿಂತಲೂ ಪರದಲ್ಲಿರುವುದು. ಆದ್ದರಿಂದ ತಾಸ್ಯನುದಾತ್ತೇತ್—, (ಪಾ.ಸೂ. ೬-೧-೧೮೬) ಎಂಬುದರಿಂದ ಅನುದಾತ್ತ, ಸನ್ ಪ್ರತ್ಯಯವು ನಿತ್. ಆದ್ದರಿಂದ ಞ್ನಿತ್ಯಾದಿರ್ನಿತ್ಯಮ್ (ಪಾ.ಸೂ. ೬-೧-೧೯೭) ಎಂಬುದರಿಂದ ಸಿಷಾಸ ಎಂಬುದು ಆದ್ಯುದಾತ್ತ, ಇದೇ ಸ್ವರವೇ ನಿಲ್ಲುವುದು ಸಪ್ತಮೀ ಬಹುವಚನದಲ್ಲಿ ಸಿಷಾಸನ್ತೀಸು ಎಂದಾಗುವುದು.

ಧೀಷು—ಧ್ಯೈ ಚಿನ್ತಾಯಾಂ. ಧ್ಯಾಯತೇಸ್ಸಂಪ್ರಸಾರಣಂಚ (ಪಾ.ಸೂ. ೩,೨-೧೭೮) ಧ್ಯೈ ಧಾತುವಿಗೆ ಸಂಪ್ರಸಾರಣವೂ ಅದರ ಮುಂದೆ ಕ್ವಿಪ್ ಪ್ರತ್ಯಯವೂ ಬರುವುದು ಎಂಬುದರಿಂದ ಕ್ವಿಪ್ ಅದಕ್ಕೆ ಲೋಪ, ಸಂಪ್ರಸಾರಣ=ಯಕಾರಕ್ಕೆ ಇಕಾರ ಸಂಪ್ರಸಾರಣಾಚ್ಚ (ಪಾ.ಸೂ. ೬-೧-೧೦೦) ಎಂಬುದರಿಂದ ಪೂರ್ವರೂಪ. ಧಿ ಎಂದಾಯ್ತು. ಹಲಃ, (ಪಾ.ಸೂ. ೬-೪-೨) ಎಂಬುದರಿಂದ ದೀರ್ಘ ಧೀ ಎಂದಾಗುವುದು. ಇದರ ಮುಂದೆ ಸಪ್ತಮೀ ಬಹುವಚನ ಸುಪ್ ಧೀ+ಸು ಆದೇಶಪ್ರತ್ಯಯಯೋಃ ಷತ್ವ ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ (ಪಾ ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಯು ಉದಾತ್ತ.

ಅಸ್ಮಭ್ಯಮ್—ಅಸ್ಮಭ್ಯಮಪ್ರತಿಷ್ಕುತಃ (ಋ.ಸಂ. ೧-೭-೬) ಎಂಬಲ್ಲಿ ವಿವೃತವಾಗಿದೆ.

ಯಚ್ಛತಮ್—ದಾಣ್ ದಾನೇ, ಲೋಟ್, ಮಧ್ಯಮಪುರುಷದ್ವಿವಚನ ಥಸ್, ಲೋಟೋಲಙ್ವತ್ ಎಂಬುದರಿಂದ ಲಙ್ವದ್ಭಾವ, ತಸ್ಥಸ್ಥಮಿಪಾಂ ಎಂಬುದರಿಂದ ತಮ್ ಆದೇಶ, ಕರ್ತರಿಶಪ್, ಪಾಘ್ರಾಧ್ಮಾ (ಪಾ.ಸೂ. ೭-೩-೭೮) ಎಂಬುದರಿಂದ ದಾಣ್ ಎಂಬುದಕ್ಕೆ ಯಚ್ಛ ಆದೇಶ, ಯಚ್ಛತಮ್ ಎಂದಾಗುವುದು ॥ ೮ ॥

॥ ಸಂಹಿತಾಪಾಠಃ ॥

ಪ್ರ ವಾಮಶ್ನೋತು ಸುಷ್ಟುತಿರಿಂದ್ರಾವರುಣಾ ಯಾಂ ಹುವೇ ।
ಯಾಮೃಧಾಥೇ ಸಧಸ್ತುತಿಂ ॥ ೯ ॥

॥ ಪದಪಾಠಃ ॥

ಪ್ರ । ವಾಂ । ಅಶ್ನೋತು । ಸುಽಸ್ತುತಿಃ । ಇಂದ್ರಾವರುಣಾ । ಯಾಂ । ಹುವೇ ।
ಯಾಂ । ಋಧಾಥೇ ಇತಿ । ಸಧಽಸ್ತುತಿಂ ॥ ೯ ॥

॥ ಸಾಯಣಭಾಷ್ಯಂ ॥

ಇಂದ್ರಾವರುಣಾ ಹೇ ಇಂದ್ರಾವರುಣೌ ಯೋಮಸ್ಮತ್ಕರ್ತೃಕಾಂ ಶೋಭನಸ್ತುತಿಂ ಪ್ರತಿ ಹುವೇ ಯುವಾಮುಭಾವಾಹ್ವಯಾಮಿ । ಕಿಂಚ ಸಧಸ್ತುತಿಂ ಯುವಯೋರುಭಯೋಃ ಸಾಹಿತ್ಯೇನ ಕ್ರಿಯಮಾಣಾಯಾಃ ಸ್ತವಕ್ರಿಯಾಯಾ ಯಾಂ ಸುಷ್ಟುತಿಂ ಪ್ರತಿಲಭ್ಯ ಋಧಾಥೇ ಯುವಾಂ ವರ್ಧಾಥೇ । ತಾದೃಶೀ ಸುಷ್ಟುತಿಃ ಶೋಭನಸ್ತುತಿಹೇತುಭೂತ ಋಕ್ಸಮೂಹೋ ವಾಮಶ್ನೋತು । ಯುವಾ ವ್ಯಾಪ್ನೋತು ॥ ಅಶ್ನೋತು । ಅಶೂ ವ್ಯಾಪ್ತೌ । ಲೋಟೋ ವ್ಯತ್ಯಯೇನ ತಿಪ್ । ಸ್ವಾದಿಭ್ಯಃ ಶ್ನುಃ । ಸುಷ್ಟುತಿಃ । ನ ವಿಂಧೇ ಅಸ್ಯ ಸುಷ್ಟುತಿಂ । ಋಗ್ವೇ. ೧-೭-೭ । ಇತ್ಯತ್ರೋಕ್ತಂ । ಇಂದ್ರಾವರುಣಾ । ಹುವೇ । ಉಕ್ತೇ । ಅತ್ರ ತು ಯದ್ವೃತ್ತಯೋಗಾನ್ನ ನಿಘಾತಃ । ಋಧಾಥೇ । ಋಧು ವೃದ್ಧೌ । ಲಟ್ । ವ್ಯತ್ಯಯೇನಾತ್ಮನೇಪದಂ । ಮಧ್ಯಮದ್ವಿವಚನೇ ಶ್ನೋರ್ಬಹುಲಂ ಛಂದಸೀತಿ ಲುಕ್ । ಪ್ರತ್ಯಯಸ್ವರೇಣಾಕಾರ ಉದಾತ್ತಃ । ಯಚ್ಛಬ್ದಯೋಗಾನ್ನ ನಿಘಾತಃ । ಸಧಸ್ತುತಿಂ । ಸಹ ಸ್ತುತಿರ್ಯಸ್ಯಾಂ ಸುಷ್ಟುತೌ ಸಾ ಸಧಸ್ತುತಿಃ । ಅತ್ರ ಸುಷ್ಟುತಿರಿತ್ಯನ್ಯಪದಾರ್ಥೇ ಸ್ತುತಿಶಬ್ದಸ್ಯ ಸ್ತೂಯತೇ ಽನಯೇತಿ ಕರಣಸಾಧನತ್ವೇನ ಋಕ್ಪರತ್ವೇಽಯಂ ಸ್ತುತಿಶಬ್ದೋ ಭಾವಸಾಧನತಯಾ ಸ್ತವನಕ್ರಿಯಾಪರಃ । ತಸ್ಮಿನ್ಭಾವಸಾಧನತ್ವೇನ ಕ್ರಿಯಾಪರೇಽಯಂ ಕರಣಸಾಧನತಯಾ ಋಕ್ಪರ ಇತಿ ಸಮಸ್ಯಮಾನಪದಾರ್ಥಾದನ್ಯಃ । ಸಹೇತ್ಯತ್ರ ಹಕಾರಸ್ಯ ವ್ಯತ್ಯಯೇನ ಧಕಾರಃ । ಸಹಶಬ್ದ ಏವಮಾದಿತ್ವಾದಂತೋದಾತ್ತಃ । ಬಹುವ್ರೀಹಿತ್ವೇನ ಪೂರ್ವಪದಪ್ರಕೃತಿಸ್ವರತ್ವಂ ॥ ೩೩ ॥ ॥ ೪ ॥

॥ ಪ್ರತಿಪದಾರ್ಥ ॥

ಇಂದ್ರಾವರುಣ—ಇಂದ್ರ ಮತ್ತು ವರುಣರೇ । ಯಾಂ—ಯಾವ ನಮ್ಮ ಸ್ತುತಿಯನ್ನುದ್ದೇಶಿಸಿ । ಹುವೇ—(ನಿಮ್ಮಿಬ್ಬರನ್ನು) ಆಹ್ವಾನಿಸುತ್ತೇವೋ । (ಮತ್ತು) ಯಾಂ ಸಧಸ್ತುತಿಂ—ನಿಮ್ಮಿಬ್ಬರನ್ನು ಏಕೀಕರಿಸಿ ಮಾಡುವ ಯಾವ ಸ್ತೋತ್ರದಿಂದ । ಋಧಾಥೇ—ಅಭಿವೃದ್ಧಿಹೊಂದುತ್ತೀರೋ (ಸಂತೋಷಿಸುತ್ತೀರೋ) । ಸುಷ್ಟುತಿಃ—(ಅಂತಹ) ಸ್ತೋತ್ರರೂಪವಾದ (ಋಕ್ಸಮೂಹವು) । ವಾಮಶ್ನೋತು—ನಿಮ್ಮನ್ನು ಹೊಂದಲಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವರುಣರೇ, ನಾವು ನಿಮ್ಮನ್ನು ಸ್ತುತಿಯಿಂದ ಪ್ರತ್ಯೇಕವಾಗಿ ಆಹ್ವಾನಿಸುತ್ತೇವೆ. ಒಂದೊಂದುವೇಳೆ ನಿಮ್ಮಿಬ್ಬರನ್ನೂ ಒಟ್ಟಾಗಿ ಉದ್ದೇಶಿಸಿ ಸ್ತುತಿಸುತ್ತೇವೆ. ಇಂತಹ ಸ್ತೋತ್ರಗಳಿಂದ ನೀವು ಸಂತುಷ್ಟರಾಗಿ.

English Translation

May the earnest praise which I offer to Indra and Varuna reach you both; and may you fulfil that prayer addressed to you both.

॥ ವಿಶೇಷವಿಷಯಗಳು ॥

ಅಶ್ನೋತು— ವ್ಯಾಪ್ನೋತು—ನಾವು ಮಾಡುವ ಸ್ತೋತ್ರವು ನಿಮ್ಮನ್ನು ಸೇರಲಿ, ನಿಮಗೆ ಪ್ರಿಯವಾಗಲಿ ಎಂದರ್ಥವು.

ಋಧಾಥೇ—ಋಧು ವೃದ್ಧೌ । ವರ್ಧೇಥಾಂ ॥ ನೀವು, ನಾವು ಮಾಡಿದ ಸ್ತುತಿಯನ್ನು ಮೆಚ್ಚಿರಿ, ಅಥವಾ ಪ್ರಶಂಸೆಮಾಡಿರಿ, ಅದರಿಂದ ಸಂತೃಪ್ತರಾಗಿರಿ ಇತ್ಯಾದ್ಯರ್ಥಗಳನ್ನು ಹೇಳಬಹುದು.

ಸಧಸ್ತುತಿಂ—ಸಹ ಸ್ತುತಿರ್ಯಸ್ಯಾಂ ಸುಷ್ಟುತೌ ಸಾ ಸಧಸ್ತುತಿಃ ॥ ಇಬ್ಬರನ್ನು ಸೇರಿಸಿ ಒಟ್ಟಾಗಿ ಸ್ತುತಿಸುವ ಸ್ತೋತ್ರಕ್ಕೆ ಸಧಸ್ತುತಿಯೆಂದು ಹೆಸರು. ಇಲ್ಲಿ ಇಂದ್ರ ಮತ್ತು ವರುಣ ಎಂಬ ಇಬ್ಬರು ದೇವತೆಗಳನ್ನು ಒಟ್ಟಾಗಿ ಸೇರಿಸಿ ಸ್ತೋತ್ರಮಾಡಲ್ಪಟ್ಟಿರುವುದು.

॥ ವ್ಯಾಕರಣಪ್ರಕ್ರಿಯಾ ॥

ಅಶ್ನೋತು—ಅಶೂ ವ್ಯಾಪ್ತೌ ಲೋಟ್ ಅನುದಾತ್ತೇತ್ತು, ಆದ್ದರಿಂದ 'ಅನುದಾತ್ತಙಿತಆತ್ಮನೇಪದಮ್' ಎಂಬುದರಿಂದ ಆತ್ಮನೇಪದವು ಯದ್ಯಪಿ ಬರಬೇಕು. ಆದರೂ ವ್ಯತ್ಯಯೋಬಹುಲಂ (ಪಾ. ಸೂ. ೩-೧-೮೫) ಎಂಬುದರಿಂದ ವ್ಯತ್ಯಯವಾಗಿ ಪರಸ್ಮೈಪದ ತಿಪ್ರತ್ಯಯವು ಬರುವುದು. ಸ್ವಾದಿಭ್ಯಃ ಶ್ನುಃ (ಪಾ.ಸೂ. ೩-೧-೭೩) ಎಂಬುದರಿಂದ ಶ್ನು ವಿಕರಣ. ಅಶ್+ನು+ತಿ ಗುಣ ಏರುಃ ಎಂಬುದರಿಂದ ಇಕಾರಕ್ಕೆ ಉಕಾರ.

ಸುಷ್ಟುತಿಃ—ನ ವಿಂಧೇ ಅಸ್ಯ ಸುಷ್ಟುತಿಮ್ (ಋ. ಸಂ. ೧-೭-೭) ಎಂಬಲ್ಲಿ ವ್ಯಾಖ್ಯಾತವಾಗಿದೆ.

ಇಂದ್ರಾವರುಣಾ, ಹುವೇ—ಇದೇ ಸೂಕ್ತ ೭ನೇ ಮಂತ್ರದಲ್ಲಿ ನೋಡಿರಿ. ಅಲ್ಲಿ ಪದಾದಿಯಲ್ಲಿರುವುದರಿಂದ ಸರ್ವಾನುದಾತ್ತ ಬರುವುದಿಲ್ಲ ಎಂದು ಹೇಳಲಾಗಿದೆ ಇಲ್ಲಿಯಾದರೋ।ಯದ್ವೃತ್ತಾನ್ನಿತ್ಯಮ್ (ಪಾ.ಸೂ. ೮-೧-೬೬) ಯಾವ ಪದದಲ್ಲಿ ಯಚ್ಛಬ್ದವಿದೆಯೋ ಅದರ ಮುಂದೆ ಇರುವ ತಿಙಂತವು ಅನುದಾತ್ತವಾಗುವುದಿಲ್ಲ ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ.

ಋಧಾಥೇ—ಋಧು ವೃದ್ಧೌ ಲಟ್ ವ್ಯತ್ಯಯದಿಂದ ಆತ್ಮನೇಪದ ಪ್ರಥಮಪುರುಷ ದ್ವಿವಚನ ಆಥಾಮ್. ಟಿತಆತ್ಮನೇಪದಾನಾಂಟೇರೇ (ಪಾ. ಸೂ. ೩-೪-೭೯) ಎಂಬುದರಿಂದ ಟಿಗೆ (ಆಮ್) ಏತ್ವ. ಸ್ವಾದಿಭ್ಯಃಶ್ನುಃ ಎಂಬುದರಿಂದ ಶ್ನು ಪ್ರತ್ಯಯ. ಅದಕ್ಕೆ ಬಹುಲಂ ಛಂದಸಿ (ಪಾ. ಸೂ. ೨-೪-೭೩) ಎಂಬುದರಿಂದ ಲುಕ್. ಋಧಾಥೇ ಎಂದಾಗುವುದು. ಪ್ರತ್ಯಯಸ್ವರದಿಂದ ಅಂದರೆ ಆದ್ಯುದಾತ್ತಶ್ಚ (ಪಾ. ಸೂ. ೩-೧-೩) ಎಂಬುದರಿಂದ ಆಥೇ ಪ್ರತ್ಯಯದ ಆದಿಯಲ್ಲಿರುವ ಆಕಾರ ಉದಾತ್ತ. ಯಾವೃಧಾಥೇ ಎಂದು ಯಚ್ಛಬ್ದಘಟಿತವಾದ ಪದದ ಮುಂದೆ ಇರುವುದು. ಆದ್ದರಿಂದ ಯದ್ವೃತ್ತಾನ್ನಿತ್ಯಮ್ ಎಂದು ನಿಷೇಧ ಬರುವುದರಿಂದ ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ.

ಸಧಸ್ತುತಿಮ್—ಸಹ ಸ್ತುತಿರ್ಯಸ್ಯಾಂ ಸುಷ್ಟುತೌ ಸಾ ಸಧಸ್ತುತಿಃ ಎಂದು ಅನೇಕಮನ್ಯಪದಾರ್ಥೇ (ಪಾ. ಸೂ. ೨-೨-೨೪) ಎಂಬುದರಿಂದ ಬಹುವ್ರೀಹಿ, ಅನ್ಯಪದಾರ್ಥದಲ್ಲಿ ಅನೇಕ ಸುಬಂತಗಳು ಸಮಾಸವನ್ನು ಹೊಂದುವುವು. ಇವಕ್ಕೆ ಬಹುವ್ರೀಹಿ ಎಂದು ಹೆಸರು ಎಂದು ಸೂತ್ರಾರ್ಥ. ಅನ್ಯಪದಾರ್ಥ ಎಂದರೆ ಯಾವ ಪದಗಳಿಗೆ ಸಮಾಸವನ್ನು ಹೇಳುವೆವೊ ಅದಕ್ಕಿಂತಲೂ ಬೇರೆಯಾದ ಪದದ ಅರ್ಥದಲ್ಲಿರತಕ್ಕದ್ದು ಎಂದು ಅರ್ಥ. ಇಲ್ಲಿ ಸಹ ಸ್ತುತಿ ಎಂಬಿವುಗಳಿಗೆ ಸಮಾಸವನ್ನು ಹೇಳುವೆವು. ಆದ್ದರಿಂದ ಸ್ತುತಿ ಎಂಬುದು ಹೇಗೆ ಅನ್ಯಪದಾರ್ಥವಾಗುವುದು ಎಂದು ಶಂಕೆಗೆ ಅವಕಾಶವಿಲ್ಲ. ಸಮಾಸದಲ್ಲಿ ಸೇರಿರುವ ಸ್ತುತಿ ಎಂಬುದರ ಅರ್ಥವೇ

ಬೇರೆ. ಅನ್ಯಪದಾರ್ಥವಾಗಿ ವಿವಕ್ಷಿತವಾದ ಸುಷ್ಟುತಿಶಬ್ದೋಪಸ್ಥಿತವಾದ ಅರ್ಥವೇ ಬೇರೆ. ಹೇಗೆಂದರೆ ಅನ್ಯ ಪದಾರ್ಥವಾದ ಸುಷ್ಟುತಿ ಎಂಬಲ್ಲಿ ಸ್ತುತಿ ಶಬ್ದಕ್ಕೆ ಸ್ತೂಯತೇ ಅನಯಾ ಇತಿ ಸ್ತುತಿಃ, ಕರಣಾರ್ಥದಲ್ಲಿ ಕ್ತಿನ್ ಪ್ರತ್ಯಯವಾದಿ ಸ್ತೋತ್ರಕರಣವಾದ (ಸಾಧನವಾದ) ಋಕ್ಕು ಎಂದು ಅರ್ಥವಾದರೆ ಸಮಾಸದಲ್ಲಿ ಸೇರಿದ ಸ್ತುತಿ ಶಬ್ದಕ್ಕೆ ಸ್ತವನಂಸ್ತುತಿಃ ಎಂದು ಭಾವಾರ್ಥದಲ್ಲಿ ಕ್ತಿನ್ ಬಂದು ಸ್ತವನಕ್ರಿಯೆ ಎಂದು ಅರ್ಥ. ಅನ್ಯಪದಾ ರ್ಥದಲ್ಲಿ ಸ್ತುತಿ ಶಬ್ದವು ಭಾವಾರ್ಥ ಕ್ತಿನ್ ಪ್ರತ್ಯಯಾನ್ತವಾಗಿ ಸ್ತವನ ಹೇಳುವುದು ಎಂದು ವಿವಕ್ಷಿಸಿದರೆ, ಸಮಾ ಸದಲ್ಲಿ ಸೇರಿರುವ ಸ್ತುತಿ ಶಬ್ದವು ಕರಣಾರ್ಥಕ ಕ್ತಿನ್ ಪ್ರತ್ಯಯಾಂತವಾಗಿ ಋಕ್ ಎಂಬ ಅರ್ಥವನ್ನು ಪ್ರತಿಪಾದಿ ಸುವುದು ಏವಂಚ ಸಮುಸ್ಯಮಾನವಾದ ಪದಪ್ರತಿಪಾದ್ಯಾರ್ಥಕ್ಕಿಂತಲೂ ಸುಷ್ಟುತಿಪದೋಪಸ್ಥಾಪಿತವಾದ ಅರ್ಥವು ಬೇರೆಯಾದ್ದರಿಂದ ಅದು ಅನ್ಯಪದಾರ್ಥವಾಗುವುದು. ಸಹ ಎಂಬಲ್ಲಿ ಹಕಾರಕ್ಕೆ ವ್ಯತ್ಯಯದಿಂದ ಧಕಾರ. ಏವಾದೀನಾಮನ್ತಃ (ಫಿ. ಸೂ. ೪-೮೨) ಎಂಬುದರಿಂದ ಸಹ ಶಬ್ದವು ಅಂತೋದಾತ್ತ. ಬಹು ವ್ರೀಹಿ ಸಮಾಸ ಬಂದನಂತರವೂ ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್ (ಪಾ.ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುವುದು ॥ ೯ ॥

## ಹದಿನೆಂಟನೆಯ ಸೂಕ್ತವು.



॥ ಸಾಯಣಭಾಷ್ಯಂ ॥

ಪಂಚಮೇಽನುವಾಕೇ ಷಟ್ ಸೂಕ್ತಾನಿ । ತತ್ರ ಸೋಮಾನಮಿತ್ಯಾದಿಕಂ ನವರ್ಚಂ ಪ್ರಥಮಂ ಸೂಕ್ತಂ । ಋಷಿಶ್ಛಂದಸೀ ಪೂರ್ವವತ್ । ದೇವತಾವಿಶೇಷಸ್ತ್ವನುಕ್ರಮ್ಯತೇ । ಸೋಮಾನಮಿತಿ ಪಂಚ ಬ್ರಾಹ್ಮಣಸ್ಪತ್ಯಾಶ್ಚತುರ್ಥ್ಯಾಮಿಂದ್ರಶ್ಚ ಸೋಮಶ್ಚ ಪಂಚಮ್ಯಾಂ ದಕ್ಷಿಣಾ ಚಾನ್ಯಾಃ ಸಾದಸಸ್ಪತ್ಯಾ ನಾರಾಶಂಸೀ ವಾಂತ್ಯೇತಿ । ಸೂಕ್ತಗತಾ ಆದ್ಯಾಃ ಪಂಚರ್ಚೋ ಬ್ರಹ್ಮಣಸ್ಪತಿ ದೇವತಾಕಾಃ । ತಾಸಾಂ ಮಧ್ಯೇ ಸ ಘಾ ವೀರ ಇತ್ಯೇತಸ್ಯಾಶ್ಚತುರ್ಥ್ಯಾ ಋಚೋ ಬ್ರಹ್ಮಣಸ್ಪತಿರಿಂದ್ರಶ್ಚ ಸೋಮಶ್ಚೇತಿ ತಿಸ್ರೋ ದೇವತಾಃ । ತ್ವಂ ತಮಿತ್ಯೇತಸ್ಯಾಃ ಪಂಚಮ್ಯಾ ದಕ್ಷಿಣಯಾ ಸಹ ಪೂರ್ವೋಕ್ತಾಸ್ತಿಸ್ರೋ ದೇವತಾಃ । ಷಷ್ಠೀಮಾರಭ್ಯ ತಿಸೃಣಾಂ ಸದಸಸ್ಪತಿರ್ದೇವತಾ । ನರಾಶಂಸಮಿತ್ಯೇತಸ್ಯಾ ನವಮ್ಯಾಃ ಸದಸಸ್ಪತಿರ್ನರಾ-ಶಂಸೋ ವಾ ವಿಕಲ್ಪ್ಯತೇ ॥ ವಿನಿಯೋಗಸ್ತು ಪೂರ್ವವತ್ ॥

ಅನುವಾದವು— ಈ ಸೂಕ್ತದಿಂದ ಐದನೆಯ ಅನುವಾಕವು ಪ್ರಾರಂಭವಾಗುವುದು. ಈ ಅನುವಾಕ ದಲ್ಲಿ ಆರು ಸೂಕ್ತಗಳಿರುವವು. ಅವುಗಳಲ್ಲಿ ಸೋಮಾನಂ ಎಂಬ ಒಂಭತ್ತು ಋಕ್ಕಿನ ಸೂಕ್ತವೇ ಮೊದಲನೆ ಯದು. ಋಷಿಛಂದಸ್ಸುಗಳು ಹಿಂದಿನ ಸೂಕ್ತದಂತೆ. ದೇವತಾವಿಶೇಷವು ಅನುಕ್ರಮಣಿಕೆಯಲ್ಲಿ ಈ ರೀತಿ ಹೇಳ ಲ್ಪಟ್ಟಿರುವುದು. "ಸೋಮಾನಮಿತಿ ಪಂಚ ಬ್ರಾಹ್ಮಣಸ್ಪತ್ಯಾಶ್ಚತುರ್ಥ್ಯಾಮಿಂದ್ರಶ್ಚ ಸೋಮಶ್ಚ ಪಂಚಮ್ಯಾಂ ದಕ್ಷಿಣಾ ಚಾನ್ಯಾಃ ಸಾದಸಸ್ಪತ್ಯಾ ನಾರಾಶಂಸೀ ವಾಂತ್ಯೇತಿ" ಎಂದರೆ ಐದನೆಯ ಅನುವಾಕದ ಸೋಮಾನಂ ಎಂಬ ಸೂಕ್ತದಲ್ಲಿ ಮೊದಲ ಮೂರು ಋಕ್ಕುಗಳಿಗೆ ಬ್ರಹ್ಮಣಸ್ಪತಿಯೂ, ನಾಲ್ಕನೆಯ ಋಕ್ಕಿಗೆ ಬ್ರಹ್ಮಣಸ್ಪತಿ, ಇಂದ್ರ, ಸೋಮ ಎಂಬುವರೂ, ಐದನೆಯ ಋಕ್ಕಿಗೆ ಬ್ರಹ್ಮಣಸ್ಪತಿ, ದಕ್ಷಿಣಾ ಎಂಬುವರೂ, ಆರರಿಂದ ಎಂಟರವರೆಗಿನ ಋಕ್ಕುಗಳಿಗೆ ಸದಸಸ್ಪತಿಯೂ, ಒಂಭತ್ತನೆಯ ಋಕ್ಕಿಗೆ ಸದಸಸ್ಪತಿ ಅಥವಾ ನರಾಶಂಸನು, ದೇವತೆಗಳು ಎಂದು

ಹೇಳಲ್ಪಟ್ಟಿದೆ. ಸೂಕ್ತದ ಮೊದಲನೆಯ ಐದು ಋಕ್ಕುಗಳೂ ಬ್ರಹ್ಮಣಸ್ಪತಿದೇವತಾಕವಾದವು. ಅವುಗಳಲ್ಲಿ ಸ ಘಾ ವೀರಃ ಎಂಬ ನಾಲ್ಕನೆಯ ಋಕ್ಕಿಗೆ ಬ್ರಹ್ಮಣಸ್ಪತಿ, ಇಂದ್ರ, ಸೋಮ ಎಂದು ಮೂವರು ದೇವತೆಗಳಿರುವರು. ತ್ವಂ ತಂ ಎಂಬ ಐದನೆಯ ಋಕ್ಕಿಗೆ ದಕ್ಷಿಣಾ ಎಂಬ ದೇವತೆಯೊಡನೆ ಹಿಂದಿನ ಋಕ್ಕಿನ ಮೂವರು ದೇವತೆಗಳು. ಆರರಿಂದ ಎಂಟರವರೆಗಿನ ಮೂರು ಋಕ್ಕುಗಳಿಗೆ ಸದಸಸ್ಪತಿಯು ದೇವತೆಯು. ನರಾಶಂಸಂ ಎಂಬ ಒಂಭತ್ತನೆಯ ಋಕ್ಕಿಗೆ ಸದಸಸ್ಪತಿ ಅಥವಾ ನರಾಶಂಸನು ವಿಕಲ್ಪದಿಂದ ದೇವತೆಯು. ವಿನಿಯೋಗವು ಹಿಂದಿನಂತೆ ॥

॥ ಓಂ ॥

## ಸೂಕ್ತ—೧೮

॥ ಮಂಡಲ—೧ ॥ ಅನುವಾಕ—೫ ॥ ಸೂಕ್ತ—೧೮ ॥

॥ ಅಷ್ಟಕ—೧ ॥ ಅಧ್ಯಾಯ—೧ ॥ ವರ್ಗ ೩೪, ೩೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೧–೯ ॥

॥ ಋಷಿಃ—ಮೇಧಾತಿಥಿಃ ಕಾಣ್ವಃ ॥

॥ ದೇವತಾ— ೧–೩ ಬ್ರಹ್ಮಣಸ್ಪತಿಃ ॥ ೪. ಬ್ರಹ್ಮಣಸ್ಪತಿರಿಂದ್ರಶ್ಚ ಸೋಮಶ್ಚ ।
೫. ಬ್ರಹ್ಮಣಸ್ಪತಿರ್ದಕ್ಷಿಣಾ ಚ । ೬–೮. ಸದಸಸ್ಪತಿಃ । ೯. ಸದಸಸ್ಪತಿರ್ನರಾಶಂಸೋ ವಾ ॥

ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಸೋಮಾನಂ ಸ್ವರಣಂ ಕೃಣುಹಿ ಬ್ರಹ್ಮಣಸ್ಪತೇ ।
ಕಕ್ಷೀವಂತಂ ಯ ಔಶಿಜಃ ॥ ೧ ॥

॥ ಪದಪಾಠಃ ॥

ಸೋಮಾನಂ । ಸ್ವರಣಂ । ಕೃಣುಹಿ । ಬ್ರಹ್ಮಣಃ । ಪತೇ ॥
ಕಕ್ಷೀವಂತಂ । ಯಃ । ಔಶಿಜಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಬ್ರಹ್ಮಣಸ್ಪತೇ ಏತನ್ನಾಮಕದೇವ ಸೋಮಾನಮಭಿಷವಸ್ಯ ಕರ್ತಾರಂ ಮಾಮನುಷ್ಠಾತಾರಂ ಸ್ವರಣಂ ದೇವೇಷು ಪ್ರಕಾಶನವಂತಂ ಕೃಣುಹಿ। ಕುರು। ಅತ್ರ ದೃಷ್ಟಾಂತಃ। ಕಕ್ಷೀವಂತಮೇತನ್ನಾಮಕಮೃಷಿಂ। ಇವಶಬ್ದೋಽತ್ರಾಧ್ಯಾಹರ್ತವ್ಯಃ। ಕಕ್ಷೀವಾನ್ಯಥಾ ದೇವೇಷು ಪ್ರಸಿದ್ಧಸ್ತದ್ವದಿತ್ಯರ್ಥಃ। ಯಃ ಕಕ್ಷೀವಾನೃಷಿರೌಶಿಜ ಉಶಿಜಃ ಪುತ್ರಃ। ತಮಿವೇತಿ ಪೂರ್ವತ್ರ ಯೋಜನಾ। ಕಕ್ಷೀವತೋಽನುಷ್ಠಾತೃಷು ಮುನಿಷು ಪ್ರಸಿದ್ಧಸ್ತೈತ್ತಿರೀಯೈರಾಮ್ನಾಯತೇ। ಏವಂ ವೈ ಪರ ಆಟ್ಣಾರಃ ಕಕ್ಷೀವಾꣳ ಔಶಿಜೋ ವೀತಹವ್ಯಃ ಶ್ರಾಯಸಸ್ತ್ರಸದಸ್ಯುಃ ಪೌರುಕುತ್ಸ್ಯಃ ಪ್ರಜಾಕಾಮಾ ಅಚಿನ್ವತ। ತೈ. ಸಂ. ೫-೬-೫-೩। ಇತಿ ಋಗಂತರೇಽಪ್ಯೃಷಿತ್ವಕಥನೇನಾನುಷ್ಠಾತೃತ್ವಪ್ರಸಿದ್ಧಿಃ ಸೂಚ್ಯತೇ। ಅಹಂ ಕಕ್ಷೀವಾꣳ ಋಷಿರಸ್ಮಿ ವಿಪ್ರಃ। ಋಗ್ವೇ. ೪-೨೬-೧। ಇತಿ। ತಸ್ಮಾದಸ್ಯಾನುಷ್ಠಾತಾರಂ ಪ್ರತಿ ದೃಷ್ಟಾಂತತ್ವಂ ಯುಕ್ತಂ। ಸೋಽಯಂ ಮಂತ್ರೋ ಯಾಸ್ಕೇನೈವಂ ವ್ಯಾಖ್ಯಾತಃ। ಸೋಮಾನಂ ಸೋತಾರಂ ಪ್ರಕಾಶನವಂತಂ ಕುರು ಬ್ರಹ್ಮಣಸ್ಪತೇ ಕಕ್ಷೀವಂತಮಿವ ಯ ಔಶಿಜಃ। ಕಕ್ಷೀವಾನ್ಕಕ್ಷ್ಯಾವಾನೌಶಿಜ ಉಶಿಜಃ ಪುತ್ರ ಉಶಿಗ್ವಷ್ಟೇಃ ಕಾಂತಿಕರ್ಮಣೋಽಪಿ ತ್ವಯಂ ಮನುಷ್ಯಕಕ್ಷ ಏವಾಭಿಪ್ರೇತಃ ಸ್ಯಾತ್ತಂ ಸೋಮಾನಂ ಸೋತಾರಂ ಮಾ ಪ್ರಕಾಶನವಂತಂ ಕುರು ಬ್ರಹ್ಮಣಸ್ಪತೇ। ನಿ. ೬-೧೦। ಇತಿ। ಅಸ್ಮಿನ್ಮಂತ್ರೇ ಸೋಮಾನಮಿತಿ ಪಾದೇನ ಕೃಣುಹಿ ಬ್ರಹ್ಮಣ ಇತಿ ಪಾದೇನ ಸೂಚಿತಂ ತಾತ್ಪರ್ಯಂ ತೈತ್ತಿರೀಯಾ ಆಮನಂತಿ। ಸೋಮಾನಂ ಸ್ವರಣಮಿತ್ಯಾಹ ಸೋಮಪೀಥಮೇವಾವ ರುಂಧೇ। ಕೃಣುಹಿ ಬ್ರಹ್ಮಣಸ್ಪತ ಇತ್ಯಾಹ ಬ್ರಹ್ಮವರ್ಚಸಮೇವಾವ ರುಂಧೇ। ತೈ. ಸಂ. ೧-೫-೮-೪। ಇತಿ ॥ ಸೋಮಾನಂ। ಸುನೋತೀತಿ। ಷುಞ್ ಅಭಿಷವೇ। ಅನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್। ದೃಶಿಗ್ರಹಣಸ್ಯ ವಿಧ್ಯಂತರೋಪಸಂಗ್ರಹಣಾರ್ಥತ್ವಾನ್ನಿತ್ತ್ವೇಽಪಿ ನಾದ್ಯುದಾತ್ತತ್ವಂ ಕಿಂತು ಪ್ರತ್ಯಯಸ್ವರ ಏವ। ಉಂಛಾದಿಷು ವಾ ಸೋಮನ್ಶಬ್ದೋ ದ್ರಷ್ಟವ್ಯಃ। ಪಾ. ೬-೧-೧೬೦। ಬಹುಲಗ್ರಹಣಾದೌಣಾದಿಕೋ ವಾ ಮನಿರ್ದ್ರಷ್ಟವ್ಯಃ। ಸ್ವರಣಂ। ಪ್ರಖ್ಯಾತಂ। ಸ್ವೃ ಶಬ್ದೋಪತಾಪಯೋಃ। ಕೃತ್ಯಲ್ಯುಟೋ ಬಹುಲಂ। ಪಾ. ೩-೩-೧೧೩। ಇತಿ ಕರ್ಮಣಿ ಲ್ಯುಟ್। ಲಿತೀತ್ಯಕಾರ ಉದಾತ್ತಃ। ಕೃಣುಹಿ। ಕೃವಿ ಹಿಂಸಾಕರಣಯೋಶ್ಚ। ಇದಿತೋ ನುಮ್ ಧಾತೋರಿತಿ ನುಮ್। ಲೋಟಃ ಸಿಪೋ ಹಿಃ। ಶಪಿ ಪ್ರಾಪ್ತೇ ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ। ತತ್ಸನ್ನಿಯೋಗೇನ ವಕಾರಸ್ಯ ಚಾಕಾರಃ। ತಸ್ಯಾತೋ ಲೋಪಃ ಇತಿ ಲೋಪಃ। ತಸ್ಯ ಸ್ಥಾನಿವದ್ಭಾವಾನ್ನ ಪೂರ್ವಸ್ಯ ಲಘೂಪಧಗುಣಃ। ಹೇರ್ಙಿತ್ತ್ವಾದುಕಾರಸ್ಯ ನ ಗುಣಃ। ಉತಶ್ಚ ಪ್ರತ್ಯಯಾಚ್ಛಂದೋವಾವಚನಂ। ಪಾ. ೬-೪-೧೦೬-೧। ಇತಿ ಹೇರ್ಲುಗ್ನ। ಸತಿ ಶಿಷ್ಟಸ್ವರಬಲೀಯಸ್ತ್ವಮನ್ಯತ್ರ ವಿಕರಣೇಭ್ಯ ಇತಿ ವಚನಾದ್ಧೇರೇವ ಪ್ರತ್ಯಯಸ್ವರೇಣೋದಾತ್ತತ್ವಂ। ಪಾದಾದಿತ್ವಾನ್ನ ನಿಘಾತಃ। ಬ್ರಹ್ಮಣಃ ಷಷ್ಠ್ಯಾಃ ಪತಿಪುತ್ರೇತ್ಯಾದಿನಾ। ಪಾ. ೮-೩-೫೩। ಸಂಹಿತಾಯಾಂ ವಿಸರ್ಜನೀಯಸ್ಯ ಸಕಾರಃ। ಸುಬಾಮಂತ್ರಿತಪರಾಂಗವದ್ಭಾವಾತ್ಪದದ್ವಯಸ್ಯಾಮಂತ್ರಿತನಿಘಾತಃ। ಕಕ್ಷೀವಂತಂ। ಕಕ್ಷೇ ಭವಾ ಕಕ್ಷ್ಯಾಶ್ವೋದರಸಂಬಂಧಿನೀ ರಜ್ಜುಃ। ಭವೇ ಛಂದಸಿ। ಪಾ. ೪-೪-೧೧೦। ಇತಿ ಯತ್ಪ್ರತ್ಯಯಃ। ಸಾಸ್ಯಾಸ್ತೀತ್ಯರ್ಥೇ ಆಸಂದೀವದಷ್ಠೀವಚ್ಚಕ್ರೀವತ್ಕಕ್ಷೀವತ್। ಪಾ. ೮-೨-೧೨। ಇತ್ಯೃಷಿವಿಶೇಷನಾಮ ಕಕ್ಷೀವಚ್ಛಬ್ದೋ ನಿಪಾತಿತಃ। ಛಂದಸೀರ ಇತಿ ವತ್ವಂ। ಯಪ್ರತ್ಯಯಸ್ವರೇಣ ತದಾದೇಶೋ ನಿಪಾತಿತ ಈಕಾರ ಉದಾತ್ತಃ। ಮತುಪ್ಸುಪೌ ಪಿತ್ತ್ವಾದನುದಾತ್ತೌ। ಔಶಿಜಃ। ವಶ ಕಾಂತೌ। ಇಜೀತ್ಯನುವೃತ್ತೌ ವಶೇಃ ಕಿಚ್ಚ। ಉ. ೨-೭೧। ಇತೀಜಿಪ್ರತ್ಯಯಃ। ತಸ್ಯ ಕಿತ್ತ್ವಾದ್ಗ್ರಹಿಜ್ಯೇತ್ಯಾದಿನಾ ಸಂಪ್ರಸಾರಣಂ ಪರಪೂರ್ವತ್ವೇ ಗುಣಾಭಾವಃ। ಸ ತಸ್ಯಾಪತ್ಯಂ। ಪಾ. ೪-೧-೯೨। ಇತಿ ಪ್ರಾಗ್ದೀವ್ಯತೋಽಣ್। ಪಾ. ೪-೧-೮೩। ಆದಿವೃದ್ಧಿಃ। ಪ್ರತ್ಯಯಸ್ವರೇಣಾಂತೋದಾತ್ತತ್ವಂ ॥

॥ ಪ್ರತಿಪದಾರ್ಥ ॥

ಹೇ ಬ್ರಹ್ಮಣಸ್ಪತೇ—ಎಲೈ ಬ್ರಹ್ಮಣಸ್ಪತಿಯೇ । ಯಃ—ಯಾವ । ಔಶಿಜಃ—ಉಶಿಕ್ಪುತ್ರನಾದ ಕಕ್ಷೀವಾನ್ ಎಂಬ ಋಷಿ ಇದ್ದನೋ । ಕಕ್ಷೀವಂತಂ—ಅಂತಹ ಕಕ್ಷೀವಾನನೆಂಬ ಋಷಿಯಂತೆ । ಸೋಮಾನಂ—ಸೋಮರಸವನ್ನು ಸಿದ್ಧಪಡಿಸುವವನನ್ನು (ಯಜಮಾನನಾದ ನನ್ನನ್ನು) ಸ್ವರಣಂ—ದೇವತೆಗಳಲ್ಲಿ ಪ್ರಸಿದ್ಧನನ್ನಾಗಿ ಅಥವಾ ಬ್ರಹ್ಮವರ್ಚಸ್ವಿಯನ್ನಾಗಿ । ಕೃಣುಹಿ—ಮಾಡು.

॥ ಭಾವಾರ್ಥ ॥

ಉಶಿಜಪುತ್ರನಾದ ಕಕ್ಷೀವಾನ್ ಎಂಬುವನು ಸೋಮಯಾಗವನ್ನು ಮಾಡಿದವನೆಂದು ದೇವತೆಗಳಲ್ಲಿ ಪ್ರಸಿದ್ಧನಾಗಿದ್ದಾನೆ. ಎಲೈ ಬ್ರಹ್ಮಣಸ್ಪತಿಯೇ, ಯಜ್ಞಕರ್ತೃವಾದ ನನ್ನನ್ನೂ, ಆ ಕಕ್ಷೀವಂತನಂತೆ, ಸೋಮಯಾಗ ಕರ್ತೃವೆಂದು ಪ್ರಸಿದ್ಧಪಡಿಸು.

English Translation

O Brahmanaspati, make (me) who offer Soma juice illustrious among the gods like Kakshivan, the son of Usij.

॥ ವಿಶೇಷವಿಷಯಗಳು ॥

ಈ ಸೂಕ್ತಕ್ಕೆ ಬ್ರಹ್ಮಣಸ್ಪತಿಯು ದೇವತೆಯು. ಈ ಬ್ರಹ್ಮಣಸ್ಪತಿಯು ಯಾರು? ದೇವತೆಗಳಲ್ಲಿ ಇವನ ಸ್ಥಾನಮಾನಗಳೇನು ಎಂಬುವುದನ್ನು ಸೂಕ್ಷ್ಮವಾಗಿ ವಿವರಿಸುವೆವು. ಯಾಸ್ಕಮಹರ್ಷಿಯು ನಿರುಕ್ತದಲ್ಲಿ (ನಿ. ೧೦-೧೨) ಬ್ರಹ್ಮಣಸ್ಪತಿಯ ವಿಚಾರವಾಗಿ ಈ ರೀತಿ ಹೇಳಿರುವರು—

ಬ್ರಹ್ಮಣಸ್ಪತಿಃ । ಬ್ರಹ್ಮಣಸ್ಪತಿರ್ಬ್ರಹ್ಮಣಃ ಪಾತಾ ವಾ ಪಾಲಯಿತಾ ವಾ ॥

ಇಲ್ಲಿ ಬ್ರಹ್ಮಶಬ್ದಕ್ಕೆ ಅನ್ನವೆಂದೂ ಧನವೆಂದೂ ಸ್ತೋತ್ರವೆಂದೂ ಅರ್ಥವಾಗುವುದು. (ನಿ. ೩-೯) ಆದುದರಿಂದ ಬ್ರಹ್ಮಣಃ ಪಾತಾ ಎಂದರೆ ಅನ್ನಸ್ಯ ಪಾತಾ ಅನ್ನಕ್ಕೆ (ಆಹಾರಕ್ಕೆ) ಸ್ವಾಮಿಯು ಅಥವಾ ಅಧಿಪತಿಯು ಎಂದರ್ಥವು. ಬ್ರಹ್ಮಣಸ್ಪತಿಯು ಹೇಗೆ ಅನ್ನಕ್ಕೆ ಅಧಿಪತಿಯು ಎಂದರೆ ಯಾಸ್ಕರು ಉದಾಹರಣೆಗಾಗಿ—

ಅಶ್ಮಾಸ್ಯಮವತಂ ಬ್ರಹ್ಮಣಸ್ಪತಿರ್ಮಧುಧಾರಮಭಿ ಯಮೋಜಸಾತೃಣತ್ ।
ತಮೇವ ವಿಶ್ವೇ ಪಪಿರೇ ಸ್ವರ್ದೃಶೋ ಬಹುಸಾಕಂ ಸಿಸಿಚುರುತ್ಸಮುದ್ರಿಣಂ ॥
(ಋ. ಸಂ. ೨-೨೪-೪)

ಎಂಬ ಋಕ್ಕನ್ನು ಕೊಟ್ಟು ಅದಕ್ಕೆ—

ಅಶನವಂತಮಾಸ್ಯಂತನವಂತಮವಾತಿತಂ ಬ್ರಹ್ಮಣಸ್ಪತಿರ್ಮಧುಧಾರಮಭಿಯಮೋಜಸಾ
ಬಲೇನಾಭ್ಯತೃಣತ್ತಮೇವ ಸರ್ವೇ ಪಿಬಂತಿ ರಶ್ಮಯಃ ಸೂರ್ಯದೃಶೋ ಬಹ್ವೇನಂ
ಸಹ ಸಿಂಚಂತ್ಯುತ್ಸಮುದ್ರಿಣಮುದಕವಂತಂ ॥ (ನಿ. ೧೦-೧೩)

ಎಂದು ನಿರುಕ್ತವನ್ನು ಹೇಳಿರುವರು. ಮುಖ್ಯಾಭಿಪ್ರಾಯವೇನೆಂದರೆ, ಈ ಬ್ರಹ್ಮಣಸ್ಪತಿಯು ಸೂರ್ಯರಶ್ಮಿಗಳ ಸಹಾಯದಿಂದ ಮೇಘಗಳು ಸಮುದ್ರೋದಕವನ್ನು ಪಾನಮಾಡಿ ಆ ಉದಕವನ್ನು ವಿಶೇಷವಾಗಿ ಭೂಮಿಯ ಮೇಲೆ ಮಳೆಯಾಗಿ ಬೀಳುವಂತೆ ಮಾಡುವುದರಿಂದ ಮಳೆಯಿಂದ ಓಷಧಿವನಸ್ಪತಿಗಳೂ, ಓಷಧಿವನಸ್ಪತಿಗಳಿಂದ ಅನ್ನಾದ್ಯಾಹಾರವೂ ಲಭಿಸುವುದೆಂದೂ ಆದುದರಿಂದ ಬ್ರಹ್ಮಣಸ್ಪತಿಯು ಅನ್ನಕ್ಕೆ ಪಾಲಕನು ಎಂದರ್ಥವು. ಬ್ರಹ್ಮ ಶಬ್ದಕ್ಕೆ ಸ್ತೋತ್ರವೆಂದೂ ಧನವೆಂದೂ ಅರ್ಥಮಾಡುವಾಗ ಬ್ರಹ್ಮಣಸ್ಪತಿಯು ಮಂತ್ರಕ್ಕೆ ಅಧಿಪತಿಯು. ಮತ್ತು ಧನಕ್ಕೆ ಅಧಿಪತಿಯು ಎಂದು ಹೇಳಬೇಕು. ಭಾಷ್ಯಕಾರರು ಈ ಅರ್ಥವನ್ನೇ ಮೇಲೆ ಉದಾಹರಿಸಿರುವ ಋಕ್ಕಿಗೆ ವ್ಯಾಖ್ಯಾನ ಮಾಡುವಾಗ ಹೇಳಿರುವರು.

ಬ್ರಹ್ಮಣಸ್ಪತಿಯ ಪರವಾದ ಮಂತ್ರಗಳು ಋಗ್ವೇದದಲ್ಲಿ ವಿಶೇಷವಾಗಿವೆ. ಆ ಮಂತ್ರಗಳಲ್ಲಿ ಬ್ರಹ್ಮಣ ಸ್ಪತಿಯು ಧನವನ್ನೂ ಅನ್ನವನ್ನು ಕೊಡುವನೆಂದು ಹೇಳಿದೆ. ಈ ಬ್ರಹ್ಮಣಸ್ಪತಿಯು ಪ್ರತ್ಯೇಕ ದೇವತೆಯೇ ಅಥವಾ ಅಗ್ನಿಯ ರೂಪಾಂತರವೇ ಎಂದು ಅನೇಕರು ಸಂಶಯಪಡುವರು. ಅಗ್ನಿ ಮೊದಲಾದ ಇತರ ದೇವತೆ ಗಳೂ ಸಹ ಧನವನ್ನೂ ಅನ್ನವನ್ನು ಕೊಡುವವರಾದುದರಿಂದ ಬ್ರಹ್ಮಣಸ್ಪತಿಯು ಅಗ್ನಿಯ ಒಂದು ವಿಶೇಷ ರೂಪವೆಂದು ಕೆಲವರ ವಾದವು. ಯಾಸ್ಕರು ಈ ವಿಷಯದಲ್ಲಿ ಮೌನವಾಗಿರುವರು ಎಂದರೆ ಸ್ಪಷ್ಟವಾಗಿ ಏನನ್ನೂ ಹೇಳಿರುವುದಿಲ್ಲ. ಬ್ರಹ್ಮಣಸ್ಪತಿಯ ಪರವಾದ ಋಕ್ಕುಗಳಲ್ಲಿಯೂ ಈ ದೇವತೆಯು ಅಗ್ನಿಯ ರೂಪಾಂತರವೆಂದು ಹೇಳಲು ಸಾಕಾದಷ್ಟು ಆಧಾರಗಳಿಲ್ಲ. ಆದುದರಿಂದ ಬ್ರಹ್ಮಣಸ್ಪತಿಯು ಇಂದ್ರಾಗ್ನಿಗಳಂತೆ ಒಂದು ಪ್ರತ್ಯೇಕ ದೇವತೆಯೆಂದು ಧಾರಾಳವಾಗಿ ಹೇಳಬಹುದು.

**ಸೋಮಾನಂ— ಅಭಿಷವಸ್ಯ ಕರ್ತಾರಂ—** ಸೋಮರಸವನ್ನು ಸಿದ್ಧಪಡಿಸಿರುವ (ನನ್ನನ್ನು) ಎಂದಭಿ ಪ್ರಾಯವು,

**ಸ್ವರಣಂ—ದೇವೇಷು ಪ್ರಕಾಶನವಂತಂ । ಪ್ರಖ್ಯಾತಮಿತ್ಯರ್ಥಃ ॥** ದೇವತೆಗಳಲ್ಲಿ ಪ್ರಸಿದ್ಧ ನನ್ನಾಗಿ, ಕೀರ್ತಿಯುತನನ್ನಾಗಿ ಎಂದಭಿಪ್ರಾಯವು.

**ಕಕ್ಷೀವಂತಂ, ಔಶಿಜಃ—** ಕಕ್ಷೀವಾನ್ ಎಂಬ ಋಷಿಯು ದೀರ್ಘತಮಸ್ ಎಂಬ ಋಷಿಗೆ ಉಶಿಕ್ ಎಂಬುವಳಲ್ಲಿ ಹುಟ್ಟಿದ ಪುತ್ರನು. ಈ ಉಶಿಕ್ ಎಂಬ ಸ್ತ್ರೀಯು ಕಳಿಂಗರಾಜನ ರಾಣಿಯ ಪರಿಚಾರಿಕೆಯಾಗಿದ್ದ ಳೆಂದೂ, ಕಳಿಂಗರಾಜನು ತನಗೆ ಪುತ್ರನಾಗಬೇಕೆಂಬ ಅಪೇಕ್ಷೆಯಿಂದ ತನ್ನ ಪತ್ನಿಯನ್ನು ದೀರ್ಘತಮಸ್ಸ್ ಎಂಬ ಋಷಿಯಸಂಗಕ್ಕೋಸ್ಕರ ಕಳುಹಿಸಿದನೆಂದೂ ಆಗ ರಾಜನ ಪತ್ನಿಯು ಅದಕ್ಕೆ ಇಷ್ಟಪಡದೆ ಗೂಢವಾಗಿ ತನ್ನ ದಾಸಿಯಾದ ಉಶಿಕ್ ಎಂಬುವಳನ್ನು ಕಳುಹಿಸಲು ಅವಳಿಗೆ ದೀರ್ಘತಮಋಷಿಯಿಂದ ಈ ಕಕ್ಷೀವಾನ್ ಎಂಬ ಪುತ್ರನು ಜನಿಸಿದನೆಂದೂ ಪುರಾಣಾದಿಗಳಲ್ಲಿ ಹೇಳಿದೆ. ಈ ಕಕ್ಷಿವಾನ್ ಋಷಿಯು ಕ್ಷತ್ರಿಯ ಸ್ತ್ರೀಯಲ್ಲಿ ಜನಿಸಿದರೂ ಬ್ರಾಹ್ಮಣಸಂಪರ್ಕದಿಂದ ಬ್ರಾಹ್ಮಣನೆಂದೇ ಪ್ರಸಿದ್ಧವಾಗಿರುವನು. ಈ ಋಷಿಯು ಋಗ್ವೇದದ ಅನೇಕ ಋಕ್ಕು ಗಳಿಗೆ ದ್ರಷ್ಟೃವಾಗಿರುವನು. ಈ ಕಕ್ಷಿವಾನ್ ಎಂಬ ಋಷಿಯು ಯಜ್ಞಾನುಷ್ಠಾನಕರ್ಮಗಳನ್ನು ಮಾಡುವ ವರಲ್ಲಿಯೂ ಪ್ರಸಿದ್ಧನೆಂದು—"ಏವಂ ವೈ ಪರ ಆಟ್ಣಾರಃ ಕಕ್ಷೀವಾ॰ ಔಶಿಜೋ ವೀತಹವ್ಯಃ ಶ್ರಾಯಸಸ್ತ್ರಸದಸ್ಯುಃ ಪೌರುಕುತ್ಸಃ ಪ್ರಜಾಕಾಮಾ ಅಚಿನ್ವತ ॥" ಎಂದು ತೈತ್ತಿರೀಯಸಂಹಿತೆಯ ೫-೬-೫-೩ರಲ್ಲಿ ಹೇಳಿರುವುದು. ಆದುದರಿಂದ ಈ ಋಷಿಯು ಮಂತ್ರರಚನೆಯಲ್ಲಿಯೂ ಯಜ್ಞಾನುಷ್ಠಾನಕರ್ಮಗಳನ್ನು ಮಾಡುವುದರಲ್ಲಿಯೂ ಅತ್ಯಂತಪ್ರಸಿದ್ಧನು. ಇವನಂತೆಯೇ ನನ್ನನ್ನೂ ಪ್ರಸಿದ್ಧನನ್ನಾಗಿ ಮಾಡಬೇಕೆಂದು ಈ ಸೂಕ್ತದ ಋಷಿಯಾದ ಮೇಧಾತಿಥಿಋಷಿಯು ಬ್ರಹ್ಮಣಸ್ಪತಿದೇವತೆಯನ್ನು ಪ್ರಾರ್ಥನೆ ಮಾಡಿರುವನು.

|| ವ್ಯಾಕರಣಪ್ರಕ್ರಿಯಾ ||

**ಸೋಮಾನಮ್**—ಸುನೋತೀತಿ ಸೋಮಾ ಷುಞ್ ಅಭಿಷವೇ ಧಾತು. **ಧಾತ್ವಾದೇಃಷಃಸಃ** ಎಂಬುದರಿಂದ ಷಕಾರಕ್ಕೆ ಸಕಾರ. **ಅನ್ಯೇಭ್ಯೋಽಪಿ ದೃಶ್ಯತೇ** ಎಂಬುದರಿಂದ ಮನಿನ್ ಪ್ರತ್ಯಯ. ಇಲ್ಲಿ ದೃಶಿಗ್ರಹಣವು ಬೇರೆ ಕಾರ್ಯಗಳನ್ನು ವಿಧಿಸುವುದಕ್ಕಾಗಿ ಇರುವುದು. ಆದ್ದರಿಂದ ಪ್ರತ್ಯಯವು ನಿತ್ತಾದರೂ ಞ್ನಿತ್ಯಾದಿಃ ಎಂಬುದರಿಂದ ಆದ್ಯುದಾತ್ತ ಬರುವುದಿಲ್ಲ. ಪ್ರತ್ಯಯಸ್ವರವೇ ಬರುವುದು ಅಥವಾ ಉಞ್ಛಾದಿಯು ಆಕೃತಿಗಣವೆಂದು ಬಹ್ವಭಿಮತ, ಆದ್ದರಿಂದ ಸೋಮನ್ ಶಬ್ದವನ್ನು ಉಞ್ಛಾದಿಯಲ್ಲಿ ಸೇರಿಸಿ **ಉಞ್ಛಾದೀನಾಂಚ** (ಪಾ. ಸೂ. ೬-೧-೧೬೦) ಎಂಬುದರಿಂದ ಅಂತೋದಾತ್ತವನ್ನು ಹೇಳಬಹುದು. ಅಥವಾ **ಉಣಾದಯೋಬಹುಲಮ್** (ಪಾ. ಸೂ. ೩-೩-೧) ಎಂದು ಬಹುಲಗ್ರಹಣವಿರುವುದರಿಂದ ಸು ಧಾತುವಿನ ಮುಂದೆ ಔಣಾದಿಕವಾದ ಮನಿನ್ ಪ್ರತ್ಯಯ ಬರುವುದು. ಏವಂಚ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುವುದು. ಸರ್ವಥಾ ಸೋಮನ್ ಶಬ್ದವು ಅಂತೋದಾತ್ತವಾದುದು, ದ್ವಿತೀಯೈಕವಚನದಲ್ಲಿ ಸೋಮಾನಂ ಎಂದಾಗುವುದು,

**ಸ್ವರಣಮ್**—ಪ್ರಖ್ಯಾತವನ್ನಾಗಿ ಎಂದರ್ಥ. ಸ್ವೃ ಶಬ್ದೋಪತಾಪಯೋಃ ಧಾತು. **ಕೃತ್ಯಲ್ಯುಟೋ-ಬಹುಲಮ್** (ಪಾ. ಸೂ. ೩-೩-೧೧೩) ಎಂಬುದರಿಂದ ಕರ್ಮಣಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ.ಸೂ. ೭-೧-೧) ಎಂಬುದರಿಂದ ಯುಗೆ ಅನಾದೇಶ. ಗುಣ ರಪರತ್ವ, **ಲಿತಿ** ಪ್ರತ್ಯಯದ ಹಿಂದೆ ಇರುವ ಸ್ವಶಬ್ದದ ಅಕಾರವು ಉದಾತ್ತ, ರಷಾಭ್ಯಾಮ್ ಎಂಬುದರಿಂದ ನಕಾರಕ್ಕೆ ಣಕಾರ. ದ್ವಿತೀಯಾ ಏಕವಚನ ಅಮ್. ಅಮಿ ಪೂರ್ವಃ ಎಂಬುದರಿಂದ ಪೂರ್ವರೂಪ, ಸ್ವರಣಮ್ ಎಂದಾಗುವುದು.

**ಕೃಣುಹಿ**—ಕೃವಿ ಹಿಂಸಾಕರಣಯೋಶ್ಚ ಧಾತು. **ಇದಿತೋನುಮ್‌ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. ಕೃನ್ವ್, ಇದರ ಮುಂದೆ ಲೋಟ್, ಮಧ್ಯಮಪುರುಷ ಏಕವಚನ ಸಿಪ್. **ಸೇರ್ಹ್ಯಪಿಚ್ಚ** ( ಪಾ. ಸೂ. ೩-೪-೮೭ ) ಎಂಬುದರಿಂದ ಸಿಪ್‌ಗೆ ಹಿ ಆದೇಶ, ಕರ್ತರಿಶಪ್ ಎಂಬುದರಿಂದ ಶಪ್ ಪ್ರಾಪ್ತವಾದರೆ ಇದಕ್ಕೆ ಅಪವಾದವಾದ **ಧಿನ್ವಿಕೃಣ್ವ್ಯೋರಚ** ( ಪಾ. ಸೂ. ೩-೧-೮೦ ) ಎಂಬುದರಿಂದ ಉ ವಿಕರಣವೂ ಇದರ ಸನ್ನಿಯೋಗದಿಂದ ವಕಾರಕ್ಕೆ ಅಕಾರವೂ ಬರುವುದು. ಕೃನ+ಉ+ಹಿ **ಅತೋಲೋಪಃ** ( ಪಾ. ಸೂ. ೬-೪-೪೮ ) ಎಂಬುದರಿಂದ ಅಕಾರಕ್ಕೆ ಲೋಪ ಕೃನ್+ಉ+ಹಿ ಈಗ ಉ ಪ್ರತ್ಯಯವನ್ನು ನಿಮಿತ್ತ ಮಾಡಿಕೊಂಡು **ಪುಗಂತ ಲಘೂಪಧಸ್ಯಚ** ( ಪಾ. ಸೂ. ೭-೩-೮೬ ) ಎಂಬುದರಿಂದ ಲಘೂಪಧ ಗುಣವು ಪ್ರಾಪ್ತವಾದರೆ **ಅಚಃಪರಸ್ಮಿನ್ಪೂರ್ವವಿಧೌ** ( ಪಾ. ಸೂ. ೧-೧-೫೭ ) ಎಂಬುದರಿಂದ ಅಲೋಪಕ್ಕೆ ಸ್ಥಾನಿವದ್ಭಾವ ಬರುವುದು. ಆದ್ದರಿಂದ ಲಘೂಪಧಗುಣ ಬರುವುದಿಲ್ಲ. ಹಿಯನ್ನ ನಿಮಿತ್ತ ಮಾಡಿಕೊಂಡು **ಸಾರ್ವಧಾತುಕಾರ್ಧಧಾತುಕಯೋಃ** ( ಪಾ. ಸೂ. ೭-೩-೮೪ ) ಎಂಬುದರಿಂದ ಕೃನು ಎಂಬಲ್ಲಿರುವ ಉಕಾರಕ್ಕೆ ಗುಣವು ಪ್ರಾಪ್ತವಾಗುವುದು. ಆದರೂ **ಸಾರ್ವಧಾತುಕಮಪಿತ್** (ಪಾ.ಸೂ. ೧-೨-೪) ಎಂಬುದರಿಂದ ಹಿಯು ಙಿತ್ತಾಗುವುದರಿಂದ **ಕ್ಙಿತಿಚ** (ಪಾ.ಸೂ. ೧-೧-೫) ಎಂಬುದರಿಂದ ಗುಣಕ್ಕೆ ನಿಷೇಧ ಬರುವುದರಿಂದ ಗುಣ ಬರುವುದಿಲ್ಲ. **ಉತಶ್ಚಪ್ರತ್ಯಯಾದಸಂಯೋಗಪೂರ್ವಾತ್** (ಪಾ.ಸೂ. ೬-೪-೧೦೬) ಎಂಬುದರಿಂದ ಯದ್ಯಪಿ ಹಿಗೆ ಲುಕ್ ಪ್ರಾಪ್ತವಾಗುವುದು. ಆದರೂ **ಉತಶ್ಚಪ್ರತ್ಯಯಾಚ್ಛಂದೋವಾವಚನಮ್** (ಪಾ. ಸೂ. ೬-೪-೧೦೬-೧) ಛಂದಸ್ಸಿನಲ್ಲಿ ಉತಶ್ಚಪ್ರತ್ಯಯಾತ್ ಎಂಬುದು ವಿಕಲ್ಪವಾಗಿ ಬರುವುದು ಎಂಬ ವಚನದಿಂದ ವಿಕಲ್ಪವಾದ್ದರಿಂದ ಪಾಕ್ಷಿಕವಾಗಿ ಹಿಗೆ ಲೋಪಬರುವುದಿಲ್ಲ. **ಸತಿಶಿಷ್ಟಸ್ವರಬಲೀಯಸ್ತ್ವಮನ್ಯತ್ರವಿಕರಣೇಭ್ಯಃ** ಸತಿ ಎಂಬುದಕ್ಕೆ

ಉತ್ಪನ್ನೇ ಸತಿ ಎಂದರ್ಥ, ಶಿಷ್ಟ ಎಂಬುದಕ್ಕೆ ವಿಹಿತ ಎಂದು ಅರ್ಥ- ಅನೇಕ ವರ್ಣಗಳಿಗೆ ಉದಾತ್ತ ಬರುವಾಗ ಕೆಲವಕ್ಕೆ ಉದಾತ್ತ ಬಂದಮೇಲೆ ಕೊನೆಯಲ್ಲಿ ಯಾವ ಉದಾತ್ತವು ವಿಹಿತವಾಗುವುದೋ ಅದು ಪ್ರಬಲ. ಆದರೆ ಈ ಅಂಶವು ವಿಕರಣ ವಿಷಯದಲ್ಲಿ ಇಲ್ಲವು ಎಂದು ಹೇಳಿರುವುದರಿಂದ ಉ ಎಂಬ ವಿಕರಣಕ್ಕೆ ಬರುವ ಸ್ವರವು ಸತಿಶಿಷ್ಟವಾದರೂ ಅದು ಪ್ರಬಲವಾಗುವುದಿಲ್ಲ. ಆದ್ದರಿಂದ ಹಿಗೆ ಪ್ರತ್ಯಯ ಸ್ವರದಿಂದ ಉದಾತ್ತ ಬರುವುದು. ಇದು ಪಾದದ ಆದಿಯಲ್ಲಿರುವುದರಿಂದ **ಅಪಾದಾದೌ** ಎಂದು ಪ್ರತಿಷೇಧ ಬರುವಕಾರಣ **ತಿಙ್ಙತಿಙಃ** ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ,

**ಬ್ರಹ್ಮಣಸ್ಪತೇ**—ಬ್ರಹ್ಮಣಃಪತೇ ಎಂದಿರುವಾಗ **ಷಷ್ಠ್ಯಾಃಪತಿಪುತ್ರಪೃಷ್ಠಪಾರಪದಪಯಸ್ಪೋಷೇಷು** (ಪಾ, ಸೂ. ೮-೩-೫೩) ಪತಿ ಮೊದಲಾದ ಶಬ್ದಗಳು ಪರದಲ್ಲಿರುವಾಗ ಷಷ್ಠೀವಿಭಕ್ತಿಸಂಬಂಧಿಯಾದ ವಿಸರ್ಗಕ್ಕೆ ಸಕಾರ ಬರುವುದು ಎಂಬುದರಿಂದ ಸಂಹಿತಾಕಾಲದಲ್ಲಿ ವಿಸರ್ಗಕ್ಕೆ ಸಕಾರ ಬರುವುದು. ಪತೇ ಎಂಬುದು ಆಮನ್ತ್ರಿತ. **ಸುಬಾಮಂತ್ರಿತೇಪರಾಙ್ಗವತ್ಸ್ವರೇ** ( ಪಾ. ಸೂ. ೨-೧-೨ ) ಎಂಬುದರಿಂದ **ಬ್ರಹ್ಮಣಃ** ಎಂಬುದಕ್ಕೆ ಪರಾಂಗವದ್ಭಾವ ಬರುವುದು. ಆದ್ದರಿಂದ **ಆಮನ್ತ್ರಿತಸ್ಯಚ** ( ಪಾ. ಸೂ. ೮-೧-೧೯ ) ಎಂಬುದರಿಂದ ಎರಡು ಪದಗಳಿಗೂ ಅನುದಾತ್ತ ಬರುವುದು.

**ಕಕ್ಷೀವನ್ತಮ್**—ಕಕ್ಷ ಎಂದರೆ ಪಾರ್ಶ್ವಭಾಗ, ಕಕ್ಷೇ ಭವಾ ಎಂದು ವಿಗ್ರಹವಾದಾಗ **ಭವೇಛಂದಸಿ** ( ಪಾ. ಸೂ. ೪-೪-೧೧೦ ) ಎಂಬುದರಿಂದ ಯತ್ ಸ್ತ್ರೀತ್ವ ವಿವಕ್ಷೆ ಇರುವುದರಿಂದ ಟಾಪ್‌ಪ್ರತ್ಯಯ ಕಕ್ಷ್ಯಾ ಎಂದಾಗುವುದು. ಕಕ್ಷ್ಯಾ ಅಸ್ಯ ಅಸ್ತಿ ಎಂದು ವಿಗ್ರಹ. **ತದಸ್ಯಾಸ್ತ್ಯಸ್ಮಿನ್ನಿತಿಮತುಪ್** (ಪಾ. ಸೂ. ೫-೨-೯೪ ) ಎಂಬುದರಿಂದ ಮತುಪ್ ಪ್ರತ್ಯಯ, ಕಕ್ಷ್ಯಾ+ಮತ್. **ಆಸನ್ದೀವ ದಷ್ಠೀವ ಚಕ್ರೀವ ಕಕ್ಷೀವ ದ್ರುಮಣ್ವ ಚರ್ಮಣ್ವತೀ** (ಪಾ. ಸೂ. ೮-೨-೧೨) ಈ ಆರು ಶಬ್ದಗಳು ಸಂಜ್ಞೆ ತೋರುವಾಗ ನಿಪಾತಿಸಲ್ಪಡುವುವು ಎಂದು ಸೂತ್ರಾರ್ಥ, ನಿಪಾತವೆಂದರೆ ಶಾಸ್ತ್ರಾನ್ತರಾಪ್ರಾಪ್ತಕಾರ್ಯಘಟಿತೋಚ್ಚಾರಣಮ್, ಕಕ್ಷ್ಯಾ ಎಂಬಲ್ಲಿ ಸಂಪ್ರಸಾರಣವು ಬೇರೆ ಶಾಸ್ತ್ರದಿಂದ ಪ್ರಾಪ್ತವಾಗುವುದಿಲ್ಲ. ಆ ಸಂಪ್ರಸಾರಣರೂಪವಾದ ಕಾರ್ಯವನ್ನು ಈ ಸೂತ್ರದಲ್ಲಿ ಸೇರಿಸಿ ಉಚ್ಚರಿಸುವುದರಿಂದ ಸಂಪ್ರಸಾರಣ ಬರುವುದು. ಆದ್ದರಿಂದ ಯಕಾರಕ್ಕೆ ಇಕಾರ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. **ಹಲಃ** (ಪಾ. ಸೂ. ೬-೪-೨ ) ಎಂಬುದರಿಂದ ದೀರ್ಘ, ಕಕ್ಷೀಮತ್ ಈಗ **ಛಂದಸೀರಃ** (ಪಾ.ಸೂ. ೮-೨-೧೫) ಇವರ್ಣಾಂತ ರೇಫಾಂತದ ಮುಂದೆ ಇರುವ ಮತುಪ್ಪಿನ ಮಕಾರಕ್ಕೆ ವಕಾರ ಬರುವುದು ಎಂಬುದರಿಂದ ಮಕಾರಕ್ಕೆ ವಕಾರ, ಕಕ್ಷೀವತ್. ಇದರ ಮುಂದೆ ಸುಪ್ರತ್ಯಯ. **ಅತ್ವಸಂತಸ್ಯಚಾಧಾತೋಃ** (ಪಾ.ಸೂ. ೬-೪-೧೪) ಅತು ಎಂಬುದನ್ನು ಕೊನೆಯಲ್ಲಿ ಹೊಂದಿರುವ ಅಙ್ಗದ ಉಪಾನ್ತ್ಯವರ್ಣಕ್ಕೂ ಧಾತುವಲ್ಲದ ಅಸನ್ತಾಙ್ಗದ ಉಪಾಂತ್ಯವರ್ಣಕ್ಕೂ ಸಂಬುದ್ಧಿಯನ್ನುಳಿದ ಸರ್ವನಾಮಸ್ಥಾನಪ್ರತ್ಯಯ ಪರದಲ್ಲಿರುವಾಗ ದೀರ್ಘ ಬರುವುದು ಎಂಬುದರಿಂದ ಉಪಧಾದೀರ್ಘ. **ಉಗಿದಚಾಂ** (ಪಾ. ಸೂ. ೭-೧-೭೦) ಎಂಬುದರಿಂದ ನುಮಾಗಮ. ಯದ್ಯಪಿ ನುಮಾಗಮವು ಪರವೂ ನಿತ್ಯವೂ ಆಗಿರುವುದು. ಆದರೂ ವಚನಸಾಮರ್ಥ್ಯದಿಂದ ಮೊದಲು ದೀರ್ಘ ನಂತರ ನುಮಾಗಮ ಎಂದು ಗ್ರಹಿಸಬೇಕು. **ಹಲ್‌ಙ್ಯಾಭ್ಯಃ** (ಪಾ.ಸೂ. ೬-೧-೬೮) ಎಂಬುದರಿಂದ ಸುಲೋಪ. **ಸಂಯೋಗಾಂತಸ್ಯ ಲೋಪಃ** (ಪಾ. ಸೂ. ೮-೨-೨೩) ಎಂಬುದರಿಂದ ತಕಾರಲೋಪ. **ನಲೋಪಃ ಪ್ರಾತಿಪದಿಕಾಂತಸ್ಯ** ಎಂಬುದರಿಂದ ನಕಾರಕ್ಕೆ ಲೋಪವನ್ನು ಮಾಡುವಾಗ ಸಂಯೋಗಾಂತಲೋಪವು **ಪೂರ್ವತ್ರಾಸಿದ್ಧಮ್** (ಪಾ.ಸೂ. ೮-೨-೧) ಎಂಬುದರಿಂದ ಅಸಿದ್ಧವಾಗುವುದು. ಆದ್ದರಿಂದ ನಕಾರಕ್ಕೆ ಲೋಪ ಬರುವುದಿಲ್ಲ. ಕಕ್ಷೀವಾನ್ ಎಂದಾಗುವುದು. ಕಕ್ಷಿವಾನ್ ಎಂಬುದು ಋಷಿಯ ಹೆಸರು. **ನ ಸಂಪ್ರಸಾರಣೇ**

ಸಂಪ್ರಸಾರಣಾಚ್ (ಪಾ.ಸೂ. ೯-೧-೩೭) ಎಂಬ ಸೂತ್ರದಲ್ಲಿ ಕಕ್ಷ್ಯಾಯಾಸ್ಸಂಜ್ಞಾಯಾಂ (ಪಾ.ಸೂ. ೬-೧-೩೭-೭) ಸಂಜ್ಞೆ ತೋರುವಾಗ ಮತುಪ್‌ಪ್ರತ್ಯಯದ ಹಿಂದೆ ಇರುವ ಕಕ್ಷ್ಯಾ ಶಬ್ದಕ್ಕೆ ಸಂಪ್ರಸಾರಣವನ್ನು ಹೇಳಬೇಕು ಎಂಬ ವಚನವನ್ನು ಮಹಾಭಾಷ್ಯದಲ್ಲಿ ಪತಞ್ಜಲಿಮಹರ್ಷಿಗಳು ಆರಂಭಿಸಿರುವರು. ಏವಂಚ ಈ ವಚನ ದಿಂದಲೇ ಕಕ್ಷೀವಾನ್ ಎಂಬ ರೂಪವು ಸಿದ್ಧವಾಗುವುದು. ಆದ್ದರಿಂದ ಆಸನ್ದೀವತ್ ಇತ್ಯಾದಿ ಸೂತ್ರದಲ್ಲಿ ಕಕ್ಷೀ-ವತ್ ಎಂಬ ಪಾಠವು ಪ್ರಕ್ಷಿಪ್ತವೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಸಂಜ್ಞಾಯಾಮ್ (ಪಾ.ಸೂ. ೮-೨-೧೧) ಸಂಜ್ಞೆ ತೋರುವಾಗ ಮತುಪ್ ಪ್ರತ್ಯಯದ ಮಕಾರಕ್ಕೆ ವಕಾರ ಬರುವುದು ಎಂಬುದರಿಂದ ಮಕಾ ರಕ್ಕೆ ವಕಾರವೂ ಸಿದ್ಧವಾಗುವುದು. ಆದ್ದರಿಂದ ವತ್ವನಿಪಾತನಕ್ಕಾಗಿ ಸೂತ್ರದಲ್ಲಿ ಕಕ್ಷೀವತ್ ಪದಕ್ಕೆ ನಿವೇಶ ಬೇಕೆಂದು ಹೇಳಲಾಗುವುದಿಲ್ಲ. ಛಂದಸೀರಃ ಎಂಬುದಕ್ಕೆ ಇವರ್ಣಾಂತ ರೇಫಾಂತಗಳ ಮುಂದೆ ವಿಹಿತವಾದ ಮತುಪ್ ಪ್ರತ್ಯಯದ ಮಕಾರಕ್ಕೆ ವಕಾರ ಬರುವುದು ಎಂದು ಅರ್ಥ. ಏವಂಚ ರೇವಾನ್ ಎಂಬಲ್ಲಿ ಮಕಾರಕ್ಕೆ ವಕಾರವು ಕ್ಲೇಶವಿಲ್ಲದೆಯೇ ಸಿದ್ಧವಾಗುವುದು. ಉತ್ತರಮಂತ್ರದಲ್ಲಿ ಕಂಡಂತೆ ಪ್ರಯಾಸಪಡಬೇಕಾದ ಅವಶ್ಯ ಕತೆಯಿರುವುದಿಲ್ಲ. ಇಲ್ಲಿ ಕಕ್ಷ್ಯಾ ಶಬ್ದದ ಮುಂದೆ ಮತುಪ್ ವಿಹಿತವಾಗಿದೆ. ಇಕಾರಾಂತ ಶಬ್ದದ ಮುಂದೆ ವಿಹಿತವಾಗಿಲ್ಲ. ಆದ್ದರಿಂದ ಇಲ್ಲಿ ಛಂದಸೀರಃ (ಪಾ.ಸೂ. ೮-೨-೧೫) ಎಂಬುದರಿಂದ ವತ್ವೋಪಪಾದನೆಯು ಅಷ್ಟಾಗಿ ಯುಕ್ತವಲ್ಲ. ಸಂಜ್ಞಾಯಾಂ ಎಂಬುದರಿಂದ ಮಕಾರಕ್ಕೆ ವಕಾರ ಬರುವುದು ಎಂದು ಉಪಪಾದಿಸು ವುದು ಯುಕ್ತವಾಗಿರುವುದು. ಕಕ್ಷೀವತ್ ಎಂಬುದರ ಮುಂದೆ ದ್ವಿತೀಯಾ ಏಕವಚನ ಅಮ್ ಪ್ರತ್ಯಯ. ಉಗಿದ-ಚಾಮ್ ಎಂಬುದರಿಂದ ನುಮಾಗಮ ಬಂದು ಕಕ್ಷೀವನ್ತಮ್ ಎಂದಾಗುವುದು. ಯತ್ ಪ್ರತ್ಯಯವು ಪ್ರತ್ಯಯ ಸ್ವರದಿಂದ ಉದಾತ್ತ, ಯತ್‌ಗೆ ಆದೇಶವಾಗಿ ಬರುವ ಈಕಾರವು ಸ್ಥಾನಿವದ್ಭಾವದಿಂದ ಉದಾತ್ತ, ಮತುಪ್ ಪ್ರತ್ಯಯವು ಪಿತ್ತಾದ್ದರಿಂದಲೂ ಅಮ್ ಸುಪ್ಪಾದ್ದರಿಂದಲೂ ಅನುದಾತ್ತೌಸುಪ್ಪಿತೌ ಎಂಬುದರಿಂದ ಅನುದಾತ್ತ.

ಔಶಿಜಃ—ವಶ ಕಾನ್ತೌ, ಧಾತು. ಪಚೇರಿಜ್ಯಾದೇಶ್ಚ ವಃ (ಉ.ಸೂ. ೨-೨೨೮) ಎಂಬುದರಿಂದ ಇಜಿ ಎಂಬುದು ಅನುವೃತ್ತವಾಗಲು ವಶೇಃಕಿಚ್ಚ (ಉ.ಸೂ. ೨-೨೨೯) ವಶ ಕಾನ್ತೌ ಎಂಬ ಧಾತುವಿನ ಮುಂದೆ ಇಜಿ ಪ್ರತ್ಯಯ ಬರುವುದು, ಅದು ಕಿತ್ತಾಗುವುದು ಎಂಬುದರಿಂದ ವಶ್ ಧಾತುವಿನ ಮುಂದೆ ಇಜಿ ಪ್ರತ್ಯಯ. ವಶ್+ ಇಜಿ, ಪ್ರತ್ಯಯವು ಕಿತ್ತು. ಆದ್ದರಿಂದ ಗ್ರಹಿಜ್ಯಾವಯಿವ್ಯಧಿವಷ್ಟಿ- (ಪಾ.ಸೂ. ೬-೧-೧೬) ಎಂಬುದರಿಂದ ಧಾತುವಿಗೆ ಸಂಪ್ರಸಾರಣ, ವಕಾರಕ್ಕೆ ಉಕಾರ, ಸಂಪ್ರಸಾರಣಾಚ್ಚ ಎಂಬುದರಿಂದ ಪೂರ್ವರೂಪ. ಪ್ರತ್ಯಯವು ಕಿತ್ತಾದ್ದರಿಂದ ಕ್ಙಿತಿಚ ಎಂದು ನಿಷೇಧ ಬರುವಕಾರಣ ಪುಗನ್ತಲಘೂಪಧಸ್ಯಚ ಎಂಬುದರಿಂದ ಉಶ್‌ಗೆ ಲಘೂ ಪಧಗುಣಬರುವುದಿಲ್ಲ. ಉಶಿಜ್ ಎಂದಾಯ್ತು. ಉಶಿಜಃ ಅಪತ್ಯಂ ಪುಮಾನ್ ಎಂದು ವಿಗ್ರಹ. ತಸ್ಯಾ-ಪತ್ಯಮ್ (ಪಾ.ಸೂ. ೪-೧-೯೨). ಪ್ರಾಗ್ದೀವ್ಯತೋಽಣ್ (ಪಾ.ಸೂ. ೪-೧-೮೩) ತೇನ ದೀವ್ಯತಿ ಎಂಬ ಸೂತ್ರದ ವರೆಗೆ ಅಣ್ ಅಧಿಕಾರ ಬರುವುದು ಎಂಬುದರಿಂದ ಅಣ್ ಪದಕ್ಕೆ ಅಧಿಕಾರ ಬರುತ್ತೆ. ತದ್ಧಿತಪ್ರತ್ಯಯವಿಧಾಯಕ ಶಾಸ್ತ್ರಘಟಕಪ್ರಥಮೋಚ್ಚರಿತಪದಜನ್ಯೋಪಸ್ಥಿತಿವಿಷಯಾಭಿನ್ನ ಸಮರ್ಥಾಭಿನ್ನಪ್ರಾತಿಪದಿಕಪ್ರಕೃತಿಕಷಷ್ಠ್ಯನ್ತಾ-ತ್ಸಮರ್ಥಾತ್ ಅಪತ್ಯಂ ಇತ್ಯರ್ಥೇ, ಅಣ್ವಾ ಭವತಿ, ಸ ಚ ಪರಸ್ಸನ್ ಭವತಿ. ಸ ಚ ಪ್ರತ್ಯಯಸಂಜ್ಞಕಃ, ಸ ಚ ಆದ್ಯುದಾತ್ತಃ ಎಂದು ಸೂತ್ರಾರ್ಥ. ತದ್ಧಿತಪ್ರತ್ಯಯವನ್ನು ವಿಧಿಸುವ ಶಾಸ್ತ್ರದಲ್ಲಿ ಮೊದಲು ಉಚ್ಚರಿತ ವಾದ ಪದದಿಂದ ಬೋಧಿತವಾಗುವವೂ ಪರಿನಿಷ್ಠಿತಗಳೂ ಆದ ಯಾವ ಜೀಬನ್ತ, ಆಬನ್ತ, ಪ್ರಾತಿಪದಿಕಗಳಿವೆ ಯೋ ಅವುಗಳ ಮುಂದೆ ಬಂದಿರುವ ಷಷ್ಠೀ ವಿಭಕ್ತಿಯನ್ನು ಕೊನೆಯಲ್ಲಿ ಹೊಂದಿರುವ ಸಮರ್ಥವಾದ ಶಬ್ದದ ಮುಂದೆ ಅಪತ್ಯ ಎಂಬ ಅರ್ಥದಲ್ಲಿ ಅಣ್ ವಿಕಲ್ಪವಾಗಿ ಬರುವುದು. ಅದು ಪರದಲ್ಲಿ ಬರುವುದು. ಅದು ಪ್ರತ್ಯಯ

ಸಂಜ್ಞೆಯನ್ನು ಹೊಂದುವುದು. ಅದು ಆದ್ಯುದಾತ್ತವಾಗುವುದು. ಅದು ತದ್ಧಿತವೂ ಆಗುವುದು ಎಂದು ಕನ್ನಡದಲ್ಲಿ ಅರ್ಥ. ಈ ಸೂತ್ರದಿಂದ ಅಣ್ ಪ್ರತ್ಯಯ ಬಂದರೆ, ಉಶಿಜ್+ಅ, ತದ್ಧಿತೇಷ್ವಚಾಮಾದೇಃ (ಪಾ.ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ, ಉಕಾರಕ್ಕೆ ಔಕಾರ, ಔಶಿಜ. ಇದರ ಮುಂದೆ ಪ್ರಥಮೈಕವಚನ ಸುಪ್ರತ್ಯಯ ರುತ್ವ ವಿಸರ್ಗ, ಔಶಿಜಃ ಎಂದಾಗುವುದು. ಔಶಿಜ ಎಂಬುದು ಪ್ರತ್ಯಯಸ್ವರದಿಂದ ಅಂತೋದಾತ್ತ ॥ ೧ ॥

॥ ಸಂಹಿತಾಪಾಠಃ ॥

ಯೋ ರೇವಾನ್ಯೋ ಅಮೀವಹಾ ವಸುವಿತ್ಪುಷ್ಟಿವರ್ಧನಃ ।
ಸ ನಃ ಸಿಷಕ್ತು ಯಸ್ತುರಃ ॥ ೨ ॥

॥ ಪದಪಾಠಃ ॥

ಯಃ । ರೇವಾನ್ । ಯಃ । ಅಮೀವಽಹಾ । ವಸುಽವಿತ್ । ಪುಷ್ಟಿಽವರ್ಧನಃ ॥
ಸಃ । ನಃ । ಸಿಷಕ್ತು । ಯಃ । ತುರಃ ॥ ೨ ॥

॥ ಸಾಯಣಭಾಷ್ಯಂ ॥

ಯೋ ಬ್ರಹ್ಮಣಸ್ಪತೀ ರೇವಾನ್ಧನವಾನ್ಯಶ್ಚಾಮೀವಹಾ ರೋಗಾಣಾಂ ಹಂತಾ ವಸುವಿದ್ಧನಲಬ್ಧಾ ಪುಷ್ಟಿವರ್ಧನಃ ಪುಷ್ಟೇರ್ವರ್ಧಯಿತಾ ಯಶ್ಚ ತುರಸ್ತ್ವರೋಪೇತಃ ಶೀಘ್ರಫಲದಃ ಸ ಬ್ರಹ್ಮಣಸ್ಪತಿ-ರ್ನೋಽಸ್ಮಾನ್ ಸಿಷಕ್ತು । ಸೇವತಾಂ । ಪರಿಗೃಹ್ಯಾನುಗೃಹ್ಣಾತ್ವಿತ್ಯರ್ಥಃ । ಅತ್ರ ಸಿಷಕ್ತುಶಬ್ದಸ್ಯ ಸೇವಾರ್ಥತ್ವಂ ಯಾಸ್ಕ ಆಹ । ಸಿಷಕ್ತು ಸಚತ ಇತಿ ಸೇವಮಾನಸ್ಯ । ನಿ. ೩-೨೧ । ಇತಿ ಪ್ರತ್ಯಾಯಕೌ ಶಬ್ದಾವಿತಿ ಶೇಷಃ ॥ ರೇವಾನ್ । ರಯಿರಸ್ಯಾಸ್ತೀತಿ ಮತುಪ್ । ರಯೇರ್ಮತೌ ಬಹುಲಂ । ಪಾ. ೬-೧-೩೭.೬ । ಇತಿ ಯಕಾರಸ್ಯ ಸಂಪ್ರಸಾರಣಂ ಪರಪೂರ್ವತ್ವಂ । ಛಂದಸೀರ ಇತಿ ವತ್ವಂ । ಆದ್ಗುಣಃ । ನನು ವತ್ವಸ್ಯಾಸಿದ್ಧತ್ವಾದ್ಬಹಿರಂಗತ್ವಾಚ್ಚ ಪ್ರಾಗೇವ ಗುಣೇ ಕೃತೇ ಇವರ್ಣಾಭಾವಾನ್ನ ವತ್ವಂ । ನ ಚಾಂತಾದಿವಚ್ಚ । ಪಾ. ೬-೧-೮೫ । ಇತ್ಯಾದಿವದ್ಭಾವೇನೇವರ್ಣಸಂಪಾದನಂ ವರ್ಣಾಶ್ರಯವಿಧೌ ತತ್ಪ್ರತಿ-ಷೇಧಾತ್ । ಅನ್ಯಥಾ ಖಟ್ವಾಭಿರಿತ್ಯತ್ರ ಸವರ್ಣದೀರ್ಘಸ್ಯಾಂತವದ್ಭಾವೇನ ಅಕಾರತ್ವಾದತೋ ಭಿಸ ಐಸ್ । ಪಾ. ೭-೧-೯ । ಇತ್ಯೈಸಾದೇಶಃ ಸ್ಯಾತ್ । ನ ಚ ನಿರವಕಾಶತ್ವೇನ ವತ್ವಸ್ಯಾನವಕಾಶತ್ವಂ । ಅಗ್ನಿವಾನ್ಸ್ತೃ ದರ್ಭಸ್ತಂಬಃ । ಉಪ ಬ್ರಹ್ಮಾಣಿ ಹರಿವಃ । ಋಗ್ವೇ. ೧೦-೧೦೪.೬ । ಇತ್ಯಾದಾವವಕಾಶಲಾಭಾತ್ ಸತ್ಯಂ । ಅತ್ರ ಗುಣಪ್ರವೃತ್ತೇಃ ಪ್ರಾಗಿಕಾರಾತ್ಪರೋ ಮತುಪ್ । ಕದಾಚಿದಿವರ್ಣಾತ್ಪರಸ್ಯ ಮತುಪಃ

ಪಶ್ಚಾದೇಕಾರಾದೇಶೇನೇವರ್ಣಾಭಾವೇಽಪಿ ಭವತಿ ವತ್ವಮಿತಿ ಛಂದಸೀರ ಇತಿ ಸೂತ್ರಕೃತಾ ವಿವಕ್ಷಿತಂ । ಅಮುನೈವಾಭಿಪ್ರಾಯೇಣ ಹರಿವ ಇತ್ಯಾದಿಕಮುದಾಹೃತ್ಯಾಸ್ಯಾಂತೇ ವೃತ್ತಿಕೃತಾ ಅರೇವಾನಿತ್ಯುದಾಹೃತಂ । ಕಾ. ೮-೨-೧೫ । ಹ್ರಸ್ವನುಡ್ಭ್ಯಾಮಿತ್ಯತ್ರಾರೇಶಬ್ದಾನ್ಮತುಪ ಇತ್ಯುದಾತ್ತತ್ವಂ ವಕ್ತವ್ಯಂ । ಪಾ. ೬-೧-೧೭೬-೧ । ಇತ್ಯಾತ್ರಾರೇಶಬ್ದೋ ರೇಶಬ್ದಸ್ಯಾಪ್ಯುಪಲಕ್ಷಣಂ । ಅತ ಏವ ಹಿ ರೇವಾಃ ಇಂದ್ರೇತ್ಯಾದೌ ಮತುಪ ಉದಾತ್ತತ್ವಂ ದೃಷ್ಟಂ । ಅಥವಾ ಹ್ರಸ್ವನುಡ್ಭ್ಯಾಮಿತ್ಯತ್ರಾಪಿ ಕದಾಚಿದ್ಧ್ರಸ್ವಾತ್ಪರಸ್ಯ ಮತುಪ ಉದಾತ್ತತ್ವಮಿತ್ಯೇವ ವ್ಯಾಖ್ಯೇಯಂ । ಏವಂ ಚ ಸಂಪ್ರಸಾರಣಪರಪೂರ್ವತ್ವಯೋಃ ಕೃತಯೋರ್ಗುಣಾತ್ಪ್ರಾಘ್ರ್ಹಸ್ವಾತ್ಪರೋ ಮತುಬಿತಿ ರೇವಾನಾರೇವಾನಿತ್ಯಾದೌ ಸರ್ವತ್ರೋದಾತ್ತತ್ವಂ ಸಿಧ್ಯತಿ । ಅಯಮೇವ ಸೂತ್ರಕೃತೋಽಭಿಪ್ರಾಯೋ ವಾರ್ತಿಕಕೃತಾ ವ್ಯಾಖ್ಯಾತ ಇತಿ । ಅಮೀವಹಾ । ಅಮ ರೋಗ ಇತ್ಯೇತಸ್ಮಾದ್ಬಾಹುಲಕಾದೀವನ್ಪ್ರತ್ಯಯೇನಾಮೀವಶಬ್ದೋ ನಿಪಾತಿತಃ । ತಂ ಹಂತೀತಿ ಬಹುಲಂ ಛಂದಸೀತಿ ಕ್ವಿಪ್ । ಕೃದುತ್ತರಪದಪ್ರಕೃತಿಸ್ವರತ್ವಂ । ವಸುವಿತ್ । ವಸು ವಿಂದತೀತಿ ವಸುವಿತ್ । ಕ್ವಿಪ್ಚೇತಿ ಕ್ವಿಪ್ । ಉತ್ತರಪದಪ್ರಕೃತಿಸ್ವರತ್ವಂ । ಪುಷ್ಟಿವರ್ಧನಃ । ವರ್ಧಯತೇರ್ನಂದ್ಯಾದಿತ್ವಾಲ್ಲ್ಯುಃ । ಪಾ. ೩-೧-೧೩೪ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಪುಷ್ಟೇರ್ವರ್ಧನ ಇತಿ ಕರ್ಮಣಿ ಷಷ್ಠ್ಯಾ ಸಮಾಸಃ । ಕೃದುತ್ತರಪದಪ್ರಕೃತಿಸ್ವರತ್ವಂ । ಸಿಷಕ್ತು । ಷಚ ಸಮವಾಯೇ । ಲೋಟಿ ಬಹುಲಂ ಛಂದಸೀತಿ ಶಪಃ ಶ್ಲುಃ । ಶ್ಲಾವಿತಿ ದ್ವಿತ್ವೇ ಹಲಾದಿಶೇಷೇ ಬಹುಲಂ ಛಂದಸೀತ್ಯಭ್ಯಾಸಸ್ಯಾಕಾರಸ್ಯೇಕಾರಃ। ಪಾ. ೭-೪-೭೮ । ತುರಃ । ತುರ ತ್ವರಣೇ । ಇಗುಪಧಜ್ಞಾಪ್ರೀಕಿರಃ । ಕಃ ಪ್ರತ್ಯಯಸ್ವರಃ ॥

॥ ಪ್ರತಿಪದಾರ್ಥ ॥

ಯಃ—ಯಾವ ಬ್ರಹ್ಮಣಸ್ಪತಿಯು । ರೇವಾನ್—ಧನವುಳ್ಳವನೋ । —ಯಃ ಯಾವ ಬ್ರಹ್ಮಣಸ್ಪತಿಯು । ಅಮೀವಹಾ—ರೋಗಗಳನ್ನು ಪರಿಹಾರಮಾಡುವನೋ । ವಸುವಿತ್—ಧನವನ್ನು ಒದಗಿಸುವವನೋ । ಪುಷ್ಟಿವರ್ಧನಃ—ಪುಷ್ಟಿಯನ್ನು ಹೆಚ್ಚುಮಾಡುವವನೋ । ಯಃ—ಯಾವನು । ತುರಃ —ಬೇಗನೆ ಫಲವನ್ನು ಕೊಡುವನೋ । ಸಃ—ಆ ಬ್ರಹ್ಮಣಸ್ಪತಿಯು । ನಃ—ನಮ್ಮನ್ನು । ಸಿಷಕ್ತು—ಸೇವಿಸಲಿ (ಅನುಗ್ರಹಿಸಲಿ)

॥ ಭಾವಾರ್ಥ ॥

ಬ್ರಹ್ಮಣಸ್ಪತಿಯು ಮಹಾಧನಾಢ್ಯನು. ಇತರರಿಗೆ ಧನವನ್ನು ಕೊಡತಕ್ಕವನು. ಪುಷ್ಟಿಯನ್ನುಂಟುಮಾಡುವವನು. ಶೀಘ್ರವಾಗಿ ಫಲವನ್ನು ಕೊಡತಕ್ಕವನು. ಇಂತಹ ಬ್ರಹ್ಮಣಸ್ಪತಿಯು ನಮ್ಮನ್ನು ಅನುಗ್ರಹಿಸಲಿ.

## English Translation

May he (Brahmanaspati) who is wealthy, the healer of disease; the acquirer of riches, incraaser of nourishments, the prompt bestower of rewards be favourable to us.

॥ ವಿಶೇಷವಿಷಯಗಳು ॥

ರೇವಾನ್—ರಯಿರಸ್ಯಾಸ್ತೀತಿ ರೇವಾನ್—ಧನವುಳ್ಳವನು.

**ಅಮೀವಹಾ—ಅಮ ರೋಗಃ ತಂ ಹಂತೀತಿ ಅಮೀವಹಾ—ರೋಗವನ್ನು ನಾಶಮಾಡುವವನು.**

**ತುರಃ—ತ್ವರೋಪೇತಃ ಶೀಘ್ರಫಲದಃ—ಬೇಗನೆ ಫಲಗಳನ್ನು ಕೊಡುವವನು. ತುರಃ ಎಂಬ** ಶಬ್ದಕ್ಕೆ ತ್ವರೋಪೇತಃ ಶೀಘ್ರಯುಕ್ತನು ತ್ವರಿತವಾಗಿ ಅಥವಾ ಬೇಗನೆ ಕೆಲಸಮಾಡುವವನು ಎಂದರ್ಥವಾದರೂ ಇಲ್ಲಿ ಭಾಷ್ಯಕಾರರು ಕರ್ಮಗಳಿಗೆ ಬೇಗನೆ ಫಲವನ್ನು ಕೊಡುವವನೆಂದು ಅರ್ಥವನ್ನು ಹೊಂದಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ರೇವಾನ್**—ರಯಿಃ ಅಸ್ಯ ಅಸ್ತಿ ಎಂದು ವಿಗ್ರಹ. **ತದಸ್ಯಾಸ್ತ್ಯಸ್ಮಿನ್ನಿತಿಮತುಪ್** (ಪಾ.ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ, ಪ್ರಾತಿಪದಿಕಾವಯವವಾದ ಸುಗೆ 'ಸುಪೋಧಾತು' ಎಂಬುದರಿಂದ ಲುಕ್ ರಯಿ+ಮತ್, **ರಯೇರ್ಮತೌಬಹುಲಮ್** (ಪಾ.ಸೂ. ೬-೧-೩೭-೬) ಮತುಪ್ ಪ್ರತ್ಯಯ ಪರದಲ್ಲಿರುವಾಗ ರಯಿ ಶಬ್ದಕ್ಕೆ ಸಂಪ್ರಸಾರಣವು ಬಹುಲವಾಗಿ ಬರುವುದು ಎಂಬುದರಿಂದ ಸಂಪ್ರಸಾರಣ ಯಕಾರಕ್ಕೆ ಇಕಾರ **ಸಂಪ್ರಸಾರಣಾಚ್ಚ** (ಪಾ.ಸೂ. ೬-೧-೧೦೮) ಎಂಬುದರಿಂದ ಪೂರ್ವರೂಪ ರ+ಇ+ಮತ್ **ಛಂದಸೀರಃ** (ಪಾ. ಸೂ. ೮-೨-೧೫) ಎಂಬುದರಿಂದ ಮಕಾರಕ್ಕೆ ವಕಾರ, **ಆದ್ಗುಣಃ** (ಪಾ. ಸೂ. ೬-೧-೮೭) ಎಂಬುದರಿಂದ ಅ+ಇಗಳಿಗೆ ಏಕಾರ, ರೇ+ವತ್ ಎಂದಾಗುವುದು ರ+ಇ+ಮತ್ ಎಂದಿರುವಾಗ ಛಂದಸೀರಃ ಎಂದು ವತ್ವ ಮೊದಲು ಬರುವುದೋ ಆದ್ಗುಣಃ ಎಂದು ಗುಣ ಮೊದಲು ಬರುವುದೋ ಎಂದರೆ ಛಂದಸೀರಃ ಎಂಬುದು ಎಂಟನೆಯ ಅಧ್ಯಾಯದಲ್ಲಿ ಎರಡನೇ ಪಾದದಲ್ಲಿರುವುದು. ಆದ್ಗುಣಃ ಎಂಬ ಸೂತ್ರವು. ಆರನೇ ಅಧ್ಯಾಯದ ಮೊದಲನೇ ಪಾದದಲ್ಲಿರುವುದು. ಏವಂಚ **ಪೂರ್ವತ್ರಾ-ಸಿದ್ಧಮ್** (ಪಾ. ಸೂ. ೮-೨-೧) ಎಂಬುದರಿಂದ ಪೂರ್ವಶಾಸ್ತ್ರವಾದ ಗುಣವನ್ನು ಮಾಡುವಾಗ ಪರಶಾಸ್ತ್ರ ಎಂದರೆ ತ್ರೈಪಾದಿಕವಾದ ವತ್ವವು ಅಸಿದ್ಧವಾಗುವುದು. ಆದ್ದರಿಂದ ಮೊದಲು ಗುಣ ಬರುವುದು ಯುಕ್ತ. ಅಲ್ಲದೆ ಘಟಕ—ನಿಮಿತ್ತಕಂ ಅನ್ತರಂಗಂ ಎಂದು ಅಂತರಂಗಕ್ಕೆ ಲಕ್ಷಣವು. ಇಲ್ಲಿ ಬಹಿರಂಗ ಶಾಸ್ತ್ರವಾದ ವತ್ವಶಾಸ್ತ್ರದ ನಿಮಿತ್ತ ಸಮುದಾಯದಲ್ಲಿ ಸೇರಿದ ವರ್ಣದ್ವಯಮಾತ್ರ ನಿಮಿತ್ತಕವಾದ್ದರಿಂದ ಗುಣ ಅನ್ತರಙ್ಗ, ತಾದೃಶವರ್ಣದ್ವಯಘಟಿತ ನಿಮಿತ್ತಕವಾದ್ಧರಿಂದ ವತ್ವ ಬಹಿರಂಗ-ಏವಂಚ **ಅಸಿದ್ಧಂ-ಬಹಿರಙ್ಗಮನ್ತರಙ್ಗೇ (ಪರಿಭಾ ೫೦)** ಎಂಬುದರಿಂದ ಅಂತರಂಗವಾದ ಗುಣವನ್ನು ಮಾಡುವಾಗ ಬಹಿರಂಗವಾದ ವತ್ವ ಶಾಸ್ತ್ರವು ಅಸಿದ್ಧವಾಗುವುದು. ಈ ಎರಡು ಕಾರಣಗಳಿಂದ ಮೊದಲು ಗುಣ ಬರುವುದು ಯುಕ್ತ, ಹೀಗೆ ಮೊದಲು ಗುಣಬಂದರೆ ರೇ+ಮತ್ ಎಂದಾಗುವುದು. ಈಗ ಇವರ್ಣಾಂತವಾದ ಶಬ್ದದ ಮುಂದೆ ಮತುಪ್ ಇಲ್ಲ. ಆದ್ದರಿಂದ **ಛಂದಸೀರಃ** (೮-೨-೧೫) ಇವರ್ಣಾಂತಕ್ಕಿಂತಲೂ ರೇಫಾಂತಕ್ಕಿಂತಲೂ ಪರದಲ್ಲಿರುವ ಮತುಪ್ಪಿನ ಮಕಾರಕ್ಕೆ ವಕಾರ ಬರುವುದು ಎಂಬುದರಿಂದ ವಕಾರ ಹೇಗೆ ಬರುವುದು. **ಅನ್ತಾದಿವಚ್ಚ** (ಪಾ. ಸೂ. ೬-೨-೮೫) ಏಕಾದೇಶವು ಪೂರ್ವದ ಅಂತದಂತೆಯೂ, ಪರದ ಆದಿಯಂತೆಯೂ ಆಗುವುದು ಎಂದು ಹೇಳಿರುವುದರಿಂದ ಇಲ್ಲಿ ಪರಾದಿವದ್ಭಾವವನ್ನು ಲಕ್ಷ್ಯಾನುಸಾರವಾಗಿ ಆಶ್ರಯಿಸುವೆವು. 'ಉಭಯತ ಆಶ್ರಯಣೇನಾನ್ತಾದಿವತ್' ಎಂದು ಪ್ರತಿಷೇಧವಿರುವುದರಿಂದ ಪೂರ್ವಾನ್ತವದ್ಭಾವ ಪರಾದಿವದ್ಭಾವಗಳೆರಡನ್ನೂ ಒಟ್ಟಿಗೆ ಹೇಳಲಾಗುವುದಿಲ್ಲ. ಏವಂಚ ಗುಣರೂಪವಾದ ಏಕಾದೇಶಕ್ಕೆ ಪರದಲ್ಲಿರುವುದು ಇಕಾರ. ಅದಕ್ಕೆ ಆದಿಯೂ ಅದೇ, ಆದಿವತ್ ಆಗುವುದು ಎಂಬುದರಿಂದ ಇಕಾರ

ವಿದ್ದಂತೆ ಆಗುವುದು. ಆದ್ದರಿಂದ, ಇವರ್ಣಾತ್ಪರತ್ವವು ಸಂಭವಿಸುವುದು ಎಂತು ಹೇಳುತ್ತೇವೆ ಎಂದರೆ ಹೀಗೆ ಹೇಳಲಾಗುವುದಿಲ್ಲ. ಏಕೆಂದರೆ ಇತ್ವವು ವರ್ಣಮಾತ್ರವೃತ್ತಿಯಾದ ಧರ್ಮ. ಆದ್ದರಿಂದ ನವಾ ಅತಾದ್ರೂಪ್ಯಾತಿದೇಶಾತ್, ನವಾ ವರ್ಣಾಶ್ರಯವಿಧೌಚ ವರ್ಣಶ್ರಯಕಾರ್ಯವನ್ನು ಮಾಡುವಾಗ ಅಂತಾದಿವದ್ಭಾವ ಬರುವುದಿಲ್ಲ ಎಂಬ ವಚನವನ್ನು ಮಾಡಬೇಕಾದ್ದಿಲ್ಲ ಏಕೆಂದರೆ ನವಾ ಅತಾದ್ರೂಪ್ಯಾತಿದೇಶಾತ್‌ತಾದ್ರೂಪ್ಯ ಎಂದರೆ ವರ್ಣವೃತ್ತಿಯಾದ ಧರ್ಮ. ಅದಕ್ಕೆ ಅತಿದೇಶವು ಈ ಸೂತ್ರದಿಂದ ಬರುವುದೇ ಇಲ್ಲ, ಆದ್ದರಿಂದ ಪೂರ್ವೋಕ್ತವಚನವನ್ನು ಆರಂಭಿಸಬೇಕಾದುದಿಲ್ಲ ಎಂದು ಹೇಳಿರುವುದರಿಂದ ಇತ್ವರೂಪವಾದ ವರ್ಣ ವೃತ್ತಿ ಧರ್ಮಕ್ಕೆ ಅಂತಾದಿವಚ್ಚ ಎಂಬುದರಿಂದ ಅತಿದೇಶ ಬರುವುದಿಲ್ಲ. ವರ್ಣಾಶ್ರಯ ವಿಧಿಯಲ್ಲಿ ಅಂತಾದಿವಚ್ಚ ಎಂಬ ಅತಿದೇಶವನ್ನು ಒಪ್ಪಿಕೊಂಡರೆ ಖಟ್ವಾಭಿಃ ಎಂಬಲ್ಲಿ ಐಸಾದೇಶ ಬರಬೇಕಾಗುವುದು. ಹೇಗೆಂದರೆ ಖಟ್ವಶಬ್ದದ ಮುಂದೆ ಟಾಪ್, ಸವರ್ಣದೀರ್ಘ ಖಟ್ವಾ ಎಂದಾಗುವುದು. ಈಗ ಇದು ಯದ್ಯಪಿ ಹ್ರಸ್ವಾಕಾರಾಂತವಲ್ಲ. ಆದರೂ, ಏಕಾದೇಶಕ್ಕೆ ಪೂರ್ವದಲ್ಲಿರುವ ವರ್ಣವು ಹ್ರಸ್ವವೇ ಆದ್ದರಿಂದ ಪೂರ್ವಾಂತವದ್ಭಾವದಿಂದ ಪೂರ್ವವರ್ಣದಲ್ಲಿರುವ ಅತ್ವವು ಏಕಾದೇಶದಲ್ಲಿ ಬರುವುದು. ಏವಂಚ ಹ್ರಸ್ವಾ ವರ್ಣಾಂತದ ಮುಂದೆ ಭಿಸ್ ಇರುವುದರಿಂದ ಅದಕ್ಕೆ ಐಸಾದೇಶವು **ಅತೋಭಿಸಐಸ್** (ಪಾ. ಸೂ. ೭-೧-೯) ಎಂಬುದರಿಂದ ಬರಬೇಕಾಗುವುದು. ಆದ್ದರಿಂದ ವರ್ಣಾಶ್ರಯ ಕಾರ್ಯವನ್ನು ಮಾಡುವಾಗ ಅನ್ತಾದಿವದ್ಭಾವ ಬರುವುದಿಲ್ಲ. ಅಂತರೇ+ಮತ್ ಎಂಬಲ್ಲಿ ಇವರ್ಣಾಂತಾತ್ಪರತ್ವವು ಇಲ್ಲದೇ ಇರುವುದರಿಂದ ವತ್ವ ಹೇಗೆ ಬರುವುದು. ಇದಕ್ಕಾಗಿ ವತ್ವವು ಅಪವಾದವಾದ್ದರಿಂದ ಅಂತರಂಗಕ್ಕಿಂತಲೂ ಮೊದಲೇ ಬರುವುದು ಎಂದು ಹೇಳುತ್ತೇವೆ. ಹೇಗೆಂದರೆ ನಿರವಕಾಶೋವಿಧಿರಪವಾದಃ ಅವಕಾಶಯಾವುದಾದರೂ ಲಕ್ಷ್ಯದಲ್ಲಿ ಪ್ರವೃತ್ತಿಸುವಿಕೆ. ಅದು ದೊರಕದೇ ಇದ್ದರೆ ಆ ಶಾಸ್ತ್ರವು ಅಪವಾದವಾಗುವುದು. ಇಲ್ಲಿ ವತ್ವಕ್ಕಿಂತ ಮೊದಲು ಗುಣಬಂದರೆ ಹೀಗೆ ಮಿಕ್ಕ ಸ್ಥಳಗಳಲ್ಲಿಯೂ ಆಗಬಹುದು. ಏವಂಚ ಇದಕ್ಕೆ ಬೇರೆ ಲಕ್ಷ್ಯ ದೊರೆಯದೆ ಇರುವುದರಿಂದ ಇದು ಅಪವಾದವೆನ್ನುವೆವು. ಅಪವಾದವಾದ್ದರಿಂದ ಗುಣಕ್ಕಿಂತಲೂ ಮುಂಚೆಯೇ ವತ್ವ ಬರುವುದು ಎನ್ನುವೆವು ಎಂದರೆ ಹೀಗೆ ಹೇಳಲಾಗುವುದಿಲ್ಲ. ಏಕೆಂದರೆ ಸರ್ವಥಾ ವತ್ವ ಶಾಸ್ತ್ರಕ್ಕೆ ವೈಯರ್ಥ್ಯ ಬರುವಪಕ್ಷಕ್ಕೆ ಹೀಗೆ ಹೇಳಬಹುದು. ಆದರೆ ವತ್ವಶಾಸ್ತ್ರವು **ಅಗ್ನಿವಾನ್ಸ್ಯೈ ದರ್ಭಸ್ತಮ್ಬಃ** (ತೈ. ಬ್ರಾ. ೨-೨-೧-೫) **ಉಪಬ್ರಹ್ಮಾಣಿ ಹರಿವಃ** (ಋ. ಸಂ. ೧೦-೧೦೪-೬) ಎಂಬೀ ಮಂತ್ರಗಳಲ್ಲಿರುವ ಅಗ್ನಿವಾನ್, ಹರಿವಃ ಎಂಬಲ್ಲಿ ಸಾವಕಾಶವಾಗುವುದು. ಆದ್ದರಿಂದ ಇದು ಅಪವಾದವಾಗುವುದಿಲ್ಲ. ಆದಕಾರಣ ಅಪವಾದವಾದ್ದರಿಂದ ವತ್ವ ಮೊದಲು ಬರುವುದು ಎಂದೂ ಹೇಳಲಾಗುವುದಿಲ್ಲ. ಏವಂಚ ರೇವಾನ್ ಎಂಬುದು ಹೇಗೆ ಸಿದ್ಧಿಸುವುದು ಎಂದರೆ ಯದ್ಯಪಿ ಪೂರ್ವೋಕ್ತವಾದುದು ಸತ್ಯವು. ಆದರೂ ಇಲ್ಲಿ ಗುಣವು ಬರುವುದಕ್ಕಿಂತಲೂ ಮೊದಲು ರ+ಇ+ಮತ್ ಎಂದಿರುವಾಗ ಮತುಪ್ಪು ಇಕಾರಕ್ಕಿಂತಲೂ ಪರದಲ್ಲಿರತಕ್ಕದ್ದಾಗುವುದು ಏವಂಚ ಕದಾಚಿತ್ ಇ ವರ್ಣಕ್ಕಿಂತಲೂ ಪರದಲ್ಲಿರುವ ಮತುಪ್ಪಿಗೆ ನಂತರ ಏಕಾರಾದೇಶ ಬಂದು ಇ ವರ್ಣಾತ್ಪರತ್ವವಿಲ್ಲದೇ ಇದ್ದರೂ ವತ್ವ ಬರುವುದು ಆದ್ದರಿಂದಲೇ **ಛಂದಸೀರಃ** ಎಂಬುದಕ್ಕೆ ಹರಿವಃ ಮೊದಲಾದ ಉದಾಹರಣೆಗಳನ್ನು ಕೊಟ್ಟಮೇಲೂ ಕೊನೆಯಲ್ಲಿ ಆರೇವಾನ್ ಎಂಬುದನ್ನೂ ಉದಹರಿಸಿರುವರು. **ಹ್ರಸ್ವನುಡ್ಭ್ಯಾಂ ಮತುಪ್** (ಪಾ. ಸೂ. ೬-೧-೧೭೬) ಎಂಬಲ್ಲಿ **ಆರೇಶಬ್ದಾತ್ ಮತುಪಃ**(ಪಾ. ಸೂ. ವಾ. ೬-೧-೧೭೬-೧ ) ಆರೇಶಬ್ದದ ಮುಂದೆ ಇರುವ ಮತುಪ್ ಪ್ರತ್ಯಯವು ಉದಾತ್ತವಾಗುವುದು ಎಂಬ ವಚನವು ಇರುವುದು. ಇಲ್ಲಿ ಆರೇ ಎಂಬ ಶಬ್ದವು ರೇ ಶಬ್ದಕ್ಕೂ ಉಪಲಕ್ಷಣ, ರೇ ಶಬ್ದದ ಮುಂದೆ ಇರುವ ಮತುಪ್ಪು ಉದಾತ್ತವಾಗುವುದು ಎಂದೂ ಇಟ್ಟುಕೊಳ್ಳಬೇಕು ಎಂದು ಭಾವ. ಆದುದರಿಂದಲೇ ರೇವಾಇನ್ನ ಇತ್ಯಾದಿ ಸ್ಥಳಗಳಲ್ಲಿ ಮತುಪ್ಪು ಉದಾತ್ತವಾಗಿ ಇರುವುದು. ಅಥವಾ ಹ್ರಸ್ವಮುಡ್ಭ್ಯಾಂ ಮತುಪ್

ಎಂಬಲ್ಲಿಯೂ ಕದಾಚಿತ್ ಹ್ರಸ್ವಾಂತದ ಮುಂದೆ ಇರುವ ಮತುಪ್ಪು ಉದಾತ್ತವಾಗುವುದು ಎಂದೇ ಅರ್ಥವರ್ಣನೆ ವಿವಕ್ಷಿತವು ಏವಂಚ ರಯಿಶಬ್ದ ಮುಂದಿರುವಾಗಲೋ ಅಥವಾ ಯಕಾರಕ್ಕೆ ಸಂಪ್ರಸಾರಣಪೂರ್ವರೂಪವೂ ಬಂದ ನಂತರ ಗುಣ ಬರುವುದಕ್ಕಿಂತಲೂ ಮುಂಚೆ ರ+ಇ+ಮತ್ ಎಂದಿರುವಾಗಲೋ ಹ್ರಸ್ವಾಂತಕ್ಕಿಂತಲೂ ಪರದಲ್ಲಿ ಮತುಪ್ ಇರುವುದರಿಂದ ರೇವಾನ್, ಆರೇವಾನ್ ಇತ್ಯಾದಿ ಸರ್ವಲಕ್ಷ್ಯಗಳಲ್ಲಿಯೂ ಮತುಪ್ಪಿಗೆ ಉದಾತ್ತಸ್ವರವು ಸಿದ್ಧಿಸುವುದು. ಇದೇ ಅಭಿಪ್ರಾಯವು ಸೂತ್ರಕಾರರಿಗೆ ವಿವಕ್ಷಿತವು. ಇದನ್ನೇ ವಾರ್ತಿಕಕಾರರು ವಿವರಿಸಿರುವರು. ಆದ್ದರಿಂದ ರೇವಾನ್ ಎಂಬಲ್ಲಿ ವತ್ವವೂ ಸ್ವರವೂ ಸಿದ್ಧಿಸುವುದು. **ಛಂದಸೀರಃ** ಇವರ್ಣಾಂತ, ರೇಫಾಂತ ಶಬ್ದ ಗಳ ಮುಂದೆ ವಿಹಿತವಾದ ಮತುಪ್ಪಿನ ಮಕಾರಕ್ಕೆ ವತ್ವ ಬರುವದು ಎಂದು ಪೂರ್ವಮಂತ್ರದಲ್ಲಿ ತೋರಿಸಿರುವಂತೆ ವ್ಯಾಖ್ಯಾನ ಮಾಡಿದರೆ ಈಗ ಅಂದರೆ ಗುಣಾನಂತರ ಇ ವರ್ಣವಿಲ್ಲದಿದ್ದರೂ ರಯಿ ಶಬ್ದದ ಮುಂದೆ ಮತುಪ್ ವಿಹಿತವಾಗಿರುವುದರಿಂದ ಇವರ್ಣಾಂತಾದ್ವಿಹಿತತ್ವವಿರುವುದರಿಂದ ವತ್ವವು ಬರಲು ಯಾವ ಅಡ್ಡಿಯೂ ಇರುವು ದಿಲ್ಲ. **ಹ್ರಸ್ವನುಡ್ಭ್ಯಾಮ್,** ಎಂಬಲ್ಲಿ ಭಾಷ್ಯದಲ್ಲಿ ರೇಶಬ್ದಾಚ್ಚ ಎಂದೇ ವಾರ್ತಿಕವಿರುವುದು. ಆದ್ದರಿಂದ ಉಪಲಕ್ಷಣಾದ್ಯರ್ಥವರ್ಣನೆಗೆ ಅವಕಾಶವೇ ಇಲ್ಲವು.

**ಅಮೀವಹಾ**—ಅಮ ರೋಗೇ, ಧಾತು. **ಶೇವಯಹ್ವ**—(ಉ. ಸೂ. ೧-೧೫೨) ಎಂಬುದರಿಂದ ಅಮ್ ಧಾತುವಿನ ಮುಂದೆ ವನ್ ಪ್ರತ್ಯಯವೂ ಅದಕ್ಕೆ ಈಡಾಗಮವೂ ನಿಪಾತಿತವಾಗಿರುವುದು. ಅಮೀವಾಂ ಹನ್ತಿ, ಎಂದು ವಿವಕ್ಷಿಸಿದಾಗ **ಬಹುಲಂಛಂದಸಿ** (ಪಾ. ಸೂ. ೩-೨-೮೮) ಉಪಪದಾಂತರಯೋಗವಿದ್ದರೂ ಹನಧಾತುವಿನ ಮುಂದೆ ಬಹುಲವಾಗಿ ಕ್ವಿಪ್ ಬರುವುದು ಎಂಬುದರಿಂದ ಕ್ವಿಪ್, ಅಮೀವಹನ್, ಧಾತುಸ್ವರದಿಂದ ಹನ್ ಅಂತೋದಾತ್ತ, ಸಮಾಸಾನಂತರ **ಗತಿಕಾರಕೋಪಪದಾತ್ಕೃತ್,** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬಂದು ಅದೇ ಸ್ವರ ನಿಲ್ಲುವುದು.

**ವಸುವಿತ್**—ವಸು ವಿನ್ದತೀತಿ ವಸುವಿತ್, **ಕ್ವಿಪ್‌ಚ** ಎಂಬುದರಿಂದ ವಿದ್ಲೃ ಲಾಭೇ, ಧಾತುವಿನ ಮುಂದೆ ಕ್ವಿಪ್, ಮೊದಲಿನಂತೆ ಕೃದುತ್ತರಪದಪ್ರಕೃತಿಸ್ವರ.

**ಪುಷ್ಟಿವರ್ಧನಃ**- ಪುಷ್ಟಿಂ ವರ್ಧಯತೀತಿ ಪುಷ್ಟಿವರ್ಧನಃ ವೃಧು ವೃದ್ಧೌ, ಧಾತು. ಇದರ ಮುಂದೆ ಣಿಚ್ ನನ್ದಿ ವಾಶಿ ಮದಿ ದೂಷಿ ಸಾಧಿ ವರ್ಧಿ ಶೋಭಿ ರೋಚಿಭ್ಯೋಣ್ಯನ್ತೇಭ್ಯಸ್ಸಂಜ್ಞಾಯಾಮ್, ಎಂದು ಣ್ಯನ್ತವಾದ ವೃಧ್‌ಧಾತುವು ನನ್ದ್ಯಾದಿಯಲ್ಲಿ ಪಠಿತವಾಗಿರುವುದು. ಆದ್ದರಿಂದ ಇದರ ಮುಂದೆ **ನನ್ದಿಗ್ರಹಿಪಚಾದಿಭ್ಯೋಲ್ಯು-ಣಿನ್ಯಚಃ** (ಪಾ. ಸೂ. ೩-೧-೧೩೪) ಎಂಬುದರಿಂದ ಲ್ಯು ಪ್ರತ್ಯಯ ಬರುವುದು, ಣೇರನಿಟಿ, ಎಂಬುದರಿಂದ ಣಿ ಲೋಪ, ಯುವೋರನಾಕೌ, ಎಂಬುದರಿಂದ ಯುಗೆ ಅನ ಆದೇಶ, ಲಘೂಪಧಗುಣ, ರಪರತ್ವ ವರ್ಧನ. **ಲಿತಿ** (ಪಾ. ಸೂ. ೬-೧-೧ ) ಎಂಬುದರಿಂದ ಅನ ಪ್ರತ್ಯಯದ ಹಿಂದೆ ಇರುವುದು ಉದಾತ್ತ. ಪುಷ್ಟೇಃ ವರ್ಧನಃ ಎಂದು ಕರ್ಮಣಿಷಷ್ಠ್ಯಂತದೊಂದಿಗೆ ಸಮಾಸ, ಕೃದುತ್ತರಪದಪ್ರಕೃತಿಸ್ವರ.

**ಸಿಷಕ್ತು— ಷಚ ಸಮವಾಯೇ, ಧಾತ್ವಾದೇಃಷಃಸಃ,** ಎಂಬುದರಿಂದ ಷಕಾರಕ್ಕೆ ಸಕಾರ, **ಲೋಟ್, ತಿಪ್,** ಏರುಃ, ಎಂಬುದರಿಂದ ತಿಯ ಇಕಾರಕ್ಕೆ ಉಕಾರ. ಕರ್ತರಿಶಪ್ ಎಂಬುದರಿಂದ **ಶಪ್,** ಅದಕ್ಕೆ **ಬಹುಲಂ ಛಂದಸಿ** (ಪಾ. ಸೂ. ೨-೪-೭೬) ಛಂದಸ್ಸಿನಲ್ಲಿ ಶಪ್ಪಿಗೆ ಬಹುಲವಾಗಿ ಶ್ಲು (**ಲೋಪ**) ಬರುವುದು. ಎಂಬುದರಿಂದ ಶ್ಲು ಬರುವುದು, **ಶ್ಲೌ** (ಪಾ.ಸೂ. ೪-೮೨) ಎಂಬುದರಿಂದ ದ್ವಿತ್ವ. ಸಚ್ ಸಚ್, ತು, **ಹಲಾದಿಃಶೇಷಃ** (ಪಾ.ಸೂ. ೭-೪-೬೦ ) ಎಂಬುದರಿಂದ ಅಭ್ಯಾಸದ ಚಕಾರಕ್ಕೆ **ಲೋಪ ಬಹುಲಂಛಂದಸಿ** (ಋ. ಸಂ. ೨-೪-೭೮ ) ಅಭ್ಯಾ

ಸದ ಅಕಾರಕ್ಕೆ ಇಕಾರವು ಛಂದಸ್ಸಿನಲ್ಲಿ ಬಹುಲವಾಗಿ ಬರುವುದು, ಎಂಬುದರಿಂದ ಮೊದಲನೇ ಸಕಾರದ ಅಕಾರಕ್ಕೆ ಇಕಾರ ಸಿಸಚ್+ತ, ಚೋಃಕುಃ (ಪಾ. ಸೂ. ೮-೨-೩೦) ಎಂಬುದರಿಂದ ಚಕಾರಕ್ಕೆ ಕಕಾರ. ಆದೇಶಪ್ರತ್ಯಯ-ಯೋಃ, ಎಂಬುದರಿಂದ ಎರಡನೇ ಸಕಾರಕ್ಕೆ ಷಕಾರ ಸಿಷಕ್ತು ಎಂದಾಗುವುದು.

ತುರಃ—ತುರ ತ್ವರಣೇ, ಧಾತು. ಇಗುಪಥ, ಇದರ ಮುಂದ ಇಗುಪಧಜ್ಞಾಪ್ರೀಕಿರಃಕಃ (ಪಾ. ಸೂ. ೩-೧-೧೩೫) ಎಂಬುದರಿಂದ ಕ ಪ್ರತ್ಯಯ, ಕಕಾರಕ್ಕೆ ಇತ್ಸಂಜ್ಞೆ ಲೋಪ, ಪ್ರತ್ಯಯವು ಕಿತ್ತು. ಆದ್ದರಿಂದ ಲಘೂಪಧಗುಣ ಬರುವುದಿಲ್ಲ. ಅದ್ಯುದಾತ್ತ, ಎಂಬುದರಿಂದ ಪ್ರತ್ಯಯಸ್ವರ ದರುವುದು, ತುರಃ ಎಂಬುದು ಅಂತೋದಾತ್ತವಾಗುವುದು ॥ ೨ ॥

॥ ಸಂಹಿತಾಪಾಠಃ ॥

ಮಾನಃ ಶಂಸೋ ಅರರುಷೋ ಧೂರ್ತಿಃ ಪ್ರಣಙ್ಮರ್ತ್ಯಸ್ಯ ।
ರಕ್ಷಾ ಣೋ ಬ್ರಹ್ಮಣಸ್ಪತೇ ॥ ೩ ॥

॥ ಪದಪಾಠಃ ॥

ಮಾ । ನಃ । ಶಂಸಃ । ಅರರುಷಃ । ಧೂರ್ತಿಃ । ಪ್ರಣಕ್ । ಮರ್ತ್ಯಸ್ಯ ॥
ರಕ್ಷ । ನಃ । ಬ್ರಹ್ಮಣಃ । ಪತೇ ॥ ೩ ॥

॥ ಸಾಯಣಭಾಷ್ಯಂ ॥

ಅರರುಷೋ ಮರ್ತ್ಯಸ್ಯೋಪದ್ರವಂ ಕರ್ತುಮಸ್ಮತ್ಸಮೀಪಂ ಪ್ರಾಪ್ತಸ್ಯ ಶತ್ರುರೂಪಸ್ಯ ಮನುಷ್ಯಸ್ಯ ಧೂರ್ತಿರ್ಹಿಂಸಕಃ ಶಂಸಃ ಶಂಸನಂ । ಅಧಿಕ್ಷೇಪ ಇತ್ಯರ್ಥಃ । ತಾದೃಶೋ ವಾಗ್ವಿಶೇಷೋ ನೋಽಸ್ಮಾನ್ಮಾ ಪ್ರಣಕ್। ಮಾ ಸಂಪೃಣಕ್ತು। ಶತ್ರುಣಾ ಪ್ರಯುಕ್ತೋಽಧಿಕ್ಷೇಪಃ ಕದಾಚಿದಸ್ಮಾನ್ಮಾ ಪ್ರಾಪ್ನೋತ್ವಿತ್ಯರ್ಥಃ । ತದರ್ಥಂ ಹೇ ಬ್ರಹ್ಮಣಸ್ಪತೇ ನೋಽಸ್ಮಾನ್ರಕ್ಷ । ಪಾಲಯ ॥ ಮಾ । ನಿಪಾತಃ । ಶಂಸನಂ । ಶಂಸಃ । ಭಾವೇ ಘಞ್ । ಞಿತ್ತ್ವಾದಾದ್ಯುದಾತ್ತಃ । ಅರರುಷಃ । ಅರ್ತೇರರುಃ । ಉ- ೪-೭೯ । ಇತ್ಯಂತರ್ಭಾವಿತಣ್ಯರ್ಥಾದ್ಧ ಗತಾವಿತ್ಯಸ್ಮಾದರುಸ್ । ಗುಣೋ ರಪರತ್ವಂ । ಪ್ರತ್ಯಯಸ್ವರೇ ಪ್ರಾಪ್ತೇ ವೃಷಾದಿತ್ವಾದಾದ್ಯುದಾತ್ತಃ । ಧೂರ್ತಿಃ । ಧುರ್ವೀ ಹಿಂಸಾರ್ಥಃ । ಕ್ತಿಚ್‌ಕ್ತೌ ಚ ಸಂಜ್ಞಾಯಾಮಿತಿ ಕ್ತಿಚ್। ತಿತುತ್ರತಥಸಿಸುಸರಕಸೇಷು ಚೇತೀಟ್ಪ್ರತಿಷೇಧಃ। ಉಪಧಾಯಾಶ್ಚ। ಪಾ. ೭-೧-೧೦೧। ಇತ್ಯುಪಧಾದೀರ್ಘತ್ವಂ । ವಲಿ ಲೋಪಂ ಬಾಧಿತ್ವೋಠಿ ಪ್ರಾಪ್ತೇ । ಪಾ. ೬-೪-೧೯ । ರಾಲ್ಲೋಪಃ । ಪಾ.

೩-೪-೨೧ | ಇತಿ ವಕಾರಲೋಪಃ | ಪ್ರಣಕ್ | ಪೃಚೀ ಸಂಪರ್ಕೇ | ಲಙಸ್ತಿಪ್ | ಇತಶ್ಚೇತೀಕಾರ-
ಲೋಪಃ | ಹಲ್ಙ್ಯಾದಿಲೋಪಃ | ಕುತ್ವಂ | ರುಧಾದಿಭ್ಯಃ ಶ್ನಮ್ | ತಸ್ಯ ವ್ಯತ್ಯಯೋ ಬಹುಲಂ |
ಪಾ. ೩-೧-೮೫ | ಇತ್ಯಡಾಗಮಃ | ಯಣಾದೇಶಃ | ಅಕಾರಸ್ಯಾಗಮಾನುದಾತ್ತತ್ವಂ ಬಾಧಿತ್ವಾ ವ್ಯತ್ಯ-
ಯೇನೋದಾತ್ತತ್ವಂ | ಚಾದಿಲೋಪೇ ವಿಭಾಷೇತಿ ನಿಘಾತಾಭಾವಃ | ಮರ್ತ್ಯಸ್ಯ | ಮೃಙ್ ಪ್ರಾಣತ್ಯಾಗೇ
ಅಸಿಹಸಿಮೃ ಇತ್ಯಾದಿನಾ | ಉ. ೩-೮೬ | ಔಣಾದಿಕಸ್ತನ್ಪ್ರತ್ಯಯಃ | ಮರ್ತೇಷು ಭವ ಇತ್ಯರ್ಥೇ ಭವೇ
ಛಂದಸೀತಿ ಯತ್ | ಯತೋಽನಾವ ಇತ್ಯಾದ್ಯುದಾತ್ತತ್ವಂ | ರಕ್ಷ | ರಕ್ಷ ಪಾಲನೇ | ಶಪಃ ಪಿತ್ತ್ವಾದ-
ನುದಾತ್ತತ್ವಂ | ಧಾತುಸ್ವರ ಏವ ಶಿಷ್ಯತೇ | ಪಾದಾದಿತ್ವಾನ್ನ ನಿಘಾತಃ | ರಕ್ಷಾ ಣಃ | ದ್ವ್ಯಚೋಽತಸ್ತಿಙ
ಇತಿ ದೀರ್ಘಃ | ಉಪಸರ್ಗಾದ್ಬಹುಲಂ | ಪಾ. ೮-೪-೨೮ | ಇತಿ ಬಹುಲಗ್ರಹಣಾದನುಪಸರ್ಗಾದಪಿ
ನಸೋ ಣತ್ವಂ | ಬ್ರಹ್ಮಣಸ್ಪತೇ | ಷಷ್ಠ್ಯಾಃ ಪತಿಪುತ್ರೇತಿ ಸಂಹಿತಾಯಾಂ ವಿಸರ್ಗಸ್ಯ ಸಕಾರಃ | ಸುಬಾ-
ಮಂತ್ರಿತೇ ಪರಾಂಗವದ್ಭಾವಾತ್ಪದದ್ವಯಸ್ಯಾಮಂತ್ರಿತನಿಘಾತಃ ||

|| ಪ್ರತಿಪದಾರ್ಥ ||

ಅರರುಷಃ—ಹಿಂಸೆ ಮಾಡುವ ಉದ್ದೇಶದಿಂದ ಬಂದ (ಶತ್ರುರೂಪನಾದ)| ಮರ್ತ್ಯಸ್ಯ—ಮನುಷ್ಯನ | ಧೂರ್ತಿಃ—ಹಿಂಸಾಕಾರಕವಾದ | ಶಂಸಃ—ನಿಂದಾರೂಪವಾದ ವಾಕ್ಯ | ನಃ—ನಮ್ಮನ್ನು | ಮಾ ಪ್ರಣಕ್—ಸ್ಪರ್ಶಿಸದೇ ಇರಲಿ (ಅದಕ್ಕೊಳಗಾಗದಿರಲಿ) | ಹೇ ಬ್ರಹ್ಮಣಸ್ಪತೇ—ಎಲೈ ಬ್ರಹ್ಮಣಸ್ಪತಿಯೇ | ನಃ—ನಮ್ಮನ್ನು | ರಕ್ಷ—ಕಾಪಾಡು |

|| ಭಾವಾರ್ಥ ||

ಎಲೈ ಬ್ರಹ್ಮಣಸ್ಪತಿಯೇ, ನಮ್ಮ ಶತ್ರುವು ಆಡುವ ನಿಂದಾವಾಕ್ಯಗಳಿಂದ ನಮಗೇನೂ ತೊಂದರೆಯಾಗದಂತೆ ನಮ್ಮನ್ನು ರಕ್ಷಿಸು.

## English Translation.

May the harmful imprecation of the wicked mortal not reach us; protect us, O Brahmanaspati.

|| ವಿಶೇಷವಿಷಯಗಳು ||

ಶಂಸಃ—ಶಂಸನಂ—ಈ ಶಬ್ದಕ್ಕೆ ವಾಕ್ಯವು, ಹೇಳುವುದು ಎಂದರ್ಥವಾದರೂ ಇಲ್ಲಿ ಧೂರ್ತಿಃ ಶಂಸಃ ಎಂಬ ಶಬ್ದಗಳಿಗೆ ನಿಂದಾವಾಕ್ಯ, ಕೆಟ್ಟಮಾತುಗಳು, ಬೈಗಳು, ಕೆಟ್ಟದ್ದಾಗಲೆಂದು ಹಾರೈಸುವ ಮನೋಭಾವದಿಂದ ಕೂಡಿದ ಮಾತುಗಳು ಎಂಬ ಅಭಿಪ್ರಾಯವನ್ನು ಭಾಷ್ಯಕಾರರು ಸಮರ್ಥಿಸಿರುವರು.

ಅರುರುಷಃ ಮರ್ತ್ಯಸ್ಯ—ಹಿಂಸೆಯನ್ನು ಅಥವಾ ಉಪದ್ರವವನ್ನುಂಟುಮಾಡುವ ಉದ್ದಿಶ್ಯದಿಂದ ಕೂಡಿದ ಮನುಷ್ಯನ ಎಂದರ್ಥವು.

ಮಾ ಪ್ರಣಕ್—ಮಾ ಸಂಪೃಣಕ್ತು—ಸ್ಪರ್ಶಮಾಡದಿರಲಿ, not reach us. ಮಾ ಎಂಬ ಶಬ್ದವು ನಿಷೇಧಾರ್ಥವಾಚಕವು.

ರಕ್ಷ—ಈ ಶಬ್ದದ ಅಂತ್ಯಾಕ್ಷರವು ಛಂದಸ್ಸಿನ ಅನುಕೂಲಕ್ಕಾಗಿ ಸಂಹಿತಾಪಾಠದಲ್ಲಿ ದೀರ್ಘವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

ಮಾ—ಇದು ನಿಪಾತ, ಆದ್ದರಿಂದ ನಿಪಾತಾ ಆದ್ಯುದಾತ್ತಾಃ (ಫಿ. ಸೂ. ೮೦) ಎಂಬುದರಿಂದ ಆದ್ಯುದಾತ್ತ.

ಶಂಸಃ—ಶಂಸು ಸ್ತುತೌ, ಧಾತು. ಭಾವೇ (ಪಾ. ಸೂ. ೩-೩-೧೮) ಎಂಬುದರಿಂದ ಭಾವಾರ್ಥದಲ್ಲಿ ಘಞ್ ಪ್ರತ್ಯಯ, ಅದು ಞಿತ್ತಾದ್ದರಿಂದ ಞ್ನಿತ್ಯಾದಿರ್ನಿತ್ಯಂ, ಎಂಬುದರಿಂದ ಆದ್ಯುದಾತ್ತ, ಶಂಸನಂ ಶಂಸಃ ಎಂದು ವಿಗ್ರಹ.

ಅರರುಷಃ—ಅರ್ತೇರರುಃ (ಉ. ಸೂ. ೪-೫೧೯) ಋ ಗತೌ ಎಂಬ ಧಾತುವಿನ ಮುಂದೆ ಅರುಸ್ ಪ್ರತ್ಯಯ ಬರುವುದು ಎಂಬುದರಿಂದ ಋ ಗತೌ ಎಂಬ ಅಂತರ್ಭಾವಿತಣಿಚ್ಪ್ರತ್ಯಯಾರ್ಥಕವಾದ ಧಾತುವಿನ ಮುಂದೆ ಅರುಸ್ ಪ್ರತ್ಯಯ ಋ+ಅರುಸ್, ಸಾರ್ವಧಾತುಕಾರ್ಧಧಾತುಕಯೋಃ (ಪಾ. ಸೂ. ೭-೩-೮೪) ಎಂಬುದರಿಂದ ಋಗೆ ಗುಣ. ಉರಣ್ರಪರಃ (ಪಾ. ಸೂ. ೧-೧-೫೧) ಎಂಬುದರಿಂದ ರ ಪರವಾಗಿರುವುದು. ಅಂದರೆ ಅರ್ ಬರುವುದು ಅರ್+ಅರುಸ್ ಅರರುಸ್, ಆದ್ಯುದಾತ್ತಶ್ಚ ಎಂಬುದರಿಂದ ಅರುಸ್ ಪ್ರತ್ಯಯದ ಅಕಾರಕ್ಕೆ ಉದಾತ್ತವು ಪ್ರಾಪ್ತವಾಗುವುದು. ಆದರೂ ವೃಷಾದಿಗಣವು ಆಕೃತಿಗಣವಾದ್ದರಿಂದ ಅಲ್ಲಿ ಈ ಶಬ್ದವನ್ನು ಸೇರಿಸಬೇಕು. ಏವಂಚ ವೃಷಾದೀನಾಂಚ (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತ ಬರುವುದು. ಷಷ್ಠೀಏಕವಚನ ಙಸ್ ಅರರುಸ್ + ಅಸ್, ಆದೇಶಪ್ರತ್ಯಯಯೋಃ (ಪಾ. ಸೂ. ೮-೩-೫೧) ಎಂಬುದರಿಂದ, ಉಕಾರದ ಮುಂದೆ ಇರುವ ಸಕಾರಕ್ಕೆ ಷಕಾರ, ಕೊನೆಯ ಸಕಾರಕ್ಕೆ ಸಸಜುಷೋರುಃ (ಪಾ. ಸೂ. ೮-೨-೬೬) ಎಂಬುದರಿಂದ ರುತ್ವ. ಖರವಸಾನಯೋಃ (ಪಾ. ಸೂ. ೮-೩-೧೫) ಎಂಬುದರಿಂದ ವಿಸರ್ಗ, ಅರರುಷಃ ಎಂದಾಗುವುದು. ಇಲ್ಲಿ ಕೆಲವರು ಅರರುಷಃ ಎಂಬುದನ್ನು ಬೇರೆ ರೀತಿಯಿಂದ ನಿರೂಪಿಸುವರು.— ರಾ ಆದಾನೇ ಧಾತು. ಇದರ ಮುಂದೆ ಲಿಟ್. ಕ್ವಸುಶ್ಚ (ಪಾ. ಸೂ. ೩-೨-೧೦೭) ಎಂಬುದರಿಂದ ಕ್ವಸು ಆದೇಶ, ಲಿಟಿಧಾತೋರನಭ್ಯಾಸಸ್ಯ (ಪಾ. ಸೂ. ೬-೧-೮) ಎಂಬುದರಿಂದ ದ್ವಿತ್ವ ರಾ-ರಾ+ವಸ್, ವಸ್ವೇಕಾಜಾದ್ಘಸಾಮ್ (ಪಾ. ಸೂ. ೭-೨-೬೭) ಎಂಬುದರಿಂದ ರಾ ಎಂಬ ಆಕಾರಾಂತ ಧಾತುವಿನ ಮುಂದೆ ಇರುವ ವಸ್‌ಗೆ ಇಡಾಗಮ. ಆತೋಲೋಪ ಇಟಿಚ (ಪಾ. ಸೂ. ೬-೪-೬೪) ಎಂಬುದರಿಂದ ಎರಡನೇ ರಾ ವಿನ ಆಕಾರಕ್ಕೆ ಲೋಪ, ಹ್ರಸ್ವಃ (ಪಾ. ಸೂ. ೭-೪-೫೯) ಎಂಬುದರಿಂದ ಮೊದಲನೆ ರಾಗೆ ಹ್ರಸ್ವ ಏವಂಚ, ರರಿವಸ್ ಎಂದಾಯಿತು. ಪ್ರಥಮೈಕವಚನದಲ್ಲಿ ಸೇದಿವಾನ್ ಎಂಬಂತೆ ರರಿವಾನ್ ಎಂದಾಗುವುದು. ಷಷ್ಠೀವಿಭಕ್ತಿ ಏಕವಚನ ಙಸ್ ಬಂದರೆ ವಸೋಸ್ಸಂಪ್ರಸಾರಣಂ (ಪಾ. ಸೂ. ೬-೪-೧೩೧)

ಎಂಬುದರಿಂದ ಸಂಪ್ರಸಾರಣ. ರರಾವಸ್ ಎಂದಿರುವಾಗ ಮೇಲೆ ಷಷ್ಠೀಏಕವಚನವನ್ನು ಹಚ್ಚಿದರೆ ಸಂಪ್ರಸಾರಣ ಬಂದು ವಸ್ ಎಂಬುದು ಉಸ್ ಆಗುವುದು. ಆದ್ದರಿಂದ ಅದು ವಲಾದಿಯಾಗುವುದಿಲ್ಲ. ಏವಂಚ ಆರ್ಧಧಾತುಕಸ್ಯೇಡ್ವಲಾದೇಃ ಎಂದು ವಿಹಿತವಾದ ಇಡಾಗಮವು ಅಂತರಂಗವಾದರೂ ಇದಕ್ಕೆ ನಿಮಿತ್ತವಾದ ವಲಾದಿತ್ವಕ್ಕೆ ಬಹಿರಂಗಶಾಸ್ತ್ರವಾದ ಸಂಪ್ರಸಾರಣದಿಂದ ನಾಶಸಂಭಾವನೆ ಇರುವುದು. ಆದಕಾರಣ **ಅಕೃತವ್ಯೂಹಾಃ ಪಾಣಿನೀಯಾಃ** (ಪರಿಭಾ. ೫೭) ಬಹಿರಂಗಶಾಸ್ತ್ರದಿಂದ ಅಂತರಂಗಶಾಸ್ತ್ರನಿಮಿತ್ತ ವಿನಾಶವು ಸಂಭಾವಿತವಾದರೆ, ಮೊದಲೇ ಅಂತರಂಗಶಾಸ್ತ್ರ ಬರುವುದಿಲ್ಲ. ಆದ್ದರಿಂದ ಇಡಾಗಮವು ಸಂಪ್ರಸಾರಣ ಬರುವ ಕಡೆಗಳಲ್ಲಿ ಬರುವುದಿಲ್ಲ ಎಂದು ಕೆಲವರು ಇಡಾಗಮಕ್ಕೆ ವ್ಯಾವೃತ್ತಿಯನ್ನು ಹೇಳುವರು. ಮತ್ತೆ ಕೆಲವರು ಪದಗಳು ವಿಭಕ್ತಿಗಳಾಗಿ ವ್ಯುತ್ಪಾದಿತಸಲ್ಪಡುವುವು ಎಂಬ ಪದಾವದಿಕಾನ್ವಾಖ್ಯಾನಪಕ್ಷದಲ್ಲಿ, ಪದವನ್ನು ವಿಂಗಡಿಸಿಟ್ಟರೆ, ರರಾ-ವಸ್+ಅಸ್ ಎಂದಿರುವುದು. ಈಗ ಇಡಾಗಮಕ್ಕೂ ಸಂಪ್ರಸಾರಣಕ್ಕೂ ಸಹ ಪ್ರಾಪ್ತಿ ಇದೆ. ಇಡಾಗಮವು ಯದ್ಯಪಿ ಅನ್ತರಙ್ಗ ಆದರೂ ಸಂಪ್ರಸಾರಣವು ಪದವಿಶೇಷವನ್ನುಚ್ಚರಿಸಿ ವಿಹಿತವಾದ ವಿಧಿಯಾದ್ದರಿಂದ ಪ್ರತಿಪ್ರದೋಕ್ತ ವಿಧಿಯಾಗುವುದರಿಂದ ಅದೇ ಮೊದಲು ಬರುವುದು. ನಂತರ ವಲಾದಿಯಾದ ಆರ್ಧಧಾತುಕವಿಲ್ಲದ ಕಾರಣ ಇಡಾಗಮ ಬರುವುದಿಲ್ಲ ಎಂದು ಈ ರೀತಿಯಲ್ಲಿ ಇಡಾಗಮಕ್ಕೆ ವ್ಯಾವೃತ್ತಿ ಹೇಳುವರು. ಈಗ ಇಡಾಗಮವಿಲ್ಲದಿದ್ದರೂ ಅಜಾದಿಯೂ **ಅಸಂಯೋಗಾಲ್ಲಿಟ್ಕಿತ್** (ಪಾ. ಸೂ. ೧-೨-೫) ಸಂಯೋಗದ ಮುಂದೆ ಇಲ್ಲದ ಪಿತ್ತಲ್ಲದ ಲಿಟ್ಟು ಕಿತ್ತಾಗುವುದು ಎಂಬುದರಿಂದ ಕಿತ್ತೂ ಆದ ಉಸ್ ಎಂಬ ಆರ್ಧಧಾತುಕವು ಪರದಲ್ಲಿರುವುದರಿಂದ **ಆತೋಲೋಪ ಇಟಿಚ** ಎಂಬುದರಿಂದ ಆಲೋಪ ಬರುವುದು. ಷತ್ವಾದಿಗಳು ಪೂರ್ವದಂತೆ, ಈ ಪರಿಯಾಗಿ ರರುಷಃ ಎಂದು ಸಿದ್ಧವಾದರೆ ನ ರರುಷಃ ಎಂದು ನಞ್ ಮಾಡಿದರೆ ಅರರುಷಃ ಎಂಬ ರೂಪವು ನಿಷ್ಪನ್ನವಾಗುವುದು. ಈಗ **ತತ್ಪುರುಷೇ ತುಲ್ಯಾರ್ಥ—**, (ಪಾ.ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುವುದು. ಪೂರ್ವಪದವಾದ ನಞ್ ನಿಪಾತವಾದ್ದರಿಂದ **ನಿಪಾತಾ ಆದ್ಯುದಾತ್ತಾಃ** (ಪಾ ಸೂ. ೮೦) ಎಂಬುದರಿಂದ ಆದ್ಯುದಾತ್ತ. ಸಮಾಸಾನಂತರವೂ ಪೂರ್ವಪದಪ್ರಕೃತಿಸ್ವರದಿಂದ ಇದೇ ಬರುವುದು. ಏವಂಚ ವೃಷಾದಿಗಣದಲ್ಲಿ ಇದನ್ನು ಸೇರಿಸಬೇಕಾದುದಿಲ್ಲ. ವೇದಭಾಷ್ಯಕಾರರೂ **ಗುರುದ್ವೇಷೋ ಅರರುಷೇದಧನ್ತಿ** (ತೈ. ಬ್ರಾ. ಎಂಬಲ್ಲಿ ಇದೇ ರೀತಿಯಲ್ಲಿ ವ್ಯಾಖ್ಯಾನ ಮಾಡಿರುವರು. ಅಲ್ಲದೇ **ಯೋನೋ ಅಗ್ನೇ ಅರರಿವಾನ್** (ಋ.ಸಂ. ೧-೧೪೭-೪) ಎಂದು ಈ ಪರಿಯಾದ ವ್ಯಾಖ್ಯಾನದಲ್ಲಿ ಮಂತ್ರಾಂತರಸಂವಾದವೂ ಇರುವುದು. ಆದ್ದರಿಂದ ಅರರುಷ, ಎಂಬಲ್ಲಿ ಈ ರೀತಿಯಾಗಿ ಪ್ರಕ್ರಿಯೆಯು ಯುಕ್ತವಾಗಿರುವುದು. **ಅರ್ತೇರರುಃ** ಎಂಬಲ್ಲಿ ವಿಧಿಸುವ ಪ್ರತ್ಯಯವು ಉಕಾರಾಂತವಾದ ಪ್ರತ್ಯಯ, ಸಕಾರಾಂತವಲ್ಲ. ಆದ್ದರಿಂದಲೇ ಕಂಚಿದ್ಯಾವೀರರುಂ ಶೂರಮರ್ತ್ಯಮ್ (ಋ.ಸಂ. ೧-೧೨೯-೩) **ಅಪಾರರುಮದೇವಯು ಜನೋ ಜಹಿ** ಎಂಬ ಮಂತ್ರಗಳಲ್ಲಿ ಉಕಾರಾಂತವಾಗಿಯೇ ಅರರು ಶಬ್ದವು ಇರುವುದು. **ಅರ್ತೇರರುಃ** ಎಂಬುದು ಸಾಂತ ಪ್ರತ್ಯಯವಿಧಾಯಕವಾದರೆ, ಅರರುಷಃ ಸ್ವರನಿರ್ವಹಣ ಪರಿಕ್ಲೇಶವಿರುವುದು, ಅಲ್ಲದೇ ಪೂರ್ವೋಕ್ತ ಮಂತ್ರದಲ್ಲಿರುವ ಅರರು ಶಬ್ದಗಳು ಸಿದ್ಧವಾಗಲಾರವು, ಆದ್ದರಿಂದ **ಅರ್ತೇರರುಃ** ಎಂದು ವಿಧಿಸುವ ಪ್ರತ್ಯಯವು ಉಕಾರಾಂತವೇ. ಅರುರಷಃ ಎಂಬುದು ರಾ ಧಾತುವಿನಿಂದ ನಿಷ್ಪನ್ನವಾದುದು ಎಂದು ವರ್ಣಿಸುವುದು ಯುಕ್ತತರವು.

**ಧೂರ್ತಿಃ**—ಧುರ್ವೀ ಹಿಂಸಾರ್ಥಃ, ಧಾತು, **ಕ್ತಿಚ್ಕ್ತೌಚಸಂಜ್ಞಾಯಾಮ್** (ಪಾ.ಸೂ. ೩-೩-೧೭೪) ಎಂಬ ಕ್ತಿಚ್ ಪ್ರತ್ಯಯ, ಅದಕ್ಕೆ **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂಬುದರಿಂದ ಇಡಾಗಮವು ಪ್ರಾಪ್ತವಾದರೆ **ತಿ, ತು, ತ್ರ, ತ, ಥ, ಸಿ, ಸು, ಸರ, ಕ, ಸೇಷುಚ** (ಪಾ. ಸೂ. ೭-೨-೯)

ಈ ಹತ್ತು ಪ್ರತ್ಯಯಗಳಿಗೆ ಇಡಾಗಮ ಬರುವುದಿಲ್ಲ, ಎಂಬುದರಿಂದ ತಿಗೆ ಇಟ್ ಬರುವುದಿಲ್ಲ. ಧುರ್ವ್+ತಿ ಎಂದಿರುವಾಗ **ಉಪಧಾಯಾಂಚ** (ಪಾ. ಸೂ. ೮.೨-೭೮) ಧಾತೂಪಾನ್ತ್ಯದಲ್ಲಿರುವ ರೇಫವಕಾರಗಳ ಮುಂದೆ ವ್ಯಂಜನವಿದ್ದರೆ ಆ ರೇಫ ವಕಾರಗಳ ಹಿಂದೆ ಇರುವ ಇ ಉ ಋ ಲೃ ಗಳಿಗೆ ದೀರ್ಘ ಬರುವುದು ಎಂಬುದರಿಂದ ಉಕಾರಕ್ಕೆ ದೀರ್ಘ, ಧೂರ್ವ್+ತಿ ಎಂದಿರುವುದು. **ಉಪಧಾಯಾಶ್ಚ** (ಪಾ. ಸೂ ೭-೧-೧೦೧) ಇಲ್ಲಿ **ಋತ** **ಇದ್ಧಾತೋಃ** (ಪಾ. ಸೂ. ೭-೧-೧೦೦) ಎಂಬ ಇದರ ಹಿಂದಿನ ಸೂತ್ರವು ಅನುವೃತ್ತವಾಗುವುದು. ಆದ್ದರಿಂದ ಧಾತುವಿನ ಉಪಾಂತ್ಯದಲ್ಲಿರುವ ಋಕಾರಕ್ಕೆ ಇತ್ವ ಬರುವುದು ಎಂದು ಇದಕ್ಕೆ ಅರ್ಥವಾಗುವುದು. ಆದ್ದರಿಂದ ಉಪಧಾಯಾಂಚ ಎಂಬುದರಿಂದ ದೀರ್ಘವನ್ನು ಹೇಳಬೇಕು. ಅಲ್ಲಿ **ರ್ವೋರುಪಧಾಯಾ ದೀರ್ಘ ಇಕಃ** (ಪಾ.ಸೂ. ೮-೨-೭೬) **ಹಲಿಚ** (ಪಾ.ಸೂ. ೮-೨-೭೭) ಎಂಬ ಸೂತ್ರಗಳೂ **ಸಿಪಿಧಾತೋರುರ್ವಾ** (ಪಾ.ಸೂಃ ೮-೨-೭೪) ಎಂಬುದರಿಂದ ಧಾತೋಃ ಎಂಬುದೂ ಅನುವೃತ್ತವಾಗುವುವು. ಆದ್ದರಿಂದ **ಉಪಧಾಯಾಂಚ** ಎಂಬುದು ದೀರ್ಘವಿಧಾಯಕವಾಗುವುದು. ಧೂರ್ವ್+ತಿ ಎಂದಿರುವಾಗ **ಲೋಪೋವ್ಯೋರ್ವಲಿ** (ಪಾ.ಸೂ. ೬-೧-೬೬) ಎಂಬುದರಿಂದ ವಕಾರಕ್ಕೆ ಲೋಪವು ಪ್ರಾಪ್ತವಾಗುವುದು. ಆದರೆ ಅದನ್ನು ಬಾಧಿಸಿ **ಚ್ಛ್ವೋಃಶೂಡನುನಾಸಿಕೇ ಚ** (ಪಾ. ಸೂ. ೬-೪-೧೯) ಅನುನಾಸಿಕಾದಿ ಪ್ರತ್ಯಯಪರವಾಗಿರುವಾಗಲೂ, ಕ್ವಿಪ್ ಪ್ರತ್ಯಯಪರವಾಗಿರುವಾಗಲೂ, ಝಲಾದಿಯಾಗಿ ಕಿತ್ತು ಅಥವಾ ಙಿತ್ತು ಆದ ಪ್ರತ್ಯಯಪರವಾಗಿರುವಾಗಲೂ ತುಗಾಗಮಯುಕ್ತವಾದ ಛಕಾರಕ್ಕೆ ಶಕಾರವೂ ವಕಾರಕ್ಕೆ ಊಠ್ ಆದೇಶವೂ ಸಹ ಬರುವುದು ಎಂಬುದರಿಂದ ಝಲಾದಿಯಾದ ಕಿತ್ತೂ ಆದ ಕ್ತಿಚ್ ಪರವಾಗಿರುವುದರಿಂದ ವಕಾರಕ್ಕೆ ಊಠ್ ಆದೇಶವು ಪ್ರಾಪ್ತವಾಗುವುದು. ಆದರೂ ಈ ಊಠ್ ಆದೇಶವನ್ನೂ ಬಾಧಿಸಿ **ರಾಲ್ಲೋಪಃ** (ಪಾ.ಸೂ. ೬-೪-೨೧) ಕ್ವಿಪ್ ಝಲಾದಿ ಪ್ರತ್ಯಯ ಅಥವಾ ಅನುನಾಸಿಕಾದಿ ಪ್ರತ್ಯಯ ಪರವಾಗಿರುವಾಗ ರೇಫದ ಮುಂದೆ ಇರುವ ತುಗಾಗಮಯುಕ್ತನಾದ ಛಕಾರ, ವಕಾರ ಇವುಗಳಿಗೆ ಲೋಪ ಬರುವುದು ಎಂಬುದರಿಂದ ರೇಫದ ಮುಂದೆ ಇರುವ ವಕಾರಕ್ಕೆ ಲೋಪ, ಧೂರ್+ತಿ=ಧೂರ್ತಿ ಎಂದಾಗುವುದು.

**ಪ್ರಣಕ್**—ಪೃಚೀ ಸಂಪರ್ಕೇ ರುಧಾದಿ ಧಾತು. ಇದರ ಮುಂದೆ ಲಙ್ ಪ್ರಥಮಪುರುಷ ಏಕವಚನ **ತಿಪ್. ಇತಶ್ಚ** (ಪಾ. ಸೂ. ೩-೪-೧೦೦) ಎಂಬುದರಿಂದ ಇಕಾರಕ್ಕೆ ಲೋಪ, **ರುಧಾದಿಭ್ಯಃಶ್ನಮ್** (ಪಾ. ಸೂ. ೩-೧-೭೮) ಎಂದು ವಿಹಿತವಾದ ಶ್ನಮ್ ವಿಕರಣವು ಮಿತ್ತಾದ್ದರಿಂದ **ಮಿದಚೋಽನ್ತ್ಯಾತ್ಪರಃ** (ಪಾ. ಸೂ. ೧-೧-೪೭) ಎಂಬುದರಿಂದ ಋಕಾರದ ಮುಂದೆ ಬರುವುದು. ಪೃನಚ್+ತ್ **ವ್ಯತ್ಯಯೋ ಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ಶ್ನಮ್ ವಿಕರಣಕ್ಕೆ ಅಡಾಗಮ. ಪೃ+ಅನ್+ಚ್+ತ್. **ಇಕೋಯಣಚಿ** (ಪಾ. ಸೂ. ೬-೧-೭೭) ಎಂಬುದರಿಂದ ಯಣಾದೇಶ ಅಂದರೆ ಋಕಾರಕ್ಕೆ ರೇಫ. ಪ್ರನಚ್+ತ್ **ಹಲ್‌ಙ್ಯಾಭ್ಯಃ** (ಪಾ. ಸೂ. ೬-೧-೬೮) ಎಂಬುದರಿಂದ ತ್‌ಗೆ ಲೋಪ- **ಚೋಃಕುಃ** (ಪಾ. ಸೂ. ೮-೨-೩೦) ಎಂಬುದರಿಂದ ಚಕಾರಕ್ಕೆ ಕಕಾರ. **ಅಟ್ಕುಪ್ವಾಙ್** (ಪಾ. ಸೂ ೮-೪-೨) ಎಂಬುದರಿಂದ ನಕಾರಕ್ಕೆ ಣಕಾರ, ಪ್ರಣಕ್ ಎಂದಾಗುವುದು. ಶಮ್‌ಗೆ ಆಗಮವಾಗಿ ಬಂದ ಅಕಾರಕ್ಕೆ **ಆಗಮಾ ಅನುದಾತ್ತಾಃ** ಎಂಬುದರಿಂದ ಅನುದಾತ್ತವು ಪ್ರಾಪ್ತವಾದರೆ ವ್ಯತ್ಯಯದಿಂದ ಉದಾತ್ತ ಬರುವುದು. **ಚಾದಿಲೋಪೇವಿಭಾಷಾ** (ಪಾ. ಸೂ. ೮-೧-೬೩) ಚ, ವಾ, ಹಾ, ಅ, ಹ, ಏವ, ಇವುಗಳಿಗೆ ಲೋಪ ಬಂದಿದ್ದರೆ ಮೊದಲಿನ ತಿಙಂತವು ಅನುದಾತ್ತವಾಗುವುದಿಲ್ಲ ಎಂಬುದರಿಂದ ನಿಷೇಧ ಬರುವುದರಿಂದ ಪ್ರಣಕ್ ಎಂಬುದಕ್ಕೆ **ತಿಙ್ಙತಿಙಃ** ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ.

**ಮರ್ತ್ಯಸ್ಯ**--ಮೃಙ್ ಪ್ರಾಣತ್ಯಾಗೇ ಧಾತು. **ಹಸಿಮೃಗ್ರಿಣ್ವಾಮಿದಮಿಲೂಪೂಧುರ್ವಿಭ್ಯಸ್ತನ್** (ಉ.ಸೂ. ೩-೩೬೬) ಹಸೇ ಹಸನೇ, ಮೃಙ್ ಪ್ರಾಣತ್ಯಾಗೇ, ಗೄ ನಿಗರಣೇ, ಇಣ್ ಗತೌ, ವಾ ಗತಿಗನ್ಧನಯೋಃ, ಅಮ ಗತ್ಯಾದಿಷು, ದಮು ಉಪಶಮೇ, ಲೂಞ್ ಛೇದನೇ, ಪೂಞ್ ಪವನೇ, ದುರ್ವೀ ಹಿಂಸಾಯಾಮ್ ಎಂಬೀ ಧಾತುಗಳ ಮುಂದೆ ತನ್ ಪ್ರತ್ಯಯ ಬರುವುದು ಎಂದು ಸೂತ್ರಾರ್ಥ. ಇಲ್ಲಿ ವೇದಭಾಷ್ಯಕಾರರು ಆರಂಭದಲ್ಲಿ ಅಸಿ ಎಂದು ಒಂದು ಧಾತುವನ್ನು ಹೆಚ್ಚಾಗಿ ಪಾಠಮಾಡಿರುವರು. ಅದು ಈಗಿರುವ ಸೂತ್ರಗಳಲ್ಲಿ ಕಾಣಬರುವುದಿಲ್ಲ. ಮೃಧಾತುವಿನಮುಂದೆ ತನ್ ಬಂದರೆ ಮೃ+ತ ಸಾರ್ವಧಾತುಕಾ....ಎಂಬುದರಿಂದ ಗುಣ, ರಪರತ್ವ, ಮರ್ತ, ಮರ್ತೇಷು ಭವಃ ಎಂದು ವಿಗ್ರಹ. ಭವೇ ಛಂದಸಿ (ಪಾ. ಸೂ. ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. **ಯಸ್ಯೇತಿಚ** ಎಂಬುದರಿಂದ ಅಕಾರಕ್ಕೆ ಲೋಪ. ತಿತ್ಸ್ವರಿತಮ್ ಎಂಬುದರಿಂದ ಸ್ವರಿತ ಪ್ರಾಪ್ತವಾದರೆ ಅದನ್ನು ಬಾಧಿಸಿ **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತ ಬರುವುದು.

ರಕ್ಷ-ರಕ್ಷ ಪಾಲನೇ ಧಾತು. ಲೋಟ್, ಮಧ್ಯಮಪುರುಷ ಏಕವಚನ ಸಿಪ್. ಕರ್ತರಿಶಪ್ ಎಂಬುದರಿಂದ ಶಪ್. **ಸೇರ್ಹ್ಯಪಿಚ್ಚ** ಎಂಬುದರಿಂದ ಹಿ ಆದೇಶ. **ಅತೋಹೇಃ** ಎಂಬುದರಿಂದ ಹಿಗೆ ಲುಕ್, ಶಪ್ ಪಿತ್ತು. ಆದ್ದರಿಂದ ಅನುದಾತ್ತೌಸುಪ್ಪಿತೌ ಎಂಬುದರಿಂದ ಅನುದಾತ್ತ, ಧಾತುಸ್ವರವೇ ಉಳಿಯುವುದು. ಪಾದದ ಆದಿಯಲ್ಲಿರುವುದರಿಂದ **ಅನುದಾತ್ತಂ ಸರ್ವಮಪಾದಾದೌ** (ಪಾ. ಸೂ. ೮-೧-೧೮ ) ಎಂದು ಪ್ರತಿಷೇಧ ಬರುವುನು. ಆದಕಾರಣ ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ. ರಕ್ಷಾಣಃ—**ದ್ವ್ಯಚೋಽತಸ್ತಿಙಃ** (ಪಾ.ಸೂ. ೬-೩-೧೩೫) ಎಂಬುದರಿಂದ ಸಂಹಿತಾ ಕಾಲದಲ್ಲಿ ದೀರ್ಘ. **ಉಪಸರ್ಗಾದ್ಬಹುಲಮ್** (ಪಾ. ಸೂ ೮-೪-೨೮) ಉಪಸರ್ಗದಲ್ಲಿರುವ ರೇಫ ಷಕಾರಗಳ ಮುಂದೆ ಇರುವ ನಸ್ ಎಂಬುದರ ನಕಾರಕ್ಕೆ ಣಕಾರ ಬರುವುದು ಎಂದು ಇದರ ಅರ್ಥ. ನಸ್ ಎಂಬುದರಿಂದ ನಾಸಿಕಾ ಶಬ್ದದ ಸ್ಥಾನದಲ್ಲಿ ಬರುವ ನಸ್, ಬಹುವಚನಸ್ಯ ವಸ್ ನ ಸೌ ಎಂದು ವಿಹಿತವಾದ ನಸ್ ಎರಡಕ್ಕೂ ಗ್ರಹಣ, ಪ್ರಕೃತದಲ್ಲಿ ಎರಡನೇ ನಸ್ ಇದೆ. ಆದರೆ ಅದು ರಕ್ಷಾ ಎಂಬುದರ ಮುಂದೆ ಇದೆ. ಅದು ಉಪಸರ್ಗವಲ್ಲ. ಆದರೂ ಬಹುಲಗ್ರಹಣಸಾಮರ್ಥ್ಯದಿಂದ ಉಪಸರ್ಗ ಚಿಹ್ನದಲ್ಲಿ ರೇಫ ಷಕಾರಗಳ ಮುಂದೆ ಇರುವ ನಸ್ ನ ನಕಾರಕ್ಕೂ ಣತ್ವ ಬರುವುದು ವಸ್ತುತಃ ಇಲ್ಲಿ ಬಹುಲಗ್ರಹಣದಿಂದ ಕ್ಲೇಶಪಟ್ಟು ಣತ್ವವನ್ನು ಸಾಧನೆ ಮಾಡಬೇಕಾದುದಿಲ್ಲ. **ನಶ್ಚಧಾತುಸ್ಥೋರುಷುಭ್ಯಃ** (ಪಾ. ಸೂ. ೮-೩-೨೭) ಧಾತುವಿನಲ್ಲಿರುವ ರೇಫ ಷಕಾರಗಳು, ಉರು ಶಬ್ದ, ಷುಞ್ ಅಭಿಷವೇ ಎಂಬುದಕ್ಕೆ ಷತ್ವಬಂದು ನಂತರ ಇರುವ ಷು ಇವುಗಳ ಮುಂದೆ ಇರುವ, ನಾಸಿಕಾದೇಶ ಅಸ್ಮಚ್ಛಬ್ದಾದೇಶಗಳಾದ ನಸ್ ನ ನಕಾರಕ್ಕೆ ಣಕಾರ ಬರುವುದು ಎಂದು ಸೂತ್ರಾರ್ಥ. ಇಲ್ಲಿ ರಕ್ಷ ಎಂಬುದು ಧಾತು, ಅದರಲ್ಲಿ ಷಕಾರವಿದೆ. ಆದ್ದರಿಂದ ಧಾತುವಿನಲ್ಲಿರುವ ರೇಫ ಷಕಾರಾನ್ಯತರಾಂತಃಪಾತಿ ಷಕಾರದ ಮುಂದೆ ಇರುವ ನಸ್‌ನ ನಕಾರಕ್ಕೆ ಈ ಸೂತ್ರದಿಂದ ಣತ್ವ ಬರುವುದು.

ಬ್ರಹ್ಮಣಸ್ಪತೇ—ಬ್ರಹ್ಮಣಃ ಎಂಬಲ್ಲಿರುವ ಷಷ್ಠೀವಿಭಕ್ತಿ ಸಂಬಂಧಿಯಾದ ವಿಸರ್ಗಕ್ಕೆ ಸಂಹಿತಾಕಾಲದಲ್ಲಿ **ಷಷ್ಠ್ಯಾಃಪತಿಪುತ್ರ**....(ಪಾ. ಸೂ. ೮-೩-೫೩) ಎಂಬುದರಿಂದ ಸಕಾರಾದೇಶ. ಪತೇ ಎಂಬುದು ಆಮನ್ತ್ರಿತ. ಆದ್ದರಿಂದ ಇದರ ಹಿಂದೆ ಇರುವ ಪದವು **ಸುಬಾಮನ್ತ್ರಿತೇಪರಾಂಗವತ್ಸ್ವರೇ** (ಪಾ. ಸೂ. ೨-೧-೨)ಎಂಬುದರಿಂದ ಪರಾಂಗವದ್ಭಾವವನ್ನು ಹೊಂದುವುದು. ಏವಂಚ ಬ್ರಹ್ಮಣಸ್ಪತೇ ಎಂಬ ವಿಶಿಷ್ಟದಲ್ಲಿ ಆಮನ್ತ್ರಿತ ಸಂಜ್ಞೆಯು ವಿಶ್ರಾನ್ತವಾಗುವುದು. ಆದ್ದರಿಂದ **ಆಮನ್ತ್ರಿತಸ್ಯಚ** ( ಪಾ. ಸೂ. ೬-೧-೧೯೮ ) ಎಂಬುದರಿಂದ ಎರಡು ಪದಕ್ಕೂ ಸರ್ವಾನುದಾತ್ತ ಬರುವುದು ॥ ೩ ॥

॥ ಸಂಹಿತಾಪಾಠಃ ॥

ಸ ಘಾ ವೀರೋ ನ ರಿಷ್ಯತಿ ಯಮಿಂದ್ರೋ ಬ್ರಹ್ಮಣಸ್ಪತಿಃ ।
ಸೋಮೋ ಹಿನೋತಿ ಮರ್ತ್ಯಂ ॥ ೪ ॥

॥ ಪದಪಾಠಃ ॥

ಸಃ । ಘ । ವೀರಃ । ನ । ರಿಷ್ಯತಿ । ಯಂ । ಇಂದ್ರಃ । ಬ್ರಹ್ಮಣಃ । ಪತಿಃ ॥
ಸೋಮಃ । ಹಿನೋತಿ । ಮರ್ತ್ಯಂ ॥ ೪ ॥

॥ ಸಾಯಣಭಾಷ್ಯಂ ॥

ಇಂದ್ರೋ ದೇವೋ ಯಂ ಮರ್ತ್ಯಂ ಯಕ್ಷ್ಯಮಾಣಂ ಹಿನೋತಿ ಪ್ರಾಪ್ನೋತಿ ವರ್ಧಯತಿ ವಾ । ತಥಾ ಬ್ರಹ್ಮಣಸ್ಪತಿರ್ದೇವೋ ಹಿನೋತಿ । ತಥಾ ಸೋಮೋ ಹಿನೋತಿ । ಸ ಘ ಸ ಏವ ಯಜಮಾನೋ ವೀರೋ ವೀರ್ಯಯುಕ್ತಃ ಸನ್ನ ರಿಷ್ಯತಿ । ನ ವಿನಶ್ಯತಿ ॥ ಘ । ಚಾದಿರನುದಾತ್ತಃ । ಸಂಹಿತಾಯಾಮೃಚಿ ತುನುಘಮಕ್ಷುತಙ್ಕುತ್ರೋರುಷ್ಯಾಣಾಂ । ಪಾ- ೬-೩-೧೩೩ । ಇತಿ ದೀರ್ಘಃ । ಬ್ರಹ್ಮಣಸ್ಪತಿಃ । ಉಕ್ತಂ । ಹಿನೋತಿ । ಹಿ ಗತೌ ವೃದ್ಧೌ ಚ । ಸ್ವಾದಿಭ್ಯಃ ಶ್ನುಃ । ತಿಪಃ ಪಿತ್ತ್ವಾತ್ ಶ್ನುಪ್ರತ್ಯಯಸ್ವರ ಏವ ಶಿಷ್ಯತೇ ॥

॥ ಪ್ರತಿಪದಾರ್ಥ ॥

ಇಂದ್ರ—ಇಂದ್ರನು । ಯಂ—ಯಾವ । ಮರ್ತ್ಯಂ— (ಯಜ್ಞ ಮಾಡುತ್ತಿರುವ) ಯಜಮಾನನನ್ನು । ಹಿನೋತಿ—(ಪ್ರಾಪ್ತನಾಗುತ್ತಾನೋ) ರಕ್ಷಿಸುತ್ತಾನೆಯೋ । ಬ್ರಹ್ಮಣಸ್ಪತಿಃ—ಬ್ರಹ್ಮಣಸ್ಪತಿಯೂ । ಹಿನೋತಿ—ರಕ್ಷಿಸುತ್ತಾನೆಯೋ । ಸೋಮಃ—(ಹಾಗೆಯೇ) ಸೋಮದೇವತೆಯು । ಹಿನೋತಿ—ರಕ್ಷಿಸುತ್ತಾನೆಯೋ । ಸಃ ಘ—ಅಂತಹ ಮನುಷ್ಯನೇ । ವೀರಃ—ವೀರ್ಯದಿಂದ ಕೂಡಿದವನಾಗಿ । ನ ರಿಷ್ಯತಿ—ನಾಶ ಹೊಂದುವುದಿಲ್ಲ ।

॥ ಭಾವಾರ್ಥ ॥

ಯಾಗದಲ್ಲಿ ನಿರತನಾಗಿರುವ ಯಜಮಾನನಿಗೆ ಇಂದ್ರ, ಬ್ರಹ್ಮಣಸ್ಪತಿ ಮತ್ತು ಸೋಮ ಈ ಮೂರು ದೇವತೆಗಳೂ ಅಭಿವೃದ್ಧಿಕಾರಕರಾಗುತ್ತಾರೆ. ಎಂದರೆ ರಕ್ಷಕರಾಗುತ್ತಾರೆ. ಇವರುಗಳ ದಯೆಗೆ ಪಾತ್ರನಾದ ಮನುಷ್ಯನು ಎಂದಿಗೂ ನಾಶವನ್ನು ಹೊಂದುವುದಿಲ್ಲ.

## English Translation.

That valiant man whom Indra, Brahmanaspati and Soma protect never perishes.

॥ ವಿಶೇಷವಿಷಯಗಳು ॥

ಈ ಋಕ್ಕು ಇಂದ್ರ ಬ್ರಹ್ಮಣಸ್ಪತಿ, ಸೋಮ ಈ ಮೂರುದೇವತೆಗಳ ಪರವಾಗಿಯೂ ಇದೆ. ಈ ದೇವತೆಗಳು ಯಾವ ಮನುಷ್ಯನನ್ನು ಹೊಂದುವರೋ ಎಂದರೆ ಅನುಗ್ರಹಿಸುವರೋ ಆ ಮನುಷ್ಯನು ವೀರನಾಗಿ ಬಾಳುವನು, ಎಂದಿಗೂ ಅವನು ನಾಶವನ್ನೈದುವುದಿಲ್ಲ ಎಂದಭಿಪ್ರಾಯವು.

ಘ—ಈ ಅಕ್ಷರವು ಛಂದಸ್ಸಿನ ಅನುಕೂಲಕ್ಕಾಗಿ ಸಂಹಿತಾಪಾಠದಲ್ಲಿ ದೀರ್ಘವಾಗಿರುವುದು.

**ಯಂ ಮರ್ತ್ಯಂ**—ಯಾವ ಮನುಷ್ಯನನ್ನು ಎಂದರೆ ಇಂದ್ರ ಬ್ರಹ್ಮಣಸ್ಪತಿ ಸೋಮ ಇವರುಗಳನ್ನು ಆರಾಧಿಸುವ ಮನುಷ್ಯನನ್ನು ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

ಘ—ಇದು ಚಾದಿಗಣವು ಆಕೃತಿಗಣವಾದ್ದರಿಂದ ಅದರಲ್ಲಿ ಸೇರುವುದು. ಆದ್ದರಿಂದ **ಚಾದಯೋಽನುದಾತ್ತಾಃ** (ಫಿ ಸೂ. ೪-೮೪) ಎಂಬುದರಿಂದ ಅನುದಾತ್ತ. ಸಂಹಿತಾಕಾಲದಲ್ಲಿ **ಋಚಿ ತುನುಘಮಕ್ಷುತಙ್ ಕುತ್ರೋರುಷ್ಯಾಣಾಮ್** (ಪಾ. ಸೂ. ೬-೩-೧೩೩) ಘ ಶಬ್ದದಿಂದ ಘಕಾರೋತ್ತರ ಅಕಾರ ರೂಪವಾದ ಘ ಎಂಬ ಆನುಪೂರ್ವಿಗೆ ಗ್ರಹಣ. ಛಂದಸ್ಸಿನಲ್ಲಿ ಘ ಎಂಬುದಕ್ಕೆ ದೀರ್ಘವು ದೃಷ್ಟವಾಗಿರುವುದರಿಂದ ಈ ರೀತಿ ಗ್ರಹಿಸಬೇಕು. **ಕೃತ್ರಿಮಾಽಕೃತ್ರಿಮಯೋಃಕೃತ್ರಿಮಸ್ಯೈವ ಗ್ರಹಣಮ್** (ಪರಿಭಾ) ಕೃತ್ರಿಮ ಎಂದರೆ ವ್ಯಾಕರಣ ಶಾಸ್ತ್ರ ಸಂಕೇತಸಿದ್ಧ ಎಂದು ಅರ್ಥ. ಅಕೃತ್ರಿಮ ಎಂದರೆ ಲೋಕಪ್ರಸಿದ್ಧ ಎಂದು ಅರ್ಥ. ಕೃತ್ರಿಮ ಅಕೃತ್ರಿಮ ಎರಡಕ್ಕೂ ಗ್ರಹಣ ಬಂದರೆ ಕೃತ್ರಿಮಕ್ಕೇ ಗ್ರಹಣ ಬರುವುದು ಎಂದು ಪರಿಭಾಷಾರ್ಥ. **ತರಪ್ತಮಪೌ ಘಃ** (ಪಾ. ಸೂ. ೧-೧-೨೨) ಎಂದು ತರಪ್ ತಮಪ್ ಪ್ರತ್ಯಯಗಳಿಗೆ ವ್ಯಾಕರಣ ಶಾಸ್ತ್ರದಲ್ಲಿ ಸಂಕೇತವಿರುವುದು. ಆದರೂ ಇಲ್ಲಿ ಅದಕ್ಕೆ ಪೂರ್ವೋಕ್ತಪ್ರಕಾರವಾಗಿ ಗ್ರಹಣವಿಲ್ಲ. ಏಕೆಂದರೆ ವೇದದಲ್ಲಿ ತರಪ್ ತಮಪ್‌ಗಳಿಗೆ ದೀರ್ಘವು ದೃಷ್ಟವಾಗಿಲ್ಲ. ಘ ಎಂಬುದಕ್ಕೆ ದೀರ್ಘವು ದೃಷ್ಟವಾಗಿರುವುದು. ಸೂತ್ರದಲ್ಲಿ ಋಚಿ ಎಂದಿರುವುದರಿಂದ ಈ ಸೂತ್ರವು ಋಗ್ವೇದದಲ್ಲಿಯೇ ಪ್ರವರ್ತಿಸಬೇಕು. ಎವಂಚ ತರಪಾದಿಗಳಿಗೆ ಗ್ರಹಣವಾದರೆ ಸೂತ್ರಕ್ಕೆ ಚಾರಿತಾರ್ಥ್ಯವೇ ಬರುವುದಿಲ್ಲ. ಆದ್ದರಿಂದ ಘ ಎಂಬ ಸ್ವರೂಪಕ್ಕೇ ಗ್ರಹಣವು. ತಙ್ ಎಂಬುದರಿಂದ ಮಧ್ಯಮ ಪುರುಷ ಬಹುವಚನ ಥಗೆ **ತಸ್ಥಸ್ಥಮಿಪಾಂ** ಎಂಬುದರಿಂದ ತ ಆದೇಶ ಬಂದರೆ ಅದಕ್ಕೆ ಸಾರ್ವಧಾತುಕಮಪಿತ್ ಎಂಬುದರಿಂದ **ಙಿತ್ವ** ಬರುವುದು. ಇಂತಹ ಙಿತ್ವವನ್ನು ಹೊಂದಿದ ಥಾ ಆದೇಶವಾದ ತಗೆ ಗ್ರಹಣ. ಈ ಸೂತ್ರದಿಂದ ಘಗೆ ದೀರ್ಘ ಬಂದರೆ ಘಾ ಎಂದಾಗುವುದು.

ಬ್ರಹ್ಮಣಸ್ಪತಿಃ—**ಷಷ್ಠ್ಯಾಃಪತಿ....**( ಪಾ. ಸೂ. ೮-೩-೫೩ ) ಎಂಬುದರಿಂದ ಷಷ್ಠೀ ಸಂಬಂಧಿ ವಿಸರ್ಗಕ್ಕೆ ಸಕಾರ.

ಹಿನೋತಿ—ಹಿ ಗತೌ ವೃದ್ಧೌ ಚ, ಧಾತು. ಲಟ್ ತಿಪ್. ಸ್ವಾದಿಭ್ಯಃ ಶ್ನುಃ (ಪಾ. ಸೂ. ೩-೧-೭೩) ಎಂಬುದರಿಂದ ಶ್ನು ವಿಕರಣ ಹಿ+ನು+ತಿ. ತಿಯನ್ನು ನಿಮಿತ್ತವಾಡಿಕೊಂಡು ಶ್ನುವಿಗೆ ಸಾರ್ವಧಾತುಕಾರ್ಧ- ( ಪಾ. ಸೂ. ೭-೩-೮೪ ) ಎಂಬುದರಿಂದ ಗುಣ, ಓಕಾರ. ಸಾರ್ವಧಾತುಕಮಪಿತ್ ( ಪಾ. ಸೂ. ೧-೨-೪ ) ಎಂಬುದರಿಂದ ಹಿಯು ಙಿತ್ತು. ಕ್ಙಿತಿಚ ಎಂದು ನಿಷೇಧ ಬರುವುದರಿಂದ ನುವನ್ನು ನಿಮಿತ್ತ ವಾಡಿಕೊಂಡು ಹಿಗೆ ಇಗ್ಲಕ್ಷಣವಾದ ಗುಣಬರುವುದಿಲ್ಲ. ತಿಪ್ ಪಿತ್ತಾದ್ದರಿಂದ ಅನುದಾತ್ತೌ ಎಂಬುದರಿಂದ ಅನುದಾತ್ತ, ಶ್ನು ಪ್ರತ್ಯಯಸ್ವರವೇ ಉಳಿಯುವುದು ॥ ೪ ॥

॥ ಸಂಹಿತಾಪಾಠಃ ॥

ತ್ವಂ ತಂ ಬ್ರಹ್ಮಣಸ್ಪತೇ ಸೋಮ ಇಂದ್ರಶ್ಚ ಮರ್ತ್ಯಂ ।
ದಕ್ಷಿಣಾ ಪಾತ್ವಂಹಸಃ ॥ ೫ ॥

॥ ಪದಪಾಠಃ ॥

ತ್ವಂ । ತಂ । ಬ್ರಹ್ಮಣಃ । ಪತೇ । ಸೋಮಃ । ಇಂದ್ರಃ । ಚ । ಮರ್ತ್ಯಂ ॥
ದಕ್ಷಿಣಾ । ಪಾತು । ಅಂಹಸಃ ॥ ೫ ॥

॥ ಸಾಯಣಭಾಷ್ಯಂ ॥

ಹೇ ಬ್ರಹ್ಮಣಸ್ಪತೇ ತ್ವಂ ತಂ ಮರ್ತ್ಯಮನುಷ್ಠಾತಾರಂ ಮನುಷ್ಯಮಂಹಸಃ ಪಾಪಾತ್ಪಾಹೀತಿ ಶೇಷಃ । ತಥಾ ಸೋಮಃ ಪಾತ್ವಿಂದ್ರಶ್ಚ ಪಾತು ದಕ್ಷಿಣಾಖ್ಯಾ ದೇವತಾ ಚ ಪಾತು ॥ ದಕ್ಷಿಣಾ । ದಕ್ಷ ವೃದ್ಧೌ । ದ್ರುದಕ್ಷಿಭ್ಯಾಮಿನನ್ ॥ ಉ. ೨-೫೦ । ನಿತ್ತ್ವಾದಾದ್ಯುದಾತ್ತಃ । ಅಂಹಸಃ । ನಬ್ವಿಯಸ್ಯೇತ್ಯಾದಿ- ನಾದ್ಯುದಾತ್ತಃ ॥ ೩೪ ॥

॥ ಪ್ರತಿಪದಾರ್ಥ ॥

(ಹೇ) ಬ್ರಹ್ಮಣಸ್ಪತೇ—ಎಲೈ ಬ್ರಹ್ಮಣಸ್ಪತಿಯೇ, । ತ್ವಂ—ನೀನು । ತಂ ಮರ್ತ್ಯಂ—ಆ (ಅನು ಷ್ಠಾತೃವಾದ) ಮನುಷ್ಯನನ್ನು । ಅಂಹಸಃ—ಪಾಪದಿಂದ (ರಕ್ಷಿಸು) । ಸೋಮಃ—ಸೋಮದೇವತೆಯು । ಪಾತು—ರಕ್ಷಿಸಲಿ । ಇಂದ್ರಶ್ಚ—ಇಂದ್ರನೂ । ಪಾತು—ರಕ್ಷಿಸಲಿ । ದಕ್ಷಿಣಾ—ದಕ್ಷಿಣಾ ಎಂಬ ದೇವತೆಯೂ । ಪಾತು—ರಕ್ಷಿಸಲಿ ।

॥ ಭಾವಾರ್ಥ ॥

ಎಲೈ ಬ್ರಹ್ಮಣಸ್ಪತಿಯೇ, ಯಜಮಾನನನ್ನು ಪಾಪಕರ್ಮ ಮಾಡದಂತೆ ನೀನು, ಇಂದ್ರ, ಸೋಮ ಮತ್ತು ದಕ್ಷಿಣಾ ಎಲ್ಲರೂ ರಕ್ಷಣೆ ಮಾಡಿ.

English Translation

Do you Brahmanaspati, and do you Soma, Indra. and Dakshina protect that man from sin.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಬ್ರಹ್ಮಣಸ್ಪತಿ, ಸೋಮ, ಇಂದ್ರ, ದಕ್ಷಿಣಾ ಎಂಬ ದೇವತೆ, ಇವರುಗಳು ಪ್ರತಿಪಾದಿಸಲ್ಪಟ್ಟಿರುವರು.

**ದಕ್ಷಿಣಾ**— ಈ ಋಕ್ಕಿನಲ್ಲಿ ದಕ್ಷಿಣಾ ಎಂಬ ಶಬ್ದವು ದಕ್ಷಿಣಾಭಿಮಾನಿಯಾದ ದೇವತೆಯನ್ನು ಸೂಚಿಸುವುದು. ದಕ್ಷಿಣಾಶಬ್ದಕ್ಕೆ ಯಾಸ್ಕಮಹರ್ಷಿಯು ಈ ರೀತಿ ಅರ್ಥನಿಷ್ಪತ್ತಿಯನ್ನು ಮಾಡಿರುವರು (ನಿ- ೧-೭)—

ದಕ್ಷಿಣಾ ದಕ್ಷತೇಃ ಸಮರ್ಧಯತಿ ಕರ್ಮಣೋ ವ್ಯೃರ್ಧಂ ಸಮರ್ಧಯತೀತಿ । ಅಪಿ ವಾ ಪ್ರದಕ್ಷಿಣಾಗಮನಾತ್ । ದಿಶಮಭಿಪ್ರೇತ್ಯ ದಿಗ್ಘಸ್ತಪ್ರಕೃತಿಃ ದಕ್ಷಿಣೋ ಹಸ್ತೋ ದಕ್ಷತೇರುತ್ಸಾಹಕರ್ಮಣಃ । ದಾಶತೇರ್ವಾ ಸ್ಯಾದ್ದಾನಕರ್ಮಣಃ ॥

ಎಂದು ನಾಲ್ಕು ವಿಧವಾದ ಅರ್ಥಗಳನ್ನು ಹೇಳಿರುವರು—

(೧) **ದಕ್ಷಿಣಾ ದಕ್ಷತೇಃ ಸಮರ್ಧಯತಿ ಕರ್ಮಣೋ ವ್ಯೃರ್ಧಂ ಸಮರ್ಧಯತೀತಿ**—ದಕ್ಷಿಣಾ ಎಂಬ ಶಬ್ದವು ದಕ್ಷತಿಧಾತುವಿನಿಂದ ಉಂಟಾಗಿದೆ. ಈ ಧಾತುವಿಗೆ (ದ್ರವ್ಯವನ್ನು) ವೃದ್ಧಿ ಮಾಡು ಎಂದರ್ಥವು. ಯಜ್ಞದಲ್ಲಿ ವ್ಯಯಮಾಡಿದ ಎಂದರೆ ದಕ್ಷಿಣಾರೂಪವಾಗಿ ಕೊಟ್ಟ ಸ್ವಲ್ಪ ಧನವನ್ನು ಅತಿಶಯವಾಗಿ (ಫಲರೂಪದಲ್ಲಿ) ವೃದ್ಧಿಮಾಡುವುದರಿಂದ ಈ ಶಬ್ದಕ್ಕೆ ದಕ್ಷಿಣಾ ಎಂದು ಹೆಸರು.

(೨) **ಅಪಿ ವಾ ಪ್ರದಕ್ಷಿಣಾಗಮನಾತ್**—ಯಜ್ಞವೇದಿಯಲ್ಲಿ ಗಾರ್ಹಪತ್ಯ, ಸದಃ, ಆಗ್ನೀಧ್ರೀಯಗಳೆಂಬ ಸ್ಥಾನಗಳನ್ನು ಪ್ರದಕ್ಷಿಣಾಕಾರವಾಗಿ ಬಳಸಿ ಬಂದು ಅಂತರ್ವೇದಿಯಲ್ಲಿ ನಿಲ್ಲುವುದರಿಂದ ಈ ರೀತಿ ಮಾಡುವ ಪ್ರದಕ್ಷಿಣಾಗಮನಕ್ಕೆ ದಕ್ಷಿಣಾ ಎಂದು ಹೆಸರು.

(೩) **ದಿಶಮಭಿಪ್ರೇತ್ಯ ದಿಗ್ಘಸ್ತಪ್ರಕೃತಿಃ ದಕ್ಷಿಣೋ ಹಸ್ತೋ ದಕ್ಷತೇರುತ್ಸಾಹಕರ್ಮಣಃ ॥** ಪ್ರಾಙ್ಮುಖನಾಗಿರುವ ಪ್ರಜಾಪತಿಯ ಹಸ್ತಗಳಲ್ಲಿ ಬಲಗೈಯಿಯು ದಕ್ಷಿಣಾಭಿಮುಖವಾಗಿರುವುದರಿಂದಲೂ (ದಕ್ಷಿಣದಿಕ್ಕಿನ ಕಡೆ ಇರುವುದರಿಂದಲೂ) ಯಾವ ಕೆಲಸವನ್ನು ಮಾಡಬೇಕಾದರೂ ಬಲಗೈಯು ಉತ್ಸಾಹದಿಂದ ಕೂಡಿ ಮಾಡುವುದರಿಂದಲೂ ಬಲಗೈಯಿಗೆ **ದಕ್ಷಿಣೋ ಹಸ್ತಃ** ಎಂದು ದಕ್ಷಿಣಶಬ್ದದಿಂದ ಹೇಳುವುದು ರೂಢಿಯಾಗಿದೆ.

(೪) **ದಾಶತೇರ್ವಾ ಸ್ಯಾದ್ದಾನಕರ್ಮಣಃ** ॥ ದಾಶತಿಧಾತುವಿಗೆ ದಾನಕೊಡುವುದು ಎಂದರ್ಥವು. ಸಾಧಾರಣವಾಗಿ ದಾನಕೊಡುವಾಗ ದಕ್ಷಿಣಹಸ್ತವನ್ನು (ಬಲಗೈಯನ್ನು) ಉಪಯೋಗಿಸುವುದರಿಂದ ದಾನಕರ್ಮಕ್ಕೆ ದಕ್ಷಿಣಾ ಎಂದು ಹೆಸರು.

ಈ ನಾಲ್ಕುವಿಧ ಅರ್ಥಗಳಲ್ಲಿ ಕಡೆಯ ದಾನಕರ್ಮವೆಂಬ ಅರ್ಥವೇ ಈ ಋಕ್ಕಿನಲ್ಲಿ ದಕ್ಷಿಣಾಭಿಮಾನಿದೇವತೆ ಯೆಂದು ನಿರ್ದೇಶಿಸಲ್ಪಟ್ಟಿರುವುದು.

**ಪಾತು, ಅಂಹಸಃ**— ಅಂಹಃ ಎಂದರೆ ಪಾಪವು. ಪಾಪದಿಂದ ರಕ್ಷಿಸಲಿ ಎಂದರೆ, ಪಾಪಕರ್ಮಗಳನ್ನು ಮಾಡದಂತೆ ಸದ್ಬುದ್ಧಿಯನ್ನು ಕೊಟ್ಟು ರಕ್ಷಿಸಲಿ ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಬ್ರಹ್ಮಣಸ್ಪತೇ**— ವ್ಯವಹಿತಮಂತ್ರದಲ್ಲಿ ವಿವೃತವಾಗಿದೆ.

**ದಕ್ಷಿಣಾ**— ದಕ್ಷ ವೃದ್ಧೌ ಧಾತು **ದ್ರುದಕ್ಷಿಭ್ಯಾಮಿನನ್** (ಉ.ಸೂ. ೨-೨೦೮); ದ್ರು ಗತೌ, ದಕ್ಷ ವೃಧೌ. ಈ ಧಾತುಗಳ ಮುಂದೆ ಇನನ್ ಪ್ರತ್ಯಯ ಬರುವುದು ಎಂಬುದರಿಂದ ದಕ್ಷ್ ಎಂಬುದರ ಮುಂದೆ ಇನನ್ ಪ್ರತ್ಯಯ. ಪ್ರತ್ಯಯದಲ್ಲಿ ನಕಾರಕ್ಕೆ ಇತ್ಸಂಜ್ಞೆ, ದಕ್ಷಿ+ನ **ಅಟ್ಕುಪ್ವಾಙ್**- (ಪಾ. ಸೂ. ೮-೪-೨ ) ಎಂಬುದರಿಂದ ನಕಾರಕ್ಕೆ ಣಕಾರ. ಯಜ್ಞಾದಿ ಶಾಸ್ತ್ರೀಯಕರ್ಮಗಳಲ್ಲಿ ಕೊಡತಕ್ಕದ್ದಕ್ಕೆ ದಕ್ಷಿಣಾ ಎಂದು ಹೆಸರು. ಈ ಅರ್ಥದಲ್ಲಿ ಇದು ಸ್ತ್ರೀಲಿಂಗ. "ದ್ರವಿಣಂ ನ ದ್ವಯೋರ್ವಿತ್ತೇ ಕಾಂಚನೇ ಚ ಪರಾಕ್ರಮೇ । ದಕ್ಷಿಣಾ ದಕ್ಷಿಣೋದ್ಭೂತ ಸರಲಚ್ಛಂದವೃತ್ತಿಷು । ಅವಾಮೇ ತ್ರಿಷುಯಜ್ಞಾದಿವಿಧಿದಾನೇ ದಿಶಿಸ್ತ್ರಿಯಾಮ್" ಎಂದು ಮೇದಿನಿಕೋಶದಲ್ಲಿರುವುದು ಏವಂಚ **ಅಜಾದ್ಯತಷ್ಟಾಪ್** (ಪಾ.ಸೂ. ೪-೧-೪) ಎಂಬುದರಿಂದ ಟಾಪ್ ಬಂದು ಸವರ್ಣದೀರ್ಘ ಬಂದರೆ ದಕ್ಷಿಣಾ ಎಂದಾಗುವುದು. ದಕ್ಷಿಣ ಎಂಬುದು ನಕಾರೇತ್ಸಂಜ್ಞಕ ಪ್ರತ್ಯಯಾಂತವಾದ್ದರಿಂದ **ಞ್ನಿತ್ಯಾದಿರ್ನಿತ್ಯಮ್.** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತ.

**ಅಂಹಸಃ**— ನಬ್ವಿಷಯಸ್ಯಾನಿಸನ್ತಸ್ಯ— ಎಂಬುದರಿಂದ ಆದ್ಯುದಾತ್ತ ॥ ೫ ॥

॥ ಸಂಹಿತಾಪಾಠಃ ॥

ಸದಸಸ್ಪತಿಮದ್ಭುತಂ ಪ್ರಿಯಮಿಂದ್ರಸ್ಯ ಕಾಮ್ಯಂ ।
ಸನಿಂ ಮೇಧಾಮಯಾಸಿಷಂ ॥ ೬ ॥

॥ ಪದಪಾಠಃ ॥

ಸದಸಃ । ಪತಿಂ । ಅದ್ಭುತಂ । ಪ್ರಿಯಂ । ಇಂದ್ರಸ್ಯ । ಕಾಮ್ಯಂ ॥
ಸನಿಂ । ಮೇಧಾಂ । ಅಯಾಸಿಷಂ ॥ ೬

॥ ಸಾಯಣಭಾಷ್ಯಂ ॥

ಅನುಪ್ರವಚನೀಯೇಚರೋರ್ಹೋಮೇ ಸದಸಸ್ಪತಿಮಿತ್ಯೇಷಾ ವಿನಿಯುಕ್ತಾ । ತಥಾ ಚ ಗೃಹ್ಯೇ ಮೇಖಲಾಮಾಬಧ್ಯೇತಿ ಖಂಡೇ ಪಠ್ಯತೇ । ಆಚಾರ್ಯಃ ಸಮನ್ವಾರಬ್ಧೇ ಜುಹುಯಾತ್ಸದಸಸ್ಪತಿಮದ್ಭುತಂ । ಆ. ಗೃ. ೧-೨೨-೧೧ । ಇತಿ ॥

ಮೇಧಾಂ ಲಬ್ಧುಂ ಸದಸಸ್ಪತಿಮೇತನ್ನಾಮಕಂ ದೇವಮಯಾಸಿಷಂ । ಪ್ರಾಪ್ತವಾನಸ್ಮಿ । ಕೀದೃಶಂ । ಅದ್ಭುತಮಾಶ್ಚರ್ಯಕರಂ । ಇಂದ್ರಸ್ಯ ಪ್ರಿಯಂ ಸೋಮಪಾನೇ ಸಹಚಾರಿತ್ವಾತ್ ಕಾಮ್ಯಂ ಕಮನೀಯಂ ಸನಿಂ ಧನಸ್ಯ ದಾತಾರಂ ॥ ಸದಸಃ । ಷದ್ಲೃ ವಿಶರಣಾದೌ । ಸರ್ವಧಾತುಭ್ಯೋಽಸುನ್ । ನಿತ್ತ್ವಾದಾದ್ಯುದಾತ್ತಃ । ಪತಿಂ । ಪಾತೇರ್ಡತಿಃ । ಉ. ೪-೫೭ । ಟಿಲೋಪಃ । ಪ್ರತ್ಯಯಸ್ವರಃ । ಪ್ರಿಯಂ । ಇಗುಪಧಜ್ಞಾಪ್ರೀಕಿರಃ ಕಃ । ಇಯಙಾದೇಶಃ । ಪ್ರತ್ಯಯಸ್ವರಃ । ಕಾಮ್ಯಂ । ಕಾಮಯತೇರಚೋಯತ್ । ಣೇರನಿಟೀತಿ ಣಿಲೋಪಃ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಸನಿಂ । ಷಣು ದಾನೇ । ಧಾತ್ವಾದೇಃ ಷಃ ಸಃ । ಅಚ ಇರಿತ್ಯನುವೃತ್ತೌ ಖನಿಕಷ್ಯಂಜ್ಯಸಿವಸಿವನಿಸನಿಧ್ವನಿಗ್ರಂಥಿಚರಿಭ್ಯಶ್ಚ । ಉ. ೪. ೧೪೧ । ಇತಿ ಇಪ್ರತ್ಯಯಃ । ಪ್ರತ್ಯಯಸ್ವರಃ । ಅಯಾಸಿಷಂ । ಯಾ ಪ್ರಾಪಣೇ । ಲುಙ್ । ಮಿಪೋಽಮಾದೇಶಃ । ಯಮರಮನಮಾತಾಂ ಸಕ್ ಚ । ಪಾ. ೭-೨-೭೩ । ಇತಿ ಸಿಚ ಇಡಾಗಮಃ । ಧಾತೋಃ ಸಗಾಗಮಃ ನಿಘಾತಃ ॥

॥ ಪ್ರತಿಪದಾರ್ಥ ॥

ಮೇಧಾಂ—ಮೇಧಾಶಕ್ತಿಯನ್ನು । ಲಬ್ಧುಂ—ಪಡೆಯಲು । ಅದ್ಭುತಂ—ಆಶ್ಚರ್ಯಕರನಾದ । ಇಂದ್ರಸ್ಯ—ಇಂದ್ರನಿಗೆ । ಪ್ರಿಯಂ—ಪ್ರೀತಿಪಾತ್ರನಾದ । ಕಾಮ್ಯಂ—ಸುಂದರನಾದ । ಸನಿಂ—ಧನವನ್ನು ಕೊಡುವ । ಸದಸಸ್ಪತಿಂ--ಸದಸಸ್ಪತಿ ಎಂಬ ದೇವತೆಯನ್ನು । ಅಯಾಸಿಷಂ—ಹೊಂದಿರುವೆನು (ಆಶ್ರಯಿಸಿರುವೆನು ಅಥವಾ ಪ್ರಾರ್ಥಿಸುವೆನು ।

॥ ಭಾವಾರ್ಥ ॥

ಆಶ್ಚರ್ಯಕರನೂ ಎಂದರೆ ಅದ್ಭುತವಾದ ಸಾಹಸಕರ್ಮಗಳನ್ನು ಮಾಡುವವನೂ, ಇಂದ್ರನಿಗೆ ಪ್ರೀತಿಪಾತ್ರನೂ, ಸುಂದರರೂಪವುಳ್ಳವನೂ, ಧನವನ್ನು ಕೊಡುವವನೂ ಆದ ಸದಸಸ್ಪತಿಯೆಂಬ ದೇವತೆಯನ್ನು ಮೇಧಾಶಕ್ತಿಯನ್ನು ಪಡೆಯುವುದಕ್ಕಾಗಿ ನಾನು ಆಶ್ರಯಿಸಿರುವೆನು (ಪ್ರಾರ್ಥಿಸುವೆನು).

## English Translation.

I pray, for wisdom, Sadasaspati, the wonderful, the beloved of Indra, the desirable, and the giver of riches.

|| ವಿಶೇಷವಿಷಯಗಳು ||

ಈ ಋಕ್ಕಿಗೆ ಸದಸಸ್ಪತಿಯು ದೇವತೆಯು. ಗೃಹ್ಯಕರ್ಮವಾದ ವಿವಾಹಾದಿ ಕರ್ಮಗಳಲ್ಲಿ ಅನುಪ್ರವಚನೀಯವೆಂಬ ಚರುಹೋಮವನ್ನು ಮಾಡುವಾಗ ಸದಸಸ್ಪತಿಯೆಂಬ ಈ ಋಕ್ಕನ್ನು ಹೇಳುವರು. ಆಶ್ವಲಾಯನ ಗೃಹ್ಯಸೂತ್ರದಲ್ಲಿ ಮೇಖಲಾಮಾಬಧ್ಯ ಎಂಬ ಖಂಡದಲ್ಲಿ ಆಚಾರ್ಯಃ ಸಮನ್ವಾರಬ್ಧೇ ಜುಹುಯಾತ್ಸದಸಸ್ಪತಿಮದ್ಭುತಂ (ಆ. ಗೃ. ೧-೨೨-೧೧) ಎಂದು ಈ ಋಕ್ಕಿನ ವಿನಿಯೋಗಕ್ರಮವನ್ನು ಹೇಳಿರುವುದು.

**ಸದಸಸ್ಪತಿಂ**—ಸದಸಸ್ಪತಿಯೆಂಬ ದೇವತೆಯು. ಅವಯವಾರ್ಥವನ್ನು ಹೇಳುವುದಾದರೆ ಸದಸಃ ಪತಿಂ—ಸದಸ್ಸಿಗೆ ಅಥವಾ ಸಭೆಗೆ ಅಧಿಪತಿಯು ಎಂದರ್ಥವು. ಸ್ಕಂದಸ್ವಾಮಿಯು ಈ ವಿಷಯದಲ್ಲಿ ಹೇಳಿರುವುದು ಪರಿಗ್ರಾಹ್ಯವಾಗಿರುವುದು—

> ಚತಸ್ರಃ ಸಾದಸಸ್ಪತ್ಯಾಃ | ಸದಃ ಪ್ರಸಿದ್ಧಂ ಯಜ್ಞಗೃಹಂ ತಸ್ಯಾಧಿಪತಿಃ ಸದಸಸ್ಪತಿಃ | ಕೋಽಸೌ | ಅಗ್ನಿಃ | ಕುತ ಏತತ್ | ಅಗ್ನೇಃ ಸರ್ವಯಜ್ಞಾಧಿಪತಿತ್ವಾತ್ | ಅಸು ಚರ್ಕ್ಷು ಯಜ್ಞಸಾಧನಹವಿಷ್ಕೃತಿಸಮರ್ಥನಾದ್ಯಗ್ನಿಕರ್ಮದರ್ಶನಾತ್ತದ್ದೇವತ್ಯಾಶ್ಚ ತಸ್ರ- ಶ್ಚರ್ಚಃ | ಸದಸಸ್ಪತಿಮಗ್ನಿಂ ||

ಈ ಋಕ್ಕೂ ಮುಂದಿನ ಮೂರು ಋಕ್ಕುಗಳೂ ಒಟ್ಟು ನಾಲ್ಕು ಋಕ್ಕುಗಳು ಸದಸಸ್ಪತಿದೇವತಾಕವಾದವುಗಳು. ಸದಃ ಎಂದರೆ ಪ್ರಸಿದ್ಧವಾದ ಯಜ್ಞಗೃಹವು ಅದಕ್ಕೆ ಅಧಿಪತಿಯಾದ್ದರಿಂದ ಸದಸಸ್ಪತಿಯೆಂದು ಹೆಸರು. ಈ ಯಜ್ಞಗೃಹಕ್ಕೆ ಅಧಿಪತಿಯು ಯಾರು? ಎಂದರೆ, ಅಗ್ನಿಯೇ. ಏಕೆಂದರೆ, ಅಗ್ನಿಯೇ ಸರ್ವಯಜ್ಞಗಳಿಗೂ ಅಧಿಪತಿಯೆಂದು ಪ್ರಸಿದ್ಧವು. ಮತ್ತು ಈ ನಾಲ್ಕು ಋಕ್ಕುಗಳಲ್ಲಿ ಯಜ್ಞಸಾಧನವಾದ ಹವಿಷ್ಕೃತಿ, ಅಗ್ನಿಕರ್ಮ ಮೊದಲಾದ ಅಗ್ನಿಸಂಬಂಧವಾದ ಕರ್ಮಗಳನ್ನು ಪ್ರತಿಪಾದಿಸಿರುವುದರಿಂದ ಸದಸಸ್ಪತಿಯೆಂದರೆ ಅಗ್ನಿಯೇ ಎಂಬದು ನಿರ್ವಿವಾದವು. ಸದಸಸ್ಪತಿಯ ಹೆಸರು ಈ ಋಕ್ಕುಗಳಲ್ಲಲ್ಲದೆ ಋಗ್ವೇದದಲ್ಲಿ ಬೇರೆಲ್ಲಿಯೂ ಕಂಡು ಬರುವುದಿಲ್ಲ. ಯಾಸ್ಕಮಹರ್ಷಿಯೂ ಈ ಸದಸಸ್ಪತಿಯ ವಿಷಯವಾಗಿ ಏನನ್ನೂ ಹೇಳಿರುವುದಿಲ್ಲ. ಆದುದರಿಂದ ಸ್ಕಂದಸ್ವಾಮಿಯು ಹೇಳಿರುವುದೇ ಸಮಂಜಸವಾಗಿರುವುದೆಂದು ಒಪ್ಪಲೇಬೇಕಾಗಿರುವುದು.

**ಅದ್ಭುತಂ**—ಆಶ್ಚರ್ಯಕರಂ, ಆಶ್ಚರ್ಯಕರನಾದ ಎಂದು ಭಾಷ್ಯಕಾರರೂ- ಮಹಾಂತಂ—ದೊಡ್ಡವನಾದ, ಶ್ರೇಷ್ಠನಾದ ಎಂದು ಸ್ಕಂದಸ್ವಾಮಿಯೂ ಈ ಶಬ್ದಕ್ಕೆ ಅರ್ಥವಿವರಣೆ ಮಾಡಿರುವರು.

**ಕಾಮ್ಯಂ**—ಕಮನೀಯಂ ಅಪೇಕ್ಷಿಸಲ್ಪಡುವ, ಸುಂದರನಾದ. ಸ್ಕಂದಸ್ವಾಮಿಯ ಅರ್ಥವು **ಕಾಮ್ಯಂ ಪ್ರಾರ್ಥಯಿತವ್ಯಂ ಸ್ತೋತ್ರಾಣಾಂ**—ಪ್ರಾರ್ಥಿಸಲ್ಪಡಲರ್ಹನಾದ ಎಂದಿರುವುದು.

**ಸನಿಂ**—ಷಣು ದಾನೇ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಧನಸ್ಯ ದಾತಾರಂ ಅಥವಾ ಧನದಾನಂ ಎಂದರೆ ಧನವನ್ನು ಕೊಡುವ ಸದಸಸ್ಪತಿಯನ್ನು ಎಂದಾಗಲಿ, ಧನದಾನಕ್ಕಾಗಿ ಸದಸಸ್ಪತಿಯನ್ನು ಎಂದಾಗಲಿ ಅರ್ಥಮಾಡಬಹುದು.

**ಅಯಾಸಿಷಂ**—ಯಾ ಪ್ರಾಪಣೇ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಹೊಂದಿರುವೆನು ಅಥವಾ ಆಶ್ರಯಿಸಿರುವೆನು ಎಂದರೆ ಪ್ರಜ್ಞಾ ಮತ್ತು ಧನಲಾಭಕ್ಕಾಗಿ ಸದಸಸ್ಪತಿಯನ್ನು ಆಶ್ರಯಿಸಿರುವೆನು

ಎಂದರ್ಥವು. ಸ್ಕಂದಸ್ವಾಮಿಯು **ಈಮಹೇ ಯೊಮಿ** ಮೊದಲಾದ ಶಬ್ದಗಳಿಗೆ ಯಾಜ್ಞಾಕರ್ಮಾರ್ಥದಲ್ಲಿ ಪ್ರಯೋಗವಿರುವುದೆಂದು ನಿರುಕ್ತದಲ್ಲಿ ಹೇಳಿರುವುದರಿಂದ **ಯೊ** ದಾತುವಿನ ರೂಪಾಂತರವಾದ **ಅಯೊಸಿಷಂ** ಎಂಬ ಶಬ್ದಕ್ಕೆ **ಯೊಚೇ** ಎಂದರೆ ಯಾಚಿಸುವೆನು ಅಥವಾ ಪ್ರಾರ್ಥಿಸುವೆನು ಎಂದು ಅರ್ಥವಿವರಣೆ ಮಾಡಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಸದಸಃ**—ಷದ್ಲೃ ವಿಶರಣಗತ್ಯವಸಾದನೇಷು, ಧಾತು. **ಧಾತ್ವಾದೇಃಷಃಸಃ** ಎಂಬುದರಿಂದ ಷಕಾರಕ್ಕೆ ಸಕಾರ, **ಸರ್ವಧಾತುಭ್ಯೋಽಸುನ್** ಎಂಬುದರಿಂದ ಸದ್ ಎಂಬುದರ ಮುಂದೆ ಅಸುನ್. ಪ್ರತ್ಯಯವು ನಿತ್, ಆದ್ದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಞಕಾರೇತ್ಸಂಜ್ಞಕಪ್ರತ್ಯಯಾಂತ, ನಕಾರೇತ್ಸಂಜ್ಞಕಪ್ರತ್ಯಯಾಂತ, ಇವುಗಳ ಆದಿಯು ಉದಾತ್ತವಾಗುವುದು ಎಂಬುದರಿಂದ ಸದಸ್ ಎಂಬುದು ಆದ್ಯುದಾತ್ತ, ಷಷ್ಠೀವಿಭಕ್ತಿ ಏಕವಚನ ಙಸ್ ಬಂದರೆ ಸದಸ್+ಅಸ್, ರುತ್ವ ವಿಸರ್ಗ, ಸದಸಃ ಇದರ ಮುಂದೆ ಪತಿ ಶಬ್ದ ಪರದಲ್ಲಿರುವುದು. ಆದ್ದರಿಂದ **ಷಷ್ಠ್ಯಾಃ ಪತಿಪುತ್ರ-,** (ಪಾ.ಸೂ. ೮-೩-೫೩ ) ಎಂಬುದರಿಂದ ವಿಸರ್ಗಕ್ಕೆ ಸಕಾರ.

**ಪತಿಮ್**—ಪಾರಕ್ಷಣೇ **ಪಾ ತೇರ್ಡತಿಃ** (ಉ.ಸೂ. ೪-೪೯೭) ಪಾ ರಕ್ಷಣೇ ಧಾತುವಿನ ಮುಂದೆ ಡತಿ ಪ್ರತ್ಯಯ ಬರುವುದು ಎಂಬುದರಿಂದ ಡತಿಪ್ರತ್ಯಯ, ಪ್ರತ್ಯಯಾದಿಯಾದ ಡಕಾರಕ್ಕೆ **ಚುಟೂ** (ಪಾ.ಸೂ. ೧-೩-೭) ಎಂಬುದರಿಂದ ಇತ್ಸಂಜ್ಞೆ. **ತಸ್ಯಲೋಪಃ** ( ಪಾ. ಸೂ. ೧-೩-೯ ) ಎಂಬುದರಿಂದ ಲೋಪ, ಪಾ+ಅತಿ ಪ್ರತ್ಯಯದಲ್ಲಿ ಡಿತ್ಕರಣಸಾಮರ್ಥ್ಯದಿಂದ ಭ ಸಂಜ್ಞೆಯು ಪೂರ್ವಕ್ಕೆ ಇಲ್ಲದೇ ಇದ್ದರೂ **ಟೇಃ** (ಪಾ.ಸೂ. ೬-೪-೧೪೩) ಎಂಬುದರಿಂದ ಟಿಸಂಜ್ಞಕವಾದ ಪಾ ಎಂಬುದರ ಆಕಾರಕ್ಕೆ ಲೋಪ, ಪತಿ ಎಂದಾಗುವುದು. ಪ್ರತ್ಯಯಸ್ವರದಿಂದ ಇದು ಆದ್ಯುದಾತ್ತ.

**ಪ್ರಿಯಮ್**—ಪ್ರೀಞ್ ತರ್ಪಣೇ, ಧಾತು. ಇ ಉ ಋ ಲೃ ಗಳನ್ನು ಉಪಾಂತ್ಯದಲ್ಲಿ ಹೊಂದಿರುವ ಧಾತುಗಳು, ಜ್ಞಾ ಅವಬೋಧನೇ, ಪ್ರೀಞ್ ತರ್ಪಣೇ, ಕ್ಷಾ ವಿಕ್ಷೇಪೇ, ಇವುಗಳ ಮುಂದೆ ಕ ಪ್ರತ್ಯಯ ಬರುವುದು ಎಂಬುದರಿಂದ ಪ್ರೀ ಧಾತುವಿನ ಮುಂದೆ ಕ ಪ್ರತ್ಯಯ. **ಲಶಕ್ವತದ್ಧಿತೇ** (ಪಾ. ಸೂ. ೧-೩-೮) ಎಂಬುದರಿಂದ ಕಕಾರಕ್ಕೆ ಇತ್ಸಂಜ್ಞೆ ಲೋಪ, ಪ್ರೀ+ಅ **ಅಚಿಶ್ನುಧಾತುಭ್ರುವಾಂಯ್ವೋರಿಯಙುವಙೌ** (ಪಾ.ಸೂ. ೬-೪-೭೭ ) ಎಂಬುದರಿಂದ ಈಕಾರಕ್ಕೆ ಇಯಙ್ ಆದೇಶ ಪ್ರಿಯ ಎಂದಾಯ್ತು. ಇದು ಪ್ರತ್ಯಯಸ್ವರದಿಂದ ಅಂತೋದಾತ್ತ, ದ್ವಿತೀಯಾಏಕವಚನ ಅಮ್ **ಅಮಿಪೂರ್ವಃ** (ಪಾ. ಸೂ. ೬-೧-೧೦೭) ಪೂರ್ವರೂಪ.

**ಕಾಮ್ಯಮ್**— ಕಮು ಕಾಂತೌ, ಧಾತು. ಕಾನ್ತಿ ಎಂದರೆ ಇಚ್ಛೆ. **ಕಮೇರ್ಣಿಙ್** (ಪಾ.ಸೂ.೩-೧-೩೦) ಎಂಬುದರಿಂದ ಸ್ವಾರ್ಥದಲ್ಲಿ ಣಿಙ್, ಕಮ್+ಇ. **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ, ಕಾಮಿ, ಇದು ಅಜಂತ, ಆದ್ದರಿಂದ **ಅಚೋಯತ್** (ಪಾ. ಸೂ. ೩-೧-೯೭) ಅಜನ್ತವಾದ ಧಾತುವಿನ ಮುಂದೆ ಯತ್ ಪ್ರತ್ಯಯ ಬರುವುದು ಎಂಬುದರಿಂದ ಯತ್ ಪ್ರತ್ಯಯ, ಕಾಮ್+ಇ+ಯ. **ಣೇರನಿಟಿ** (ಪಾ.ಸೂ. ೬-೪-೫೧) ಇಡಾದಿಯಲ್ಲದ ಆರ್ಧಧಾತುಕ ಪರದಲ್ಲಿರುವಾಗ ಣಿಗೆ ಲೋಪ ಬರುವುದು ಎಂಬುದರಿಂದ ಣಿಙ್‌ಗೆ ಲೋಪ, ಕಾಮ್ಯ. ತಿತ್ಸ್ವರಿತಮ್ ಎಂಬುದಕ್ಕೆ ಅಪವಾದವಾದ **ಯತೋಽನಾವಃ** (ಪಾ.ಸೂ ೬-೧-೨೧೩) ಎಂಬುದರಿಂದ ಆದ್ಯುದಾತ್ತ. ದ್ವಿತೀಯೈಕವಚನಾನ್ತ.

**ಸನಿಮ್**—ಷಣು ದಾನೇ, **ಧಾತ್ವಾದೇಃಷಃಸಃ** ಎಂಬುದರಿಂದ ಷಕಾರಕ್ಕೆ ಸಕಾರ **ಖನಿಕಷ್ಯಜ್ಯಸಿವಸಿವನಿಸನಿಧ್ವನಿಗ್ರನ್ಥಿಚಲಿಭ್ಯಶ್ಚ** (ಉ. ಸೂ. ೪-೫೭೯) **ಅಚಇಃ** ( ಉ. ಸೂ. ೪-೫೭೮ ) ಎಂಬುದರಿಂದ ಇಃ ಎಂಬುದು ಅನುವೃತ್ತವಾಗುವುಧು. ಖನು ಅವ-ದಾರಣೇ, ಕಷ ಹಿಂಸಾಯಾಂ, ಅಜ ಗತಿಕ್ಷೇಪಣಯೋಃ ಅಸು ಕ್ಷೇಪಣೇ, ವಸ ಆಚ್ಛಾದನೇ, ವನ, ಷಣ, ಸಂಭಕ್ತೌ, ವನು ಯಾಚನೇ, **ಷಣು ದಾನೇ**, ಧ್ವನ ಶಬ್ದೇ, ಗ್ರನ್ಥ ಬಂಧನೇ, (ಎರಡೂ ಚುರಾದಿ) ಚಲ ಕಂಪನೇ, ಈ ಧಾತುಗಳ ಮುಂದೆ ಇಪ್ರತ್ಯಯು ಬರುವುದು ಎಂಬುದರಿಂದ ಇಪ್ರತ್ಯಯ. ಸನ್+ಇ. ಪ್ರತ್ಯಯಸ್ವರದಿಂದ ಅಂತೋದಾತ್ತ ಅಮ್, ಪೂರ್ವರೂಪ, ಸನಿಮ್ ಎಂದಾಗುವುದು.

**ಅಯಾಸಿಷಮ್**—ಯಾ ಪ್ರಾಪಣೇ, ಲುಙ್, ಉತ್ತಮಪುರುಷಬಹುವಚನ ಮಿಪ್, ಯಾ+ಮಿ, **ತಸ್ಥಸ್ಥಮಿಪಾಂತಾಂತಂತಾಮಃ** (ಪಾ.ಸೂ.೩-೪-೧೦೧) ಎಂಬುದರಿಂದ ಮಿಗೆ ಅಮ್ ಆದೇಶ, ಯಾ+ಅಮ್ **ಚ್ಲಿಲುಙಿ** (ಪಾ.ಸೂ. ೩-೧-೪೩) ಎಂಬುದರಿಂದ ಚ್ಲಿ. ಅದಕ್ಕೆ **ಚ್ಲೇಸ್ಸಿಚ್** (ಪಾ.ಸೂ. ೩-೧-೪೪) ಎಂಬುದರಿಂದ ಸಿಚ್ ಆದೇಶ, **ಲುಙ್ಲಙ್ಲೃಙ್ಕ್ಷ್ವಡುದಾತ್ತಃ** (ಪಾ.ಸೂ. ೬-೪-೭೧) ಎಂಬುದರಿಂದ ಧಾತುವಿಗೆ ಅಡಾಗಮ ಅಯಾ+ಸ್+ಅಮ್, **ಯಮರಮನಮಾನಾಂ ಸಕ್ ಚ** (ಪಾ.ಸೂ. ೭-೨-೭೩) ಯಮ, ರಮ, ನಮ ಧಾತುಗಳು ಆಕಾರಾಂತ ಧಾತುಗಳು ಇವುಗಳಿಗೆ ಸಕ್ ಆಗಮವೂ, ಇವುಗಳ ಮುಂದೆ ಇರುವ ಸಿಚ್ಚಿಗೆ ಇಡಾಗಮವೂ ಪರಸ್ಮೈಪದ ಪ್ರತ್ಯಯ ಪರದಲ್ಲಿರುವಾಗ ಬರುವುದು ಎಂಬುದರಿಂದ ಆಕಾರಾಂತವಾದ ಯಾಗೆ ಸಕ್ ಆಗಮವೂ ಸಿಚ್‌ಗೆ ಇಟ್ಟೂ ಬಂದರೆ ಅಯಾಸ್+ಇಸ್+ಅಮ್, **ಆದೇಶಪ್ರತ್ಯಯಯೋಃ** (ಪಾ.ಸೂ. ೮-೩-೫೯) ಎಂಬುದರಿಂದ ಸಿಚ್. ಸಕಾರಕ್ಕೆ ಷಕಾರ, ಅಯಾಸಿಷಮ್ ಎಂದಾಗುವುದು. **ತಿಙ್ಙತಿಙಃ** (ಪಾ. ಸೂ. ೮.೧ ೨೮) ಎಂಬುದರಿಂದ ಸರ್ವಾನುದಾತ್ತ ಬರುವುದು. || ೬ ||

॥ ಸಂಹಿತಾಪಾಠಃ ॥

ಯಸ್ಮಾದೃತೇ ನ ಸಿಧ್ಯತಿ ಯಜ್ಞೋ ವಿಪಶ್ಚಿತಶ್ಚನ ।
ಸ ಧೀನಾಂ ಯೋಗಮಿನ್ವತಿ ॥ ೭ ॥

॥ ಪದಪಾಠಃ ॥

ಯಸ್ಮಾತ್ । ಋತೇ । ನ । ಸಿಧ್ಯತಿ । ಯಜ್ಞಃ । ವಿಪಃ ऽ ಚಿತಃ । ಚನ ॥
ಸಃ । ಧೀನಾಂ । ಯೋಗಂ । ಇನ್ವತಿ ॥ ೭ ॥

॥ ಸಾಯಣಭಾಷ್ಯಂ ॥

ಯಜ್ಞೋಽಯಮನುಷ್ಠಾತವ್ಯೋ ವಿಪಶ್ಚಿತಶ್ಚನ ವಿದುಷೋಽಪಿ ಯಜಮಾನಸ್ಯ ಯಸ್ಮಾತ್ಸದಸಸ್ಪತಿದೇವಾದೃತೇ ನ ಸಿಧ್ಯತಿ ಸೋಽಯಂ ಸದಸಸ್ಪತಿರ್ದೇವೋ ಧೀನಾಂ ಮನೋಽನುಷ್ಠಾನವಿಷಯಾ-

**ಣಾಮಸ್ಮದ್ಬುದ್ಧೀನಾಮನುಷ್ಠೇಯಕರ್ಮಣಾಂ ವಾ ಯೋಗಂ ಸಂಬಂಧಮಿನ್ವತಿ । ವ್ಯಾಪ್ನೋತಿ । ಯಜಮಾನಮನುಗೃಹ್ಯ ತದೀಯಂ ಯಜ್ಞಂ ನಿಷ್ಪಾದಯತೀತ್ಯರ್ಥಃ ॥ ಯಸ್ಮಾತ್ । ಅನ್ಯಾರಾದಿತ್ಯಾದಿನಾ । ಪಾ. ೨-೩-೨೯ । ಋತೇಯೋಗಾತ್ಪಂಚಮೀ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವೇ ಪ್ರಾಪ್ತೇ ನ ಗೋಶ್ವನ್ಸಾವವರ್ಣೇತಿ ಪ್ರತಿಷೇಧಃ । ಸಿದ್ಧ್ಯತಿ । ಷಿಧು ಸಂರಾದ್ಧೌ । ಶ್ಯನೋ ನಿತ್ತ್ವಾದಾದ್ಯುದಾತ್ತತ್ವಂ । ಯದ್ವೃತ್ತಾನ್ನಿತ್ಯಮಿತಿ ನಿಘಾತಪ್ರತಿಷೇಧಃ । ಧೀನಾಂ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಯೋಗಂ । ಯುಜಿರ್ ಯೋಗೇ । ಘಞೋ ಞಿತ್ತ್ವಾದಾದ್ಯುದಾತ್ತತ್ವಂ । ಇನ್ವತಿ । ಇವಿ ವ್ಯಾಪ್ತೌ । ಶಪ್ । ಇದಿತೋ ನುಮ್ ಧಾತೋರಿತಿ ನುಮ್ । ನಿಘಾತಃ ॥**

॥ ಪ್ರತಿಪದಾರ್ಥ ॥

**ಯಜ್ಞಃ**— ( ನಾವು ) ಮಾಡಬೇಕೆಂದಿರುವ ಯಜ್ಞವು । **ವಿಪಶ್ಚಿತಶ್ಚನ** — ವಿದ್ವಾಂಸನಾದ ಯಜಮಾನನಿಗೂ । **ಯಸ್ಮಾತ್ ಋತೇ**—ಯಾವ ಸದಸಸ್ಪತಿಯ ಸಹಾಯವಿಲ್ಲದೇ । **ನ ಸಿಧ್ಯತಿ**—ಸಾಧ್ಯವಾಗುವುದಿಲ್ಲವೋ । **ಸಃ**—ಅಂತಹ ಈ ಸದಸಸ್ಪತಿಯು । **ಧೀನಾಂ**—ಯಜ್ಞವನ್ನು ಮಾಡಬೇಕೆಂಬ ಬುದ್ಧಿಗೂ ಅಥವಾ ಅನುಷ್ಠೇಯಕರ್ಮಗಳಿಗೂ । **ಯೋಗಂ**—ಸಂಬಂಧವನ್ನು । **ಇನ್ವತಿ**--ವ್ಯಾಪಿಸುತ್ತಾನೆ (ಕಲ್ಪಿಸುತ್ತಾನೆ).

॥ ಭಾವಾರ್ಥ ॥

ಎಂತಹ ಪಂಡಿತನಾದ ಯಜಮಾನನೂ ಕೂಡ ಸದಸಸ್ಪತಿಯ ಸಹಾಯವಿಲ್ಲದಿದ್ದಲ್ಲಿ ಕರ್ಮವನ್ನು ಸಾಧಿಸಲಾರನು. ಏಕೆಂದರೆ, ಈ ಸದಸಸ್ಪತಿಯೇ ನಮ್ಮ ಮನಸ್ಸಿನಲ್ಲಿ ಬರುವ ವಿಷಯಗಳಿಗೂ ನಾವು ಮಾಡಬೇಕಾಗಿರುವ ಕರ್ಮಗಳಿಗೂ ಸಂಬಂಧವನ್ನು ಕಲ್ಪಿಸುತ್ತಾನೆ. ಎಂದರೆ ಅನುಷ್ಠೇಯಕರ್ಮಗಳಲ್ಲಿ ನಮ್ಮ ಮನಸ್ಸು ಆಸಕ್ತವಾಗುವಂತೆ ಮಾಡುತ್ತಾನೆ.

## English Translation

Without whose aid the sacrifice even of the wise does not prosper, he prompts the pious feelings in our thonghts.

॥ ವಿಶೇಷವಿಷಯಗಳು ॥

**ಚನ-ಅಪಿ**--ಈ ಶಬ್ದಕ್ಕೆ ಕೂಡ ಎಂದರ್ಥವು.

**ಧೀನಾಂ**--ಧೀ ಶಬ್ದಕ್ಕೆ ಪ್ರಜ್ಞಾ ಮತ್ತು ಕರ್ಮ ಎಂಬ ಎರಡರ್ಥಗಳಿರುವವು (ನಿ. ೩-೧೩ ಮತ್ತು ನಿ. ೩-೨) ಆದುದರಿಂದ **ಧೀನಾಂ ಯೋಗಮಿನ್ವತಿ** ಎಂದರೆ ನಾವು ಮಾಡುವ ಯಜ್ಞಾದಿಕರ್ಮಗಳಿಗೆ ಸಂಬಂಧವನ್ನು ಕಲ್ಪಿಸುವವನು. ಅಥವಾ ಕರ್ಮಮಾಡುವಂತೆ ನಮ್ಮ ಬುದ್ಧಿಗೆ ಸಂಬಂಧವನ್ನು ಕಲ್ಪಿಸುವನು ಎಂದರ್ಥವು. ಸಂಬಂಧವನ್ನು ಕಲ್ಪಿಸುವನು ಎಂದರೆ ನಮ್ಮ ಬುದ್ಧಿಯು ಕರ್ಮಾನುಷ್ಠಾನದಲ್ಲಿ ಪ್ರವೃತ್ತವಾಗುವಂತೆ ಪ್ರೇರಿಸುವನು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಯಸ್ಮಾತ್**— ಇಲ್ಲಿ ಯಚ್ಛಬ್ದಕ್ಕೆ ಋತೇ ಶಬ್ದದ ಯೋಗವಿರುವುದು. ಆದ್ದರಿಂದ **ಅನ್ಯಾರಾದಿತರರ್ತೇದಿಕ್ಛಬ್ದಾಞ್ಚೂತ್ತರಪದಾಜಾಹಿಯುಕ್ತೇ** (ಪಾ.ಸೂ. ೨-೩-೨೯). ಅನ್ಯ, ಆರಾತ್, ಇತರ, ಋತೇ, ಪೂರ್ವ ಮೊದಲಾದ ದಿಕ್ಕುಗಳನ್ನು ಬೋಧನೆಮಾಡತಕ್ಕವುಗಳಾಗಿ ದೃಷ್ಟವಾದ ಶಬ್ದಗಳು, ಅಂಚೂತ್ತರಪದಕಗಳಾದ ಶಬ್ದಗಳು ಆಚ್, ಆಹಿ, ಈ ಶಬ್ದಗಳ ಯೋಗವಿರುವಾಗ ಏತದರ್ಥಾನ್ವಿತಾರ್ಥವಾಚಕವಾದ ಪ್ರಾತಿಪದಿಕದ ಮುಂದೆ ಪಞ್ಚಮೀವಿಭಕ್ತಿ ಬರುವುದು ಎಂಬುದರಿಂದ ಋತೇಶಬ್ದಾರ್ಥಾನ್ವಿತಾರ್ಥವಾಚಕವಾದ ಯಚ್ಛಬ್ದದ ಮುಂದೆ ಪಂಚಮೀವಿಭಕ್ತಿ ಬರುವುದು. ಯದ್+ಙಸ್. **ತ್ಯದಾದೀನಾಮಃ** (ಪಾ.ಸೂ. ೭-೨-೧೦೨) ಎಂಬುದರಿಂದ ದಕಾರಕ್ಕೆ ಅಕಾರ. ಅತೋಗುಣೇ (ಪಾ.ಸೂ. ೬-೧-೯೭) ಎಂಬುದರಿಂದ ಪರರೂಪ. **ಙಸಿಙ್ಯೋಃಸ್ಮಾತ್‌ಸ್ಮಿನೌ** (ಪಾ.ಸೂ. ೭-೧-೧೫) ಹ್ರಸ್ವ ಅಕಾರಾಂತ ಸರ್ವನಾಮಶಬ್ದದ ಮುಂದೆ ಇರುವ ಙಸಿ, ಙಿ, ಇವುಗಳಿಗೆ ಕ್ರಮವಾಗಿ ಸ್ಮಾತ್, ಸ್ಮಿನ್ ಆದೇಶಗಳು ಬರುವುವು ಎಂಬುದರಿಂದ ಙಸಿಗೆ ಸ್ಮಾತ್ ಆದೇಶ, ಯಸ್ಮಾತ್ ಎಂದಾಗುವುದು. **ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ** (ಪಾ.ಸೂ.೬-೧-೧೬೮) ಇಲ್ಲಿ ಸು ಎಂದರೆ ಸಪ್ತಮೀಬಹುವಚನಪ್ರತ್ಯಯ, ಅದು ಪರದಲ್ಲಿರುವಾಗ ಒಂದೇ ಸ್ವರವನ್ನು (ಅಚ್ಚನ್ನು) ಹೊಂದಿರುವ ಯಾವ ಶಬ್ದವಿದೆಯೋ ಅದರ ಮುಂದಿರುವ ತೃತೀಯಾದಿ ವಿಭಕ್ತಿಯು ಉದಾತ್ತವಾಗುವುದು ಎಂದು ಸೂತ್ರಾರ್ಥ. ಸಪ್ತಮೀಬಹುವಚನದಲ್ಲಿ ಯೇಷು ಎಂದು ರೂಪ, ಸಪ್ತಮೀಬಹುವಚನ ಷು, ಅದರ ಹಿಂದೆ ಇರುವ ಯೇ ಎಂಬ ಯಚ್ಛಬ್ದ ಏಕಾಚ್ಕ. ಆದ್ದರಿಂದ ಯಚ್ಛಬ್ದದ ಮುಂದೆಇರುವ ತೃತೀಯಾದಿ ವಿಭಕ್ತಿಗೆ ಸೇರಿದ ಪಂಚಮಿಗೆ ಉದಾತ್ತಸ್ವರ ಪ್ರಾಪ್ತವಾಗುವುದು. ಆದರೂ ಯಚ್ಛಬ್ದವು ಪ್ರಥಮೈಕವಚನ ಸುಪ್ರತ್ಯಯ ಪರದಲ್ಲಿರುವಾಗ ಯಃ ಎಂಬಲ್ಲಿ ಅವರ್ಣಾಂತವಾಗಿರುವುದು. ಆದ್ದರಿಂದ **ನಗೋಶ್ವನ್ಸಾವವರ್ಣ—**, (ಪಾ.ಸೂ. ೬-೧-೧೮೨) ಎಂಬುದರಿಂದ ಅದಕ್ಕೆ ಪ್ರತಿಷೇಧ ಬರುವುದು. ಏವಂಚ ಸುಪ್ ಸ್ವರದಿಂದ ಸ್ಮಾತ್ ಎಂಬುದು ಅನುದಾತ್ತ.

**ಸಿಧ್ಯತಿ**— ಷಿಧು ಸಂರಾದ್ಧೌ, ದಿವಾದಿ. ಧಾತ್ವಾದೇಃಷಃಸಃ ಲಟ್ ತಿಪ್. **ದಿವಾದಿಭ್ಯಃಶ್ಯನ್** (ಪಾ.ಸೂ. ೩-೧-೬೯ )ಎಂಬುದರಿಂದ ಶ್ಯನ್, ಸಿಧ್ಯತಿ ಎಂದಾಗುವುದು. ಶ್ಯನ್ ನಿತ್ತು. ಆದ್ದರಿಂದ ನಿತ್ಸ್ವರದಿಂದ ಆದ್ಯುದಾತ್ತ. ಯಸ್ಮಾತ್ ಎಂದು ಯಚ್ಛಬ್ದಘಟಿತವಾದ ಪದದ ಮುಂದೆ ಇರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬ ) ಎಂದು ಪ್ರತಿಷೇಧ ಬರುವ ಕಾರಣ ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ.

**ಧೀನಾಮ್**— **ಸಾವೇಕಾಚಃ** ಎಂಬುದರಿಂದ ವಿಭಕ್ತಿಯು ಉದಾತ್ತ.

**ಯೋಗಮ್**— ಯುಜಿರ್ ಯೋಗೇ, ಧಾತು. ಭಾವೇ ಎಂಬುದರಿಂದ ಘಞ್ ಪ್ರತ್ಯಯ. **ಚಜೋಃ ಕುಘಿಣ್ಣ್ಯತೋಃ** (ಪಾ. ಸೂ. ೭-೩-೫೨) ಘಕಾರೇತ್ಸಂಜ್ಞಕ ಪ್ರತ್ಯಯ ಪರದಲ್ಲಿರುವಾಗಲೂ, ಣ್ಯತ್ಪ್ರತ್ಯಯ ಪರದಲ್ಲಿರುವಾಗಲೂ ಚಕಾರ, ಜಕಾರಗಳಿಗೆ ಕ ವರ್ಗ ಬರುವುದು ಎಂಬುದರಿಂದ ಕ ವರ್ಗ ತೃತೀಯಾಕ್ಷರವಾದ ಜಕಾರಕ್ಕೆ ತದ್ವರ್ಗ ತೃತೀಯವಾದ ಗಕಾರ, ಲಘೂಪಧಗುಣ. ಪ್ರತ್ಯಯವು ಞಿತ್ತಾದ್ದರಿಂದ ಯೋಗ ಎಂಬುದು ಆದ್ಯುದಾತ್ತ.

**ಇನ್ವತಿ**— ಇವಿ ವ್ಯಾಪ್ತೌ ಧಾತು. **ಇದಿತೋನುಮ್‌ಧಾತೋಃ** ( ಪಾ. ಸೂ. ೭-೧-೫೮ ) ಎಂಬುದರಿಂದ ನುಮಾಗಮ ಲಟ್, ತಿಪ್, ಶಪ್ ಇನ್ವತಿ. ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತ ॥ ೭ ॥

॥ ಸಂಹಿತಾಪಾಠಃ ॥

ಆದೃಧ್ನೋತಿ ಹವಿಷ್ಕೃತಿಂ ಪ್ರಾಂಚಂ ಕೃಣೋತ್ಯಧ್ವರಂ ।
ಹೋತ್ರಾ ದೇವೇಷು ಗಚ್ಛತಿ ॥ ೮ ॥

॥ ಪದಪಾಠಃ ॥

ಆತ್ । ಋಧ್ನೋತಿ । ಹವಿಃಽಕೃತಿಂ । ಪ್ರಾಂಚಂ । ಕೃಣೋತಿ । ಅಧ್ವರಂ ॥
ಹೋತ್ರಾ । ದೇವೇಷು । ಗಚ್ಛತಿ ॥ ೮ ॥

॥ ಸಾಯಣಭಾಷ್ಯಂ ॥

ಆದನಂತರಮೇವ ಹವಿಷ್ಕೃತಿಂ ಹವಿಃಸಂಪಾದನಯುಕ್ತಂ ಯಜಮಾನಮೃಧ್ನೋತಿ । ಸದಸಸ್ಪತಿರ್ದೇವೋ ವರ್ಧಯತಿ । ಹವಿರ್ದಾನಾನಂತರಮೇವ ಫಲಂ ಪ್ರಯಚ್ಛತೀತ್ಯರ್ಥಃ । ತಥಾವಿಧಫಲಸಿದ್ಧ್ಯೇಽಧ್ವರಂ ಯಜಮಾನೇನಾನುಷ್ಠೀಯಮಾನಂ ಯಜ್ಞಂ ಪ್ರಾಂಚಂ ಪ್ರಕರ್ಷೇಣ ಗಚ್ಛಂತಮವಿಘ್ನೇನ ಪರಿಸಮಾಪ್ತಿಯುಕ್ತಂ ಕೃಣೋತಿ । ಕರೋತಿ । ಹೋತ್ರಾ ಹೂಯಮಾನಾ ದೇವತಾ ತುಷ್ಟಾ ಸತೀ ಯಜಮಾನಂ ಪ್ರಖ್ಯಾಪಯಿತುಂ ದೇವೇಷು ಗಚ್ಛತಿ । ಯದ್ವಾ । ಹೋತ್ರಾಸ್ಮದೀಯಸ್ತುತಿರೂಪಾ ವಾಕ್ ದೇವಾನ್ಪರಿತೋಷಯಿತುಂ ದೇವೇಷು ಗಚ್ಛತಿ । ಶ್ಲೋಕೋ ಧಾರೇತ್ಯಾದಿಷು ಸಪ್ತಪಂಚಾಶತ್ಸು ವಾಙ್ನಾಮಸು ಹೋತ್ರಾ ಗೀರಿತಿ ಪಠಿತಂ ॥ ಹವಿಷ್ಕೃತಿಂ । ಹವಿಷಃ ಕೃತಿಃ ಸಂಪಾದನಂ ಯಸ್ಯ ಯಜಮಾನಸ್ಯ ಸೋಽಯಂ ಹವಿಷ್ಕೃತಿಃ । ಬಹುವ್ರೀಹೌ ಪ್ರಕೃತ್ಯೇತಿ ಪೂರ್ವಪದಪ್ರಕೃತಿಸ್ವರತ್ವಂ । ಪ್ರಾಂಚಂ । ಅನಿಗಂತೋಽಂಚತೌ ವಪ್ರತ್ಯಯೇ । ಪಾ. ೬-೨-೫೨ । ಇತಿ ಗತೇಃ ಪ್ರಕೃತಿಸ್ವರತ್ವಂ । ಪಶ್ಚಾದೇಕಾದೇಶಸ್ವರಃ । ಅಧ್ವರಂ । ನ ವಿದ್ಯತೇ ಧ್ವರೋ ಹಿಂಸಾ ಯಸ್ಮಿನ್ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಹೂಯತೇಽಸ್ಯಾಮಿತಿ ಹೋತ್ರಾ ದೇವತಾ । ಹುಯಾಮಾಶ್ರುಭಸಿಭ್ಯಸ್ತ್ರನ್ । ಉ. ೪-೧೬೭ । ಇತಿ ತ್ರನ್ । ನಿತ್ತ್ವಾದಾದ್ಯುದಾತ್ತಃ ॥

॥ ಪ್ರತಿಪದಾರ್ಥ ॥

**ಆತ್**—ಅನಂತರ । **ಹವಿಷ್ಕೃತಿಂ**—ಹವಿಸ್ಸನ್ನು ಸಂಪಾದಿಸಿಟ್ಟುಕೊಂಡಿರುವ ಯಜಮಾನನನ್ನು । **ಋಧ್ನೋತಿ**—(ಸದಸಸ್ಪತಿಯು) ಅಭಿವೃದ್ಧಿಪಡಿಸುತ್ತಾನೆ । **ಅಧ್ವರಂ**—(ಯಜಮಾನನು ಕೈಗೊಂಡಿರುವ) ಯಜ್ಞವನ್ನು । **ಪ್ರಾಂಚಂ**—ಚೆನ್ನಾಗಿ ನಡೆಯುವಂತೆ ಅಥವಾ ನಿರ್ವಿಘ್ನವಾಗಿ ಮುಗಿಯುವಂತೆ । **ಕೃಣೋತಿ**—ಮಾಡುತ್ತಾನೆ । **ಹೋತ್ರಾ**—ಹೋತೃವಿನಿಂದ (ಕರೆಯಲ್ಪಟ್ಟ ದೇವತೆಯು ತುಷ್ಟನಾಗಿ ಯಜಮಾನನನ್ನು

ಪ್ರಸಿದ್ಧಿಪಡಿಸಲು) । ದೇವೇಷು—ದೇವತೆಗಳಲ್ಲಿ (ದೇವತೆಗಳು ಇರುವ ಪ್ರದೇಶಕ್ಕೆ) । ಗಚ್ಛತಿ—ಹೋಗುತ್ತಾನೆ [ಅಥವಾ । ಹೋತ್ರಾ—(ನಮ್ಮ) ಸ್ತುತಿರೂಪವಾದ ವಾಕ್ಕು (ದೇವತೆಗಳನ್ನು ಸಂತೋಷಪಡಿಸಲು) । ದೇವೇಷು—ದೇವತೆಗಳಲ್ಲಿ । ಗಚ್ಛತಿ—ಹೋಗಿ ಸೇರುತ್ತದೆ.]

॥ ಭಾವಾರ್ಥ ॥

ನಾವು ಯಜ್ಞದಲ್ಲಿ ಹವಿರ್ಭಾಗವನ್ನು ಕೊಟ್ಟಮೇಲೆಯೇ ಸದಸಸ್ಪತಿಯು ಯಜಮಾನನಿಗೆ ಶ್ರೇಯಸ್ಸನ್ನುಂಟುಮಾಡುತ್ತಾನೆ- ಪ್ರಾರಂಭಿಸಿರುವ ಯಜ್ಞವನ್ನು ನಿರ್ವಿಘ್ನವಾಗಿ ನೆರವೇರಿಸಿಕೊಡುತ್ತಾನೆ. ಮತ್ತು ನಾವು ಆಹ್ವಾನಮಾಡಿದ ದೇವತೆಯು ಯಜ್ಞದಿಂದ ಸಂತುಷ್ಟನಾಗಿ ದೇವತೆಗಳ ಬಳಿಗೆ ಯಜಮಾನನ ಪ್ರಶಂಸೆ ಮಾಡುವುದಕ್ಕಾಗಿ ಹೋಗುತ್ತಾನೆ, ಅಥವಾ ನಾವು ಮಾಡುವ ಸ್ತುತಿರೂಪವಾದ ವಾಕ್ಯವು ಯಜಮಾನನನ್ನು ಪ್ರಶಂಸೆಮಾಡುವುದಕ್ಕಾಗಿ ದೇವತೆಗಳ ಬಳಿಗೆ ಹೋಗುತ್ತದೆ ಎಂದರೆ ದೇವತೆಗಳಿಗೆ ಕೇಳಿಸುತ್ತದೆ.

English Translation.

And then he rewards the presenter of oblations ; brings the sacrifice to its conclusion ; our prayer then reaches the gods.

॥ ವಿಶೇಷ ವಿಷಯಗಳು ॥

ಆತ್-ಅಥ, ಅನಂತರ ಎಂದರ್ಥವು. ಯದೇದಯುಕ್ತ ಹರಿತಃ ಸಧಸ್ಥಾದಾದ್ರಾತ್ರೀ ವಾಸಸ್ತನುತೇ ಸಿಮಸ್ಮೈ (ಋ. ಸಂ. ೧-೧೧೫-೪) ಎಂಬ ಋಕ್ಕಿನಲ್ಲಿರುವ ಆತ್ ಎಂಬ ಶಬ್ದಕ್ಕೆ ಯಾಸ್ಕರು ನಿರುಕ್ತದಲ್ಲಿ ಅಥ-ಅನಂತರ ಎಂಬರ್ಥವನ್ನು ಹೇಳಿರುವರು (ನಿ. ೪-೧೧).

ಹವಿಷ್ಕೃತಿಂ-ಹವಿಷಃ ಕೃತಿಃ ಸಂಪಾದನಂ ಯಸ್ಯ ಯಜಮಾನಸ್ಯ ಸೋಽಯಂ ಹವಿಷ್ಕೃತಿಃ ॥ ಹವಿಃಪ್ರದಾನವನ್ನು ಮಾಡುವ ಯಜಮಾನನನ್ನು ಎಂದರ್ಥವು. ಅಥವಾ ಸ್ಕಂದಸ್ವಾಮಿಯು ಹೇಳುವಂತೆ, ಹವಿಷ್ಕೃತಿಂ ಹವಿಷ್ಕ್ರಿಯಾಂ ಹವೀಂಷಿ ಸಾರತೋ ವೃದ್ಧಾನಿ ಕರೋತೀತ್ಯರ್ಥಃ ॥ ಹವಿಷ್ಕೃತಿಯೆಂದರೆ ಹವಿಃಪ್ರದಾನಕರ್ಮವು. ಅದನ್ನು ಸಾರಭೂತವನ್ನಾಗಿ ಮಾಡುವನೆಂದಭಿಪ್ರಾಯವು.

ಪ್ರಾಂಚಂ—ಪ್ರಕರ್ಷೇಣ ಗಚ್ಛಂತಮವಿಘ್ನೇನ ಪರಿಸಮಾಪ್ತಿಯುಕ್ತಂ ಕರೋತೀತ್ಯರ್ಥಃ ॥ ಯಜ್ಞವು ನಿರ್ವಿಘ್ನವಾಗಿ ಪರಿಸಮಾಪ್ತಿಯಾಗುವಂತೆ ಮಾಡುವನೆಂದರ್ಥವು.

ಹೋತ್ರಾ—ಹೂಯಮಾನಾ ದೇವತಾ ಅಥವಾ ಅಸ್ಮದೀಯಸ್ತುತಿರೂಪಾ ವಾಕ್—ಎಂದರೆ ಯಜ್ಞದಲ್ಲಿ ಆಹ್ವಾನ ಮಾಡಲ್ಪಟ್ಟ ದೇವತೆಯು ಅಥವಾ ನಾವು ಮಾಡುವ ಸ್ತುತಿರೂಪವಾದ ವಾಕ್ಯವು ಎಂಬ ಎರಡು ಅರ್ಥಗಳನ್ನು ಹೇಳಿರುವರು. ಈ ಎರಡರ್ಥಗಳಲ್ಲಿ ವಾಕ್ಯವೆಂಬ ಎರಡನೆಯ ಅರ್ಥವೇ ಇಲ್ಲಿ ಸಮಂಜಸವಾಗಿರುವಂತೆ ಕಾಣುವುದು. ಶ್ಲೋಕಃ ಧಾರಾ ಮೊದಲಾದ ಐವತ್ತೇಳು ವಾಙ್ನಾಮಗಳ ಮಧ್ಯದಲ್ಲಿ ಹೋತ್ರಾ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೨-೨೩) ಹೋತ್ರಾ ಎಂದರೆ ವಾಕ್ಯವು ಎಂದರ್ಥವು.

**ದೇವೇಷು ಗಚ್ಛತಿ**—ಎಂದರೆ ದೇವತೆಗಳ ಬಳಿಗೆ ಹೋಗುವುದು ಎಂದರ್ಥವು. ದೇವತಾಪರವಾದರೆ ಯಜ್ಞದಲ್ಲಿ ಸಂತುಷ್ಟನಾದ ದೇವತೆಯು, ಯಜಮಾನನು ತನ್ನನ್ನು ಚೆನ್ನಾಗಿ ತೃಪ್ತಿಪಡಿಸಿದನೆಂದು ಹೇಳುವುದಕ್ಕಾಗಿ ದೇವತೆಗಳ ಬಳಿಗೆ ಹೋಗುವನು ಎಂದಭಿಪ್ರಾಯವು, ವಾಕ್ಯಪರವಾದರೆ, ನಮ್ಮ ಸ್ತುತಿರೂಪವಾದ ವಾಕ್ಯಗಳು ದೇವತೆಗಳನ್ನು ಮುಟ್ಟಲಿ ಅಥವಾ ದೇವತೆಗಳಿಗೆ ತಿಳಿದು ಅಥವಾ ಕೇಳಿಸಿ ಅದರಿಂದ ಅವರು ಸಂತುಷ್ಟರಾಗಲಿ ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಹವಿಷ್ಕೃತಿಮ್**-ಹವಿಷಃ ಕೃತಿಃ ಸಂಪಾದನಂ ಯಸ್ಯ ಯಜಮಾನಸ್ಯ ಸಃ ಹವಿಷ್ಕೃತಿಃ। ಯಾವ ಯಜಮಾನನಿಗೆ ಹವಿಸ್ಸಿನ ಸಂಪಾದನೆ ಇದೆಯೋ ಆ ಯಜಮಾನನಿಗೆ ಹವಿಷ್ಕೃತಿ ಎನ್ನುವರು. **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್** (ಪಾ. ಸೂ. ೬-೨-೧ ) ಎಂಬುದರಿಂದ ಪೂರ್ವಪದಪ್ರಕೃತಿಸ್ವರ.

**ಪ್ರಾಞ್ಚಮ್**—ಪ್ರ ಅಞ್ಚತಿ ಎಂದು ವಿಗ್ರಹ. ಈ ಅರ್ಥದಲ್ಲಿ ಪ್ರ ಎಂಬ ಸುಬಂತವು ಉಪಪದವಾಗಿರುವಾಗ **ಋತ್ವಿಗ್ದಧೃಕ್**—, (ಪಾ.ಸೂ. ೩-೨-೫೯) ಇತ್ಯಾದಿ ಸೂತ್ರದಿಂದ ಕ್ವಿನ್ ಪ್ರತ್ಯಯ. ಕ್, ನ್, ಇ, ಇವುಗಳಿಗೆ ಇತ್ಸಂಜ್ಞೆಲೋಪ, ವ್ ನಿಲ್ಲುವುದು. **ಅನಿದಿತಾಂ ಹಲ ಉಪಧಾಯಾಃ ಕ್ಙಿತಿ** (ಪಾ.ಸೂ. ೬-೪-೨೪) ಹಲಂತವಾಗಿಯೂ ಹ್ರಸ್ವ ಇಕಾರೇತ್ಸಂಜ್ಞಕವಲ್ಲದುದಾಗಿಯೂ ಇರುವ ಅಂಗದ ಉಪಾಂತ್ಯನಕಾರಕ್ಕೆ ಕಿತ್ತು ಙಿತ್ತು ಆದ ಪ್ರತ್ಯಯ ಪರದಲ್ಲಿರುವಾಗ ಲೋಪ ಬರುವುದು ಎಂಬುದರಿಂದ ಲೋಪ, ಪ್ರ+ಅಚ್+ವ್, ಸವರ್ಣದೀರ್ಘ ಪ್ರಾಚ್+ವ್. **ಅನಿಗನ್ತೋಽಞ್ಚತೌವ ಪ್ರತ್ಯಯೇ** (ಪಾ.ಸೂ. ೬-೨-೫೨) ವಕಾರ ರೂಪ ಪ್ರತ್ಯಯಾಂತವಾದ ಅಞ್ಚುಧಾತುಪರದಲ್ಲಿರುವಾಗ ಇಗಂತವಲ್ಲದ ಗತಿಸಂಜ್ಞಕವು ಪ್ರಕೃತಿಸ್ವರವನ್ನು ಹೊಂದುವುದು. ಎಂಬುದರಿಂದ ಪೂರ್ವಪದಪ್ರಕೃತಿಸ್ವರ, ಪ್ರ ಎಂಬ ಪೂರ್ವಪದವು ಉಪಸರ್ಗಾಶ್ಚಾಭಿವರ್ಜಂ ಎಂಬುದರಿಂದ ಆದ್ಯುದಾತ್ತ, ಸಮಾಸಾನಂತರವೂ ಪೂರ್ವೋಕ್ತಸೂತ್ರದಿಂದ ಅದೇ ಸ್ವರ ನಿಲ್ಲುವುದು. ಪ್ರ+ಅಚ್+ವ್ ಎಂದಿರುವಾಗ ಸವರ್ಣದೀರ್ಘದಿಂದ ಬಂದ ಏಕಾದೇಶವು. ಏಕಾದೇಶ ಉದಾತ್ತೇನೋದಾತ್ತಃ, ಎಂಬುದರಿಂದ ಉದಾತ್ತ. **ವೇರಪೃಕ್ತಸ್ಯ** ಎಂಬುದರಿಂದ ವಕಾರಕ್ಕೆ ಲೋಪ. ದ್ವಿತೀಯಾಏಕವಚನ ಅಮ್, ಪ್ರಾಚ್+ಅಮ್. **ಉಗಿದಚಾಂಸರ್ವನಾಮಸ್ಥಾನೇಽಧಾತೋಃ** (ಪಾ.ಸೂ.೭-೧-೭೦) ಎಂಬುದರಿಂದ ನುಮಾಗಮ. ಪ್ರಾನ್ಚ್+ಅಮ್, **ನಶ್ಚಾಪದಾಂತಸ್ಯಝಲಿ** (ಪಾ.ಸೂ. ೮-೩-೨೪) ನಕಾರಕ್ಕೆ ಅನುಸ್ವಾರ. ಇದಕ್ಕೆ **ಅನುಸ್ವಾರಸ್ಯಯಯಿಪರಸವರ್ಣಃ** (ಪಾ.ಸೂ ೮-೪-೫೮) ಎಂಬುದರಿಂದ ಪರಸವರ್ಣ, ಞಕಾರ, ಪ್ರಾಞ್ಚಮ್ ಎಂದಾಗುವುದು.

**ಅಧ್ವರಮ್**—ನ ವಿದ್ಯತೇಽಧ್ವರಃ ಹಿಂಸಾ ಯಸ್ಮಿನ್ ಸ ಅಧ್ವರಃ, **ಬಹುವ್ರೀಹೌಪ್ರಕೃತ್ಯಾಪೂರ್ವಪದಮ್** ಎಂದು ಪ್ರಾಪ್ತವಾಗುವ ಪೂರ್ವಪದಪ್ರಕೃತಿಸ್ವರವನ್ನು ಬಾಧಿಸಿ **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ನಞ್ ಸು ಇವುಗಳ ಮುಂದೆ ಇರುವ ಉತ್ತರಪದವು ಅಂತೋದಾತ್ತವಾಗುವುದು ಎಂಬುದರಿಂದ ಉತ್ತರಪದವು ಅಂತೋದಾತ್ತ.

**ಹೋತ್ರಾ**—ಹೂಯತೇ ಅಸ್ಮಿನ್ನಿತಿ ಹೋತ್ರಾ ದೇವತಾ. **ಹುಯಾಮಾಶ್ರುಭಸಿಭ್ಯಸ್ತ್ರನ್** (ಉ.ಸೂ. ೪-೬೦೭) ಹು ದಾನಾದನಯೋಃ, ಯಾ ಪ್ರಾಪಣೇ, ಮಾ ಮಾನೇ, ಶ್ರು ಶ್ರವಣೇ, ಭಸ ಭರ್ತ್ಸನದೀಪ್ತ್ಯೋಃ, ಈ

ಧಾತುಗಳ ಮುಂದೆ ತ್ರನ್ ಪ್ರತ್ಯಯಬರುವುದು ಎಂಬುದರಿಂದ ಹು ಧಾತುವಿನ ಮುಂದೆ ತ್ರನ್. ಗುಣ, ಹೋತ್ರ ದೇವತಾವಾಚಕವಾದ ಸ್ತ್ರೀಲಿಂಗ, ಆದ್ದರಿಂದ ಟಾಪ್, ಹೋತ್ರಾ, ಪ್ರತ್ಯಯವು ನಿತ್ತು. ಆದ್ದರಿಂದ ಹೋತ್ರಾ ಎಂಬುದು ನಿತ್ಸ್ವರದಿಂದ ಆದ್ಯುದಾತ್ತ. ॥ ೮ ॥

॥ ಸಂಹಿತಾಪಾಠಃ ॥

ನರಾಶಂಸಂ ಸುಧೃಷ್ಟಮಮಪಶ್ಯಂ ಸಪ್ರಥಸ್ತಮಂ ।
ದಿವೋ ನ ಸದ್ಮಮಖಸಂ ॥ ೯ ॥

॥ ಪದಪಾಠಃ ॥

ನರಾಶಂಸಂ । ಸುऽಧೃಷ್ಟಮಂ । ಅಪಶ್ಯಂ । ಸಪ್ರಥಃऽತಮಂ ॥
ದಿವಃ । ನ । ಸದ್ಮऽಮಖಸಂ ॥ ೯ ॥

॥ ಸಾಯಣಭಾಷ್ಯಂ ॥

ನರಾಶಂಸಮೇತನ್ನಾಮಕಂ ದೇವವಿಶೇಷಂ । ಯದ್ವಾ । ಅವಯವಾರ್ಥವ್ಯುತ್ಪತ್ತ್ಯಾ ಸದಸಸ್ಪತಿದೇವತಾಪರೋಽಯಂ ಶಬ್ದಃ । ವ್ಯುತ್ಪತ್ತಿಂ ಚ ಯಾಸ್ಕೋ ದರ್ಶಯತಿ । ನರಾಶಂಸೋ ಯಜ್ಞ ಇತಿ ಕಾತ್ಥಕ್ಯೋ ನರಾ ಅಸ್ಮಿನ್ನಾಸೀನಾಃ ಶಂಸಂತ್ಯಗ್ನಿರಿತಿ ಶಾಕಪೂಣಿರ್ನರೈಃ ಪ್ರಶಸ್ಯೋ ಭವತಿ । ನಿ. ೮-೬ । ಇತಿ । ಅತ್ರಾಗ್ನಿವತ್ಸದಸಸ್ಪತೇರಪಿ ನರೈಃ ಶಸ್ಯಮಾನತ್ವಾನ್ನರಾಶಂಸತ್ವಂ । ಏವಮೇವಾಭಿಪ್ರಾಯಂ ಹೃದಿನಿಧಾಯ ಬ್ರಾಹ್ಮಣಮೇವಮಾಮ್ನಾಯತೇ । ಪ್ರಜಾ ವೈ ನರೋ ವಾಕ್ ಶಂಸಃ । ಐ.ಬ್ರಾ. ೬-೨೭ । ಇತಿ । ಅತೋ ಮನುಷ್ಯೈಃ ಶಸ್ಯಮಾನೋ ಯಃ ಸದಸಸ್ಪತಿರ್ಯೋ ವಾ ನರಾಶಂಸನಾಮಕೋ ದೇವಸ್ತಮಪಶ್ಯಂ । ಶಾಸ್ತ್ರದೃಷ್ಟ್ಯಾ ದೃಷ್ಟವಾನಸ್ಮಿ । ಕೀದೃಶಂ । ಸುಧೃಷ್ಟಮಮತ್ಯಾಧಿಕ್ಯೇನ ಧಾರ್ಷ್ಟ್ಯಯುಕ್ತಂ ಸಪ್ರಥಸ್ತಮಮತಿಶಯೇನ ಪ್ರಖ್ಯಾತಂ ಸದ್ಮಮಖಸಂ ಪ್ರಾಪ್ತತೇಜಸ್ಕಂ । ತತ್ರ ದೃಷ್ಟಾಂತಃ । ದಿವೋ ನ ದ್ಯುಲೋಕಾನಿವ । ಆದಿತ್ಯಚಂದ್ರಾದಿಭಿರಧಿಷ್ಠಿತಾ ದ್ಯುಲೋಕವಿಶೇಷಾ ಯಥಾ ತೇಜಸ್ವಿನಸ್ತದ್ವದಯಂ ನರಾಶಂಸಸ್ತೇಜಸ್ವೀತ್ಯರ್ಥಃ ॥ ಸುಧೃಷ್ಟಮಂ । ಶೋಭನಂ ಧೃಷ್ಣೋತೀತಿ ಸುಧೃಕ್ । ಕ್ವಿನ್ಚೇತಿ ಕ್ವಿನ್ । ಅತಿಶಾಯನಿಕಸ್ತಮಪ್ । ಷಕಾರಸ್ಯ ಜಶ್ತ್ವಾಭಾವಶ್ಛಾಂದಸಃ । ಕೃದುತ್ತರಪದಪ್ರಕೃತಿಸ್ವರತ್ವೇನ ಉಕಾರ ಉದಾತ್ತಃ । ಅಪಶ್ಯಂ । ಪಾಘ್ರಾಧ್ಮೇತ್ಯಾದಿನಾ ಪಶ್ಯಾದೇಶಃ । ಲುಙ್‌ಲಙ್‌ಲೃಂಕ್ಷ್ವಡುದಾತ್ತಃ । ಪಾ. ೬-೪-೭೧ । ಇತ್ಯಟ ಉದಾತ್ತತ್ವಂ । ಪಾದಾದಿತ್ವಾನ್ನ ನಿಘಾತಃ । ಸಪ್ರಥಸ್ತಮಂ । ಪ್ರಥ ಪ್ರಖ್ಯಾನೇ ।

ಪ್ರಥನಂ ಪ್ರಥಃ । ಸರ್ವಧಾತುಭ್ಯೋಽಸುನ್ । ನಿತ್ತ್ವಾದಾದ್ಯುದಾತ್ತತ್ವಂ । ಸಹ ಪ್ರಥಸಾ ವರ್ತತ ಇತಿ ತೇನ ಸಹೇತಿ ತುಲ್ಯಯೋಗೇ । ಪಾ. ೨-೨-೨೮ । ಇತಿ ಬಹುವ್ರೀಹಿಸಮಾಸಃ । ವೋಪಸರ್ಜನಸ್ಯ । ಪಾ. ೬-೩-೮೨ । ಇತಿ ಸಾದೇಶಃ । ಪೂರ್ವಪದಪ್ರಕೃತಿಸ್ವರತ್ವೇ ಪ್ರಾಪ್ತೇ ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ದಿವಃ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ । ಸದ್ಮಮಖಸಂ । ಸೀದತೀತಿ ಸದ್ಮ । ಷದ್ಲೃ ವಿಶರಣಾದೌ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್ । ನಿತ್ತ್ವಾದಾದ್ಯುದಾತ್ತಃ । ಸದ್ಮ ಮಹೋ ಯಸ್ಯೇತಿ ಬಹುವ್ರೀಹೌ ಹಕಾರಸ್ಯ ವ್ಯತ್ಯಯೇನ ಖಕಾರಃ ॥ ೯ ॥

॥ ಪ್ರತಿಪದಾರ್ಥ ॥

(ನಾನು) ಸುಧೃಷ್ಟಮಂ—ಬಹಳವಾಗಿ ಧಾರ್ಷ್ಟ್ಯಯುಕ್ತನಾದ । ಸಪ್ರಥಸ್ತಮಂ—ಅತಿಶಯವಾಗಿ ಪ್ರಖ್ಯಾತನಾದ । ದಿವೋ ನ—ಸ್ವರ್ಗಲೋಕದಂತೆ । ಸದ್ಮಮಖಸಂ—ಹೆಚ್ಚಾದ ಕಾಂತಿಯಿಂದ ಬೆಳಗುವ । ನರಾಶಂಸಂ—ಮನುಷ್ಯರಿಂದ ಸ್ತುತಿಸಲ್ಪಡುವ ಸದಸಸ್ಪತಿಯನ್ನು ಅಥವಾ ನರಾಶಂಸನೆಂಬ ದೇವತೆಯನ್ನು (ಅಗ್ನಿಯನ್ನು) ಅಪಶ್ಯಂ—ನೋಡಿದೆನು.

॥ ಭಾವಾರ್ಥ ॥

ಈ ಸದಸಸ್ಪತಿಯು (ಅಥವಾ ನರಾಶಂಸನು) ಬಹಳವಾದ ಪರಾಕ್ರಮವುಳ್ಳವನು, ಬಹಳ ಪ್ರಸಿದ್ಧನಾದವನು, (ಸೂರ್ಯಚಂದ್ರಾದಿಗಳಿರುವ) ಸ್ವರ್ಗಲೋಕದಂತೆ ಅತಿಶಯವಾದ ಕಾಂತಿಯಿಂದ ಬೆಳಗುತ್ತಿರುವವನು. ಇಂತಹ ಸದಸಸ್ಪತಿಯನ್ನು (ಅಥವಾ ನರಾಶಂಸನನ್ನು) ನಾನು ನೋಡಿದೆನು.

English Translation

I have seen Narasamsa the most valiant, the most renowned and radiant as the heavens.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ದೇವತೆಯು ಸದಸಸ್ಪತಿ ಅಥವಾ ನರಾಶಂಸನು. ಋಕ್ಕಿನಲ್ಲಿ ಸದಸಸ್ಪತಿಯ ಹೆಸರು ಸೂಚಿತವಾಗದಿದ್ದರೂ ಹಿಂದಿನ ಮೂರು ಋಕ್ಕುಗಳೂ ಸದಸಸ್ಪತಿಯ ಪರವಾಗಿರುವುದರಿಂದಲೂ ಈ ಋಕ್ಕಿಗೆ ಸದಸಸ್ಪತಿ ಅಥವಾ ನರಾಶಂಸನೆಂಬ ಯಾವುದಾದರೂ ಒಂದು ದೇವತೆಯೆಂದು ಹೇಳಿರುವುದರಿಂದಲೂ ನರಾಶಂಸವೆಂಬ ಶಬ್ದಕ್ಕೆ ಮನುಷ್ಯರಿಂದ ಸ್ತುತಿಸಲ್ಪಡುವ ಎಂದು ಅವಯವಾರ್ಥವನ್ನು ಕಲ್ಪಿಸಿ ಅದನ್ನು ಸದಸ್ಪತಿಂ ಎಂಬ ಶಬ್ದಕ್ಕೆ (ಆ ಶಬ್ದವನ್ನು ಇಲ್ಲಿ ಅಧ್ಯಾಹಾರಮಾಡಿಕೊಳ್ಳಬೇಕು) ವಿಶೇಷಣಪದವನ್ನಾಗಿ ಭಾವಿಸಬೇಕು. ಅಥವಾ ಈ ಋಕ್ಕಿಗೆ ನರಾಶಂಸ ಎಂಬ ದೇವತೆಯನ್ನು ಹೇಳುವಪಕ್ಷದಲ್ಲಿ ನರಾಶಂಸಂ ಎಂಬ ಶಬ್ದವೇ ಋಕ್ಕಿನಲ್ಲಿರುವುದರಿಂದ ಯಾವ ಬಾಧಕವೂ ಇಲ್ಲ. ಈ ನರಾಶಂಸಶಬ್ದದ ಅವಯವಾರ್ಥವನ್ನು ಯಾಸ್ಕರು ಈ ರೀತಿ ವಿವರಿಸಿರುವರು.

**ನರಾಶಂಸೋ ಯಜ್ಞ ಇತಿ ಕಾತ್ಥಕ್ಯೋ ನರಾ ಅಸ್ಮಿನ್ನಾಸೀನಾಃ ಶಂಸಂತ್ಯಗ್ನಿರಿತಿ ಶಾಕಪೂಣಿರ್ನರೈಃ ಪ್ರಶಸ್ಯೋ ಭವತಿ ॥**

(ನಿ. ೮-೬)

ನರಾಶಂಸನೆಂದರೆ ಯಜ್ಞವೆಂದು ಕಾತ್ಥಕ್ಯರ ಮತವು; ನರಾ ಎಂದರೆ ಮನುಷ್ಯರು ಸ್ತುತಿಸುವುದರಿಂದ ನರಾಶಂಸನೆಂದರೆ ಪ್ರಶಸ್ಯನಾದ (ಅಗ್ನಿ) ಎಂದು ಶಾಕಪೂಣಿಯ ಮತವು. ಈ ವಿಷಯದಲ್ಲಿ ಭಾಷ್ಯಕಾರರು ಐತರೇಯ ಬ್ರಾಹ್ಮಣ ವಾಕ್ಯವನ್ನು ಉದಾಹರಿಸಿರುವರು—**ಪ್ರಜಾ ವೈ ನರಃ ವಾಕ್ ಶಂಸಃ** (ಐ ಬ್ರಾ. ೬-೨೭) ನರಾ ಎಂದರೆ ಪ್ರಜೆಗಳು ಅಥವಾ ಮನುಷ್ಯರು. ಶಂಸ ಎಂದರೆ ವಾಕ್. ಆದುದರಿಂದ ನರಾಶಂಸಃ ಎಂದರೆ ಪ್ರಜೆಗಳಿಂದ ಅಥವಾ ಮನುಷ್ಯರಿಂದ ಪ್ರಶಂಸೆ ಮಾಡಲ್ಪಡುವವನು ಎಂದಭಿಪ್ರಾಯವು. ನರಾಶಂಸವೆಂಬ ಶಬ್ದವು, ಸದಸಸ್ಪತಿ, ನರಾಶಂಸ ಅಥವಾ ಅಗ್ನಿ ಎಂಬ ಮೂರು ದೇವತೆಗಳ ಹೆಸರಾಗಿಯೂ ಅನ್ವಯಿಸುವುದಾಗಿರುವುದು. ಈ ವಿಷಯವನ್ನು ನಾವು ಹಿಂದೆಯೇ (ಪುಟ      ನೋಡಿ) ವಿಮರ್ಶೆ ಮಾಡಿರುವೆವು.

**ಸುಧೃಷ್ಟಮಂ**—**ಶೋಭನಂ ಧೃಷ್ಣೋತೀತಿ**—ಉತ್ತಮವಾದ ಪರಾಕ್ರಮ ( ಅಥವಾ ನಿಶ್ಚಲತ್ವ ) ವುಳ್ಳವನು.

**ಸಪ್ರಥಸ್ತಮಂ**—**ಪ್ರಥ ಪ್ರಖ್ಯಾನೇ ಸಹ ಪ್ರಥಸಾ ವರ್ತತ ಇತಿ, ತೇನ ಸಹ**—ಪ್ರಥವೆಂಬ ಧಾತುವಿಗೆ ಪ್ರಸಿದ್ಧಿಮಾಡು, ಹೊಗಳು ಎಂದರ್ಥವಿರುವುದರಿಂದ ಸಪ್ರಥಸ್ತಮಂ ಎಂಬ ಶಬ್ದಕ್ಕೆ ವಿಶೇಷವಾದ ಪ್ರಸಿದ್ಧಿಯಿಂದ ಸಹಿತನಾದ ಎಂದರ್ಥವು.

**ದಿವೋ ನ**—ಸ್ವರ್ಗದಂತೆ. ಈ ಉಪಮಾನವು ಅಷ್ಟು ಚೆನ್ನಾಗಿ ಹೊಂದುವುದಿಲ್ಲ. ಸ್ವರ್ಗಲೋಕದಲ್ಲಿ (ಅಂತರಿಕ್ಷದಲ್ಲಿ) ಸೂರ್ಯಚಂದ್ರಾದಿಗಳು ಪ್ರಕಾಶಮಾನವಾಗಿ ಬೆಳಗುತ್ತಿರುವುದನ್ನು ಮನಸ್ಸಿನಲ್ಲಿಟ್ಟುಕೊಂಡು ಋಷಿಯು ಈ ಉಪಮಾನವನ್ನು ಹೇಳಿರಬಹುದು.

**ಸದ್ಮಮಖಸಂ**—ಇಲ್ಲಿ ಮಖಸಂ ಎಂಬ ಶಬ್ದದಲ್ಲಿ ಹಕಾರಕ್ಕೆ ಬದಲಾಗಿ ಖಕಾರವು ವ್ಯತ್ಯಯದಿಂದ ಉಪಯೋಗಿಸಲ್ಪಟ್ಟಿರುವುದು. ಆದುದರಿಂದ **ಮಖಸಂ** ಎಂದರೆ ಮಹಸಂ ಎಂದರ್ಥವು. **ಸದ್ಮ ಮಹೋ ಯಸ್ಯ ಸಃ ಸದ್ಮಮಹಾಃ ಅಥವಾ ಸದ್ಮಮಖಾಃ ತಂ** ಎಂದು ವಿಗ್ರಹವು. ತೇಜಸ್ಸಿಗೆ ಮನೆಯಂತಿರುವವನು, ಎಂದರೆ ಅತಿಶಯವಾದ ತೇಜಸ್ಸಿನಿಂದ ಅಥವಾ ಕಾಂತಿಯಿಂದ ಬೆಳಗುತ್ತಿರುವವನು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಸುಧೃಷ್ಟಮಮ್**—ಞಿಧೃಷಾ ಪ್ರಾಗಲ್ಭ್ಯೇ, ಧಾತು, ಸ್ವಾದಿ. ಸು=ಶೋಭನಂ, ಧೃಷ್ಣೋತಿ ಎಂದು ವಿವಕ್ಷಿಸಿದಾಗ **ಕ್ವಿಪ್ ಚ** (ಪಾ.ಸೂ. ೩-೨-೭೬ ) ಎಂಬುದರಿಂದ ಕ್ವಿಪ್. ಕ್ವಿಪಃ ಸರ್ವಸ್ಯಾಪಿಲೋಪಃ **ಅತಿಶಾಯನೇ ತಮಬಿಷ್ಠನೌ** (ಪಾ.ಸೂ. ೫-೩-೫೫ ) ಎಂಬುದರಿಂದ ಅತಿಶಯಾರ್ಥದಲ್ಲಿ ತಮಪ್. ಸುಧೃಷ್+ತಮ **ಝಲಾಂಜಶ್‌ಝಶಿ** (ಪಾ. ಸೂ. ೮-೪-೫೩) ಎಂಬುದರಿಂದ ಷಕಾರಕ್ಕೆ ಜಶ್ತ್ವ ಬಂದು ಡಕಾರ ಬರದೇ ಇರುವಿಕೆಯು ಛಾಂದಸವು. **ಷ್ಟುನಾಷ್ಟುಃ** (ಪಾ.ಸೂ.೮-೪-೪೧) ಎಂಬ ಷ್ಟುತ್ವದಿಂದ ತಕಾರಕ್ಕೆ ಟಕಾರ ದ್ವಿತೀಯಾ ಏಕವಚನ ಅಮ್, ಅಮಿಪೂರ್ವಃ, ಪೂರ್ವರೂಪ, ಸುಧೃಷ್ಟಮ್, ಧೃಷ್ ನ ಋಕಾರವು ಧಾತುಸ್ವರದಿಂದ ಉದಾತ್ತ

ಸುಶಬ್ದದೊಂದಿಗೆ ಸಮಾಸಬಂದಮೇಲೆ **ಗತಿಕಾರಕೋಪಪದಾತ್ಕೃತ್** (ಪಾ.ಸೂ. ೬-೨-೧೩೯) ಎಂದು ಕೃದುತ್ತರ ಪದ ಪ್ರಕೃತಿಸ್ವರ ಬಂದು, ಅದೇ ಸ್ವರ ನಿಲ್ಲುವುದು.

**ಅಪಶ್ಯಮ್**—ದೃಶಿರ್ ಪ್ರೇಕ್ಷಣೇ ಧಾತು. ಲಙ್, ಉತ್ತಮಪುರುಷ ಏಕವಚನ ಮಿಪ್, ಅದಕ್ಕೆ **ತಸ್ಥಸ್ಥಮಿಪಾಂತಾಂತಂತಾಮಃ** (ಪಾ.ಸೂ. ೩-೪-೧೦೧) ಎಂಬುದರಿಂದ ಅಮಾದೇಶ, **ಕರ್ತರಿಶಪ್** (ಪಾ.ಸೂ. ೩-೧-೬೮) ಎಂಬುದರಿಂದ ಶಪ್ ವಿಕರಣ. **ಪಾಘ್ರಾಧ್ಮಾಸ್ಥಾಮ್ನಾದಾಣ್‌ದೃಶ್ಯರ್ತಿ—,** (ಪಾ. ಸೂ. ೭-೩-೭೮) ಎಂಬುದರಿಂದ ದೃಶ್‌ಗೆ ಪಶ್ಯ ಆದೇಶ, ಪಶ್ಯ+ಅ+ಅಮ್. **ಅಮಿಪೂರ್ವಃ** (ಪಾ. ಸೂ. ೬-೧-೧೦೭) ಎಂಬುದರಿಂದ ಪೂರ್ವರೂಪ. ಅಪಶ್ಯಮ್. **ಲುಙ್‌ಲಙ್‌ಲೃಙ್‌ಕ್ಷ್ವಡುದಾತ್ತಃ** ಎಂಬುದರಿಂದ ಉದಾತ್ತವಾದ ಅಟ್ ಆಗಮ. ಇದು ಪಾದಾದಿಯಲ್ಲಿರುವುದರಿಂದ ಸರ್ವಾನುದಾತ್ತವಾಗುವುದಿಲ್ಲ.

**ಸಪ್ರಥಸ್ತಮಮ್**—ಪ್ರಥ ಪ್ರಖ್ಯಾನೇ ಧಾತು, ಪ್ರಥನಂಪ್ರಥಃ **ಸರ್ವಧಾತುಭ್ಯೋಽಸುನ್** ಎಂಬುದರಿಂದ ಭಾವಾರ್ಥದಲ್ಲಿ ಅಸುನ್‌ಪ್ರತ್ಯಯ, ನಿತ್ಸ್ವರದಿಂದ ಪ್ರಥಸ್ ಎಂಬುದು ಆದ್ಯುದಾತ್ತ. ಸಹ ಪ್ರಥ-ಸಾ ವರ್ತತೇ ಎಂದು ಬಹುವ್ರೀಹಿಸಮಾಸ, **ತೇನ ಸಹೇತಿ ತುಲ್ಯಯೋಗೇ** ( ಪಾ. ಸೂ. ೨-೨-೨೮ ) ಯುಗಪತ್ಕಾಲಿಕ ಕ್ರಿಯಾಬೋಧಕವಾದ ಸಹ ಎಂಬ ಶಬ್ದವು ತೃತೀಯಾಂತವಾದ ಸಮರ್ಥದೊಂದಿಗೆ ಸಮಾಸವನ್ನು ಹೊಂದುವುದು. ಅದು ಬಹುವ್ರೀಹಿಸಂಜ್ಞಕವಾಗುವುದು ಎಂಬುದರಿಂದ ಬರುವುದು- **ವೋಪಸರ್ಜನಸ್ಯ** (ಪಾ. ಸೂ. ೬-೩-೮೨). ಉಪಸರ್ಜನಸರ್ವಾವಯವಕವಾದ ಸಮಾಸ ಎಂದರೆ ಬಹುವ್ರೀಹಿ. ಏವಂಚ ಬಹು-ವ್ರೀಹಿಸಮಾಸಘಟಕ ಉತ್ತರಪದಾವ್ಯವಹಿತಪೂರ್ವವರ್ತಿಯಾದ ಸಹಶಬ್ದಕ್ಕೆ ಸ ಆದೇಶ ಬರುವುದು ಎಂಬುದರಿಂದ ಸಹಶಬ್ದಕ್ಕೆ ಸ ಆದೇಶ, ಸಪ್ರಥಸ್ ಎಂದಾಯಿತು. ಇದು ಬಹುವ್ರೀಹಿಯಾದ್ದರಿಂದ ಪೂರ್ವಪದಪ್ರಕೃತಿಸ್ವರಪ್ರಾಪ್ತವಾದರೆ **ಪರಾದಿಶ್ಛಂದಸಿಬಹುಲಮ್** (ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದವಾದ ಪ್ರಥಸ್ ಎಂಬುದು ಅಂತೋದಾತ್ತವಾಗುವುದು. ಅತಿಶಯಾರ್ಥವನ್ನು ವಿವಕ್ಷಿಸಿದಾಗ ತಮಪ್ ಪ್ರತ್ಯಯ, ಸಪ್ರಥಸ್ತಮ, ದ್ವಿತೀಯೈಕವಚನ, ಸಪ್ರಥಸ್ತಮಮ್.

**ದಿವಃ**— **ಊಡಿದಮ್‌ಪದಾದ್ಯಪ್ಪುಮ್‌ರೈದ್ಯುಭ್ಯಃ** (ಪಾ.ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಯು ಉದಾತ್ತ.

**ಸದ್ಮಮಖಸಮ್**— ಷದ್ಲೃ ವಿಶರಣಗತ್ಯವಸಾದನೇಷು, ಧಾತು. ಧಾತ್ವಾದೇಃಷಃಸಃ, **ಅನ್ಯೇಭ್ಯೋಽಪಿದೃಶ್ಯನ್ತೇ** (ಪಾ.ಸೂ. ೩-೨-೭೫) ಎಂಬುದರಿಂದ ಮನಿನ್‌ಪ್ರತ್ಯಯ, ಸದ್ಮನ್ ಎಂದಾಗುವುದು. ನಿತ್ಸ್ವರ ಬಂದು ಇದು ಆದ್ಯುದಾತ್ತ, ಸದ್ಮ-ಮಹಃ ಯಸ್ಯ ಸಃ ಸದ್ಮಮಹಾಃ ಎಂದು ಬಹುವ್ರೀಹಿಸಮಾಸ. ಹಕಾರಕ್ಕೆ **ವ್ಯತ್ಯಯೋಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ಖಕಾರ, ಸದ್ಮಮಖಸ್, ದ್ವಿತೀಯೈಕವಚನ ಅಮ್ **ಸದ್ಮಮಖಸಮ್** ಎಂದಾಗುವುದು. ॥ ೯ ॥



# ಹತ್ತೊಂಭತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಪ್ರತಿ ತ್ಯಮಿತಿ ನವರ್ಚಂ ದ್ವಿತೀಯಂ ಸೂಕ್ತಂ । ಋಷಿಚ್ಛಂದಸೀ ಪೂರ್ವವತ್ । ದೇವತಾ ತ್ವನುಕ್ರಮ್ಯತೇ । ಪ್ರತಿತ್ಯಮಾಗ್ನಿಮಾರುತಮಿತಿ ॥ ಕಾರೀರೀಷ್ಟೌ ಪ್ರತಿ ತ್ಯಮಿತ್ಯೇಷಾ ಧಾಯ್ಯಾ । ತಥಾ ಚ ಸೂತ್ರಿತಂ । ವರ್ಷಕಾಮೇಷ್ಟ್ಯಾಃ ಕಾರೀರೀ ತಸ್ಯಾಂ ಪ್ರತಿ ತ್ಯಂ ಚಾರುಮಧ್ವರಮೀಳೇ ಅಗ್ನಿಂ ಸ್ವವಸಂ ನಮೋಭಿರಿತಿ ಧಾಯ್ಯೇ । ಆ- ೨-೧೩ । ಇತಿ ॥

ಅನುವಾದವು—ಪ್ರತಿತ್ಯಂ ಎಂಬುವುದು ಈ ಐದನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿವೆ. ಈ ಸೂಕ್ತದ ದೇವತೆಯ ವಿಷಯದಲ್ಲಿ, ಪ್ರತಿತ್ಯಮಾಗ್ನಿಮಾರುತಂ—ಪ್ರತಿತ್ಯಂ ಎಂಬ ಸೂಕ್ತಕ್ಕೆ ಅಗ್ನಿ ಮತ್ತು ಮರುತ್ತುಗಳು ದೇವತೆಗಳೆಂದು ಅನುಕ್ರಮಣಿಕೆಯಲ್ಲಿ ಹೇಳಿರುವುದು. ಕಾರೀರೀಷ್ಟಿಯೆಂಬ ಯಾಗದಲ್ಲಿ ಪ್ರತಿ ತ್ಯಂ ಎಂಬ ಸೂಕ್ತವನ್ನು ಹೇಳಬೇಕು- ವರ್ಷಕಾಮೇಷ್ಟಿ ಕಾರೀರೀ ತಸ್ಯಾಂ ಪ್ರತಿತ್ಯಂ ಚಾರುಮಧ್ವರಮೀಳೇ ಅಗ್ನಿಂ ಸ್ವವಸಂ ನಮೋಭಿರಿತಿ ಧಾಯ್ಯೇ (ಆ, ೨-೧೩) ಎಂದರೆ ಕಾರೀರೀ ಎಂದರೆ ವರ್ಷಕಾಮೇಷ್ಟಿಯು, ಮಳೆಬರುವುದಕ್ಕಾಗಿ ಮಾಡುವ ಯಾಗವಿಶೇಷವು. ಅದರಲ್ಲಿ ಪ್ರತಿತ್ಯಂ ಚಾರುಮಧ್ವರಂ (ಋ. ಸಂ. ೧-೧೯-೧) ಮತ್ತು ಈಳೇ ಅಗ್ನಿಂ ಸ್ವವಸಂ ನಮೋಭಿಃ (ಋ. ಸಂ. ೫-೬೦-೧) ಎಂಬ ಎರಡು ಋಕ್ಕುಗಳನ್ನು ಯಾಜ್ಯಾಪುರೋನುವಾಕ್ಯಾಋಕ್ಕುಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತ ಸೂತ್ರದಲ್ಲಿ (ಆ. ೨-೧೩) ಹೇಳಿರುವುದು.

॥ ಓಂ ॥

## ಸೂಕ್ತ—೧೯

॥ ಮಂಡಲ—೧ ॥ ಅನುವಾಕ—೫ ॥ ಸೂಕ್ತ—೧೯ ॥

॥ ಅಷ್ಟಕ—೧ ॥ ಅಧ್ಯಾಯ—೧ ॥ ವರ್ಗ—೩೬, ೩೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೧—೯ ॥

॥ ಋಷಿಃ—ಮೇಧಾತಿಥಿಃ ಕಾಣ್ವಃ

॥ ದೇವತಾ —ಅಗ್ನಿರ್ಮರುತಶ್ಚ ।

ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಪ್ರತಿ ತ್ಯಂ ಚಾರುಮಧ್ವರಂ ಗೋಪೀಥಾಯ ಪ್ರ ಹೂಯಸೇ ।

ಮರುದ್ಭಿರಗ್ನ ಆ ಗಹಿ ॥ ೧ ॥

॥ ಪದಪಾಠಃ ॥

ಪ್ರತಿ । ತ್ಯಂ । ಚಾರುಂ । ಅಧ್ವರಂ । ಗೋಽಪೀಥಾಯ । ಪ್ರ । ಹೂಯಸೇ ॥
ಮರುತ್ಽಭಿಃ । ಅಗ್ನೇ । ಆ । ಗಹಿ ॥ ೧ ॥

॥ ಸಾಯಣಭಾಷ್ಯಂ ॥

ತ್ಯಚ್ಛಬ್ದಃ ಸರ್ವನಾಮ ತಚ್ಛಬ್ದಪರ್ಯಾಯಃ । ಹೇ ಅಗ್ನೇ ಯೋ ಯಜ್ಞಶ್ಚಾರುರಂಗವೈಕಲ್ಯರಹಿತಸ್ತ್ಯಂ ತಥಾವಿಧಂ ಚಾರುಮಧ್ವರಂ ಪ್ರತಿಲಭ್ಯ ಗೋಪೀಥಾಯ ಸೋಮಪಾನಾಯ ಪ್ರ ಹೂಯಸೇ। ಪ್ರಕರ್ಷೇಣ ತ್ವಂ ಹೂಯಸೇ। ತಸ್ಮಾದಸ್ಮಿನ್ನಧ್ವರೇ ತ್ವಂ ಮರುದ್ಭಿರ್ದೇವವಿಶೇಷೈಃ ಸಹಾ ಗಹಿ। ಆಗಚ್ಛ । ಸೇಯಮೃಗ್ಯಾಸ್ಕೇನೈವಂ ವ್ಯಾಖ್ಯಾತಾ ।-ತಂ ಪ್ರತಿ ಚಾರುಮಧ್ವರಂ ಸೋಮಪಾನಾಯ ಪ್ರಹೂಯಸೇ ಸೋಽಗ್ನೇ ಮರುದ್ಭಿಃ ಸಹಾಗಚ್ಛ । ನಿ. ೧೦-೩೭ । ಇತಿ ॥ ಪ್ರತಿ । ನಿಪಾತ ಆದ್ಯುದಾತ್ತಃ । ತ್ಯಂ । ತ್ಯದಾದೀನಾಮಃ । ಪಾ- ೭-೨-೧೦೨ । ಪ್ರಾತಿಪದಿಕಸ್ವರಃ । ಚಾರುಂ । ದೃಸನಿಜನಿಚರೀತ್ಯಾದಿನಾ । ಉ. ೧-೩ । ಞುಣ್ । ಅತ ಉಪಧಾಯಾ ಇತಿ ವೃದ್ಧಿಃ । ಞಿತ್ತ್ವಾದಾದ್ಯುದಾತ್ತಃ । ಗೋಪೀಥಾಯ । ನಿಶೀಥಗೋಪೀಥಾವಗಥಾಃ । ಉ. ೨-೯ । ಇತಿ ಥಕ್ಪ್ರತ್ಯಯಾಂತೋ ನಿಪಾತಿತಃ । ಪ್ರ । ನಿಪಾತಸ್ವರಃ ॥

॥ ಪ್ರತಿಪದಾರ್ಥ ॥

(ಹೇ) ಅಗ್ನೇ—ಎಲೈ ಅಗ್ನಿಯೇ । ಚಾರುಂ—ನ್ಯೂನಾತಿರಿಕ್ತದೋಷಗಳಿಲ್ಲದೆ ಮನೋಹರವಾದ ಅಥವಾ ಪರಿಪೂರ್ಣವಾದ (ಯಾವ ಯಜ್ಞವುಂಟೋ) । ತ್ಯಂ—ಆ । ಅಧ್ವರಂ ಪ್ರತಿ—ಆ ಯಜ್ಞಕ್ಕೆ । ಗೋಪೀಥಾಯ—ಸೋಮಪಾನ ಮಾಡುವುದಕ್ಕಾಗಿ । ಪ್ರ ಹೂಯಸೇ—(ನೀನು) ಆಹ್ವಾನ ಮಾಡಲ್ಪಡುವೆ । (ಆದುದರಿಂದ ನೀನು) । ಮರುದ್ಭಿಃ—ಮರುತ್ತುಗಳೆಂಬ ದೇವತೆಗಳೊಡನೆ । ಆ ಗಹಿ—ಬಾ ॥

॥ ಭಾವಾರ್ಥ ॥

ಎಲೈ ಅಗ್ನಿಯೇ, ನ್ಯೂನಾತಿರಿಕ್ತಲೋಪದೋಷಗಳಿಲ್ಲದೆ ಆಚರಿಸಲ್ಪಡುವ ಪ್ರತಿಯೊಂದು ಉತ್ತಮವಾದ ಯಜ್ಞದಲ್ಲಿಯೂ ಸೋಮಪಾನಾರ್ಥವಾಗಿ ನೀನು ಆಹ್ವಾನಿಸಲ್ಪಡುವೆ. ಆದುದರಿಂದ ಈಗ ಮರುದ್ದೇವತೆಗಳಿಂದ ಸಹಿತನಾಗಿ ಇಲ್ಲಿಗೆ ಬಾ.

## English Translation

O Agni, to every perfect and handsome sacrifice you are invoked to drink Soma ; come hither, Agni, with the Maruths·

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ನಿರುಕ್ತದಲ್ಲಿ ಅರ್ಥವಿವರಣೆ ಮಾಡಿದಾರೆ. ಆ ವಿವರಣೆಯು ಭಾಷ್ಯಕಾರರು ಹೇಳಿರುವಂತೆಯೇ ಇದೆ. ವ್ಯತ್ಯಾಸವೇನೂ ಇಲ್ಲ.

**ತ್ಯಂ=ತಂ**—ಇದು ಸರ್ವನಾಮಶಬ್ದವು. ವ್ಯತ್ಯಯದಿಂದ ತಂ ಎನ್ನುವುದಕ್ಕೆ ಬದಲಾಗಿ ತ್ಯಂ ಎಂದಿರುವುದು. ತ್ಯಂ ಶಬ್ದಕ್ಕೆ ತಂ ಎಂಬ ಅರ್ಥವಿರುವ ಒಂದೆರಡು ಋಕ್ಕುಗಳನ್ನು ಉದಾಹರಣೆಗಾಗಿ ಕೊಡುತ್ತೇನೆ—

**ತ್ಯಂ ಚಿದತ್ರಿಮೃತಜುರಮರ್ಥಮಶ್ವಂ ನ ಯಾತವೇ ।**

(ಋ. ಸಂ. ೧೦-೧೪೩-೧)

**ತ್ಯಂ ಸುಮೇಷಂ ಮಹಯಾ ಸ್ವರ್ವಿದಂ ಶತಂ ಯಸ್ಯ ಸುಭ್ವಃ ಸಾಕಮೀರತೇ ।**

(ಋ. ಸಂ. ೧-೫೨-೧)

**ತ್ಯಮೂಷು ವಾಜಿನಂ ದೇವಜೂತಂ ಸಹಾವಾನಂ ತರುತಾರಂ ರಥಾನಾಂ ।**

(ಋ. ಸಂ. ೧೦-೧೭೮-೧)

**ಉದು ತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ ॥**

(ಋ. ಸಂ. ೧-೫೦-೧)

ಇತ್ಯಾದಿ. ಈ ಋಕ್ಕುಗಳಲ್ಲಿರುವ ತ್ಯಂ ಎಂಬ ಶಬ್ದಕ್ಕೆ ತಂ ಎಂದೇ ಅರ್ಥವು.

**ಗೋಷೀಥಾಯ**—ಗೋಶಬ್ದಕ್ಕೆ, ಗೋವು, ಉದಕ, ರಶ್ಮಿ, ಸ್ತೋತೃ, ಸೋಮ. ವಾಕ್ ಮೊದಲಾದ ಅನೇಕ ಅರ್ಥಗಳಿದ್ದರೂ ಇಲ್ಲಿ ಭಾಷ್ಯಕಾರರು ಸೋಮವೆಂದು ಅರ್ಥಮಾಡಿರುವರು. ವೇದಾರ್ಥಯತ್ನಕಾರರೂ ಮತ್ತೆ ಕೆಲವರೂ ಗೋಶಬ್ದಕ್ಕೆ ಹಾಲು ಅಥವಾ ಅಜ್ಯವೆಂದು ಅರ್ಥಮಾಡಿರುವರು. ಇದು ಅಷ್ಟು ಸಮಂಜಸವಾಗಿಲ್ಲ, ಭಾಷ್ಯಕಾರರು ಹೇಳಿರುವ ಸೋಮವೆಂಬ ಅರ್ಥವೇ ಸರಿಯಾಗಿರುವುದು.

ಈ ಸೂಕ್ತದ ಪ್ರತಿಋಕ್ಕಿನ ಕೊನೆಯ ಪಾದವು ಮರುದ್ಭಿರಗ್ನ ಆ ಗಹಿ ಎಂದು ಪಲ್ಲವಿಯಂತೆ ಪುನಃ ಪುನಃ ಪಠಿತವಾಗಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಪ್ರತಿ.**— ನಿಪಾತ, **ನಿಪಾತಾ ಆದ್ಯುದಾತ್ತಾಃ** । ನಿಪಾತಗಳು ಅದ್ಯುದಾತ್ತಗಳಾಗುವುವು ಎಂಬುದರಿಂದ ಆದ್ಯುದಾತ್ತ.

**ತ್ಯಮ್**—**ತ್ಯದ್** ಎಂದು ಸರ್ವಾದಿಗಣಾಂತರ್ಗಣವಾದ ತ್ಯದಾದಿಯಲ್ಲಿರುವುದು. **ಫಿಷೋನ್ತ ಉದಾತ್ತಃ** (ಫಿ.ಸೂ. ೧-೧) ಎಂಬುದರಿಂದ ಅಂತೋದಾತ್ತ. ಇದರ ಮುಂದೆ ದ್ವಿತೀಯಾ ಏಕವಚನ ಅಮ್ ಪ್ರತ್ಯಯ, ತ್ಯದ್+ಅಮ್ **ತ್ಯದಾದೀನಾಮಃ** (ಪಾ.ಸೂ. ೭-೨-೧೦೨) ವಿಭಕ್ತಿಪರದಲ್ಲಿರುವಾಗ ತ್ಯದಾದಿಗಣಪಠಿತವಾದ ಶಬ್ದಗಳ ಕೊನೆಯ ವರ್ಣಕ್ಕೆ ಅಕಾರ ಬರುವುದು ಎಂಬುದರಿಂದ ದಕಾರಕ್ಕೆ ಅಕಾರ, ತ್ಯ+ಅ+ಅಮ್. **ಅತೋ-ಗುಣೇ** (ಪಾ.ಸೂ. ೬-೧-೯೭) ಪದದ ಕೊನೆಯಲ್ಲಿಲ್ಲದ ಹ್ರಸ್ವಾವರ್ಣದ ಮುಂದೆ ಗುಣಸಂಜ್ಞಕವಾದ ಅ, ಏ, ಓ ಗಳಿದ್ದರೆ ಪೂರ್ವಪರಗಳೆರಡರ ಸ್ಥಾನದಲ್ಲಿಯೂ ಪರರೂಪ ಒಂದೇ ಬರುವುದು ಎಂಬುದರಿಂದ ಪರರೂಪ. ಇದು

ಏಕಾದೇಶಉದಾತ್ತೇನ ಎಂಬುದರಿಂದ ಉದಾತ್ತ. ತ್ಯ+ಅಮ್ **ಅಮಿಪೂರ್ವಃ** (ಪಾ.ಸೂ.೬-೧-೧೦೭) ಎಂಬುದರಿಂದ ಪೂರ್ವರೂಪ, ಈ ಪೂರ್ವರೂಪದಿಂದ ಬಂದ ಅಕಾರವೂ ಏಕಾದೇಶ—, ಎಂಬುದರಿಂದ ಉದಾತ್ತ.

**ಚಾರುಮ್—ದೃಸನಿಜನಿಚರಿಚಟಿಭ್ಯೋಞುಣ್** ( ಉ. ಸೂ. ೧-೩) ದೃ ವಿದಾರಣೇ, ಷಣು ದಾನೇ, ಜನ ಜನನೇ, ಚರ ಗತೌ, ಚಟ ಭೇದನೇ, ಇವುಗಳ ಮುಂದೆ ಞುಣ್ ಪ್ರತ್ಯಯಬರುವುದು ಎಂಬುವರಿಂದ ಚರ್ ಧಾತುವಿನ ಮುಂದೆ ಞುಣ್ ಪ್ರತ್ಯಯ, ಞ್ ಣ್‌ಗಳು ಇತ್ಸಂಜ್ಞೆಯನ್ನು ಹೊಂದಿ ಲುಪ್ತಗಳಾಗುವುವು. ಉ ನಿಲ್ಲುವುದು, ಚರ್+ಉ. **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಞಿತ್, ಣಿತ್ ಪ್ರತ್ಯಯಪರದಲ್ಲಿರುವಾಗ ಉಪಾನ್ತ್ಯಹ್ರಸ್ವಾಕಾರಕ್ಕೆ ವೃದ್ಧಿ ಬರುವುದು ಎಂಬುದರಿಂದ ವೃದ್ಧಿ, ಚಾರು. ಪ್ರತ್ಯಯವು ಞಿತ್ತಾದ್ದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತ, ದ್ವಿತೀಯೈಕವಚನದಲ್ಲಿ ಚಾರುಮ್ ಎಂದಾಗುವುದು.

**ಗೋಪೀಥಾಯ—ನಿಶೀಥಗೋಪೀಥಾವಗಥಾಃ** (ಉ.ಸೂ. ೨-೧೬೭) ನಿಶೀಥ, ಗೋಪೀಥ, ಅವಗಥ ಎಂಬೀ ಮೂರು ಪದಗಳು ಥಕ್‌ಪ್ರತ್ಯಯಾಂತಗಳಾಗಿ ನಿಪಾತಿಸಲ್ಪಡುವುವು ಎಂಬುದರಿಂದ ಥಕ್ ಪ್ರತ್ಯಯಾಂತವಾಗಿ ನಿಪಾತಿತವಾಗಿರುವುದು. ವೃತ್ತಿಕಾರರು ಗೋಪೀಥ ಎಂದರೆ ತೀರ್ಥವೆಂದು ಅರ್ಥಮಾಡಿರುವರು. ವೇದಭಾಷ್ಯಕಾರರು ಸೋಮಪಾನವೆಂದು ಅರ್ಥಮಾಡಿರುತ್ತಾರೆ. ಪ್ರ. ನಿಪಾತಸ್ವರ ಬರುವುದು ॥ ೧ ॥

॥ ಸಂಹಿತಾಪಾಠಃ ॥

ನಹಿ ದೇವೋ ನ ಮರ್ತ್ಯೋ ಮಹಸ್ತವ ಕ್ರತುಂ ಪರಃ ।
ಮರುದ್ಭಿರಗ್ನ ಆ ಗಹಿ ॥ ೨ ॥

॥ ಪದಪಾಠಃ ॥

ನಹಿ । ದೇವಃ । ನ । ಮರ್ತ್ಯಃ । ಮಹಃ । ತವ । ಕ್ರತುಂ । ಪರಃ ॥
ಮರುತ್ಽಭಿಃ । ಅಗ್ನೇ । ಆ । ಗಹಿ ॥ ೨ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಮಹೋ ಮಹತಸ್ತವ ಸಂಬಂಧಿನಂ ಕ್ರತುಂ ಕರ್ಮವಿಶೇಷಮುಲ್ಲಂಘ್ಯ ಪರೋ ನಹಿ ಉತ್ಕೃಷ್ಟೋ ದೇವೋ ನ ಭವತಿ ಖಲು । ತಥಾ ಮರ್ತ್ಯೋ ಮನುಷ್ಯಶ್ಚ ಪರೋ ನ ಭವತಿ । ಯೇ ಮನುಷ್ಯಾಸ್ತ್ವದೀಯಂ ಕ್ರತುಮನುತಿಷ್ಠಂತಿ ಯೇ ಚ ದೇವಾಸ್ತ್ವದೀಯೇ ಕ್ರತಾವಿಜ್ಯಂತೇ ತ ಏವೋತ್ಕೃಷ್ಟಾ ಇತ್ಯರ್ಥಃ । ಮರುದ್ಭಿರಿತ್ಯಾದಿ ಪೂರ್ವವತ್ ॥ ನಹಿ । ಏವಮಾದೀನಾಮಂತ ಇತ್ಯಂತೋ-

ದಾತ್ತಃ । ದೇವಃ ॥ ಪಚಾದ್ಯಜಂತಶ್ಚಿತ್ತ್ವಾದಂತೋದಾತ್ತಃ । ಮಹಃ । ಮಹತಸ್ತಲೋಪಶ್ಛಂದಸಃ । ಬೃಹನ್ಮಹತೋರುಪಸಂಖ್ಯಾನಂ । ಪಾ. ೬-೧-೧೭೩-೧ । ಇತಿ ವಿಭಕ್ತೇರುದಾತ್ತತ್ವಂ । ತವ । ಯುಷ್ಮದಸ್ಮದೋ ಙಸೀತ್ಯಾದ್ಯುದಾತ್ತತ್ವಂ । ಕ್ರತುಂ । ಕೃಞಃ ಕತುಃ । ಉ. ೧-೭೭ । ಪ್ರತ್ಯಯಾದ್ಯುದಾತ್ತತ್ವಂ । ಗಹಿ । ಗಮ್ಲೃ ಸೃಪ್ಲೃ ಗತೌ । ಲೋಟಃ ಸೇರ್ಹಿಃ । ಬಹುಲಂ ಛಂದಸೀತಿ ಶಪೋ ಲುಕ್ । ಅನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ । ತಸ್ಯಾಸಿದ್ಧವದತ್ರಾ ಭಾದಿತ್ಯಸಿದ್ಧತ್ವಾದತೋ ಹೇರಿತಿ ಲುಙ್ನ ಭವತಿ । ನಿಘಾತಃ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) । ಮಹಃ—ಶ್ರೇಷ್ಠನಾದ । ತವ—ನಿನ್ನ । ಕ್ರತುಂ—ಕರ್ಮವಿಶೇಷವನ್ನು (ಯಜ್ಞವನ್ನು) ಉಲ್ಲಂಘಿಸುವ । ಪರಃ—ಬೇರೊಬ್ಬನಾದ । ದೇವಃ—ದೇವನು । ನಹಿ—ಇಲ್ಲ । (ಮತ್ತು ಅಂತಹ) । ಮರ್ತ್ಯಃ—ಮನುಷ್ಯನೂ ಸಹ । ನ—ಇಲ್ಲ । (ಆದುದರಿಂದ) ಹೇ ಅಗ್ನೇ—ಎಲೈ ಅಗ್ನಿಯೇ । (ನೀನು) ಮರುದ್ಭಿಃ—ಮರುದ್ದೇವತೆಗಳೊಡನೆ । ಆ ಗಹಿ--ಇಲ್ಲಿಗೆ ಬಾ ॥

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನ್ನ ಸಂಬಂಧವಾದ ಕರ್ಮವು ಅಥವಾ ಯಜ್ಞವು ಮಹತ್ತರವಾದುದು. ಅದನ್ನು ಅತಿಕ್ರಮಿಸಲು ಶಕ್ತನಾದ ದೇವನಾಗಲಿ, ಮನುಷ್ಯನಾಗಲಿ ಇರುವುದಿಲ್ಲ. ಆದುದರಿಂದ ಎಲೈ ಅಗ್ನಿಯೇ, ಮರುದ್ದೇವತೆಗಳೊಡನೆ ಇಲ್ಲಿಗೆ ಬಾ.

English Translation.

Neither god nor man has power over a rite (dedicated) to you who are great: come hitter, Agni, with the Maruths.

॥ ವಿಶೇಷವಿಷಯಗಳು ॥

ಮಹಃ—ಮಹತಃ—ಶ್ರೇಷ್ಠನಾದ, ಅಥವಾ ಮಹಾಬಲಶಾಲಿಯಾದ, ಬಹಳ ಸಾಮರ್ಥ್ಯವುಳ್ಳ. ಇಲ್ಲಿ ತಕಾರವು ಲೋಪವಾಗಿರುವುದು.

ಕ್ರತುಂ—ಈ ಶಬ್ದಕ್ಕೆ ಕರ್ಮ (ನಿ. ೩-೨) ಪ್ರಜ್ಞೆ (ನಿ. ೩-೧೩) ಎಂಬ ಎರಡು ಅರ್ಥಗಳಿದ್ದರೂ ಭಾಷ್ಯಕಾರರು ಕರ್ಮವೆಂಬ ಅರ್ಥವನ್ನೇ ಹೇಳಿರುವರು.

॥ ವ್ಯಾಕರಣಪ್ರಕ್ರಿಯಾ ॥

ನಹಿ—ನಿಪಾತಾದೀನಾಮನ್ತಃ ಎಂಬುದರಿಂದ ಅಂತೋದಾತ್ತ

ದೇವಃ—ದಿವು ಕ್ರೀಡಾದೌ ಧಾತು. ಪಚಾದಿ. ಆದ್ದರಿಂದ ನನ್ದಿಗ್ರಹಿಪಚಾದಿಭ್ಯೋಲ್ಯುಣಿನ್ಯಚಃ (ಪಾ.ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. ಪುಗನ್ತಲಘೂಪಧಸ್ಯಚ (ಪಾ.ಸೂ. ೭-೩-೮೬) ಎಂಬುದರಿಂದ ಲಘೂಪಧಗುಣ, ಪ್ರತ್ಯಯವು ಚಿತ್ತಾದ್ದರಿಂದ ಚಿತಃ ಎಂಬುದರಿಂದ ಅಂತೋದಾತ್ತ.

**ಮಹಃ**—ಮಹತಃ ಎಂಬ ಶಬ್ದದ ತಗೆ ಛಾಂದಸವಾಗಿ ಲೋಪ. ಮಹಚ್ಛಬ್ದದ ಮುಂದೆ ಇರುವ ಷಷ್ಠೀವಿಭಕ್ತಿಯ **ಬೃಹನ್ಮಹತೋರುಪಸಂಖ್ಯಾನಮ್** (ಪಾ.ಸೂ. ೬-೧-೧೭೩, ವಾ. ೧). ಬೃಹನ್ಮಹತ್ ಶಬ್ದಗಳ ಮುಂದೆ ಇರುವ ನದೀಸಂಜ್ಞಕವರ್ಣಗಳೂ, ಅಜಾದಿಯಾದ ಶಾಸಾದಿ ವಿಭಕ್ತಿಯೂ ಸಹ ಉದಾತ್ತವಾಗುವುದು ಎಂಬುದರಿಂದ ಉದಾತ್ತವಾಗುವುದು. ಯದ್ಯಪಿ **ವರ್ತಮಾನೇ ಪೃಷದ್ಬೃಹನ್ಮಹಜ್ಜಗಚ್ಛತೃವಚ್ಚ** (ಉ.ಸೂ. ೨-೨೪೨) ಎಂಬುದರಿಂದ ಶತೃವದ್ಭಾವವಿರುವದರಿಂದ **ಶತುರನುಮೋನದ್ಯಜಾದೀ** (ಪಾ ಸೂ. ೬-೧-೧೭೩) ಎಂಬುದರಿಂದಲೇ ಉದಾತ್ತ ಸಿದ್ಧವಾಗುವುದು. ಏವಂಚ ವಾರ್ತಿಕಾರಂಭವು ವಿಫಲವೆಂದು ತೋರಬಹುದು. ಆದರೂ ನಿಯಮಾರ್ಥವಾಗಿ ವಾರ್ತಿಕಾರಂಭವು ಸಫಲವು ಎಂದು ಹಿಂದೆಯೇ ನಿರೂಪಿತವಾಗಿದೆ.

**ತವ—ಯುಷ್ಮದಸ್ಮದೋರ್ಙಸಿ** (ಪಾ. ಸೂ. ೬-೧-೨೧೧) ಙಸ್ ಪ್ರತ್ಯಯ ಪರದಲ್ಲಿರುವಾಗ ಯುಷ್ಮದ್, ಅಸ್ಮದ್ ಶಬ್ದಗಳ ಆದಿಯು ಉದಾತ್ತವಾಗುವುದು ಎಂಬುದರಿಂದ ಆದ್ಯುದಾತ್ತ.

**ಕ್ರತುಮ್**—(ಉ.ಸೂ. ೧-೭೭) ಡುಕೃಞ್ ಕರಣೇ ಧಾತುವಿನ ಮುಂದೆ ಕತು ಪ್ರತ್ಯಯ ಬರುವುದು ಎಂಬುದರಿಂದ ಕೃ ಧಾತುವಿನ ಮುಂದೆ ಕತು ಪ್ರತ್ಯಯ, ಕಕಾರಕ್ಕೆ ಇತ್ಸಂಜ್ಞಾಲೋಪ, ಕೃ+ಅತು, ಪ್ರತ್ಯಯವು ಕಿತ್ತಾದ್ದರಿಂದ **ಕ್ಙಿತಿಚ** (ಪಾ.ಸೂ- ೧-೧ ೫) ಎಂಬುದರಿಂದ ಗುಣಕ್ಕೆ ನಿಷೇಧ ಬರುವುದರಿಂದ **ಸಾರ್ವಧಾತು-ಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಗುಣ ಬರುವುದಿಲ್ಲ. ಯಣಾದೇಶದಿಂದ ಋಕಾರಕ್ಕೆ ರೇಫ, **ಆದ್ಯುದಾತಶ್ಚ** (ಪಾ. ಸೂ. ೩-೧-೩) ಎಂಬ ಪ್ರತ್ಯಯಸ್ವರದಿಂದ ಕ್ರತು ಎಂಬುದು ಆದ್ಯುದಾತ್ತ.

**ಗಹಿ**—ಗಮ್ಲೃ ಸೃಪ್ಲೃ ಗತೌ ಧಾತು ಲೋಟ್, ಮಧ್ಯಮಪುರುಷ ಏಕವಚನ ಸಿಪ್, **ಸೇರ್ಹ್ಯಪಿಚ್ಚ** (ಪಾ. ಸೂ. ೩-೪-೮೭) ಎಂಬುದರಿಂದ ಸಿಗೆ ಹಿ ಆದೇಶ, ಗಮ್+ಹಿ, **ಕರ್ತರಿಶಪ್** ಎಂಬುದರಿಂದ ಶಪ್ ವಿಕರಣ ಅದಕ್ಕೆ **ಬಹುಲಂಛಂದಸಿ** (ಪಾ. ಸೂ. ೨-೪-೭೩) ಎಂಬುದರಿಂದ ಲುಕ್, **ಲಿಪ್, ಲುಪ್, ವಪ್, ಸ್ವಪ್, ಸೃಪಿ, ಯಭ್, ರಭ್, ಲಭ್, ಗಮ್, ನಮ್, ಯಮೋ ರಮಿಃ** (ಪಾ.ಸೂ. ೭-೨-೧೦) ಎಂಬ ಸೂತ್ರದ ಮಹಾಭಾಷ್ಯದಲ್ಲಿ ಅನುದಾತ್ತೋಪದೇಶಗಳನ್ನು ಪರಿಗಣನೆ ಮಾಡುವ ಕಾರಿಕೆಯಲ್ಲಿ ಗಮ್ ಇರುವುದು. ಆದ್ದರಿಂದ, ಇದು ಅನುದಾತ್ತ, ತಥಾಚ **ಅನುದಾತ್ತೋಪದೇಶವನತಿತನೋತ್ಯಾದೀನಾಮನುನಾಸಿಕಲೋಪೋಝಲಿಕ್ಙಿತಿ** (ಪಾ.ಸೂ. ೬-೪-೩೭) ಕಕಾರೇತ್ಸಂಜ್ಞಕ ಅಥವಾ ಙಕಾರೇತ್ಸಂಜ್ಞಕವಾದ ಝಲಾದಿಪ್ರತ್ಯಯ ಪರದಲ್ಲಿರುವಾಗ ಅನುನಾಸಿಕಾನ್ತಗಳಾದ ಅನುದಾತ್ತೋಪದೇಶವಾದ ಧಾತುಗಳು, ಅನುನಾಸಿಕಾಂತಗಳಾದ ತನೋತ್ಯಾದಿಧಾತುಗಳು, ವನಧಾತು ಇವುಗಳ ಕೊನೆಯ ವರ್ಣಕ್ಕೆ ಲೋಪ ಬರುವುದು ಎಂಬುದರಿಂದ ಅನುನಾಸಿಕವಾಗಿರುವ ಮಕಾರಕ್ಕೆ ಲೋಪ, ಗ+ಹಿ **ಅಸಿದ್ಧವದತ್ರಾಭಾತ್** (ಪಾ.ಸೂ ೬-೪-೨೨) ಎಂಬುದರಿಂದ **ಅತೋಹೇಃ** (ಪಾ.ಸೂ. ೬-೪-೧೦೫) ಎಂಬ ಆಭೀಯಶಾಸ್ತ್ರದಿಂದ ಹೀಗೆ ಲುಕ್ಕನ್ನು ಮಾಡುವಾಗ ಆಭೀಯವಾದ ಮಕಾರಲೋಪವು ಅಸಿದ್ಧವಾಗುವುದು. ಏವಂಚ ಅತಃಪರತ್ವವು ಸಂಭವಿಸುವುದಿಲ್ಲ. ಆದ್ದರಿಂದ ಹೀಗೆ ಲುಕ್ ಬರುವುದಿಲ್ಲ. ಗಹಿ ಎಂಬಲ್ಲಿ **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ಸರ್ವಾನುದಾತ್ತ ಬರುವುದು. ॥ ೨ ॥

॥ ಸಂಹಿತಾಪಾಠಃ ॥

ಯೇ ಮಹೋ ರಜಸೋ ವಿದುರ್ವಿಶ್ವೇ ದೇವಾಸೋ ಅದ್ರುಹಃ ।
ಮರುದ್ಭಿರಗ್ನ ಆ ಗಹಿ ॥ ೩ ॥

॥ ಪದಪಾಠಃ ॥

ಯೇ । ಮಹಃ । ರಜಸಃ । ವಿದುಃ । ವಿಶ್ವೇ । ದೇವಾಸಃ । ಅದ್ರುಹಃ ॥
ಮರುತ್ಽಭಿಃ । ಅಗ್ನೇ । ಆ । ಗಹಿ ॥ ೩ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಯೇ ಮರುತೋ ಮಹೋ ರಜಸೋ ಮಹತ ಉದಕಸ್ಯ ವರ್ಷಣಪ್ರಕಾರಂ ವಿದುಸ್ತೈರ್ಮರುದ್ಭಿರಿತ್ಯನ್ವಯಃ । ಕೀದೃಶಾ ಮರುತಃ । ವಿಶ್ವೇ ಸರ್ವೇ ಸಪ್ತವಿಧಗಣೋಪೇತಾಃ । ಸಪ್ತಗಣಾ ವೈ ಮರುತಃ । ತೈ. ಸಂ. ೨-೨-೧೧-೧ । ಇತಿ ಶ್ರುತೇಃ । ದೇವಾಸೋ ದ್ಯೋತಮಾನಾ ಅದ್ರುಹೋ ದ್ರೋಹರಹಿತಾ ವರ್ಷಣೇನ ಸರ್ವಭೂತೋಪಕಾರಿತ್ವಾತ್ । ತಥಾ ಚೋಪರಿಷ್ಟಾದಾಮ್ನಾಯತೇ । ಉದೀರಯಥಾ ಮರುತಃ ಸಮುದ್ರತೋ ಯೂಯಂ ವೃಷ್ಟಿಂ ವರ್ಷಯಥಾ ಪುರೀಷಿಣಃ । ಋಗ್ವೇ ೫-೫೫-೫ । ಇತಿ । ಶಾಖಾಂತರೇಽಪಿ ಮಂತ್ರಾಂತರಸ್ಯ ಬ್ರಾಹ್ಮಣಮೇವಮಾಮ್ನಾಯತೇ । ಮರುತಾಂ ಪೃಷತಯಃ ಸ್ಥೇತ್ಯಾಹ ಮರುತೋ ವೈ ವೃಷ್ಟ್ಯಾ ಈಶತ ಇತಿ । ರಜಃಶಬ್ದೋ ಯಾಸ್ಕೇನ ಬಹುಧಾ ವ್ಯಾಖ್ಯಾತಃ । ರಜೋ ರಜತೇರ್ಜ್ಯೋತೀ ರಜ ಉಚ್ಯತ ಉದಕಂ ರಜ ಉಚ್ಯತೇ । ಲೋಕಾ ರಜಾಂಸ್ಯುಚ್ಯಂತೇಽಸೃಗಹನೀ ರಜಸೀ ಉಚ್ಯೇತೇ । ನಿ. ೪-೧೯ । ಇತಿ ॥ ರಜಸಃ । ನಬ್ವಿಷಯಸ್ಯಾನಿಸಂತಸ್ಯೇತ್ಯಾದ್ಯುದಾತ್ತಃ । ವಿದುಃ । ವಿದ ಜ್ಞಾನೇ । ವಿದೋ ಲಟೋ ವಾ । ಪಾ. ೩-೪-೮೩ । ಇತಿ ಝೇರುಸಾದೇಶಃ । ಪ್ರತ್ಯಯಸ್ವರಃ । ಯದ್ವೃತ್ತಯೋಗಾನ್ನಿಘಾತಾಭಾವಃ । ವಿಶ್ವೇ । ವಿಶೇಃ ಕ್ವನಂತಸ್ಯ ನಿತ್ತ್ವಾದಾದ್ಯುದಾತ್ತತ್ವಂ । ದೇವಾಸಃ । ಆಜ್ಜಸೇರಸುಕ್ । ದೇವಶಬ್ದಃ ಪಚಾದ್ಯಜಂತಃ । ಚಿತ್ತ್ವಾದಂತೋದಾತ್ತಃ । ಅದ್ರುಹಃ । ಸಂಪದಾದಿತ್ವಾದ್ಭಾವೇ ಕ್ವಿಪಿ ಬಹುವ್ರೀಹೌ ನಞ್ಸುಭ್ಯಾಮಿತ್ಯಂತೋದಾತ್ತತ್ವಂ । ಕರ್ತರಿ ವಾ ಕ್ವಿಪ್ । ತತ್ಪುರುಷೇ ಹ್ಯವ್ಯಯಪೂರ್ವಪದಪ್ರಕೃತಿಸ್ವರತ್ವಂ ಸ್ಯಾತ್ । ನ ಚ ಕೃದುತ್ತರಪದಪ್ರಕೃತಿಸ್ವರತ್ವಂ । ಯತೋ ನಞ್ ನ ಗತಿರ್ನ ಚ ಕಾರಕ ಇತಿ । ಪಾ. ೬-೨-೧೩೯ ॥

॥ ಪ್ರತಿಪದಾರ್ಥ ॥

ಅದ್ರುಹಃ—ದ್ರೋಹರಹಿತರಾದ ಎಂದರೆ ಉಪಕಾರವಮಾಡುವ ಸ್ವಭಾವವುಳ್ಳ । ವಿಶ್ವೇ—ಸಮಸ್ತರಾದ ಎಂದರೆ ಸಪ್ತವಿಧಗಣೋಪೇತರಾದ । ಯೇ ದೇವಾಸಃ—ಪ್ರಕಾಶಮಾನರಾದ ಯಾವ ಮರುದ್ದೇವತೆಗಳು । ಮಹಃ— ಹೆಚ್ಚಾದ । ರಜಸಃ—ಉದಕದ (ವರ್ಷಣಪ್ರಕಾರವನ್ನು ಎಂದರೆ ಮಳೆ ಹುಯ್ಯುವುದನ್ನು) ವಿದುಃ— ತಿಳಿದಿರುವರೋ । (ಅಂತಹ) ಮರುದ್ಭಿಃ—ಮರುದ್ದೇವತೆಗಳೊಡನೆ । ಅಗ್ನೇ—ಎಲೈ ಅಗ್ನಿಯೇ । ಆ ಗಹಿ— ಇಲ್ಲಿಗೆ ಬಾ ॥

॥ ಭಾವಾರ್ಥ ॥

ಮರುದ್ದೇವತೆಗಳು ಪ್ರಕಾಶಮಾನರಾದವರು, ಸಪ್ತಗಣಗಳೆಂಬ ಏಳು ವಿಧಗಣಗಳಿಂದ ಕೂಡಿದವರು (ಸಪ್ತಮರುತ್ತುಗಳು) ಯಾರಿಗೂ ದ್ರೋಹವನ್ನೆಸಗುವವರಲ್ಲ, ಉಪಕಾರವನ್ನೇ ಮಾಡುವವರು. ಮಳೆಯನ್ನು ಹೆಚ್ಚಾಗಿ ಹುಯ್ಯುವುದನ್ನು ತಿಳಿದಿರುವರು. ಇಂತಹ ಮರುದ್ದೇವತೆಗಳಿಂದ ಸಹಿತನಾಗಿ ಎಲೈ ಅಗ್ನಿಯೇ, ಇಲ್ಲಿಗೆ ಬಾ ॥

## English Translation

Come, Agni, with the Maruths, who are ali divine, and devoid of malignity and who know how to cause the descent of great waters.

॥ ವಿಶೇಷವಿಷಯಗಳು ॥

**ಮಹೋ ರಜಸಃ**—ಮಹತ ಉದಕಸ್ಯ, ಹೆಚ್ಚಾದ ನೀರಿನ (ಮಳೆಯನ್ನು) ರಜಃಶಬ್ದಕ್ಕೆ ಯಾಸ್ಕರು—**ರಜಃ । ರಜೋ ರಜತೇರ್ಜ್ಯೋತೀ ರಜ ಉಚ್ಯತೇ । ಉದಕಂ ರಜ ಉಚ್ಯತೇ । ಲೋಕಾ ರಜಾಂಸ್ಯುಚ್ಯಂತೇ** । (ನಿ. ೪-೧೯) ಎಂದರೆ, ರಜಃ ಎಂದರೆ ಜ್ಯೋತಿ (ಪ್ರಕಾಶ), ಉದಕ, ಲೋಕ ಎಂಬ ಅರ್ಥಗಳಾಗುವವು ಎಂದು, ಇಲ್ಲಿ ಭಾಷ್ಯಕಾರರು ಉದಕವೆಂಬ ಅರ್ಥವನ್ನು ಪರಿಗ್ರಹಿಸಿದಾರೆ. ವೇದಾರ್ಥ ಯತ್ನಕಾರರು ಜ್ಯೋತಿಃ ಎಂಬ ಅರ್ಥವನ್ನು ಹೇಳಿರುವರು. ಅವರ ಅಭಿಪ್ರಾಯದಂತೆ ಬಹಳ ಪ್ರಕಾಶದಿಂದ ಕೂಡಿರುವ ಅಂತರಿಕ್ಷದಲ್ಲಿ ಸಂಚರಿಸುವ ಮರುತ್ತುಗಳು ಎಂದರ್ಥವು. ಈ ಅರ್ಥವೂ ಇಲ್ಲಿ ಸರಿಯಾಗಿ ಹೊಂದುವುದು.

**ದೇವಾಸಃ**—ದೇವಾಃ ಎಂಬ ಶಬ್ದದ ಪ್ರಾಚೀನಪ್ರಯೋಗವು. ದೇವತೆಗಳು ಎಂದರ್ಥವು.

**ವಿಶ್ವೇ**—ಸಮಸ್ತ ಎಂದರೆ ಏಳು ಗಣಗಳಿಂದ ಸಹಿತವಾದ ಎಂದರ್ಥವು. **ಸಪ್ತಗಣಾ ವೈ ಮರುತಃ** (ತೈ. ಸ. ೨-೨-೧೧-೧) ಎಂದು ಶ್ರುತಿ ವಾಕ್ಯವಿರುವುದು.

**ಅದ್ರುಹಃ**—ದ್ರೋಹರಹಿತಾಃ, ದ್ರೋಹವನ್ನು ಮಾಡದಿರುವವರು ಎಂದರೆ ಜನರಿಗೆ ಮಳೆಯನ್ನು ಸುರಿಯುವುದರ ಮೂಲಕ ಉಪಕಾರವನ್ನೇ ಮಾಡುವವರು. ಈ ವಿಷಯದಲ್ಲಿ ಭಾಷ್ಯಕಾರರು ಈ ಕೆಳಗಿನ ಋಕ್ಕನ್ನು ಉದಹರಿಸಿರುವರು.

**ಉದೀರಯಥಾ ಮರುತಃ ಸಮುದ್ರತೋ ಯೂಯಂ ವೃಷ್ಟಿಂ ವರ್ಷಯಥಾ ಪುರೀಷಿಣಃ॥**
(ಋ. ಸಂ, ೫-೫೫-೫)

**ಮರುತಾಂ ಪೃಷತಯಃ ಸ್ಥೇತ್ಯಾಹ ಮರುತೋ ವೈ ವೃಷ್ಟ್ಯಾ ಈಶತೇ** । (ತೈ. ಬ್ರಾ.) ಎಂಬ ಬ್ರಾಹ್ಮಣವಾಕ್ಯವನ್ನೂ ಹೇಳಿರುವರು. ಈ ಮಂತ್ರಗಳು ಮರುದ್ದೇವತೆಗಳು ವೃಷ್ಟಿಯನ್ನುಂಟುಮಾಡುವವರು ಎಂಬರ್ಥವನ್ನು ಸ್ಪಷ್ಟಪಡಿಸುತ್ತವೆ.

॥ ವ್ಯಾಕರಣಪ್ರಕ್ರಿಯಾ ॥

**ರಜಸಃ**—ರಜಶ್ಶಬ್ದವು ನಿತ್ಯನಪುಂಸಕಲಿಂಗ. ಆದ್ದರಿಂದ **ನಬ್ವಿಷಯಸ್ಯಾನಿಸನ್ತಸ್ಯ** (ಫಿ. ಸೂ. ೨-೨೬) ಇಸಂತವಲ್ಲದ ನಿತ್ಯನಪುಂಸಕ ಶಬ್ದದ ಆದಿಯು ಉದಾತ್ತವಾಗುವುದು ಎಂಬುದರಿಂದ ರಜಃ ಎಂಬುದು ಆದ್ಯುದಾತ್ತ, ಷಷ್ಠೀಏಕವಚನಾನ್ತ.

**ವಿದುಃ**—ವಿದ ಜ್ಞಾನೇ ಧಾತು, ಇದರ ಮುಂದೆ **ಲಟ್** ಪ್ರಥಮಪುರುಷಬಹುವಚನ ಝಿ ಆದೇಶ. ವಿದ್+ಝಿ **ಕರ್ತರಿಶಪ್** (ಪಾ.ಸೂ.೩-೧-೬೮) ಎಂಬುದರಿಂದ ಶಪ್ **ಅದಿಪ್ರಭೃತಿಭ್ಯಃ ಶಪಃ** (ಪಾ.ಸೂ-೨-೪-೭೨) ಎಂಬುದರಿಂದ ಶಪ್‌ಗೆ ಲುಕ್. **ವಿದೋಲಟೋವಾ** (ಪಾ.ಸೂ. ೩-೪-೮೩) ವಿದಜ್ಞಾನೇ ಧಾತುವಿನ ಮುಂದೆ

ಬಂದಿರುವ ಲಟ್ ಸ್ಥಾನದಲ್ಲಿ ಬಂದ ಪರಸ್ಮೈ ಪದ ಸಂಜ್ಞಗಳಾದ ತಿಬಾದಿ ಒಂಭತ್ತು ಪ್ರತ್ಯಯಗಳ ಸ್ಥಾನದಲ್ಲಿ ಕ್ರಮವಾಗಿ ಣಲ್, ಅತುಸ್, ಉಸ್, | ಥಲ್, ಅಥುಸ್, ಅ, | ಣಲ್, ವ, ಮ | ಎಂಬೀ ಒಂಭತ್ತು ಆದೇಶ ಗಳು ಬರುವುವು ಎಂಬುದರಿಂದ ಝಿಗೆ ಉಸ್ ಆದೇಶ, ವಿದ್+ಉಸ್, ರುತ್ವ, ವಿಸರ್ಗ, ವಿದುಃ ಎಂದಾಯ್ತು. **ಯೇಮಹೋರಜಸೋ** ವಿದುಃ ಎಂಬುದಾಗಿ ಯದ್ವೃತ್ತಯೋಗವಿರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ಸರ್ವಾನುದಾತ್ತಕ್ಕೆ ಪ್ರತಿಷೇಧ ಬರುವುದು. ಆದ್ದರಿಂದ ಉಸ್ ಗೆ ಪ್ರತ್ಯಯಸ್ವರವೇ ಬರುವುದು.

**ವಿಶ್ವೇ**—ಅಶೂಪ್ರುಷಿ........ವಿಶಿಭ್ಯಃಕ್ವನ್ (ಉ.ಸೂ. ೧-೧೪೯) ಎಂಬುದರಿಂದ ವಿಶ-ಪ್ರವೇಶನೇ, ಎಂಬುದರಿಂದ ಕ್ವನ್ ಪ್ರತ್ಯಯ. ನಿತ್ಸ್ವರ ಆದ್ಯುದಾತ್ತ ಬರುವುದು. ವಿಶ್ವ ಶಬ್ದದ ಮುಂದೆ ಪ್ರಥಮಾ ಬಹು ವಚನ ಜಸ್ **ಜಸಶ್ಶೀ** (ಪಾ. ಸೂ. ೭-೧-೧೭ ) ಎಂಬುದರಿಂದ ಶೀ ಆದೇಶ, ಶ್‌ಗೆ ಇತ್ಸಂಜ್ಞೆ ಲೋಪ ವಿಶ್ವ+ ಈ. **ಆದ್ಗುಣಃ** ಎಂಬುದರಿಂದ ಗುಣ.

**ದೇವಾಸಃ**—**ನನ್ದಿಗ್ರಹಿ ಪಚಾದಿಭ್ಯೋಲ್ಯುಣಿನ್ಯಚಃ** (ಪಾ ಸೂ.೩-೧-೧೩೪) ಎಂಬುದರಿಂದ ದಿವ್ ಧಾತುವಿನ ಮುಂದೆ ಅಚ್ ಪ್ರತ್ಯಯ. ಪ್ರತ್ಯಯವು ಚಿತ್, ಆದ್ದರಿಂದ **ಚಿತಃ** (ಪಾ ಸೂ. ೬-೧-೧೬೩) ಎಂಬುದ ರಿಂದ ಅಂತೋದಾತ್ತ. ಅಚ್ ಪ್ರತ್ಯಯವನ್ನು ನಿಮಿತ್ತ ಮಾಡಿಕೊಂಡು ಧಾತುವಿನ ಇಕಾರಕ್ಕೆ ಲಘೂಪಧಗುಣ. ದೇವ ಶಬ್ದದ ಮುಂದೆ ಜಸ್, ದೇವ+ಅಸ್, **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಜಸ್‌ಗೆ ಅಸುಕ್ ಆಗಮ. ಆಗಮವು ಕಿತ್ತಾದ್ದರಿಂದ **ಅದ್ಯನ್ತೌಟಕಿತೌ** ( ಪಾ. ಸೂ. ೧-೧-೪೬ ) ಎಂಬುದರಿಂದ ಜಸ್‌ಗೆ ಅನ್ತಾವಯವವಾಗಿ ಬರುವುದು. ದೇವ+ಅಸಸ್, ಸವರ್ಣದೀರ್ಘ, ದೇವಾಸಸ್, ರುತ್ವ, ವಿಸರ್ಗ.

**ಅದ್ರುಹಃ**--ದ್ರುಹ-ಜಿಘಾಂಸಾಯಮ್ ಧಾತು. ಇದರ ಮುಂದೆ ಭಾವಾರ್ಥದಲ್ಲಿ **ಸಂಪದಾದಿಭ್ಯಃ ಕ್ವಿಪ್** ಎಂಬುದರಿಂದ ಕ್ವಿಪ್, ನ ದ್ರುಹಃ ಯೇಷಾಂ ತೇ ಎಂದು ಬಹುವ್ರೀಹಿ, ದ್ರೋಹಮಾಡುವಿಕೆಯು ಯಾವ ಮರುತ್ತುಗಳಿಗೆ ಇಲ್ಲವೋ ಅಂತಹ ಮರುತ್ತುಗಳು ಎಂದರ್ಥ. ಬಹುವ್ರೀಹೌಪ್ರಕೃತ್ಯಾಪೂರ್ವಪದಮ್, ಎಂಬು ದರಿಂದ ಪೂರ್ವಪದ ಪ್ರಕೃತಿಸ್ವರ ಪ್ರಾಪ್ತವಾದರೆ ಅದನ್ನು ಬಾಧಿಸಿ **ನಞ್‌ಸುಭ್ಯಾಮ್** ( ಪಾ. ಸೂ. ೬-೨-೧೭೨) ಬಹುವ್ರೀಹಿಯಲ್ಲಿ ನಞ್ ಸು ಇವುಗಳ ಮುಂದೆ ಇರುವ ಉತ್ತರಪದವು ಅಂತೋದಾತ್ತವಾಗುವುದು ಎಂಬು ದರಿಂದ ಅಂತೋದಾತ್ತ, ಅಥವಾ **ಕ್ವಿಪ್‌ಚ** ( ಪಾ. ಸೂ. ೩-೨-೭೬ ) ಉಪಪದಗಳು ಇರುವಾಗಲೂ, ಉಪ ಪದಗಳಿಲ್ಲದೇ ಇರುವಾಗಲೂ, ಛಂದಸ್ಸಿನಲ್ಲಿಯೂ ಲೋಕದಲ್ಲಿಯೂ ಸಹ ಎಲ್ಲಾ ಧಾತುಗಳ ಮುಂದೆಯೂ ಕ್ವಿಪ್ ಬರುವುದು ಎಂಬುದರಿಂದ, ಕರ್ತರಿ ಕ್ವಿಪ್, ನ+ದ್ರುಹಃ ಯೇಷಾಂ ತೇ ಎಂದು ಇಲ್ಲಿಯೂ ಬಹುವ್ರೀಹಿ. ದ್ರುಹಃ ದ್ರೋಹಕರ್ತಾರಃ ಯಾವ ಮರುತ್ತುಗಳಿಗೆ ದ್ರೋಹ ಮಾಡುವವರು ಇಲ್ಲವೋ ಆ ಮರುತ್ತುಗಳು ಎಂದು ಅರ್ಥ. ನ ದ್ರುಹಃ, ಅದ್ರುಹಃ ದ್ರೋಹಕರ್ತೃಗಳಲ್ಲದ ಎಂದು ತತ್ಪುರುಷವನ್ನು ಮಾಡಕೂಡದು. ಹಾಗೆ ತತ್ಪುರುಷವನ್ನು ಮಾಡಿದರೆ **ತತ್ಪುರುಷೇತುಲ್ಯಾರ್ಥತೃತೀಯಾ ಸಪ್ತಮ್ಯುಪಮಾನಾವ್ಯಯ ದ್ವಿತೀಯಾಕೃತ್ಯಾಃ** (ಪಾ. ಸೂ. ೬-೨-೨ ) ತತ್ಪುರುಷ ಸಮಾಸದಲ್ಲಿ ತುಲ್ಯಾರ್ಥಕವಾದ ಶಬ್ದಗಳು ತೃತೀಯಾಂತಪದ, ಸಪ್ತಮ್ಯಂತ, ಉಪ ಮಾನವಾಚಕ, ಅವ್ಯಯ, ದ್ವಿತೀಯಾಂತ, ಕೃತ್ಯಪ್ರತ್ಯಯಾಂತ ಇವು ಉಪಪದಗಳಾಗಿದ್ದರೆ ಪ್ರಕೃತಿಸ್ವರವನ್ನು ಹೊಂದುವುವು. ಅವ್ಯಯಪದದಿಂದ ಅವ್ಯಯಸಾಮಾನ್ಯಕ್ಕೂ ಗ್ರಹಣವಿಲ್ಲ. ಅವ್ಯಯೇ ನಞ್‌ಕುನಿಪಾತಾ ನಾಮ್, ಎಂದು ಪರಿಗಣನೆ ಇರುವುದು, ಏವಂಚ ಇದರಿಂದ ಪೂರ್ವಪದ ಪ್ರಕೃತಿಸ್ವರ ಬರಬೇಕಾಗುವುದು. ಇಲ್ಲಿ ಪೂರ್ವಪದವಾದ ನಞ್, ನಿಪಾತಾ ಆದ್ಯುದಾತ್ತಾಃ ಎಂಬುದರಿಂದ ಆದ್ಯುದಾತ್ತ. ಆದ್ದರಿಂದ ಪೂರ್ವಪದ

ಪ್ರಕೃತಿಸ್ವರ ಬಂದರೆ, ಅದ್ರುಹಃ ಎಂಬುದು ಆದ್ಯುದಾತ್ತವಾಗಬೇಕಾಗುವುದು. ಆದರೆ ತತ್ಪುರುಷವನ್ನು ಮಾಡಿದಾಗಲೂ ತತ್ಪುರುಷೇ... ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಪ್ರಾಪ್ತವಾದರೆ ಅದಕ್ಕೆ ಬಾಧಕವಾದ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ತತ್ಪುರುಷರುಷ ಸಮಾಸದಲ್ಲಿ ಗತಿಕಾರಕ, ಉಪಪದ ಇವುಗಳ ಮುಂದೆ ಇರುವ ಕೃದಂತವು ಪ್ರಕೃತಿಸ್ವರವನ್ನು ಹೊಂದುವುದು ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುವುದು. ಉತ್ತರಪದವಾದ ದ್ರುಹ್ ಎಂಬುದು ಧಾತುಸ್ವರದಿಂದ ಅಂತೋದಾತ್ತ. ಆದ್ದರಿಂದ ಉತ್ತರಪದ ಪ್ರಕೃತಿಸ್ವರ ಬಂದರೆ ಅಂತೋದಾತ್ತವೇ ಬರುವುದು. ಯದ್ಯಪಿ ಇಲ್ಲಿ ದ್ರುಹ್ ಎಂಬ ಉತ್ತರ ಗತಿಯ ಮುಂದೆಯೂ ಇಲ್ಲ, ಕಾರಕದ ಮುಂದೆಯೂ ಇಲ್ಲ. ಏಕೆಂದರೆ ನಞ್ ಎಂಬುದು ಗತಿಯೂ ಅಲ್ಲ. ಕಾರಕವೂ ಅಲ್ಲ. ಆದರೂ ನಞ್ ಉಪಪದವಾಗುವುದು. ಆದ್ದರಿಂದ ದ್ರುಹ್ ಎಂಬ ಕೃದಂತವು ಉಪಪದದ ಮುಂದೆ ಇರುವುದರಿಂದ ಕೃದುತ್ತರಪದಪ್ರಕೃತಿಸ್ವರ ಬರಲು ಯಾವ ಬಾಧಕವೂ ಇಲ್ಲ. ಏವಂಚ ತತ್ಪುರಸಮಾಸವನ್ನು ಹೇಳಬಹುದು. ಇಲ್ಲಿ ವೇದಭಾಷ್ಯದಲ್ಲಿ, ಯತೋ ನಞ್ ನಗತಿಃ, ನಚಕಾರಕಮ್', ಎಂದು ನಞ್‌ಗೆ ಗತಿಕಾರಕ ಸಂಜ್ಞೆ ಇಲ್ಲದೇ ಇರುವುದರಿಂದ ಕೃದುತ್ತರಪದಪ್ರಕೃತಿಸ್ವರ ಬರುವುದಿಲ್ಲ. ಆದ್ದರಿಂದ ತತ್ಪುರುಷವನ್ನು ಹೇಳಕೂಡದು. ಬಹುವ್ರೀಹಿ ಸಮಾಸವನ್ನೇ ಹೇಳಬೇಕು ಎಂದಿರುವುದು. ಇಲ್ಲಿ ನಞ್ ಉಪಪದವಲ್ಲ ಎಂದು ಹೇಳಲಿಲ್ಲ. ಆದ್ದರಿಂದ ಇದು ನ್ಯೂನವೆಂದು ತಿಳಿಯಬಹುದು. ॥ ೩ ॥

॥ ಸಂಹಿತಾಪಾಠಃ ॥

ಯ ಉಗ್ರಾ ಅರ್ಕಮಾನೃಚುರನಾಧೃಷ್ಟಾಸ ಓಜಸಾ ।
ಮರುದ್ಭಿರಗ್ನ ಆ ಗಹಿ ॥ ೪ ॥

॥ ಪದಪಾಠಃ ॥

ಯೇ । ಉಗ್ರಾಃ । ಅರ್ಕಂ । ಆನೃಚುಃ । ಅನಾಧೃಷ್ಟಾಸಃ । ಓಜಸಾ ॥
ಮರುತ್ ऽ ಭಿಃ । ಅಗ್ನೇ । ಆ । ಗಹಿ ॥ ೪ ॥

॥ ಸಾಯಣಭಾಷ್ಯಂ ॥

ಹೇ ಮರುತ ಉಗ್ರಾಸ್ತೀವ್ರಾಃ ಸಂತೋಽರ್ಕಮುದಕಮಾನೃಚುಃ ಅರ್ಚಿತವಂತಃ । ವರ್ಷಣೇನ ಸಂಪಾದಿತವಂತ ಇತ್ಯರ್ಥಃ । ತೈರ್ಮರುದ್ಭಿರಿತ್ಯನ್ವಯಃ । ಕೀದೃಶಾ ಮರುತಃ । ಓಜಸಾ ಬಲೇನಾನಾಧೃಷ್ಟಾಸೋಽತಿರಸ್ಕೃತಾಃ । ಸರ್ವೇಭ್ಯೋಽಪಿ ಪ್ರಬಲಾ ಇತ್ಯರ್ಥಃ । ಅರ್ಕಶಬ್ದಸ್ಯೋದಕವಾಚಿತ್ವಂ ವಾಜಸನೇಯಿನ ಆಮನಂತಿ । ಅಪೋ ವಾ ಅರ್ಕಃ । ಶತ. ಬ್ರಾ, ೧೦-೬-೫-೨ । ಇತಿ । ತನ್ನಿರ್ವಚನಂ ಚ ತ

ಖಿವಾಮನಂತಿ । ಸೋಽರ್ಚನ್ನಚರತ್ತಸ್ಯಾರ್ಚತ ಆಪೋಽಜಾಯಂತಾರ್ಚತೇ ವೈ ಮೇ ಕಮಭೂದಿತಿ ತದೇವಾರ್ಕಸ್ಯಾರ್ಕತ್ವಂ । ಶತ. ಬ್ರಾ. ೧೦-೬-೫-೧ । ಇತಿ । ಜಗತ್ಸೃಷ್ಟ್ವಾ ಹಿರಣ್ಯಗರ್ಭ ಉದಕಂ ಸೃಷ್ಟ್ವಾಮುದ್ಯುಕ್ತೋಽರ್ಚನ್ ಉದಕಸತ್ಯಸಂಕಲ್ಪಮಹಿಮಪ್ರಖ್ಯಾಪನೇನ ಸ್ವಾತ್ಮಾನಂ ಪೂಜಯನ್ನ-ಚರತ್ । ತಥಾ ಪೂಜಯತೋ ಹಿರಣ್ಯಗರ್ಭಸ್ಯ ಸಕಾಶಾದುದಕಮುತ್ಪನ್ನಂ ತದಾನೀಮರ್ಚತೋ ಮತ್ತಃ ಕಮಭೂದಿತ್ಯವೋಚತ್ । ತೇನೋದಕಸ್ಯಾರ್ಕನಾಮ ನಿಷ್ಪನ್ನಮಿತ್ಯರ್ಥಃ ॥ ಆನೃಚುಃ । ಅರ್ಚ-ತೇಃ । ಅಪಸ್ಪೃಧೇಥಾಮಿತ್ಯಾದಿನಾ । ಪಾ. ೬-೧-೩೬ । ನಿಪಾತಿತಃ । ಪ್ರತ್ಯಯಸ್ವರಃ । ಯದ್ವೃತ್ತಯೋ-ಗಾನ್ನ ನಿಘಾತಃ । ಅನಾಧೃಷ್ಟಾಸಃ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ । ಓಜಸಾ । ಉಬ್ಜೇರ್ಬ-ಲೋಪಶ್ಚ । ಉ. ೪-೧೯೧ । ಇತ್ಯಸುನ್ । ನಿತ್ತ್ವಾದಾದ್ಯುದಾತ್ತಃ ॥

॥ ಪ್ರತಿಪದಾರ್ಥ ॥

ಉಗ್ರಾಃ— ತೀವ್ರಗಾಮಿಗಳಾದ । ಓಜಸಾ— ಬಲದಿಂದ । ಅನಾಧೃಷ್ಟಾಸಃ—ಅಪ್ರತಿಹತರಾದ । ಯೇ—ಯಾವ ಮರುದ್ದೇವತೆಗಳು । ಅರ್ಕಂ—ಉದಕವನ್ನು । ಆನೃಚುಃ—ವರ್ಷಣಮಾಡಿದರೋ । (ಅಂತಹ) ಮರುದ್ಭಿಃ— ಮರುದ್ದೇವತೆಗಳೊಡನೆ । ಅಗ್ನೇ— ಎಲೈ ಅಗ್ನಿಯೇ । ಆ ಗಹಿ—ಬಾ ॥

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಾರಿಂದಲೂ ತಡೆಯಲುಸಾಧ್ಯವಾದ ಶಕ್ತಿಸಾಮರ್ಥ್ಯಗಳುಳ್ಳ ಮತ್ತು ವೇಗವಾಗಿ ಬೀಸುತ್ತಾ ಉದಕವನ್ನು ವರ್ಷಣಮಾಡುವ (ಮಳೆಯನ್ನು ಸುಯ್ಯುವ) ಮರುದ್ದೇವತೆಗಳೊಡನೆ ಇಲ್ಲಿಗೆ ಬಾ ॥

English Translation.

O Agni, come hither with the Maruts, who are fierce (or blow fiercely) and send down rain and are unsurpassed in strength.

॥ ವಿಶೇಷವಿಷಯಗಳು ॥

ಉಗ್ರಾಃ— ತೀವ್ರಾಃ । ವೇಗವಾಗಿ ಬೀಸುವ.

ಅರ್ಕಂ— ಉದಕವನ್ನು, ಅರ್ಕಶಬ್ದಕ್ಕೆ ಯಾಸ್ಕರು ಹೇಳಿರುವ ನಾಲ್ಕು ವಿಧವಾದ ಅರ್ಥವನ್ನು ನಾವು ಹಿಂದೆಯೇ (ಪುಟ ೩೮೮) ವಿವರಿಸಿದೇವೆ. ಇಲ್ಲಿ ಅರ್ಕಶಬ್ದಕ್ಕೆ ಉದಕವೆಂಬ ಬೇರೆ ಅರ್ಥವನ್ನು ಭಾಷ್ಯಕಾರರು ಹೇಳಿ ಅದನ್ನು ಸಮರ್ಥಿಸುವುದಕ್ಕಾಗಿ ಶುಕ್ಲಯಜುರ್ವೇದದ ಶತಪಥ ಬ್ರಾಹ್ಮಣ ವಾಕ್ಯವನ್ನು ಉದಹರಿಸಿರುವರು—

> ಸೋಽರ್ಚನ್ನಚರತ್ತಸ್ಯಾರ್ಚತ ಆಪೋಽಜಾಯಂತಾರ್ಚತೇ ವೈ ಮೇ ಕಮಭೂದಿತಿ ತದೇವಾರ್ಕಸ್ಯಾರ್ಕತ್ವಂ ॥
>
> (ಶ. ಬ್ರಾ. ೧೦-೬-೫-೧)

ಇದರ ಅರ್ಥವಿವರಣೆಯನ್ನು ಭಾಷ್ಯಕಾರರು ಇಂತು ಹೇಳಿರುವರು—

**ಜಗತ್ಸೃಷ್ಟ್ವಾ ಹಿರಣ್ಯಗರ್ಭ ಉದಕಂ ಸ್ರಷ್ಟುಮುದ್ಯುಕ್ತೋಽರ್ಚನ್ ಉದಕಸತ್ಯ-ಸಂಕಲ್ಪಮಹಿಮಪ್ರಖ್ಯಾಪನೇನ ಸ್ವಾತ್ಮಾನಂ ಪೂಜಯನ್ನಚರತ್ । ತಥಾ ಪೂಜಯತೋ ಹಿರಣ್ಯಗರ್ಭಸ್ಯ ಸಕಾಶಾದುದಕಮುತ್ಪನ್ನಂ । ತದಾನೀಮರ್ಚತೋ ಮತ್ತಃ ಕಮಭೂದಿತ್ಯವೋಚತ್ । ತೇನೋದಕಸ್ಯಾರ್ಕನಾಮ ನಿಷ್ಪನ್ನಮಿತ್ಯರ್ಥಃ ॥**

ಎಂದರೆ ಹಿರಣ್ಯಗರ್ಭನು (ಪ್ರಜಾಪತಿಯು) ಜಗತ್ತನ್ನು ಸೃಷ್ಟಿಮಾಡಿ ಬಳಿಕ ಉದಕವನ್ನು ಸೃಷ್ಟಿಮಾಡಬೇಕೆಂದು ಉದ್ಯುಕ್ತನಾಗಿ ಸತ್ಯಸಂಕಲ್ಪನಾದುದರಿಂದ ತನ್ನನ್ನು ಪೂಜಿಸಲು ಪ್ರಾರಂಭಿಸಿದನು. ಹಾಗೆ ಪೂಜೆಮಾಡುತ್ತಿರುವಾಗ ಆ ಪ್ರಜಾಪತಿಯ ದೆಶೆಯಿಂದ ಉದಕವು ಉತ್ಪನ್ನವಾಯಿತು. ಆಗ ಪ್ರಜಾಪತಿಯು ನನ್ನಿಂದ ಉತ್ಪನ್ನವಾದುದು ಇದೇನು? (ಕಂ) ಎಂದು ಹೇಳಲು, ಆ ಕಾರಣದಿಂದ ಎಂದರೆ ಅರ್ಚನದಿಂದ ಕಂ (ಉದಕ) ಎಂಬುದು ಉತ್ಪನ್ನವಾದುದರಿಂದ ಅರ್ಕ ಎಂದು ನೀರಿಗೆ ಹೆಸರಾಯಿತು ಎಂದಭಿಪ್ರಾಯವು.

**ಆನೃಚುಃ—ಅರ್ಚಿತವಂತಃ, ವರ್ಷಣೇನ ಸಂಪಾದಿತವಂತಃ—**ಪೂಜೆಮಾಡಿದರು, ಅರ್ಚಿಸಿದರು ಎಂದರೆ ಅರ್ಚನಕರ್ಮದಿಂದ ಉಂಟಾದ ಉದಕವನ್ನು ವರ್ಷಣಮಾಡಿದರು ಎಂದರ್ಥವು.

**ಅನಾಧೃಷ್ಟಾಸಃ—ಅತಿರಸ್ಕೃತಾಃ, ಸರ್ವೇಭ್ಯೋಽಪಿ ಪ್ರಬಲಾಃ—**ತಿರಸ್ಕಾರ ಮಾಡಲು ಸಾಧ್ಯವಿಲ್ಲದವರು ಎಂದರೆ ಎಲ್ಲರಿಗಿಂತಲೂ ಪ್ರಬಲರಾದವರು, ಹೆಚ್ಚು ಸಾಮರ್ಥ್ಯವುಳ್ಳವರು.

॥ ವ್ಯಾಕರಣಪ್ರಕ್ರಿಯಾ ॥

**ಆನೃಚುಃ- ಅಪಸ್ಪೃಧೇಥಾಮಾನೃಚುರಾನೃಹುಶ್ಚಿಚ್ಯುಷೇತಿತ್ಯಾಜಶ್ರಾತಾಶ್ರಿತಮಾಶೀರಾಶೀರ್ತಾಃ** (ಪಾ. ಸೂ. ೬-೧-೩೬) ಸ್ಪರ್ಧ ಸಂಘರ್ಷೇ ಧಾತು. ಲಙ್ ಪ್ರಥಮಪುರುಷದ್ವಿವಚನ ಆಥಾಮ್, ಸ್ಪರ್ಧ್+ಆಥಾಂ ಎಂದಿರುವಾಗ ಇಲ್ಲಿ ಧಾತುವಿಗೆ ದ್ವಿತ್ವ, ಸ್ಪರ್ಧ್+ಆಥಾಮ್. ಉತ್ತರಖಂಡದ ರೇಫಕ್ಕೆ ಸಂಪ್ರಸಾರಣ, ಋಕಾರ, ರೇಫದ ಹಿಂದಿನ ಅಕಾರಕ್ಕೆ ಲೋಪ, ಇವು ನಿಪಾತಿಸಲ್ಪಡುವುವು. ಸ್ಪರ್ಧ್-ಸ್ಪೃಧ್-ಆಥಾಮ್ **ಶರ್ಪೂರ್ವಾಃ ಖಯಃ** ( ಪಾ. ಸೂ. ೭-೪-೬೧ ) ಅಭ್ಯಾಸದಲ್ಲಿ ಶ, ಷ, ಸ, ಗಳ ಮುಂದೆ ಇರುವ ಖಯ್ ವರ್ಣವು ಉಳಿಯುವುದು. ಮಿಕ್ಕ ವರ್ಣಗಳು ಲುಪ್ತವಾಗುವುವು ಎಂಬುದರಿಂದ- ಮೊದಲನೆಯ ಸ್ಪರ್ಧ್ ನಲ್ಲಿ ಪ ಉಳಿಯುವುದು. ಮಿಕ್ಕ ವರ್ಣಗಳಿಗೆ ಲೋಪ. ಪಸ್ಪೃಧ್. ಆಥಾಮ್, ಅಡಾಗಮ, ಶಪ್. **ಆತೋಙಿತಃ** (ಪಾ. ಸೂ. ೭-೨-೮೧) ಎಂಬುದರಿಂದ ಆಕಾರಕ್ಕೆ ಇಯ್ ಆದೇಶ. **ಲೋಪೋವ್ಯೋರ್ವಲಿ** (ಪಾ. ಸೂ. ೬-೧-೬೬) ಎಂಬುದರಿಂದ ಯ ಲೋಪ, ಆದ್ಗುಣಃ ಅಪಸ್ಪೃಧೇಥಾಮ್ ಅಥವಾ ಅಪ ಎಂದು ಪೃಥಕ್ಪದ ಸ್ಪರ್ಧಧಾತು ಲಙ್ ಆಥಾಮ್ ಶಪ್ ಆತೋಙಿತಃ ವಲಿ ಲೋಪ, ಅಡಾಗಮಾಭಾವವು ಛಾಂದಸ, ಸ್ಪರ್ಧೇತಾಂ ಎಂದಾಗುವುದು. ಆನೃಚುಃ ಅರ್ಚ ಪೂಜಾಯಾಮ್ ಲಿಟ್, ಝಿ, **ಪರಸ್ಮೈಪದಾನಾಂಣಲತುಸುಸ್ಥಲಥುಸಣಲ್ವಮಾಃ** (ಪಾ.ಸೂ.೩-೪-೮೨) ಎಂಬುದರಿಂದ ಉಸ್, ಅರ್ಚ್+ಉಸ್ **ಲಿಟಿಧಾತೋರನಭ್ಯಾಸಸ್ಯ** (ಪಾ. ಸೂ. ೬-೧-೮) ಎಂಬುದರಿಂದ ದ್ವಿತ್ವ, ಅರ್ಚ್ ಅರ್ಚ್+ಉಸ್ **ಹಲಾದಿಃಶೇಷಃ** (ಪಾ.ಸೂ. ೭-೪-೬೦) ಅಭ್ಯಾಸದ ವ್ಯಂಜನಗಳಿಗೆ ಜಾತಿಪಕ್ಷಾಶ್ರಯಣದಿಂದಲೋ, ಯೋಗವಿಭಾಗ ಪಕ್ಷಾಶ್ರಯಣದಿಂದಲೋ ಲೋಪ, ಅ+ಅರ್ಚ್+ಉಸ್ **ಅತಆದೇಃ** (ಪಾ. ಸೂ.೭-೪-೭೦) ಅಭ್ಯಾಸ ಆದಿಯಲ್ಲಿರುವ ಹ್ರಸ್ವಾಕಾರಕ್ಕೆ ದೀರ್ಘ ಬರುವುದು ಎಂಬುದರಿಂದ ದೀರ್ಘ. ಆ+ಅರ್ಚ್+ಉಸ್ **ತಸ್ಮಾನ್ನುಟ್‌ದ್ವಿಹಲಃ** (ಪಾ. ಸೂ. ೭-೪-೭೧ ) ದೀರ್ಘವನ್ನು ಹೊಂದಿದ ಅಕಾರದ ಮುಂದೆ ಇರುವ ದ್ವಿಹಲ್ಕವಾದ ಧಾತುವಿಗೆ ನುಡಾಗಮ ಬರುವುದು ಎಂಬುದರಿಂದ ನುಡಾಗಮ. ಆ+ನ್+ಅರ್ಚ್+ಉಸ್ ಆನರ್ಚುಃ, ಎಂದೇ ಲೋಕದಲ್ಲಿ ಪ್ರಯೋಗ.

ವೇದದಲ್ಲಿ ಈ ಸೂತ್ರದಿಂದ ರೇಫಕ್ಕೆ ಸಂಪ್ರಸಾರಣ ಋಕಾರ, ರೇಫದ ಹಿಂದಿನ ಅಕಾರಕ್ಕೆ ಲೋಪ, ಅನೃಚುಃ, ಎಂದಾಗುವುದು. ಅನೃಹುಃ ಎಂಬಲ್ಲಿಯೂ ಅರ್ಹಧಾತುವಿಗೆ ಇದೇ ರೀತಿ ಪ್ರಕ್ರಿಯೆ, ಚ್ಯುಙ್ ಗತೌ, ಧಾತು, ಲಟ್, ಥಾಸ್, ಥಾಸಸ್ಸೇ, ದ್ವಿತ್ವ ಚ್ಯು+ಚ್ಯು+ಸೇ ಅಭ್ಯಾಸಸಂಪ್ರಸಾರಣಯುಕಾರಕ್ಕೆ ಇಕಾರ ನಿಪಾತಿಕವಾಗುವುದು. ಹೀಗೆ ಇಡಭಾವವೂ ನಿಪಾತಿತವಾಗುವುದು. ಸಂಪ್ರಸಾರಣಾಚ್ಚ, ಪೂರ್ವರೂಪ, ಚಿಚ್ಯುಷೇ, ಲೋಕದಲ್ಲಿ ಚುಚ್ಯುವಿಷೇ, ತ್ಯಜ ವಯೋಹಾನೌ, ಲಿಟ್, ತಿಪ್, ಣಲ್ ದ್ವಿತ್ವ ತ್ಯಜ್+ತ್ಯಜ್+ಅ, ಅಭ್ಯಾಸಕ್ಕೆ ಸಂಪ್ರಸಾರಣ ನಿಪಾತ, ಪೂರ್ವರೂಪ, ಹಲಾದಿಶೇಷ, ತಿತ್ಯಜ+ಅ ಉಪಧಾವೃದ್ಧಿ. ತಿತ್ಯಾಜ. ಶ್ರೀಞ್ ಪಾಕೇ, ಕ್ತಪ್ರತ್ಯಯ. ಶ್ರೀಗೆ ಶ್ರಾ ಆದೇಶ ನಿಪಾತಿತ, ಬಹುವಚನ ಶ್ರಾತಾಃ ಶ್ರಿತ ಎಂಬಲ್ಲಿ ಆದುಧಾತುವಿಗೆ ಹ್ರಸ್ವ ನಿಪಾತಿತ, ಆಪೂರ್ವಕ ವಾದ ಶ್ರೀಞ್ ಧಾತುವಿಗೆ ಕ್ವಿಪ್ ಧಾತುವಿಗೆ ಶಿರ ಆದೇಶ. ಆಶೀರ್ತಾ ಎಂಬಲ್ಲಿ ಆಪೂರ್ವಕವಾದ ಶ್ರೀಞ್ ಧಾತು ವಿಗೆ ಕ್ತಪ್ರತ್ಯಯ ಪರದಲ್ಲಿರುವಾಗ ಶಿರ್ ಆದೇಶ, ಕ್ತಪ್ರತ್ಯಯಕ್ಕೆ ರದಾಭ್ಯಾಂನಿಷ್ಠಾತೋ ನಃಪೂರ್ವಸ್ಯಚದಃ ಎಂಬುದರಿಂದ ಪ್ರಾಪ್ತವಾಗುವ ನತ್ವಕ್ಕೇ ಅಭಾವವೂ ನಿಪಾತಿತ, ಏವಂಚ ಈ ಸೂತ್ರದಿಂದ ಅನೃಚುಃ ಎಂಬುದು ನಿಪಾತಿತವಾಗಿರುವುದು. ಉಸ್, ಗೆ ಪ್ರತ್ಯಯಸ್ವರವೇ ಬರುವುದು. **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂದು ಪ್ರತಿಷೇಧ ಬರುವುದರಿಂದ ಸರ್ವಾನುದಾತ್ತ ಬರುವುದಿಲ್ಲ.

**ಅನಾಧೃಷ್ಟಾಸಃ**—ನ ಅಧೃಷ್ಟಾಃ ಎಂದು ವಿಗ್ರಹ. ಅಜ್ಞಸೇರಸುಕ್ **ತತ್ಪುರುಷೇ ತುಲ್ಯಾರ್ಥ**—, (ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ.

**ಓಜಸಾ**—ಉಬ್ಜ ಆರ್ಜವೇ, ಉಬ್ಜೇರ್ಬಲೇಬಲೋಪಶ್ಚ (ಉ.ಸೂ. ೪-೬-೩೧) ಉಬ್ಜ ಆರ್ಜವೇ ಎಂಬುದರ ಮುಂದೆ ಬಲ ಎಂಬ ಅರ್ಥದಲ್ಲಿ ಅಸುನ್ ಬರುವುದು. ಬಕಾರಕ್ಕೆ ಲೋಪವೂ ಬರುವುದು. ಉಜ್ +ಅಸ್, ಲಘೂಪಧಗುಣ ಓಜಸ್. ನಿತ್ಸ್ವರದಿಂದ ಆದ್ಯುದಾತ್ತ. ತೃತೀಯಾಏಕವಚನ ಟಾಪ್ರತ್ಯಯ, ಓಜಸಾ ಎಂದಾಗುವುದು ॥ ೪ ॥

॥ ಸಂಹಿತಾಪಾಠಃ ॥

ಯೇ ಶುಭ್ರಾ ಘೋರವರ್ಪಸಃ ಸುಕ್ಷತ್ರಾಸೋ ರಿಶಾದಸಃ ।
ಮರುದ್ಭಿರಗ್ನ ಆ ಗಹಿ ॥ ೫ ॥

॥ ಪದಪಾಠಃ ॥

ಯೇ । ಶುಭ್ರಾಃ । ಘೋರऽವರ್ಪಸಃ । ಸುऽಕ್ಷತ್ರಾಸಃ । ರಿಶಾದಸಃ ॥
ಮರುತ್ऽಭಿಃ । ಅಗ್ನೇ । ಆ । ಗಹಿ ॥ ೫ ॥

॥ ಸಾಯಣಭಾಷ್ಯಂ ॥

ಯೇ ಮರುತಃ ಶುಭ್ರತ್ವಾದಿಗುಣೋಪೇತಾಸ್ತೈರ್ಮರುದ್ಭಿರಿತ್ಯನ್ವಯಃ । ಶುಭ್ರಾಃ । ಶೋಭನಾ ಘೋರದರ್ವಸ ಉಗ್ರರೂಪಧರಾಃ ಸುಕ್ಷತ್ರಾಸಃ ಶೋಭನಧನೋಪೇತಾ ರಿಶಾದಸೋ ಹಿಂಸಕಾನಾಂ ಭಕ್ಷಕಾಃ । ಮಘಮಿತ್ಯಾದಿಷ್ವಷ್ಟಾವಿಂಶತಿಸಂಖ್ಯಾಕೇಷು ಧನನಾಮಸು ಕ್ಷತ್ರಂ ಭಗ ಇತಿ ಪಠಿತಂ ॥ ಶುಭ್ರಾಃ । ಸ್ಫಾಯಿತಂಚೀತ್ಯಾದಿನಾ ಶುಭೇರೌಣಾದಿಕೋ ರಕ್ಪ್ರತ್ಯಯಃ । ಪ್ರತ್ಯಯಸ್ವರಃ । ಘೋರವರ್ಪಸಃ । ಘೋರಂ ವರ್ಪೋ ಯೇಷಾಂ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಸುಕ್ಷತ್ರಾಸಃ । ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಆದ್ಯುದಾತ್ತಂ ದ್ವ್ಯಚ್ಛಂದಸಿ । ಪಾ. ೬-೨-೧೧೯ । ಇತ್ಯೇವ ತು ನ ಭವತಿ । ಕ್ಷತ್ರಶಬ್ದಸ್ಯಾಂತೋದಾತ್ತತ್ವಾತ್ । ರಿಶಂತಿ ಹಿಂಸಂತೀತಿ ರಿಶಾಃ । ತಾನದಂತೀತಿ ರಿಶಾದಸಃ । ಸರ್ವಧಾತುಭ್ಯೋಽಸುನ್ಪ್ರತ್ಯಯಃ । ನಿತ್ಸ್ವರೇಣೋತ್ತರಪದಮಾದ್ಯುದಾತ್ತಂ । ಕೃದುತ್ತರಪದಪ್ರಕೃತಿಸ್ವರೇಣ ಸ ಏವ ಶಿಷ್ಯತೇ ॥ ೨೬ ॥

॥ ಪ್ರತಿಪದಾರ್ಥ ॥

(ಹೇ) ಅಗ್ನೇ—ಎಲೈ ಅಗ್ನಿಯೇ । ಯೇ—ಯಾವ ಮರುದ್ದೇವತೆಗಳು । ಶುಭ್ರಾಃ—ಶುಭ್ರತ್ವಾದಿ ಗುಣಯುಕ್ತರೋ । ಘೋರವರ್ಪಸಃ—ಉಗ್ರರೂಪವನ್ನು ಧರಿಸಿರುವರೋ । ಸುಕ್ಷತ್ರಾಸಃ—ಉತ್ತಮವಾದ ಧನದಿಂದ ಸಹಿತವಾದವರೋ । ರಿಶಾದಸಃ—ಹಿಂಸೆಮಾಡುವ ಶತ್ರುಗಳನ್ನು ಭಕ್ಷಿಸುವವರೋ (ಧ್ವಂಸಮಾಡುವವರೋ) । (ಅಂತಹ) ಮರುದ್ಭಿಃ—ಮರುದ್ದೇವತೆಗಳಿಂದ ಕೂಡಿ । ಆ ಗಹಿ—ಇಲ್ಲಿಗೆ ಬಾ ॥

॥ ಭಾವಾರ್ಥ ॥

ಎಲೈ ಅಗ್ನಿಯೇ, ಮರುದ್ದೇವತೆಗಳು ಯಾವಾಗಲೂ ಶುಭ್ರರಾಗಿರುವರು; ಉಗ್ರವಾದ ರೂಪದಿಂದ (ವೇಗವಾಗಿ ಬೀಸುವ ಸ್ವಭಾವದಿಂದ) ಕೂಡಿದವರು; ಉತ್ತಮವಾದ ಧನವುಳ್ಳವರು; ಶತ್ರುಹಿಂಸಕರು. ಇಂತಹ ಮರುದ್ದೇವತೆಗಳೊಡಕೂಡಿ ಇಲ್ಲಿಗೆ ಬಾ.

English Translation.

O Agni, come with the Maruths who are brilliant, have frightful forms who are possessors of great wealth and destroyers of the enemies.

॥ ವಿಶೇಷವಿಷಯಗಳು ॥

ಶುಭ್ರಾಃ—ಪ್ರಕಾಶಮಾನರಾದ, ಸ್ವಚ್ಛರಾದ, Brilliant, resplendent, (transparent ?) ಇತ್ಯಾದಿ.

ಘೋರವರ್ಪಸಃ—ಘೋರರೂಪಾಃ ದ್ವಯೋಶ್ಚಾನಯೋಃ ಪರಸ್ಪರವಿರೋಧಿತ್ವಾತ್ ಕಾಲಭೇದೇನ ಯೋಜನಾ। ಶೋಭನಾಃ ಕ್ರೀಡಾಕಾಲೇ । ಘೋರರೂಪಾಃ ಸಂಗ್ರಾಮಕಾಲೇ । ಕ್ರೂರವಾದ ಅಥವಾ ಭಯಂಕರವಾದ ರೂಪವುಳ್ಳವರು, of terrible or frightful forms. ಈ ಋಕ್ಕಿನಲ್ಲಿ ಉಪಯೋಗಿಸಿ

ರುವ **ಶುಭ್ರಾಃ**—ಪ್ರಕಾಶಮಾನರು ಅಥವಾ ಸೌಮ್ಯಗುಣಯುಕ್ತರು ಎಂಬ ಶಬ್ದವೂ, **ಘೋರವರ್ಪಸಃ**—ಭಯಂಕರರೂಪವುಳ್ಳವರು ಎಂಬ ಶಬ್ದವೂ ಪರಸ್ಪರ ವಿರೋಧಾರ್ಥವುಳ್ಳವುಗಳಲ್ಲವೇ ಎಂದರೆ ಕ್ರೀಡಾಕಾಲದಲ್ಲಿ ಸೌಮ್ಯಸ್ವಭಾವದವರೂ ಯುದ್ಧಕಾಲದಲ್ಲಿ ಘೋರರೂಪವನ್ನು ಧರಿಸುವವರೂ ಎಂದರ್ಥವು.

**ಸುಕ್ಷತ್ರಾಸಃ**—ಮಘ ಮೊದಲಾದ ಇಪ್ಪತ್ತೆಂಟು ಧನನಾಮಗಳ ಮಧ್ಯದಲ್ಲಿ ಕ್ಷತ್ರಂ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೯) ಸುಕ್ಷತ್ರಾಸಃ ಎಂದರೆ ಒಳ್ಳೆಯ ಧನವುಳ್ಳವರು ಎಂದರ್ಥವು.

**ರಿಶಾದಸಃ**—ರಿಂಶಂತಿ ಹಿಂಸಂತೀತಿ ರಿಶಾಃ ಶತ್ರವಃ | ತಾನದಂತೀತಿ ರಿಶಾದಸಃ | ಹಿಂಸೆಮಾಡುವ ಶತ್ರುಗಳನ್ನು ಭಕ್ಷಿಸುವ ಎಂದರೆ ನಾಶಮಾಡುವ ಎಂದರ್ಥವು.

|| ವ್ಯಾಕರಣಪ್ರಕ್ರಿಯಾ ||

**ಶುಭ್ರಾಃ**—**ಸ್ಫಾಯಿತಞ್ಚಿ…ಶುಭಿಭ್ಯೋರಕ್** (ಉ. ಸೂ. ೨-೧೭೦) ಎಂಬುದರಿಂದ ಶುಭಧಾತುವಿನ ಮುಂದೆ ಔಣಾದಿಕವಾದ ರಕ್ ಪ್ರತ್ಯಯ, ಪ್ರತ್ಯಯಸ್ವರಬರುವುದು.

**ಘೋರವರ್ಪಸಃ**—**ವೃಞ್‌ಶೀಙ್‌ಭ್ಯಾಂರೂಪಸ್ವಾಙ್ಗಯೋಃಪುಟ್‌ಚ** (ಉ ಸೂ. ೪-೭೪೦) ವೃಞ್ ಸಂಭಕ್ತೌ, ಶೀಙ್ ಸ್ವಪ್ನೇ ಈ ಧಾತುಗಳ ಮುಂದೆ ಕ್ರಮವಾಗಿ ರೂಪ, ಸ್ವಾಙ್ಗ ಈ ಅರ್ಥಗಳು ವಾಚ್ಯವಾದಾಗ ಅಸುನ್ ಪ್ರತ್ಯಯವೂ, ಅದಕ್ಕೆ ಪುಡಾಗಮವೂ ಬರುವುದು ಎಂಬುದರಿಂದ ವೃಧಾತುವಿನ ಮುಂದೆ ಅಸುನ್ ಪ್ರತ್ಯಯವೂ ಅದಕ್ಕೆ ಪುಡಾಗಮವೂ ಬರುವುದು. ವರ್ಪಃ ಎಂದರೆ ರೂಪ ಎಂದು ಅರ್ಥ. ಘೋರಂ ವರ್ಪಃ ಯೇಷಾಂ ತೇ ಘೋರವರ್ಪಸಃ, ಬಹುವ್ರೀಹಿಯಾದ್ದರಿಂದ ಪೂರ್ವಪದಪ್ರಕೃತಿಸ್ವರ, ಘೋರಶಬ್ದ ಅನ್ತೋದಾತ್ತ.

**ಸುಕ್ಷತ್ರಾಸಃ**—ಸುಕ್ಷತ್ರಂ=ಧನಂ ಯೇಷಾಂ ತೇ. ಆಜ್ಜಸೇರಸುಕ್, ಪೂರ್ವಪದಪ್ರಕೃತಿಸ್ವರ ಪ್ರಾಪ್ತವಾದರೆ ಅದನ್ನು ಬಾಧಿಸಿ **ನಞ್‌ಸುಭ್ಯಾಮ್** (ಪಾ.ಸೂ. ೬-೨-೧೭೨) ಎಂಬುದರಿಂದ ಅಂತೋದಾತ್ತ ಬರುವುದು. ಇಲ್ಲಿ ಕ್ಷತ್ರ ಶಬ್ದವು ಸು ಶಬ್ದದ ಮುಂದೆ ಇರುವುದು. ಆದರೂ **ನಞ್‌ಸುಭ್ಯಾಮ್** ಎಂಬುದಕ್ಕೆ ಅಪವಾದವಾದ **ಆದ್ಯುದಾತ್ತಂದ್ವ್ಯಚ್ ಛಂದಸಿ** (ಪಾ. ಸೂ. ೬-೨-೧೧೯) ಎಂಬುದರಿಂದ ಕ್ಷತ್ರಶಬ್ದಕ್ಕೆ ಆದ್ಯುದಾತ್ತ ಬರುವುದಿಲ್ಲ. ಏಕೆಂದರೆ ಕ್ಷತ್ರಶಬ್ದವು ಅಂತೋದಾತ್ತ. ಸುಶಬ್ದದ ಮುಂದೆ ಇರುವ ಪದವು ಆದ್ಯುದಾತ್ತವಾಗಿದ್ದರೆ **ಆದ್ಯುದಾತ್ತಂ ದ್ವ್ಯಚ್ ಛಂದಸಿ** (ಪಾ.ಸೂ. ೬-೨-೧೧೯) ಬಹುವ್ರೀಹಿಸಮಾಸದಲ್ಲಿ ಸುಶಬ್ದದ ಮುಂದೆ ಇರುವ ಆದ್ಯುದಾತ್ತವಾದ ದ್ವ್ಯಚ್ಕವಾದ ಪದವು ಆದ್ಯುದಾತ್ತವಾಗುವುದು ಎಂಬುದು ಬರುವುದು. ದ್ವ್ಯಚ್ಕ ಎಂದರೆ ಎರಡು ಅಚ್ಚನ್ನು ಹೊಂದಿರುವ ಪದ, ಕ್ಷತ್ರಶಬ್ದ ಅಂತೋದಾತ್ತವಾದ್ದರಿಂದ ಆದ್ಯುದಾತ್ತಂದ್ವ್ಯಚ್-, ಎಂಬುದು ಬರುವುದಿಲ್ಲ.

**ರಿಶಾದಸಃ**-ರಿಶ ಹಿಂಸಾಯಾಮ್, ಧಾತು, ರಿಶನ್ತಿ ಹಿಂಸನ್ತೀತಿ ರಿಶಾಃ ರಿಶಾನ್ ಅದನ್ತಿ-ಭಕ್ಷಯನ್ತೀತಿ ರಿಶಾದಸ್. ರಿಶಶಬ್ದೋಪಪದಕವಾದ ಅದ್ ಧಾತುವಿನ ಮುಂದೆ **ಸರ್ವಧಾತುಭ್ಯೋಽಸುನ್** ಎಂಬುದರಿಂದ ಅಸುನ್ ಪ್ರತ್ಯಯ, ನಿತ್ಸ್ವರದಿಂದ ಉತ್ತರಪದವು ಆದ್ಯುದಾತ್ತ, ಸಮಾಸಾನಂತರ **ಗತಿಕಾರಕೋಪಪದಾತ್ಕೃತ್** (ಪಾ.ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರಬರುವುದು. ಆದ್ದರಿಂದ ಉತ್ತರಪದದ ಆದ್ಯುದಾತ್ತವೇ ನಿಲ್ಲುವುದು || ೫ ||

॥ ಸಂಹಿತಾಪಾಠಃ ॥

ಯೇ ನಾಕಸ್ಯಾಧಿ ರೋಚನೇ ದಿವಿ ದೇವಾಸ ಆಸತೇ ।
ಮರುದ್ಭಿರಗ್ನ ಆ ಗಹಿ ॥ ೬ ॥

॥ ಪದಪಾಠಃ ॥

ಯೇ । ನಾಕಸ್ಯ । ಅಧಿ । ರೋಚನೇ । ದಿವಿ । ದೇವಾಸಃ । ಆಸತೇ ।
ಮರುತ್ ಽ ಭಿಃ । ಅಗ್ನೇ । ಆ । ಗಹಿ ॥ ೬ ॥

॥ ಸಾಯಣಭಾಷ್ಯಂ ॥

ಯೇ ಮರುತೋ ನಾಕಸ್ಯಾಧಿ ದುಃಖರಹಿತಸ್ಯ ಸೂರ್ಯಸ್ಯೋಪರಿ ದಿವಿ ದ್ಯುಲೋಕೇ ರೋಚನೇ ದೀಪ್ಯಮಾನೇ ಯೇ ದೇವಾಸಃ ಸ್ವಯಮಪಿ ದೀಪ್ಯಮಾನಾ ಆಸತೇ । ತೈರ್ಮರುದ್ಭಿರಿತ್ಯನ್ವಯಃ ॥ ನಾಕಸ್ಯ । ಕಂ ಸುಖಂ । ತದ್ಯಸ್ಮಿನ್ನಾಸ್ತ್ಯಸಾವಕ ಇತಿ ಬಹುವ್ರೀಹಿಂ ಕೃತ್ವಾ ಪಶ್ಚಾನ್ನಞ್ । ನ ಅಕೋ-ನಾಕ ಇತಿ ನಞ್‌ತತ್ಪುರುಷಃ । ನಲೋಪೋ ನಞಃ । ಪಾ. ೬-೩-೭೩ । ಇತಿ ಲೋಪೋ ನ ಭವತಿ । ನಭ್ರಾಣ್‌ನಪಾದಿತ್ಯಾದಿನಾ । ಪಾ. ೬-೩-೭೫ । ಪ್ರಕೃತಿಭಾವಾತ್ । ತತ್ಪುರುಷೇ ತುಲ್ಯಾರ್ಥೇತ್ಯಾದಿನಾ । ಪಾ.೬-೨-೨। ಅವ್ಯಯಪೂರ್ವಪದಪ್ರಕೃತಿಸ್ವರತ್ವೇನೋದಾತ್ತತ್ವಂ । ಪ್ರಥಮತಸ್ತತ್ಪುರುಷಂ ಕೃತ್ವಾ ಪಶ್ಚಾದ್ಬಹುವ್ರೀಹಾವುತ್ತರಪದಾಂತೋದಾತ್ತತ್ವಂ ಸ್ಯಾತ್ । ಅಧಿಶಬ್ದ ಉಪರ್ಯರ್ಥೇ । ಉಪಸರ್ಗಪ್ರತಿರೂಪಕೋ ನಿಪಾತಃ । ರೋಚನೇ । ರುಚ ದೀಪ್ತೌ । ಅನುದಾತ್ತೇತಶ್ಚ ಹಲಾದೇರಿತಿ ಯುಚ್ । ಚಿತ ಇತ್ಯಂತೋದಾತ್ತತ್ವಂ । ದಿವಿ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ । ದೇವಾಸಃ । ಆಜ್ಜಸೇರಸುಗಿತ್ಯಸುಕ್ । ಆಸತೇ । ಆಸ ಉಪವೇಶನೇ । ಅನುದಾತ್ತೇತ್ವಾದಾತ್ಮನೇಪದಂ । ಝಸ್ಯಾದಾದೇಶಃ । ಅದಿಪ್ರಭೃತಿಭ್ಯಃ ಶಪ ಇತಿ ಶಪೋ ಲುಕ್ । ಅನುದಾತ್ತೇತ್ವಾಲ್ಲಸಾರ್ವಧಾತುಕಾನುದಾತ್ತತ್ವಂ। ಯದ್ವೃತ್ತಯೋಗಾನ್ನ ನಿಘಾತಃ ॥

॥ ಪ್ರತಿಪದಾರ್ಥ ॥

(ಹೇ) ಅಗ್ನೇ—ಎಲೈ ಅಗ್ನಿಯೇ । **ಯೇ ದೇವಾಸಃ**—ಯಾವ ಮರುದ್ದೇವತೆಗಳು । **ನಾಕಸ್ಯ**—ದುಃಖರಹಿತವಾದ ಸೂರ್ಯಮಂಡಲದ । **ಅಧಿ**—ಮೇಲಿರುವ । **ರೋಚನೇ**—ಪ್ರಕಾಶಮಾನವಾದ । **ದಿವಿ**—ಸ್ವರ್ಗಲೋಕದಲ್ಲಿ । **ಆಸತೇ**—(ಕುಳಿತು) ಇರುವರೋ । (ಅಂತಹ) **ಮರುದ್ಭಿಃ**—ಮರುದ್ದೇವತೆಗಳಿಂದ ಯುಕ್ತನಾಗಿ । **ಆ ಗಹಿ**—ಇಲ್ಲಿಗೆ ಬಾ ॥

॥ ಭಾವಾರ್ಥ ॥

ಎಲೈ ಅಗ್ನಿಯೇ, ದುಃಖರಹಿತವಾದ ಸೂರ್ಯಮಂಡಲದ ಮೇಲುಭಾಗದಲ್ಲಿರುವ ಪ್ರಕಾಶಮಾನವಾದ ಸ್ವರ್ಗದಲ್ಲಿರುವ ಮರುದ್ದೇವತೆಗಳೊಡನೆ ಇಲ್ಲಿಗೆ ಬಾ ॥

English Translation.

O Agni, come hither with those divine Maruths who sit in resplendent heaven above the sky.

॥ ವಿಶೇಷವಿಷಯಗಳು ॥

ನಾಕಸ್ಯ—ನಾಕ ಎಂದರೆ ಸ್ವರ್ಗವೆಂದು ಅರ್ಥವಿದ್ದರೂ ಈ ಋಕ್ಕಿನಲ್ಲಿ ದಿವಿ ಎಂಬ ಸ್ವರ್ಗವಾಚಕವಾದ ಮತ್ತೊಂದು ಶಬ್ದವಿರುವುದರಿಂದ ಭಾಷ್ಯಕಾರರು ನಾಕಶಬ್ದಕ್ಕೆ ಅವಯವಾರ್ಥನಿಷ್ಪತ್ತಿ ಮಾಡಿರುವರು. ಕಂ ಸುಖಂ । ತದ[illegible]ಸ್ಯಾಸಾವಕಃ ನ ಅಕಃ ನಾಕಃ ಕಂ ಎಂದರೆ ಸುಖವು. ಅದಿಲ್ಲದಿರುವುದಕ್ಕೆ ಅಕಃ—ದುಃಖವು [illegible] ಪುನಃ ಅಕಃ (ದುಃಖ)ವಿಲ್ಲದಿರುವುದಕ್ಕೆ ನಾಕಃ ಎಂದು ಹೆಸರು ಸುಖವಿರುವ ಸ್ಥಾನ, ಸ್ವರ್ಗ ವ[illegible]ಯವು. ಇಲ್ಲಿ ನಾಕಃ ಎಂದರೆ ಸೂರ್ಯಮಂಡಲವೆಂದು ಹೇಳಿ,

ಅಧಿ—ಎಂಬ ಶಬ್ದಕ್ಕೆ ಅದಕ್ಕೂ[illegible]ಮೇಲಿರುವ ಎಂದರ್ಥಮಾಡಿರುವರು.

॥ ವ್ಯಾಕರಣಪ್ರಕ್ರಿಯಾ ॥

ನಾಕಸ್ಯ—ಕಮ್ ಎಂದರೆ ಸುಖ. ನ ವಿದ್ಯತೇ ಕಂ, ಸುಖಂ ಯಸ್ಮಿನ್ ಸಃ ಎಂದು ಬಹುವ್ರೀಹಿ. ನಲೋಪೋನಞಃ (ಪಾ.ಸೂ. ೬-೩-೭೩) ಉತ್ತರಪದವು ಪರದಲ್ಲಿರುವಾಗ ನಞ್‌ನ ನಕಾರಕ್ಕೆ ಲೋಪ ಬರುವುದು ಎಂಬುದರಿಂದ ನ್‌ಗೆ ಲೋಪ, ಅಕ ಎಂದಾಗುವುದು. ಉತ್ತರಪದ ಶಬ್ದವು ಸಮಾಸದ ಚರಮಾವಯವದಲ್ಲಿ ರೂಢ. ಈಗ ನ-ಅಕಃ ಎಂದು ತತ್ಪುರುಷ. ನಭ್ರಾಣ್ನಪಾನ್ನವೇದಾನಾಸತ್ಯಾನಮುಚಿನಕುಲನಖನಪುಂಸಕನಕ್ಷತ್ರನಾಕೇಷುಪ್ರಕೃತ್ಯಾ (ಪಾ. ಸೂ. ೬-೩-೭೫) ಈ ಸಮಸ್ತ ಪದಗಳ ನಞ್‌ಗೆ ಪ್ರಕೃತಿಭಾವ ಬರುವುದು ಎಂದು ಪ್ರಕೃತಿಭಾವ ಬರುವುದರಿಂದ ನಲೋಪೋನಞಃ ಎಂಬುದರಿಂದ ನಞ್‌ನ ನಕಾರಕ್ಕೆ ಲೋಪ ಬರುವುದಿಲ್ಲ. ನಞ್ ನಿಪಾತವಾದ್ದರಿಂದ ನಿಪಾತಾ ಆದ್ಯುದಾತ್ತಾಃ ಎಂಬುದರಿಂದ ಆದ್ಯುದಾತ್ತ, ನ-ಅಕಃ, ನಾಕಃ ಎಂದು ತತ್ಪುರುಷಸಮಾಸ ಬಂದನಂತರ ತತ್ಪುರುಷೇತುಲ್ಯಾರ್ಥ— (ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರಬರುವುದು. ಇಲ್ಲಿ ಮೊದಲು ನಕಮ್, ಅಕಮ್ ಎಂದು ತತ್ಪುರುಷವನ್ನುಮಾಡಿ ನಂತರ ನ ವಿದ್ಯತೇ ಅಕಂ ಸುಖಾಭಾವಃ ಯಸ್ಮಿನ್ ಸಃ ಎಂದು ಬಹುವ್ರೀಹಿಯನ್ನುಮಾಡಕೂಡದು. ಹೀಗೆ ಮಾಡಿದರೆ ನಞ್ಸುಭ್ಯಾಮ್ (ಪಾ.ಸೂ. ೬-೨-೧೭೨) ಎಂಬುದರಿಂದ ಉತ್ತರಪದವಾದ ಅಕ ಎಂಬುದಕ್ಕೆ ಅಂತೋದಾತ್ತ ಬರಬೇಕಾಗುವುದು.

ಅಧಿ—ಇದು ಉಪರಿ ಎಂಬ ಅರ್ಥದಲ್ಲಿರುವುದು. ಉಪಸರ್ಗಪ್ರತಿರೂಪಕವಾದ ನಿಪಾತವಾದ್ದರಿಂದ ಆದ್ಯುದಾತ್ತ, ನಾಕಸ್ಯ ಎಂಬಲ್ಲಿ ಸ್ಯ ಎಂಬುದರ ಅಕಾರ ಸುಪ್‌ಸ್ವರದಿಂದ ಅನುದಾತ್ತ. ಸವರ್ಣದೀರ್ಘಏಕಾದೇಶ

ದಿಂದ ಬಂದ ಆಕಾರವು ಏಕಾದೇಶಉದಾತ್ತೇನ ಎಂಬುದರಿಂದ ಉದಾತ್ತ. ಈ ಉದಾತ್ತ ಪರದಲ್ಲಿರುವುದರಿಂದ ಇದರ ಹಿಂದಿನ ಕ ಎಂಬ ಅನುದಾತ್ತಕ್ಕೆ **ಉದಾತ್ತಸ್ವರಿತಪರಸ್ಯ—**, ಎಂಬುದರಿಂದ ಅನುದಾತ್ತಸ್ವರ ಬರುವುದು.

**ರೋಚನೇ**—ರುಚ ದೀಪ್ತೌ, ಧಾತು. ಅನುದಾತ್ತೇತ್ತು. **ಅನುದಾತ್ತೇತಶ್ಚ ಹಲಾದೇಃ** (ಪಾ. ಸೂ. ೩-೨-೧೪೯) ಅನುದಾತ್ತೇತ್ತೂ, ಹಲಾದಿಯಾದ ಅಕರ್ಮಕವೂ ಆದ ಧಾತುವಿನ ಮುಂದೆ ಯುಚ್ ಪ್ರತ್ಯಯ ಬರುವುದು ಎಂಬುದರಿಂದ ಯುಚ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಯುಗೆ ಅನ ಆದೇಶ, ಲಘೂಪಧಗುಣ, ರೋಚನ. ಪ್ರತ್ಯಯವು ಚಿತ್ತು. ಆದ್ದರಿಂದ **ಚಿತಃ** (ಪಾ. ಸೂ ೬-೧-೧೬೩) ಎಂಬುದರಿಂದ ಅಂತೋದಾತ್ತ, ಸಪ್ತಮ್ಯೇಕವಚನ ರೋಚನೇ

**ದಿವಿ—ಊಡಿದಮ್ ಪ್ರದಾದ್ಯಪ್ಪುಮ್‌ರೈದ್ಯುಭ್ಯಃ**—(ಪಾ. ಸೂ. ೬-೧-೧೭೧) ಎಂಬುದರಿಂದ ದಿವ್ ಎಂಬುದರ ಮುಂದೆ ಇರುವ ವಿಭಕ್ತಿಯು ಉದಾತ್ತ.

**ದೇವಾಸಃ—ಆಜ್ಜಸೇರಸುಕ್** ಎಂಬುದರಿಂದ ಜಸ್‌ಗೆ ಅಸುಗಾಗಮ.

**ಆಸತೇ**—ಆಸ ಉಪವೇಶನೇ, **ಅನುದಾತ್ತೇತ್**. ಆದ್ದರಿಂದ **ಅನುದಾತ್ತಙಿತ ಆತ್ಮನೇಪದಮ್** (ಪಾ ಸೂ ೧-೩-೧೨) ಎಂಬುದರಿಂದ ಆತ್ಮನೇಪದ, ಲಟ್, ಪ್ರಥಮಪುರುಷಬಹುವಚನ ಝ. **ಕರ್ತರಿಶಪ್** ಎಂಬುದರಿಂದ ಶಪ್ ವಿಕರಣ. **ಅದಿಪ್ರಭೃತಿಭ್ಯಃ ಶಪಃ** (ಪಾ. ಸೂ. ೨-೪-೭೨) ಎಂಬುದರಿಂದ ಶಪ್‌ಗೆ ಲುಕ್, ಝ್‌ಗೆ **ಆತ್ಮನೇಪದೇಷ್ವನತಃ** (ಪಾ- ೭-೧-೫) ಅಕಾರದ ಇಲ್ಲದ ಆತ್ಮನೇಪದ ಪ್ರತ್ಯಯದ ಝ್‌ಗೆ ಅತ್ ಆದೇಶ ಬರುವುದು ಎಂಬುದರಿಂದ ಅತ್ ಆದೇಶ, ಆಸ್+ಅತ. **ಟಿತ ಆತ್ಮನೇಪದಾನಾಂ ಟೇರೇ** (ಪಾ. ಸೂ. ೩-೪-೭೯) ಎಂಬುದರಿಂದ ಟಿಯ ಅಕಾರಕ್ಕೆ ಏಕಾರಾದೇಶ, ಆಸತೇ ಎಂದಾಗುವುದು. ಯೇ ಎಂಬ ಯದ್ವೃತ್ತ ಪದದ ಮುಂದೆ ಇರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ವರ್ತತೇ ಅಸ್ಮಿನ್ನಿತಿ ವೃತ್ತಮ್ ವರ್ತನಾಧಿಕರಣಮಿತ್ಯರ್ಥಃ, ಯದಃ, ವೃತ್ತಮ್. ಯಚ್ಛಬ್ದದ ಇರುವಿಕೆಗೆ ಅಧಿಕರಣವಾದ ಪದ, ಏವಂಚ ಯಾವ ಪದದಲ್ಲಿ ಯಚ್ಛಬ್ದವಿದೆಯೋ ಅಂತಹ ಪದದ ಮುಂದೆ ಇರುವ ತಿಙಂತವು ಅನುದಾತ್ತವಾಗುವುದಿಲ್ಲ. **ಯದ್ವೃತ್ತಾತ್** ಎಂದು ಪಂಚಮೀನಿರ್ದೇಶವಿರುವುದರಿಂದ, ಯಚ್ಛಬ್ದಘಟಿತಪದಾವ್ಯವಹಿತಪರಂ ತಿಙಂತಂ ನಾನುದಾತ್ತಂ ಎಂದು ಅರ್ಥವು. **ತಸ್ಮಾದಿತ್ಯುತ್ತರಸ್ಯ**, (ಪಾ. ಸೂ. ೧-೧-೬೭) ಎಂಬ ಪರಿಭಾಷೆಯಿಂದ ಏರ್ಪಡುವುದು. ಆದರೂ **ಪೂಜನಾತ್ಪೂಜಿತಮ್**—, (ಪಾ ಸೂ ೮-೧-೧-೩೭) ಎಂಬಲ್ಲಿ ಪುನಃ ಪೂಜಿತಗ್ರಹಣವಿರುವುದರಿಂದ **ಅತ್ರ** ಪ್ರಕರಣೇ ಪಂಚಮೀನಿರ್ದೇಶೇಽಪಿ ನಾನನ್ತರ್ಯಮಿಷ್ಯತೇ, ಎಂದು ಜ್ಞಾಪಿತವಾಗುವುದು. ಆದ್ದರಿಂದ **ತಸ್ಮಾದಿತ್ಯುತ್ತರಸ್ಯ** ಎಂಬುದು ಇಲ್ಲಿ ಬರುವುದಿಲ್ಲ. ಮಧ್ಯೆ ವ್ಯವಧಾನವಿದ್ದರೂ ಯದ್ವೃತ್ತಾನ್ನಿತ್ಯಮ್ ಎಂಬುದರಿಂದ ನಿಷೇಧಬರುವುದು ಆದ್ದರಿಂದ ಸರ್ವಾನುದಾತ್ತ ಬರುವುದಿಲ್ಲ. ಆಸ ಧಾತುವು ಅನುದಾತ್ತೇತ್ತಾದುದರಿಂದ **ತಾಸ್ಯನುದಾತ್ತೇತ್**—, (ಪಾ. ಸೂ. ೬-೧ ೧೮೬) ಇತ್ಯಾದಿ ಸೂತ್ರದಿಂದ ಲಸ್ಥಾನಿಕಸಾರ್ವಧಾತುಕವಾದ 'ಅತೇ' ಗೆ ಅನುದಾತ್ತಬರುವುದು. || ೬ ||

॥ ಸಂಹಿತಾಪಾಠಃ ॥

ಯ ಈಂಖಯಂತಿ ಪರ್ವತಾನ್ ತಿರಃ ಸಮುದ್ರಮರ್ಣವಂ ।

ಮರುದ್ಭಿರಗ್ನ ಆ ಗಹಿ ॥ ೭ ॥

॥ ಪದಪಾಠಃ ॥

ಯೇ । ಈಂಖಯಂತಿ । ಪರ್ವತಾನ್ । ತಿರಃ । ಸಮುದ್ರಂ । ಅರ್ಣವಂ ॥

ಮರುತ್ ಽ ಭಿಃ । ಅಗ್ನೇ । ಆ । ಗಹಿ ॥ ೭ ॥

॥ ಸಾಯಣಭಾಷ್ಯಂ ॥

ಯೇ ಮರುತಃ ಪರ್ವತಾನ್ಮೇಘಾನೀಂಖಯಂತಿ ಚಾಲಯಂತಿ ತಥಾರ್ಣವಮುದ-ಕಯುಕ್ತಂ। ಸಮುದ್ರಂ ತಿರಃ ಕುರ್ವಂತೀತಿ ಶೇಷಃ । ನಿಶ್ಚಲಸ್ಯ ಜಲಸ್ಯ ತರಂಗಾದ್ಯುತ್ಪತ್ತಿರೇವ ಚಾಲನಂ ತಿರಸ್ಕಾರಃ । ತೈರ್ಮರುದ್ಭಿರಿತ್ಯನ್ವಯಃ ॥ ಈಂಖಯಂತಿ । ಉಖ ಉಖೀತ್ಯಾದಾವೀಖಿರ್ಗತ್ಯರ್ಥಃ । ಹೇತುಮತಿ ಚೇತಿ ಣಿಚ್ । ಇದಿತೋ ನುಮ್ ಧಾತೋರಿತಿ ನುಮ್ । ಣಿಜಂತಧಾತೋಶ್ಚಿತ ಇತ್ಯಂತೋ-ದಾತ್ತತ್ವಂ । ಶಪಃ ಪಿತ್ತ್ವಾದನುದಾತ್ತತ್ವಂ । ತಿಙಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರ ಏವ ಶಿಷ್ಯತೇ । ಪರ್ವತಾನ್ । ಪೂರ್ವ ಪರ್ವ ಮರ್ವ ಪೂರಣೇ । ಔಣಾದಿಕೋಽತನ್ । ಪ್ರತ್ಯಯಸ್ವರಃ ॥

॥ ಪ್ರತಿಪದಾರ್ಥ ॥

(ಹೇ) ಅಗ್ನೇ—ಎಲೈ ಅಗ್ನಿಯೇ । ಯೇ—ಯಾವ ಮರುದ್ದೇವತೆಗಳು । ಪರ್ವತಾನ್—ಮೇಘಗಳನ್ನು । ಈಂಖಯಂತಿ—ಚಲಿಸುವಂತೆ ಮಾಡುವರೋ । ಅರ್ಣವಂ—ನೀರಿನಿಂದ ಕೂಡಿದ । ಸಮುದ್ರಂ—ಸಮುದ್ರವನ್ನು । ತಿರಃ—ಅಲ್ಲೋಲಕಲ್ಲೋಲವಾಗುವಂತೆ ಮಾಡುವರೋ । (ಅಂತಹ) ಮರುದ್ಭಿಃ—ಮರುದ್ದೇವತೆಗಳೊಡನೆ । ಆ ಗಹಿ—ಇಲ್ಲಿಗೆ ಬಾ ॥

॥ ಭಾವಾರ್ಥ ॥

ಎಲೈ ಅಗ್ನಿಯೇ, ಮರುದ್ದೇವತೆಗಳು ಮೇಘಗಳನ್ನು ಕದಲಿಸುವ ಸಾಮರ್ಥ್ಯವುಳ್ಳವರು; ಅಗಾಧವಾದ ನೀರಿನಿಂದ ಕೂಡಿದ ಮಹಾ ಸಮುದ್ರವನ್ನು ಅಲ್ಲೋಲಕಲ್ಲೋಲ ಮಾಡುವವರು. ಇಂತಹ ಮರುದ್ದೇವತೆಗಳೊಡನೆ ಕೂಡಿ ಇಲ್ಲಿಗೆ ಬಾ.

English Translation.

O Agni, come hither with Maruths who scatter the clouds and agitate the sea (with waves).

॥ ವಿಶೇಷವಿಷಯಗಳು ॥

**ಪರ್ವತಾನ್—ಮೇಘಾನ್** | ಅದ್ರಿಃ ಮೊದಲಾದ ಮೂವತ್ತು ಮೇಘವಾಚಕಶಬ್ದಗಳ ಮಧ್ಯದಲ್ಲಿ ಪರ್ವತಶಬ್ದವು ಪಠಿತವಾಗಿರುವುದರಿಂದ (ನಿ. ೨-೩೧) ಪರ್ವತಶಬ್ದಕ್ಕೆ ಇಲ್ಲಿ ಮೇಘವೆಂದರ್ಥವು. ಸ್ಕಂದ ಸ್ವಾಮಿಯು ಪರ್ವತಶಬ್ದಕ್ಕೆ, ಪರ್ವತ, ಮೇಘ ಎಂಬ ಎರಡು ಅರ್ಥಗಳನ್ನು ಹೇಳಿರುವರು. ಗಾಳಿಯು ಎಷ್ಟೇ ತೀವ್ರವಾಗಿ ಬೀಸಿದರೂ ಪರ್ವತವನ್ನು ಕದಲಿಸುವುದು ಅಸಂಭವವಾದುದರಿಂದ ಇಲ್ಲಿ ಮೇಘವೆಂಬ ಅರ್ಥವನ್ನೇ ಹೇಳುವುದು ಯುಕ್ತವಾಗಿರುವುದು.

**ತಿರಃ—ತಿರಸ್ಕುರ್ವಂತಿ**--ಇಲ್ಲಿ ಕುರ್ವಂತಿ ಎಂಬ ಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ತಿರಸ್ಕಾರಮಾಡುವುದು ಎಂದರೆ ಸಮುದ್ರದಲ್ಲಿ ಅಲೆಗಳು ಏಳುವಂತೆ ವೇಗವಾಗಿ ಬೀಸಿ ಸಮುದ್ರವನ್ನು ಅಲ್ಲೋಲ ಕಲ್ಲೋಲಮಾಡುವುದು.

**ಅರ್ಣವಂ—ಅರ್ಣಃ** ಎಂದರೆ ಉದಕವು. (ನಿ. ೨-೨೪). ಅರ್ಣವಂ ಎಂದರೆ ಉದಕವುಳ್ಳದ್ದು ಎಂದರೆ ಸಮುದ್ರವು ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಈಙ್ಖಯನ್ತಿ**—ಉಖಉಖಿ........ಗತ್ಯರ್ಥಾಃ ಎಂಬ ದಂಡಕದಲ್ಲಿ ಈಖಿ ಧಾತುವು ಸೇರಿದೆ. ಅದು ಇದಿತ್ತು. ಆದ್ದರಿಂದ **ಇದಿತೋನುಮ್‌ಧಾತೋಃ** (ಪಾ.ಸೂ. ೭-೧-೫೮) ಎಂಬುದರಿಂದ ನುಮಾಗಮ **ಈನ್‌ಖ್.** ನಶ್ಚಾಪದಾಂತಸ್ಯ ಝಲಿ (ಪಾ ಸೂ. ೮-೩-೨೪) ಎಂಬುದರಿಂದ ನಕಾರಕ್ಕೆ ಅನುಸ್ವಾರ. **ಅನುಸ್ವಾರಸ್ಯಯಯಿ-ಪರಸವರ್ಣಃ** (ಪಾ. ಸೂ. ೮-೪-೫೮) ಎಂಬುದರಿಂದ ಪರಸವರ್ಣ ಈಙ್ಖ್ ಎಂದಾಯ್ತು. ಪರ್ವತಾಃ **ಈಙ್ಖನ್ತಿ,** ಪರ್ವತಗಳು ಚಲಿಸುತ್ತವೆ. ಈಙ್ಖತಃ ಪರ್ವತಾನ್ ಪ್ರೇರಯನ್ತಿ ಮರುತಃ, ಚಲಿಸತಕ್ಕ ಪರ್ವತಗಳನ್ನು ಪ್ರೇರಿಸುವುವು ಮರುತ್ತುಗಳು. ಆದ್ದರಿಂದ ಮರುತ್ತುಗಳು ಪ್ರಯೋಜಕಕರ್ತೃಗಳು. ಇವಕ್ಕೆ ಹೇತುಸಂಜ್ಞೆಯೂ ಇದೆ. **ತತ್ಪ್ರಯೋಜಕೋಹೇತುಶ್ಚ** (ಪಾ.ಸೂ. ೧-೪-೫೫) ತಸ್ಯಪ್ರಯೋಜಕಃ ಹೇತುಸಂಜ್ಞಃ ಕರ್ತೃಸಂಜ್ಞಶ್ಚ ಸ್ಯಾತ್ | ಕರ್ತೃವಿಗೆ ಯಾವುದು ಪ್ರೇರಕವೋ ಅದಕ್ಕೆ ಹೇತುಸಂಜ್ಞೆಯೂ ಕರ್ತೃಸಂಜ್ಞೆಯೂ ಬರುವುದೆಂದು ಅರ್ಥ. ಏವಂಚ ಈಙ್ಖ್‌ಧಾತುನಿರೂಪಿತಕರ್ತೃಗಳಾದ ಪರ್ವತಗಳ ಪ್ರೇರಕಗಳಾದ ಮರುತ್ತುಗಳಿಗೆ ಕರ್ತೃ ಸಂಜ್ಞೆಯೂ ಹೇತುಸಂಜ್ಞೆಯೂ ಇರುವುದು. ಪ್ರಯೋಜಕಗತವಾದ ವ್ಯಾಪಾರಕ್ಕೆ ಹೇತುಮಾನ್ ಎನ್ನುವರು. ಹೇತುಃ ಅಸ್ಮಿನ್ ಅಸ್ತೀತಿ ಹೇತುಮಾನ್, ಹೇತುನಿಷ್ಠ ಅಧಿಕರಣತಾನಿರೂಪಿತ ಆಧೇಯತಾಶ್ರಯಃ ವ್ಯಾಪಾರಃ | ಹೇತುವಿನಲ್ಲಿರತಕ್ಕ ವ್ಯಾಪಾರ ಎಂದು ಹೇತುಮಾನ್ ಎಂಬದಕ್ಕೆ ಅರ್ಥ. ಈ ವ್ಯಾಪಾರವನ್ನು ವಿವಕ್ಷಿಸಿದಾಗ **ಹೇತುಮತಿಚ** (ಪಾ.ಸೂ. ೩-೧-೨೬) ಪ್ರಯೋಜಕವ್ಯಾಪಾರವಾದ ಪ್ರೇಷಣಾದ್ಯರ್ಥದಲ್ಲಿ ಧಾತುವಿನ ಮುಂದೆ ಣಿಚ್ ಪ್ರತ್ಯಯಬರುವುದು ಎಂಬುದರಿಂದ ಣಿಚ್ ಪ್ರತ್ಯಯವು ಧಾತುವಿನ ಮುಂದೆ ಬರುವುದು. **ಈಙ್ಖ+ಇ,**

ಣಿಚ್ ಪ್ರತ್ಯಯ ಚಿತ್, ಆದ್ದರಿಂದ ಈಙ್ಖಿ ಎಂಬುದು ಚಿತಃ ಎಂಬುದರಿಂದ ಅಂತೋದಾತ್ತ, ಇದರ ಮುಂದೆ ಲಟ್‌ಝಿ ಪ್ರತ್ಯಯ. ಝೋಽನ್ತಃ ಎಂಬುದರಿಂದ ಝಕಾರಕ್ಕೆ ಅನ್ತಾದೇಶ. ಕರ್ತರಿಶಪ್ ಈಙ್ಖ್+ಅ+ಅನ್ತಿ ಗುಣ, ಅಯಾದೇಶ, ಪರರೂಪ ಈಙ್ಖಯನ್ತಿ ಎಂದಾಗುವುದು, ಶಪ್ ಪಿತ್ತಾದ್ದರಿಂದ ಅನುದಾತ್ತ. ಝಿಯು ಅದು ಪದೇಶವಾದ ಶಪ್‌ನ ಮುಂದೆ ಇರುವುದರಿಂದ ತಾಸ್ಯನುದಾತ್ತೇನ್ಙಿದದುಪದೇಶಾತ್—, ಎಂಬುದರಿಂದ ಅನುದಾತ್ತ. ಧಾತುಸ್ವರವೇ ಉಳಿಯುವುದು.

ಪರ್ವತಾನ್—(ಪೂರ್ವ) ಪರ್ವ, ಮರ್ವ, ಪೂರಣೇ ಔಣಾದಿಕವಾದ ಅತನ್ ಪ್ರತ್ಯಯ ಬರುವುದು. ಪ್ರತ್ಯಯ ನಿತ್ತಾದ್ದರಿಂದ ಞ್ನಿತ್ಯಾದಿರ್ನಿತ್ಯಮ್ ಎಂಬುದರಿಂದ, ಪರ್ವತಶಬ್ದ ಆದ್ಯುದಾತ್ತವಾಗುವುದು ॥೭॥

॥ ಸಂಹಿತಾಪಾಠಃ ॥

ಆ ಯೇ ತನ್ವಂತಿ ರಶ್ಮಿಭಿಸ್ತಿರಃ ಸಮುದ್ರಮೋಜಸಾ ।
ಮರುದ್ಭಿರಗ್ನ ಆ ಗಹಿ ॥ ೮ ॥

॥ ಪದಪಾಠಃ ॥

ಆ । ಯೇ । ತನ್ವಂತಿ । ರಶ್ಮಿಽಭಿಃ । ತಿರಃ । ಸಮುದ್ರಂ । ಓಜಸಾ ॥
ಮರುತ್ಽಭಿಃ । ಅಗ್ನೇ । ಆ । ಗಹಿ ॥ ೮ ॥

॥ ಸಾಯಣಭಾಷ್ಯಂ ॥

ಯೇ ಮರುತೋ ರಶ್ಮಿಭಿಃ ಸೂರ್ಯಕಿರಣೈಃ ಸಹಾ ತನ್ವಂತಿ ಆಪ್ನುವಂತಿ । ಆಕಾಶಮಿತಿ ಶೇಷಃ । ಕಿಂಚ ಓಜಸಾ । ಸ್ವಕೀಯಬಲೇನ ಸಮುದ್ರಂ ತಿರಸ್ಕುರ್ವಂತಿ । ತೈರ್ಮರುದ್ಭಿರಿತ್ಯನ್ವಯಃ ॥ ತನ್ವಂತಿ । ತನು ವಿಸ್ತಾರೇ । ಲಟೋ ಝೋಽಂತಃ । ತನಾದಿಕೃಞ್ಭ್ಯ ಉಃ । ಪಾ. ೩-೧-೭೯ । ಸತಿ ಶಿಷ್ಟಸ್ವರಬಲೀಯಸ್ತ್ವಮನ್ಯತ್ರ ವಿಕರಣೇಭ್ಯ ಇತಿ ತಿಙ ಏವಾದ್ಯುದಾತ್ತತ್ವಂ । ಸಮುದ್ರಂ ಉಂದೀ ಕ್ಲೇದನೇ । ಸ್ಫಾಯಿತಂಚೀತಿ ರಕ್ । ಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

(ಹೇ) ಅಗ್ನೇ—ಎಲೈ ಅಗ್ನಿಯೇ । ಯೇ—ಯಾವ ಮರುದ್ದೇವತೆಗಳು । ರಶ್ಮಿಭಿಃ—ಸೂರ್ಯನ ಕಿರಣಗಳಿಂದ ಸಹಿತರಾಗಿ । (ಆಕಾಶವನ್ನು)ಆ ತನ್ವಂತಿ—ಎಲ್ಲೆಲ್ಲಿಯೂ ವ್ಯಾಪಿಸುವರೋ ।(ಮತ್ತು) ಓಜಸಾ—ತಮ್ಮ ಸಾಮರ್ಥ್ಯದಿಂದ । ಸಮುದ್ರಂ—ಸಮುದ್ರವನ್ನು । ತಿರಃ—ಅಲ್ಲೋಲಕಲ್ಲೋಲ ಮಾಡುವರೋ ।(ಅಂತಹ) ಮರುದ್ಭಿಃ—ಮರುದ್ದೇವತೆಗಳೊಡನೆ । ಆ ಗಹಿ—ಇಲ್ಲಿಗೆ ಬಾ ।

|| ಭಾವಾರ್ಥ ||

ಎಲೈ ಅಗ್ನಿಯೇ, ಸೂರ್ಯನ ಕಿರಣಗಳಿಂದ ಕೂಡಿ ಆಕಾಶವೆಲ್ಲವನ್ನೂ ವ್ಯಾಪಿಸಿರುವವರೂ ಸಮುದ್ರವನ್ನು ತಮ್ಮ ಬಲದಿಂದ ಅಲ್ಲೋಲಕಲ್ಲೋಲವಮಾಡುವವರೂ ಆದ ಮರುದ್ದೇವತೆಗಳೊಡನೆ ಇಲ್ಲಿಗೆ ಬಾ.

Eng. Translation

O Agni, come hither with the Maruths who spread all over the sky with the rays of the Sun and with their strength agitate the ocean.

|| ವಿಶೇಷವಿಷಯಗಳು ||

**ರಶ್ಮಿಭಿಃ ಆ ತನ್ವಂತಿ**—ಸೂರ್ಯರಶ್ಮಿಯಿಂದ ಸಹಿತವಾಗಿ ಆಕಾಶವನ್ನು ವ್ಯಾಪಿಸುವುದು ಎಂದರೆ ಸೂರ್ಯರಶ್ಮಿಯು ಅಂತರಿಕ್ಷವೆಲ್ಲವನ್ನು ಕ್ಷಣಮಾತ್ರದಲ್ಲಿ ವ್ಯಾಪಿಸುವಂತೆ ಗಾಳಿಯೂ ಸಹ ಅಂತರಿಕ್ಷವನ್ನು ಅಥವಾ ಆಕಾಶವನ್ನು ವ್ಯಾಪಿಸುವುದೆಂದರ್ಥವು.

**ಓಜಸಾ**—ಎಂದರೆ ಗಾಳಿಯು ವೇಗವಾಗಿ ಬೀಸುವುದರಿಂದ ಸಮುದ್ರದಲ್ಲಿ ದೊಡ್ಡ ದೊಡ್ಡ ಅಲೆಗಳು ಏಳುವವು ಎಂದಭಿಪ್ರಾಯವು.

|| ವ್ಯಾಕರಣಪ್ರಕ್ರಿಯಾ ||

**ತನ್ವನ್ತಿ**—ತನು ವಿಸ್ತಾರೇ, ಧಾತು, ಇದರ ಮುಂದೆ **ವರ್ತಮಾನೇಲಟ್** (ಪಾ. ಸೂ. ೩-೨-೧೨೩) ಎಂಬುದರಿಂದ ಲಟ್ ಪ್ರಥಮಪುರುಷ ಬಹುವಚನ ಝಿಪ್ರತ್ಯಯ. **ಝೋನ್ತಃ** (ಪಾ. ಸೂ. ೭-೧-೩ ) ಎಂಬುದರಿಂದ ಝುಗೆ ಅನ್ತ್ ಆದೇಶ- ತನ್+ಅನ್ತಿ. **ತನಾದಿಕೃಞ್ಭ್ಯಃಉಃ** (ಪಾ. ಸೂ. ೩-೧-೭೯) ತನಾದಿಗಣಪಠಿತವಾದ ಧಾತುಗಳ ಮುಂದೆಯೂ, ಕೃಞ್ ಧಾತುವಿನ ಮುಂದೆಯೂ ಸಹ ಕರ್ತ್ರರ್ಥಕಸಾರ್ವಧಾತುಕ ಪರದಲ್ಲಿರುವಾಗ ಉಪ್ರತ್ಯಯ ಬರುವುದು ಎಂಬುದರಿಂದ ತನಾದಿಗಣಪಠಿತವಾದ ತನ್ ಧಾತುವಿನ ಮುಂದೆ ಉಪ್ರತ್ಯಯ ಬರುವುದು. ತನ್+ಉ+ಅನ್ತಿ **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಉಕಾರಕ್ಕೆ ಗುಣ ಓಕಾರ ಪ್ರಾಪ್ತವಾದರೆ **ಸಾರ್ವಧಾತುಕಮಪಿತ್** ( ಪಾ. ಸೂ. ೧-೨-೪ ) ಎಂಬುದರಿಂದ ಸಾರ್ವಧಾತುವಾದ ಝಿ, ಯುಕ್ಕಿತವಾಗುವುದರಿಂದ **ಕ್ಙಿತಿಚ** (ಪಾ. ಸೂ. ೧-೧-೫) ಎಂಬುದರಿಂದ ಗುಣಕ್ಕೆ ನಿಷೇಧ ಬರುವುದು. ಆದ್ದರಿಂದ ಗುಣ ಬರುವುದಿಲ್ಲ. **ಇಕೋಯಣಚಿ** (ಪಾ. ಸೂ. ೬-೧-೭೭ ) ಎಂಬುದರಿಂದ ಉಕಾರಕ್ಕೆ ಯಣಾದೇಶದಿಂದ ವಕಾರ ಬರುವುದು, ತನ್ವನ್ತಿ, ಎಂದಾಗುವುದು. ಉ ಪ್ರತ್ಯಯಸ್ವರವು ಮಿಕ್ಕವುಗಳಿಗೆ ಸ್ವರವು ಉತ್ಪನ್ನವಾದ ಮೇಲೆ ವಿಧಿ ಶಾಸ್ತ್ರದಿಂದ ಬರುವುದು. ಆದ್ದರಿಂದ ಯದ್ಯಪಿ ಸತಿಶಿಷ್ಟ ಆದರೂ **ಸತಿಶಿಷ್ಟಸ್ವರಬಲೀಯಸ್ತ್ವಮನ್ಯತ್ರವಿಕರಣೇಭ್ಯಃ** ಎಂದು ವಿಕರಣಾತಿರಿಕ್ತ ಸ್ಥಳದಲ್ಲಿ ಸತಿಶಿಷ್ಟಸ್ವರವು ಬಲವಾದರೂ, ಉ ವಿಕರಣವಾದ್ದರಿಂದ ಇದಕ್ಕೆ ಬರುವ ಸತಿಶಿಷ್ಟ ಸ್ವರವು ಬಲವಾಗುವುದಿಲ್ಲ. ಆದ್ದರಿಂದ ತಿಙ್ ಪ್ರತ್ಯಯಕ್ಕೆ ಸೇರಿದ ಅನ್ತಿಗೆ ಪ್ರತ್ಯಯಸ್ವರದಿಂದ ಆದ್ಯುದಾತ್ತ ಬರುವುದು.

ಸಮುದ್ರಮ್—ಸಂ ಉಪಸರ್ಗಪೂರ್ವಕವಾದ ಉನ್ದೀ ಕ್ಲೇದನೇ ಧಾತುವಿನ ಮುಂದೆ, ಸ್ಫಾಯಿತಞ್ಚಿವಞ್ಚಿಶಕಿಕ್ಷಿಪಿಕ್ಷುದಿಸೃಪಿತೃಪಿದೃಪಿ ವನ್ದ್ಯುನ್ದಿ (ಉ. ಸೂ. ೨-೧೬೦) ಎಂಬುದರಿಂದ ರಕ್ ಪ್ರತ್ಯಯ ಬರುವುದು. ಅನಿದಿತಾಂಹಲಉಪಧಾಯಾಃ ಕ್ಙಿತಿ (ಪಾ ಸೂ. ೬-೪-೨೪) ಎಂಬುದರಿಂದ ಉಪಧಾಭೂತವಾದ ಲೋಪ, ಸಮುದ್ರ ಎಂದಾಗುವುದು- ಉದ್ರ ಶಬ್ದವು ಪ್ರತ್ಯಯ ಸ್ವರದಿಂದ ಅನ್ತೋದಾತ್ತ, ಸಮ್‌ನೊಂದಿಗೆ ನಕಾರಕ್ಕೆ ಸಮಾಸ ಬಂದಮೇಲೆಯೂ ಗತಿಕಾರಕೋಪಪದಾತ್ಕೃತ್ ( ಪಾ. ಸೂ. ೬-೨-೧೩೯ ) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬಂದು ಅದೇ ಸ್ವರವೇ ನಿಲ್ಲುವುದು ॥ ೮ ॥

॥ ಸಂಹಿತಾಪಾಠಃ ॥

ಅಭಿ ತ್ವಾ ಪೂರ್ವಪೀತಯೇ ಸೃಜಾಮಿ ಸೋಮ್ಯಂ ಮಧು ।
ಮರುದ್ಭಿರಗ್ನ ಆ ಗಹಿ ॥ ೯ ॥

॥ ಪದಪಾಠಃ ॥

ಅಭಿ । ತ್ವಾ । ಪೂರ್ವ ಽ ಪೀತಯೇ । ಸೃಜಾಮಿ । ಸೋಮ್ಯಂ । ಮಧು ॥
ಮರುತ್ ಽ ಭಿಃ । ಅಗ್ನೇ । ಆ । ಗಹಿ ॥ ೯ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಪೂರ್ವಪೀತಯೇ ಪೂರ್ವಕಾಲೇ ಪ್ರವೃತ್ತಾಯ ಪಾನಾಯ ತ್ವಾಂ ಪ್ರತಿ ಸೋಮ್ಯಂ ಮಧು ಸೋಮಸಂಬಂಧಿನಂ ಮಧುರರಸಮಭಿ ಸೃಜಾಮಿ । ಸರ್ವತಃ ಸಂಪಾದಯಾಮಿ । ಅತಸ್ತ್ವಂ ಮರುದ್ಭಿಃ ಸಹಾತ್ರಾಗಚ್ಛ ॥ ಅಭಿ । ಏವಮಾದೀನಾಮಂತ ಇತ್ಯಂತೋದಾತ್ತತ್ವಂ । ತ್ವಾಮೌ ದ್ವಿತೀಯಾಯಾ ಇತಿ ತ್ವಾದೇಶಃ ಸರ್ವಾನುದಾತ್ತಃ । ಪೂರ್ವಪೀತಯೇ । ಪೂರ್ವಾ ಚಾಸೌ ಪೀತಿಶ್ಚ । ಪುಂವತ್ಕರ್ಮಧಾರಯೇತ್ಯಾದಿನಾ । ಪಾ- ೬-೩-೪೨ । ಪುಂವದ್ಭಾವಃ । ಸೃಜಾಮಿ । ಸೃಜ ವಿಸರ್ಗೇ । ಮಿಪಃ ಪಿತ್ತ್ವಾದನುದಾತ್ತತ್ವಂ । ವಿಕರಣಸ್ವರಃ । ಸೋಮ್ಯಂ । ಸೋಮಮರ್ಹತಿ ಯಃ । ಪ್ರತ್ಯಯಸ್ವರೇಣಾಂತೋದಾತ್ತಃ । ಮಧು । ಫಲಿಪಾಟಿನಮಿಾತ್ಯಾದಿನಾ । ಉ ೧-೧೮ । ಉಪ್ರತ್ಯಯಃ । ನಿದಿತ್ಯನುವೃತ್ತೇರಾದ್ಯುದಾತ್ತತ್ವಂ । ಅನ್ಯದ್ಗತಂ ॥ ೩೭ ॥

॥ ಪ್ರತಿಪದಾರ್ಥ ॥

(ಹೇ) **ಅಗ್ನೇ**—ಎಲೈ ಅಗ್ನಿಯೇ । **ತ್ವಾಂ**—ನಿನ್ನನ್ನುದ್ದೇಶಿಸಿ ಅಥವಾ ನಿನಗಾಗಿ । **ಪೂರ್ವಪೀತಯೇ**—(ಎಲ್ಲರಿಗಿಂತಲೂ) ಮೊದಲು ಪಾನಮಾಡುವುದಕ್ಕಾಗಿ । **ಸೋಮ್ಯಂ**—ಸೋಮಸಂಬಂಧವಾದ । **ಮಧು**—ಮಧುರವಾದ ರಸವನ್ನು । **ಅಭಿ ಸೃಜಾಮಿ**—(ಪಾತ್ರೆಗೆ) ಹಾಕಿ ಸಿದ್ಧಪಡಿಸುವೆನು । (ನೀನು) **ಮರುದ್ಭಿಃ**—ಮರುದ್ದೇವತೆಗಳೊಡನೆ । **ಆ ಗಹಿ**—ಇಲ್ಲಿಗೆ ಬಾ ॥

॥ ಭಾವಾರ್ಥ ॥

ಎಲೈ ಅಗ್ನಿಯೇ, ಎಲ್ಲರಿಗಿಂತಲು ಮೊದಲು ನಿನಗೆ ಪಾನಮಾಡುವುದಕ್ಕಾಗಿ ರುಚಿಕರವಾದ ಸೋಮ ರಸವನ್ನು ಪಾತ್ರೆಗೆ ಹಾಕಿ ಸಿದ್ಧಪಡಿಸುವೆನು. ಆದುದರಿಂದ ಮರುದ್ದೇವತೆಗಳಿಂದ ಸಹಿತನಾಗಿ ಇಲ್ಲಿಗೆ ಬಾ.

English Translation

O Agni, I pour out the sweet drink of Soma to you that you may drink first ; come hither with the Maruths.

॥ ವಿಶೇಷವಿಷಯಗಳು ॥

**ಪೂರ್ವಪೀತಯೇ**—ಎಲ್ಲರಿಗಿಂತಲೂ ಮೊದಲು ಪಾನಮಾಡುವುದಕ್ಕಾಗಿ. ಈ ಶಬ್ದಕ್ಕೆ Wilson ಪಂಡಿತನು as of old—ಹಿಂದಿನಂತೆ ಎಂದು ತಪ್ಪಾದ ಅರ್ಥಮಾಡಿರುವನು. ಭಾಷ್ಯಕಾರರು ಹೇಳಿರುವ ಎಲ್ಲರಿಗಿಂತಲೂ ಮೊದಲು ಎಂಬ ಅರ್ಥವೇ ಸಮಂಜಸವಾಗಿರುವುದು.

**ಅಭಿ ಸೃಜಾಮಿ—ಸರ್ವತಃ ಸಂಪಾದಯಾಮಿ**—ಪಾತ್ರೆಗೆ ಹಾಕಿ ಸಿದ್ಧಪಡಿಸುವೆನು.

**ಸೋಮ್ಯಂ—ಸೋಮಮರ್ಹತಿ ಯಃ**—ಸೋಮಕ್ಕೆ ಅರ್ಹವಾದ, ಸೋಮಸಬಂಧವಾದ.

**ಮಧು**—ಮಧುರವಾದ, ರುಚಿಕರವಾದ, **ಸೋಮ್ಯಂ ಮಧು** ಎಂದರೆ ರುಚಿಕರವಾದ ಸೋಮರಸವೆಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಅಭಿ—ಏವಾದೀನಾಮನ್ತಃ** ಎಂಬುದರಿಂದ ಅಂತೋದಾತ್ತ.

**ತ್ವಾ**—ಯುಷ್ಮಚ್ಛಬ್ದಪ್ರಕೃತಿಕ ದ್ವಿತೀಯಾಂತವಾದ ತ್ವಾಮ್, ಎಂಬುದಕ್ಕೂ **ತ್ವಾಮೌದ್ವಿತೀಯಾಯಾಃ** (ಪಾ. ಸೂ. ೮-೧-೨೩) ಪದದ ಮುಂದೆ ಇರುವುವೂ, ಪಾದದ ಆದಿಯಲ್ಲಿಲ್ಲದುವೂ ಆದ ದ್ವಿತೀಯಾ ಏಕವಚನಾಂತ ಯುಷ್ಮದಸ್ಮಚ್ಛಬ್ದಗಳಿಗೆ ಕ್ರಮವಾಗಿ ತ್ವಾ, ಮಾ, ಎಂಬ ಆದೇಶಗಳು ಬರುವುವು ಅವು ಸರ್ವಾನುದಾತ್ತಗಳೂ ಆಗುವುವು ಎಂಬುದರಿಂದ ಸರ್ವಾನುದಾತ್ತವಾದ ತ್ವಾ, ಆದೇಶ ಬರುವುದು.

ಪೂರ್ವಪೀತಯೇ--ಪೂರ್ವಾ ಚಾಸೌ ಪೀತಿಶ್ಚ, ಪೂರ್ವಪೀತಿಃ, ಪುಂವತ್ಕರ್ಮಧಾರಯಜಾತೀಯದೇಶೀಯೇಯೋಃ (ಪಾ. ಸೂ. ೬-೩-೪೨) ಸ್ತ್ರಿಯಾಃಪುಂವದ್ಭಾಷಿತಪುಂಸ್ಕಾದನೂಙ್ ಸಮಾನಾಧಿಕರಣೇಸ್ತ್ರಿಯಾಮಪೂರಣೀಪ್ರಿಯಾದಿಷು (ಪಾ ಸೂ. ೬-೩-೩೪) ಎಂಬ ಸೂತ್ರದಿಂದ ಸ್ತ್ರಿಯಾಃ, ಪುಂವತ್, ಭಾಷಿತಪುಂಸ್ಕಾದನೂಙ್, ಸ್ತ್ರಿಯಾಮ್ ಎಂಬ ಪದಗಳು ಅನುವೃತ್ತಗಳಾಗುವುವು. ಅಲುಗುತ್ತರಪದೇ ( ಪಾ. ಸೂ. ೬-೩-೧) ಎಂಬುದರಿಂದ ಉತ್ತರಪದೇ ಎಂದು ಅಧಿಕೃತವಾಗುವುದು. ಭಾಷಿತಃಪುಮಾನ್ ಯಸ್ಮಿನ್ ಪ್ರವೃತ್ತಿನಿಮಿತ್ತೇ ತತ್, ಭಾಷಿತಪುಂಸ್ಕಮ್. ಭಾಷಿತಪುಂಸ್ಕಮಸ್ಯಾಸ್ತೀತಿ ಭಾಷಿತಪುಂಸ್ಕಮ್, ಅರ್ಶ ಆದ್ಯಜಂತ, ಯಾವ ಪ್ರವೃತ್ತಿನಿಮಿತ್ತದಲ್ಲಿ ಪುಂಸ್ತ್ವವು ಉಕ್ತವಾಗಿರುವುದೋ ಅಂತಹ ಪ್ರವೃತ್ತಿ ನಿಮಿತ್ತವನ್ನು ಹೊಂದಿರುವ ಶಬ್ದಕ್ಕೆ ಭಾಷಿತಪುಂಸ್ಕ, ಎಂದು ವಿವಕ್ಷಿತವು. ಊಙಃ ಅಭಾವಃ ಅಥವಾ ನ ಊಙ್ ಅನೂಙ್. ಭಾಷಿತಪುಂಸ್ಕಾತ್ ಅನೂಙ್ ಊಙಭಾವಃ ಯಸ್ಯಾಸ್ಸಾ ಎಂದು ಬಹುವ್ರೀಹಿ, ನಿಪಾತನ ಸಾಮರ್ಥ್ಯದಿಂದ ಭಾಷಿತಪುಂಸ್ಕಾತ್ ಎಂಬ ಸಮಾಸಾವಯವ ಪಂಚಮಿಗೆ ಲುಗಭಾವವೂ, ಸಮಾಸದ ಮುಂದೆ ಬರುವ ಷಷ್ಠಿಗೆ ಲುಕ್ಕೂ ಬಂದಿದೆ. ವ್ಯಧಿಕರಣಸಮಾಸವೂ ಸಹ ನಿಪಾತನದಿಂದಲೇ, ವ್ಯಾಖ್ಯಾನಸಾಮರ್ಥ್ಯದಿಂದ ಅಪೂರಣೀಪ್ರಿಯಾದಿಷು ಎಂಬುದು ಇಲ್ಲಿ ಅನುವೃತ್ತವಾಗುವುದಿಲ್ಲ. ಅತಿದೇಶವು ಏಳುವಿಧ ಎಂದು—"ಕಾರ್ಯರೂಪನಿಮಿತ್ತಾರ್ಥಶಾಸ್ತ್ರತಾದಾತ್ಮ್ಯಶಬ್ದಿತಾಃ | ವ್ಯಪದೇಶಶ್ಚ ಸಪ್ತೈತಾನತಿದೇಶಾನ್ಪ್ರಚಕ್ಷತೇ" ಎಂದು ಹೇಳಲಾಗಿದೆ. ಸುಬಾಮನ್ತ್ರಿತೇ ಎಂಬಲ್ಲಿ ತಾದಾತ್ಮ್ಯಾತಿದೇಶ, ಇಲ್ಲಿ ರೂಪಾತಿದೇಶ, ಪುಲ್ಲಿಂಗದಲ್ಲಿ ಯಾವ ರೂಪವಿದೆಯೋ ಅದೇ ರೂಪ ಬರುವುದು. ಪುಂವತ್ ಎಂಬುದಕ್ಕೆ ತಥಾಚ ಹೀಗೆ ಸೂತ್ರಾರ್ಥ. ಕರ್ಮಧಾರಯಸಮಾಸದ ಸ್ತ್ರೀವಾಚಕೋತ್ತರಪದಾವ್ಯವಹಿತಪೂರ್ವವೃತ್ತಿಯೂ, ಅಥವಾ ಜಾತೀಯತ್ ದೇಶೀಯತ್ ಪ್ರತ್ಯಯಾವ್ಯವಹಿತಪೂರ್ವವರ್ತಿಯೂ ಯಾವ ಪ್ರವೃತ್ತಿ ನಿಮಿತ್ತದಲ್ಲಿ ಪುಂಸ್ತ್ವವು ಉಕ್ತವಾಗಿದೆಯೋ ಅಂತಹ ಪ್ರವೃತ್ತಿನಿಮಿತ್ತಕವಾದ ಶಬ್ದದ ಮುಂದೆ ಇರುವ ಊಙ್ಪ್ರತ್ಯಯವನ್ನು ಹೊಂದದೇ ಇರತಕ್ಕದ್ದೂ ಆದ ಸ್ತ್ರೀವಾಚಕವಾದ ಶಬ್ದಕ್ಕೆ ಪುಂವದ್ರೂಪ ಬರುವುದು ಎಂದು. ಪೂರ್ವಾ+ಪೀತಿ, ಎಂದಿರುವಾಗ ಈ ಸೂತ್ರದಿಂದ ಪೂರ್ವ ಎಂಬುದಕ್ಕೆ ಪುಂವದ್ರೂಪ ಬಂದರೆ ಪೂರ್ವಪೀತಿ ಎಂದಾಗುವುದು. ಚತುರ್ಥೀಏಕವಚನದಲ್ಲಿ ಪೂರ್ವಪೀತಯೇ.

ಸೃಜಾಮಿ—ಸೃಜ ವಿಸರ್ಗೇ, ತುದಾದಿಧಾತು. ಲಟ್ ಉತ್ತಮಪುರುಷ ಏಕವಚನ ಮಿಪ್, ಸೃಜ್+ಮಿ ಶಪ್ ವಿಕರಣ, ಸೃಜ್+ಅ+ಮಿ ಅತೋದೀರ್ಘೋಯಞಿ (ಪಾ. ಸೂ. ೭-೩-೧೦೧) ಎಂಬುದರಿಂದ ದೀರ್ಘ, ಸೃಜಾಮಿ. ಮಿಪ್ ಪಿತ್ತಾದ್ದರಿಂದ ಅನುದಾತ್ತೌ ಸುಪ್ಪಿತೌ ಎಂಬುದರಿಂದ ಅನುದಾತ್ತ. ವಿಕರಣಕ್ಕೆ ಪ್ರತ್ಯಯ ಸ್ವರ ಬರುವುದು.

ಸೋಮ್ಯಮ್—ಸೋಮಮರ್ಹತಿ ಯಃ (ಪಾ. ಸೂ. ೪-೪-೧೩೭) ದ್ವಿತೀಯಾನ್ತವಾದ ಸೋಮ ಶಬ್ದದ ಮುಂದೆ ಅರ್ಹತಿ ಎಂಬ ಅರ್ಥದಲ್ಲಿ ಯತ್ ಪ್ರತ್ಯಯ ಬರುವುದು ಎಂಬುದರಿಂದ ಸೋಮಮ್ ಎಂಬುದರ ಮುಂದೆ ಯ, ಸೋಮ+ಅಮ್+ಯ. ಪ್ರಾತಿಪದಿಕಾವಯವವಾದ ಅಮ್‌ಗೆ ಸುಪೋಧಾತು ಎಂಬುದರಿಂದ ಲುಕ್. ಯಸ್ಯೇತಿ ಚ ಎಂಬುದರಿಂದ ಪ್ರತ್ಯಯದ ಹಿಂದಿನ ಅಕಾರಕ್ಕೆ ಲೋಪ, ಸೋಮ್ಯ. ಇದು ಪ್ರತ್ಯಯಸ್ವರದಿಂದ ಅಂತೋದಾತ್ತ.

ಮಧು—ಫಲಿಪಾಟಿನಮಿ....(ಉ. ಸೂ. ೧-೧೮) ಎಂಬುದರಿಂದ ಉಪ್ರತ್ಯಯ. ಫಲಿಪಾಟಿ ಎಂಬ ಸೂತ್ರದಲ್ಲಿ ನಿತ್ ಎಂದು ಅನುವೃತ್ತವಾಗಿರುವುದರಿಂದ ಞ್ನಿತ್ಯಾದಿರ್ನಿತ್ಯಮ್ ( ಪಾ.ಸೂ. ೬-೧-೧೯೭) ಎಂಬುದ

ರಿಂದ ಮಧುಶಬ್ದ ಆದ್ಯುದಾತ್ತ. ಮಧುಮನ್ತಂ ಋ. ಸಂ. ೧-೧೩-೨ ರಲ್ಲಿ ಮಧುಶಬ್ದಕ್ಕೆ ಪ್ರಕ್ರಿಯೆಯು ವಿವೃತವಾಗಿರುವುದು. ಮಿಕ್ಕ ಪದಗಳಿಗೆ ಹಿಂದೆಯೇ ಪ್ರಕ್ರಿಯೆಯು ನಿರೂಪಿತವಾಗಿರುವುದು ॥ ೯ ॥ ೧೯ ॥ ೩೭ ॥

ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕ ಶ್ರೀವೀರಬುಕ್ಕಭೂಪಾಲ-
ಸಾಮ್ರಾಜ್ಯಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ
ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಪ್ರಥಮಾಷ್ಟಕೇ
ಪ್ರಥಮೋಽಧ್ಯಾಯಃ ಸಮಾಪ್ತಃ ॥

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ಪ್ರಥಮಾಷ್ಟಕದಲ್ಲಿ
ಪ್ರಥಮಾಧ್ಯಾಯವು ಸಮಾಪ್ತವಾದುದು.

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥

Printed by Y. R. Ranga Rao, Proprietor, Sri Chamundeswari Electric Press.
Clock Tower Square, Mysore—1949